
ಋಗ್ವೇದಸಂಹಿತಾ
ಭಾಗ ೨೭
ಏಳನೆಯ ಅಷ್ಟಕದ ೫–೮ ಅಧ್ಯಾಯಗಳು
ಒಂಭತ್ತನೆಯ ಮಂಡಲದ ಸೂಕ್ತಗಳು ೧೦೦–೧೧೪
ಹತ್ತನೆಯ ಮಂಡಲದ ಸೂಕ್ತಗಳು ೧–೪೦

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೨೭

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ ೨೭

ಏಳನೆಯ ಅಷ್ಟಕದ ೫–೮ ಅಧ್ಯಾಯಗಳು

ಒಂಭತ್ತನೆಯ ಮಂಡಲದ ಸೂಕ್ತಗಳು—೧೦೧-೧೧೪

ಹತ್ತನೆಯ ಮಂಡಲದ ಸೂಕ್ತಗಳು ೧-೪೦



*Translated with Exhaustive Critical Notes & Explanations*

*by*

ASTHANA MAHAVIDWAN

H. P. VENKATA RAO

*Editor*

*Printed at*

SREE VINAYAK PRINTING WORKS, MYSORE

1954



ಮಹಾಮಹಿಮ ಮಹಾರಾಜಾಧಿರಾಜರೂ [illegible]
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು.

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

Translator & Editor :

ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್

## ಸಹಾಯಕ ವಿದ್ವನ್ಮಂಡಲಿ

1. ಶ್ರೀ G. N. ಚಕ್ರವರ್ತಿ, M. A,
   Professor of Sanskrit, St. Philomina's College, Mysore.
2. ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು, ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.
3. ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,
4. ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು, ಋಗ್ವೇದ ಘನಪಾಠಿಗಳು.
5. ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು, ಶ್ರೌತ ವಿದ್ವಾನ್.
6. ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು, ಮೀಮಾಂಸಾದರ್ಶನ ಪಂಡಿತರು.
7. ಬ್ರ॥ ಶ್ರೀ॥ ವೆಂಕಟರಮಣಾಚಾರ್, M. A., B. T., ಸಾಹಿತ್ಯವಿದ್ವಾನ್.
8. ಬ್ರ॥ ಶ್ರೀ॥ S. ರಂಗನಾಥನ್, ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.
9. ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್, ಸಾಹಿತ್ಯ ವಿದ್ವಾನ್,
   Govt. Oriental Research Institute. Mysore.
10. ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು, ಠಟ್ಯರ್ಗ್ ಪಂಡಿತರು.
    Govt. Oriental Research Institute. Mysore.

# ಪೀಠಿಕೆ.

ಋಗ್ವೇದದ ಈ ಭಾಗದಲ್ಲಿ ಒಂಭತ್ತನೆಯ ಮಂಡಲವು ಪೂರ್ತಿಯಾಗಿ ಹತ್ತನೆಯ ಮಂಡಲದಲ್ಲಿ ನಲವತ್ತು ಸೂಕ್ತಗಳು ಮುಗಿದಿವೆ. ಒಂಭತ್ತನೆಯ ಮಂಡಲದ ಸೂಕ್ತಗಳೆಲ್ಲವೂ ಸೋಮದೇವತಾಕವಾದುದರಿಂದಲೂ, ಸೋಮದೇವತೆಯ ವಿಷಯವನ್ನೆಲ್ಲಾ ನಾವು ಹಿಂದಿನ ಭಾಗದಲ್ಲಿಯೇ ವಿಸ್ತಾರವಾಗಿ ವಿವರಿಸಿರುವುದರಿಂದಲೂ ಇಲ್ಲಿ ಆ ವಿಷಯವಾಗಿ ಹೆಚ್ಚಾಗಿ ಏನನ್ನೂ ಹೇಳಬಯಸುವುದಿಲ್ಲ. ಆದರೆ ಹತ್ತನೇ ಮಂಡಲದ ಸೂಕ್ತಗಳಿಗೆ ನಾನಾದೃಷ್ಟಿಗಳಿಂದ ವಿಶೇಷ ವೈಶಿಷ್ಟ್ಯವಿದೆ. ಇತರ ಮಂಡಲಗಳಲ್ಲಿರುವಂತೆ ಅಗ್ನಿ, ಇಂದ್ರ ಮೊದಲಾದ ಸಾಮಾನ್ಯದೇವತೆಗಳ ಸ್ತುತಿಗಳಿರುವುದಲ್ಲದೆ, ಋಗ್ವೇದದಲ್ಲಿ ಇನ್ನೆಲ್ಲಿಯೂ ಇಲ್ಲದ ಇತರ ದೇವತೆಗಳೂ, ಅಚೇತನ ವಸ್ತುಗಳ ಅಭಿಮಾನಿ ದೇವತೆಗಳೆಂದು (ಅಚೇತನವಸ್ತುಗಳೆಂದೇ) ಪ್ರಸಿದ್ಧರಾದ ವ್ಯಕ್ತಿಗಳೂ, ವಿಚಿತ್ರ ಮತ್ತು ಸ್ವಾರಸ್ಯವಾದ ಸಂಭಾಷಣೆಗಳೂ, ಪೂರ್ವೇತಿಹಾಸಗಳೂ, ಉನ್ನತಮಟ್ಟದ ವೇದಾಂತತತ್ತ್ವಗಳೂ, ಶ್ರೌತಸ್ಮಾರ್ತಕರ್ಮಗಳಲ್ಲಿ ಉಪಯುಕ್ತವಾದ ನಾನಾಸೂಕ್ತಗಳೂ, ಇವೆಲ್ಲವೂ ಹತ್ತನೆಯ ಮಂಡಲದಲ್ಲಿವೆ. ಈ ಮಂಡಲದ ಸೂಕ್ತಗಳು ಇತರ ಮಂಡಲಗಳ ಸೂಕ್ತಗಳಷ್ಟು ಪ್ರಾಚೀನಕಾಲದವುಗಳಲ್ಲವೆಂಬ ಕೆಲವು ಪ್ರಾಶ್ಚಾತ್ಯಪಂಡಿತರ ವಾದವನ್ನು ಪೂರ್ತಿಯಾಗಿ ಒಪ್ಪುವುದಕ್ಕಾಗುವುದಿಲ್ಲ. ಋಗ್ವೇದದ ಸೂಕ್ತಗಳು ಒಂದು ಕ್ರಮಬದ್ಧವಾದ ರೀತಿಯಲ್ಲಿ ವಿಂಗಡಿಸಲ್ಪಟ್ಟಿರುವುದರಿಂದಲೂ ಈ ಮಂಡಲದ ಕೆಲವು ಸೂಕ್ತಗಳಲ್ಲಿ ಕೇವಲ ಸ್ತೋತ್ರಗಳೇ ಅಲ್ಲದೆ ಇತರ ವಿಷಯಗಳ ಪ್ರಾಸ್ತಾಪವಿರುವುದರಿಂದಲೂ ಪಾಶ್ಚಾತ್ಯಪಂಡಿತರ ಈ ವಿಧವಾದ ಅಭಿಪ್ರಾಯಕ್ಕೆ ಎಡೆಗೊಟ್ಟಿರಬಹುದು.

ಪ್ರಕೃತಭಾಗದಲ್ಲಿ ಉಕ್ತವಾಗಿರುವ ವಿಷಯಗಳಲ್ಲಿ ಪಿತೃದೇವತೆಗಳ ವಿಷಯವು ಮುಖ್ಯವಾದುದು. ಪಿತೃಗಳೆಂದರೇನು, ಮನುಷ್ಯರ ಮರಣಾನಂತರ ಸ್ಥಿತಿಯೇನು, ಸ್ವರ್ಗ ನರಕಗಳು ಉಂಟೇ ಇಲ್ಲವೇ, ಇತ್ಯಾದಿ ವಿಷಯಗಳನು ಋಷಿಗಳು ಚರ್ಚಿಸಿದಾರೆ. ಈ ಸಂದರ್ಭದಲ್ಲಿ ಯಮನಿಗೂ ನಚಿಕೇತನೆಂಬ ಋಷಿಗೂ ನಡೆದ ಸಂಭಾಷಣೆಯು ಸ್ವಾರಸ್ಯವಾಗಿದೆ. ಇದು ಕಠೋಪನಿಷತ್ತಿನಲ್ಲಿ ಹೇಳಿರುವುದನ್ನು ನಾವು ಸಂಗ್ರಹವಾಗಿ ವಿವರಿಸಿದೇವೆ. ಇದಲ್ಲದೆ ಅತಿ ಪ್ರಾಚೀನವಾದ ಆ ಕಾಲದಲ್ಲಿ ಸಾಮಾನ್ಯಜನರ ನಡೆನುಡಿಗಳೇನು, ಅಂತ್ಯಕ್ರಿಯೆಯು ಹೇಗೆ ನಡೆಯುತ್ತಿತ್ತು, ಸ್ತ್ರೀಯರು ಸಹಗಮನಮಾಡುತ್ತಿದ್ದರೇ ಇತ್ಯಾದಿ ನಾನಾವಿಧವಾದ ಸಾಮಾಜಿಕ ಸ್ಥಿತಿಗತಿಗಳನ್ನೂ ಈ ಸೂಕ್ತಗಳಿಂದ ತಿಳಿದುಕೊಳ್ಳಲವಕಾಶವಿದೆ.

ಋಗ್ವೇದದಲ್ಲಿ ದೇವತೆಗಳನ್ನುದ್ದೇಶಿಸಿ ಮಾಡಿದ ಸ್ತೋತ್ರಗಳಿಗೆ ಪ್ರಾಧಾನ್ಯತೆ ಇದ್ದರೂ ಅಲ್ಲಲ್ಲಿ ಇತರ ವಿಷಯಗಳ ಪ್ರಸ್ತಾಪವೂ ಸಾಕಾದಷ್ಟಿದೆ. ಯಮನಿಗೂ ಅವನ ತಂಗಿಯಾದ ಯಮಿಗೂ ಸಂಭೋಗಾರ್ಥವಾಗಿ ನಡೆದ ಸಂಭಾಷಣೆಯು ಇವುಗಳಲ್ಲೊಂದು. ಹಿಂದೆ ಅಗಸ್ತ್ಯಋಷಿಗೂ ಅವನ ಪತ್ನಿಯಾದ ಲೋಪಾಮುದ್ರೆಗೂ ಸಂಭೋಗಾರ್ಥವಾಗಿ ನಡೆದ ಸಂಭಾಷಣೆಯನ್ನು ನಾವು ಹಿಂದೆಯೇ ವಿವರಿಸಿದೇವೆ. ಕಾಮಕಲೆಗೆ ಸಂಬಂಧಪಟ್ಟ ಇಂತಹ ಅನೇಕ ವಿಷಯಗಳ ವರ್ಣನೆಯು ಅಲ್ಲಲ್ಲಿ ಕಂಡುಬರುತ್ತದೆ.

ಇಲೂಷಪುತ್ರನಾದ ಕವಷನೆಂಬುವನು ಶೂದ್ರಜಾತಿಯವನೂ, ಜೂಜುಗಾರನೂ ಆಗಿದ್ದನು. ಒಂದಾನೊಂದು ಕಾಲದಲ್ಲಿ ಇವನು ಯಜ್ಞಮಾಡುತ್ತಿರುವ ಋಷಿಗಳ ಮಧ್ಯದಲ್ಲಿ ಬಂದುಕುಳಿತಿದ್ದಾಗ ಋಷಿಗಳು ಇವನು ತಮ್ಮ

ಸಹವಾಸಕ್ಕೆ ಯೋಗ್ಯನಲ್ಲವೆಂದು ಅಟ್ಟಿಬಿಟ್ಟರು ಮತ್ತು ನೀರೂ ನೆರಳೂ ಇಲ್ಲದ ದೂರಪ್ರದೇಶವಾದ ಮರುಭೂಮಿಯಲ್ಲಿ ಇವನನ್ನು ಕೊಂಡೊಯ್ದು ಅಲ್ಲಿಯೇ ಮರಣವನ್ನು ಹೊಂದಲೆಂದು ಬಿಟ್ಟುಬಂದರು. ಇದರಿಂದ ಖತಿಗೊಂಡ ಕವಷನು ಸರಸ್ವತೀನದಿಯನ್ನೂ ಇತರ ದೇವತೆಗಳನ್ನೂ ಪ್ರಾರ್ಥಿಸಲು ಸರಸ್ವತೀನದಿಯು ಇವನಿದ್ದ ನೀರಿಲ್ಲದ ಮರಳು ಕಾಡಿನಲ್ಲಿ ಹರಿದುಹೋಗಿ ಇವನ ಸುತ್ತಲೂ ಜಲವಿರುವಂತೆ ಮಾಡಿದಳು. ಇದನ್ನು ಕಂಡ ಋಷಿಗಳು ತಮ್ಮ ಅಕೃತ್ಯಕ್ಕೆ ಪಶ್ಚಾತ್ತಾಪಪಟ್ಟು ಅವನ ಬಳಿಗೆ ಹೋಗಿ ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡು ಅವನನ್ನು ಹಿಂದಕ್ಕೆ ಕರೆತಂದು ತಮ್ಮ ಯಜ್ಞಾದಿಗಳಲ್ಲಿ ಭಾಗಿಯಾಗುವಂತೆ ಮಾಡಿದರು. ಇವನು ಋಗ್ವೇದ ೧೦ನೇ ಮಂಡಲದಲ್ಲಿ ೫ ಸೂಕ್ತಗಳಿಗೆ (೩೦-೩೪) ಋಷಿಯಾಗಿದಾನೆ. ಆದ್ದರಿಂದ ವೇದಕಾಲದ ಋಷಿಗಳು ಗುಣಕ್ಕೆ ಪ್ರಾಧಾನ್ಯವನ್ನು ಕೊಡುತ್ತಿದ್ದರೇ ಹೊರತು ಜಾತಿಗಲ್ಲ ಎಂಬುದು ಅನೇಕ ದೃಷ್ಟಾಂತಗಳಿಂದ ಸಮರ್ಥಿಸಬಹುದಾಗಿದೆ. ವೇದದ ಋಷಿಗಳಲ್ಲಿ ಕ್ಷತ್ರಿಯರೂ ಅಥವಾ ರಾಜರೂ, ವೈಶ್ಯರೂ, ಶೂದ್ರರೂ ಕೆಲವರಿದಾರೆ. ಇವರಿಗೂ ಋಷಿಗಳ ಮಧ್ಯದಲ್ಲಿ ಗಣ್ಯಸ್ಥಾನವಿರುವುದಲ್ಲದೆ ಇವರಿಂದ ದೃಷ್ಟವಾದ ಮಂತ್ರಗಳ ಪ್ರಯೋಗವು ಯಜ್ಞಯಾಗಾದಿಗಳಲ್ಲಿ ವಿಶೇಷವಾಗಿರುವುದು. ಈ ಕವಷನೆಂಬ ಋಷಿಯು ಪಗಡೆಯಾಟದಲ್ಲಿ ಆಸಕ್ತನಾಗಿದ್ದನು. ಆದ್ದರಿಂದ ಇವನನ್ನು ಇವನ ತಂದೆತಾಯಿಗಳೂ, ಅಣ್ಣತಮ್ಮಂದಿರೂ, ಇತರ ಬಂಧುವರ್ಗದವರೂ ತ್ಯಜಿಸಿದ್ದರು. ಪಗಡೆಯಾಟವಾಡುವಾಗ ಗೆಲುವಿನಲ್ಲಿ ಉಂಟಾಗುವ ಹರ್ಷ, ಸೋಲಿನಲ್ಲಿ ಉಂಟಾಗುವ ದುಃಖ, ಆಟವಾಡುವಾಗ ಎಂದರೆ ದಾಳಗಳು ಉರುಳುತ್ತಿರುವಾಗ ಗೆಲ್ಲುತ್ತೇವೆಯೋ, ಸೋಲುತ್ತೇವೆಯೋ ಎಂಬ ಆಟಗಾರರಿಗುಂಟಾಗುವ ಕಳವಳ ಇವೆಲ್ಲವನ್ನೂ ಈ ಋಷಿಯು ಹೃದಯಂಗಮವಾಗಿ ವರ್ಣಿಸಿದಾನೆ. ಇಂತಹ ಅನೇಕ ವಿಷಯಗಳ ವಿವರಣೆಯು ಋಗ್ವೇದದಲ್ಲಿ ಬೇಕಾದಷ್ಟಿವೆ.

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ, ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುವರ್ಯರೂ ಅವರ ಸರ್ಕಾರದವರೂ ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ ಅವರ ಕುಟುಂಬಕ್ಕೂ ರಾಜಕುಮಾರಿಯರಿಗೂ, ಶ್ರೀಕಂಠದತ್ತ **ನೃಸಿಂಹರಾಜ ಒಡೆಯರ್,** ಎಂಬ ಶುಭಾನಾಮಾಂಕಿತರಾದ ರಾಜಕುಮಾರರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು,
ವಿಜಯನಾಮ ಸಂ॥ ವೈಶಾಖ ಶುದ್ಧ ಪಂಚಮಿ ಶುಕ್ರವಾರ
ತಾ॥ 7-5-1954

ಅನುವಾದಕ
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್

ಶ್ರೀಃ ||

# ವಿ ಷ ಯಾ ನು ಕ್ರ ಮ ಣಿ ಕೆ .



## ಏಳನೆಯ ಅಷ್ಟಕದಲ್ಲಿ ಐದನೆಯ ಅಧ್ಯಾಯವು.

## ಒಂಭತ್ತನೆಯ ಮಂಡಲದ ಸೂಕ್ತಗಳು.

ಪುಟಸಂಖ್ಯೆ



## ಹತ್ತನೆಯ ಮಂಡಲವು

## ಆರನೆಯ ಅಧ್ಯಾಯವು

ಪುಟಸಂಖ್ಯೆ

ಪುಟಸಂಖ್ಯೆ



ಇಲ್ಲಿಗೆ ಏಳನೆಯ ಅಷ್ಟಕದಲ್ಲಿ ಆರನೆಯ ಅಧ್ಯಾಯವು ಸಮಾಪ್ತವು

## ಏಳನೆಯ ಅಧ್ಯಾಯವು.

## ಎಂಟನೆಯ ಅಧ್ಯಾಯವು

ವಿಷಯಾನುಕ್ರಮಣಿಕೆ ಸಮಾಪ್ತವು

Printed by K. Venkatasubbiah. at Sri Vinayak Printing Works,
550, IInd Ramachandra Agrahar, Mysore.



॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ



## ಅಥ ಸಪ್ತಮಾಷ್ಟಕೇ ಪಂಚಮೋಽಧ್ಯಾಯಃ

### ಏಳನೆಯ ಅಷ್ಟಕದಲ್ಲಿ ಐದನೆಯ ಅಧ್ಯಾಯವು.

ಒಂಭತ್ತನೆಯ ಮಂಡಲದ ಸೂಕ್ತಗಳು ೧೦೧-೧೧೪

## ನೂರೊಂದನೆಯ ಸೂಕ್ತವು

### ಪೀಠಿಕೆ.

ಸೋಮದೇವತೆಯ ವಿಷಯವನ್ನೂ ಈ ಮಂಡಲದ ಇತರ ವಿಷಯಗಳನ್ನೂ ನಾವು ಹಿಂದಿನ ಭಾಗದಲ್ಲಿ ವಿವರಿಸಿರುವುದರಿಂದ ಇಲ್ಲಿ ಪುನಃ ವಿವರಿಸುವ ಆವಶ್ಯಕತೆಯಿಲ್ಲ. ವಿಶೇಷಸಂದರ್ಭಗಳಲ್ಲಿಯೂ, ಕ್ಲಿಷ್ಟಶಬ್ದಗಳ ಅರ್ಥವಿವರಣೆಯಲ್ಲಿಯೂ ಅಲ್ಲಲ್ಲಿ ವಿಶೇಷವಿಷಯಗಳನ್ನು ತಿಳಿಸಲಾಗುವುದು.

॥ ಸಾಯಣಭಾಷ್ಯಂ ॥

ತತ್ರ ಪುರೋಜಿತೀ ವ ಇತಿ ಷೋಡಶರ್ಚಮನುವಾಕಾಪೇಕ್ಷಯಾ ಪಂಚಮಂ ಸೂಕ್ತಂ। ಆದ್ಯಸ್ಯ ತೃಚಸ್ಯ ಶ್ಯಾವಾಶ್ವಪುತ್ರೋಽಂಧೀಗುರ್ನಾಮರ್ಷಿಃ। ದ್ವಿತೀಯಸ್ಯ ನಹುಷಸ್ಯ ರಾಜ್ಞಃ ಪುತ್ರೋ ಯಯಾತಿರ್ನಾಮ। ತೃತೀಯಸ್ಯ ಮನೋಃ ಪುತ್ರೋ ನಹುಷೋ ನಾಮ ರಾಜರ್ಷಿಃ। ಚತುರ್ಥಸ್ಯ

**ಸಂವರಣಾಖ್ಯಸ್ಯ ರಾಜ್ಞಃ ಪುತ್ರೋ ಮನುಃ । ಏವಂ ದ್ವಾದಶ ಗತಾಃ । ಶಿಷ್ಟಸ್ಯ ಚತುರ್ಋಚಸ್ಯ ವಾಚಃ ಪುತ್ರೋ ವೈಶ್ವಾಮಿತ್ರೋ ವಾ ಪ್ರಜಾಪತಿರ್ಋಷಿಃ । ದ್ವಿತೀಯಾತೃತೀಯೇ ಗಾಯತ್ರ್ಯೌ ಶಿಷ್ಟಾಶ್ಚತುರ್ದಶಾನುಷ್ಟುಭಃ । ತಥಾ ಚಾನುಕ್ರಮ್ಯತೇ । ಪುರೋಜಿತೀ ಷೋಳಶ ಶ್ಯಾವಾಶ್ವಿರಂಧೀಗುರ್ಯಯಾತಿರ್ನಾಹುಷೋ ನಹುಷೋ ಮಾನವೋ ಮನುಃ ಸಾಂವರಣ ಇತಿ ತೃಚಾಃ ಶೇಷೇ ಪ್ರಜಾಪತಿರುಪಾದ್ಯೇ ಗಾಯತ್ರ್ಯಾವಿತಿ । ಗತಃ ಸೂಕ್ತವಿನಿಯೋಗಃ ॥**

ಅನುವಾದವು—ಒಂಭತ್ತನೆಯ ಮಂಡಲದ ಆರನೆಯ ಅನುವಾಕದಲ್ಲಿ ಏಳು ಸೂಕ್ತಗಳಿರುವವು. ಅವುಗಳಲ್ಲಿ ಮೊದಲಿನ ನಾಲ್ಕು ಸೂಕ್ತಗಳನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈಗ ಪ್ರಾರಂಭಿಸುವ **ಪುರೋಜಿತೀ ವಃ** ಎಂಬ ಈ ಸೂಕ್ತವು ಈ ಆರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹದಿನಾರು ಋಕ್ಕುಗಳಿರುವವು. ೧-೩ ಋಕ್ಕುಗಳಿಗೆ ಶ್ಯಾವಾಶ್ವಋಷಿಯ ಪುತ್ರನಾದ ಅಂಧೀಗುಃ ಎಂಬುವನು ಋಷಿಯು; ೪-೬ ಋಕ್ಕುಗಳಿಗೆ ನಹುಷನೆಂಬ ರಾಜನ ಪುತ್ರನಾದ ಯಯಾತಿಯೆಂಬುವನು ಋಷಿಯು ; ೭-೯ ಋಕ್ಕುಗಳಿಗೆ ಮನುವಿನ ಪುತ್ರನಾದ ನಹುಷನೆಂಬ ರಾಜರ್ಷಿಯು ಋಷಿಯು ; ೧೦-೧೨ ಋಕ್ಕುಗಳಿಗೆ ಸಂವರಣಪುತ್ರನಾದ ಮನುವು ಋಷಿಯು ; ಈ ರೀತಿ ೧೨ ಋಕ್ಕುಗಳಾದ ಬಳಿಕ ೧೩-೧೬ ವರೆಗೆ ಇರುವ ಉಳಿದ ನಾಲ್ಕು ಋಕ್ಕುಗಳಿಗೆ ವಿಶ್ವಾಮಿತ್ರ ಗೋತ್ರದ ವಾಚನೆಂಬುವನು ಅಥವಾ ಪ್ರಜಾಪತಿಯು ಋಷಿಯು ; ಈ ಸೂಕ್ತದ ಎರಡು ಮತ್ತು ಮೂರನೆಯ ಋಕ್ಕುಗಳು ಗಾಯತ್ರೀಛಂದಸ್ಕವು. ಉಳಿದ ಹದಿನಾಲ್ಕು ಋಕ್ಕುಗಳು ಅನುಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಪುರೋಜಿತೀ ಷೋಳಶ ಶ್ಯಾವಾಶ್ವಿರಂಧೀಗುರ್ಯಯಾತಿರ್ನಾಹುಷೋ ಮಾನವೋ ಮನುಃ ಸಾಂವರಣ ಇತಿ ತೃಚಾಃ ಶೇಷೇ ಪ್ರಜಾಪತಿರುಪಾದ್ಯೇ ಗಾಯತ್ರ್ಯೌ** ಎಂದು ಹೇಳಿರುವುದು. ಸೂಕ್ತದ ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೧

ಮಂಡಲ—೯ । ಅನುವಾಕ—೬ । ಸೂಕ್ತ—೧೦೧ ।
ಅಷ್ಟಕ—೭ । ಅಧ್ಯಾಯ—೫ । ವರ್ಗ—೧, ೨, ೩ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೬ ।
ಋಷಿಃ—೧-೩. ಅಂಧೀಗುಃ ಶ್ಯಾವಾಶ್ವಿಃ । ೪-೬. ಯಯಾತಿರ್ನಾಹುಷಃ । ೭-೯. ನಹುಷೋ ಮಾನವಃ । ೧೦-೧೨. ಮನುಃ ಸಾಂವರಣಃ । ೧೩-೧೬. ಪ್ರಜಾಪತಿಃ ॥
ದೇವತಾ—ಪವಮಾನಃ ಸೋಮಃ ।
ಛಂದಃ—೧, ೪-೧೬. ಅನುಷ್ಟುಪ್ । ೨, ೩. ಗಾಯತ್ರೀ ॥

। ಸಂಹಿತಾಪಾಠಃ ।

ಪುರೋಜಿತೀ ವೋ ಅಂಧಸಃ ಸುತಾಯ ಮಾದಯಿತ್ನವೇ ।
ಅಪ ಶ್ವಾನಂ ಶ್ನಥಿಷ್ಟನ ಸಖಾಯೋ ದೀರ್ಘಜಿಹ್ವ್ಯಂ ॥ ೧ ॥

॥ ಪದಪಾಠಃ ॥

ಪುರಃಽಜಿತೀ । ವಃ । ಅಂಧಸಃ । ಸುತಾಯ । ಮಾದಯಿತ್ನವೇ ।
ಅಪ । ಶ್ವಾನಂ । ಶ್ನಥಿಷ್ಟನ । ಸಖಾಯಃ । ದೀರ್ಘಽಜಿಹ್ವ್ಯಂ । ೧ ॥

॥ ಸಾಯಣಭಾಷ್ಯಂ ॥

ಹೇ ಸಖಾಯಃ ಸಖಿಭೂತಾಃ ಸಮಾನಖ್ಯಾನಾ ವಾ ಹೇ ಸ್ತೋತಾರಃ ವೋ ಯೂಯಂ ಪುರೋಜಿತೀ ॥ ಷಷ್ಠ್ಯಾಃ ಪೂರ್ವಸವರ್ಣದೀರ್ಘಃ । ಪುರಃಸ್ಥಿತಜಯಸ್ಯಾಂಧಸೋಽದನೀಯಸ್ಯ ಸೋಮಸ್ಯ ಸ್ವಭೂತಾಯ ಸುತಾಯಾಭಿಷುತಾಯ ಮಾದಯಿತ್ನವೇಽತ್ಯಂತಂ ಮದಕರಾಯ ರಸಾಯ ದೀರ್ಘಜಿಹ್ವ್ಯಂ ದೀರ್ಘಾ ಜಿಹ್ವಾ ಯಸ್ಯ ಸಃ ॥ ದೀರ್ಘಜಿಹ್ವೀ ಚ ಛಂದಸಿ । ಪಾ. ೪-೧-೫೯ । ಇತಿ ಜೀಷಂತತ್ವೇನ ನಿಪಾತಿತಃ ॥ ತಾದೃಶಂ ಶ್ವಾನಮಪ ಶ್ನಥಿಷ್ಟನ । ಅಪಶ್ನಥಯತ । ಅಪಬಾಧಧ್ವಂ । ಯಥಾ ಶ್ವಾ ರಾಕ್ಷಸಾ ವಾ ಸುತಂ ಸೋಮಂ ನ ಲಿಹಂತಿ ತಥಾ ಕುರುತೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸಖಾಯಃ**—ಮಿತ್ರರಾದ ಎಲೈ ಸ್ತುತಿಕರ್ತರೇ । **ವಃ**—ನೀವು । **ಪುರೋಜಿತೀ**—ನಿಮ್ಮ ಮುಂದೆ ಜಯವನ್ನು ಸ್ಥಾಪಿಸಿರುವವನೂ । **ಅಂಧಸಃ**—ಅನ್ನಾರ್ಹನೂ (ಭಕ್ಷಿಸಲು ಅರ್ಹನೂ) । **ಸುತಾಯ**—ಹಿಂಡಲ್ಪಟ್ಟವನೂ । **ಮಾದಯಿತ್ನವೇ**—ಹರ್ಷಕಾರಕನಾದ ರಸವುಳ್ಳವನೂ ಆದ ಸೋಮನ ಉಪಭೋಗಕ್ಕಾಗಿ । **ದೀರ್ಘಜಿಹ್ವ್ಯಂ**—ದೀರ್ಘವಾದ ನಾಲಿಗೆಯುಳ್ಳ । **ಶ್ವಾನಂ**—ನಾಯನ್ನು । **ಅಪಶ್ನಥಿಷ್ಟನ**—ಹಿಂಸಿಸಿ ಓಡಿಸಿರಿ.

॥ ಭಾವಾರ್ಥ ॥

ಮಿತ್ರರಾದ ಎಲೈ ಸ್ತುತಿಕರ್ತರೇ, ನಿಮಗಾಗಿ ಜಯವನ್ನು ನಿಷ್ಪಾದಿಸಿರುವವನೂ, ಭಕ್ಷಣಕ್ಕೆ ಅರ್ಹನೂ, ಹಿಂಡಲ್ಪಟ್ಟವನೂ, ಹರ್ಷಕಾರಕನೂ ಆದ ಸೋಮರಸದ ಸೇವನೆಗಾಗಿ ದೀರ್ಘವಾದ ನಾಲಿಗೆಯುಳ್ಳ ಈ ನಾಯನ್ನು (ರಸವನ್ನು ನೆಕ್ಕದಿರುವುದಕ್ಕಾಗಿ) ಹಿಂಸಿಸಿ ದೂರಕ್ಕೆ ಓಡಿಸಿರಿ.

## English Translation

For (the drinking of) the effused exhilarating (juice) of the Soma who has placed victory before you, you friends, destroy the long-tongued dog.

॥ ವಿಶೇಷವಿಷಯಗಳು ॥

ಋಗ್ವೇದದ ೯ ನೆಯ ಮಂಡಲವನ್ನು ಬಿಟ್ಟು ಇತರ ಮಂಡಲಗಳಲ್ಲಿ ಸೂಕ್ತಗಳನ್ನು ಋಷಿಕ್ರಮವಾಗಿ ವಿಂಗಡಿಸಿರುವುದರಿಂದ ಸಾಧಾರಣವಾಗಿ ಒಂದು ಸೂಕ್ತಕ್ಕೆ ಒಬ್ಬನೇ ಋಷಿಯು. ಕೆಲವು ಸಂದರ್ಭಗಳಲ್ಲಿ ಮಾತ್ರ ಇಬ್ಬರು ಮೂವರು ಋಷಿಗಳು ಇರುವುದೂ ಉಂಟು. ಆದರೆ ೯ ನೆಯ ಮಂಡಲದಲ್ಲಿ ಎಲ್ಲಾ ಸೂಕ್ತಗಳಿಗೂ ಪವಮಾನಃ ಸೋಮಃ ಎಂಬ ಒಂದೇ ದೇವತೆಯಿರುವುದರಿಂದ ಈ ಮಂಡಲದ ಸೂಕ್ತಗಳಿಗೆ ನಾನಾ ಋಷಿಗಳಿರುವುದು

ಸ್ವಾಭಾವಿಕವೂ ಅನಿವಾರ್ಯವೂ ಆಗಿದೆ. ಸಾಮಾನ್ಯವಾಗಿ ಒಂದು ಸೂಕ್ತಕ್ಕೆ ಒಬ್ಬನೇ ಋಷಿಯಂತೆ ಇದ್ದರೂ ಅನೇಕ ಋಷಿದೃಷ್ಟವಾದ ಋಕ್ಕುಗಳನ್ನು ಒಟ್ಟಾಗಿ ಸೇರಿಸಿ ಆ ಋಕ್ಕುಗಳನ್ನು ಒಂದೇ ಸೂಕ್ತವೆಂದು ಪರಿಗಣಿಸಿರುವುದು ಕೆಲವು ಸಂದರ್ಭಗಳಲ್ಲಿ ಕಂಡುಬಂದಿದೆ. ಅಂತಹ ಸೂಕ್ತಗಳಲ್ಲಿ ಈ ಮಂಡಲದ ೯೭, ೧೦೧, ೧೦೭, ೧೦೮ ನೆಯ ಸೂಕ್ತಗಳು ಮುಖ್ಯವಾದುವು. ೯೭ ನೆಯ ಸೂಕ್ತದಲ್ಲಿ ವಸಿಷ್ಠ ಮತ್ತು ವಸಿಷ್ಠಗೋತ್ರದ ಕೆಲವು ಋಷಿಗಳಿರುವರು; ೧೦೧ ನೆಯ ಸೂಕ್ತದಲ್ಲಿ ಪ್ರಜಾಪತಿ, ಮನು ಮತ್ತು ಮನುವಂಶದ ನಹುಷ, ಯಯಾತಿ, ಅಂಧೀಗುಃ ಎಂಬ ಋಷಿಗಳಿರುವರು; ೧೦೭ ನೆಯ ಸೂಕ್ತದಲ್ಲಿ ಸಪ್ತರ್ಷಿಗಳಿರುವರು. ಈ ಸಪ್ತರ್ಷಿಗಳು ಯಾರು ಎಂಬ ವಿಷಯವನ್ನು ನಾವು ಹಿಂದೆಯೇ ವಿವರಿಸಿದೇವೆ. ೧೦೮ ನೆಯ ಸೂಕ್ತದಲ್ಲಿ ವಸಿಷ್ಠವಂಶದ ಗೌರವೀತಿ ಮೊದಲಾದ ಏಳುಮಂದಿ ಋಷಿಗಳಿರುವರು. ಅನೇಕ ಮಂದಿ ಋಷಿದೃಷ್ಟವಾದ ಕೆಲವು ಸೂಕ್ತಗಳು ೧೦ ನೆಯ ಮಂಡಲದಲ್ಲಿಯೂ ಇರುವವು.

॥ ಸಂಹಿತಾಪಾಠಃ ॥

**ಯೋ ಧಾರಯಾ ಪಾವಕಯಾ ಪರಿಪ್ರಸ್ಯಂದತೇ ಸುತಃ ।**

**ಇಂದುರಶ್ವೋ ನ ಕೃತ್ವ್ಯಃ ॥ ೨ ॥**

॥ ಪದಪಾಠಃ ॥

**ಯಃ । ಧಾರಯಾ । ಪಾವಕಯಾ । ಪರಿಽಪ್ರಸ್ಯಂದತೇ । ಸುತಃ ।**

**ಇಂದುಃ । ಅಶ್ವಃ । ನ । ಕೃತ್ವ್ಯಃ ॥ ೨ ॥**

॥ ಸಾಯಣಭಾಷ್ಯಂ ॥

**ಪವಿತ್ರೇಷ್ಟ್ಯಾಂ ದ್ವಿತೀಯಸ್ಯಾಜ್ಯಭಾಗಸ್ಯ ಯೋ ಧಾರಯೇತ್ಯೇಷಾನುವಾಕ್ಯಾ । ಸೂತ್ರಿತಂ ಚ। ಪಾವಕವಂತಾವಾಜ್ಯಭಾಗಾವಗ್ನೇ ರಕ್ಷಾಂಸಿ ಸೇಧತಿ ಯೋ ಧಾರಯಾ ಪಾವಕಯಾ । ಆ. ೨.೧೨ । ಇತಿ॥**

**ಸುತೋಽಭಿಷುತಃ ಕೃತ್ವ್ಯಃ । ಕೃತ್ವೀತಿ ಕರ್ಮನಾಮ । ಕರ್ಮಣಿ ಸಾಧುರ್ಯಃ ಇಂದುಃ ಸೋಮಃ ಪಾವಕಯಾ ಪಾಪಾನಾಂ ಶೋಧಕಯಾ ಧಾರಯಾ ಪರಿಪ್ರಸ್ಯಂದತೇ ಪರಿತಃ ಪ್ರಕ್ಷರತಿ । ಕಥಮಿವ । ಅಶ್ವೋ ನಾಶ್ವೋ ಯಥಾ ವೇಗೇನ ಪ್ರಗಚ್ಛತಿ ತದ್ವತ್ ॥**

॥ ಪ್ರತಿಪದಾರ್ಥ ॥

**ಯಃ**—ಯಾರು । **ಸುತಃ**—ಹಿಂಡಲ್ಪಟ್ಟವನೂ । **ಕೃತ್ವ್ಯಃ**—ಕರ್ಮಾರ್ಹನೂ ಆಗಿರುವನೋ ಅಂತಹ । **ಇಂದುಃ**—ಸೋಮದೇವನು । **ಪಾವಕಯಾ**—ಶುದ್ಧಿಕಾರಕವಾದ । **ಧಾರಯಾ**—ಪ್ರವಾಹರೂಪದಿಂದ । **ಅಶ್ವೋ ನ**—ವೇಗಗಾಮಿಯಾದ ಅಶ್ವದಂತೆ । **ಪರಿಪ್ರಸ್ಯಂದತೇ**—ಪ್ರವಹಿಸುತ್ತದೆ.

॥ ಭಾವಾರ್ಥ ॥

ಹಿಂಡಲ್ಪಟ್ಟಿರುವವನೂ, ಕರ್ಮಾರ್ಹನೂ ಆದ ಸೋಮದೇವನು ಶುದ್ಧಿಕಾರಕವಾದ ಪ್ರವಾಹರೂಪದಿಂದ ವೇಗಗಾಮಿಯಾದ ಅಶ್ವದಂತೆ ಪ್ರವಹಿಸುತ್ತದೆ.

## English Translation

The Indu good for sacred rites which when effused flows forth in a purifying stream, (swift) as a horse :

॥ ವಿಶೇಷವಿಷಯಗಳು ॥

ಪ್ರವಿತ್ರೇಷ್ಟಿಯಲ್ಲಿ ಎರಡನೆಯ ಆಜ್ಯಭಾಗವನ್ನು ಹೋಮಮಾಡುವಾಗ **ಯೋ ಧಾರಯಾ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪಾವಕವಂತಾವಾಜ್ಯ-ಭಾಗಾವಗ್ನೀ ರಕ್ಷಾಂಸಿ ಸೇಧತಿ ಯೋ ಧಾರಯಾ ಪಾವಕಯಾ** ಎಂಬ ಸೂತ್ರದಿಂದ ( ಆ. ೨-೧೨ ) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ತಂ ದುರೋಷಮಭೀ ನರಃ ಸೋಮಂ ವಿಶ್ವಾಚ್ಯಾ ಧಿಯಾ ।
ಯಜ್ಞಂ ಹಿನ್ವಂತ್ಯದ್ರಿಭಿಃ ॥ ೩ ॥

॥ ಪದಪಾಠಃ ॥

ತಂ । ದುರೋಷಂ । ಅಭಿ । ನರಃ । ಸೋಮಂ । ವಿಶ್ವಾಚ್ಯಾ । ಧಿಯಾ ।
ಯಜ್ಞಂ । ಹಿನ್ವಂತಿ । ಅದ್ರಿಽಭಿಃ ॥ ೩ ॥

॥ ಸಾಯಣಭಾಷ್ಯಂ ॥

**ನರಃ ಕರ್ಮನೇತಾರ ಋತ್ವಿಜೋ ದುರೋಷಂ । ರೋಷತೇರ್ಹಿಂಸಾರ್ಥಸ್ಯ ರೇಫಲೋಪೇ ದೀರ್ಘಾಭಾವ ಓಷತೇರ್ದಾಹಾರ್ಥಸ್ಯ ವಾ ಖಲಿ ರೂಪಮಿತಿ ಸಂದೇಹಾದನವಗ್ರಹಃ ॥ ತಂ ದುರ್ದಹಂ ದುರ್ವಧಂ ವಾ ಯಜ್ಞಂ ಯಷ್ಟವ್ಯಂ ತಂ ಸೋಮಂ ವಿಶ್ವಾಚ್ಯಾ ಸರ್ವಾನ್ಕಾಮಾನಂಚಿತ್ರ್ಯಾ ಧಿಯಾ ಬುದ್ಧ್ಯಾದ್ರಿಭಿರ್ಗ್ರಾವಭಿರಭಿ ಹಿನ್ವಂತಿ । ಅಭಿಪ್ರೇರಯಂತಿ । ಅಭಿಷುಣ್ವಂತೀತಿ ಯಾವತ್ ॥**

॥ ಪ್ರತಿಪದಾರ್ಥ ॥

ನರಃ—ಕರ್ಮನೇತೃಗಳಾದ ಋತ್ವಿಕ್ಕುಗಳು । **ದುರೋಷಂ**—ಅಹಿಂಸಿತನೂ । **ಯಜ್ಞಂ**—ಪೂಜಾರ್ಹನೂ ಆದ । **ತಂ ಸೋಮಂ**—ಅದೇ ಸೋಮನನ್ನು । **ವಿಶ್ವಾಚ್ಯಾ**—ಸರ್ವತ್ರ ಪ್ರಸರಿಸುವ । **ಧಿಯಾ**—ಬುದ್ಧಿಯೊಡಗೂಡಿ । **ಅದ್ರಿಭಿಃ**—ಹಿಂಡುವ ಕಲ್ಲುಗಳಿಂದ । **ಅಭಿ ಹಿನ್ವಂತಿ**—ಜಜ್ಜಿ ಹಿಂಡುತ್ತಾರೆ.

॥ ಭಾವಾರ್ಥ ॥

ಕರ್ಮನೇತೃಗಳಾದ ಋತ್ವಿಕ್ಕುಗಳು ಅಹಿಂಸಿತನೂ, ಪೂಜಾರ್ಹನೂ ಆದ ಸೋಮನನ್ನು ಸರ್ವತ್ರ ಪ್ರಸರಿಸುವ ಬುದ್ಧಿಯೊಡಗೂಡಿ ಹಿಂಡುವ ಕಲ್ಲುಗಳಿಂದ ಜಜ್ಜಿ ಹಿಂಡುತ್ತಾರೆ.

English Translation

Him, the Soma, unassailable, adorable, the priests, with all comprehending intelligence, express with the stones.

॥ ಸಂಹಿತಾಪಾಠಃ ॥

ಸುತಾಸೋ ಮಧುಮತ್ತಮಾಃ ಸೋಮಾ ಇಂದ್ರಾಯ ಮಂದಿನಃ।
ಪವಿತ್ರವಂತೋ ಅಕ್ಷರನ್ದೇವಾನ್ಗಚ್ಛಂತು ವೋ ಮದಾಃ ॥ ೪ ॥

॥ ಪದಪಾಠಃ ॥

ಸುತಾಸಃ । ಮಧುಮತ್ಽತಮಾಃ । ಸೋಮಾಃ । ಇಂದ್ರಾಯ । ಮಂದಿನಃ ।
ಪವಿತ್ರಽವಂತಃ । ಅಕ್ಷರನ್ । ದೇವಾನ್ । ಗಚ್ಛಂತು । ವಃ । ಮದಾಃ ॥ ೪ ॥

॥ ಸಾಯಣಭಾಷ್ಯಂ ॥

ಪೃಷ್ಠ್ಯಸ್ಯ ಷಷ್ಠೇಽಹನಿ ಬ್ರಾಹ್ಮಣಾಚ್ಛಂಸಿಶಸ್ತ್ರೇ ಸುತಾಸ ಇತಿ ತಿಸ್ರಃ । ಸೂತ್ರಿತಂ ಚ । ದಧಿಕ್ರಾವ್ಣೋಽಕಾರಿಷಮಿತ್ಯನುಷ್ಟುಪ್ ಸುತಾಸೋ ಮಧುಮತ್ತಮಾ ಇತಿ ಚ ತಿಸ್ರಃ । ಆ. ೮-೩ । ಇತಿ ॥

ಮಧುಮತ್ತಮಾ ಅತಿಶಯೇನ ಮಾಧುರ್ಯೋಪೇತಾಃ ಅತ ಏವ ಮಂದಿನೋ ಮದಕರಾಃ ಸುತಾಸೋಽಭಿಷುತಾಃ ಸೋಮಾಃ ಪವಿತ್ರವಂತಃ ಪವಿತ್ರೇ ವರ್ತಮಾನಾಃ ಸಂತ ಇಂದ್ರಾಯೇಂದ್ರಾರ್ಥಮಕ್ಷರನ್ । ಪಾತ್ರೇಷು ಕ್ಷರಂತಿ । ಅಥ ಪ್ರತ್ಯಕ್ಷಕೃತಃ । ವೋ ಯುಷ್ಮಾಕಂ ಮದಾ ಮದಹೇತವೋ ರಸಾ ದೇವಾನಿಂದ್ರಾದೀನ್ಗಚ್ಛಂತು ॥

॥ ಪ್ರತಿಪದಾರ್ಥ ॥

**ಮಧುಮತ್ತಮಾಃ**—ಅತ್ಯಂತ ಮಾಧುರ್ಯದಿಂದ ಕೂಡಿದವೂ ! **ಮಂದಿನಃ**—ಹರ್ಷಕಾರಕಗಳೂ । **ಸುತಾಸಃ**—ಹಿಂಡಲ್ಪಟ್ಟವೂ ಆದ । **ಸೋಮಾಃ**—ಸೋಮರಸಗಳು । **ಪವಿತ್ರವಂತಃ**—ದಶಾಪವಿತ್ರದಲ್ಲಿದ್ದು । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಅಕ್ಷರನ್**- -ಸ್ರವಿಸುತ್ತವೆ (ಎಲೈ ಸೋಮರಸಗಳೇ) । **ವಃ**—ನಿಮ್ಮ । **ಮದಾಃ**—ಹರ್ಷಕಾರಕವಾದ ರಸಗಳು । **ದೇವಾನ್**—ದೇವತೆಗಳಲ್ಲಿಗೆ । **ಗಚ್ಛಂತು**—ಪ್ರವಹಿಸಿ ಹೋಗಲಿ.

॥ ಭಾವಾರ್ಥ ॥

ಅತ್ಯಂತ ಮಾಧುರ್ಯದಿಂದ ಕೂಡಿದವೂ ಹರ್ಷಕಾರಕಗಳೂ ಹಿಂಡಲ್ಪಟ್ಟವೂ ಆದ ಸೋಮರಸಗಳು ದಶಾಪವಿತ್ರದಲ್ಲಿದ್ದು ಇಂದ್ರನ ಪಾನಾರ್ಥವಾಗಿ ಸ್ರವಿಸುತ್ತವೆ. ಹರ್ಷಕಾರಕಗಳಾದ ಎಲೈ ಸೋಮರಸಗಳೇ, ನೀವು ದೇವತೆಗಳಿಗೆ ಅಭಿಮುಖವಾಗಿ ಪ್ರವಹಿಸಿರಿ.

## English Translation

The sweet-flavoured exhilarating Soma juices effused (and) filtered flow for Indra; you exhilarating (juices), proceed to the gods.

॥ ವಿಶೇಷವಿಷಯಗಳು ॥

ಪೃಷ್ಠ್ಯ ಎಂಬ ಯಾಗದ ಆರನೆಯ ದಿವಸ ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಿಗಾಗಿ **ಸುತಾಸಃ** ಎಂದು ಮೊದಲಾಗುವ ಈ ಸೂಕ್ತದ (೪–೬) ಮೂರು ಋಕ್ಕುಗಳನ್ನು ಸೇರಿಸಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ದಧಿಕ್ರಾವ್ಣೋಽಕಾರಿಷಮಿತ್ಯನುಷ್ಟುಪ್ ಸುತಾಸೋ ಮಧುಮತ್ತಮಾ ಇತಿ ಚ ತಿಸ್ರಃ** ಎಂಬ ಸೂತ್ರದಿಂದ ( ಆ. ೮-೩ ) ವಿವೃತವಾಗಿರುವುದು

॥ ಸಂಹಿತಾಪಾಠಃ ॥

ಇಂದುರಿಂದ್ರಾಯ ಪವತ ಇತಿ ದೇವಾಸೋ ಅಬ್ರುವನ್ ।
ವಾಚಸ್ಪತಿರ್ಮಖಸ್ಯತೇ ವಿಶ್ವಸ್ಯೇಶಾನ ಓಜಸಾ ॥ ೫ ॥

॥ ಪದಪಾಠಃ ॥

ಇಂದುಃ । ಇಂದ್ರಾಯ । ಪವತೇ । ಇತಿ । ದೇವಾಸಃ । ಅಬ್ರುವನ್ ।
ವಾಚಃ । ಪತಿಃ । ಮಖಸ್ಯತೇ । ವಿಶ್ವಸ್ಯ । ಈಶಾನಃ । ಓಜಸಾ ॥ ೫ ॥

॥ ಸಾಯಣಭಾಷ್ಯಂ ॥

ಇಂದುಃ ಸೋಮ ಇಂದ್ರಾಯೇಂದ್ರಾರ್ಥಂ ಪವತೇ ಕಲಶೇ ಕ್ಷರತೀತಿ ದೇವಾಸಃ ಸ್ತುತಿಕಾರಿಣಃ ಸ್ತೋತಾರೋಽಬ್ರುವನ್ । ವದಂತಿ । ಯದಾ ಸ್ತೋತಾರ ಏವಂ ವದಂತಿ ತದಾನೀಂ ವಾಚಃ ಸ್ತುತೇಃ **ಪತಿಃ ಪಾಲಯಿತಾ । ಯದ್ವಾ । ಶಬ್ದಸ್ಯ ಸ್ವಾಮ್ಯತ್ಯಂತಂ ಶಬ್ದಾಯಮಾನ ಇತ್ಯರ್ಥಃ । ತಾದೃಶಃ ಸೋಮೋ ಮಖಸ್ಯತೇ । ಸ್ತುತಿಭಿಃ ಪೂಜಾಮಿಚ್ಛತಿ ॥ ಲಾಲಸಾಯಾಂ ಸುಗಾಗಮಃ ॥ ಕೀದೃಶಃ । ಓಜಸಾ ಬಲೇನ ವಿಶ್ವಸ್ಯ ಸರ್ವಸ್ಯೇಶಾನಃ ಪ್ರಭುಃ ॥**

॥ ಪ್ರತಿಪದಾರ್ಥ ॥

**ಇಂದುಃ**—ಸೋಮದೇವನು । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಪವತೇ**—ಪ್ರವಹಿಸುತ್ತಾನೆ । **ಇತಿ**—ಹೀಗೆಂದು । **ದೇವಾಸಃ**—ಸ್ತುತಿಕರ್ತರು । **ಅಬ್ರುವನ್**—ಪ್ರಶಂಸಿಸುತ್ತಾರೆ । **ಓಜಸಾ**—ಸ್ವಪ್ರಭಾವದಿಂದ । **ವಿಶ್ವಸ್ಯ**—ಸಕಲ ಜಗತ್ತಿಗೂ । **ಈಶಾನಃ**—ಪತಿಯೂ । **ವಾಚಃ**—ಸ್ತುತಿಗೆ । **ಪತಿಃ**—ಪಾಲಕನೂ ಆದ ಸೋಮದೇವನು **ಮಖಸ್ಯತೇ**—ನಮ್ಮ ಪೂಜೆಯನ್ನು ಇಚ್ಛಿಸುತ್ತಾನೆ.

॥ ಭಾವಾರ್ಥ ॥

"ಸೋಮದೇವನು ಇಂದ್ರನ ಪಾನಾರ್ಥವಾಗಿ ಪ್ರವಹಿಸುತ್ತಾನೆ" ಎಂಬುದಾಗಿ ಸ್ತುತಿಕರ್ತರು ಪ್ರಶಂಸಿಸುತ್ತಾರೆ. ಸ್ವಪ್ರಭಾವದಿಂದ ಸಕಲ ಜಗತ್ತಿಗೂ ಒಡೆಯನೂ, ಸ್ತುತಿಗಳಿಗೆಲ್ಲ ಪಾಲಕನೂ ಆದ ಸೋಮದೇವನು ನಮ್ಮ ಪೂಜೆಯನ್ನು ಇಚ್ಛಿಸುತ್ತಾನೆ.

English Translation

The devout (worshippers) say "Indu flows forth for Indra": the lord of speech (Soma) sovereign of all by his might desires (our) worship.

॥ ಸಂಹಿತಾಪಾಠಃ ॥

ಸಹಸ್ರಧಾರಃ ಪವತೇ ಸಮುದ್ರೋ ವಾಚಮೀಂಖಯಃ ।
ಸೋಮಃ ಪತೀ ರಯೀಣಾಂ ಸಖೇಂದ್ರಸ್ಯ ದಿವೇದಿವೇ ॥ ೬ ॥

॥ ಪದಪಾಠಃ ॥

ಸಹಸ್ರಽಧಾರಃ । ಪವತೇ । ಸಮುದ್ರಃ । ವಾಚಂಽಈಂಖಯಃ ।
ಸೋಮಃ । ಪತಿಃ । ರಯೀಣಾಂ । ಸಖಾ । ಇಂದ್ರಸ್ಯ । ದಿವೇಽದಿವೇ ॥ ೬ ॥

॥ ಸಾಯಣಭಾಷ್ಯಂ ॥

ಸಹಸ್ರಧಾರೋ ಬಹುವಿಧಧಾರೋಪೇತಃ ಸೋಮಃ ಪವತೇ । ಕ್ಷರತಿ । ಕೀದೃಶಃ । ಸಮುದ್ರಃ । ಯಸ್ಮಾತ್ಸಮುದ್ದ್ರವಂತಿ ರಸಾಃ । ಸರಃಸ್ಥಾನೀಯಃ ವಾಚಮೀಂಖಯಃ ॥ ಈಂಖತೇರ್ಣ್ಯಂತಸ್ಯ ಸುಪ್ಯುಪಪದೇ ಖಚ್‌ಪ್ರತ್ಯಯಃ ॥ ಸ್ತುತೀನಾಂ ಪ್ರೇರಯಿತಾ ರಯೀಣಾಂ ಧನಾನಾಂ ಪತಿಃ ಪ್ರಭುಃ । ಯದ್ವಾ । ರಯೀಣಾಂ ಹವಿಷೋ ದಾತ್ರೀಣಾಂ ಯಜಮಾನಾನಾಂ ಪತಿಃ ಪಾಲಯಿತಾ । ದಿವೇದಿವೇ ಪ್ರತ್ಯಹಮಿಂದ್ರಸ್ಯ ಸಖಾ ಮಿತ್ರಭೂತಃ ಸೋಮಃ ಪವತೇ ॥

॥ ಪ್ರತಿಪದಾರ್ಥ ॥

ಸಹಸ್ರಧಾರಃ—ಅನೇಕ ರೂಪವಾದ ಪ್ರವಾಹವುಳ್ಳವನೂ । ಸಮುದ್ರಃ—ರಸಗಳಿಗೆ ಆಶ್ರಯಸ್ಥಾನನೂ । ವಾಚಮೀಂಖಯಃ—ಸ್ತುತಿಗಳಿಗೆ ಪ್ರೇರಕನೂ । ರಯೀಣಾಂ—ಧನಗಳಿಗೆ । ಪತಿಃ—ಪ್ರಭುವೂ । ಇಂದ್ರಸ್ಯ—ಇಂದ್ರನಿಗೆ । ಸಖಾ—ಮಿತ್ರಭೂತನೂ ಆದ । ಸೋಮಃ—ಸೋಮದೇವನು । ದಿವೇದಿವೇ—ಪ್ರತಿದಿನವೂ । ಪವತೇ—ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಅನೇಕರೂಪವಾದ ಪ್ರವಾಹಗಳುಳ್ಳವನೂ, ರಸಗಳಿಗೆ ಆಶ್ರಯಸ್ಥಾನನೂ, ಸ್ತುತಿಗಳಿಗೆ ಪ್ರೇರಕನೂ, ಧನಗಳಿಗೆ ಪ್ರಭುವೂ, ಇಂದ್ರನಿಗೆ ಮಿತ್ರಭೂತನೂ ಆದ ಸೋಮದೇವನು ಪ್ರತಿದಿನವೂ ಪ್ರವಹಿಸುತ್ತಾನೆ.

## English Translation

The thousand-streamed ocean, Soma the simulator of praise, the lord of riches, the friend of Indra flows day by day.

॥ ಸಂಹಿತಾಪಾಠಃ ॥

ಅಯಂ ಪೂಷಾ ರಯಿರ್ಭಗಃ ಸೋಮಃ ಪುನಾನೋ ಅರ್ಷತಿ ।
ಪತಿರ್ವಿಶ್ವಸ್ಯ ಭೂಮನೋ ವ್ಯಖ್ಯದ್ರೋದಸೀ ಉಭೇ ॥ ೭ ॥

॥ ಪದಪಾಠಃ ॥

ಅಯಂ । ಪೂಷಾ । ರಯಿಃ । ಭಗಃ । ಸೋಮಃ । ಪುನಾನಃ । ಅರ್ಷತಿ ।
ಪತಿಃ । ವಿಶ್ವಸ್ಯ । ಭೂಮನಃ । ವಿ । ಅಖ್ಯತ್ । ರೋದಸೀ ಇತಿ । ಉಭೇ ಇತಿ ॥ ೭ ॥

॥ ಸಾಯಣಭಾಷ್ಯಂ ॥

ಪೂಷಾ ಪೋಷಕಃ ಸರ್ವೇಷಾಂ ಭಗೋ ಭಜನೀಯೋ ರಯಿರ್ಧನಹೇತುರಯಂ ಸೋಮಃ ಪುನಾನಃ ಪವಿತ್ರೇಣ ಪೂಯಮಾನಃ ಸನ್ನರ್ಷತಿ । ಕಲಶಮಭಿಗಚ್ಛತಿ । ತಥಾ ವಿಶ್ವಸ್ಯ ಸರ್ವಸ್ಯ ಭೂಮನೋ ಭೂತಜಾತಸ್ಯ ಪತಿಃ ಪಾಲಯಿತಾ ಸೋಮ ಉಭೇ ರೋದಸೀ ದ್ಯಾವಾಪೃಥಿವ್ಯೌ ವ್ಯಖ್ಯತ್ । ಸ್ವತೇಜಸಾ ಪ್ರಕಾಶಯತಿ । ಅನೇನ ಲೋಕಪಸ್ಯಯಪರ್ಶಿತ್ವಂ ಸೂಚಿತಂ ॥

॥ ಪ್ರತಿಪದಾರ್ಥ ॥

**ಪೂಷಾ**—ಸಕಲರಿಗೂ ಪೋಷಕನೂ । **ಭಗಃ**—ಪೂಜ್ಯನೂ । **ರಯಿಃ**—ಧನದಾತೃವೂ ಆದ । **ಅಯಂ-ಸೋಮಃ**—ಈ ಸೋಮದೇವನು । **ಪುನಾನಃ**—ದಶಾಪವಿತ್ರದಲ್ಲಿ ಶುದ್ಧಿಗೊಳಿಸಲ್ಪಟ್ಟು । **ಅರ್ಷತಿ**—ಕಲಶಾಭಿಮುಖವಾಗಿ ಹರಿಯುತ್ತಾನೆ । **ವಿಶ್ವಸ್ಯ**—ಸಕಲವಾದ । **ಭೂಮನಃ**—ಭೂತಜಾತಕ್ಕೂ । **ಪತಿಃ**—ಪಾಲಕನಾದ ಸೋಮನು । **ಉಭೇ ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ । **ವ್ಯಖ್ಯತ್**—ಪ್ರಕಾಶಿಸುವಂತೆ ಮಾಡಿದ್ದಾನೆ.

॥ ಭಾವಾರ್ಥ ॥

ಸಕಲರಿಗೂ ಪೋಷಕನೂ, ಪೂಜ್ಯನೂ, ಧನದಾತೃವೂ ಆದ ಸೋಮದೇವನು ದಶಾಪವಿತ್ರದಲ್ಲಿ ಶುದ್ಧಿಗೊಳಿಸಲ್ಪಟ್ಟು ಕಲಶಾಭಿಮುಖವಾಗಿ ಹರಿಯುತ್ತಾನೆ. ಸಕಲ ಭೂತಜಾತಕ್ಕೂ ಪಾಲಕನಾದ ಸೋಮನು ದ್ಯಾವಾಪೃಥಿವಿಗಳೆರಡನ್ನೂ ಪ್ರಕಾಶಿಸುವಂತೆ ಮಾಡಿದ್ದಾನೆ.

## English Translation

This Soma being purified hastens (to the pitcher) fostering, wealth-giving, to be enjoyed (by all); the lord of all beings, he has illuminated both heaven and earth.

॥ ಸಂಹಿತಾಪಾಠಃ ॥

ಸಮು ಪ್ರಿಯಾ ಅನೂಷತ ಗಾವೋ ಮದಾಯ ಘೃಷ್ವಯಃ

ಸೋಮಾಸಃ ಕೃಣ್ವತೇ ಪಥಃ ಪವಮಾನಾಸ ಇಂದವಃ ॥ ೮ ॥

ಪದಪಾಠಃ ॥

ಸಃ । ಊಂ ಇತಿ । ಪ್ರಿಯಾಃ । ಅನೂಷತ । ಗಾವಃ । ಮದಾಯ । ಘೃಷ್ವಯಃ

ಸೋಮಾಸಃ । ಕೃಣ್ವತೇ । ಪಥಃ । ಪವಮಾನಾಸಃ । ಇಂದವಃ ॥ ೮ ॥

॥ ಸಾಯಣಭಾಷ್ಯಂ ॥

ಪ್ರಿಯಾಃ ಪ್ರಿಯತಮಾ ಘೃಷ್ವಯೋಽತ್ಯಂತಂ ದೀಪ್ತಾಃ । ಯದ್ವಾ । ಅಹಂ ಪ್ರಥಮತಃ ಸ್ತೌಮಿ ಅಹಂ ಪುರಸ್ತಾತ್ಸ್ತೌಮೀತಿ ಪರಸ್ಪರಂ ಸ್ಪರ್ಧಮಾನಾಃ । ಗಾವಃ ಸ್ತುತಿಲಕ್ಷಣಾ ವಾಚಃ ಸೋಮಸ್ಯ ಮದಾರ್ಥಂ ಸಮನೂಷತ । ಸಂಸ್ತುವಂತಿ । ಉಃ ಪ್ರಸಿದ್ಧೌ । ಯದ್ವಾ । ಗಾವೋ ಧೇನವಃ ಸೋಮಸ್ಯ ಮದಾಯ ಶಬ್ದಾಯಂತೇ । ತತಃ ಪವಮಾನಾಸಃ ಪೂಯಮಾನಾ ಇಂದವೋ ದೀಪ್ತಾಃ ಸೋಮಾಸಃ ಸೋಮಾಃ ಪಥೋ ಮಾರ್ಗಾನ್ಕೃಣ್ವತೇ । ಕ್ಷರಣಾರ್ಥಂ ಕುರ್ವಂತಿ ॥

। ಪ್ರತಿಪದಾರ್ಥ ।

**ಪ್ರಿಯಾಃ**—ಪ್ರೀತಿಕಾರಕವೂ । **ಘೃಷ್ವಯಃ**—ಪ್ರಕಾಶಮಾನವಾದವೂ ಆದ । **ಗಾವಃ**—ಸ್ತುತಿಗಳು । **ಸಮನೂಷತ**—ಸೋಮನನ್ನು ಪ್ರಶಂಸಿಸುತ್ತವೆ । **ಪವಮಾನಾಸಃ**—ಶುದ್ಧಿಯನ್ನು ಹೊಂದುವುವೂ । **ಇಂದವಃ**—ಪ್ರವಹಿಸುವುವೂ ಆದ । **ಸೋಮಾಸಃ**—ಸೋಮರಸಗಳು । **ಪಥಃ**—ತಮ್ಮ ಪ್ರವಾಹಕ್ಕೆ ಮಾರ್ಗಗಳನ್ನು । **ಕೃಣ್ವತೇ**—ಮಾಡಿಕೊಳ್ಳುತ್ತವೆ.

॥ ಭಾವಾರ್ಥ ॥

ಪ್ರೀತಿಕಾರಕವೂ ಪ್ರಕಾಶಮಾನವಾದವೂ ಆದ ಸ್ತುತಿವಾಕ್ಯಗಳು ಸೋಮನನ್ನು ಪ್ರಶಂಸಿಸುತ್ತವೆ ಶುದ್ಧಿಯನ್ನು ಹೊಂದುವುವೂ ಪ್ರವಾಹಾತ್ಮಕಗಳೂ ಆದ ಸೋಮರಸಗಳು ತಮ್ಮ ಪ್ರವಾಹಕ್ಕೆ ಅನುಕೂಲವಾದ ಮಾರ್ಗಗಳನ್ನು ಕಲ್ಪಿಸಿಕೊಳ್ಳುತ್ತವೆ.

English Translation

The affectionate emulous cows celebrate (Soma) for his exhilaration; the brilliant filtered (Soma) juices make paths (for themselves to flow).

॥ ಸಂಹಿತಾಪಾಠಃ ॥

ಯ ಓಜಿಷ್ಠಸ್ತಮಾ ಭರ ಪವಮಾನ ಶ್ರವಾಯ್ಯಂ ।
ಯಃ ಪಂಚ ಚರ್ಷಣೀರಭಿ ರಯಿಂ ಯೇನ ವನಾಮಹೈ ॥ ೯ ॥

॥ ಪದಪಾಠಃ ॥

ಯಃ । ಓಜಿಷ್ಠಃ । ತಂ । ಆ । ಭರ । ಪವಮಾನ । ಶ್ರವಾಯ್ಯಂ ।
ಯಃ । ಪಂಚ । ಚರ್ಷಣೀಃ । ಅಭಿ । ರಯಿಂ । ಯೇನ । ವನಾಮಹೈ ॥ ೯ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಪೂಯಮಾನ ಸೋಮ ಓಜಿಷ್ಠ ಓಜಸ್ವಿತಮೋ ಯಸ್ತ್ವದೀಯೋ ರಸೋಽಸ್ತಿ ತಂ ಶ್ರವಾಯ್ಯಂ ಶ್ರವಣೀಯಂ ರಸಮಾ ಭರ । ಅಸ್ಮಭ್ಯಮಾಹರ । ಕಿಂ ಚ ಯೋ ರಸಃ ಪಂಚ ಚರ್ಷಣೀಃ ಪಂಚ ಜನಾನ್ನಿಷಾದಪಂಚಮಾಂಶ್ಚತುರೋ ವರ್ಣಾನಭಿ ತಿಷ್ಠತಿ । ಅಪಿ ಚ ಯೇನ ರಸೇನ ವಯಂ ರಯಿಂ ಧನಂ ಚ ವನಾಮಹೈ ಸಂಭಜಾಮಹೈ । ಯದ್ವಾ । ಯೇನ ತ್ವಾಂ ರಯಿಂ ಯಾಚಾಮಹೈ ತಮಾ ಭರ ।

॥ ಪ್ರತಿಪದಾರ್ಥ ॥

ಪವಮಾನ—ಶುದ್ಧಿಕಾರಕನಾದ ಎಲೈ ಸೋಮದೇವನೇ । ಯಃ—ಯಾವ ನಿನ್ನ ರಸವು । ಓಜಿಷ್ಠಃ—ಅತ್ಯಂತ ವೀರ್ಯವತ್ತಾಗಿದೆಯೋ । ಯಃ— ಯಾವ ರಸವು । ಪಂಚ ಚರ್ಷಣೀಃ—ನಿಷಾದಾದಿ ಪಂಚಜನರನ್ನು । ಅಭಿ—ಧರಿಸುವುದೋ । ಯೇನ—ಯಾವ ರಸದ ಪ್ರಭಾವದಿಂದ । ರಯಿಂ— ಧನವನ್ನು । ವನಾಮಹೈ—ನಾವು ಹೊಂದುವೆವೋ । ತಂ—ಅಂತಹ । ಶ್ರವಾಯ್ಯಂ—ಪ್ರಸಿದ್ಧವಾದ ರಸವನ್ನು । ಆ ಭರ— ನಮಗೆ ಒದಗಿಸು.

॥ ಭಾವಾರ್ಥ ॥

ಶುದ್ಧಿಕಾರಕನಾದ ಎಲೈ ಸೋಮದೇವನೇ, ಯಾವ ನಿನ್ನ ರಸವು ಅತ್ಯಂತ ವೀರ್ಯವತ್ತಾಗಿದೆಯೋ, ಯಾವ ನಿನ್ನ ರಸವು ನಿಷಾದಾದಿ ಪಂಚಜನರನ್ನೂ ಧರಿಸುವುದೋ, ಯಾವ ರಸದ ಪ್ರಭಾವದಿಂದ ನಾವು ಧನವನ್ನು ಹೊಂದುವೆವೋ ಅಂತಹ ಪ್ರಸಿದ್ಧವಾದ ರಸವನ್ನು ನಮಗೆ ಒದಗಿಸು.

## English Translation

Bring to us, filtered (Soma), that celebrated (liquor) which is most potent, which (waits) upon the five orders of beings and by which we may obtain riches.

॥ ಸಂಹಿತಾಪಾಠಃ ॥

ಸೋಮಾಃ ಪವಂತ ಇಂದವೋಽಸ್ಮಭ್ಯಂ ಗಾತುವಿತ್ತಮಾಃ ।
ಮಿತ್ರಾಃ ಸುವಾನಾ ಅರೇಪಸಃ ಸ್ವಾಧ್ಯಃ ಸ್ವರ್ವಿದಃ ॥ ೧೦ ॥

॥ ಪದಪಾಠಃ ॥

ಸೋಮಾಃ । ಪವಂತೇ । ಇಂದವಃ । ಅಸ್ಮಭ್ಯಂ । ಗಾತುವಿತ್ऽತಮಾಃ ।
ಮಿತ್ರಾಃ । ಸುವಾನಾಃ । ಅರೇಪಸಃ । ಸುऽಆಧ್ಯಃ । ಸ್ವಃऽವಿದಃ ॥ ೧೦ ॥

॥ ಸಾಯಣಭಾಷ್ಯಂ ॥

ಗಾತುವಿತ್ತಮಾ ಅತಿಶಯೇನ ಮಾರ್ಗಸ್ಯ ಲಂಭಕಾ ಇಂದವೋ ದೀಪ್ತಾಃ ಸೋಮಾಃ ಪವಂತೇऽಸ್ಮಭ್ಯಮಸ್ಮದರ್ಥಂ ಕ್ಷರಂತ್ಯಾಗಚ್ಛಂತಿ ವಾ । ಕೀದೃಶಾಃ । ಮಿತ್ರಾ ದೇವಾನಾಂ ಸಖಿಭೂತಾಃ ಸುವಾನಾ ಅಭಿಷೂಯಮಾಣಾ ಅರೇಪಸಃ ಪಾಪರಹಿತಾಃ ಅತ ಏವ ಸ್ವಾಧ್ಯಃ ಶೋಭನಧ್ಯಾನಾಃ ಸ್ವರ್ವಿದಃ ಸರ್ವಜ್ಞಾಃ ಸರ್ವಪ್ರಾಪಕಾ ವಾ ॥

॥ ಪ್ರತಿಪದಾರ್ಥ ॥

**ಗಾತುವಿತ್ತಮಾಃ**—ಉತ್ತಮವಾದ ಮಾರ್ಗಗಳನ್ನು ಅರಿತಿರುವವೂ । **ಇಂದವಃ**—ಪ್ರಕಾಶಮಾನವಾದವೂ । **ಮಿತ್ರಾಃ**—ದೇವತೆಗಳಿಗೆ ಸಖಿಭೂತವೂ । **ಸುವಾನಾಃ**—ಹಿಂಡಲ್ಪಡತಕ್ಕವೂ । **ಅರೇಪಸಃ**—ಪಾಪರಹಿತವೂ । **ಸ್ವಾಧ್ಯಃ**—ಉತ್ತಮವಾದ ಧ್ಯಾನವುಳ್ಳವೂ । **ಸ್ವರ್ವಿದಃ**—ಸ್ವರ್ಗಪ್ರಾಪಕವೂ ಆದ । **ಸೋಮಾಃ**—ಸೋಮರಸಗಳು । **ಅಸ್ಮಭ್ಯಂ**—ನಮಗಾಗಿ । **ಪವಂತೇ**—ಪ್ರವಹಿಸುತ್ತವೆ.

॥ ಭಾವಾರ್ಥ ॥

ಉತ್ತಮವಾದ ಮಾರ್ಗಗಳನ್ನು ಅರಿತಿರುವವೂ, ಪ್ರಕಾಶಮಾನವಾದವೂ, ದೇವತೆಗಳಿಗೆ ಸಖಿಭೂತವೂ, ಹಿಂಡಲ್ಪಡತಕ್ಕವೂ, ಪಾಪರಹಿತವೂ, ಉತ್ತಮವಾದ ಧ್ಯಾನವುಳ್ಳವೂ, ಸ್ವರ್ಗಪ್ರಾಪಕವೂ ಆದ ಸೋಮರಸಗಳು ನಮಗಾಗಿ ಪ್ರವಹಿಸುತ್ತವೆ.

## English Translation

The brilliant Soma juices flow for us knowing the right path, friendly (to the gods), effused, sinless, contemplative, all-knowing.

|| ಸಂಹಿತಾಪಾಠಃ ||

ಸುಷ್ವಾಣಾಸೋ ವ್ಯದ್ರಿಭಿಶ್ಚಿತಾನಾ ಗೋರಧಿ ತ್ವಚಿ ।
ಇಷಮಸ್ಮಭ್ಯಮಭಿತಃ ಸಮಸ್ವರನ್ವಸುವಿದಃ ॥ ೧೧ ॥

॥ ಪದಪಾಠಃ ॥

ಸುಸ್ವಾನಾಸಃ । ವಿ । ಅದ್ರಿಽಭಿಃ । ಚಿತಾನಾಃ । ಗೋಃ । ಅಧಿ । ತ್ವಚಿ ।
ಇಷಂ । ಅಸ್ಮಭ್ಯಂ । ಅಭಿತಃ । ಸಂ । ಅಸ್ವರನ್ । ವಸುಽವಿದಃ ॥ ೧೧ ॥

॥ ಸಾಯಣಭಾಷ್ಯಂ ॥

ಗೋರನಡುಹೋಽಧಿ ತ್ವಚ್ಯಧಿಷವಣಚರ್ಮಣಿ ಚಿತಾನಾ ಜ್ಞಾಯಮಾನಾ ಅದ್ರಿಭಿರ್ಗ್ರಾವಭಿರ್ವಿಧಂ ಸುಷ್ವಾಣಾಸಃ ಸೂಯಮಾನಾ ವಸುವಿದೋ ವಸುನೋ ಲಂಭಕಾ ಏತೇ ಸೋಮಾ ಅಸ್ಮಭ್ಯಮಿಷಮನ್ನಮಭಿತಃ ಸಮಸ್ವರನ್ । ಸಮ್ಯಕ್ ಶಬ್ದಯಂತಿ । ಪ್ರಯಚ್ಛಂತೀತಿ ಯಾವತ್ ॥

|| ಪ್ರತಿಪದಾರ್ಥ ||

**ಗೋಃ**—ಗೋವಿನ । **ಅಧಿ ತ್ವಚಿ**—ಚರ್ಮದ ಮೇಲಿರುವಾಗ । **ವಿ ಚಿತಾನಾಃ**—ಚೆನ್ನಾಗಿ ತಿಳಿಯಲ್ಪಡುವುವೂ । **ಅದ್ರಿಭಿಃ**—ಹಿಂಡುವ ಕಲ್ಲುಗಳಿಂದ । **ಸುಷ್ವಾಣಾಸಃ**—ಹಿಂಡಲ್ಪಡುವುವೂ । **ವಸುವಿದಃ**—ಧನವನ್ನು ಹೊಂದಿಸುವುವೂ ಆದ ಸೋಮರಸಗಳು । **ಅಸ್ಮಭ್ಯಂ**—ನಮಗೆ । **ಇಷಂ**—ಅನ್ನವನ್ನು । **ಅಭಿತಃ**—ಸರ್ವತ್ರ । **ಸಮಸ್ವರನ್**—ಒದಗಿಸುತ್ತವೆ.

॥ ಭಾವಾರ್ಥ ॥

ಗೋವಿನ ಚರ್ಮದ ಮೇಲಿರುವಾಗ ಚೆನ್ನಾಗಿ ತಿಳಿಯಲ್ಪಡುವುವೂ ಹಿಂಡುವ ಕಲ್ಲುಗಳಿಂದ ಹಿಂಡಲ್ಪಡುವುವೂ, ಧನವನ್ನು ಹೊಂದಿಸುವುವೂ ಆದ ಸೋಮರಸಗಳು ನಮಗೆ ಸರ್ವತ್ರ ಅನ್ನವನ್ನು ಒದಗಿಸುತ್ತವೆ.

## English Translation

Effused by the stones, recognized upon the cowhide, acquirers of wealth they bestow food upon us from all sides.

॥ ಸಂಹಿತಾಪಾಠಃ ॥

ಏತೇ ಪೂತಾ ವಿಪಶ್ಚಿತಃ ಸೋಮಾಸೋ ದಧ್ಯಾಶಿರಃ ।
ಸೂರ್ಯಾಸೋ ನ ದರ್ಶತಾಸೋ ಜಿಗತ್ನವೋ ಧ್ರುವಾ ಘೃತೇ ॥

ಪದಪಾಠಃ

ಏತೇ । ಪೂತಾಃ । ವಿಪಃಽಚಿತಃ । ಸೋಮಾಸಃ । ದಧಿಽಆಶಿರಃ ।
ಸೂರ್ಯಾಸಃ । ನ । ದರ್ಶತಾಸಃ । ಜಿಗತ್ನವಃ । ಧ್ರುವಾಃ । ಘೃತೇ ॥ ೧೨ ॥

॥ ಸಾಯಣಭಾಷ್ಯಂ ॥

ಪೂತಾಃ ಪವಿತ್ರೇಣ ಪರಿಪೂತಾ ವಿಪಶ್ಚಿತೋ ಮೇಧಾವಿನೋ ದಧ್ಯಾಶಿರೋ ದಧ್ಯಾಮಿಶ್ರಣಾ ಘೃತೇ ವಸತೀವರ್ಯಾಖ್ಯ ಉದಕೇ ಜಿಗತ್ನವೋ ಗಮನಶೀಲಾ ಧ್ರುವಾಸ್ತತ್ರ ಸ್ಥೈರ್ಯೇಣ ವರ್ತಮಾನಾ ಏತೇ ಸೋಮಾಸಃ ಸೋಮಾಃ ಸೂರ್ಯಾಸೋ ನ ಸೂರ್ಯಾ ಇವ ದರ್ಶತಾಸಃ ಪಾತ್ರೇಷು ಸರ್ವೈರ್ದರ್ಶನೀಯಾ ಭವಂತಿ ॥

॥ ಪ್ರತಿಪದಾರ್ಥ ॥

ಪೂತಾಃ—ದಶಾಪವಿತ್ರದಲ್ಲಿ ಶುದ್ಧವಾದವೂ । ವಿಪಶ್ಚಿತಃ—ಮೇಧಾವಿಗಳೂ । ದಧ್ಯಾಶಿರಃ—ದಧಿಯೊಡನೆ ಮಿಶ್ರಿತವಾದವೂ । ಘೃತೇ—ವಸತೀವರಿಯಲ್ಲಿ । ಜಿಗತ್ನವಃ—ಸಂಚರಿಸುವುವೂ । ಧ್ರುವಾಃ—ಸ್ಥೈರ್ಯವುಳ್ಳವೂ ಆದ । ಏತೇ ಸೋಮಾಸಃ—ಈ ಸೋಮರಸಗಳು । ಸೂರ್ಯಾಸೋ ನ—ಆದಿತ್ಯರಂತೆ । ದರ್ಶತಾಸಃ—ಪ್ರಕಾಶಿಸಿ ಗೋಚರವಾಗುತ್ತವೆ.

॥ ಭಾವಾರ್ಥ ॥

ದಶಾಪವಿತ್ರದಲ್ಲಿ ಶುದ್ಧಿಯನ್ನು ಹೊಂದಿದವೂ, ಮೇಧಾವಿಗಳೂ, ದಧಿಯೊಡನೆ ಮಿಶ್ರಿತವಾದವೂ, ವಸತೀವರಿಯಲ್ಲಿ ಸಂಚರಿಸುವವೂ ಸ್ಥೈರ್ಯವುಳ್ಳವೂ ಆದ ಈ ಸೋಮರಸಗಳು ಆದಿತ್ಯರಂತೆ ಪ್ರಕಾಶಿಸುತ್ತಾ ಎಲ್ಲರಿಗೂ ಗೋಚರವಾಗುತ್ತವೆ.

English Translation

These Filtered Soma juices, intelligent, mixed with curds, swift-moving, firm in the water (are) brilliant as suns.

॥ ಸಂಹಿತಾಪಾಠಃ ॥

ಪ್ರ ಸುನ್ವಾನಸ್ಯಾಂಧಸೋ ಮರ್ತೋ ನ ವೃತ ತದ್ವಚಃ ।
ಅಪ ಶ್ವಾನಮರಾಧಸಂ ಹತಾ ಮಖಂ ನ ಭೃಗವಃ ॥ ೧೩ ॥

॥ ಪದಪಾಠಃ ॥

ಪ್ರ । ಸುನ್ವಾನಸ್ಯ । ಅಂಧಸಃ । ಮರ್ತಃ । ನ । ವೃತ । ತತ್ । ವಚಃ ।

ಅಪ । ಶ್ವಾನಂ । ಅರಾಧಸಂ । ಹತ । ಮುಖಂ । ನ । ಭೃಗವಃ ॥ ೧೩ ॥

॥ ಸಾಯಣಭಾಷ್ಯಂ ॥

ಸುನ್ವಾನಸ್ಯಾಭಿಷೂಯಮಾಣಸ್ಯಾಂಧಸೋಽದನೀಯಸ್ಯ ಸೋಮಸ್ಯ ತತ್ ಪ್ರಸಿದ್ಧಂ ವಚೋ ವಚನಂ ಘೋಷಂ ಮರ್ತೋ ಮಾರಕಃ ಕರ್ಮವಿಘ್ನಕಾರೀ ಶ್ವಾ ನ ಪ್ರ ವೃತ । ನ ಭಜತಾಂ । ನ ಶೃಣೋತ್ವಿತಿ ಯಾವತ್ । ತಥಾ ಹೇ ಸ್ತೋತಾರಃ ಅರಾಧಸಂ ಸಂಸಾಧಕಕರ್ಮರಹಿತಂ ತಂ ಶ್ವಾನಮಪ ಹತ । ತತ್ರ ದೃಷ್ಟಾಂತಃ । ಮಖಂ ನ ಯಥಾ ಪುರಾಪರಾದ್ಧಂ ಮಮೇತನ್ನಾಮಾನಂ ಭೃಗವೋಽಪಹತವಂತಃ ತಥಾಪ ಹತೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸುನ್ವಾನಸ್ಯ**—ಹಿಂಡಲ್ಪಡುವ । **ಅಂಧಸಃ**—ಸೋಮದ । **ತತ್**—ಪ್ರಸಿದ್ಧವಾದ । **ವಚಃ**—ಸ್ತೋತ್ರವನ್ನು । **ಮರ್ತಃ**—ಕರ್ಮಭ್ರಷ್ಟನಾದ ಮಾನವನು । **ನ ಪ್ರ ವೃತ**—ಪಠಿಸದಿರಲಿ । **ಭೃಗವಃ**—ಭೃಗುಗಳು । **ಮಖಂ ನ**—ಹಿಂದೆ ಮಖನೆಂಬುವನನ್ನು ಓಡಿಸಿದಂತೆ । **ಅರಾಧಸಂ**-ಕರ್ಮರಹಿತನಾದ । **ಶ್ವಾನಂ**—ನಾಯನ್ನು । **ಅಪ ಹತ**—ಹೊಡೆದೋಡಿಸಿರಿ.

॥ ಭಾವಾರ್ಥ ॥

ಯಜ್ಞಕ್ಕಾಗಿ ಹಿಂಡಲ್ಪಡತಕ್ಕ ಸೋಮವನ್ನು ಪ್ರಶಂಸಿಸುವ ಸ್ತೋತ್ರವನ್ನು ಕರ್ಮಭ್ರಷ್ಟನಾದ ಮಾನವನು ಪಠಿಸದಿರಲಿ. ಭೃಗುಗಳು ಹಿಂದೆ ಮಖನೆಂಬುವನನ್ನು ಓಡಿಸಿದಂತೆ ಕರ್ಮರಹಿತನಾದ ನಾಯನ್ನು ಹೊಡೆದೋಡಿಸಿರಿ.

## English Translation

Let no mortal hear the sound of the effused Soma ; drive off the dog that sacrifices not as the Bhrigus drove off Makha.

॥ ಸಂಹಿತಾಪಾಠಃ ॥

ಆ ಜಾಮಿರತ್ಕೇ ಅವ್ಯತ ಭುಜೇ ನ ಪುತ್ರ ಓಣ್ಯೋಃ ।

ಸರಜ್ಜಾರೋ ನ ಯೋಷಣಾಂ ವರೋ ನ ಯೋನಿಮಾಸದಂ ॥

॥ ಪದಪಾಠಃ ॥

ಆ । ಜಾಮಿಃ । ಅತ್ಕೇ । ಅವ್ಯತ । ಭುಜೇ । ನ । ಪುತ್ರಃ । ಓಣ್ಯೋಃ ।

ಸರತ್ । ಜಾರಃ । ನ । ಯೋಷಣಾಂ । ವರಃ । ನ । ಯೋನಿಂ । ಆಽಸದಂ ॥ ೧೪ ॥

॥ ಸಾಯಣಭಾಷ್ಯಂ ॥

ಜಾಮಿರ್ಬಂಧುಭೂತೋ ದೇವಾನಾಂ ಸೋಮೋಽತ್ಕೇ ಆಚ್ಛಾದಕೇ ಪವಿತ್ರೇ ಅವ್ಯತ । ಅವ್ಯಣೋತಿ । ಸಂಬದ್ಧೋ ಭವತಿ । ತತ್ರ ದೃಷ್ಟಾಂತಃ । ಭುಜೇ ನ ಯಥಾ ಪಿತ್ರ್ಯೋಃ ರಕ್ಷಕಯೋರ್ಮಾತಾಪಿತ್ರೋ-ರ್ಭುಜೇ ಪುತ್ರ ಅವ್ಯಣೋತೀತಿ ತದ್ವತ್ । ತತಃ ಸೋಽಯಂ ಸೋಮೋ ಯೋನಿಂ ಸ್ವಸ್ಥಾನಭೂತಂ ಕಲಶಮಾಸದಮಾಸತ್ತುಂ ಸರತ್ । ಸರತಿ । ತತ್ರ ದೃಷ್ಟಾಂತದ್ವಯಂ । ಜಾರೋ ನ ಯಥಾ ಜಾರೋ ಯೋಷಣಾಮಸತೀಂ ಸ್ತ್ರಿಯಂ ಪ್ರಾಪ್ತುಂ ಸರತಿ । ಯಥಾ ವಾ ವರಃ ಕನ್ಯಾಂ ಪ್ರಾಪ್ತುಂ ಗಚ್ಛತಿ ತದ್ವತ್ ॥

॥ ಪ್ರತಿಪದಾರ್ಥ ॥

ಪಿತ್ರ್ಯೋಃ—ರಕ್ಷಕರಾದ ಮಾತಾಪಿತೃಗಳ । ಭುಜೇ—ಕೈಯಲ್ಲಿ । ಪುತ್ರಃ ನ—ಪುತ್ರನು ಸುಖವಾಗಿರುವಂತೆ । ಜಾಮಿಃ—ದೇವತೆಗಳಿಗೆ ಬಂಧುವಾದ ಸೋಮನು । ಅತ್ಕೇ—ಆಚ್ಛಾದಕವಾದ ದಶಾಪವಿತ್ರದಲ್ಲಿ । ಅವ್ಯತ—ಆವೃತನಾಗಿದ್ದಾನೆ । ಯೋಷಣಾಂ—ಯುವತಿಯನ್ನು ಹುಡುಕಿಕೊಂಡು । ಜಾರಃ ನ—ಕಾಮುಕನು ಓಡುವಂತೆಯೂ । ವರಃ ನ—ವರನು ಕನ್ಯೆಯನ್ನು ಅರಸಿಕೊಂಡು ಹೋಗುವಂತೆಯೂ । (ಸೋಮಃ—ಸೋಮದೇವನು) । ಯೋನಿಂ-ಸ್ವಸ್ಥಾನವಾದ ದ್ರೋಣಕಲಶಕ್ಕೆ । ಆಸದಂ-ಹೋಗಿ ಸೇರಲು । ಸರತ್—ಹೋಗುತ್ತಾನೆ.

॥ ಭಾವಾರ್ಥ ॥

ರಕ್ಷಕರಾದ ಮಾತಾಪಿತೃಗಳ ಭುಜದಲ್ಲಿ ಪುತ್ರನು ಸುಖವಾಗಿರುವಂತೆ ದೇವತೆಗಳಿಗೆ ಬಂಧುವಾದ ಸೋಮನು ಆಚ್ಛಾದಕವಾದ ದಶಾಪವಿತ್ರದಲ್ಲಿ ಆವೃತನಾಗಿದ್ದಾನೆ. ಯುವತಿಯನ್ನು ಹುಡುಕಿಕೊಂಡು ಕಾಮುಕನು ಹೋಗುವಂತೆಯೂ ಕನ್ಯೆಯನ್ನು ಅರಸಿಕೊಂಡು ವರನು ಹೋಗುವಂತೆಯೂ ಸೋಮದೇವನು ಸ್ವಸ್ಥಾನವಾದ ದ್ರೋಣಕಲಶಕ್ಕೆ ಹೋಗಿ ಸೇರಲು ಪ್ರವಿಸುತ್ತಾನೆ.

English Translation

(Soma) the kinsman (of the gods) is enveloped in the investing filter like a child in the arms of its pretecting parents ; he hastens like a gallant to a mistress, like a bridegroom (to the bride), to sit upon his station (the pitcher).

॥ ಸಂಹಿತಾಪಾಠಃ ॥

ಸ ವೀರೋ ದಕ್ಷಸಾಧನೋ ವಿ ಯಸ್ತಸ್ತಂಭ ರೋದಸೀ ।
ಹರಿಃ ಪವಿತ್ರೇ ಅವ್ಯತ ವೇಧಾ ನ ಯೋನಿಮಾಸದಂ ॥ ೧೫ ॥

॥ ಪದಪಾಠಃ ॥

ಸಃ । ವೀರಃ । ದಕ್ಷಽಸಾಧನಃ । ವಿ । ಯಃ । ತಸ್ತಂಭ । ರೋದಸೀ ಇತಿ ।
ಹರಿಃ । ಪವಿತ್ರೇ । ಅವ್ಯತ । ವೇಧಾಃ । ನ । ಯೋನಿಂ । ಆಽಸದಂ ॥ ೧೫ ॥

॥ ಸಾಯಣಭಾಷ್ಯಂ ॥

**ದಕ್ಷಸಾಧನೋ ಬಲಸಾಧನಃ ಸ ಸೋಮೋ ವೀರಃ ಸಮರ್ಥೋ ಭವತಿ । ಯಃ ಸೋಮೋ ರೋದಸೀ ದ್ಯಾವಾಪೃಥಿವ್ಯೌ ವಿ ತಸ್ತಂಭ ಸ್ವತೇಜಸಾ ವ್ಯಸ್ತಭ್ನಾತ್ । ಆಚ್ಛಾದಯತೀತ್ಯರ್ಥಃ । ಕಿಂಚ ಹರಿರ್ಹರಿತವರ್ಣಃ ಸೋಮೋ ವೇಧಾ ನ ವಿಧಾತಾ ಯಜಮಾನೋ ಯಥಾ ಸ್ವಗೃಹಮಾಸೀದತಿ ತದ್ವದ್ಯೋನಿಂ ಸ್ವಸ್ಥಾನಂ ಕಲಶಮಾಸದಮಾಸತ್ತುಂ ಪವಿತ್ರೇಽವ್ಯತ । ಆವೃಣೋತಿ । ಸಂಬದ್ಧೋ ಭವತಿ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಸೋಮನು ! **ರೋದಸೀ**–ದ್ಯಾವಾಪೃಥಿವಿಗಳೆರಡನ್ನೂ । **ವಿ ತಸ್ತಂಭ**—ವಿಭಾಗಿಸಿ ಧರಿಸಿರುವನೋ । **ಯಃ**—ಯಾರು । **ದಕ್ಷಸಾಧನಃ**—ಶಕ್ತಿಸಾಧಕನೂ । **ವೀರಃ**—ಸಮರ್ಥನೂ ಆಗಿರುವನೋ । **ಹರಿಃ**—ಪಚ್ಚೆವರ್ಣವುಳ್ಳ । **ಸಃ**—ಅದೇ ಸೋಮನು । **ವೇಧಾ ನ**—ವಿಜಯಿಯಾದ ಮಾನವನು ತನ್ನ ಗೃಹದಲ್ಲಿ ಕುಳಿತುಕೊಳ್ಳುವಂತೆ । **ಯೋನಿಂ**—ಸ್ವಸ್ಥಾನವಾದ ದ್ರೋಣಕಲಶವನ್ನು । **ಆಸದಂ**—ಸೇರಿಸಿಕೊಳ್ಳುವುದಕ್ಕಾಗಿ । **ಪವಿತ್ರೇ**—ದಶಾಪವಿತ್ರದಲ್ಲಿ । **ಅವ್ಯತ**—ಸ್ಥಿತನಾಗಿದ್ದಾನೆ.

॥ ಭಾವಾರ್ಥ ॥

ದ್ಯಾವಾಪೃಥಿವಿಗಳೆರಡನ್ನೂ ವಿಭಾಗಿಸಿ ಎರಡನ್ನೂ ಧರಿಸಿರುವವನೂ ಶಕ್ತಿಸಾಧಕನೂ, ಸಮರ್ಥನೂ, ಪಚ್ಚೆವರ್ಣವುಳ್ಳವನೂ ಆದ ಸೋಮದೇವನು ವಿಜಯಿಯಾದ ಮಾನವನು ಸುಖದಿಂದ ತನ್ನ ಗೃಹದಲ್ಲಿ ಕುಳಿತುಕೊಳ್ಳುವಂತೆ ಸ್ವಸ್ಥಾನವಾದ ದ್ರೋಣಕಲಶವನ್ನು ಸೇರಿಕೊಳ್ಳುವುದಕ್ಕಾಗಿ ದಶಾಪವಿತ್ರದಲ್ಲಿ ಸ್ಥಿತನಾಗಿದ್ದಾನೆ.

## English Translation

The green-tinted (Soma), the implement of strength, the hero, who has upheld heaven and earth, is enveloped in the filter like the sacrificer (in his house) to sit upon his station.

॥ ಸಂಹಿತಾಪಾಠಃ ॥

**ಅವ್ಯೋ ವಾರೇಭಿಃ ಪವತೇ ಸೋಮೋ ಗವ್ಯೇ ಅಧಿ ತ್ವಚಿ ।**

**ಕನಿಕ್ರದದ್ವೃಷಾ ಹರಿರಿಂದ್ರಸ್ಯಾಭ್ಯೇತಿ ನಿಷ್ಕೃತಂ ॥ ೧೬ ॥**

॥ ಪದಪಾಠಃ ॥

**ಅವ್ಯಃ । ವಾರೇಭಿಃ । ಪವತೇ । ಸೋಮಃ । ಗವ್ಯೇ । ಅಧಿ । ತ್ವಚಿ ।**

**ಕನಿಕ್ರದತ್ । ವೃಷಾ । ಹರಿಃ । ಇಂದ್ರಸ್ಯ । ಅಭಿ । ಏತಿ । ನಿಃऽಕೃತಂ ॥ ೧೬ ॥**

॥ ಸಾಯಣಭಾಷ್ಯಂ ॥

**ಅಯಂ ಸೋಮೋಽವ್ಯೋಽವೇರ್ವಾರೇಭಿರ್ವಾಲೈಃ ಪವಿತ್ರೈಃ ತೇಭ್ಯಃ ಪವತೇ । ಕಲಶಂ ಪ್ರತಿ ಕ್ಷರತಿ । ಕಿಂಚ ಗವ್ಯೇ ಆನಡುಹೇಽಧಿ ತ್ವಚಿ ಚರ್ಮಣಿ ಕನಿಕ್ರದಚ್ಛಬ್ದಾಯಮಾನೋ ವೃಷಾ ಕಾಮಾನಾಂ ವರ್ಷಕೋ ಹರಿರ್ಹರಿತವರ್ಣಃ ಸೋಮ ಇಂದ್ರಸ್ಯ ಸ್ವಭೂತಂ ನಿಷ್ಕೃತಂ ಸಂಸ್ಕೃತಂ ಸ್ಥಾನಮಭ್ಯೇತಿ । ಅಭಿಗಚ್ಛತಿ ॥**

॥ ಪ್ರತಿಪದಾರ್ಥ ॥

**ಸೋಮಃ**—ಸೋಮದೇವನು । **ಅವ್ಯಃ**—ಉಣ್ಣೆಯಿದ ನಿರ್ಮಿತವಾದ । **ವಾರೇಭಿಃ**—ನೂಲುಗಳ ಮೂಲಕ । **ಪವತೇ**—ದ್ರೋಣಕಲಶಕ್ಕೆ ಹರಿಯುತ್ತಾನೆ **ಗವ್ಯೇ**—ಗೋವಿನ । **ಅಧಿ ತ್ವಚಿ**—ಚರ್ಮದ ಮೇಲೆ । **ಕನಿಕ್ರದತ್**—ಶಬ್ದಮಾಡುತ್ತ । **ವೃಷಾ**—ಕಾಮವರ್ಷಕನೂ । **ಹರಿಃ**—ಪಚ್ಚೆವರ್ಣವುಳ್ಳವನೂ ಆದ ಸೋಮನು । **ಇಂದ್ರಸ್ಯ**—ಇಂದ್ರನ ( ಸುಸಂಸ್ಕೃತವಾದ ) । **ನಿಷ್ಕೃತಃ**—ಉತ್ತಮವಾದ ಸ್ಥಾನವನ್ನು । **ಅಭ್ಯೇತಿ**—ಹೋಗಿ ಸೇರುತ್ತಾನೆ.

॥ ಭಾವಾರ್ಥ ॥

ಸೋಮದೇವನು ಉಣ್ಣೆಯಿಂದ ನಿರ್ಮಿತವಾದ ನೂಲುಗಳ ಮೂಲಕ ದ್ರೋಣಕಲಶಕ್ಕೆ ಹರಿಯುತ್ತಾನೆ. ಗೋವಿನ ಚರ್ಮದ ಮೇಲೆ ಶಬ್ದಮಾಡುತ್ತ ಕಾಮವರ್ಷಕನೂ, ಪಚ್ಚೆವರ್ಣವುಳ್ಳವನೂ ಆದ ಸೋಮನು ಇಂದ್ರನಿಗಾಗಿ ಸಂಸ್ಕೃತವಾದ ಸ್ಥಾನವನ್ನು ಹೋಗಿ ಸೇರುತ್ತಾನೆ.

English Translation

The Soma flows purified by the sheep's hairs; crying aloud upon the cowhide the showerer (of benefits), green-tinted he goes to Indra's prepared station

## ನೂರ ಎರಡನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಕ್ರಾಣಾ ಶಿಶುರಿತ್ಯಷ್ಟರ್ಚಂ ಷಷ್ಠಂ ಸೂಕ್ತಂ । ಆಪ್ತ್ಯಸ್ಯ ತ್ರಿತಸ್ಯಾರ್ಷಂ । ಇದಮುತ್ತರಾಣಿ ಚತ್ವಾರಿ ಸೂಕ್ತಾನ್ಯೌಷ್ಣಿಹಾನಿ । ಪವಮಾನಃ ಸೋಮೋ ದೇವತಾ । ತಥಾ ಚಾನುಕ್ರಮ್ಯತೇ । ಕ್ರಾಣಾಷ್ಟೌ ತ್ರಿತ ಔಷ್ಣಿಹಂ ವಾ ಇತಿ ॥ ಗತೋ ವಿನಿಯೋಗಃ ॥**

ಅನುವಾದವು—**ಕ್ರಾಣಾ ಶಿಶುಃ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ತ್ರಿತಃ ಆಪ್ತ್ಯಃ ಎಂಬುವನು ಋಷಿಯು; ಈ ಸೂಕ್ತದಿಂದ ಮುಂದಿನ ನಾಲ್ಕು ಸೂಕ್ತಗಳು ಉಷ್ಣಿಕ್ ಛಂದಸ್ಕವು. ಪವಮಾನಸೋಮನು ದೇವತೆಯು; ಅನುಕ್ರಮಣಿಕೆಯಲ್ಲಿ—**ಕ್ರಾಣಾಷ್ಟೌ ತ್ರಿತ ಔಷ್ಣಿಹಂ ವೈ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೨

ಮಂಡಲ—೯ ॥ ಅನುವಾಕ—೬ ॥ ಸೂಕ್ತ—೧೦೨ ॥
ಅಷ್ಟಕ—೭ ॥ ಅಧ್ಯಾಯ—೫ ॥ ವರ್ಗ—೪, ೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
ಋಷಿಃ—ತ್ರಿತಃ ॥
ದೇವತಾ—ಪವಮಾನಃ ಸೋಮಃ ॥
ಛಂದಃ—ಉಷ್ಣಿಕ್ ॥

॥ ಸಂಹಿತಾಪಾಠಃ ॥

ಕ್ರಾಣಾ ಶಿಶುರ್ಮಹೀನಾಂ ಹಿನ್ವನ್ನೃತಸ್ಯ ದೀಧಿತಿಂ ।
ವಿಶ್ವಾ ಪರಿ ಪ್ರಿಯಾ ಭುವದಧ ದ್ವಿತಾ ॥ ೧ ॥

॥ ಪದಪಾಠಃ ॥

ಕ್ರಾಣಾ । ಶಿಶುಃ । ಮಹೀನಾಂ । ಹಿನ್ವನ್ । ಋತಸ್ಯ । ದೀಧಿತಿಂ ।
ವಿಶ್ವಾ । ಪರಿ । ಪ್ರಿಯಾ । ಭುವತ್ । ಅಧ । ದ್ವಿತಾ ॥ ೧ ॥

॥ ಸಾಯಣಭಾಷ್ಯಂ ॥

ಕ್ರಾಣಾ । ಕರೋತೇಃ ಶಾನಚಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಸುಪಾಂ ಸುಲುಗಿತಿ ಸುಪ ಆಕಾರಾದೇಶಃ । ಯಜ್ಞಂ ಕುರ್ವಾಣೋ ಮಹೀನಾಂ ಮಹತೀನಾಂ ಮಂಹನೀಯಾನಾಂ ವಾಪಾಂ ಶಿಶುಃ ಪುತ್ರಸ್ಥಾನೀಯಃ ಸೋಮ ಋತಸ್ಯ ಯಜ್ಞಸ್ಯ ದೀಧಿತಿಂ ಪ್ರಕಾಶಕಂ ಧಾರಕಂ ವಾ ಸ್ವೀಯಂ ರಸಂ ಹಿನ್ವನ್ ಪ್ರೇರಯನ್ವಿಶ್ವಾ ಸರ್ವಾಣಿ ಪ್ರಿಯಾ ಪ್ರಿಯಾಣಿ ಹವೀಂಷಿ ಪರಿ ಭುವತ್ । ಪರಿಭವತಿ । ವ್ಯಾಪ್ನೋತಿ । ಅಥಾಪಿ ಚ ದ್ವಿತಾ ದ್ವಿಧಾ ಭವತಿ ದಿವಿ ಚ ಪೃಥಿವ್ಯಾಂ ಚ ವರ್ತತ ಇತ್ಯರ್ಥಃ ।

॥ ಪ್ರತಿಪದಾರ್ಥ ॥

**ಕ್ರಾಣಾ**—ಯಜ್ಞನಿರ್ವಾಹಕವೂ । **ಮಹೀನಾಂ**—ಮಹತ್ತಾದ ಉದಕಗಳಿಗೆ । **ಶಿಶುಃ**—ಪುತ್ರ ರೂಪವೂ ಆದ ಸೋಮವು । **ಋತಸ್ಯ**—ಯಜ್ಞದ । **ದೀಧಿತಿಃ**—ಪ್ರಕಾಶಕವಾದ ರಸವನ್ನು । **ಹಿನ್ವನ್**—ಪ್ರೇರಿಸುತ್ತ । **ವಿಶ್ವಾ**—ಸಮಸ್ತವೂ । **ಪ್ರಿಯಾ**—ಪ್ರೀತಿಕಾರಕವೂ ಆದ ಹವಿಸ್ಸುಗಳನ್ನು । **ಪರಿ ಭುವತ್**—ವ್ಯಾಪಿಸುತ್ತದೆ । **ಅಧ**—ಮತ್ತು । **ದ್ವಿತಾ**—ದ್ಯಾವಾಪೃಥಿವಿಗಳೆರಡರಲ್ಲೂ ವಿಭಕ್ತವಾಗಿ ಇರುತ್ತದೆ.

॥ ಭಾವಾರ್ಥ ॥

ಯಜ್ಞನಿರ್ವಾಹಕವೂ, ಮಹತ್ತಾದ ಉದಕಗಳಿಗೆ ಪುತ್ರರೂಪವೂ ಆದ ಸೋಮವು ಯಜ್ಞದ ಪ್ರಕಾಶಕವಾದ ರಸವನ್ನು ಪ್ರೇರಿಸುತ್ತ ಪ್ರೀತಿಕಾರಕವಾದ ಸಮಸ್ತ ಹವಿಸ್ಸುಗಳನ್ನೂ ವ್ಯಾಪಿಸುತ್ತದೆ. ಮತ್ತು ದ್ಯಾವಾಪೃಥಿವಿಗಳೆರಡರಲ್ಲೂ ವಿಭಕ್ತವಾಗಿರುತ್ತದೆ.

## English Translation

Performing (sacred rites) the child of the great (waters) sending forth the lustre of the sacrifiice (Soma) produces all acceptable (oblations) and (abides) in the two worlds.

॥ ಸಂಹಿತಾಪಾಠಃ ॥

ಉಪ ತ್ರಿತಸ್ಯ ಪಾಷ್ಯೋ೩ರಭಕ್ತ ಯದ್ಗುಹಾ ಪದಂ ।
ಯಜ್ಞಸ್ಯ ಸಪ್ತ ಧಾಮಭಿರಧ ಪ್ರಿಯಂ ॥ ೨ ॥

॥ ಪದಪಾಠಃ ॥

ಉಪ । ತ್ರಿತಸ್ಯ । ಪಾಷ್ಯೋಃ । ಅಭಕ್ತ । ಯತ್ । ಗುಹಾ । ಪದಂ ।
ಯಜ್ಞಸ್ಯ । ಸಪ್ತ । ಧಾಮಽಭಿಃ । ಅಧ । ಪ್ರಿಯಂ ॥ ೨ ॥

॥ ಸಾಯಣಭಾಷ್ಯಂ ॥

ತ್ರಿತಸ್ಯ ಮಮ ಯಜ್ಞೇ ಗುಹಾ ಗುಹಾಯಾಂ ಹವಿರ್ಧಾನೇ ವರ್ತಮಾನಯೋಃ ಪಾಷ್ಯೋಃ ಪಾಷಾಣವದ್ದೃಢಯೋರಧಿಷವಣಫಲಕಯೋಃ ಪದಂ ಸ್ಥಾನಂ ಸೋಮೋ ಯದ್ಯದೋಪಾಭಕ್ತ ಸಮಭಜತ ಅಧಾನಂತರಂ ಯಜ್ಞಸ್ಯ ಧಾಮಭಿರ್ಧಾರಕೈಃ ಸಪ್ತ ಸಪ್ತಭಿಶ್ಛಂದೋಭಿರ್ಗಾಯತ್ರ್ಯಾದಿಭಿಃ ಪ್ರಿಯಂ ಪ್ರೀಣಯಿತಾರಂ ಸೋಮಮಭಿಷ್ಟುವಂತ್ಯೃತ್ವಿಜಃ । ಅಪಿ ವಾ । ಸಪ್ತ ಸರ್ಪಣಶೀಲೈರ್ವಸತೀವರ್ಯಾದಿಭಿರುದಕೈಃ ಸೋಮಮಭಿಷುಣ್ವಂತಿ ॥

॥ ಪ್ರತಿಪದಾರ್ಥ ॥

**ತ್ರಿತಸ್ಯ**—ತ್ರಿತಸಂಜ್ಞಕನಾದ ನನ್ನ ಯಜ್ಞದಲ್ಲಿ । **ಗುಹಾ**—ರಹಸ್ಯಪ್ರದೇಶದಲ್ಲಿರುವ (ಹವಿರ್ಧಾನಪ್ರದೇಶದಲ್ಲಿರುವ) **ಪಾಷ್ಯೋಃ**—ದೃಢವಾದ ಅಭಿಷವದ ಹಲಗೆಗಳ । **ಪದಂ**—ಸ್ಥಾನವನ್ನು । **ಯತ್**—ಯಾವಾಗ । **ಉಪ ಅಭಕ್ತ**—ಸೋಮನು ಸೇರಿದನೋ । **ಅಧ**—ಆ ಒಡನೆಯೇ । **ಯಜ್ಞಸ್ಯ**—ಯಜ್ಞದ । **ಸಪ್ತ ಧಾಮಭಿಃ**—ಧಾರಕಗಳಾದ ಗಾಯತ್ರ್ಯಾದಿ ಸಪ್ತಚ್ಛಂದಸ್ಸುಗಳಿಂದಲೂ । **ಪ್ರಿಯಂ**-ಪ್ರೀತಿಕರನಾದ ಸೋಮನನ್ನು (ಋತ್ವಿಕ್ಕುಗಳು ಪ್ರಶಂಸಿಸುತ್ತಾರೆ).

॥ ಭಾವಾರ್ಥ ॥

ತ್ರಿತಸಂಜ್ಞಕನಾದ ನನ್ನ ಯಜ್ಞದಲ್ಲಿ ಹವಿರ್ಧಾನಪ್ರದೇಶದಲ್ಲಿರುವ ದೃಢವಾದ ಅಭಿಷವದ ಹಲಗೆಗಳ ಸ್ಥಾನವನ್ನು ಸೋಮನು ಯಾವಾಗ ಸೇರುವನೋ ಆ ಒಡನೆಯೇ ಋತ್ವಿಕ್ಕುಗಳು ಪ್ರೀತಿಕರನಾದ ಆ ಸೋಮನನ್ನು ಯಜ್ಞಕ್ಕೆ ಧಾರಕಗಳಾದ ಗಾಯತ್ರ್ಯಾದಿಸಪ್ತಚ್ಛಂದಸ್ಸುಗಳಿಂದಲೂ ಪ್ರಶಂಸಿಸುತ್ತಾರೆ.

## English Translation

When the Soma has taken the secret station of the grinding stones (at the sacrificc) of Trita, then with the seven supports of the sacrifice (the priests praise) the conciliating (Soma).

। ಸಂಹಿತಾಪಾಠಃ ।

ತ್ರೀಣಿ ತ್ರಿತಸ್ಯ ಧಾರಯಾ ಪೃಷ್ಠೇಷ್ವೇರಯಾ ರಯಿಂ ।
ಮಿಮೀತೇ ಅಸ್ಯ ಯೋಜನಾ ವಿ ಸುಕ್ರತುಃ ॥ ೨ ॥

। ಪದಪಾಠಃ ॥

ತ್ರೀಣಿ । ತ್ರಿತಸ್ಯ । ಧಾರಯಾ । ಪೃಷ್ಠೇಷು । ಆ । ಈರಯ । ರಯಿಂ ।
ಮಿಮೀತೇ । ಅಸ್ಯ । ಯೋಜನಾ । ವಿ । ಸುಽಕ್ರತುಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ರಿತಸ್ಯ ಮಮ ಯಜ್ಞಸ್ಯ ಸ್ವಭೂತಾನಿ ತ್ರೀಣಿ ಸವನಾನಿ ಧಾರಯಾತ್ಮೀಯಯಾ ವಿಧಾರಯ । ಕಿಂಚ ಪೃಷ್ಠೇಷು ಸಾಮಸು ರಯಿಂ ದಾತಾರಮಿಂದ್ರಮೇರಯ । ಆಗಮಯ । ಸುಕ್ರತುಃ ಸುಪ್ರಜ್ಞಃ ಸ್ತೋತಾಸ್ಯೇಂದ್ರಸ್ಯ ಯೋಜನಾ ಯೋಜನಾನಿ ಯೋಜಕಾರೀಣಿ ಸ್ತೋತ್ರಾಣಿ ವಿ ಮಿಮೀತೇ। ಕರೋತಿ । ಯಸ್ಮಾದೇವಂ ತಸ್ಮಾದಿಂದ್ರಂ ಸಾಮಸು ಪ್ರೇರಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ತ್ರಿತಸ್ಯ**—ತ್ರಿತಸಂಜ್ಞಕನಾದ ನನ್ನ । **ತ್ರೀಣಿ**–ಮೂರು ಸವನಗಳನ್ನು । **ಧಾರಯಾ**–ನಿನ್ನ ಧಾರೆಗಳಿಂದ ಧರಿಸು । **ಪೃಷ್ಠೇಷು**—ನನ್ನ ಸಾಮಗಳಲ್ಲಿ । **ರಯಿಂ**—ಧನಪ್ರದನಾದ ಇಂದ್ರನನ್ನು । **ಆ ಈರಯ**—ಬರಮಾಡಿ ಸ್ಥಾಪಿಸು । **ಸುಕ್ರತುಃ**—ಉತ್ತಮ ಪ್ರಜ್ಞೆಯುಳ್ಳ ಸ್ತುತಿಕರ್ತನು । **ಅಸ್ಯ**—ಈ ಇಂದ್ರನನ್ನುದ್ದೇಶಿಸಿ । **ಯೋಜನಾ**—ತದ್ಯುಕ್ತವಾದ ಸ್ತುತಿಗಳನ್ನು । **ವಿ ಮಿಮೀತೇ**—ನಿರ್ಮಿಸುತ್ತಾನೆ.

। ಭಾವಾರ್ಥ

ಎಲೈ ಸೋಮದೇವನೇ, ತ್ರಿತಸಂಜ್ಞಕನಾದ ನನ್ನ ಮೂರು ಸವನಗಳನ್ನೂ ನಿನ್ನ ಧಾರೆಗಳಿಂದ ಧರಿಸು. ನನ್ನ ಸಾಮಗಳಲ್ಲಿ ಧನಪ್ರದನಾದ ಇಂದ್ರನನ್ನು ಬರಮಾಡಿ ಸ್ಥಾಪಿಸು. ಉತ್ತಮವಾದ ಪ್ರಜ್ಞೆಯುಳ್ಳ ಸ್ತುತಿಕರ್ತನು ಈ ಇಂದ್ರನನ್ನುದ್ದೇಶಿಸಿ ತದ್ಯುಕ್ತವಾದ ಸ್ತುತಿಗಳನ್ನು ನಿರ್ಮಿಸುತ್ತಾನೆ.

## English Translation

(Support, Soma,) with your stream Trita's three (oblations) ; cause the giver of riches (Indra) to come to the sacred songs. The intelligent (praiser) of this (Indra) measures out hymns.

॥ ಸಂಹಿತಾಪಾಠಃ ॥

ಜಜ್ಞಾನಂ ಸಪ್ತ ಮಾತರೋ ವೇಧಾಮಶಾಸತ ಶ್ರಿಯೇ ।

ಅಯಂ ಧ್ರುವೋ ರಯೀಣಾಂ ಚಿಕೇತ ಯತ್ ॥ ೪ ॥

॥ ಪದಪಾಠಃ ॥

ಜಜ್ಞಾನಂ । ಸಪ್ತ । ಮಾತರಃ । ವೇಧಾಂ । ಅಶಾಸತ । ಶ್ರಿಯೇ ।

ಅಯಂ । ಧ್ರುವಃ । ರಯೀಣಾಂ । ಚಿಕೇತ । ಯತ್ ॥ ೪ ॥

। ಸಾಯಣಭಾಷ್ಯಂ ।

ಜಜ್ಞಾನಂ ಪ್ರಾದುರ್ಭೂತಂ ವೇಧಾಂ ಕರ್ಮಣೋ ವಿಧಾತಾರಂ ಸೋಮಂ ಸಪ್ತ ಸಪ್ತಸಂಖ್ಯಾಕಾ ಮಾತರೋ ಗಂಗಾದ್ಯಾ ನದ್ಯಃ ಸಪ್ತ ಛಂದಾಂಸಿ ವಾ ಶ್ರಿಯೇ ಯಜಮಾನಾನಾಮೈಶ್ವರ್ಯಾರ್ಥಮಶಾಸತ । ಅನುಶಾಸಂತಿ । ಅನುಶಾಸನಂ ಕುರ್ವಂತಿ ॥ ಶಾಸ್ತೇರ್ಲಙಿ ವ್ಯತ್ಯಯೇನಾತ್ಮನೇಪದಂ ॥ ಯದ್ಯಸ್ಮಾದ್ಧ್ರುವೋಽಯಂ ಸೋಮೋ ರಯೀಣಾಂ ಧನಾನಿ ಚಿಕೇತ ಜಾನಾತಿ ತಸ್ಮಾದಸ್ಯಾನುಶಾಸನೇ ಕೃತೇ ಯಜಮಾನಾನಾಂ ಧನಾದಿಸಮೃದ್ಧಿರ್ಭವತಿ ॥

। ಪ್ರತಿಪದಾರ್ಥ ।

**ಯತ್**—ಯಾವ ಪ್ರಭಾವದಿಂದ । **ಧ್ರುವಃ**—ಶಾಶ್ವತಸ್ಥಿತಿಯುಳ್ಳ । **ಅಯಂ**—ಈ ಸೋಮನು । **ರಯೀಣಾಂ**—ಧನಗಳ ರಹಸ್ಯವನ್ನು । **ಚಿಕೇತ**—ಅರಿತಿರುವನೋ ಅದುದರಿಂದಲೇ । **ಜಜ್ಞಾನಂ**—ಯಜ್ಞಕ್ಕಾಗಿ ಉತ್ಪನ್ನನಾದವನೂ । **ವೇಧಾಂ**—ಕರ್ಮನಿರ್ವಾಹಕನೂ ಆದ ಸೋಮನನ್ನು । **ಸಪ್ತ**—ಸಪ್ತಸಂಖ್ಯಾಕವಾದ । **ಮಾತರಃ**—ಗಂಗಾದಿನದಿಗಳೂ (ಅಥವಾ ಛಂದಸ್ಸುಗಳೂ) । **ಶ್ರಿಯೇ**—ಯಜಮಾನನ ಧನಲಾಭಕ್ಕಾಗಿ । **ಅಶಾಸತ**—ನಿರ್ದೇಶವನ್ನು ಕೊಡುತ್ತವೆ (ಪ್ರಶಂಸಿಸುತ್ತವೆ).

। ಭಾವಾರ್ಥ ।

ಯಾವ ಪ್ರಭಾವದಿಂದ ಶಾಶ್ವತವಾದ ಸ್ಥಿತಿಯುಳ್ಳ ಈ ಸೋಮನು ಧನಗಳ ರಹಸ್ಯವನ್ನರಿತಿರುವನೋ, ಅದುದರಿಂದಲೇ, ಯಜ್ಞಕ್ಕಾಗಿ ಉತ್ಪನ್ನನಾದವನೂ, ಕರ್ಮನಿರ್ವಾಹಕನೂ ಆದ ಸೋಮದೇವನನ್ನು ಸಪ್ತಛಂದಸ್ಸುಗಳೂ ಕೂಡಿ ಯಜಮಾನನ ಧನಲಾಭಾರ್ಥವಾಗಿ ಪ್ರಶಂಸಿಸಿ ನಿರ್ದೇಶವನ್ನೀಯುತ್ತವೆ.

## English Translation

The seven mothers instruct the (Soma) the institutor (of the sacrifice) when born for the prosperity (of the worshippers), so that this firm Soma is cognizant of riches.

॥ ಸಂಹಿತಾಪಾಠಃ ॥

ಅಸ್ಯ ವ್ರತೇ ಸಜೋಷಸೋ ವಿಶ್ವೇ ದೇವಾಸೋ ಅದ್ರುಹಃ ।

ಸ್ಪಾರ್ಹಾ ಭವಂತಿ ರಂತಯೋ ಜುಷಂತ ಯತ್ ॥ ೫ ॥

॥ ಪದಪಾಠಃ ॥

ಅಸ್ಯ । ವ್ರತೇ । ಸಽಜೋಷಸಃ । ವಿಶ್ವೇ । ದೇವಾಸಃ । ಅದ್ರುಹಃ ।

ಸ್ಪಾರ್ಹಾಃ ॥ ಭವಂತಿ । ರಂತಯಃ । ಜುಷಂತ । ಯತ್ ॥ ೫ ॥

॥ ಸಾಯಣಭಾಷ್ಯಂ ॥

ಅದ್ರುಹೋ ದ್ರೋಹವರ್ಜಿತಾ ವಿಶ್ವೇ ಸರ್ವೇ ದೇವಾಸೋ ದೇವಾ ಅಸ್ಯ ಸೋಮಸ್ಯ ವ್ರತೇ ಕರ್ಮಣಿ ಸಜೋಷಸಃ ಸಂಗತಾಃ ಸಂತಃ ಸ್ಪಾರ್ಹಾಃ ಸ್ಪೃಹಣೀಯಾ ಭವಂತಿ । ರಂತಯೋ ರಮಣಶೀಲಾ ದೇವಾಃ ಸುತಮೇನಂ ಸೋಮಂ ಯದ್ಯದಿ ಜುಷಂತ ಸೇವಂತೇ ತರ್ಹಿ ಸ್ಪೃಹಣೀಯಾ ಭವಂತಿ ॥

॥ ಪ್ರತಿಪದಾರ್ಥ ॥

**ರಂತಯಃ**—ಹರ್ಷಾಸಕ್ತರಾದ ದೇವತೆಗಳು । **ಯತ್**—ಯಾವಾಗ । **ಜುಷಂತ**—ಈ ಸೋಮನನ್ನು ಸೇವಿಸುವರೋ ಆಗ । **ಅದ್ರುಹಃ**—ದ್ರೋಹರಹಿತರಾದ । **ವಿಶ್ವೇ ದೇವಾಸಃ**—ಸಕಲ ದೇವತೆಗಳೂ । **ಅಸ್ಯ**—ಈ ಸೋಮನ । **ವ್ರತೇ**—ಕರ್ಮದಲ್ಲಿ । **ಸಜೋಷಸಃ**—ಒಟ್ಟುಗೂಡಿಕೊಂಡು । **ಸ್ಪಾರ್ಹಾಃ ಭವಂತಿ**—ಆಕರ್ಷಕವಾದ ರೂಪವುಳ್ಳವರಾಗಿರುತ್ತಾರೆ.

॥ ಭಾವಾರ್ಥ ॥

ಹರ್ಷಾಸಕ್ತರಾದ ದೇವತೆಗಳು ಯಾವಾಗ ಈ ಸೋಮವನ್ನು ಸೇವಿಸುವರೋ ಆಗ ದ್ರೋಹರಹಿತರಾದ ಸಕಲ ದೇವತೆಗಳೂ ಈ ಸೋಮನ ಕರ್ಮದಲ್ಲಿ ಒಟ್ಟುಗೂಡಿಕೊಂಡು ಆಕರ್ಷಕವಾದ ರೂಪವುಳ್ಳವರಾಗಿರುತ್ತಾರೆ.

## English Translation

The universal gods, devoid of malice, assembled together at his rite, are to be envied if being delighted they take pleasure (in the Soma).

॥ ಸಂಹಿತಾಪಾಠಃ ॥

ಯಮೀ॒ ಗರ್ಭ॑ಮೃ॒ತಾವೃ॑ಧೋ ದೃ॒ಶೇ ಚಾರು॒ಮಜೀ॑ಜನನ್ ।
ಕ॒ವಿಂ ಮಂಹಿ॑ಷ್ಠಮಧ್ವ॒ರೇ ಪು॑ರು॒ಸ್ಪೃಹ॑ಂ ॥ ೬ ॥

॥ ಪದಪಾಠಃ ॥

ಯಂ । ಈ॒ಮಿತಿ॑ । ಗರ್ಭ॑ಂ । ಋ॒ತ॒ಽವೃಧ॑ಃ । ದೃ॒ಶೇ । ಚಾರು॑ಂ । ಅಜೀ॑ಜನನ್ ।
ಕ॒ವಿಂ । ಮಂಹಿ॑ಷ್ಠಂ । ಅ॒ಧ್ವ॒ರೇ । ಪು॒ರು॒ಽಸ್ಪೃಹ॑ಂ ॥ ೬ ॥

॥ ಸಾಯಣಭಾಷ್ಯಂ ॥

ಋತಾವೃಧೋ ಯಜ್ಞಸ್ಯ ವರ್ಧಯಿತ್ರ್ಯೋ ವಸತೀವರ್ಯಾಖ್ಯಾ ಆಪೋ ಗರ್ಭಂ ಗರ್ಭಸ್ಥಾನೀ- ಯಮೀಮೇನಂ ಯಂ ಸೋಮಮಧ್ವರೇ ಯಜ್ಞೇ ದೃಶೇ ದರ್ಶನಾಯಾಜೀಜನನ್ ಉದಪಾದಯನ್ । ಕೀದೃಶಂ । ಚಾರುಂ ಸರ್ವೇಷಾಂ ಕಲ್ಯಾಣರೂಪಂ ಕವಿಂ ಕ್ರಾಂತಪ್ರಜ್ಞಂ ಮಂಹಿಷ್ಠಂ ಪೂಜ್ಯತಮಂ ದಾತೃತಮಂ ವಾ ಅತ ಏವ ಪುರುಸ್ಪೃಹಂ ಬಹುಭಿಃ ಸ್ಪೃಹಣೀಯಂ ಸೋಮಂ ದೇವಾಃ ಸೇವಂತೇ ಇತಿ ಪೂರ್ವೇಣ ಸಮನ್ವಯಃ ॥

॥ ಪ್ರತಿಪದಾರ್ಥ ॥

**ಚಾರುಂ**—ಆಕರ್ಷಕವಾದ ರೂಪವುಳ್ಳವನೂ । **ಕವಿಂ**—ಮೇಧಾವಿಯೂ । **ಮಂಹಿಷ್ಠಂ**—ಪೂಜ್ಯನೂ । **ಪುರುಸ್ಪೃಹಂ**—ಅನೇಕರಿಂದ ಅಪೇಕ್ಷಿತನೂ । **ಗರ್ಭಂ**—ಗರ್ಭರೂಪನೂ ಆದ । **ಯಂ ಈಂ**—ಯಾವ ಇದೇ ಸೋಮನನ್ನು । **ಋತಾವೃಧಃ**—ಯಜ್ಞವರ್ಧಕವಾದ ಉದಕಗಳು । **ಅಧ್ವರೇ**—ಯಜ್ಞದಲ್ಲಿ । **ದೃಶೇ**—ಸಕಲರ ಗೋಚರಕ್ಕಾಗಿ । **ಅಜೀಜನನ್**—ಉತ್ಪನ್ನಮಾಡಿದವೋ (ಆ ಸೋಮನನ್ನೇ ದೇವತೆಗಳು ಸೇವಿಸುತ್ತಾರೆ).

॥ ಭಾವಾರ್ಥ ॥

ಆಕರ್ಷಕವಾದ ರೂಪವುಳ್ಳವನೂ, ಮೇಧಾವಿಯೂ, ಪೂಜ್ಯನೂ, ಅನೇಕರಿಂದ ಅಪೇಕ್ಷಿತನೂ, ಗರ್ಭರೂಪನೂ, ಆದ ಯಾವ ಇದೇ ಸೋಮನನ್ನು ಯಜ್ಞವರ್ಧಕವಾದ ಉದಕಗಳು ಯಜ್ಞದಲ್ಲಿ ಸಕಲರ ಗೋಚರಕ್ಕಾಗಿ ಉತ್ಪನ್ನ ಮಾಡಿದವೋ ಆ ಸೋಮನನ್ನೇ ದೇವತೆಗಳು ಸೇವಿಸುತ್ತಾರೆ.

## English Translation

The germ which the augmenters of the rite brought forth at the sacrifice lovely to look upon, intelligent, most adorable, desired by many.

॥ ಸಂಹಿತಾಪಾಠಃ ॥

ಸಮೀಚೀನೇ ಅಭಿ ತ್ಮನಾ ಯಹ್ವೀ ಋತಸ್ಯ ಮಾತರಾ ।

ತನ್ವಾನಾ ಯಜ್ಞಮಾನುಷಗ್ಯದಂಜತೇ ॥ ೭ ॥

॥ ಪದಪಾಠಃ ॥

ಸಮೀಚೀನೇ ಇತಿ ಸಂऽಈಚೀನೇ । ಅಭಿ । ತ್ಮನಾ । ಯಹ್ವೀ ಇತಿ । ಋತಸ್ಯ । ಮಾತರಾ ।

ತನ್ವಾನಾಃ । ಯಜ್ಞಂ । ಆನುಷಕ್ । ಯತ್ । ಅಂಜತೇ ॥ ೭ ॥

॥ ಸಾಯಣಭಾಷ್ಯಂ ॥

**ಸ ಸೋಮಃ ಸಮೀಚೀನೇ ಪರಸ್ಪರಂ ಸಂಗತೇ ಯಹ್ವೀ ಮಹತ್ಯಾವೃತಸ್ಯ ಯಜ್ಞಸ್ಯ ಮಾತರಾ ನಿರ್ಮಾತ್ರ್ಯೌ ದ್ಯಾವಾಪೃಥಿವ್ಯೌ ತ್ಮನಾತ್ಮನಾ ಸ್ವಯಮೇವ ತದಾಭಿಗಚ್ಛತಿ । ಯದ್ಯದಾ ಯಜ್ಞಂ ತನ್ವಾನಾ ಅಧ್ವರ್ಯವ ಆನುಷಗನುಷಕ್ತಂ ವಸತೀವರೀಭಿರಂಜತೇ ಸೋಮಂ ಮಿಶ್ರಯಂತಿ ತದಾ ಸ್ವಯಮಭಿಗಚ್ಛತಿ ॥**

॥ ಪ್ರತಿಪದಾರ್ಥ ॥

**ಯಜ್ಞಂ**—ಯಜ್ಞವನ್ನು । **ತನ್ವಾನಾಃ**—ವಿಸ್ತರಿಸತಕ್ಕ ಅಧ್ವರ್ಯುಗಳು । **ಯತ್**—ಯಾವಾಗ । **ಆನುಷಕ್**—ಯಥಾಕ್ರಮವಾಗಿ (ಸೋಮವನ್ನು) । **ಅಂಜತೇ**—ವಸತೀವರಿಯೊಂದಿಗೆ ಮಿಶ್ರಮಾಡುವರೋ (ಆಗ ಸೋಮನು) । **ಸಮೀಚೀನೇ**—ಪರಸ್ಪರ ಸೇರಿಕೊಂಡಿರುವುವೂ । **ಯಹ್ವೀ**—ಮಹತ್ಸ್ವರೂಪವುಳ್ಳವೂ । **ಋತಸ್ಯ**—ಯಜ್ಞಕ್ಕೆ । **ಮಾತರಾ**—ನಿರ್ಮಾತ್ರಿಯರೂ ಆದ ದ್ಯಾವಾಪೃಥಿವಿಗಳಿಗಭಿಮುಖವಾಗಿ । **ತ್ಮನಾ**—ಸ್ವಪ್ರೇರಣೆಯಿಂದಲೇ । **ಅಭಿ**—ಹೋಗಿ ಸೇರುತ್ತಾನೆ.

॥ ಭಾವಾರ್ಥ ॥

ಯಜ್ಞವನ್ನು ವಿಸ್ತರಿಸಿ ನೆರವೇರಿಸುವ ಅಧ್ವರ್ಯುಗಳು ಯಾವಾಗ ಯಥಾಕ್ರಮವಾಗಿ ಸೋಮವನ್ನು ವಸತೀವರಿಯೊಂದಿಗೆ ಮಿಶ್ರಮಾಡುವರೋ ಆಗ ಸೋಮನು ಪರಸ್ಪರ ಸೇರಿಕೊಂಡಿರುವುವೂ, ಮಹತ್ಸ್ವರೂಪವುಳ್ಳವೂ, ಯಜ್ಞನಿರ್ಮಾತ್ರಿಯರೂ ಆದ ದ್ಯಾವಾಪೃಥಿವಿಗಳಿಗಭಿಮುಖವಾಗಿ ಸ್ವಪ್ರೇರಣೆಯಿಂದಲೇ ಹೋಗಿ ಸೇರುತ್ತಾನೆ.

## English Translation

He of his own will approaches the great united parents of the sacrifice (heaven and earth) when (the priests) conducting the ceremony anoint him in due order (with the sacred waters).

॥ ಸಂಹಿತಾಪಾಠಃ ॥

ಕ್ರತ್ವಾ ಶುಕ್ರೇಭಿರಕ್ಷಭಿರ್ಋಣೋರಪ ವ್ರಜಂ ದಿವಃ ।

ಹಿನ್ವನ್ನೃತಸ್ಯ ದೀಧಿತಿಂ ಪ್ರಾಧ್ವರೇ ॥ ೮ ॥

॥ ಪದಪಾಠಃ ॥

ಕ್ರತ್ವಾ । ಶುಕ್ರೇಭಿಃ । ಅಕ್ಷಭಿಃ । ಋಣೋಃ । ಅಪ । ವ್ರಜಂ । ದಿವಃ ।

ಹಿನ್ವನ್ । ಋತಸ್ಯ । ದೀಧಿತಿಂ । ಪ್ರ । ಅಧ್ವರೇ ॥ ೮ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಂ ಕ್ರತ್ವಾ ಕರ್ಮಣಾ ಜ್ಞಾನೇನ ವಾ ಶುಕ್ರೇಭಿಃ ಶುಕ್ರೈರ್ದೀಪ್ಯಮಾನೈರಕ್ಷಭಿರಕ್ಷೈರಿಂದ್ರಿಯೈರಿವಾಶ್ನುವಾನೈಃ ಸ್ವತೇಜೋಭಿರ್ವ್ರಜಮಂಧಕಾರಸಮೂಹಂ ದಿವೋಽಂತರಿಕ್ಷಾದಪರ್ಣೋಃ । ಅಪಗಮಯ । ವಿನಾಶಯ ॥ ಋಣು ಗತೌ ತಾನಾದಿಕಃ ॥ ಕಿಂ ಕುರ್ವನ್ । ಅಧ್ವರೇ ಹಿಂಸಾರಹಿತೇ ಯಜ್ಞ ಋತಸ್ಯ ಯಜ್ಞಸ್ಯ ದೀಧಿತಿಂ ಧಾರಕಂ ಸ್ವೀಯಂ ರಸಂ ಪ್ರ ಹಿನ್ವನ್ ಪ್ರೇರಯನ್ । ಅನೇನ ಲೋಕದ್ವಯವರ್ತಿತ್ವಮಭಿಹಿತಂ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಅಧ್ವರೇ**—ಯಜ್ಞದಲ್ಲಿ । **ಋತಸ್ಯ**—ಯಜ್ಞದ । **ಧೀದಿತಿಂ**—ಧಾರಕವಾದ ರಸವನ್ನು । **ಪ್ರ ಹಿನ್ವನ್**—ಪ್ರೇರಿಸುತ್ತಾ । **ಕ್ರತ್ವಾ**—ನಿನ್ನ ಉತ್ತಮವಾದ ಕರ್ಮದಿಂದಲೂ । **ಶುಕ್ರೇಭಿಃ**—ಪ್ರಕಾಶಮಾನವಾದ । **ಅಕ್ಷಭಿಃ**—ತೇಜಸ್ಸುಗಳಿಂದಲೂ । **ವ್ರಜಂ**—ಅಂಧಕಾರಸಮೂಹವನ್ನು । **ದಿವಃ**—ಅಂತರಿಕ್ಷದಿಂದ । **ಅಪ ಋಣೋಃ**—ದೂರಕ್ಕೆ ಓಡಿಸು.

। ಭಾವಾರ್ಥ ।

ಎಲೈ ಸೋಮದೇವನೇ, ಯಜ್ಞಧಾರಕವಾದ ರಸವನ್ನು ಯಜ್ಞದಲ್ಲಿ ಪ್ರೇರಿಸುತ್ತ ನಿನ್ನ ಉತ್ತಮವಾದ ಕರ್ಮದಿಂದಲೂ, ಪ್ರಕಾಶಮಾನವಾದ ತೇಜಸ್ಸುಗಳಿಂದಲೂ ಅಂಧಕಾರಸಮೂಹವನ್ನು ಅಂತರಿಕ್ಷದಿಂದ ದೂರಕ್ಕೆ ಓಡಿಸು.

## English Translation

Soma, by your act drive away with your brilliant organs the darkness from the sky, effusing into the sacrifice (your juice) the lustre of the rite.

# ನೂರ ಮೂರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಪ್ರ ಪುನಾನಾಯೇತಿ ಷಡೃಚಂ ಸಪ್ತಮಂ ಸೂಕ್ತಮಾಪ್ತ್ಯಸ್ಯ ದ್ವಿತಸ್ಯಾರ್ಷಂ । ಪೂರ್ವವಚ್ಛಂದೋದೇವತೇ । ತಥಾ ಚಾನುಕ್ರಮ್ಯತೇ । ಪ್ರ ಪುನಾನಾಯ ಷಡ್ದ್ವಿತ ಆಪ್ತ್ಯ ಇತಿ ॥ ಗತೋ ವಿನಿಯೋಗಃ ॥

ಅನುವಾದವು—ಪ್ರ ಪುನಾನಾಯ ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ದ್ವಿತ ಆಪ್ತ್ಯಃ ಎಂಬುವನು ಋಷಿಯು ; ಈ ಸೂಕ್ತದ ದೇವತಾ ಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ ಇವೆ. ಅನುಕ್ರಮಣಿಕೆಯಲ್ಲಿ—ಪ್ರ ಪುನಾನಾಯ ಷಡ್ದ್ವಿತೆ ಆಪ್ತ್ಯಃ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೩

ಮಂಡಲ—೯ । ಅನುವಾಕ—೬ । ಸೂಕ್ತ—೧೦೩ ॥
ಅಷ್ಟಕ—೭ । ಅಧ್ಯಾಯ ೪ । ವರ್ಗ—೬ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ದ್ವಿತ ಆಪ್ತ್ಯಃ ॥
ದೇವತಾ—ಪವಮಾನಃ ಸೋಮಃ ॥
ಛಂದಃ—ಉಷ್ಣಿಕ್ ॥

॥ ಸಂಹಿತಾಪಾಠಃ ॥

ಪ್ರ ಪುನಾನಾಯ ವೇಧಸೇ ಸೋಮಾಯ ವಚ ಉದ್ಯತಂ ।
ಭೃತಿಂ ನ ಭರಾ ಮತಿಭಿರ್ಜುಜೋಷತೇ ॥ ೧ ॥

॥ ಪದಪಾಠಃ ॥

ಪ್ರ । ಪುನಾನಾಯ । ವೇಧಸೇ । ಸೋಮಾಯ । ವಚಃ । ಉತ್ऽಯತಂ ।
ಭೃತಿಂ । ನ । ಭರ । ಮತಿऽಭಿಃ । ಜುಜೋಷತೇ ॥ ೧ ॥

॥ ಸಾಯಣಭಾಷ್ಯಂ ॥

ದ್ವಿತೋ ನಾಮರ್ಷಿಃ ಸ್ವಾತ್ಮಾನಂ ಪ್ರತ್ಯಾಹ । ಪುನಾನಾಯ ಪವಿತ್ರೇಣ ಪೂಯಮಾನಾಯ ವೇಧಸೇ ಕರ್ಮಣೋ ವಿಧಾತ್ರೇ ಮತಿಭಿಃ ಸ್ತುತಿಭಿರ್ಜುಜೋಷತೇ ಪ್ರೀಯಮಾಣಾಯ ಯದ್ವಾ ಮತಿಭಿಃ ಸ್ತೋತೃಭಿಃ ಸಹ ಜುಜೋಷತೇ ಪ್ರೀಣಯಿತ್ರೇ ಸೋಮಾಯೋದ್ಯತಮುದ್ಯುಕ್ತಂ ವಚಃ

**ಪ್ರ ಭರ । ಪ್ರಕರ್ಷೇಣ ಸಂಪಾದಯ । ಅಭಿಪ್ರುಹೀತ್ಯರ್ಥಃ । ತತ್ರ ದೃಷ್ಟಾಂತಃ । ಭೃತಿಂ ನ ಯಥಾ ಭೃತಕಾ ಭೃತಿಂ ಸಂಪಾದಯಂತಿ ತದ್ವತ್ ॥**

॥ ಪ್ರತಿಪದಾರ್ಥ ॥

**ಭೃತಿಂ ನ**—ಕರ್ಮಕಾರರಿಗೆ ಅವರವರ ವೇತನವನ್ನು ಅರ್ಪಿಸುವಂತೆ । **ಪುನಾನಾಯ**—ಶುದ್ಧಿಕಾರಕನೂ! **ವೇಧಸೇ**—ಕರ್ಮನಿರ್ವಾಹಕನೂ । **ಮತಿಭಿಃ**—ಸ್ತುತಿಗಳಿಂದ । **ಜುಜೋಷತೇ**—ತೃಪ್ತಿಯನ್ನು ಹೊಂದುವವನೂ ಆದ । **ಸೋಮಾಯ**—ಸೋಮವನ್ನುದ್ದೇಶಿಸಿ । **ಉದ್ಯತಂ**—ಮೇಲೆತ್ತಿ ಪಠಿಸುವ । **ವಚಃ**—ಸ್ತುತಿಯನ್ನು । **ಪ್ರ ಭರ**—ನಿರ್ಮಿಸಿ ಅರ್ಪಿಸು.

॥ ಭಾವಾರ್ಥ ॥

ಕರ್ಮಕಾರರಿಗೆ ಅವರವರ ವೇತನವನ್ನು ಅರ್ಪಿಸುವಂತೆ ಶುದ್ಧಿಕಾರಕನೂ, ಕರ್ಮನಿರ್ವಾಹಕನೂ, ಸ್ತುತಿಗಳಿಂದ ತೃಪ್ತಿಯನ್ನು ಹೊಂದುವವನೂ ಆದ ಸೋಮವನ್ನು ಉದ್ದೇಶಿಸಿ ಪಠಿಸತಕ್ಕ ಸ್ತುತಿಯನ್ನು ನಿರ್ಮಿಸಿ ಅರ್ಪಿಸು.

## English Translation

Raise a loud voice to Soma the institutor (of the rite), purified, gratified by praises, as (men pay) wages (to a labourer).

॥ ಸಂಹಿತಾಪಾಠಃ ॥

ಪರಿ ವಾರಾಣ್ಯವ್ಯಯಾ ಗೋಭಿರಂಜಾನೋ ಅರ್ಷತಿ ।
ತ್ರೀ ಷಧಸ್ಥಾ ಪುನಾನಃ ಕೃಣುತೇ ಹರಿಃ ॥ ೨ ॥

॥ ಪದಪಾಠಃ ॥

ಪರಿ । ವಾರಾಣಿ । ಅವ್ಯಯಾ । ಗೋಭಿಃ । ಅಂಜಾನಃ । ಅರ್ಷತಿ ।
ತ್ರೀ । ಸಧಸ್ಥಾ । ಪುನಾನಃ । ಕೃಣುತೇ । ಹರಿಃ ॥ ೨ ॥

॥ ಸಾಯಣಭಾಷ್ಯಂ ॥

**ಗೋಭಿರ್ಗೋವಿಕಾರೈಃ ಕ್ಷೀರಾದಿಭಿರಂಜಾನೋಽಜ್ಯಮಾನಃ ಸೋಮೋಽವ್ಯಯಾವಿಮಯಾನಿ ವಾರಾಣಿ ವಾಲಾನಿ ಪವಿತ್ರಾಣಿ ಪರ್ಯರ್ಷತಿ । ಪರಿಗಚ್ಛತಿ । ಅಪಿ ಚ ಹರಿರ್ಹರಿತವರ್ಣಃ ಸೋಮಃ ಪುನಾನಃ ಪೂಯಮಾನಃ ಸಂಸ್ತ್ರೀ ತ್ರೀಣಿ ಸಧಸ್ಥಾ । ಸಹ ತಿಷ್ಠಂತ್ಯತ್ರೇತಿ ಸಧಸ್ಥಂ ಸ್ಥಾನಂ । ದ್ರೋಣಕಲಶಾಧವನೀಯಪೂತಭೃದಾತ್ಮಕಾನಿ ತ್ರೀಣಿ ಸ್ಥಾನಾನಿ ಕೃಣುತೇ । ಕರೋತಿ ॥**

॥ ಪ್ರತಿಪದಾರ್ಥ ॥

**ಗೋಭಿಃ**—ಕ್ಷೀರಾದಿಗಳಿಂದ । **ಅಂಜಾನಃ**—ಮಿಶ್ರಿತನಾದ ಸೋಮನು । **ಅವ್ಯಯಾ**—ಉಣ್ಣೆಯಿಂದ ನಿರ್ಮಿತವಾದ । **ವಾರಾಣಿ**—ದಶಾಪವಿತ್ರದ ನೂಲುಗಳ ಮೂಲಕ । **ಪರಿ ಅರ್ಷತಿ**—ಪ್ರವಿಸಿ ಹೋಗುತ್ತಾನೆ । **ಹರಿಃ**—ಪಚ್ಚೆವರ್ಣವುಳ್ಳವನೂ । **ಪುನಾನಃ**—ಶುದ್ಧಿಯನ್ನು ಹೊಂದಿದವನೂ ಆದ ಸೋಮನು । **ತ್ರೀ ಸದಸ್ಥಾ**—ದ್ರೋಣಕಲಶ, ಆಧವನೀಯ ಮತ್ತು ಪೂತಭೃತ್ ಎಂಬ ಮೂರು ಸ್ಥಾನಗಳನ್ನೂ । **ಕೃಣುತೇ**—ಕಲ್ಪಿಸುತ್ತಾನೆ.

॥ ಭಾವಾರ್ಥ ॥

ಕ್ಷೀರಾದಿಗಳಿಂದ ಮಿಶ್ರಿತನಾದ ಸೋಮನು ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರದ ನೂಲುಗಳಮೂಲಕ ಪ್ರವಿಸಿಹೋಗುತ್ತಾನೆ. ಪಚ್ಚೆವರ್ಣವುಳ್ಳವನೂ, ಶುದ್ಧಿಯನ್ನು ಹೊಂದಿದವನೂ ಆದ ಸೋಮನು ದ್ರೋಣಕಲಶ, ಆಧವನೀಯ ಮತ್ತು ಪೂತಭೃತ್ ಎಂಬ ಮೂರು ಸ್ಥಾನಗಳನ್ನೂ ಆಕ್ರಮಿಸುತ್ತಾನೆ.

English Translation

Blending with the curds and milk the Soma rushes through the woollen fleece ; the green-tinted Soma being purified takes up three stations.

॥ ಸಂಹಿತಾಪಾಠಃ ॥

ಪರಿ ಕೋಶಂ ಮಧುಶ್ಚುತಮವ್ಯಯೇ ವಾರೇ ಅರ್ಷತಿ ।
ಅಭಿ ವಾಣೀರೃಷೀಣಾಂ ಸಪ್ತ ನೂಷತ ॥ ೩ ॥

॥ ಪದಪಾಠಃ ॥

ಪರಿ । ಕೋಶಂ । ಮಧುಽಶ್ಚುತಂ । ಅವ್ಯಯೇ । ವಾರೇ । ಅರ್ಷತಿ ।
ಅಭಿ । ವಾಣೀಃ । ಋಷೀಣಾಂ । ಸಪ್ತ । ನೂಷತ ॥ ೩ ॥

॥ ಸಾಯಣಭಾಷ್ಯಂ ॥

ಸ ಸೋಮೋಽವ್ಯಯೇಽವಿಮಯೇ ವಾರೇ ವಾಲೇ ಪವಿತ್ರೇ ಮಧುಶ್ಚುತಂ ಮಧುರರಸಸ್ಯ ಚಾವ್ಯಯಿತಾರಂ ದ್ರೋಣಕಲಶಂ ಪ್ರತ್ಯಾತ್ಮೀಯಂ ರಸಂ ಪರ್ಯರ್ಷತಿ । ಗಮಯತಿ । ತಮಿಮಂ ಸೋಮಮೃಷೀಣಾಂ ಸಪ್ತ ವಾಣೀಶ್ಛಂದಾಂಸ್ಯಭಿ ನೂಷತ । ಅಭಿಷ್ಟುವಂತಿ ॥ ನೂ ಸ್ತವನೇ ಕುಟಾದಿಃ ॥

॥ ಪ್ರತಿಪದಾರ್ಥ ॥

(**ಸೋಮಃ**—ಸೋಮನು) । **ಅವ್ಯಯೇ**—ಉಣ್ಣೆಯಿಂದ ನಿರ್ಮಿತವಾದ । **ವಾರೇ**—ದಶಾಪವಿತ್ರದ ನೂಲುಗಳ ಮೂಲಕ । **ಮಧುಶ್ಚುತಂ**—ಮಧುರರಸವನ್ನು ಸುರಿಸುವ । **ಕೋಶಂ**—ದ್ರೋಣಕಲಶಕ್ಕೆ । **ಪರಿ**

**ಅರ್ಷತಿ**—ತನ್ನ ರಸವನ್ನು ಸುರಿಸುತ್ತಾನೆ (ಆಗ) | **ಋಷೀಣಾಂ**—ಋಷಿಗಳ | **ಸಪ್ತ ವಾಣೀಃ**—ಗಾಯತ್ರ್ಯಾದಿ ಸಪ್ತ ಚ್ಛಂದಸ್ಸುಗಳೂ | **ಅಭಿ ನೂಷತ**—ಸ್ತುತಿಸುತ್ತವೆ.

॥ ಭಾವಾರ್ಥ ॥

ಸೋಮನು ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರದ ನೂಲುಗಳ ಮೂಲಕ ಮಧುರರಸವನ್ನು ಸುರಿಸುವ ದ್ರೋಣಕಲಶಕ್ಕೆ ತನ್ನ ರಸವನ್ನು ಸುರಿಸುತ್ತಾನೆ. ಆಗ ಋಷಿಗಳ ಗಾಯತ್ರ್ಯಾದಿ ಸಪ್ತ ಚ್ಛಂದಸ್ಸುಗಳೂ ಇವನನ್ನು ಸ್ತುತಿಸುತ್ತವೆ.

English Translation

The Soma sends forth (its juice) through the woollen fleece to the honey-dripping receptacle ; the seven metres of the Rishis praise (it).

॥ ಸಂಹಿತಾಪಾಠಃ ॥

ಪರಿ ಣೇತಾ ಮತೀನಾಂ ವಿಶ್ವದೇವೋ ಅದಾಭ್ಯಃ ।

ಸೋಮಃ ಪುನಾನಶ್ಚಮ್ವೋರ್ವಿಶದ್ಧರಿಃ ॥ ೪ ॥

॥ ಪದಪಾಠಃ ॥

ಪರಿ । ನೇತಾ । ಮತೀನಾಂ । ವಿಶ್ವಽದೇವಃ । ಅದಾಭ್ಯಃ ।

ಸೋಮಃ । ಪುನಾನಃ । ಚಮ್ವೋಃ । ವಿಶತ್ । ಹರಿಃ ॥ ೪ ॥

॥ ಸಾಯಣಭಾಷ್ಯಂ ॥

**ಹರಿರ್ಹರಿತವರ್ಣಃ ಸ ಸೋಮಃ ಪುನಾನಃ ಪೂಯಮಾನಃ ಸಂಶ್ಚಮ್ವೋರಧಿಷವಣಫಲಕಯೋಃ ಪರಿ ವಿಶತ್ । ಪರಿವಿಶತಿ । ಕೀದೃಶಃ । ಮತೀನಾಂ ಸ್ತುತೀನಾಂ ನೇತಾ ಯದ್ವಾ ಮತೀನಾಂ ಸ್ತೋತೄಣಾಂ ಸ್ವಕರ್ಮಣ್ಯುಪನೇತಾ ವಿಶ್ವದೇವಃ ಸರ್ವದೇವಃ । ಸೋಮೇಽಭಿಷೂಯಮಾಣೇ ಸತೀಂದ್ರಾದಯಃ ಸರ್ವೇ ದೇವಾಃ ಸೋಮಂ ಪ್ರತ್ಯಾಗಚ್ಛಂತಿ ಖಲು । ತಸ್ಮಾತ್ಸರ್ವದೇವೋಪೇತಃ ಅತ ಏವಾದಾಭ್ಯೋಽಹಿಂಸಿತಃ ಕೈಶ್ಚಿದಪಿ ॥**

॥ ಪ್ರತಿಪದಾರ್ಥ ॥

**ಮತೀನಾಂ**—ಸ್ತುತಿಗಳಿಗೆ | **ನೇತಾ**—ನೇತೃವೂ | **ವಿಶ್ವದೇವಃ**—ಸರ್ವದೇವಮಯನೂ | **ಅದಾಭ್ಯಃ**—ಅಹಿಂಸಿತನೂ | **ಹರಿಃ**—ಹಚ್ಚೆವರ್ಣವುಳ್ಳವನೂ ಆದ | **ಸೋಮಃ**—ಸೋಮನು | **ಪುನಾನಃ**—ಶುದ್ಧಿಯನ್ನು ಹೊಂದಿ | **ಚಮ್ವೋಃ**—ಚಮೂ ಪಾತ್ರೆಗಳಲ್ಲಿ | **ಪರಿ ವಿಶತ್**—ಪ್ರವೇಶಿಸುತ್ತಾನೆ.

॥ ಭಾವಾರ್ಥ ॥

ಸ್ತುತಿಗಳಿಗೆ ನೇತೃವೂ, ಸರ್ವದೇವತೆಗಳಿಗೂ ಆಶ್ರಯಸ್ಥಾನನೂ, ಅಹಿಂಸಿತನೂ, ಪಚ್ಚೆವರ್ಣವುಳ್ಳವನೂ ಆದ ಸೋಮನು ಶುದ್ಧಿಯನ್ನು ಹೊಂದಿ ಚಮೂಪಾತ್ರೆಗಳಲ್ಲಿ ಪ್ರವೇಶಿಸುತ್ತಾನೆ.

English Translation

Soma, the leader of praises, in whom all the gods are comprehended unassailable, green-tinted when filtered, enters the cups.

॥ ಸಂಹಿತಾಪಾಠಃ ॥

**ಪರಿ ದೈವೀರನು ಸ್ವಧಾ ಇಂದ್ರೇಣ ಯಾಹಿ ಸರಥಂ ।**

**ಪುನಾನೋ ವಾಘದ್ವಾಘದ್ಭಿರಮರ್ತ್ಯಃ । ೫ ॥**

॥ ಪದಪಾಠಃ ॥

**ಪರಿ । ದೈವೀಃ । ಅನು । ಸ್ವಧಾಃ । ಇಂದ್ರೇಣ । ಯಾಹಿ । ಸಽರಥಂ ।**

**ಪುನಾನಃ । ವಾಘತ್ । ವಾಘತ್‌ಽಭಿಃ । ಅಮರ್ತ್ಯಃ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ಸೋಮ ತ್ವಮಿಂದ್ರೇಣ ಸರಥಂ ಸಮಾನಂ ರಥಮಾರುಹ್ಯ ದೈವೀರ್ದೇವಾನಾಂ ಸಂಬಂಧೀನಿ ಸ್ವಧಾ ಬಲಾನ್ಯನು ದೇವಸೇನಾಃ ಪರಿ ಯಾಹಿ । ಪರಿಗಚ್ಛ । ಕೀದೃಶಃ । ಪುನಾನಃ ಪೂಯಮಾನೋ ವಾಘದ್ಭಿಃ । ವಾಘತ ಇತ್ಯೃತ್ವಿಙ್ನಾಮ । ಹವಿಷಾಂ ಪ್ರೇರಕೈರ್ಋತ್ವಿಗ್ಭಿರ್ವಾಘದೂಹ್ಯಮಾನೋಽಮರ್ತ್ಯೋ ಮನುಷ್ಯಧರ್ಮರಹಿತಃ । ಯದ್ವಾ । ವಾಘದ್ಭಿರ್ಋತ್ವಿಗ್ಭಿಃ ಪುನಾನಃ ಪೂಯಮಾನೋ ವಾಘತ್ ಸ್ತೋತ್ರೃಣಾಂ ಯಷ್ಟೃಣಾಂ ಧನಾದೀನಿ ಪ್ರಾಪಯನ್ ಪರಿಗಚ್ಛ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಪುನಾನಃ**—ಶುದ್ಧಿಯನ್ನು ಹೊಂದಿದವನೂ । **ವಾಘದ್ಭಿಃ**—ಋತ್ವಿಕ್ಕುಗಳಿಂದ । **ವಾಘತ್**—ಸ್ತುತಿಸಲ್ಪಡುವವನೂ । **ಅಮರ್ತ್ಯಃ**—ಮರಣಧರ್ಮರಹಿತನೂ ಆದ ನೀನು । **ಇಂದ್ರೇಣ**—ಇಂದ್ರನೊಡನೆ । **ಸರಥಂ**—ಸಮಾನವಾದ (ಒಂದೇ) ರಥವನ್ನು ಹತ್ತಿ । **ದೈವೀಃ**—ದೇವತೆಗಳಿಗೆ । **ಸ್ವಧಾಃ ಅನು**—ಶಕ್ತಿರೂಪವಾದ ಸೇನಾಭಿಮುಖವಾಗಿ । **ಪರಿ ಯಾಹಿ**—ಹೋಗಿ ಸೇರು.

॥ ಭಾವಾರ್ಥ ॥

ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದಿದವನೂ, ಋತ್ವಿಕ್ಕುಗಳಿಂದ ಸ್ತುತಿಸಲ್ಪಡುವವನೂ, ಮರಣಧರ್ಮರಹಿತನೂ ಆದ ನೀನು ಇಂದ್ರನೊಡನೆ ಸಮಾನವಾದ ರಥವನ್ನು ಹತ್ತಿ ಶಕ್ತಿಯುತವಾದ ದೇವತಾಸಮೂಹಕ್ಕೆ ಅಭಿಮುಖವಾಗಿ ಹೋಗಿ ಸೇರು.

English Translation

Proceed in the same chariot with Indra to the celestial hosts, a priest purified by priests, immortal.

॥ ಸಂಹಿತಾಪಾಠಃ ॥

ಪರಿ ಸಪ್ತಿರ್ನ ವಾಜಯುರ್ದೇವೋ ದೇವೇಭ್ಯಃ ಸುತಃ ।

ವ್ಯಾನಶಿಃ ಪವಮಾನೋ ವಿ ಧಾವತಿ ॥ ೬ ॥

॥ ಪದಪಾಠಃ ॥

ಪರಿ । ಸಪ್ತಿಃ । ನ । ವಾಜಽಯುಃ । ದೇವಃ । ದೇವೇಭ್ಯಃ । ಸುತಃ ।

ವಿಽಆನಶಿಃ । ಪವಮಾನಃ । ವಿ । ಧಾವತಿ ॥ ೬ ॥

॥ ಸಾಯಣಭಾಷ್ಯಂ ॥

ಸಪ್ತಿರ್ನಾಶ್ವ ಇವ ವಾಜಯುರ್ಯುದ್ಧಮಿಚ್ಛನ್ದೇವೋ ದೀಪ್ಯಮಾನೋ ದೇವೇಭ್ಯೋ ದೇವಾರ್ಥಂ ಸುತೋಽಭಿಷುತೋ ವ್ಯಾನಶಿಃ ಪಾತ್ರೇಷು ವ್ಯಾಪೀ ಪವಮಾನಃ ಪವಿತ್ರೇಣ ಪೂಯಮಾನಃ ಏತಾದೃಶಃ ಸೋಮಃ ಪರಿ ಧಾವತಿ । ಪರಿತಃ ಪಾತ್ರಾಣ್ಯಭಿಗಚ್ಛತಿ ॥ ವ್ಯಾನಶಿಃ । ಅಶೂ ವ್ಯಾಪ್ತೌ । ಆದೃಗಮಹನೇತ್ಯತ್ರೋತ್ಸರ್ಗಶ್ಛಂದಸಿ ಸದಾದಿಭ್ಯೋ ದರ್ಶನಾದಿತಿ ಕಿತ್ಪ್ರತ್ಯಯಃ । ಅಶ್ನೋತೇಶ್ಚೇತಿ ನುಡಾಗಮಃ ॥

॥ ಪ್ರತಿಪದಾರ್ಥ ॥

**ಸಪ್ತಿಃ ನ**—ಅಶ್ವದಂತೆ । **ವಾಜಯುಃ**-ಯುದ್ಧವನ್ನು ಅಪೇಕ್ಷಿಸುವವನೂ । **ದೇವಃ**—ಪ್ರಕಾಶಮಾನನೂ। **ದೇವೇಭ್ಯಃ**—ದೇವತೆಗಳಿಗಾಗಿ । **ಸುತಃ**—ಹಿಂಡಲ್ಪಟ್ಟವನೂ । **ವ್ಯಾನಶಿಃ**—ಪಾತ್ರೆಗಳಲ್ಲಿ ವ್ಯಾಪಿಸಿರುವವನೂ । **ಪವಮಾನಃ**—ಶುದ್ಧಿಯನ್ನು ಹೊಂದಿದವನೂ ಆದ ಸೋಮನು । **ಪರಿ ಧಾವತಿ**—ಸರ್ವತ್ರ ಆವರಿಸಿ ಪ್ರವಿಸುತ್ತಾನೆ.

॥ ಭಾವಾರ್ಥ ॥

ಅಶ್ವದಂತೆ ಯುದ್ಧವನ್ನು ಅಪೇಕ್ಷಿಸುವವನೂ, ಪ್ರಕಾಶಮಾನನೂ, ದೇವತೆಗಳಿಗಾಗಿ ಹಿಂಡಲ್ಪಟ್ಟವನೂ, ಪಾತ್ರೆಗಳಲ್ಲಿ ವ್ಯಾಪಿಸಿರುವವನೂ, ಶುದ್ಧಿಯನ್ನು ಹೊಂದಿದವನೂ ಆದ ಸೋಮನು ಸರ್ವತ್ರ ಆವರಿಸಿ ಪ್ರವಿಸುತ್ತಾನೆ.

English Translation

Like a charger eager for the combat the divine (Soma) effused for the gods hastens when purified spreading widely into the vessels-

# ನೂರ ನಾಲ್ಕನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಸಪ್ತಮೇಽನುವಾಕ ಏಕಾದಶ ಸೂಕ್ತಾನಿ । ತತ್ರ ಸಖಾಯ ಇತಿ ಷಡೃಚಂ ಪ್ರಥಮಂ ಸೂಕ್ತಂ। ಕಾಣ್ವೌ ಪರ್ವತನಾರದಾವೃಷೀ । ಅಥವಾ ಕಶ್ಯಪಸ್ಯ ಪುತ್ರ್ಯೌ ಶಿಖಂಡಿನ್ಯಾಖ್ಯೇ ದ್ವೇ ಅಪ್ಸರಸಾವಸ್ಯ ಸೂಕ್ತಸ್ಯ ದ್ರಷ್ಟ್ರ್ಯೌ । ಪೂರ್ವವಚ್ಛಂದೋದೇವತೇ । ತಥಾ ಚಾನುಕ್ರಮ್ಯತೇ । ಸಖಾಯಃ ಪರ್ವತ-ನಾರದೌ ಕಾಶ್ಯಪ್ಯೌ ದ್ವೇ ಶಿಖಂಡಿನ್ಯೌ ವಾಪ್ಸರಸಾವಿತಿ ॥ ಗತಃ ಸೂಕ್ತವಿನಿಯೋಗಃ ॥

ಅನುವಾದವು—ಒಂಭತ್ತನೆಯ ಮಂಡಲವ ಏಳನೆಯ ಅನುವಾಕದಲ್ಲಿ ಹನ್ನೊಂದು ಸೂಕ್ತಗಳಿರುವವು. ಅವುಗಳಲ್ಲಿ **ಸಖಾಯಃ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಗೋತ್ರೋದ್ಭವರಾದ ಪರ್ವತ ಮತ್ತು ನಾರದ ಎಂಬಿಬ್ಬರು ಋಷಿಗಳು; ಅಥವಾ ಕಶ್ಯಪಋಷಿಯ ಪುತ್ರಿಯರೂ ಶಿಖಂಡಿನೀ ಎಂಬ ಹೆಸರಿನವರೂ ಆದ ಇಬ್ಬರು ಅಪ್ಸರಾಂಗನೆಯರು ಈ ಸೂಕ್ತದ ದ್ರಷ್ಟೃಗಳು. ಹಿಂದಿನ ಸೂಕ್ತದಂತೆಯೇ ಈ ಸೂಕ್ತಕ್ಕೂ ದೇವತಾಛಂದಸ್ಸುಗಳು. ಅನುಕ್ರಮಣಿಕೆಯಲ್ಲಿ—**ಸಖಾಯಃ ಪರ್ವತನಾರದೌ ಕಾಶ್ಯಪೌ ದ್ವೇ ಶಿಖಂಡಿನ್ಯೌ ವಾಪ್ಸರಸೌ** ಎಂದು ಹೇಳಿರುವುದು. ಸೂಕ್ತದ ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೪

ಮಂಡಲ—೯ ॥ ಅನುವಾಕ—೭ ॥ ಸೂಕ್ತ—೧೦೪ ॥
ಅಷ್ಟಕ—೭ ॥ ಅಧ್ಯಾಯ—೫ ॥ ವರ್ಗ—೭ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ಪರ್ವತನಾರದೌ ದ್ವೇ ಶಿಖಂಡಿನ್ಯೌ ವಾ ಕಾಶ್ಯಪ್ಯಾವಪ್ಸರಸೌ ॥
ದೇವತಾ—ಪವಮಾನಃ ಸೋಮಃ ॥
ಛಂದಃ—ಉಷ್ಣಿಕ್ ॥

॥ ಸಂಹಿತಾಪಾಠಃ ॥

ಸಖಾಯ ಆ ನಿಷೀದತ ಪುನಾನಾಯ ಪ್ರ ಗಾಯತ ।
ಶಿಶುಂ ನ ಯಜ್ಞೈಃ ಪರಿ ಭೂಷತ ಶ್ರಿಯೇ ॥ ೧ ॥

॥ ಪದಪಾಠಃ ॥

ಸಖಾಯಃ । ಆ । ನಿ । ಸೀದತ । ಪುನಾನಾಯ । ಪ್ರ । ಗಾಯತ ।
ಶಿಶುಂ । ನ । ಯಜ್ಞೈಃ । ಪರಿ । ಭೂಷತ । ಶ್ರಿಯೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸಖಾಯಃ ಸಖಿಭೂತಾಃ ಸ್ತೋತಾರ ಋತ್ವಿಜಃ ಆ ನಿ ಷೀದತ । ಸ್ತೋತುಮುಪವಿಶತ । ಅಥ ಪುನಾನಾಯ ಪೂಯಮಾನಾಯ ಸೋಮಾಯ ಪ್ರ ಗಾಯತ । ಪ್ರಕರ್ಷೇಣ ಗಾಯತ । ತಮಭಿಷ್ಟುತ । ತತೋಽಭಿಷುತಂ ಸೋಮಂ ಯಜ್ಞೈರ್ಯಜನೀಯೈರ್ಹವಿರ್ಭಿರ್ಮಿಶ್ರಣೈಶ್ಚ ಶ್ರಿಯೇ ಶೋಭನಾರ್ಥಂ ಪರಿ ಭೂಷತ । ಪರಿತೋಽಲಂಕುರುತ । ತತ್ರ ದೃಷ್ಟಾಂತಃ । ಶಿಶುಂ ನ ಯಥಾ ಶಿಶುಂ ಬಾಲಂ ಪುತ್ರಂ ಪಿತರ ಆಭರಣೈರಲಂಕುರ್ವಂತಿ ತದ್ವತ್ ॥

॥ ಪ್ರತಿಪದಾರ್ಥ ॥

**ಸಖಾಯಃ**—ಮಿತ್ರಭೂತರಾದ ಎಲೈ ಋತ್ವಿಕ್ಕುಗಳೇ । **ಆ ನಿ ಷೀದತ**-ಕುಳಿತುಕೊಳ್ಳಿರಿ । **ಪುನಾನಾಯ**-ಶುದ್ಧಿಕಾರಕನಾದ ಸೋಮನನ್ನು ಪ್ರಶಂಸಿಸಿ । **ಪ್ರ ಗಾಯತ**—ಉತ್ತಮವಾಗಿ ಗಾನಮಾಡಿರಿ । **ಶಿಶುಂ ನ**—ಮಾತೃಗಳು ಪುತ್ರರನ್ನು ಅಲಂಕರಿಸುವಂತೆ । **ಯಜ್ಞೈಃ**—ಪೂಜಾಸಾಧನಗಳಾದ ಹವಿಸ್ಸುಗಳಿಂದ । **ಶ್ರಿಯೇ**—ಸಂಪದ್ವೃದ್ಧಿಗಾಗಿ । **ಪರಿ ಭೂಷತ**—ಸೋಮನನ್ನು ಅಲಂಕರಿಸಿರಿ.

॥ ಭಾವಾರ್ಥ

ಮಿತ್ರಭೂತರಾದ ಎಲೈ ಋತ್ವಿಕ್ಕುಗಳೇ, ಕುಳಿತುಕೊಳ್ಳಿರಿ. ಶುದ್ಧಿಕಾರಕನಾದ ಸೋಮನನ್ನು ಪ್ರಶಂಸಿಸುವ ಗಾನವನ್ನು ಪಠಿಸಿರಿ. ಮಾತೃಗಳು ಪುತ್ರರನ್ನು ಅಲಂಕರಿಸುವಂತೆ ಪೂಜಾಸಾಧನಗಳಾದ ಹವಿಸ್ಸುಗಳಿಂದ ಸಂಪದ್ವೃದ್ಧಿಗಾಗಿ ಸೋಮನನ್ನು ಅಲಂಕರಿಸಿರಿ.

English Translation

Sit down, friends, sing to the filtered Soma, decorate him with offerings to beautify him as (parents decorate) a child.

॥ ಸಂಹಿತಾಪಾಠಃ ॥

ಸಮೀ ವತ್ಸಂ ನ ಮಾತೃಭಿಃ ಸೃಜತಾ ಗಯಸಾಧನಂ ।
ದೇವಾವ್ಯಂ೧ಮದಮಭಿ ದ್ವಿಶವಸಂ ॥ ೨ ॥

॥ ಪದಪಾಠಃ ॥

ಸಂ । ಈಮಿತಿ । ವತ್ಸಂ । ನ । ಮಾತೃಽಭಿಃ । ಸೃಜತ । ಗಯಽಸಾಧನಂ ।
ದೇವಽಅವ್ಯಂ । ಮದಂ । ಅಭಿ । ದ್ವಿಽಶವಸಂ ॥ ೨ ॥

॥ ಸಾಯಣಭಾಷ್ಯಂ ॥

ಪ್ರವರ್ಗ್ಯೇಽಭಿಷ್ಟವೇ ಸಮೀ ವತ್ಸಮಿತ್ಯೇಕಾ । ಸೂತ್ರಿತಂ ಚ । ಸಮೀ ವತ್ಸಂ ನ ಮಾತೃಭಿಃ ಸಂ ವತ್ಸ ಇವ ಮಾತೃಭಿಃ । ಆ. ೪-೭ । ಇತಿ ॥

**ಹೇ ಋತ್ವಿಜಃ ಗಯಸಾಧನಂ ಗೃಹಸ್ಯ ಸಾಧನಮಿಮಮೇನಂ ಸೋಮಂ ಮಾತೃಭಿರ್ಮಾತೃಭೂತಾಭಿರ್ವಸತೀವರೀಭಿಃ ಸಂ ಸೃಜತ। ಸಂಮಿಶ್ರಯತ । ಕಥಮಿವ । ವತ್ಸಂ ನ ಯಥಾ ವತ್ಸಂ ಮಾತೃಭಿರ್ಗೋಭಿಃ ಸಂಯೋಜಯಂತಿ ತದ್ವತ್ । ಕೀದೃಶಂ। ದೇವಾವ್ಯಂ ದೇವಾನಾಂ ರಕ್ಷಕಂ ಮದಂ ಮದನಹೇತುಂ ದ್ವಿಶವಸಂ ದ್ವಿಗುಣವೇಗಮತಿಶಯಿತಬಲಂ ವಾ। ಯದ್ವಾ। ದ್ವಯೋರ್ಲೋಕಯೋಸ್ತತ್ರಸ್ಥಿತಾ ದೇವಮನುಷ್ಯಾ ಇತ್ಯರ್ಥಃ। ತೇಷಾಂ ಹವಿರ್ಧನಪ್ರದಾನೇನ ವರ್ಧಯಿತಾರಂ ತಂ ಸೋಮಮಭಿಸಂ ಸೃಜತ ॥**

। ಪ್ರತಿಪದಾರ್ಥ ।

(ಎಲೈ ಋತ್ವಿಕ್ಕುಗಳೇ) **ವತ್ಸಂ**—ಕರುವನ್ನು । **ಮಾತೃಭಿಃ ನ**—ತಾಯಿಯಾದ ಗೋವಿನೊಡನೆ ಸೇರಿಸುವಂತೆ। **ದೇವಾವ್ಯಂ**—ದೇವತೆಗಳ ರಕ್ಷಕನೂ । **ಮದಂ**—ಹರ್ಷಕಾರಕನೂ । **ದ್ವಿಶವಸಂ**—ಎರಡು ವಿಧವಾದ ಶಕ್ತಿಯುಳ್ಳವನೂ । **ಗಯಸಾಧನಂ**—ಗೃಹಕ್ಕೆ ಸಾಧಕನೂ ಆದ । **ಈಂ**—ಈ ಸೋಮನನ್ನು । **ಮಾತೃಭಿಃ**—ವಸತೀವರ್ಯಾದ್ಯುದಕಗಳೊಡನೆ। **ಅಭಿ ಸಂ ಸೃಜತ**—ಮಿಶ್ರಮಾಡಿರಿ.

। ಭಾವಾರ್ಥ ।

ಎಲೈ ಋತ್ವಿಕ್ಕುಗಳೇ, ಎಳೆ ಕರುವನ್ನು ಅದರ ತಾಯಿಯೊಂದಿಗೆ ಕೂಡಿಸುವಂತೆ, ದೇವತೆಗಳ ರಕ್ಷಕನೂ, ಹರ್ಷಕಾರಕನೂ, ಎರಡು ವಿಧವಾದ ಶಕ್ತಿಯುಳ್ಳವನೂ, ಗೃಹಕ್ಕೆ ಸಾಧಕನೂ ಆದ ಈ ಸೋಮನನ್ನು ವಸತೀವರ್ಯಾದ್ಯುದಕಗಳೊಡನೆ ಮಿಶ್ರಮಾಡಿರಿ.

English Translation

Associate him the support of the mansion with the maternal (waters) as the calf (with the mother)—the protector of the gods, the exhilarator, endowed with twofold strength.

॥ ವಿಶೇಷವಿಷಯಗಳು ॥

ಪ್ರವರ್ಗ್ಯಯಾಗದ ಅಭಿಷ್ಟವದಲ್ಲಿ **ಸಮಿಾ ವತ್ಸಂ** ಎಂಬ ಈ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಸಮಿಾ ವತ್ಸಂ ನ ಮಾತೃಭಿಃ ಸಂ ವತ್ಸ ಇವ ಮಾತೃಭಿಃ** ಎಂಬ ಈ ಸೂತ್ರದಿಂದ (ಆ. ೪-೭) ವಿಸ್ತೃತವಾಗಿರುವುದು.

। ಸಂಹಿತಾಪಾಠಃ ।

ಪುನಾತಾ ದಕ್ಷಸಾಧನಂ ಯಥಾ ಶರ್ಧಾಯ ವೀತಯೇ ।

ಯಥಾ ಮಿತ್ರಾಯ ವರುಣಾಯ ಶಂತಮಃ ॥ ೩ ॥

ಪದಪಾಠಃ ।

ಪುನಾತ । ದಕ್ಷಽಸಾಧನಂ । ಯಥಾ । ಶರ್ಧಾಯ । ವೀತಯೇ ।

ಯಥಾ । ಮಿತ್ರಾಯ । ವರುಣಾಯ । ಶಂಽತಮಃ ॥ ೩ ॥

॥ ಸಾಯಣಭಾಷ್ಯಂ ॥

ದಕ್ಷಸಾಧನಂ ಬಲಸ್ಯ ಸಾಧನಂ ಧನಾದಿವೃದ್ಧೇರ್ವಾಸಾಧಕಂ ಸೋಮಂ ಪುನಾತ । ಪವಿತ್ರೇಣ ಪುನೀತ ॥ ಪೂಞ್ ಪವನೇ ಕ್ರ್ಯಾದಿಃ । ತಸ್ಮಾಲ್ಲೋಟಿ ತಪ್ತನಪ್ತನಥನಾಶ್ಚೇತಿ ತಸ್ಯ ತಬಾದೇಶಃ । ಪಿತ್ತ್ವಾದೀತ್ತ್ವಾಭಾವಃ ॥ ಅಸೌ ಸೋಮಃ ಶರ್ಧಾಯ ವೇಗಾರ್ಥಂ ವೀತಯೇ ದೇವಾನಾಂ ಪಾನಾರ್ಥಂ ಯಥಾ ಭವತಿ ಯಥಾ ವಾ ಮಿತ್ರಾಯ ವರುಣಾಯ ಚ ಶಂತಮೋಽತಿಶಯೇನ ಸುಖಂ ಕರೋತಿ ತಥಾ ಪುನೀತೇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಸೋಮಃ—ಸೋಮನು) **ಯಥಾ**—ಯಾವ ರೀತಿಯಲ್ಲಿ । **ಶರ್ಧಾಯ**—ಶಕ್ತಿಗೂ । **ವೀತಯೇ**—ದೇವತೆಗಳ ಪಾನಕ್ಕೂ ಯೋಗ್ಯನಾಗುವನೋ । **ಯಥಾ**—ಯಾವ ರೀತಿ । **ಮಿತ್ರಾಯ**—ಮಿತ್ರನಿಗೂ । **ವರುಣಾಯ**—ವರುಣನಿಗೂ । **ಶಂತಮಃ**—ಸುಖಕಾರಕನಾಗುವನೋ ಆ ಪ್ರಕಾರ । **ದಕ್ಷಸಾಧನಂ**—ಶಕ್ತಿ ಸಾಧಕನಾದ ಸೋಮನನ್ನು । **ಪುನಾತ**—ಶುದ್ಧಿಗೊಳಿಸಿರಿ.

॥ ಭಾವಾರ್ಥ ॥

ಈ ಸೋಮನು ಯಾವ ರೀತಿ ಶಕ್ತಿಗೂ, ದೇವತೆಗಳ ಪಾನಕ್ಕೂ ಯೋಗ್ಯನಾಗುವನೋ, ಯಾವ ರೀತಿ ಮಿತ್ರನಿಗೂ, ವರುಣನಿಗೂ ಸುಖಕಾರಕನಾಗುವನೋ ಆ ಪ್ರಕಾರ ಶಕ್ತಿಸಾಧಕನಾದ ಈ ಸೋಮನನ್ನು ಶುದ್ಧಿಗೊಳಿಸಿರಿ.

## English Translation

Purify the bestower of strength so that he may make for invigoration for the banquet (of the gods) and may grant much happiness to Mitra and to Varuna.

॥ ಸಂಹಿತಾಪಾಠಃ ॥

ಅಸ್ಮಭ್ಯಂ ತ್ವಾ ವಸುವಿದಮಭಿ ವಾಣೀರನೂಷತ ।

ಗೋಭಿಷ್ಟೇ ವರ್ಣಮಭಿ ವಾಸಯಾಮಸಿ ॥ ೪ ॥

॥ ಪದಪಾಠಃ ॥

ಅಸ್ಮಭ್ಯಂ । ತ್ವಾ । ವಸುಽವಿದಂ । ಅಭಿ । ವಾಣೀಃ । ಅನೂಷತ ।

ಗೋಽಭಿಃ । ತೇ । ವರ್ಣಂ । ಅಭಿ । ವಾಸಯಾಮಸಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸೋಮ ವಸುವಿದಂ ಧನಸ್ಯ ದಾತಾರಂ ತ್ವಾ ತ್ವಾಮಸ್ಮಭ್ಯಂ ಧನಾದಿಪ್ರದಾನಾರ್ಥಂ ವಾಣೀಃ-ರಸ್ಮದೀಯಾ ವಾಚೋಽಭ್ಯನೂಷತ । ಅಭಿಷ್ಟುವಂತಿ ॥ ಣೂ ಸ್ತವನೇ ॥ ವಯಂ ತೇ ತವ ವರ್ಣಮಾವ-ರಕಂ ರಸಂ ಗೋಭಿರ್ಗೋವಿಕಾರೈಃ ಕ್ಷೀರಾದಿಭಿರಭಿ ವಾಸಯಾಮಸಿ । ಅಭಿವಾಸಯಾಮಃ । ಅಭಿತ ಆಚ್ಛಾದಯಾಮಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ವಸುವಿದಂ—ಧನಪ್ರಾಪಕನಾದ । ತ್ವಾ—ನಿನ್ನನ್ನು । ಅಸ್ಮಭ್ಯಂ—ನಮ್ಮ ಸಂಪತ್ತುಗಳಿಗಾಗಿ । ವಾಣೀಃ—ನಮ್ಮ ಸ್ತುತಿಗಳು । ಅಭ್ಯನೂಷತ—ಪ್ರಶಂಸಿಸುತ್ತವೆ । ತೇ—ನಿನ್ನ । ವರ್ಣಂ—ರಸವನ್ನು । ಗೋಭಿಃ—ಕ್ಷೀರಾದಿಗಳಿಂದ । ಅಭಿ ವಾಸಯಾಮಸಿ—ನಾವು ಆವರಿಸುವಂತೆ ಮಾಡುತ್ತೇವೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಧನಪ್ರಾಪಕನಾದ ನಿನ್ನನ್ನು ನಮ್ಮ ಸಂಪತ್ತುಗಳಿಗಾಗಿ ನಮ್ಮ ಸ್ತುತಿಗಳು ಪ್ರಶಂಸಿಸುತ್ತವೆ. ನಿನ್ನ ರಸವನ್ನು ನಾವು ಕ್ಷೀರಾದಿಗಳೊಡನೆ ಮಿಶ್ರಮಾಡುತ್ತೇವೆ.

English Translation

For us the hymns glorify you the giver of wealth; we clothe your form with the (products of the cows).

॥ ಸಂಹಿತಾಪಾಠಃ ॥

ಸ ನೋ ಮದಾನಾಂ ಪತ ಇಂದೋ ದೇವಪ್ಸರಾ ಅಸಿ ।

ಸಖೇವ ಸಖ್ಯೇ ಗಾತುವಿತ್ತಮೋ ಭವ ॥ ೫ ॥

॥ ಪದಪಾಠಃ ॥

ಸಃ । ನಃ । ಮದಾನಾಂ । ಪತೇ । ಇಂದೋ ಇತಿ । ದೇವಽಪ್ಸರಾಃ । ಅಸಿ ।

ಸಖಾಽಇವ । ಸಖ್ಯೇ । ಗಾತುವಿತ್ಽತಮಃ । ಭವ ॥ ೫ ॥

॥ ಸಾಯಣಭಾಷ್ಯಂ ॥

ನೋಽಸ್ಮದಾದೀನಾಂ ಮದಾನಾಂ ಮದಕಾನಾಂ ಪತೇ ಸ್ವಾಮಿನ್ ಹೇ ಇಂದೋ ಸೋಮ ಸ ತ್ವಂ ದೇವಪ್ಸರಾ ಅಸಿ । ಪ್ಸರ ಇತಿ ರೂಪನಾಮ । ದೀಪ್ತರೂಪೋ ಭವಸಿ । ಸ ತ್ವಂ ಸಖೇವ ಯಥಾ ಸಖಾ ಸುಹೃತ್ ಸಖ್ಯೇ ಮಿತ್ರಾಯ ಸತ್ಯಂ ಮಾರ್ಗಂ ಜ್ಞಾಪಯತಿ ತದ್ವದಸ್ಮಾಕಮಪಿ ಗಾತುವಿತ್ತಮೋಽತ್ಯಂತಂ ಮಾರ್ಗಸ್ಯ ಲಂಭಕೋ ಭವ । ಜ್ಞಾಪಕೋ ಭವ ॥

॥ ಪ್ರತಿಪದಾರ್ಥ ॥

ನಃ—ನಮ್ಮ । ಮದಾನಾಂ—ಹರ್ಷಗಳಿಗೆ । ಪತೇ—ಪ್ರಭುವಾದ । ಇಂದೋ—ಎಲೈ ಸೋಮದೇವನೇ । ಸಃ—ಪ್ರಸಿದ್ಧನಾದ ನೀನು । ದೇವಪ್ಸರಾ—ಪ್ರಕಾಶಮಾನವಾದ ರೂಪವುಳ್ಳವನಾಗಿ । ಅಸಿ—ಆಗಿದ್ದೀಯೆ । ಸಖ್ಯೇ—ಮಿತ್ರನಿಗೆ । ಸಖೇವ—ಮಿತ್ರನಾದವನು ಮಾರ್ಗದರ್ಶಕನಾಗಿರುವಂತೆ । ಗಾತುವಿತ್ತಮಃ—ನಮಗೆ ಉತ್ತಮವಾದ ಮಾರ್ಗದರ್ಶಕನಾಗಿ । ಭವ—ಆಗು.

॥ ಭಾವಾರ್ಥ ॥

ನಮ್ಮ ಹರ್ಷಗಳಿಗೆ ಪ್ರಭುವಾದ ಎಲೈ ಸೋಮದೇವನೇ, ಪ್ರಸಿದ್ಧನಾದ ನೀನು ಪ್ರಕಾಶಮಾನವಾದ ರೂಪವುಳ್ಳವನಾಗಿದ್ದೀಯೆ. ಮಿತ್ರನಿಗೆ ಮಿತ್ರನಾದವನು ಮಾರ್ಗದರ್ಶಕನಾಗಿರುವಂತೆ ನಮಗೆ ನೀನು ಉತ್ತಮವಾದ ಮಾರ್ಗದರ್ಶಕನಾಗಿರು.

English Translation

Lord of our exhilaration, Indu, you are of the brilliant form ; be our true gnide as a friend is to a friend.

॥ ಸಂಹಿತಾಪಾಠಃ ॥

ಸನೇಮಿ ಕೃಧ್ಯ೧ಸ್ಮದಾ ರಕ್ಷಸಂ ಕಂ ಚಿದತ್ರಿಣಂ ।
ಅಪಾದೇವಂ ದ್ವಯುಮಂಹೋ ಯುಯೋಧಿ ನಃ ॥ ೬ ॥

॥ ಪದಪಾಠಃ ॥

ಸನೇಮಿ । ಕೃಧಿ । ಅಸ್ಮತ್ । ಆ । ರಕ್ಷಸಂ । ಕಂ । ಚಿತ್ । ಅತ್ರಿಣಂ ।
ಅಪ । ಅದೇವಂ । ದ್ವಯುಂ । ಅಂಹಃ । ಯುಯೋಧಿ । ನಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಸೋಮ ಅಸ್ಮದಸ್ಮಾಸು ಸನೇಮಿ । ಪುರಾಣನಾಮೈತತ್ । ಪುರಾಣಂ ಸಖ್ಯಂ ಕೃಧಿ । ಕುರು । ಆ ಅಪಿ ಚಾತ್ರಿಣಮದನಶೀಲಂ ಕಂ ಚಿದ್ರಕ್ಷಸಮಪಯುಧ್ಯಸ್ವ । ಕೀದೃಶಂ । ಅದೇವಮದೇವನಶೀಲಂ

ದ್ವಯುಂ ದ್ವಯವಂತಂ ಸತ್ಯಾನೃತಯುಕ್ತಂ ಬಾಹ್ಯಾಭ್ಯಂತರವಾಯಾಯುಕ್ತಂ ವಾ । ಕಿಂ ಚ ನೋಽಸ್ಮಾಕಮಂಹಃ ಪಾಪಂ ಚಾಪ ಯುಯೋಧಿ । ಸಂಪ್ರಹರ ॥ ಯುಧ್ಯತೇರ್ಬಹುಲಂ ಛಂದಸೀತಿ ಶಪಃ ಶ್ಲುಃ । ವಾ ಛಂದಸೀತಿ ಹೇರ್ಜುಶ್ತ್ವಾಭಾವಾದ್ಗುಣಃ । ಧಲೋಪಶ್ಛಾಂದಸಃ । ಯೌಶೇರ್ವಾ ಶ್ಲು ಪೂರ್ವವದ್ರೂಪಂ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಅಸ್ಮತ್**—ನಮ್ಮಲ್ಲಿ । **ಸನೇಮಿ**—ಪುರಾತನವಾದ ಮಿತ್ರತ್ವವನ್ನು । **ಕೃಧಿ**—ಮುಂದುವರಿಸು । **ಆ**—ಮತ್ತು । **ಅತ್ರಿಣಂ**—ಸರ್ವಭಕ್ಷಕನಾದ । **ಕಂ ಚಿತ್ ರಕ್ಷಸಂ**—ಯಾವ ರಾಕ್ಷಸನಿದ್ದರೂ **ಅದೇವಂ**—ದೇವಭಕ್ತನಲ್ಲದವನೂ । **ದ್ವಯುಂ**—ವಂಚಕನೂ ಆದ ಅವನನ್ನು । **ಅಪ ಯುಯೋಧಿ**—ನಾಶಪಡಿಸು । **ನಃ**—ನಮ್ಮ । **ಅಂಹಃ**—ಪಾಪಗಳನ್ನು । **ಅಪ (ಯುಯೋಧಿ)**—ನಾಶಪಡಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ನಮ್ಮಲ್ಲಿ ಪುರಾತನವಾದ ಮಿತ್ರತ್ವವನ್ನು ಮುಂದುವರಿಸು. ಸರ್ವಭಕ್ಷಕನಾದ ಯಾವ ರಾಕ್ಷಸನಿದ್ದರೂ ಸಹ ದೈವಭಕ್ತಿಯಿಲ್ಲದವನೂ, ವಂಚಕನೂ ಆದ ಅವನನ್ನು ನಾಶಪಡಿಸು. ನಮ್ಮ ಪಾಪಗಳನ್ನು ನಾಶಪಡಿಸು.

English Translation

Show us (your) ancient (friendship); (drive off) the voracious Rakshasa, the impious, the double dealer—drive away our sin.

## ನೂರ ಐದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ತಂ ವ ಇತಿ ಷಡೃಚಂ ದ್ವಿತೀಯಂ ಸೂಕ್ತಂ । ಪರ್ವತನಾರದಯೋರಾರ್ಷಂ । ಅನ್ಯತ್ಪೂರ್ವವತ್ ತಂ ವ ಇತ್ಯನುಕ್ರಾಂತಂ ॥ ಗತಃ ಸೂಕ್ತವಿನಿಯೋಗಃ ॥**

ಅನುವಾದವು—**ತಂ ವಃ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹಿಂದಿನ ಸೂಕ್ತದಂತೆ ಪರ್ವತನಾರದರೆಂಬೀರ್ವರು ಋಷಿಗಳು. ಋಷಿ-ದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ—**ತಂ ವಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೧೦೫

ಮಂಡಲ—೯ । ಅನುವಾಕ—೭ । ಸೂಕ್ತ—೧೦೫ ॥
ಅಷ್ಟಕ—೭ । ಅಧ್ಯಾಯ—೫ । ವರ್ಗ—೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ಪರ್ವತನಾರದೌ ॥
ದೇವತಾ—ಪವಮಾನಃ ಸೋಮಃ ॥
ಛಂದಃ—ಉಷ್ಣಿಕ್ ॥

॥ ಸಂಹಿತಾಪಾಠಃ ॥

ತಂ ವಃ ಸಖಾಯೋ ಮದಾಯ ಪುನಾನಮಭಿ ಗಾಯತ ।
ಶಿಶುಂ ನ ಯಜ್ಞೈಃ ಸ್ವದಯಂತ ಗೂರ್ತಿಭಿಃ ॥ ೧ ॥

॥ ಪದಪಾಠಃ ॥

ತಂ । ವಃ । ಸಖಾಯಃ । ಮದಾಯ । ಪುನಾನಂ । ಅಭಿ । ಗಾಯತ ।
ಶಿಶುಂ । ನ । ಯಜ್ಞೈಃ । ಸ್ವದಯಂತ । ಗೂರ್ತಿಽಭಿಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸಖಾಯ ಋತ್ವಿಜಃ ವೋ ಯೂಯಂ ಮದಾಯ ದೇವಾನಾಂ ಮದಾರ್ಥಂ ಪುನಾನಂ ಸ್ತೂಯಮಾನಂ ತಂ ಸೋಮಮಭಿ ಗಾಯತ । ಅಭಿಷ್ಟುತ । ತಮಿಮಂ ಸೋಮಂ ಶಿಶುಂ ನ ಶಿಶುಮಿವಾಲಂಕಾರೈಃ ಕ್ಷೀರಾದಿಭಿಶ್ಚ ಯಥಾ ಸ್ವಾದೂಕುರ್ವಂತಿ ತದ್ವದ್ಯಜ್ಞೈರ್ಹವಿರ್ಭಿರ್ಮಿಶ್ರಣೈರ್ಗೂರ್ತಿಭಿಃ ಸ್ತುತಿಭಿಶ್ಚ ಸ್ವದಯಂತ । ಸ್ವಾದೂಕುರ್ವಂತಿ ॥

॥ ಪ್ರತಿಪದಾರ್ಥ ॥

**ಸಖಾಯಃ**—ಮಿತ್ರಭೂತರಾದ ಎಲೈ ಋತ್ವಿಕ್ಕುಗಳೇ । **ವಃ**—ನೀವು । **ಮದಾಯ**—ದೇವತೆಗಳ ಹರ್ಷಕ್ಕಾಗಿ । **ಪುನಾನಂ**—ಶುದ್ಧಿಯನ್ನು ಹೊಂದಿದ । **ತಂ**—ಸೋಮನನ್ನು । **ಅಭಿಗಾಯತ**—ಗಾನರೂಪದಲ್ಲಿ ಸ್ತುತಿಸಿರಿ । **ಶಿಶುಂ ನ**—ತಾಯಿಯರು ಮಕ್ಕಳನ್ನು ಅಲಂಕರಿಸುವಂತೆ । **ಯಜ್ಞೈಃ**—ಯಜ್ಞಸಾಧನವಾದ ಹವಿರಾದಿಗಳಿಂದಲೂ । **ಗೂರ್ತಿಭಿಃ**—ಸ್ತುತಿಗಳಿಂದಲೂ । **ಸ್ವದಯಂತ**—ಅಲಂಕರಿಸಿರಿ.

॥ ಭಾವಾರ್ಥ ॥

ಮಿತ್ರಭೂತರಾದ ಎಲೈ ಋತ್ವಿಕ್ಕುಗಳೇ, ನೀವು ದೇವತೆಗಳ ಹರ್ಷಕ್ಕಾಗಿ ಶುದ್ಧಿಯನ್ನು ಹೊಂದಿದ ಸೋಮನನ್ನು ಗಾನರೂಪದಲ್ಲಿ ಸ್ತುತಿಸಿರಿ. ತಾಯಿಯರು ಮಕ್ಕಳನ್ನು ಅಲಂಕರಿಸುವಂತೆ ಯಜ್ಞಸಾಧನವಾದ ಹವಿರಾದಿಗಳಿಂದಲೂ ಸ್ತುತಿಗಳಿಂದಲೂ ಅಲಂಕರಿಸಿರಿ.

## English Translation

Hymn, friends, the Soma purified for the exhilaration (of the gods) gratify him with oblations and praises as (men gratify) a child (with ornaments).

॥ ಸಂಹಿತಾಪಾಠಃ ॥

ಸಂ ವತ್ಸ ಇವ ಮಾತೃಭಿರಿಂದುರ್ಹಿನ್ವಾನೋ ಅಜ್ಯತೇ ।

ದೇವಾವೀರ್ಮದೋ ಮತಿಭಿಃ ಪರಿಷ್ಕೃತಃ ॥ ೨ ॥

॥ ಪದಪಾಠಃ ॥

ಸಂ ವತ್ಸಃऽಇವ ಮಾತೃऽಭಿಃ । ಇಂದುಃ । ಹಿನ್ವಾನಃ ಅಜ್ಯತೇ

ದೇವऽಅವೀಃ ಮದಃ ಮತಿऽಭಿಃ । ಪರಿऽಕೃತಃ ॥ ೨ ॥

॥ ಸಾಯಣಭಾಷ್ಯಂ ॥

ಪ್ರವರ್ಗ್ಯೇऽಭಿಷ್ಟವೇ ಸಂ ವತ್ಸ ಇವ ಮಾತೃಭಿರಿತ್ಯೇಕಾ । ಸೂತ್ರಂ ಚ ಸಮಾ ವತ್ಸಮಿತ್ಯನಯಾ ಸಹೋಕ್ತಂ ॥ .

ಹಿನ್ವಾನಃ ಪ್ರೇರ್ಯಮಾಣಃ ಇಂದುಃ ಸೋಮೋ ವಸತೀವರೀಭಿಃ ಸಮಜ್ಯತೇ । ಸಮ್ಯಕ್ ಸಿಕ್ತೋ ಭವತಿ । ತತ್ರ ದೃಷ್ಟಾಂತಃ । ವತ್ಸ ಇವ ವತ್ಸೋ ಯಥಾ ಮಾತೃಭಿರ್ಗೋಭಿಃ ಸಮಕ್ತೋ ಭವತಿ ತದ್ವತ್ । ಕೀದೃಶಃ । ದೇವಾವೀರ್ದೇವಾನಾಂ ರಕ್ಷಕೋ ಮದೋ ಮದಕರೋ ಮತಿಭಿಃ ಸ್ತುತಿಭಿಃ ಪರಿಷ್ಕೃತೋऽಲಂಕೃತಃ ॥ ಭೂಷಣಾರ್ಥೇ ಸಂಪರ್ಯುಪೇಭ್ಯ ಇತಿ ಸುಡಾಗಮಃ । ಪರಿನಿವಿಭ್ಯಃ । ಪಾ. ೮-೩-೭೦ । ಇತಿ ಸುಟಃ ಷತ್ವಂ ।

॥ ಪ್ರತಿಪದಾರ್ಥ ॥

**ಮಾತೃಭಿಃ**— ತಾಯಿಯರಾದ ಗೋವುಗಳಿಂದ **ವತ್ಸ ಇವ**—ಕರುಗಳು ಆದರಿಸಲ್ಪಟ್ಟು ಪೋಷಿಸಲ್ಪಡುವಂತೆ। **ಹಿನ್ವಾನಃ**—ಹಿಂಡಲ್ಪಟ್ಟವನೂ । **ದೇವಾವೀಃ**—ದೇವತೆಗಳ ರಕ್ಷಕನೂ **ಮದಃ**—ಹರ್ಷಕಾರಕನೂ । **ಮತಿಭಿಃ**—ಸ್ತುತಿಗಳಿಂದ । **ಪರಿಷ್ಕೃತಃ**—ಅಲಂಕರಿಸಲ್ಪಟ್ಟವನೂ ಆದ । **ಇಂದುಃ**—ಸೋಮನು **ಸಮಜ್ಯತೇ**- ಸುಸಂಸ್ಕೃತನಾಗಿ ಮಾಡಲ್ಪಡುತ್ತಾನೆ.

॥ ಭಾವಾರ್ಥ ॥

ತಾಯಿಯರಾದ ಗೋವುಗಳಿಂದ ಕರುಗಳು ಆದರಿಸಲ್ಪಟ್ಟು ಸೆಕ್ಕಲ್ಪಡುವಂತೆ, ಹಿಂಡಲ್ಪಟ್ಟವನೂ, ದೇವತೆಗಳ ರಕ್ಷಕನೂ, ಹರ್ಷಕಾರಕನೂ ಸ್ತುತಿಗಳಿಂದ ಅಲಂಕರಿಸಲ್ಪಟ್ಟವನೂ ಆದ ಸೋಮನು ಸುಸಂಸ್ಕೃತನಾಗಿ ಮಾಡಲ್ಪಡುತ್ತಾನೆ

## English Translation

Indu being sent forth is sprinkled (with waters) as a calf (is nourished) by its mother—the protector of the deities, the exhilarator, graced by praises.

|| ವಿಶೇಷವಿಷಯಗಳು ||

ಪ್ರವರ್ಗ್ಯವೆಂಬ ಯಾಗದ ಅಭಿಷ್ಟವದಲ್ಲಿ **ಸಂ ವತ್ಸ ಇವ ಮಾತೃಭಿಃ** ಎಂಬ ಈ ಋಕ್ಕಿನ ವಿನಿಯೋಗ ವಿರುದ್ಧದೆಂದು **ಸಮಿಾ ವತ್ಸಂ** ಎಂಬ ಋಕ್ಕಿನ ವಿನಿಯೋಗವನ್ನು ಹೇಳುವ ಸಂದರ್ಭದಲ್ಲಿ ಹೇಳಲಾಗಿದೆ (೯-೧೦೪-೨)

। ಸಂಹಿತಾಪಾಠಃ ।

ಅಯಂ ದಕ್ಷಾಯ ಸಾಧನೋಽಯಂ ಶರ್ಧಾಯ ವೀತಯೇ

ಅಯಂ ದೇವೇಭ್ಯೋ ಮಧುಮತ್ತಮಃ ಸುತಃ ॥ ೩ ॥

॥ ಪದಪಾಠಃ ॥

ಅಯಂ ದಕ್ಷಾಯ । ಸಾಧನಃ । ಅಯಂ । ಶರ್ಧಾಯ । ವೀತಯೇ ।

ಅಯಂ । ದೇವೇಭ್ಯಃ । ಮಧುಮತ್ಽತಮಃ । ಸುತಃ ॥ ೩ ॥

। ಸಾಯಣಭಾಷ್ಯಂ ।

ಅಯಂ ಸೋಮೋ ದಕ್ಷಾಯ ಬಲಾಯ ವರ್ಧನಾಯ ವಾ ಸಾಧನಃ ಸಾಧಯಿತಾ ಭವತಿ । **ತಥಾಯಂ** ಸೋಮಃ ಶರ್ಧಾಯ ವೇಗಾರ್ಥಂ ವೀತಯೇ ದೇವಾನಾಂ ಭಕ್ಷಣಾರ್ಥಂ ಚ ಭವತಿ । **ಸುತೋ**ಽಭಿಷುತೋಽಯಂ ಸೋಮೋ ದೇವೇಭ್ಯ ಇಂದ್ರಾದಿಭ್ಯೋ ಮಧುಮತ್ತಮೋಽತಿಶಯೇನ ಮಾಧುರ್ಯಯುಕ್ತೋ ಭವತಿ । ಅತ್ಯಂತಂ ಮದಕರೋ ಭವತೀತಿ ವಾ ॥

। ಪ್ರತಿಪದಾರ್ಥ ।

**ಅಯಂ**—ಆ ಸೋಮದೇವನು । **ದಕ್ಷಾಯ**—ಶಕ್ತಿಗೆ । **ಸಾಧನಃ**—ಸಾಧಕನಾಗಿ ಆಗುತ್ತಾನೆ । **ಅಯಂ**—ಈ ಸೋಮದೇವನು । **ಶರ್ಧಾಯ**—ವೇಗಕ್ಕೂ । **ವೀತಯೇ**—ದೇವತೆಗಳ ಪಾನಕ್ಕೂ ಯೋಗ್ಯನಾಗಿರುತ್ತಾನೆ । **ಸುತಃ**—ಹಿಂಡಲ್ಪಟ್ಟ । **ಅಯಂ**—ಈ ಸೋಮನು । **ದೇವೇಭ್ಯಃ**—ಇಂದ್ರಾದಿದೇವತೆಗಳಿಗೆ । **ಮಧುಮತ್ತಮಃ**—ಅತ್ಯಂತ ಹರ್ಷಕಾರಕನಾಗಿರುತ್ತಾನೆ.

। ಭಾವಾರ್ಥ ।

ಈ ಸೋಮದೇವನು ಶಕ್ತಿಸಾಧಕನಾಗಿರುತ್ತಾನೆ. ಈ ಸೋಮನು ವೇಗಾತಿಶಯಕ್ಕೂ ದೇವತೆಗಳ ಪಾನಕ್ಕೂ ಯೋಗ್ಯನಾಗಿದ್ದಾನೆ. ಹಿಂಡಲ್ಪಟ್ಟ ಈ ಸೋಮನು ಇಂದ್ರಾದಿದೇವತೆಗಳಿಗೆ ಅತ್ಯಂತ ಹರ್ಷಕಾರಕನಾತದ್ದಾನೆ.

## English Translation

This (Soma) is an instrument for invigoration; he (is useful) for speed (and) for the banquet of your gods; he is effused most sweet-flavoured for the gods-

॥ ಸಂಹಿತಾಪಾಠಃ ॥

ಗೋಮನ್ನ ಇಂದೋ ಅಶ್ವವತ್ಸುತಃ ಸುದಕ್ಷ ಧನ್ವ ।
ಶುಚಿಂ ತೇ ವರ್ಣಮಧಿ ಗೋಷು ದೀಧರಂ ॥ ೪ ॥

॥ ಪದಪಾಠಃ ॥

ಗೋऽಮತ್ । ನಃ । ಇಂದೋ ಇತಿ । ಅಶ್ವऽವತ್ । ಸುತಃ । ಸುऽದಕ್ಷ । ಧನ್ವ ।
ಶುಚಿಂ । ತೇ । ವರ್ಣಂ । ಅಧಿ । ಗೋಷು । ದೀಧರಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸುದಕ್ಷ ಸುಬಲ ಹೇ ಇಂದೋ ಸೋಮ ಸುತೋಽಭಿಷುತಸ್ತ್ವಂ ನೋಽಸ್ಮಾಕಂ ಗೋಮದ್ಯಜ್ಞಸಾಧನಗೋಯುಕ್ತಮಶ್ವವದಶ್ವಯುಕ್ತಂ ಧನಂ ಧನ್ವ । ಗಮಯ ॥ ಧವಿರ್ಗತ್ಯರ್ಥೋ ಭ್ವಾದಿಃ ತತೋಽಹಂ ಶುಚಿಂ ಪೂತಂ ದೀಪ್ಯಮಾನಂ ವಾ ತೇ ತವ ವರ್ಣಂ ರಸಂ ಗೋಷು ಗವ್ಯೇಷು ಕ್ಷೀರಾದಿಷ್ವಧಿ ಧೀಧರಂ । ಅಧಿಧಾರಯಾಮಿ । ಮಿಶ್ರಯಾಮಿ ॥

॥ ಪ್ರತಿಪದಾರ್ಥ ॥

**ಸುದಕ್ಷ**—ಅತ್ಯತಿಶಯವಾದ ಶಕ್ತಿಯುಳ್ಳ **ಇಂದೋ**—ಎಲೈ ಸೋಮದೇವನೇ **ಸುತಃ**—ಹಿಂಡಲ್ಪಟ್ಟ ನೀನು **ನಃ**—ನಮಗೆ । **ಗೋಮತ್**—ಗೋಯುಕ್ತವಾದುದೂ **ಅಶ್ವವತ್**—ಅಶ್ವಯುಕ್ತವಾದುದೂ ಆದ ಧನವನ್ನು **ಧನ್ವ**—ಒದಗಿಸು । **ಶುಚಿಂ**—ಪ್ರಕಾಶಮಾನವಾದ **ತೇ**—ನಿನ್ನ **ವರ್ಣಂ**—ರಸವನ್ನು । **ಗೋಷು ಅಧಿ** ಕ್ಷೀರಾದಿಗಳೊಡನೆ । **ದೀಧರಂ**—ನಾನು ಮಿಶ್ರಮಾಡುತ್ತೇನೆ.

॥ ಭಾವಾರ್ಥ ॥

ಅತ್ಯತಿಶಯವಾದ ಶಕ್ತಿಯುಳ್ಳ ಎಲೈ ಸೋಮದೇವನೇ, ಹಿಂಡಲ್ಪಟ್ಟ ನೀನು ನಮಗೆ ಗೋಯುಕ್ತವಾದುದೂ ಅಶ್ವಯುಕ್ತವಾದುದೂ ಆದ ಧನವನ್ನು ಒದಗಿಸು. ಪ್ರಕಾಶಮಾನವಾದ ನಿನ್ನ ರಸವನ್ನು ಕ್ಷೀರಾದಿಗಳೊಡನೆ ನಾನೇ ಮಿಶ್ರಮಾಡುತ್ತೇನೆ.

## English Translation

Powerful Indu who are effused, pour upon us ( wealth ) comprising cattle and horses ; I mix the pure juice with the curds and milk.

॥ ಸಂಹಿತಾಪಾಠಃ ॥

ಸ ನೋ ಹರೀಣಾಂ ಪತ ಇಂದೋ ದೇವಪ್ಸರಸ್ತಮಃ ।
ಸಖೇವ ಸಖ್ಯೇ ನರ್ಯೋ ರುಚೇ ಭವ ॥ ೫ ॥

॥ ಪದಪಾಠಃ ॥

ಸಃ । ನಃ । ಹರೀಣಾಂ । ಪತೇ । ಇಂದೋ ಇತಿ । ದೇವಪ್ಸರಃಽತಮಃ ।
ಸಖಾಽಇವ । ಸಖ್ಯೇ । ನರ್ಯಃ । ರುಚೇ । ಭವ ॥ ೫ ॥

॥ ಸಾಯಣಭಾಷ್ಯಂ ॥

ಹೇ ಹರೀಣಾಂ ಪತೇ ನೋಽಸ್ಮದೀಯಾನಾಂ ಹರಿತವರ್ಣಾನಾಂ ಪಶೂನಾಂ ಸ್ವಾಮಿನ್ ಹೇ ಇಂದೋ ಸೋಮ ದೇವಪ್ಸರಸ್ತಮೋಽತಿಶಯೇನ ದೀಪ್ತರೂಪೋಪೇತಃ ಸ ತ್ವಂ ನರ್ಯಃ ಕರ್ಮನೇತೃಭ್ಯ ಋತ್ವಿಗ್ಭ್ಯೋ ಹಿತಃ ಸ ತ್ವಂ ನೋಽಸ್ಮಾಕಂ ರುಚೇ ಭವ । ದೀಪ್ತಿಕರೋ ಭವ । ಕಿಮಿವ । ಸಖೇವ ಯಥಾ ಸಖಾ ಸಖ್ಯೇ ಮಿತ್ರಾಯ ದೀಪ್ತಿಕರೋ ಭವತಿ ತದ್ವತ್ ॥

॥ ಪ್ರತಿಪದಾರ್ಥ ॥

ನಃ—ನಮ್ಮ । ಹರೀಣಾಂ—ಪಚ್ಚೆವರ್ಣದ ಪಶುಗಳಿಗೆ । ಪತೇ—ಒಡೆಯನಾದ । ಇಂದೋ—ಎಲೈ ಸೋಮದೇವನೇ । ದೇವಪ್ಸರಸ್ತಮಃ—ಅತಿಶಯವಾದ ಕಾಂತಿಯಿಂದ ಕೂಡಿದ ರೂಪವುಳ್ಳ । ಸಃ—ನೀನು । **ನರ್ಯಃ**—ನಮಗೆ ಹಿತಕರನಾಗಿದ್ದು । **ಸಖ್ಯೇ**—ಮಿತ್ರನಾದವನಿಗೆ । **ಸಖೇವ**—ಮಿತ್ರನು ಉಪಕಾರಕನಾಗುವಂತೆ । (**ನಃ**—ನಮ್ಮ) । **ರುಚೇ**—ಕಾಂತಿಯುತವಾದ ಜೀವನಕ್ಕೆ ಸಹಾಯಕನಾಗಿ । **ಭವ**—ಆಗಿರು.

॥ ಭಾವಾರ್ಥ ॥

ನಮ್ಮ ಪಚ್ಚೆವರ್ಣದ ಪಶುಗಳಿಗೆಲ್ಲ ಒಡೆಯನಾದ ಎಲೈ ಸೋಮದೇವನೇ, ಅತಿಶಯವಾದ ಕಾಂತಿಯಿಂದ ಕೂಡಿದ ರೂಪವುಳ್ಳ ನೀನು ನಮಗೆ ಹಿತಕರನಾಗಿದ್ದು ಮಿತ್ರನಾದವನಿಗೆ ಮಿತ್ರನು ಉಪಕಾರಕನಾಗಿರುವಂತೆ ನಮ್ಮ ಕಾಂತಿಯುತವಾದ ಜೀವನಕ್ಕೆ ಸಹಾಯಕನಾಗಿರು.

## English Translation

Lord of our bay-coloured (cattle), Indu, who have a most brilliant form, you who are kind to the priests be for a light to us as a friend (gives light) to a friend.

॥ ಸಂಹಿತಾಪಾಠಃ ॥

ಸನೇಮಿ ತ್ವಮಸ್ಮದಾಁ ಅದೇವಂ ಕಂ ಚಿದತ್ರಿಣಂ ।

ಸಾಹ್ವಾಁ ಇಂದೋ ಪರಿ ಬಾಧೋ ಅಪ ದ್ವಯುಂ ॥ ೬ ॥

॥ ಪದಪಾಠಃ ॥

ಸನೇಮಿ । ತ್ವಂ । ಅಸ್ಮತ್ । ಆ । ಅದೇವಂ । ಕಂ । ಚಿತ್ । ಅತ್ರಿಣಂ ।

ಸಹ್ವಾನ್ । ಇಂದೋ ಇತಿ । ಪರಿ । ಬಾಧಃ । ಅಪ । ದ್ವಯುಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಂ ಸನೇಮಿ ಪುರಾಣಂ ಸಖ್ಯಮಸ್ಮದಸ್ಮಾಸು ಕುರು । ಆ ಅಪಿ ಚಾದೇವಮದೇವನಶೀಲಂ ಕಂ ಚಿದಪ್ಯತ್ರಿಣಮದನಶೀಲಂ ರಾಕ್ಷಸಮಸ್ಮದಸ್ಮತ್ತೋಽಪಗಮಯ। ಕಿಂ ಚ ಹೇ ಇಂದೋ ಸಾಹ್ವಾಞ್ಛತ್ರೂನಭಿಭವನ್ ಬಾಧೋ ಬಾಧಮಾನಾನ್ಪರಿ ಜಹಿ । ತಥಾ ದ್ವಯುಂ ದ್ವಯವಂತಂ ಸತ್ಯಾನೃತಯುಕ್ತಂ ಬಾಹ್ಯಾಭ್ಯಂತರಮಾಯಾದ್ವಯೋಪೇತಂ ವಾ ರಾಕ್ಷಸಮಸ್ಮತ್ತೋಽಪಗಮಯ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ತ್ವಂ—ನೀನು । ಸನೇಮಿ—ಪುರಾತನವಾದ ಸಖ್ಯವನ್ನು । ಅಸ್ಮತ್—ನಮ್ಮಲ್ಲಿ ಬೆಳಸು । ಆ—ಮತ್ತು । ಅದೇವಂ—ದೇವಪೂಜಕನಲ್ಲದ । ಕಂ ಚಿತ್—ಯಾವುದೇ ಆದ । ಅತ್ರಿಣಂ—ಸರ್ವಭಕ್ಷಕನಾದ ಅಸುರನಿದ್ದರೂ । ಅಪ—ಅವನನ್ನು ಹಿಂಸಿಸು ಇಂದೋ—ಎಲೈ ಸೋಮದೇವನೇ ಸಾಹ್ವಾನ್—ಶತ್ರುಗಳನ್ನು ಜಯಿಸುತ್ತ । ಬಾಧಃ—ಹಿಂಸಕರನ್ನೂ । ದ್ವಯುಂ—ವಂಚಕರನ್ನೂ ಪರಿ (ಜಹಿ)—ಸೋಲಿಸಿ ನಾಶಪಡಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ನೀನು ನಮ್ಮೊಡನೆ ನಿನ್ನ ಪುರಾತನವಾದ ಸಖ್ಯವನ್ನು ಬೆಳಸು. ಮತ್ತು ದೇವಪೂಜಕನಲ್ಲದವನೂ, ಸರ್ವಭಕ್ಷಕನೂ ಆದ ಯಾವ ಅಸುರನಿದ್ದರೂ ಅವನನ್ನು ಹಿಂಸಿಸು. ಎಲೈ ಸೋಮನೇ, ನಮ್ಮ ಶತ್ರುಗಳನ್ನು ಜಯಿಸುವ ಶಕ್ತಿಯುಳ್ಳವನಾಗಿ, ನಮ್ಮ ಹಿಂಸಕರನ್ನೂ ವಂಚಕರನ್ನೂ ಸೋಲಿಸಿ ನಾಶಪಡಿಸು.

## English Translation

Do you (show) us your ancient (fiendship), drive away the impious voracious (Rakshasa); Indu who are victorious overcome those who oppress us, (drive) off the double-dealing (Rakshasa).

# ನೂರ ಆರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಇಂದ್ರಮಚ್ಛೇತಿ ಚತುರ್ದಶರ್ಚಂ ತೃತೀಯಂ ಸೂಕ್ತಮೌಷ್ಣಿಹಂ ಪವಮಾನಸೋಮದೇವತಾಕಂ । ಪ್ರಥಮಸ್ಯ ತೃಚಸ್ಯ ಚಕ್ಷುರಾಖ್ಯಪುತ್ರೋಽಗ್ನಿರ್ಋಷಿಃ । ದ್ವಿತೀಯಸ್ಯ ಮನುಪುತ್ರಶ್ಚಕ್ಷುರ್ನಾಮಾ । ಅಪ್ಸುನಾಮ್ನಃ ಪುತ್ರೋ ಮನುಸ್ತೃತೀಯಸ್ಯ । ಏವಂ ನವರ್ಚೋ ಗತಾಃ । ಶಿಷ್ಟಾನಾಮಪಿ ಪಂಚಾನಾಂ ಚಾಕ್ಷುಷೋಽಗ್ನಿಃ । ತಥಾ ಚಾನುಕ್ರಮ್ಯತೇ । ಇಂದ್ರಮಚ್ಛ ಷಳೂನಾಗ್ನಿಶ್ಚಾಕ್ಷುರ್ಮಾನವೋ ಮನುರಾಪ್ಸವ ಇತಿ ತೃಚಾಃ ಪಂಚಾಗ್ನಿರಿತಿ ॥ ಗತೋ ವಿನಿಯೋಗಃ ॥**

ಅನುವಾದವು—**ಇಂದ್ರಮಚ್ಛ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವವು. ಈ ಸೂಕ್ತವು ಪವಮಾನಸೋಮದೇವತಾಕವು. ಉಷ್ಣಿಕ್‌ಛಂದಸ್ಸು. ಈ ಸೂಕ್ತದ ಮೊದಲ ಮೂರು ಋಕ್ಕುಗಳಿಗೆ(೧–೩) ಚಕ್ಷುಃ ಎಂಬ ಹೆಸರಿನ ಋಷಿಯ ಪುತ್ರನಾದ ಅಗ್ನಿಯು ಋಷಿಯು. ೪–೬ ಋಕ್ಕುಗಳಿಗೆ ಮನುಪುತ್ರನಾದ ಚಕ್ಷುಃ ಎಂಬುವನು ಋಷಿಯು ; ೭–೯ ಋಕ್ಕುಗಳಿಗೆ ಅಪ್ಸು ಎಂಬವನ ಪುತ್ರನಾದ ಮನುವೆಂಬುವನು ಋಷಿಯು ; ಈ ರೀತಿ ಒಂಭತ್ತು ಋಕ್ಕುಗಳಾದ ಮೇಲೆ ಉಳಿದ ಐದು ಋಕ್ಕುಗಳಿಗೆ ಚಕ್ಷುಃ ಎಂಬ ಋಷಿಯ ಪುತ್ರನಾದ ಅಗ್ನಿಯು ಋಷಿಯು. ಅನುಕ್ರಮಣಿಗಯಲ್ಲಿ—**ಇಂದ್ರಮಚ್ಛ ಷಳೂನಾಗ್ನಿಶ್ಚಾಕ್ಷುಷಶ್ಚಕ್ಷುರ್ಮಾನವೋ ಮನುರಾಪ್ಸವ ಇತಿ ತೃಚಾಃ ಪಂಚಾಗ್ನಿಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೬

ಮಂಡಲ—೯ । ಅನುವಾಕ—೭ । ಸೂಕ್ತ—೧೦೬ ।
ಅಷ್ಟಕ—೭ । ಅಧ್ಯಾಯ—೫ ॥ ವರ್ಗ—೯, ೧೦, ೧೧ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ।
ಋಷಿಃ—೧–೩. ಅಗ್ನಿಶ್ಚಾಕ್ಷುಷಃ । ೪–೬. ಚಕ್ಷುರ್ಮಾನವಃ । ೭–೯. ಮನುರಾಪ್ಸವಃ ।
೧೦–೧೪. ಅಗ್ನಿಃ ॥
ದೇವತಾ—ಪವಮಾನಃ ಸೋಮಃ ।
ಛಂದಃ—ಉಷ್ಣಿಕ್ ॥

॥ ಸಂಹಿತಾಪಾಠಃ ॥

ಇಂದ್ರಮಚ್ಛ ಸುತಾ ಇಮೇ ವೃಷಣಂ ಯಂತು ಹರಯಃ ।
ಶ್ರುಷ್ಟೀ ಜಾತಾಸ ಇಂದವಃ ಸ್ವರ್ವಿದಃ ॥ ೧ ॥

॥ ಪದಪಾಠಃ ॥

ಇಂದ್ರಂ । ಅಚ್ಛ । ಸುತಾಃ । ಇಮೇ । ವೃಷಣಂ । ಯಂತು । ಹರಯಃ ।
ಶ್ರುಷ್ಟೀ । ಜಾತಾಸಃ । ಇಂದವಃ । ಸ್ವಃಽವಿದಃ ॥ ೧ ॥

॥ ಸಾಯಣಭಾಷ್ಯಂ ॥

ಶ್ರುಷ್ಟೀ । ಶ್ರುಷ್ಟೀತಿ ಕ್ಷಿಪ್ರನಾಮ । ಕ್ಷಿಪ್ರಂ ಜಾತಾಸೋ ಜಾತಾ ಇಂದವಃ ಪಾತ್ರೇಷು ಕ್ಷರಂತಃ ಸ್ವರ್ವಿದಃ ಸರ್ವಜ್ಞಾ ಹರಯೋ ಹರಿತವರ್ಣಾಃ ಸುತಾ ಅಭಿಷುತಾ ಇಮೇ ಸೋಮಾ ವೃಷಣಂ ಕಾಮಾನಾಂ ಸೇಕ್ತಾರಮಿಂದ್ರಮಚ್ಛ ಯಂತು । ಅಭಿಗಚ್ಛಂತು ॥

॥ ಪ್ರತಿಪದಾರ್ಥ ॥

**ಶ್ರುಷ್ಟೀ**—ಕ್ಷಿಪ್ರವಾಗಿ । **ಜಾತಾಸಃ**—ಉತ್ಪನ್ನವಾದವೂ । **ಇಂದವಃ**—ಪಾತ್ರೆಗಳಲ್ಲಿ ಸ್ರವಿಸುವುವೂ । **ಸ್ವರ್ವಿದಃ**—ಸಕಲ ಜ್ಞಾನವನ್ನೂ ಹೊಂದಿದವೂ । **ಹರಯಃ**—ಹಚ್ಚೆ ವರ್ಣವುಳ್ಳವೂ । **ಸುತಾಃ**—ಹಿಂಡಲ್ಪಟ್ಟವೂ ಆದ । **ಇಮೇ**—ಈ ಸೋಮರಸಗಳು । **ವೃಷಣಂ**—ಇಷ್ಟಾರ್ಥಪ್ರದನಾದ । **ಇಂದ್ರಂ ಅಚ್ಛ**—ಇಂದ್ರನಿಗೆ ಅಭಿಮುಖವಾಗಿ । **ಯಂತು**—ಪ್ರವಹಿಸಲಿ.

॥ ಭಾವಾರ್ಥ ॥

ಕ್ಷಿಪ್ರವಾಗಿ ಉತ್ಪನ್ನವಾದವೂ, ಪಾತ್ರೆಗಳಲ್ಲಿ ಸ್ರವಿಸುವುವೂ, ಸಕಲ ಜ್ಞಾನವನ್ನು ಹೊಂದಿದವೂ, ಹಚ್ಚೆ ವರ್ಣವುಳ್ಳವೂ, ಹಿಂಡಲ್ಪಟ್ಟವೂ ಆದ ಈ ಸೋಮರಸಗಳು ಇಷ್ಟಾರ್ಥಪ್ರದನಾದ ಇಂದ್ರನಿಗೆ ಅಭಿಮುಖವಾಗಿ ಪ್ರವಹಿಸಲಿ.

## English Translation

May these effused green-tinted Soma juices quickly generated, all-knowing, proceed to Indra the showerer (of benefits).

॥ ಸಂಹಿತಾಪಾಠಃ ॥

ಅಯಂ ಭರಾಯ ಸಾನಸಿರಿಂದ್ರಾಯ ಪವತೇ ಸುತಃ ।
ಸೋಮೋ ಜೈತ್ರಸ್ಯ ಚೇತತಿ ಯಥಾ ವಿದೇ ॥ ೨ ॥

ಪದಪಾಠಃ

ಅಯಂ । ಭರಾಯ । ಸಾನಸಿಃ । ಇಂದ್ರಾಯ । ಪವತೇ । ಸುತಃ ।
ಸೋಮಃ । ಜೈತ್ರಸ್ಯ । ಚೇತತಿ । ಯಥಾ । ವಿದೇ ॥ ೨ ॥

॥ ಸಾಯಣಭಾಷ್ಯಂ ॥

ಭರಾಯ ಸಂಗ್ರಾಮಾಯ ತದರ್ಥಂ ಸಾನಸಿರ್ಭಜನೀಯಃ ಸುತೋಽಭಿಷುತೋಽಯಂ ಸೋಮ ಇಂದ್ರಾಯೇಂದ್ರಾರ್ಥಂ ಪವತೇ । ಗ್ರಹಾದಿಷು ಕ್ಷರತಿ । ತತಃ ಸೋಮೋ ಜೈತ್ರಸ್ಯ ॥ ಕ್ರಿಯಾಗ್ರಹಣಂ

ಕರ್ತವ್ಯಮಿತಿ ಕರ್ಮಣಃ ಸಂಪ್ರದಾನಸಂಜ್ಞಾ ಚತುರ್ಥ್ಯರ್ಥೇ ಬಹುಲಮಿತಿ ಷಷ್ಠೀ ॥ ಜಯಶೀಲಮಿಂದ್ರಂ ಚೇತತಿ । ಜಾನಾತಿ । ಯಥೇಂದ್ರೋ ವಿದೇ ಲೋಕೈರ್ಜ್ಞಾಯತೇ ತಥಾ ಜಾನಾತಿ ॥

॥ ಪ್ರತಿಪದಾರ್ಥ ॥

ಭರಾಯ—ಸಂಗ್ರಾಮಾರ್ಥವಾಗಿ । ಸುತಃ—ಹಿಂಡಲ್ಪಟ್ಟವನೂ । ಸಾನಸಿಃ—ಪೂಜ್ಯನೂ ಆದ । ಅಯಂ—ಈ ಸೋಮದೇವನು । ಇಂದ್ರಾಯ—ಇಂದ್ರಾರ್ಥವಾಗಿ । ಪವತೇ—ಪಾತ್ರೆಗಳಲ್ಲಿ ಪ್ರವಿಸುತ್ತಾನೆ । ಯಥಾ—ಯಾವ ರೀತಿ । ವಿದೇ—ಇಂದ್ರನು ಲೋಕದ ಜನರಿಂದ ತಿಳಿಯಲ್ಪಡುವನೋ ಹಾಗೆಯೇ । ಜೈತ್ರಸ್ಯ—ಜಯಶೀಲನಾದ ಇಂದ್ರನನ್ನು । ಸೋಮಃ—ಸೋಮದೇವನು । ಚೇತತಿ—ತಿಳಿಯುತ್ತಾನೆ.

॥ ಭಾವಾರ್ಥ ॥

ಸಂಗ್ರಾಮಾರ್ಥವಾಗಿ ಹಿಂಡಲ್ಪಟ್ಟವನೂ, ಪೂಜ್ಯನೂ ಆದ ಸೋಮದೇವನು ಇಂದ್ರಾರ್ಥವಾಗಿ ಪಾತ್ರೆಗಳಲ್ಲಿ ಪ್ರವಿಸುತ್ತಾನೆ. ಯಾವ ರೀತಿ ಇಂದ್ರನು ಲೋಕದ ಪ್ರಜೆಗಳಿಂದೆಲ್ಲ ತಿಳಿಯಲ್ಪಡುವನೋ ಅದೇ ರೀತಿ ಸೋಮದೇವನೂ ಇಂದ್ರನ ಜಯಶೀಲತ್ವವನ್ನು ಅರಿಯುತ್ತಾನೆ.

## English Translation

This effused Soma adorable for battle, is filtered for Indra; Soma thinks of the victorious (Indra) as he is known (in the world).

॥ ಸಂಹಿತಾಪಾಠಃ ॥

ಅಸ್ಯೇದಿಂದ್ರೋ ಮದೇಷ್ವಾ ಗ್ರಾಭಂ ಗೃಭ್ಣೀತ ಸಾನಸಿಂ
ವಜ್ರಂ ಚ ವೃಷಣಂ ಭರತ್ಸಮಪ್ಸುಜಿತ್ ॥ ೩

॥ ಪದಪಾಠಃ ॥

ಅಸ್ಯ । ಇತ್ । ಇಂದ್ರಃ । ಮದೇಷು । ಆ । ಗ್ರಾಭಂ । ಗೃಭ್ಣೀತ । ಸಾನಸಿಂ ।
ವಜ್ರಂ । ಚ । ವೃಷಣಂ । ಭರತ್ । ಸಂ । ಅಪ್ಸುಽಜಿತ್ ॥ ೩ ॥

॥ ಸಾಯಣಭಾಷ್ಯಂ ॥

ಆ ಅನಂತರಮಿಂದ್ರೋಽಸ್ಯೇದಸ್ಯ ಸೋಮಸ್ಯೈವ ಮದೇಷು ಸಂಜಾತೇಷು ಸಾನಸಿಂ ಸರ್ವೈಃ ಸಂಭಜನೀಯಂ ಗ್ರಾಭಂ ಗ್ರಾಹಂ ಗ್ರಹೀತವ್ಯಂ ಧನುರ್ಗೃಭ್ಣೀತ । ಗೃಹ್ಣಾತಿ ॥ ಹೃಗ್ರಹೋರ್ಭ ಇತಿ ಭತ್ವಂ ॥ ಕಿಂಚಾಪ್ಸುಜಿದುದಕಾರ್ಥಂ ವೃತ್ರಸ್ಯ ಜೇತಾ । ಯದ್ವಾ । ಅಪ ಇತ್ಯಂತರಿಕ್ಷನಾಮ । ಅಂತರಿಕ್ಷೇಽಹಿನಾಮಕಸ್ಯ ಜೇತಾ । ಇಂದ್ರೋ ವೃಷಣಂ ವರ್ಷಿತಾರಂ ವಜ್ರಂ ಚ ಸಂ ಭರತ್ । ಸಂಬಿಭರ್ತು ॥ ಬಿಭರ್ತೇರ್ಲೇಟ್ಯಡಾಗಮಃ ॥

॥ ಪ್ರತಿಪದಾರ್ಥ ॥

ಇಂದ್ರಃ—ಇಂದ್ರನು । ಅಸ್ಯೇತ್ ಆ—ಈ ಸೋಮದ ಪಾನದಿಂದಲೇ ಉತ್ಪನ್ನವಾದ । ಮದೇಷು—ಹರ್ಷದಕಾಲದಲ್ಲಿ । ಸಾನಸಿಂ—ಸಕಲರಿಗೂ ಪೂಜ್ಯವಾದ । ಗ್ರಾಭಂ—ಧನುಸ್ಸನ್ನು । ಗೃಭ್ಣೀತ—ಹಿಡಿದುಕೊಳ್ಳುತ್ತಾನೆ । ಅಪ್ಸುಜಿತ್—ಉದಕಾರ್ಥವಾಗಿ ವೃತ್ರನನ್ನು ಜಯಿಸಿದ ಇಂದ್ರನು । ವೃಷಣಂ—ಇಷ್ಟಾರ್ಥಪ್ರದವಾದ । ವಜ್ರಂ ಚ—ವಜ್ರಾಯುಧವನ್ನೂ । ಸಂ ಭರತ್—ಹಿಡಿಯಲಿ.

॥ ಭಾವಾರ್ಥ ॥

ಇಂದ್ರನು ಈ ಸೋಮದ ಪಾನದಿಂದ ಉತ್ಪನ್ನವಾದ ಹರ್ಷದ ಕಾಲದಲ್ಲಿ ಸಕಲರಿಗೂ ಪೂಜ್ಯವಾದ ಧನುಸ್ಸನ್ನು ಹಿಡಿಯುತ್ತಾನೆ. ಉದಕಾರ್ಥವಾಗಿ ವೃತ್ರನನ್ನು ಜಯಿಸಿದ ಇಂದ್ರನು ಇಷ್ಟಾರ್ಥಪ್ರದವಾದ ವಜ್ರಾಯುಧವನ್ನೂ ಹಿಡಿಯಲಿ.

## English Translation

In the Soma's exhilaration may Indra Seize hold of wealth to be enjoyed (by all) and conquering Vritra in the waters may he wield the thunderbolt the showerer (of blessings).

॥ ಸಂಹಿತಾಪಾಠಃ ॥

ಪ್ರ ಧನ್ವಾ ಸೋಮ ಜಾಗೃವಿರಿಂದ್ರಾಯೇಂದೋ ಪರಿ ಸ್ರವ ।
ದ್ಯುಮಂತಂ ಶುಷ್ಮಮಾ ಭರಾ ಸ್ವರ್ವಿದಂ ॥ ೪ ॥

॥ ಪದಪಾಠಃ ॥

ಪ್ರ । ಧನ್ವ । ಸೋಮ । ಜಾಗೃವಿಃ । ಇಂದ್ರಾಯ । ಇಂದೋ ಇತಿ । ಪರಿ । ಸ್ರವ ।
ದ್ಯುಽಮಂತಂ । ಶುಷ್ಮಂ । ಆ । ಭರ । ಸ್ವಃಽವಿದಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸೋಮ ಜಾಗೃವಿರ್ಜಾಗರಣಶೀಲಸ್ತ್ವಂ ಪ್ರ ಧನ್ವ । ಪ್ರಕ್ಷರ । ಹೇ ಇಂದೋ ಸೋಮ ಇಂದ್ರಾಯ ಪರಿ ಸ್ರವ । ಪರಿತಃ ಪಾತ್ರೇಷು ಕ್ಷರ । ಕಿಂ ಚ ದ್ಯುಮಂತಂ ದೀಪ್ತಿಯುಕ್ತಂ ಸ್ವರ್ವಿದಂ ಸರ್ವಸ್ಯ ಲಂಭಕಂ ಶುಷ್ಮಂ ಶತ್ರೂಣಾಂ ಶೋಷಕಂ ಬಲಮಾ ಭರ । ಆಹರ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ । ಜಾಗೃವಿಃ—ಯಾವಾಗಲೂ ಎಚ್ಚರವಾಗಿರತಕ್ಕ ನೀನು । ಪ್ರ ಧನ್ವ—ಪ್ರವಹಿಸು । ಇಂದೋ—ಎಲೈ ಸೋಮನೇ । ಇಂದ್ರಾಯ—ಇಂದ್ರನ ಪಾನಾರ್ಥವಾಗಿ । ಪರಿ ಸ್ರವ—

ಪ್ರವಹಿಸು | ದ್ಯುಮಂತಂ—ಕಾಂತಿಯುತವಾದುದೂ | ಸ್ವರ್ವಿದಂ—ಸ್ವರ್ಗಪ್ರಾಪಕವಾದುದೂ | ಶುಷ್ಮಂ—ಶತ್ರುಶೋಷಕವಾದುದೂ ಆದ ಶಕ್ತಿಯನ್ನು | ಆ ಭರ—ನಮಗೊದಗಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಯಾವಾಗಲೂ ಎಚ್ಚರವಾಗಿರತಕ್ಕ ನೀನು ಪ್ರವಹಿಸು. ಇಂದ್ರನ ಪಾನಾರ್ಥವಾಗಿ ಪ್ರವಹಿಸು. ಕಾಂತಿಯುತವಾದುದೂ, ಸ್ವರ್ಗಪ್ರಾಪಕವಾದುದೂ, ಶತ್ರುಶೋಷಕವಾದುದೂ ಆದ ಶಕ್ತಿಯನ್ನು ನಮಗೊದಗಿಸು.

English Translation

Flow Soma who are vigilant; Indu, spread around for Indra; bring brilliant overpowering all-obtaining (strength)-

|| ಸಂಹಿತಾಪಾಠಃ ||

ಇಂದ್ರಾಯ ವೃಷಣಂ ಮದಂ ಪವಸ್ವ ವಿಶ್ವದರ್ಶತಃ |
ಸಹಸ್ರಯಾಮಾ ಪಥಿಕೃದ್ವಿಚಕ್ಷಣಃ || ೫ ||

|| ಪದಪಾಠಃ ||

ಇಂದ್ರಾಯ | ವೃಷಣಂ | ಮದಂ | ಪವಸ್ವ | ವಿಶ್ವಽದರ್ಶತಃ |
ಸಹಸ್ರಽಯಾಮಾ | ಪಥಿಽಕೃತ್ | ವಿಽಚಕ್ಷಣಃ || ೫ ||

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ವೃಷಣಂ ವರ್ಷಿತಾರಂ ಮದಂ ಮದಹೇತುಂ ರಸಮಿಂದ್ರಾಯೇಂದ್ರಾರ್ಥಂ ಪವಸ್ವ | ಕ್ಷರ | ಕೀದೃಶಃ | ವಿಶ್ವದರ್ಶತಃ ಸರ್ವೈರ್ದರ್ಶನೀಯಃ ಸಹಸ್ರಯಾಮಾ ಬಹುಮಾರ್ಗಃ ಪಥಿಕೃದ್ಯಜಮಾನಾನಾಂ ಸನ್ಮಾರ್ಗಕರಣಶೀಲೋ ವಿಚಕ್ಷಣಃ ಸರ್ವಸ್ಯ ವಿದ್ರಷ್ಟಾ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) ವಿಶ್ವದರ್ಶತಃ—ಸಕಲರಿಗೂ ಗೋಚರನೂ | ಸಹಸ್ರಯಾಮಾ—ಅನೇಕ ಮಾರ್ಗಗಳುಳ್ಳವನೂ | ಪಥಿಕೃತ್—ಯಜಮಾನರಿಗೆ ಸನ್ಮಾರ್ಗಕಾರಕನೂ | ವಿಚಕ್ಷಣಃ—ಸೂಕ್ಷ್ಮದೃಷ್ಟಿಯುಳ್ಳವನೂ ಆದ ನೀನು | ವೃಷಣಂ—ಇಷ್ಟಾರ್ಥಪ್ರದವಾದುದೂ | ಮದಂ—ಹರ್ಷಕಾರಕವಾದುದೂ ಆದ ರಸವನ್ನು | ಇಂದ್ರಾಯ—ಇಂದ್ರನ ಪಾನಾರ್ಥವಾಗಿ | ಪವಸ್ವ—ಹರಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಸಕಲರಿಗೂ ಗೋಚರನೂ, ಅನೇಕ ಮಾರ್ಗಗಳುಳ್ಳವನೂ, ಯಜಮಾನರಿಗೆ ಸನ್ಮಾರ್ಗಕಾರಕನೂ, ಸೂಕ್ಷ್ಮದೃಷ್ಟಿಯುಳ್ಳವನೂ ಆದ ನೀನು ಇಷ್ಟಾರ್ಥಪ್ರದವಾದುದೂ, ಹರ್ಷಕಾರಕವಾದುದೂ ಆದ ರಸವನ್ನು ಇಂದ್ರನ ಪಾನಾರ್ಥವಾಗಿ ಹರಿಯುವಂತೆ ಮಾಡು.

English Translation

Pour forth for Indra the exhilarating (juice) showering (benefits), you who are very beautiful, who have many paths, the finder of the (right) path, the observer (of all).

॥ ಸಂಹಿತಾಪಾಠಃ ॥

ಅಸ್ಮಭ್ಯಂ ಗಾತುವಿತ್ತಮೋ ದೇವೇಭ್ಯೋ ಮಧುಮತ್ತಮಃ ।
ಸಹಸ್ರಂ ಯಾಹಿ ಪಥಿಭಿಃ ಕನಿಕ್ರದತ್ ॥ ೬ ॥

॥ ಪದಪಾಠಃ ॥

ಅಸ್ಮಭ್ಯಂ । ಗಾತುವಿತ್ಽತಮಃ । ದೇವೇಭ್ಯಃ । ಮಧುಮತ್ಽತಮಃ ।
ಸಹಸ್ರಂ । ಯಾಹಿ । ಪಥಿಽಭಿಃ । ಕನಿಕ್ರದತ್ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಸೋಮ ಅಸ್ಮಭ್ಯಂ ಗಾತುವಿತ್ತಮೋಽತ್ಯಂತಂ ಮಾರ್ಗಸ್ಯ ಲಂಭಕಃ ತಥಾ ದೇವೇಭ್ಯಶ್ಚ ಮಧುಮತ್ತಮೋಽತ್ಯಂತಂಸ್ವಾದುಕಾರೀತ್ವಂ ಕನಿಕ್ರದಚ್ಛಬ್ದಂ ಕುರ್ವನ್ ಸಹಸ್ರಂ ಪಥಿಭಿರ್ಬಹುಭಿರ್ಮಾರ್ಗೈರ್ಯಾಹಿ । ಕಲಶಮಾಗಚ್ಛ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಅಸ್ಮಭ್ಯಂ**—ನಮಗೆ **ಗಾತುವಿತ್ತಮಃ**—ಉತ್ತಮವಾದ ಮಾರ್ಗದರ್ಶಕನೂ **ದೇವೇಭ್ಯಃ**—ದೇವತೆಗಳಿಗೆ । **ಮಧುಮತ್ತಮಃ**—ಅತ್ಯಂತ ರುಚಿಕರನೂ ಆದ ನೀನು । **ಕನಿಕ್ರದತ್**—ಶಬ್ದವನ್ನು ಮಾಡುತ್ತ । **ಸಹಸ್ರಂ ಪಥಿಭಿಃ**—ಅನೇಕ ಮಾರ್ಗಗಳಿಂದ । **ಯಾಹಿ**—ಕಲಶಾಭಿಮುಖವಾಗಿ ಪ್ರವಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ನಮಗೆಲ್ಲ ಉತ್ತಮವಾದ ಮಾರ್ಗದರ್ಶಕನೂ, ದೇವತೆಗಳಿಗೆ ಅತ್ಯಂತ ರುಚಿಕರನೂ ಆದ ನೀನು ಶಬ್ದವನ್ನು ಮಾಡುತ್ತ ಅನೇಕ ಮಾರ್ಗಗಳಿಂದ ಕಲಶಾಭಿಮುಖವಾಗಿ ಪ್ರವಿಸು.

## English Translation

You who are the best finder of paths for us, the sweet beverage for the gods, come by a thousand paths crying aloud.

॥ ಸಂಹಿತಾಪಾಠಃ ॥

ಪವಸ್ವ ದೇವವೀತಯ ಇಂದೋ ಧಾರಾಭಿರೋಜಸಾ ।

ಆ ಕಲಶಂ ಮಧುಮಾನ್ತ್ಸೋಮ ನಃ ಸದಃ ॥ ೭ ॥

॥ ಪದಪಾಠಃ ॥

ಪವಸ್ವ । ದೇವಽವೀತಯೇ । ಇಂದೋ ಇತಿ । ಧಾರಾಭಿಃ । ಓಜಸಾ ।

ಆ । ಕಲಶಂ । ಮಧುಽಮಾನ್ । ಸೋಮ । ನಃ । ಸದಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದೋ ಸೋಮ ದೇವವೀತಯೇ ದೇವಾನಾಂ ಭಕ್ಷಣಾಯೌಜಸಾ ಬಲೇನ ಧಾರಾಭಿರಾತ್ಮೀಯಾಭಿಃ ಪವಸ್ವ । ಕ್ಷರ । ಹೇ ಸೋಮ ಮಧುಮಾನ್ಮದಕರರಸವಾಂಸ್ತ್ವಂ ನೋಽಸ್ಮದೀಯಂ ಕಲಂಶ ದ್ರೋಣಾಭಿಧಾನಮಾ ಸದಃ ॥ **ಸದೇರ್ಲುಙಿ ರೂಪಂ** ॥ ಆಸೀದ ॥

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮದೇವನೇ । **ದೇವವೀತಯೇ**—ದೇವತೆಗಳ ಪಾನಾರ್ಥವಾಗಿ । **ಓಜಸಾ**—ನಿನ್ನ ಶಕ್ತಿಯೊಡಗೂಡಿ । **ಧಾರಾಭಿಃ**—ಧಾರಾರೂಪದಿಂದ । **ಪವಸ್ವ**—ಪ್ರವಹಿಸು । **ಸೋಮ**—ಎಲೈ ಸೋಮನೇ । **ಮಧುಮಾನ್**—ರುಚಿಕರನಾದ ನೀನು । **ನಃ**—ನಮ್ಮ ! **ಕಲಶಂ**—ದ್ರೋಣಕಲಶದಲ್ಲಿ । **ಆ ಸದಃ**—ಕುಳಿತುಕೊ

॥ ಭಾವಾರ್ಥ ॥

ಎಲೈ ಸೋಮದೇವನೇ, ದೇವತೆಗಳ ಪಾನಾರ್ಥವಾಗಿ ನಿನ್ನ ಶಕ್ತಿಯೊಡಗೂಡಿದ ಧಾರಾರೂಪದಿಂದ ಪ್ರವಹಿಸು. ಎಲೈ ಸೋಮನೇ, ರುಚಿಕರನಾದ ನೀನು ನಮ್ಮ ದ್ರೋಣಕಲಶದಲ್ಲಿ ಕುಳಿತುಕೊ.

## English Translation

Flow, Indu, in your strength with your streams for the banquet of the gods; sit down, Soma, who are sweet-flavoured, in our pitcher.

॥ ಸಂಹಿತಾಪಾಠಃ ॥

ತವ ದ್ರಪ್ಸಾ ಉದಪ್ರುತ ಇಂದ್ರಂ ಮದಾಯ ವಾವೃಧುಃ ।
ತ್ವಾಂ ದೇವಾಸೋ ಅಮೃತಾಯ ಕಂ ಪಪುಃ ॥ ೮ ॥

॥ ಪದಪಾಠಃ ॥

ತವ । ದ್ರಪ್ಸಾಃ । ಉದಽಪ್ರುತಃ । ಇಂದ್ರಂ । ಮದಾಯ । ವವೃಧುಃ ।
ತ್ವಾಂ । ದೇವಾಸಃ । ಅಮೃತಾಯ । ಕಂ । ಪಪುಃ ॥ ೮ ॥

॥ ಸಾಯಣಭಾಷ್ಯಂ ॥

**ಉದಪ್ರುತೋ ವಸತೀವರ್ಯಾಖ್ಯಮುದಕಂ ಪ್ರತಿ ಗಚ್ಛಂತಃ । ಯದ್ವಾ । ಉದಕಸ್ಯ ನಿರ್ಗಮಯಿತಾರಃ । ತವ ಸ್ವಭೂತಾ ದ್ರಪ್ಸಾ ದ್ರುತಗಾಮಿನೋ ರಸಾ ಮದಾಯ ಮದಾರ್ಥಮಿಂದ್ರಂ ವಾವೃಧುಃ । ವರ್ಧಯಂತಿ । ತತೋ ದೇವಾಸೋ ದೇವಾ ಇಂದ್ರಾದಯಃ ಕಂ ಸುಖಕರಂ ತ್ವಾಮಮೃತಾಯಾಮರಣಾರ್ಥಂ ಪಪುಃ । ಪಿಬಂತಿ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಉದಪ್ರುತಃ**—ವಸತೀವರ್ಯಾದಿಗಳಿಗೆ ಅಭಿಮುಖವಾಗಿ ಪ್ರವಿಸುವ । **ತವ**—ನಿನ್ನ । **ದ್ರಪ್ಸಾಃ**—ರಸಗಳು । **ಮದಾಯ**—ಇಂದ್ರನಿಗೆ ಹರ್ಷಾರ್ಥವಾಗಿ । **ಇಂದ್ರಂ**—ಇಂದ್ರನನ್ನು । **ವಾವೃಧುಃ**—ಪುಷ್ಟಿಗೊಳಿಸುತ್ತವೆ । **ದೇವಾಸಃ**—ಇಂದ್ರಾದಿದೇವತೆಗಳು । **ಕಂ**—ಸುಖಕರನಾದ । **ತ್ವಾಂ**—ನಿನ್ನನ್ನು । **ಅಮೃತಾಯ**—ಮರಣರಾಹಿತ್ಯಕ್ಕಾಗಿ । **ಪಪುಃ**—ಪಾನಮಾಡುತ್ತಾರೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ವಸತೀವರ್ಯಾದಿಗಳಿಗೆ ಅಭಿಮುಖವಾಗಿ ಪ್ರವಿಸುವ ನಿನ್ನ ರಸಗಳು ಇಂದ್ರನಿಗೆ ಹರ್ಷಾರ್ಥವಾಗಿ ಇಂದ್ರನನ್ನು ಪುಷ್ಟಿಗೊಳಿಸುತ್ತವೆ. ಇಂದ್ರಾದಿದೇವತೆಗಳು ಸುಖಕರನಾದ ನಿನ್ನನ್ನು ಮರಣರಾಹಿತ್ಯಕ್ಕಾಗಿ ಪಾನಮಾಡುತ್ತಾರೆ.

## English Translation

Your drops, going to the water, have exalted Indra to exhilaration ; the gods have quaffed you, the deighter' for immortality,

॥ ಸಂಹಿತಾಪಾಠಃ ॥

ಆ ನಃ ಸುತಾಸ ಇಂದವಃ ಪುನಾನಾ ಧಾವತಾ ರಯಿಂ ।

ವೃಷ್ಟಿದ್ಯಾವೋ ರೀತ್ಯಾಪಃ ಸ್ವರ್ವಿದಃ ॥ ೯ ॥

॥ ಪದಪಾಠಃ ॥

ಆ । ನಃ । ಸುತಾಸಃ । ಇಂದವಃ । ಪುನಾನಾಃ । ಧಾವತ । ರಯಿಂ ।

ವೃಷ್ಟಿಽದ್ಯಾವಃ । ರೀತಿಽಆಪಃ । ಸ್ವಃಽವಿದಃ ॥ ೯ ॥

॥ ಸಾಯಣಭಾಷ್ಯಂ ॥

**ಹೇ ಸುತಾಸೋಽಭಿಷೂಯಮಾಣಾ ಹೇ ಇಂದವೋ ದೀಪ್ತಾಃ ಪಾತ್ರೇಷು ಕ್ಷರಂತೋ ವಾ ಹೇ ರೀತ್ಯಾಪಃ ಯೈಃ ಪೃಥಿವೀಂ ಪ್ರತಿ ಸ್ರವಣಶೀಲಾ ಆಪಃ ಕೃತಾಃ ತಾದೃಶಾ ಹೇ ಸೋಮಾಃ ಪುನಾನಾಃ ಪೂಯಮಾನಾ ಯೂಯಂ ನೋಽಸ್ಮಭ್ಯಂ ರಯಿಮಾ ಧಾವತ । ಆಗಮಯತ । ಕೀದೃಶಾಃ । ವೃಷ್ಟಿದ್ಯಾವೋ ವೃಷ್ಟಿಮಭಿ ದ್ಯಾಯೈಃ ಕ್ರಿಯತೇ ವೃಷ್ಟ್ಯಭಿಮುಖದ್ಯುಲೋಕವಂತಃ ಸ್ವರ್ವಿದಃ ಸರ್ವಸ್ಯ ಲಂಭಕಾಃ ॥**

॥ ಪ್ರತಿಪದಾರ್ಥ ॥

**ಸುತಾಸಃ**—ಹಿಂಡಲ್ಪಟ್ಟಿರುವವೂ । **ಇಂದವಃ**—ಪ್ರಕಾಶಮಾನವೂ। **ರೀತ್ಯಾಪಃ**—ಪೃಥ್ವಿಗೆ ವೃಷ್ಟಿಯನ್ನು ಸುರಿಸುವವೂ ಆದ ಎಲೈ ಸೋಮರಸಗಳೇ । **ಪುನಾನಾಃ**—ಶುದ್ಧಿಯನ್ನು ಹೊಂದಿದವೂ । **ವೃಷ್ಟಿದ್ಯಾವಃ**—ಅಂತರಿಕ್ಷವನ್ನು ವೃಷ್ಟಿಯಿಂದ ತುಂಬಿದವೂ । **ಸ್ವರ್ವಿದಃ**—ಸಕಲವನ್ನೂ ಹೊಂದಿಸುವವೂ ಆದ ನೀವು । **ನಃ**—ನಮಗೆ । **ರಯಿಂ**—ಧನವನ್ನು । **ಆ ಧಾವತ**—ಒದಗಿಸಿ ಕೊಡಿರಿ.

॥ ಭಾವಾರ್ಥ ॥

ಹಿಂಡಲ್ಪಟ್ಟಿರುವವೂ, ಪ್ರಕಾಶಮಾನವೂ, ಪೃಥ್ವಿಗೆ ವೃಷ್ಟಿಯನ್ನು ಸುರಿಸುವವೂ ಆದ ಎಲೈ ಸೋಮರಸಗಳೇ, ಶುದ್ಧಿಯನ್ನು ಹೊಂದಿದವೂ, ಅಂತರಿಕ್ಷವನ್ನು ವೃಷ್ಟಿಯಿಂದ ತುಂಬಿದವೂ, ಸಕಲವನ್ನು ಹೊಂದಿಸುವವೂ ಆದ ನೀವು ನಮಗೆ ಧನವನ್ನು ಒದಗಿಸಿಕೊಡಿರಿ.

## English Translation

Bring us wealth, bright Soma juices effused, filtered, filling the sky with rain, shedding water (upon the earth), acquiring all things.

॥ ಸಂಹಿತಾಪಾಠಃ ॥

ಸೋಮಃ ಪುನಾನ ಊರ್ಮಿಣಾವ್ಯೋ ವಾರಂ ವಿ ಧಾವತಿ ।

ಅಗ್ರೇ ವಾಚಃ ಪವಮಾನಃ ಕನಿಕ್ರದತ್ ॥ ೧೦ ॥

॥ ಪದಪಾಠಃ ॥

ಸೋಮಃ । ಪುನಾನಃ । ಊರ್ಮಿಣಾ । ಅವ್ಯಃ । ವಾರಂ । ವಿ । ಧಾವತಿ ।

ಅಗ್ರೇ । ವಾಚಃ । ಪವಮಾನಃ । ಕನಿಕ್ರದತ್ ॥ ೧೦ ॥

॥ ಸಾಯಣಭಾಷ್ಯಂ ॥

ಪುನಾನಃ ಪೂಯಮಾನಃ ಸೋಮ ಊರ್ಮಿಣಾ ಸ್ವೀಯಯಾ ಧಾರಯಾವ್ಯೋಽವೇರ್ವಾರಂ ವಾಲಂ ಪವಿತ್ರಂ ವಿ ಧಾವತಿ । ವಿವಿಧಂ ಗಚ್ಛತಿ । ಕೀದೃಶಃ ಸೋಮಃ । ಪವಮಾನಃ ಪೂತೋ ವಾಚಃ ಸ್ತೋತ್ರಸ್ಯಾಗ್ರೇ ಕನಿಕ್ರದತ್ ಪುನಃ ಪುನಃ ಶಬ್ದಂ ಕುರ್ವನ್ವಿ ಧಾವತಿ ॥

॥ ಪ್ರತಿಪದಾರ್ಥ ॥

**ಪುನಾನಃ**—ಶುದ್ಧಿಯನ್ನು ಹೊಂದಿದವನೂ । **ಪವಮಾನಃ**—ಶುದ್ಧಿಕಾರಕನೂ ಆದ । **ಸೋಮಃ**—ಸೋಮನು । **ವಾಚಃ**—ಸ್ತುತಿವಾಕ್ಕಿನ । **ಅಗ್ರೇ**—ಮುಂಭಾಗದಲ್ಲಿ । **ಕನಿಕ್ರದತ್**—ಶಬ್ದಮಾಡುತ್ತ । **ಊರ್ಮಿಣಾ**—ತನ್ನ ಧಾರಾರೂಪದಿಂದ । **ಅವ್ಯಃ**—ಉಣ್ಣೆಯ । **ವಾರಂ**—ನಾರುಗಳ ಮೂಲಕ । **ವಿ ಧಾವತಿ**—ವೇಗವಾಗಿ ಸ್ರವಿಸುತ್ತಾನೆ.

॥ ಭಾವಾರ್ಥ ॥

ಶುದ್ಧಿಯನ್ನು ಹೊಂದುವವನೂ, ಶುದ್ಧಿಕಾರಕನೂ ಆದ ಸೋಮನು ಸ್ತುತಿವಾಕ್ಕಿನ ಮುಂಭಾಗದಲ್ಲಿ ಶಬ್ದ ಮಾಡುತ್ತ ತನ್ನ ಧಾರಾರೂಪದಿಂದ ಉಣ್ಣೆಯ ನಾರುಗಳ ಮೂಲಕ ವೇಗವಾಗಿ ಸ್ರವಿಸುತ್ತಾನೆ.

## English Translation

Soma being filtered flows in a stream through the woollen fleece, crying aloud when filtered in advance of the voice (of praise).

॥ ಸಂಹಿತಾಪಾಠಃ ॥

ಧೀಭಿರ್ಹಿನ್ವಂತಿ ವಾಜಿನಂ ವನೇ ಕ್ರೀಳಂತಮತ್ಯವಿಂ ।

ಅಭಿ ತ್ರಿಪೃಷ್ಠಂ ಮತಯಃ ಸಮಸ್ವರನ್ ॥ ೧೧ ॥

॥ ಪದಪಾಠಃ ॥

ಧೀಭಿಃ । ಹಿನ್ವಂತಿ । ವಾಜಿನಂ । ವನೇ । ಕ್ರೀಳಂತಂ । ಅತಿಽಅವಿಂ ।

ಅಭಿ । ತ್ರಿಽಪೃಷ್ಠಂ । ಮತಯಃ । ಸಂ । ಅಸ್ವರನ್ ॥ ೧೧ ॥

॥ ಸಾಯಣಭಾಷ್ಯಂ ॥

ವಾಜಿನಂ ಬಲವಂತಂ ವನೇ ವನನೀಯೇ ವಸತೀವರ್ಯಾಖ್ಯ ಉದಕೇ ಕ್ರೀಳಂತಂ ಸಂಕ್ರೀಡಮಾನಮತ್ಯವಿಂ । ಅವಿಶಬ್ದೇನ ತದ್ರೋಮಕೃತಂ ಪವಿತ್ರಮಭಿಧೀಯತೇ । ಅತಿಕ್ರಾಂತಪವಿತ್ರಂ ಸೋಮಮೃತ್ವಿಜೋ ಧೀಭಿಃ ಸ್ತುತಿಭಿರ್ಹಿನ್ವಂತಿ । ವರ್ಧಯಂತಿ । ಯದ್ವಾ । ಧೀಭಿಃ ॥ ವರ್ಣಲೋಪಶ್ಛಾಂದಸಃ ॥ ಧೀತಿಭಿರಂಗುಲೀಭಿರ್ಹಿನ್ವಂತಿ । ಪ್ರೇರಯಂತಿ ॥ ಹಿ ಗತೌ ವೃದ್ಧೌ ಚ ಸ್ವಾದಿಃ । ಕಿಂ ಚ ತ್ರಿಪೃಷ್ಠಂ । ತ್ರೀಣಿ ಪವಿತ್ರಾಣಿ ದ್ರೋಣಕಲಶಾಧವನೀಯಪೂತಭೃದಾಖ್ಯಾನಿ ಪಾತ್ರಾಣಿ ಸ್ಪೃಶತೀತಿ ತ್ರೀಣಿ ಸವನಾನಿ ವಾ ಸ್ಪೃಶತೀತಿ ಸ ತಥೋಕ್ತಃ । ತಂ ಸೋಮಂ ಮತಯಃ ಸ್ತುತಯೋಽಭಿ ಸಮಸ್ವರನ್ । ಅಭಿತಃ ಸಂಸ್ತುವಂತಿ ॥

॥ ಪ್ರತಿಪದಾರ್ಥ ॥

**ವಾಜಿನಂ**—ಶಕ್ತಿಯುತನೂ । **ವನೇ**—ವಸತೀವರಿಯಲ್ಲಿ । **ಕ್ರೀಳಂತಂ**—ರಮಿಸುವವನೂ । **ಅತ್ಯವಿಂ**—ಉಣ್ಣೆಯ ದಶಾಪವಿತ್ರವನ್ನು ದಾಟಿದವನೂ ಆದ ಸೋಮನನ್ನು । **ಧೀಭಿಃ**—ಸ್ತುತಿಗಳಿಂದ । **ಹಿನ್ವಂತಿ**—ಋತ್ವಿಕ್ಕುಗಳು ಪುಷ್ಟಿಗೊಳಿಸುತ್ತಾರೆ । **ತ್ರಿಪೃಷ್ಠಂ**—ದ್ರೋಣಕಲಶ, ಆಧವನೀಯ ಮತ್ತು ಪೂತಭೃತ್ತೆಂಬ ಪಾತ್ರೆಗಳಲ್ಲಿರುವ ಸೋಮನನ್ನು । **ಮತಯಃ**—ಸ್ತುತಿಗಳು । **ಅಭಿ ಸಮಸ್ವರನ್**—ಸುತ್ತಲೂ ಪ್ರಶಂಸಿಸುತ್ತವೆ.

॥ ಭಾವಾರ್ಥ ॥

ಶಕ್ತಿಯುತನೂ, ವಸತೀವರಿಯಲ್ಲಿ ರಮಿಸುವವನೂ, ಉಣ್ಣೆಯ ದಶಾಪವಿತ್ರವನ್ನು ದಾಟಿದವನೂ ಆದ ಸೋಮನನ್ನು ಋತ್ವಿಕ್ಕುಗಳು ಸ್ತುತಿಗಳಿಂದ ಪುಷ್ಟಿಗೊಳಿಸುತ್ತಾರೆ. ದ್ರೋಣಕಲಶ, ಆಧವನೀಯ ಮತ್ತು ಪೂತಭೃತ್ತೆಂಬ ಪಾತ್ರೆಗಳಲ್ಲಿರುವ ಸೋಮನನ್ನು ಸ್ತುತಿಗಳು ಸುತ್ತಲೂ ಪ್ರಶಂಸಿಸುತ್ತವೆ.

## English Translation

They send forth with their fingers the powerful Soma sporting in the water, passing through the fleece; praises celebrate him abiding in the hree receptacles.

॥ ಸಂಹಿತಾಪಾಠಃ ॥

ಅಸರ್ಜಿ ಕಲಶಾఁ ಅಭಿ ಮೀಳ್ಹೇ ಸಪ್ತಿರ್ನ ವಾಜಯುಃ ।

ಪುನಾನೋ ವಾಚಂ ಜನಯನ್ನಸಿಷ್ಯದತ್ ॥ ೧೨ ॥

॥ ಪದಪಾಠಃ ॥

ಅಸರ್ಜಿ । ಕಲಶಾನ್ । ಅಭಿ । ಮೀಳ್ಹೇ । ಸಪ್ತಿಃ । ನ । ವಾಜಯುಃ ।

ಪುನಾನಃ । ವಾಚಂ । ಜನಯನ್ । ಅಸಿಷ್ಯದತ್ ॥ ೧೨ ॥

॥ ಸಾಯಣಭಾಷ್ಯಂ ॥

ವಾಜಯುರ್ಯಜಮಾನಾನಾಮನ್ನಮಿಚ್ಛನ್ ಸ ಸೋಮಃ ಕಲಶಾನಭಿಲಕ್ಷ್ಯ ಕಲಶೇಷ್ವಸರ್ಜಿ । ಸೃಜ್ಯತೇ । ತತ್ರ ದೃಷ್ಟಾಂತಃ । ಸಪ್ತಿರ್ನ ಯಥಾಶ್ವೋ ಮೀಳ್ಹೇ । ಸಂಗ್ರಾಮನಾಮೈತತ್ । ಸಂಗ್ರಾಮೇ ಸೃಜ್ಯತೇ ತದ್ವತ್ । ತತಃ ಪುನಾನಃ ಪೂಯಮಾನಃ ಸೋಮೋ ವಾಚಂ ಶಬ್ದಂ ಜನಯನ್ನುತ್ಪಾದಯನ್ನ-ಸಿಷ್ಯದತ್ । ಪಾತ್ರೇಷು ಸ್ಯಂದತೇ ॥

॥ ಪ್ರತಿಪದಾರ್ಥ ॥

ಸಪ್ತಿಃ—ಅಶ್ವವು । ಮೀಳ್ಹೇ ನ—ಯುದ್ಧಾರ್ಥವಾಗಿ ಬಿಡಲ್ಪಡುವಂತೆ । ವಾಜಯುಃ—ಯಜಮಾನನಿಗೆ ಅನ್ನವನ್ನು ಒದಗಿಸಲು ಇಷ್ಟವುಳ್ಳ ಸೋಮವು । ಕಲಶಾನ್ ಅಭಿ—ಕಲಶಪಾತ್ರೆಗಳಲ್ಲಿ । ಅಸರ್ಜಿ—ಬಿಡಲ್ಪಡುತ್ತದೆ । ಪುನಾನಃ—ಶುದ್ಧಿಯನ್ನು ಹೊಂದಿದ ಸೋಮವು । ವಾಚಂ—ಶಬ್ದವನ್ನು । ಜನಯನ್—ಉತ್ಪನ್ನ ಮಾಡುತ್ತ । ಅಸಿಷ್ಯದತ್—ಪಾತ್ರೆಗಳಲ್ಲಿ ಪ್ರವೇಶಿಸುತ್ತದೆ.

॥ ಭಾವಾರ್ಥ ॥

ಯುದ್ಧಾರ್ಥವಾಗಿ ಅಶ್ವವು ಬಿಡಲ್ಪಡುವಂತೆ, ಯಜಮಾನನಿಗೆ ಅನ್ನವನ್ನು ಒದಗಿಸಲು ಇಷ್ಟವುಳ್ಳ ಸೋಮವು ಕಲಶಪಾತ್ರೆಗಳಲ್ಲಿ ಬಿಡಲ್ಪಡುತ್ತದೆ. ಶುದ್ಧಿಯನ್ನು ಹೊಂದಿದ ಸೋಮವು ಶಬ್ದವನ್ನು ಉತ್ಪನ್ನಮಾಡುತ್ತ ಪಾತ್ರೆಗಳಲ್ಲಿ ಪ್ರವೇಶಿಸುತ್ತದೆ.

English Translation

Desiring (to give the worshipper) food he has been let loose into the pitchers like a charger in battle ; being filtered, raising a cry he flows (into the vessels)

॥ ಸಂಹಿತಾಪಾಠಃ ॥

ಪವತೇ ಹರ್ಯತೋ ಹರಿರತಿ ಹ್ವರಾಂಸಿ ರಂಹ್ಯಾ ।

ಅಭ್ಯರ್ಷನ್ತ್ಸ್ತೋತೃಭ್ಯೋ ವೀರವದ್ಯಶಃ ॥ ೧೩ ॥

॥ ಪದಪಾಠಃ ॥

ಪವತೇ । ಹರ್ಯತಃ । ಹರಿಃ । ಅತಿ । ಹ್ವರಾಂಸಿ । ರಂಹ್ಯಾ ।

ಅಭಿಽಅರ್ಷನ್ । ಸ್ತೋತೃಽಭ್ಯಃ । ವೀರಽವತ್ । ಯಶಃ ॥ ೧೩ ॥

॥ ಸಾಯಣಭಾಷ್ಯಂ ॥

**ಹರ್ಯತಃ ಸ್ಪೃಹಣೀಯೋ ಹರಿರ್ಹರಿತವರ್ಣಃ ಸೋಮೋ ರಂಹ್ಯಾ ॥ ತೃತೀಯಾಯಾ ಆಕಾರಃ ॥ ಸಾಧುವೇಗೇನ ಹ್ವರಾಂಸಿ ಕುಟಿಲಾನ್ಯಸೃಜೂನಿ ಪವಿತ್ರಾಣ್ಯತಿ ಪವತೇ । ಅತೀತ್ಯ ಗಚ್ಛತಿ । ಕಿಂ ಕುರ್ವನ್ । ಸ್ತೋತೃಭ್ಯೋ ವೀರವತ್ ಪುತ್ರಯುಕ್ತಂ ಯಶೋಽಭ್ಯರ್ಷನ್ನಭಿಗಮಯನ್ ॥ ಪವತೇ**

॥ ಪ್ರತಿಪದಾರ್ಥ ॥

ಹರ್ಯತಃ—ಆಕರ್ಷಕವಾದ ರೂಪವುಳ್ಳವನೂ । ಹರಿಃ—ಪಚ್ಚೆವರ್ಣವುಳ್ಳವನೂ ಆದ ಸೋಮದೇವನು । **ಸ್ತೋತೃಭ್ಯಃ**—ಸ್ತುತಿಕರ್ತರಿಗೆ । ವೀರವತ್—ವೀರಪುತ್ರಾದಿಗಳಿಂದ ಕೂಡಿದ । **ಯಶಃ**—ಯಶಸ್ಸನ್ನು । **ಅಭ್ಯರ್ಷನ್**—ಕೊಡುತ್ತ । ರಂಹ್ಯಾ—ವೇಗದಿಂದ । ಹ್ವರಾಂಸಿ—ಕುಟಿಲವಾದ ಪಾತ್ರೆಗಳಿಗೆ । **ಅತಿ ಪವತೇ**—ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಆಕರ್ಷಕವಾದ ರೂಪವುಳ್ಳವನೂ, ಪಚ್ಚೆವರ್ಣವುಳ್ಳವನೂ ಆದ ಸೋಮದೇವನು ಸ್ತುತಿಕರ್ತರಿಗೆ ವೀರಪುತ್ರಾದಿಗಳಿಂದ ಕೂಡಿದ ಯಶಸ್ಸನ್ನು ಕೊಡುತ್ತ ವೇಗದಿಂದ ಕುಟಿಲವಾದ ಪಾತ್ರೆಗಳಿಗೆ ಪ್ರವೇಶಿಸುತ್ತಾನೆ.

## English Translation

The delightful green-tinted (juice) flows with rapidity into the crooked (pitchers); bringing the worshippers food and male offspring.

॥ ಸಂಹಿತಾಪಾಠಃ ॥

ಅಯಾ ಪವಸ್ವ ದೇವಯುರ್ಮಧೋರ್ಧಾರಾ ಅಸೃಕ್ಷತ ।
ರೇಭನ್ಪವಿತ್ರಂ ಪರ್ಯೇಷಿ ವಿಶ್ವತಃ ॥ ೧೪ ॥

॥ ಪದಪಾಠಃ ॥

ಅಯಾ । ಪವಸ್ವ । ದೇವಽಯುಃ । ಮಧೋಃ । ಧಾರಾಃ । ಅಸೃಕ್ಷತ ।

ರೇಭನ್ । ಪವಿತ್ರಂ । ಪರಿ । ಏಷಿ । ವಿಶ್ವತಃ ॥ ೧೪

॥ ಸಾಯಣಭಾಷ್ಯಂ ॥

ಹೇ ಸೋಮ ದೇವಯುರ್ದೇವಾನ್ಕಾಮಯಮಾನಸ್ತ್ವಮಯಾನಯಾ ಧಾರಯಾ ಪವಸ್ವ । ಕ್ಷರ । ತತೋ ಮಧೋರ್ಮದಕರಸ್ಯ ತವ ಧಾರಾ ಅಭ್ರಿಯಾ ಅಸೃಕ್ಷತ । ಸೃಜ್ಯಂತೇ । ಅನಂತರಂ ರೇಭ-ಞ್ಛಬ್ದಾಯಮಾನಃ ಪವಿತ್ರಂ ವಿಶ್ವತಃ ಪರ್ಯೇಷಿ । ಸರ್ವತಃ ಪರಿಗಚ್ಛಸಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ದೇವಯುಃ**—ದೇವತೆಗಳನ್ನಪೇಕ್ಷಿಸುವ ನೀನು । **ಅಯಾ**-ಈ ಧಾರಾರೂಪದಿಂದ । ಪವಸ್ವ—ಪ್ರವಹಿಸು । **ಮಧೋಃ**—ಮದಕರನಾದ ನಿನ್ನ । **ಧಾರಾಃ**—ಧಾರೆಗಳು । **ಅಸೃಕ್ಷತ**—ಬಿಡಲ್ಪಡುತ್ತವೆ । ರೇಭನ್—ಶಬ್ದಮಾಡುತ್ತ । **ಪವಿತ್ರಂ**—ದಶಾಪವಿತ್ರಕ್ಕೆ । **ವಿಶ್ವತಃ**—ಎಲ್ಲ ಕಡೆಗಳಿಂದಲೂ । **ಪರ್ಯೇಷಿ**—ಬಂದು ಸೇರು.

॥ ಭಾವಾರ್ಥ ॥

ಎಲೈ ಸೋಮದೇವನೇ, ದೇವತೆಗಳನ್ನು ಸೇರಲು ಅಪೇಕ್ಷಿಸುವ ನೀನು ಈ ಧಾರಾರೂಪದಿಂದ ಪ್ರವಹಿಸು ಹರ್ಷಕಾರಕವಾದ ನಿನ್ನ ಧಾರೆಗಳು ಹರಿಯುತ್ತವೆ. ನೀನು ಶಬ್ದಮಾಡುತ್ತ ದಶಾಪವಿತ್ರಕ್ಕೆ ಎಲ್ಲಾ ಕಡೆಗಳಿಂದಲೂ ಬಂದು ಸೇರು.

English Translation

Devouted to the gods flow with that (stream); (your) streams of exhilarating liquor are let loose; with a roar you pass through the filter in all directions.

## ನೂರ ಏಳನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಪರೀತ ಇತಿ ಷಡ್ವಿಂಶತ್ಯೃಚಂ ಚತುರ್ಥಂ ಸೂಕ್ತಂ । ತ್ವಂ ಸೋಮಾಸಿ । ಋ. ೯.೬೭ । ಇತ್ಯತ್ರೋಕ್ತಾ ಭರದ್ವಾಜಕಶ್ಯಪಾದ್ಯಾಃ ಸಪ್ತರ್ಷಯಃ । ಆದ್ಯಾ ಬೃಹತೀ ದ್ವಿತೀಯಾ ಸತೋಬೃಹತೀ । ಅಯಮೇಕಃ ಪ್ರಗಾಥಃ । ಪರಿ ಸುವಾನ ಇತ್ಯೇಷಾ ತೃತೀಯ್ಯೇಕವಿಂಶತ್ಯಕ್ಷರಾ ಭುರಿಗ್ವಿರಾಡ್ ದ್ವಿಪದಾ । ನೃಭಿರ್ಯೇಮಾನ ಇತಿ ಷೋಡಶೀ ವಿಂಶತ್ಯಕ್ಷರಾ ದ್ವಿಪದಾ ವಿರಾಟ್ ಚತುರ್ಥ್ಯಾದಿದ್ವೌ ಪ್ರಗಾಥೌ । ದಶಮ್ಯಾದಿತ್ರಯಃ ಸಪ್ತದಶ್ಯಾದಿಪಂಚ ಪ್ರಗಾಥಾಃ । ಪವಮಾನಃ ಸೋಮೋ ದೇವತಾ । ತಥಾ ಚಾನುಕ್ರಮ್ಯತೇ । ಪರೀತಃ ಷಡ್ವಿಂಶತಿಃ ಸಪ್ತರ್ಷಯಃ ಪ್ರಾಗಾಥಂ ತೃತೀಯಾಷೋಳಶ್ಯೌ ದ್ವಿಪದೇ ಅಷ್ಟಮ್ಯಾಸ್ತೇ ಬೃಹತ್ಯಾವಿತಿ ॥ ಗತಃ ಸೂಕ್ತವಿನಿಯೋಗಃ ॥**

ಅನುವಾದವು—**ಪರೀತಃ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಇಪ್ಪತ್ತಾರು ಋಕ್ಕುಗಳಿರುವವು ಹಿಂದೆ ಈ ಮಂಡಲದ **ತ್ವಂ ಸೋಮಾಸಿ** ಎಂಬ ೬೭ ನೇ ಸೂಕ್ತಕ್ಕೆ ಹೇಳಿರುವ

ಭರದ್ವಾಜ ಕಶ್ಯಪ ಮೊದಲಾದ ಸಪ್ತರ್ಷಿಗಳೇ ಈ ಸೂಕ್ತಕ್ಕೂ ಋಷಿಗಳು. ಪವಮಾನಸೋಮನು ದೇವತೆಯು; ಈ ಸೂಕ್ತದ ಮೊದಲನೆಯ ಋಕ್ಕು ಬೃಹತೀಛಂದಸ್ಕವು. ಎರಡನೆಯದು ಸತೋಬೃಹತೀಛಂದಸ್ಕವು. ಈ ರೀತಿ ಒಂದು ಬೃಹತೀಛಂದಸ್ಸಿನ ಋಕ್ಕು ಅದರ ಮುಂದೆ ಸತೋಬೃಹತೀಛಂದಸ್ಸಿನ ಋಕ್ಕೂ ಸೇರಿ ಒಂದು ಪ್ರಗಾಥವೆನಿಸುವುದು. **ಪರಿ ಸುವಾನಃ** ಎಂಬ ಮೂರನೆಯ ಋಕ್ಕು ಇಪ್ಪತ್ತೊಂದು ಅಕ್ಷರಗಳ ಭುರಿಗ್ವಿರಾಟ್ ದ್ವಿಪದಾ ಎಂಬ ಛಂದಸ್ಸಿನದು ; **ನೃಭಿರ್ಯೇಮಾನಃ** ಎಂಬ ಹದಿನಾರನೆಯ ಋಕ್ಕು ಹದಿನಾರು ಅಕ್ಷರಗಳ ದ್ವಿಪದಾ ಎಂಬ ಛಂದಸ್ಸಿನದು ನಾಲ್ಕನೇ ಋಕ್ಕಿನಿಂದ ಮುಂದಕ್ಕೆ ಎರಡು ಪ್ರಗಾಥಗಳು. ಹತ್ತರಿಂದ ಮೂರು ಋಕ್ಕುಗಳೂ ಹದಿನೇಳರಿಂದ ಐದು ಋಕ್ಕುಗಳೂ ಪ್ರಗಾಥಗಳು. ಅನುಕ್ರಮಣಿಕೆಯಲ್ಲಿ—**ಪರೀತಃ ಷಡ್ವಿಂಶತಿಃ ಸಪ್ತರ್ಷಯಃ ಪ್ರಾಗಾಥಂ ತೃತೀಯಷೋಳಶ್ಯೌ ದ್ವಿಪದೇ ಅಷ್ಟಮ್ಯಾದ್ಯೇ ಬೃಹತ್ಯೌ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೭

ಮಂಡಲ—೯ ॥ ಅನುವಾಕ—೭ ॥ ಸೂಕ್ತ—೧೦೭ ॥
ಅಷ್ಟಕ—೭ ॥ ಅಧ್ಯಾಯ—೫ ॥ ವರ್ಗ—೧೨, ೧೩, ೧೪, ೧೫, ೧೬ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೬ ॥
ಋಷಿಃ—ಸಪ್ತರ್ಷಯಃ (ಭರದ್ವಾಜೋ ಬಾರ್ಹಸ್ಪತ್ಯಃ । ಕಶ್ಯಪೋ ಮಾರೀಚಃ । ಗೋತಮೋ ರಾಹೂಗಣಃ । ಭೌಮೋಽತ್ರಿಃ । ವಿಶ್ವಾಮಿತ್ರೋ ಗಾಥಿನಃ । ಜಮದಗ್ನಿರ್ಭಾರ್ಗವಃ । ಮೈತ್ರಾವರುಣಿರ್ವಸಿಷ್ಠಃ) ॥
ದೇವತಾ—ಪವಮಾನಃ ಸೋಮಃ ।
ಛಂದಃ—೧, ೪, ೬, ೮-೧೦, ೧೨, ೧೪, ೧೭, ೧೯, ೨೧, ೨೩, ೨೫, ಬೃಹತೀ । ೨, ೫, ೭, ೧೧, ೧೩, ೧೫, ೧೮, ೨೦, ೨೨, ೨೪, ೨೬. ಸತೋಬೃಹತೀ । ೩, ೧೬. ದ್ವಿಪದಾ ॥

॥ ಸಂಹಿತಾಪಾಠಃ ।

ಪರೀತೋ ಷಿಂಚತಾ ಸುತಂ ಸೋಮೋ ಯ ಉತ್ತಮಂ ಹವಿಃ ।
ದಧನ್ವಾ ಯೋ ನರ್ಯೋ ಅಪ್ಸ್ವಂ೧ತರಾ ಸುಷಾವ ಸೋಮಮದ್ರಿಭಿಃ ॥

ಪದಪಾಠಃ

ಪರಿ । ಇತಃ । ಸಿಂಚತ । ಸುತಂ । ಸೋಮಃ । ಯಃ । ಉತ್ಽತಮಂ । ಹವಿಃ

ದಧನ್ವಾನ್ । ಯಃ । ನರ್ಯಃ । ಅಪ್ಽಸು । ಅಂತಃ । ಆ । ಸುಸಾವ । ಸೋಮಂ । ಅದ್ರಿಽಭಿಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜಃ ಸುತಮಭಿಷುತಂ ಸೋಮಮಿತ ಅಸ್ಮಾತ್ಕರ್ಮಣ ಊರ್ಧ್ವಂ ಅಥವಾಸ್ಮಾತ್ಪ್ರ- ದೇಶಾದೂರ್ಧ್ವಂ ಪರಿ ಷಿಂಚತ ವಸತೀವರೀಭಿಃ ॥ ಇತೋ ಷಿಂಚತೇತ್ಯತ್ರ ಸಂಹಿತಾಯಾಂ ಛಂದಸೀತಿ

ರೋಃರುತ್ವಂ । ಆದೇಶಪ್ರತ್ಯಯಯೋರಿತಿ ಷತ್ವಂ ॥ ಯಃ ಸೋಮೋ ದೇವಾನಾಮುತ್ತಮಂ ಪ್ರಶಸ್ತಂ ಹವಿರ್ಭವತಿ ಆ ಅಪಿ ಚ ನರ್ಯೋ ಮನುಷ್ಯಹಿತೋ ಯಶ್ಚ ಸೋಮೋಽಪ್ಸು ವಸತೀವರೀಷ್ವಂತರಿಕ್ಷೇ ನಾಂತರ್ದಧನ್ವಾನ್ಗಚ್ಛನ್ಭವತಿ ತಂ ಸೋಮಮದ್ರಿಭಿರ್ಗ್ರಾವಭಿರಧ್ವರ್ಯುಃ ಸುಷಾವ । ಅಭಿಷುತಂ ಚಕಾರ । ತಂ ಪರಿ ಷಿಂಚತೇತಿ ಸಮನ್ವಯಃ ॥

। ಪ್ರತಿಪದಾರ್ಥ ।

(ಎಲೈ ಋತ್ವಿಕ್ಕುಗಳೇ) **ಯಃ ಸೋಮಃ**—ಯಾವ ಸೋಮವು । (**ದೇವಾನಾಂ**—ದೇವತೆಗಳಿಗೆ ) । **ಉತ್ತಮಂ**—ಪ್ರಶಸ್ತವಾದ । **ಹವಿಃ**—ಹವಿಸ್ಸಾಗಿರುವುದೋ । **ಆ**—ಮತ್ತು । **ನರ್ಯಃ**—ಮಾನವರ ಹಿತಕರವಾಗಿರುವುದೋ । **ಯಃ**—ಯಾವ ಸೋಮವು । **ಅಪ್ಸು**—ವಸತೀವರ್‍ಯಾದಿಗಳ । **ಅಂತಃ**—ಮಧ್ಯಭಾಗದಲ್ಲಿ । **ದಧನ್ವಾನ್**—ಸಂಚರಿಸುವುದೋ । (**ಯಂ**—ಯಾವ ಸೋಮವನ್ನು) । **ಅದ್ರಿಭಿಃ**—ಹಿಂಡುವ ಕಲ್ಲುಗಳಿಂದ । **ಸುಷಾವ**—ಅಧ್ವರ್ಯುವು ಹಿಂಡಿರುವನೋ ಅಂತಹ । **ಸುತಂ**—ಹಿಂಡಲ್ಪಟ್ಟ । **ಸೋಮಂ**—ಸೋಮವನ್ನು **ಇತಃ**—ಈ ಪ್ರದೇಶದಿಂದ । **ಪರಿ ಷಿಂಚತ**—ಪ್ರೋಕ್ಷಿಸಿರಿ (ಸ್ರವಿಸುವಂತೆ ಮಾಡಿರಿ).

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಯಾವ ಸೋಮವು ದೇವತೆಗಳಿಗೆ ಪ್ರಶಸ್ತವಾದ ಹವಿಸ್ಸಾಗಿರುವುದೋ ಮತ್ತು ಮಾನವರಿಗೆ ಹಿತಕರವಾಗಿರುವುದೋ ಯಾವ ಸೋಮವು ವಸತೀವರ್‍ಯಾದಿಗಳ ಮಧ್ಯಭಾಗದಲ್ಲಿ ಸಂಚರಿಸುವುದೋ ಯಾವ ಸೋಮವನ್ನು ಹಿಂಡುವ ಕಲ್ಲುಗಳಿಂದ ಅಧ್ವರ್ಯುವು ಹಿಂಡುವನೋ ಅಂತಹ ಹಿಂಡಲ್ಪಟ್ಟ ಸೋಮವನ್ನು ಈ ಪ್ರದೇಶದಿಂದ ಸ್ರವಿಸುವಂತೆ ಮಾಡಿರಿ.

## English Translation

Sprinkle from hence the effused Soma-juice which is the best oblation (to the gods), and which, good for man, is going into the midst of the firmament; (the priest) has expressed the Soma with the stones.

। ಸಂಹಿತಾಪಾಠಃ ।

ನೂನಂ ಪುನಾನೋಽವಿಭಿಃ ಪರಿ ಸ್ರವಾದಬ್ಧಃ ಸುರಭಿಂತರಃ ।
ಸುತೇ ಚಿತ್ತ್ವಾಪ್ಸು ಮದಾಮೋ ಅಂಧಸಾ ಶ್ರೀಣಂತೋ ಗೋಭಿರುತ್ತರಂ ॥

॥ ಪದಪಾಠಃ ॥

ನೂನಂ । ಪುನಾನಃ । ಅವಿಽಭಿಃ । ಪರಿ । ಸ್ರವ । ಅದಬ್ಧಃ । ಸುರಭಿಂಽತರಃ ।
ಸುತೇ । ಚಿತ್ । ತ್ವಾ । ಅಪ್ಽಸು । ಮದಾಮಃ । ಅಂಧಸಾ । ಶ್ರೀಣಂತಃ । ಗೋಭಿಃ । ಉತ್ಽತರಂ । ೨ ॥

॥ ಸಾಯಣಭಾಷ್ಯಂ ॥

ಹೇ ಸೋಮ ಅದಬ್ಧಃ ಕೈಶ್ಚಿದಪ್ಯಹಿಂಸಿತಃ ಸುರಭಿಂತರೋಽತ್ಯಂತಂ ಸುಗಂಧಿಸ್ತ್ವಂ ನೂನಮಿದಾನೀಂ ಪುನಾನಃ ಪೂಯಮಾನಃ ಸನ್ನವಿಭಿರವಿವಾಲಕೃತೈಃ ಪವಿತ್ರೈಸ್ತೇಭ್ಯಃ ಪರಿ ಸ್ರವ। ಪರಿತಃ ಕ್ಷರ। ಸುತೇ ಚಿದಭಿಷುತೇ ಸತ್ಯಂಧಸಾ ಸಕ್ತುಲಕ್ಷಣೇನಾನ್ನೇನ ಗೋಭಿರ್ಗೋವಿಕಾರೈಃ ಕ್ಷೀರೈಃ ಕ್ಷೀರಾದಿಭಿಃ ಶ್ರೀಣಂತೋ ಮಿಶ್ರಯಂತೋ ವಯಮುತ್ತರಮುದ್ಗತತರಮಪ್ಸು ವಸತೀವರೀಷು ಸಂಸ್ಥಿತಂ ತ್ವಾಂ ಮದಾಮಃ । ಮಂದಾಮಹೇ । ಸ್ತುಮಃ

॥ ಪ್ರತಿಪದಾರ್ಥ ॥

( ಎಲೈ ಸೋಮದೇವನೇ ) **ಅದಬ್ಧಃ**—ಯಾರಿಂದಲೂ ಹಿಂಸಿಸಲ್ಪಡದವನೂ । **ಸುರಭಿಂತರಃ**—ಅತಿಶಯವಾದ ಸುಗಂಧವುಳ್ಳವನೂ ಆದ ನೀನು । **ನೂನಂ**—ಈಗ । **ಪುನಾನಃ**—ಶುದ್ಧಿಯನ್ನು ಹೊಂದಿದವನಾಗಿ **ಅವಿಭಿಃ**—ದಶಾಪವಿತ್ರದಿಂದ । **ಪರಿ ಸ್ರವ**—ಹೊರಕ್ಕೆ ಸ್ರವಿಸು । **ಸುತೇ ಚಿತ್**—ನಿನ್ನನ್ನು ಹಿಂಡಿದ ಕಾಲದಲ್ಲಿ । **ಅಪ್ಸು**—ವಸತೀವರಿಗಳಲ್ಲಿ । **ಉತ್ತರಂ**—ಉನ್ನತಸ್ಥಾನವನ್ನು ಪಡೆದ । **ತ್ವಾ**—ನಿನ್ನನ್ನು । **ಅಂಧಸಾ**—ಹವಿಸ್ಸಿನೊಡನೆಯೂ । **ಗೋಭಿಃ**—ಕ್ಷೀರಾದಿಗಳೊಡನೆಯೂ । **ಶ್ರೀಣಂತಃ**—ಮಿಶ್ರಮಾಡುತ್ತ । **ಮದಾಮಃ**—ಸ್ತುತಿಸುತ್ತೇವೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಯಾರಿಂದಲೂ ಹಿಂಸಿಸಲ್ಪಡದವನೂ ಅತಿಶಯವಾದ ಸುಗಂಧವುಳ್ಳವನೂ ಆದ ನೀನು ಈಗ ಶುದ್ಧಿಯನ್ನು ಹೊಂದಿದವನಾಗಿ ದಶಾಪವಿತ್ರದಿಂದ ಹೊರಕ್ಕೆ ಸ್ರವಿಸು. ನಿನ್ನನ್ನು ಹಿಂಡಿದ ಕಾಲದಲ್ಲಿ ವಸತೀವರಿಗಳಲ್ಲಿ ಉನ್ನತಸ್ಥಾನವನ್ನು ಪಡೆದ ನಿನ್ನನ್ನು ಹವಿಸ್ಸಿನೊಡನೆಯೂ ಕ್ಷೀರಾದಿಗಳೊಡನೆಯೂ ಮಿಶ್ರಮಾಡುತ್ತ ಸ್ತುತಿಸುತ್ತೇವೆ.

English Translation

(Soma) who are unassailable, who are most fragrant, flow around now being purified by the fleece; being effused we praise you eminent in the waters mixing you with food and the (products of the) cows.

॥ ಸಂಹಿತಾಪಾಠಃ ॥

ಪರಿ ಸುವಾನಶ್ಚಕ್ಷಸೇ ದೇವಮಾದನಃ ಕ್ರತುರಿಂದುರ್ವಿಚಕ್ಷಣಃ ॥ ೩ ॥

॥ ಪದಪಾಠಃ ॥

ಪರಿ । ಸುವಾನಃ । ಚಕ್ಷಸೇ । ದೇವಽಮಾದನಃ । ಕ್ರತುಃ । ಇಂದುಃ । ವಿಽಚಕ್ಷಣಃ ॥ ೩ ॥

॥ ಸಾಯಣಭಾಷ್ಯಂ ॥

ಸುವಾನೋಽಭಿಷೂಯಮಾಣಃ ಸೋಮಶ್ಚಕ್ಷಸೇ ಸರ್ವೇಷಾಂ ದರ್ಶನಾಯ ಪರಿ ಸ್ರವತಿ । ಕೀದೃಶಃ । ದೇವಮಾದನೋ ದೇವಾನಾಂ ತರ್ಪಯಿತಾ ಕ್ರತುಃ ಕರ್ತಾ ಇಂದುಃ ಪಾತ್ರೇಷು ಕ್ಷರಣಶೀಲೋ ದೀಪ್ತೋ ವಾ ವಿಚಕ್ಷಣಃ ಸರ್ವಸ್ಯ ವಿದ್ರಷ್ಟಾ ॥

॥ ಪ್ರತಿಪದಾರ್ಥ ॥

ದೇವಮಾದನಃ—ದೇವತೆಗಳಿಗೆ ತೃಪ್ತಿಕಾರಕನೂ । ಕ್ರತುಃ—ಕರ್ಮವಾಹಕನೂ । ವಿಚಕ್ಷಣಃ—ಸೂಕ್ಷ್ಮದೃಷ್ಟಿಯುಳ್ಳವನೂ ಆದ । ಇಂದುಃ—ಸೋಮನು । ಸುವಾನಃ—ಹಿಂಡಲ್ಪಟ್ಟವನಾಗಿ । ಚಕ್ಷಸೇ—ಸಕಲರ ಗೋಚರಕ್ಕಾಗಿ । ಪರಿ (ಸ್ರವತೇ)—ಪ್ರವಿಸುತ್ತಾನೆ ।

॥ ಭಾವಾರ್ಥ ॥

ದೇವತೆಗಳಿಗೆ ತೃಪ್ತಿಕಾರಕನೂ, ಕರ್ಮವಾಹಕನೂ, ಸೂಕ್ಷ್ಮದೃಷ್ಟಿಯುಳ್ಳವನೂ ಆದ ಸೋಮನು ಹಿಂಡಲ್ಪಟ್ಟವನಾಗಿ ಸಕಲರ ಗೋಚರಕ್ಕಾಗಿ ಪ್ರವಿಸುತ್ತಾನೆ.

English Translation

Being effused the Indu flows so as to be seen (of all) the exhilarator of the gods, the agent (in holy acts), the observer of all.

॥ ಸಂಹಿತಾಪಾಠಃ ॥

ಪುನಾನಃ ಸೋಮ ಧಾರಯಾಪೋ ವಸಾನೋ ಅರ್ಷಸಿ ।
ಆ ರತ್ನಧಾ ಯೋನಿಮೃತಸ್ಯ ಸೀದಸ್ಯುತ್ಸೋ ದೇವ ಹಿರಣ್ಯಯಃ ॥ ೪ ॥

॥ ಪದಪಾಠಃ ॥

ಪುನಾನಃ । ಸೋಮ । ಧಾರಯಾ । ಅಪಃ । ವಸಾನಃ । ಅರ್ಷಸಿ ।
ಆ । ರತ್ನಽಧಾಃ । ಯೋನಿಂ । ಋತಸ್ಯ । ಸೀದಸಿ । ಉತ್ಸಃ । ದೇವ । ಹಿರಣ್ಯಯಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸೋಮ ಪುನಾನಃ ಪೂಯಮಾನಸ್ತ್ವಮಪ ಉದಕಾನಿ ವಸತೀವರ್ಯಾಖ್ಯಾನಿ ವಸಾನ ಆಚ್ಛಾದಯನ್ ಧಾರಯಾರ್ಷಸಿ । ಪವಿತ್ರಂ ಗಚ್ಛಸಿ । ತತೋ ರತ್ನಧಾ ರತ್ನಾನಾಂ ದಾತಾ ತ್ವಮೃತಸ್ಯ

**ಸತ್ಯಭೂತಸ್ಯ ಯಜ್ಞಸ್ಯ ಯೋನಿಂ ಸ್ಥಾನಮಾ ಸೀದಸಿ** । **ಹೇ ದೇವ ದ್ಯೋತಮಾನ ಸೋಮ ಉತ್ಸಃ ಪ್ರಸ್ಯಂದನಶೀಲಸ್ತ್ವಂ ಹಿರಣ್ಯಯೋ ಹಿರಣ್ಯಯೋ ಹಿರಣ್ಯಸ್ಯೋತ್ಪತ್ತಿಸ್ಥಾನಂ ಖಲು । ಯದ್ವಾ । ದೇವಾನಾಂ ಹಿತರಮಣೀಯೋ ಭವಸಿ** ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೆ । **ಪುನಾನಃ**—ಶುದ್ಧಿಯನ್ನು ಹೊಂದುವ ನೀನು । **ಅಪಃ**—ವಸತೀವರ್ಯಾದ್ಯುದಕಗಳನ್ನು । **ವಸಾನಃ**—ಆವರಿಸುತ್ತ । **ಧಾರಯಾ**—ನಿನ್ನ ಧಾರಾರೂಪದಿಂದ । **ಅರ್ಷಸಿ**—ದಶಾಪವಿತ್ರಕ್ಕೆ ಹೋಗುತ್ತೀಯೆ । **ರತ್ನಧಾಃ**—ಸಂಪತ್ಪ್ರದನಾದ ನೀನು । **ಋತಸ್ಯ**—ಸತ್ಯಾತ್ಮಕವಾದ ಯಜ್ಞದ । **ಯೋನಿಂ**—ಸ್ಥಾನವನ್ನು ಆಕ್ರಮಿಸಿ । **ಆ ಸೀದಸಿ**—ಕುಳಿತುಕೊಳ್ಳುತ್ತೀಯೆ । **ದೇವ**—ಪ್ರಕಾಶಮಾನನಾದ ಎಲೈ ಸೋಮನೇ । **ಉತ್ಸಃ**—ಸ್ರವಣಶೀಲನಾದ ನೀನು । **ಹಿರಣ್ಯಯಃ**—ದೇವತೆಗಳಿಗೆ ಹಿತಕರನೂ ಆಕರ್ಷಕನೂ ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದತಕ್ಕ ನೀನು ವಸತೀವರ್ಯಾದ್ಯುದಕಗಳನ್ನು ಆವರಿಸುತ್ತ ನಿನ್ನ ಧಾರಾರೂಪದಿಂದ ದಶಾಪವಿತ್ರಕ್ಕೆ ಹೋಗುತ್ತೀಯೆ. ಸಂಪತ್ಪ್ರದನಾದ ನೀನು ಸತ್ಯಾತ್ಮಕವಾದ ಯಜ್ಞದ ಸ್ಥಾನವನ್ನು ಆಕ್ರಮಿಸಿ ಕುಳಿತುಕೊಳ್ಳುತ್ತೀಯೆ. ಪ್ರಕಾಶಮಾನನಾದ ಎಲೈ ಸೋಮನೇ, ಸ್ರವಣಶೀಲನಾದ ನೀನು ದೇವತೆಗಳಿಗೆ ಹಿತಕರನೂ ಆಕರ್ಷಕನೂ ಆಗಿದ್ದೀಯೆ.

English Translation

Undergoing purification you flow Soma in a stream clothed in the (consecrated) waters; the giver of wealth you sit on the place of sacrifice, divine (Soma), who flow forth, who are the origin of gold.

॥ ಸಂಹಿತಾಪಾಠಃ ॥

ದುಹಾನ ಊಧರ್ದಿವ್ಯಂ ಮಧು ಪ್ರಿಯಂ ಪ್ರತ್ನಂ ಸಧಸ್ಥಮಾಸದತ್ ।

ಆಪೃಚ್ಛ್ಯಂ ಧರುಣಂ ವಾಜ್ಯರ್ಷತಿ ನೃಭಿರ್ಧೂತೋ ವಿಚಕ್ಷಣಃ ॥ ೫ ॥

॥ ಪದಪಾಠಃ ॥

ದುಹಾನಃ । ಊಧಃ । ದಿವ್ಯಂ । ಮಧು । ಪ್ರಿಯಂ । ಪ್ರತ್ನಂ । ಸಧಽಸ್ಥಂ । ಆಸದತ್ ।

ಆಽಪೃಚ್ಛ್ಯಂ । ಧರುಣಂ । ವಾಜೀ । ಅರ್ಷತಿ । ನೃಽಭಿಃ । ಧೂತಃ । ವಿಽಚಕ್ಷಣಃ

॥ ಸಾಯಣಭಾಷ್ಯಂ ॥

ಮಧು ಮದಕರಂ ಪ್ರಿಯಂ ಪ್ರೀಣನಕಾರಿ ದಿವ್ಯಂ ದಿವಿ ಭವಮೂಧಃ ಸೋಮವಲ್ಲೀಲಕ್ಷಣಂ ದುಹಾನಃ ಸೋಮಃ ಪ್ರತ್ನಂ ಪುರಾತನಂ ಸಧಸ್ಥಂ । ಸಹ ತಿಷ್ಠಂತ್ಯತ್ರೇತಿ ಸಧಸ್ಥಂ ಸ್ಥಾನಂ । ಆಂತರಿಕ್ಷಂ ಸ್ಥಾನಮಾಸದತ್ । ಆಸೀದತಿ ॥ ಸದೇರ್ಲುಙಿ ರೂಪಂ ॥ ತತ ಆಪೃಚ್ಛ್ಯಂ ಕರ್ಮಣ್ಯಾಪ್ರಷ್ಟವ್ಯಂ ಧರುಣಂ ಕರ್ಮಣೋ ಧಾರಯಿತಾರಂ ಯಜಮಾನಂ ವಾಜ್ಯನ್ನವಾನ್ಸೋಮೋಽರ್ಷತಿ । ತಸ್ಮಾ ಅನ್ನಂ ಪ್ರಾಪ್ತುಮಭಿಗಚ್ಛತಿ । ಕೀದೃಶಃ । ನೃಭಿಃ ಕರ್ಮನೇತೃಭಿರ್ಋತ್ವಿಗ್ಭಿರ್ಧೂತೋಽದಾಭ್ಯಗ್ರಹೇ ಪರಿಶೋಧಿತಃ । ತೈರೇನಂ ಚತುರಾಧೂನೋತಿ ಪಂಚಕೃತ್ವಃ ಸಪ್ತಕೃತ್ವೋ ವೇತ್ಯಾಪಸ್ತಂಬೇನ ಸೂತ್ರಿತಂ । ವಿಚಕ್ಷಣಃ ಸರ್ವಸ್ಯ ವಿದ್ರಷ್ಟಾ ।

॥ ಪ್ರತಿಪದಾರ್ಥ ॥

**ಮಧು**—ರುಚಿಕರವಾದುದೂ । **ಪ್ರಿಯಂ**—ಹಿತವಾದುದೂ । **ದಿವ್ಯಂ**—ದ್ಯುಲೋಕೋತ್ಪನ್ನವಾದುದೂ ಆದ । **ಊಧಃ**—ಕೆಚ್ಚಲನ್ನು (ಸೋಮಲತೆಯನ್ನು) । **ದುಹಾನಃ**—ಕರೆಯುತಕ್ಕ ಸೋಮನು । **ಸಧಸ್ಥಂ**—ಅಂತರಿಕ್ಷಸ್ಥಾನವನ್ನು । **ಆಸದತ್**—ಆಶ್ರಯಿಸುತ್ತಾನೆ । **ನೃಭಿಃ**—ಋತ್ವಿಕ್ಕುಗಳಿಂದ । **ಧೂತಃ**—ಶೋಧಿಸಲ್ಪಟ್ಟವನೂ । **ವಿಚಕ್ಷಣಃ**—ಸೂಕ್ಷ್ಮದೃಷ್ಟಿಯುಳ್ಳವನೂ । **ವಾಜೀ**—ಬಲಯುತನೂ ಆದ ಸೋಮನು । **ಆಪೃಚ್ಛ್ಯಂ**—ಪ್ರಶಸ್ಯನೂ । **ಧರುಣಂ**—ಕರ್ಮಧಾರಕನೂ ಆದ ಯಜಮಾನನಲ್ಲಿಗೆ । **ಅರ್ಷತಿ**—ಹೋಗಿ ಸೇರುತ್ತಾನೆ.

॥ ಭಾವಾರ್ಥ ॥

ರುಚಿಕರವಾದುದೂ, ಹಿತವಾದುದೂ, ದ್ಯುಲೋಕೋತ್ಪನ್ನವಾದುದೂ ಆದ ಕೆಚ್ಚಲನ್ನು (ಸೋಮಲತೆಯನ್ನು) ಕರೆಯುತಕ್ಕ ಸೋಮದೇವನು ಅಂತರಿಕ್ಷಸ್ಥಾನವನ್ನು ಆಶ್ರಯಿಸುತ್ತಾನೆ. ಋತ್ವಿಕ್ಕುಗಳಿಂದ ಶೋಧಿಸಲ್ಪಟ್ಟವನೂ, ಸೂಕ್ಷ್ಮದೃಷ್ಟಿಯುಳ್ಳವನೂ, ಬಲಯುತನೂ ಆದ ಸೋಮನು ಪ್ರಶಸ್ಯನೂ ಕರ್ಮಧಾರಕನೂ ಆದ ಯಜಮಾನನಲ್ಲಿಗೆ ಹೋಗಿ ಸೇರುತ್ತಾನೆ.

## English Translation

Milking the exhilarating agreeable celestial udder (the Soma) sits down on its ancient place of aggregation ( the firmament ) : food-giving, cleansed by the priests, observant it flows to the commendable worshipper.

ಸಂಹಿತಾಪಾಠಃ ॥

ಪುನಾನಃ ಸೋಮ ಜಾಗೃವಿರವ್ಯೋ ವಾರೇ ಪರಿ ಪ್ರಿಯಃ ।

ತ್ವಂ ವಿಪ್ರೋ ಅಭವೋಽಙ್ಗಿರಸ್ತಮೋ ಮಧ್ವಾ ಯಜ್ಞಂ ಮಿಮಿಕ್ಷ ನಃ ॥

॥ ಪದಪಾಠಃ ।

ಪುನಾನಃ । ಸೋಮ । ಜಾಗೃವಿಃ । ಅವ್ಯಃ । ವಾರೇ । ಪರಿ । ಪ್ರಿಯಃ ।

ತ್ವಂ । ವಿಪ್ರಃ । ಅಭವಃ । ಅಂಗಿರಃऽತಮಃ । ಮಧ್ವಾ । ಯಜ್ಞಂ । ಮಿಮಿಕ್ಷ । ನಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಸೋಮ ಜಾಗೃವಿರ್ಜಾಗರಣಶೀಲಃ ಪ್ರಿಯಃ ಪ್ರೀಣಯಿತಾ ತ್ವಂ ಪುನಾನಃ ಪೂಯಮಾನಃ ಸನ್ನವ್ಯೋऽವೇರ್ವಾರೇ ವಾಲೇ ಪವಿತ್ರೇ ಪರಿ ಕ್ಷರಸಿ । ಕಿಂಚ ವಿಪ್ರೋ ಮೇಧಾವೀ ತ್ವಮಂಗಿರಸ್ತಮೋऽಂಗಿರಸಾಂ ವರಿಷ್ಠಃ ಪಿತೄಣಾಂ ನೇತಾಭವಃ । ಭವಸಿ । ಸ ತ್ವಂ ನೋऽಸ್ಮದೀಯಂ ಯಜ್ಞಂ ಮಧ್ವಾ ಮಧುನಾತ್ಮೀಯೇನ ರಸೇನ ಮಿಮಿಕ್ಷ । ಸಿಂಚ ॥ ಮಿಹೇಃ ಸೇಚನಾರ್ಥಸ್ಯ ಸನಿ ರೂಪಂ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಜಾಗೃವಿಃ**—ಎಚ್ಚರವುಳ್ಳವನೂ । **ಪ್ರಿಯಃ**—ಹಿತಕರನೂ । **ಪುನಾನಃ**—ಶುದ್ಧಿಯನ್ನು ಹೊಂದಿದವನೂ ಆದ ನೀನು । **ಅವ್ಯಃ**—ಉಣ್ಣೆಯ । **ವಾರೇ**—ನಾರುಗಳ ಮೂಲಕ । **ಪರಿ**—ಸ್ರವಿಸುತ್ತೀಯೆ । **ವಿಪ್ರಃ**—ಮೇಧಾವಿಯಾದ । **ತ್ವಂ**—ನೀನು । **ಅಂಗಿರಸ್ತಮಃ**—ಅಂಗಿರಸ್ಸುಗಳಿಗೆಲ್ಲ ಶ್ರೇಷ್ಠನಾಗಿ । **ಅಭವಃ**—ಆಗಿದ್ದೀಯೆ । **ನಃ**—ನಮ್ಮ । **ಯಜ್ಞಂ**—ಯಜ್ಞವನ್ನು । **ಮಧ್ವಾ**—ಮಧುರವಾದ ಸೋಮರಸದಿಂದ । **ಮಿಮಿಕ್ಷ**—ಪ್ರೋಕ್ಷಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಎಚ್ಚರವುಳ್ಳವನೂ, ಹಿತಕರನೂ, ಶುದ್ಧಿಯನ್ನು ಹೊಂದಿದವನೂ ಆದ ನೀನು ಉಣ್ಣೆಯ ನಾರುಗಳ ಮೂಲಕ ಸ್ರವಿಸುತ್ತೀಯೆ. ಮೇಧಾವಿಯಾದ ನೀನು ಅಂಗಿರಸ್ಸುಗಳಲ್ಲೆಲ್ಲಾ ಶ್ರೇಷ್ಠನಾಗಿ ಆಗಿದ್ದೀಯೆ. ನಮ್ಮ ಯಜ್ಞವನ್ನು ಮಧುರವಾದ ಸೋಮರಸದಿಂದ ಪ್ರೋಕ್ಷಿಸು.

English Translation

Soma, who are purified, vigilant, agreeable (you flow ) through the woolen fleece ; you are intelligent, the chief of the Angirasas, sqrinkle our oblation with your exhilarating juice.

॥ ಸಂಹಿತಾಪಾಠಃ ॥

ಸೋಮೋ ಮೀಢ್ವಾನ್ಪವತೇ ಗಾತುವಿತ್ತಮ ಋಷಿರ್ವಿಪ್ರೋ ವಿಚಕ್ಷಣಃ ।

ತ್ವಂ ಕವಿರಭವೋ ದೇವವೀತಮ ಆ ಸೂರ್ಯಂ ರೋಹಯೋ ದಿವಿ ॥ ೭ ॥

॥ ಪದಪಾಠಃ ॥

ಸೋಮಃ । ಮೀಢ್ವಾನ್ । ಪವತೇ । ಗಾತುವಿತ್ಽತಮಃ । ಋಷಿಃ । ವಿಪ್ರಃ । ವಿಽಚಕ್ಷಣಃ ।

ತ್ವಂ । ಕವಿಃ । ಅಭವಃ । ದೇವಽವೀತಮಃ । ಆ । ಸೂರ್ಯಂ । ರೋಹಯಃ । ದಿವಿ ॥ ೭ ॥

॥ ಸಾಯಣಭಾಷ್ಯಂ ॥

ಮೀಢ್ವಾನ್ ಕಾಮಾನಾಂ ಸೇಕ್ತಾ ಸೋಮಃ ಪವತೇ । ಕ್ಷರತಿ । ಕೀದೃಶಃ । ಗಾತುವಿತ್ತಮೋಽತ್ಯಂತಂ ಮಾರ್ಗಸ್ಯ ಲಂಭಕ ಋಷಿಃ ಸರ್ವಸ್ಯ ಪ್ರದರ್ಶಕೋ ವಿಪ್ರೋ ಮೇಧಾವೀ ವಿಚಕ್ಷಣೋ ವಿದ್ರಷ್ಟಾ । ಕಿಂಚ ಕವಿಃ ಕ್ರಾಂತಪ್ರಜ್ಞಸ್ತ್ವಂ ದೇವವೀತಮೋಽತ್ಯಂತಂ ದೇವಕಾಮೋಽಭವಃ । ಭವಸಿ ಅಪಿ ಚ ದಿವಿ ದ್ಯುಲೋಕೇ ಸೂರ್ಯಮಾ ರೋಹಯಃ । ಪ್ರಾದುರ್ಭಾವಯಸಿ ॥

॥ ಪ್ರತಿಪದಾರ್ಥ ॥

**ಗಾತುವಿತ್ತಮಃ**— ಉತ್ತಮವಾದ ಮಾರ್ಗವನ್ನು ಅರಿತವನೂ **ಋಷಿಃ**—ದಿವ್ಯದೃಷ್ಟಿಯುಳ್ಳವನೂ । **ವಿಪ್ರಃ**—ಮೇಧಾವಿಯೂ । **ವಿಚಕ್ಷಣಃ**—ಸೂಕ್ಷ್ಮದೃಷ್ಟಿಯುಳ್ಳವನೂ । **ಮೀಢ್ವಾನ್**—ಕಾಮವರ್ಷಕನೂ ಆದ । **ಸೋಮಃ**—ಸೋಮನು । **ಪವತೇ**—ಪ್ರವಹಿಸುತ್ತಾನೆ (ಎಲ್ಲೆ ಸೋಮನೇ) । **ಕವಿಃ**— ಕ್ರಾಂತಪ್ರಜ್ಞನಾದ । **ತ್ವಂ**—ನೀನು । **ದೇವವೀತಮಃ**—ದೇವತೆಗಳನ್ನು ಅಪೇಕ್ಷಿಸಿದವನಾಗಿ । **ಅಭವಃ**—ಆಗಿದ್ದೀಯೆ **ದಿವಿ**—ದ್ಯುಲೋಕದಲ್ಲಿ **ಸೂರ್ಯಂ**—ಸೂರ್ಯನನ್ನು **ಆ ರೋಹಯಃ**—ಏರಿಸಿದ್ದೀಯೆ.

॥ ಭಾವಾರ್ಥ ॥

ಉತ್ತಮವಾದ ಮಾರ್ಗವನ್ನು ಅರಿತವನೂ, ದಿವ್ಯದೃಷ್ಟಿಯುಳ್ಳವನೂ, ಮೇಧಾವಿಯೂ, ಸೂಕ್ಷ್ಮದೃಷ್ಟಿಯುಳ್ಳವನೂ, ಕಾಮವರ್ಷಕನೂ ಆದ ಸೋಮನು ಪ್ರವಹಿಸುತ್ತಾನೆ. ಎಲ್ಲೆ ಸೋಮದೇವನೇ, ಕ್ರಾಂತಪ್ರಜ್ಞನಾದ ನೀನು ದೇವತೆಗಳನ್ನು ಅಪೇಕ್ಷಿಸುವವನಾಗಿ ಆಗಿದ್ದೀಯೆ. ದ್ಯುಲೋಕದಲ್ಲಿ ಸೂರ್ಯನನ್ನು ಸ್ಥಾಪಿಸಿದ್ದೀಯೆ.

## English Translation

Soma flows forth the showerer of benefits, the best of path-finders, a Rishi, a sage, all-discriminating : you are a seer, most devoted to the gods ; you have made the sun to mount the sky.

॥ ಸಂಹಿತಾಪಾಠಃ ॥

ಸೋಮ ಉ ಷುವಾಣಃ ಸೋತೃಭಿರಧಿ ಷ್ಣುಭಿರವೀನಾಂ ।

ಅಶ್ವಯೇವ ಹರಿತಾ ಯಾತಿ ಧಾರಯಾ ಮಂದ್ರಯಾ ಯಾತಿ ಧಾರಯಾ ॥

॥ ಪದಪಾಠಃ ॥

ಸೋಮಃ । ಊಂ ಇತಿ । ಸುವಾನಃ । ಸೋತೃಽಭಿಃ । ಅಧಿ । ಸ್ನುಽಭಿಃ । ಅವೀನಾಂ ।

ಅಶ್ವಯಾಽಇವ । ಹರಿತಾ । ಯಾತಿ । ಧಾರಯಾ । ಮಂದ್ರಯಾ । ಯಾತಿ । ಧಾರಯಾ ॥ ೮ ॥

॥ ಸಾಯಣಭಾಷ್ಯಂ ॥

ಸೋತೃಭಿರಭಿಷುಣ್ವದ್ಭಿರ್ಋತ್ವಿಗ್ಭಿಃ ಸುವಾನೋಽಭಿಷೂಯಮಾಣಃ ಸೋಮೋಽವೀನಾಂ ಸ್ನುಭಿಃ । ಮಾಂಸ್ಪೃತ್ಸ್ನೂನಾಮುಪಸಂಖ್ಯಾನಂ । ಪಾ. ೬-೧-೬೩-೧ । ಇತಿ ಸಾನುಶಬ್ದಸ್ಯ ಸ್ನುಭಾವಃ ॥ ಸಮುಚ್ಛ್ರಿತೈರ್ವಾಲೈಃ ಪವಿತ್ರೈರಧಿ ಯಾತಿ । ಅಧಿಕಂ ಗಚ್ಛತಿ । ಉ ಇತಿ ಪ್ರಸಿದ್ಧೌ । ಅಶ್ವಯೇವ ಬಡವಯೇವ ಹರಿತಾ ಹರಿತವರ್ಣಯಾ ಧಾರಯಾ ಯಾತಿ । ಮಂದ್ರಯಾ ಮದಕಾರಿಣ್ಯಾ ಧಾರಯಾ ದ್ರೋಣಕಲಶಮಭಿಗಚ್ಛತಿ ॥

॥ ಪ್ರತಿಪದಾರ್ಥ ॥

ಸೋತೃಭಿಃ—ಹಿಂಡತಕ್ಕ ಋತ್ವಿಕ್ಕುಗಳಿಂದ । ಸುವಾನಃ—ಹಿಂಡಲ್ಪಡತಕ್ಕ । ಸೋಮಃ—ಸೋಮ ದೇವನು । ಅವೀನಾಂ—ದಶಾಪವಿತ್ರಗಳ । ಸ್ನುಭಿಃ—ನಾರುಗಳ ಮೂಲಕ । ಅಧಿ ಯಾತಿ—ವಿಶೇಷವಾಗಿ ಪ್ರವಿಸುತ್ತಾನೆ । ಅಶ್ವಯೇವ—ಅಶ್ವವನ್ನು ಹತ್ತಿ ಹೋಗುವಂತೆ । ಹರಿತಾ—ಪಚ್ಚೆವರ್ಣವುಳ್ಳ । ಧಾರಯಾ—ಪ್ರವಾಹದಿಂದ । ಯಾತಿ—ಪ್ರವಿಸುತ್ತಾನೆ । ಮಂದ್ರಯಾ—ಹಿತಕರವಾದ । ಧಾರಯಾ—ಪ್ರವಾಹದಿಂದ ಮುನ್ನುಗ್ಗುತ್ತಾನೆ.

॥ ಭಾವಾರ್ಥ ॥

ಅಭಿಷವಕರ್ಮನಿರತರಾದ ಋತ್ವಿಕ್ಕುಗಳಿಂದ ಹಿಂಡಲ್ಪಡತಕ್ಕ ಸೋಮದೇವನು ದಶಾಪವಿತ್ರಗಳ ನಾರುಗಳ ಮೂಲಕ ವಿಶೇಷವಾಗಿ ಪ್ರವಿಸುತ್ತಾನೆ. ಅಶ್ವವನ್ನು ಹತ್ತಿಹೋಗುವಂತೆ ಪಚ್ಚೆವರ್ಣವುಳ್ಳ ಪ್ರವಾಹದಿಂದ ಪ್ರವಿಸುತ್ತಾನೆ. ಹಿತಕರವಾದ ಪ್ರವಾಹದಿಂದ ಮುನ್ನುಗ್ಗುತ್ತಾನೆ.

## English Translation

Effused by the effusers Soma is poured out upon the elevated fleeces; and proceeds with its green-tinted stream, as on a mare, proceeds with its exhilarating stream.

॥ ಸಂಹಿತಾಪಾಠಃ ॥

ಅನೂಪೇ ಗೋಮಾನ್ಗೋಭಿರಕ್ಷಾಃ ಸೋಮೋ ದುಗ್ಧಾಭಿರಕ್ಷಾಃ ।

ಸಮುದ್ರಂ ನ ಸಂವರಣಾನ್ಯಗ್ಮನ್ಮಂದೀ ಮದಾಯ ತೋಶತೇ ॥ ೯ ॥

॥ ಪದಪಾಠಃ ॥

ಅನೂಪೇ । ಗೋಽಮಾನ್ । ಗೋಭಿಃ । ಅಕ್ಷಾರಿತಿ । ಸೋಮಃ । ದುಗ್ಧಾಭಿಃ । ಅಕ್ಷಾರಿತಿ ।

ಸಮುದ್ರಂ । ನ । ಸಂಽವರಣಾನಿ । ಅಗ್ಮನ್ । ಮಂದೀ । ಮದಾಯ । ತೋಶತೇ ॥ ೯ ॥

। ಸಾಯಣಭಾಷ್ಯಂ ।

ಗೋಮಾನ್ಗೋಯುಕ್ತಃ ಸೋಮೋಽನೂಪೇ ನಿಮ್ನೇ ದೇಶೇ ಕಲಶೇ ಗೋಭಿರ್ಗೋವಿಕಾರೈಃ ಕ್ಷೀರಾದಿಭಿಃ ಸಹಾಕ್ಷಾಃ । ಕ್ಷರತಿ । ತದೇವೋಚ್ಯತೇ । ಸ ಸೋಮ ಆತ್ಮನೋ ಮಿಶ್ರಣಾರ್ಥಂ ದುಗ್ಧಾಭಿರ್ಗೋಭಿಃ ಸಹಾಕ್ಷಾಃ । ಕ್ಷರತಿ ॥ ಕ್ಷರತೇರ್ಲುಙಿ ರೂಪಂ ॥ ಕಿಂಚ ಸಮುದ್ರಂ ನ ಯಥಾ ಸಮುದ್ರಮುದಕಾನಿ ಗಚ್ಛಂತಿ ತದ್ವತ್ಸಂವರಣಾನಿ ಸಂಭಜನೀಯಾನಿ ರಸರೂಪಾಣ್ಯನ್ನಾನಿ ದ್ರೋಣಕಲಶಮಗ್ಮನ್ । ಗಚ್ಛಂತಿ ॥ ಗಮೇರ್ಲುಙಿ ಚ್ಲೇರ್ಲುಙಿ ರೂಪಂ ॥ ಕಿಂಚ ಮಂದೀ ಮದಕರಃ ಸೋಮೋ ಮದಾಯ ಮದಾರ್ಥಂ ತೋಶತೇ । ಹನ್ಯತೇ । ಅಭಿಷೂಯತೇ । ತೋಶತಿರ್ವಧಕರ್ಮಾ ॥

। ಪ್ರತಿಪದಾರ್ಥ ।

**ಗೋಮಾನ್**—ಕ್ಷೀರಯುಕ್ತನಾದ ಸೋಮನು । **ಅನೂಪೇ**—ನಿಮ್ನ ಪ್ರದೇಶದಲ್ಲಿರುವ ಕಲಶಕ್ಕೆ । **ಗೋಭಿಃ**—ಕ್ಷೀರಾದಿಗಳೊಡನೆ । **ಅಕ್ಷಾಃ**—ಸ್ರವಿಸುತ್ತಾನೆ । **ಸೋಮಃ**—ಸೋಮನು । **ದುಗ್ಧಾಭಿಃ**—ಕ್ಷೀರಾದಿಗಳೊಡನೆ । **ಅಕ್ಷಾಃ**—ಸ್ರವಿಸುತ್ತಾನೆ । **ಸಮುದ್ರಂ ನ**—ಉದಕಗಳು ಸಮುದ್ರವನ್ನು ಹೋಗಿ ಸೇರುವಂತೆ । **ಸಂವರಣಾನಿ**—ಪೂಜ್ಯವಾದ ಆವನ ರಸಗಳು । **ಅಗ್ಮನ್**—ದ್ರೋಣಕಲಶಕ್ಕೆ ಹೋಗಿ ಸೇರುತ್ತವೆ । **ಮಂದೀ**—ಹರ್ಷಕರನಾದ ಸೋಮನು । **ಮದಾಯ**—ದೇವತೆಗಳ ಹರ್ಷಕ್ಕಾಗಿ । **ತೋಶತೇ**—ಹಿಂಡಲ್ಪಡುತ್ತಾನೆ.

॥ ಭಾವಾರ್ಥ ।

ಕ್ಷೀರಯುಕ್ತನಾದ ಸೋಮನು ನಿಮ್ನಪ್ರದೇಶದಲ್ಲಿರುವ ಕಲಶಕ್ಕೆ ಕ್ಷೀರಾದಿಗಳೊಡನೆ ಹೋಗಿ ಸೇರುತ್ತಾನೆ. ಕ್ಷೀರಾದಿಗಳೊಡನೆ ಮಿಶ್ರಿತನಾಗಿ ಪ್ರವಹಿಸುತ್ತಾನೆ. ಉದಕಗಳು ಸಮುದ್ರವನ್ನು ಹೋಗಿ ಸೇರುವಂತೆ ಪೂಜ್ಯವಾದ ಆವನ ರಸಗಳು ದ್ರೋಣಕಲಶಕ್ಕೆ ಹೋಗಿ ಸೇರುತ್ತವೆ. ಹರ್ಷಕಾರಕನಾದ ಸೋಮನು ದೇವತೆಗಳ ಹರ್ಷಕ್ಕಾಗಿ ಹಿಂಡಲ್ಪಡುತ್ತಾನೆ.

## English Translation

Soma combined with the produce of the cows flows with the cows into the pitcher, he flows with the milked cows ; his enjoyable juices go ( to the pitcher as waters ) to the ocean, the exhilarating (Soma) is expressed for the exhilaration (of the gods),

॥ ಸಂಹಿತಾಪಾಠಃ ॥

ಆ ಸೋಮ ಸುವಾನೋ ಅದ್ರಿಭಿಸ್ತಿರೋ ವಾರಾಣ್ಯವ್ಯಯಾ ।
ಜನೋ ನ ಪುರಿ ಚಮ್ವೋರ್ವಿಶದ್ಧರಿಃ ಸದೋ ವನೇಷು ದಧಿಷೇ ॥ ೧೦ ॥

॥ ಪದಪಾಠಃ ॥

ಆ । ಸೋಮ । ಸುವಾನಃ । ಅದ್ರಿಽಭಿಃ । ತಿರಃ । ವಾರಾಣಿ । ಅವ್ಯಯಾ ।
ಜನಃ । ನ । ಪುರಿ । ಚಮ್ವೋಃ । ವಿಶತ್ । ಹರಿಃ । ಸದಃ । ವನೇಷು । ದಧಿಷೇ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಸೋಮ ಅದ್ರಿಭಿರ್ಗ್ರಾವಭಿಃ ಸುವಾನೋಽಭಿಷೂಯಮಾಣಸ್ತ್ವಮವ್ಯಯಾವಿಮಯಾನಿ ವಾರಾಣಿ ವಾಲಾನಿ ಪವಿತ್ರಾಣಿ ತಿರಸ್ಕುರ್ವನ್ ವ್ಯವಧಾಯಕಾನಿ ಕುರ್ವಾಣಃ ಸನ್ನಾ ಪವಸ ಇತಿ ಶೇಷಃ । ಹರಿರ್ಹರಿತವರ್ಣಃ ಸ ಸೋಮಶ್ಚಮ್ವೋರಧಿಷವಣಫಲಕಯೋರುಪರಿ ಸ್ಥಿತೇ ಕಲಶೇ ವಿಶತ್ । ಪ್ರವಿಶತಿ ತತ್ರ ದೃಷ್ಟಾಂತಃ । ಜನೋ ನ ಯಥಾ ಜನಃ ಪುರಿ ಪುರೇ ಪ್ರವಿಶತಿ । ಸ ತ್ವಂ ವನೇಷು ಕಾಷ್ಠನಿರ್ಮಿತೇಷು ಪಾತ್ರೇಷು ಸದಃ ಸ್ಥಾನಂ ದಧಿಷೇ । ಕರೋಷಿ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಅದ್ರಿಭಿಃ**—ಹಿಂಡುವ ಕಲ್ಲುಗಳಿಂದ । **ಸುವಾನಃ**—ಹಿಂಡಲ್ಪಡುವ ನೀನು । **ಅವ್ಯಯಾ**—ಉಣ್ಣೆಯ । **ವಾರಾಣಿ**—ನಾರುಗಳುಳ್ಳ ದಶಾಪವಿತ್ರವನ್ನು । **ತಿರಃ**—ದಾಟಿಕೊಂಡು । **ಆ (ಪವಸೇ)**—ಪ್ರವಹಿಸುತ್ತೀಯೆ । **ಪುರಿ**—ಪಟ್ಟಣಕ್ಕೆ । **ಜನಃ ನ**—ಪಟ್ಟಣಿಗನು ಪ್ರವೇಶಿಸುವಂತೆ । **ಹರಿಃ**—ಪಚ್ಚೆವರ್ಣವುಳ್ಳ ಸೋಮನು । **ಚಮ್ವೋಃ**—ಹಲಗೆಗಳ ಮೇಲಿರುವ ಕಲಶದೊಳಕ್ಕೆ । **ವಿಶತ್**—ಪ್ರವೇಶಿಸುತ್ತಾನೆ । **ವನೇಷು**—ಪಾತ್ರೆಗಳಲ್ಲಿ । **ಸದಃ**—ಸ್ಥಾನವನ್ನು । **ದಧಿಷೇ**—ನಿರ್ಮಿಸಿಕೊಳ್ಳುತ್ತೀಯೆ.

ಭಾವಾರ್ಥ ॥

ಎಲೈ ಸೋಮದೇವನೇ, ಹಿಂಡುವ ಕಲ್ಲುಗಳಿಂದ ಹಿಂಡಲ್ಪಡುವ ನೀನು ಉಣ್ಣೆಯ ನಾರುಗಳುಳ್ಳ ದಶಾಪವಿತ್ರವನ್ನು ದಾಟಿಕೊಂಡು ಪ್ರವಹಿಸುತ್ತೀಯೆ. ಪಟ್ಟಣಕ್ಕೆ ಪುರನಿವಾಸಿಯು ಪ್ರವೇಶಿಸುವಂತೆ ಪಚ್ಚೆವರ್ಣವುಳ್ಳ ಸೋಮನು ಹಲಗೆಗಳ ಮೇಲಿರುವ ಕಲಶಕ್ಕೆ ಪ್ರವೇಶಿಸುತ್ತಾನೆ. ಮತ್ತು ಎಲೈ ಸೋಮನೇ, ಆ ಕಲಶಪಾತ್ರೆಗಳಲ್ಲಿ ನೀನು ಸ್ಥಾನವನ್ನು ಕಲ್ಪಿಸಿಕೊಡುತ್ತೀಯೆ.

## English Translation

Expressed by the stones, Soma (passing) through the sheep's hairs green-tinted, entering the cups as a man (enters) a city, you take your seat in the wooden (vessels).

॥ ಸಂಹಿತಾಪಾಠಃ ॥

ಸ ಮಾಮೃಜೇ ತಿರೋ ಅಣ್ವಾನಿ ಮೇಷ್ಯೋ ಮೀಳ್ಹೇ ಸಪ್ತಿರ್ನ ವಾಜಯುಃ ।
ಅನುಮಾದ್ಯಃ ಪವಮಾನೋ ಮನೀಷಿಭಿಃ ಸೋಮೋ ವಿಪ್ರೇಭಿರೃಕ್ವಭಿಃ ॥

॥ ಪದಪಾಠಃ ॥

ಸಃ । ಮಮೃಜೇ । ತಿರಃ । ಅಣ್ವಾನಿ । ಮೇಷ್ಯಃ । ಮೀಳ್ಹೇ । ಸಪ್ತಿಃ । ನ । ವಾಜಽಯುಃ ।
ಅನುಽಮಾದ್ಯಃ । ಪವಮಾನಃ । ಮನೀಷಿಽಭಿಃ । ಸೋಮಃ । ವಿಪ್ರೇಭಿಃ । ಋಕ್ವಽಭಿಃ ॥ ೧೧ ॥

॥ ಸಾಯಣಭಾಷ್ಯಂ ॥

ವಾಜಯುರನ್ನಕಾಮೋಽಣ್ವಾನ್ಯಣೂನಿ ಸೂಕ್ಷ್ಮಾಣಿ ಮೇಷ್ಯೋ ಮೇಷ್ಯಾ ಅವೇ ರೋಮಾಣಿ ಪವಿತ್ರಾಣಿ ತಿರಸ್ಕುರ್ವನ್ ಸ ಸೋಮೋ ಮಮೃಜೇ । ಪರಿಶೋಧ್ಯತೇ । ಅಲಂಕ್ರಿಯತೇ ವಾ । ತತ್ರ ದೃಷ್ಟಾಂತಃ । ಸಪ್ತಿರ್ನ ಯಥಾ ಜಯಕಾಮೈರಶ್ವೋ ಮೀಳ್ಹೇ ಸಂಗ್ರಾಮೇಽಲಂಕ್ರಿಯತೇ । ಕೀದೃಶಃ । ಅನುಮಾದ್ಯೋಽನುಮದನೀಯಃ ಸರ್ವೈಃ ಪವಮಾನೋ ಮನೀಷಿಭಿರ್ಋತ್ವಿಗ್ಭಿಃ ಪೂಯಮಾನಃ ತಥರ್ಕ್ವಭಿಃ॥ ಛಂದಸೀವನಿಪಾವಿತಿ ವನಿಪ್ ॥ ಸ್ತುತಿಮದ್ಭಿರ್ವಿಪ್ರೈರ್ಮೇಧಾವಿಭಿರಭಿಷ್ಟುತೋ ಮೃಜ್ಯತೇ॥

॥ ಪ್ರತಿಪದಾರ್ಥ ॥

ಮೀಳ್ಹೇ—ಸಂಗ್ರಾಮದಲ್ಲಿ । ಸಪ್ತಿಃ ನ—ಅಶ್ವವು ಅಲಂಕರಿಸಲ್ಪಡುವಂತೆ । ವಾಜಯುಃ—ಅನ್ನಕಾಮನಾದ । ಸಃ ಸೋಮಃ—ಸೋಮದೇವನು । ಅಣ್ವಾನಿ—ಸೂಕ್ಷ್ಮವಾದ । ಮೇಷ್ಯಃ—ಉಣ್ಣೆಯ ನೂಲುಗಳನ್ನು । ತಿರಃ—ದಾಟಿದವನಾಗಿ । ಮಮೃಜೇ—ಅಲಂಕೃತನಾಗುತ್ತಾನೆ । ಅನುಮಾದ್ಯಃ—ಎಲ್ಲರಿಂದಲೂ ಪ್ರಶಂಸಿಸಲ್ಪಡುವವನೂ । ಮನೀಷಿಭಿಃ—ಮೇಧಾವಿಗಳಾದ । ಋಕ್ವಭಿಃ—ಸ್ತುತಿಕರ್ತರಿಂದ । ಪವಮಾನಃ—ಶುದ್ಧಿಗೊಳಿಸಲ್ಪಡುವವನೂ ಆದ ಸೋಮನು ಅಲಂಕೃತನಾಗುತ್ತಾನೆ.

॥ ಭಾವಾರ್ಥ ॥

ಸಂಗ್ರಾಮದಲ್ಲಿ ಅಶ್ವವು ಅಲಂಕರಿಸಲ್ಪಡುವಂತೆ, ಎಲ್ಲರಿಂದಲೂ ಪ್ರಶಂಸಿಸಲ್ಪಡುವವನೂ, ಮೇಧಾವಿಗಳಾದ ಸ್ತುತಿಕರ್ತರಿಂದ ಪ್ರವೃದ್ಧಿಗೊಳಿಸಲ್ಪಡುವವನೂ, ಅನ್ನಕಾಮನೂ ಆದ ಸೋಮದೇವನು ಉಣ್ಣೆಯ ನೂಲುಗಳನ್ನು ದಾಟಿದವನಾಗಿ ಅಲಂಕೃತನಾಗುತ್ತಾನೆ.

English Translation

Desirous of (bestowing) food, passing through the interstices of the fleece the Soma is adorned like a horse in the battle ; the Pavamana, to be rejoiced in (by all, praised) by the intelligent, the sages, the reciters of sacred songs.

॥ ಸಂಹಿತಾಪಾಠಃ ॥

ಪ್ರ ಸೋಮ ದೇವವೀತಯೇ ಸಿಂಧುರ್ನ ಪಿಪ್ಯೇ ಅರ್ಣಸಾ ।
ಅಂಶೋಃ ಪಯಸಾ ಮದಿರೋ ನ ಜಾಗೃವಿರಚ್ಛಾ ಕೋಶಂ ಮಧುಶ್ಚುತಂ॥

॥ ಪದಪಾಠಃ ॥

ಪ್ರ । ಸೋಮ । ದೇವಽವೀತಯೇ । ಸಿಂಧುಃ । ನ । ಪಿಪ್ಯೇ । ಅರ್ಣಸಾ ।
ಅಂಶೋಃ । ಪಯಸಾ । ಮದಿರಃ । ನ । ಜಾಗೃವಿಃ । ಅಚ್ಛ । ಕೋಶಂ । ಮಧುಽಶ್ಚುತಂ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಸೋಮ ದೇವವೀತಯೇ ದೇವಾನಾಂ ಪಾನಾಯ ತದರ್ಥಮರ್ಣಸಾ ವಸತೀವರ್ಯಾಖ್ಯೇನೋದಕೇನ ಪ್ರ ಪಿಪ್ಯೇ । ಪ್ರಪ್ಯಾಯಸೇ । ತತ್ರ ದೃಷ್ಟಾಂತಃ । ಸಿಂಧುರ್ನ ಯಥಾ ಸಿಂಧುರುದಕೇನ ಪ್ರಪಿಪ್ಯೇ ತದ್ವತ್॥ ಪ್ಯಾಯತೇರ್ಲಿಟಿ ಲಿಡ್ಯಙೋಶ್ಚೇತಿ ಪೀಭಾವಃ ॥ ತತಃ ಸ ತ್ವಂ ಮದಿರೋ ನ ಮದಕರಃ ಸುರಾದಿರಿವ ಜಾಗೃವಿರ್ಜಾಗರಣಶೀಲಃ । ಯದ್ವಾ । ನಃ ಸಂಪ್ರತ್ಯರ್ಥೇ । ಇದಾನೀಂ ಮದಕರೋ ಜಾಗರಣಶೀಲಸ್ತ್ವಂ ಅಂಶೋರ್ಲತಾಖಂಡಸ್ಯ ಪಯಸಾ ರಸೇನ ಮಧುಶ್ಚುತಂ ರಸಸ್ಯ ಕ್ಷಾರಯಿತಾರಂ ಕೋಶಂ ದ್ರೋಣಕಲಶಮಚ್ಛಾಭಿಗಚ್ಛಸಿ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ । ಸಿಂಧುಃ ನ—ನದಿಯು ಉದಕಗಳಿಂದ ವೃದ್ಧಿಯನ್ನು ಹೊಂದುವಂತೆ । (ತ್ವಂ—ನೀನು) । ದೇವವೀತಯೇ—ದೇವತೆಗಳ ಪಾನಾರ್ಥವಾಗಿ । ಅರ್ಣಸಾ—ವಸತೀವರ್ಯಾದ್ಯುದಕಗಳೊಡ

ಗೂಡಿ । ಪ್ರ ಪಿನ್ವೇ—ವೃದ್ಧಿಯನ್ನು ಹೊಂದುತ್ತೀಯೆ । **ಮದಿರೋ ನ**—ಹರ್ಷಕಾರಕವಾದ ಸುರಾದಿಗಳಂತೆ । **ಜಾಗೃವಿಃ**—ಎಚ್ಚರವುಳ್ಳ ನೀನು । **ಅಂಶೋಃ**—ಲತೆಯ । **ಪಯಸಾ**—ರಸದೊಡನೆ । **ಮಧುಶ್ಚುತಂ**—ಮಧುರವಾದ ರಸವನ್ನು ಸುರಿಸುವ । **ಕೋಶಂ ಅರ್ಷ**—ದ್ರೋಣಕಲಶಕ್ಕೆ ಹೋಗಿ ಸೇರುತ್ತೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನದಿಯು ಉದಕಗಳಿಂದ ವೃದ್ಧಿಯನ್ನು ಹೊಂದುವಂತೆ, ನೀನು ದೇವತೆಗಳ ಪಾನಾರ್ಥವಾಗಿ ವಸತೀವರ್ಯಾದ್ಯುದಕಗಳೊಡಗೂಡಿ ವೃದ್ಧಿಯನ್ನು ಹೊಂದುತ್ತೀಯೆ. ಹರ್ಷಕಾರಕಗಳಾದ ಸುರಾದಿಗಳಂತೆ ಎಚ್ಚರವುಳ್ಳ ನೀನು ನಿನ್ನ ಲತೆಯ ರಸದೊಡನೆ ಮಧುರವಾದ ರಸವನ್ನು ಸುರಿಸುವ ದ್ರೋಣಕಲಶಕ್ಕೆ ಹೋಗಿ ಸೇರುತ್ತೀಯೆ.

## English Translation

You are fed with water, Soma, like a river, for the banquet of the gods ; with the juice of your filament you go to honey-dropping receptacle, exhilarating, vigilant.

॥ ಸಂಹಿತಾಪಾಠಃ ॥

ಆ ಹರ್ಯತೋ ಅರ್ಜುನೇ ಅತ್ಕೇ ಅವ್ಯತ ಪ್ರಿಯಃ ಸೂನುರ್ನ ಮರ್ಜ್ಯಃ ।
ತಮೀಂ ಹಿನ್ವಂತ್ಯಪಸೋ ಯಥಾ ರಥಂ ನದೀಷ್ವಾ ಗಭಸ್ತ್ಯೋಃ ॥ ೧೩ ॥

॥ ಪದಪಾಠಃ ॥

ಆ । ಹರ್ಯತಃ । ಅರ್ಜುನೇ । ಅತ್ಕೇ । ಅವ್ಯತ । ಪ್ರಿಯಃ । ಸೂನುಃ । ನ । ಮರ್ಜ್ಯಃ ।
ತಂ । ಈಂ । ಹಿನ್ವಂತಿ । ಅಪಸಃ । ಯಥಾ । ರಥಂ । ನದೀಷು । ಆ । ಗಭಸ್ತ್ಯೋಃ ॥ ೧೩ ॥

॥ ಸಾಯಣಭಾಷ್ಯಂ ॥

ಹರ್ಯತಃ ಸ್ಪೃಹಣೀಯಃ ಪ್ರಿಯಃ ಪ್ರೀಣಯಿತಾ ಸೂನುರ್ನ ಸೂನುರಿವ ಮರ್ಜ್ಯೋ ಮಾರ್ಜನೀಯಃ ಸೋಮೋಽರ್ಜುನೇಽರ್ಜುನವರ್ಣೇಽತ್ಕೇ ರೂಪೇ ಪವಿತ್ರ ಆವ್ಯತ । ಆವೃಣೋತಿ । ತಮೀಮೇನಂ ಸೋಮಮಂಗುಲಯೋ ನದೀಷು ನದಮಾನಾಸು ವಸತೀವರೀಷು ಗಭಸ್ತ್ಯೋರ್ಬಾಹ್ವೋರಾಭಿಮುಖ್ಯೇನ ಹಿನ್ವಂತಿ । ಪ್ರೇರಯಂತಿ । ತತ್ರ ದೃಷ್ಟಾಂತಃ । ಅಪಸೋ ಯಥಾ ವೇಗವಂತೋ ಜನಾ ರಥಂ ಸಂಗ್ರಾಮೇಷು ಪ್ರೇರಯಂತಿ ತದ್ವತ್ ॥

॥ ಪ್ರತಿಪದಾರ್ಥ ॥

**ಹರ್ಯತಃ**—ಆಕರ್ಷಕನೂ । **ಪ್ರಿಯಃ**—ಪ್ರೀತಿಕಾರಕನೂ ಆದ । **ಸೂನುಃ ನ**—ಪುತ್ರನಂತೆ । **ಮರ್ಜ್ಯಃ**—ಶುದ್ಧ್ಯರ್ಹನಾದ ಸೋಮನು । **ಅರ್ಜುನೇ**—ಶುಕ್ಲವರ್ಣವುಳ್ಳ । **ಅತ್ಕೇ**—ವಸ್ತ್ರದಿಂದ (ಪವಿತ್ರದ ಉಣ್ಣೆಯಿಂದ) । **ಆ ಅವ್ಯತ**—ಆಚ್ಛಾದಿತನಾಗಿ ಅಲಂಕೃತನಾಗುತ್ತಾನೆ । **ಅಪಸಃ**—ಶಕ್ತಿಯುತರಾದವರು । **ರಥಂ ಯಥಾ**—ತಮ್ಮ ರಥಗಳನ್ನು ಸಂಗ್ರಾಮಕ್ಕೆ ಪ್ರೇರಿಸುವಂತೆ । **ತಮೀಂ**—ಇದೇ ಸೋಮನನ್ನು । **ನದೀಷು**—ವಸತೀವರ್ಯಾದಿಗಳೊಳಕ್ಕೆ । **ಗಭಸ್ತ್ಯೋಃ**—ತಮ್ಮ ಬಾಹುಗಳಿಂದ । **ಆ ಹಿನ್ವಂತಿ**—ಪ್ರೇರಿಸಿಕಳುಹುತ್ತಾರೆ.

॥ ಭಾವಾರ್ಥ ॥

ಆಕರ್ಷಕನೂ, ಪ್ರೀತಿಕಾರಕನೂ ಆದ ಪುತ್ರನಂತೆ ಶುದ್ಧ್ಯರ್ಹನಾದ ಸೋಮನು ಶುಕ್ಲವರ್ಣವುಳ್ಳ ವಸ್ತ್ರದಿಂದ (ದಶಾಪವಿತ್ರದ ಉಣ್ಣೆಯಿಂದ) ಆಚ್ಛಾದಿತನಾಗಿ ಅಲಂಕೃತನಾಗುತ್ತಾನೆ. ಶಕ್ತಿಯುತರಾದವರು ತಮ್ಮ ರಥಗಳನ್ನು ಸಂಗ್ರಾಮಕ್ಕೆ ಪ್ರೇರಿಸುವಂತೆ ಇದೇ ಸೋಮನನ್ನು ವಸತೀವರ್ಯಾದಿಗಳೊಳಕ್ಕೆ ತಮ್ಮ ಬಾಹುಗಳಿಂದ ಪ್ರೇರಿಸಿಕಳುಹುತ್ತಾರೆ.

English Translation

Agreeable affectionate like a son about to be decorated, the Soma is clad in a shining robe ; they send him with their arms into the streams as active (warriors send their) chariot into (battle).

॥ ಸಂಹಿತಾಪಾಠಃ ॥

ಅಭಿ ಸೋಮಾಸ ಆಯವಃ ಪವಂತೇ ಮದ್ಯಂ ಮದಂ ।
ಸಮುದ್ರಸ್ಯಾಧಿ ವಿಷ್ಟಪಿ ಮನೀಷಿಣೋ ಮತ್ಸರಾಸಃ ಸ್ವರ್ವಿದಃ ॥ ೧೪ ॥

॥ ಪದಪಾಠಃ ॥

ಅಭಿ । ಸೋಮಾಸಃ । ಆಯವಃ । ಪವಂತೇ । ಮದ್ಯಂ । ಮದಂ ।
ಸಮುದ್ರಸ್ಯ । ಅಧಿ । ವಿಷ್ಟಪಿ । ಮನೀಷಿಣಃ । ಮತ್ಸರಾಸಃ । ಸ್ವಃಽವಿದಃ ॥ ೧೪ ॥

॥ ಸಾಯಣಭಾಷ್ಯಂ ॥

ಆಯವೋ ಗಮನಶೀಲಾಃ ಸೋಮಾಸಃ ಸೋಮಾ ಮದ್ಯಂ ಮದಕರಂ ಮದಮಾತ್ಮೀಯಂ ರಸಮಭಿ ಪವಂತೇ । ಅಭಿತೋ ನಿರ್ಗಮಯಂತಿ । ಕುತ್ರೇತಿ ಉಚ್ಯತೇ । ಸಮುದ್ರಸ್ಯಾಂತರಿಕ್ಷಸ್ಯಾಧಿ ವಿಷ್ಟಪ್ಯಧಿಕಂ ಸಮುಚ್ಛ್ರಿತೇ ಪವಿತ್ರೇ । ಯದ್ವಾ । ಸಮುದ್ರಸ್ಯ । ಸಮುದ್ದ್ರವಂತ್ಯಸ್ಮಾದ್ರಸಾಃ । ತಸ್ಯ

ಕಲಶಸ್ಯಾಧ್ಯುಪರಿ ವಿಷ್ಟಪಿ ಸ್ಥಾನೇ ಪವಿತ್ರೇ ನಿರ್ಗಮಯಂತಿ । ಕೀದೃಶಾಃ । ಮನೀಷಿಣೋ ಮನಸ ಈಶಿತಾರೋ ಮತ್ಸರಾಸೋ ಮದಕರಾಃ ಸ್ವರ್ವಿದಃ ಸರ್ವಸ್ಯ ಲಂಭಕಾಃ ॥

॥ ಪ್ರತಿಪದಾರ್ಥ ॥

**ಮನೀಷಿಣಃ**—ಶ್ರೇಷ್ಠವಾದ ಸಂಕಲ್ಪವುಳ್ಳವೂ । **ಮತ್ಸರಾಸಃ**—ಹರ್ಷಕಾರಕವಾದವೂ । **ಸ್ವರ್ವಿದಃ**—ಸಕಲವನ್ನೂ ಕೈಗೂಡಿಸುವುವೂ । **ಆಯವಃ**—ಶೀಘ್ರಗಾಮಿಗಳೂ ಆದ । **ಸೋಮಾಃ**—ಸೋಮಗಳು । **ಮದ್ಯಂ**—ಹಿತಕರವಾದ । **ಮದಂ**—ತಮ್ಮ ರಸವನ್ನು । **ಸಮುದ್ರಸ್ಯ ಅಧಿ**—ಅಂತರಿಕ್ಷದ ಮೇಲಿರುವ । **ವಿಷ್ಟಪಿ**—ಎತ್ತರವಾದ ಪ್ರದೇಶದಲ್ಲಿ । **ಅಭಿ ಪವಂತೇ**—ಹರಿಸುತ್ತವೆ.

॥ ಭಾವಾರ್ಥ ॥

ಶ್ರೇಷ್ಠವಾದ ಸಂಕಲ್ಪವುಳ್ಳವೂ, ಹರ್ಷಕಾರಕವಾದವೂ, ಸಲಕವನ್ನೂ ಕೈಗೂಡಿಸುವುವೂ, ಶೀಘ್ರಗಾಮಿಗಳೂ ಆದ ಸೋಮಗಳು ಹಿತಕರವಾದ ತಮ್ಮ ರಸವನ್ನು ಅಂತರಿಕ್ಷದ ಮೇಲಿರುವ ಎತ್ತರವಾದ ಪ್ರದೇಶದಲ್ಲಿ ಹರಿಸುತ್ತವೆ.

English Translation

The swift Somas send forth their inebriating juice upon the uplifted (filter) of the firmament, intelligent, exhilarating, all-acquiring.

॥ ಸಂಹಿತಾಪಾಠಃ ॥

ತರತ್ಸಮುದ್ರಂ ಪವಮಾನ ಊರ್ಮಿಣಾ ರಾಜಾ ದೇವ ಋತಂ ಬೃಹತ್ ।
ಅರ್ಷನ್ಮಿತ್ರಸ್ಯ ವರುಣಸ್ಯ ಧರ್ಮಣಾ ಪ್ರ ಹಿನ್ವಾನ ಋತಂ ಬೃಹತ್ ॥೧೫॥

॥ ಪದಪಾಠಃ ॥

ತರತ್ । ಸಮುದ್ರಂ । ಪವಮಾನಃ । ಊರ್ಮಿಣಾ । ರಾಜಾ । ದೇವಃ । ಋತಂ । ಬೃಹತ್ ।
ಅರ್ಷತ್ । ಮಿತ್ರಸ್ಯ । ವರುಣಸ್ಯ । ಧರ್ಮಣಾ । ಪ್ರ । ಹಿನ್ವಾನಃ । ಋತಂ । ಬೃಹತ್ ॥ ೧೫ ॥

॥ ಸಾಯಣಭಾಷ್ಯಂ ॥

ಪವಮಾನಃ । ಪೂಯಮಾನೋ ದೇವೋ ದ್ಯೋತಮಾನೋ ಬೃಹದತ್ಯಂತಮೃತಂ ಸತ್ಯಭೂತೋ ರಾಜಾ ಸೋಮಃ ಸಮುದ್ರಮಂತರಿಕ್ಷಂ ಕಲಶಂ ವೋರ್ಮಿಣಾ ಧಾರಯಾ ತರತ್ । ತರತಿ । ಹಿನ್ವಾನಃ ಪ್ರೇರ್ಯಮಾಣ ಋತಂ ಬೃಹದತ್ಯಂತಂ ಸತ್ಯಭೂತಃ ಸ ಸೋಮೋ ಮಿತ್ರಸ್ಯ ವರುಣಸ್ಯ ಮಿತ್ರಾವರುಣಯೋರ್ಧರ್ಮಣಾ ಧಾರಣಾರ್ಥಂ ಪ್ರಾರ್ಷತ್ । ಪ್ರಗಚ್ಛತಿ ॥

॥ ಪ್ರತಿಪದಾರ್ಥ ॥

**ಪವಮಾನಃ**—ಶುದ್ಧಿಯನ್ನು ಹೊಂದತಕ್ಕವನೂ । **ದೇವಃ**—ಪ್ರಕಾಶಮಾನನೂ । **ಬೃಹತ್**—ಅತ್ಯಧಿಕನೂ । **ಋತಂ**—ಸತ್ಯಸ್ವರೂಪನೂ । **ರಾಜಾ**—ಪ್ರಭುವೂ ಆದ ಸೋಮದೇವನು । **ಸಮುದ್ರಂ**—ಅಂತರಿಕ್ಷವನ್ನು । **ಊರ್ಮಿಣಾ**—ತನ್ನ ಧಾರೆಯಿಂದ । **ತರತ್**—ದಾಟುತ್ತಾನೆ । **ಹಿನ್ವಾನಃ**—ಋತ್ವಿಕ್ಕುಗಳಿಂದ ಪ್ರೇರಿತನೂ । **ಬೃಹತ್ ಋತಂ**—ಅತ್ಯತಿಶಯವಾದ ಸತ್ಯಾತ್ಮಕನೂ ಆದ ಸೋಮನು । **ಮಿತ್ರಸ್ಯ**—ಮಿತ್ರನಿಗೂ । **ವರುಣಸ್ಯ**—ವರುಣನಿಗೂ । **ಧರ್ಮಣಾ**—ಧಾರಣಾರ್ಥವಾಗಿ । **ಪ್ರಾರ್ಷತ್**—ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಶುದ್ಧಿಯನ್ನು ಹೊಂದತಕ್ಕವನೂ, ಪ್ರಕಾಶಮಾನನೂ, ಅತ್ಯಧಿಕನೂ, ಸತ್ಯಸ್ವರೂಪನೂ, ಪ್ರಭುವೂ ಆದ ಸೋಮದೇವನು ಅಂತರಿಕ್ಷವನ್ನು ತನ್ನ ಧಾರೆಯಿಂದ ದಾಟುತ್ತಾನೆ. ಋತ್ವಿಕ್ಕುಗಳಿಂದ ಪ್ರೇರಿತನೂ, ಅತ್ಯತಿಶಯವಾದ ಸತ್ಯಾತ್ಮಕನೂ ಆದ ಸೋಮನು ಮಿತ್ರನಿಗೂ ವರುಣನಿಗೂ ಧಾರಣಾರ್ಥವಾಗಿ ಪ್ರವಹಿಸುತ್ತಾನೆ.

## English Translation

The divine royal (Soma) vast and true, undergoing purification traverses the firmament in a stream ; vast and true, being sent forth he flows for the support of Mitra and Varuna.

॥ ಸಂಹಿತಾಪಾಠಃ ॥

**ನೃಭಿರ್ಯೇಮಾನೋ ಹರ್ಯತೋ ವಿಚಕ್ಷಣೋ ರಾಜಾ ದೇವಃ ಸಮು-**
**ದ್ರಿಯಃ ॥ ೧೬ ॥**

॥ ಪದಪಾಠಃ ॥

**ನೃಽಭಿಃ । ಯೇಮಾನಃ । ಹರ್ಯತಃ । ವಿಽಚಕ್ಷಣಃ । ರಾಜಾ । ದೇವಃ । ಸಮುದ್ರಿಯಃ ॥ ೧೬ ॥**

॥ ಸಾಯಣಭಾಷ್ಯಂ ॥

**ನೃಭಿಃ ಕರ್ಮನೇತೃಭಿರ್ಯೇಮಾನೋ ನಿಯಮ್ಯಮಾನೋ ಹರ್ಯತಃ ಸ್ಪೃಹಣೀಯೋ ವಿಚಕ್ಷಣೋ ವಿಪ್ರಷ್ಟಾ ದೇವೋ ದೀಪ್ಯಮಾನಃ ಸಮುದ್ರಿಯೋಽಂತರಿಕ್ಷೇ ಭವೋ ರಾಜಾ ಸೋಮ ಇಂದ್ರಾರ್ಥಂ ಪವತ ಇತ್ಯುತ್ತರೇಣ ಸಂಬಂಧಃ ॥ ಸಮುದ್ರಾಭ್ರಾದ್ಘಃ ಇತಿ ಭವಾರ್ಥೇ ಘಪ್ರತ್ಯಯಃ ॥**

॥ ಪ್ರತಿಪದಾರ್ಥ ॥

**ನೃಭಿಃ**—ಋತ್ವಿಕ್ಕುಗಳಿಂದ । **ಯೇಮಾನಃ**—ನಿಯಮಿತನಾದವನೂ । **ಹರ್ಯತಃ**—ಆಕರ್ಷಕವಾದ ರೂಪವುಳ್ಳವನೂ । **ವಿಚಕ್ಷಣಃ**—ಸೂಕ್ಷ್ಮದೃಷ್ಟಿಯುಳ್ಳವನೂ । **ದೇವಃ**—ಪ್ರಕಾಶಮಾನನೂ । **ಸಮುದ್ರಿಯಃ**—ಅಂತರಿಕ್ಷದಲ್ಲಿ ಉತ್ಪನ್ನನಾದವನೂ । **ರಾಜಾ**—ಪ್ರಭುವೂ ಆದ ಸೋಮನು ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಋತ್ವಿಕ್ಕುಗಳಿಂದ ನಿಯಮಿತನಾದವನೂ, ಆಕರ್ಷಕವಾದ ರೂಪವುಳ್ಳವನೂ, ಸೂಕ್ಷ್ಮದೃಷ್ಟಿಯುಳ್ಳವನೂ, ಪ್ರಕಾಶಮಾನನೂ ಅಂತರಿಕ್ಷದಲ್ಲಿ ಉತ್ಪನ್ನನಾದವನೂ, ಪ್ರಭುವೂ ಆದ ಸೋಮನು ಪ್ರವಹಿಸುತ್ತಾನೆ.

English Translation

Regulated by the priests, the divine royal Soma, agreeable, intelligent, abiding in the firmament—

॥ ಸಂಹಿತಾಪಾಠಃ ॥

ಇಂದ್ರಾ॑ಯ ಪವತೇ॒ ಮದ॒ಃ ಸೋಮೋ॑ ಮ॒ರುತ್ವ॑ತೇ ಸು॒ತಃ ।

ಸ॒ಹಸ್ರ॑ಧಾರೋ॒ ಅತ್ಯವ್ಯ॑ಮರ್ಷ॒ತಿ ತಮೀ॑ಂ ಮೃಜಂತ್ಯಾ॒ಯವ॑ಃ ॥ ೧೭ ॥

॥ ಪದಪಾಠಃ ॥

ಇಂದ್ರಾ॑ಯ । ಪ॒ವ॒ತೇ॒ । ಮದ॑ಃ । ಸೋಮ॑ಃ । ಮ॒ರುತ್ವ॑ತೇ । ಸು॒ತಃ ।

ಸ॒ಹಸ್ರ॑ಽಧಾರಃ । ಅತಿ॑ । ಅವ್ಯ॑ಂ । ಅ॒ರ್ಷ॒ತಿ॒ । ತಂ । ಈ॒ಮಿ॒ತಿ॑ । ಮೃ॒ಜ॒ಂತಿ॒ । ಆ॒ಯವ॑ಃ ॥ ೧೭ ॥

॥ ಸಾಯಣಭಾಷ್ಯಂ ॥

ಮದೋ ಮಾದಕಃ ಸುತೋಽಭಿಷುತಃ ಸೋಮೋ ಮರುತ್ವತೇ ಮರುದ್ಭಿಸ್ತದ್ವತ ಇಂದ್ರಾಯೇಂದ್ರಾರ್ಥಂ ಪವತೇ । ಕ್ಷರತಿ । ತತಃ ಸಹಸ್ರಧಾರೋ ಬಹುಧಾರೋಪೇತಃ ಸೋಽವ್ಯಮವಿಮಯಂ ಪವಿತ್ರಮತ್ಯರ್ಷತಿ । ಅತಿಗಚ್ಛತಿ । ತಮಿಮಂ ಸೋಮಮಾಯವೋ ಮನುಷ್ಯಾ ಋತ್ವಿಜೋ ಮೃಜಂತಿ । ಶೋಧಯಂತಿ ॥

॥ ಪ್ರತಿಪದಾರ್ಥ ॥

**ಮದಃ**—ಹರ್ಷಕಾರಕನೂ । **ಸುತಃ**—ಹಿಂಡಲ್ಪಟ್ಟವನೂ ಆದ । **ಸೋಮಃ**—ಸೋಮದೇವನು । **ಮರುತ್ವತೇ**—ಮರುತ್ತುಗಳಿಂದೊಡಗೂಡಿದ । **ಇಂದ್ರಾಯ** ಇಂದ್ರಾರ್ಥವಾಗಿ । **ಪವತೇ**—ಸ್ರವಿಸುತ್ತಾನೆ । **ಸಹಸ್ರಧಾರಃ**—ಅನೇಕವಾದ ಧಾರೆಯುಳ್ಳ ಸೋಮನು । **ಅವ್ಯಂ**—ಉಣ್ಣೆಯ ದಶಾಪವಿತ್ರವನ್ನು । **ಅತ್ಯರ್ಷತಿ**—ದಾಟುತ್ತಾನೆ । **ತಂ**—ಈ ಸೋಮನನ್ನು । **ಆಯವಃ**—ಮಾನವರು । **ಮೃಜಂತಿ**—ಶುದ್ಧಿಗೊಳಿಸುತ್ತಾರೆ.

॥ ಭಾವಾರ್ಥ ॥

ಹರ್ಷಕಾರಕನೂ, ಹಿಂಡಲ್ಪಟ್ಟವನೂ ಆದ ಸೋಮದೇವನು ಮರುತ್ತುಗಳಿಂದೊಡಗೂಡಿದ ಇಂದ್ರನ ಪಾನಾರ್ಥವಾಗಿ ಪ್ರವಹಿಸುತ್ತಾನೆ. ಅನೇಕವಿಧವಾದ ಧಾರೆಯುಳ್ಳ ಸೋಮನು ಉಣ್ಣೆಯ ದಶಾಪವಿತ್ರವನ್ನು ದಾಟುತ್ತಾನೆ. ಈ ಸೋಮನನ್ನು ಮಾನವರು ಶುದ್ಧಿಗೊಳಿಸುತ್ತಾರೆ.

## English Translation

Exhilarating, flows when effused, for Indra attended by the Maruts, thousand-streamed he passes through the fleece ; men cleanse him.

॥ ಸಂಹಿತಾಪಾಠಃ ॥

ಪುನಾನಶ್ಚಮೂ ಜನಯನ್ಮತಿಂ ಕವಿಃ ಸೋಮೋ ದೇವೇಷು ರಣ್ಯತಿ ।
ಅಪೋ ವಸಾನಃ ಪರಿ ಗೋಭಿರುತ್ತರಃ ಸೀದನ್ವನೇಷ್ವವ್ಯತ ॥ ೧೮ ॥

ಪದಪಾಠಃ

ಪುನಾನಃ । ಚಮೂ ಇತಿ । ಜನಯನ್ । ಮತಿಂ । ಕವಿಃ । ಸೋಮಃ । ದೇವೇಷು । ರಣ್ಯತಿ ।
ಅಪಃ । ವಸಾನಃ । ಪರಿ । ಗೋಭಿಃ । ಉತ್‌ಽತರಃ । ಸೀದನ್ । ವನೇಷು । ಅವ್ಯತ ॥ ೧೮ ॥

॥ ಸಾಯಣಭಾಷ್ಯಂ ॥

**ಚಮೂ ॥ ಸಪ್ತಮ್ಯಾಃ ಪೂರ್ವಸವರ್ಣದೀರ್ಘಃ ॥ ಚಮ್ವೋರಧಿಷವಣಫಲಕಯೋಃ ಪುನಾನಃ ಪೂಯಮಾನೋಽಭಿಷೂಯಮಾಣೋ ಮತಿಂ ಸ್ತುತಿಂ ಜನಯನ್ನುತ್ಪಾದಯನ್ ಕವಿಃ ಕ್ರಾಂತಪ್ರಜ್ಞಃ ಏತಾದೃಶಃ ಸೋಮೋ ದೇವೇಷ್ವಿಂದ್ರಾದಿಷು ರಣ್ಯತಿ । ಕಿಂಚಾಪೋ ವಸತೀವರೀರ್ವಸಾನ ಆಚ್ಛಾದಯನ್ ವನೇಷು ಕಾಷ್ಠೇಷು ಪಾತ್ರೇಷು ಸೀದನ್ ಸೋಮೋ ಗೋಭಿರ್ಗೋವಿಕಾರೈಃ ಕ್ಷೀರಾದಿಭಿಃ ಪರ್ಯವ್ಯತ । ಪರಿಧೀಯತೇ । ಆಚ್ಛಾದ್ಯತೇ ॥**

॥ ಪ್ರತಿಪದಾರ್ಥ ॥

**ಚಮೂ**—ಹಿಂಡುವ ಹಲಗೆಗಳಲ್ಲಿ । **ಪುನಾನಃ**—ಹಿಂಡಲ್ಪಟ್ಟವನಾಗಿಯೂ । **ಮತಿಂ**—ಸ್ತುತಿಯನ್ನು । **ಜನಯನ್**—ಉತ್ಪನ್ನಮಾಡುತ್ತಲೂ । **ಕವಿಃ**—ಕ್ರಾಂತಿಪ್ರಜ್ಞನಾದ । **ಸೋಮಃ**—ಸೋಮದೇವನು । **ದೇವೇಷು**—ಇಂದ್ರಾದಿದೇವತೆಗಳೊಡನೆ । **ರಣ್ಯತಿ**—ಹರ್ಷವನ್ನು ಹೊಂದುತ್ತಾನೆ । **ಅಪಃ**—ವಸತೀವರಿಗಳನ್ನು । **ವಸಾನಃ**—ಹೊದ್ದಿಕೊಂಡು । **ವನೇಷು**—ಪಾತ್ರೆಗಳಲ್ಲಿ । **ಉತ್ತರಃ ಸೀದನ್**—ಶ್ರೇಷ್ಠವಾಗಿ ಆಶ್ರಯವನ್ನು ಪಡೆದ ಸೋಮನು । **ಗೋಭಿಃ**—ಕ್ಷೀರಾದಿಗಳೊಡನೆ । **ಪರಿ ಅವ್ಯತ**—ಸೇರಿಕೊಳ್ಳುತ್ತಾನೆ.

॥ ಭಾವಾರ್ಥ ॥

ಹಿಂಡುವ ಹಲಗೆಗಳಲ್ಲಿ ಹಿಂಡಲ್ಪಟ್ಟವನಾಗಿಯೂ, ಸ್ತುತಿಯನ್ನು ಉತ್ಪನ್ನಮಾಡುತ್ತಲೂ, ಕ್ರಾಂತಪ್ರಜ್ಞನಾದ ಸೋಮದೇವನು ಇಂದ್ರಾದಿದೇವತೆಗಳೊಡನೆ ಹರ್ಷವನ್ನು ಹೊಂದುತ್ತಾನೆ. ವಸತೀವರಿಗಳೊಡನೆ ಸೇರಿ ಪಾತ್ರೆಗಳಲ್ಲಿ ಶ್ರೇಷ್ಠವಾದ ಆಶ್ರಯವನ್ನು ಪಡೆದ ಸೋಮನು ಕ್ಷೀರಾದಿಗಳೊಡನೆ ಸೇರಿಕೊಳ್ಳುತ್ತಾನೆ.

English Translation

Purified in the cups, exciting laudation, the sage Soma rejoices amongst the gods ; clothed with the waters sitting in the wooden bowls, he is surrounded with the curds and milk.

॥ ಸಂಹಿತಾಪಾಠಃ ॥

ತವಾಹಂ ಸೋಮ ರಾರಣ ಸಖ್ಯ ಇಂದೋ ದಿವೇದಿವೇ ।
ಪುರೂಣಿ ಬಭ್ರೋ ನಿ ಚರಂತಿ ಮಾಮವ ಪರಿಧೀँರತಿ ತಾँ ಇಹಿ ॥ ೧೯ ॥

॥ ಪದಪಾಠಃ ॥

ತವ । ಅಹಂ । ಸೋಮ । ರರಣ । ಸಖ್ಯೇ । ಇಂದೋ ಇತಿ । ದಿವೇऽದಿವೇ ।
ಪುರೂಣಿ । ಬಭ್ರೋ ಇತಿ । ನಿ । ಚರಂತಿ । ಮಾಂ । ಅವ । ಪರಿऽಧೀನ್ । ಅತಿ । ತಾನ್ । ಇಹಿ ॥ ೧೯ ॥

॥ ಸಾಯಣಭಾಷ್ಯಂ ॥

**ಹೇ ಇಂದೋ ಹೇ ಸೋಮ ತವ ಸಖ್ಯೇ ಸಖಿಕರ್ಮಣ್ಯಹಂ ದಿವೇದಿವೇऽನ್ವಹಂ ರಾರಣ ॥ ರಣೇರ್ಲಿಟ್ಯುತ್ತಮೇ ಣಲಿ ರೂಪಂ ॥ ಹೇ ಬಭ್ರೋ ಬಭ್ರುವರ್ಣ ಸೋಮ ಪುರೂಣಿ ಬಹೂನಿ ರಕ್ಷಾಂಸಿ ಮಾಂ ತವ ಸಖ್ಯೇ ಸ್ಥಿತಂ ನ್ಯವ ಚರಂತಿ । ನೀಚೀನಂ ಚರಂತಿ । ಬಾಧಂತೇ । ಯೇ ಮಾಂ ಬಾಧಂತೇ ತಾನ್ಪರಿಧೀನ್ರಾಕ್ಷಸಾಂಸ್ತ್ವಮತೀಹಿ । ಅತೀತ್ಯ ಗಚ್ಛ । ಜಹೀತಿ ಯಾವತ್ ॥**

॥ ಪ್ರತಿಪದಾರ್ಥ ॥

**ಇಂದೋ**—ಪ್ರವಾಹಾತ್ಮಕನಾದ । **ಸೋಮ**—ಎಲೈ ಸೋಮನೇ । **ತವ**—ನಿನ್ನ । **ಸಖ್ಯೇ**—ಮಿತ್ರತ್ವದಲ್ಲಿರುವ । **ಅಹಂ**—ನಾನು । **ದಿವೇದಿವೇ**—ಪ್ರತಿದಿನವೂ । **ರಾರಣ** ಹರ್ಷವನ್ನು ಅನುಭವಿಸುತ್ತೇನೆ । **ಬಭ್ರೋ**—ಹೊಂಬಣ್ಣವುಳ್ಳ ಎಲೈ ಸೋಮನೇ । **ಮಾಂ**—ನನ್ನನ್ನು । **ಪುರೂಣಿ**—ಅನೇಕ ಸಂಖ್ಯೆಯುಳ್ಳ ಅಸುರರು । **ನಿ ಅವ ಚರಂತಿ**—ಸುತ್ತುವರೆದು ಹಿಂಸಿಸುತ್ತಾರೆ । **ತಾನ್ ಪರಿಧೀನ್**—ಆ ಎಲ್ಲ ಅಸುರರನ್ನೂ । **ಅತಿ ಇಹಿ**—ಎದುರಿಸು ಮತ್ತು ನಾಶಪಡಿಸು ।

॥ ಭಾವಾರ್ಥ ॥

ಪ್ರಕಾಶಾತ್ಮಕನಾದ ಎಲೈ ಸೋಮದೇವನೇ, ನಿನ್ನ ಮಿತ್ರತ್ವದಲ್ಲಿರುವ ನಾನು ಪ್ರತಿದಿನವೂ ಹರ್ಷವನ್ನು ಅನುಭವಿಸುತ್ತೇನೆ. ಹೊಂಬಣ್ಣವುಳ್ಳ ಎಲೈ ಸೋಮನೇ, ನನ್ನನ್ನು ಅನೇಕ ಸಂಖ್ಯೆಯುಳ್ಳ ಅಸುರರು ಸುತ್ತುವರಿದು ಹಿಂಸಿಸುತ್ತಾರೆ.

English Translation

In your friendship, Indu Soma, I have rejoiced day by day ; many (Rakshasas) assail me, tawny-coloured (Soma) ; overcome these who surround me.

॥ ಸಂಹಿತಾಪಾಠಃ ॥

ಉತಾಹಂ ನಕ್ತಮುತ ಸೋಮ ತೇ ದಿವಾ ಸಖ್ಯಾಯ ಬಭ್ರ ಊಧನಿ ।
ಘೃಣಾ ತಪಂತಮತಿ ಸೂರ್ಯಂ ಪರಃ ಶಕುನಾ ಇವ ಪಪ್ತಿಮ ॥ ೨೦ ॥

॥ ಪದಪಾಠಃ ॥

ಉತ । ಅಹಂ । ನಕ್ತಂ । ಉತ । ಸೋಮ । ತೇ । ದಿವಾ । ಸಖ್ಯಾಯ । ಬಭ್ರೋ ಇತಿ । ಊಧನಿ ।
ಘೃಣಾ । ತಪಂತಂ । ಅತಿ । ಸೂರ್ಯಂ । ಪರಃ । ಶಕುನಾಃऽಇವ । ಪಪ್ತಿಮ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಬಭ್ರೋ ಬಭ್ರುವರ್ಣ ಹೇ ಸೋಮ ಉತಾಪಿ ಚ ನಕ್ತಮುತಾಪಿ ಚ ದಿವಾಹೋರಾತ್ರಯೋಃ ಸಖ್ಯಾಯ ಸಖ್ಯಾರ್ಥಂ ತವೋಧನಿ ಸಮೀಪೇऽಹಂ ರಮ ಇತಿ ಶೇಷಃ । ತೇ ವಯಂ ಘೃಣಾ ದೀಪ್ತ್ಯಾ ತಪಂತಂ ಜ್ವಲಂತಂ ಪರಃ ಪರಮಸ್ಥಾನಸ್ಥಿತಂ ಸೂರ್ಯಂ ತದಾತ್ಮಕಂ ತ್ವಾಮತಿ ಪಪ್ತಿಮ । ತತ್ರ ಸ್ಥಿತಂ ತ್ವಾಂ ಪ್ರಾಪ್ತುಮತಿಪೇತಿಮ । ಕಥಮಿವ । ಶಕುನಾ ಇವ ಯಥಾ ಸುಪರ್ಣಾದಯಃ ಪಕ್ಷಿಣಃ ಸೂರ್ಯಮತಿಗಚ್ಛಂತಿ ತದ್ವತ್ ॥ ಪತ್ಲೃ ಗತೌ । ಅಸ್ಮಾಚ್ಛಾಂದಸೇ ಲಿಟಿ ತನಿಪತ್ಯೋಶ್ಛಂದಸೀತ್ಯುಪಧಾಲೋಪಃ ॥

॥ ಪ್ರತಿಪದಾರ್ಥ ॥

ಬಭ್ರೋ—ಹೊಂಬಣ್ಣವುಳ್ಳ । ಸೋಮ—ಎಲೈ ಸೋಮದೇವನೇ । ಉತ—ಮತ್ತು । ನಕ್ತಂ—ರಾತ್ರಿಯೂ । ಉತ—ಮತ್ತು । ದಿವಾ—ಹಗಲೂ । ತೇ ಸಖ್ಯಾಯ—ನಿನ್ನೊಡನೆ ಮಿತ್ರತ್ವಕ್ಕಾಗಿ । ಊಧನಿ—ನಿನ್ನ ಸಮೀಪದಲ್ಲಿ । ಅಹಂ—ನಾನು ರಮಿಸುತ್ತೇನೆ । ಶಕುನಾಃ ಇವ—ಪಕ್ಷಿಗಳು ಸೂರ್ಯಲೋಕದವರೆಗೂ ಹಾರುವಂತೆ । ಘೃಣಾ—ನಿನ್ನ ಸ್ವಪ್ರಭೆಯಿಂದ । ತಪಂತಂ—ಜ್ವಲಿಸುವುದೂ । ಪರಃ—ಉತ್ತಮಸ್ಥಾನದಲ್ಲಿರುವುದೂ । ಸೂರ್ಯಂ—ಸೂರ್ಯಾತ್ಮಕವೂ ಆದ ನಿನ್ನ ಸನ್ನಿಧಿಗೆ । ಅತಿ ಪಪ್ತಿಮ—ನಾವು ಹಾರಿಬರುವಂತಾಗಲಿ.

॥ ಭಾವಾರ್ಥ ॥

ಹೊಂಬಣ್ಣವುಳ್ಳ ಎಲೈ ಸೋಮದೇವನೇ, ರಾತ್ರಿಯೂ ಹಗಲೂ ನಿನ್ನೊಡನೆ ಮಿತ್ರತ್ವಕ್ಕಾಗಿ ನಿನ್ನ ಸಮೀಪದಲ್ಲಿಯೇ ನಾನು ರಮಿಸುತ್ತೇನೆ. ಪಕ್ಷಿಗಳು ಸೂರ್ಯಲೋಕದವರೆಗೂ ಹಾರುವಂತೆ ನಿನ್ನ ಸ್ವಪ್ರಭೆಯಿಂದ ಜ್ವಲಿಸುವುದೂ ಉತ್ತಮಸ್ಥಾನದಲ್ಲಿರುವುದೂ, ಸೂರ್ಯಾತ್ಮಕವೂ ಆದ ನಿನ್ನ ಸನ್ನಿಧಿಗೆ ನಾವು ಹಾರಿ ಬರುವಂತಾಗಲಿ.

English Translation

I (delight) in your presence, tawny-coloured Soma, both day and night, for the sake of your friendship may we soar like birds far beyond the sun blazing with your light.

॥ ಸಂಹಿತಾಪಾಠಃ ॥

ಮೃಜ್ಯಮಾನಃ ಸುಹಸ್ತ್ಯ ಸಮುದ್ರೇ ವಾಚಮಿನ್ವಸಿ ।

ರಯಿಂ ಪಿಶಂಗಂ ಬಹುಲಂ ಪುರುಸ್ಪೃಹಂ ಪವಮಾನಾಭ್ಯರ್ಷಸಿ ॥ ೨೧ ॥

॥ ಪದಪಾಠಃ ॥

ಮೃಜ್ಯಮಾನಃ । ಸುऽಹಸ್ತ್ಯ । ಸಮುದ್ರೇ । ವಾಚಂ । ಇನ್ವಸಿ ।

ರಯಿಂ । ಪಿಶಂಗಂ । ಬಹುಲಂ । ಪುರುऽಸ್ಪೃಹಂ । ಪವಮಾನ । ಅಭಿ । ಅರ್ಷಸಿ ॥ ೨೧ ॥

॥ ಸಾಯಣಭಾಷ್ಯಂ ॥

ಗ್ರಾವಸ್ತೋತ್ರೇऽಭಿರೂಪಕರಣೇ ಸೋಮೇ ಮೃಜ್ಯಮಾನ ಏಕಸ್ತೃಚಃ । ತತ್ರ ಮೃಜ್ಯಮಾನ ಇತ್ಯೇಷಾ ತೃತೀಯಾ । ಸೂತ್ರಿತಂ ಚ । ಮೃಜ್ಯಮಾನಃ ಸುಹಸ್ತ್ಯ ದಶಭಿರ್ವಿವಸ್ವತಃ । ಆ. ೫-೧೨ ಇತಿ ॥

ಹೇ ಸುಹಸ್ತ್ಯ । ಹಸ್ತೇ ಭವಾ ಹಸ್ತ್ಯಾ ಅಂಗುಲಯಃ । ಶೋಭನಾಂಗುಲಿಕ ಸೋಮ ಮೃಜ್ಯಮಾನಃ ಶೋಧ್ಯಮಾನಸ್ತ್ವಂ ಸಮುದ್ರೇऽನ್ತರಿಕ್ಷೇ ಕಲಶೇ ವಾ ವಾಚಂ ಶಬ್ದಮಿನ್ವಸಿ । ಪ್ರೇರಯಸಿ । ಕಿಂಚ ಹೇ ಪವಮಾನ ಪೂಯಮಾನ ಸೋಮ ಪಿಶಂಗಂ ಹಿರಣ್ಯೈಃ ಪಿಶಂಗವರ್ಣಂ ಬಹುಲಂ ಪ್ರಭೂತಂ ಪುರುಸ್ಪೃಹಂ ಬಹುಭಿಃ ಸ್ಪೃಹಣೀಯಂ ರಯಿಂ ಧನಮಭ್ಯರ್ಷಸಿ । ಸ್ತೋತೄಣಾಮಭಿಕ್ಷರಸಿ ಪ್ರಯಚ್ಛಸಿ ॥

॥ ಪ್ರತಿಪದಾರ್ಥ ॥

**ಸುಹಸ್ತ್ಯ**—ಉತ್ತಮವಾದ ಬೆರಳುಗಳುಳ್ಳ ಎಲೈ ಸೋಮದೇವನೇ। **ಮೃಜ್ಯಮಾನಃ**—ಶುದ್ಧಿಯನ್ನು ಹೊಂದ ತಕ್ಕ ನೀನು। **ಸಮುದ್ರೇ**—ಅಂತರಿಕ್ಷದಲ್ಲಿ। **ವಾಚಂ**—ಶಬ್ದವನ್ನು। **ಇನ್ವಸಿ**—ಪ್ರೇರಿಸುತ್ತೀಯೆ। **ಪವಮಾನ**—ಶುದ್ಧಿಕಾರಕನಾದ ಎಲೈ ಸೋಮನೇ। **ಪಿಶಂಗಂ**—ಸುವರ್ಣರೂಪದ್ದೂ। **ಬಹುಲಂ**—ಪ್ರಭೂತವಾದುದೂ। **ಪುರುಸ್ಪೃಹಂ**—ಅನೇಕರಿಂದ ಅಪೇಕ್ಷಿತವಾದುದೂ ಆದ। **ರಯಿಂ**—ಧನವನ್ನು। **ಅಭ್ಯರ್ಷಸಿ**—ಸ್ತೋತೃಗಳಿಗೆ ಕೊಡುತ್ತೀಯೆ.

॥ ಭಾವಾರ್ಥ ॥

ಉತ್ತಮವಾದ ಬೆರಳುಗಳಿಂದ ಹಿಂಡಲ್ಪಡುವ ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದತಕ್ಕ ನೀನು ಅಂತರಿಕ್ಷದಲ್ಲಿ ಶಬ್ದವನ್ನು ಪ್ರೇರಿಸುತ್ತೀಯೆ. ಶುದ್ಧಿಕಾರಕನಾದ ಎಲೈ ಸೋಮನೇ, ಸುವರ್ಣರೂಪದ್ದೂ, ಪ್ರಭೂತವಾದುದೂ, ಅನೇಕರಿಂದ ಅಪೇಕ್ಷಿತವಾದುದೂ ಆದ ಧನವನ್ನು ಸ್ತೋತೃಗಳಿಗೆ ಕೊಡುತ್ತೀಯೆ.

English Translation

Fair-fingered (Soma) being cleansed you utter a sound in the pitcher ; you bring, Pavamana, ample golden-hued much-coveted wealth.

॥ ವಿಶೇಷವಿಷಯಗಳು ॥

ಸೋಮಾಭಿಷವಣಕ್ಕಾಗಿ ಉಪಯೋಗಿಸುವ ಗ್ರಾವಗಳ (ಕಲ್ಲುಗಳ) ಸ್ತೋತ್ರಕಾಲದಲ್ಲಿ ಸೋಮವನ್ನು ಜಜ್ಜಿ ಹಿಂಡುವಾಗ ಮೂರು ಋಕ್ಕುಗಳನ್ನು ಪಠಿಸಬೇಕು. ಅವುಗಳಲ್ಲಿ **ಮೃಜ್ಯಮಾನಃ** ಎಂಬ ಈ ಋಕ್ಕು ಮೂರನೆಯದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ—**ಮೃಜ್ಯಮಾನಃ ಸುಹಸ್ತ್ಯ ದಶಭಿರ್ವಿವಸ್ವತಃ** ಎಂಬ ಸೂತ್ರದಿಂದ (ಆ. ೫-೧೨) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಮೃಜಾನೋ ವಾರೇ ಪವಮಾನೋ ಅವ್ಯಯೋ ವೃಷಾವ ಚಕ್ರದೋ ವನೇ।

ದೇವಾನಾಂ ಸೋಮ ಪವಮಾನ ನಿಷ್ಕೃತಂ ಗೋಭಿರಂಜಾನೋ ಅರ್ಷಸಿ॥

॥ ಪದಪಾಠಃ ॥

ಮೃಜಾನಃ। ವಾರೇ। ಪವಮಾನಃ। ಅವ್ಯಯೇ। ವೃಷಾ। ಅವ। ಚಕ್ರದಃ। ವನೇ।

ದೇವಾನಾಂ। ಸೋಮ। ಪವಮಾನ। ನಿಃಽಕೃತಂ। ಗೋಭಿಃ। ಅಂಜಾನಃ। ಅರ್ಷಸಿ॥ ೨೨॥

॥ ಸಾಯಣಭಾಷ್ಯಂ ॥

ಹೇ ಸೋಮ ವೃಷಾ ವರ್ಷಿತಾ ತ್ವಂ ಮೃಜಾನೋ ವಸತೀವರೀಭಿರ್ಮೃಜ್ಯಮಾನೋಽಲಂಕ್ರಿಯ-ಮಾಣೋಽವ್ಯಯೇಽವಿಮಯೇ ವಾರೇ ವಾಲೇ ಪವಿತ್ರೇ ಪವಮಾನಃ ಪೂಯಮಾನಃ ಸನ್ ವನೇ ವನ-ನೀಯ ಉದಕೇ ಕಾಷ್ಠೇ ಕಲಶೇ ವಾಽವ ಚಕ್ರದಃ । ಅವಕ್ರಂದಸಿ । ಶಬ್ದಾಯಸೇ । ತತೋ ಹೇ ಸೋಮ ಹೇ ಪವಮಾನ ತ್ವಂ ಗೋಭಿರ್ಗವ್ಯೈಃ ಕ್ಷೀರಾದಿಭಿರಂಜಾನೋಽಜ್ಯಮಾನಃ ಸನ್ನಿಷ್ಕೃತಂ ಸಂಸ್ಕೃತಂ ದೇವಾನಾಂ ಸ್ಥಾನಮರ್ಷಸಿ । ಗಚ್ಛಸಿ ॥

॥ ಪ್ರತಿಪದಾರ್ಥ ॥

(ಸೋಮ—ಎಲೈ ಸೋಮದೇವನೇ) । ವೃಷಾ—ಕಾಮವರ್ಷಕನಾದ ನೀನು । ಮೃಜಾನಃ—ಸುಸಂಸ್ಕೃತನಾಗಿಯೂ । ಅವ್ಯಯೇ—ಉಣ್ಣೆಯ । ವಾರೇ—ನಾರುಗಳುಳ್ಳ ದಶಾಪವಿತ್ರದಲ್ಲಿ । ಪವಮಾನಃ—ಶುದ್ಧಿಯನ್ನು ಹೊಂದುವವನಾಗಿಯೂ । ವನೇ—ಕಲಶದಲ್ಲಿ । ಅವ ಚಕ್ರದಃ ಶಬ್ದವನ್ನು ಮಾಡುತ್ತೀಯೆ । ಪವಮಾನ—ಪವಮಾನಸಂಜ್ಞಕನಾದ । ಸೋಮ—ಎಲೈ ಸೋಮನೇ । ಗೋಭಿಃ—ಕ್ಷೀರಾದಿಗಳೊಡನೆ । ಅಂಜಾನಃ—ಸೇರಿಕೊಂಡವನಾಗಿ । ನಿಷ್ಕೃತಂ—ಪರಿಷ್ಕೃತವಾದ । ದೇವಾನಾಂ—ದೇವತೆಗಳ ಸ್ಥಾನವನ್ನು । ಅರ್ಷಸಿ—ಸಮಿಾಪಿಸುತ್ತೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಕಾಮವರ್ಷಕನಾದ ನೀನು ಸುಸಂಸ್ಕೃತನಾಗಿಯೂ, ಉಣ್ಣೆಯ ನಾರುಗಳುಳ್ಳ ದಶಾಪವಿತ್ರದಲ್ಲಿ ಶುದ್ಧಿಯನ್ನು ಹೊಂದುವವನಾಗಿಯೂ ಕಲಶದಲ್ಲಿ ಶಬ್ದವನ್ನು ಮಾಡುತ್ತೀಯೆ. ಪವಮಾನಸಂಜ್ಞಕನಾದ ಎಲೈ ಸೋಮನೇ, ನೀನು ಕ್ಷೀರಾದಿಗಳೊಡನೆ ಸೇರಿಕೊಂಡವನಾಗಿ ಪರಿಷ್ಕೃತವಾದ ದೇವತೆಗಳ ಸ್ಥಾನವನ್ನು ಸಮಿಾಪಿಸುತ್ತೀಯೆ.

English Translation

The showerer of benefits, cleansed and filtered in the woollen fleece, you cry aloud in the water ; Soma Pavamana, mixed with the curds and milk, you go to the prepared (station) of the gods.

॥ ಸಂಹಿತಾಪಾಠಃ ॥

ಪವಸ್ವ ವಾಜಸಾತಯೇಽಭಿ ವಿಶ್ವಾನಿ ಕಾವ್ಯಾ ।

ತ್ವಂ ಸಮುದ್ರಂ ಪ್ರಥಮೋ ವಿ ಧಾರಯೋ ದೇವೇಭ್ಯಃ ಸೋಮ ಮತ್ಸರಃ ॥ ೨೩ ॥

॥ ಪದಪಾಠಃ ॥

ಪವಸ್ವ । ವಾಜ್ಽಸಾತಯೇ । ಅಭಿ । ವಿಶ್ವಾನಿ । ಕಾವ್ಯಾ ।

ತ್ವಂ । ಸಮುದ್ರಂ । ಪ್ರಥಮಃ । ವಿ । ಧಾರಯಃ । ದೇವೇಭ್ಯಃ । ಸೋಮ । ಮತ್ಸರಃ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ಸೋಮ ವಿಶ್ವಾನಿ ಸರ್ವಾಣಿ ಕಾವ್ಯಾ ಕವಿಕರ್ಮಾಣಿ ಸ್ತೋತ್ರಾಣ್ಯಭಿಲಕ್ಷ್ಯ ವಾಜಸಾತಯೇಽನ್ನಲಾಭಾಯ ಪವಸ್ವ । ಕ್ಷರ । ಹೇ ಸೋಮ ದೇವೇಭ್ಯೋ ದೇವಾನಾಂ ಮತ್ಸರೋ ಮದಕರಃ ಪ್ರಥಮಃ ಸರ್ವದೇವಾನಾಂ ಮುಖ್ಯಸ್ತ್ವಂ ಸಮುದ್ರಮಂತರಿಕ್ಷಂ ಕಲಶಂ ವಾ ವಿ ಧಾರಯಃ । ವಿಶೇಷೇಣ ಧಾರಯಸಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ವಿಶ್ವಾನಿ**—ಸಮಸ್ತವಾದ । **ಕಾವ್ಯಾ ಅಭಿ**—ಸ್ತುತಿಗಳನ್ನೂ ಗಮನಿಸಿ । **ವಾಜಸಾತಯೇ**—ಅನ್ನಲಾಭಾರ್ಥವಾಗಿ । **ಪವಸ್ವ**—ಸ್ರವಿಸು । **ಸೋಮ**—ಎಲೈ ಸೋಮನೇ । **ದೇವೇಭ್ಯಃ**—ದೇವತೆಗಳಿಗೆ । **ಮತ್ಸರಃ**—ಹರ್ಷಕಾರಕನಾದವನೂ । **ಪ್ರಥಮಃ**—ಅತ್ಯುತ್ತಮನೂ ಆದ । **ತ್ವಂ**—ನೀನು । **ಸಮುದ್ರಂ**—ಅಂತರಿಕ್ಷವನ್ನು । **ವಿ ಧಾರಯಃ**—ಅತಿಶಯವಾಗಿ ಧರಿಸಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಸಮಸ್ತವಾದ ಸ್ತುತಿಗಳಿಗೂ ಅಭಿಮುಖವಾಗಿ ನೀನು ಅನ್ನಲಾಭಾರ್ಥವಾಗಿ ಪ್ರವಹಿಸು. ಎಲೈ ಸೋಮನೇ, ದೇವತೆಗಳಿಗೆ ಹರ್ಷಕಾರಕನೂ, ಅತ್ಯುತ್ತಮನೂ ಆದ ನೀನು ಅತಿಶಯವಾಗಿ ಅಂತರಿಕ್ಷವನ್ನು ಧರಿಸಿದ್ದೀಯೆ.

English Translation

Flow, Soma, to all praises to procure food (for us) ; you, the exhilarator of the gods, are the chief supporter of the firmament.

॥ ಸಂಹಿತಾಪಾಠಃ ॥

**ಸ ತೂ ಪವಸ್ವ ಪರಿ ಪಾರ್ಥಿವಂ ರಜೋ ದಿವ್ಯಾ ಚ ಸೋಮ ಧರ್ಮಭಿಃ ।**

**ತ್ವಾಂ ವಿಪ್ರಾಸೋ ಮತಿಭಿರ್ವಿಚಕ್ಷಣ ಶುಭ್ರಂ ಹಿನ್ವಂತಿ ಧೀತಿಭಿಃ ॥೨೪॥**

॥ ಪದಪಾಠಃ ॥

ಸಃ । ತು । ಪವಸ್ವ । ಪರಿ । ಪಾರ್ಥಿವಂ । ರಜಃ । ದಿವ್ಯಾ । ಚ । ಸೋಮ । ಧರ್ಮಽಭಿಃ ।

ತ್ವಾಂ । ವಿಪ್ರಾಸಃ । ಮತಿಽಭಿಃ । ವಿಽಚಕ್ಷಣ । ಶುಭ್ರಂ । ಹಿನ್ವಂತಿ । ಧೀತಿಽಭಿಃ ॥ ೨೪ ॥

॥ ಸಾಯಣಭಾಷ್ಯಂ ॥

**ಹೇ ಸೋಮ ತಾದೃಶಸ್ತ್ವಂ ಪಾರ್ಥಿವಂ ರಜೋ ಲೋಕಂ ಪ್ರತಿ ದಿವ್ಯಾನಿ ಚ ರಜಾಂಸಿ ಪ್ರತಿ ಧರ್ಮಭಿರ್ಧಾರಕೈಃ ಸಹ ತು ಕ್ಷಿಪ್ರಂ ಪರಿ ಪವಸ್ವ । ಪರಿತಃ ಕ್ಷರ । ಹೇ ವಿಚಕ್ಷಣ ವಿದ್ರಷ್ಟಃ ಸೋಮ ವಿಪ್ರಾಸೋ ವಿಪ್ರಾ ಮೇಧಾವಿನೋ ಮತಿಭಿಃ ಸ್ತುತಿಭಿರ್ಧೀತಿಭಿರಂಗುಲೀಭಿಶ್ಚ ಶುಭ್ರಂ ಶ್ವೇತವರ್ಣಂ ತ್ವಾಂ ಹಿನ್ವಂತಿ । ಪ್ರೇರಯಂತಿ ॥**

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಸಃ**—ಪ್ರಸಿದ್ಧನಾದ ನೀನು । **ಪಾರ್ಥಿವಂ ರಜಃ**—ಪೃಥ್ವೀ ಲೋಕಕ್ಕೂ । **ಚ**—ಮತ್ತು । **ದಿವ್ಯಾ**—ದ್ಯುಲೋಕಕ್ಕೂ ಅಭಿಮುಖವಾಗಿ । **ಧರ್ಮಭಿಃ**—ಧಾರಕವಾದ ನಿನ್ನ ಶಕ್ತಿಗಳೊಡನೆ । **ತು**—ಕ್ಷಿಪ್ರವಾಗಿ । **ಪವಸ್ವ**—ಸ್ರವಿಸು । **ವಿಚಕ್ಷಣ**—ಸೂಕ್ಷ್ಮದೃಷ್ಟಿಯುಳ್ಳ ಎಲೈ ಸೋಮನೇ । **ವಿಪ್ರಾಸಃ**—ಮೇಧಾವಿಗಳು । **ಮತಿಭಿಃ**—ಸ್ತುತಿಗಳಿಂದಲೂ । **ಧೀತಿಭಿಃ**—ಅಂಗುಲಿಗಳಿಂದಲೂ । **ಶುಭ್ರಂ**—ಶುಭ್ರವರ್ಣವುಳ್ಳ । **ತ್ವಾಂ**—ನಿನ್ನನ್ನು । **ಹಿನ್ವಂತಿ**—ಪ್ರೇರಿಸುತ್ತಾರೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಪ್ರಸಿದ್ಧನಾದ ನೀನು ಪೃಥ್ವೀಲೋಕಕ್ಕೂ ಮತ್ತು ದ್ಯುಲೋಕಕ್ಕೂ ಅಭಿಮುಖವಾಗಿ ಧಾರಕವಾದ ನಿನ್ನ ಶಕ್ತಿಗಳೊಡನೆ ಕ್ಷಿಪ್ರವಾಗಿ ಸ್ರವಿಸು. ಸೂಕ್ಷ್ಮದೃಷ್ಟಿಯುಳ್ಳ ಎಲೈ ಸೋಮನೇ, ಮೇಧಾವಿಗಳು ಸ್ತುತಿಗಳಿಂದಲೂ ಅಂಗುಲಿಗಳಿಂದಲೂ ಶುಭ್ರವರ್ಣವುಳ್ಳ ನಿನ್ನನ್ನು ಪ್ರೇರಿಸುತ್ತಾರೆ.

English Translation

Flow quickly, Soma, with your supports, to the terrestrial and celestial worlds ; the sages express you radiant, O observer of all, with praises and with their fingers.

॥ ಸಂಹಿತಾಪಾಠಃ ॥

**ಪವಮಾನಾ ಅಸೃಕ್ಷತ ಪವಿತ್ರಮತಿ ಧಾರಯಾ ।**

**ಮರುತ್ವಂತೋ ಮತ್ಸರಾ ಇಂದ್ರಿಯಾ ಹಯಾ ಮೇಧಾಮಭಿ ಪ್ರಯಾಂಸಿ ಚ ॥ ೨೫ ॥**

॥ ಪದಪಾಠಃ ॥

**ಪವಮಾನಾಃ । ಅಸೃಕ್ಷತ । ಪವಿತ್ರಂ । ಅತಿ । ಧಾರಯಾ ।**

**ಮರುತ್ವಂತಃ । ಮತ್ಸರಾಃ । ಇಂದ್ರಿಯಾಃ । ಹಯಾಃ । ಮೇಧಾಂ । ಅಭಿ । ಪ್ರಯಾಂಸಿ । ಚ । ೨೫॥**

॥ ಸಾಯಣಭಾಷ್ಯಂ ॥

ಪವಮಾನಾಃ ಪೂಯಮಾನಾಃ ಸೋಮಾ ಧಾರಯಾತ್ಮೀಯಯಾ ಪವಿತ್ರಮತೀತ್ಯಾಸೃಕ್ಷತ । ಸೃಜ್ಯಂತೇ । ಕೀದೃಶಾಃ । ಮರುತ್ವಂತೋ ಮರುದ್ಭಿರ್ಯುಕ್ತಾ ಮತ್ಸರಾ ಮದಕರಾ ಇಂದ್ರಿಯಾ ಇಂದ್ರಜುಷ್ಟಾಃ । ಮೇಧಾಂ ಸ್ತುತಿಂ ಪ್ರಯಾಂಸ್ಯನ್ನಾನಿ ಚಾಭಿಲಕ್ಷ್ಯ ಸ್ತೋತೃಭ್ಯ ಉಭಯಂ ಕರ್ತುಂ ವಾ ಹಯಾ ಗಂತಾರ ಏತೇ ಸೃಜ್ಯಂತೇ ॥

॥ ಪ್ರತಿಪದಾರ್ಥ ॥

ಮರುತ್ವಂತಃ— ಮರುತ್ತುಗಳೊಡನೆ ಕೂಡಿದವೂ । ಮತ್ಸರಾಃ— ಹರ್ಷಕಾರಕವೂ । ಇಂದ್ರಿಯಾಃ— ಇಂದ್ರನಿಗೆ ಪ್ರೀತಿಕಾರಕವೂ । ಹಯಾಃ— ಶೀಘ್ರಗಾಮಿಗಳೂ । ಮೇಧಾಂ ಅಭಿ— ಸ್ತುತಯನ್ನು ಲಕ್ಷಿಸಿ । ಪ್ರಯಾಂಸಿ ಚ— ಅನ್ನಗಳನ್ನು ಒದಗಿಸುವುವೂ । ಪವಮಾನಾಃ— ಶುದ್ಧಿಯನ್ನು ಹೊಂದುವುವೂ ಆದ ಸೋಮ ರಸಗಳು । ಪವಿತ್ರಂ ಅತಿ— ದಶಾಪವಿತ್ರವನ್ನು ದಾಟಿ । ಧಾರಯಾ— ಧಾರಾರೂಪದಲ್ಲಿ । ಅಸೃಕ್ಷತ— ಹೊರಕ್ಕೆ ಸ್ರವಿಸುತ್ತವೆ.

॥ ಭಾವಾರ್ಥ ॥

ಮರುತ್ತುಗಳೊಡನೆ ಕೂಡಿದವೂ, ಹರ್ಷಕಾರಕವೂ, ಇಂದ್ರನಿಗೆ ಪ್ರೀತಿಕಾರಕವೂ, ಶೀಘ್ರಗಾಮಿಗಳೂ, ಸ್ತುತಿಯನ್ನು ಲಕ್ಷಿಸಿ ಅನ್ನಗಳನ್ನು ಒದಗಿಸುವುವೂ, ಶುದ್ಧಿಯನ್ನು ಹೊಂದುವುವೂ ಆದ ಸೋಮರಸಗಳು ದಶಾಪವಿತ್ರವನ್ನು ದಾಟಿ ಧಾರಾರೂಪದಲ್ಲಿ ಹೊರಕ್ಕೆ ಸ್ರವಿಸುತ್ತವೆ.

English Translation

Your purified juices are let flow through the filter in a stream accompanied by the Maruts, exhilarating, pleasing Indra, swift-moving, bringing praise and food.

॥ ಸಂಹಿತಾಪಾಠಃ ॥

ಅಪೋ ವಸಾನಃ ಪರಿ ಕೋಶಮರ್ಷತೀಂದುರ್ಹಿಯಾನಃ ಸೋತೃಭಿಃ ।
ಜನಯಞ್ಜ್ಯೋತಿರ್ಮಂದನಾ ಅವೀವಶದ್ಗಾಃ ಕೃಣ್ವಾನೋ ನ ನಿರ್ಣಿಜಂ ॥

॥ ಪದಪಾಠಃ ॥

ಅಪಃ । ವಸಾನಃ । ಪರಿ । ಕೋಶಂ । ಅರ್ಷತಿ । ಇಂದುಃ । ಹಿಯಾನಃ । ಸೋತೃಽಭಿಃ ।
ಜನಯನ್ । ಜ್ಯೋತಿಃ । ಮಂದನಾಃ । ಅವೀವಶತ್ । ಗಾಃ । ಕೃಣ್ವಾನಃ । ನ । ನಿಃಽನಿಜಂ ॥ ೨೬ ॥

॥ ಸಾಯಣಭಾಷ್ಯಂ ॥

ಅಪೋ ವಸತೀರ್ವರೀರ್ವಸಾನ ಆಚ್ಛಾದಯನ್ ಸೋತೃಭಿರಭಿಷುಣ್ವದ್ಭಿರ್ಹಿಯಾನಃ ಪ್ರೇರ್ಯಮಾಣಃ ಇಂದುಃ ಸೋಮಃ ಕೋಶಂ ಕಲಶಂ ಪರ್ಯರ್ಷತಿ । ಪ್ರತಿ ಗಚ್ಛತಿ । ಕಿಂ ಚ ಜ್ಯೋತಿರ್ದೀಪ್ತಿಂ ಜನಯನ್ನುತ್ಪಾದಯನ್ ಗಾ ಗವ್ಯಾನಿ ಕ್ಷೀರಾದೀನಿ ನಿರ್ಣಿಜಮಾತ್ಮನೋ ರೂಪಂ ಕೃಣ್ವಾನಃ ಕುರ್ವನ್ ಮಿಶ್ರಯನ್ ಸೋಽಯಂ ಸೋಮಃ । ನಃ ಸಂಪ್ರತ್ಯರ್ಥೇ । ಇದಾನೀಂ ಮಂದನಾಃ ಸ್ತುತೀರವೀವಶತ್ । ಕಾಮಯತೇ ॥ ವಶ ಕಾಂತೌ । ಲುಙಿ ಚಙಿ ರೂಪಂ ॥

॥ ಪ್ರತಿಪದಾರ್ಥ ॥

**ಅಪಃ**—ವಸತೀವರಿಗಳನ್ನು । **ವಸಾನಃ**—ಹೊದ್ದುಕೊಂಡವನೂ । **ಸೋತೃಭಿಃ**—ಹಿಂಡುವ ಋತ್ವಿಕ್ಕುಗಳಿಂದ । **ಹಿಯಾನಃ**—ಹಿಂಡಲ್ಪಟ್ಟವನೂ ಆದ । **ಇಂದುಃ**—ಸೋಮನು । **ಕೋಶಂ ಪರಿ**—ಕಲಶಾಭಿಮುಖವಾಗಿ। **ಅರ್ಷತಿ**—ಪ್ರವಿಸುತ್ತಾನೆ । **ಜ್ಯೋತಿಃ**—ಕಾಂತಿಯನ್ನು । **ಜನಯನ್**—ಉತ್ಪನ್ನಮಾಡುತ್ತಲೂ । **ಗಾಃ**—ಕ್ಷೀರಾದಿಗಳನ್ನು । **ನಿರ್ಣಿಜಂ**—ತನ್ನದೇ ಆದ ರೂಪವುಳ್ಳವನಾಗಿ । **ಕೃಣ್ವಾನಃ**—ಮಾಡುತ್ತಲೂ । **ನ**—ಈಗ । **ಮಂದನಾಃ**—ಸ್ತುತಿಗಳನ್ನು । **ಅವೀವಶತ್**—ಅಪೇಕ್ಷಿಸುತ್ತಾನೆ.

॥ ಭಾವಾರ್ಥ ॥

ವಸತೀವರಿಗಳೊಡನೆ ಮಿಶ್ರಿತನೂ, ಹಿಂಡುವ ಋತ್ವಿಕ್ಕುಗಳಿಂದ ಹಿಂಡಲ್ಪಟ್ಟವನೂ ಆದ ಸೋಮನು ಕಲಶಾಭಿಮುಖವಾಗಿ ಪ್ರವಿಸುತ್ತಾನೆ. ಕಾಂತಿಯನ್ನು ಉತ್ಪನ್ನಮಾಡುತ್ತಲೂ, ಕ್ಷೀರಾದಿಗಳನ್ನು ತನ್ನದೇ ಆದ ರೂಪವುಳ್ಳವನ್ನಾಗಿ ಮಾಡುತ್ತಲೂ ಈಗ ಸ್ತುತಿಗಳನ್ನು ಅಪೇಕ್ಷಿಸುತ್ತಾನೆ.

English Translation

Indu clothed with waters effused by the worshippers rushes to the receptacle, generating light, identifying its form with the (products of the) cows, he covets now (our) praises.

## ನೂರ ಎಂಟನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಪವಸ್ವೇತಿ ಷೋಡಶರ್ಚಂ ಪಂಚಮಂ ಸೂಕ್ತಂ । ಆದ್ಯದ್ವ್ಯೃಚಸ್ಯ ಗೌರಿವೀತಿರ್ನಾಮ ಶಕ್ತಿಪುತ್ರ ಋಷಿಃ । ತೃತೀಯಾಯಾಃ ಶಕ್ತಿರ್ನಾಮ ವಾಸಿಷ್ಠಃ । ತತಃ ಪಂಚಾನಾಂ ದ್ವ್ಯೃಚಾನಾಮೂರುರ್ನಾಮಾಂಗಿರಸ ಋಜಿಶ್ವಾ ನಾಮ ಭಾರದ್ವಾಜ ಊರ್ಧ್ವಸದ್ಮಾ ನಾಮಾಂಗಿರಸಃ ಕೃತಯಶಾ ನಾಮ ಕಶ್ಚಿತ್ ಸೋಽಪ್ಯಾಂಗಿರಸ ಋಣಂಚಯೋ ನಾಮ ರಾಜರ್ಷಿರಿತ್ಯೇತೇ ಕ್ರಮೇಣರ್ಷಯಃ । ಏವಂ ತ್ರಯೋದಶ

**ಗತಾಃ ತತಸ್ತಿಸೃಣಾಂ ವಾಸಿಷ್ಠಃ ಶಕ್ತಿಃ । ಪ್ರಥಮಾತೃತೀಯಾದ್ಯಾ ಅಯುಜಃ ಕಕುಭಃ । ದ್ವಿತೀಯಾ ಚತುರ್ಥ್ಯಾದ್ಯಾ ಯುಜಃ ಸತೋಬೃಹತ್ಯಃ । ಸ ಸುನ್ವೇ ಯೋ ವಸೂನಾಮಿತ್ಯೇಷಾ ತು ಯವಮಧ್ಯಾ ಗಾಯತ್ರೀ । ಪವಮಾನಃ ಸೋಮೋ ದೇವತಾ। ತಥಾ ಚಾನುಕ್ರಮ್ಯತೇ। ಪವಸ್ವ ಷೋಳಶ ಗೌರಿವೀತಿರ್ದ್ವ್ಯೃಚಂ ಶಕ್ತಿರೇಕಾಮೂರುರ್ಋಜಿಶ್ವೋರ್ಧ್ವಸದ್ಮಾ ಕೃತಯಶಾ ಋಣಂಚಯ ಇತ್ಯೃಷಯೋ ದ್ವ್ಯೃಚಾಸ್ತಿಸ್ರಃ ಶಕ್ತಿಃ ಕಾಕುಭಾಃ ಪ್ರಗಾಥಾಃ ಸ ಸುನ್ವೇ ಗಾಯತ್ರೀ ಯವಮಧ್ಯೇತಿ ॥ ಗತೋ ವಿನಿಯೋಗಃ ॥**

ಅನುವಾದವು—**ಪವಸ್ವ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹದಿನಾರು ಋಕ್ಕುಗಳಿರುವವು. ಈ ಸೂಕ್ತದ ಮೊದಲಿನ ಎರಡು ಋಕ್ಕುಗಳಿಗೆ ಶಕ್ತಿಋಷಿಯ ಪುತ್ರನಾದ ಗೌರಿವೀತಿ ಎಂಬುವನು ಋಷಿಯು; ಮೂರನೆಯ ಋಕ್ಕಿಗೆ ವಸಿಷ್ಠಪುತ್ರನಾದ ಶಕ್ತಿ ಎಂಬುವನು ಋಷಿಯು. ಅಲ್ಲಿಂದ ಮುಂದಕ್ಕೆ ಎರಡು ಋಕ್ಕುಗಳಿಗೆ (೪-೫) ಆಂಗಿಸರ ಊರುಃ ಎಂಬುವನೂ, ಮುಂದಿನ ಎರಡು ಋಕ್ಕುಗಳಿಗೆ (೬-೭) ಭರದ್ವಾಜಪುತ್ರನಾದ ಋಜಿಶ್ವನೂ, ಮುಂದಿನ ಎರಡು ಋಕ್ಕುಗಳಿಗೆ (೮-೯) ಊರ್ಧ್ವಸದ್ಮಾ ಆಂಗಿರಸಃ ಎಂಬುವನೂ, ಮುಂದಿನ ಎರಡು ಋಕ್ಕುಗಳಿಗೆ (೧೦-೧೧) ಕೃತಯಶಾಃ ಆಂಗಿರಸಃ ಎಂಬುವನೂ ಮುಂದಿನ ಎರಡು ಋಕ್ಕುಗಳಿಗೆ (೧೨-೧೩) ಋಣಂಚಯನೆಂಬ ರಾಜರ್ಷಿಯೂ ಋಷಿಗಳು. ಈ ರೀತಿ ಹದಿಮೂರು ಋಕ್ಕುಗಳಾದನಂತರ ಮುಂದಿನ ಮೂರು ಋಕ್ಕುಗಳಿಗೆ (೧೪-೧೬) ಹಿಂದೆ ಹೇಳಿದ ವಸಿಷ್ಠಋಷಿಯ ಪುತ್ರನಾದ ಶಕ್ತಿಯೇ ಋಷಿಯು. ಪವಮಾನಃ ಸೋಮಃ ಎಂಬುದು ದೇವತೆಯು ; ಈ ಸೂಕ್ತದ ೧, ೩ ಮೊದಲಾದ ಅಸಮಸಂಖ್ಯೆಯ ಋಕ್ಕುಗಳು ಕಕುಪ್ ಛಂದಸ್ಕವು. ಆದರೆ **ಸ ಸುನ್ವೇ ಯೋ ವಸೂನಾಂ** ಎಂಬ ಹದಿಮೂರನೆಯ ಋಕ್ಕುಮಾತ್ರ ಗಾಯತ್ರೀ ಯವಮಧ್ಯಾ ಎಂಬ ಛಂಸ್ಸಿನದು. ೨, ೪ ಮೊದಲಾದ ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಪವಸ್ವ ಷೋಳಶ ಗೌರಿವೀತಿರ್ದ್ವ್ಯೃಚಂ ಶಕ್ತಿರೇಕಾಮೂರುರ್ಋಜಿಶ್ವೋರ್ಧ್ವಸದ್ಮಾ ಕೃತಯಶಾ ಋಣಂಚಯ ಇತ್ಯೃಷಯೋ ದ್ವ್ಯೃಚಾಸ್ತಿಸ್ರಃ ಶಕ್ತಿಃ ಕಾಕುಭಾಃ ಪ್ರಗಾಥಾಃ ಸ ಸುನ್ವೇ ಗಾಯತ್ರೀ ಯವಮಧ್ಯಾ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೮

ಮಂಡಲ—೯ ॥ ಅನುವಾಕ—೭ ॥ ಸೂಕ್ತ—೧೦೮ ॥
ಅಷ್ಟಕ—೭ ॥ ಅಧ್ಯಾಯ—೫ ॥ ವರ್ಗ—೧೭, ೧೮, ೧೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೬ ॥
ಋಷಿಃ—೧, ೨, ಗೌರಿವೀತಿಃ । ೧-೩, ೧೪-೧೬. ಶಕ್ತಿಃ । ೪, ೫. ಊರುಃ ।
೬, ೭, ಋಜಿಶ್ವಾ । ೮, ೯, ಊರ್ಧ್ವಸದ್ಮಾ । ೧೦, ೧೧. ಕೃತಯಶಾಃ ।
೧೨, ೧೩. ಋಣಂಚಯಃ ॥
ದೇವತಾ—ಪವಮಾನಃ ಸೋಮಃ ॥
ಛಂದಃ—೧, ೩, ೫, ೭, ೯, ೧೧, ೧೫, ಕಕುಪ್ । ೨, ೪, ೬, ೮, ೧೦, ೧೨, ೧೪, ೧೬, ಸತೋಬೃಹತೀ । ೧೩. ಗಾಯತ್ರೀ ಯವಮಧ್ಯಾ ॥

॥ ಸಂಹಿತಾಪಾಠಃ ॥

ಪವಸ್ವ ಮಧುಮತ್ತಮ ಇಂದ್ರಾಯ ಸೋಮ ಕ್ರತುವಿತ್ತಮೋ ಮದಃ ।

ಮಹಿ ದ್ಯುಕ್ಷತಮೋ ಮದಃ ॥ ೧ ॥

॥ ಪದಪಾಠಃ ॥

ಪವಸ್ವ । ಮಧುಮತ್ಽತಮಃ । ಇಂದ್ರಾಯ । ಸೋಮ । ಕ್ರತುವಿತ್ಽತಮಃ । ಮದಃ ।

ಮಹಿ । ದ್ಯುಕ್ಷಽತಮಃ । ಮದಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸೋಮ ಮಧುಮತ್ತಮೋಽತಿಶಯೇನ ಮಾಧುರ್ಯೋಪೇತಸ್ತ್ವಮಿಂದ್ರಾಯೇಂದ್ರಾರ್ಥಂ ಮದೋ ಮದಕರಃ ಸನ್ ಪವಸ್ವ । ಕ್ಷರ । ಕೀದೃಶಃ । ಕ್ರತುವಿತ್ತಮೋಽತ್ಯಂತಂ ಪ್ರಜ್ಞಾಯಾಃ ಕರ್ಮಣೋ ವಾ ಲಂಭಕೋ ಮಹಿ ಮಹಾನ್ ಮಂಹನೀಯೋ ವಾ ದ್ಯುಕ್ಷತಮೋಽತ್ಯಂತಂ ದೀಪ್ತೋ ಮದೋ ಮದಹೇತುಃ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ **ಮಧುಮತ್ತಮಃ**—ಮಾಧುರ್ಯದಿಂದ ಕೂಡಿದವನೂ । **ಕ್ರತುವಿತ್ತಮಃ**—ಅತ್ಯುತ್ತಮವಾದ ಕರ್ಮನಿರ್ವಾಹಕನೂ । **ಮಹಿ**—ಮಹಾತ್ಮನೂ । **ದ್ಯುಕ್ಷತಮಃ**—ಅತ್ಯಂತ ಪ್ರಕಾಶಮಾನನೂ । **ಮದಃ**—ಹರ್ಷಕಾರಕನೂ ಆದ ನೀನು । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಮದಃ**—ಹರ್ಷವನ್ನುಂಟುಮಾಡುತ್ತ । **ಪವಸ್ವ**—ಸ್ರವಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಮಾಧುರ್ಯದಿಂದ ಕೂಡಿದವನೂ, ಅತ್ಯುತ್ತಮವಾದ ಕರ್ಮನಿರ್ವಾಹಕನೂ, ಮಹಾತ್ಮನೂ, ಅತ್ಯಂತ ಪ್ರಕಾಶಮಾನನೂ, ಹರ್ಷಕಾರಕನೂ ಆದ ನೀನು ಇಂದ್ರನಪಾನಾರ್ಥವಾಗಿ ಹರ್ಷವನ್ನುಂಟುಮಾಡುತ್ತ ಸ್ರವಿಸು.

English Translation

Soma, who are most sweet-flavoured, most intelligent, the exhilarator, flow for Indra, the great, the most brilliant, the exhilarator.

॥ ಸಂಹಿತಾಪಾಠಃ ॥

ಯಸ್ಯ ತೇ ಪೀತ್ವಾ ವೃಷಭೋ ವೃಷಾಯತೇಽಸ್ಯ ಪೀತಾ ಸ್ವರ್ವಿದಃ ।

ಸ ಸುಪ್ರಕೇತೋ ಅಭ್ಯಕ್ರಮೀದಿಷೋಽಚ್ಛಾ ವಾಜಂ ನೈತಶಃ ॥ ೨ ॥

**ಗತಾಃ ತತಸ್ತಿಸೃಣಾಂ ವಾಸಿಷ್ಠಃ ಶಕ್ತಿಃ । ಪ್ರಥಮಾತೃತೀಯಾದ್ಯಾ ಅಯುಜಃ ಕಕುಭಃ । ದ್ವಿತೀಯಾ ಚತುರ್ಥ್ಯಾದ್ಯಾ ಯುಜಃ ಸತೋಬೃಹತ್ಯಃ । ಸ ಸುನ್ವೇ ಯೋ ವಸೂನಾಮಿತ್ಯೇಷಾ ತು ಯವಮಧ್ಯಾ ಗಾಯತ್ರೀ । ಪವಮಾನಃ ಸೋಮೋ ದೇವತಾ । ತಥಾ ಚಾನುಕ್ರಮ್ಯತೇ । ಪವಸ್ವ ಷೋಳಶ ಗೌರಿವೀತಿರ್ದ್ವ್ಯೃಚಂ ಶಕ್ತಿರೇಕಾಮೂರುರ್ಋಜಿಶ್ವೋರ್ಧ್ವಸದ್ಮಾ ಕೃತಯಶಾ ಋಣಂಚಯ ಇತ್ಯೃಷಯೋ ದ್ವ್ಯೃಚಾಸ್ತಿಸ್ರಃ ಶಕ್ತಿಃ ಕಾಕುಭಾಃ ಪ್ರಗಾಥಾಃ ಸ ಸುನ್ವೇ ಗಾಯತ್ರೀ ಯವಮಧ್ಯೇತಿ ॥ ಗತೋ ವಿನಿಯೋಗಃ ॥**

ಅನುವಾದವು—**ಪವಸ್ವ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹದಿನಾರು ಋಕ್ಕುಗಳಿರುವವು. ಈ ಸೂಕ್ತದ ಮೊದಲಿನ ಎರಡು ಋಕ್ಕುಗಳಿಗೆ ಶಕ್ತಿಋಷಿಯ ಪುತ್ರನಾದ ಗೌರಿವೀತಿ ಎಂಬುವನು ಋಷಿಯು ; ಮೂರನೆಯ ಋಕ್ಕಿಗೆ ವಸಿಷ್ಠಪುತ್ರನಾದ ಶಕ್ತಿ ಎಂಬುವನು ಋಷಿಯು. ಅಲ್ಲಿಂದ ಮುಂದಕ್ಕೆ ಎರಡು ಋಕ್ಕುಗಳಿಗೆ (೪-೫) ಅಂಗಿಸರ ಊರುಃ ಎಂಬುವನೂ, ಮುಂದಿನ ಎರಡು ಋಕ್ಕುಗಳಿಗೆ (೬-೭) ಭರದ್ವಾಜಪುತ್ರನಾದ ಋಜಿಶ್ವನೂ, ಮುಂದಿನ ಎರಡು ಋಕ್ಕುಗಳಿಗೆ (೮-೯) ಊರ್ಧ್ವಸದ್ಮಾ ಆಂಗಿರಸಃ ಎಂಬುವನೂ, ಮುಂದಿನ ಎರಡು ಋಕ್ಕುಗಳಿಗೆ (೧೦-೧೧) ಕೃತಯಶಾಃ ಆಂಗಿರಸಃ ಎಂಬುವನೂ ಮುಂದಿನ ಎರಡು ಋಕ್ಕುಗಳಿಗೆ (೧೨-೧೩) ಋಣಂಚಯನೆಂಬ ರಾಜರ್ಷಿಯೂ ಋಷಿಗಳು. ಈ ರೀತಿ ಹದಿಮೂರು ಋಕ್ಕುಗಳಾದನಂತರ ಮುಂದಿನ ಮೂರು ಋಕ್ಕುಗಳಿಗೆ (೧೪-೧೬) ಹಿಂದೆ ಹೇಳಿದ ವಸಿಷ್ಠಋಷಿಯ ಪುತ್ರನಾದ ಶಕ್ತಿಯೇ ಋಷಿಯು. ಪವಮಾನಃ ಸೋಮಃ ಎಂಬುದು ದೇವತೆಯು ; ಈ ಸೂಕ್ತದ ೧, ೩ ಮೊದಲಾದ ಅಸಮಸಂಖ್ಯೆಯ ಋಕ್ಕುಗಳು ಕಕುಪ್ ಛಂದಸ್ಕವು. ಆದರೆ **ಸ ಸುನ್ವೇ ಯೋ ವಸೂನಾಂ** ಎಂಬ ಹದಿಮೂರನೆಯ ಋಕ್ಕುಮಾತ್ರ ಗಾಯತ್ರೀ ಯವಮಧ್ಯಾ ಎಂಬ ಛಂದಸ್ಸಿನದು. ೨, ೪ ಮೊದಲಾದ ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಪವಸ್ವ ಷೋಳಶ ಗೌರಿವೀತಿರ್ದ್ವ್ಯೃಚಂ ಶಕ್ತಿರೇಕಾಮೂರುರ್ಋಜಿಶ್ವೋರ್ಧ್ವಸದ್ಮಾ ಕೃತಯಶಾ ಋಣಂಚಯ ಇತ್ಯೃಷಯೋ ದ್ವ್ಯೃಚಾಸ್ತಿಸ್ರಃ ಶಕ್ತಿಃ ಕಾಕುಭಾಃ ಪ್ರಗಾಥಾಃ ಸ ಸುನ್ವೇ ಗಾಯತ್ರೀ ಯವಮಧ್ಯಾ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೮

ಮಂಡಲ—೯ ॥ ಅನುವಾಕ—೭ ॥ ಸೂಕ್ತ—೧೦೮ ॥
ಅಷ್ಟಕ—೭ ॥ ಅಧ್ಯಾಯ ೫ ॥ ವರ್ಗ—೧೭, ೧೮, ೧೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೬ ॥
ಋಷಿ—೧, ೨, ಗೌರಿವೀತಿಃ । ೩, ೧೪-೧೬. ಶಕ್ತಿಃ । ೪, ೫. ಊರುಃ ।
೬, ೭, ಋಜಿಶ್ವಾ । ೮, ೯, ಊರ್ಧ್ವಸದ್ಮಾ । ೧೦, ೧೧. ಕೃತಯಶಾಃ ।
೧೨, ೧೩. ಋಣಂಚಯಃ ॥
ದೇವತಾ—ಪವಮಾನಃ ಸೋಮಃ ।
ಛಂದಃ—೧, ೩, ೫, ೭, ೯, ೧೧, ೧೫, ಕಕುಪ್ । ೨, ೪, ೬, ೮, ೧೦, ೧೨, ೧೪, ೧೬, ಸತೋಬೃಹತೀ । ೧೩. ಗಾಯತ್ರೀ ಯವಮಧ್ಯಾ ॥

॥ ಸಂಹಿತಾಪಾಠಃ ॥

ಪವ॑ಸ್ವ॒ ಮಧು॑ಮತ್ತಮ॒ ಇಂದ್ರಾ॑ಯ ಸೋಮ ಕ್ರತು॒ವಿತ್ತ॑ಮೋ॒ ಮದಃ॑ ।

ಮಹಿ॑ ದ್ಯು॒ಕ್ಷತ॑ಮೋ॒ ಮದಃ॑ ॥ ೧ ॥

॥ ಪದಪಾಠಃ ॥

ಪವ॑ಸ್ವ । ಮಧು॑ಮತ್ಽತಮಃ । ಇಂದ್ರಾ॑ಯ । ಸೋ॒ಮ॒ । ಕ್ರ॒ತು॒ವಿತ್ಽತ॑ಮಃ । ಮದಃ॑ ।

ಮಹಿ॑ । ದ್ಯು॒ಕ್ಷಽತ॑ಮಃ । ಮದಃ॑ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸೋಮ ಮಧುಮತ್ತಮೋಽತಿಶಯೇನ ಮಾಧುರ್ಯೋಪೇತಸ್ತ್ವಮಿಂದ್ರಾಯೇಂದ್ರಾರ್ಥಂ ಮದೋ ಮದಕರಃ ಸನ್ ಪವಸ್ವ । ಕ್ಷರ । ಕೀದೃಶಃ । ಕ್ರತುವಿತ್ತಮೋಽತ್ಯಂತಂ ಪ್ರಜ್ಞಾಯಾಃ ಕರ್ಮಣೋ ವಾ ಲಂಭಕೋ ಮಹಿ ಮಹಾನ್ ಮಂಹನೀಯೋ ವಾ ದ್ಯುಕ್ಷತಮೋಽತ್ಯಂತಂ ದೀಪ್ತೋ ಮದೋ ಮದಹೇತುಃ ॥

॥ ಪ್ರತಿಪದಾರ್ಥ ॥

**ಸೋಮ** ಎಲೈ ಸೋಮದೇವನೇ **ಮಧುಮತ್ತಮಃ**—ಮಾಧುರ್ಯದಿಂದ ಕೂಡಿದವನೂ । **ಕ್ರತುವಿತ್ತಮಃ**—ಅತ್ಯುತ್ತಮವಾದ ಕರ್ಮನಿರ್ವಾಹಕನೂ । **ಮಹಿ**—ಮಹಾತ್ಮನೂ । **ದ್ಯುಕ್ಷತಮಃ**—ಅತ್ಯಂತ ಪ್ರಕಾಶಮಾನನೂ । **ಮದಃ**—ಹರ್ಷಕಾರಕನೂ ಆದ ನೀನು । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಮದಃ**—ಹರ್ಷವನ್ನುಂಟುಮಾಡುತ್ತ । **ಪವಸ್ವ**—ಸ್ರವಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಮಾಧುರ್ಯದಿಂದ ಕೂಡಿದವನೂ, ಅತ್ಯುತ್ತಮವಾದ ಕರ್ಮನಿರ್ವಾಹಕನೂ, ಮಹಾತ್ಮನೂ, ಅತ್ಯಂತ ಪ್ರಕಾಶಮಾನನೂ, ಹರ್ಷಕಾರಕನೂ ಆದ ನೀನು ಇಂದ್ರನಪಾನಾರ್ಥವಾಗಿ ಹರ್ಷವನ್ನುಂಟುಮಾಡುತ್ತ ಸ್ರವಿಸು.

## English Translation

Soma, who are most sweet-flavoured, most intelligent, the exhilarator, flow for Indra, the great, the most brilliant, the exhilarator.

॥ ಸಂಹಿತಾಪಾಠಃ ॥

ಯಸ್ಯ॑ ತೇ ಪೀ॒ತ್ವಾ ವೃ॑ಷ॒ಭೋ ವೃ॑ಷಾ॒ಯತೇ॒ಽಸ್ಯ ಪೀ॒ತಾ ಸ್ವ॒ರ್ವಿದಃ॑ ।

ಸ ಸು॑ಪ್ರ॒ಕೇತೋ॑ ಅ॒ಭ್ಯ॑ಕ್ರಮೀ॒ದಿಷೋಽಚ್ಛಾ॒ ವಾಜಂ॒ ನೈತ॑ಶಃ ॥ ೨ ॥

॥ ಪದಪಾಠಃ ॥

ಯಸ್ಯ । ತೇ । ಪೀತ್ವಾ । ವೃಷಭಃ । ವೃಷಽಯತೇ । ಅಸ್ಯ । ಪೀತಾ । ಸ್ವಃಽವಿದಃ ।

ಸಃ । ಸುಽಪ್ರಕೇತಃ । ಅಭಿ । ಅಕ್ರಮೀತ್ । ಇಷಃ । ಅಚ್ಛ । ವಾಜಂ । ನ । ಏತಶಃ ॥ ೨ ॥

॥ ಸಾಯಣಭಾಷ್ಯಂ ॥

ವೃಷಭಃ ಕಾಮಾನಾಂ ವರ್ಷಕ ಇಂದ್ರೋ ಯಸ್ಯ ತೇ ತ್ವಾಂ ಪೀತ್ವಾ ವೃಷಾಯತೇ ವೃಷಭವದಾಚರತಿ । ಕಿಂ ಚ ಸ್ವರ್ದೃಶಃ ಸರ್ವಸ್ಯ ದರ್ಶಕಸ್ಯಾಸ್ಯ ತೇ ತವ ಪೀತಾ ಪಾನೇ ಸತಿ ಸುಪ್ರಕೇತಃ ಸುಪ್ರಜ್ಞಃ ಸ ಇಂದ್ರ ಇಷಃ ಶತ್ರೂಣಾಮನ್ನಾನ್ಯಭ್ಯಕ್ರಮೀತ್ । ಅಭಿಕ್ರಾಮತಿ । ತತ್ರ ದೃಷ್ಟಾಂತಃ । ವಾಜಂ ನೈತಶಃ । ಏತಶ ಇತ್ಯಶ್ವನಾಮ । ಯಥಾಶ್ವೋ ವಾಜಂ ಸಂಗ್ರಾಮಮಭಿಗಚ್ಛತಿ ತದ್ವತ್ ॥

॥ ಪ್ರತಿಪದಾರ್ಥ ॥

**ಏತಶಃ**—ಅಶ್ವವು । **ವಾಜಂ ನ**—ಯುದ್ಧರಂಗವನ್ನು ಆಕ್ರಮಿಸುವಂತೆ । **ವೃಷಭಃ**—ಕಾಮವರ್ಷಕನಾದ ಇಂದ್ರನು । **ಯಸ್ಯ ತೇ**—ಯಾವ ನಿನ್ನನ್ನು । **ಪೀತ್ವಾ**—ಪಾನಮಾಡಿ । **ವೃಷಾಯತೇ**-ವೃಷಭದಂತೆ ಶಕ್ತಿಯುಳ್ಳವನಾಗುವನೋ । **ಸ್ವರ್ದೃಶಃ**—ಸರ್ವದರ್ಶಕನಾದ । **ಅಸ್ಯ**—ಅದೇ ನಿನ್ನ । **ಪೀತಾ**—ಪಾನವುಂಟಾದಾಗ । **ಸುಪ್ರಕೇತಃ**—ಉತ್ತಮವಾದ ಪ್ರಜ್ಞೆಯುಳ್ಳ । **ಸಃ**—ಅದೇ ಇಂದ್ರನು । **ಇಷಃ ಅಚ್ಛ**—ಶತ್ರುಗಳ ಅನ್ನವನ್ನು ಎದುರಿಸಿ । **ಅಭ್ಯಕ್ರಮೀತ್**—ಆಕ್ರಮಿಸುತ್ತಾನೆ.

॥ ಭಾವಾರ್ಥ ॥

ಅಶ್ವವು ಯುದ್ಧರಂಗವನ್ನು ಆಕ್ರಮಿಸುವಂತೆ ಕಾಮವರ್ಷಕನಾದ ಇಂದ್ರನು ಯಾವ ನಿನ್ನನ್ನು ಪಾನಮಾಡಿ ವೃಷಭದಂತೆ ಶಕ್ತಿಯುಳ್ಳವನಾಗುವನೋ ಸರ್ವದರ್ಶಕನಾದ ಅದೇ ನಿನ್ನ ಪಾನವುಂಟಾದಾಗ ಉತ್ತಮವಾದ ಪ್ರಜ್ಞೆಯುಳ್ಳ ಅದೇ ಇಂದ್ರನು ಶತ್ರುಗಳ ಅನ್ನವನ್ನು ಎದುರಿಸಿ ಆಕ್ರಮಿಸುತ್ತಾನೆ.

## English Translation

By drinking whom the showerer Indra is invigorated, by drinking you who are the beholder of everything, the intelligent (Indra) reaches the viands (of the enemy) as a horse (reaches) the battle.

॥ ಸಂಹಿತಾಪಾಠಃ ॥

ತ್ವಂ ಹ್ಯ೧ಂಗ ದೈವ್ಯಾ ಪವಮಾನ ಜನಿಮಾನಿ ದ್ಯುಮತ್ತಮಃ ।

ಅಮೃತತ್ವಾಯ ಘೋಷಯಃ ॥ ೩ ॥

॥ ಪದಪಾಠಃ ॥

ತ್ವಂ । ಹಿ । ಅಂಗ । ದೈವ್ಯಾ । ಪವಮಾನ । ಜನಿಮಾನಿ । ದ್ಯುಮತ್ಽತಮಃ ।

ಅಮೃತ್ಽತ್ವಾಯ । ಘೋಷಯಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಪೂಯಮಾನ ಸೋಮ ದ್ಯುಮತ್ತಮೋಽತಿಶಯೇನ ದೀಪ್ತಿಮಾಂಸ್ತ್ವಂ ಹಿ ತ್ವಮೇವ ದೈವ್ಯಾ ದೇವಸಂಬಂಧೀನಿ ಜನಿಮಾನಿ ಜನ್ಮಾನಿ । ದೇವಾನಿತ್ಯರ್ಥಃ । ತಾನಮೃತತ್ವಾಯಾಮೃತತ್ವಾಯ ತೇಷಾಮಮರಣಾಯಾಂಗ ಕ್ಷಿಪ್ರಂ ಘೋಷಯಃ । ಶಬ್ದಾಯಸೇ ॥ ಘುಷಿರ್ ವಿಶಬ್ದನೇ । ಣ್ಯಂತಸ್ಯ ಲೇಟಿ ರೂಪಂ । ಹಿಯೋಗಾದನಿಘಾತಃ ॥

॥ ಪ್ರತಿಪದಾರ್ಥ ॥

ಪವಮಾನ—ಪವಮಾನಸಂಜ್ಞಕನಾದ ಎಲೈ ಸೋಮದೇವನೇ । ದ್ಯುಮತ್ತಮಃ—ಅತಿಶಯವಾಗಿ ಪ್ರಕಾಶಿಸುವ । ತ್ವಂ ಹಿ—ನೀನೇ । ದೈವ್ಯಾ—ದೇವಸಂಬಂಧಿಯಾದ । ಜನಿಮಾನಿ—ಉತ್ಪತ್ತಿಗಳನ್ನು (ದೇವತೆಗಳನೆಲ್ಲ) । ಅಮೃತತ್ವಾಯ—ಮರಣರಾಹಿತ್ಯವುಂಟಾಗಲೆಂದು । ಅಂಗ—ಕ್ಷಿಪ್ರವಾಗಿ । ಘೋಷಯಃ—ಪ್ರಕಟಿಸಿರುವೆ.

॥ ಭಾವಾರ್ಥ ॥

ಪವಮಾನಸಂಜ್ಞಕನಾದ ಎಲೈ ಸೋಮದೇವನೇ, ಅತಿಶಯವಾಗಿ ಪ್ರಕಾಶಿಸುವ ನೀನೇ ಸಕಲ ದೇವತೆಗಳಿಗೂ ಮರಣರಾಹಿತ್ಯವುಂಟಾಗಲೆಂದು ಘೋಷಿಸಿರುವೆ.

English Translation

For you, Pavamana, who are most brilliant, quickly shout to the races of the gods for (the sake of their) immortality:—

॥ ಸಂಹಿತಾಪಾಠಃ ॥

ಯೇನಾ ನವಗ್ವೋ ದಧ್ಯಙ್ಙಪೋರ್ಣುತೇ ಯೇನ ವಿಪ್ರಾಸ ಆಪಿರೇ ।
ದೇವಾನಾಂ ಸುಮ್ನೇ ಅಮೃತಸ್ಯ ಚಾರುಣೋ ಯೇನ ಶ್ರವಾಂಸ್ಯಾನಶುಃ ॥

॥ ಪದಪಾಠಃ ॥

ಯೇನ । ನವಽಗ್ವಃ । ದಧ್ಯಙ್ । ಅಪಽಊರ್ಣುತೇ । ಯೇನ । ವಿಪ್ರಾಸಃ । ಆಪಿರೇ ।

ದೇವಾನಾಂ । ಸುಮ್ನೇ । ಅಮೃತಸ್ಯ । ಚಾರುಣಃ । ಯೇನ । ಶ್ರವಾಂಸಿ । ಆನಶುಃ ॥ ೪ ॥

॥ ಸಾಯಣಭಾಷ್ಯಂ ॥

ನವಗ್ವಾಃ ನವನೀಯಗತಿಃ ಯದ್ವಾ ನವಭಿರ್ಮಾಸೈಃ ಸತ್ರಸ್ಯಾನುಷ್ಠಾತಾ ದಧ್ಯಙ್ಙೇತನ್ನಾಮಕೋಽಂಗಿರಾ ಯೇನ ಸೋಮೇನ ಪಣಿಭಿರಪಹೃತಾನಾಂ ಗವಾಂ ದ್ವಾರಮಪೋರ್ಣುತೇ ಅಪಾಚ್ಛಾದಯತಿ ವಿವೃತಮಕಾರ್ಷೀತ್ ವಿಪ್ರಾಸಸ್ತನ್ಮುಖಾಃ ಸರ್ವೇ ಮೇಧಾವಿನೋಽಂಗಿರಸೋ ಯೇನ ಚ ಸೋಮೇನಾಶಿರೇ ಏಭಿರಪಹೃತಾ ಗಾ ಆಪ್ನುವನ್ ಕಿಂಚ ದೇವಾನಾಮಿಂದ್ರಾದೀನಾಂ ಸುಮ್ನೇ ಸುಖೇ ಯಜ್ಞೇನ ಸಂಜಾತೇ ಸತಿ ಚಾರುಣಃ ಕಲ್ಯಾಣಸ್ಯಾಮೃತಸ್ಯೋದಕಸ್ಯ ಸಂಬಂಧೀನಿ ಶ್ರವಾಂಸ್ಯನ್ನಾನಿ ಯೇನ ಚ ಸೋಮೇನ ಯಜಮಾನಾ ಆನಶುಃ ಆಪ್ನುವನ್ ಅಲಭಂತ ಸ ತ್ವಂ ದೇವಾನಾಮಮೃತತ್ವಾಯ ಪವಸ್ವ ಇತಿ ಪೂರ್ವೇಣ ಸಮನ್ವಯಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ನವಗ್ವಾಃ**—ನವಮಾಸಗಳಲ್ಲಿ ಸತ್ರಯಜ್ಞವನ್ನು ಆಚರಿಸಿದ । **ದಧ್ಯಙ್**—ದಧ್ಯಙ್ ನಾಮಕನಾದ ಋಷಿಯು । **ಯೇನ**—ಯಾವ ನಿನ್ನ ಸಹಾಯದಿಂದ । **ಅಪೋರ್ಣುತೇ**—ಗೋವುಗಳನ್ನು ಮುಚ್ಚಿಟ್ಟಿದ್ದ ಬಾಗಿಲನ್ನು ತೆರೆಯಬಲ್ಲನೋ । **ವಿಪ್ರಾಸಃ**—ಮೇಧಾವಿಗಳಾದ ಅಂಗಿರಸ್ಸುಗಳು । **ಯೇನ**—ಯಾವ ನಿನ್ನ ಸಹಾಯದಿಂದ । **ಆಶಿರೇ**—ಎಲ್ಲಾ ಗೋವುಗಳನ್ನು ಪಡೆದರೋ (ಮತ್ತು) । **ದೇವಾನಾಂ**—ಇಂದ್ರಾದಿ ದೇವತೆಗಳಿಗೆ । **ಸುಮ್ನೇ**—ಸುಖಕರವಾದ ಯಜ್ಞವು ಆರಂಭವಾದಾಗ । **ಚಾರುಣಃ**—ಕಲ್ಯಾಣಕಾರಕವಾದ । **ಅಮೃತಸ್ಯ**—ಉದಕಸಂಬಂಧಿಯಾದ । **ಶ್ರವಾಂಸಿ**—ಅನ್ನಗಳನ್ನು । **ಯೇನ**—ಯಾವ ನಿನ್ನ ಸಹಾಯದಿಂದ । **ಆನಶುಃ**—ಯಜಮಾನರು ಪಡೆದರೋ (ಆ ನೀನು ದೇವತೆಗಳಿಗೆ ಮರಣರಾಹಿತ್ಯವನ್ನು ಪ್ರಕಟಿಸಿದೆ).

॥ ಭಾವಾರ್ಥ ॥

ಎಲೈ ಸೋಮದೇವನೇ, ನವಮಾಸಗಳಲ್ಲಿಯೇ ಸತ್ರಯಜ್ಞವನ್ನು ಆಚರಿಸಿದ ದಧ್ಯಙ್ ನಾಮಕನಾದ ಋಷಿಯು ಯಾವ ನಿನ್ನ ಸಹಾಯದಿಂದ ಗೋವುಗಳನ್ನು ಮುಚ್ಚಿಟ್ಟಿದ್ದ ಬಾಗಿಲನ್ನು ತೆರೆಯಬಲ್ಲನೋ, ಮೇಧಾವಿಗಳಾದ ಅಂಗಿರಸ್ಸುಗಳು ಯಾವ ನಿನ್ನ ಸಹಾಯದಿಂದ ಎಲ್ಲ ಗೋವುಗಳನ್ನೂ ಪಡೆದರೋ, ಇಂದ್ರಾದಿದೇವತೆಗಳಿಗೆ ಸುಖವನ್ನುಂಟುಮಾಡುವ ಯಜ್ಞವು ಆರಂಭವಾದಾಗ ಕಲ್ಯಾಣಕಾರಕವಾದ ಉದಕಸಂಬಂಧಿಯಾದ ಅನ್ನಗಳನ್ನು ಯಾವ ನಿನ್ನ ಸಹಾಯದಿಂದ ಯಜಮಾನರು ಪಡೆದರೋ ಆ ನೀನು ದೇವತೆಗಳಿಗೆ ಮರಣರಾಹಿತ್ಯವನ್ನು ಪ್ರಕಟಿಸಿದೆ.

## English Translation

(You) through whom Dadhyánch the offerer of the nine days' rite opened (the cave), through whom the rishis recovertd (the stolen cows), through whom under the protection of the gods the worshippers obtained the sustenance of the delicious (ambrosial) water—

॥ ಸಂಹಿತಾಪಾಠಃ ॥

ಏಷ ಸ್ಯ ಧಾರಯಾ ಸುತೋಽವ್ಯೋ ವಾರೇಭಿಃ ಪವತೇ ಮದಿಂತಮಃ ।

ಕ್ರೀಳನ್ನೂರ್ಮಿರಪಾಮಿವ ॥ ೫ ॥

॥ ಪದಪಾಠಃ ॥

ಏಷಃ । ಸ್ಯಃ । ಧಾರಯಾ । ಸುತಃ । ಅವ್ಯಃ । ವಾರೇಭಿಃ । ಪವತೇ । ಮದಿನ್ಽತಮಃ ।

ಕ್ರೀಳನ್ । ಊರ್ಮಿಃ । ಅಪಾಂಽಇವ ॥ ೫ ॥

॥ ಸಾಯಣಭಾಷ್ಯಂ ॥

ಸ್ಯ ಸ ಏಷ ಸುತೋಽಭಿಷುತಃ ಸೋಮೋಽವ್ಯೋಽವೇರ್ವಾರೇಭಿರ್ವಾಲೈಸ್ತೇಭ್ಯಃ ಪವಿತ್ರೇಭ್ಯೋ ಧಾರಯಾತ್ಮೀಯಯಾ ಪವತೇ । ಕಲಶಮಭಿಲಕ್ಷ್ಯ ಕ್ಷರತಿ । ಕೀದೃಶಃ । ಮದಿಂತಮೋ ಮಾದಯಿತೃತಮೋಽಪಾಮಿವೋದಕಾನಾಮೂರ್ಮಿಃ ಸಂಘಾತ ಇವ ಕ್ರೀಳನ್ನಿತಸ್ತತಃ ಸಂಕ್ರೀಡಮಾನಃ ಪವತೇ ॥

॥ ಪ್ರತಿಪದಾರ್ಥ ॥

**ಮದಿಂತಮಃ**—ಅತಿಶಯವಾಗಿ ಹರ್ಷವನ್ನುಂಟುಮಾಡುವವನೂ । **ಸ್ಯಃ**—ಪ್ರಸಿದ್ಧನೂ । **ಸುತಃ**—ಹಿಂಡಲ್ಪಟ್ಟವನೂ ಆದ । **ಏಷಃ**—ಸೋಮದೇವನು । **ಅವ್ಯಃ**—ಉಣ್ಣೆಯ । **ವಾರೇಭಿಃ**—ದಶಾಪವಿತ್ರದ ನಾರುಗಳ ಮೂಲಕ । **ಧಾರಯಾ**—ಧಾರಾರೂಪದಿಂದ । **ಅಪಾಂ**—ಉದಕಗಳ । **ಊರ್ಮಿಃ ಇವ**—ಅಲೆಗಳಂತೆ । **ಕ್ರೀಳನ್**—ಆಟವಾಡುತ್ತ । **ಪವತೇ**—ಪ್ರವಿಸುತ್ತಾನೆ.

॥ ಭಾವಾರ್ಥ ॥

ಅತಿಶಯವಾಗಿ ಹರ್ಷವನ್ನುಂಟುಮಾಡುವವನೂ, ಪ್ರಸಿದ್ಧನೂ, ಹಿಂಡಲ್ಪಟ್ಟವನೂ ಆದ ಸೋಮದೇವನು ಉಣ್ಣೆಯ ದಶಾಪವಿತ್ರದ ನಾರುಗಳಮೂಲಕ ಧಾರಾರೂಪದಿಂದ ಉದಕಗಳ ಅಲೆಗಳಂತೆ ಆಟವಾಡುತ್ತ ಪ್ರವಿಸುತ್ತಾನೆ.

## English Translation

This (Soma) when effused flows most exhilarating through the woollen fleece, sporting like a wave of water.

॥ ಸಂಹಿತಾಪಾಠಃ ॥

ಯ ಉಸ್ರಿಯಾ ಅಪ್ಯಾ ಅಂತರಶ್ಮನೋ ನಿರ್ಗಾ ಅಕೃಂತದೋಜಸಾ ।

ಅಭಿ ವ್ರಜಂ ತತ್ನಿಷೇ ಗವ್ಯಮಶ್ವ್ಯಂ ವರ್ಮೀವ ಧೃಷ್ಣವಾ ರುಜ ॥ ೬ ॥

॥ ಪದಪಾಠಃ ॥

ಯಃ । ಉಸ್ರಿಯಾಃ ಅಪ್ಯಾಃ । ಅಂತಃ । ಅಶ್ಮನಃ । ನಿಃ । ಗಾಃ । ಅಕೃಂತತ್ । ಓಜಸಾ ।

ಅಭಿ । ವ್ರಜಂ । ತತ್ನಿಷೇ । ಗವ್ಯಂ । ಅಶ್ವ್ಯಂ । ವರ್ಮೀಽಇವ । ಧೃಷ್ಣೋ ಇತಿ । ಆ । ರುಜ ॥ ೬ ॥

॥ ಸಾಯಣಭಾಷ್ಯಂ ॥

ಯಃ ಸೋಮ ಉಸ್ರಿಯಾ ಉತ್ಸರಣಶೀಲಾ ಅಪ್ಯಾಃ ॥ ಅಪ ಇತ್ಯಂತರಿಕ್ಷನಾಮ । ತಸ್ಮಾದ್ಭವೇ ಛಂದಸೀತಿ ಯತ್ । ಅಂತರಿಕ್ಷಸ್ಥಾ ಅಹಿಪ್ರಭೃತಿಭಿರಸುರೈರಪಹೃತ್ಯ ನಿಹಿತಾ ಗಾ ಅಪೋಽಶ್ಮನಃ । ಮೇಘನಾಮೈತತ್ । ಮೇಘಾದಂತರೋಜಸಾ ಬಲೇನ ನಿರಕೃಂತತ್ ನಿರಚ್ಛಿನತ್ । ಅಂತರಿಕ್ಷಾದ್ವೃಷ್ಟಿಮಕಾರ್ಷೀದಿತ್ಯರ್ಥಃ । ಸ ತ್ವಮಸುರೈರಪಹೃತಂ ಗವ್ಯಂ ಗೋಸಂಬಂಧಿನಮಶ್ವ್ಯಮಶ್ವೇಷು ಭವಂ ವ್ರಜಂ ಸಮೂಹಮಭಿ ತತ್ನಿಷೇ । ಅಭಿತೋ ವ್ಯಾಪ್ನೋಷಿ ॥ ತನು ವಿಸ್ತಾರೇ । ಛಾಂದಸೇ ಲಿಟಿ ತನಿಪತ್ಯೋಶ್ಛಂದಸೀತ್ಯುಪಧಾಲೋಪಃ ॥ ಕಿಂ ಚ ಹೇ ಧೃಷ್ಣೋ ಶತ್ರುಧರ್ಷಣಶೀಲ ಸೋಮ ಸ ತ್ವಂ ವರ್ಮೀವ ಕವಚೀವ ಶೂರ ಆ ರುಜ । ಅಸುರಾನಾಜಹಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ಯಃ—ಯಾವ ನೀನು । **ಉಸ್ರಿಯಾಃ**—ಸ್ರವಿಸತಕ್ಕವೂ । **ಅಪ್ಯಾಃ**—ಅಂತರಿಕ್ಷಸ್ಥವೂ ಆದ । **ಗಾಃ**—ಉದಕಗಳನ್ನು । **ಓಜಸಾ**—ಸ್ವಶಕ್ತಿಯಿಂದ । **ಅಶ್ಮನಃ ಅಂತಃ**—ಮೇಘದ ಒಳಭಾಗದಿಂದ **ನಿಃ ಅಕೃಂತತ್**—ಸೀಳಿ ಸುರಿಸಿದೆಯೋ । (ಅಂತಹ ನೀನು) । **ಗವ್ಯಂ**—ಗೋಸಂಬಂಧಿಯೂ । **ಅಶ್ವ್ಯಂ**—ಅಶ್ವಾತ್ಮಕವೂ ಆದ । **ವ್ರಜಂ**—ಸಮೂಹವನ್ನು । **ಅಭಿ ತತ್ನಿಷೇ**—ವ್ಯಾಪಿಸಿ ನಿಲ್ಲುತ್ತೀಯೆ । **ಧೃಷ್ಣೋ**—ಶತ್ರುಧರ್ಷಕನಾದ ಎಲೈ ಸೋಮನೇ । **ವರ್ಮೀವ**—ಕವಚವುಳ್ಳ ಶೂರನಂತೆ । **ಆ ರುಜ**—ಶತ್ರುಗಳನ್ನು ಜಯಿಸು.

॥ ಭಾವಾರ್ಥ ॥

ಎಲೈ ಸೋಮನೇ, ಯಾವ ನೀನು ಸ್ರವಿಸತಕ್ಕವೂ, ಅಂತರಿಕ್ಷಸ್ಥವೂ ಆದ ಉದಕಗಳನ್ನು ನಿನ್ನ ಸ್ವಶಕ್ತಿಯಿಂದ ಮೇಘದ ಒಳಭಾಗದಿಂದ ಸೀಳಿ ಸುರಿಸಿದೆಯೋ ಅಂತಹ ನೀನು ಗೋಸಂಬಂಧಿಯೂ, ಅಶ್ವಾತ್ಮಕವಾದುದೂ ಆದ ಸಮೂಹವನ್ನು ವ್ಯಾಪಿಸಿ ನಿಲ್ಲುತ್ತೀಯೆ. ಶತ್ರುಧರ್ಷಕನಾದ ಎಲೈ ಸೋಮನೇ, ಕವಚವನ್ನು ಧರಿಸಿದ ಶೂರನಂತೆ ನೀನು ಶತ್ರುಗಳನ್ನು ಜಯಿಸು.

## English Translation

You, who by your might extricated from the rock the quick-moving cows abiding in the waters, you have spread out a pasturage for cattle and horses ; like a mailed (warrior) slay (the Asuras), brave (Soma)-

॥ ಸಂಹಿತಾಪಾಠಃ ॥

ಆ ಸೋ॑ತಾ॒ ಪರಿ॑ ಷಿಂಚ॒ತಾಶ್ವಂ॒ ನ ಸ್ತೋಮ॑ಮ॒ಪ್ತುರಂ॑ ರಜ॒ಸ್ತುರ॑ಂ ।
ವ॒ನ॒ಕ್ರ॒ಕ್ಷಮು॑ದ॒ಪ್ರುತ॑ಂ ॥ ೭ ॥

॥ ಪದಪಾಠಃ ॥

ಆ । ಸೋ॒ತ॒ । ಪರಿ॑ । ಸಿ॒ಂಚ॒ತ॒ । ಅಶ್ವ॑ಂ । ನ । ಸ್ತೋಮ॑ಂ । ಅ॒ಪ್ಽತುರ॑ಂ । ರ॒ಜಃ॒ಽತುರ॑ಂ ।
ವ॒ನ॒ಽಕ್ರ॒ಕ್ಷಂ । ಉ॒ದ॒ಽಪ್ರುತ॑ಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜಃ ಆ ಸೋತ । ಸೋಮಮಭಿಷುಣುತ ॥ ಷುಞ್ ಅಭಿಷವೇ । ಲೋಟಿ ಚ್ಛಾಂದಸೋ ವಿಕರಣಸ್ಯ ಲುಕ್ । ತಪ್ತನಪ್ತನಥನಾಶ್ಚೇತಿ ತಸ್ಯ ತಬಾದೇಶಃ ॥ ಕಿಂಚ ಪರಿ ಷಿಂಚತ । ಪರಿತಸ್ತಂ ವಸತೀವರ್ಯಾದಿಭಿಃ ಸಿಂಚತ । ಕೀದೃಶಂ ಅಶ್ವಂ ನಾಶ್ವಮಿವ ವೇಗಿನಂ ಸ್ತೋಮಂ ಸ್ತೋತವ್ಯಮಪ್ತುರಮಂತರಿಕ್ಷಸ್ಥಿತಾನಾಮುದಕಾನಾಂ ಪ್ರೇರಕಂ ರಜಸ್ತುರಂ ತೇಜಸಾಂ ಚ ಪ್ರೇರಕಂ । ವನಕ್ರಕ್ಷಮುದಕಾನಾಮಪರ್ಷಕಂ । ಯದ್ವಾ ಕಾಷ್ಠೇಷು ಪಾತ್ರೇಷು ವಿಪ್ರಕೀರ್ಣಂ । ಉದಪ್ರುತ-ಮುದಕೇ ಗಚ್ಛಂತಂ ಪ್ಲವಮಾನಂ ಸೋಮಮಭಿಷುಣುತಾಭಿಷಿಂಚತ ಚ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) **ಅಶ್ವಂ ನ**—ಅಶ್ವದಂತೆ ವೇಗಗಾಮಿಯಾದುದೂ । **ಸ್ತೋಮಂ**—ಪ್ರಶಸ್ತವಾದುದೂ । **ಅಪ್ತುರಂ**—ಉದಕಗಳಿಗೆ ಪ್ರೇರಕವಾದುದೂ । **ರಜಸ್ತುರಂ**—ತೇಜಸ್ಸನ್ನು ಪ್ರಸರಿಸುವಂತೆ ಮಾಡುವುದೂ । **ವನಕ್ರಕ್ಷಂ**—ವೃಷ್ಟಿಯನ್ನು ಸುರಿಸತಕ್ಕದ್ದೂ । **ಉದಪ್ರುತಂ**—ಉದಕಗಳಲ್ಲಿ ಸಂಚರಿಸುವುದೂ ಆದ ಸೋಮವನ್ನು । **ಆ ಸೋತ**—ಹಿಂಡಿರಿ । **ಪರಿ ಷಿಂಚತ**—ಸುತ್ತಲೂ ಪ್ರೋಕ್ಷಿಸಿರಿ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಅಶ್ವದಂತೆ ವೇಗಗಾಮಿಯಾದುದೂ, ಪ್ರಶಸ್ತವಾದುದೂ, ಉದಕಗಳಿಗೆ ಪ್ರೇರಕವಾದುದೂ, ತೇಜಸ್ಸನ್ನು ಪ್ರಸರಿಸುವಂತೆ ಮಾಡುವುದೂ, ವೃಷ್ಟಿಯನ್ನು ಸುರಿಸುವುದೂ, ಉದಕಗಳಲ್ಲಿ ಸಂಚರಿಸುವುದೂ ಆದ ಸೋಮವನ್ನು ಹಿಂಡಿರಿ. ಸುತ್ತಲೂ ಪ್ರೋಕ್ಷಿಸಿರಿ.

## English Translation

Pour forth (the Soma), sprinkle it round like a horse, adorable, dispenser of rain, dispenser of light, showerer of fluid, swimming in water—

॥ ಸಂಹಿತಾಪಾಠಃ ॥

ಸಹಸ್ರಧಾರಂ ವೃಷಭಂ ಪಯೋವೃಧಂ ಪ್ರಿಯಂ ದೇವಾಯ ಜನ್ಮನೇ ।
ಋತೇನ ಯ ಋತಜಾತೋ ವಿವಾವೃಧೇ ರಾಜಾ ದೇವ ಋತಂ ಬೃಹತ್ ॥

॥ ಪದಪಾಠಃ ॥

ಸಹಸ್ರಽಧಾರಂ । ವೃಷಭಂ । ಪಯಃಽವೃಧಂ । ಪ್ರಿಯಂ । ದೇವಾಯ । ಜನ್ಮನೇ ।
ಋತೇನ । ಯಃ । ಋತಽಜಾತಃ । ವಿಽವವೃಧೇ । ರಾಜಾ । ದೇವಃ । ಋತಂ । ಬೃಹತ್ ॥ ೮ ॥

॥ ಸಾಯಣಭಾಷ್ಯಂ ॥

ಸಹಸ್ರಧಾರಂ ಬಹುಧಾರೋಪೇತಂ ವೃಷಭಂ ಕಾಮಾನಾಂ ವರ್ಷಕಂ ಪಯೋವೃಧಮುದಕಾನಾಂ ವರ್ಧಕಂ ಪ್ರಿಯಂ ಪ್ರೀಣಯಿತಾರಂ ತಂ ಸೋಮಂ ದೇವಾಯ ದೇವಸಂಬಂಧಿನೇ ಜನ್ಮನೇ ದೇವೇಭ್ಯಸ್ತರ್ದರ್ಥಮಭಿಷುಣುತ । ಋತಜಾತ ಉದಕಾಜ್ಜಾತೋ ಯೋ ರಾಜಾ ಸೋಮ ಋತೇನ ವಸತೀವರ್ಯಾಖ್ಯೇನೋದಕೇನ ವಿವವೃಧೇ ವಿಶೇಷೇಣ ವರ್ಧತೇ। ಕೀದೃಶಃ । ದೇವೋ ದ್ಯೋತಮಾನಃ ಸ್ತೋತವ್ಯೋ ವಾ ಋತಂ ಸತ್ಯಭೂತಃ ಸನ್ ಬೃಹನ್ಮಹಾನ್ । ತಮಾಸುನುತೇತಿ ಪೂರ್ವೇಣ ಸಮನ್ವಯಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಸೋಮನು । **ಋತಜಾತಃ**—ಉದಕದಿಂದ ಉತ್ಪನ್ನನೂ । **ರಾಜಾ**—ಪ್ರಭುವೂ ಆಗಿ । **ಋತೇನ**—ಉದಕದೊಡನೆ ಕೂಡಿ । **ವಿ ವವೃಧೇ**—ವೃದ್ಧಿಯನ್ನು ಹೊಂದುವನೋ ಅಂತಹವನೂ । **ದೇವಃ**—ದೇವತಾತ್ಮನೂ । **ಋತಂ**—ಸತ್ಯಭೂತನೂ । **ಬೃಹತ್**—ಮಹಾತ್ಮನೂ ಆಗಿರುವನೋ ಅಂತಹವನೂ ಆದ । **ಸಹಸ್ರಧಾರಂ**—ಅನೇಕ ಧಾರೆಯುಳ್ಳವನೂ । **ವೃಷಭಂ**—ಕಾಮವರ್ಷಕನೂ । **ಪಯೋವೃಧಂ**—ಉದಕವರ್ಧಕನೂ । **ಪ್ರಿಯಂ**—ಪ್ರೀತಿಕಾರಕನೂ ಆದ ಸೋಮನನ್ನು । **ದೇವಾಯ ಜನ್ಮನೇ**—ದೇವಜನರ ತೃಪ್ತಿಗಾಗಿ ಹಿಂಡಿರಿ.

॥ ಭಾವಾರ್ಥ ॥

ಯಾವ ಸೋಮನು ಉದಕದಿಂದ ಉತ್ಪನ್ನನೂ ಪ್ರಭುವೂ ಆಗಿ ಉದಕಗಳೊಡನೆ ಕೂಡಿ ವೃದ್ಧಿಯನ್ನು ಹೊಂದುವನೋ ಅಂತಹವನೂ, ದೇವತಾತ್ಮನೂ ಆಗಿರುವನೋ ಅಂತಹವನೂ ಆದ ಅನೇಕ ಧಾರೆಯುಳ್ಳವನೂ ಕಾಮವರ್ಷಕನೂ, ಉದಕವರ್ಧಕನೂ, ಪ್ರೀತಿಕಾರಕನೂ ಆದ ಸೋಮನನ್ನು ದೇವಜನರ ತೃಪ್ತಿಗಾಗಿ ಹಿಂಡಿರಿ.

## English Translation

Thousand-streamed, showerer of benefits, augmenter of water, affectionate ; (pour it forth) for the race of the gods which water-born is fostered by the water, the king, the god, the true, the great.

॥ ಸಂಹಿತಾಪಾಠಃ ॥

ಅಭಿ ದ್ಯುಮ್ನಂ ಬೃಹದ್ಯಶ ಇಷಸ್ಪತೇ ದಿದೀಹಿ ದೇವ ದೇವಯುಃ ।
ವಿ ಕೋಶಂ ಮಧ್ಯಮಂ ಯುವ ॥ ೯ ॥

॥ ಪದಪಾಠಃ ॥

ಅಭಿ । ದ್ಯುಮ್ನಂ । ಬೃಹತ್ । ಯಶಃ । ಇಷಃ । ಪತೇ । ದಿದೀಹಿ । ದೇವ । ದೇವऽಯುಃ ।
ವಿ । ಕೋಶಂ । ಮಧ್ಯಮಂ । ಯುವ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಷಸ್ಪತೇಽನ್ನಸ್ಯ ಪತೇ ಹೇ ದೇವ ಸ್ತೋತವ್ಯ ಸೋಮ ದೇವಯುರ್ದೇವಕಾಮಸ್ತ್ವಂ ದ್ಯುಮ್ನಂ ದ್ಯೋತಮಾನಂ ಬೃಹತ್ಪ್ರಭೂತಂ ಯಶೋಽನ್ನಮಸ್ಮಭ್ಯಮಭಿ ದಿದೀಹಿ । ಅಭಿಮುಖ್ಯೇನ ಪ್ರಕಾಶಯ । ಪ್ರಯಚ್ಛೇತ್ಯರ್ಥಃ ॥ ಆಮಂತ್ರಿತಸ್ಯಾವಿದ್ಯಮಾನವತ್ತ್ವೇನ ಪಾದಾದಿತ್ವಾದಪಿಘಾತಃ ॥ ಕಿಂಚ ಮಧ್ಯಮಮಂತರಿಕ್ಷಸ್ಥಿತಂ ಕೋಶಂ ಮೇಘಂ ವಿ ಯುವ । ವೃಷ್ಟ್ಯರ್ಥಂ ವಿಗಮಯ । ವಿಶ್ಲೇಷಯ ॥

॥ ಪ್ರತಿಪದಾರ್ಥ ॥

**ಇಷಸ್ಪತೇ**—ಅನ್ನಪಾಲಕನೂ । **ದೇವ**—ಪ್ರಕಾಶಮಾನನೂ ಆದ ಎಲೈ ಸೋಮನೇ । **ದೇವಯುಃ**—ದೇವಕಾಮನಾದ ನೀನು । **ದ್ಯುಮ್ನಂ**—ಪ್ರಕಾಶಮಾನವಾದುದೂ । **ಬೃಹತ್**—ಪ್ರಭೂತವಾದುದೂ ಆದ । **ಯಶಃ**—ಅನ್ನವನ್ನು । **ಅಭಿ ದಿದೀಹಿ** ನಮಗೆ ಪ್ರಕಾಶಪಡಿಸು (ಕೊಡು) । **ಮಧ್ಯಮಂ**—ಅಂತರಿಕ್ಷಸ್ಥವಾದ । **ಕೋಶಂ**—ಮೇಘವನ್ನು । **ವಿ ಯುವ** ವೃಷ್ಟ್ಯರ್ಥವಾಗಿ ಸೀಳು.

॥ ಭಾವಾರ್ಥ ॥

ಅನ್ನಪಾಲಕನೂ, ಪ್ರಕಾಶಮಾನನೂ ಆದ ಎಲೈ ಸೋಮನೇ, ದೇವಕಾಮನಾದ ನೀನು ಪ್ರಕಾಶಮಾನವಾದುದೂ, ಪ್ರಭೂತವಾದುದೂ ಆದ ಅನ್ನವನ್ನು ನಮಗೆ ಪ್ರಕಾಶಪಡಿಸು (ಕೊಡು) ಅಂತರಿಕ್ಷಸ್ಥವಾದ ಮೇಘವನ್ನು ವೃಷ್ಟ್ಯರ್ಥವಾಗಿ ಸೀಳು.

## English Translation

Divine (Soma) lord of viands, who are devoted to the gods, bestow upon us brilliant and abundant food; separate the mid-aerial receptacle.

॥ ಸಂಹಿತಾಪಾಠಃ ॥

ಆ ವಚ್ಯಸ್ವ ಸುದಕ್ಷ ಚಮ್ವೋಃ ಸುತೋ ವಿಶಾಂ ವಹ್ನಿರ್ನ ವಿಶ್ಪತಿಃ ।
ವೃಷ್ಟಿಂ ದಿವಃ ಪವಸ್ವ ರೀತಿಮಪಾಂ ಜಿನ್ವಾ ಗವಿಷ್ಟಯೇ ಧಿಯಃ ॥ ೧೦ ॥

॥ ಪದಪಾಠಃ ॥

ಆ । ವಚ್ಯಸ್ವ ಸುऽದಕ್ಷ । ಚಮ್ವೋಃ । ಸುತಃ । ವಿಶಾಂ । ವಹ್ನಿಃ । ನ । ವಿಶ್ಪತಿಃ ।
ವೃಷ್ಟಿಂ ದಿವಃ । ಪವಸ್ವ । ರೀತಿಂ । ಅಪಾಂ । ಜಿನ್ವ । ಗೋऽಇಷ್ಟಯೇ । ಧಿಯಃ ॥ ೧೦

॥ ಸಾಯಣಭಾಷ್ಯಂ ॥

ಹೇ ಸುದಕ್ಷ ಸುಬಲ ಸೋಮ ಚಮ್ವೋರಧಿಷವಣಫಲಕಯೋಃ ಸುತೋऽಭಿಷುತಸ್ತ್ವಂ ವಿಶಾಂ ಪ್ರಜಾನಾಂ ವಹ್ನಿರ್ನ ವೋಢಾ ವಿಶ್ಪತೀ ರಾಜೇವ ಸರ್ವಾಸಾಂ ಪ್ರಜಾನಾಂ ವೋಢಾ ತ್ವಮಾ ವಚ್ಯಸ್ವ । ಆಗಚ್ಛ । ಕಲಶಮಾಪವಸ್ವ ॥ ವಚೇರ್ಗತ್ಯರ್ಥಸ್ಯ ವ್ಯತ್ಯಯೇನ ಶ್ಯನಿ ರೂಪಂ ॥ ಕಿಂಚ ತ್ವಂ ವೃಷ್ಟಿಂ ವೃಷ್ಯಮಾಣಾಮಪಾಮುದಕಾನಾಂ ರೀತಿಂ ಗತಿಂ ದಿವೋ ದ್ಯುಲೋಕಾತ್ಪವಸ್ವ । ಕುರು । ತತೋ ಗವಿಷ್ಟಯೇ ಗಾಮಾತ್ಮನ ಇಚ್ಛತೇ ಯಜಮಾನಾಯ ಧಿಯಃ ಕರ್ಮಾಣಿ ಜಿನ್ವ । ಆಪೂರಯ ॥

ಪ್ರತಿಪದಾರ್ಥ ।

**ಸುದಕ್ಷ**—ಉತ್ತಮವಾದ ಶಕ್ತಿಯುಳ್ಳ ಎಲೈ ಸೋಮನೇ ! **ಚಮ್ವೋಃ**—ಹಿಂಡುವ ಹಲಗೆಗಳಲ್ಲಿ । **ಸುತಃ**—ಹಿಂಡಲ್ಪಟ್ಟವನೂ । **ವಿಶ್ಪತಿಃ ನ**—ರಾಜನಂತೆ । **ವಿಶಾಂ**—ಪ್ರಜೆಗಳಿಗೆಲ್ಲ । **ವಹ್ನಿಃ**—ವಾಹಕನೂ (ಪಾಲಕನೂ) ಆದ ನೀನು । **ಆ ವಚ್ಯಸ್ವ**—ದಯಮಾಡು । **ವೃಷ್ಟಿಂ**—ವೃಷ್ಟಿರೂಪವಾದ । **ಅಪಾಂ ರೀತಿಂ**—ಉದಕಗಳ ಪ್ರವಾಹವನ್ನು । **ದಿವಃ**—ದ್ಯುಲೋಕದಿಂದ । **ಪವಸ್ವ**—ಸುರಿಸು । **ಗವಿಷ್ಟಯೇ**—ಗೋವನ್ನು ಅಪೇಕ್ಷಿಸುವ ಯಜಮಾನನಿಗೆ । **ಧಿಯಃ**—ಕರ್ಮಗಳನ್ನು । **ಜಿನ್ವ**—ತುಂಬು (ಫಲಪ್ರದವಾಗುವಂತೆ ಮಾಡು).

॥ ಭಾವಾರ್ಥ ॥

ಉತ್ತಮವಾದ ಶಕ್ತಿಯುಳ್ಳ ಎಲೈ ಸೋಮನೇ, ಹಿಂಡುವ ಹಲಗೆಗಳಲ್ಲಿ ಹಿಂಡಲ್ಪಟ್ಟವನೂ, ರಾಜನಂತೆ ಪ್ರಜೆಗಳಿಗೆಲ್ಲ ಪಾಲಕನೂ ಆದ ನೀನು ದಯಮಾಡು. ವೃಷ್ಟಿರೂಪವಾದ ಉದಕಗಳ ಪ್ರವಾಹವನ್ನು ದ್ಯುಲೋಕದಿಂದ ಸುರಿಸು. ಗೋವನ್ನು ಅಪೇಕ್ಷಿಸುವ ಯಜಮಾನನಿಗೆ ಕರ್ಮವನ್ನು ವೃದ್ಧಿಮಾಡು. ಅದು ಫಲಪ್ರದವಾಗುವಂತೆ ಮಾಡು.

## English Translation

Come, powerful (Soma) effused into the cups, like a prince the sustainer of the people; pour the course of the waters, the rain from heaven; accomplish the rites for the worshipper who seeks cattle

॥ ಸಂಹಿತಾಪಾಠಃ ॥

**ಏತಮು ತ್ಯಂ ಮದಚ್ಯುತಂ ಸಹಸ್ರಧಾರಂ ವೃಷಭಂ ದಿವೋ ದುಹುಃ ।**
**ವಿಶ್ವಾ ವಸೂನಿ ಬಿಭ್ರತಂ ॥ ೧೧ ॥**

॥ ಪದಪಾಠಃ ॥

**ಏತಂ । ಊಂ ಇತಿ । ತ್ಯಂ । ಮದಃಚ್ಯುತಂ । ಸಹಸ್ರಃಧಾರಂ । ವೃಷಭಂ । ದಿವಃ । ದುಹುಃ ।**
**ವಿಶ್ವಾ । ವಸೂನಿ । ಬಿಭ್ರತಂ ॥ ೧೧ ॥**

॥ ಸಾಯಣಭಾಷ್ಯಂ ॥

**ದಿವಃ ದೇವಾನ್ಕಾಮಯಮಾನಾ ಋತ್ವಿಜ ಏತಂ ತ್ಯಂ ತಮಿಮಂ ಸೋಮಮೇವ ದುಹುಃ । ದುದುಹುಃ । ದುಹಂತಿ । ಗ್ರಾವಾಣೋ ವತ್ಸಾ ಋತ್ವಿಜೋ ದುಹಂತೀತಿ ತೈತ್ತರೀಯಕಬ್ರಾಹ್ಮಣಂ । ತೈ. ಸಂ. ೬-೨-೧೧-೪ । ಈದೃಶಂ ಸೋಮಂ । ಮದಚ್ಯುತಂ ಮದಸ್ಯ ಪ್ರೇರಕಂ ಸಹಸ್ರಧಾರಂ ಬಹುಧಾರಂ ವೃಷಭಂ ಕಾಮಾನಾಂ ವರ್ಷಕಂ ವಿಶ್ವಾ ಸರ್ವಾಣಿ ವಸೂನಿ ಧನಾನಿ ಬಿಭ್ರತಂ ಧಾರಯಂತಂ ಸೋಮಂ ದುಹಂತಿ ॥**

॥ ಪ್ರತಿಪದಾರ್ಥ ॥

**ಮದಚ್ಯುತಂ**—ಹರ್ಷಕಾರಕನೂ । **ಸಹಸ್ರಧಾರಂ**—ಅನೇಕ ಧಾರೆಗಳುಳ್ಳವನೂ । **ವೃಷಭಂ**—ಕಾಮವರ್ಷಕನೂ । **ವಿಶ್ವಾ**—ಸಮಸ್ತವಾದ । **ವಸೂನಿ**—ಧನಗಳನ್ನು । **ಬಿಭ್ರತಂ**—ಧರಿಸಿರುವವನೂ । **ತ್ಯಂ**—ಪ್ರಸಿದ್ಧನೂ ಆದ । **ಏತಂ**—ಈ ಸೋಮನನ್ನು । **ದಿವಃ**—ಋತ್ವಿಕ್ಕುಗಳು । **ದುಹುಃ**—ಕರೆಯುತ್ತಾರೆ.

॥ ಭಾವಾರ್ಥ ॥

ಹರ್ಷಕಾರಕನೂ, ಅನೇಕ ಧಾರೆಗಳಿಂದ ಹರಿಯುವವನೂ, ಕಾಮವರ್ಷಕನೂ, ಸಮಸ್ತವಾದ ಧನಗಳನ್ನು ಧರಿಸಿರುವವನೂ, ಪ್ರಸಿದ್ಧನೂ ಆದ ಈ ಸೋಮನನ್ನು ಋತ್ವಿಕ್ಕುಗಳು ಕರೆಯುತ್ತಾರೆ

## English Translation

Him have they milked from heaven, the shedder of exhilarating juice, the thousand-streamed, the showerer (of benefits), bearing all treasures.

॥ ಸಂಹಿತಾಪಾಠಃ ॥

ವೃಷಾ ವಿ ಜಜ್ಞೇ ಜನಯನ್ನಮರ್ತ್ಯಃ ಪ್ರತಪಂಜ್ಯೋತಿಷಾ ತಮಃ ।
ಸ ಸುಷ್ಟುತಃ ಕವಿಭಿರ್ನಿರ್ಣಿಜಂ ದಧೇ ತ್ರಿಧಾತ್ವಸ್ಯ ದಂಸಸಾ ॥ ೧೨ ॥

ಪದಪಾಠಃ

ವೃಷಾ । ವಿ । ಜಜ್ಞೇ । ಜನಯನ್ । ಅಮರ್ತ್ಯಃ । ಪ್ರಽತಪನ್ । ಜ್ಯೋತಿಷಾ । ತಮಃ ।
ಸಃ । ಸುಽಸ್ತುತಃ । ಕವಿಽಭಿಃ । ನಿಃಽನಿಜಂ । ದಧೇ । ತ್ರಿಽಧಾತು । ಅಸ್ಯ । ದಂಸಸಾ ॥ ೧೨ ॥

॥ ಸಾಯಣಭಾಷ್ಯಂ ॥

ವೃಷಾ ಕಾಮಾನಾಂ ವರ್ಷಕೋಽಮರ್ತ್ಯೋ ಮನುಷ್ಯಧರ್ಮರಹಿತಃ ಸೋಮೋ ವಿ ಜಜ್ಞೇ । ವಿಜ್ಞಾಯತೇ । ಕಿಂ ಕುರ್ವನ್ । ಜನಯನ್ಶಬ್ದಂ ಜ್ಯೋತಿರ್ವೋತ್ಪಾದಯನ್ ಜ್ಯೋತಿಷಾ ಸ್ವೀಯೇನ ತಮಃ ಪ್ರತಪನ್ ಪ್ರಜ್ವಲಯನ್ ವಿನಾಶಯನ್ ಪ್ರಾದುರ್ಭವತಿ । ತತಃ ಕವಿಭಿರ್ಮೇಧಾವಿಭಿಃ ಸ್ತೋತೃಭಿಃ ಸುಷ್ಟುತಃ ಸ ಸೋಮೋ ನಿರ್ಣಿಜಂ ನಿರ್ಣೇಜನಹೇತುಂ ಮಿಶ್ರಣಂ ಗವ್ಯಂ ದಧೇ । ಧಾರಯತಿ । ಅಥ ತ್ರಿಧಾತು ತ್ರಿಷು ಸವನೇಷು ದೇವಾನಾಂ ಪೋಷಕಂ । ಯದ್ವಾ । ತ್ರಯಃ ಸೋಮಧಾರಕಾ ದ್ರೋಣಕಲಶಾದಯೋ ಯಸ್ಮಿನ್ । ತದ್ಯಜ್ಞಾರ್ಥಂ ಕರ್ಮಾಸ್ಯ ಸೋಮಸ್ಯ ದಂಸಸಾ ಕರ್ಮಣಾ ಧ್ರಿಯತೇ ಖಲು ॥

॥ ಪ್ರತಿಪದಾರ್ಥ ॥

**ವೃಷಾ**—ಕಾಮವರ್ಷಕನೂ । **ಅಮರ್ತ್ಯಃ**—ಮರಣಧರ್ಮರಹಿತನೂ ಆದ ಸೋಮನು । **ಜನಯನ್**—ಶಬ್ದವನ್ನುಂಟುಮಾಡುತ್ತಲೂ । **ಜ್ಯೋತಿಷಾ**—ತನ್ನ ಕಾಂತಿಯಿಂದ । **ತಮಃ**—ಕಗ್ಗತ್ತಲೆಯನ್ನು । **ಪ್ರತಪನ್**—ನಾಶಪಡಿಸುತ್ತಲೂ । **ವಿ ಜಜ್ಞೇ**—ಎಲ್ಲರಿಂದಲೂ ತಿಳಿಯಲ್ಪಡುತ್ತಾನೆ । **ಕವಿಭಿಃ**—ಮೇಧಾವಿಗಳಿಂದ । **ಸುಷ್ಟುತಃ**—ಅತಿಶಯವಾಗಿ ಪ್ರಶಂಸಿತನಾದ । **ಸಃ**—ಸೋಮನು । **ನಿರ್ಣಿಜಂ**—ಸಂಸ್ಕೃತವನ್ನಾಗಿ ಮಾಡುವ ಕ್ಷೀರಾದಿಗಳನ್ನು । **ದಧೇ**—ಧರಿಸುತ್ತಾನೆ । **ತ್ರಿಧಾತು**—ಸವನತ್ರಯಾತ್ಮಕವಾದ ಕರ್ಮವೂ । **ಅಸ್ಯ**—ಈ ಸೋಮದ । **ದಂಸಸಾ**—ಕರ್ಮದಿಂದ ಧರಿಸಲ್ಪಡುತ್ತದೆ.

॥ ಭಾವಾರ್ಥ ॥

ಕಾಮವರ್ಷಕನೂ, ಮರಣಧರ್ಮರಹಿತನೂ ಆದ ಸೋಮನು ಶಬ್ದವನ್ನುಂಟುಮಾಡುತ್ತಲೂ, ತನ್ನ ಕಾಂತಿಯಿಂದ ಕಗ್ಗತ್ತಲೆಯನ್ನು ನಾಶಪಡಿಸುತ್ತಲೂ ಎಲ್ಲರಿಂದಲೂ ತಿಳಿಯಲ್ಪಡುತ್ತಾನೆ. ಮೇಧಾವಿಗಳಿಂದ ಅತಿಶಯವಾಗಿ ಪ್ರಶಂಸಿತನಾದ ಸೋಮನು ತನ್ನನ್ನು ಪರಿಷ್ಕೃತನನ್ನಾಗಿ ಮಾಡುವ ಕ್ಷೀರಾದಿಗಳನ್ನು ಧರಿಸುತ್ತಾನೆ. (ಕ್ಷೀರಾದಿಗಳೊಡನೆ ಮಿಶ್ರಿತನಾಗುತ್ತಾನೆ) ಸವನತ್ರಯಾತ್ಮಕವಾದ ಕರ್ಮವೂ ಈ ಸೋಮದ ಕರ್ಮದಿಂದ ಧರಿಸಲ್ಪಡುತ್ತದೆ.

## English Translation

The showerer (of benefits) is manifested begetting (light), immortal, destroying the darkness with (his radiance; glorified by the wise he has assumed his shining robe; the triple (oblation is supported) by his act.

॥ ಸಂಹಿತಾಪಾಠಃ ॥

ಸ ಸುನ್ವೇ ಯೋ ವಸೂನಾಂ ಯೋ ರಾಯಾಮಾನೇತಾ ಯ ಇಳಾನಾಂ ।
ಸೋಮೋ ಯಃ ಸುಕ್ಷಿತೀನಾಂ ॥ ೧೩ ॥

॥ ಪದಪಾಠಃ ॥

ಸಃ । ಸುನ್ವೇ । ಯಃ । ವಸೂನಾಂ । ಯಃ । ರಾಯಾಂ । ಆऽನೇತಾ । ಯಃ । ಇಳಾನಾಂ ।
ಸೋಮಃ । ಯಃ । ಸುऽಕ್ಷಿತೀನಾಂ । ೧೩ ॥

॥ ಸಾಯಣಭಾಷ್ಯಂ ॥

ಸ ಸೋಮಃ ಸುನ್ವೇ । ಅಭಿಸುಷುವ ಋತ್ವಿಗ್ಭಿಃ । ಯಃ ಸೋಮೋ ವಸೂನಾಂ ಧನಾನಾಮಾನೇತಾ ಯಶ್ಚ ರಾಯಾಂ । ರಾಂತಿ ಪ್ರಯಚ್ಛಂತಿ ಕ್ಷೀರಾದಿಕಮಿತಿ ರಾಯೋ ಗಾವಃ । ತೇಷಾಮಾನೇತಾ ಯಶ್ಚೇಳಾನಾಮನ್ನಾನಾಂ ಚ ಯಶ್ಚ ಸೋಮಃ ಸುಕ್ಷಿತೀನಾಂ ಸುನಿವಾಸಾನಾಂ ಶೋಭನಮನುಷ್ಯಯುಕ್ತಾನಾಂ ಗೃಹಾಣಾಮಾನೇತಾ ವಿದ್ಯತೇ ಸೋಽಭಿಷುತೋಽಭೂದಿತಿ ।

॥ ಪ್ರತಿಪದಾರ್ಥ ॥

**ಯಃ**—ಯಾವ ಸೋಮನು । **ವಸೂನಾಂ**—ಧನಗಳನ್ನು । **ಆನೇತಾ**—ತರುವನೋ । **ಯಃ**—ಯಾರು । **ರಾಯಾಂ**—ಧನಪ್ರದನೋ । **ಯಃ**—ಯಾರು । **ಇಳಾನಾಂ**—ಅನ್ನಪ್ರದನೋ । **ಯಃ ಸೋಮಃ**—ಯಾವ ಸೋಮನು । **ಸುಕ್ಷಿತೀನಾಂ**—ಉತ್ತಮವಾದ ಗೃಹಗಳನ್ನು ಒದಗಿಸುವನೋ । **ಸಃ**—ಆ ಸೋಮನು । **ಸುನ್ವೇ**—ಹಿಂಡಲ್ಪಡುತ್ತಾನೆ.

॥ ಭಾವಾರ್ಥ ॥

ಯಾವ ಸೋಮನು ಧನಗಳನ್ನು ತರುವನೋ, ಯಾರು ಧನಪ್ರದನೋ, ಯಾರು ಅನ್ನಪ್ರದನೋ, ಯಾವ ಸೋಮನು ಉತ್ತಮವಾದ ಗೃಹಗಳನ್ನು ಒದಗಿಸುವನೋ ಆ ಸೋಮನು ಹಿಂಡಲ್ಪಡುತ್ತಾನೆ.

## English Translation

The Soma has been effused who is the bringer of treasures, the bringer of riches, the bringer of food, the bringer of fair homes:—

॥ ಸಂಹಿತಾಪಾಠಃ ॥

ಯಸ್ಯ ನ ಇಂದ್ರಃ ಪಿಬಾದ್ಯಸ್ಯ ಮರುತೋ ಯಸ್ಯ ವಾರ್ಯಮಣಾ ಭಗಃ।
ಆ ಯೇನ ಮಿತ್ರಾವರುಣಾ ಕರಾಮಹ ಐಂದ್ರಮವಸೇ ಮಹೇ ॥ ೧೪ ॥

॥ ಪದಪಾಠಃ ॥

ಯಸ್ಯ । ನಃ । ಇಂದ್ರಃ । ಪಿಬಾತ್ । ಯಸ್ಯ । ಮರುತಃ । ಯಸ್ಯ । ವಾ । ಅರ್ಯಮಣಾ । ಭಗಃ ।
ಆ । ಯೇನ । ಮಿತ್ರಾವರುಣಾ ಕರಾಮಹೇ । ಆ । ಇಂದ್ರಂ । ಅವಸೇ । ಮಹೇ ॥ ೧೪ ।

॥ ಸಾಯಣಭಾಷ್ಯಂ ॥

ಸೋಽಸ್ಮದೀಯಂ ಯಸ್ಯ ಯಂ ಸೋಮಮಿಂದ್ರಃ ಪಿಬಾತ್ ಪಿಬತಿ ॥ ಪಾ ಪಾನೇ ಲೇಟ್ಯ-ಡಾಗಮಃ ॥ ಯಂ ಚ ಸೋಮಂ ಮರುತಃ ಪಿಬಂತಿ ವಾಪಿ ಚಾರ್ಯಮಣ್ಣೈತನ್ನಾಮಕೇನ ದೇವೇನ ಸಹ ಭಗೋ ದೇವೋ ಯಂ ಸೋಮಂ ಪಿಬತಿ ಯೇನ ಸೋಮೇನ ಮಿತ್ರಾವರುಣಾ ಮಿತ್ರಾವರುಣೌ ವಯಮಾ ಕರಾಮಹೇ ಅಭಿಮುಖೀಕುರ್ಮಹೇ ತಥಾ ಮಹೇ ಮಹತೇಽವಸೇ ರಕ್ಷಣಾಯ ಯೇನ ಚ ಸೋಮೇನೇಂದ್ರಮಭಿಮುಖೀಕುರ್ಮಹೇ ಸ ಸೋಮೋಽಭಿಷೂಯತೇ ॥

॥ ಪ್ರತಿಪದಾರ್ಥ ॥

ನಃ— ನಮ್ಮ । ಯಸ್ಯ— ಯಾವ ಸೋಮವನ್ನು । ಇಂದ್ರಃ— ಇಂದ್ರನು । ಪಿಬಾತ್— ಪಾನಮಾಡುವನೋ । ಮರುತಃ— ಮರುತ್ತುಗಳು । ಯಸ್ಯ— ಯಾವ ಸೋಮವನ್ನು ಪಾನಮಾಡುವರೋ । ವಾ— ಮತ್ತು । ಅರ್ಯಮಣಾ— ಅರ್ಯಮದೇವನೊಂದಿಗೆ । ಭಗಃ— ಭಗದೇವನು ಯಾವುದನ್ನು ಪಾನಮಾಡುವನೋ । ಯೇನ— ಯಾವ ಸೋಮದ ಸಹಾಯದಿಂದ । ಮಿತ್ರಾವರುಣಾ— ಮಿತ್ರಾವರುಣರನ್ನು । ಆ ಕರಾಮಹೇ— ನಾವು ಬರಮಾಡಿಕೊಳ್ಳುವೆವೋ । ಮಹೇ— ಮಹತ್ತಾದ । ಅವಸೇ— ರಕ್ಷಣಾರ್ಥವಾಗಿ । ಇಂದ್ರಂ ಆ— ಇಂದ್ರನನ್ನು ಯಾವ ಸೋಮದಿಂದ ತೃಪ್ತಿಪಡಿಸುವೆವೋ ಆ ಸೋಮವು ಹಿಂಡಲ್ಪಡುತ್ತದೆ.

॥ ಭಾವಾರ್ಥ ॥

ಯಾವ ನಮ್ಮ ಸೋಮವನ್ನು ಇಂದ್ರನು ಪಾನಮಾಡುವನೋ, ಮರುತ್ತುಗಳು ಯಾವ ಸೋಮವನ್ನು ಪಾನಮಾಡುವರೋ ಮತ್ತು ಅರ್ಯಮದೇವನೊಂದಿಗೆ ಭಗನು ಯಾವುದನ್ನು ಪಾನಮಾಡುವನೋ, ಯಾವ ಸೋಮದ ಸಹಾಯದಿಂದ ಮಿತ್ರಾವರುಣರನ್ನು ನಾವು ಬರಮಾಡಿಕೊಳ್ಳುವೆವೋ, ಮಹತ್ತಾದ ರಕ್ಷಣಾರ್ಥವಾಗಿ ಇಂದ್ರನನ್ನು ಯಾವ ಸೋಮದಿಂದ ತೃಪ್ತಿಪಡಿಸುವೆವೋ ಆ ಸೋಮವು ಹಿಂಡಲ್ಪಡುತ್ತದೆ.

## English Translation

Our (Soma) which Indra drinks, which the Maruts drink and the Bhaga with Aryaman; through which we propitiate Mitra and Varuna and Indra, to obtain his powerful protection.

॥ ಸಂಹಿತಾಪಾಠಃ ॥

ಇಂದ್ರಾಯ ಸೋಮ ಪಾತವೇ ನೃಭಿರ್ಯತಃ ಸ್ವಾಯುಧೋ ಮದಿಂತಮಃ ।
ಪವಸ್ವ ಮಧುಮತ್ತಮಃ ॥ ೧೫ ॥

॥ ಪದಪಾಠಃ ॥

ಇಂದ್ರಾಯ । ಸೋಮ । ಪಾತವೇ । ನೃಽಭಿಃ । ಯತಃ । ಸುಽಆಯುಧಃ । ಮದಿನ್ಽತಮಃ ।
ಪವಸ್ವ । ಮಧುಮತ್ಽತಮಃ । ೧೫ ॥

॥ ಸಾಯಣಭಾಷ್ಯಂ ॥

ಹೇ ಸೋಮ ಮಧುಮತ್ತಮೋಽತಿಶಯೇನ ಮಾಧುರ್ಯೋಪೇತಸ್ತ್ವಮಿಂದ್ರಾಯ ಪಾತವೇ ಪಾನಾರ್ಥಂ ಪವಸ್ವ । ಕಲಶೇ ಕ್ಷರ । ಕೀದೃಶಃ । ನೃಭಿಃ ಕರ್ಮನೇತೃಭಿರೃತ್ವಿಗ್ಭಿರ್ಯತಃ ಸಂಯತಃ ಸ್ವಾಯುಧಃ ಶೋಭನಸ್ಫ್ಯಕಪಾಲಾದ್ಯಾಯುಧೋಪೇತೋ ಮಂದಿತಮೋ ಮಾದಯಿತೃತಮಃ ॥

॥ ಪ್ರತಿಪದಾರ್ಥ ॥

**ಸೋಮ** — ಎಲೈ ಸೋಮನೇ । **ನೃಭಿಃ**— ಋತ್ವಿಕ್ಕುಗಳಿಂದ । **ಯತಃ**— ನಿಯಮಿತನೂ । **ಸ್ವಾಯುಧಃ**— ಉತ್ತಮವಾದ ಆಯುಧವುಳ್ಳವನೂ । **ಮದಿಂತಮಃ**— ಹರ್ಷಯುತನೂ । **ಮಧುಮತ್ತಮಃ**— ಅತಿಶಯವಾದ ಮಾಧುರ್ಯವುಳ್ಳವನೂ ಆದ ನೀನು । **ಇಂದ್ರಾಯ**— ಇಂದ್ರನಿಗೆ । **ಪಾತವೇ**— ಪಾನಾರ್ಥವಾಗಿ । **ಪವಸ್ವ**— ಸ್ರವಿಸು.

॥ ಭಾವಾರ್ಥ ॥

ಎಲೈ ಸೋಮನೇ, ಋತ್ವಿಕ್ಕುಗಳಿಂದ ನಿಯಮಿತನೂ, ಉತ್ತಮವಾದ ಆಯುಧವುಳ್ಳವನೂ, ಹರ್ಷಯುತನೂ ಅತಿಶಯವಾದ ಮಾಧುರ್ಯವುಳ್ಳವನೂ ಆದ ನೀನು ಇಂದ್ರನ ಪಾನಾರ್ಥವಾಗಿ ಸ್ರವಿಸು.

## English Translation

Soma, collected by the priests, well-armed, most exhilarating, most sweet-flavoured, flow for Indra to drink.

॥ ಸಂಹಿತಾಪಾಠಃ ॥

ಇಂದ್ರಸ್ಯ ಹಾರ್ದಿ ಸೋಮಧಾನಮಾ ವಿಶ ಸಮುದ್ರಮಿವ ಸಿಂಧವಃ ।
ಜುಷ್ಟೋ ಮಿತ್ರಾಯ ವರುಣಾಯ ವಾಯವೇ ದಿವೋ ವಿಷ್ಟಂಭ ಉತ್ತಮಃ ॥ ೧೬ ॥

॥ ಪದಪಾಠಃ ॥

ಇಂದ್ರಸ್ಯ । ಹಾರ್ದಿ । ಸೋಮಽಧಾನಂ । ಆ । ವಿಶ । ಸಮುದ್ರಂಽಇವ । ಸಿಂಧವಃ ।
ಜುಷ್ಟಃ । ಮಿತ್ರಾಯ । ವರುಣಾಯ । ವಾಯವೇ । ದಿವಃ । ವಿಷ್ಟಂಭಃ । ಉತ್ಽತಮಃ ॥ ೧೬ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಮಿಂದ್ರಸ್ಯ ಹಾರ್ದಿ ಹೃದಯಂಗಮಂ ಹೃದಯಭೂತಂ ವಾ ಸೋಮಧಾನಂ । ಸೋಮೋ ನಿಧೀಯತೇಽಸ್ಮಿನ್ನಿತಿ ಸೋಮಧಾನಃ ಕಲಶಃ । ತಮಾ ವಿಶ । ಪ್ರವಿಶ । ತತ್ರ ದೃಷ್ಟಾಂತಃ । ಸಮುದ್ರಮಿವ ಯಥಾ ಸಮುದ್ರಂ ಸಿಂಧವೋ ನದ್ಯಃ ಪ್ರವಿಶಂತಿ ತದ್ವತ್ । ಕೀದೃಶಸ್ತ್ವಂ । ಮಿತ್ರಾಯ ವರುಣಾಯ ವಾಯವೇ ಚ ತೇಭ್ಯೋ ಜುಷ್ಟೋ ದಿವೋ ದ್ಯುಲೋಕಸ್ಯ ವಿಷ್ಟಂಭೋ ವಿಷ್ಟಂಭಯಿತಾ ಸ್ಥಾಪಯಿತೋತ್ತಮಃ ಸರ್ವೇಷಾಮುತ್ಕೃಷ್ಟತಮಸ್ತ್ವಂ ಕಲಶಮಾ ವಿಶ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಮಿತ್ರಾಯ** ಮಿತ್ರನಿಗೂ । **ವರುಣಾಯ**—ವರುಣನಿಗೂ । **ವಾಯವೇ**—ವಾಯುವಿಗೂ । **ಜುಷ್ಟಃ**—ತೃಪ್ತಿಕಾರಕನೂ । **ದಿವಃ**—ದ್ಯುಲೋಕಕ್ಕೆ । **ವಿಷ್ಟಂಭಃ**—ಸ್ಥಾಪಕನೂ । **ಉತ್ತಮಃ**–ಅತ್ಯುತ್ತಮನೂ ಆದ ನೀನು । **ಇಂದ್ರಸ್ಯ** ಇಂದ್ರನ । **ಹಾರ್ದಿ**—ಮನಸ್ಸಿಗೆ ತೃಪ್ತಿದಾಯಕನಾದ । **ಸೋಮಧಾನಂ**—ಕಲಶವನ್ನು । **ಸಿಂಧವಃ**—ನದಿಗಳು । **ಸಮುದ್ರಂ ಇವ** ಸಮುದ್ರವನ್ನು ಪ್ರವೇಶಿಸುವಂತೆ । **ಆ ವಿಶ**—ಪ್ರವೇಶಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ ಮಿತ್ರನಿಗೂ, ವರುಣನಿಗೂ, ವಾಯುವಿಗೂ ತೃಪ್ತಿಕಾರಕನೂ, ದ್ಯುಲೋಕಕ್ಕೆ ಸ್ಥಾಪಕನೂ, ಅತ್ಯುತ್ತಮನೂ ಆದ ನೀನು ಇಂದ್ರನ ಮನಸ್ಸಿಗೆ ತೃಪ್ತಿದಾಯಕವಾದ ಕಲಶವನ್ನು ನದಿಗಳು ಸಮುದ್ರವನ್ನು ಪ್ರವೇಶಿಸುವಂತೆ ಪ್ರವೇಶಿಸು.

English Translation

Soma, enter the Somadhana, Indra's heart, as the rivers (enter) the sea agreeable to mitra, Varuna and Vayu, the chief stay of heaven.

## ನೂರ ಒಂಭತ್ತನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಪರಿ ಪ್ರೇತಿ ದ್ವಾವಿಂಶತ್ಯೃಚಂ ದ್ವೈಪದಂ ಷಷ್ಠಂ ಸೂಕ್ತಂ । ಯಜ್ಞೇ ಸದಸ್ಯವಸ್ಥಿತಹೋತ್ರೀಯಾದಿಧಿಷ್ಣ್ಯೋಪೇತಾ ಅಗ್ನಯೋ ನಾಮೇಶ್ವರಪುತ್ರಾ ಋಷಯಃ । ವಿಂಶತಿಕಾ ದ್ವಿಪದಾ ವಿರಾಜಃ । ಪವಮಾನಃ ಸೋಮೋ ದೇವತಾ । ತಥಾ ಚಾನುಕ್ರಾಂತಂ । ಪರಿ ಪ್ರ ದ್ವ್ಯಧಿಕಾಗ್ನಯೋ ಧಿಷ್ಣ್ಯಾ ಐಶ್ವರಾ ದ್ವೈಪದಮಿತಿ ॥ ಗತೋ ವಿನಿಯೋಗಃ ॥**

ಅನುವಾದವು—**ಪರಿ ಪ್ರ ಧನ್ವ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಇಪ್ಪತ್ತೆರಡು ಋಕ್ಕುಗಳಿರುವವು. ಯಜ್ಞದಲ್ಲಿ ಸದಃಸ್ಥಾನದಲ್ಲಿರುವವರೂ ಹೋತ್ರನೇ ಮೊದಲಾದ ಧಿಷ್ಣ್ಯೋಪೇತರೂ, ಈಶ್ವರಪುತ್ರರೂ ಆದ ಅಗ್ನಯಃ ಎಂಬ ಋಷಿಗಳು ಈ ಸೂಕ್ತಕ್ಕೆ ಋಷಿಗಳು. ಪವಮಾನ ಸೋಮನು ದೇವತೆಯು; ಈ ಸೂಕ್ತದ ಋಕ್ಕುಗಳು ಇಪ್ಪತ್ತಕ್ಷರಗಳಿರುವ ವಿರಾಟ್ ಛಂದಸ್ಸುವು. ಅನುಕ್ರಮಣಿಕೆಯಲ್ಲಿ—**ಪರಿ ಪ್ರ ದ್ವ್ಯಧಿಕಾಗ್ನಯೋ ಧಿಷ್ಣ್ಯಾ ಐಶ್ವರಾ ದ್ವೈಪದಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೧೦೯

ಮಂಡಲ—೯ । ಅನುವಾಕ—೭ । ಸೂಕ್ತ—೧೦೯ ।
ಅಷ್ಟಕ—೭ । ಅಧ್ಯಾಯ ೫ । ವರ್ಗ—೨೦, ೨೧ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೨ ।
ಋಷಿ—ಅಗ್ನಯೋ ಧಿಷ್ಣ್ಯಾ ಐಶ್ವರಾಃ ।
ದೇವತಾ—ಪವಮಾನಃ ಸೋಮಃ ।
ಛಂದಃ—ದ್ವಿಪದಾ ।

॥ ಸಂಹಿತಾಪಾಠಃ ॥

**ಪರಿ ಪ್ರ ಧನ್ವೇಂದ್ರಾಯ ಸೋಮ ಸ್ವಾದುರ್ಮಿತ್ರಾಯ ಪೂಷ್ಣೇ ಭಗಾಯ ॥**

॥ ಪದಪಾಠಃ ॥

ಪರಿ । ಪ್ರ । ಧನ್ವ । ಇಂದ್ರಾಯ । ಸೋಮ । ಸ್ವಾದುಃ । ಮಿತ್ರಾಯ । ಪೂಷ್ಣೇ । ಭಗಾಯ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಸೋಮ ಸ್ವಾದುಃ ಸ್ವಾದರಸಸ್ತ್ವಮಿಂದ್ರಾಯ ಮಿತ್ರಾಯ ಪೂಷ್ಣೇ ಭಗಾಯೈತೇಭ್ಯೋ ದೇವೇಭ್ಯಃ ಪರಿ ಪ್ರ ಧನ್ವ । ಪರಿತಃ ಪಾತ್ರೇಷು ಪ್ರಕ್ಷರ ॥**

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಸ್ವಾದು**—ರುಚಿಕರವಾದ ನೀನು । **ಇಂದ್ರಾಯ**—ಇಂದ್ರಾರ್ಥವಾಗಿಯೂ । **ಮಿತ್ರಾಯ**—ಮಿತ್ರನಿಗಾಗಿಯೂ । **ಪೂಷ್ಣೇ**—ಪೂಷನಿಗಾಗಿಯೂ । **ಭಗಾಯ**—ಭಗನನ್ನುದ್ದೇಶಿಸಿಯೂ । **ಪರಿ ಪ್ರ ಧನ್ವ**—ಸುತ್ತಲೂ ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ರುಚಿಕರನಾದ ನೀನು ಇಂದ್ರ, ಮಿತ್ರ, ಪೂಷ, ಭಗ ಈ ದೇವತೆಗಳ ಪಾನಾರ್ಥವಾಗಿ ಸುತ್ತಲೂ ಪ್ರವಹಿಸು.

English Translation

Flow, Soma, who are sweet-flavoured, for Indra, Mitra, Pushan and Bhaga.

॥ ಸಂಹಿತಾಪಾಠಃ ॥

ಇಂದ್ರಸ್ತೇ ಸೋಮ ಸುತಸ್ಯ ಪೇಯಾಃ ಕ್ರತ್ವೇ ದಕ್ಷಾಯ ವಿಶ್ವೇ ಚ ದೇವಾಃ॥

॥ ಪದಪಾಠಃ ॥

ಇಂದ್ರಃ । ತೇ । ಸೋಮ । ಸುತಸ್ಯ । ಪೇಯಾಃ । ಕ್ರತ್ವೇ । ದಕ್ಷಾಯ । ವಿಶ್ವೇ । ಚ । ದೇವಾಃ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಸೋಮ ಸುತಸ್ಯಾಭಿಷುತಸ್ಯ ತೇ ತವ ಸ್ವಂ ಭಾಗಮಿಂದ್ರಃ ಪೇಯಾಃ । ಪೇಯಾತ್ । ಪಿಬತು। ಪಾತೇರಾಶೀರ್ಲಿಙಿ ರೂಪಂ । ಪುರುಷವ್ಯತ್ಯಯಃ ॥ ಕಿಮರ್ಥಂ । ಕ್ರತ್ವೇ ಕ್ರತವೇ ಪ್ರಜ್ಞಾನಾಯ ದಕ್ಷಾಯ ಬಲಾಯ ಚ । ಕಿಂಚಾಮೀ ಸರ್ವೇ ವಿಶ್ವೇ ದೇವಾಶ್ಚ ತ್ವದೀಯಮಂಶಂ ಪಿಬಂತು ॥**

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಸುತಸ್ಯ**—ಹಿಂಡಲ್ಪಟ್ಟ । **ತೇ**—ನಿನ್ನ ಭಾಗವನ್ನು । **ಇಂದ್ರಃ**—ಇಂದ್ರನು । **ಕ್ರತ್ವೇ**—ಉತ್ತಮವಾದ ಜ್ಞಾನಸಂಪಾದನೆಗೂ । **ದಕ್ಷಾಯ**—ಶಕ್ತಿವೃದ್ಧಿಗಾಗಿಯೂ । **ಪೇಯಾಃ**—ಪಾನಮಾಡಲಿ । **ವಿಶ್ವೇ**—ಸಮಸ್ತವಾದ । **ದೇವಾಃ ಚ**—ದೇವತೆಗಳೂ ಪಾನಮಾಡಲಿ.

॥ ಭಾವಾರ್ಥ ॥

ಎಲೈ ಸೋಮದೇವನೇ, ಹಿಂಡಿ ಸಿದ್ಧವಾಗಿರುವ ನಿನ್ನ ಭಾಗವನ್ನು ಇಂದ್ರನು ಉತ್ತಮವಾದ ಜ್ಞಾನಸಂಪಾದನೆಗಾಗಿಯೂ ಶಕ್ತಿವೃದ್ಧಿಗಾಗಿಯೂ ಪಾನಮಾಡಲಿ. ಸಕಲ ದೇವತೆಗಳೂ ಪಾನಮಾಡಲಿ

## English Translation

Soma, let Indra and all the gods drink of you when effused for intelligence and strength.

॥ ಸಂಹಿತಾಪಾಠಃ ॥

ಏವಾಮೃತಾಯ ಮಹೇ ಕ್ಷಯಾಯ ಸ ಶುಕ್ರೋ ಅರ್ಷ ದಿವ್ಯಃ ಪೀಯೂಷಃ ॥ ೩ ॥

॥ ಪದಪಾಠಃ ॥

ಏವ । ಅಮೃತಾಯ । ಮಹೇ । ಕ್ಷಯಾಯ । ಸಃ । ಶುಕ್ರಃ । ಅರ್ಷ । ದಿವ್ಯಃ । ಪೀಯೂಷಃ ॥ ೩ ॥

॥ ಸಾಯಣಭಾಷ್ಯಂ ॥

**ಹೇ ಸೋಮ ಶುಕ್ರೋ ದೀಪ್ತೋ ದಿವ್ಯೋ ದಿವಿ ಭವಃ ಪೀಯೂಷೋ ದೇವೈಃ ಪಾತವ್ಯಃ ಸ ತ್ವಮಮೃತಾಯಾಮರಣಾಯ ಮಹೇ ಮಹತೇ ಕ್ಷಯಾಯ ನಿವಾಸಾಯ ಚೈವಾರ್ಷ । ಏವಂ ಪವಸ್ವ । ಕ್ಷರ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಶುಕ್ರಃ**—ಪ್ರಕಾಶಮಾನನೂ **ದಿವ್ಯಃ**—ದ್ಯುಲೋಕೋತ್ಪನ್ನನೂ । **ಪೀಯೂಷಃ**—ದೇವತೆಗಳ ಪಾನಕ್ಕೆ ಯೋಗ್ಯನೂ ಆದ । **ಸಃ**—ನೀನು **ಅಮೃತಾಯ**—ಮರಣರಾಹಿತ್ಯಕ್ಕಾಗಿಯೂ । **ಮಹೇ**—ಮಹತ್ತಾದ । **ಕ್ಷಯಾಯ**—ನಿವಾಸಕ್ಕಾಗಿಯೂ । **ಏವ**—ಈ ಪ್ರಕಾರವಾಗಿ । **ಅರ್ಷ**—ಸ್ರವಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಪ್ರಕಾಶಮಾನನೂ, ದ್ಯುಲೋಕೋತ್ಪನ್ನನೂ, ದೇವತೆಗಳ ಪಾನಕ್ಕೆ ಯೋಗ್ಯನೂ ಆದ ನೀನು ಮರಣರಾಹಿತ್ಯಕ್ಕಾಗಿಯೂ, ಮಹತ್ತಾದ ನಿವಾಸಕ್ಕಾಗಿಯೂ ಈ ಪ್ರಕಾರವಾಗಿ ಸ್ರವಿಸು.

## English Translation

So do you who are pure, divine, the beverage of all the gods, flow for immortality and a spacious abode.

॥ ಸಂಹಿತಾಪಾಠಃ ॥

ಪವಸ್ವ ಸೋಮ ಮಹಾನ್ತ್ಸಮುದ್ರಃ ಪಿತಾ ದೇವಾನಾಂ ವಿಶ್ವಾಭಿ ಧಾಮ ॥

॥ ಪದಪಾಠಃ ॥

ಪವಸ್ವ । ಸೋಮ । ಮಹಾನ್ । ಸಮುದ್ರಃ । ಪಿತಾ । ದೇವಾನಾಂ । ವಿಶ್ವಾ । ಅಭಿ । ಧಾಮ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸೋಮ ಮಹಾನ್ ದೇವೇಭ್ಯೋ ದೀಯಮಾನತ್ವೇನ ಮಹತ್ತ್ವಯುಕ್ತಃ ಸಮುದ್ರಃ ಸಮುಂದನಃ । ಯಸ್ಮಾತ್ಸಮುದ್ರವಂತಿ ರಸಾಸ್ತಾದೃಶಃ । ಪಿತಾ ಸರ್ವೇಷಾಂ ಪಾಲಯಿತಾ ತ್ವಂ ದೇವಾನಾಂ ವಿಶ್ವಾ ವಿಶ್ವಾನಿ ಸರ್ವಾಣಿ ಧಾಮ ಧಾಮಾನಿ ಶರೀರಾಣ್ಯಭಿಲಕ್ಷ್ಯ ಪವಸ್ವ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ । ಮಹಾನ್—ಮಹತ್ಸ್ವರೂಪವುಳ್ಳವನೂ । ಸಮುದ್ರಃ—ಪ್ರವಾಹಾತ್ಮಕನೂ । ಪಿತಾ—ಸಕಲರ ಪಾಲಕನೂ ಆದ ನೀನು । ದೇವಾನಾಂ—ದೇವತೆಗಳ । ವಿಶ್ವಾ—ಸಮಸ್ತವಾದ । ಧಾಮ ಅಭಿ—ಗೃಹಗಳಿಗೆ ಅಭಿಮುಖವಾಗಿ । ಪವಸ್ವ—ಹರಿದು ಹೋಗು.

॥ ಭಾವಾರ್ಥ ॥

ಎಲೈ ಸೋಮದೇವನೇ, ಮಹತ್ಸ್ವರೂಪವುಳ್ಳವನೂ, ಪ್ರವಾಹಾತ್ಮಕನೂ, ಸಕಲರ ಪಾಲಕನೂ ಆದ ನೀನು ದೇವತೆಗಳ ಸಕಲ ಗೃಹಗಳಿಗೂ ಅಭಿಮುಖವಾಗಿ ಹರಿದು ಹೋಗು.

English Translation

Flow, Soma, who are mighty, the shedder of juice, the parent of gods, towards all bodies.

॥ ಸಂಹಿತಾಪಾಠಃ ॥

ಶುಕ್ರಃ ಪವಸ್ವ ದೇವೇಭ್ಯಃ ಸೋಮ ದಿವೇ ಪೃಥಿವ್ಯೈ ಶಂ ಚ ಪ್ರಜಾಯೈ ॥

॥ ಪದಪಾಠಃ ॥

ಶುಕ್ರಃ । ಪವಸ್ವ । ದೇವೇಭ್ಯಃ । ಸೋಮ । ದಿವೇ । ಪೃಥಿವ್ಯೈ । ಶಂ । ಚ । ಪ್ರಽಜಾಯೈ ॥ ೫

॥ ಸಾಯಣಭಾಷ್ಯಂ ॥

ಹೇ ಸೋಮ ಶುಕ್ರೋ ದೀಪ್ತಸ್ತ್ವಂ ದೇವೇಭ್ಯೋ ದೇವಾರ್ಥಂ ಪವಸ್ವ । ಕ್ಷರ । ಕಿಂಚ ದಿವೇ ಪೃಥಿವ್ಯೈ ಚ ದ್ಯಾವಾಪೃಥಿವೀಭ್ಯಾಂ ಚ ತತಃ ಪ್ರಜಾಯೈ ಪ್ರಜಾಭ್ಯಶ್ಚ ಶಂ ಸುಖಂ ಚ ಕುರು ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಶುಕ್ರಃ**—ಪ್ರಭಾಯುತನಾದ ನೀನು । **ದೇವೇಭ್ಯಃ**—ದೇವತೆಗಳಿಗಾಗಿ । **ಪವಸ್ವ**—ಸ್ರವಿಸು । **ದಿವೇ**—ದ್ಯುಲೋಕರಕ್ಷಣೆಗಾಗಿಯೂ । **ಪೃಥಿವ್ಯೈ**—ಪೃಥಿವಿಗಾಗಿಯೂ । **ಪ್ರಜಾಯೈ**—ಸಕಲ ಪ್ರಜೆಗಳ ಹಿತಕ್ಕಾಗಿಯೂ । **ಶಂ ಚ**—ಸುಖವನ್ನು ಉಂಟುಮಾಡು.

॥ ಭಾವಾರ್ಥ ॥

ಎಲೈ ಸೋಮದೇವನೇ, ಪ್ರಭಾಯುತನಾದ ನೀನು ದೇವತೆಗಳಿಗಾಗಿ ಸ್ರವಿಸು. ದ್ಯಾವಾಪೃಥಿವಿಗಳಿಗಾಗಿಯೂ ಸಕಲ ಪ್ರಜೆಗಳಿಗಾಗಿಯೂ ಸುಖವನ್ನುಂಟುಮಾಡು.

## English Translation

Soma, who are brilliant, flow for the gods and (give) joy to heaven and earth and all creatures-

॥ ಸಂಹಿತಾಪಾಠಃ ॥

ದಿವೋ ಧರ್ತಾಸಿ ಶುಕ್ರಃ ಪೀಯೂಷಃ ಸತ್ಯೇ ವಿಧರ್ಮನ್ವಾಜೀ ಪವಸ್ವ ॥೭॥

॥ ಪದಪಾಠಃ ॥

ದಿವಃ । ಧರ್ತಾ । ಅಸಿ । ಶುಕ್ರಃ । ಪೀಯೂಷಃ । ಸತ್ಯೇ । ವಿऽಧರ್ಮನ್ । ವಾಜೀ । ಪವಸ್ವ ॥ ೭ ॥

॥ ಸಾಯಣಭಾಷ್ಯಂ ॥

ಹೇ ಸೋಮ ಶುಕ್ರೋ ದೀಪ್ತಃ ಪೀಯೂಷಃ ಪಾತವ್ಯಸ್ತ್ವಂ ದಿವೋ ದ್ಯುಲೋಕಸ್ಯ ಧರ್ತಾ ಧಾರಕೋಽಸಿ । ವಾಜೀ ಬಲವಾನ್ ಸ ತ್ವಂ ಸತ್ಯೇ ಸತ್ಯಭೂತೇ ವಿಧರ್ಮನ್ ವಿಧರ್ಮಣಿ । ವಿವಿಧಕರ್ಮಾಣ ಋತ್ವಿಜೋ ಯಸ್ಮಿನ್ । ಯದ್ವಾ । ವಿವಿಧಸೋಮಾದಿಹವಿಷಾಂ ಧಾರಕೇ । ಅಸ್ಮಿನ್ಯಜ್ಞೇ ಪವಸ್ವ । ಕ್ಷರ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಶುಕ್ರಃ**—ಪ್ರಭಾಯುತನೂ **ಪೀಯೂಷಃ**—ದೇವತೆಗಳಿಗೆ ಪಾನಾರ್ಹನೂ ಆದ ನೀನು । **ದಿವಃ**—ದ್ಯುಲೋಕದ । **ಧರ್ತಾ**—ಧಾರಕನಾಗಿ । **ಅಸಿ**—ಆಗಿದ್ದೀಯೆ । **ವಾಜೀ**—ಬಲಯುತನಾದ ನೀನು । **ಸತ್ಯೇ**—ಸತ್ಯಾತ್ಮಕವೂ । **ವಿಧರ್ಮನ್**—ಸಕಲವನ್ನೂ ಧರಿಸತಕ್ಕದ್ದೂ ಆದ ಯಜ್ಞದಲ್ಲಿ । **ಪವಸ್ವ**—ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಪ್ರಭಾಯುತನೂ, ದೇವತೆಗಳ ಪಾನಕ್ಕೆ ಅರ್ಹನೂ ಆದ ನೀನು ದ್ಯುಲೋಕದ ಧಾರಕನಾಗಿದ್ದೀಯೆ. ಬಲಯುತನಾದ ನೀನು ಸತ್ಯಾತ್ಮಕವೂ, ಸಕಲ ಧಾರಕವೂ ಆದ ಯಜ್ಞದಲ್ಲಿ ಪ್ರವಹಿಸು.

English Translation

You are the upholder of heaven, radiant and good to drink; flow you who are strong, at the truthful sacrifice.

॥ ಸಂಹಿತಾಪಾಠಃ ॥

ಪವಸ್ವ ಸೋಮ ದ್ಯುಮ್ನೀ ಸುಧಾರೋ ಮಹಾಮವೀನಾಮನು ಪೂರ್ವ್ಯಃ ॥

॥ ಪದಪಾಠಃ ॥

ಪವಸ್ವ ಸೋಮ ದ್ಯುಮ್ನೀ । ಸುऽಧಾರಃ । ಮಹಾಂ । ಅವೀನಾಂ । ಅನು । ಪೂರ್ವ್ಯಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಸೋಮ ದ್ಯುಮ್ನೀ । ದ್ಯುಮ್ನಂ ದ್ಯೋತತೇರ್ಯಶೋ ವಾನ್ನಂ ವೇತಿ ಯಾಸ್ಕಃ । ಅನ್ನ-ವಾನ್ ಯಶಸ್ವೀ ವಾ ಸುಧಾರಃ ಶೋಭನಧಾರಾಯುಕ್ತಃ ಪೂರ್ವ್ಯಃ ಪುರಾತನಸ್ತ್ವಂ ಮಹಾಂ ಮಹತಾಮವೀನಾಂ ರೋಮ್ಣಾಂ ರೋಮಭ್ಯಃ ಸಕಾಶಾದನುಕ್ರಮೇಣ ಪವಸ್ವ । ಕ್ಷರ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ದ್ಯುಮ್ನೀ**—ಅನ್ನವಂತನೂ । **ಸುಧಾರಃ**—ಉತ್ತಮವಾದ ಧಾರೆಯುಳ್ಳವನೂ । **ಪೂರ್ವ್ಯಃ**—ಪುರಾತನನೂ ಆದ ನೀನು । **ಮಹಾಂ**—ಮಹತ್ತಾದ । **ಅವೀನಾಂ**—ಉಣ್ಣೆಯ ನೂಲುಗಳ ಮೂಲಕ । **ಅನು**—ಯಥಾಕ್ರಮವಾಗಿ । **ಪವಸ್ವ**—ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಅನ್ನವಂತನೂ, ಉತ್ತಮವಾದ ಧಾರೆಯುಳ್ಳವನೂ. ಪುರಾತನನೂ ಆದ ನೀನು ಮಹತ್ತಾದ ಉಣ್ಣೆನೂಲುಗಳ ಮೂಲಕ ಯಥಾಕ್ರಮವಾಗಿ ಪ್ರವಹಿಸು.

English Translation

Do you, Soma, who are possessed of food, who have a copious stream, flow through the great sheep's, hairs in due succession.

॥ ಸಂಹಿತಾಪಾಠಃ ॥

ನೃಭಿರ್ಯೇಮಾನೋ ಜಜ್ಞಾನಃ ಪೂತಃ ಕ್ಷರದ್ವಿಶ್ವಾನಿ ಮಂದ್ರಃ ಸ್ವರ್ವಿತ್ ॥

। ಪದಪಾಠಃ ।

ನೃಽಭಿಃ । ಯೇಮಾನಃ । ಜಜ್ಞಾನಃ । ಪೂತಃ । ಕ್ಷರತ್ । ವಿಶ್ವಾನಿ । ಮಂದ್ರಃ । ಸ್ವಃಽವಿತ್ ॥ ೮ ॥

। ಸಾಯಣಭಾಷ್ಯಂ ।

ನೃಭಿಃ ಕರ್ಮನೇತೃಭಿರ್ಋತ್ವಿಗ್ಭಿರ್ಯೇಮಾನೋ ನಿಯಮ್ಯಮಾನೋ ಜಜ್ಞಾನೋ ಜಾಯಮಾನಃ ಪೂತಃ ಪವಿತ್ರೇಣ ಶೋಧಿತೋ ಮಂದ್ರೋ ಮೋದಮಾನಃ ಸ್ವರ್ವಿತ್ಸರ್ವಜ್ಞಃ ಏತಾದೃಶಃ ಸೋಮೋ ವಿಶ್ವಾನಿ ಸರ್ವಾಣಿ ಧನಾನ್ಯಸ್ಮಭ್ಯಂ ಕ್ಷರತ್ । ಕ್ಷರತು । ದದಾತು ॥

। ಪ್ರತಿಪದಾರ್ಥ ।

**ನೃಭಿಃ**—ಋತ್ವಿಕ್ಕುಗಳಿಂದ । **ಯೇಮಾನಃ**—ನಿಯಮಿತನಾದವನೂ । **ಜಜ್ಞಾನಃ**—ಯಜ್ಞಾರ್ಥವಾಗಿ ಉತ್ಪನ್ನನೂ । **ಪೂತಃ**—ದಶಾಪವಿತ್ರದಿಂದ ಶೋಧಿಸಲ್ಪಟ್ಟವನೂ । **ಮಂದ್ರಃ**—ಹರ್ಷಯುತನೂ । **ಸ್ವರ್ವಿತ್**—ಸರ್ವಜ್ಞನೂ ಆದ ಸೋಮನು । **ವಿಶ್ವಾನಿ**—ಸಕಲ ಧನಗಳನ್ನೂ । **ಕ್ಷರತ್**—ನಮಗಾಗಿ ಒದಗಿಸಲಿ.

। ಭಾವಾರ್ಥ ॥

ಋತ್ವಿಕ್ಕುಗಳಿಂದ ನಿಯಮಿತನಾದವನೂ, ಯಜ್ಞಾರ್ಥವಾಗಿ ಉತ್ಪನ್ನನೂ, ದಶಾಪವಿತ್ರದಿಂದ ಶೋಧಿಸಲ್ಪಟ್ಟವನೂ, ಹರ್ಷಯುತನೂ, ಸರ್ವಜ್ಞನೂ ಆದ ಸೋಮನು ಸಕಲ ಧನಗಳನ್ನೂ ನಮಗಾಗಿ ಒದಗಿಸಲಿ.

## English Translation

May the Soma regulated by the priests, engendered, purified, exhilarating, all-knowing, bring us all (riches).

। ಸಂಹಿತಾಪಾಠಃ ।

ಇಂದುಃ ಪುನಾನಃ ಪ್ರಜಾಮುರಾಣಃ ಕರದ್ವಿಶ್ವಾನಿ ದ್ರವಿಣಾನಿ ನಃ ॥ ೯ ॥

। ಪದಪಾಠಃ ।

ಇಂದುಃ । ಪುನಾನಃ । ಪ್ರಽಜಾಂ । ಉರಾಣಃ । ಕರತ್ । ವಿಶ್ವಾನಿ । ದ್ರವಿಣಾನಿ । ನಃ ॥ ೯ ॥

। ಸಾಯಣಭಾಷ್ಯಂ ।

ಪುನಾನಃ ಪೂಯಮಾನ ಉರಾಣಃ । ಉರಾಣ ಉರು ಕುರ್ವಾಣಃ । ನಿ. ೬-೧೭ ಇತಿ ಯಾಸ್ಕಃ ॥ ದೇವಾನ್ ಬಹು ಕುರ್ವಾಣ ಇಂದುಃ ಸೋಮೋ ನೋಽಸ್ಮಾಕಂ ಪ್ರಜಾಮಪತ್ಯಾದಿಕಾಂ ವಿಶ್ವಾನಿ ವ್ಯಾಪ್ತಾನಿ ದ್ರವಿಣಾನಿ ಧನಾನಿ ಚ ಕರತ್ । ಕರೋತು ॥ ಕರೋತೇರ್ಲೇಟಿ ರೂಪಂ ॥

॥ ಪ್ರತಿಪದಾರ್ಥ ॥

**ಪುನಾನಃ**— ಶುದ್ಧಿಯನ್ನು ಹೊಂದಿದವನೂ । **ಉಶಾನಃ**— ದೇವತೆಗಳನ್ನು ಪುಷ್ಟಿಗೊಳಿಸುವವನೂ ಆದ । **ಇಂದುಃ**— ಸೋಮನು । **ನಃ**— ನಮಗೆ । **ಪ್ರಜಾಂ**— ಪುತ್ರಾದಿಗಳನ್ನೂ । **ವಿಶ್ವಾನಿ**- ವ್ಯಾಪಕವಾದ । **ದ್ರವಿಣಾನಿ**- ಧನಗಳನ್ನೂ । **ಕರತ್**— ಒದಗಿಸಿ ಕೊಡಲಿ.

॥ ಭಾವಾರ್ಥ ॥

ಶುದ್ಧಿಯನ್ನು ಹೊಂದಿದವನೂ, ದೇವತೆಗಳನ್ನು ಪುಷ್ಟಿಗೊಳಿಸುವವನೂ ಆದ ಸೋಮನು ನಮಗೆ ಪುತ್ರಾದಿಗಳನ್ನೂ ವ್ಯಾಪಕವಾದ ಧನಗಳನ್ನೂ ಒದಗಿಸಿಕೊಡಲಿ.

## English Translation

May Indu, purified, extolling (the gods) bestow on us progeny and all kinds of wealth.

॥ ಸಂಹಿತಾಪಾಠಃ ॥

**ಪವಸ್ವ ಸೋಮ ಕ್ರತ್ವೇ ದಕ್ಷಾಯಾಶ್ವೋ ನ ನಿಕ್ತೋ ವಾಜೀ ಧನಾಯ ॥**

॥ ಪದಪಾಠಃ ॥

ಪವಸ್ವ । ಸೋಮ । ಕ್ರತ್ವೇ । ದಕ್ಷಾಯ । ಅಶ್ವಃ । ನ । ನಿಕ್ತಃ । ವಾಜೀ । ಧನಾಯ ॥ ೧೦ ॥

॥ ಸಾಯಣಭಾಷ್ಯಂ ॥

**ಹೇ ಸೋಮ ಅಶ್ವೋ ನಾಶ್ವ ಇವ ನಿಕ್ತೋ ವಸತೀವರೀಭಿರದ್ಭಿರ್ನಿಕ್ತೋ ವಾಜೀ ವೇಗವಾಂಸ್ತ್ವಂ ಕ್ರತ್ವೇ ಕ್ರತವೇ ಪ್ರಜ್ಞಾನಾಯ ದಕ್ಷಾಯ ಬಲಾಯ ಧನಾಯ ಧನಾರ್ಥಂ ಚ ಪವಸ್ವ । ಕ್ಷರ ॥**

॥ ಪ್ರತಿಪದಾರ್ಥ ॥

**ಸೋಮ**— ಎಲೈ ಸೋಮದೇವನೇ । **ನಿಕ್ತಃ**— ವಸತೀವರಿಗಳೊಡನೆ ಕೂಡಿದವನಾದ ನೀನು । **ಅಶ್ವೋ ನ**— ಅಶ್ವದಂತೆ । **ವಾಜೀ**— ಬಲಯುತನೂ ವೇಗವಂತನೂ ಆಗಿ । **ಕ್ರತ್ವೇ**— ಉತ್ತಮವಾದ ಜ್ಞಾನಕ್ಕೂ । **ದಕ್ಷಾಯ**— ಬಲಕ್ಕಾಗಿಯೂ । **ಧನಾಯ**— ಧನಕ್ಕಾಗಿಯೂ । **ಪವಸ್ವ**— ಸ್ರವಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ವಸತೀವರಿಗಳೊಡನೆ ಕೂಡಿದವನಾದ ನೀನು ಅಶ್ವದಂತೆ ಬಲಯುತನೂ, ವೇಗಯುತನೂ ಆಗಿ ಉತ್ತಮವಾದ ಜ್ಞಾನಕ್ಕೂ ಬಲಕ್ಕೂ ಧನಕ್ಕಾಗಿಯೂ ಸ್ರವಿಸು.

## English Translation

Flow, Soma, for intelligence, for strength, for wealth, strong and cleansed like a horse.

। ಸಂಹಿತಾಪಾಠಃ ।

ತಂ ತೇ ಸೋತಾರೋ ರಸಂ ಮದಾಯ ಪುನಂತಿ ಸೋಮಂ ಮಹೇ ದ್ಯುಮ್ನಾಯ । ೧೧ ॥

। ಪದಪಾಠಃ ।

ತಂ । ತೇ । ಸೋತಾರಃ । ರಸಂ । ಮದಾಯ । ಪುನಂತಿ । ಸೋಮಂ । ಮಹೇ । ದ್ಯುಮ್ನಾಯ ॥ ೧೧ ॥

। ಸಾಯಣಭಾಷ್ಯಂ ।

**ಸೋತಾರೋಽಭಿಷೋತಾರ ಋತ್ವಿಜೋ ಹೇ ಸೋಮ ತೇ ತವ ಸ್ವಭೂತಂ ರಸಂ ಮದಾಯ ಮದಾರ್ಥಂ ಪುನಂತಿ । ತದೇವೋಚ್ಯತೇ । ಮಹೇ ಮಹತೇ ದ್ಯುಮ್ನಾಯ । ದ್ಯುಮ್ನಂ ದ್ಯೋತತೇ-ರ್ಯಶೋ ವಾನ್ನಂ ವಾ । ಅನ್ನಾಯ ಯಶಸೇ ವಾ ಸೋಮಂ ಪುನಂತಿ । ಶೋಧಯಂತಿ । ಯದ್ವಾ । ಸೋಮಮಭಿಷೂಯಮಾಣಂ ತಂ ರಸಂ ಪುನಂತೀತ್ಯೇಕವಾಕ್ಯತಯಾ ಯೋಜನೀಯಂ ॥**

। ಪ್ರತಿಪದಾರ್ಥ ।

(ಎಲೈ ಸೋಮದೇವನೇ) **ಸೋತಾರಃ**—ಋತ್ವಿಕ್ಕುಗಳು **ತೇ**—ನಿನ್ನ । **ತಂ ರಸಂ**—ರಸವನ್ನು **ಮದಾಯ**—ಹರ್ಷಾರ್ಥವಾಗಿ । **ಪುನಂತಿ**—ಶುದ್ಧಿಗೊಳಿಸುತ್ತಾರೆ । **ಮಹೇ**—ಮಹತ್ತಾದ । **ದ್ಯುಮ್ನಾಯ**—ಅನ್ನಕ್ಕಾಗಿಯೂ । **ಸೋಮಂ**—ಸೋಮವನ್ನು (ಶುದ್ಧಿಗೊಳಿಸುತ್ತಾರೆ).

। ಭಾವಾರ್ಥ ।

ಎಲೈ ಸೋಮದೇವನೇ, ಋತ್ವಿಕ್ಕುಗಳು ನಿನ್ನ ಪ್ರಸಿದ್ಧವಾದ ರಸವನ್ನು ಹರ್ಷಾರ್ಥವಾಗಿ ಶುದ್ಧಿಗೊಳಿಸುತ್ತಾರೆ. ಮಹತ್ತಾದ ಅನ್ನಕ್ಕಾಗಿಯೂ ಸೋಮವನ್ನು ಶುದ್ಧಿಗೊಳಿಸುತ್ತಾರೆ.

## English Translation

(The priests) who press you purify your juice for exhilaration; (they purify) the Soma for abundant food.

। ಸಂಹಿತಾಪಾಠಃ ।

ಶಿಶುಂ ಜಜ್ಞಾನಂ ಹರಿಂ ಮೃಜಂತಿ ಪವಿತ್ರೇ ಸೋಮಂ ದೇವೇಭ್ಯ ಇಂದುಂ ॥ ೧೨ ॥

॥ ಪದಪಾಠಃ ॥

ಶಿಶುಂ । ಜಜ್ಞಾನಂ । ಹರಿಂ । ಮೃಜಂತಿ । ಪವಿತ್ರೇ । ಸೋಮಂ । ದೇವೇಭ್ಯಃ । ಇಂದುಂ ॥ ೧೨ ॥

॥ ಸಾಯಣಭಾಷ್ಯಂ ॥

**ಶಿಶುಮಪಾಂ ಪುತ್ರಭೂತಂ ಜಜ್ಞಾನಂ ಜಾಯಮಾನಂ ಹರಿಂ ಹರಿತವರ್ಣಮಿಂದುಂ ದೀಪ್ತಂ ಸೋಮಂ ದೇವೇಭ್ಯೋ ದೇವಾರ್ಥಂ ಪವಿತ್ರೇ ಮೃಜಂತಿ । ಋತ್ವಿಜೋ ಮಾರ್ಜಯಂತಿ ॥**

॥ ಪ್ರತಿಪದಾರ್ಥ ॥

ಶಿಶುಂ—ಉದಕಗಳಿಗೆ ಪುತ್ರರೂಪನಾಗಿ । ಜಜ್ಞಾನಂ—ಉತ್ಪನ್ನನಾದವನೂ । ಹರಿಂ—ಪಚ್ಚೆವರ್ಣವುಳ್ಳವನೂ । ಇಂದುಂ—ಪ್ರಕಾಶಮಾನನೂ ಆದ । ಸೋಮಂ-ಸೋಮನನ್ನು । ದೇವೇಭ್ಯಃ—ದೇವತೆಗಳಿಗಾಗಿ । ಪವಿತ್ರೇ—ದಶಾಪವಿತ್ರದಲ್ಲಿ । ಮೃಜಂತಿ—ಋತ್ವಿಕ್ಕುಗಳು ಶೋಧಿಸುತ್ತಾರೆ.

॥ ಭಾವಾರ್ಥ ॥

ಉದಕಗಳಿಗೆ ಪುತ್ರರೂಪನಾಗಿ ಉತ್ಪನ್ನನಾದವನೂ, ಪಚ್ಚೆವರ್ಣವುಳ್ಳವನೂ, ಪ್ರಕಾಶಮಾನನೂ ಆದ ಸೋಮನನ್ನು ದೇವತೆಗಳಿಗಾಗಿ ದಶಾಪವಿತ್ರದಲ್ಲಿ ಋತ್ವಿಕ್ಕುಗಳು ಶೋಧಿಸುತ್ತಾರೆ.

## English Translation

They cleanse the new-born infant, the green-tinted shining Soma, on the filter for the gods-

॥ ಸಂಹಿತಾಪಾಠಃ ॥

ಇಂದುಃ ಪವಿಷ್ಟ ಚಾರುರ್ಮದಾಯಾಪಾಮುಪಸ್ಥೇ ಕವಿರ್ಭಗಾಯ ॥೧೩॥

॥ ಪದಪಾಠಃ ॥

ಇಂದುಃ । ಪವಿಷ್ಟ । ಚಾರುಃ । ಮದಾಯ । ಅಪಾಂ । ಉಪಸ್ಥೇ । ಕವಿಃ । ಭಗಾಯ ॥ ೧೩ ॥

॥ ಸಾಯಣಭಾಷ್ಯಂ ॥

**ಚಾರುಃ ಕಲ್ಯಾಣರೂಪಃ ಕವಿಃ ಕ್ರಾಂತಪ್ರಜ್ಞ ಇಂದುರಪಾಮುದಕಾನಾಮುಪಸ್ಥ ಉಪಸ್ಥಾನೇಽಂತರಿಕ್ಷೇ ಪವಿತ್ರೇ ವಾ ಮದಾಯ ಮದಾರ್ಥಂ ಭಗಾಯ ಭಜನೀಯಾಯ ಧನಾರ್ಥಂ ಚ ಪವಿಷ್ಟ । ಪವತೇ ॥**

॥ ಪ್ರತಿಪದಾರ್ಥ ॥

**ಚಾರುಃ**—ಆಕರ್ಷಕವಾದ ರೂಪವುಳ್ಳವನೂ **ಕವಿಃ**—ಕ್ರಾಂತಪ್ರಜ್ಞೆಯುಳ್ಳವನೂ ಆದ । **ಇಂದುಃ**—ಸೋಮದೇವನು । **ಅಪಾಂ**—ಉದಕಗಳಿಗೆ । **ಉಪಸ್ಥೇ**—ಆಶ್ರಯವಾದ ಅಂತರಿಕ್ಷದಲ್ಲಿ । **ಮದಾಯ** ಹರ್ಷಾರ್ಥವಾಗಿಯೂ । **ಭಗಾಯ**—ಪೂಜ್ಯವಾದ ಧನಕ್ಕಾಗಿಯೂ । **ಪವಿಷ್ಟ**—ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಆಕರ್ಷಕವಾದ ರೂಪವುಳ್ಳವನೂ, ಕ್ರಾಂತಪ್ರಜ್ಞೆಯುಳ್ಳವನೂ ಆದ ಸೋಮದೇವನು ಉದಕಗಳಿಗೆ ಆಶ್ರಯವಾದ ಅಂತರಿಕ್ಷದಲ್ಲಿ ಹರ್ಷಾರ್ಥವಾಗಿಯೂ ಪೂಜ್ಯವಾದ ಧನಕ್ಕಾಗಿಯೂ ಪ್ರವಹಿಸುತ್ತಾನೆ.

## English Translation

The auspicious sage Indu flows upon the lap of the waters for exhilaration and for wealth.

॥ ಸಂಹಿತಾಪಾಠಃ ॥

**ಬಿಭರ್ತಿ ಚಾರ್ವಿಂದ್ರಸ್ಯ ನಾಮ ಯೇನ ವಿಶ್ವಾನಿ ವೃತ್ರಾ ಜಘಾನ ॥ ೧೪ ॥**

॥ ಪದಪಾಠಃ ॥

ಬಿಭರ್ತಿ । ಚಾರು । ಇಂದ್ರಸ್ಯ । ನಾಮ । ಯೇನ । ವಿಶ್ವಾನಿ । ವೃತ್ರಾ । ಜಘಾನ । ೧೪ ॥

॥ ಸಾಯಣಭಾಷ್ಯಂ ॥

**ಸ ಸೋಮಶ್ಚಾರು ಕಲ್ಯಾಣಮಿಂದ್ರಸ್ಯ ನಾಮ ಶರೀರಂ ಬಿಭರ್ತಿ । ಧಾರಯತಿ । ಪೋಷಯತಿ । ಯೇನ ಶರೀರೇಣೇಂದ್ರೋ ವಿಶ್ವಾನಿ ಸರ್ವಾಣಿ ವೃತ್ರಾಣಿ ಪಾಪರೂಪಾಣಿ ರಕ್ಷಾಂಸಿ ಜಘಾನ ಹತವಾನ್ ॥**

॥ ಪ್ರತಿಪದಾರ್ಥ ॥

(**ಸೋಮಃ**—ಸೋಮದೇವನು) **ಇಂದ್ರಸ್ಯ**—ಇಂದ್ರನ । **ಚಾರು**—ಆಕರ್ಷಕವಾದ । **ನಾಮ**—ಶರೀರವನ್ನು । **ಬಿಭರ್ತಿ**—ಧರಿಸುತ್ತಾನೆ । **ಯೇನ**—ಯಾವ ಸೋಮಪೂರಿತವಾದ ಶರೀರದಿಂದ । **ವಿಶ್ವಾನಿ**—ಸಮಸ್ತವಾದ । **ವೃತ್ರಾ**—ಶತ್ರುಗಳನ್ನೂ । **ಜಘಾನ**—ಇಂದ್ರನು ನಾಶಮಾಡಿದನು.

॥ ಭಾವಾರ್ಥ ॥

ಸೋಮದೇವನು ಇಂದ್ರನ ಆಕರ್ಷಕವಾದ ಶರೀರವನ್ನು ಧರಿಸುತ್ತಾನೆ. ಯಾವ ಆದೇ ಸೋಮಪೂರಿತವಾದ ಶರೀರದಿಂದ ಇಂದ್ರನು ಸಕಲ ಶತ್ರುಗಳನ್ನೂ ನಾಶಮಾಡಿದನು.

## English Translation

The auspicious (Soma) sustains Indra's body by which he has slain all Rakshasas.

॥ ಸಂಹಿತಾಪಾಠಃ ॥

ಪಿಬಂತ್ಯಸ್ಯ ವಿಶ್ವೇ ದೇವಾಸೋ ಗೋಭಿಃ ಶ್ರೀತಸ್ಯ ನೃಭಿಃ ಸುತಸ್ಯ ॥ ೧೫ ॥

॥ ಪದಪಾಠಃ ॥

ಪಿಬಂತಿ । ಅಸ್ಯ । ವಿಶ್ವೇ । ದೇವಾಸಃ । ಗೋಭಿಃ । ಶ್ರೀತಸ್ಯ । ನೃऽಭಿಃ । ಸುತಸ್ಯ ॥ ೧೫ ॥

॥ ಸಾಯಣಭಾಷ್ಯಂ ॥

ವಿಶ್ವೇ ಸರ್ವೇ ದೇವಾಸೋ ದೇವಾ ಗೋಭಿರ್ಗೋವಿಕಾರೈಃ ಶ್ರೀತಸ್ಯ ಮಿಶ್ರಿತಂ ನೃಭಿಃ ಕರ್ಮನೇತೃಭಿರ್ಋತ್ವಿಗ್ಭಿಃ ಸುತಸ್ಯಾಭಿಷುತಮಸ್ಯಾಮುಂ ಸೋಮಂ ಪಿಬಂತಿ । ದ್ವಿತೀಯಾರ್ಥೇ ಷಷ್ಠ್ಯೌ ॥

॥ ಪ್ರತಿಪದಾರ್ಥ ॥

ವಿಶ್ವೇ—ಸಮಸ್ತವಾದ । ದೇವಾಸಃ—ದೇವತೆಗಳೂ । ಗೋಭಿಃ—ಕ್ಷೀರಾದಿಗಳಿಂದ । ಶ್ರೀತಸ್ಯ—ಮಿಶ್ರಿತವಾದುದೂ । ನೃಭಿಃ—ಋತ್ವಿಕ್ಕುಗಳಿಂದ । ಸುತಸ್ಯ—ಹಿಂಡಲ್ಪಟ್ಟುದೂ ಆದ । ಅಸ್ಯ—ಈ ಸೋಮವನ್ನು । ಪಿಬಂತಿ—ಪಾನಮಾಡುತ್ತಾರೆ.

॥ ಭಾವಾರ್ಥ ॥

ಸಕಲ ದೇವತೆಗಳೂ ಸಹ ಕ್ಷೀರಾದಿಗಳಿಂದ ಮಿಶ್ರಿತವಾದುದೂ, ಋತ್ವಿಕ್ಕುಗಳಿಂದ ಹಿಂಡಲ್ಪಟ್ಟುದೂ ಆದ ಈ ಸೋಮವನ್ನು ಪಾನಮಾಡುತ್ತಾರೆ.

## English Translation

The universal gods drink of it, effused by the priests, mixed with the milk and curds.

॥ ಸಂಹಿತಾಪಾಠಃ ॥

ಪ್ರ ಸುವಾನೋ ಅಕ್ಷಾಃ ಸಹಸ್ರಧಾರಾಸ್ತಿರಃ ಪವಿತ್ರಂ ವಿ ವಾರಮವ್ಯಂ ॥

॥ ಪದಪಾಠಃ ॥

ಪ್ರ । ಸುವಾನಃ । ಅಕ್ಷಾರಿತಿ । ಸಹಸ್ರಧಾರಃ । ತಿರಃ । ಪವಿತ್ರಂ । ವಿ । ವಾರಂ । ಅವ್ಯಂ ॥ ೧೬ ॥

॥ ಸಾಯಣಭಾಷ್ಯಂ ॥

ಸುವಾನೋऽಭಿಷೂಯಮಾಣಃ ಅಕ ಏವ ಸಹಸ್ರಧಾರೋ ಬಹುಧಾರಾಯುಕ್ತಃ ಸೋಮೋऽವ್ಯಮವಿಭವಂ ವಾರಂ ವಾಲಂ ಪವಿತ್ರಂ ತಿರೋ ವ್ಯವಧಾಯಕಂ ಕುರ್ವನ್ ಪ್ರಾಕ್ಷಾಃ । ವಿವಿಧಂ ಪ್ರಕ್ಷರತಿ ॥ ಕ್ಷರತೇರ್ಲುಙಿ ರೂಪಂ ।

॥ ಪ್ರತಿಪದಾರ್ಥ ॥

**ಸುವಾನಃ**—ಹಿಂಡಲ್ಪಟ್ಟವನೂ । **ಸಹಸ್ರಧಾರಃ**—ಅನೇಕವಿಧವಾದ ಧಾರೆಯುಳ್ಳವನೂ ಆದ ಸೋಮನು । **ಅವ್ಯಂ**—ಉಣ್ಣೆಯ । **ವಾರಂ**—ನೂಲುಳ್ಳ । **ಪವಿತ್ರಂ**—ದಶಾಪವಿತ್ರವನ್ನು । **ತಿರಃ**— ದಾಟಿ । **ವಿ ಪ್ರ ಅಕ್ಷಾಃ**—ನಾನಾರೂಪದಲ್ಲಿ ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಹಿಂಡಲ್ಪಟ್ಟವನೂ, ಅನೇಕ ವಿಧವಾದ ಧಾರೆಯುಳ್ಳವನೂ ಆದ ಸೋಮನು ಉಣ್ಣೆಯ ನೂಲುಳ್ಳ ದಶಾಪವಿತ್ರವನ್ನು ದಾಟಿ ನಾನಾರೂಪದಲ್ಲಿ (ಅನೇಕಧಾರೆಗಳಲ್ಲಿ) ಪ್ರವಹಿಸುತ್ತಾನೆ.

## English Translation

Being effused the The Soma in a thousand streams flows through the sheep's-hair filter.

॥ ಸಂಹಿತಾಪಾಠಃ ॥

ಸ ವಾಜ್ಯಕ್ಷಾಃ ಸಹಸ್ರರೇತಾ ಅದ್ಭಿರ್ಮೃಜಾನೋ ಗೋಭಿಃ ಶ್ರೀಣಾನಃ ॥

॥ ಪದಪಾಠಃ ॥

ಸಃ । ವಾಜೀ । ಅಕ್ಷಾರಿತಿ । ಸಹಸ್ರಽರೇತಾಃ । ಅತ್ಽಭಿಃ । ಮೃಜಾನಃ । ಗೋಭಿಃ । ಶ್ರೀಣಾನಃ ॥ ೧೭ ॥

॥ ಸಾಯಣಭಾಷ್ಯಂ ॥

ವಾಜೀ ವೇಗವಾನ್ಬಲವಾನ್ವಾ ಸ ಸೋಮೋಽಕ್ಷಾಃ । ಕ್ಷರತಿ । ಕೀದೃಶಃ । ಸಹಸ್ರರೇತಾ ಬಹುರೇತಸ್ಕೋ ಬಹೂದಕೋಽದ್ಭಿರ್ವಸತೀವರೀಭಿರ್ಮೃಜಾನೋ ಮೃಜ್ಯಮಾನೋ ಗೋಭಿರ್ಗೋವಿಕಾರೈಃ ಕ್ಷೀರಾದಿಭಿಃ ಶ್ರೀಣಾನಃ ಶ್ರೀಯಮಾಣಃ ॥

॥ ಪ್ರತಿಪದಾರ್ಥ ॥

**ಸಹಸ್ರರೇತಾಃ**—ಪ್ರಭೂತವಾದ ರಸವುಳ್ಳವನೂ । **ಅದ್ಭಿಃ**—ವಸತೀವರ್ಯಾದಿಗಳೊಡನೆ । **ಮೃಜಾನಃ**—ಶುದ್ಧಿಯನ್ನು ಹೊಂದುವವನೂ । **ಗೋಭಿಃ**—ಕ್ಷೀರಾದಿಗಳೊಡನೆ । **ಶ್ರೀಣಾನಃ**—ಮಿಶ್ರವನ್ನು ಹೊಂದುವವನೂ । **ವಾಜೀ**—ವೇಗವಂತನೂ ಆದ । **ಸಃ**—ಅದೇ ಸೋಮನು । **ಅಕ್ಷಾಃ**—ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಪ್ರಭೂತವಾದ ರಸವುಳ್ಳವನೂ, ವಸತೀವರ್ಯಾದಿಗಳೊಡನೆ ಶುದ್ಧಿಯನ್ನು ಹೊಂದುವವನೂ, ಕ್ಷೀರಾದಿಗಳೊಡನೆ ಮಿಶ್ರವನ್ನು ಹೊಂದುವವನೂ, ವೇಗವಂತನೂ ಆದ ಅದೇ ಸೋಮದೇವನು ಪ್ರವಹಿಸುತ್ತಾನೆ.

## English Translation

The vigorous Soma flows in a thousand streams cleansed by the waters and mixing with the curds and milk,

॥ ಸಂಹಿತಾಪಾಠಃ ॥

ಪ್ರ ಸೋ॑ಮ ಯಾ॒ಹೀಂದ್ರ॑ಸ್ಯ ಕು॒ಕ್ಷಾ ನೃಭಿ॒ರ್ಯೇ॑ಮಾ॒ನೋ ಅದ್ರಿ॑ಭಿಃ ಸು॒ತಃ ॥ ೧೮ ॥

॥ ಪದಪಾಠಃ ॥

ಪ್ರ । ಸೋ॒ಮ॒ । ಯಾ॒ಹಿ॒ । ಇಂದ್ರ॑ಸ್ಯ । ಕು॒ಕ್ಷಾ । ನೃಽಭಿಃ॑ । ಯೇ॒ಮಾ॒ನಃ । ಅದ್ರಿ॑ಽಭಿಃ । ಸು॒ತಃ ॥ ೧೮ ॥

॥ ಸಾಯಣಭಾಷ್ಯಂ ॥

ಹೇ ಸೋಮ ನೃಭಿರ್ಋತ್ವಿಗ್ಭಿರ್ಯೇಮಾನೋ ನಿಯಮ್ಯಮಾನೋಽದ್ರಿಭಿರ್ಗ್ರಾವಭಿಃ ಸುತೋಽಭಿಷುತಸ್ತ್ವಮಿಂದ್ರಸ್ಯ ಕುಕ್ಷಾ । ಸಪ್ತಮ್ಯಾ ಡಾದೇಶಃ । ಕುಕ್ಷಾವುದರಭೂತೇ ಕಲಶೇ ವಾ ಪ್ರ ಯಾಹಿ । ಪ್ರಕರ್ಷೇಣ ಗಚ್ಛ ॥

॥ ಪ್ರತಿಪದಾರ್ಥ ॥

**ಸೋಮ** —ಎಲೈ ಸೋಮದೇವನೇ । **ನೃಭಿಃ**—ಋತ್ವಿಕ್ಕುಗಳಿಂದ । **ಯೇಮಾನಃ**—ನಿಯಮಿತನೂ । **ಅದ್ರಿಭಿಃ**—ಹಿಂಡುವ ಕಲ್ಲುಗಳಿಂದ । **ಸುತಃ**—ಹಿಂಡಲ್ಪಟ್ಟವನೂ ಆದ ನೀನು । **ಇಂದ್ರಸ್ಯ**—ಇಂದ್ರನ । **ಕುಕ್ಷಾ**—ಉದರದೊಳಗೆ । **ಪ್ರ ಯಾಹಿ**—ಪ್ರವೇಶಿಸಿ ಹೋಗು.

॥ ಭಾವಾರ್ಥ ॥

ಎಲೈ ಸೋಮದೇವನೇ, ಋತ್ವಿಕ್ಕುಗಳಿಂದ ನಿಯಮಿತನೂ, ಹಿಂಡುವ ಕಲ್ಲುಗಳಿಂದ ಜಜ್ಜಿ ಹಿಂಡಲ್ಪಟ್ಟವನೂ ಆದ ನೀನು ಇಂದ್ರನ ಉದರದೊಳಗೆ ಪ್ರವೇಶಿಸಿ ಹೋಗು.

English Translation

Guided by the priests and eflused with the stones go, Soma, to Indra's belly.

॥ ಸಂಹಿತಾಪಾಠಃ ॥

ಅಸ॑ರ್ಜಿ ವಾ॒ಜೀ ತಿ॒ರಃ ಪ॒ವಿತ್ರ॒ಮಿಂದ್ರಾ॑ಯ॒ ಸೋಮಃ॑ ಸ॒ಹಸ್ರ॑ಧಾರಃ ॥ ೧೯ ॥

॥ ಪದಪಾಠಃ ॥

ಅಸ॑ರ್ಜಿ । ವಾ॒ಜೀ । ತಿ॒ರಃ । ಪ॒ವಿತ್ರಂ॑ । ಇಂದ್ರಾ॑ಯ । ಸೋಮಃ॑ । ಸ॒ಹಸ್ರ॑ಽಧಾರಃ ॥ ೧೯

॥ ಸಾಯಣಭಾಷ್ಯಂ ॥

ವಾಜೀ ಬಲವಾನ್ವೇಗವಾನ್ವಾ ಪವಿತ್ರಂ ತಿರಸ್ಕುರ್ವನ್ ಸಹಸ್ರಧಾರೋ ಬಹುಧಾರಃ ಸೋಮ ಇಂದ್ರಾಯೇಂದ್ರಾರ್ಥಮಸರ್ಜಿ । ಸೃಜ್ಯತೇ ॥

॥ ಪ್ರತಿಪದಾರ್ಥ ॥

**ವಾಜೀ**—ಶಕ್ತಿಯುತನೂ । **ಪವಿತ್ರಂ ತಿರಃ**—ದಶಾಪವಿತ್ರವನ್ನು ದಾಟಿ । **ಸಹಸ್ರಧಾರಃ**—ಅನೇಕ ಧಾರೆಗಳಲ್ಲಿ ಪ್ರವಹಿಸುವವನೂ ಆದ । **ಸೋಮಃ**—ಸೋಮದೇವನು । **ಇಂದ್ರಾಯ**—ಇಂದ್ರಾರ್ಥವಾಗಿ (ಬಿಡಲ್ಪಟ್ಟಿದ್ದಾನೆ) । **ಅಸೃಜಿ**—ಪ್ರವಹಿಸುತ್ತಾನೆ

॥ ಭಾವಾರ್ಥ ॥

ಶಕ್ತಿಯುತನೂ, ದಶಾಪವಿತ್ರವನ್ನು ದಾಟಿ ಅನೇಕ ಧಾರೆಗಳಲ್ಲಿ ಪ್ರವಹಿಸುವವನೂ ಆದ ಸೋಮದೇವನು ಇಂದ್ರನ ಪಾನಾರ್ಥವಾಗಿ ಪ್ರವಹಿಸುತ್ತಾನೆ.

English Translation

The vigorous thousand-streamed Soma has been sent through the filter for Indra.

॥ ಸಂಹಿತಾಪಾಠಃ ॥

ಅಂಜಂತ್ಯೇನಂ ಮಧ್ವೋ ರಸೇನೇಂದ್ರಾಯ ವೃಷ್ಣ ಇಂದುಂ ಮದಾಯ ॥

॥ ಪದಪಾಠ ॥

ಅಂಜಂತಿ । ಏನಂ । ಮಧ್ವಃ । ರಸೇನ । ಇಂದ್ರಾಯ । ವೃಷ್ಣೇ । ಇಂದುಂ । ಮದಾಯ ॥ ೨೮ ॥

॥ ಸಾಯಣಭಾಷ್ಯಂ ॥

ವೃಷ್ಣೇ ಕಾಮಾನಾಂ ವರ್ಷಿತ್ರ ಇಂದ್ರಾಯೇಂದ್ರಸ್ಯ ಮದಾಯ ಮದಾರ್ಥಂ ಮಧ್ವೋ ಮಧುನೋ ರಸೇನ ಗವ್ಯೇನೈನಮಿಂದುಂ ಸೋಮಮೃತ್ವಿಜೋಽಂಜಂತಿ । ಸಂಯೋಜಯಂತಿ ।

॥ ಪ್ರತಿಪದಾರ್ಥ ॥

**ವೃಷ್ಣೇ**—ಇಷ್ಟಾರ್ಥಪ್ರದನಾದ । **ಇಂದ್ರಾಯ**—ಇಂದ್ರನ । **ಮದಾಯ**—ಹರ್ಷಕ್ಕಾಗಿ । **ಮಧ್ವಃ**—ಮಧುರವಾದ । **ರಸೇನ**—ರಸದೊಡನೆ । **ಏನಂ ಇಂದುಂ**—ಈ ಸೋಮನನ್ನು । **ಅಂಜಂತಿ**—ಋತ್ವಿಕ್ಕುಗಳು ಮಿಶ್ರಮಾಡುತ್ತಾರೆ.

॥ ಭಾವಾರ್ಥ ॥

ಇಷ್ಟಾರ್ಥಪ್ರದನಾದ ಇಂದ್ರನ ಹರ್ಷಕ್ಕಾಗಿ ಮಧುರವಾದ ರಸದೊಡನೆ ಋತ್ವಿಕ್ಕುಗಳು ಈ ಸೋಮನನ್ನು ಮಿಶ್ರಮಾಡುತ್ತಾರೆ.

## English Translation

They mix the Soma with the liquid of the sweet (milk) for Indra, the showerer (of benefits) for his exhilaration.

॥ ಸಂಹಿತಾಪಾಠಃ ॥

ದೇವೇಭ್ಯಸ್ತ್ವಾ ವೃಥಾ ಪಾಜಸೇಽಪೋ ವಸಾನಂ ಹರಿಂ ಮೃಜಂತಿ ॥ ೨೧ ॥

॥ ಪದಪಾಠಃ ॥

ದೇವೇಭ್ಯಃ । ತ್ವಾ । ವೃಥಾ । ಪಾಜಸೇ । ಅಪಃ । ವಸಾನಂ । ಹರಿಂ । ಮೃಜಂತಿ ॥ ೨೧ ॥

॥ ಸಾಯಣಭಾಷ್ಯಂ ॥

**ಹೇ ಸೋಮ ಅಪ ಉದಕಾನಿ ವಸಾನಮಾಚ್ಛಾದಯಂತಂ ಹರಿಂ ಹರಿತವರ್ಣಂ ತ್ವಾ ತ್ವಾಂ ವೃಥಾನಾಯಾಸೇನರ್ತ್ವಿಜೋ ಮೃಜಂತಿ । ಶೋಧಯಂತಿ । ಕಿಮರ್ಥಂ । ದೇವೇಭ್ಯೋ ದೇವಾನಾಂ ಪಾನಾರ್ಥಂ ಪಾಜಸೇ ತೇಷಾಂ ಬಲಾರ್ಥಂ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಅಪಃ**—ಉದಕಗಳನ್ನು । **ವಸಾನಂ**—ಧರಿಸಿರುವವನೂ । **ಹರಿಂ**—ಪಚ್ಚೆ ವರ್ಣವುಳ್ಳವನೂ ಆದ । **ತ್ವಾ**—ನಿನ್ನನ್ನು । **ವೃಥಾ**—ಶ್ರಮವಿಲ್ಲದೇ । **ದೇವೇಭ್ಯಃ**—ದೇವತೆಗಳ । **ಪಾಜಸೇ**—ಬಲಾರ್ಥವಾಗಿ । **ಮೃಜಂತಿ**—ಋತ್ವಿಕ್ಕುಗಳು ಶೋಧಿಸುತ್ತಾರೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಉದಕಗಳನ್ನು ಧರಿಸಿರುವವನೂ, (ಮಿಶ್ರಿತನಾದವನೂ) ಪಚ್ಚೆ ವರ್ಣವುಳ್ಳವನೂ ಆದ ನಿನ್ನನ್ನು ಋತ್ವಿಕ್ಕುಗಳು ಶ್ರಮವಿಲ್ಲದೆ ದೇವತೆಗಳ ಶಕ್ತ್ಯರ್ಥವಾಗಿ ಶೋಧಿಸುತ್ತಾರೆ.

## English Translation

They cleanse you readily, clothed with water, green-tinted, for the invigoration of the gods.

॥ ಸಂಹಿತಾಪಾಠಃ ॥

ಇಂದುರಿಂದ್ರಾಯ ತೋಶತೇ ನಿ ತೋಶತೇ ಶ್ರೀಣನ್ನುಗ್ರೋ ರಿಣನ್ನಪಃ ॥

॥ ಪದಪಾಠಃ ॥

ಇಂದುಃ । ಇಂದ್ರಾಯ । ತೋಶತೇ । ನಿ । ತೋಶತೇ । ಶ್ರೀಣನ್ । ಉಗ್ರಃ । ರಿಣನ್ । ಅಪಃ ॥ ೨೨ ॥

॥ ಸಾಯಣಭಾಷ್ಯಂ ॥

ಇಂದುಃ ಸೋಮ ಇಂದ್ರಾಯೇಂದ್ರಾರ್ಥಂ ತೋಶತೇ ಹನ್ಯತೇ ಅಭಿಷೂಯತೇ । ನಿ ತೋಶತೇ । ನಿತರಾಮಭಿಷೂಯತೇ । ತೋಶತಿರ್ವಧಕರ್ಮಾ । ಉಗ್ರಃ । ಶ್ರೀಣನ್ ಪ್ರೇರಯನ್ ಸೋಮೋಽಭಿಷೂಯತೇ ॥

॥ ಪ್ರತಿಪದಾರ್ಥ ॥

**ಶ್ರೀಣನ್**—ಕ್ಷೀರಾದಿಗಳೊಡನೆ ಮಿಶ್ರಿತನಾಗಿರುವವನೂ । **ಉಗ್ರಃ**—ಅತ್ಯಧಿಕವಾದ ಬಲವುಳ್ಳವನೂ **ಅಪಃ**—ವಸತೀವರ್‍ಯಾದಿಗಳನ್ನು । **ರಿಣನ್**—ಪ್ರೇರಿಸುವವನೂ ಆದ । **ಇಂದುಃ**—ಸೋಮನು । **ಇಂದ್ರಾಯ**—ಇಂದ್ರನಪಾನಾರ್ಥವಾಗಿ । **ತೋಶತೇ**—ಹಿಂಡಲ್ಪಡುತ್ತಾನೆ । **ನಿ ತೋಶತೇ**—ಅತಿಶಯವಾಗಿ ಹಿಂಡಲ್ಪಡುತ್ತಾನೆ.

॥ ಭಾವಾರ್ಥ ॥

ಕ್ಷೀರಾದಿಗಳೊಡನೆ ಮಿಶ್ರಿತನಾಗಿರುವವನೂ, ಅತ್ಯಧಿಕವಾದ ಬಲವುಳ್ಳವನೂ, ವಸತೀವರ್‍ಯಾದಿಗಳನ್ನು ಪ್ರೇರಿಸುವವನೂ ಆದ ಸೋಮನು ಇಂದ್ರನಪಾನಾರ್ಥವಾಗಿ ಹಿಂಡಲ್ಪಡುತ್ತಾನೆ. ಅತಿಶಯವಾಗಿ ಹಿಂಡಲ್ಪಡುತ್ತಾನೆ.

English Translation

Indu is effused for Indra, is effused downwards—fierce, mixing (with the milk), flowing (into) the water.

## ನೂರ ಹತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪರ್‍ಯೂಷು ಇತಿ ದ್ವಾದಶರ್ಚಂ ಸಪ್ತಮಂ ಸೂಕ್ತಂ । ತ್ರ್ಯರುಣತ್ರಸದಸ್ಯೂ ರಾಜರ್ಷೀ ಅಸ್ಯ ಸೂಕ್ತಸ್ಯ ದ್ರಷ್ಟಾರೌ । ಆದಿತಸ್ತಿಸ್ರಃ ಪಿಪೀಲಿಕಮಧ್ಯಾ ಅನುಷ್ಟುಭೋ ದ್ವಾದಶಕಾಷ್ಟಕದ್ವಾದಶಕವತ್ಯಃ । ತತಃ ಷಡೂರ್ಧ್ವಬೃಹತ್ಯೋ ದ್ವಾದಶಕತ್ರಯವತ್ಯಃ । ಅಥ ದಶಮ್ಯಾದ್ಯಾಸ್ತಿಸ್ರೋ ವಿರಾಜಃ । ಪವಮಾನಃ ಸೋಮೋ ದೇವತಾ । ತಥಾ ಚಾನುಕ್ರಾಂತಂ । ಪರ್‍ಯೂ ಷು ದ್ವಾದಶ ತ್ರ್ಯರುಣತ್ರಸದಸ್ಯೂ ತಿಸ್ರೋಽನುಷ್ಟುಭಃ ಪಿಪೀಲಿಕಮಧ್ಯಾಃ ಷಳೂರ್ಧ್ವಬೃಹತ್ಯಸ್ತಿಸ್ರಶ್ಚ ವಿರಾಜ ಇತಿ ॥ ಗತೋ ವಿನಿಯೋಗಃ ॥**

ಅನುವಾದವು ಪರ್‍ಯೂ ಷು ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ತ್ರ್ಯರುಣ ಮತ್ತು ತ್ರಸದಸ್ಯು ಎಂಬಿಬ್ಬರು ರಾಜರ್ಷಿಗಳು ಸೂಕ್ತದ್ರಷ್ಟೃಗಳು. ಈ ಸೂಕ್ತದ ಮೊದಲಿನ ಮೂರು ಋಕ್ಕುಗಳು ಪಿಪೀಲಿಕಮಧ್ಯಾ ಅನುಷ್ಟುಪ್ ಎಂಬ ಛಂದಸ್ಸಿನವು ಈ ಛಂದಸ್ಸಿನಲ್ಲಿ ಮೂರು ಪಾದಗಳಿದ್ದು ಮೊದಲನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳೂ, ಎರಡನೆಯ ಪಾದದಲ್ಲಿ ಎಂಟಕ್ಷರಗಳೂ, ಮೂರನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳೂ ಇರುವವು. ಇದು ಈ ಛಂದಸ್ಸಿನ

ಲಕ್ಷಣವು. ನಾಲ್ಕನೆಯ ಋಕ್ಕಿನಿಂದ ಮುಂದಿನ ಆರು ಋಕ್ಕುಗಳು ಊರ್ಧ್ವಬೃಹತೀ ಎಂಬ ಛಂದಸ್ಸಿನವು. ಈ ಛಂದಸ್ಸಿನಲ್ಲಿ ಹನ್ನೆರಡು ಅಕ್ಷರಗಳ ಮೂರು ಪಾದಗಳಿರುವವು. ಇದು ಇದರ ಲಕ್ಷಣವು. ಹತ್ತನೆಯ ಋಕ್ಕಿನಿಂದ ಮುಂದಿನ ಮೂರು ಋಕ್ಕುಗಳು ವಿರಾಟ್ ಛಂದಸ್ಸವು. ಪವಮಾನಸೋಮನು ದೇವತೆಯು. ಅನುಕ್ರಮಣಿಕೆಯಲ್ಲಿ—**ಪರ್ಯೂಷು ದ್ವಾದಶ ತ್ರ್ಯರುಣತ್ರಸದಸ್ಯೂ ತಿಸ್ರೋಽನುಷ್ಟುಭಃ ಪಿಪೀಲಿಕಮಧ್ಯಾಃ ಷಳೂರ್ಧ್ವಬೃಹತ್ಯಸ್ತಿಸ್ರಶ್ಚ ವಿರಾಜಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೧೦

ಮಂಡಲ—೯ । ಅನುವಾಕ—೭ । ಸೂಕ್ತ—೧೧೦ ।
ಅಷ್ಟಕ—೭ । ಅಧ್ಯಾಯ—೫ । ವರ್ಗ—೨೨ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ।
ಋಷಿಃ—ತ್ರ್ಯರುಣತ್ರಸದಸ್ಯೂ ॥
ದೇವತಾ—ಪವಮಾನಃ ಸೋಮಃ ।
ಛಂದಃ—೧-೩. ಅನುಷ್ಟುಪ್ಪಿಪೀಲಿಕಮಧ್ಯಾ । ೪-೯. ಊರ್ಧ್ವಬೃಹತೀ । ೧೦-೧೨ ವಿರಾಟ್ ॥

॥ ಸಂಹಿತಾಪಾಠಃ ॥

ಪರ್ಯೂಷು ಪ್ರ ಧನ್ವ ವಾಜಸಾತಯೇ ಪರಿ ವೃತ್ರಾಣಿ ಸಕ್ಷಣಿಃ ।
ದ್ವಿಷಸ್ತರಧ್ಯಾ ಋಣಯಾ ನ ಈಯಸೇ ॥ ೧ ॥

॥ ಪದಪಾಠಃ ॥

ಪರಿ । ಊಂ ಇತಿ । ಸು । ಪ್ರ । ಧನ್ವ । ವಾಜಽಸಾತಯೇ । ಪರಿ । ವೃತ್ರಾಣಿ । ಸಕ್ಷಣಿಃ ।
ದ್ವಿಷಃ । ತರಧ್ಯೈ । ಋಣಽಯಾಃ । ನಃ । ಈಯಸೇ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಸೋಮ ಸು** ಸುಷ್ಠು **ವಾಜಸಾತಯೇಽ**ಸ್ಮಭ್ಯಮನ್ನದಾನಾಯೈವ **ಪರಿ ಪ್ರ ಧನ್ವ** । ಪರಿತಃ ಪ್ರಗಚ್ಛ । ಯದ್ವಾ । ವಾಜಸಾತಯೇಽನ್ನಲಾಭಾಯ ಸಂಗ್ರಾಮಂ ಪ್ರಗಚ್ಛ । ಕಿಂ ಚ **ಸಕ್ಷಣಿಃ** ಸಹನಶೀಲಸ್ತ್ವಂ **ವೃತ್ರಾಣಿ** ಶತ್ರೂನ್ಪರಿ ಗಚ್ಛ । ತದೇವೋಚ್ಯತೇ । ನೋಽಸ್ಮಾಕಮೃಣಯಾ ಋಣಾನಾಂ ಯಾಪಯಿತಾ ತ್ವಂ **ದ್ವಿಷಃ** ಶತ್ರೂಂಸ್ತರಧ್ಯೈ ತರೀತುಂ ಹಂತುಮೀಯಸೇ । ಪರಿಗಚ್ಛಸಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಸು** ಅತಿಶಯವಾಗಿ । **ವಾಜಸಾತಯೇ**—ನಮಗೆ ಅನ್ನಲಾಭಾರ್ಥವಾಗಿ । **ಪರಿ ಪ್ರ ಧನ್ವ**—ಸುತ್ತಲೂ ಪ್ರವಹಿಸು । **ಸಕ್ಷಣಿಃ**—ಶತ್ರುಗಳನ್ನು ಎದುರಿಸುವ ಶಕ್ತಿಯುಳ್ಳ ನೀನು । **ವೃತ್ರಾಣಿ**—

ಶತ್ರುಗಳನ್ನು । ಪರಿ—ಸುತ್ತುವರಿದು ಹೋಗು । ನಃ—ನಮ್ಮ । ಋಣಯಾಃ—ಋಣಗಳನ್ನು ತೀರಿಸತಕ್ಕ ನೀನು । ದ್ವಿಷಃ—ನಮ್ಮ ಶತ್ರುಗಳನ್ನು । ತರಧ್ಯೈ—ನಾಶಪಡಿಸಲು । ಈಯಸೇ—ಮುಂದುವರಿದು ಹೋಗು.

ಎಲೈ ಸೋಮದೇವನೇ. ನಮ್ಮ ಅನ್ನಲಾಭಾರ್ಥವಾಗಿ ಸುತ್ತಲೂ ಪ್ರವಹಿಸು. ಶತ್ರುಗಳನ್ನು ಎದುರಿಸುವ ಶಕ್ತಿಯುಳ್ಳ ನೀನು ಶತ್ರುಗಳನ್ನು ಸುತ್ತುವರಿದು ಹೋಗು. ನಮ್ಮ ಋಣಗಳನ್ನು ತೀರಿಸುವ ನೀನು ನಮ್ಮ ಶತ್ರುಗಳನ್ನು ನಾಶಪಡಿಸಲು ಮುಂದುವರಿದು ಹೋಗು.

## English Translation

Hasten, Soma, to bring us sustenance; gifted with endurance (attack our) foes; the acquitter of our debts, you approach to disperse our enemies.

॥ ಸಂಹಿತಾಪಾಠಃ ॥

ಅನು ಹಿ ತ್ವಾ ಸುತಂ ಸೋಮ ಮದಾಮಸಿ ಮಹೇ ಸಮರ್ಯ-
ರಾಜ್ಯೇ ।
ವಾಜಾಁ ಅಭಿ ಪವಮಾನ ಪ್ರ ಗಾಹಸೇ ॥ ೨ ॥

॥ ಪದಪಾಠಃ ॥

ಅನು । ಹಿ । ತ್ವಾ । ಸುತಂ । ಸೋಮ । ಮದಾಮಸಿ । ಮಹೇ । ಸಮರ್ಯಽರಾಜ್ಯೇ ।
ವಾಜಾನ್ । ಅಭಿ । ಪವಮಾನ । ಪ್ರ । ಗಾಹಸೇ ॥ ೨ ॥

॥ ಸಾಯಣಭಾಷ್ಯಂ ॥

ಹೇ ಸೋಮ ಸುತಮಭಿಷುತಂ ತ್ವಾ ತ್ವಾಂ ವಯಮನು ಮದಾಮಸಿ ಹಿ । ಅನುಮದಾಮಃ । ಅನುಕ್ರಮೇಣಾಭಿಷ್ಟುಮಃ ಖಲು । ಹೇ ಪವಮಾನ ಸೋಮ ಸ ತ್ವಂ ಮಹೇ ಮಹತಿ ಸಮರ್ಯ-ರಾಜ್ಯೇ ಮಹತ್ವಮನುಷ್ಯಂ ತ್ವದೀಯಂ ರಾಜ್ಯಮನುಪಾಲಯಿತುಂ ವಾಜಾಞ್ಛತ್ರುಬಲಾನ್ಯಭಿಲಕ್ಷ್ಯ ಪ್ರ ಗಾಹಸೇ । ಪ್ರಗಚ್ಛಸಿ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ । ಸುತಂ—ಹಿಂಡಲ್ಪಟ್ಟಿರುವ । ತ್ವಾ—ನಿನ್ನನ್ನು । ಅನುಮದಾಮಸಿ ಹಿ—ಪ್ರಶಂಸಿಸುತ್ತೇವೆ । ಪವಮಾನ—ಪವಮಾನಸಂಜ್ಞಕನಾದ ಎಲೈ ಸೋಮನೇ । ಮಹೇ—ಮಹತ್ತಾದ ।

**ಸಮರ್ಯೇ ರಾಜ್ಯೇ**— ಮಾನವರಲ್ಲಿರುವ ನಿನ್ನ ಪ್ರಭುತ್ವವನ್ನು ರಕ್ಷಿಸಿಕೊಳ್ಳಲು । **ವಾಜಾನ್ ಅಭಿ**— ಶತ್ರುಬಲಗಳಿಗಭಿಮುಖವಾಗಿ । **ಪ್ರ ಗಾಹಸೇ**— ನೀನು ಮುನ್ನುಗ್ಗುತ್ತೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಹಿಂಡಲ್ಪಟ್ಟಿರುವ ನಿನ್ನನ್ನು ಪ್ರಶಂಸಿಸುತ್ತೇವೆ. ಪವಮಾನಸಂಜ್ಞಕನಾದ ಎಲೈ ಸೋಮನೇ, ಮಾನವರಲ್ಲಿರುವ ನಿನ್ನ ಮಹತ್ತಾದ ಪ್ರಭುತ್ವವನ್ನು ರಕ್ಷಿಸಿಕೊಳ್ಳಲು ನೀನು ಶತ್ರುಬಲಗಳಿಗಭಿಮುಖವಾಗಿ ಮುನ್ನುಗ್ಗುತ್ತೀಯೆ.

English Translation

In turn we glorify you, Soma, when effused; you attack the (hostile) forces, O Pavamana, to (defend) your great sovereignty over men.

॥ ಸಂಹಿತಾಪಾಠಃ ॥

ಅಜೀಜನೋ ಹಿ ಪವಮಾನ ಸೂರ್ಯಂ ವಿಧಾರೇ ಶಕ್ಮನಾ ಪಯಃ ।
ಗೋಜೀರಯಾ ರಂಹಮಾಣಃ ಪುರಂಧ್ಯಾ ॥ ೩ ॥

॥ ಪದಪಾಠಃ ॥

ಅಜೀಜನಃ । ಹಿ । ಪವಮಾನ । ಸೂರ್ಯಂ । ವಿऽಧಾರೇ । ಶಕ್ಮನಾ । ಪಯಃ ।
ಗೋऽಜೀರಯಾ । ರಂಹಮಾಣಃ । ಪುರಂऽಧ್ಯಾ ॥ ೩ ॥

॥ ಸಾಯಣಭಾಷ್ಯಂ ॥

**ಹೇ ಪವಮಾನ ಸೋಮ ತ್ವಂ ಪಯಃ ಪಯಸ ಉದಕಸ್ಯ ವಿಧಾರೇ ವಿಧಾರಕೇಽಂತರಿಕ್ಷೇ ಶಕ್ಮನಾ ಸಮರ್ಥೇನ ಬಲೇನ ಸೂರ್ಯಮಜೀಜನೋ ಹಿ । ಉತ್ಪಾದಿತವಾನ್ಭವಸಿ ಖಲು । ಕೀದೃಶಃ । ಗೋಜೀರಯಾ ಸ್ತೋತೃಭ್ಯೋ ಗವಾಂ ಪ್ರೇರಕೇಣ । ಸ್ತೋತೄಣಾಂ ಪ್ರೇರಿತಪಶುಕೇನೇತ್ಯರ್ಥಃ । ತಾದೃಶೇನ ಪುರಂಧ್ಯಾ ಬಹುವಿಧಪ್ರಜ್ಞಾನೇನ ಯುಕ್ತೋ ರಂಹಮಾಣೋ ವೇಗಂ ಕುರ್ವಾಣಸ್ತ್ವಂ ಸೂರ್ಯಮಜೀಜನಃ ॥**

॥ ಪ್ರತಿಪದಾರ್ಥ ॥

**ಪವಮಾನ**— ಪವಮಾನಸಂಜ್ಞಕನಾದ ಎಲೈ ಸೋಮದೇವನೇ । **ಗೋಜೀರಯಾ**— ಶತ್ರುಗಳಿಗೆ ಗೋವುಗಳನ್ನೊದಗಿಸುವ । **ಪುರಂಧ್ಯಾ**— ಪ್ರಜ್ಞೆಯಿಂದ ಕೂಡಿದವನೂ । **ರಂಹಮಾಣಃ**— ವೇಗಯುತನೂ ಆದ

ನೀನು । ಪಯಃ—ಉದಕಕ್ಕೆ । ವಿಧಾರೇ—ಧಾರಕವಾದ ಅಂತರಿಕ್ಷದಲ್ಲಿ । **ಶಕ್ಮನಾ**—ನಿನ್ನ ಸಾಮರ್ಥ್ಯದಿಂದ । **ಸೂರ್ಯಂ**—ಸೂರ್ಯನನ್ನು । ಅಜೀಜನೋ ಹಿ—ಉತ್ಪನ್ನನನ್ನಾಗಿಮಾಡಿದ್ದೀಯಲ್ಲವೇ.

ಎಲೈ ಸೋಮದೇವನೇ, ಸ್ತೋತೃಗಳಿಗೆ ಗೋವುಗಳನ್ನೊದಗಿಸುವ ಪ್ರಜ್ಞೆಯಿಂದ ಕೂಡಿದವನೂ, ವೇಗಯುತನೂ ಆದ ನೀನು ಉದಕಕ್ಕೆ ಧಾರಕವಾದ ಅಂತರಿಕ್ಷದಲ್ಲಿ ನಿನ್ನ ಸಾಮರ್ಥ್ಯದಿಂದ ಸೂರ್ಯನನ್ನು ಉತ್ಪನ್ನನನ್ನಾಗಿಮಾಡಿದ್ದೀಯೆ.

## English Translation

Pavamana, by your might you have generated the sun in (the firmament), the support of the water, **hastening** on with abundant wisdom that procures cattle (for your worshippers),

॥ ಸಂಹಿತಾಪಾಠಃ ॥

ಅಜೀಜನೋ ಅಮೃತ ಮರ್ತ್ಯೇಷ್ವಾँ ಋತಸ್ಯ ಧರ್ಮನ್ನಮೃತಸ್ಯ
ಚಾರುಣಃ ।
ಸದಾಸರೋ ವಾಜಮಚ್ಛಾ ಸನಿಷ್ಯದತ್ ॥ ೪ ॥

॥ ಪದಪಾಠಃ ॥

ಅಜೀಜನಃ । ಅಮೃತ । ಮರ್ತ್ಯೇಷು । ಆ । ಋತಸ್ಯ । ಧರ್ಮನ್ । ಅಮೃತಸ್ಯ । ಚಾರುಣಃ ॥
ಸದಾ । ಅಸರಃ । ವಾಜಂ । ಅಚ್ಛ । ಸನಿಸ್ಯದತ್ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಮೃತ ಮರಧರ್ಮರಹಿತ ಸೋಮ ತ್ವಮೃತಸ್ಯ ಸತ್ಯಭೂತಸ್ಯ ಚಾರುಣಃ ಕಲ್ಯಾಣಸ್ಯಾಮೃತಸ್ಯೋದಕಸ್ಯ ಧರ್ಮನ್ಧಾರಕೇಽಂತರಿಕ್ಷೇ ಸೂರ್ಯಮಜೀಜನಃ । ಕಿಮರ್ಥಂ । ಮರ್ತ್ಯೇಷ್ವಾ ಮನುಷ್ಯೇಷ್ವಭಿಮುಖೀಭವನಾಯ । ಕಿಂಚ ಸನಿಷ್ಯದತ್ ಸಂಭಜನ್ ಸ ತ್ವಂ ವಾಜಮಚ್ಛ ಸಂಗ್ರಾಮಮಭಿಲಕ್ಷ್ಯ ಸದಾಸರಃ । ಸರಸಿ । ಗಚ್ಛಸಿ ॥

॥ ಪ್ರತಿಪದಾರ್ಥ ॥

ಅಮೃತ—ಮರಣಧರ್ಮರಹಿತನಾದ ಎಲೈ ಸೋಮನೇ । **ಋತಸ್ಯ**—ಸತ್ಯಾತ್ಮಕವೂ । **ಚಾರುಣಃ**—ಕಲ್ಯಾಣಾತ್ಮಕವೂ । **ಅಮೃತಸ್ಯ**—ನಿತ್ಯವೂ ಆದ ಉದಕಕ್ಕೆ । **ಧರ್ಮನ್**—ಧಾರಕವಾದ ಅಂತರಿಕ್ಷದಲ್ಲಿ ।

ಮರ್ತ್ಯೇಷು ಆ—ಮಾನವರಿಗೆ ಎದುರಾಗಿ ಕಾಣಿಸಲು । ಅಜೀಜನಃ—ಸೂರ್ಯನನ್ನು ಉತ್ಪನ್ನಮಾಡಿದೆ । ಸನಿಷ್ಯದತ್—ಗಂಭೀರವಾಗಿ ಪ್ರವಹಿಸುವ ನೀನು । ವಾಜಂ ಅರ್ಷ—ಸಂಗ್ರಾಮಾಭಿಮುಖವಾಗಿ । ಸದಾ—ಸರ್ವದಾ । ಅಸರಃ—ಮುನ್ನುಗ್ಗುತ್ತೀಯೆ.

॥ ಭಾವಾರ್ಥ ॥

ಮರಣಧರ್ಮರಹಿತನಾದ ಎಲೈ ಸೋಮನೇ, ಸತ್ಯಾತ್ಮಕವೂ, ಕಲ್ಯಾಣಾತ್ಮಕವೂ, ನಿತ್ಯವೂ ಆದ ಉದಕಕ್ಕೆ ಧಾರಕವಾದ ಅಂತರಿಕ್ಷದಲ್ಲಿ ಮಾನವರಿಗೆ ಎದುರಾಗಿ ಕಾಣಿಸಲು ಸೂರ್ಯನನ್ನು ಉತ್ಪನ್ನಮಾಡಿದೆ. ಗಂಭೀರವಾಗಿ ಪ್ರವಹಿಸುವ ನೀನು ಸಂಗ್ರಾಮಾಭಿಮುಖವಾಗಿ ಸರ್ವದಾ ಮುನ್ನುಗ್ಗುತ್ತೀಯೆ.

English Translation

Immortal Soma, you have generated (the sun) among mortals in (the firmament), the support of the truthful auspicious ambrosia ; streaming forth you go to battle continually.

॥ ಸಂಹಿತಾಪಾಠಃ ॥

ಅಭ್ಯಭಿ ಹಿ ಶ್ರವಸಾ ತತರ್ದಿಥೋತ್ಸಂ ನ ಕಂ ಚಿಜ್ಜನಪಾನ-
ಮಕ್ಷಿತಂ ।
ಶರ್ಯಾಭಿರ್ನ ಭರಮಾಣೋ ಗಭಸ್ತ್ಯೋಃ ॥ ೫ ॥

॥ ಪದಪಾಠಃ ॥

ಅಭಿಽಅಭಿ । ಹಿ । ಶ್ರವಸಾ । ತತರ್ದಿಥ । ಉತ್ಸಂ । ನ । ಕಂ । ಚಿತ್ । ಜನಽಪಾನಂ ।
ಅಕ್ಷಿತಂ ।
ಶರ್ಯಾಭಿಃ । ನ । ಭರಮಾಣಃ । ಗಭಸ್ತ್ಯೋಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಂ ಶವಸಾನ್ನೇನ ಹೇತುನಾಭ್ಯಭಿ ತತರ್ದಿಥ ಹಿ । ಪವಿತ್ರಮಭಿತೃಣ್ಣವಾನಸಿ । ಛಿನ್ನವಾನಸಿ । ತತ್ರ ದೃಷ್ಟಾಂತದ್ವಯಂ । ಉತ್ಸಂ ನ ಯಥಾ ಕಶ್ಚಿಜ್ಜನಪಾನಂ । ಅಸ್ಮಿಞ್ಜನಾ ಉದಕಂ ಪಿಬಂತಿ । ತಮಕ್ಷಿತಮಕ್ಷೀಣಂ ಕಂ ಚಿತ್ ಕಂಚನೋತ್ಸಮುತ್ಸರಣಶೀಲಂ ವಾಪ್ಯಾದಿಕಮಭಿತೃಣತ್ತಿ

**ಅಥವಾ ಕಶ್ಚಿದ್ಗಭಸ್ತ್ಯೋರ್ಬಾಹ್ವೋಃ ಶರ್ಯಾಭಿರಂಗುಲೀಭಿರ್ಭರಮಾಣ ಉದಕಂ ಸಂಭರನ್ ಕಂಚಿದಭಿತೃಣತ್ತಿ ತದ್ವತ್**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ಜನಪಾನಂ—ಲೋಕದ ಜನರು ಪಾನಮಾಡಲು ಯೋಗ್ಯವಾದುದೂ। **ಅಕ್ಷಿತಂ**—ಅಕ್ಷೋಣ್ಯವಾದುದೂ ಆದ **ಕಿಂ ಚಿತ್ ಉತ್ಸಂ ನ**—ಒಂದು ನೀರಿನ ಬುಗ್ಗೆಯನ್ನು ಒಡೆಯುವಂತೆಯೂ। **ಭರಮಾಣಃ**—ಉದಕವನ್ನು ವಹಿಸಿರುವವನು। **ಗಭಸ್ತ್ಯೋಃ**—ತನ್ನ ಬಾಹುಗಳ। **ಶರ್ಯಾಭಿಃ**—ಬೆರಳುಗಳಿಂದ ನೀರನ್ನು ಚಿಮ್ಮಿಸುವಂತೆಯೂ। **ಶ್ರವಸಾ**—ಅನ್ನಹೇತ್ವರ್ಥವಾಗಿ **ಅಶ್ನೈಃ**—ಪವಿತ್ರವನ್ನು ಸುತ್ತಲೂ। **ತತರ್ದಿಥ ಹಿ**—ಛಿನ್ನಮಾಡಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಲೋಕದ ಜನರು ಪಾನಮಾಡಲು ಯೋಗ್ಯವಾದುದೂ, ಅಕ್ಷೋಣ್ಯವಾದುದೂ ಆದ ಒಂದು ನೀರಿನ ಬುಗ್ಗೆಯನ್ನು ಜಲವನ್ನು ಮೇಲಕ್ಕೆ ಬರಮಾಡಲು ಒಡೆಯುವಂತೆಯೂ, ಉದಕವನ್ನು ವಹಿಸಿರುವವನು ತನ್ನ ಬಾಹುಗಳ ಬೆರಳುಗಳಿಂದ ನೀರನ್ನು ಚಿಮ್ಮಿಸುವಂತೆಯೂ ನೀನು ಅನ್ನದ ಹೇತ್ವರ್ಥವಾಗಿ ಪವಿತ್ರವನ್ನು ಸುತ್ತಲೂ ಛಿನ್ನಮಾಡಿದ್ದೀಯೆ.

## English Translation

You have burst open (the filter) with (your) food as (one bursts open) an inexhaustible fountain giving drink to the nation, like one taking up (water) with the fingers of his two hands.

॥ ವಿಶೇಷವಿಷಯಗಳು ॥

**ಶರ್ಯಾಃ**—ಈ ಶಬ್ದದ ಅರ್ಥವನ್ನು ವಿವರಿಸುತ್ತಾ ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ರೀತಿ ಹೇಳಿದ್ದಾರೆ—

> **ಶರ್ಯಾಃ। ಶರ್ಯಾ ಅಂಗುಲಯೋ ಭವಂತಿ। ಸೃಜಂತಿ ಕರ್ಮಾಣಿ। ಶರ್ಯಾ ಇಷವಃ ಶರಮಯ್ಯಃ। ಶರಃ ಶೃಣಾತೇಃ। ಶರ್ಯಾಭಿರ್ನ ಭರಮಾಣೋ ಗಭಸ್ತ್ಯೋಃ ಇತ್ಯಪಿ ನಿಗಮೋ ಭವತಿ ॥**
>
> (ನಿ. ೫-೪)

**ಶರ್ಯಾಃ** ಎಂದರೆ ಅಂಗುಲಿಗಳು, ಬೆರಳುಗಳು ಎಂದರ್ಥವು. ಈ ಬೆರಳುಗಳ ಸಹಾಯದಿಂದ ಕೆಲಸ ಕಾರ್ಯಗಳನ್ನು ಮಾಡುವವರಾದ್ದರಿಂದ ಶರ್ಯಾಃ ಎಂಬ ಶಬ್ದವು ಬೆರಳುಗಳು ಎಂಬರ್ಥವನ್ನು ಸೂಚಿಸುವುದು. ಮತ್ತು ಈ ಶಬ್ದಕ್ಕೆ ಬಾಣಗಳು ಎಂದು ಇನ್ನೊಂದು ಅರ್ಥವೂ ಇರುವುದು. ಶರಶಬ್ದವು ಶೀಳು ಎಂಬರ್ಥವುಳ್ಳ **ಶೃ (ಶೃಣಾತಿ)** ಧಾತುವಿನಿಂದ ನಿಷ್ಪನ್ನವಾಗಿ ಸೀಳುವ, ಹಿಂಸಿಸುವ ಆಯುಧವು ಎಂಬರ್ಥವನ್ನು ಕೊಡುವುದು. ಶರ್ಯ ಶಬ್ದಕ್ಕೆ ಬೆರಳು ಎಂಬರ್ಥದಲ್ಲಿ **ಶರ್ಯಾಭಿರ್ನ ಭರಮಾಣೋ ಗಭಸ್ತ್ಯೋಃ** ಎಂಬ ಪ್ರಕೃತ ಋಕ್ಕಿನ ಶ್ರುತಿವಾಕ್ಯವೇ ಉದಾಹರಣೆಯಾಗಿರುವುದು.

|| ಸಂಹಿತಾಪಾಠಃ ||

ಆದೀಂ ಕೇ ಚಿತ್ಪಶ್ಯಮಾನಾಸ ಆಪ್ಯಂ ವಸುರುಚೋ ದಿವ್ಯಾ ಅಭ್ಯನೂಷತ ।
ವಾರಂ ನ ದೇವಃ ಸವಿತಾ ವ್ಯೂರ್ಣುತೇ || ೬ ||

|| ಪದಪಾಠಃ ||

ಆತ್ । ಈಂ । ಕೇ । ಚಿತ್ । ಪಶ್ಯಮಾನಾಸಃ । ಆಪ್ಯಂ । ವಸುऽರುಚಃ । ದಿವ್ಯಾಃ । ಅಭಿ । ಅನೂಷತ ।
ವಾರಂ । ನ । ದೇವಃ । ಸವಿತಾ । ವಿ । ಊರ್ಣುತೇ || ೬ ||

|| ಸಾಯಣಭಾಷ್ಯಂ ||

ಆದನಂತರಂ ಪಶ್ಯಮಾನಾಸ ಏನಂ ಪಶ್ಯಂತೋ ದಿವ್ಯಾ ದಿವಿ ಭವಾ ವಸುರುಚೋ ನಾಮ ಕೇ ಚಿದಾಪ್ಯಂ ಬಂಧುಂ ಸಾಧುಮಿಮಮೇನಂ ಸೋಮಮಭ್ಯನೂಷತ । ಅಭ್ಯಸ್ತುವನ್ । ಕಸ್ಮಾದನಂತರಮಿತಿ ಉಚ್ಯತೇ । ದೇವೋ ದ್ಯೋತಮಾನಃ ಸವಿತಾ ಸರ್ವಸ್ಯ ಪ್ರೇರಕಃ ಸೂರ್ಯೋ ವಾರಮಾವರಕಮಂಧಕಾರಂ ನ ವ್ಯೂರ್ಣುತೇ । ನಾಪಗಮಯತಿ । ತದ್ವೈನಮಸ್ತುವನ್ । ಸೂರ್ಯೋದಯಾತ್ಪ್ರಾಗೇವ ಹಿ ಸೋಮಂ ಸ್ತುವಂತಿ ಖಲು ||

|| ಪ್ರತಿಪದಾರ್ಥ ||

**ಆತ್**—ಆ ಒಡನೆಯೇ । **ದೇವಃ**—ಪ್ರಕಾಶಮಾನನಾದ । **ಸವಿತಾ**—ಸೂರ್ಯನು । **ವಾರಂ**—ಆವರಕವಾದ ಕಗ್ಗತ್ತಲೆಯನ್ನು । **ನ ವ್ಯೂರ್ಣುತೇ**—ಹೋಗಲಾಡಿಸಲು ಮುಂಚಿತವಾಗಿಯೇ । **ಪಶ್ಯಮಾನಾಸಃ**—ಈ ಸೋಮನನ್ನು ನೋಡುತ್ತಿದ್ದವನೂ । **ದಿವ್ಯಾಃ**—ದ್ಯುಲೋಕೋತ್ಪನ್ನರೂ । **ವಸುರುಚಃ**—ವಸುರುಕ್‌ಸಂಜ್ಞಕರೂ ಆದ **ಕೇ ಚಿತ್**—ಕೆಲವರು । **ಆಪ್ಯಂ**—ಬಂಧುರೂಪನಾದ । **ಈಂ**—ಈ ಸೋಮನನ್ನು । **ಅಭ್ಯನೂಷತ**—ಸ್ತುತಿಸಿದರು.

|| ಭಾವಾರ್ಥ ||

ಸೋಮನು ಕಾಣಿಸಿಗೊಂಡೊಡನೆಯೇ, ಈ ಸೋಮನನ್ನು ನೋಡುತ್ತಿದ್ದವರೂ, ದ್ಯುಲೋಕೋತ್ಪನ್ನನೂ, ವಸುರುಕ್ ಸಂಜ್ಞಕರೂ ಆದ ಕೆಲವರು ಪ್ರಕಾಶಮಾನನಾದ ಸೂರ್ಯನು ಉದಯಿಸಿ ಕಗ್ಗತ್ತಲೆಯನ್ನು ಹೋಗಲಾಡಿಸುವುದಕ್ಕೆ ಮುಂಚಿತವಾಗಿಯೇ ಬಂಧುರೂಪನಾದ ಈ ಸೋಮನನ್ನು ಪ್ರಶಂಸಿಸಿದರು.

## English Translation

Beholding him certain celestial Varuruchas praise him as a kinsman before the shining Savitri drives away the obstructing (darkness).

॥ ಸಂಹಿತಾಪಾಠಃ ॥

ತ್ವೇ ಸೋ॑ಮ ಪ್ರಥ॒ಮಾ ವೃ॒ಕ್ತಬ॑ರ್ಹಿಷೋ ಮ॒ಹೇ ವಾಜಾ॑ಯ॒ ಶ್ರವ॑ಸೇ॒

ಧಿಯಂ॑ ದಧುಃ ।

ಸ ತ್ವಂ ನೋ॑ ವೀರ ವೀ॒ರ್ಯಾ॑ಯ ಚೋದಯ ॥ ೭ ॥

॥ ಪದಪಾಠಃ ॥

ತ್ವೇ ಇತಿ॑ । ಸೋ॒ಮ॒ । ಪ್ರ॒ಥ॒ಮಾಃ । ವೃ॒ಕ್ತ॒ಬ॑ರ್ಹಿಷಃ । ಮ॒ಹೇ । ವಾಜಾ॑ಯ । ಶ್ರವ॑ಸೇ । ಧಿಯ॑ಂ । ದ॒ಧುಃ ।

ಸಃ । ತ್ವಂ । ನ॒ಃ । ವೀ॒ರ॒ । ವೀ॒ರ್ಯಾ॑ಯ । ಚೋ॒ದ॒ಯ॒ ॥ ೭ ॥

॥ ಸಾಯಣಭಾಷ್ಯಂ ॥

ಹೇ ಸೋಮ ಪ್ರಥಮಾಃ ಪುರಾತನಾಃ । ಯದ್ವಾ । ಯಷ್ಟೃತ್ವೇನ ಸರ್ವೇಷಾಂ ಜನಾನಾಂ ಮುಖ್ಯಾಃ । ವೃಕ್ತಬರ್ಹಿಷಃ । ವೃಕ್ತಂ ಛಿನ್ನಂ ಬರ್ಹಿರ್ಯೈರ್ಯಜ್ಞಾರ್ಥಮಿತಿ ವೃಕ್ತಬರ್ಹಿಷೋ ಯಜಮಾನಾಃ । ಮಹೇ ಮಹತೇ ವಾಜಾಯ ಬಲಾಯ ಶ್ರವಸೇಽನ್ನಾಯ ಚ ಧಿಯಂ ಬುದ್ಧಿಂ ತ್ವೇ ತ್ವಯಿ ದಧುಃ ನಿಹಿತವಂತಃ । ತಸ್ಮಾತ್ ಹೇ ವೀರ ಸಮರ್ಥ ಸೋಮ ಸ ತಾದೃಶಸ್ತ್ವಂ ನೋಽಸ್ಮಾನಪಿ ಸಂಗ್ರಾಮೇ ವೀರ್ಯಾಯ ಸಾಮರ್ಥ್ಯಾಯ ಚೋದಯ । ಪ್ರೇರಯ । ಯದ್ವಾ ವೀರ್ಯಾಯ ವೀರೇ ಪುತ್ರೇ ಭವಾಯ ಸುಖಾಯಾಸ್ಮಾನ್ಪ್ರೇರಯ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಪ್ರಥಮಾಃ**—ಪುರಾತನರೂ । **ವೃಕ್ತಬರ್ಹಿಷಃ**—ಯಜ್ಞಕ್ಕಾಗಿ ಹರಡಿದ ದರ್ಭಾಸನವುಳ್ಳವರೂ ಆದ ಯಜಮಾನರು । **ಮಹೇ**—ಮಹತ್ತಾದ । **ವಾಜಾಯ**—ಬಲಕ್ಕಾಗಿಯೂ । **ಶ್ರವಸೇ**—ಅನ್ನಕ್ಕಾಗಿಯೂ । **ಧಿಯಂ**—ತಮ್ಮ ಧ್ಯಾನಾತ್ಮಕವಾದ ಬುದ್ಧಿಯನ್ನು । **ತ್ವೇ**—ನಿನ್ನಲ್ಲಿ । **ದಧುಃ**—ಸ್ಥಾಪಿಸಿದ್ದಾರೆ । **ವೀರ**—ಸಾಮರ್ಥ್ಯವುಳ್ಳ ಎಲೈ ಸೋಮದೇವನೇ । **ಸಃ**—ಪ್ರಸಿದ್ಧನಾದ । **ತ್ವಂ**—ನೀನು । **ನಃ**—ನಮ್ಮನ್ನು । **ವೀರ್ಯಾಯ**—ಶಕ್ತಿಸಂಪಾದನೆಗಾಗಿ । **ಚೋದಯ**—ಪ್ರೇರಿಸು ।

॥ ಭಾವಾರ್ಥ ॥

ಎಲೈ ಸೋಮದೇವನೇ, ಪುರಾತನರೂ, ಯಜ್ಞಕ್ಕಾಗಿ ದರ್ಭಾಸನವನ್ನು ಹರಡಿರುವವರೂ ಆದ ಯಜಮಾನರು ಮಹತ್ತಾದ ಬಲಕ್ಕಾಗಿಯೂ, ಅನ್ನಕ್ಕಾಗಿಯೂ, ತಮ್ಮ ಧ್ಯಾನಾತ್ಮಕವಾದ ಬುದ್ಧಿಯನ್ನು ನಿನ್ನಲ್ಲಿ ಸ್ಥಾಪಿಸಿದ್ದಾರೆ. ಸಾಮರ್ಥ್ಯಯುತನಾದ ಎಲೈ ಸೋಮದೇವನೇ, ಪ್ರಸಿದ್ಧನಾದ ನೀನು ನಮ್ಮನ್ನೂ ಸಹ ಶಕ್ತಿಸಂಪಾದನೆಗಾಗಿ ಪ್ರೇರಿಸು

## English Translation

The chief (of men) having cut the sacred grass have fixed their minds, Soma, on you for abundant strength and food; do you, O hero, excite us to heroism.

॥ ಸಂಹಿತಾಪಾಠಃ ॥

ದಿವಃ ಪೀಯೂಷಂ ಪೂರ್ವ್ಯಂ ಯದುಕ್ಥ್ಯಂ ಮಹೋ ಗಾಹಾದ್ದಿವ ಆ
ನಿರಧುಕ್ಷತ ।
ಇಂದ್ರಮಭಿ ಜಾಯಮಾನಂ ಸಮಸ್ವರನ್ ॥ ೮ ॥

॥ ಪದಪಾಠಃ ॥

ದಿವಃ । ಪೀಯೂಷಂ । ಪೂರ್ವ್ಯಂ । ಯತ್ । ಉಕ್ಥ್ಯಂ । ಮಹಃ । ಗಾಹಾತ್ । ದಿವಃ । ಆ । ನಿಃ ।
ಅಧುಕ್ಷತ ।
ಇಂದ್ರಂ । ಅಭಿ । ಜಾಯಮಾನಂ । ಸಂ । ಅಸ್ವರನ್ ॥ ೮ ॥

॥ ಸಾಯಣಭಾಷ್ಯಂ ॥

ದಿವೋ ದ್ಯುಲೋಕಾತ್ ತತ್ರ ಸ್ಥಿತೈರ್ದೇವೈಃ ಪೀಯೂಷಂ ಪಾತವ್ಯಂ ಪೂರ್ವ್ಯಂ ಪ್ರತ್ನಂ ಯತ್ಸೋಮರೂಪಮನ್ನಮುಕ್ಥ್ಯಂ ಪ್ರಶಸ್ಯಮಸ್ತಿ ತಂ ಸೋಮಂ ಮಹೋ ಮಹತೋ ಗಾಹಾದ್ಗಹನಾದ್ದಿವೋ ದ್ಯುಲೋಕಾನ್ನಿರಧುಕ್ಷತ । ಆಭಿಮುಖ್ಯೇನ ನಿರ್ದುಹಂತಿ । ತತೋ ದುಗ್ಧಮಿಂದ್ರಮಭಿಲಕ್ಷ್ಯ ಜಾಯಮಾನಂ ತಂ ಸೋಮಂ ಸಮಸ್ವರನ್ । ಸ್ತೋತಾರಃ ಸಂಸ್ತುವಂತಿ ॥

॥ ಪ್ರತಿಪದಾರ್ಥ ॥

**ದಿವಃ**—ದ್ಯುಲೋಕಸ್ಥರಾದ ದೇವತೆಗಳಿಗೆ । **ಪೀಯೂಷಂ**—ಪಾನಾರ್ಹವಾದುದೂ । **ಪೂರ್ವ್ಯಂ**—ಪುರಾತನವಾದುದೂ ಆದ । **ಯತ್**—ಯಾವ ಸೋಮವು । **ಉಕ್ಥ್ಯಂ**—ಪ್ರಶಸ್ಯವಾಗಿರುವುದೋ ಆ ಸೋಮವನ್ನು । **ಮಹಃ**—ಮಹತ್ತಾದುದೂ । **ಗಾಹಾತ್**—ಗಭೀರವಾದುದೂ ಆದ । **ದಿವಃ**—ದ್ಯುಲೋಕದಿಂದ । **ಆ ನಿರಧುಕ್ಷತ**—ಕರೆದಿದ್ದಾರೆ । **ಇಂದ್ರಂ ಅಭಿ**—ಇಂದ್ರನ ಪಾನಾರ್ಥವಾಗಿ । **ಜಾಯಮಾನಂ**—ಉತ್ಪನ್ನವಾದ ಆ ಸೋಮವನ್ನು । **ಸಮಸ್ವರನ್**—ಸ್ತೋತೃಗಳು ಸ್ತುತಿಸುತ್ತಾರೆ.

॥ ಭಾವಾರ್ಥ ॥

ದ್ಯುಲೋಕಸ್ಥರಾದ ದೇವತೆಗಳಿಗೆ ಪಾನಾರ್ಹವಾದುದೂ, ಪುರಾತನವಾದುದೂ ಆದ ಯಾವ ಸೋಮವು ಪ್ರಶಸ್ಯವಾಗಿರುವುದೋ ಆ ಸೋಮವನ್ನು ಮಹತ್ತಾದುದೂ ಗಭೀರವಾದುದೂ ಆದ ದ್ಯುಲೋಕದಿಂದ ಕರೆದಿದ್ದಾರೆ. ಇಂದ್ರನ ಪಾನಾರ್ಥವಾಗಿ ಉತ್ಪನ್ನವಾದ ಆ ಸೋಮವನ್ನು ಸ್ತೋತೃಗಳು ಸ್ತುತಿಸುತ್ತಾರೆ.

## English Translation

They have milked from heaven from the mighty deep the ancient Soma, the beverage (of the gods) of heaven, which is worthy of praise; they have praised it when generated for Indra.

॥ ಸಂಹಿತಾಪಾಠಃ ॥

ಅಧ ಯದಿಮೇ ಪವಮಾನ ರೋದಸೀ ಇಮಾ ಚ ವಿಶ್ವಾ ಭುವನಾಭಿ ಮಜ್ಮನಾ ।

ಯೂಥೇ ನ ನಿಷ್ಠಾ ವೃಷಭೋ ವಿ ತಿಷ್ಠಸೇ ॥ ೯ ॥

॥ ಪದಪಾಠಃ ॥

ಅಧ । ಯತ್ । ಇಮೇ ಇತಿ । ಪವಮಾನ । ರೋದಸೀ ಇತಿ । ಇಮಾ । ಚ । ವಿಶ್ವಾ । ಭುವನಾ । ಅಭಿ । ಮಜ್ಮನಾ ।

ಯೂಥೇ । ನ । ನಿಃಽಸ್ಥಾಃ । ವೃಷಭಃ । ವಿ । ತಿಷ್ಠಸೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಸೋಮ ಅಧಾನಂತರಂ ಯದ್ಯದೇಮೇ ರೋದಸೀ ದ್ಯಾವಾಪೃಥಿವ್ಯಾವಿಮೇ-ಮಾನಿ ವಿಶ್ವಾ ವಿಶ್ವಾನಿ ಭುವನಾ ಭೂತಜಾತಾನಿ ಚ ಮಜ್ಮನಾ ಬಲೇನಾಭಿ ತಿಷ್ಠಸಿ ಸ ತ್ವಂ ತಥಾ ಕುರ್ವನ್ ಭುವನೇಷು ವಿ ತಿಷ್ಠಸೇ । ತತ್ರ ದೃಷ್ಟಾಂತಃ ಯೂಥೇ ನ ಯಥಾ ಕಶ್ಚಿದ್ವೃಷಭೋ ಗವಾಂ ಯೂಥೇ ವೃಂದೇ ನಿಷ್ಠಾ ನಿಷ್ಠಿತೋ ವರ್ತತೇ ತದ್ವದ್ಯೂಥಸ್ಥಾನೀಯೇಷು ಭೂತಜಾತೇಷು ನಿಷ್ಠಿತೋ ಭವಸಿ

॥ ಪ್ರತಿಪದಾರ್ಥ ॥

**ಪವಮಾನ**—ಎಲೈ ಸೋಮದೇವನೇ **ವೃಷಭಃ**—ಶಕ್ತಿಯುತವಾದ ವೃಷಭವು । **ಯೂಥೇ**—ಗೋವುಗಳ ಸಮೂಹದಲ್ಲಿ **ನಿಃಷ್ಠಾಃ ನ**—ಪ್ರಭುತ್ವವನ್ನು ಮಾಡುತ್ತ ಹೇಗೆ ನಿಂತಿರುವುದೋ ಹಾಗೆಯೇ । **ಅಧ**—ನೀನು ಉತ್ಪನ್ನನಾದೊಡನೆಯೇ । **ಯತ್**—ಯಾವ ರೀತಿ । **ಇಮೇ ರೋದಸೀ**—ಈ ದ್ಯಾವಾಪೃಥಿವಿಗಳೆರಡೂ । **ಇಮಾ ಚ ವಿಶ್ವಾ ಭುವನಾ**—ಈ ಜಗತ್ತುಗಳಲ್ಲೆಲ್ಲಾ । **ಮಜ್ಮನಾ**—ತನ್ನ ಶಕ್ತಿಯಿಂದ । **ಅಭಿ**—ವ್ಯಾಪಿಸಿ ನಿಲ್ಲುವಂತೆ ಮಾಡುವೆಯೋ ಆ ರೀತಿಯೂ । **ವಿ ತಿಷ್ಠಸೇ**—ಪ್ರಭುತ್ವವನ್ನು ಮಾಡುತ್ತ ನಿಂತಿರುವೆ ।

॥ ಭಾವಾರ್ಥ ॥

ಎಲೈ ಸೋಮದೇವನೇ, ಶಕ್ತಿಯುತವಾದ ವೃಷಭವು ಗೋವುಗಳ ಸಮೂಹದಲ್ಲಿ ಪ್ರಭುತ್ವವನ್ನು ಮಾಡುತ್ತ ಹೇಗೆ ನಿಂತಿರುವುದೋ ಹಾಗೆಯೇ, ನೀನು ಉತ್ಪನ್ನನಾದೊಡನೆಯೇ ಯಾವ ರೀತಿ ಈ ದ್ಯಾವಾಪೃಥಿವಿಗಳೆರಡೂ ಈ

ಜಗತ್ತುಗಳಲ್ಲೆಲ್ಲಾ ತಮ್ಮ ಶಕ್ತಿಯಿಂದ ವ್ಯಾಪಿಸಿ ನಿಲ್ಲುವಂತ ಮಾಡುವೆಯೋ ಆ ರೀತಿಯೂ ನೀನು ಪ್ರಭುತ್ವವನ್ನು ವಹಿಸುತ್ತ ನಿಂತಿರುವೆ.

## English Translation

Since, Pavamana, you by your might are chief over these two worlds and all these living beings, as a bull is ruler in a herd of cows.

॥ ಸಂಹಿತಾಪಾಠಃ ॥

ಸೋಮಃ ಪುನಾನೋ ಅವ್ಯಯೇ ವಾರೇ ಶಿಶುರ್ನ ಕ್ರೀಳನ್ಪವಮಾನೋ ಅಕ್ಷಾಃ ।
ಸಹಸ್ರಧಾರಃ ಶತವಾಜ ಇಂದುಃ ॥ ೧೦ ॥

॥ ಪದಪಾಠಃ ॥

ಸೋಮಃ । ಪುನಾನಃ । ಅವ್ಯಯೇ । ವಾರೇ । ಶಿಶುಃ । ನ । ಕ್ರೀಳನ್ । ಪವಮಾನಃ । ಅಕ್ಷಾರಿತಿ ।
ಸಹಸ್ರऽಧಾರಃ । ಶತऽವಾಜಃ । ಇಂದುಃ ॥ ೧೦ ॥

॥ ಸಾಯಣಭಾಷ್ಯಂ ॥

ಪುನಾನಃ ಪೂಯಮಾನಃ ಪವಮಾನಃ ಪೂತಃ ಸೋಮೋऽವ್ಯಯೇऽವಿಮಯೇ ವಾರೇ ವಾಲೇ ಪವಿತ್ರೇ ಶಿಶುರ್ನ ಶಿಶುರಿವ ಕ್ರೀಳನ್ನಿತಸ್ತತಃ ಸಂಕ್ರೀಡಮಾನಃ ಸನ್ನಕ್ಷಾಃ । ಕ್ಷರತಿ । ಕೀದೃಶಃ । ಸಹಸ್ರಧಾರೋ ಬಹುಧಾರಾಯುಕ್ತಃ ಶತವಾಜೋ ಬಹುಬಲ ಇಂದುರ್ದೀಪ್ತಃ ॥

ಪ್ರತಿಪದಾರ್ಥ ॥

**ಪುನಾನಃ**—ಶುದ್ಧಿಕಾರಕನೂ । **ಪವಮಾನಃ**—ಶುದ್ಧಿಯನ್ನು ಹೊಂದಿದವನೂ ಆದ । **ಸೋಮಃ**—ಸೋಮದೇವನು । **ಸಹಸ್ರಧಾರಃ**—ಅನೇಕಧಾರೆಯುಳ್ಳವನಾಗಿಯೂ । **ಶತವಾಜಃ**—ಪ್ರಭೂತವಾದ ಬಲವುಳ್ಳವನಾಗಿಯೂ । **ಇಂದುಃ**—ಪ್ರಕಾಶಮಾನನಾಗಿಯೂ ಬೆಳಗುತ್ತ । **ಶಿಶುಃ**—ಎಳೆ ಮಗುವು। **ಕ್ರೀಳನ್ ನ**—ಆಟವಾಡುವಂತೆ । **ಅವ್ಯಯೇ**— ಉಣ್ಣೆಯ । **ವಾರೇ**—ನಾರುಗಳ ಮೂಲಕ । **ಅಕ್ಷಾಃ**—ಸ್ರವಿಸುತ್ತಾನೆ.

॥ ಭಾವಾರ್ಥ ॥

ಶುದ್ಧಿಕಾರಕನೂ, ಶುದ್ಧಿಯನ್ನು ಹೊಂದಿದವನೂ ಆದ ಸೋಮದೇವನು ಅನೇಕ ಧಾರೆಯುಳ್ಳವನಾಗಿಯೂ ಪ್ರಭೂತವಾದ ಬಲವುಳ್ಳವನಾಗಿಯೂ, ಪ್ರಕಾಶಮಾನನಾಗಿಯೂ ಬೆಳಗುತ್ತ ಎಳೆ ಮಗುವು ಆಟವಾಡುವಂತೆ ಉಣ್ಣೆಯ ನಾರುಗಳ ಮೂಲಕ ಸ್ರವಿಸುತ್ತಾನೆ.

## English Translation

Pavamana Soma sporting like a child drops filtered through the woollen fleece, thousand-streamed, having the might of a hundred, radiant.

॥ ಸಂಹಿತಾಪಾಠಃ ॥

ಏಷ ಪುನಾನೋ ಮಧುಮಾಁ ಋತಾವೇಂದ್ರಾಯೇಂದುಃ ಪವತೇ ಸ್ವಾದು-
ರೂರ್ಮಿಃ ।
ವಾಜಸನಿರ್ವರಿವೋವಿದ್ವಯೋಧಾಃ ॥ ೧೧ ॥

॥ ಪದಪಾಠಃ ॥

ಏಷಃ । ಪುನಾನಃ । ಮಧುಽಮಾನ್ । ಋತಽವಾ । ಇಂದ್ರಾಯ । ಇಂದುಃ । ಪವತೇ । ಸ್ವಾದುಃ । ಊರ್ಮಿಃ ।
ವಾಜಽಸನಿಃ । ವರಿವಃಽವಿತ್ । ವಯಃಽಧಾಃ ॥ ೧೧ ॥

॥ ಸಾಯಣಭಾಷ್ಯಂ ॥

ಪುನಾನಃ ಪೂಯಮಾನೋ ಮಧುಮಾನ್ ಮಾಧುರ್ಯೋಪೇತ ಋತವಾನ್ ಯಜ್ಞವಾನಿಂದುಃ ಕ್ಷರಣಶೀಲಃ ಸ್ವಾದುಃ ಸ್ವಾದುಕರ ಊರ್ಮಿರೇಷ ರಸಧಾರಾಸಂಘ ಇಂದ್ರಾಯೇಂದ್ರಾರ್ಥಂ ಪವತೇ । ಕ್ಷರತಿ । ಕೀದೃಶಃ । ವಾಜಸನಿರನ್ನಸ್ಯ ದಾತಾ ವರಿವೋವಿದ್ಧನಸ್ಯ ಲಂಭಕೋ ವಯೋಧಾ ಆಯುಷೋ ದಾತಾ ॥

॥ ಪ್ರತಿಪದಾರ್ಥ ॥

**ಪುನಾನಃ**—ಶುದ್ಧಿಕಾರಕನೂ । **ಮಧುಮಾನ್**—ಮಾಧುರ್ಯೋಪೇತನೂ **ಋತವಾ**—ಯಜ್ಞವಂತನೂ । **ಇಂದುಃ**—ಸ್ರವಣಶೀಲನೂ । **ಸ್ವಾದುಃ**—ರುಚಿಕರನೂ । **ಊರ್ಮಿಃ**—ಅಲೆಗಳನ್ನು ಹೊಂದಿರುವನನೂ ಆದ । **ಏಷಃ**—ಈ ಸೋಮನು । **ವಾಜಸನಿಃ**—ಅನ್ನದಾತನಾಗಿಯೂ । **ವರಿವೋವಿತ್**—ಧನದಾತನಾಗಿಯೂ । **ವಯೋಧಾಃ**—ಆಯುರ್ದಾತನಾಗಿಯೂ । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಪವತೇ**—ಸ್ರವಿಸುತ್ತಾನೆ.

॥ ಭಾವಾರ್ಥ ॥

ಶುದ್ಧಿಕಾರಕನೂ, ಮಾಧುರ್ಯೋಪೇತನೂ, ಯಜ್ಞವಂತನೂ, ಸ್ರವಣಶೀಲನೂ, ರುಚಿಕರನೂ, ಅಲೆಗಳನ್ನು ಹೊಂದಿರುವವನೂ ಆದ ಈ ಸೋಮನು ಅನ್ನದಾತನಾಗಿಯೂ ಧನದಾತನಾಗಿಯೂ, ಆಯುರ್ದಾತನಾಗಿಯೂ ಇಂದ್ರನ ಪಾನಾರ್ಥವಾಗಿ ಸ್ರವಿಸುತ್ತಾನೆ.

## English Translation

This Soma juice undergoing purification, sweet-flavoured, holy, dropping, flows for Indra a sweet stream, bestowing food, dispensing wealth and life.

॥ ಸಂಹಿತಾಪಾಠಃ ॥

**ಸ ಪವಸ್ವ ಸಹಮಾನಃ ಪೃತನ್ಯೂನ್ತ್ಸೇಧನ್ರಕ್ಷಾಂಸ್ಯಪ ದುರ್ಗಹಾಣಿ ।**

**ಸ್ವಾಯುಧಃ ಸಾಸಹ್ವಾನ್ತ್ಸೋಮ ಶತ್ರೂನ್ ॥ ೧೨ ॥**

॥ ಪದಪಾಠಃ ॥

**ಸಃ । ಪವಸ್ವ । ಸಹಮಾನಃ । ಪೃತನ್ಯೂನ್ । ಸೇಧನ್ । ರಕ್ಷಾಂಸಿ । ಅಪ । ದುಃऽಗಹಾನಿ ।**

**ಸುऽಆಯುಧಃ । ಸಸಹ್ವಾನ್ । ಸೋಮ । ಶತ್ರೂನ್ ॥ ೧೨ ॥**

॥ ಸಾಯಣಭಾಷ್ಯಂ ॥

ಹೇ ಸೋಮ ಸ ತಾದೃಶಸ್ತ್ವಂ ಪವಸ್ವ । ಕಿಂ ಕುರ್ವನ್ । ಪೃತನ್ಯೂನ್ ॥ ಕವ್ಯಧ್ವರಪೃತನಸ್ಯರ್ಚಿ ಲೋಪ ಇತಿ ಕ್ಯಚಿ ಪರತೋऽಕಾರಲೋಪಃ ॥ ಸಂಗ್ರಾಮಕಾಮಾಞ್ಛತ್ರೂನ್ ಸಹಮಾನೋऽಭಿಭವನ್ ತಥಾ ದುರ್ಗಹಾಣಿ ಕೈಶ್ಚಿದಪಿ ದುರ್ಗಮಾಣಿ ರಕ್ಷಾಂಸ್ಯಪ ಸೇಧನ್ನಪಗಮಯನ್ ಹಿಂಸನ್ । ಕಿಂಚ ಸ್ವಾಯುಧಃ ಶೋಭನಾಯುಧಃ ಸಞ್ಛತ್ರೂನ್ಸಾಸಹ್ವಾನಭಿಭವನ್ನಭಿತಪನ್ ಪವಸ್ವ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಸಃ**—ಪ್ರಸಿದ್ಧನಾದ ನೀನು । **ಪೃತನ್ಯೂನ್**—ಯುದ್ಧಾಪೇಕ್ಷಿಗಳಾದ ಶತ್ರುಗಳನ್ನು । **ಸಹಮಾನಃ**—ಸೋಲಿಸುತ್ತಲೂ । **ದುರ್ಗಹಾಣಿ**—ಅಪ್ರತಿಹತವಾದ । **ರಕ್ಷಾಂಸಿ**—ರಾಕ್ಷಸರನ್ನು । **ಅಪ ಸೇಧನ್**—ನಾಶಪಡಿಸುತ್ತಲೂ । **ಸ್ವಾಯುಧಃ**—ಉತ್ತಮವಾದ ಆಯುಧವುಳ್ಳವನಾಗಿಯೂ । **ಶತ್ರೂನ್**—ಶತ್ರುಗಳನ್ನೆಲ್ಲ । **ಸಾಸಹ್ವಾನ್**—ಪೂರ್ಣವಾಗಿ ಸೋಲಿಸುತ್ತಲೂ । **ಪವಸ್ವ**—ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಪ್ರಸಿದ್ಧನಾದ ನೀನು ಯುದ್ಧಾಪೇಕ್ಷಿಗಳಾದ ಶತ್ರುಗಳನ್ನು ಸೋಲಿಸುತ್ತಲೂ, ಅಪ್ರತಿಹತರಾದ ರಾಕ್ಷಸರನ್ನು ನಾಶಪಡಿಸುತ್ತಲೂ, ಉತ್ತಮವಾದ ಆಯುಧವುಳ್ಳವನಾಗಿಯೂ, ಶತ್ರುಗಳನ್ನೆಲ್ಲ ಪೂರ್ಣವಾಗಿ ಸೋಲಿಸುತ್ತಲೂ ಪ್ರವಹಿಸು.

## English Translation

Flow, Soma, overcoming (our) enemies, driving away the Rakshasas who are difficult to approach, well-armed, triumphing over foes.

# ನೂರ ಹನ್ನೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಅಯಾ ರುಚೇತಿ ತೃಚಮಷ್ಟಮಂ ಸೂಕ್ತಂ ಪರುಚ್ಛೇಪಪುತ್ರಸ್ಯಾನಾನತಾಖ್ಯಸ್ಯಾರ್ಷಮತ್ಯಷ್ಟಿ-ಚ್ಛಂದಸ್ಕಂ ಪವಮಾನಸೋಮದೇವತಾಕಂ ತಥಾ ಚಾನುಕ್ರಮ್ಯತೇ । ಅಯಾ ರುಚಾ ತೃಚಮನಾ-ನತಃ ಪಾರುಚ್ಛೇಪಿರಾತ್ಯಷ್ಟಮಿತಿ ॥ ಗತೋ ವಿನಿಯೋಗಃ ॥

ಅನುವಾದವು— **ಅಯಾ ರುಚಾ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪರುಚ್ಛೇಪಋಷಿಯ ಪುತ್ರನಾದ ಅನಾನತಃ ಎಂಬುವನು ಋಷಿಯು ; ಪವಮಾನಸೋಮನು ದೇವತೆಯು ; ಅತ್ಯಷ್ಟಿಃ ಎಂಬುದು ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಅಯಾ ರುಚಾ ತೃಚಮನಾನತಃ ಪಾರುಚ್ಛೇಪಿರಾತ್ಯಷ್ಟಂ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ . ೧೧೧

ಮಂಡಲ ೯ ॥ ಅನುವಾಕ—೭ ॥ ಸೂಕ್ತ—೧೧೧ ॥
ಅಷ್ಟಕ—೭ ॥ ಅಧ್ಯಾಯ—೫ ॥ ವರ್ಗ—೨೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
ಋಷಿಃ—ಅನಾನತಃ ಪಾರುಚ್ಛೇಪಿಃ ॥
ದೇವತಾ—ಪವಮಾನಃ ಸೋಮಃ ॥
ಛಂದಃ—ಅತ್ಯಷ್ಟಿಃ ॥

॥ ಸಂಹಿತಾಪಾಠಃ ॥

ಅಯಾ ರುಚಾ ಹರಿಣ್ಯಾ ಪುನಾನೋ ವಿಶ್ವಾ ದ್ವೇಷಾಂಸಿ ತರತಿ ಸ್ವಯು-
ಗ್ವಭಿಃ ಸೂರೋ ನ ಸ್ವಯುಗ್ವಭಿಃ ।
ಧಾರಾ ಸುತಸ್ಯ ರೋಚತೇ ಪುನಾನೋ ಅರುಷೋ ಹರಿಃ ।
ವಿಶ್ವಾ ಯದ್ರೂಪಾ ಪರಿಯಾತ್ಯೃಕ್ವಭಿಃ ಸಪ್ತಾಸ್ಯೇಭಿರೃಕ್ವಭಿಃ ॥ ೧ ॥

॥ ಪದಪಾಠಃ ॥

ಅಯಾ । ರುಚಾ । ಹರಿಣ್ಯಾ । ಪುನಾನಃ । ವಿಶ್ವಾ । ದ್ವೇಷಾಂಸಿ । ತರತಿ । ಸ್ವಯುಗ್ವಭಿಃ । ಸೂರಃ ।
ನ । ಸ್ವಯುಗ್ವಭಿಃ ।
ಧಾರಾ । ಸುತಸ್ಯ । ರೋಚತೇ । ಪುನಾನಃ । ಅರುಷಃ । ಹರಿಃ ।
ವಿಶ್ವಾ । ಯತ್ । ರೂಪಾ । ಪರಿಯಾತಿ । ಋಕ್ವಭಿಃ । ಸಪ್ತಅಸ್ಯೇಭಿಃ । ಋಕ್ವಭಿಃ ॥ ೧ ॥

॥ ಸಾಯಣಭಾಷ್ಯಂ ॥

ಪುನಾನಃ ಪೂಯಮಾನಃ ಸೋಮೋ ಹರಿಣ್ಯಾ ಹರಿತವರ್ಣಯಾಯಯಾನಯಾ ರುಚಾ ರೋಚಮಾನಯಾ ಧಾರಯಾ ವಿಶ್ವಾ ಸರ್ವಾಣಿ ದ್ವೇಷಾಂಸಿ ದ್ವೇಷ್ಟ್ರಾಣಿ ರಕ್ಷಾಂಸಿ ತರತಿ । ವಿನಾಶಯತಿ । ತತ್ರ ದೃಷ್ಟಾಂತಃ । ಸೂರೋ ನ ಯಥಾ ಸೂರ್ಯಃ ಸ್ವಯುಗ್ವಭಿಃ ಸ್ವಯಂ ಯುಕ್ತೈ ರಶ್ಮಿಭಿಸ್ತಮಾಂಸಿ ಹಿನಸ್ತಿ ತದ್ವತ್ । ಸ್ವಯುಗ್ವಭಿರಿತಿ ದ್ವಿರುಕ್ತಿರಾದರಾರ್ಥಾ । ಯದ್ವಾ । ಧಾರಯಾ ಯುಕ್ತಃ ಸೋಮಃ ಸ್ವೈರ್ಯೈರ್ಯುಕ್ತೈಸ್ತೇಜೋಭೀ ರಕ್ಷಾಂಸಿ ತರತಿ । ತಸ್ಯ ಸುತಸ್ಯಾಭಿಷುತಸ್ಯ ಸೋಮಸ್ಯ ಧಾರಾ ರೋಚತೇ । ದೀಪ್ಯತೇ । ಪುನಾನಃ ಪೂಯಮಾನೋ ಹರಿರ್ಹರಿತವರ್ಣಃ ಸೋಮೋಽರುಷ ಆರೋಚಮಾನೋ ಭವತಿ । ಯದ್ಯಃ ಸೋಮಃ ಸಪ್ತಾಸ್ಯೇಭೀರಸಹರಣಶೀಲಾಸ್ಯೈಋರ್ಕ್ವಭಿಃ ಸ್ತುತಿಮದ್ಭಿಋರ್ಕ್ವಭಿಸ್ತೇಜೋಭಿರ್ವಿಶ್ವಾ ವಿಶ್ವಾನಿ ವ್ಯಾಪ್ತಾನಿ ರೂಪಾ ರೂಪಾಣಿ ನಕ್ಷತ್ರಾಣಿ ಪರಿಯಾತಿ ಗಚ್ಛತಿ ವ್ಯಾಪ್ನೋತಿ ॥

॥ ಪ್ರತಿಪದಾರ್ಥ ॥

**ಸೂರಃ**—ಸೂರ್ಯನು । **ಸ್ವಯುಗ್ವಭಿಃ ನ**—ತನ್ನಿಂದ ಪ್ರಸೂತವಾದ ರಶ್ಮಿಗಳಿಂದ ತಮಸ್ಸನ್ನು ನಾಶ ಮಾಡುವಂತೆ । **ಪುನಾನಃ**—ಶುದ್ಧಿಯನ್ನು ಹೊಂದತಕ್ಕ ಸೋಮನು । **ಹರಿಣ್ಯಾ**—ಪಚ್ಚೆವರ್ಣವುಳ್ಳ । **ಅಯಾ ರುಚಾ**—ಈ ಪ್ರಭೆಯಿಂದ । **ವಿಶ್ವಾ**—ಸಮಸ್ತವಾದ । **ದ್ವೇಷಾಂಸಿ**—ಶತ್ರುಗಳನ್ನೂ । **ಸ್ವಯುಗ್ವಭಿಃ**—ತನ್ನ ತೇಜಸ್ಸುಗಳಿಂದ । **ತರತಿ**—ನಾಶಪಡಿಸುತ್ತಾನೆ । **ಸುತಸ್ಯ**—ಹಿಂಡಲ್ಪಟ್ಟ ಸೋಮದ । **ಧಾರಾ**—ಪ್ರವಾಹವು । **ರೋಚತೇ**—ಪ್ರಕಾಶಿಸುತ್ತದೆ । **ಯತ್**—ಯಾವ ಸೋಮವು । **ಸಪ್ತಾಸ್ಯೇಭಿಃ**—ಸಪ್ತಸಂಖ್ಯಾಕವಾದ (ರಸಹರಣಶೀಲವಾದ) ಮುಖಗಳುಳ್ಳವೂ । **ಋಕ್ವಭಿಃ**—ಸ್ತುತಿಗಳೊಡನೆ ಕೂಡಿದವೂ ಆದ । **ಋಕ್ವಭಿಃ**—ತೇಜಸ್ಸುಗಳಿಂದ । **ವಿಶ್ವಾ**—ಸರ್ವವ್ಯಾಪಕಗಳಾದ । **ರೂಪಾ**—(ನಕ್ಷತ್ರಾದಿ) ರೂಪಗಳನ್ನೂ । **ಪರಿಯಾತಿ**—ಹೊಂದಿರುವುದೋ ಅಂತಹುದೂ । **ಪುನಾನಃ**—ಶುದ್ಧಿಯನ್ನು ಹೊಂದುವುದೂ । **ಹರಿಃ**—ಪಚ್ಚೆವರ್ಣವುಳ್ಳದ್ದೂ ಆದ ಸೋಮವು । **ಅರುಷಃ**—ಪ್ರಕಾಶಮಾನವಾಗಿ (ಹೊಂಬಣ್ಣವುಳ್ಳದ್ದಾಗಿ) ಇರುತ್ತದೆ.

॥ ಭಾವಾರ್ಥ ॥

ಸೂರ್ಯನು ತನ್ನಿಂದ ಪ್ರಸೂತವಾದ ರಶ್ಮಿಗಳಿಂದ ತಮಸ್ಸನ್ನು ನಾಶಮಾಡುವಂತೆ ಶುದ್ಧಿಯನ್ನು ಹೊಂದತಕ್ಕ ಸೋಮನು ಪಚ್ಚೆವರ್ಣವುಳ್ಳ ಈ ಪ್ರಭೆಯಿಂದ ಸಕಲ ಶತ್ರುಗಳನ್ನೂ ನಾಶಪಡಿಸುತ್ತಾನೆ. ಹಿಂಡಿರುವ ಸೋಮರಸದ ಪ್ರವಾಹವು ಪ್ರಕಾಶಿಸುತ್ತದೆ. ಯಾವ ಸೋಮವು ರಸವನ್ನು ಹರಿಸುವುದೂ, ಸಪ್ತಸಂಖ್ಯಾಕವಾದ ಮುಖಗಳುಳ್ಳವೂ ಸ್ತುತಿಗಳೊಡನೆ ಕೂಡಿದವೂ ಆದ ತೇಜಸ್ಸುಗಳಿಂದ ಸರ್ವವ್ಯಾಪಕಗಳಾದ ನಕ್ಷತ್ರಾದಿರೂಪಗಳನ್ನು ಹೊಂದಿರುವುದೋ ಅಂತಹುದೂ, ಶುದ್ಧಿಯನ್ನು ಹೊಂದುವುದೂ, ಪಚ್ಚೆವರ್ಣವುಳ್ಳದ್ದೂ ಆದ ಸೋಮವು ಪ್ರಕಾಶಮಾನವಾಗಿರುತ್ತದೆ.

## English Translation

With this bright green-tinted stream Soma being filtered overcomes all enemies with the (juices) yoked to it, as the sun (overcomes the darkness) with the (rays) yoked to it ; the stream of the effused (Soma) shines,

the filtered green-tinted (Soma is) resplendent, which pervades all conste-lations, with the Rikvans, with the seven-mouthed Rikvans.

॥ ಸಂಹಿತಾಪಾಠಃ ॥

ತ್ವಂ ತ್ಯತ್ಪಣೀನಾಂ ವಿದೋ ವಸು ಸಂ ಮಾತೃಭಿರ್ಮರ್ಜಯಸಿ ಸ್ವ ಆ
ದಮ ಋತಸ್ಯ ಧೀತಿಭಿರ್ದಮೇ
ಪರಾವತೋ ನ ಸಾಮ ತದ್ಯತ್ರಾ ರಣಂತಿ ಧೀತಯಃ ।
ತ್ರಿಧಾತುಭಿರರುಷೀಭಿರ್ವಯೋ ದಧೇ ರೋಚಮಾನೋ ವಯೋ ದಧೇ

॥ ಪದಪಾಠಃ ॥

ತ್ವಂ । ತ್ಯತ್ । ಪಣೀನಾಂ । ವಿದಃ । ವಸು । ಸಂ । ಮಾತೃಽಭಿಃ । ಮರ್ಜಯಸಿ । ಸ್ವೇ । ಆ । ದಮೇ ।
ಋತಸ್ಯ । ಧೀತಿಽಭಿಃ । ದಮೇ ।
ಪರಾಽವತಃ । ನ । ಸಾಮ । ತತ್ । ಯತ್ರ । ರಣಂತಿ । ಧೀತಯಃ ।
ತ್ರಿಧಾತುಽಭಿಃ । ಅರುಷೀಭಿಃ । ವಯಃ । ದಧೇ । ರೋಚಮಾನಃ । ವಯಃ । ದಧೇ ॥ ೨ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಂ ತ್ಯತ್ಪಣೀನಾಂ ವಸು ಪಣಿಭಿರಪಹೃತಂ ಗವಾತ್ಮಕಂ ಧನಂ ವಿದಃ । ಅಲಭಥಾಃ । ಆ ಅಪಿ ಚರ್ತಸ್ಯ ಯಜ್ಞಸ್ಯ ಧೀತಿಭಿರ್ಧಾತ್ರೀಭಿರ್ಮಾತೃಭಿರ್ವಸತೀವರೀಭಿಃ ಸ್ವೇ ಆತ್ಮೀಯೇ ದಮೇ ಗೃಹಭೂತೇ ದಮೇ ಯಜ್ಞೇ ಸಂ ಮರ್ಜಯಸಿ । ಸಮ್ಯಕ್ ಶುದ್ಧೋ ಭವಸಿ । ಪರಾವತೋ ನ ದೂರಸ್ಥಾದ್ದೇಶಾದ್ಯಥಾ ಸಾಮ ಸಾಮಧ್ವನಿಃ ಶ್ರೂಯತೇ ತಥಾ ತವ ತತ್ಸಾಮಧ್ವನಿಃ ಸರ್ವೈಃ ಶ್ರೂಯತೇ । ಅಸೌ ಸೋಮಾಭಿಷವಾಭಿಪ್ರಾಯೇಣೋಕ್ತಃ । ಯತ್ರ ಯಸ್ಮಿಞ್ಶಬ್ದೇ ಧೀತಯಃ ಕರ್ಮಣೋ ಧರ್ತಾರೋ ಯಜಮಾನಾ ರಣಂತಿ ರಮಂತೇ । ರೋಚಮಾನಃ ಸೋಮಸ್ತ್ರಿಧಾತುಭಿಸ್ತ್ರಯಾಣಾಂ ಲೋಕಾನಾಂ ಧಾರಯಿತ್ರೀಭಿರ್ಮಾತೃಭಿರ್ವಸತೀವರೀಭಿರರುಷೀಭಿರಾರೋಚಮಾನಾಭಿರ್ದೀಪ್ತಿರ್ವಯೋಽನ್ನಂ ದಧೇ । ಸ್ತೋತೃಭ್ಯಃ ಪ್ರಯಚ್ಛತಿ । ಪುನರ್ವಯೋ ದಧ ಇತ್ಯಾದರಾರ್ಥಂ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ತ್ವಂ—ನೀನು । ತ್ಯತ್—ಪ್ರಸಿದ್ಧವಾದ । ಪಣೀನಾಂ—ಪಣಿಗಳ (ಅವರಿಂದ ಅಪಹೃತವಾದ) । ವಸು—ಗವಾತ್ಮಕವಾದ ಧನಗಳನ್ನು । ವಿದಃ—ಹೊಂದಿದೆ । ಆ—ಮತ್ತು । ಋತಸ್ಯ—

ಯಜ್ಞದ । **ಧೀತಿಭಿಃ**—ಧಾರಕಗಳಾದ । **ಮಾತೃಭಿಃ**—ವಸತೀವರಿಗಳಿಂದ । **ಸ್ವೇ**—ನಿನ್ನ । **ದಮೇ**—ಗೃಹರೂಪವಾದ । **ದಮೇ**—ಯಜ್ಞದಲ್ಲಿ । **ಸಂ ಮರ್ಜಯಸಿ**—ಶೋಧಿಸಲ್ಪಡುತ್ತೀಯೆ । **ಪರಾವತಃ**—ಅತ್ಯಂತ ದೂರ ಪ್ರದೇಶದಿಂದಲೂ । **ಸಾಮ ನ**—ಸಾಮಗಾನದ ಧ್ವನಿಯು ಕೇಳಿಸುವಂತೆ । **ಯತ್ರ**—ಯಾವ ಅಭಿನವಶಬ್ದದಲ್ಲಿ । **ಧೀತಯಃ**—ಕರ್ಮಧಾರಕರಾದ ಯಜಮಾನರು । **ರಣಂತಿ**—ರಮಿಸುತ್ತಾರೆಯೋ । **ತತ್**—ಆ ನಿನ್ನ ಶಬ್ದವು । ಎಲ್ಲರಿಂದಲೂ ಕೇಳಲ್ಪಡುತ್ತದೆ । **ರೋಚಮಾನಃ**—ಪ್ರಕಾಶಮಾನನಾದ ಸೋಮನು । **ಅರುಷೀಭಿಃ**—ಕೆಂಗೊಳಿಸುವುದೂ । **ತ್ರಿಧಾತುಭಿಃ**—ಮೂರು ಲೋಕಗಳನ್ನೂ ಧರಿಸುವುದೂ ಆದ ವಸತೀವರಿಗಳೊಡನೆ ಕೂಡಿ । **ವಯಃ**—ಅನ್ನವನ್ನು । **ದಧೇ**—ಕೊಡುತ್ತಾನೆ । **ವಯಃ**—ಅನ್ನವನ್ನು । **ದಧೇ**—ಒದಗಿಸುತ್ತಾನೆ.

। ಭಾವಾರ್ಥ ।

ಎಲೈ ಸೋಮದೇವನೇ, ನೀನು ಪಣಿಗಳಿಂದ ಅಪಹೃತವಾದ, ಪ್ರಸಿದ್ಧವಾದ, ಗವಾತ್ಮಕವಾದ ಧನಗಳನ್ನು ಅಪಹರಿಸುವೆ. ಯಜ್ಞಕ್ಕೆ ಧಾರಕಗಳಾದ ವಸತೀವರಿಗಳಿಂದ ನಿನ್ನ ಗೃಹರೂಪವಾದ ಯಜ್ಞದಲ್ಲಿ ಶೋಧಿಸಲ್ಪಡುತ್ತೀಯೆ. ಅತ್ಯಂತ ದೂರಪ್ರದೇಶದಿಂದಲೂ ಸಾಮಗಾನದ ಧ್ವನಿಯು ಕೇಳಿಸಲ್ಪಡುವಂತೆ ಯಾವ ನಿನ್ನ ಅಭಿನವ ಶಬ್ದದಲ್ಲಿ ಕರ್ಮಧಾರಕರಾದ ಯಜಮಾನರು ರಮಿಸುವರೋ ಆ ನಿನ್ನ ಶಬ್ದವು ಎಲ್ಲರಿಂದಲೂ ಕೇಳಿಸಲ್ಪಡುತ್ತದೆ. ಪ್ರಕಾಶಮಾನನಾದ ಸೋಮನು ಕೆಂಗೊಳಿಸುವುದೂ, ಮೂರು ಲೋಕಗಳನ್ನು ಧರಿಸುವುದೂ ಆದ ವಸತೀವರಿಗಳೊಡನೆ ಕೂಡಿ ಯಜಮಾನರಿಗೆ ಅನ್ನವನ್ನು ಕೊಡುತ್ತಾನೆ.

## English Translation

You did discover the wealth of the Panis, and are washed in your own house at the sacrifice by the mothers, the supporters of the sacrifice; as the hymn (is heard) from afar, so it (is heard by all, the hymn) in which the supporters (of the rite) rejoice; the shining (Soma) with its brilliant (waters), the supporters of the three (worlds), gives food (to the worshippers.

। ಸಂಹಿತಾಪಾಠಃ ॥

ಪೂರ್ವಾಮನು ಪ್ರದಿಶಂ ಯಾತಿ ಚೇಕಿತತ್ಸಂ ರಶ್ಮಿಭಿರ್ಯತತೇ ದರ್ಶತೋ

ರಥೋ ದೈವ್ಯೋ ದರ್ಶತೋ ರಥಃ ।

ಅಗ್ಮನ್ನುಕ್ಥಾನಿ ಪೌಂಸ್ಯೇಂದ್ರಂ ಜೈತ್ರಾಯ ಹರ್ಷಯನ್ ।

ವಜ್ರಶ್ಚ ಯದ್ಭವಥೋ ಅನಪಚ್ಯುತಾ ಸಮತ್ಸ್ವನಪಚ್ಯುತಾ ॥ ೩ ॥

ಪದಪಾಠಃ

ಪೂರ್ವಾಂ । ಅನು । ಪ್ರಽದಿಶಂ । ಯಾತಿ । ಚೇಕಿತತ್ । ಸಂ । ರಶ್ಮಿಽಭಿಃ । ಯತತೇ । ದರ್ಶತಃ ।
ರಥಃ । ದೈವ್ಯಃ । ದರ್ಶತಃ । ರಥಃ ।
ಅಗ್ಮನ್ । ಉಕ್ಥಾನಿ । ಪೌಂಸ್ಯಾ । ಇಂದ್ರಂ । ಜೈತ್ರಾಯ । ಹರ್ಷಯನ್ ।
ವಜ್ರಃ । ಚ । ಯತ್ । ಭವಥಃ । ಅನಪಽಚ್ಯುತಾ । ಸಮತ್ಽಸು । ಅನಪಽಚ್ಯುತಾ ॥ ೩ ॥

॥ ಸಾಯಣಭಾಷ್ಯಂ ॥

ಚೇಕಿತಜ್ಜ್ಞಾನಾನಃ ಸೋಮಃ ಪೂರ್ವಾಂ ಪ್ರಾಚೀಂ ಪ್ರದಿಶಂ ಪ್ರಕೃಷ್ಟಾಂ ದಿಶಮನು ಯಾತಿ । ಅನುಗಚ್ಛತಿ । ಕಿಂಚ ದರ್ಶತಃ ಸರ್ವೈರ್ದರ್ಶನೀಯೋ ದೈವ್ಯೋ ದೇವೇಷು ಭವಸ್ತವ ರಥಃ ಸೂರ್ಯರಶ್ಮಿಭಿಃ ಸಂ ಯತತೇ । ಸಂಗಚ್ಛತೇ । ಪುನರ್ದರ್ಶತೋ ರಥ ಇತ್ಯಾದರಾರ್ಥಂ । ತತಃ ಪೌಂಸ್ಯಾ ಪುಂಸ್ತ್ವವಗಮಾನ್ಯುಕ್ಥಾನಿ ಸ್ತೋತ್ರಾಣ್ಯಗ್ಮನ್ । ಇಂದ್ರಂ ಗಚ್ಛಂತಿ । ತಥಾ ಜೈತ್ರಾಯ ಜಯಾರ್ಥಂ ತಾನಿ ಸ್ತೋತ್ರಾಣೀಂದ್ರಂ ಹರ್ಷಯನ್ । ಹರ್ಷಯಂತಿ । ತಥಾ ತಸ್ಯ ವಜ್ರಶ್ಚ ತಮಿಂದ್ರಂ ಗಚ್ಛತಿ । ಯದ್ಯದಾ ಸಮತ್ಸು ಸಂಗ್ರಾಮೇಷ್ವನಪಚ್ಯುತಾನಪಚ್ಯುತೌ ಶತ್ರುಭಿರಪರಾಜಿತೌ ಸೋಮ ತ್ವಂ ಚೇಂದ್ರಶ್ಚ ಯುವಾಂ ಸಹ ಭವಥಃ ತದಾ ಸ್ತೋತ್ರಾಗಮನಾದೀನಿ ಭವಂತಿ । ಪುನರನಪಚ್ಯುತೇತ್ಯಾದರಾರ್ಥಂ ॥

॥ ಪ್ರತಿಪದಾರ್ಥ ॥

**ಚೇಕಿತತ್**—ಪ್ರಾಜ್ಞನಾದ ಸೋಮನು । **ಪೂರ್ವಾಂ ಪ್ರದಿಶಂ** ಉತ್ಕೃಷ್ಟವಾದ ಪೂರ್ವದಿಕ್ಕಿಗೆ । **ಅನು ಯಾತಿ**—ಹೋಗಿ ಸೇರುತ್ತಾನೆ । **ದರ್ಶತಃ** ಎಲ್ಲರಿಗೂ ಗೋಚರವಾಗುವುದೂ । **ದೈವ್ಯಂ**—ದೇವತೆಗಳಲ್ಲಿ ಪ್ರಸಿದ್ಧವಾದುದೂ ಆದ । **ರಥಃ** ಸೋಮನ ರಥವು । **ರಶ್ಮಿಭಿಃ**—ಸೂರ್ಯರಶ್ಮಿಗಳೊಡನೆ । **ಸಂ ಯತತೇ**—ಸೇರಿಕೊಳ್ಳುತ್ತದೆ । (ಎಲೈ ಸೋಮನೇ) **ಯತ್**—ಯಾವಾಗ । **ಸಮತ್ಸು**—ಸಂಗ್ರಾಮಗಳಲ್ಲಿ । **ಅನಪಚ್ಯುತಾ ಭವಥಃ**-ನೀನೂ ಮತ್ತು ಇಂದ್ರನೂ ಶತ್ರುಗಳಿಂದ ಅಪರಾಜಿತರಾಗುವಿರೋ ಆಗ । **ಪೌಂಸ್ಯಾ**-ಪುಂಶಕ್ತಿಯುತವಾದ । **ಉಕ್ಥಾನಿ**—ಸ್ತೋತ್ರಗಳು । **ಅಗ್ಮನ್**—ಇಂದ್ರನನ್ನು ಸೇರಿಕೊಳ್ಳುತ್ತವೆ । **ಜೈತ್ರಾಯ**—ಜಯಸಂಪಾದನೆಗಾಗಿ । **ಇಂದ್ರಂ**—ಇಂದ್ರನನ್ನು । **ಹರ್ಷಯನ್**— ಹರ್ಷಗೊಳಿಸುತ್ತವೆ । **ವಜ್ರಶ್ಚ**—ವಜ್ರಾಯುಧವೂ ಇಂದ್ರನನ್ನು ಸೇರಿಕೊಳ್ಳುತ್ತದೆ.

॥ ಭಾವಾರ್ಥ ॥

ಪ್ರಾಜ್ಞನಾದ ಸೋಮನು ಉತ್ಕೃಷ್ಟವಾದ ಪೂರ್ವದಿಕ್ಕಿಗೆ ಹೋಗಿ ಸೇರುತ್ತಾನೆ. ಎಲ್ಲರಿಗೂ ಗೋಚರವಾಗುವುದೂ, ದೇವತೆಗಳಲ್ಲಿ ಪ್ರಸಿದ್ಧವಾದುದೂ ಆದ ಸೋಮನ ರಥವು ಸೂರ್ಯರಶ್ಮಿಗಳೊಡನೆ ಸೇರಿಕೊಳ್ಳುತ್ತದೆ. ಎಲೈ ಸೋಮನೇ, ಯಾವಾಗ ನೀನೂ ಮತ್ತು ಇಂದ್ರನೂ ಸಂಗ್ರಾಮಗಳಲ್ಲಿ ಶತ್ರುಗಳಿಂದ ಅಪರಾಜಿತರಾಗುವಿರೋ ಆಗ ಪುಂಶಕ್ತಿಯುತವಾದ ಸ್ತೋತ್ರಗಳು ಇಂದ್ರನನ್ನು ಸೇರಿಕೊಳ್ಳುತ್ತವೆ. ಜಯಸಂಪಾದನೆಗಾಗಿ ಇಂದ್ರನನ್ನು ಹರ್ಷಗೊಳಿಸುತ್ತವೆ. ವಜ್ರಾಯುಧವೂ ಇಂದ್ರನನ್ನು ಸೇರಿಕೊಳ್ಳುತ್ತದೆ.

## English Translation

The intelligent Soma proceeds to the eastern quarter; (your) beautiful chariot, (your) celestial beautiful chariot meets the sun's rays: the manly praises advance to Indra and simulate him to victory: (his) thunderbolt too (advances to him); so that you are invincible, invincible in battle,



## ನೂರ ಹನ್ನೆರಡನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ನಾನಾನಮಿತಿ ಚತುರ್ಋಚಂ ನವಮಂ ಸೂಕ್ತಮಾಂಗಿರಸಸ್ಯ ಶಿಶುನಾಮ್ನ ಆರ್ಷಂ । ಪಂಚಪದಾ ಪಂಕ್ತಿಶ್ಛಂದಃ । ಪವಮಾನಃ ಸೋಮೋ ದೇವತಾ । ತಥಾ ಚಾನುಕ್ರಾಂತಂ । ನಾನಾನಂ ಚತುಷ್ಕಂ ಶಿಶುಃ ಪಾಂಕ್ತಂ ಹೀತಿ । ಗತೋ ವಿನಿಯೋಗಃ ॥**

ಅನುವಾದವು—**ನಾನಾನಂ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಶಿಶುಃ ಆಂಗಿರಸಃ ಎಂಬುವನು ಋಷಿಯು; ಪವಮಾನಸೋಮನು ದೇವತೆಯು; ಪಂಚಪದಾ ಪಂಕ್ತಿಃ ಎಂಬುದು ಛಂದಸ್ಸು. ಅನುಕ್ರಮಣಿಕೆಯಲ್ಲಿ—ನಾನಾನಂ **ಚತುಷ್ಕಂ ಶಿಶುಃ ಪಾಂಕ್ತಂ** ಹಿ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೧೧೨

ಮಂಡಲ—೯ । ಅನುವಾಕ—೭ । ಸೂಕ್ತ—೧೧೨ ॥
ಅಷ್ಟಕ—೭ । ಅಧ್ಯಾಯ—೫ । ವರ್ಗ—೨೫ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ।
ಋಷಿಃ—ಶಿಶುಃ ॥
ದೇವತಾ—ಪವಮಾನಃ ಸೋಮಃ ।
ಛಂದಃ—ಪಂಕ್ತಿಃ ॥

। ಸಂಹಿತಾಪಾಠಃ ।

ನಾನಾನಂ ವಾ ಉ ನೋ ಧಿಯೋ ವಿ ವ್ರತಾನಿ ಜನಾನಾಂ ।
ತಕ್ಷಾ ರಿಷ್ಟಂ ರುತಂ ಭಿಷಗ್ಬ್ರಹ್ಮಾ ಸುನ್ವಂತಮಿಚ್ಛತೀಂದ್ರಾಯೇಂದೋ ಪರಿ ಸ್ರವ ॥ ೧ ॥

॥ ಪದಪಾಠಃ ॥

ನಾನಾನಂ । ವೈ । ಊಂ ಇತಿ । ನಃ । ಧಿಯಃ । ವಿ । ವ್ರತಾನಿ । ಜನಾನಾಂ ।

ತಕ್ಷಾ । ರಿಷ್ಟಂ । ರುತಂ । ಭಿಷಕ್ । ಬ್ರಹ್ಮಾ । ಸುನ್ವಂತಂ । ಇಚ್ಛತಿ । ಇಂದ್ರಾಯ । ಇಂದೋ ಇತಿ ।

ಪರಿ । ಸ್ರವ । ೧ ॥

೧ ॥

ಋಷಿರೇತದಾದಿಭಿಸ್ತ್ರಿಭಿಃ ಸೂಕ್ತೈರಪರಿಸ್ರವತಃ ಸೋಮಸ್ಯಾಜ್ಞಾಮಿತ್ಯಾಯ ಮನಸೋ ವಿನೋದನಂ ಕುರ್ವನ್ನಾಹ । ಹೇ ಸೋಮ ನೋಽಸ್ಮಾಕಂ ಧಿಯಃ ಕರ್ಮಾಣಿ ನಾನಾನಂ ನಾನಾಜಾತೀಯಕಾನಿ ಬಹೂನಿ ಭವಂತಿ । ವೈಶಬ್ದಃ ಪ್ರಸಿದ್ಧ್ಯರ್ಥದ್ಯೋತನಾರ್ಥಃ । ಉ ಇತಿ ಪೂರಣಃ । ತಥಾನ್ಯೇಷಾಮಪಿ ಜನಾನಾಂ ವ್ರತಾನಿ ಕರ್ಮಾಣಿ ವಿವಿಧಾನಿ ಭವಂತಿ । ತಕ್ಷಾ ತ್ವಷ್ಟಾ ರಿಷ್ಟಂ ದಾರುತಕ್ಷಣಮಿಚ್ಛತಿ । ತಥಾ ಭಿಷಗ್ವೈದ್ಯಶ್ಚಿಕಿತ್ಸಕೋ ರುತಂ ರೋಗಮಿಚ್ಛತಿ । ಬ್ರಹ್ಮಾ ಬ್ರಾಹ್ಮಣಃ ಸುನ್ವಂತಂ ಸೋಮಾಭಿಷವಂ ಕುರ್ವಂತಂ ಯಜಮಾನಮಿಚ್ಛತಿ । ತಥಾಹಂ ತ್ವತ್ಪರಿಸ್ರವಣಮಿಚ್ಛಾಮಿ । ತಸ್ಮಾದ್ಧೇ ಇಂದೋ ಸೋಮೇಂದ್ರಾಯೇಂದ್ರಾರ್ಥಂ ಪರಿ ಸ್ರವ । ಪರಿತಃ ಕ್ಷರ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ನಃ**—ನಮ್ಮ । **ಧಿಯಃ**—ಕರ್ಮಗಳು । **ನಾನಾನಂ**—ಅನೇಕ ಬಗೆಯುವಾಗಿವೆ । **ಜನಾನಾಂ**—ಮಾನವರ । **ವ್ರತಾನಿ**—ಕರ್ಮಗಳು । **ವಿ**—ಅನೇಕವಿಧವಾಗಿವೆ । **ತಕ್ಷಾ**—ಮರಗೆಲಸದವನು । **ರಿಷ್ಟಂ**—ಮರಗೆಲಸವನ್ನು । **ಇಚ್ಛತಿ**—ಅಪೇಕ್ಷಿಸುತ್ತಾನೆ । **ಭಿಷಕ್**—ವೈದ್ಯನು । **ರುತಂ**—ರೋಗವನ್ನಿಚ್ಛಿಸುತ್ತಾನೆ । **ಬ್ರಹ್ಮಾ**—ಬ್ರಾಹ್ಮಣನು । **ಸುನ್ವಂತಂ**—ಸೋಮವನ್ನು ಹಿಂಡತಕ್ಕ ಯಜ್ಞಕರ್ತೃವನ್ನು ಇಚ್ಛಿಸುತ್ತಾನೆ । **ಇಂದೋ**—ಎಲೈ ಸೋಮದೇವನೇ । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಸ್ರವಿಸು

॥ ಭಾವಾರ್ಥ ॥

ಎಲೈ ಸೋಮದೇವನೇ, ನಮ್ಮ ಕರ್ಮಗಳು ಅನೇಕಬಗೆಯುವಾಗಿವೆ. ಮಾನವರ ಕರ್ಮಗಳು ಅನೇಕವಿಧವಾಗಿವೆ. ಮರಗೆಲಸದವನು ಮರಗೆಲಸವನ್ನು ಅಪೇಕ್ಷಿಸುತ್ತಾನೆ. ವೈದ್ಯನು ರೋಗವನ್ನಿಚ್ಛಿಸುತ್ತಾನೆ. ಬ್ರಾಹ್ಮಣನು ಸೋಮವನ್ನು ಹಿಂಡತಕ್ಕವನನ್ನು ಇಚ್ಛಿಸುತ್ತಾನೆ. ಎಲೈ ಸೋಮದೇವನೇ, ಇಂದ್ರನ ಪಾನಾರ್ಥವಾಗಿ ಸ್ರವಿಸು.

## English Translation

Various are our acts, (various) are the occupations of men; the carpenter desires timber, the physician disease, the Brahman a worshipper who effuse Soma: flow, Indu, for Indra.

ಸಂಹಿತಾಪಾಠಃ

ಜರತೀಭಿರೋಷಧೀಭಿಃ ಪರ್ಣೇಭಿಃ ಶಕುನಾನಾಂ ।

ಕಾರ್ಮಾರೋ ಅಶ್ಮಭಿರ್ದ್ಯುಭಿರ್ಹಿರಣ್ಯವಂತಮಿಚ್ಛತೀಂದ್ರಾಯೇಂದೋ ಪರಿ ಸ್ರವ ॥ ೨ ॥

॥ ಪದಪಾಠಃ ॥

ಜರತೀಭಿಃ । ಓಷಧೀಭಿಃ । ಪರ್ಣೇಭಿಃ । ಶಕುನಾನಾಂ ।

ಕಾರ್ಮಾರಃ । ಅಶ್ಮಽಭಿಃ ದ್ಯುಽಭಿಃ । ಹಿರಣ್ಯಽವಂತಂ । ಇಚ್ಛತಿ । ಇಂದ್ರಾಯ । ಇಂದೋ ಇತಿ ।

ಪರಿ । ಸ್ರವ ॥ ೨ ॥

॥ ಸಾಯಣಭಾಷ್ಯಂ ॥

ಜರತೀಭಿರ್ಜೀರ್ಣಾಭಿರೋಷಧೀಭಿರಿಷವಃ ಕ್ರಿಯಂತೇ ತಥಾ ಶಕುನಾನಾಂ ಪರ್ಣೇಭಿರಿಷೂಣಾಂ ಪಕ್ಷಭೂತೈಃ ಪರ್ಣೈಶ್ಚ ಕ್ರಿಯಂತೇ ತಥಾ ದ್ಯುಭಿರ್ದೀಪ್ತಾಭಿರಿಷೂಣಾಂ ತೇಜನಾರ್ಥಾಭಿರಶ್ಮಭಿಃ ಶಿಲಾಭಿಶ್ಚ ಕ್ರಿಯಂತೇ । ಏತೈಃ ಕಾರ್ಮಾರೋಽಯಸ್ಕಾರೋ ಹಿರಣ್ಯವಂತಮಾಢ್ಯಂ ಪುರುಷಮಿಚ್ಛತಿ । ತಥಾಹಂ ತ್ವತ್ಪರಿಸ್ರವಣಮಿಚ್ಛಾಮಿ । ತಸ್ಮಾದಿಂದೋ ಇಂದ್ರಾಯ ಪರಿ ಸ್ರವ ॥

॥ ಪ್ರತಿಪದಾರ್ಥ ॥

**ಜರತೀಭಿಃ**—ಜೀರ್ಣಗಳಾದ । **ಓಷಧೀಭಿಃ**—ಓಷಧಿಗಳಿಂದ । **ಇಷವಃ**—ಬಾಣಗಳು ನಿರ್ಮಿತವಾಗುತ್ತವೆ । **ಶಕುನಾನಾಂ**—ಪಕ್ಷಿಗಳ । **ಪರ್ಣೇಭಿಃ**—ಗರಿಗಳಿಂದ ಬಾಣಗಳ ಗರಿಗಳು ಮಾಡಲ್ಪಡುತ್ತವೆ । **ದ್ಯುಭಿಃ**—ಪ್ರಕಾಶಮಾನಗಳಾದ । **ಅಶ್ಮಭಿಃ**—ಶಿಲೆಗಳಿಂದಲೂ ಮಾಡಲ್ಪಡುತ್ತವೆ । **ಕಾರ್ಮಾರಃ**—ಅಕ್ಕಸಾಲೆಯು (ಅಥವಾ ಬಡಗಿಯು) । **ಹಿರಣ್ಯವಂತಂ**—ಐಶ್ವರ್ಯವಂತನನ್ನು । **ಇಚ್ಛತಿ**—ಅಪೇಕ್ಷಿಸುತ್ತಾನೆ । **ಇಂದೋ**—ಎಲೈ ಸೋಮ ದೇವನೇ । **ಇಂದ್ರಾಯ**—ಇಂದ್ರಾರ್ಥವಾಗಿ । **ಪರಿ ಸ್ರವ**—ಪ್ರವಹಿಸು.

॥ ಭಾವಾರ್ಥ ॥

ಒಣಗಿದ ಕಡ್ಡಿಗಳಿಂದ ಬಾಣಗಳು ನಿರ್ಮಿತವಾಗುತ್ತವೆ. ಪಕ್ಷಿಗಳ ಗರಿಗಳಿಂದ ಬಾಣಗಳ ಗರಿಗಳು ಮಾಡಲ್ಪಡುತ್ತವೆ. ಪ್ರಕಾಶಮಾನಗಳಾದ ಶಿಲೆಗಳಿಂದಲೂ ಮಾಡಲ್ಪಡುತ್ತವೆ ಅಕ್ಕಸಾಲೆಯೂ ಮತ್ತು ಬಡಗಿಯೂ ಐಶ್ವರ್ಯವಂತನನ್ನು ಅಪೇಕ್ಷಿಸುತ್ತಾರೆ. ಎಲೈ ಸೋಮದೇವನೇ, ಇಂದ್ರಾರ್ಥವಾಗಿ ಪ್ರವಹಿಸು.

## English Translation

With dried plants (are arrows made), with the feathers of birds (and) with glistening stones; the smith seeks a man who has gold: flow, Indu, for Indra.

॥ ಸಂಹಿತಾಪಾಠಃ ॥

ಕಾರುರಹಂ ತತೋ ಭಿಷಗುಪಲಪ್ರಕ್ಷಿಣೀ ನನಾ ।

ನಾನಾಧಿಯೋ ವಸೂಯವೋಽನು ಗಾ ಇವ ತಸ್ಥಿಮೇಂದ್ರಾಯೇಂದೋ

ಪರಿ ಸ್ರವ ॥ ೩ ॥

॥ ಪದಪಾಠಃ ॥

ಕಾರುಃ । ಅಹಂ । ತತಃ । ಭಿಷಕ್ । ಉಪಲಽಪ್ರಕ್ಷಿಣೀ । ನನಾ ।

ನಾನಾಽಧಿಯಃ । ವಸುಽಯವಃ । ಅನು । ಗಾಃಽಇವ । ತಸ್ಥಿಮ । ಇಂದ್ರಾಯ । ಇಂದೋ ಇತಿ ।

ಪರಿ । ಸ್ರವ ॥ ೩ ॥

॥ ಸಾಯಣಭಾಷ್ಯಂ ॥

ಋಷಿಃ ಪ್ರವೃತ್ತಸೋಮಯಾಗಃ ಸನ್ ದಶಾಪವಿತ್ರಾತ್ಸೋಮೇ ಕ್ಷರತಿ ಪ್ರತಿಬಂಧಕಪಾಪಾಪನುತ್ತಯೇ ಪುರಶ್ಚರಿತಾನುಕೀರ್ತನಪುರಃಸರಮುದ್ಘೋಷಣಾಂ ಚಕಾರ । ತಾವದಹಂ ಕಾರುಃ ಸ್ತೋಮಾನಾಂ ಕರ್ತಾಸ್ಮಿ । ತತ ಇತಿ ಸಂತಾನನಾಮ । ತನ್ಯತೇಽಸ್ಮಾದಿತಿ ತತಃ ಪಿತಾ । ತನ್ಯತೇಽಸಾವಿತಿ ವಾ ತತಃ ಪುತ್ರಃ । ಭಿಷಗ್ಭೇಷಜಕೃತ್ । ಯಜ್ಞಸ್ಯ ಬ್ರಹ್ಮೇತ್ಯರ್ಥಃ । ಸರ್ವಂ ತ್ರಯ್ಯಾ ವಿದ್ಯಯಾ ಭಿಷಜ್ಯತೀತಿ ಶ್ರುತೇಃ । ತತೋಽಪಲಪ್ರಕ್ಷಿಣೀ । ಉಪಲೇಷು ವಾಲುಕಾಸು ಪ್ರಕ್ಷಿಣೋತಿ ಯವಾನ್ನಿತಿ ಭೃಜ್ಜತೀತಿ । ಯದ್ವಾ । ದೃಷದಾದಿಷೂಪಲೇಷು ಭೃಷ್ಟಾನ್ಯವಾನ್ನಿತಿ ಚೂರ್ಣಯತೀತಿ । ಅಥವಾ ಧಾನಾಸಕ್ತುಕರಂಭಾದೀನಾಂ ಕಾರಿಕಾ ವಾ । ಅಸೌ ನನಾ ಮಾತಾ ದುಹಿತಾ ವಾ ನಮನಕ್ರಿಯಾಯೋಗ್ಯತ್ವಾತ್ । ಮಾತಾ ಖಲ್ವಪತ್ಯಂ ಪ್ರತಿ ಸ್ತನಪಾನಾದಿನಾ ನಮನಶೀಲಾ ಭವತಿ । ದುಹಿತಾ ವಾ ಶುಶ್ರೂಷಾರ್ಥಂ । ಏವಂ ಸರ್ವೇಷಾಂ ಪರಿಚರಣೇನ ನಾನಾಧಿಯೋ ನಾನಾಕರ್ಮಾಣೋ ವಸೂಯವೋ ಧನಕಾಮಾ ವಯಮನು ತಸ್ಥಿಮ । ಲೋಕಮನ್ವಾಸ್ಥಿತಾಃ ಸ್ಮಃ । ತತ್ರ ದೃಷ್ಟಾಂತಃ । ಗಾ ಇವ ॥ ಛಾಂದಸೋ ಜಸಃ ಶಸಾದೇಶಃ ॥ ಗಾವೋ ಯಥಾ ಗೋಷ್ಠಮನುತಿಷ್ಠಂತಿ ಸ್ವಪಯಃಪ್ರದಾನೇನ ಪರಿಚರಂತಿ ವಾ ಏವಂ ವಯಮಪಿ ಪರಿಚರಾಮಃ । ಏತಜ್ಜ್ಞಾತ್ವಾ ಹೇ ಇಂದೋ ಸೋಮ ಇಂದ್ರಾಯ ಪರಿ ಸ್ರವ । ದಶಾಪವಿತ್ರಾತ್ ಕ್ಷರ । ಏವಮೇಷಾಘೋಷಣಾ ಸತ್ಕಾರಪೂರ್ವಿಕಾ ವ್ಯಾಪಾರಣಾ । ಅತ್ರ ನಿರುಕ್ತಂ । ಉಪಲಪ್ರಕ್ಷಿಣೀತ್ಯುಪಲೇಷು ಪ್ರಕ್ಷಿಣಾತ್ಯುಪಲಪ್ರಕ್ಷೇಪಿಣೀ ವಾ । ಕಾರುರಹಮಸ್ಮಿ ಕರ್ತಾ ಸ್ತೋಮಾನಾಂ ತತೋ ಭಿಷಕ್ ತತ ಇತಿ ಸಂತಾನನಾಮ ಪಿತುರ್ವಾ ಪುತ್ರಸ್ಯ ವಾ । ಉಪಲಪ್ರಕ್ಷಿಣೀ ಸಕ್ತುಕಾರಿಕಾ ನನಾ ನಮತೇರ್ಮಾತಾ ವಾ ದುಹಿತಾ ವಾ । ನಾನಾಧಿಯೋ ನಾನಾಕರ್ಮಾಣೋ ವಸೂಯವೋ ವಸುಕಾಮಾ ಅನ್ವಾಸ್ಥಿತಾಃ ಸ್ಮೋ ಗಾವ ಇವ ಲೋಕಂ । ೬. ೬.೫ । ಇತಿ ॥

॥ ಪ್ರತಿಪದಾರ್ಥ ॥

ಅಹಂ—ನಾನು । ಕಾರುಃ—ಸ್ತುತಿಕರ್ತನಾಗಿದ್ದೇನೆ । ತತಃ—ನನ್ನ ಪಿತೃವು । ಭಿಷಕ್—ವೈದ್ಯನಾಗಿದ್ದಾನೆ । ನನಾ—ನಮ್ಮ ತಾಯಿಯು । ಉಪಲಪ್ರಕ್ಷಿಣೀ—ಬೀಸುವ ಕಲ್ಲಿನಲ್ಲಿ ಬೀಸಲು ಕಾಳನ್ನು ಹಾಕಿ ಬೀಸುತ್ತಾಳೆ । ಗಾಃ ಇವ—ಗೋವುಗಳು ಕೊಟ್ಟಿಗೆಯನ್ನಾಶ್ರಯಿಸಿರುವಂತೆ । ನಾನಾಧಿಯಃ—ಅನೇಕವಿಧವಾದ ಕರ್ಮವುಳ್ಳವರೂ । ವಸೂಯವಃ—ಧನಾಪೇಕ್ಷಿಗಳೂ ಆದ ನಾವು । ಅನು ತಸ್ಥಿಮ—ಲೋಕದಲ್ಲಿ ಸ್ಥಿತಿಯನ್ನು ಹೊಂದಿದ್ದೇವೆ । ಇಂದೋ—ಎಲೈ ಸೋಮನೇ । ಇಂದ್ರಾಯ—ಇಂದ್ರಾರ್ಥವಾಗಿ । ಪರಿ ಸ್ರವ ಪ್ರವಹಿಸು.

॥ ಭಾವಾರ್ಥ ॥

ನಾನು ಸ್ತುತಿಕರ್ತನಾಗಿದ್ದೇನೆ. ನನ್ನ ಪಿತೃವು ವೈದ್ಯನಾಗಿದ್ದಾನೆ. ನಮ್ಮ ತಾಯಿಯು ಬೀಸುವ ಕಲ್ಲಿನಲ್ಲಿ ಬೀಸಲು ಕಾಳನ್ನು ಹಾಕಿ ಬೀಸುತ್ತಾಳೆ. ಗೋವುಗಳು ಕೊಟ್ಟಿಗೆಯನ್ನಾಶ್ರಯಿಸಿರುವಂತೆ ಅನೇಕ ವಿಧವಾದ ಕರ್ಮವುಳ್ಳವರೂ, ಧನಾಪೇಕ್ಷಿಗಳೂ ಆದ ನಾವು ಈ ಲೋಕದಲ್ಲಿ ನಾನಾವಿಧವಾದ ಸ್ಥಿತಿಯನ್ನು ಹೊಂದಿದ್ದೇವೆ. ಎಲೈ ಸೋಮನೇ, ಇಂದ್ರಾರ್ಥವಾಗಿ ಪ್ರವಹಿಸು.

English Translation

I am the singer ; father is the physician, mother throws the corn upon the grinding stones; having various occupations, desiring riches we remain (in the world) like cattle (in the stalls): flow, Indu, for Indra.

॥ ವಿಶೇಷವಿಷಯಗಳು ॥

ಈ ಸೂಕ್ತದ ಪ್ರಾರಂಭದಲ್ಲಿ ಭಾಷ್ಯಕಾರರು—ಋಷಿರೇತದಾದಿಭಿಸ್ತ್ರಿಭಿಃ ಸೂಕ್ತೈಃ ಅಪರಿಸ್ರವತಃ ಸೋಮಸ್ಯಾಜಾಮಿತ್ವಾಯ ಮನಸೋ ವಿನೋದನಂ ಕುರ್ವನ್ನಾಹ ಎಂದು ಹೇಳಿದಾರೆ. ಈ ಸೂಕ್ತ ದ್ರಷ್ಟ್ರುವಾದ ಶಿಶುಋಷಿಯು ಯಜ್ಞಮಾಡುತ್ತಿರುವಾಗ ಸೋಮಾಭಿಷವಕಾಲದಲ್ಲಿ ಸೋಮಲತೆಗಳನ್ನು ಜಜ್ಜುತ್ತಿದ್ದರೂ ಸೋಮರಸವು ಸರಿಯಾಗಿ ಜಿನುಗದೆ ಹರಿದು ಬರದಿರುವುದನ್ನು ಗಮನಿಸಿ—ಸ್ವದುಷ್ಕೃತಾಶಂಕಯಾ ಶಿಲಾಪರಿಸ್ರವತಿ ಸೋಮೇ ಪಾಪಸಂಕೀರ್ತನಾದಾತ್ಮಶುದ್ಧಿರ್ಭವಿಷ್ಯತೀತಿ ಮನ್ಯಮಾನ ಆತ್ಮಾನಮೇವ ನಿರ್ದಿಶನ್ನಾಹ—ನಾನು ಮಾಡಿರುವ ಪಾಪಗಳಿಂದ ಈ ರೀತಿ ಸೋಮವು ಲತೆಗಳಿಂದ ಹೊರ ಹೊರಡುತ್ತಿಲ್ಲ. ಆದ್ದರಿಂದ ನನ್ನ ಪಾಪಗಳನ್ನು ನಾನು ಮತ್ತು ನನಗೆ ಸಂಬಂಧಪಟ್ಟವರು ಮಾಡುತ್ತಿರುವ ಕರ್ಮಗಳನ್ನು ಸ್ಪಷ್ಟವಾಗಿ ಇತರರಿಗೆ ಕೇಳಿಸುವಂತೆ ಹೇಳಿದಲ್ಲಿ ಆ ಪಾಪವು ಶಮನವಾಗುವುದೆಂದು ತಿಳಿದು ತನ್ನ ಮತ್ತು ತನ್ನ ಪಿತೃವೇ ಮೊದಲಾದವರ ಕಾರ್ಯಕಲಾಪಗಳನ್ನು ಈ ಸೂಕ್ತದ ಋಕ್ಕುಗಳಲ್ಲಿ ವಿವರಿಸಿದ್ದಾನೆ.

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

**ಕಾರುರಹಮಸ್ಮಿ ಕರ್ತಾ ಸ್ತೋಮಾನಾಂ । ತತೋ ಭಿಷಕ್ ತತ ಇತಿ ಸಂತಾನನಾಮ ಪಿತುರ್ವಾ ಪುತ್ರಸ್ಯ ವಾ । ಉಪಲಪ್ರಕ್ಷಿಣೀ ಸಕ್ತುಕಾರಿಕಾ । ನನಾ ನಮತೇರ್ಮಾತಾ ವಾ ದುಹಿತಾ ವಾ। ನಾನಾಧಿಯೋ ನಾನಾಕರ್ಮಾಣೋ ವಸೂಯವೋ ವಸುಕಾಮಾ ಅನ್ವಾಸ್ಥಿತಾಃ ಸ್ಮೋ ಗಾವ ಇವ ಲೋಕಂ । ಇಂದ್ರಾಯೇಂದೋ ಪರಿ ಸ್ರವ ಇತ್ಯಧ್ಯೇಷಣಾ ॥** (ನಿ. ೬–೫)

ಎಂದರೆ ನಾನು ಸ್ತುತಿಕರ್ತನು, ಸ್ತುತಿವಾಕ್ಯಗಳನ್ನು ರಚಿಸಿ ದೇವತೆಗಳ ಪ್ರೀತ್ಯರ್ಥವಾಗಿ ಅರ್ಪಿಸುವವನು; ನನ್ನ ತಂದೆಯು ರೋಗಚಿಕಿತ್ಸೆಮಾಡುವ ವೈದ್ಯನು. ಇಲ್ಲಿ ತತಃ ಎಂಬ ಶಬ್ದವು ಸಂತತಿಯನ್ನು ನಿರ್ದೇಶಿಸುವುದರಿಂದ ಈ ಶಬ್ದಕ್ಕೆ ತಂದೆ ಅಥವಾ ಪುತ್ರನೆಂದು ಅರ್ಥವಾಗಬಹುದು. ಭಿಷಕ್ ಶಬ್ದಕ್ಕೆ ಭಾಷ್ಯಕಾರರು ಮತ್ತು ನಿರುಕ್ತ ಭಾಷ್ಯಕಾರರೂ ವೈದ್ಯನೆಂಬ ಅರ್ಥವನ್ನು ಬಿಟ್ಟು ಬೇರೆ ವಿಧವಾಗಿ ಅರ್ಥವಿವರಣೆಮಾಡಿದ್ದಾರೆ. ಇಲ್ಲಿ ರೋಗಗಳೆಂದರೆ ಯಜ್ಞಾದಿಗಳಲ್ಲಿ ಸಂಭವಿಸುವ ಲೋಪದೋಷಗಳೆಂದೂ ಅವುಗಳನ್ನು ಪ್ರಾಯಶ್ಚಿತ್ತಾದಿಗಳಿಂದ ಸರಿಪಡಿಸುವ ಬ್ರಹ್ಮನೆಂಬ ಋತ್ವಿಜನೇ ವೈದ್ಯನೆಂದೂ ವಿವರಣೆಮಾಡಿದಾರೆ. ನನಾ ಶಬ್ದಕ್ಕೂ ಎರಡುವಿಧ ಅರ್ಥವಿರುವುದು. ತಾಯಿ ಮತ್ತು ಮಗಳು ಎಂದು. ನಮಸ್ಕಾರಮಾಡುವುದಕ್ಕೆ ಯೋಗ್ಯಳಾಗಿರುವುದರಿಂದ ತಾಯಿಯೆಂದೂ, ತನ್ನನ್ನೇ ನಮಸ್ಕಾರ ಮಾಡುವವಳಾದ್ದರಿಂದ ಮಗಳೆಂದೂ ಎರಡುವಿಧವಾಗಿ ಅರ್ಥಮಾಡಬಹುದು. ಆದ್ದರಿಂದ ನನಾ ಎಂದರೆ ನನ್ನ ತಾಯಿ ಅಥವಾ ಪುತ್ರಿಯು ಬೀಸುವ ಕಲ್ಲಿನಿಂದ ಹಿಟ್ಟನ್ನು ಬೀಸುತ್ತಿರುವಳು. ಆದ್ದರಿಂದ ನಮ್ಮ ಮನೆಯವರೆಲ್ಲರೂ ಯಜ್ಞಾರ್ಥವಾಗಿ ನಾನಾ ಕಾರ್ಯಗಳಲ್ಲಿ ತೊಡಗಿರುವೆವು. ಮತ್ತು ಧನಾಪೇಕ್ಷಿಗಳಾದ ನಾವು, ಗೋವುಗಳು ತಮ್ಮ ಕೊಟ್ಟಿಗೆಗಳಿಗೆ ಯಾವರೀತಿ ಹೋಗುತ್ತವೆಯೋ ಹಾಗೆ ನಮ್ಮ ನಮ್ಮ ಕರ್ತವ್ಯಕರ್ಮಗಳಲ್ಲಿ ನಿರತರಾಗಿರುತ್ತೇವೆ. ಆದ್ದರಿಂದ ಎಲೈ ಸೋಮನೇ, ಇಂದ್ರನ ಪಾನಾರ್ಥವಾಗಿ ಲತೆಗಳಿಂದ ಬೇಗನೆ ಸ್ರವಿಸಿ ಹರಿದು ಬಾ ಎಂದು ನಿರ್ಗಳಿತಾಭಿಪ್ರಾಯವು

॥ ಸಂಹಿತಾಪಾಠಃ ॥

ಅಶ್ವೋ ವೋಳ್ಹಾ ಸುಖಂ ರಥಂ ಹಸನಾಮುಪಮಂತ್ರಿಣಃ ।
ಶೇಪೋ ರೋಮಣ್ವಂತೌ ಭೇದೌ ವಾರಿನ್ಮಂಡೂಕ ಇಚ್ಛತೀಂದ್ರಾ-
ಯೇಂದೋ ಪರಿ ಸ್ರವ ॥ ೪ ॥

॥ ಪದಪಾಠಃ ॥

ಅಶ್ವಃ । ವೋಳ್ಹಾ । ಸುऽಖಂ । ರಥಂ । ಹಸನಾಂ । ಉಪऽಮಂತ್ರಿಣಃ ।
ಶೇಪಃ । ರೋಮಣ್ऽವಂತೌ । ಭೇದೌ । ವಾಃ । ಇತ್ । ಮಂಡೂಕಃ । ಇಚ್ಛತಿ । ಇಂದ್ರಾಯ ।
ಇಂದೋ ಇತಿ । ಪರಿ । ಸ್ರವ ॥ ೪ ॥

॥ ಸಾಯಣಭಾಷ್ಯಂ ॥

ವೋಳ್ಹಾ ಲಕ್ಷ್ಯಂ ದೇಶಂ ಪ್ರಾಪಯನ್ನಶ್ವಃ ಸುಖಂ ಕಲ್ಯಾಣಂ ರಥಮಿಚ್ಛತಿ । ಉಪಮಂತ್ರಿಣ ಉಪಮಂತ್ರಯಂತೋ ನರ್ಮಸಚಿವಾ ಹಸನಾಂ ಪರಿಹಸನಾಂ ವಾಚಮಿಚ್ಛಂತಿ । ತಥಾ ಶೇಪಃ । ಶೇಪೋ ವೈತಸ ಇತಿ ಪುಂಸ್ಪ್ರಜನನಸ್ಯೇತಿ । ಯಾಸ್ಕಃ । ನಿ. ೩-೨೧ । ಯಥಾ ಶೇಪೋ ರೋಮಣ್ವಂತೌ ಭೇದಾವಿಚ್ಛತಿ । ಮಂಡೂಕೋ ವಾರಿತ್ । ಇದವಧಾರಣೇ । ಉದಕಮೇವೇಚ್ಛತಿ । ತಥಾಹಂ ತ್ವತ್ಪರಿಸ್ರವಣಮಿಚ್ಛಾಮಿ । ತಸ್ಮಾದಿಂದ್ರಾಯೇಂದೋ ಪರಿ ಸ್ರವೇತಿ ॥

॥ ಪ್ರತಿಪದಾರ್ಥ ॥

**ವೋಳ್ಹಾ**—ಭಾರವನ್ನು ವಹಿಸಲು ಶಕ್ತಿಯುಳ್ಳ । **ಅಶ್ವಃ**—ಅಶ್ವವು । **ಸುಖಂ**—ಎಳೆಯಲು ಸುಖಕರವಾದ । —ರಥವನ್ನು । **ಇಚ್ಛತಿ**—ಅಪೇಕ್ಷಿಸುತ್ತದೆ । **ಉಪಮಂತ್ರಿಣಃ**—ನರ್ಮಸಚಿವರು । **ಹಸನಾಂ ಶೇಪಃ**—ಪೂರಿತವಾದ ವಾಕ್ಯವನ್ನು ಇಚ್ಛಿಸುತ್ತಾರೆ । **ಮಂಡೂಕಃ**-ಕಪ್ಪೆಯು । **ವಾಃ ಇತ್**—ನೀರನ್ನೇ ಅಪೇಕ್ಷಿಸುತ್ತದೆ। **ಇಂದೋ**—ಎಲೈ ಸೋಮನೇ । **ಇಂದ್ರಾಯ** ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಪ್ರವಹಿಸು.

॥ ಭಾವಾರ್ಥ ॥

ಭಾರವನ್ನು ವಹಿಸಲು ಶಕ್ತಿಯುಳ್ಳ ಅಶ್ವವು ಎಳೆಯಲು ಸುಖಕರವಾದ ರಥವನ್ನು ಅಪೇಕ್ಷಿಸುತ್ತದೆ. ನರ್ಮಸಚಿವರು ಹಾಸ್ಯಪೂರಿತವಾದ ವಾಕ್ಯವನ್ನು ಇಚ್ಛಿಸುತ್ತಾರೆ. ಕಪ್ಪೆಯು ನೀರನ್ನೇ ಅಪೇಕ್ಷಿಸುತ್ತದೆ. ಎಲೈ ಸೋಮನೇ ಇಂದ್ರನ ಪಾನಾರ್ಥವಾಗಿ ಪ್ರವಹಿಸು.

English Translation

The draught horse (desires) a cart easy (to draw); those who invite guests (desire) merriment; the frog desires water: flow, Indu, for Indra.

## ನೂರ ಹದಿಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಶರ್ಯಣಾವತೀತ್ಯೇಕಾದಶರ್ಚಂ ದಶಮಂ ಸೂಕ್ತಂ ಮಾರೀಚಸ್ಯ ಕಶ್ಯಪಸ್ಯಾರ್ಷಂ । ಪೂರ್ವಾತ್ರ್ಯೃಕ್ತ್ರ್ಯಾದಿದಮುತ್ತರಂ ಚ ಪಾಂಕ್ತಂ । ಪವಮಾನಸೋಮದೇವತಾಕಂ । ತಥಾ ಚಾನುಕ್ರಮ್ಯತೇ । ಶರ್ಯಣಾವತ್ಯೇಕಾದಶ ಕಶ್ಯಪ ಇತಿ ॥ ಗತೋ ವಿನಿಯೋಗಃ ॥**

ಅನುವಾದವು. **ಶರ್ಯಣಾವತಿ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಮರೀಚ ಋಷಿಯ ಪುತ್ರನಾದ ಕಶ್ಯನೆಂಬುವನು ಋಷಿಯು; ಈ ಸೂಕ್ತವೂ ಇದರ ಮುಂದಿನ ಸೂಕ್ತವೂ ಪಂಕ್ತಿಶ್ಛಂದಸ್ಕವು. ಪವಮಾನಸೋಮನು ದೇವತೆಯು. ಅನುಕ್ರಮಣಿಕೆಯಲ್ಲಿ—**ಶರ್ಯಣಾವತ್ಯೇಕಾದಶ ಕಶ್ಯಪಃ** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೧೧೩

ಮಂಡಲ—೯ ॥ ಅನುವಾಕ—೭ ॥ ಸೂಕ್ತ—೧೧೩ ॥
ಅಷ್ಟಕ—೭ ॥ ಅಧ್ಯಾಯ—೫ ॥ ವರ್ಗ—೨೬, ೨೭ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ—ಕಶ್ಯಪಃ ॥
ದೇವತಾ—ಪವಮಾನಃ ಸೋಮಃ ॥
ಛಂದಃ—ಪಂಕ್ತಿಃ ॥

॥ ಸಂಹಿತಾಪಾಠಃ ॥

ಶರ್ಯಣಾವತಿ ಸೋಮಮಿಂದ್ರಃ ಪಿಬತು ವೃತ್ರಹಾ ।

ಬಲಂ ದಧಾನ ಆತ್ಮನಿ ಕರಿಷ್ಯನ್ವೀರ್ಯಂ ಮಹದಿಂದ್ರಾಯೇಂದೋ ಪರಿ ಸ್ರವ ॥ ೧ ॥

॥ ಪದಪಾಠಃ ॥

ಶರ್ಯಣಾऽವತಿ । ಸೋಮಂ । ಇಂದ್ರಃ । ಪಿಬತು । ವೃತ್ರಽಹಾ ।

ಬಲಂ । ದಧಾನಃ । ಆತ್ಮನಿ । ಕರಿಷ್ಯನ್ । ವೀರ್ಯಂ । ಮಹತ್ । ಇಂದ್ರಾಯ । ಇಂದೋ ಇತಿ । ಪರಿ । ಸ್ರವ ॥ ೧ ॥

॥ ಸಾಯಣಭಾಷ್ಯಂ ॥

ಶರ್ಯಣಾವತಿ । ಶರ್ಯಣಾವನ್ನಾಮ ಕುರುಕ್ಷೇತ್ರಸ್ಯ ಜಘನಾರ್ಧೇ ಸರಃ । ತತ್ರ ಸ್ಥಿತಂ ಸೋಮಂ ವೃತ್ರಹೇಂದ್ರಃ ಪಿಬತು । ಕೀದೃಶಃ । ಆತ್ಮನಿ ಬಲಂ ದಧಾನೋ ಬಲಂ ನಿದಧಾನಃ ಅತ ಏವ ಮಹದ್ವೀರ್ಯಂ ಕರಿಷ್ಯಞ್ಛತ್ರೂನ್ಪ್ರತಿ । ತಸ್ಮಾದಿಂದ್ರಾಯೇಂದೋ ಪರಿ ಸ್ರವ ॥

॥ ಪ್ರತಿಪದಾರ್ಥ ॥

ಆತ್ಮನಿ—ತನ್ನಲ್ಲಿ । ಬಲಂ—ಶಕ್ತಿಯನ್ನು । ದಧಾನಃ—ಧರಿಸಿರುವವನೂ । ಮಹತ್—ಪ್ರಭೂತವಾದ । ವೀರ್ಯಂ—ಪರಾಕ್ರಮವನ್ನು । ಕರಿಷ್ಯನ್—ಶತ್ರುಗಳ ಮುಂದೆ ತೋರ್ಪಡಿಸುವವನೂ । ವೃತ್ರಹಾ—ಶತ್ರುನಾಶಕನೂ ಆದ । ಇಂದ್ರಃ—ಇಂದ್ರನು । ಶರ್ಯಣಾವತಿ—ಶರ್ಯಣಾವತ್ತೆಂಬ ಸರಸ್ಸಿನಲ್ಲಿ ಬೆಳೆದ । ಸೋಮಂ—ಸೋಮವನ್ನು । ಪಿಬತು—ಪಾನಮಾಡಲಿ । ಇಂದೋ—ಎಲೈ ಸೋಮನೇ । ಇಂದ್ರಾಯ—ಇಂದ್ರನ ಪಾನಾರ್ಥವಾಗಿ । ಪರಿ ಸ್ರವ—ಪ್ರವಹಿಸು.

॥ ಭಾವಾರ್ಥ ॥

ತನ್ನಲ್ಲಿ ಆತ್ಮಶಕ್ತಿಯನ್ನು ಹೊಂದಿರುವವನೂ, ಪ್ರಭೂತವಾದ ಪರಾಕ್ರಮವನ್ನು ಶತ್ರುಗಳಮುಂದೆ ಪ್ರದರ್ಶಿಸುವವನೂ, ಶತ್ರುನಾಶಕನೂ ಆದ ಇಂದ್ರನು ಶರ್ಯಣಾವತ್ತೆಂಬ ಸರಸ್ಸಿನಲ್ಲಿ ಬೆಳೆದ ಸೋಮವನ್ನು ಪಾನಮಾಡಲಿ. ಎಲೈ ಸೋಮನೇ, ಇಂದ್ರನ ಪಾನಾರ್ಥವಾಗಿ ಪ್ರವಹಿಸು.

## English Translation

Let Indra, the slayer of Vritra, quaff the Soma on the Sharyanavat infusing strength into himself, about to show great prowess : flow, Indu, for Indra.

॥ ವಿಶೇಷವಿಷಯಗಳು ॥

**ಶರ್ಯಣಾವತಿ**—ಶರ್ಯಣಾವತ್ ಎಂಬುದು ಕುರುಕ್ಷೇತ್ರದ ಸಮೀಪದಲ್ಲಿರುವ ಒಂದು ಸರೋವರದ ಹೆಸರು. ಈ ಸರೋವರದ ಸಮೀಪಪ್ರದೇಶಗಳಲ್ಲಿ ಸೋಮಲತೆಗಳು ಯಥೇಷ್ಟವಾಗಿ ಬೆಳೆಯುತ್ತಿದ್ದವೆಂಬ ಪ್ರತೀತಿ ಇದೆ. ಈ ಸರೋವರದ ಸಮೀಪದಲ್ಲಿ ದಧ್ಯಂಚಋಷಿಯ ಕುದುರೆಯ ಆಕಾರದ ಶಿರಸ್ಸು ಬಿದ್ದಿತ್ತೆಂಬ ಒಂದು ಇತಿಹಾಸವೂ ಹಿಂದೆ ಉಕ್ತವಾಗಿದೆ

॥ ಸಂಹಿತಾಪಾಠಃ ॥

ಆ ಪವಸ್ವ ದಿಶಾಂ ಪತ ಆರ್ಜೀಕಾತ್ಸೋಮ ಮೀಢ್ವಃ ।
ಋತವಾಕೇನ ಸತ್ಯೇನ ಶ್ರದ್ಧಯಾ ತಪಸಾ ಸುತ ಇಂದ್ರಾಯೇಂದೋ ಪರಿ ಸ್ರವ ॥ ೨ ॥

॥ ಪದಪಾಠಃ ॥

ಆ । ಪವಸ್ವ । ದಿಶಾಂ । ಪತೇ । ಆರ್ಜೀಕಾತ್ । ಸೋಮ । ಮೀಢ್ವಃ ।
ಋತsವಾಕೇನ । ಸತ್ಯೇನ । ಶ್ರದ್ಧಯಾ । ತಪಸಾ । ಸುತಃ । ಇಂದ್ರಾಯ । ಇಂದೋ ಇತಿ । ಪರಿ । ಸ್ರವ ॥

॥ ಸಾಯಣಭಾಷ್ಯಂ ॥

ಹೇ ದಿಶಾಂ ಪತೇ ಪ್ರಾಚ್ಯಾದೀನಾಂ ದಿಶಾಂ ಪ್ರಕಾಶಕತ್ವೇನ ಸ್ವಾಮಿನ್ ಹೇ ಮೀಢ್ವಃ ಕಾಮಾನಾಂ ಸೇಕ್ತರ್ಹೇ ಸೋಮ ಆರ್ಜೀಕಾತ್ । ಋಜೀಕಾಮದೂರಭವ ಆರ್ಜೀಕೋ ಜನಪದಃ । ತಸ್ಮಾದಾ ಪವಸ್ವ । ಅಸ್ಮದ್ಯಜ್ಞಂ ಪ್ರತ್ಯಾಗಚ್ಛ । ಗತ್ವಾ । ಆರ್ಜೀಕಾದೃಜೋರಕುಟಿಲಾತ್ಪವಿತ್ರಾತ್-ಕ್ಷರ । ಕೀದೃಶಃ । ಋತವಾಕೇನರ್ತಸ್ಯ ವಚನೇನ ಸತ್ಯೇನ । ಸತ್ಯರ್ತಯೋರಲ್ಪೋ ಭೇದೋ ದ್ರಷ್ಟವ್ಯಃ । ಶ್ರದ್ಧಯಾ ತಪಸಾ ಯುಕ್ತೈರ್ದೀಕ್ಷಿತೈಃ ಸುತೋಽಭಿಷುತಸ್ತ್ವಂ ಪವಸ್ವ ॥

॥ ಪ್ರತಿಪದಾರ್ಥ ॥

**ದಿಶಾಂ ಪತೇ**—ಸಕಲ ದಿಕ್ಕುಗಳಿಗೂ ಪಾಲಕನೂ । **ಮೀಢ್ವಃ**—ಕಾಮವರ್ಷಕನೂ ಆದ । **ಸೋಮ**—ಎಲೈ ಸೋಮದೇವನೇ । **ಸತ್ಯೇನ**—ಸತ್ಯಾತ್ಮಕವಾದ । **ಋತವಾಕೇನ**—ಸ್ತುತಿವಾಕ್ಯಗಳೊಡನೆ । **ಶ್ರದ್ಧಯಾ**—ಶ್ರದ್ಧೆಯಿಂದಲೂ । **ತಪಸಾ**—ತಪಸ್ಸಿನಿಂದಲೂ । **ಸುತಃ**—ಹಿಂಡಲ್ಪಟ್ಟ ನೀನು । **ಆರ್ಜೀಕಾತ್**—ಆರ್ಜೀಕ ದೇಶದಿಂದ । **ಆ ಪವಸ್ವ**—ಪ್ರವಹಿಸು । **ಇಂದೋ**—ಎಲೈ ಸೋಮನೇ । **ಇಂದ್ರಾಯ** ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಪ್ರವಹಿಸು.

॥ ಭಾವಾರ್ಥ ॥

ಸಕಲದಿಕ್ಕುಗಳಿಗೂ ಪಾಲಕನೂ, ಕಾಮವರ್ಷಕನೂ ಆದ ಎಲೈ ಸೋಮದೇವನೇ, ಸತ್ಯಾತ್ಮಕವಾದ ಸ್ತುತಿವಾಕ್ಯಗಳೊಡನೆ ಶ್ರದ್ಧೆಯಿಂದಲೂ, ತಪಸ್ಸಿನಿಂದಲೂ ಹಿಂಡಲ್ಪಟ್ಟ ನೀನು ಆರ್ಜೀಕದೇಶದಿಂದ ಪ್ರವಹಿಸು. ಎಲೈ ಸೋಮನೇ, ನೀನು ಇಂದ್ರನ ಪಾನಾರ್ಥವಾಗಿ ಪ್ರವಹಿಸು.

## English Translation

Soma, lord of the four regions, sprinkler ( of benefits ) flow from Arjika effused by a truthful man) with faith and devotion : flow, Indu, for Indra

॥ ವಿಶೇಷವಿಷಯಗಳು ॥

**ಆರ್ಜೀಕಾತ್—ಋಜೀಕನಾಮಾನಗೂರಭವ ಆರ್ಜೀಕೋ ಜನಪದಃ । ತಸ್ಮಾತ್ ।** ಋಜೀಕಾ ಎಂಬುದು ದೂರದಲ್ಲಿರುವ ಒಂದು ಜನಾಂಗದ ಹೆಸರು. ಆ ಜನರು ವಾಸಿಸುವ ಪ್ರದೇಶಕ್ಕೆ **ಆರ್ಜೀಕ** ವೆಂದು ಹೆಸರು. ಎಂದು ಭಾಷ್ಯಕಾರರ ಗಣನೆಯು. ಯಾಸ್ಕರು ನದಿಗಳ ವಿಷಯವನ್ನು ಚರ್ಚಿಸುವಾಗ **ಆರ್ಜೀಕೀಯಾಂ ವಿಪಾಡಿತ್ಯಾಹುಃ (ನಿ. ೯-೨೬) ಆರ್ಜೀಕೀ** ಎಂಬುದು ಒಂದು ನದಿಗೆ ಹೆಸರೆಂದೂ ಅದಕ್ಕೆ **ವಿಪಾಟ್** ಎಂಬ ಇನ್ನೊಂದು ಹೆಸರಿರುವುದೆಂದೂ ಹೇಳಿರುವರು. ಋಜೀಕವೆಂಬುದು ಒಂದು ಪರ್ವತ. ಅದರಲ್ಲಿ ಹುಟ್ಟಿ ಹರಿಯುವ ನದಿಗೆ ಆರ್ಜೀಕಾ ಎಂಬ ಹೆಸರು ಎಂದು ವಿವರಣೆ ಇದೆ. ಪಂಚಜನರ ದೇಶಗಳಾದ **ಆರ್ಜೀಕಾ ಪಸ್ತ್ಯಾವತ್, ಶರ್ಯಣಾವತ್ ಸುಷೋಮಾ** ಎಂಬ ಸ್ಥಳಗಳಲ್ಲಿ ಬೆಳೆಯುವ ಸೋಮಲತೆಗಳು ಉತ್ತಮವಾದವೆಂದೂ ಯಥೇಷ್ಟವಾಗಿ ದೊರಕುವುದೆಂದೂ ಪ್ರಸಿದ್ಧಿ ಇದೆ.

॥ ಸಂಹಿತಾಪಾಠಃ ॥

ಪರ್ಜನ್ಯವೃದ್ಧಂ ಮಹಿಷಂ ತಂ ಸೂರ್ಯಸ್ಯ ದುಹಿತಾಭರತ್ ।
ತಂ ಗಂಧರ್ವಾಃ ಪ್ರತ್ಯಗೃಭ್ಣನ್ತಂ ಸೋಮೇ ರಸಮಾದಧುರಿಂದ್ರಾಯೇಂದೋ
ಪರಿ ಸ್ರವ ॥ ೩ ॥

॥ ಪದಪಾಠಃ ॥

ಪರ್ಜನ್ಯಽವೃದ್ಧಂ । ಮಹಿಷಂ । ತಂ । ಸೂರ್ಯಸ್ಯ । ದುಹಿತಾ । ಆ । ಅಭರತ್ ।
ತಂ । ಗಂಧರ್ವಾಃ । ಪ್ರತಿ । ಅಗೃಭ್ಣನ್ । ತಂ । ಸೋಮೇ । ರಸಂ । ಆ । ಅದಧುಃ । ಇಂದ್ರಾಯ ।
ಇಂದೋ ಇತಿ । ಪರಿ । ಸ್ರವ ॥ ೩ ॥

॥ ಸಾಯಣಭಾಷ್ಯಂ ॥

ಸೂರ್ಯಸ್ಯ ದುಹಿತಾ । ಶ್ರದ್ಧಾ ವೈ ಸೂರ್ಯಸ್ಯ ದುಹಿತೇತಿ ವಾಜಸನೇಯಕಂ । ಶತ. ೧೨-೭-೩-೧೧ । ಸಾ ಪರ್ಜನ್ಯವೃದ್ಧಂ ಪರ್ಜನ್ಯವತ್ಸಮೃದ್ಧಂ । ಯದ್ವಾ । ಪರ್ಜನ್ಯೇನ ತತ್ಕಾರ್ಯೇಣೋದಕೇನ ಪ್ರವೃದ್ಧಂ । ಮಹಿಷಂ ಮಹಾಂತಂ ಪೂಜ್ಯಂ ವಾ ತಂ ಸೋಮಮಾಭರತ್ । ಆಹರತ್ ।

ದ್ಯುಲೋಕಾದಾಹೃತವತೀ । ತಮಾಹ್ರಿಯಮಾಣಂ ಸೋಮಂ ಗಂಧರ್ವಾ ವಿಶ್ವಾವಸುಪ್ರಭೃತಯಃ ಪ್ರತ್ಯಗೃಭ್ಣನ್ । ಪ್ರತ್ಯಗೃಹ್ಣನ್ । ಪ್ರತಿಗೃಹೀತವಂತಃ ॥ ಹೃಗ್ರಹೋರ್ಭಃ ॥ ತತೋ ಗಂಧರ್ವಾಃ ಪ್ರತಿಗೃಹೀತಂ ರಸಂ ಸೋಮೇ ಪ್ರತ್ಯಕ್ಷಮಾಧಧುಃ ॥ ದಧಾತೇರ್ಲಿಜಿ ॥ ತಸ್ಮಾತ್ಪರಿ ಸ್ರವ ॥

॥ ಪ್ರತಿಪದಾರ್ಥ ॥

**ಸೂರ್ಯಸ್ಯ**—ಸೂರ್ಯನ । **ದುಹಿತಾ**—ಪುತ್ರಿಯಾದ ಶ್ರದ್ಧೆಯು । **ಪರ್ಜನ್ಯವೃದ್ಧಂ**—ಪರ್ಜನ್ಯನಂತೆ ಬಲಶಾಲಿಯೂ । **ಮಹಿಷಂ**—ಪೂಜ್ಯನೂ ಆದ । **ತಂ**—ಸೋಮನನ್ನು । **ಆಭರತ್**—ದ್ಯುಲೋಕದಿಂದ ತಂದಳು । **ತಂ**—ಆ ಸೋಮನನ್ನು । **ಗಂಧರ್ವಾಃ**—ಗಂಧರ್ವರು । **ಪ್ರತ್ಯಗೃಭ್ಣನ್**—ಸ್ವೀಕರಿಸಿದರು । **ಸೋಮೇ**—ಅದೇ ಸೋಮದಲ್ಲಿ । **ರಸಂ**—ರಸವನ್ನು । **ಆದಧುಃ**—ಸ್ಥಾಪಿಸಿದರು । **ಇಂದೋ**—ಎಲೈ ಸೋಮನೇ । **ಇಂದ್ರಾಯ** ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಪ್ರವಹಿಸು.

॥ ಭಾವಾರ್ಥ ॥

ಸೂರ್ಯಪುತ್ರಿಯಾದ ಶ್ರದ್ಧೆಯು ಪರ್ಜನ್ಯನಂತೆ ಬಲಶಾಲಿಯೂ, ಪೂಜ್ಯನೂ ಆದ ಸೋಮನನ್ನು ದ್ಯುಲೋಕದಿಂದ ತಂದಳು. ಆ ಸೋಮನನ್ನು ಗಂಧರ್ವರು ಸ್ವೀಕರಿಸಿದರು. ಅದೇ ಸೋಮದಲ್ಲಿ ರಸವನ್ನು ಸ್ಥಾಪಿಸಿದರು, ಎಲೈ ಸೋಮನೇ ಇಂದ್ರನ ಪಾನಾರ್ಥವಾಗಿ ಪ್ರವಹಿಸು.

English Translation

The daughter of Surya brought the vast Soma large as a rain-cloud ; the Gandharvas seized upon it and placed the juice in the Soma : flow. Indu, for Indra.

॥ ವಿಶೇಷವಿಷಯಗಳು ॥

**ಗಂಧರ್ವಾಃ ಪ್ರತ್ಯಗೃಭ್ಣನ್**—ಈ ಋಕ್ಕಿನಲ್ಲಿ ಸೂರ್ಯಪುತ್ರಿಯಾದ ಶ್ರದ್ಧಾದೇವಿಯು ಸೋಮವನ್ನು ದ್ಯುಲೋಕದಿಂದ ತಂದಳೆಂದೂ ಅದನ್ನು ಗಂಧರ್ವರು ಸ್ವೀಕರಿಸಿದರೆಂದೂ ಹೇಳಿದೆ. ಈ ವಿಷಯವು ಸ್ವಲ್ಪ ವ್ಯತ್ಯಸ್ತವಾಗಿ ಶಾಖಾಂತರಗಳಲ್ಲಿ ಹೇಳಲ್ಪಟ್ಟಿದೆ. ಉದಾಹರಣೆಗೆ ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ—

> **ತಂ ಸೋಮಮಾಹ್ರಿಯಮಾಣಂ ಗಂಧರ್ವೋ ವಿಶ್ವಾವಸುಃ ಪರ್ಯಮುಷ್ಣಾತ್ಸ ತಿಸ್ರೋ ರಾತ್ರೀಃ ಪರಿಮುಷಿತೋಽವಸತ್ತಸ್ಮಾತ್ತಿಸ್ರೋ ರಾತ್ರೀಃ ಕ್ರೀತಃ ಸೋಮೋ ವಸತಿ ತೇ ದೇವಾ ಅಬ್ರುವನ್ಸ್ತ್ರೀಕಾಮಾ ವೈ ಗಂಧರ್ವಾಃ ಸ್ತ್ರಿಯಾ ನಿಷ್ಕ್ರೀಣಾಮೇತಿ ತೇ ವಾಚꣳ ಸ್ತ್ರಿಯಮೇಕಹಾಯನೀಂ ಕೃತ್ವಾ ತಯಾ ನಿರಕ್ರೀಣನ್ತ್ಸಾ ರೋಹಿದ್ರೂಪಂ ಕೃತ್ವಾ ಗಂಧರ್ವೇಭ್ಯೋಽಪಕ್ರಮ್ಯಾತಿಷ್ಠತ್ ॥**
>
> (ತೈ. ಸಂ. ೬-೧-೬-೫)

ಪೂರ್ವದಲ್ಲಿ ಸೋಮವು ಸ್ವರ್ಗದಲ್ಲಿದ್ದಿತು. ಅದನ್ನು ಭೂಮಿಗೆ ತರಲು ಯಾರಿಂದಲೂ ಸಾಧ್ಯವಾಗದೆ ಇರುವಾಗ ಗಾಯತ್ರಿಯು ಶ್ಯೇನಪಕ್ಷಿಯ ರೂಪದಿಂದ ಸ್ವರ್ಗಕ್ಕೆ ಹೋಗಿ ಅಲ್ಲಿ ಅದನ್ನು ಕಾಯುತ್ತಿದ್ದ ಸ್ವಾನ, ಭ್ರಾಜ, ಅಂಘಾರಿ, ಬಂಭಾರಿ, ಹಸ್ತ, ಸುಹಸ್ತ, ಕೃಶಾನು ಎಂಬ ಸೋಮಪಾಲಕರ ಪ್ರತಿಭಟನೆಯನ್ನು ತಿರಸ್ಕರಿಸಿ ಅದನ್ನು

ಭೂಮಿಗೆ ತಂದಿತು. ಅದನ್ನು ತರುತ್ತಿರುವಾಗ ದಾರಿಯಲ್ಲಿ ವಿಶ್ವಾವಸುವೆಂಬ ಗಂಧರ್ವನು ಆ ಸೋಮವನ್ನು ಅಪಹರಿಸಿ ತನ್ನಲ್ಲಿ ಮೂರು ದಿನಗಳವರೆಗೆ ಇಟ್ಟುಕೊಂಡಿದ್ದನು. ಅದನ್ನು ಅವನಿಂದ ತರುವ ಬಗೆ ಹೇಗೆಂದು ದೇವತೆಗಳು ಯೋಚಿಸಿ ಗಂಧರ್ವರು ಸ್ತ್ರೀಯರಲ್ಲಿ ಹೆಚ್ಚಾಗಿ ಆಸಕ್ತರಾಗಿ ಕಾಮಾಭಿಲಾಷೆಯುಳ್ಳವರಾದುದರಿಂದ ಅವರಿಗೆ ಸ್ತ್ರೀಯರ ಆಸೆಯನ್ನು ತೋರಿಸಿ ಸೋಮವನ್ನು ಹಿಂದಕ್ಕೆ ಪಡೆದು ತರಬೇಕೆಂದು ನಿಶ್ಚಯಿಸಿದರು. ಅದಕ್ಕಾಗಿ ಅವರು ವಾಗ್ದೇವತೆಯ ಸಮೀಪಕ್ಕೆ ಹೋಗಿ ವಿಷಯವನ್ನೆಲ್ಲಾ ತಿಳಿಸಿ ಅವಳ ಅನುಮತಿಯಂತೆ ವಾಗ್ದೇವತೆಯು ಸುಂದರ ಸ್ತ್ರೀಯಾಗ ವಂತೆಯೂ ಅವಳನ್ನು ಗಂಧರ್ವರಿಗೆ ಮಾರಿ ಅದಕ್ಕೆ ಬದಲಾಗಿ ಸೋಮವನ್ನು ತರುವಂತೆಯೂ, ನಿಶ್ಚಯಮಾಡಿದರು ಅದರಂತೆ ವಾಗ್ದೇವತೆಯು ಸುಂದರಸ್ತ್ರೀಯ ಆಕಾರವನ್ನು ಧರಿಸಲು ಅವಳನ್ನು ಗಂಧರ್ವರಿಗೆ ಕೊಟ್ಟು ಅವರು ಅಪಹರಿಸಿದ್ದ ಸೋಮವನ್ನು ಹಿಂದಕ್ಕೆ ತಂದರು. ಸೋಮವು ದೇವತೆಗಳ ವಶವಾದಮೇಲೆ ಸುಂದರ ಸ್ತ್ರೀಯ ಆಕಾರದಲ್ಲಿದ್ದ ವಾಗ್ದೇವತೆಯು ಕೆಂಪು ಜಿಂಕೆಯ ರೂಪವನ್ನು ಧರಿಸಿ ಗಂಧರ್ವರಿಂದ ತಪ್ಪಿಸಿಕೊಂಡು ಓಡಿಬಂದು ದೇವತೆಗಳಲ್ಲಿಗೆ ಬಂದು ಸೇರಿದಳು. ಆದುದರಿಂದ ಆ ಕಾಲದಿಂದ ಯಜ್ಞಗಳಲ್ಲಿ ಉಪಯೋಗಿಸುವುದಕ್ಕಾಗಿ ಸೋಮಲತೆಗಳನ್ನು ಕೊಂಡು ತರುವುದು ರೂಢಿಗೆ ಬಂದಿತು. ಈ ಸೋಮವಿಕ್ರಯಣವೆಂಬ ಯಜ್ಞಾಂಗಕರ್ಮವು ಯಜ್ಞಗಳಲ್ಲಿ ಈಗಲೂ ನಡೆಯುವುದು. ಇದಲ್ಲದೆ ಉತ್ತಮವಾದ ಸೋಮಲತೆಗಳು ಎತ್ತರವಾದ ಪರ್ವತಪ್ರದೇಶಗಳಲ್ಲಿ ಬೆಳೆಯುವುದರಿಂದ (ಮೂಜವತವೆಂಬ ಪರ್ವತವು ಸೋಮಲತೆಗೆ ಪ್ರಸಿದ್ಧವಾದುದು) ಅದನ್ನು ತರಬೇಕಾದರೆ ಬಹಳ ಶ್ರಮವಾಗುವುದು. ಆದುದರಿಂದ ದ್ರವ್ಯದ ಆಸೆಗಾಗಿ ಶ್ರಮವನ್ನು ವಹಿಸಿ ಪರ್ವತಗಳಿಗೆ ಹೋಗಿ ಸೋಮವನ್ನು ತಂದವರಿಂದ ಅದಕ್ಕೆ ತಕ್ಕ ಬೆಲೆಯನ್ನು ಕೊಟ್ಟು ಕೊಂಡುಕೊಳ್ಳುವುದು ರೂಢಿಗೆ ಬಂದಂತೆ ತೋರುತ್ತದೆ. ಹಿಂದೆ ಸೋಮವನ್ನು ಗಂಧರ್ವನು ಅಪಹರಿಸಿದಾಗ ಅದು ಅವನಲ್ಲಿ ಮೂರು ರಾತ್ರಿಗಳವರೆಗೆ ಇದ್ದುದರಿಂದ ಕ್ರಯಕ್ಕೆ ತೆಗೆದುಕೊಂಡ ಸೋಮವನ್ನು ಮೂರು ರಾತ್ರಿಗಳವರೆಗೆ ಇಟ್ಟಿರಬೇಕೆಂಬ ನಿಯಮವಿದೆ. ಪ್ರಕೃತ ಋಕ್ಕಿನಲ್ಲಿ ಸೋಮಲತೆಯ ಈ ವಿಧವಾದ ಪ್ರಶಂಸೆಯು ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಋತಂ ವದನ್ನೃತದ್ಯುಮ್ನ ಸತ್ಯಂ ವದನ್ತ್ಸತ್ಯಕರ್ಮನ್ ।
ಶ್ರದ್ಧಾಂ ವದನ್ತ್ಸೋಮ ರಾಜನ್ಧಾತ್ರಾ ಸೋಮ ಪರಿಷ್ಕೃತ ಇಂದ್ರಾ-
ಯೇಂದೋ ಪರಿ ಸ್ರವ ॥ ೪ ॥

॥ ಪದಪಾಠಃ ॥

ಋತಂ । ವದನ್ । ಋತಽದ್ಯುಮ್ನ । ಸತ್ಯಂ । ವದನ್ । ಸತ್ಯಽಕರ್ಮನ್ ।
ಶ್ರದ್ಧಾಂ । ವದನ್ । ಸೋಮ । ರಾಜನ್ । ಧಾತ್ರಾ । ಸೋಮ । ಪರಿಽಕೃತಃ । ಇಂದ್ರಾಯ । ಇಂದೋ
ಇತಿ । ಪರಿ । ಸ್ರವ ॥ ೪ ॥

। ಸಾಯಣಭಾಷ್ಯಂ ।

ಹೇ ಋತದ್ಯುಮ್ನ ಋತೇನ ದ್ಯೋತಮಾನ ಸತ್ಯಯಶಸ್ಕ ವಾ ಸತ್ಯಕರ್ಮನ್ ಸತ್ಯಫಲಕರ್ಮನ್ ಹೇ ಸೋಮಾಭಿಷೂಯಮಾಣ ರಾಜನ್ ಸರ್ವೇಷಾಂ ಯಜ್ಞನಿಷ್ಪಾದಕತ್ವೇನ ಸ್ವಾಮಿನ್ ಹೇ ಸೋಮ ಋತಂ ಯಜ್ಞಂ ವದನ್ ಸತ್ಯಂ ವದನ್ನುಚ್ಚಾರಯಞ್ಶ್ರದ್ಧಾಂ ಯಜಮಾನಾನಾಮಾತ್ಮನೋಽಪೇಕ್ಷಿತಾಂ ವದನ್ ಧಾತ್ರಾ ಕರ್ಮಣಾಂ ಧಾರಕೇಣ ದೇವಾನಾಂ ಪೋಷಕೇಣ ವಾ ಯಜಮಾನೇನ ಪರಿಷ್ಕೃತೋಽಲಂಕೃತಸ್ತ್ವಮಿಂದ್ರಾಯ ಪರಿ ಸ್ರವ ॥ ಸಂಪರ್ಯುಪೇಭ್ಯ ಇತಿ ಭೂಷಣಾರ್ಥೇ ಕರೋತೇಃ ಸುಟ್ ॥

॥ ಪ್ರತಿಪದಾರ್ಥ ॥

**ಋತದ್ಯುಮ್ನ**—ಸತ್ಯದಿಂದ ಪ್ರಕಾಶಿಸುವವನೂ । **ಸತ್ಯಕರ್ಮನ್**—ಸತ್ಯಾತ್ಮಕವಾದ ಕರ್ಮವುಳ್ಳವನೂ ಆದ । **ಸೋಮ**—ಎಲೈ ಸೋಮದೇವನೇ । **ರಾಜನ್**—ಸಕಲರಿಗೂ ಪ್ರಭುವಾದ । **ಸೋಮ**—ಎಲೈ ಸೋಮದೇವನೇ । **ಋತಂ**—ಯಜ್ಞವನ್ನು । **ವದನ್**—ಪ್ರಕಟಿಸುವವನಾಗಿಯೂ । **ಸತ್ಯಂ**—ಸತ್ಯವನ್ನು । **ವದನ್**—ಪಠಿಸುವವನಾಗಿಯೂ । **ಶ್ರದ್ಧಾಂ**—ಕರ್ಮಶ್ರದ್ಧೆಯನ್ನು । **ವದನ್**—ಪಠಿಸುವವನಾಗಿಯೂ । **ಧಾತ್ರಾ**—ಕರ್ಮಧಾರಕನಾದ ಯಜಮಾನನಿಂದ । **ಪರಿಷ್ಕೃತಃ**—ಅಲಂಕರಿಸಲ್ಪಟ್ಟವನಾಗಿಯೂ ಇರುವ । **ಇಂದೋ**—ಎಲೈ ಸೋಮನೇ । **ಇಂದ್ರಾಯ** ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಪ್ರವಹಿಸು.

॥ ಭಾವಾರ್ಥ ॥

ಸತ್ಯದಿಂದ ಪ್ರಕಾಶಿಸುವವನೂ, ಸತ್ಯಾತ್ಮಕವಾದ ಕರ್ಮವುಳ್ಳವನೂ, ಸಕಲರಿಗೂ ಪ್ರಭುವೂ ಆದ ಎಲೈ ಸೋಮನೇ ಯಜ್ಞವನ್ನು ಪ್ರಕಟಿಸುವವನಾಗಿಯೂ, ಸತ್ಯವನ್ನು ಉಚ್ಚರಿಸುವವನಾಗಿಯೂ, ಕರ್ಮ ಶ್ರದ್ಧೆಯನ್ನು ಪಠಿಸುವವನಾಗಿಯೂ, ಕರ್ಮಧಾರಕನಾದ ಯಜಮಾನನಿಂದ ಅಲಂಕರಿಸಲ್ಪಟ್ಟವನಾಗಿಯೂ ಇರುವ ಎಲೈ ಸೋಮನೇ, ಇಂದ್ರನಪಾನಾರ್ಥವಾಗಿ ಪ್ರವಹಿಸು.

## English Translation

Soma, the utterer of truth, radiant with truth, truthspeaking, truthful in act, speaking faith, lord (of worshippers) you are decorated by the upholder (of the rite) : flow, Indu, for Indra.

। ಸಂಹಿತಾಪಾಠಃ ।

ಸತ್ಯಮುಗ್ರಸ್ಯ ಬೃಹತಃ ಸಂ ಸ್ರವಂತಿ ಸಂಸ್ರವಾಃ ।
ಸಂ ಯಂತಿ ರಸಿನೋ ರಸಾಃ ಪುನಾನೋ ಬ್ರಹ್ಮಣಾ ಹರ ಇಂದ್ರಾ-
ಯೇಂದೋ ಪರಿ ಸ್ರವ ॥ ೫ ॥

॥ ಪದಪಾಠಃ ॥

ಸತ್ಯಂಽಉಗ್ರಸ್ಯ । ಬೃಹತಃ । ಸಂ । ಸ್ರವಂತಿ । ಸಂಽಸ್ರವಾಃ ।

ಸಂ । ಯಂತಿ । ರಸಿನಃ । ರಸಾಃ । ಪುನಾನಃ । ಬ್ರಹ್ಮಣಾ । ಹರೇ । ಇಂದ್ರಾಯ । ಇಂದೋ ಇತಿ ।

ಪರಿ । ಸ್ರವ ॥ ೫ ॥

॥ ಸಾಯಣಭಾಷ್ಯಂ ॥

ಸತ್ಯಮುಗ್ರಸ್ಯ ಸಂಗ್ರಾಮೇ ಸತ್ಯೇನ ಶತ್ರೂಣಾಮುದ್ಗಾರಯಿತುಃ । ಯದ್ವಾ । ಉದ್ಗೂರ್ಣಸತ್ಯಸ್ಯ । ಯದ್ವಾ । ಯಥಾರ್ಥಭೂತಮುದ್ಗೂರ್ಣಂ ಬಲಂ ಯಸ್ಯ ತಸ್ಯ ॥ ಪೃಷೋದರಾದಿತ್ವಾದ್ರೂಪಸಿದ್ಧಿಃ ॥ ಬೃಹತೋ ಮಹತಃ ಸೋಮಸ್ಯ ತವ ಸಂಸ್ರವಾಃ ಸಮ್ಯಕ್ಸ್ರವಣಶೀಲಾ ಧಾರಾಃ ಸಂ ಸ್ರವಂತಿ । ಸಮ್ಯಗ್ಗಚ್ಛಂತಿ । ಕಿಂಚ ರಸಿನೋ ರಸವತಸ್ತವ ಸ್ವಭೂತಾ ರಸಾಃ ಸಂ ಯಂತಿ। ಸಂಗಚ್ಛಂತೇ। ತಸ್ಮಾದ್ಧೇ ಹರೇ ಹರಿತವರ್ಣ ಸೋಮ ಬ್ರಹ್ಮಣಾ ಬ್ರಾಹ್ಮಣೇನ ಮಂತ್ರೇಣ ವಾ ಪುನಾನಃ ಪೂಯಮಾನಃ ಸ ತ್ವಮಿಂದ್ರಾರ್ಥಂ ಪರಿ ಸ್ರವ ॥

॥ ಪ್ರತಿಪದಾರ್ಥ ॥

ಸತ್ಯಮುಗ್ರಸ್ಯ—ಸತ್ಯವಾಗಿಯೂ ಪ್ರಕಟಿಸುವ ಬಲವುಳ್ಳವನೂ । ಬೃಹತಃ—ಮಹಾತ್ಮನೂ ಆದ ಸೋಮನ । ಸಂಸ್ರವಾಃ—ಪ್ರವಹಿಸುವ ಧಾರೆಗಳು । ಸಂ ಸ್ರವಂತಿ—ಪ್ರವಹಿಸುತ್ತವೆ । ರಸಿನಃ—ರಸವತ್ತಾದ ಸೋಮದ । ರಸಾಃ—ರಸಗಳು । ಸಂ ಯಂತಿ—ಒಟ್ಟಿಗೆ ಪ್ರವಹಿಸುತ್ತವೆ । ಹರೇ ಹರಿತವರ್ಣವುಳ್ಳ । ಇಂದೋ—ಎಲೈ ಸೋಮನೇ । ಬ್ರಹ್ಮಣಾ ಮಂತ್ರದಿಂದ । ಪುನಾನಃ—ಶುದ್ಧಿಯನ್ನು ಹೊಂದುವ ನೀನು । ಇಂದ್ರಾಯ—ಇಂದ್ರನ ಪಾನಾರ್ಥವಾಗಿ । ಪರಿ ಸ್ರವ ಪ್ರವಹಿಸು.

॥ ಭಾವಾರ್ಥ ॥

ಸತ್ಯಪರಾಕ್ರಮದಿಂದ ಬೆಳಗುವವನೂ, ಮಹಾತ್ಮನೂ ಆದ ಸೋಮನ ಧಾರೆಗಳು ಪ್ರವಹಿಸುತ್ತವೆ. ರಸವತ್ತಾದ ಸೋಮದ ರಸಗಳು ಒಟ್ಟಿಗೆ ಪ್ರವಹಿಸುತ್ತವೆ. ಹರಿತವರ್ಣವುಳ್ಳ ಎಲೈ ಸೋಮನೇ, ಮಂತ್ರದಿಂದ ಅಥವಾ ಬ್ರಾಹ್ಮಣನಿಂದ ಶುದ್ಧಿಯನ್ನು ಹೊಂದುವ ನೀನು ಇಂದ್ರನ ಪಾನಾರ್ಥವಾಗಿ ಪ್ರವಹಿಸು.

## English Translation

The united streams of you who are vast and truly formidable flow united ; the juices of you the juicy one meet together ; green-tinted (Soma) purified by holy prayer, Indu, flow for Indra.

॥ ಸಂಹಿತಾಪಾಠಃ ॥

ಯತ್ರ ಬ್ರಹ್ಮಾ ಪವಮಾನ ಛಂದಸ್ಯಾಂ೩ ವಾಚಂ ವದನ್ ।

ಗ್ರಾವ್ಣಾ ಸೋಮೇ ಮಹೀಯತೇ ಸೋಮೇನಾನಂದಂ ಜನಯನ್ನಿಂದ್ರಾ-

ಯೇಂದೋ ಪರಿ ಸ್ರವ ॥ ೬ ॥

॥ ಪದಪಾಠಃ ॥

ಯತ್ರ । ಬ್ರಹ್ಮಾ । ಪವಮಾನ । ಛಂದಸ್ಯಾಂ । ವಾಚಂ । ವದನ್ ।

ಗ್ರಾವ್ಣಾ । ಸೋಮೇ । ಮಹೀಯತೇ । ಸೋಮೇನ । ಆನಂದಂ । ಜನಯನ್ । ಇಂದ್ರಾಯ ।

ಇಂದೋ ಇತಿ । ಪರಿ । ಸ್ರವ । ೬ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಪೂಯಮಾನ ಸೋಮ ತ್ವದರ್ಥಂ ಛಂದಸ್ಯಾಂ ಸಪ್ತಛಂದೋಭಿಃ ಕೃತಾಂ ತೇಷು ಭವಾಂ ವಾಚಂ ಸ್ತುತಿಂ ವದನ್ನುಚ್ಚಾರಯನ್ ಸೋಮೇ ಸೋಮಾಭಿಷವಾರ್ಥಂ ಗ್ರಾವ್ಣಾಭಿಷವಂ ಕುರ್ವತಾ ಯುಕ್ತಸ್ತೇನಾಭಿಷುತೇನ ಸೋಮೇನ ದೇವಾನಾಮಾನಂದಂ ಸಂತೋಷಂ ಜನಯನ್ನು-ತ್ಪಾದಯನ್ಬ್ರಹ್ಮಾ ಬ್ರಾಹ್ಮಣೋ ಯತ್ರ ಯಸ್ಮಿನ್ದೇಶೇ ಮಹೀಯತೇ ದೇವೈಃ ಪೂಜ್ಯತೇ ತತ್ರ ಹೇ ಸೋಮ ತ್ವಂ ಪರಿ ಸ್ರವ ॥

॥ ಪ್ರತಿಪದಾರ್ಥ ॥

**ಪವಮಾನ**—ಶುದ್ಧಿಯನ್ನು ಹೊಂದುವ ಎಲೈ ಸೋಮನೇ । **ಛಂದಸ್ಯಾಂ**—ಸಪ್ತಚ್ಛಂದಸ್ಸುಗಳಿಂದಲೂ ಕೂಡಿದ । **ವಾಚಂ**—ಸ್ತುತಿವಾಕ್ಯವನ್ನು । ವದನ್—ಪಠಿಸುತ್ತಲೂ । **ಸೋಮೇ**—ಸೋಮಲಾಭಾರ್ಥವಾಗಿ । **ಗ್ರಾವ್ಣಾ**—ಹಿಂಡುವ ಕಲ್ಲುಗಳಿಂದ ಹಿಂಡಿದ । **ಸೋಮೇನ**—ಸೋಮರಸದಿಂದ । **ಆನಂದಂ**—ದೇವತೆಗಳಿಗೆ ಸಂತೋಷವನ್ನು । **ಜನಯನ್**—ಉಂಟುಮಾಡುತ್ತಲೂ ಇರುವ । **ಬ್ರಹ್ಮಾ**—ಬ್ರಾಹ್ಮಣನು । **ಯತ್ರ**—ಯಾವ ಪ್ರದೇಶದಲ್ಲಿ । **ಮಹೀಯತೇ**—ಪೂಜಿಸಲ್ಪಡುವನೋ ಆ ಸ್ಥಳದಲ್ಲಿ । **ಇಂದೋ**—ಎಲೈ ಸೋಮನೇ । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಪ್ರವಹಿಸು.

॥ ಭಾವಾರ್ಥ ॥

ಶುದ್ಧಿಯನ್ನು ಹೊಂದುವ ಎಲೈ ಸೋಮದೇವನೇ, ಸಪ್ತಚ್ಛಂದಸ್ಸುಗಳಿಂದಲೂ ಕೂಡಿದ ಸ್ತುತಿವಾಕ್ಯವನ್ನು ಪಠಿಸುತ್ತಲೂ ಸೋಮಲಾಭಾರ್ಥವಾಗಿ ಹಿಂಡುವ ಕಲ್ಲುಗಳಿಂದ ಹಿಂಡಿದ ಸೋಮರಸದಿಂದ ದೇವತೆಗಳಿಗೆ ಸಂತೋಷವನ್ನುಂಟುಮಾಡುತ್ತಲೂ ಇರುವ ಬ್ರಾಹ್ಮಣನು ಯಾವ ಪ್ರದೇಶದಲ್ಲಿ ಪೂಜಿಸಲ್ಪಡುವನೋ ಆ ಸ್ಥಳದಲ್ಲಿ ಇಂದ್ರನ ಪಾನಾರ್ಥವಾಗಿ ಪ್ರವಹಿಸು.

## English Translation

Wherever the Brahman, O purified ( Soma ), reciting the holy rhythmical text, engendering the delight (of the gods) by the Soma (expressed) with the grinding-stone, is reverenced, flow, Indu, for Indra.

। ಸಂಹಿತಾಪಾಠಃ ।

ಯತ್ರ ಜ್ಯೋತಿರಜಸ್ರಂ ಯಸ್ಮಿಁಲ್ಲೋಕೇ ಸ್ವರ್ಹಿತಂ ।

ತಸ್ಮಿನ್ಮಾಂ ಧೇಹಿ ಪವಮಾನಾಮೃತೇ ಲೋಕೇ ಅಕ್ಷಿತ ಇಂದ್ರಾಯೇಂದೋ

ಪರಿ ಸ್ರವ ॥ ೭ ॥

॥ ಪದಪಾಠಃ ॥

ಯತ್ರ । ಜ್ಯೋತಿಃ । ಅಜಸ್ರಂ । ಯಸ್ಮಿನ್ । ಲೋಕೇ । ಸ್ವಃ । ಹಿತಂ ।

ತಸ್ಮಿನ್ । ಮಾಂ । ಧೇಹಿ । ಪವಮಾನ । ಅಮೃತೇ । ಲೋಕೇ । ಅಕ್ಷಿತೇ । ಇಂದ್ರಾಯ । ಇಂದೋ-

ಇತಿ । ಪರಿ । ಸ್ರವ ॥ ೭ ॥

। ಸಾಯಣಭಾಷ್ಯಂ ।

ಹೇ ಪವಮಾನ ಯತ್ರ ಯಸ್ಮಿಁಲ್ಲೋಕೇ ಜ್ಯೋತಿಃ ಸರ್ವಂ ತೇಜೋಽಜಸ್ರಂ ಸರ್ವದಾವಿನಶ್ವರಂ ವರ್ತತೇ । ಯಸ್ಮಿಂಶ್ಚ ಲೋಕೇ ಸ್ವರಾದಿತ್ಯಾಖ್ಯಂ ಜ್ಯೋತಿರ್ಹಿತಂ ನಿಹಿತಮಸ್ತಿ । ತಸ್ಮಿನ್ನಮೃತೇ ಮರಣಧರ್ಮರಹಿತೇ ಅತ ಏವಾಕ್ಷಿತೇಽಕ್ಷೀಣೇ ಲೋಕೇ ಮಾಂ ಸೋಮಾಭಿಷವಂ ಕುರ್ವಂತಂ ಧೇಹಿ । ನಿಧೇಹಿ । ತಸ್ಮಾನ್ಮಾಮುತ್ತಮಲೋಕಂ ಪ್ರಾಪಯಿತುಂ ತ್ವಮಿಂದ್ರಾಯ ಪರಿ ಸ್ರವ ॥

। ಪ್ರತಿಪದಾರ್ಥ ।

**ಪವಮಾನ**—ಎಲೈ ಸೋಮದೇವನೇ **ಯತ್ರ**—ಯಾವ ಲೋಕದಲ್ಲಿ । **ಜ್ಯೋತಿಃ**—ಸಕಲ ತೇಜಸ್ಸೂ **ಅಜಸ್ರಂ**—ಶಾಶ್ವತವಾಗಿರುವುದೋ । **ಯಸ್ಮಿನ್ ಲೋಕೇ**—ಯಾವ ಲೋಕದಲ್ಲಿ । **ಸ್ವಃ**—ಆದಿತ್ಯನ ತೇಜಸ್ಸು । **ಹಿತಂ** ಸ್ಥಾಪಿತವಾಗಿದೆಯೋ । **ತಸ್ಮಿನ್**—ಅಂತಹ । **ಅಮೃತೇ**—ಮರಣರಹಿತವಾದುದೂ **ಅಕ್ಷಿತೇ**—ಕ್ಷಯರಹಿತವಾದುದೂ ಆದ । **ಲೋಕೇ**—ಲೋಕದಲ್ಲಿ । **ಮಾಂ**—ನನ್ನನ್ನು । **ಧೇಹಿ**—ಸ್ಥಾಪಿಸು । **ಇಂದೋ**—ಎಲೈ ಸೋಮನೇ । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಪ್ರವಹಿಸು.

ಎಲೈ ಸೋಮದೇವನೇ, ಯಾವ ಲೋಕದಲ್ಲಿ ಸಕಲ ತೇಜಸ್ಸೂ ಶಾಶ್ವತವಾಗಿರುವುದೋ ಯಾವ ಲೋಕದಲ್ಲಿ ಆದಿತ್ಯನ ತೇಜಸ್ಸು ಸ್ಥಾಪಿತವಾಗಿದೆಯೋ, ಅಂತಹ ಮರಣರಹಿತವಾದುದೂ, ಕ್ಷಯರಹಿತವಾದುದೂ ಆದ ಲೋಕದಲ್ಲಿ ನನ್ನನ್ನು ಸ್ಥಾಪಿಸು. ಎಲೈ ಸೋಮನೇ, ಇಂದ್ರನ ಪಾನಾರ್ಥವಾಗಿ ಪ್ರವಹಿಸು.

## English Translation

Where light is perpetual, in the world in which the sun is placed, in that immortal imperishable world place me, Pavamana; flow, Indu, for Indra.

॥ ಸಂಹಿತಾಪಾಠಃ ॥

**ಯತ್ರ ರಾಜಾ ವೈವಸ್ವತೋ ಯತ್ರಾವರೋಧನಂ ದಿವಃ ।**
**ಯತ್ರಾಮೂರ್ಯಹ್ವತೀರಾಪಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ**
**ಪರಿ ಸ್ರವ ॥ ೮ ॥**

॥ ಪದಪಾಠಃ ॥

**ಯತ್ರ । ರಾಜಾ । ವೈವಸ್ವತಃ । ಯತ್ರ । ಅವ್ಯರೋಧನಂ । ದಿವಃ ।**
**ಯತ್ರ । ಅಮೂಃ । ಯಹ್ವತೀಃ । ಆಪಃ । ತತ್ರ । ಮಾಂ । ಅಮೃತಂ । ಕೃಧಿ । ಇಂದ್ರಾಯ । ಇಂದೋ**
**ಇತಿ । ಪರಿ । ಸ್ರವ ॥ ೮ ॥**

॥ ಸಾಯಣಭಾಷ್ಯಂ ॥

ಯತ್ರ ಯಸ್ಮಿಲ್ಲೋಕೇ ವೈವಸ್ವತೋ ವಿವಸ್ವತ್ಪುತ್ರೋ ರಾಜಾ ಭವತಿ । ಯತ್ರ ಚ ಲೋಕೇ ದಿವ ಆದಿತ್ಯಸ್ಯಾವರೋಧನಂ ಭೂತಾನಾಂ ಪ್ರವೇಶನಂ । ಕಿಂಚ ಯತ್ರ ಲೋಕೇ ಯಹ್ವತೀರ್ಮಹತ್ಯೋಽಮೂರಿಮಾ ಗಂಗಾದ್ಯಾ ಆಪಸ್ತಿಷ್ಠಂತಿ । ತತ್ರ ತಾದೃಶೇ ಲೋಕೇ ಮಾಮಮೃತಂ ಮರಣಧರ್ಮರಹಿತಂ ಕೃಧಿ । ಕುರು । ಮಮ ದೇವತ್ವಂ ಪ್ರಾಪಯೇತ್ಯರ್ಥಃ । ತತಃ ಕಾರಣಾತ್ಪರಿ ಸ್ರವ ॥

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮದೇವನೇ । **ಯತ್ರ**—ಯಾವ ಲೋಕದಲ್ಲಿ । **ವೈವಸ್ವತಃ**—ವಿವಸ್ವಂತನ ಪುತ್ರನು । **ರಾಜಾ**—ಪ್ರಭುವಾಗಿದ್ದಾನೆಯೋ । **ಯತ್ರ**—ಯಾವ ಲೋಕದಲ್ಲಿ । **ದಿವಃ**—ಆದಿತ್ಯನ । **ಅವರೋಧನಂ**—ಅಂತಃಪ್ರವೇಶವಿರುವುದೋ । **ಯತ್ರ**— ಯಾವ ಲೋಕದಲ್ಲಿ । **ಯಹ್ವತೀಃ**—ಮಹತ್ಸ್ವರೂಪವುಳ್ಳ । **ಅಮೂಃ ಆಪಃ**—ಗಂಗಾದಿ ನದಿಗಳ ಪರಿಶುದ್ಧವಾದ ಉದಕಗಳು ಇವೆಯೋ। **ತತ್ರ**—ಅಂತಹ ಲೋಕದಲ್ಲಿ। **ಮಾಂ**—ನನ್ನನ್ನು। **ಅಮೃತಂ**-ಮರಣರಹಿತನನ್ನಾಗಿ । **ಕೃಧಿ**—ಮಾಡು (ಸ್ಥಾಪಿಸು) । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಯಾವ ಲೋಕದಲ್ಲಿ ವಿವಸ್ವಂತನ ಪುತ್ರನು ಪ್ರಭುವಾಗಿದ್ದಾನೆಯೋ ಯಾವ ಲೋಕದಲ್ಲಿ ಆದಿತ್ಯನ ಅಂತಃಪ್ರವೇಶವಿರುವುದೋ, ಯಾವ ಲೋಕದಲ್ಲಿ ಮಹತ್ಸ್ವರೂಪವುಳ್ಳ ಗಂಗಾದಿನದಿಗಳ ಪರಿಶುದ್ಧವಾದ ಉದಕಗಳು ಇವೆಯೋ ಅಂತಹ ಲೋಕದಲ್ಲಿ ನನ್ನನ್ನು ಮರಣರಹಿತನನ್ನಾಗಿ ಮಾಡು. ಇಂದ್ರನ ಪಾನಾರ್ಥವಾಗಿ ಪ್ರವಹಿಸು.

## English Translation

Where Vivaswat's son is king, where the inner chamber of the sun (is), where these great waters (are), there make me immortal; flow, Indu, for Indra.

॥ ವಿಶೇಷವಿಷಯಗಳು ॥

ಯತ್ರ ರಾಜಾ ವೈವಸ್ವತಃ—ವಿವಸ್ವಾನ್ ಎಂಬ ಪ್ರಸಿದ್ಧನಾದ ದೇವತೆಯ ಪುತ್ರನಾದ ರಾಜನಿಗೆ ವೈವಸ್ವತನೆಂದು ಹೆಸರು. ಇವನನ್ನು ಯಮನೆಂದೂ ಕರೆಯುವ ರೂಢಿ ಇದೆ. ಇವನ ವಿಷಯವಾದ ವಿವರಣೆಗಳು ಇದೇ ಭಾಗದ ಮುಂದಿನ ಸೂಕ್ತಗಳಲ್ಲಿ (ಋ. ಸಂ. ೧೦-೧೦ ಇತ್ಯಾದಿ) ವಿಸ್ತಾರವಾಗಿ ವಿವರಿಸಲ್ಪಟ್ಟಿವೆ.

॥ ಸಂಹಿತಾಪಾಠಃ ॥

ಯತ್ರಾನುಕಾಮಂ ಚರಣಂ ತ್ರಿನಾಕೇ ತ್ರಿದಿವೇ ದಿವಃ ।

ಲೋಕಾ ಯತ್ರ ಜ್ಯೋತಿಷ್ಮಂತಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ

ಪರಿ ಸ್ರವ ॥ ೯ ॥

॥ ಪದಪಾಠಃ ॥

ಯತ್ರ । ಅನುऽಕಾಮಂ । ಚರಣಂ । ತ್ರಿऽನಾಕೇ । ತ್ರಿऽದಿವೇ । ದಿವಃ ।

ಲೋಕಾಃ । ಯತ್ರ । ಜ್ಯೋತಿಷ್ಮಂತಃ । ತತ್ರ । ಮಾಂ । ಅಮೃತಂ । ಕೃಧಿ । ಇಂದ್ರಾಯ । ಇಂದೋ

ಇತಿ । ಪರಿ । ಸ್ರವ ॥ ೯ ॥

॥ ಸಾಯಣಭಾಷ್ಯಂ ॥

ಯತ್ರ ತ್ರಿದಿವೇ ತೃತೀಯಸ್ಯಾಂ ದಿವಿ ದ್ಯುಲೋಕೇ ತ್ರಿನಾಕೇ । ತತ್ರಾಧರಮಧ್ಯಮೋತ್ತಮ-ಭಾವೇನ ತ್ರೀಣಿ ಸ್ಥಾನಾನಿ ಸಂತಿ । ತತ್ರ ತೃತೀಯೇ ನಾಕ ಉತ್ತಮೇ ಸ್ಥಾನೇ ದಿವ ಆದಿತ್ಯಸ್ಯಾನು-ಕಾಮಂ ಕಾಮಾನುಗುಣಂ ಚರಣಮಸ್ತಿ । ಕಿಂಚ ಯತ್ರ ಯಸ್ಮಿಲ್ಲೋಕೇ ಲೋಕಾ ಜ್ಯೋತಿಷ್ಮಂತೋ ಜ್ಯೋತಿರ್ಯುಕ್ತಾಸ್ತಿಷ್ಠಂತಿ । ತತ್ರ ತಾದೃಶೇ ಲೋಕೇ ಮಾಮಮೃತಂ ಕೃಧಿ । ಯಥಾ ಮಮೋತ್ತಮ-ಲೋಕೋ ಭವತಿ ತಥಾ ತ್ವಮಿಂದ್ರಾಯ ಪರಿ ಸ್ರವ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ!) ತ್ರಿನಾಕೇ—ಅಧರ, ಮಧ್ಯಮ ಮತ್ತು ಉತ್ತಮ ಎಂಬ ಮೂರು ಸ್ಥಾನಗಳೂ ಇರುವ । ಯತ್ರ—ಯಾವ । ತ್ರಿದಿವೇ—ಮೂರನೆಯ ದ್ಯುಲೋಕದಲ್ಲಿ । ದಿವಃ—ಆದಿತ್ಯನ । ಅನುಕಾಮಂ.....

ಸ್ವತಂತ್ರವಾದ | **ಚರಣಂ**—ಸಂಚಾರವಿರುವುದೋ | **ಯತ್ರ**—ಎಲ್ಲಿ | **ಲೋಕಾಃ**—ಸಕಲ ಲೋಕಗಳೂ | **ಜ್ಯೋತಿಷ್ಮಂತಃ**—ತೇಜೋಯುತಗಳಾಗಿರುವುವೋ | **ತತ್ರ**—ಅಂತಹ ಉತ್ತಮವಾದ ಲೋಕದಲ್ಲಿ | **ಮಾಂ**—ನನ್ನನ್ನು | **ಅಮೃತಂ**—ಮರಣರಹಿತನನ್ನಾಗಿ | **ಕೃಧಿ** ಮಾಡಿ ಸ್ಥಾಪಿಸು | **ಇಂದೋ**—ಎಲೈ ಸೋಮನೇ | **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ | **ಪರಿ ಸ್ರವ**—ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಅಧರ, ಮಧ್ಯಮ ಮತ್ತು ಉತ್ತಮ ಎಂಬ ಮೂರು ಪ್ರಭೇದಗಳಿರುವ ಯಾವ ಮೂರನೆಯ ದ್ಯುಲೋಕದಲ್ಲಿ ಆದಿತ್ಯನ ಸ್ವತಂತ್ರವಾದ ಸಂಚಾರವಿರುವುದೋ ಎಲ್ಲಿ ಎಲ್ಲ ಲೋಕಗಳೂ ತೇಜೋಯುತಗಳಾಗಿರುವುವೋ ಅಂತಹ ಉತ್ತಮವಾದ ಲೋಕದಲ್ಲಿ ನನ್ನನ್ನು ಮರಣರಹಿತನನ್ನಾಗಿ ಮಾಡಿ ಸ್ಥಾಪಿಸು. ಎಲೈ ಸೋಮನೇ, ಇಂದ್ರನ ಪಾನಾರ್ಥವಾಗಿ ಪ್ರವಹಿಸು.

English Translation

Where in the third heaven, in the third sphere, the sun wanders at will, where the regions are filled with light, there make me immortal: flow, Indu, for Indra.

। ಸಂಹಿತಾಪಾಠಃ ।

ಯತ್ರ ಕಾಮಾ ನಿಕಾಮಾಶ್ಚ ಯತ್ರ ಬ್ರಧ್ನಸ್ಯ ವಿಷ್ಟಪಂ ।
ಸ್ವಧಾ ಚ ಯತ್ರ ತೃಪ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ
ಪರಿ ಸ್ರವ ॥ ೧೦ ॥

॥ ಪದಪಾಠಃ ॥

ಯತ್ರ । ಕಾಮಾಃ । ನಿऽಕಾಮಾಃ । ಚ । ಯತ್ರ । ಬ್ರಧ್ನಸ್ಯ । ವಿಷ್ಟಪಂ ।
ಸ್ವಧಾ । ಚ । ಯತ್ರ । ತೃಪ್ತಿಃ । ಚ । ತತ್ರ । ಮಾಂ । ಅಮೃತಂ । ಕೃಧಿ । ಇಂದ್ರಾಯ । ಇಂದೋ
ಇತಿ । ಪರಿ । ಸ್ರವ ॥ ೧೦ ॥

। ಸಾಯಣಭಾಷ್ಯಂ ।

ಯತ್ರ ಯಸ್ಮಿಁಲ್ಲೋಕೇ ಕಾಮಾಃ ಕಾಮ್ಯಮಾನಾ ದೇವಾ ನಿಕಾಮಾ ನಿತರಾಮವಶ್ಯಂ ಪ್ರಾರ್ಥ್ಯಮಾನಾ ಇಂದ್ರಾದಯಶ್ಚ ವಿದ್ಯಂತೇ । .... .... .... .... । ಯದ್ವಾ । ಸೂರ್ಯೇಣ ವಿನಾ ಕರ್ಮಾಣಿ ನ ಘಟಂತ ಇತಿ ಸರ್ವೇಷಾಂ ಕರ್ಮಣಾಂ ಮೂಲಭೂತಸ್ಯಾದಿತ್ಯಸ್ಯ ವಿಷ್ಟಪಂ ಸಹಸ್ಥಾನಂ

ಯತ್ರ ವಿದ್ಯತೇ ತತ್ರ ಲೋಕೇ| ಸ್ವಧಾನ್ನಂ ಸ್ವಧಾಕಾರೇಣ ವಾ ದತ್ತಮನ್ನಂ ತೃಪ್ತಿಸ್ತರ್ಪಣಂ ಹರ್ಷಣಂ ಹರ್ಷಶ್ಚ ಯತ್ರ ವಿದ್ಯತೇ ತತ್ರ ಲೋಕೇ ಮಾಮಮೃತಂ ಕೃಧಿ ||

| ಪ್ರತಿಪದಾರ್ಥ |

**ಯತ್ರ**—ಯಾವ ಲೋಕದಲ್ಲಿ | **ಕಾಮಾಃ**—ಅಭಿಲಾಷೆಗಳೂ | **ನಿಕಾಮಾಃ ಚ**—ಉತ್ತಮವಾದ ಧ್ಯೇಯಗಳೂ ಇರುವುವೋ | **ಯತ್ರ**—ಯಾವ ಲೋಕದಲ್ಲಿ | **ಬ್ರಧ್ನಸ್ಯ**—ಕರ್ಮಪ್ರೇರಕನಾದ ಆದಿತ್ಯನ | **ವಿಷ್ಟಪಂ ಚ**—ಸ್ಥಾನವಿರುವುದೋ | **ಯತ್ರ**—ಎಲ್ಲಿ | **ಸ್ವಧಾ**—ಅನ್ನವೂ | **ತೃಪ್ತಿಃ ಚ**—ತೃಪ್ತಿಯೂ ಇರುವುವೋ **ತತ್ರ**—ಅಲ್ಲಿ | **ಮಾಂ**—ನನ್ನನ್ನು | **ಅಮೃತಂ**—ಮರಣರಹಿತನನ್ನಾಗಿ | **ಕೃಧಿ**—ಮಾಡಿ ಸ್ಥಾಪಿಸು | **ಇಂದೋ**—ಎಲೈ ಸೋಮನೇ | **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ | **ಪರಿ ಸ್ರವ**—ಪ್ರವಹಿಸು

ಯಾವ ಲೋಕದಲ್ಲಿ ಅಭಿಲಾಷೆಗಳೂ ಉತ್ತಮವಾದ ಧ್ಯೇಯಗಳೂ ಇರುವುವೋ ಯಾವ ಲೋಕದಲ್ಲಿ ಕರ್ಮಪ್ರೇರಕನಾದ ಆದಿತ್ಯನ ಸ್ಥಾನವಿರುವುದೋ, ಎಲ್ಲಿ ಅನ್ನವೂ ತೃಪ್ತಿಯೂ ಇರುವುವೋ ಅಲ್ಲಿ ನನ್ನನ್ನು ಮರಣರಹಿತನನ್ನಾಗಿ ಮಾಡಿ ಸ್ಥಾಪಿಸು, ಎಲೈ ಸೋಮನೇ, ಇಂದ್ರನ ಪಾನಾರ್ಥವಾಗಿ ಪ್ರವಹಿಸು.

## English Translation.

Where wishes and desires (are), where the region of the sun (is), where food and delight (are) found, there make me immortal ; flow, Indu, for Indra.

| ಸಂಹಿತಾಪಾಠಃ |

ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ |
ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ || ೧೧ ||

| ಪದಪಾಠಃ |

ಯತ್ರ | ಆನಂದಾಃ | ಚ | ಮೋದಾಃ | ಚ | ಮುದಃ | ಪ್ರಮುದಃ | ಆಸತೇ |
ಕಾಮಸ್ಯ | ಯತ್ರ | ಆಪ್ತಾಃ | ಕಾಮಾಃ | ತತ್ರ | ಮಾಂ | ಅಮೃತಂ | ಕೃಧಿ | ಇಂದ್ರಾಯ |
ಇಂದೋ ಇತಿ | ಪರಿ | ಸ್ರವ || ೧೧ ||

॥ ಸಾಯಣಭಾಷ್ಯಂ ॥

ಯತ್ರ ಯಸ್ಮಿಁಲ್ಲೋಕ ಆನಂದಾದಯ ಆಸತೇ । ತೇಷಾಮುಲ್ಪೋ ಭೇದೋ ದ್ರಷ್ಟವ್ಯಃ ಯತ್ರ ಚ ಲೋಕೇ ಕಾಮಸ್ಯ ಕಾಮ್ಯಮಾನಸ್ಯ ದೇವಸ್ಯ ಸರ್ವೇ ಕಾಮಾ ಆಪ್ತಾಃ ಪ್ರಾಪ್ತಾ ಭವಂತಿ ತತ್ರ ಮಾಮಮೃತಂ ಕೃಧಿ । ಏತತ್ತು ತ್ವಯಾ ವಿನಾ ನ ಘಟತ ಇತಿ ಹೇ ಸೋಮ ತ್ವಂ ಪರಿ ಸ್ರವ ॥

॥ ಪ್ರತಿಪದಾರ್ಥ ॥

**ಯತ್ರ**—ಯಾವ ಲೋಕದಲ್ಲಿ । **ಆನಂದಾಃ**—ಅತ್ಯತಿಶಯವಾದ ಬ್ರಹ್ಮಾನಂದವೂ । **ಮೋದಾಃ**—ಹರ್ಷಗಳೂ । **ಮುದಃ**—ಸುಖಸಾಧನಗಳೂ । **ಪ್ರಮುದಃ**—ಸುಖಾನುಭವನಗಳೂ । **ಆಸತೇ**—ಇರುವುವೋ । **ಯತ್ರ**—ಎಲ್ಲಿ । **ಕಾಮಸ್ಯ**—ಸುಖಾಪೇಕ್ಷಿಯಾದವನ । **ಆಪ್ತಾಃ**—ಇಷ್ಟಗಳಾದ । **ಕಾಮಾಃ**—ಅಪೇಕ್ಷೆಗಳು ನೆರವೇರುವುವೋ । **ತತ್ರ**—ಅಲ್ಲಿ । **ಮಾಂ**—ನನ್ನನ್ನು । **ಅಮೃತಂ**—ಮರಣರಹಿತನನ್ನಾಗಿ । **ಕೃಧಿ**-ಮಾಡಿ ಸ್ಥಾಪಿಸು । **ಇಂದೋ**—ಎಲೈ ಸೋಮನೇ । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಪ್ರವಹಿಸು.

॥ ಭಾವಾರ್ಥ ॥

ಯಾವ ಲೋಕದಲ್ಲಿ ಅತಿಶಯವಾದ ಬ್ರಹ್ಮಾನಂದವೂ, ಹರ್ಷಗಳೂ, ಸುಖಸಾಧನಗಳೂ, ಸುಖಾನುಭವಗಳೂ ಇರುವುವೋ ಎಲ್ಲಿ ಸುಖಾಪೇಕ್ಷಿಯಾದವನ ಅಪೇಕ್ಷೆಗಳು ಅವನ ಇಷ್ಟವನ್ನು ಪೂರೈಸುವಂತಿರುವುವೋ, ಅಲ್ಲಿ ನನ್ನನ್ನು ಮರಣರಹಿತನನ್ನಾಗಿ ಮಾಡಿ ಸ್ಥಾಪಿಸು. ಎಲೈ ಸೋಮನೇ, ಇಂದ್ರನ ಪಾನಾರ್ಥವಾಗಿ ಪ್ರವಹಿಸು.

English Translation

Where there is happiness, pleasures, joy and enjoyment, where the wishes of the wisher are obtained, there make me immortal; flow, Indu, for Indra.

॥ ವಿಶೇಷವಿಷಯಗಳು ॥

**ಆನಂದಾಃ ಮೋದಾಃ ಮುದಃ ಪ್ರಮುದಃ**—ಈ ಶಬ್ದಗಳೆಲ್ಲವೂ ಆನಂದವೆಂಬ ಒಂದೇ ವಿಧವಾದ ಅರ್ಥವನ್ನು ಸೂಚಿಸುವವು. ಅಲ್ಪಸ್ವಲ್ಪ ವ್ಯತ್ಯಾಸಗಳಿದ್ದರೂ ಒಂದೇ ಅರ್ಥವನ್ನು ಸೂಚಿಸುವ ಈ ಶಬ್ದಗಳ ಪ್ರಯೋಗವು, **ಮೋದಃ ಪ್ರಮೋದ ಆನಂದಃ** ಇತ್ಯಾದಿ ಅನೇಕ ಶ್ರುತಿವಾಕ್ಯಗಳಲ್ಲಿ ಕಂಡುಬರುವುದು.

## ನೂರ ಹದಿನಾಲ್ಕನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಯ ಇಂದೋರಿತಿ ಚತುರ್ಋಚಮೇಕಾದಶಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ತಥಾ ಚಾನುಕ್ರಮ್ಯತೇ । ಯ ಇಂದೋಶ್ಚತುಷ್ಕಮಿತಿ ॥ ಗತಃ ಸೂಕ್ತವಿನಿಯೋಗಃ ॥**

ಅನುವಾದವು—ಯ ಇಂದೋಃ ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹಿಂದಿನ ಸೂಕ್ತದಂತೆಯೇ ಋಷಿದೇವತಾಛಂದಸ್ಸುಗಳಿರುವವು ಅನುಕ್ರಮಣಿಕೆಯಲ್ಲಿ—ಯ ಇಂದೋಶ್ಚತುಷ್ಕಂ ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೧೪

ಮಂಡಲ—೯ ॥ ಅನುವಾಕ—೭ ॥ ಸೂಕ್ತ—೧೧೪ ॥
ಅಷ್ಟಕ—೭ ॥ ಅಧ್ಯಾಯ—೫ ॥ ವರ್ಗ—೨೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
ಋಷಿ—ಕಶ್ಯಪಃ ॥
ದೇವತಾ—ಪವಮಾನಃ ಸೋಮಃ ॥
ಛಂದಃ—ಪಂಕ್ತಿಃ ॥

॥ ಸಂಹಿತಾಪಾಠಃ ॥

ಯ ಇಂದೋಃ ಪವಮಾನಸ್ಯಾನು ಧಾಮಾನ್ಯಕ್ರಮೀತ್ ।
ತಮಾಹುಃ ಸುಪ್ರಜಾ ಇತಿ ಯಸ್ತೇ ಸೋಮಾವಿಧನ್ಮನ ಇಂದ್ರಾಯೇಂದೋ
ಪರಿ ಸ್ರವ ॥ ೧ ॥

॥ ಪದಪಾಠಃ ॥

ಯಃ । ಇಂದೋಃ । ಪವಮಾನಸ್ಯ । ಅನು । ಧಾಮಾನಿ । ಅಕ್ರಮೀತ್ ।
ತಂ । ಆಹುಃ । ಸುಽಪ್ರಜಾಃ । ಇತಿ । ಯಃ । ತೇ । ಸೋಮ । ಅವಿಧತ್ । ಮನಃ । ಇಂದ್ರಾಯ ।
ಇಂದೋ ಇತಿ । ಪರಿ । ಸ್ರವ ॥ ೧ ॥

॥ ಸಾಯಣಭಾಷ್ಯಂ ॥

ಪವಮಾನಸ್ಯ ಪೂಯಮಾನಸ್ಯೇಂದೋಃ ಸೋಮಸ್ಯೇಂದೋಃ ಸೋಮಸ್ಯ ಧಾಮಾನಿ ಸ್ಥಾನಾನಿ ದ್ರೋಣಕಲಶಾದೀನಿ ಯದ್ವಾ ಧಾಮಾನಿ ತೇಜಾಂಸಿ ಯೋ ಬ್ರಾಹ್ಮಣೋಽಕ್ರಮೀತ್ ಅನುಕ್ರಾಮತಿ ಅನುಗಚ್ಛತಿ ತಂ ಜನಂ ಸುಪ್ರಜಾಃ ಶೋಭನಪ್ರಜನನಃ ಕಲ್ಯಾಣಪುತ್ರಾದಿಪ್ರಜಾಯುಕ್ತ ಇತ್ಯಾಹುಃ ॥ ನಿತ್ಯಮಸಿಚ್ ಪ್ರಜಾಮೇಧಯೋರಿತ್ಯಸಿಚ್ ಸಮಾಸಾಂತಃ ॥ ಯಃ ಸೋಮಮಭಿಷುಣೋತಿ ಸ ಪುತ್ರಾದಿಯುಕ್ತೋ ಭವತೀತ್ಯರ್ಥಃ । ಕಿಂಚ ಹೇ ಸೋಮ ಯೋ ಮನುಷ್ಯಸ್ತೇ ತ್ವದರ್ಥಂ ಮನೋಽವಿಧತ್ ಕರೋತಿ । ಯದ್ವಾ । ತೇ ತ್ವದೀಯಂ ಮನೋಽವಿಧತ್ ಪರಿಚರತಿ । ವಿಧತಿಃ ಪರಿಚರಣಕರ್ಮಾ । ತಮಪಿ ಕಲ್ಯಾಣಜನನಮಿತ್ಯಾಹುಃ । ತಸ್ಮಾತ್ತ್ವಂ ಪರಿ ಸ್ರವ ॥

॥ ಪ್ರತಿಪದಾರ್ಥ ॥

**ಪವಮಾನಸ್ಯ**—ಶುದ್ಧಿಯನ್ನು ಹೊಂದುವ । **ಇಂದೋಃ**—ಸೋಮನ । **ಧಾಮಾನಿ**—ಸ್ಥಾನಗಳನ್ನು । **ಯಃ**—ಯಾವ ಬ್ರಾಹ್ಮಣನು । **ಅನು ಅಕ್ರಮೀತ್**—ಸೇವಿಸುವನೋ । **ತಂ**—ಆ ಬ್ರಾಹ್ಮಣನನ್ನು । **ಸುಪ್ರಜಾಃ**—ಉತ್ತಮವಾದ ಪುತ್ರಾದಿಗಳುಳ್ಳವನೆಂದು । **ಆಹುಃ**—ಜನರು ಹೇಳುತ್ತಾರೆ । **ಸೋಮ**—ಎಲೈ ಸೋಮನೇ । **ಯಃ**—ಯಾರು । **ತೇ**—ನಿನ್ನ ಸೇವೆಗಾಗಿ । **ಮನಃ**—ಮನಸ್ಸನ್ನು । **ಅವಿಧತ್**–ಸಂಕಲ್ಪಿಸುವನೋ ಅವನನ್ನು । **ಇತಿ**—ಸತ್ಪುತ್ರವಂತನೆಂದೇ ಹೇಳುವರು । **ಇಂದೋ**—ಎಲೈ ಸೋಮನೇ । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಪ್ರವಹಿಸು.

॥ ಭಾವಾರ್ಥ ॥

ಶುದ್ಧಿಯನ್ನು ಹೊಂದುವ ಸೋಮನ ಸ್ಥಾನಗಳನ್ನು ಯಾವ ಬ್ರಾಹ್ಮಣನು ಸೇವಿಸುವನೋ ಆ ಬ್ರಾಹ್ಮಣನನ್ನು ಉತ್ತಮವಾದ ಪುತ್ರಾದಿಗಳನ್ನುಳ್ಳವನೆಂದು ಜನರು ಹೇಳುತ್ತಾರೆ. ಎಲೈ ಸೋಮನೇ, ಯಾರು ನಿನ್ನ ಸೇವೆಗಾಗಿ ಮನಸ್ಸನ್ನು ಸಂಕಲ್ಪಿಸುವನೋ ಅವನನ್ನೂ ಸತ್ಪುತ್ರವಂತನೆಂದೇ ಹೇಳುವರು. ಎಲೈ ಸೋಮನೇ ಇಂದ್ರನ ಪಾನಾರ್ಥವಾಗಿ ಪ್ರವಹಿಸು.

English Translation

(The Brahman) who attends to the stations of the filtered Soma-juice—him men call rich in children, who applies his mind to you, Soma; flow, Indu, for Indra.

॥ ಸಂಹಿತಾಪಾಠಃ ॥

ಋಷೇ ಮಂತ್ರಕೃತಾಂ ಸ್ತೋಮೈಃ ಕಶ್ಯಪೋದ್ವರ್ಧಯನ್ಗಿರಃ ।
ಸೋಮಂ ನಮಸ್ಯ ರಾಜಾನಂ ಯೋ ಜಜ್ಞೇ ವೀರುಧಾಂ ಪತಿರಿಂದ್ರಾ-
ಯೇಂದೋ ಪರಿ ಸ್ರವ ॥ ೨ ॥

॥ ಪದಪಾಠಃ ॥

ಋಷೇ । ಮಂತ್ರಽಕೃತಾಂ । ಸ್ತೋಮೈಃ । ಕಶ್ಯಪ । ಉತ್ಽವರ್ಧಯನ್ । ಗಿರಃ ।
ಸೋಮಂ । ನಮಸ್ಯ । ರಾಜಾನಂ । ಯಃ । ಜಜ್ಞೇ । ವೀರುಧಾಂ । ಪತಿಃ । ಇಂದ್ರಾಯ । ಇಂದೋ ಇತಿ । ಪರಿ । ಸ್ರವ ॥ ೨ ॥

॥ ಸಾಯಣಭಾಷ್ಯಂ ॥

ಋಷಿಃ ಸ್ವಾತ್ಮಾನಂ ಪ್ರತ್ಯಾಹ । ಹೇ ಋಷೇ ಸೂಕ್ತದ್ರಷ್ಟರ್ಹೇ ಕಶ್ಯಪಾತ್ಮನ್ ತ್ವಂ ಮಂತ್ರ-ಕೃತಾಮೃಷೀಣಾಂ ಸ್ತೋಮೈಃ ಸ್ತೋತ್ರೈರ್ಗಿರಃ ಸ್ತುತಿರೂಪಾ ವಾಚ ಉದ್ವರ್ಧಯನ್ನುಪರ್ಯುಪರಿ ವರ್ಧ-

ಯನ್ರಾಜಾನಂ ಸರ್ವೇಷಾಂ ಸ್ವಾಮಿನಂ ತಂ ಸೋಮಂ ನಮಸ್ಯ । ಪೂಜಯ ॥ ನಮಸಃ ಪೂಜಾಯಾಂ ನಮೋವರಿವ ಇತಿ ಕ್ಯಚ್ ॥ ಯಃ ಸೋಮೋ ವೀರುಧಾಂ ವನಸ್ಪತೀನಾಂ ಪತಿಃ ಪಾಲಕೋ ಜಜ್ಞೇ ಜಾತಃ ತಂ ನಮಸ್ಯ ॥ ಹೇ ಸೋಮ ಯಥಾತ್ಮನಾ ಸುಖೋ ಭವಸಿ ತಥಾ ಪರಿ ಸ್ರವ ॥

। ಪ್ರತಿಪದಾರ್ಥ ।

**ಕಶ್ಯಪ**—ಕಶ್ಯಪಸಂಜ್ಞಕನಾದ । **ಋಷೇ**—ಎಲೈ ಋಷಿಯೇ । **ಯಃ**—ಯಾವ ಸೋಮನು । **ವೀರುಧಾಂ**—ಲತಾದಿಗಳಿಗೆಲ್ಲ । **ಪತಿಃ**—ಪಾಲಕನಾಗಿ । **ಜಜ್ಞೇ**—ಉತ್ಪನ್ನನಾಗಿರುವನೋ ಅಂತಹ । **ರಾಜಾನಂ**—ಸಕಲರಿಗೂ ಪ್ರಭುವಾದ । **ಸೋಮಂ**—ಸೋಮದೇವನನ್ನು । **ಮಂತ್ರಕೃತಾಂ**—ಸ್ತುತಿಕರ್ತರ । **ಸ್ತೋಮೈಃ**—ಸ್ತುತಿಗಳಿಂದ ಕೂಡಿದ । **ಗಿರಃ**—ಸ್ತೋತ್ರವಾಕ್ಯಗಳನ್ನು । **ಉದ್ವರ್ಧಯನ್**—ವೃದ್ಧಿಗೊಳಿಸುತ್ತ । **ನಮಸ್ಯ**—ಪೂಜಿಸು । **ಇಂದೋ**—ಎಲೈ ಸೋಮನೇ । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಪ್ರವಹಿಸು.

। ಭಾವಾರ್ಥ ।

ಕಶ್ಯಪಸಂಜ್ಞಕನಾದ ಎಲೈ ಋಷಿಯೇ, ಯಾವ ಸೋಮನು ಲತಾದಿಗಳಿಗೆಲ್ಲ ಪಾಲಕನಾಗಿರುವನೋ ಅಂತಹ ಸಕಲರಿಗೂ ಪ್ರಭುವಾದ ಸೋಮದೇವನನ್ನು ಸ್ತುತಿಕರ್ತರ ಸ್ತುತಿಗಳಿಂದ ಕೂಡಿದ ಸ್ತೋತ್ರಗಳನ್ನು ವೃದ್ಧಿಗೊಳಿಸುತ್ತ ಪೂಜಿಸು. ಎಲೈ ಸೋಮನೇ ಇಂದ್ರನ ಪಾನಾರ್ಥವಾಗಿ ಪ್ರವಹಿಸು.

## English Translation

Rishi Kashyapa, raising your voice with the praises of the hymn-makers, adore the royal Soma who is born the lord of creeping plants: flow, Indu, for Indra.

। ಸಂಹಿತಾ ।

ಸಪ್ತ ದಿಶೋ ನಾನಾಸೂರ್ಯಾಃ ಸಪ್ತ ಹೋತಾರ ಋತ್ವಿಜಃ ।
ದೇವಾ ಆದಿತ್ಯಾ ಯೇ ಸಪ್ತ ತೇಭಿಃ ಸೋಮಾಭಿ ರಕ್ಷ ನ ಇಂದ್ರಾ-
ಯೇಂದೋ ಪರಿ ಸ್ರವ ॥ ೩ ॥

। ಪದಪಾಠಃ ।

ಸಪ್ತ । ದಿಶಃ । ನಾನಾಽಸೂರ್ಯಾಃ । ಸಪ್ತ । ಹೋತಾರಃ । ಋತ್ವಿಜಃ ।
ದೇವಾಃ । ಆದಿತ್ಯಾಃ । ಯೇ । ಸಪ್ತ । ತೇಭಿಃ । ಸೋಮ । ಅಭಿ । ರಕ್ಷ । ನಃ । ಇಂದ್ರಾಯ । ಇಂದೋ
ಇತಿ । ಪರಿ । ಸ್ರವ ॥ ೩ ॥

॥ ಸಾಯಣಭಾಷ್ಯಂ ॥

**ಸಪ್ತ ದಿಶಃ** ಸೋಮೋ ಯಸ್ಯಾಂ ದಿಶಿ ವರ್ತತೇ ತದ್ವ್ಯತಿರಿಕ್ತಾಃ ಸಪ್ತ ಭವಂತಿ । ತಾ ನಾನಾ-ಸೂರ್ಯಾಃ ನಾನಾವಿಧೈಃ ಸೂರ್ಯೈರಧಿಷ್ಠಿತಾ ಋತವೋ ಭವಂತಿ । ನಾನಾಲಿಂಗತ್ವಾದೃತೂನಾಂ ನಾನಾ-ಸೂರ್ಯತ್ವಮಿತ್ಯಾಮ್ನಾನಾತ್ । ಯದ್ವಾ । ನಾನಾಸೂರ್ಯಾಃ ಇತಿ ದಿಗ್ವಿಶೇಷಣಂ । ತಥಾ ಹೋತಾರೋ ವಷಟ್ಕರ್ತಾರೋ ಹೋತ್ರಾದಯಃ ಸಪ್ತರ್ತ್ವಿಜೋ ಭವಂತಿ । ಕಿಂಚ ಸಪ್ತಾದಿತ್ಯಾ ಅದಿತೇಃ ಪುತ್ರಾ ಧಾತ್ರಾದಯೋ ಮಾರ್ತಂಡವರ್ಜಿತಾ ಯೇ ಸಪ್ತ ದೇವಾಃ ಸಂತಿ । ಏತತ್ತ್ವಷ್ಟೌ ಪುತ್ರಾಸೋ ಅದಿತೇಃ । ಋ. ೧೦-೭೨-೮ । ಇತ್ಯತ್ರ ಪ್ರಪಂಚಯಿಷ್ಯತೇ । ಹೇ ಸೋಮ ತೇಭಿಸ್ತೈರ್ದಿಗಾದಿಭಿಃ ಸರ್ವೈರ್ನೋಽಸ್ಮಾನಭಿ ರಕ್ಷ । ಏತತ್ತು ತ್ವಯಾ ವಿನಾ ನ ಘಟತ ಇತಿ ತಸ್ಮಾದಿಂದ್ರಾಯೇಂದೋ ಪರಿ ಸ್ರವ ॥

॥ ಪ್ರತಿಪದಾರ್ಥ ॥

**ನಾನಾಸೂರ್ಯಾಃ**—ಅನೇಕ ಸೂರ್ಯರಿಂದೊಡಗೂಡಿದ । **ದಿಶಃ**—ದಿಕ್ಕುಗಳು । **ಸಪ್ತ**—ಸಪ್ತಸಂಖ್ಯಾಕವಾಗಿವೆ । **ಹೋತಾರಃ**—ಹೋತೃರೂಪರಾದ । **ಋತ್ವಿಜಃ**—ಋತ್ವಿಕ್ಕುಗಳು । **ಸಪ್ತ**—ಸಪ್ತಸಂಖ್ಯಾಕರಾಗಿದ್ದಾರೆ । **ಸೋಮ**—ಎಲೈ ಸೋಮದೇವನೇ । **ಸಪ್ತ**—ಸಪ್ತಸಂಖ್ಯಾಕರಾದವರೂ । **ಆದಿತ್ಯಾಃ**—ಆದಿತ್ಯರೂಪರೂ ಆದ । **ಯೇ ದೇವಾಃ**—ಯಾವ ದೇವತೆಗಳಿದ್ದಾರೆಯೋ । **ತೇಭಿಃ**—ಅವರೆಲ್ಲರೊಡನೆಯೂ । **ನಃ**—ನಮ್ಮನ್ನು । **ಅಭಿ ರಕ್ಷ**—ರಕ್ಷಿಸು । **ಇಂದೋ**—ಎಲೈ ಸೋಮನೇ । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಪ್ರವಹಿಸು.

॥ ಭಾವಾರ್ಥ ॥

ನಾನಾಸೂರ್ಯರಿಂದೊಡಗೂಡಿದ ದಿಕ್ಕುಗಳು ಸಪ್ತಸಂಖ್ಯಾಕವಾಗಿವೆ. ಹೋತೃರೂಪವಾದ ಋತ್ವಿಕ್ಕುಗಳೂ ಸಪ್ತಸಂಖ್ಯಾಕರಾಗಿದ್ದಾರೆ. ಎಲೈ ಸೋಮದೇವನೇ, ಸಪ್ತಸಂಖ್ಯಾಕಕರೂ, ಆದಿತ್ಯರೂಪರೂ ಆದ ಯಾವ ದೇವತೆಗಳಿದ್ದಾರೆಯೋ ಅವರೆಲ್ಲರೊಡನೆಯೂ ನಮ್ಮನ್ನು ರಕ್ಷಿಸು. ಎಲೈ ಸೋಮನೇ, ಇಂದ್ರನ ಪಾನಾರ್ಥವಾಗಿ ಪ್ರವಹಿಸು.

## English Translation

Seven (are) the quarters of the world with different suns, seven (are) the ministrant priests, sevan are the divine Adityas—with these, Soma protect us: flow, Indu, for Indra,

॥ ವಿಶೇಷವಿಷಯಗಳು ॥

**ಸಪ್ತ ದಿಶೋ ನಾನಾಸೂರ್ಯಾಃ**—ಇಲ್ಲಿ ನಾಲ್ಕು ದಿಕ್ಕುಗಳೂ, ನಾಲ್ಕು ವಿದಿಕ್ಕುಗಳೂ ಸೇರಿ ಎಂಟು ದಿಕ್ಕುಗಳಾಗುವವು. **ಸೋಮೋ ಯಸ್ಯಾಂ ದಿಶಿ ವರ್ತತೇ ದದ್ವ್ಯತಿರಿಕ್ತಾ ಸಪ್ತ ಭವಂತಿ ।** ಸೋಮವು ಅಥವಾ ಸೋಮದೇವತೆಯು ಇರುವ ದಿಕ್ಕನ್ನು ಬಿಟ್ಟರೆ ಇನ್ನು ಉಳಿದಿರುವವು ಏಳು ದಿಕ್ಕುಗಳಾಗುವವು. ಆದ್ದರಿಂದ ಇಲ್ಲಿ **ಸಪ್ತ ದಿಶಃ** ಎಂದು ಹೇಳಿದೆ. ಈ ದಿಕ್ಕುಗಳಲ್ಲಿ ನಾನಾವಿಧ ಸೂರ್ಯರುಗಳಿಂದ ಅಧಿಷ್ಠಿತವಾದ ನಾನಾ ಋತುಗಳು ಇರುವವು. ಈ ವಿಷಯದಲ್ಲಿ—**ನಾನಾಲಿಂಗತ್ವಾದೃತೂನಾಂ ನಾನಾಸೂರ್ಯತ್ವಂ** ಎಂಬ ಶ್ರುತಿವಾಕ್ಯವನ್ನು ಭಾಷ್ಯಕಾರರು ಉದಾಹರಿಸಿರುವರು. ಸೂರ್ಯನು ಒಬ್ಬನೇ ಆದರೂ ಋತುಧರ್ಮಾನುಸಾರವಾಗಿ ಸೂರ್ಯನು

ಅವುಗಳಲ್ಲಿ ಅಧಿಷ್ಠಾತೃವಾಗಿರುವುದರಿಂದ ಎಂದರೆ ಋತುಗಳಿಗನುಸಾರವಾಗಿ ನಾನಾಗುಣವಿಶಿಷ್ಟವಾಗಿರುವುದರಿಂದ ಇಲ್ಲಿ ನಾನಾ ಸೂರ್ಯರೆಂದು ಬಹುವಚನಪ್ರಯೋಗವಿದೆ.

**ದೇವಾ ಆದಿತ್ಯಾ ಯೇ ಸಪ್ತ**—ಇದಲ್ಲಿದೆ ಸೂರ್ಯಶಬ್ದಕ್ಕೆ ಆದಿತ್ಯ ಎಂಬ (ಅದಿತಿಯ ಪುತ್ರ) ಎಂಬ ಅರ್ಥವನ್ನು ಉದ್ದೇಶಿಸಿದರೆ ಅದಿತಿಗೆ ಆರು, ಏಳು ಅಥವಾ ಎಂಟು ಮಂದಿ ಪುತ್ರರಿರುವರೆಂದೂ. ಅವರುಗಳು ಯಾರು ಎಂಬುದನ್ನು **ಅಷ್ಟೌ ಪುತ್ರಾಸೋ ಅದಿತೇಃ** (ಋ. ಸಂ. ೧೦-೭೨-.೮) ಎಂಬ ಋಕ್ಕಿನಲ್ಲಿಯೂ ಇತರ ಶ್ರುತಿವಾಕ್ಯಗಳಲ್ಲಿಯೂ ನಿರ್ದೇಶಿಸಿರುವುದನ್ನು ಉದಾಹರಿಸಬಹುದು. ಈ ವಿಷಯದಲ್ಲಿ ಎಂದರೆ ಅದಿತಿಪುತ್ರರು ಅಥವಾ ಆದಿತ್ಯರು ಎಷ್ಟು ಮಂದಿ ಎಂಬ ವಿಷಯದಲ್ಲಿ ಸ್ವಲ್ಪ ವಿವರಣೆಯು ಅವಶ್ಯಕವು.

ಆದಿತ್ಯರೆಂಬ ದೇವತೆಗಳ ಸಂಖ್ಯಾಪರಿಮಿತಿಯೆಷ್ಟು ಎಂಬ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ಚರ್ಚಿಸುವುದು ಅವಶ್ಯಕವಾಗಿದೆ. ಯಾಸ್ಕರು ಉದಾಹರಣೆಗಾಗಿ ಕೊಟ್ಟಿರುವ **ಇಮಾ ಗಿರ ಆದಿತ್ಯೇಭ್ಯಃ** (ಋ. ಸಂ. ೨.೨೭.೧) ಎಂಬ ಋಕ್ಕಿನಲ್ಲಿ ಮಿತ್ರ ಅರ್ಯಮಾ, 'ಭಗಃ ವರುಣಃ ದಕ್ಷಃ ಅಂಶಃ ಎಂದು ಆರುಮಂದಿ ದೇವತೆಗಳ ಹೆಸರುಗಳಿವೆ, ಇವರೇ ಆದಿತ್ಯರೆಂದು ಹೇಳಲಾಗಿದೆ. ಆದರೆ **ತುವಿಜಾತಃ** ಎಂಬ ಶಬ್ದಕ್ಕೆ ನಿರುಕ್ತಕಾರರು **ಬಹುಜಾತಶ್ಚ ಧಾತಾ** (ನಿ. ೧೨-೩೬) ಧಾತಾ ಎಂದು ಅರ್ಥಮಾಡಿದಾರೆ. ಹೇಗೆಂದರೆ—**ತುವೀತಿ ಬಹುನಾಮ । ಸರ್ವವಿಧಾತೃತ್ವಾದ್ಬಹುಜನ್ಮಾ ಧಾತಾ ಯಾವದಧಿಕಾರಂ ಜನ್ಮೇತಿ ।** ಎಂದು ನಿರುಕ್ತಕಾರರು ಅರ್ಥಮಾಡಿದಾರೆ. ತುವಿ ಶಬ್ದಕ್ಕೆ ಬಹು, ಅನೇಕ ಎಂದರ್ಥ. ಜನ್ಮವೆಂದರೆ ಅಧಿಕಾರ. ತುವಿಜಾತ ಎಂದರೆ ಅನೇಕ ವಿಧವಾದ ಅಧಿಕಾರಗಳುಳ್ಳ ಸರ್ವವಿಧಾತೃವಾದ ಧಾತಾ ಎಂದು ಅರ್ಥವು, ಎಂದು ತುವಿಜಾತಶಬ್ದಕ್ಕೆ ಅರ್ಥವಿವರಣೆಮಾಡಿರುವುದರಿಂದ ಈ ಋಕ್ಕಿನಲ್ಲಿ ಧಾತನೂ ಸೇರಿ ಏಳು ಮಂದಿ ಆದಿತ್ಯರೆಂದು ಹೇಳಬೇಕು. ಮತ್ತು **ಸಪ್ತ ದಿಶೋ ನಾನಾ ಸೂರ್ಯಾಃ** ಎಂಬ ಮಂತ್ರದಲ್ಲಿ ಆದಿತ್ಯರ ಸಂಖ್ಯೆಯು ಏಳು ಎಂದು ನಿರ್ದೇಶಿಸಿದೆ. (ಋ. ಸಂ. ೯.೧೧೪-೩) ಆದರೆ ನಾಮನಿರ್ದೇಶವಿಲ್ಲ. **ದೇವಾ ಆದಿತ್ಯಾ ಯೇ ಸಪ್ತ** ಎಂದು ಮಾತ್ರ ತಿಳಿಸಿದೆ. ಹಿಂದೆ ಅದಿತಿಯ ವಿಷಯವನ್ನು ತಿಳಿಸುವಾಗ ೧೦. ೭೨-೮, ೯ ಈ ಮಂತ್ರಗಳನ್ನುದ್ಧರಿಸಿ ಅದಿತಿಗೆ ಎಂಟು ಜನ ಪುತ್ರರೆಂದೂ ಅವರಲ್ಲಿ ಏಳು ಜನರನ್ನೂ ದೇವತೆಗಳಿಗೆ ಅರ್ಪಿಸಿದಳೆಂದೂ ಮಾರ್ತಾಂಡನೆಂಬ ಎಂಟನೆಯವನನ್ನು ತಾನೇ ಇರಿಸಿಕೊಂಡು ಪೋಷಿಸಿದಳೆಂಬುದನ್ನೂ ವಿವರಿಸಿದೆ. ಇಲ್ಲಿಯೂ ಸಹ ಮಾರ್ತಾಂಡನನ್ನು ಬಿಟ್ಟು ಉಳಿದವರ ನಾಮನಿರ್ದೇಶವಿಲ್ಲ. (ಅ. ವೇ. ೮-೯-೨೧) ನೇ ಮಂತ್ರದಲ್ಲಿ ಅದಿತಿಗೆ ಎಂಟು ಪುತ್ರರೆಂದು ತಿಳಿಸಿದೆ. ೨-೨೭-೧ ನೇ ಮಂತ್ರದ ತಾತ್ಪರ್ಯವನ್ನು ವಿವರಿಸುವಾಗ ಸಾಯಣರು ಅವರ ಸಂಖ್ಯೆಯನ್ನು ತಿಳಿಸಲು ತೈತ್ತಿರೀಯಾರಣ್ಯಕದ ವಾಕ್ಯವನ್ನುದ್ಧರಿಸಿ **ಅಷ್ಟೌ ಪುತ್ರಾಸೋ ಅದಿತೇಃ................ ತಾನನುಕ್ರಮಿಷ್ಯಾಮಃ ಮಿತ್ರಶ್ಚ ವರುಣಶ್ಚ । ಧಾತಾ ಚಾರ್ಯಮಾ ಚ । ಅಂಶಶ್ಚ ಭಗಶ್ಚ ಇಂದ್ರಶ್ಚ ವಿವಸ್ವಾಂಶ್ಚೇತ್ಯೇತೇ** (ತೈ. ಆ. ೧-೧೩-೩) ಅಲ್ಲಿರುವಂತೆ, ದಿತಿಯ ಅಷ್ಟಪುತ್ರರನ್ನು ತಿಳಿಸಿದ್ದಾರೆ.

**ಉದಗಾದಯಮಾದಿತ್ಯಃ** (ಋ. ಸಂ. ೧.೫೦.೧೩); **ಉದಪಪ್ತದಸೌ ಸೂರ್ಯಃ** (ಋ. ಸಂ. ೧-೧೯೧-೯) ಇತ್ಯಾದಿ ಸ್ಥಳಗಳಲ್ಲಿ ಸೂರ್ಯನಿಗೂ ಆದಿತ್ಯನಿಗೂ ತಾದಾತ್ಮ್ಯವನ್ನು ತಿಳಿಸಿದೆ. ಆದಿತೇಯನಾದ (ಅದಿತಿಪುತ್ರನಾದ) ಅಗ್ನಿಯೇ ಅಂತರಿಕ್ಷದಲ್ಲಿ ಸೂರ್ಯರೂಪದಲ್ಲಿ ದೇವತೆಗಳಿಂದ ಸ್ಥಾಪಿತನಾಗಿದ್ದಾನೆ ಎಂದು ವರ್ಣಿತವಾಗಿರುವುದೂ ಉಂಟು.

**ಯದೇದೇನಮದಧುರ್ಯಜ್ಞಿಯಾಸೋ ದಿವಿ ದೇವಾಃ ಸೂರ್ಯಮಾದಿತೇಯಂ** (ಋ. ಸಂ. ೧೦-೮೮-೧೧) **ಅನರ್ವಾಣೋ ಹ್ಯೇಷಾಂ ಪಂಥಾ ಆದಿತ್ಯಾನಾಂ** (ಋ. ಸಂ. ೮-೧೮-೨) ಎಂದು ಆದಿತ್ಯರ ಬಹುಪ ಸ್ವರೂಪವನ್ನೂ

೨೯೩೩. ತನ್ನೋ ನಃ ಸವಿತಾ ಭಗೋ ವರುಣೋ ಮಿತ್ರೋ ಅರ್ಯಮಾ (ಋ ಸಂ. ೮.೧೮.೩) ಎಂಬ ನಾಲ್ಕು ಆದಿತ್ಯರೊಂದಿಗೆ ಸವಿತೃವಿನ ನಾಮವು ಸೇರಿದೆ. ಸೂರ್ಯ ಅಥವಾ ಸವಿತೃ ದೇವತೆಗೆ ಆದಿತ್ಯರಲ್ಲಿ ಏಳನೆಯ ಸ್ಥಾನವು-- ಕೆಲವೆಡೆಗಳಲ್ಲಿ ನಿರ್ದಿಷ್ಟವಾಗಿದೆ. (ಅ. ವೇ. ೮-೨-೯: ೩೭) ಕೆಲವೆಡೆಗಳಲ್ಲಿ ವರುಣನ ಜೊತೆಯಲ್ಲಿ ಇಂದ್ರನೂ ಆದಿತ್ಯನೆಂದು ಪರಿಗಣಿತನಾಗಿದ್ದಾನೆ. (ಋ. ಸಂ. ೭-೮೫-೪).

**ತತ್ರ ತ್ವಾದಿತ್ಯಾ ರಕ್ಷತಾಂ ಸೂರ್ಯಾಚಂದ್ರಮಸಾವುಭೌ**

(ಅ. ವೇ ೮-೨-೧೫)

ಎಂಬ ಸ್ಥಳಗಳಲ್ಲಿ ಸೂರ್ಯ ಮತ್ತು ಚಂದ್ರ ಇವರಿಬ್ಬರನ್ನೂ ಆದಿತ್ಯರ ಗುಂಪಿನಲ್ಲಿ ಸೇರಿಸಿದೆ.

**ಮಾತಾಽಽದಿತ್ಯಾನಾಂ ದುಹಿತಾ ವಸೂನಾಂ . . . ಹಿರಣ್ಯವರ್ಣಾ ಮಧುಕಶಾ**

(ಅ. ವೇ. ೯-೧-೪)

ಹಿರಣ್ಯವರ್ಣಾತ್ಮಕಳಾದ ಮಧುಕಶೆಯನ್ನು ಆದಿತ್ಯಮಾತೆಯೆಂದೂ, ವಸುಪುತ್ರಿಯೆಂದೂ ಕರೆದಿದೆ. ಹೀಗೆ ಒಂದೊಂದು ಸನ್ನಿವೇಶದಲ್ಲಿ ಒಂದೊಂದು ವಿಧವಾಗಿ ಅದಿತಿಗೂ ಆದಿತ್ಯರಿಗೂ ಇರುವ ಸಂಬಂಧವನ್ನು ತಿಳಿಸಿದೆ. ಇವರ ಸಂಬಂಧವನ್ನು ತೈತ್ತಿರೀಯಬ್ರಾಹ್ಮಣದಲ್ಲಿ ಈ ರೀತಿ ವಿವರಿಸಿದೆ.

**ಅದಿತಿಃ ಪುತ್ರಕಾಮಾ । ಸಾಧ್ಯೇಭ್ಯೋ ದೇವೇಭ್ಯೋ ಬ್ರಹ್ಮೌದನಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯೈ ಧಾತಾ ಚಾರ್ಯಮಾ ಚಾ ಜಾಯೇತಾಂ । ಸಾ ದ್ವಿತೀಯಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ ॥ ಸಾ ರೇತೋಽಧತ್ತ । ತಸ್ಯೈ ಮಿತ್ರಶ್ಚ ವರುಣಶ್ಚಾ ಜಾಯೇತಾಂ । ಸಾ ತೃತೀಯಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯಾ ಅಗ್ಂಶಶ್ಚ ಭಗಶ್ಚಾ ಜಾಯೇತಾಂ । ಸಾ ಚತುರ್ಥಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯಾ ಇಂದ್ರಶ್ಚ ವಿವಸ್ವಾಗ್‌ಶ್ಚಾ ಜಾಯೇತಾಂ ॥**

(ತೈ. ಬ್ರಾ. ೧-೧-೯-೧,೨,೩)

ಅದಿತಿಯು ಪುತ್ರಕಾಮಳಾಗಿ ದೇವತೆಗಳನ್ನೂ ಸಾಧ್ಯರನ್ನೂ ಉದ್ದೇಶಿಸಿ ಬ್ರಹ್ಮೌದನರೂಪವಾದ ಹವಿಸ್ಸನ್ನು ಪಕ್ವ ಮಾಡಿದಳು. ಅವರು ತಾವು ಆ ಹವಿಸ್ಸನ್ನು ಭುಜಿಸಿ ಅದರಲ್ಲಿ ಉಳಿದ ಶೇಷವನ್ನು ಅವಳಿಗೆ ಕೊಟ್ಟರು. ಅವಳು ಅದನ್ನು ಭುಜಿಸಿದಾಗ ಅದರ ಪ್ರಭಾವದಿಂದ **ಧಾತಾ ಅರ್ಯಮಾ** ಎಂಬಿಬ್ಬರು ಪುತ್ರರು ಜನಿಸಿದರು. ಇದೇ ಕ್ರಮವನ್ನು ಎರಡನೆಯಸಲ ಆಚರಿಸಿದಾಗ ಮಿತ್ರ ಮತ್ತು ವರುಣರೂ, ಮೂರನೆಯ ಸಲ ಅಂಶ ಮತ್ತು ಭಗರೂ, ನಾಲ್ಕನೆಯ ಸಲ ಇಂದ್ರ ಮತ್ತು ವಿವಸ್ವಂತರೂ ಉತ್ಪನ್ನರಾದರು. ಇವರೇ ಆದಿತ್ಯರು ಎಂದು ತೈತ್ತಿರೀಯಬ್ರಾಹ್ಮಣವು ವರ್ಣಿಸಿದೆ. ಇದೇ ವಿಷಯವನ್ನು ಶತಪಥಬ್ರಾಹ್ಮಣದಲ್ಲಿ ವಿವರಿಸುತ್ತಾ ಈ ರೀತಿ ತಿಳಿಸಿದೆ.

**ಸ ಮನಸಾ ಏವ ವಾಚಂ ಮಿಥುನಂ ಸಮಭವತ್ಸ ದ್ವಾದಶದ್ರಪ್ಸಾನ್ಗರ್ಭ್ಯಭವತ್ । ತೇ ದ್ವಾದಶ ಆದಿತ್ಯಾ ಅಸೃಜ್ಯಂತ ತಾನ್ ದಿಕ್ಷೂಪಾದಧತ್ ॥**

(ಶ. ಬ್ರಾ. ೬-೧-೨-೮)

(ಪ್ರಜಾಪತಿಯು) ವಾಕ್ಕಿನೊಡನೆ ತನ್ನ ಮಾನಸಿಕವಾದ ಸಂಬಂಧವನ್ನು ಹೊಂದಿದನು. ಆಗ ಹನ್ನೆರಡು ದ್ರಪ್ಸಾತ್ಮಕವಾದ ಗರ್ಭವನ್ನು ಹೊಂದಿದನು. ಅದರ ಫಲವೇ ದ್ವಾದಶಾದಿತ್ಯರ ಆವಿರ್ಭಾವವು- ಆಗ ಅವರನ್ನು ದಿಕ್ಕುಗಳ ಪಾಲಕರನ್ನಾಗಿ ಇರಿಸಿದನು ಎಂದಿದೆ. ಇದೇ ರೀತಿಯಲ್ಲಿ ಆದಿತ್ಯರ ವಿಷಯವನ್ನು ತಿಳಿಸತಕ್ಕ ಇತರ ಶ್ರುತಿವಾಕ್ಯಗಳನ್ನೂ ಪರಿಶೀಲಿಸಬಹುದು.

**ಕತಮ ಆದಿತ್ಯಾ ಇತಿ। ದ್ವಾದಶ ವೈ ಮಾಸಾಃ। ಸಂವತ್ಸರಸ್ಯೈತ ಆದಿತ್ಯಾ ಏತೇ ಹೀದಂ ಸರ್ವಮಾದದಾನಾ ಯಂತಿ ತೇ ಯದಿದಂ ಸರ್ವಮಾದದಾನಾ ಯಂತಿ ತಸ್ಮಾದಾದಿತ್ಯಾ ಇತಿ ॥**

(ಶ. ಬ್ರಾ. ೧೧-೬-೩.೮)

ಆದಿತ್ಯರು ಎಷ್ಟುಮಂದಿ ? ಆದಿತ್ಯರು ಹನ್ನೆರಡು ಸಂಖ್ಯೆಯುಳ್ಳವರು. ಸಂವತ್ಸರದಲ್ಲಿ ಹನ್ನೆರಡು ಮಾಸಗಳಿವೆ. ಇವುಗಳೇ ಆದಿತ್ಯರು. ಆ ಮಾಸಗಳೇ ಸಕಲವನ್ನೂ ಪರಿಗ್ರಹಿಸಿ ಮುಂದುವರಿಯುತ್ತಿರುವುದರಿಂದ ಅವುಗಳಿಗೆ ಆದಿತ್ಯರೆಂದು ಹೆಸರು ಎಂದಿದೆ. ಇದೇ ಆದಿತ್ಯರ ವಿಷಯಕವಾದ ಕಥೆಯು ತೈತ್ತಿರೀಯ ಬ್ರಾಹ್ಮಣದಲ್ಲಿ ಈ ರೀತಿ ಉಕ್ತವಾಗಿದೆ

**ಆದಿತ್ಯಾಶ್ಚಾಂಗಿರಸಶ್ಚ ಸುವರ್ಗೇ ಲೋಕೇಽಸ್ಪರ್ಧಂತ। ತೇಽಂಗಿರಸ ಆದಿತ್ಯೇಭ್ಯಃ। ಅಮುಮಾದಿತ್ಯಮಶ್ವಗ್ಂ ಶ್ವೇತಂ ಭೂತಂ ದಕ್ಷಿಣಾಮನಯನ್। ತೇಽಬ್ರುವನ್ । ಯನ್ನೋಽವೇಷ್ಟ। ಸ ವರ್‍ಯೋಽಭೂದಿತಿ। ತಸ್ಮಾದಶ್ವಗ್ಂ ಸವರ್‍ಯೇತ್ಯಾಹ್ವಯಂತಿ। ತಸ್ಮಾದ್ಯಜ್ಞೇ ವರೋ ದೀಯತೇ। ಯತ್ಪ್ರಜಾಪತಿರಾಲಬ್ಧೋಽಶ್ವೋಽಭವತ್। ತಸ್ಮಾದಶ್ವೋ ನಾಮ। ಯಚ್ಛ್ವಯದರುರಾಸೀತ್। ತಸ್ಮಾದರ್ವಾ ನಾಮ । ಯತ್ಸದ್ಯೋ ವಾಜಾನ್ತ್ಸಮಜಯತ್ । ತಸ್ಮಾದ್ವಾಜೀ ನಾಮ । ಯದಸುರಾಣಾಂ ಲೋಕಾನಾದತ್ತ। ತಸ್ಮಾದಾದಿತ್ಯೋ ನಾಮ ॥**

(ತೈ. ಬ್ರಾ. ೩-೯-೨೧-೧,೨)

ಸ್ವರ್ಗದಲ್ಲಿ ಆದಿತ್ಯರೂ, ಅಂಗಿರಸ್ಸುಗಳೂ ಪರಸ್ಪರ ಸ್ಪರ್ಧಿಸಿದರು. ಶ್ವೇತಾಶ್ವರೂಪನಾಗಿದ್ದ ಆದಿತ್ಯನನ್ನು ಅಂಗಿರಸ್ಸುಗಳು ಆದಿತ್ಯರಿಗೆ ದಕ್ಷಿಣಾರೂಪದಲ್ಲರ್ಪಿಸಿದರು. ಆಗ ಆದಿತ್ಯರು ಅಂಗಿರಸ್ಸುಗಳನ್ನು ಕುರಿತು 'ನೀವು ತಂದಿರುವ ಈ ಆದಿತ್ಯನು ಅತ್ಯಂತ ಶ್ರೇಷ್ಠರೂಪನಾಗಿದ್ದಾನೆ' ಎಂದರು. ಆದಿತ್ಯರು ಅಶ್ವರೂಪಿಯಾದ ಆದಿತ್ಯನನ್ನು **ಸ ವರ್‍ಯಃ** (ಅವನು ಶ್ರೇಷ್ಠನು) ಎಂದು ಹೇಳಿದ್ದರಿಂದಲೇ ಲೋಕದಲ್ಲೂ ಅಶ್ವವು **ಸವರ್‍ಯ** ವೆಂದೇ ಕರೆಯಲ್ಪಟ್ಟಿತು. ಆದುದರಿಂದ ಯಜ್ಞದಲ್ಲಿ ಒಂದು **ವರವು ದತ್ತವಾಯಿತು.** ಯಜ್ಞಾರ್ಪಿತನಾದ ಪ್ರಜಾಪತಿಯು ಸರ್ವವ್ಯಾಪಿಯಾದುದರಿಂದ **ಅಶ್ವ**ವೆಂದೂ ಮತ್ತು ಚಕ್ಷುರ್ವೇದನೆಯನ್ನನುಭವಿಸಿದುದರಿಂದ **ಅರ್ವ**ವೆಂದೂ ಸಂಪತ್ತುಗಳನ್ನೆಲ್ಲಾ ತನ್ನ ವಶಮಾಡಿಕೊಂಡುದರಿಂದ **ವಾಜಿ**ಯೆಂದೂ ಅಸುರರಿಂದ ಅವರ ಲೋಕಗಳನ್ನೆಲ್ಲಾ ಕಸಿದುಕೊಂಡುದರಿಂದ (ಆದತ್ತ) **ಆದಿತ್ಯ**ನೆಂದೂ ಪ್ರಸಿದ್ಧನಾಗಿದ್ದಾನೆ ಎಂದು ಆದಿತ್ಯಶಬ್ದದ ನಿರ್ವಚನವನ್ನು ತಿಳಿಸಿದೆ- ಇದೇ ನಿರ್ವಚನವನ್ನು ತೈತ್ತಿರೀಯಾರಣ್ಯಕದಲ್ಲಿ ವಿವರಿಸುತ್ತಾ,

**ಯೋಽಸೌ ತಪನ್ನುದೇತಿ। ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತಿ।**

(ತೈ. ಆ. ೧.೧೪.೧)

ಯಾವ ಈ ಸೂರ್ಯನು ಉದಯಿಸುವನೋ ಅವನು ಸಕಲ ಭೂತಗಳ ಪ್ರಾಣಗಳನ್ನೂ ಕಸಿದುಕೊಂಡು (ಆ+ದಾ) ಉದಯಿಸುತ್ತಾನೆ. ಆದುದರಿಂದಲೇ ಅವನು ಆದಿತ್ಯನು. ಹೀಗೆ ಅದಿತಿಪುತ್ರತ್ವದಿಂದಲೇ ಆದಿತ್ಯರೆಂಬುದಾಗಿ, ಅಥವಾ ಆದಾನ ಕ್ರಿಯಾವಿಶಿಷ್ಟರಾದುದರಿಂದಲೇ ಆದಿತ್ಯರೆಂಬುದೂ ಎರಡು ರೀತಿಯಾದ ಸನ್ನಿವೇಶವೂ ವರ್ಣಿತವಾಗಿದೆ. ಈ ಪದಕ್ಕೆ ನಿರುಕ್ತಕಾರರು ಈ ರೀತಿ ವಿವರಣೆಯನ್ನು ತಿಳಿಸಿದ್ದಾರೆ.

**ಆದಿತ್ಯಃ ಕಸ್ಮಾತ್ । ಆದತ್ತೇ ರಸಾನ್ । ಆದತ್ತೇ ಭಾಸಂ ಜ್ಯೋತಿಷಾಂ । ಆದೀಪ್ತೋ ಭಾಸೇತಿ ವಾ ಅದಿತೇಃ ಪುತ್ರ ಇತಿ ವಾ । ...... ...... ......ಸೂರ್ಯಮಾದಿತೇಯಂ । ಏವಮನ್ಯಾಸಾಮಪಿ ದೇವತಾನಾಮಾದಿತ್ಯಪ್ರವಾದಾಃ ಸ್ತುತಯೋ ಭವಂತಿ । ತದ್ಯಥೈತತ್ । ಮಿತ್ರಸ್ಯ ವರುಣಸ್ಯಾರ್ಯಮ್ಣೋ ದಕ್ಷಸ್ಯ ಭಗಸ್ಯಾಂಶಸ್ಯೇತಿ ॥** (ನಿ. ೨.೧೩)

**"ಸಹಸ್ರಗುಣಮುತ್ಸ್ರಷ್ಟುಮಾದತ್ತೇ ಹಿ ರಸಂ ರವಿಃ"** ಇತ್ಯಾದಿಯಾಗಿ ವರ್ಣಿತವಾಗಿರುವಂತೆ ರಸವನ್ನು ಆದಾನಮಾಡುವುದರಿಂದ ಆದಿತ್ಯನೆಂಬ ಹೆಸರು ಪ್ರಸಿದ್ಧವಾಗಿದೆ. ರಸವನ್ನೇ ಅಲ್ಲದೇ, ಸಕಲ ತೇಜಸ್ಸನ್ನೂ ಆದಾನಮಾಡುತ್ತಾನೆ. ಪ್ರಕಾಶದಿಂದ ಪ್ರದೀಪ್ತನಾಗುವುದರಿಂದಾಗಲಿ ಅಥವಾ ಅದಿತಿಪುತ್ರನಾದುದರಿಂದಾಗಲಿ ಈಹೆಸರು ಪ್ರಸಿದ್ಧವಾಗಿದೆ. ಆದರೆ ಋಕ್ಸಂಹಿತೆಯಲ್ಲಿ ಸೂರ್ಯನನ್ನು ಅದಿತಿಪುತ್ರನೆಂದು ಕರೆದಿರುವುದು ಒಂದೆರಡುಕಡೆಗಳಲ್ಲಿ ಮಾತ್ರ. **"ದಿವಿ ದೇವಾಃ ಸೂರ್ಯ ಆದಿತೇಯಂ"** (ಋ. ಸಂ. ೧೦-೮೮-೧೧) ಇತ್ಯಾದಿ ಸ್ಥಳಗಳಲ್ಲಿ ಈ ವಿವರಣರೂಪವಾದ ವರ್ಣನವಿದೆ. ಸೂರ್ಯನಲ್ಲದೇ ಮಿತ್ರ, ವರುಣ, ಅರ್ಯಮ, ದಕ್ಷ, ಭಗ, ಅಂಶ ಇವರನ್ನೂ ಆದಿತ್ಯರೆಂದೇ ನಿರ್ದೇಶಿಸಿದೆ.

ಹೀಗೆ ಆತ್ಮಗುಣವರ್ಣನವೇ ಆದಿತ್ಯಪದದ ತಾತ್ಪರ್ಯವಾದರೆ ಅದು ಸೂರ್ಯನಿಗೆ ಮಾತ್ರ ಅನ್ವಯಿಸುತ್ತದೆ. ಅದಿತಿಪುತ್ರತ್ವವನ್ನು ತೋರಿಸುವುದಾದರೆ, ಮಿತ್ರಾವರುಣಾದಿಗಳಿಗೂ ಅನ್ವಯಿಸುತ್ತದೆ. ಎರಡನೆಯ ಅರ್ಥವನ್ನು ಕೊಡುವುದಾದರೆ, ಆಗ ಅದಿತಿಪುತ್ರರೆಷ್ಟುಮಂದಿ ಎಂಬುದೂ ನಿಷ್ಕೃಷ್ಟವಾದ ವಿಷಯವಾಗಿದೆ. ಆರು, ಎಂಟು, ಹನ್ನೆರಡು ಇತ್ಯಾದಿಯಾಗಿ ಸಂಖ್ಯಾನಿರ್ದೇಶಗಳಿವೆ. ಈ ಸಂಖ್ಯೆಯನ್ನು ತೋರಿಸುವ ಕೆಲವು ಶ್ರುತಿವಾಕ್ಯಗಳನ್ನು ಮೇಲೆ ಉದಾಹರಿಸಿದೆ.

**ಸಪ್ತ ಹೋತಾರ ಋತ್ವಿಜಃ**–ಇಲ್ಲಿ ಸಪ್ತ ಹೋತೃಗಳೆಂದರೆ–**ಹೋತೃ, ಮೈತ್ರಾವರುಣ, ಬ್ರಾಹ್ಮಣಾಚ್ಛಂಸೀ, ಪೋತೃ, ನೇಷ್ಟೃ,** ಅಚ್ಛಾವಾಕ ಮತ್ತು ಆಗ್ನೀಧ್ರ ಎಂಬ ಏಳುಜನ ಋತ್ವಿಕ್ಕುಗಳು ಈ ಋತ್ವಿಕ್ಕುಗಳು ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳೆಂಬ ಮೂರು ಸವನಗಳಲ್ಲಿಯೂ (ಸೋಮರಸವನ್ನು ಹಿಂಡಿ ತೆಗೆದು ಅದನ್ನು ಅಗ್ನಿಯಲ್ಲಿ ವಿಧಿಪೂರ್ವಕವಾಗಿ ಹೋಮಮಾಡುವ ಕರ್ಮಕ್ಕೆ ಸವನವೆಂದು ಹೆಸರು) ಒಬ್ಬೊಬ್ಬರು ಒಂದೊಂದು ಋಕ್ಕನ್ನು ವಷಟ್ಕಾರಪೂರ್ವಕವಾಗಿ ಎಂದರೆ ಮಂತ್ರಾಂತ್ಯದಲ್ಲಿ **ವೌಷಟ್** ಎಂಬ ಪದವನ್ನು ಸೇರಿಸಿ ಹೋಮವನ್ನು ಅಗ್ನಿಯಲ್ಲಿ ಹೋಮಮಾಡುವರು. ಪ್ರಾತಸ್ಸವನಕಾಲದಲ್ಲಿ ಗಾಯತ್ರೀಛಂದಸ್ಸಿನ ಋಕ್ಕುಗಳಿಂದಲೂ, ಮಾಧ್ಯಂದಿನಸವನಕಾಲದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಂದಲೂ, ತೃತೀಯಸವನದಲ್ಲಿ ಜಗತೀಛಂದಸಿನ ಮಂತ್ರಗಳಿಂದಲೂ ಹೋಮಮಾಡಬೇಕೆಂಬ ವಿಧಿ ಇದೆ. ಆಯಾ ಸವನಕಾಲದಲ್ಲಿ ಆಯಾ ಋತ್ವಿಕ್ಕುಗಳು ಪಠಿಸುವ ಈ ಮಂತ್ರಗಳಿಗೆ ಪ್ರಸ್ಥಿತಯಾಜ್ಯಾಮಂತ್ರಗಳೆಂದು ಅಥವಾ **ಸಪ್ತಹೋತ್ರಮಂತ್ರ**ಗಳೆಂದು ಹೆಸರು. ಅವುಗಳನ್ನು ಇಲ್ಲಿ ವಿಶದವಾಗಿ ವಿವರಿಸಲಾಗಿದೆ—

**॥ ಪ್ರಾತಃಸವನ ॥**

ಈ ಸವನದಲ್ಲಿ ಏಳು ಜನ ಋತ್ವಿಕ್ಕುಗಳೂ ಗಾಯತ್ರೀಛಂದಸ್ಸಿನ ಋಕ್ಕುಗಳನ್ನೇ ಪಠಿಸಬೇಕು.

ಹೋತೃವು ಪಠಿಸಬೇಕಾದ ಮಂತ್ರವು—

**ಇದಂ ತೇ ಸೋಮ್ಯಂ ಮಧ್ವಧುಕ್ಷನ್ನದ್ರಿಭಿರ್ನರಃ ।**
**ಜುಷಾಣ ಇಂದ್ರ ತತ್ಪಿಬ ॥** (ಋ. ಸಂ. ೮-೬೫-೮)

೨. ಬ್ರಾಹ್ಮಣಾಚ್ಛಂಸೀ ಎಂಬ ಋತ್ವಿಜನು ಪಠಿಸಬೇಕಾದ ಮಂತ್ರ—

**ಇಂದ್ರ ತ್ವಾ ವೃಷಭಂ ವಯಂ ಸುತೇ ಸೋಮೇ ಹವಾಮಹೇ ।**
**ಸ ಪಾಹಿ ಮಧ್ವೋ ಅಂಧಸಃ ॥**
(ಋ. ಸಂ. ೩-೪೦-೧)

೩. ಮಿತ್ರಾವರುಣನೆಂಬ ಋತ್ವಿಜನು ಪಠಿಸಬೇಕಾದ ಮಂತ್ರವು—

**ಮಿತ್ರಂ ವಯಂ ಹವಾಮಹೇ ವರುಣಂ ಸೋಮಪೀತಯೇ ।**
**ಜಜ್ಞಾನಾ ಪೂತದಕ್ಷಸಾ ॥**
(ಋ. ಸಂ. ೧-೨೩-೪)

೪. ಪೋತ್ರವೆಂಬ ಋತ್ವಿಜನು ಪಠಿಸಬೇಕಾದ ಮಂತ್ರ—

**ಮರುತೋ ಯಸ್ಯ ಹಿ ಕ್ಷಯೇ ಪಾಥಾ ದಿವೋ ವಿಮಹಸಃ ।**
**ಸ ಸುಗೋಪಾತಮೋ ಜನಃ ॥**
(ಋ. ಸಂ. ೧-೮೬-೧)

೫. ನೇಷ್ಟ್ರವೆಂಬ ಋತ್ವಿಜನು ಪಠಿಸಬೇಕಾದ ಮಂತ್ರ—

**ಅಗ್ನೇ ಪತ್ನೀರಿಹಾ ವಹ ದೇವಾನಾಮುಶತೀರುಪ ।**
**ತ್ವಷ್ಟಾರಂ ಸೋಮಪೀತಯೇ ॥** (ಋ. ಸಂ. ೧-೨೨-೯)

೬. ಆಗ್ನೀಧ್ರನೆಂಬ ಋತ್ವಿಜನು ಪಠಿಸಬೇಕಾದ ಮಂತ್ರ—

**ಉಕ್ಷಾನ್ನಾಯ ವಶಾನ್ನಾಯ ಸೋಮಪೃಷ್ಠಾಯ ವೇಧಸೇ ।**
**ಸ್ತೋಮೈರ್ವಿಧೇಮಾಗ್ನಯೇ ॥**
(ಋ. ಸಂ. ೮-೪೩-೧೧)

೭. ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಮಂತ್ರ—

**ಪ್ರಾತರ್ಯಾವಭಿರಾ ಗತಂ ದೇವೇಭಿರ್ಜೇನ್ಯಾವಸೂ ।**
**ಇಂದ್ರಾಗ್ನೀ ಸೋಮಪೀತಯೇ ॥**
(ಋ. ಸಂ. ೮-೩೮-೭)

**॥ ಮಾಧ್ಯಂದಿನಸವನ ।**

ಈ ಸವನವಲ್ಲಿ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳನ್ನೇ ಪಠಿಸಬೇಕು. ಅವುಗಳಲ್ಲಿ

೧. ಪೋತ್ರವು ಪಠಿಸಬೇಕಾದ ಮಂತ್ರ—

**ಪಿಬಾ ಸೋಮಮಭಿ ಯಮುಗ್ರ ತರ್ದ ಊರ್ವಂ ಗವ್ಯಂ ಮಹಿ ಗೃಣಾನ ಇಂದ್ರ ।**
**ವಿ ಯೋ ಧೃಷ್ಣೋ ವಧಿಷೋ ವಜ್ರಹಸ್ತ ವಿಶ್ವಾ ವೃತ್ರಮಮಿತ್ರಿಯಾ ಶವೋಭಿಃ ॥**
(ಋ. ಸಂ. ೬-೧೭-೧)

೨. ಮೈತ್ರಾವರುಣ—

ಸ ಈಂ ಪಾಹಿ ಯ ಋಜೀಷೀ ತರುತ್ರೋ ಯಃ ಶಿಪ್ರವಾನ್ ವೃಷಭೋ ಯೋ ಮತೀನಾಂ ।
ಯೋ ಗೋತ್ರಭಿದ್ವಜ್ರಭೃದ್ಯೋ ಹರಿಷ್ಠಾಃ ಸ ಇಂದ್ರ ಚಿತ್ರಾ ಅಭಿ ತೃಂಧಿ ವಾಜಾನ್ ॥

(ಋ. ಸಂ. ೬-೧೭-೨)

೩. ಬ್ರಾಹ್ಮಣಾಚ್ಛಂಸೀ—

ಏವಾ ಪಾಹಿ ಪ್ರತ್ನಥಾ ಮಂದತು ತ್ವಾ ಶ್ರುಧಿ ಬ್ರಹ್ಮ ವಾವೃಧಸ್ವೋತ ಗೀರ್ಭಿಃ ।
ಆವಿಃ ಸೂರ್ಯಂ ಕೃಣುಹಿ ಪೀಪಿಹೀಷೋ ಜಹಿ ಶತ್ರೂಁರಭಿ ಗಾ ಇಂದ್ರ ತೃಂಧಿ ॥

(ಋ. ಸಂ. ೬-೧೭-೩)

೪. ಪೋತೃ—

ಅರ್ವಾಙೇಹಿ ಸೋಮಕಾಮಂ ತ್ವಾಹುರಯಂ ಸುತಸ್ತಸ್ಯ ಪಿಬಾ ಮದಾಯ ।
ಉರುವ್ಯಚಾ ಜಠರ ಆ ವೃಷಸ್ವ ಪಿತೇವ ನಃ ಶೃಣುಹಿ ಹೂಯಮಾನಃ ॥

(ಋ. ಸಂ. ೧-೧೦೪-೯)

೫. ನೇಷ್ಟೃ—

ತವಾಯಂ ಸೋಮಸ್ತ್ವಮೇಹ್ಯರ್ವಾಙ್ ಶಶ್ವತ್ತಮಂ ಸುಮನಾ ಅಸ್ಯ ಪಾಹಿ ।
ಅಸ್ಮಿನ್ ಯಜ್ಞೇ ಬರ್ಹಿಷ್ಯಾ ನಿಷದ್ಯಾ ದಧಿಷ್ವೇಮಂ ಜಠರ ಇಂದುಮಿಂದ್ರ ॥

(ಋ. ಸಂ. ೩-೩೫-೬)

೬. ಅಚ್ಛಾವಾಕ—

ಇಂದ್ರಾಯ ಸೋಮಾಃ ಪ್ರದಿವೋ ವಿದಾನಾ ಋಭುರ್ಯೇಭಿರ್ವೃಷಪರ್ವಾ ವಿಹಾಯಾಃ ।
ಪ್ರಯಮ್ಯಮಾನಾನ್ ಪ್ರತಿ ಷೂ ಗೃಭಾಯೇಂದ್ರ ಪಿಬ ವೃಷಧೂತಸ್ಯ ವೃಷ್ಣಃ ॥

(ಋ. ಸಂ. ೩-೩೬-೨)

೭. ಆಗ್ನೀಧ್ರ—

ಅಪೂರ್ಣೋ ಅಸ್ಯ ಕಲಶಃ ಸ್ವಾಹಾ ಸೇಕ್ತೇವ ಕೋಶಂ ಸಿಸಿಚೇ ಪಿಬಧ್ಯೈ ।
ಸಮು ಪ್ರಿಯಾ ಆವವೃತ್ರನ್ ಮದಾಯ ಪ್ರದಕ್ಷಿಣಿದಭಿ ಸೋಮಾಸ ಇಂದ್ರಂ ॥

(ಋ. ಸಂ. ೩-೩೨-೧೫)

॥ ತೃತೀಯಸವನ ॥

ಈ ಸವನದಲ್ಲಿ ಪಠಿಸಬೇಕಾದ ಮಂತ್ರಗಳೆಲ್ಲವೂ ಜಗತೀ ಛಂದಸ್ಸಿನಲ್ಲಿರುವುವು.

೧. ಹೋತೃವು—

ಇಂದ್ರ ಋಭುಭಿರ್ವಾಜವದ್ಭಿಃ ಸಮುಕ್ಷಿತಂ ಸುತಂ ಸೋಮಮಾ ವೃಷಸ್ವಾ ಗಭಸ್ತ್ಯೋಃ ।
ಧಿಯೇಷಿತೋ ಮಘವನ್ದಾಶುಷೋ ಗೃಹೇ ಸೌಧನ್ವನೇಭಿಃ ಸಹ ಮತ್ಸ್ವಾ ನೃಭಿಃ ॥

(ಋ. ಸಂ. ೩-೬೦-೫)

೨. ಮೈತ್ರಾವರುಣ—

ಇಂದ್ರಾವರುಣಾ ಸುತಪಾವಿಮಂ ಸುತಂ ಸೋಮಂ ಪಿಬತಂ ಮದ್ಯಂ ಧೃತವ್ರತಾ ।
ಯುವೋರ್‍ ರಥೋ ಅಧ್ವರಂ ದೇವವೀತಯೇ ಪ್ರತಿ ಸ್ವಸರಮುಪ ಯಾತಿ ಪೀತಯೇ ॥
(ಋ. ಸಂ. ೬-೬೮-೧೦)

೩. ಬ್ರಾಹ್ಮಣಾಚ್ಛಂಸೀ—

ಇಂದ್ರಶ್ಚ ಸೋಮಂ ಪಿಬತಂ ಬೃಹಸ್ಪತೇಽಸ್ಮಿನ್ಯಜ್ಞೇ ಮಂದಸಾನಾ ವೃಷಣ್ವಸೂ ।
ಆ ವಾಂ ವಿಶಂತ್ವಿಂದವಃ ಸ್ವಾಭುವೋಽಸ್ಮೇ ರಯಿಂ ಸರ್ವವೀರಂ ನಿ ಯಚ್ಛತಂ ॥
(ಋ. ಸಂ. ೪-೫೦-೧೦)

೪. ಪೋತೃ—

ಆ ವೋ ವಹಂತು ಸಪ್ತಯೋ ರಘುಷ್ಯದೋ ರಘುಪತ್ವಾನಃ ಪ್ರಜಿಗಾತ ಬಾಹುಭಿಃ ।
ಸೀದತಾ ಬರ್ಹಿರುರು ವಃ ಸದಸ್ಕೃತಂ ಮಾದಯಧ್ವಂ ಮರುತೋ ಮಧ್ವೋ ಅಂಧಸಃ ॥
(ಋ. ಸಂ. ೧-೮೫-೬)

೫. ನೇಷ್ಟೃ—

ಅಮೇವ ನಃ ಸುಹವಾ ಆ ಹಿ ಗಂತನ ನಿ ಬರ್ಹಿಷಿ ಸದತನಾ ರಣಿಷ್ಟನ ।
ಅಥಾ ಮಂದಸ್ವ ಜುಜುಷಾಣೋ ಅಂಧಸಸ್ತ್ವಷ್ಟರ್ದೇವೇಭಿರ್ಜನಿಭಿಃ ಸುಮದ್ಗಣಃ ॥
(ಋ. ಸಂ. ೨.೩೬.೩)

೬. ಅಚ್ಛಾವಾಕ—

ಇಂದ್ರಾವಿಷ್ಣೂ ಪಿಬತಂ ಮಧ್ವೋ ಅಸ್ಯ ಸೋಮಸ್ಯ ದಸ್ರಾ ಜಠರಂ ಪೃಣೇಥಾಂ ।
ಆ ವಾಮಂಧಾಂಸಿ ಮದಿರಾಣ್ಯಗ್ಮನ್ನುಪ ಬ್ರಹ್ಮಾಣಿ ಶೃಣುತಂ ಹವಂ ಮೇ ॥
(ಋ. ಸಂ. ೬.೬೯.೭)

೭. ಆಗ್ನೀಧ್ರ—

ಇಮಂ ಸ್ತೋಮಮರ್ಹತೇ ಜಾತವೇದಸೇ ರಥಮಿವ ಸಂ ಮಹೇಮಾ ಮನೀಷಯಾ ।
ಭದ್ರಾ ಹಿ ನಃ ಪ್ರಮತಿರಸ್ಯ ಸಂಸದ್ಯಗ್ನೇ ಸಖ್ಯೇ ಮಾ ರಿಷಾಮಾ ವಯಂ ತವ ॥
(ಋ. ಸಂ. ೧-೯೪-೧)

ಈ ರೀತಿ ಪ್ರತಿಸವನದಲ್ಲಿಯೂ ಈ ಏಳು ಜನ ಋತ್ವಿಕ್ಕುಗಳು ಪ್ರತಿಯೊಬ್ಬರೂ ಒಂದೊಂದು ಋಕ್ಕಿನಂತೆ ಏಳು ಋಕ್ಕುಗಳನ್ನು ಪಠಿಸಿ ಹೋಮಮಾಡುವರು. ಹಿಂದೆ ಹೇಳಿದಂತೆ ಪ್ರಾತಃಸವನದಲ್ಲಿ ಗಾಯತ್ರೀಛಂದಸ್ಸಿನ ಮಂತ್ರಗಳಿಂದಲೂ, ಮಾಧ್ಯಂದಿನಸವನದಲ್ಲಿ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳಿಂದಲೂ ತೃತೀಯಸವನದಲ್ಲಿ ಜಗತೀಛಂದಸ್ಸಿನ ಮಂತ್ರಗಳಿಂದಲೂ ಹೋಮಮಾಡುವರು. ಇದು ಸವನಕಾಲಗಳಲ್ಲಿ ಪಠಿಸಬೇಕಾದ ಮಂತ್ರಗಳ ವಿವರಣೆಯು.

ಈ ವಿಷಯಕ್ಕೆ ಸಂಬಂಧಪಟ್ಟ ಸವನತ್ರಯಗಳಲ್ಲಿ ಪಠಿಸಬೇಕಾದ ಋತ್ವಿಗ್ಯಾಜ್ಯಾನುಮಂತ್ರಸೂಕ್ತಗಳು, ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನ ಇವುಗಳಲ್ಲಿ ಆಯಾ ಋತ್ವಿಕ್ಕುಗಳು ಪಠಿಸಬೇಕಾದ ಮಂತ್ರಗಳು ಮತ್ತು-

ಇತರ ವಿಸ್ತಾರವಾದ ವಿವರಣೆಗಳನ್ನು ಋ. ಸಂ. ಭಾಗ 15 ಪೇಜು 697-715ರಲ್ಲಿ ಐತರೇಯಬ್ರಾಹ್ಮಣಾನುಸಾರವಾಗಿ ವಿವರಿಸಿರುವುದನ್ನು ನೋಡಿ.

॥ ಸಂಹಿತಾಪಾಠಃ ॥

ಯತ್ತೇ ರಾಜಞ್ಛೃತಂ ಹವಿಸ್ತೇನ ಸೋಮಾಭಿ ರಕ್ಷ ನಃ ।

ಅರಾತೀವಾ ಮಾ ನಸ್ತಾರೀನ್ಮೋ ಚ ನಃ ಕಿಂ ಚನಾಮಮದಿಂದ್ರಾ-

ಯೇಂದೋ ಪರಿ ಸ್ರವ ॥ ೪ ॥

॥ ಪದಪಾಠಃ ॥

ಯತ್ । ತೇ । ರಾಜನ್ । ಶೃತಂ । ಹವಿಃ । ತೇನ । ಸೋಮ । ಅಭಿ । ರಕ್ಷ । ನಃ ।

ಅರಾತಿऽವಾ । ಮಾ । ನಃ । ತಾರೀತ್ । ಮೋ ಇತಿ । ಚ । ನಃ । ಕಿಂ । ಚನ । ಆಮಮತ್ ।

ಇಂದ್ರಾಯ । ಇಂದೋ ಇತಿ । ಪರಿ । ಸ್ರವ ॥ ೪ ॥

॥ ಸಾಯಣಭಾಷ್ಯಂ ॥

ಉಪಾಕರಣೋತ್ಸರ್ಜನಯೋರ್ಮಂಡಲಾದ್ಯಂತಹೋಮೇ ಯತ್ತೇ ರಾಜನ್ನಿತ್ಯೇಷಾ । ಸೂತ್ರಿತಂ ಚ । ಯತ್ತೇ ರಾಜಞ್ಛೃತಂ ಹವಿರಿತಿ ದ್ವ್ಯೃಚಾಃ ಸಮಾನೀ ವ ಆಕೂತಿರಿತ್ಯೇಕಾ । ಆ. ಗೃ. ೩-೫-೭ । ಇತಿ ॥

ಹೇ ರಾಜನ್ ಸರ್ವೇಷಾಂ ಕರ್ಮಸಾಧನತ್ವೇನ ಸ್ವಾಮಿನ್ ಹೇ ಸೋಮ ತೇ ತ್ವದರ್ಥಂ ಶೃತಂ ಪಕ್ವಂ ಯದ್ಧವಿರಸ್ತಿ ॥ ಶೃತಂ ಪಾಕೇ । ಪಾ. ೬-೧-೨೭ । ಇತಿ ನಿಷ್ಠಾಯಾಂ ನಿಪಾತಿತಃ ॥ ತೇನ ಹವಿಷಾ ನೋಽಸ್ಮಾನಭಿ ರಕ್ಷ । ಅಭಿಪಾಲಯ । ತಸ್ಮಾತ್ತ್ವದಭಿರಕ್ಷಿತಾನಸ್ಮಾನರಾತೀವಾರಾತಿವಾಞ್ಛತ್ರುರ್ನೋಽಸ್ಮಾನ್ಮಾ ತಾರೀತ್ । ಮಾ ವಧೀತ್ । ಕಿಂ ಚ ನೋಽಸ್ಮಾಕಂ ಕಿಂ ಚನ ಕಿಂಚಿದಪಿ ಧನಾದಿಕಂ ಶತ್ರುರ್ಮೋ ಆಮಮತ್ । ಮಾ ಹಿಂಸೀತ್ । ಯದೇತದೇತೈಃ ಸೂಕ್ತೈರುಕ್ತಂ ತದ್ಯಥಾಸ್ಮಾಕಂ ಭವತಿ ತಥಾ ಹೇ ಇಂದೋ ಇಂದ್ರಾಯ ಪರಿ ಸ್ರವ । ಏವಂ ಸ್ವಾದಿಷ್ಠಯೇತ್ಯಾದಿಭಿರೇತದಂತೈಃ ಸೂಕ್ತೈರ್ಬಹುವಿಧಂ ಸೋಮಮಾಹಾತ್ಮ್ಯಮಭ್ಯಧಾಯಿ । ತಸ್ಮಾದೈಹಿಕಾಮುಷ್ಮಿಕಫಲಸಿದ್ಧಯೇ ಸೋಮಯಾಗಃ ಕರಣೀಯ ಇತ್ಯುಕ್ತಂ ಭವತಿ ॥

॥ ಪ್ರತಿಪದಾರ್ಥ ॥

ರಾಜನ್—ಸಕಲರಿಗೂ ಪ್ರಭುವಾದ । ಸೋಮ ಎಲೈ ಸೋಮದೇವನೇ । ತೇ—ನಿನ್ನನ್ನುದ್ದೇಶಿಸಿ । ಶೃತಂ—ಪಕ್ವವಾದ । ಯತ್ ಹವಿಃ ಯಾವ ಹವಿಸ್ಸು ಇರುವುದೋ । ತೇನ—ಅದರೊಂದಿಗೆ । ನಃ—ನಮ್ಮನ್ನು । ಅಭಿ ರಕ್ಷ—ಪೂರ್ಣವಾಗಿ ರಕ್ಷಿಸು । ಅರಾತೀವಾ—ನಮ್ಮ ಶತ್ರುಗಳು । ನಃ—ನಮ್ಮನ್ನು । ಮಾ

**ತಾರೀತ್**—ಹಿಂಸಿಸದಿರಲಿ । **ನಃ**—ನಮ್ಮ ಧನವನ್ನೂ । **ಕಿಂ ಚನ**—ಯಾವ ಶತ್ರುವೂ । **ನೋ ಆಮಮತ್**—ಹಿಂಸಿಸದಿರಲಿ । **ಇಂದೋ**—ಎಲೈ ಸೋಮನೇ । **ಇಂದ್ರಾಯ**-ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**-ಪ್ರವಹಿಸು.

॥ ಭಾವಾರ್ಥ ॥

ಸಕಲರಿಗೂ ಪ್ರಭುವಾದ ಎಲೈ ಸೋಮದೇವನೇ, ನಿನ್ನನ್ನುದ್ದೇಶಿಸಿ ಪಕ್ವಮಾಡಲ್ಪಟ್ಟ ಯಾವ ಹವಿಸ್ಸು ಇರುವುದೋ ಅದರೊಂದಿಗೆ ನಮ್ಮನ್ನು ಪೂರ್ಣವಾಗಿ ರಕ್ಷಿಸು. ನಮ್ಮ ಶತ್ರುಗಳು ನಮ್ಮನ್ನು ಹಿಂಸಿಸದಿರಲಿ. ನಮ್ಮ ಧನವನ್ನೂ ಯಾವ ಶತ್ರುವೂ ಅಪಹರಿಸದಿರಲಿ. ಎಲೈ ಸೋಮನೇ, ಇಂದ್ರನ ಪಾನಾರ್ಥವಾಗಿ ಪ್ರವಹಿಸು.

## English Translation

Protect us, royal Soma, with the oblation which has been cooked for you; let no enemy assail us, or harm anything of ours; flow, Indu, for Indra.

। ವಿಶೇಷವಿಷಯಗಳು ।

ಉಪಾಕರಣ ಮತ್ತು ಉತ್ಸರ್ಜನಕರ್ಮಗಳ ಪ್ರಾಧಾನಹೋಮದಲ್ಲಿ ಮಂಡಲಾಂತ್ಯಋಕ್ಕುಗಳಿಗಾಗಿ **ಯತ್ತೇ ರಾಜನ್** ಎಂಬ ಈ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನ ಗೃಹ್ಯಸೂತ್ರದ- **ಯತ್ತೇ ರಾಜಞ್ಛೃತಂ ಹವಿರಿತಿ ದ್ವೃಚಾಃ ಸಮಾನೀ ವ ಆಕೂತಿರಿತ್ಯೇಕಾ** ಎಂಬ ಸೂತ್ರದಿಂದ (ಆ. ಗೃ. ೩-೫-೭) ವಿವೃತವಾಗಿರುವುದು.

**ಇತಿ ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ದಾಶತಯ್ಯಾ**
**ನವಮೇ ಮಂಡಲೇ ಸಪ್ತಮೋಽನುವಾಕಃ ಸಮಾಪ್ತಂ ಚ ನವಮಂ ಮಂಡಲಂ**

**ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ**
**ಋಗ್ವೇದಸಂಹಿತೆಯಲ್ಲಿ ಒಂಭತ್ತನೆಯ ಮಂಡಲವು ಸಮಾಪ್ತವು.**

**॥ ಓಂ ತತ್ಸತ್ ॥**

**ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।**
**ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥**

**॥ ಶುಭಂ ಭೂಯಾತ್ ॥**

**॥ ಮಂಗಳಂ ॥**

## ಒಂಭತ್ತನೆಯ ಮಂಡಲದ ಪರಿಶಿಷ್ಟ ಮಂತ್ರಗಳು.

೬೭ನೆಯ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಮಂತ್ರಗಳು—

ಪಾವಮಾನೀಃ ಸ್ವಸ್ತ್ಯಯನೀಃ ಸುದುಘಾ ಹಿ ಘೃತಶ್ಚುತಃ ।
ಋಷಿಭಿಃ ಸಂಭೃತೋ ರಸೋ ಬ್ರಾಹ್ಮಣೇಷ್ವಮೃತಂ ಹಿತಂ ॥ ೧ ॥

ಪಾವಮಾನೀರ್ದಿಶಂತು ನ ಇಮಂ ಲೋಕಮಥೋ ಅಮುಂ ।
ಕಾಮಾನ್ತ್ಸಮರ್ಧಯಂತು ನೋ ದೇವೀರ್ದೇವೈಃ ಸಮಾಹಿತಾಃ ॥ ೨ ॥

ಯೇನ ದೇವಾಃ ಪವಿತ್ರೇಣಾತ್ಮಾನಂ ಪುನತೇ ಸದಾ ।
ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾಂ ॥ ೩ ॥

ಪ್ರಾಜಾಪತ್ಯಂ ಪವಿತ್ರಂ ಶತೋದ್ಯಾಮಂ ಹಿರಣ್ಮಯಂ ।
ತೇನ ಬ್ರಹ್ಮವಿದೋ ವಯಂ ಪೂತಂ ಬ್ರಹ್ಮ ಪುನೀಮಹೇ ॥ ೪ ॥

ಇಂದ್ರಃ ಪುನೀತೀ ಸಹ ಮಾ ಪುನಾತು ಸೋಮಃ ಸ್ವಸ್ತ್ಯಾ ವರುಣಃ ಸಮೀಚ್ಯಾ ।
ಯಮೋ ರಾಜಾ ಪ್ರಮೃಣಾಭಿಃ ಪುನಾತು ಮಾ ಜಾತವೇದಾ ಮೂರ್ಜಯಂತ್ಯಾ ಪುನಾತು ॥

ಋಷಯಸ್ತು ತಪಸ್ತೇಪುಃ ಸರ್ವೇ ಸ್ವರ್ಗಜಿಗೀಷವಃ ।
ತಪಂತಸ್ತಪಸೋಗ್ರೇಣ ಪಾವಮಾನೀರೃಚೋಽಬ್ರುವನ್ ॥ ೬ ॥

ಯನ್ಮೇ ಗರ್ಭೇ ವಸತಃ ಪಾಪಮುಗ್ರಂ ಯಜ್ಜಾಯಮಾನಸ್ಯ ಚ ಕಿಂಚಿದನ್ಯತ್ ।
ಜಾತಸ್ಯ ಚ ಯಚ್ಚಾಪಿ ಚ ವರ್ಧತೋ ಮೇ ತತ್ಪಾವಮಾನೀಭಿರಹಂ ಪುನಾಮಿ ॥ ೭ ॥

ಮಾತಾಪಿತ್ರೋರ್ಯನ್ನ ಕೃತಂ ವಚೋ ಮೇ ಯತ್ಸ್ಥಾವರಂ ಜಂಗಮಮಾಬಭೂವ ।
ವಿಶ್ವಸ್ಯ ತತ್ಪ್ರಹೃಷಿತಂ ವಚೋ ಮೇ ತತ್ಪಾವಮಾನೀಭಿರಹಂ ಪುನಾಮಿ ॥ ೮ ॥

ಗೋಘ್ನಾತ್ತಸ್ಕರತ್ವಾತ್ ಸ್ತ್ರೀವಧಾದ್ಯಚ್ಚ ಕಿಲ್ಬಿಷಂ ।
ಪಾಪಕಂ ಚ ಚರಣೇಭ್ಯಸ್ತತ್ಪಾವಮಾನೀಭಿರಹಂ ಪುನಾಮಿ ॥ ೯ ॥

ಬ್ರಹ್ಮವಧಾತ್ಸುರಾಪಾನಾತ್ಸ್ವರ್ಣಸ್ತೇಯಾದ್ವೃಷಲಿಗಮನಮೈಥುನಸಂಗಮಾತ್ ।
ಗುರೋರ್ದಾರಾಧಿಗಮನಾಚ್ಚ ತತ್ಪಾವಮಾನೀಭಿರಹಂ ಪುನಾಮಿ ॥ ೧೦ ॥

ಬಾಲಘ್ನಾನ್ಮಾತೃಪಿತೃವಧಾದ್ಭೂಮಿತಸ್ಕರಾತ್ಸರ್ವವರ್ಣಗಮನಮೈಥುನಸಂಗಮಾತ್ ।
ಪಾಪೇಭ್ಯಶ್ಚ ಪ್ರತಿಗ್ರಹಾತ್ಸದ್ಯಃ ಪ್ರಹರತಿ ಸರ್ವದುಷ್ಕೃತಂ ತತ್ಪಾವಮಾನೀಭಿರಹಂ ಪುನಾಮಿ ॥

ಕ್ರಯವಿಕ್ರಯಾದ್ಯೋನಿದೋಷಾದ್ಭಕ್ಷಾದ್ಭೋಜ್ಯಾತ್ಪ್ರತಿಗ್ರಹಾತ್ ।
ಅಸಂಭೋಜನಾಚ್ಚಾಪಿ ನೃಶಂಸಂ ತತ್ಪಾವಮಾನೀಭಿರಹಂ ಪುನಾಮಿ । ೧೨ ॥

ದುರ್ಯಷ್ಟಂ ದುರಧೀತಂ ಪಾಪಂ ಯಚ್ಚಾಜ್ಞಾನತೋ ಕೃತಂ ।
ಅಯಾಜಿತಾಶ್ಚಾಸಂಯಾಜ್ಯಾಸ್ತತ್ಪಾವಮಾನೀಭಿರಹಂ ಪುನಾಮಿ ॥ ೧೩ ॥

ಅಮಂತ್ರಮನ್ನಂ ಯತ್ಕಿಂಚಿದ್ಧೂಯತೇ ಚ ಹುತಾಶನೇ ।
ಸಂವತ್ಸರಕೃತಂ ಪಾಪಂ ತತ್ಪಾವಮಾನೀಭಿರಹಂ ಪುನಾಮಿ ॥ ೧೪ ॥

ಋತಸ್ಯ ಯೋನಯೋಽಮೃತಸ್ಯ ಧಾಮ ವಿಶ್ವಾ ದೇವೇಭ್ಯಃ ಪುಣ್ಯಗಂಧಾಃ ।
ತಾ ನ ಆಪಃ ಪ್ರವಹಂತು ಪಾಪಂ ಶುದ್ಧಾಗಚ್ಛಾಮಿ ಸುಕೃತಾಮು ಲೋಕಂ ತತ್ಪಾವಮಾನೀಭಿರಹಂ ಪುನಾಮಿ ॥ ೧೫ ॥

ಪಾವಮಾನೀಃ ಸ್ವಸ್ತ್ಯಯನೀರ್ಯಾಭಿರ್ಗಚ್ಛತಿ ನಾಂದನಂ ।
ಪುಣ್ಯಾಂಶ್ಚ ಭಕ್ಷಾನ್ಭಕ್ಷಯತ್ಯಮೃತತ್ವಂ ಚ ಗಚ್ಛತಿ ॥ ೧೬ ॥

ಪಾವಮಾನೀಃ ಪಿತೄನ್ದೇವಾನ್ಧ್ಯಾಯೇದ್ಯಶ್ಚ ಸರಸ್ವತೀಂ ।
ಪಿತೄಂಸ್ತಸ್ಯೋಪ ವರ್ತೇತ ಕ್ಷೀರಂ ಸರ್ಪಿರ್ಮಧೂದಕಂ ॥ ೧೭ ॥

ಪಾವಮಾನಂ ಪರಂ ಬ್ರಹ್ಮ ಶುಕ್ರಂ ಜ್ಯೋತಿಃ ಸನಾತನಂ ।
ಋಷೀಂಸ್ತಸ್ಯೋಪ ತಿಷ್ಠೇತ ಕ್ಷೀರಂ ಸರ್ಪಿರ್ಮಧೂದಕಂ ॥ ೧೮ ॥

ಪಾವಮಾನಂ ಪರಂ ಬ್ರಹ್ಮ ಯೇ ಪಠಂತಿ ಮನೀಷಿಣಃ ।
ಸಪ್ತ ಜನ್ಮ ಭವೇದ್ವಿಪ್ರೋ ಧನಾಢ್ಯೋ ವೇದಪಾರಗಃ ॥ ೧೯ ॥

ದಶೋತ್ತರಾಣ್ಯೃಚಾಂಶ್ಚೈವ ಪಾವಮಾನೀಃ ಶತಾನಿ ಷಟ್ ।
ಏತಜ್ಜುಹ್ವನ್ಜಪೇನ್ಮಂತ್ರಂ ಘೋರಮೃತ್ಯುಭಯಂ ಹರೇತ್ ॥ ೨೦ ॥

ಏತತ್ಪುಣ್ಯಂ ಪಾಪಹರಂ ರೋಗಮೃತ್ಯುಭಯಾಪಹಂ ।
ಪಠತಾಂ ಶೃಣ್ವತಾಂ ಚೈವ ದದಾತಿ ಪರಮಾಂ ಗತಿಂ ॥ ೨೧ ॥

೩ನೇ ಸೂಕ್ತದ ೫ನೇ ಋಕ್ಕಿನ ಅಂತ್ಯದಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರ—

ಇಳೈವ ವಾಮನು ವಸ್ತಾಂ ಘೃತೇನ ಯಸ್ಯಾಂ ಪದೇ ಪುನತೇ ದೇವಯಂತಃ ।
ಘೃತಪದೀ ಶಕ್ವರೀ ಸೋಮಪೃಷ್ಠೋಪ ಯಜ್ಞಮಸ್ಥಿತ ವೈಶ್ವದೇವೀ ॥ ೧ ॥

ವೈಶ್ವದೇವೀ ಪುನತೀ ದೇವ್ಯಾಗಾದ್ಯಸ್ಯಾಮಿಮಾ ಬಹ್ವ್ಯಸ್ತನ್ವೋ ವೀತಪೃಷ್ಠಾಃ ।
ತಯಾ ಮದಂತಃ ಸಧಮಾದೇಷು ವಯಂ ಸ್ಯಾಮ ಪತಯೋ ರಯೀಣಾಂ ॥ ೨ ॥

ಒಂಭತ್ತನೆಯ ಮಂಡಲದ ಕೊನೆಯಲ್ಲಿ ಎಂದರೆ ೧೧೪ ನೇಯ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರಗಳು—

ಯತ್ರ ತತ್ಪರಮಂ ಪದಂ ವಿಷ್ಣೋರ್ಲೋಕೇ ಮಹೀಯತೇ ।
ದೇವೈಃ ಸುಕೃತಕರ್ಮಭಿಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ೧ ॥

ಯತ್ರ ತತ್ಪರಮಾವ್ಯಂ ಭೂತಾನಾಮಧಿಪತಿಂ ।
ಭಾವಭಾವೀ ಚ ಯೋಗೀಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ೨ ॥

ಯತ್ರ ಲೋಕಾಸ್ತನೂತ್ಯಜಃ ಶ್ರದ್ಧಯಾ ತಪಸಾ ಜಿತಾಃ ।
ತೇಜಶ್ಚ ಯತ್ರ ಬ್ರಹ್ಮ ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ೩ ॥

ಯತ್ರ ದೇವಾ ಮಹಾತ್ಮಾನಃ ಸೇಂದ್ರಾಶ್ಚ ಸಮರುದ್ಗಣಾಃ ।
ಬ್ರಹ್ಮಾ ಚ ಯತ್ರ ವಿಷ್ಣುಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ೪ ॥

ಯತ್ರ ಗಂಗಾ ಚ ಯಮುನಾ ಚ ಯತ್ರ ಪ್ರಾಚೀ ಸರಸ್ವತೀ ।
ಯತ್ರ ಸೋಮೇಶ್ವರೋ ದೇವಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥೫॥

ಯತ್ರ ತದ್ವಿಷ್ಣುರ್ಮಹೀಯತೇ ನರಾಣಾಮಧಿಪತಿಂ ।
ಯತ್ರ ಶಂಖಚಕ್ರಗದಾಧರಸ್ಮರಣಂ ಮುಕ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ೬ ॥

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇಲ್ಲಿಗೆ ಒಂಭತ್ತನೆಯ ಮಂಡಲವು ಸಮಾಪ್ತವು.

॥ ಶುಭಂ ಭೂಯಾತ್ ॥

॥ ಮಂಗಳಂ ॥





॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ



## ಹತ್ತನೆಯ ಮಂಡಲವು.

### ಪೀಠಿಕೆ.

ಋಗ್ವೇದದಲ್ಲಿ ಒಟ್ಟು ಹತ್ತು ಮಂಡಲಗಳೆಂಬುದನ್ನು ಹಿಂದೆಯೇ ಹೇಳಿದೆ. ಪ್ರಥಮಮಂಡಲಕ್ಕೂ ಕೊನೆಯದಾದ ಹತ್ತನೆಯ ಮಂಡಲಕ್ಕೂ ಅನೇಕ ವಿಷಯಗಳಲ್ಲಿ ಸಾದೃಶ್ಯವಿದೆ. ಈ ಎರಡು ಮಂಡಲಗಳಲ್ಲಿಯೂ ನಾನಾ ಋಷಿಗಳಿದ್ದಾರೆ. ಆದ್ದರಿಂದ ಪ್ರಥಮಮಂಡಲ ಋಷಿಗಳು ಸುಮಾರು ನೂರು ಅಥವ ಹೆಚ್ಚು ಋಕ್ಕುಗಳಿಗೆ ದ್ರಷ್ಟೃಗಳಾಗಿರುವುದರಿಂದ ಆ ಮಂಡಲದ ಋಷಿಗಳು ಶತರ್ಚಿನರೆಂದು ಪ್ರಸಿದ್ಧರು. ಈ ಹತ್ತನೆಯ ಮಂಡಲದಲ್ಲಿ ಪ್ರಾರಂಭದಲ್ಲಿಯೂ ಅನಂತರವೂ ದೊಡ್ಡ ಸೂಕ್ತಗಳೂ ಅಂತ್ಯದಲ್ಲಿ ಸಣ್ಣ ಸಣ್ಣ ಸೂಕ್ತಗಳೂ ಇರುವುದರಿಂದ ಇದು ಮಹಾಸೂಕ್ತ ಮತ್ತು ಕ್ಷುದ್ರಸೂಕ್ತಗಳ ಮಂಡಲವೆಂದು ಪ್ರಸಿದ್ಧಿಯಾಗಿದೆ. ಎರಡು ಮಂಡಲಗಳಲ್ಲಿಯೂ ಸೂಕ್ತ ಸಂಖ್ಯೆಯು ೧೯೧ ಆಗಿದೆ. ಎರಡರಲ್ಲಿಯೂ ನಾನಾದೇವತೆಗಳನ್ನು ಸ್ತುತಿಸಲಾಗಿದೆ. ಇತ್ಯಾದಿವಿಷಯಗಳಲ್ಲಿ ಎರಡು ಮಂಡಲಗಳಿಗೂ ಸಾದೃಶ್ಯವಿದೆ. ಆದರೆ ಈ ಹತ್ತನೆಯ ಮಂಡಲದಲ್ಲಿ ಶ್ರೌತಸ್ಮಾರ್ತಕರ್ಮಗಳಿಗೆ ಉಪಯುಕ್ತವಾದ ಅನೇಕ ಸೂಕ್ತಗಳಿರುವುದಲ್ಲದೆ ಗಹನವಾದ ತತ್ವವಿಚಾರವನ್ನು ತಿಳಿಸುವ ಸೂಕ್ತಗಳೂ ಅನೇಕವಿವೆ. ಇಂತಹ ಸೂಕ್ತ

ಗಳಲ್ಲಿ ವಿಶ್ವ ಅಥವಾ ಪ್ರಪಂಚದ ಸೃಷ್ಟಿಯು ಹೇಗಾಯಿತು ? ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿಯೇನು ? ಇತ್ಯಾದಿ ವಿಷಯಗಳನ್ನು ಆತ್ಮಾನಾತ್ಮವಿಚಾರ, ಪರಬ್ರಹ್ಮವಿಚಾರ, ಸ್ವರ್ಗನರಕವಿಚಾರ ಮುಂತಾದ ಗಹನವಿಷಯಗಳನ್ನು ಚರ್ಚಿಸುವ ಸೂಕ್ತಗಳೂ ಅನೇಕವಿವೆ. ಇದಲ್ಲದೆ ಜನರ ಆದರಕ್ಕೆ ಪಾತ್ರವಾಗಿ ವೇದಾಂತತತ್ವಗಳನ್ನೊಳಗೊಂಡ ಪುರುಷಸೂಕ್ತವೇ ಮೊದಲಾದ ಅನೇಕ ಸೂಕ್ತಗಳೂ ಈ ಮಂಡಲದಲ್ಲಿಯೇ ಇವೆ. ಆದ್ದರಿಂದ ಈ ಮಂಡಲದ ಶ್ರೇಷ್ಠತೆಯೂ ಉಪಯುಕ್ತತೆಯೂ ಸ್ಪಷ್ಟವಾಗಿದೆ.

ಈ ಮಂಡಲದ ಅತ್ಯಂತ ಸಣ್ಣ ಸಣ್ಣ ಸೂಕ್ತಗಳಲ್ಲಿ ಅಚೇತನವಸ್ತುಗಳನ್ನು ಅಲ್ಲಲ್ಲಿ ಸ್ತುತಿಸಿರುವುದು ಕಂಡುಬರುವುದರಿಂದ ಕೆಲವು ಪಾಶ್ಚಾತ್ಯ ಪಂಡಿತರು ಈ ಮಂಡಲದ ಸೂಕ್ತಗಳು ಅಷ್ಟು ಪ್ರಾಚೀನವಲ್ಲವೆಂದೂ ಅಚೇತನವಸ್ತುಗಳನ್ನು ದೇವತೆಗಳೆಂಬ ಭಾವನೆಯಿಂದ ಸ್ತುತಿಸುವುದು ರೂಢಿಗೆ ಈಚಿಗೆ ಬಂದಿರುವುದೇ ಇದಕ್ಕೆ ನಿದರ್ಶನವೆಂದೂ ಅಭಿಪ್ರಾಯಪಡುವರು. ಈ ಅಭಿಪ್ರಾಯವು ಸಾಧುವಾದುದಲ್ಲ ಮತ್ತು ಇದಕ್ಕೆ ಸರಿಯಾದ ಸಮರ್ಥನೆಯೂ ಇರುವುದಿಲ್ಲ. ಋಗ್ವೇದದ ಸೂಕ್ತಗಳನ್ನೆಲ್ಲಾ ಒಂದು ಕ್ರಮದಲ್ಲಿ ವಿಂಗಡಿಸಿರುವುದರಿಂದ ಅಂತ್ಯದ ಕೆಲವು ಸೂಕ್ತಗಳಲ್ಲಿ ನಾನಾವಿಧ ವಿಷಯವರ್ಣನೆ ಇರಬಹುದು. ಅದ ಮಾತ್ರಕ್ಕೆ ಈ ಮಂಡಲವು ಪ್ರಾಚೀನವಲ್ಲವೆಂದು ಹೇಳುವುದು ಸಮಂಜಸವಲ್ಲ.

ಹತ್ತನೆಯ ಮಂಡಲದಲ್ಲಿರುವ ಋಷಿಗಳು ಮತ್ತು ಅವರಿಂದ ದೃಷ್ಟವಾದ ಸೂಕ್ತ ಮತ್ತು ಋಕ್ಕುಗಳ ವಿವರಣೆ—

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೇ | ಒಟ್ಟು ಋಕ್ಸಂಖ್ಯೇ |
|---|---|---|---|---|---|
| 1 | ತ್ರಿತ ಆಪ್ತ್ಯಃ | ೧ | ೧೦೫ | ೧೯ | |
| | | ೮ | ೪೭ | ೧೮ | |
| | | ೯ | ೩೩ | ೬ | |
| | | ,, | ೩೪ | ೬ | |
| | | ,, | ೧೦೨ | ೮ | |
| | | ೧೦ | ೧ | ೭ | |
| | | ,, | ೨ | ೭ | |
| | | ,, | ೩ | ೭ | |
| | | ,, | ೪ | ೭ | |
| | | ,, | ೫ | ೭ | |
| | | ,, | ೬ | ೭ | |
| | | ,, | ೭ | ೭ | ೧೦೬ |
| | ತ್ರಿಶಿರಾಸ್ತ್ವಾಷ್ಟ್ರಃ | ೧೦ | ೮ | ೯ | |
| | ತ್ರಿಶಿರಾಸ್ತ್ವಾಷ್ಟ್ರಃ ಸಿಂಧುದ್ವೀಪ ಅಂಬರೀಷೋ ವಾ | ,, | ೯ | ೯ | ೧೮ |
| | ಯಮಃ ವೈವಸ್ವತಃ | ೧೦ | ೧೦ | ೮ | (೩,೫,೭,೮,೯,೧೦,೧೨,೧೪) |
| | | ,, | ೧೪ | ೧೬ | ೨೪ |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| 4 | ಯಮೀ ವೈವಸ್ವತೀ | ೧೦ | ೧೦ | ೬ | (೧,೩,೫,೭,೧೧,೧೩ |
| | | ,, | ೧೫೪ | ೫ | ೧೧ |
| 5 | ಆಂಗಿರ್ಹವಿರ್ಧಾನಃ | ೧೦ | ೧೧ | ೯ | |
| | | ,, | ೧೨ | ೯ | |
| | | ,, | ೧೩ | ೫ | ೨೩ |
| 6 | ಶಂಖೋ ಯಾಮಾಯನಃ | ೧೦ | ೧೫ | ೧೪ | ೧೪ |
| 7 | ದಮನೋ ಯಾಮಾಯನಃ | ೧೦ | ೧೬ | ೧೪ | ೧೪ |
| 8 | ದೇವಶ್ರವಾ ಯಾಮಾಯನಃ | ೧೦ | ೧೭ | ೧೪ | ೧೪ |
| 9 | ಸಂಕುಸುಕೋ ಯಾಮಾಯನಃ | ೧೦ | ೧೮ | ೧೪ | ೧೪ |
| 10 | ಮಥಿತೋ ಯಾಮಾಯನಃ | ೧೦ | ೧೯ | ೮ | ೮ |
| 11 | ಐಂದ್ರೋ ವಿಮದಃ | ೧೦ | ೨೦ | ೧೦ | |
| | | ,, | ೨೧ | ೮ | |
| | | ,, | ೨೨ | ೧೫ | |
| | | ,, | ೨೩ | ೭ | |
| | | ,, | ೨೪ | ೧೦ | |
| | | ,, | ೨೫ | ೧೧ | |
| | | ,, | ೨೬ | ೯ | ೬೬ |
| 12 | ಐಂದ್ರೋ ವಸುಕ್ರಃ | ೧೦ | ೨೭ | ೨೪ | |
| | | ,, | ೨೮ | ೬ | (೩,೩,೫,೭,೯,೧೧) |
| | | ,, | ೨೯ | ೮ | ೩೮ |
| 13 | ವಸುಕ್ರಪತ್ನೀ ಇಂದ್ರಸ್ನುಷಾ (ಋಷಿಕಾ) | ೧೦ | ೨೮ | ೧ | ೧ |
| 14 | ಇಂದ್ರ ಋಷಿಃ | ೧೦ | ೨೮ | ೫ | (೨,೬,೮,೧೦,೧೨) ೫. |
| 15 | ಕವಷ ಐಲೂಷಃ | ೧೦ | ೩೦ | ೧೫ | |
| | | ,, | ೩೧ | ೧೧ | |
| | | ,, | ೩೨ | ೯ | |
| | | ,, | ೩೩ | ೯ | |
| | (ಅಕ್ಷೋ ಮೌಜವಾನ್ವಾ) | ,, | ೩೪ | ೧೪ | ೫೮ |
| 16 | ಲುಶೋ ಧಾನಾಕಃ | ೧೦ | ೩೫ | ೧೪ | |
| | | ,, | ೩೬ | ೧೪ | ೨೮ |

ಗಳಲ್ಲಿ ವಿಶ್ವ ಅಥವಾ ಪ್ರಪಂಚದ ಸೃಷ್ಟಿಯು ಹೇಗಾಯಿತು ? ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿಯೇನು ? ಇತ್ಯಾದಿ ವಿಷಯ ಗಳನ್ನು ಆತ್ಮಾನಾತ್ಮವಿಚಾರ, ಪರಬ್ರಹ್ಮವಿಚಾರ, ಸ್ವರ್ಗನರಕವಿಚಾರ ಮುಂತಾದ ಗಹನವಿಷಯಗಳನ್ನು ಚರ್ಚಿ ಸುವ ಸೂಕ್ತಗಳೂ ಅನೇಕವಿವೆ. ಇದಲ್ಲದೆ ಜನರ ಆದರಕ್ಕೆ ಪಾತ್ರವಾಗಿ ವೇದಾಂತತತ್ವಗಳನ್ನೊಳಗೊಂಡ ಪುರುಷ ಸೂಕ್ತವೇ ಮೊದಲಾದ ಅನೇಕ ಸೂಕ್ತಗಳೂ ಈ ಮಂಡಲದಲ್ಲಿಯೇ ಇವೆ. ಆದ್ದರಿಂದ ಈ ಮಂಡಲದ ಶ್ರೇಷ್ಠತೆಯೂ ಉಪಯುಕ್ತತೆಯೂ ಸ್ಪಷ್ಟವಾಗಿದೆ.

ಈ ಮಂಡಲದ ಅತ್ಯಂತ ಸಣ್ಣ ಸಣ್ಣ ಸೂಕ್ತಗಳಲ್ಲಿ ಅಚೇತನವಸ್ತುಗಳನ್ನು ಅಲ್ಲಲ್ಲಿ ಸ್ತುತಿಸಿರುವುದು ಕಂಡು ಬರುವುದರಿಂದ ಕೆಲವು ಪಾಶ್ಚಾತ್ಯ ಪಂಡಿತರು ಈ ಮಂಡಲದ ಸೂಕ್ತಗಳು ಅಷ್ಟು ಪ್ರಾಚೀನವಲ್ಲವೆಂದೂ ಅಚೇತನ ವಸ್ತುಗಳನ್ನು ದೇವತೆಗಳೆಂಬ ಭಾವನೆಯಿಂದ ಸ್ತುತಿಸುವುದು ರೂಢಿಗೆ ಈಚೆಗೆ ಬಂದಿರುವುದೇ ಇದಕ್ಕೆ ನಿದರ್ಶನವೆಂದೂ ಅಭಿಪ್ರಾಯಪಡುವರು. ಈ ಅಭಿಪ್ರಾಯವು ಸಾಧುವಾದುದಲ್ಲ ಮತ್ತು ಇದಕ್ಕೆ ಸರಿಯಾದ ಸಮರ್ಥನೆಯೂ ಇರುವುದಿಲ್ಲ. ಋಗ್ವೇದದ ಸೂಕ್ತಗಳನ್ನೆಲ್ಲಾ ಒಂದು ಕ್ರಮದಲ್ಲಿ ವಿಂಗಡಿಸಿರುವುದರಿಂದ ಅಂತ್ಯದ ಕೆಲವು ಸೂಕ್ತಗಳಲ್ಲಿ ನಾನಾವಿಧ ವಿಷಯವರ್ಣನೆ ಇರಬಹುದು. ಆದ ಮಾತ್ರಕ್ಕೆ ಈ ಮಂಡಲವು ಪ್ರಾಚೀನವಲ್ಲವೆಂದು ಹೇಳುವುದು ಸಮಂಜಸವಲ್ಲ.

ಹತ್ತನೇ ಮಂಡಲದಲ್ಲಿರುವ ಋಷಿಗಳು ಮತ್ತು ಅವರಿಂದ ದೃಷ್ಟವಾದ ಸೂಕ್ತ ಮತ್ತು ಋಕ್ಕುಗಳ ವಿವರಣೆ—

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೇ | ಒಟ್ಟು ಋಕ್ಸಂಖ್ಯೇ |
|---|---|---|---|---|---|
| 1 | ತ್ರಿತ ಆಪ್ತ್ಯಃ | ೧ | ೧೦೫ | ೧೯ | |
| | | ೮ | ೪೭ | ೧೮ | |
| | | ೯ | ೩೩ | ೬ | |
| | | ,, | ೩೪ | ೬ | |
| | | ,, | ೧೦೨ | ೮ | |
| | | ೧೦ | ೧ | ೭ | |
| | | ,, | ೨ | ೭ | |
| | | ,, | ೩ | ೭ | |
| | | ,, | ೪ | ೭ | |
| | | ,, | ೫ | ೭ | |
| | | ,, | ೬ | ೭ | |
| | | ,, | ೭ | ೭ | ೧೦೬ |
| | ತ್ರಿಶಿರಾಸ್ತ್ವಾಷ್ಟ್ರಃ | ೧೦ | ೮ | ೯ | |
| | ತ್ರಿಶಿರಾಸ್ತ್ವಾಷ್ಟ್ರಃ ಸಿಂಧುದ್ವೀಪ ಅಂಬರೀಷೋ ವಾ | ,, | ೯ | ೯ | ೧೮ |
| | ಯಮಃ ವೈವಸ್ವತಃ | ೧೦ | ೧೦ | ೮ | (೨,೪,೬,೮,೯,೧೦,೧೨,೧೪) |
| | | ,, | ೧೪ | ೧೬ | ೨೪ |

| ಸಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| 17 | ಸೌರ್ಯೋಽಭಿತಪಾಃ | ೧೦ | ೩೭ | ೧೨ | ೧೨ |
| 18 | ಮುಷ್ಕವಾನಿಂದ್ರಃ | ೧೦ | ೩೮ | ೫ | ೫ |
| 19 | ಕಾಕ್ಷೀವತೀ ಘೋಷಾ (ಋಷಿಕಾ) | ೧೦ | ೩೯ | ೧೪ | |
| | | ,, | ೪೦ | ೧೪ | ೨೮ |
| 20 | ಸುಹಸ್ತ್ಯೋ ಘೌಷೇಯಃ | ೧೦ | ೪೧ | ೩ | ೩ |
| 21 | ಕೃಷ್ಣ ಆಂಗಿರಸಃ | ೮ | ೮೫ | ೯ | |
| | | ,, | ೮೬ | ೫ | |
| | | ,, | ೮೭ | ೬ | |
| | | ೧೦ | ೪೨ | ೧೧ | |
| | | ,, | ೪೩ | ೧೧ | |
| | | ,, | ೪೪ | ೧೧ | ೫೩ |
| 22 | ವತ್ಸಪ್ರಿರ್ಭಾಲಂದನಃ | ೯ | ೬೮ | ೧೦ | |
| | | ೧೦ | ೪೫ | ೧೨ | |
| | | ,, | ೪೬ | ೧೦ | ೩೨ |
| 23 | ಸಪ್ತಗುರಾಂಗಿರಸಃ | ೧೦ | ೪೭ | ೮ | ೮ |
| 24 | ವೈಕುಂಠ ಇಂದ್ರಃ | ೧೦ | ೪೮ | ೧೧ | |
| | | ,, | ೪೯ | ೧೧ | |
| | | ,, | ೫೦ | ೭ | ೨೯ |
| 25 | ಸೌಚೀಕೋಽಗ್ನಿಃ | ೧೦ | ೫೧ | ೪ | (೨,೪,೬,೮) |
| | | ,, | ೫೨ | ೬ | |
| | | ,, | ೫೩ | ೨ | (೪,೫) |
| | (ವೈಶ್ವಾನರೋ ವಾ) | ,, | ೭೯ | ೭ | |
| | ,, | ,, | ೮೦ | ೭ | ೨೬ |
| 26 | ದೇವಾಃ | ೧೦ | ೫೧ | ೫ | (೧,೩,೫,೭,೯) |
| | | | ೫೩ | ೯ | (೧–೩, ೬–೧೧) ೧೪ |
| 27 | ಬೃಹದುಕ್ಥಃ ವಾಮದೇವ್ಯಃ | ೧೦ | ೫೪ | ೬ | |
| | | ,, | ೫೫ | ೮ | |
| | | ,, | ೫೬ | ೭ | ೨೧ |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| 28 | ಬಂಧುಃಶ್ರುತಬಂಧುರ್ವಿಪ್ರಬಂಧುರ್ಗೌಪಾಯನಾಃ | ೧೦ | ೫೭ | ೬ | |
| | | ,, | ೫೮ | ೧೨ | |
| | | ,, | ೫೯ | ೧೦ | |
| | | ,, | ೬೦ | ೧೨ | ೪೦ |
| 29 | ನಾಭಾನೇದಿಷ್ಠೋ ಮಾನವಃ | ೧೦ | ೬೧ | ೨೭ | |
| | | ,, | ೬೨ | ೧೧ | ೩೮ |
| 30 | ಗಯಃ ಪ್ಲಾತಃ | ೧೦ | ೬೩ | ೧೭ | |
| | | ,, | ೬೪ | ೧೭ | ೩೪ |
| 31 | ವಸುಕರ್ಣೋ ವಾಸುಕ್ರಃ | ೧೦ | ೬೫ | ೧೫ | |
| | | ,, | ೬೬ | ೧೫ | ೩೦ |
| 32 | ಅಯಾಸ್ಯ ಆಂಗಿರಸಃ | ೯ | ೪೪ | ೬ | |
| | | ,, | ೪೫ | ೬ | |
| | | ,, | ೪೬ | ೬ | |
| | | ೧೦ | ೬೭ | ೧೨ | |
| | | ,, | ೬೮ | ೧೨ | ೪೨ |
| 33 | ಸುಮಿತ್ರೋ ವಾಧ್ರ್ಯಶ್ವಃ | ೧೦ | ೬೯ | ೧೨ | |
| | | ,, | ೭೦ | ೧೧ | ೨೩ |
| 34 | ಬೃಹಸ್ಪತಿರಾಂಗಿರಸಃ | ೯ | ೩೯ | ೬ | |
| | | ,, | ೪೦ | ೬ | |
| | | ೧೦ | ೭೧ | ೧೧ | |
| | | ,, | ೭೨ | ೯ | ೩೨ |
| 35 | ಬೃಹಸ್ಪತಿರ್ಲೌಕ್ಯಃ | ೧೦ | ೭೨ | ೯ | ೯ |
| 36 | ಗೌರಿವೀತಿಃ ಶಾಕ್ತ್ಯಃ | ೫ | ೨೯ | ೧೫ | |
| | | ೯ | ೧೦೮ | ೨ (೧,೨) | |
| | | ೧೦ | ೭೩ | ೧೧ | |
| | | ,, | ೭೪ | ೬ | ೩೪ |
| 37 | ಸಿಂಧುಕ್ಷಿತ್ ಪ್ರೈಯಮೇಧಃ | ೧೦ | ೭೫ | ೯ | ೯ |
| 38 | ಸರ್ಪ ಐರಾವತೋ ಜರತ್ಕರ್ಣಃ | ೧೦ | ೭೬ | ೮ | ೮ |

| ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|
| ಸ್ಯೂಮರಶ್ಮಿರ್ಭಾರ್ಗವಃ | ೧೦ | ೭೭ | ೮ | |
| | ,, | ೭೮ | ೮ | ೧೬ |
| ವಿಶ್ವಕರ್ಮಾ ಭೌವನಃ | ೧೦ | ೮೧ | ೭ | |
| | ,, | ೮೨ | ೭ | ೧೪ |
| ಮನ್ಯುಸ್ತಾಪಸಃ | ೧೦ | ೮೩ | ೭ | |
| | ,, | ೮೪ | ೭ | ೧೪ |
| ಸಾವಿತ್ರೀ ಸೂರ್ಯಾ ಋಷಿಕಾ | ೧೦ | ೮೫ | ೪೭ | ೪೭ |
| ಇಂದ್ರಃ | ನ | ೧೬೫ | ೮ | (೧,೨,೪,೬,೮, ೧೦-೧೨) |
| | ,, | ೧೭೦ | ೩ | (೧,೩,೪) |
| | ೪ | ೧೮ | ೧॥ | (೧,೪ ರ ಉತ್ತರಾರ್ಧ) |
| | ,, | ೨೬ | ೩ | (೧-೩) |
| | ೮ | ೧೦೦ | ೨ | (೪,೫) |
| | ೧೦ | ೮೬ | ೯ | (೧,೮,೧೧,೧೨,೧೪,೧೯-೨೨) ೨೬॥ |
| ಐಂದ್ರೋ ವೃಷಾಕಪಿಃ | ೧೦ | ೮೬ | ೩ | (೭,೧೩,೨೩) ೩. |
| ಇಂದ್ರಾಣೀ | ೧೦ | ೮೬ | ೧೧ | (೨-೬, ೯, ೧೦, ೧೫-೧೮) |
| | ,, | ೧೪೫ | ೬ | ೧೭ |
| ವಾಯುರ್ಭಾರದ್ವಾಜಃ | ೬ | ೭೫ | ೧೯ | |
| | ೧೦ | ೮೭ | ೨೫ | ೪೪ |
| ಅಂಗಿರಸೋ ಮೂರ್ಧನ್ವಾನ್ (ವಾಮದೇವ್ಯೋ ವಾ) | ೧೦ | ೮೮ | ೧೯ | ೧೯ |
| ರೇಣುರ್ವೈಶ್ವಾಮಿತ್ರಃ | ೯ | ೭೦ | ೧೦ | |
| | ೧೦ | ೮೯ | ೧೮ | ೨೮ |
| ನಾರಾಯಣಃ | ೧೦ | ೯೦ | ೧೬ | ೧೬ |
| ಅರುಣೋ ವೈತಹವ್ಯಃ | ೧೦ | ೯೧ | ೧೫ | ೧೫ |
| ಶಾರ್ಯಾತೋ ಮಾನವಃ | ೧೦ | ೯೨ | ೧೫ | ೧೫ |
| ತಾನ್ವಃ ಪಾರ್ಥ್ಯಃ | ೧೦ | ೯೩ | ೧೫ | ೧೫ |
| ಅರ್ಬುದಃ ಕಾದ್ರವೇಯಃ ಸರ್ಪಃ | ೧೦ | ೯೪ | ೧೪ | ೧೪ |
| ಐಲಃ ಪುರೂರವಾಃ | ೧೦ | ೯೫ | ೯ | ( ೧, ೩, ೬, ೮-೧೦, ೧೨, ೧೪, ೧೭ ) ೯ |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| 55 | ಉರ್ವಶೀ ಋಷಿಕಾ | ೧೦ | ೯೫ | ೯ | (೨, ೪, ೫, ೭, ೧೧, ೧೩, ೧೫, ೧೬, ೧೮) ೯ |
| 56 | ಬರುರಾಂಗಿರಸಃ (ಸರ್ವಹರಿರ್ವಾ ಐಂದ್ರಃ) | ೧೦ | ೯೬ | ೧೩ | ೧೩ |
| 57 | ಭಿಷಕ್ ಆಥರ್ವಣಃ | ೧೦ | ೯೭ | ೨೩ | ೨೩ |
| 58 | ದೇವಾಪಿಃ ಆರ್ಷ್ಟಿಷೇಣಃ (ವೃಷ್ಟಿಕಾಮಃ) | ೧೦ | ೯೮ | ೧೨ | ೧೨ |
| 59 | ವಮ್ರೋ ವೈಖಾನಸಃ | ೧೦ | ೯೯ | ೧೨ | ೧೨ |
| 60 | ದುವಸ್ಯುರ್ವಾಂದನಃ | ೧೦ | ೧೦೦ | ೧೨ | ೧೨ |
| 61 | ಬುಧಃ ಸೌಮ್ಯಃ | ೧೦ | ೧೦೧ | ೧೨ | ೧೨ |
| 62 | ಮುದ್ಗಲೋ ಭಾರ್ಮ್ಯಶ್ವಃ | ೧೦ | ೧೦೨ | ೧೨ | ೧೨ |
| 63 | ಅಪ್ರತಿರಥ ಐಂದ್ರಃ | ೧೦ | ೧೦೩ | ೧೩ | ೧೩ |
| 64 | ಅಷ್ಟಕೋ ವೈಶ್ವಾಮಿತ್ರಃ | ೧೦ | ೧೦೪ | ೧೧ | ೧೧ |
| 65 | ಕೌತ್ಸೋ ದುರ್ಮಿತ್ರಃ ( ಸುಮಿತ್ರೋ ವಾ ) | ೧೦ | ೧೦೫ | ೧೧ | ೧೧ |
| 66 | ಭೂತಾಂಶಃ ಕಾಶ್ಯಪಃ | ೧೦ | ೧೦೬ | ೧೧ | ೧೧ |
| 67 | ದಿವ್ಯ ಆಂಗಿರಸಃ (ದಕ್ಷಿಣಾ ವಾ ಪ್ರಾಜಾಪತ್ಯಾ) | ೧೦ | ೧೦೭ | ೧೧ | ೧೧ |
| 68 | ಪಣಯೋಽಸುರಾಃ | ೧೦ | ೧೦೮ | ೫ | (೧, ೩, ೫, ೭, ೯) |
| 69 | ಸರಮಾ ದೇವಶುನೀ (ಋಷಿಕಾ) | ೧೦ | ೧೦೮ | ೬ | ( ೨, ೪, ೬, ೮, ೧೦, ೧೧ ) |
| 70 | ಜುಹೂರ್ಬ್ರಹ್ಮಜಾಯಾ (ಬ್ರಾಹ್ಮಃ ಊರ್ಧ್ವನಾಭಾ ವಾ) | ೧೦ | ೧೦೯ | | |
| 71 | ಜಮದಗ್ನಿರ್ಭಾರ್ಗವಃ (ಜಾಮದಗ್ನ್ಯೋ ರಾಮೋ ವಾ) | ೮ | ೧೦೧ | ೧೬ | |
| | | ೯ | ೬೨ | ೩೦ | |
| | | ,, | ೬೫ | ೩೦ | |
| | | ,, | ೬೭ | ೩ | (೧೬-೧೮) |
| | | ೧೦ | ೧೧೦ | ೧೧ | ೯೦ |
| 72 | ಅಷ್ಟಾದಂಷ್ಟ್ರೋ ವೈರೂಪಃ | ೧೦ | ೧೧೧ | ೧೦ | ೧೦ |
| 73 | ನಭಃ ಪ್ರಭೇದನಃ ವೈರೂಪಃ | ೧೦ | ೧೧೨ | ೧೦ | ೧೦ |
| 74 | ಶತಪ್ರಭೇದನಃ ವೈರೂಪಃ | ೧೦ | ೧೧೩ | ೧೦ | ೧೦ |
| 75 | ಸಧ್ರಿಃ ವೈರೂಪಃ | ೧೦ | ೧೧೪ | ೧೦ | ೧೦ |

| ಸಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೇ | ಒಟ್ಟು ಋಕ್ಸಂಖ್ಯೇ |
|---|---|---|---|---|---|
| 76 | ಉಪಸ್ತುತಃ ವಾರ್ಷ್ಟಿಹವ್ಯಃ | ೧೦ | ೧೧೫ | ೯ | ೯ |
| 77 | ಅಗ್ನಿಯುತಃ ಸ್ಥೌರಃ | ೧೦ | ೧೧೬ | ೯ | ೯ |
| 78 | ಭಿಕ್ಷುರಾಂಗಿರಸಃ | ೧೦ | ೧೧೭ | ೯ | ೯ |
| 79 | ಉರುಕ್ಷಯ ಆಮಹೀಯವಃ | ೧೦ | ೧೧೮ | ೯ | ೯ |
| 80 | ಲಬ ಐಂದ್ರಃ | ೧೦ | ೧೧೯ | ೧೩ | ೧೩ |
| 81 | ಬೃಹದ್ದಿವ ಆಥರ್ವಣಃ | ೧೦ | ೧೨೦ | ೯ | ೯ |
| 82 | ಹಿರಣ್ಯಗರ್ಭಃ ಪ್ರಾಜಾಪತ್ಯಃ | ೧೦ | ೧೨೧ | ೧೦ | ೧೦ |
| 83 | ಚಿತ್ರಮಹಾ ವಾಸಿಷ್ಠಃ | ೧೦ | ೧೨೨ | ೮ | ೮ |
| 84 | ವೇನೋ ಭಾರ್ಗವಃ | ೯ | ೮೫ | ೧೨ | |
| | | ೧೦ | ೧೨೩ | ೮ | ೨೦ |
| 85 | ಸಿಹವಃ ಅಗ್ನಿವರುಣಸೋಮಾನಾಂ | ೧೦ | ೧೨೪ | ೬ | (೧, ೫–೯) |
| 86 | ಅಗ್ನಿಃ | ೧೦ | ೧೨೪ | ೩ | (೨–೪) |
| 87 | ವಾಗಾಂಭೃಣೀ | ೧೦ | ೧೨೫ | ೮ | ೮ |
| 88 | ಕುಲ್ಮಲಬರ್ಹಿಷಃ ಶೈಲೂಷಿಃ (ವಾಮದೇವ್ಯೋಽಹೋಮುಗ್ವಾ) | ೧೦ | ೧೨೬ | ೮ | ೮ |
| 89 | ಕುಶಿಕಃ ಸೌಭರಃ | ೧೧ | ೧೨೭ | ೮ | ೮ |
| 90 | ವಿಹವ್ಯ ಆಂಗಿರಸಃ | ೧೦ | ೧೨೮ | ೯ | ೯ |
| 91 | ಪ್ರಜಾಪತಿಃ ಪರಮೇಷ್ಠೀ | ೧೦ | ೧೨೯ | ೭ | ೭ |
| 92 | ಯಜ್ಞಃ ಪ್ರಾಜಾಪತ್ಯಃ | ೧೦ | ೧೩೦ | ೭ | ೭ |
| 93 | ಸುಕೀರ್ತಿಃ ಕಾಕ್ಷೀವತಃ | ೧೦ | ೧೩೧ | ೭ | ೭ |
| 94 | ಶಕಪೂತೋ ನಾರ್ಮೇಧಃ | ೧೦ | ೧೩೨ | ೭ | ೭ |
| 95 | ಸುದಾಃ ಪೈಜವನಃ | ೧೦ | ೧೩೩ | ೭ | ೭ |
| 96 | ಮಾಂಧಾತಾ ಯೌವನಾಶ್ವಃ | ೧೦ | ೧೩೪ | ೫॥ | (೧-೫, ೬ ರಲ್ಲಿ ಪೂರ್ವಾರ್ಧ) |
| 97 | ಗೋಧಾ ಋಷಿಕಾ | ೧೦ | ೧೩೪ | ೧॥ | (೬ ರ ಉತ್ತರಾರ್ಧ, ೭) |
| 98 | ಕುಮಾರೋ ಯಾಮಾಯನಃ | ೧೦ | ೧೩೫ | ೭ | ೭ |
| 99 | ಮುನಯೋ ವಾತರಶನಾಃ (೧. ಜೂತಿಃ । ೨. ವಾತಜೂತಿಃ । ೩. ವಿಪ್ರಜೂತಿಃ । ೪. ವೃಷಾಣಕಃ । ೫. ಕರಿಕ್ರತಃ । ೬. ಏತಶಃ । ೭. ಋಷ್ಯಶೃಂಗಃ) | ೧೦ | ೧೩೬ | • | |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| 100 | ಸಪ್ತರ್ಷಯಃ (೧. ಭರದ್ವಾಜಃ । ೨. ಕಶ್ಯಪಃ । ೩. ಗೋತಮಃ । ೪. ಅತ್ರಿಃ । ೫. ವಿಶ್ವಾಮಿತ್ರಃ । ೬. ಜಮದಗ್ನಿಃ । ೭. ವಸಿಷ್ಠಃ ।) | ೧೦ | ೧೩೭ | | |
| 101 | ಅಂಗ ಔರವಃ | ೧೦ | ೧೩೮ | ೬ | ೬ |
| 102 | ದೇವಗಂಧರ್ವೋ ವಿಶ್ವಾವಸುಃ | ೧೦ | ೧೩೯ | ೬ | ೬ |
| 103 | ಅಗ್ನಿಃ ಪಾವಕಃ | ೮ | ೧೦೨ | ೨೨ | ೬ |
| | | ೧೦ | ೧೪೦ | ೬ | ೨೮ |
| 104 | ಅಗ್ನಿಸ್ತಾಪಸಃ | ೧೦ | ೧೪೧ | ೬ | ೬ |
| 105 | ಶಾರ್ಙ್ಗಾಃ (೧-೨. ಜರಿತಾ । ೩-೪. ದ್ರೋಣಃ । ೫-೬. ಸಾರಿಸೃಕ್ವಃ । ೭-೮. ಸ್ತಂಬಮಿತ್ರಃ) | ೧೦ | ೧೪೨ | ೮ | ೮ |
| 106 | ಅತ್ರಿಃ ಸಾಂಖ್ಯಃ | ೧೦ | ೧೪೩ | | |
| 107 | ಸುಪರ್ಣಸ್ತಾರ್ಕ್ಷ್ಯಃ (ಯಾಮಾಯನ ಊರ್ಧ್ವಕೃಶನೋ ವಾ) | ೧೦ | ೧೪೪ | ೬ | ೬ |
| 108 | ದೇವಮುನಿರೈರಂಮದಃ | ೧೦ | ೧೪೬ | ೬ | ೬ |
| 109 | ಸುವೇದಾಃ ಶೈರೀಷಿಃ | ೧೦ | ೧೪೭ | ೫ | ೫ |
| 110 | ಪೃಥುರ್ವೈನ್ಯಃ | ೧೦ | ೧೪೮ | ೫ | ೫ |
| 111 | ಅರ್ಚನ್ ಹೈರಣ್ಯಸ್ತೂಪಃ | ೧೦ | ೧೪೯ | ೫ | ೫ |
| 112 | ಮೃಳೀಕೋ ವಾಸಿಷ್ಠಃ | ೯ | ೯೭ | ೩ | (೨೫-೨೭) |
| | | ೧೦ | ೧೫೦ | ೫ | ೮ |
| 113 | ಶ್ರದ್ಧಾ ಕಾಮಾಯನೀ | ೧೦ | ೧೫೧ | ೫ | ೫ |
| 114 | ಶಾಸೋ ಭಾರದ್ವಾಜಃ | ೧೦ | ೧೫೨ | ೫ | ೫ |
| 115 | ದೇವಜಾಮಯ ಇಂದ್ರಮಾತರಃ | ೧೦ | ೧೫೩ | ೫ | ೫ |
| 116 | ಯಮೀ ವೈವಸ್ವತೀ | ೧೦ | ೧೦ | ೬ | (೧, ೩, ೫, ೭, ೧೧, ೧೩) |
| | | | ೧೫೪ | ೫ | ೧೧ |
| 117 | ಶಿರಿಂಬಿಠೋ ಭಾರದ್ವಾಜಃ | ೧೦ | ೧೫೫ | ೫ | ೫ |
| 118 | ಕೇತುರಾಗ್ನೇಯಃ | ೧೦ | ೧೫೬ | ೫ | ೫ |
| 119 | ಭುವನ ಆಪ್ತ್ಯಃ (ಸಾಧನೋ ವಾ ಭೌವನಃ) | ೧೦ | ೧೫೭ | ೫ | ೫ |
| 120 | ಚಕ್ಷುಃ ಸೌರ್ಯಃ | ೧೦ | ೧೫೮ | ೫ | ೫ |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| 121 | ಪೌಲೋಮೀ ಶಚೀ | ೧೦ | ೧೫೯ | ೬ | ೬ |
| 122 | ಪೂರಣೋ ವೈಶ್ವಾಮಿತ್ರಃ | ೧೦ | ೧೬೦ | ೫ | ೫ |
| 123 | ಯಕ್ಷ್ಮನಾಶನಃ ಪ್ರಾಜಾಪತ್ಯಃ | ೧೦ | ೧೬೧ | ೫ | ೫ |
| 124 | ಬ್ರಾಹ್ಮೋ ರಕ್ಷೋಹಾ | ೧೦ | ೧೬೨ | ೬ | ೬ |
| 125 | ವಿವೃಹಾ ಕಾಶ್ಯಪಃ | ೧೦ | ೧೬೩ | ೬ | ೬ |
| 126 | ಪ್ರಚೇತಾ ಆಂಗಿರಸಃ | ೧೦ | ೧೬೪ | ೫ | ೫ |
| 127 | ನೈರ್ಋತಃ ಕಪೋತಃ | ೧೦ | ೧೬೫ | ೫ | ೫ |
| 128 | ಋಷಭೋ ವೈರಾಜಃ (ಋಷಭಃ ಶಾಕ್ವರೋ ವಾ) | ೧೦ | ೧೬೬ | ೫ | ೫ |
| 129 | ವಿಶ್ವಾಮಿತ್ರಃ ಜಮದಗ್ನಿರ್ವಾ | ೧೦ | ೧೬೭ | ೪ | ೪ |
| 130 | ಅನಿಲೋ ವಾತಾಯನಃ | ೧೦ | ೧೬೮ | ೪ | ೪ |
| 131 | ಶಬರಃ ಕಾಕ್ಷೀವತಃ | ೧೦ | ೧೬೯ | ೪ | ೪ |
| 132 | ವಿಭ್ರಾಟ್ ಸೌರ್ಯಃ | ೧೦ | ೧೭೦ | ೪ | ೪ |
| 133 | ಇಟೋ ಭಾರ್ಗವಃ | ೧೦ | ೧೭೧ | ೪ | ೪ |
| 134 | ಸಂವರ್ತ ಆಂಗಿರಸಃ | ೧೦ | ೧೭೨ | ೪ | ೪ |
| 135 | ಧ್ರುವ ಆಂಗಿರಸಃ | ೧೦ | ೧೭೩ | ೬ | ೬ |
| 136 | ಅಭೀವರ್ತ ಆಂಗಿರಸಃ | ೧೦ | ೧೭೪ | ೫ | ೫ |
| 137 | ಊರ್ಧ್ವಗ್ರಾವಾ ಸರ್ಪ ಆರ್ಬುದಿಃ | ೧೦ | ೧೭೫ | ೪ | ೪ |
| 138 | ಸೂನುರಾರ್ಭವಃ | ೧೦ | ೧೭೬ | ೪ | ೪ |
| 139 | ಪತಂಗಃ ಪ್ರಾಜಾಪತ್ಯಃ | ೧೦ | ೧೭೭ | ೩ | ೩ |
| 140 | ಅರಿಷ್ಟನೇಮಿಸ್ತಾರ್ಕ್ಷ್ಯಃ | ೧೦ | ೧೭೮ | ೩ | ೩ |
| 141 | ೧. ಶಿಬಿರೌಶೀನರಃ । ೨. ಪ್ರತರ್ದನಃ ಕಾಶಿರಾಜಃ । ೩. ವಸುಮನಾ ರೌಹಿದಶ್ವಃ । | ೧೦ | ೧೭೯ | ೩ | ೩ |
| 142 | ಜಯ ಐಂದ್ರಃ | ೧೦ | ೧೮೦ | ೩ | ೩ |
| 143 | ೧. ಪ್ರಥೋ ವಾಸಿಷ್ಠಃ । ಸಪ್ರಥೋ ಭಾರದ್ವಾಜಃ । ೩. ಘರ್ಮಃ ಸೌರ್ಯಃ | ೧೦ | ೧೮೧ | ೩ | ೩ |
| 144 | ತಪುರ್ಮೂರ್ಧಾ ಬಾರ್ಹಸ್ಪತ್ಯಃ | ೧೦ | ೧೮೨ | ೩ | ೩ |
| 145 | ಪ್ರಜಾವಾನ್ ಪ್ರಾಜಾಪತ್ಯಃ | ೧೦ | ೧೮೩ | ೩ | ೩ |
| 146 | ತ್ವಷ್ಟಾ ಗರ್ಭಕರ್ತಾ (ವಿಷ್ಣುರ್ವಾ ಪ್ರಾಜಾಪತ್ಯಃ) | ೧೦ | ೧೮೪ | ೩ | ೩ |
| 147 | ಸತ್ಯಧೃತಿರ್ವಾರುಣಿಃ | ೧೦ | ೧೮೫ | ೩ | ೩ |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| 148 | ವಾತಾಯನ ಉಲಃ | ೧೦ | ೧೮೬ | ೩ | ೩ |
| 149 | ಆಗ್ನೇಯೋ ವತ್ಸಃ | ೧೦ | ೧೮೭ | ೩ | ೩ |
| 150 | ಆಗ್ನೇಯಃ ಶ್ಯೇನಃ | ೧೦ | ೧೮೮ | ೩ | ೩ |
| 151 | ಸಾರ್ಪರಾಜ್ಞೀ | ೧೦ | ೧೮೯ | ೩ | ೩ |
| 152 | ಮಾಧುಚ್ಛಂದಸೋಽಘಮರ್ಷಣಃ | ೧೦ | ೧೯೦ | ೩ | ೩ |
| 153 | ಸಂವನನ ಆಂಗಿರಸಃ | ೧೦ | ೧೯೧ | ೪ | ೪ |

ಹತ್ತನೆಯ ಮಂಡಲದಲ್ಲಿ ಒಟ್ಟು ಹನ್ನೆರಡು ಅನುವಾಕಗಳೂ, ೧೯೧ ಸೂಕ್ತಗಳೂ, ೧೭೫೪ ಋಕ್ಕುಗಳೂ ಇರುವವು. ಈ ಕೆಳಗೆ ಕೊಟ್ಟಿರುವ ಪಟ್ಟಿಯು ಹತ್ತನೆಯ ಮಂಡಲದ ಅನುವಾಕ, ಸೂಕ್ತ ಮತ್ತು ಋಕ್ಸಂಖ್ಯೆಯನ್ನು ವಿಶದವಾಗಿ ತಿಳಿಸುತ್ತದೆ.

| ಅನುವಾಕ | ಅನುವಾಕದ ಪ್ರಾರಂಭಸೂಕ್ತ | ಯಾವ ಸೂಕ್ತದಿಂದ ಯಾವ ಸೂಕ್ತದವರೆಗೆ | ಅನುವಾಕದಲ್ಲಿರುವ ಒಟ್ಟು ಸೂಕ್ತಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|
| ೧ | ಅಗ್ನೇ ಬೃಹನ್ | ೧—೧೬ | ೧೬ | ೧೪೮ |
| ೨ | ತ್ವಷ್ಟಾ ದುಹಿತ್ರೇ | ೧೭—೨೯ | ೧೩ | ೧೪೬ |
| ೩ | ಪ್ರ ದೇವತ್ರಾ | ೩೦—೪೨ | ೧೩ | ೧೪೫ |
| ೪ | ಅಚ್ಛಾ ಮ | ೪೩—೬೦ | ೧೮ | ೧೬೮ |
| ೫ | ಇದಮಿತ್ಥಾ | ೬೧—೬೮ | ೮ | ೧೨೬ |
| ೬ | ಭದ್ರಾ ಅಗ್ನೇಃ | ೬೯—೮೪ | ೧೬ | ೧೩೫ |
| ೭ | ಸತ್ಯೇನೋತ್ತಭಿತಾ | ೮೫—೯೦ | ೬ | ೧೪೨ |
| ೮ | ಸಂ ಜಾಗೃವದ್ಭಿಃ | ೯೧—೯೯ | ೯ | ೧೪೩ |
| ೯ | ಇಂದ್ರ ದೃಹ್ಯ | ೧೦೦—೧೧೨ | ೧೩ | ೧೪೨ |
| ೧೦ | ತಮಸ್ಯ ದ್ಯಾವಾ | ೧೧೩—೧೨೮ | ೧೬ | ೧೪೬ |
| ೧೧ | ನಾಸದಾಸೀನ್ನೋ | ೧೨೯—೧೫೧ | ೨೩ | ೧೪೪ |
| ೧೨ | ಶಾಸ ಇತ್ಥಾ | ೧೫೨—೧೯೧ | ೪೦ | ೧೬೯ |
| ಒಟ್ಟು ೧೨ | — | ೧೯೧ | ೧೯೧ | ೧೭೫೪ |



# ಮೊದಲನೆಯ ಸೂಕ್ತವು.

## ತ್ರಿತ ಆಪ್ತ್ಯಃ ಎಂಬ ಋಷಿಯ ಪರಿಚಯ

ಈ ಹತ್ತನೆಯ ಮಂಡಲದ ಮೊದಲ ೭ ಸೂಕ್ತಗಳಿಗೆ **ತ್ರಿತಃ ಆಪ್ತ್ಯಃ** ಎಂಬುವನು ಋಷಿಯು ಈ ಋಷಿಯ ವಿಷಯವಾಗಿ ಕೆಲವು ಸಂಗತಿಗಳನ್ನು ಹಿಂದೆ ಅಲ್ಲಲ್ಲಿ ಹೇಳಿದ್ದರೂ ಈಗ ಈ ಋಷಿಯ ಪರಿಚಯವನ್ನು ಸ್ವಲ್ಪ ವಿಶದವಾಗಿ ತಿಳಿಸುವುದು ಅವಶ್ಯಕವಾಗಿದೆ.

ತ್ರಿತನ ವಿಷಯವು ವಿಮರ್ಶಕರಿಗೆ ಒಂದು ಸಮಸ್ಯೆಯಾಗಿದೆ. ಈ ಹೆಸರು ಸೂಕ್ತದ್ರಷ್ಟೃವಾದ ಋಷಿಯ ಹೆಸರೇ ಅಥವಾ ತ್ರಿತನೆಂಬ ದೇವತೆಯುಂಟೇ ಎಂಬ ಪ್ರಶ್ನೆಗೂ ನಿಷ್ಕರ್ಷವಾದ ಉತ್ತರವನ್ನು ಹೇಳಲು ಸಾಧ್ಯವಿಲ್ಲ. ಕೆಲವೆಡೆಗಳಲ್ಲಿ ಇಂದ್ರ ಮತ್ತು ಅಗ್ನಿಗಳಿಗೆ **ತ್ರಿತನೆಂಬ** ಪದವು ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಆದುದರಿಂದ ಋಕ್ಸಂಹಿತೆಯ ಮತ್ತು ಇತರ ಆಧಾರಗಳಿಂದ ತ್ರಿತನ ಸ್ವರೂಪವೇನೆಂಬುದನ್ನು ಸಾಧ್ಯವಾದಷ್ಟು ತಿಳಿಯಬಹುದಾದರೆ, ಯಾಸ್ಕಾದಿಪ್ರಾಚೀನ ವಿಮರ್ಶಕರ ಅಭಿಪ್ರಾಯಗಳನ್ನು ಮೊದಲು ಗಮನಿಸಬೇಕು.

ತ್ರಿತನ ಹೆಸರು ೩೫ ಸೂಕ್ತಗಳಲ್ಲಿ ಒಟ್ಟಿಗೆ ೪೦ ಸಲ ಉಪಯೋಗಿಸಲ್ಪಟ್ಟಿದೆ. ಆದರೆ **ತ್ರಿತನಿಗೆ** ಸಂಬಂಧಿಸಿದ (ಎಂದರೆ ತ್ರಿತನೆಂಬ ದೇವತೆಯನ್ನುದ್ದೇಶಿಸಿದ) ಪ್ರತ್ಯೇಕವಾದ ಸೂಕ್ತವಾವುದೂ ಇಲ್ಲ. ನಿಘಂಟುವಿನಲ್ಲಿ ಹೇಳಿರುವ ದೇವತೆಗಳ ಗುಂಪಿನಲ್ಲಿಯೂ ಈ ಹೆಸರು ಉಕ್ತವಾಗಿಲ್ಲ. ಯಾಸ್ಕರು ಮಾತ್ರ ಈ ಪದಕ್ಕೆ ಎರಡು ಕಡೆಗಳಲ್ಲಿ ನಿರ್ವಚನವನ್ನು ಮಾಡಿರುತ್ತಾರೆ. ಮೊದಲನೆಯದಾಗಿ ೧–೧೦೫ ನೇ ಸೂಕ್ತದ ೮ ನೇ ಋಕ್ಕನ್ನು ವಿವರಿಸುವಾಗ (ನಿ ೪–೬) **ತ್ರಿತಂ ಕೂಪೇಽವಹಿತಮೇತತ್ಸೂಕ್ತಂ ಪ್ರತಿಬಭೌ। ತತ್ರ ಬ್ರಹ್ಮೇತಿಹಾಸಮಿಶ್ರಮೃಙ್ಮಿಶ್ರಂ ಗಾಥಾಮಿಶ್ರಂ ಭವತಿ। ತ್ರಿತಸ್ತೀರ್ಣತಮೋ ಮೇಧಯಾ ಬಭೂವ ಅಪಿ ವಾ ಸಂಖ್ಯಾನಾಮೈವಾಭಿಪ್ರೇತಂ ಸ್ಯಾದೇಕತೋ ದ್ವಿತಸ್ತ್ರಿತ ಇತಿ ತ್ರಯೋ ಬಭೂವುಃ।** ಭಾವಿಯಲ್ಲಿ ಬಿದ್ದಿದ್ದ ತ್ರಿತನಿಂದ ಈ ಸೂಕ್ತವು ದೃಷ್ಟವಾಯಿತು. ಇದು ಋಗಾತ್ಮಕವಾದುದೂ, ಗಾಥಾತ್ಮಕವಾದುದೂ (**ವಿತ್ತಂ ಮೇ ಅಸ್ಯ ರೋದಸೀ**) ಆದ ಕಥೆಯಿಂದ ಕೂಡಿದ ಪ್ರಾರ್ಥನೆಯಾಗಿದೆ. ಪ್ರಜ್ಞೆಯಲ್ಲಿ ಪ್ರಾವೀಣ್ಯವನ್ನು ಹೊಂದಿದುದರಿಂದ ಇವನಿಗೆ ತ್ರಿತನೆಂಬ ಹೆಸರು ಬಂದಿತು. ಅಥವಾ ಏಕತ, **ದ್ವಿತ, ತ್ರಿತ** ಈ ಮೂವರಲ್ಲಿ ಮೂರನೆಯವನಾದ್ದರಿಂದ **ತ್ರಿತನೆಂದು** ಹೆಸರು ಬಂದಿರಬಹುದು ಎಂದು ಮೊದಲನೆಯ ಸಲವೂ, ಎರಡನೆಯಸಲ ೧-೧೮೭-೧ ನೇ ಋಕ್ಕನ್ನು ವಿವರಿಸುವಾಗ **ತ್ರಿತಸ್ತ್ರಿಸ್ಥಾನ ಇಂದ್ರಃ** (ನಿ. ೯–೨೫) ಮೂರು ಪ್ರದೇಶಗಳನ್ನೂ ವ್ಯಾಪಿಸುವ ಇಂದ್ರನೆಂದು ಇಂದ್ರನಿಗೆ ವಿಶೇಷಣವಾಗಿಯೂ ವಿವರಿಸಿದ್ದಾರೆ.

ಋಕ್ಸಂಹಿತೆಯಲ್ಲಿ ಈ ಪದವು ಇಂದ್ರನ ಜೊತೆಯಲ್ಲಿ ಹದಿನಾರು ಸಲವೂ, ವೃತ್ರಹಂತಕನೆಂದು ಒಂದು ಸಲವೂ, ವಿಭುವಸ್ವನೆಂದು ಒಂದು ಸಲವೂ, ಮರುತ್ತುಗಳಿಗೆ ವಿಶೇಷಣವಾಗಿ ನಾಲ್ಕು ಕಡೆಗಳಲ್ಲಿಯೂ, ಅಗ್ನಿಯೊಡನೆ ಏಳು ಕಡೆಯೂ, ವರುಣನ ಜೊತೆಯಲ್ಲಿ ಒಂದು ಕಡೆಯೂ, ಸೋಮನ ಜೊತೆಯಲ್ಲಿ ನಾಲ್ಕು ಸಲವೂ ದೂರಪ್ರದೇಶದಲ್ಲಿ ಅಡಗಿರುವ ವ್ಯಕ್ತಿಯೆಂದು ಆರು ಸಲವೂ ಹೇಳಿದೆ.

ಈ ಸ್ಥಳಗಳಲ್ಲಿ ಸಾಯಣರ ವಿವರಣೆಯು ಯಾಸ್ಕರ ನಿರ್ವಚನವನ್ನೇ ಅನುಸರಿಸಿದೆ. ಇವರು ತ್ರಿತ ಎಂಬ ಪದಕ್ಕೆ ಎಂ ಸೂಕ್ತಗಳಲ್ಲಿ ಮಂತ್ರದ್ರಷ್ಟೃವಾದ ಋಷಿಯ ಹೆಸರೆಂದು ಅಂಕಿತನಾಮವಾಗಿಯೂ, ಉಳಿದೆಡೆಗಳಲ್ಲಿ ಸಂದರ್ಭಕ್ಕನುಗುಣವಾಗಿ ವಾಯು, ವರುಣ, ಇಂದ್ರ ಮತ್ತು ಅಗ್ನಿ ಈ ದೇವತೆಗಳ ಸ್ವರೂಪವನ್ನು ತಿಳಿಸುವ ವಿಶೇಷಣವೆಂದೂ ಅರ್ಥಮಾಡಿದ್ದಾರೆ.

ಏಕತ, ದ್ವಿತ, ತ್ರಿತ ಎಂಬ ಮೂರು ಋಷಿಗಳಲ್ಲಿ ಮೂರನೆಯವನಾದ **ತ್ರಿತನ** ಕಥೆಯನ್ನು ೧-೧೦೫ ನೇ ಸೂಕ್ತದ ಮೊದಲನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಅದೇ ಸೂಕ್ತದ ೯ ನೇ ಋಕ್ಕಿನಲ್ಲಿ **ತ್ರಿತನಿಗೆ ಆಪ್ತ್ಯ**ನೆಂಬ ವಿಶೇಷಣವಿದೆ. ಮತ್ತು ಅಗ್ನಿಯೊಡನೆ ತ್ರಿತನು ತನ್ನ ಸಂಬಂಧವಿದೆಯೆಂದೂ ಸೂಚಿಸಿದ್ದಾನೆ. ಇವನಿಗೆ **ಆಪ್ತ್ಯ**ನೆಂಬ ವಿಶೇಷಣವು ಹೇಗೆ ಬಂದಿತು ? ಅಗ್ನಿಯೊಡನೆ ಇರುವ ಸಂಬಂಧವು ಹೇಗೆ ಎಂಬುದನ್ನು ವಿವರಿಸಲು ಶತಪಥಬ್ರಾಹ್ಮಣದಲ್ಲಿ ಒಂದು ಕಥೆಯಿದೆ.

**ಚತುರ್ಧಾವಿಹಿತೋ ಹ ವಾಗ್ರೇಽಗ್ನಿರಾಸ । ಸ ಯಮಗ್ರೇಽಗ್ನಿಂ ಹೋತ್ರಾಯ ಪ್ರಾವೃಣತ ಸ ಪ್ರಾಧನ್ವದ್ಯಂ ದ್ವಿತೀಯಂ ಪ್ರಾವೃಣತ ಸ ಪ್ರೈವಾಧನ್ವದ್ಯಂ ತೃತೀಯಂ ಪ್ರಾವೃಣತ ಸ ಪ್ರೈವಧನ್ವದಥ ಯೋಽಯಮೇತರ್ಹ್ಯಗ್ನಿಃ ಸ ಭೀಷಾ ನಿಲಿಲ್ಯೇ ಸೋಽಪಃ ಪ್ರವಿವೇಶ ತಂ ದೇವಾ ಅನುವಿದ್ಯ ಸಹಸೈವಾದ್ಭ್ಯ ಆನಿನ್ಯುಃ ಸೋಽಪೋಽಭಿತಿಷ್ಠೇವಾವಷ್ಠ್ಯೂತಾಸ್ಥ ಯಾ ಅಪ್ರಪದನಂ ಸ್ಥ ಯಾಭ್ಯೋ ವೋ ಮಾಮಕಾಮಂ ನಯಂತೀತಿ ತತ ಆಪ್ತ್ಯಾಃ ಸಂಬಭೂವುಸ್ತ್ರಿತೋ ದ್ವಿತ ಏಕತಃ ।**

(ಶ. ಬ್ರಾ ೧.೨.೩.೧)

ಅಗ್ನಿಯ ಮೂರು ಹಿರಿಯ ಸಹೋದರರೂ ದೇವತೆಗಳಿಗೆ ಹವಿಸ್ಸನ್ನು ವಹಿಸುವ ಕಾರ್ಯದಲ್ಲಿ ದಣಿದು ಕೃಶರಾಗಲು ಅಗ್ನಿಯು ತನಗೂ ಇದೇ ಸ್ಥಿತಿ ಬರಬಹುದೆಂಬ ಭಯದಿಂದ ಹಿಡಿಹೋಗಿ ನೀರಿನಲ್ಲಿ ಅವಿತುಕೊಂಡನು. ಆಗ ದೇವತೆಗಳು ನೀರನ್ನೂ ಪ್ರವೇಶಿಸಿ ಅವನನ್ನು ಹಿಡಿದು ತರಲು ಅಗ್ನಿಯು ಸುರಕ್ಷತೆಯನ್ನು ಕೊಡಲು ಈ ನೀರು ಯೋಗ್ಯವಲ್ಲದ ಪದಾರ್ಥವೆಂದು ಕೋಪದಿಂದ ನೀರಿನ ಮೇಲೆ ಉಗುಳಿದನು. ಆಗ ಏಕತ, ದ್ವಿತ, ತ್ರಿತ ಎಂಬ ಮೂರು **ಆಪ್ತ್ಯ ದೇವತೆಗಳು ಉದ್ಭವಿಸಿದರು.** ಇದು **ಆಪ್ತ್ಯ**ನೆಂಬ ವಿಶೇಷಣವು ಬರಲು ಒಂದು ಕಾರಣ.

ಎರಡನೆಯದಾಗಿ, ತ್ರಿತಾದಿಗಳು ಅಗ್ನಿಯಿಂದ ಉತ್ಪನ್ನರಾದವರು ಎಂಬುದಕ್ಕೆ ಸಾಯಣರು ತೈತ್ತಿರೀಯ ಬ್ರಾಹ್ಮಣವಾಕ್ಯದ ಆಧಾರದ ಮೇಲೆ **ತ್ರಿತ**ಶಬ್ದದ ನಿರ್ವಚನವನ್ನು ತೋರಿಸಿದ್ದಾರೆ. (ಋ. ಸಂ. ೧-೫೨-೫ ಸಾ.ಭಾ.)

**ದೇವಾನಾಂ ಹವಿರ್ಲೇಪನಿರ್ಘರ್ಷಣಾಯ ಅಗ್ನೇಃಸಕಾಶಾತ್ ಅಪ್ಸು ಏಕತೋ ದ್ವಿತಸ್ತ್ರಿತ ಇತಿ ತ್ರಯಃ ಪುರುಷಾ ಜಜ್ಞಿರೇ । ತಥಾ ಚ ತೈತ್ತಿರೀಯೈಃ ಸಮಾಮ್ನಾತಂ ॥ ಸೋಽಂಗಾರೇಣಾಪಃ ಅಭ್ಯಪಾತಯತ್ । ತತ ಏಕತೋಽಜಾಯತ । ಸ ದ್ವಿತೀಯಮಭ್ಯಪಾತಯತ್ । ತತೋ ದ್ವಿತೋಽಜಾಯತ । ಸ ತೃತೀಯಮಭ್ಯಪಾತಯತ್ । ತತಸ್ತ್ರಿತೋಽಜಾಯತ ।**

(ತೈ. ಬ್ರಾ. ೩.೨.೮.೧೦)

ದೇವತೆಗಳ ದೋಷವನ್ನು ತೊಡೆಯುವುದಕ್ಕಾಗಿ ಅಗ್ನಿಯು ಉದಕದಲ್ಲಿ ಏಕತ, ದ್ವಿತ ಮತ್ತು ತ್ರಿತ ಎಂಬ ಮೂವರು ವ್ಯಕ್ತಿಗಳನ್ನು ಉತ್ಪನ್ನವಾಗುವಂತೆ ಮಾಡಿದನೆಂದು ಈ ಬ್ರಾಹ್ಮಣವಾಕ್ಯದ ತಾತ್ಪರ್ಯ. ಈ ಕಾರಣ ದಿಂದಲೇ, ತ್ರಿತನು.

**ಅಗ್ನಿಂ ಮನ್ಯೇ ಪಿತರಮಗ್ನಿಮಾಪಿಮಗ್ನಿಂ ಭ್ರಾತರಂ ಸದಮಿತ್ಸಖಾಯಂ ।**

(ಋ. ಸಂ. ೧೦-೭-೩)

**ಇತ್ಯಾದಿ ಋಕ್ಕುಗಳಲ್ಲಿ** ಅಗ್ನಿಯೇ ತನಗೆ ಪಿತೃವೆಂದೂ, ಭ್ರಾತೃವೆಂದೂ, ಸಖನೆಂದೂ ಹೇಳಿ ಅಂತಹ ಅಗ್ನಿಯನ್ನು **ತಾನು** ಆರಾಧಿಸುವುದಾಗಿಯೂ ಮತ್ತು ದ್ಯುಲೋಕಸ್ಥನೂ ಪೂಜ್ಯನೂ ಆದ ಸೂರ್ಯನನ್ನು ಹೆಚ್ಚು ಪ್ರಕಾಶವನ್ನು ಬೀರುವುದಕ್ಕೆ ಸಹಾಯಮಾಡುವುದಾಗಿಯೂ ಅಗ್ನಿಯನ್ನು ಸ್ತುತಿಸಿದ್ದಾನೆ.

ಹೀಗೆ **ತ್ರಿತನಿಗೂ ಅಗ್ನಿಗೂ** ಸಾಕ್ಷಾತ್ಸಂಬಂಧವಿರುವುದಾಗಿ **ತ್ರಿತನ** ವಾಕ್ಯವೇ ಇರುವುದರಿಂದ **ಇಂದ್ರ, ವಾಯು** ಇತ್ಯಾದಿ ದೇವತೆಗಳೊಡನೆ ತಾದಾತ್ಮ್ಯವನ್ನು ಹೇಳುವ ಪಂಡಿತರ ಅಭಿಪ್ರಾಯಗಳು **ತ್ರಿತನ** ಸರಿಯಾದ ಸ್ವರೂಪವನ್ನು ಹೇಳುವುದಿಲ್ಲವೆನ್ನಬಹುದು. **ತ್ರಿತನು ವೈದ್ಯುತಾಗ್ನಿಯ** ಅಂಶವೆಂದು ಅನೇಕ ಆಧಾರಗಳಿಂದ ಹೇಳಬೇಕಾಗುತ್ತದೆ. ಈ ಅಭಿಪ್ರಾಯವು ಸರಿಯೆಂದು ತೋರಿಸಲು ಸರಿಯಾದ ಕಾರಣಗಳನ್ನು ಕೊಟ್ಟು **ವೈದ್ಯು-ತಾಗ್ನಿಯೇ ತ್ರಿತನೆಂಬ** ಪರ್ಯಾಯವಾದ ಹೆಸರಿನಿಂದ ಕರೆಯಲ್ಪಟ್ಟಿದೆಯೆಂದು ನಿಷ್ಕರ್ಷವಾಗಿ ಹೇಳುವುದಕ್ಕೆ ಮೊದಲು, ಅತ್ಯಂತ ಆಸಕ್ತಿಯಿಂದಲೂ ಶಾಸ್ತ್ರೀಯವಾದ ಶ್ರಮದಿಂದಲೂ ವೈದಿಕವ್ಯಾಸಂಗವನ್ನು ನಡೆಸಿ ಇಂತಹ ವಿಷಯಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ತಿಳಿಯಪಡಿಸಿರುವ ಆಂಗ್ಲಪಂಡಿತರ ಮತಗಳಲ್ಲಿ **ತ್ರಿತನ** ವಿಷಯವಾದ ಕೆಲವು ಅಭಿಪ್ರಾಯಗಳನ್ನು ಇಲ್ಲಿ ಉದಹರಿಸಿದರೆ ಅನುಚಿತವಾಗಲಾರದು. ಇವರಲ್ಲಿ Benfey ಎಂಬ ಪಂಡಿತನು,

"Trita is a mythical personage, to whom, as to Indra and other deities, is ascribed the destruction of the demons withholding the fertilising rain from the earth. In some passages, special mention is made of the fact, that Trita owes his strength for this deed to the sacred Soma draught, and in one passage, Indra is described as drinking Soma with him. " ಎಂದೂ Bergaigne ಎಂಬುವನು, "In his warlike exploits he always preserves his part as a srcrificer, Trita, who was certainly a God, has none the less become a priest, favourite of Indra" ಎಂದೂ, Pischel ಎಂಬ ಪಂಡಿತನು " Trita was from the beginning a God o' the sea and of the waters " ಎಂದೂ ಹೇಳಿದ್ದಾರೆ. Roth ಎಂಬ ಪಂಡಿತನು **ತ್ರಿತನಿಗೂ ವಾಯುವಿಗೂ** ತಾದಾತ್ಮ್ಯವನ್ನು ಹೇಳಿದ್ದಾನೆ. ಇದೇ ಮತವನ್ನು Ludwig ಎಂಬ ಪಂಡಿತನು ಅನುಮೋದಿಸಿದ್ದಾನೆ. Muir ಎಂಬುವನು **ತ್ರಿತ** ಎಂಬುದು ಇಂದ್ರನ ಪರ್ಯಾಯನಾಮವೆಂದು ತನ್ನ ಮತವನ್ನು ಹೇಳಿದ್ದಾನೆ. ಹೀಗೆ ಪಾಶ್ಚಾತ್ಯ ಪಂಡಿತರಲ್ಲಿ ಒಬ್ಬೊಬ್ಬರು ಒಂದೊಂದು ಅಭಿಪ್ರಾಯವನ್ನು ಹೇಳಿರುವಂತೆ ವೈದಿಕಸಂಪ್ರದಾಯದವರೂ ಸಹ ಮತಭೇದವನ್ನು ಹಿಂದೆ ಹೇಳಿರುವಂತೆ ತೋರಿಸಿದ್ದಾರೆ. ಆದರೆ, ಅಗ್ನಿಯಲ್ಲದೇ ಇತರ ದೇವತೆಗಳೊಡನೆ ತ್ರಿತನಿಗೆ ತಾದಾತ್ಮ್ಯವನ್ನು ಕಲ್ಪಿಸಲು ಸರಿಯಾದ ಆಧಾರಗಳಿಲ್ಲ. **ತ್ರಿತನ** ಹೆಸರು **ಇಂದ್ರನೊಡನೆ**

ಹದಿನಾರು ಸಲ ಹೇಳಲ್ಪಟ್ಟಿದ್ದರೂ ಸಹ ೨.೧೧.೨೦ ; ೮.೭.೨೪ ; ೮.೫೨.೧ ; ೯.೩೨.೨ ; ೯.೩೪.೪ ಇತ್ಯಾದಿ ಸೂಕ್ತಗಳಲ್ಲೆಲ್ಲಾ ಇಂದ್ರನಿಗೆ ಸಹಾಯಕನಾದವನು, ತ್ರಿತನೆಂಬ ಇಂದ್ರನ ಸಖನಾದ ಋಷಿ ಹೀಗೆಂಬುದಾಗಿ ಇಂದ್ರನ ಜೊತೆಯಲ್ಲಿರುವ ಬೇರೆ ವ್ಯಕ್ತಿಯೆಂದು ಹೇಳಲ್ಪಟ್ಟವನಾದ ತ್ರಿತ ಎಂಬುದು ಇಂದ್ರನ ಪರ್ಯಾಯನಾಮವಲ್ಲ. ಹೇಗೆಂದರೆ,

**ಇಮಂ ತ್ರಿತೋ ಭೂರ್ಯವಿಂದದಿಚ್ಛನ್ವೈಭೂವಸೋ ಮೂರ್ಧನ್ಯಘ್ನ್ಯಾಯಾಃ ।**

(ಋ. ಸಂ. ೧೦.೪೬.೩)

ಎಂಬ ಋಕ್ಕಿನಲ್ಲಿ **ಗೃಹಸಖನೆಂದು** ಹೇಳಿರುವುದು ಅಗ್ನಿಗೆ ಅನ್ವಯಿಸುವುದೇ ಹೊರತು ವಾಯುವು ಗೃಹಸಖನೆಂದು ಪ್ರಸಿದ್ಧನಾಗಿಲ್ಲ. ಇದರಂತೆ ೧೦.೪೬.೬ ನೇ ಋಕ್ಕೂ ಸಹ ಅಗ್ನಿಯನ್ನುದ್ದೇಶಿಸಿದ ಸ್ತುತಿಯಾಗಿದೆ. ಹೀಗೆ ಅನೇಕ ಆಧಾರಗಳಿಂದ ತ್ರಿತನೆಂಬುದು ಇತರ ದೇವತೆಗಳ ಪರ್ಯಾಯನಾಮವಾಗಿರದೆ ಅಗ್ನಿಯ ಅಂಶವೆಂದು ಧಾರಾಳವಾಗಿ ಹೇಳಬಹುದು. **ಆಪ್ತ್ಯವೆಂಬ** ಪದಕ್ಕೆ ೮.೪೭.೧೩ ರಿಂದ ೧೭ ನೇ ಋಕ್ಕುಗಳಲ್ಲಿ **ದೂರಸ್ಥನೂ ಮೇಘಾಂತರ್ಗತನೂ** ಆದವನು ಎಂಬ ವರ್ಣನೆಯಿರುವುದರಿಂದ ವೈದ್ಯುತಾಗ್ನಿಯ ರೂಪನೆಂದೂ ಹೇಳಬಹುದು. ಹೀಗೆ ಹೇಳಿದ್ದರೆ ಇಂದ್ರ, ಮರುತ್ತು ಮುಂತಾದ ದೇವತೆಗಳಿಗೂ ತ್ರಿತನ ರೂಪದಲ್ಲಿರುವ ವೈದ್ಯುತಾಗ್ನಿಗೂ ಇರತಕ್ಕ ಸಾಹಚರ್ಯವು ಅರ್ಥವಾಗುವುದು.

ರೂಪನಿಷ್ಪತ್ತಿಯ ದೃಷ್ಟಿಯಿಂದಲೂ ಸಹ ತ್ರಿತನಿಗೂ ರೂಪತ್ರಯದಲ್ಲಿರುವ ಅಗ್ನಿಗೂ ಇರುವ ಸಾಮ್ಯವನ್ನು ಹೇಳಲು ಸಾಧ್ಯವಾಗುತ್ತದೆ.

**ಅಗ್ನೇ ತ್ರೀ ತೇ ವಾಜಿನಾ ತ್ರೀ ಷಧಸ್ಥಾ ತಿಸ್ರಸ್ತೇ ಜಿಹ್ವಾ ಋತಜಾತ ಪೂರ್ವೀಃ ।**
**ತಿಸ್ರ ಉ ತೇ ತನ್ವೋ ದೇವವಾತಾಸ್ತಾಭಿರ್ನಃ ಪಾಹಿ ಗಿರೋ ಅಪ್ರಯುಚ್ಛನ್ ॥**

(ಋ. ಸಂ. ೩-೨೦.೨)

ಅಗ್ನಿಗೆ ಶಕ್ತಿತ್ರಯವೂ, ಸ್ಥಾನತ್ರಯವೂ, ಜಿಹ್ವಾತ್ರಯವೂ ತನುತ್ರಯವೂ ಇರುವುದಾಗಿ ಈ ಋಕ್ಕಿನಲ್ಲಿ ವರ್ಣಿತವಾಗಿರುವಂತೆಯೇ, ತೇಜಸ್ತ್ರಯವೂ (೩-೨೬-೭), ಜ್ವಲನತ್ರಯವೂ (೩-೨-೯) ಹೇಳಲ್ಪಟ್ಟಿವೆ. ಅಲ್ಲದೇ **ತ್ರಿರಸ್ಯ ತಾ ಪರಮಾ ಸಂತಿ ಸತ್ಯಾ ಸ್ಪಾರ್ಹಾ ದೇವಸ್ಯ ಜನಿಮಾನ್ಯಗ್ನೇಃ** । (ಋ. ಸಂ. ೪.೧.೭) ದೇವನಾದ ಅಗ್ನಿಯ ಉತ್ಪತ್ತಿಸ್ಥಾನಗಳೂ ಮೂರು. ಅವು ಯಾವವೆಂದರೆ, **ಸ ಜಾಯತ ಪ್ರಥಮಃ ಪಸ್ತ್ಯಾಸು ಮಹೋ ಬುಧ್ನೇ ರಜಸೋ ಅಸ್ಯ ಯೋನೌ** । (ಋ. ಸಂ. ೪.೧.೧೧) ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವಂತೆ ಪೃಥಿವೀ, ದ್ಯುಲೋಕ ಮತ್ತು ಅಂತರಿಕ್ಷ ಇವೇ ರೀತಿಯಲ್ಲಿ ಅಂತರಿಕ್ಷಸ್ಥನಾದ **ವೈದ್ಯುತಾಗ್ನಿಗೂ** ದೂರದಲ್ಲಿರುವ ಮೇಘಾಂತರ್ಗತನಾದ **ತ್ರಿತನಿಗೂ** ಇರತಕ್ಕ ಸಾಮಾನ್ಯಧರ್ಮವೂ ಅರ್ಥವಾಗುತ್ತದೆ. ಈ ಅಂಶವನ್ನು **ತ್ರಿತನೇ** ಸ್ಪಷ್ಟವಾಗಿ ಹೇಳಿದ್ದಾನೆ

**ಅಮೀ ಯೇ ಸಪ್ತ ರಶ್ಮಯಸ್ತತ್ರಾ ಮೇ ನಾಭಿರಾತತಾ ।**
**ತ್ರಿತಸ್ತದ್ವೇದಾಪ್ತ್ಯಃ ಸ ಜಾಮಿತ್ವಾಯ ರೇಭತಿ ವಿತ್ತಂ ಮೇ ಅಸ್ಯ ರೋದಸೀ ॥**

(ಋ. ಸಂ. ೧-೧೦೫-೯)

ಸಪ್ತಪ್ರಾಣರೂಪದಲ್ಲಿರುವ ಈ ಏಳು ಸೂರ್ಯಕಿರಣಗಳಲ್ಲಿ ನನ್ನ ನಾಭಿಯು ವಿಸ್ತೃತವಾಗಿ ಬೆಳೆಯಿತು. ಅಜ್ಞಾನವನ್ನು ದಾಟಿದವನೂ, ನೀರುಗಳ ಪುತ್ರನೂ ಆದ ತ್ರಿತನು ತನ್ನ ಹಿಂದಿನ ಚರಿತ್ರೆಯನ್ನು ತಿಳಿದಿದ್ದಾನೆ. ಈ ತಿಳಿವಳಿಕೆಯುಳ್ಳ ಋಷಿಯು ಬಾವಿಯಿಂದ ಹೊರಕ್ಕೆ ಬರುವುದಕ್ಕಾಗಿ ತನ್ನ ಸಂಬಂಧಿಗಳಾದ ಈ ರಶ್ಮಿಗಳನ್ನು ಕುರಿತು ಸ್ತೋತ್ರಮಾಡುತ್ತಾನೆ ಎಂದಿರುವುದರಿಂದಲೂ ; ಮತ್ತು **ಯದೀಮಹ ತ್ರಿತೋ ದಿವ್ಯುಪ ಧ್ಮಾತೇವ ಧಮತಿ ಶಿಶೀತೇ ಧ್ಮಾತರೀ ಯಥಾ।** (೫-೯-೫) ಅಂತರಿಕ್ಷಸ್ಥನಾದ ತ್ರಿತನು ಈ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಾನೆ **ಪ್ರ ಸಕ್ಷಣೋ ದಿವ್ಯಃ ಕಣ್ವಹೋತಾ ತ್ರಿತೋ ದಿವಃ ಸಜೋಷಾ ವಾತೋ ಅಗ್ನಿಃ।** (೫-೧೪-೪) ಅಂತರಿಕ್ಷಸ್ಥನಾದತ್ರಿತನು ಸೂರ್ಯಾದಿಗಳೊಡನೆ ಬರುತ್ತಾನೆ ಇತ್ಯಾದಿ ವಾಕ್ಯಗಳ ಆಧಾರದ ಮೇಲೆಯೂ **ವೈದ್ಯುತಾಗ್ನಿಯು ತ್ರಿತನೆಂಬ** ಪರ್ಯಾಯನಾಮದಿಂದ ಪ್ರತೀತನಾಗಿದ್ದಾನೆಂದು ಹೇಳಬಹುದು.

**ಆಪ್ತ್ಯಃ** (ಅಪಾಂ ಪುತ್ರಃ ೧-೧೦೫-೯) **ಆಪ್ತ್ಯೇ** ಇತ್ಯಾದಿ ವಿಶೇಷಣವು ಇರುವೆಡೆಗಳಲ್ಲೆಲ್ಲಾ ತ್ರಿತನ ಪರವಾಗಿಯೇ ಇವೆ. ಇದರಂತೆಯೇ **ಅಪಾಂ ನಪಾತ್** ಎಂಬ ವಿಶೇಷಣವು ಯಾವಾಗಲೂ ವೈದ್ಯುತಾಗ್ನಿಪರವಾಗಿಯೇ ಇವೆ. ಆದುದರಿಂದ **ತ್ರಿತನೂ ವೈದ್ಯುತಾಗ್ನಿಯೂ** ಮೂಲತಃ ಒಂದೇ ಎಂದು ಹೇಳಬಹುದು.

ಪ್ರಥಮಮಂಡಲದ ೧೦೫ ನೇ ಸೂಕ್ತವು ಭಾವಿಯಲ್ಲಿ ಬಿದ್ದಿದ್ದ ತ್ರಿತನಿಂದ ದೃಷ್ಟವಾದದ್ದು. ಈ ಸೂಕ್ತದಲ್ಲಿ ವಿಶ್ವೇದೇವತೆಗಳನ್ನು ಪ್ರಾರ್ಥಿಸಲಾಗಿದೆ. ಈ ಪ್ರಾರ್ಥನೆಗೆ ಹಿನ್ನೆಲೆಯಾದ ಒಂದು ಕಥೆಯುಂಟು. ಆದರೆ ಸಾಯಣಭಾಷ್ಯದ ಈ ಸೂಕ್ತಕ್ಕೆ ಉಪೋದ್ಘಾತದಲ್ಲಿರುವ ಕಥಾಕ್ರಮವೇ ಬೇರೆ, ಸ್ಕಂದಸ್ವಾಮಿಗಳ ಭಾಷ್ಯದಲ್ಲಿರುವ ಕ್ರಮವೇ ಬೇರೆ. ಸಾಯಣಭಾಷ್ಯದ ರೀತ್ಯಾ, (ಇದು ಶಾಕಟಾಯನನ ಕ್ರಮವನ್ನನುಸರಿಸಿದೆ)—**ಏಕತೋ ದ್ವಿತಸ್ತ್ರಿತ ಇತಿ ಪುರಾ ತ್ರಯ ಋಷಯೋ ಬಭೂವುಃ। ತೇ ಕದಾಚಿನ್ಮರುಭೂಮಾವರಣ್ಯೇ ವರ್ತಮಾನಾಃ ಪಿಪಾಸಯಾ ಸಂತಪ್ತಗಾತ್ರಾಃ ಸಂತ ಏಕಂ ಕೂಪಮಪಶ್ಯನ್। ತತ್ರ ತ್ರಿತಾಖ್ಯ ಏಕೋ ಜಲಪಾನಾಯ ಕೂಪಂ ಪ್ರಾವಿಶತ್। ಸ್ವಯಂ ಪೀತ್ವಾ ಇತರಯೋಶ್ಚ ಕೂಪಾದುದಕಮುದ್ಧೃತ್ಯ ಪ್ರಾದಾತ್। ತೌ ತದುದಕಂ ಪೀತ್ವಾ ತ್ರಿತಂ ಕೂಪೇ ಪಾತಯಿತ್ವಾ ತದೀಯಂ ಧನಂ ಸರ್ವಮಪಹೃತ್ಯ ಕೂಪಂ ಚ ರಥಚಕ್ರೇಣ ಪಿಧಾಯ ಪ್ರಾತಿಷ್ಠೇತಾಂ। ತತಃ ಕೂಪೇ ಪತಿತಃ ಸ ತ್ರಿತಃ ಕೂಪಾದುತ್ತರೀತುಮಶಕ್ನುವನ್ ಸರ್ವೇ ದೇವಾ ಮಾಮುದ್ಧರಂತ್ವಿತಿ ಮನಸಾ ಸಸ್ಮಾರ। ತತಸ್ತೇಷಾಂ ಸ್ತಾವಕಮಿದಂ ಸೂಕ್ತಂ ದದರ್ಶ ತತ್ರ ರಾತ್ರೌ ಕೂಪಸ್ಯಾಂತಶ್ಚಂದ್ರಮಸೋ ರಶ್ಮೀನ್ ಪಶ್ಯನ್ ಪರಿದೇವಯತೇ।**

ಏಕತ, ದ್ವಿತ ಮತ್ತು ತ್ರಿತ ಎಂಬ ಮೂವರು ಋಷಿಗಳು ಇದ್ದರು. ಅವರು ಒಂದುಸಲ ಅರಣ್ಯಮಧ್ಯದಲ್ಲಿ ಮರುಭೂಮಿಯಲ್ಲಿ ಸಿಕ್ಕಿಕೊಂಡು ಅತ್ಯಂತ ಬಾಯಾರಿಕೆಯಿಂದ ಹಿಂಸೆಪಡುತ್ತಿರುವಾಗ ಅಕಸ್ಮಾತ್ತಾಗಿ ಒಂದು ಬಾವಿಯನ್ನು ನೋಡಿ ಅದರ ಹತ್ತಿರ ಬಂದರು. ಆಗ ತ್ರಿತನು ಜಲಪಾನಕ್ಕಾಗಿ ಬಾವಿಗೆ ಇಳಿದನು. ನಂತರ ತಾನು ನೀರನ್ನು ಕುಡಿದು ಉಳಿದಿಬ್ಬರಿಗೂ ಸಹ ಬಾವಿಯಿಂದ ನೀರನ್ನು ತೆಗೆದುಕೊಂಡು ಮೇಲಕ್ಕೆ ಬಂದನು. ಮೇಲಿದ್ದ ಏಕತ ಮತ್ತು ದ್ವಿತರು ಆ ನೀರನ್ನು ಕುಡಿದು ತ್ರಿತನ ಸರ್ವಧನವನ್ನೂ ಅಪಹರಿಸಬೇಕೆಂದು ಅವನನ್ನು ಬಾವಿಗೆ ತಳ್ಳಿ ರಥಚಕ್ರದಿಂದ ಬಾವಿಯನ್ನು ಮುಚ್ಚಿ ಅಲ್ಲಿಂದ ಹೊರಟುಹೋದರು. ಬಾವಿಯಲ್ಲಿ ಬಿದ್ದಿದ್ದ ತ್ರಿತನಿಗೆ ಮೇಲಕ್ಕೆ ಬರಲಾಗದೇ ಅಂತಲ್ಲಿಯೇ ವಿಶ್ವದೇವತೆಗಳ ಪ್ರಾರ್ಥನೆಯನ್ನು ಮಾಡಿ ಅವರು ನನ್ನನ್ನುದ್ಧರಿಸಲಿ ಎಂದು ಮನಸ್ಸಿನಲ್ಲಿಯೇ ಸ್ಮರಿಸಿದನು. ಆಗ ಅವರನ್ನು ಸ್ತುತಿಸತಕ್ಕ ಈ ಸೂಕ್ತದ ದರ್ಶನವನ್ನು ಪಡೆದನು. ಆ ಕಾಡಿನಲ್ಲಿ ಬಾವಿ

ಯೊಳಕ್ಕೆ ಪ್ರಸರಿಸಿದ ಚಂದ್ರಕಿರಣಗಳನ್ನು ನೋಡಿ ತನ್ನ ವೇದನೆಯನ್ನು ಪ್ರಕಾಶಪಡಿಸುತ್ತಾ ಪ್ರಾರ್ಥಿಸುತ್ತಿದ್ದಾ ನೆಂದು ಸಾಯಣಭಾಷ್ಯದ ಕಥೆ. ಸ್ಕಂದಸ್ವಾಮಿಗಳ ಭಾಷ್ಯದಲ್ಲಿ ಕಥಾಕ್ರಮವು ಕೆಳಗೆ ಹೇಳುವ ರೀತಿಯಲ್ಲಿದೆ.

> ಅತ್ರ ಸೂಕ್ತೇ ಇತಿಹಾಸಮಾಚಕ್ಷತೇ ಆಪ್ತ್ಯಸ್ಯ ಋಷೇಃ ತ್ರಯಃ ಪುತ್ರಾ ಬಭೂವುಃ ಏಕತೋ ದ್ವಿತಸ್ತ್ರಿತ ಇತಿ । ತೇ ಯಷ್ಟುಕಾಮಾಃ ಪಶೂನ್ ಯಾಜ್ಯಾನ್ ಗಾ ಯಯಾಚಿರೇ । ತಾ ಆದಾಯ ಸರಸ್ವತ್ಯಾಸ್ತೀರೇಣ ಪಥಾ ಗಚ್ಛತಃ ತಾನ್ ಪರಸ್ಮಿನ್ ಕೂಲೇ ನಿಷಣ್ಣೋ ರಾತ್ರೌ ವೃಕೋ ದದರ್ಶ। ದೃಷ್ಟ್ವಾ ಚೋತ್ಥಾಯ ಅಭಿಮುಖಃ ಸಾರಸ್ವತೀರಪ ಉತ್ತರನ್ ತಾಂಸ್ತ್ರಾಸಯಾಮಾಸ। ತೇಷಾಂ ಪಶ್ಯತಾಂ ತ್ರಿತೋ ನಿರ್ಜಲೇ ಪಾಂಸುಭಿಃ ವೀರುದ್ಭಿಃ ಪೃಶ್ನ್ಯಾವೃತೇ ಮಹತ್ಯಂಧಕೂಪೇ ಪಪಾತ। ಏಕತದ್ವಿತೌ ತು ಸಹ ಗೋಭಿಃ ಗೃಹಂ ಜಗ್ಮತುಃ। ಅಥ ಕೂಪಸ್ಥಸ್ಯ ಇಯಂ ಚಿಂತಾ ಬಭೂವ। ಅಕೃತಸೋಮಯಾಗಸ್ಯ ಮೃತ್ಯುರ್ನ ಶ್ರೇಯಸೇ। ತತ್ ಕಃ ಉಪಾಯಃ ಸ್ಯಾತ್ ಯೇನಾಹಮಿಹಸ್ಥಃ ಸೋಮಂ ಪಿಬೇಯಮಿತಿ। ಚಿಂತಯನ್ನೇವ ಯದೃಚ್ಛಯಾ ತತ್ರ ಲಂಬಮಾನಾಂ ವೀರುಧಂ ದದರ್ಶ। ತಾಂ ಸೋಮ ಇತಿ ಸಂಕಲ್ಪ್ಯ ಯೋಗೈಶ್ವರ್ಯಾತ್ ಮನಸಾ ತಿಷ್ಯಾನಿ ಅಗ್ನ್ಯಾದೀನಿ ಸಾಧನಾನಿ ಪರಿಸಂಕಲ್ಪ್ಯ ಶರ್ಕರಾ ಗ್ರಾವ್ಣಃ ಕೃತ್ವಾ ತಾಭಿಸ್ತಾಂ ವೀರುಧಮಭಿಷುತ್ಯ ಯಾಗಾರ್ಥಂ ದೇವಾನ್ ಆಜುಹಾವ। ತಾ ಆಹ್ವಾನಕಾರಣಮನವಬುಧ್ಯಮಾನಾ ಅಪಿಗ್ನಾ ಬಭೂವುಃ। ಅಥ ತದಾಹ್ವಾನಂ ಬೃಹಸ್ಪತಿಃ ಶುಶ್ರಾವ। ಸ ದೇವಾನುವಾಚ। ತ್ರಿತಸ್ಯ ವರ್ತತೇ ಯಜ್ಞಸ್ತತ್ರ ಗಚ್ಛಾಮ ಇತಿ। ಅಥ ತತ್ರ ಸರ್ವೇ ದೇವಾ ಜಗ್ಮುಃ। ತಾನಾಗತಾನ್ ಕೂಪಾದುತ್ತಾರಣಾರ್ಥೀ ತ್ರಿತಃ ಕ್ರಮೇಣ ತುಷ್ಟಾವ ಚಂದ್ರಮಾ ಇತ್ಯಾದಿನೇತಿ।

ಆಪ್ತ್ಯಋಷಿಗೆ ಏಕತ, ದ್ವಿತ ಮತ್ತು ತ್ರಿತ ಎಂಬ ಮೂವರು ಪುತ್ರರಿದ್ದರು. ಅವರು ಯಜ್ಞಮಾಡಬೇಕೆಂಬ ಆಸೆಯಿಂದ ಯಜ್ಞಪಶುಗಳನ್ನು ಯಾಚನೆಮಾಡಿಕೊಂಡು ಅವುಗಳೊಂದಿಗೆ ಸರಸ್ವತೀ ನದಿಯ ತೀರದ ಮಾರ್ಗದಿಂದ ಬರುತ್ತಿರುವಾಗ ಆಚೆ ದಡದಲ್ಲಿದ್ದ ಒಂದು ತೋಳನು ಇವರನ್ನು ನೋಡಿತು. ಒಡನೇ ಅದು ಎದ್ದು ನದಿಯ ನೀರನ್ನು ದಾಟಿಕೊಂಡು ಬಂದು ಇವರನ್ನು ಗದರಿಸಿತು. ಅವರೆಲ್ಲರೂ ಪ್ರಾಣಭೀತಿಯಿಂದ ಗಾಬರಿಗೊಂಡಾಗ ತ್ರಿತನು ಧೂಳುಗಳಿಂದಲೂ ಲತೆಗಳಿಂದಲೂ, ಜೊಂಡುಗಳಿಂದಲೂ ಆವೃತವಾದ ಒಂದು ಅಗಾಧವಾದ ಭಾವಿಯೊಳಕ್ಕೆ ಬಿದ್ದುಬಿಟ್ಟನು. ಏಕತ ಮತ್ತು ದ್ವಿತರು ಹೇಗೋ ತಪ್ಪಿಸಿಕೊಂಡು ಗೋವುಗಳನ್ನು ಅಟ್ಟಿಕೊಂಡು ಮನೆಗೆ ಹೊರಟು ಹೋದರು. ಆಗ ನಿರ್ಗತ್ಯತಿಯಿಂದ ಆವೃತವಾದ ಬಾವಿಯಲ್ಲಿ ಬಿದ್ದಿದ್ದ ತ್ರಿತನು, 'ಸೋಮಯಾಗವನ್ನು ನೆರವೇರಿಸದೇ ಸತ್ತರೆ ಮನುಷ್ಯನಿಗೆ ಶ್ರೇಯಸ್ಸಿಲ್ಲ. ಈಗ ಯಾವ ಉಪಾಯದಿಂದ ಯಜ್ಞಮಾಡಿ ಸೋಮರಸವನ್ನು ಪಾನಮಾಡಲು ಸಾಧ್ಯವಾದೀತು' ಎಂದು ಯೋಚನೆಮಾಡತೊಡಗಿದನು. ಹಾಗೆ ಆಲೋಚಿಸುತ್ತಿರುವಲ್ಲಿಯೇ ಆಕಸ್ಮಿಕವಾಗಿ ಅಲ್ಲಿ ನೇತಾಡುತ್ತಿದ್ದ ಒಂದು ಬಳ್ಳಿಯನ್ನು ನೋಡಿದನು. ಅನಂತರ ಅದೇ ಸೋಮಲತೆಯೆಂದು ನಿಶ್ಚಯಿಸಿ ತನ್ನ ಆಂತರಿಕವಾದ ಯೋಗಸಂಪತ್ತಿನಿಂದ ಅಂತಸ್ಥವಾದ ಅಗ್ನಿಯನ್ನು ಸಿದ್ಧಮಾಡಿ, ಆ ಲತೆಯನ್ನೂ ಹಿಂಡಿ ಯಾಗಾರ್ಥವಾಗಿ ದೇವತೆಗಳನ್ನು ಕರೆದನು. ಅವರು ಈ ಆಹ್ವಾನಕಾರಣವನ್ನು ತಿಳಿಯದೆ ಚಿಂತಿಸತೊಡಗಿದರು. ಆಗ ಬೃಹಸ್ಪತಿಯು ಆ ಆಹ್ವಾನವನ್ನು ಕೇಳಿ, ದೇವತೆಗಳನ್ನು ಕುರಿತು 'ತ್ರಿತನ ಯಜ್ಞವು ನೆರವೇರು

ತ್ತಿದೆ. ನಾವೆಲ್ಲರೂ ಅಲ್ಲಿಗೆ ಹೋಗೋಣ' ಎಂದನು. ಅನಂತರ ಅಲ್ಲಿಗೆ ಎಲ್ಲರೂ ಹೋದರು. ಆಗ ತ್ರಿತನು ಬಾವಿಯಿಂದ ಮೇಲಕ್ಕೆ ಬರಬೇಕೆಂಬ ಆಸೆಯಿಂದ ಅಲ್ಲಿ ಬಂದಿದ್ದ ದೇವತೆಗಳನ್ನು ಒಬ್ಬೊಬ್ಬರನ್ನಾಗಿ ಸ್ತುತಿಸತೊಡಗಿದನು ಎಂದು ಸ್ಕಂದಸ್ವಾಮಿಗಳ ಭಾಷ್ಯದಲ್ಲಿರುವ ಕಥಾಕ್ರಮವು ಈ ರೀತಿಯಲ್ಲಿದೆ.

ಬೃಹದ್ದೇವತೆಯಲ್ಲಿಯೂ ಸಹ ಈ ಕಥೆಯು ಉಕ್ತವಾಗಿದೆ. ಅದರಲ್ಲೂ ಸಹ ತೋಳನ ಬೆದರಿಕೆಯಿಂದಲೇ ತ್ರಿತನು ಬಾವಿಗೆ ಬಿದ್ದನೆಂದೂ ಅನಂತರ ಅವನು ದೇವತಾಸ್ತುತಿಯನ್ನು ಮಾಡಿದನೆಂದೂ ಹೇಳಿದೆ.

ತ್ರಿತಂ ಗಾಸ್ತ್ವನುಗಚ್ಛಂತಂ ಕ್ರೂರಾಃ ಸಾಲಾವೃಕೀಸುತಾಃ ।
ಕೂಪೇ ಪ್ರಕ್ಷಿಪ್ಯ ಗಾಃ ಸರ್ವಾಸ್ತತ ಏವಾಪಜಹ್ರಿರೇ ॥
ಸ ತತ್ರ ಸುಷುವೇ ಸೋಮಂ ಮಂತ್ರವಿನ್ಮಂತ್ರವಿತ್ತಮಃ ।
ದೇವಾಂಶ್ಚಾವಾಹಯತ್ಸರ್ವಾಂಸ್ತಚ್ಛುಶ್ರಾವ ಬೃಹಸ್ಪತಿಃ ॥
ಆಗಚ್ಛತೋಽಥ ತಾನ್ದೃಷ್ಟ್ವಾ ಕ್ಷ್ವವಸಕ್ತಸ್ಯ ತತ್ರ್ಯತಃ ।
ಸರ್ವದೃಕ್ತ್ವಂ ಚ ವರುಣಸ್ಯಾರ್ಯಮ್ಣಶ್ಚೇತ್ಯುಪಾಲಭತ್ ॥
ಕೂಪೇಷ್ಟಕಾಭಿರ್ವ್ರಣಿತಾನ್ಯಂಗಾನ್ಯೇವಾಭವನ್ಮಮ।
ದೃಷ್ಟ್ವಾ ಸರ್ವಾನಹಂ ಸ್ತೌಮಿ ಯದ್ಯಪ್ಯೇಕೋ ನ ಪಶ್ಯತಿ ॥
ಬೃಹಸ್ಪತಿಪ್ರಚೋದಿತಾ ವಿಶ್ವೇ ದೇವಗಣಾಸ್ತ್ರಯಃ ।
ಜಗ್ಮುಸ್ತ್ರಿತಸ್ಯ ತಂ ಯಜ್ಞಂ ಭಾಗಾಂಶ್ಚ ಜಗೃಹುಃ ಸಹ ॥
ಬೃಹಸ್ಪತಿಸ್ತ್ರಿತಸ್ಯೈತದ್ ಜ್ಞಾನಂ ವಿಜ್ಞಾನಮೇವ ಚ ।
ಶೃಚೇನಾಂತ್ಯೇನ ಸೂಕ್ತಸ್ಯ ಜಗಾದರ್ಷಿರಸಾವಿತಿ ॥

(ಬೃ. ದೇ. ೩-೧೩೨ ರಿಂದ ೧೩೭)

ಕ್ರೂರಸ್ವಭಾವವುಳ್ಳ ಆ ತೋಳನ ಮರಿಗಳು ತ್ರಿತನನ್ನು ಬಾವಿಗೆ ತಳ್ಳಿ ಅವನ ಗೋವುಗಳನ್ನು ಅಲ್ಲಿಂದ ಕಸಿದುಕೊಂಡು ಹೊರಟುಹೋದವು. ಆಗ ಮಂತ್ರವಿತ್ತುಗಳಲ್ಲೆಲ್ಲಾ ಶ್ರೇಷ್ಠನಾದ ಮಂತ್ರವಿತ್ತಾದ ತ್ರಿತನು ಸೋಮರಸವನ್ನು ಹಿಂಡಿ ದೇವತೆಗಳನ್ನು ಕರೆದನು. ಬೃಹಸ್ಪತಿಯು ಈ ಆಹ್ವಾನವನ್ನು ಕೇಳಿ ಸಕಲ ದೇವತೆಗಳೊಡನೆಯೂ ಕೂಡಿಕೊಂಡು ಬಂದನು. ಅವರು ಬಂದೊಡನೆಯೇ ಒಂದು ವಿಧವಾದ ಅಸಮಾಧಾನದಿಂದ ಈ ವರುಣನ ಮತ್ತು ಅರ್ಯಮನ ಸರ್ವದೃಕ್ತ್ವ (ಎಲ್ಲವನ್ನೂ ನೋಡತಕ್ಕ ಶಕ್ತಿ) ಈಗೆಲ್ಲಿ ಹೋಯಿತು ? ಈ ಬಾವಿಯ ಇಟ್ಟಿಗೆಯಿಂದ ನನ್ನ ಅಂಗಗಳೆಲ್ಲವೂ ಗಾಯವಾಗಿವೆ. ನಾನು ಅವರನ್ನೆಲ್ಲಾ ನೋಡುತ್ತಾ ಸ್ತುತಿಸುತ್ತಿದ್ದರೂ ಸಹ ನನ್ನನ್ನು ಅವರಲ್ಲೊಬ್ಬರೂ ನೋಡುವುದಿಲ್ಲವಲ್ಲಾ ಎಂಬ ಪರಿತಾಪದಿಂದ ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದನು. ಆಗ ಬೃಹಸ್ಪತಿಯಿಂದ ಪ್ರಚೋದಿತರಾದ ಸರ್ವ ದೇವತೆಗಳೂ ಸಹ ಆ ಯಜ್ಞಕ್ಕೆ ಹೋಗಿ ತಮ್ಮ ತಮ್ಮ ಹವಿರ್ಭಾಗಗಳನ್ನು ಸ್ವೀಕರಿಸಿದರು. ಅನಂತರ ಬೃಹಸ್ಪತಿಯು ತ್ರಿತನ ಜ್ಞಾನವನ್ನೂ ವಿಜ್ಞಾನವನ್ನೂ ಶ್ಲಾಘಿಸಿದನು. ಇದು ಬೃಹದ್ದೇವತೆಯಲ್ಲಿ ಉಕ್ತವಾಗಿರುವ ಕಥೆ.

ಹಿಂದೆ ಯಾಗಾರ್ಥವಾಗಿ ಸೋಮರಸವನ್ನು ಹಿಂಡುವಾಗಲೆಲ್ಲಾ ನಿಮಗೆ ಪ್ರೀತಿಕರವಾದ ಸ್ತೋತ್ರಗಳನ್ನು ಪಠಿಸುತ್ತಿದ್ದ ತ್ರಿತನೇ ನಾನು ಎಂದು ದೇವತೆಗಳಿಗೆ ತಾನು ಹಿಂದೆ ಅವರನ್ನು ಆರಾಧಿಸುತ್ತಿದ್ದುದನ್ನೂ ಅವರಿಗೆ ಹರ್ಷದಾ

ಯಾಕನಾಗಿದ್ದುದನ್ನೂ ಜ್ಞಾಪಿಸುತ್ತಾನೆ. ಸೋಮರಸವನ್ನು ಹಿಂಡುವುದರಲ್ಲಿಯೂ, ಸ್ತುತಿರೂಪವಾದ ಮಂತ್ರಗಳನ್ನು ಪಠಿಸುವುದರಲ್ಲಿಯೂ ತ್ರಿತನು ಅತ್ಯಂತ ಪ್ರಸಿದ್ಧನೆಂದು ಅನೇಕ ಆಧಾರಗಳಿಂದ ತಿಳಿಯುತ್ತದೆ.

**ಸ ತತ್ರ ಸುಷುವೇ ಸೋಮಂ ಮಂತ್ರವಿನ್ಮಂತ್ರವಿತ್ತಮಃ ।**

(ಬೃ. ದೇ. ೩-೧೩೩)

ಮಂತ್ರವಿತ್ತಮರೆಲ್ಲರಲ್ಲಿ ಅತ್ಯಂತ ಶ್ರೇಷ್ಠನಾದ ತ್ರಿತನು ಸೋಮರಸವನ್ನು ಹಿಂಡಿ ಯಾಗಕ್ಕೆ ಸಿದ್ಧನಾದನೆಂದು ಬೃಹದ್ದೇವತೆಯಲ್ಲಿ ಅವನ ಮಹಿಮೆಯನ್ನು ವರ್ಣಿಸಿ, ಈ ಮಹತ್ತ್ವಪೂರಿತವಾದ ಯೋಗ್ಯತೆಯನ್ನು ಅವನು ಪ್ರಕಾಶಪಡಿಸಿದುದರಿಂದಲೇ ಬೃಹಸ್ಪತಿಯು ಅವನ ಪರಿದೇವನಾಕಾಲದಲ್ಲಿ.

**ಬೃಹಸ್ಪತಿಸ್ತ್ರಿತಸ್ಯೈತದ್ ಜ್ಞಾನಂ ವಿಜ್ಞಾನಮೇವ ಚ ।**
**ತೃಚೇನಾಂತ್ಯೇನ ಸೂಕ್ತಸ್ಯ ಜಗಾದರ್ಷಿರಸಾವಿತಿ ।**

(ಬೃ. ದೇ. ೨-೧೩೭)

ಜ್ಞಾನದಿಂದಲೂ ವಿಜ್ಞಾನಪ್ರಭಾವದಿಂದಲೂ ಪೂರಿತವಾದ ಅವನ ಸ್ತುತಿಯನ್ನು ಒಡನೆಯೇ ತಿಳಿದುಕೊಂಡು ಇತರ ಋಷಿಗಳಿಗೂ ಆ ಋಷಿಯ ಮಹತ್ತ್ವಪೂರಿತವಾದುದೂ ಸ್ತುತಿಯಿಂದ ಕೂಡಿದುದೂ ಆದ ಮಾನಸಿಕವಾದ ಯಜ್ಞದ ವಿಷಯವನ್ನು ತಿಳಿಸಿದನೆಂದು ಹೇಳಿದೆ. ಸ್ಕಂದಸ್ವಾಮಿಗಳ ಭಾಷ್ಯದಲ್ಲಿಯೂ ಸಹ ಅವನ ಯೋಗೈಶ್ವರ್ಯದ ಮಹಿಮೆಯನ್ನು ತಿಳಿಸಿದೆ. ಇಂತಹ ಶ್ರೇಷ್ಠವಾದ ಯೋಗ್ಯತೆಯುಳ್ಳ ತ್ರಿತನು ಹಿಂದೆಲ್ಲಾ ಸೋಮರಸವನ್ನು ಹಿಂಡಿ ಯಾಗ ಮಾಡಿದುದೂ, ಆ ಕಾಲದಲ್ಲಿ ಅತ್ಯತಿಶಯವಾದ ಸ್ತೋತ್ರಗಳನ್ನು ಪಠಿಸಿದುದೂ ಋಕ್ಸಂಹಿತೆಯಲ್ಲಿಯೇ ವರ್ಣಿಸಲ್ಪಟ್ಟಿದೆ. ಉದಾಹರಣೆಗೆ—

**ಆದೀಂ ತ್ರಿತಸ್ಯ ಯೋಷಣೋ ಹರಿಂ ಹಿನ್ವಂತ್ಯದ್ರಿಭಿಃ ।**

(ಋ. ಸಂ. ೯-೩೨-೨)

**ಭುವತ್ತ್ರಿತಸ್ಯ ಮರ್ಜ್ಯೋ ಭುವದಿಂದ್ರಾಯ ಮತ್ಸರಃ ।**

(ಋ. ಸಂ. ೯-೩೪-೪)

ಇತ್ಯಾದಿ ಋಕ್ಕುಗಳಲ್ಲಿ ತ್ರಿತನು ಹಿಂಡಿದ ಸೋಮರಸವು ಇಂದ್ರನಿಗೆ ಹರ್ಷದಾಯಕವಾಗಿ ಅವನ ಪ್ರಭಾವವನ್ನು ಹೆಚ್ಚಿಸಿತೆಂದೂ,

**ಸ ತ್ರಿತಸ್ಯಾಧಿ ಸಾನವಿ ಪವಮಾನೋ ಅರೋಚಯತ್ । ಜಾಮಿಭಿಃ ಸೂರ್ಯಂ ಸಹ ॥**

(ಋ. ಸಂ. ೯-೩೭-೪)

ಇತ್ಯಾದಿ ಋಕ್ಕುಗಳಲ್ಲಿ ತ್ರಿತನ ಯಜ್ಞಕಾಲದಲ್ಲಿ ಹಿಂಡಿ ಪವಿತ್ರಗಳಾದ ಸೋಮಗಳು ಸೂರ್ಯನನ್ನು ಅತಿಶಯವಾಗಿ ಪ್ರಕಾಶಿಸುವಂತೆ ಮಾಡಿದವು ಎಂದೂ,

**ಅಸ್ಯ ಸುವಾನಸ್ಯ ಮಂದಿನಸ್ತ್ರಿತಸ್ಯ ನ್ಯರ್ಬುದಂ ವಾವೃಧಾನೋ ಅಸ್ತಃ ।**
**ಅವರ್ತಯತ್ಸೂರ್ಯೋ ನ ಚಕ್ರಂ ಭಿನದ್ವಲಮಿಂದ್ರೋ ಅಂಗಿರಸ್ವಾನ್ ॥**

(ಋ. ಸಂ. ೨-೧೧-೨೦)

ಅನು ತ್ರಿತಸ್ಯ ಯುಧ್ಯತಃ ಶುಷ್ಮಮಾವನ್ನುತ ಕ್ರತುಂ । ಅನ್ವಿಂದ್ರಂ ವೃತ್ರತೂರ್ಯೇ ॥

(ಋ. ಸಂ. ೮-೭-೨೪)

ಇತ್ಯಾದಿ ಋಕ್ಕುಗಳಲ್ಲಿ ತ್ರಿತನ ಸ್ತೋತ್ರದಿಂದಲೂ, ಅವನು ಅರ್ಪಿಸಿದ ಸೋಮರಸಪಾನದಿಂದಲೂ ಹರ್ಷಿತನಾದ ಇಂದ್ರನು ಅತಿಶಯವಾದ ಪ್ರಭಾವನ್ನು ಪಡೆದು ಅಸುರರನ್ನು ನಾಶಮಾಡಲು ಶಕ್ತನಾದನೆಂದೂ, ಮರುತ್ತುಗಳೂ, ಇಂದ್ರನೂ ಸಹ ತ್ರಿತನ ಶಕ್ತಿಯ ಸಹಾಯದಿಂದಲೇ ವೃತ್ರಾದಿ ವಧವನ್ನು ಮಾಡಲು ಶಕ್ತರಾದರೆಂದೂ ಸಹ ಬಹಳ ವಾಗಿ ವರ್ಣಿಸಿದೆ. ಹೀಗೆ ಹಿಂದೆಲ್ಲಾ ತಾನು ದೇವತೆಗಳಿಗೆ ತೃಪ್ತಿಪಡಿಸಿದುದನ್ನೂ ಅನೇಕ ವಿಧವಾಗಿ ಸಹಾಯ ಮಾಡಿದುದನ್ನೂ ಸಹ ಈಗ ಜ್ಞಾಪಿಸಿ ತಾನು ಕಷ್ಟಕ್ಕೆ ಸಿಕ್ಕಿಕೊಂಡಾಗ ತನಗೆ ಅವರು ಸಹಾಯಮಾಡಬೇಕೆಂದೂ ಪ್ರಾರ್ಥಿಸಿದ್ದಾನೆ.

ಋ. ಸಂ. ೧-೧೦೫-೮ ನೇ ಋಕ್ಕಿಗೆ ನಿರುಕ್ತಕಾರರು ಈ ರೀತಿ ವ್ಯಾಖ್ಯಾನಮಾಡಿದ್ದಾರೆ.

**ಸಂತಪಂತಿ ಮಾಮಭಿತಃ ಸಪತ್ನ್ಯ ಇವೇಮಾಃ ಪರ್ಶವಃ ಕೂಪಪರ್ಶವೋ ಮೂಷಿಕಾ ಇವಾಸ್ನಾತಾನಿ ಸೂತ್ರಾಣಿ ವ್ಯದಂತಿ । ಸ್ವಾಂಗಾಭಿಧಾನಂ ವಾ ಸ್ಯಾಚ್ಛಿಶ್ನಾನಿ ವ್ಯದಂತೀತಿ ವಾ ಸಂತಪಂತಿ ಮಾಧ್ಯಃ ಕಾಮಾಃ 'ಸ್ತೋತಾರಂ ತೇ ಶತಕ್ರತೋ', 'ವಿತ್ತಂ ಮೇ ಅಸ್ಯ ರೋದಸೀ' ಜಾನೀತಂ ಮೇಽಸ್ಯ ದ್ಯಾವಾಪೃಥಿವ್ಯಾವಿತಿ । ತ್ರಿತಂ ಕೂಪೇಽವಹಿತಮೇತತ್ಸೂಕ್ತಂ ಪ್ರತಿಬಭೌ । ತತ್ರ ಬ್ರಹ್ಮೇತಿಹಾಸಮಿಶ್ರಮೃಙ್ಮಿಶ್ರಂ ಗಾಥಾಮಿಶ್ರಂ ಭವತಿ । ತ್ರಿತಸ್ತೀರ್ಣತಮೋ ಮೇಧಯಾ ಬಭೂವ ಅಪಿ ವಾ ಸಂಖ್ಯಾನಾಮೈವಾಭಿಪ್ರೇತಂ ಸ್ಯಾದೇಕತೋ ದ್ವಿತಸ್ತ್ರಿತ ಇತಿ ತ್ರಯೋ ಬಭೂವುಃ ।** (ನಿ. ೪-೬).

ಸುತ್ತಲೂ ಸವತಿಯರು ಮುತ್ತಿಕೊಂಡು ಗಂಡನನ್ನು ಪೀಡಿಸುವಂತೆಯೂ, ಇಲಿಗಳು ತೈಲದಲ್ಲಿ ಅದ್ದಿದ ನೂಲನ್ನು ಕಚ್ಚುವಂತೆಯೂ ಈ ಬಾವಿಯ ಗೋಡೆಗಳ ಇಟ್ಟಿಗೆಗಳು ನನ್ನನ್ನು ಸುತ್ತಲೂ ಮುತ್ತಿಕೊಂಡು ಹಿಂಸಿಸುತ್ತಿದೆ. ಅಥವಾ ಶಿಶ್ನವೆಂಬ ಶಬ್ದಕ್ಕೆ ತಮ್ಮ ಶಿಶ್ನವೆಂಬ ಅಂಗವೇ ಆದರೂ ಸಹ ಮೂಷಿಕಗಳು ಅವನ್ನೇ ಕಚ್ಚುವಂತೆ ನನ್ನ ಮನೋವ್ಯಾಧಿಗಳು ನನ್ನನ್ನು ಕಚ್ಚಿ ತಿನ್ನುತ್ತಿವೆ. ಎಲೈ ಶತಕ್ರತುವಾದ ಇಂದ್ರನೇ, ನಿನ್ನ ಸ್ತೋತೃವಾದ ನನ್ನನ್ನೂ ಸಹ ಈ ರೀತಿ ನನ್ನ ಮಾನಸಿಕವ್ಯಥೆಗಳು ಹಿಂಸಿಸುತ್ತಿವೆ. ಎಲೈ ದ್ಯಾವಾಪೃಥಿವಿಗಳೇ, ನನ್ನ ಈ ವೇದನೆಯನ್ನು ತಿಳಿಯಿರಿ ಎಂದು ಈ ಋಕ್ಕನ್ನು ವಿವರಿಸಿ ಅನಂತರ ವಿಶೇಷವಿಷಯಗಳನ್ನು ತಿಳಿಸುತ್ತಾರೆ. ಈ ಸೂಕ್ತವು ಬಾವಿಯಲ್ಲಿ ಬಿದ್ದಿದ್ದ ತ್ರಿತನಿಂದ ದೃಷ್ಟವಾಯಿತು. ಇದಕ್ಕೆ ಸಂಬಂಧಿಸಿದಂತೆ ಗಾಥೆಯಿಂದ ಕೂಡಿದುದೂ, ಋಕ್ಕಿನಿಂದ ಕೂಡಿದುದೂ ಆದ ಒಂದು ಇತಿಹಾಸವಿದೆ. ತ್ರಿತನು ಪ್ರಾಜ್ಞರಲ್ಲೆಲ್ಲಾ ಅತ್ಯಂತ ಶ್ರೇಷ್ಠನಾದವನು. ಅಥವಾ ಕ್ರಮಕ್ರಮವಾಗಿ ಉತ್ಪನ್ನರಾದ ಏಕತ, ದ್ವಿತ ಮತ್ತು ತ್ರಿತ ಈ ಮೂವರಲ್ಲಿ ಕೊನೆಯವನನ್ನು ಸೂಚಿಸುವ ಸಂಖ್ಯಾವಾಚಕವಾಗಿರಲೂಬಹುದು, ಎಂದು ನಿರುಕ್ತಕಾರರು ವಿವರಿಸಿದ್ದಾರೆ. ಈ ಋಕ್ಕುಗಳು ಈ ಅಭಿಪ್ರಾಯವನ್ನೇ ಸೂಚಿಸುತ್ತವೆ —

**ಸಂ ಮಾ ತಪಂತ್ಯಭಿತಃ ಸಪತ್ನೀರಿವ ಪರ್ಶವಃ ।**
**ನಿ ಬಾಧತೇ ಅಮತಿರ್ನಗ್ನತಾ ಜಸುರ್ವೇರ್ನ ವೇವೀಯತೇ ಮತಿಃ ॥**
**ಮೂಷೋ ನ ಶಿಶ್ನಾ ವ್ಯದಂತಿ ಮಾಧ್ಯಃ ಸ್ತೋತಾರಂ ತೇ ಶತಕ್ರತೋ ।**
**ಸಕೃತ್ಸು ನೋ ಮಘವನ್ನಿಂದ್ರ ಮೃಳಯಾಧಾ ಪಿತೇವ ನೋ ಭವ ॥**

(ಋ. ಸಂ. ೧೦-೩೩-೨-೩)

# ಹತ್ತನೆಯ ಮಂಡಲವು.

## ಮೊದಲನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ದಶಮೇ ಮಂಡಲೇ ದ್ವಾದಶಾನುವಾಕಾಃ । ತತ್ರ ಪ್ರಥಮಾನುವಾಕೇ ಷೋಡಶ ಸೂಕ್ತಾನಿ । ತತ್ರಾಗ್ನೇ ಬೃಹನ್ನಿತಿ ಸಪ್ತರ್ಚಂ ಪ್ರಥಮಂ ಸೂಕ್ತಂ । ಆಪ್ತ್ಯಸ್ಯ ತ್ರಿತಸ್ಯಾರ್ಷಂ । ಅನಾದೇಶಪರಿಭಾಷಯಾ ತ್ರಿಷ್ಟುಪ್ । ಮಂಡಲಾದಿಪರಿಭಾಷಯಾಗ್ನಿರ್ದೇವತಾ । ತಥಾ ಚಾನುಕ್ರಮ್ಯತೇ । ಅಗ್ನೇ ಸಪ್ತ ತ್ರಿತ ಇತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರಾಗ್ನೇಯೇ ಕ್ರತೌ ತ್ರೈಷ್ಟುಭೇ ಛಂದಸೀದಮಾದೀನ್ಯಷ್ಟ ಸೂಕ್ತಾನ್ಯಷ್ಟಮಸ್ಯಾಂತ್ಯಾಸ್ತಿಸ್ರೋ ವರ್ಜಯಿತ್ವಾ । ಸೂತ್ರ್ಯತೇ ಹಿ । ಅಗ್ನೇ ನಯಾಗ್ನೇ ಬೃಹನ್ನಿತ್ಯಷ್ಟಾನಾಮುತ್ತಮಾದುತ್ತಮಾಸ್ತಿಸ್ರ ಉದ್ಧರೇದಿತಿ ತ್ರೈಷ್ಟುಭಂ । ಆ. ೪.೧೩ । ಇತಿ । ಪ್ರಾತರನುವಾಕನ್ಯಾಯೇನ ತಸ್ಯೈವ ಸಮಾಮ್ನಾಯಸ್ಯ ಸಹಸ್ರಾವಮಮೋದೇತೋಃ ಶಂಸೇತ್ । ಆ. ೬-೫ । ಇತಿ ಚ ॥ ಹೋಮಾರ್ಥಂ ಪ್ರಣೀತ ಆಹವನೀಯೇ ಪ್ರಾಗ್ಘೋಮಾದುಪಶಾಂತೇ ಜ್ಯೋತಿಷ್ಮದ್ಗುಣಕಾಗ್ನಿದೇವತಾಕಾ ಕಾಚಿದಿಷ್ಟಿಃ । ತತ್ರಾದ್ಯಾ ಯಾಜ್ಯಾ । ಸೂತ್ರಿತಂ ಚ । ಇಷ್ಟಿರಗ್ನಿರ್ಜ್ಯೋತಿಷ್ಮಾನ್ವರುಣ ಉದಗ್ನೇ ಶುಚಯಸ್ತವಾಗ್ನೇ ಬೃಹನ್ನುಷಸಾಮೂರ್ಧ್ವೋಽಸ್ಥಾತ್ । ಆ. ೩-೧೨ । ಇತಿ ॥ ಉಪಾಕರಣೋತ್ಸರ್ಜನಯೋರ್ಮಂಡಲಾದಿಹೋಮೇಽಪ್ಯೇಷಾ । ಸೂತ್ರಮುದಾಹೃತಂ ॥**

ಅನುವಾದವು—ಹತ್ತನೆಯ ಮಂಡಲದಲ್ಲಿ ಹನ್ನೆರಡು ಅನುವಾಕಗಳಿರುವವು. ಮೊದಲನೆಯ ಅನುವಾಕದಲ್ಲಿ ಹದಿನಾರು ಸೂಕ್ತಗಳಿರುವವು. ಅವುಗಳಲ್ಲಿ **ಅಗ್ನೇ ಬೃಹನ್** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ತ್ರಿತ ಆಪ್ತ್ಯನೆಂಬುವನು ಋಷಿಯು; ಅಗ್ನಿಯು ದೇವತೆಯು, ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಗ್ನೇ ಸಪ್ತ ತ್ರಿತಃ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನ ಕಾಲದಲ್ಲಿ ಆಗ್ನೇಯ ಕ್ರತುಸಂಬಂಧವಾದ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳಿಗಾಗಿ ಈ ಮಂಡಲದ ಮೊದಲಿನ ಎಂಟು ಸೂಕ್ತಗಳ—ಎಂಟನೆಯ ಸೂಕ್ತದ ಕೊನೆಯ ಮೂರು ಋಕ್ಕುಗಳನ್ನು ಬಿಟ್ಟು—ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಅಗ್ನೇ ನಯಾಗ್ನೇ ಬೃಹನ್ನಿತ್ಯಷ್ಟಾನಾಮುತ್ತಮಾದುತ್ತಮಾಸ್ತಿಸ್ರ ಉದ್ಧರೇದಿತಿ ತ್ರೈಷ್ಟುಭಂ** ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು. ಮತ್ತು ಈ ವಿಷಯದಲ್ಲಿ—**ಪ್ರಾತರನುವಾಕನ್ಯಾಯೇನ ತಸ್ಯೈವ ಸಮಾಮ್ನಾಯಸ್ಯ ಸಹಸ್ರಾವಮಮೋದೇತೋಃ ಶಂಸೇತ್** ಎಂಬ ಆಶ್ವಲಾಯನ ಶ್ರೌತಸೂತ್ರವೂ (ಆ. ೬-೫) ಇರುವುದು. ಹೋಮಾರ್ಥವಾಗಿ ಆಹವನೀಯಾಗ್ನಿಯನ್ನು ತಂದು ಪ್ರತಿಷ್ಠಿಸಿದಾಗ ಮೊದಲ ಹೋಮಾನಂತರ ಜ್ಯೋತಿಷ್ಮದ್ಗುಣಕಾಗ್ನಿ ಎಂಬ ದೇವತೆಯನ್ನುದ್ದೇಶಿಸಿ ಒಂದು ಇಷ್ಟಿಯನ್ನು ಮಾಡಬೇಕು. ಆ ಇಷ್ಟಿಯಲ್ಲಿ ಈ ಸೂಕ್ತದ ಮೊದಲನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಇಷ್ಟಿರಗ್ನಿರ್ಜ್ಯೋತಿಷ್ಮಾನ್ ವರುಣ ಉದಗ್ನೇ ಶುಚಯಸ್ತವಾಗ್ನೇ ಬೃಹನ್ನುಷಸಾಮೂರ್ಧ್ವೋ ಅಸ್ಥಾತ್** ಎಂಬ ಸೂತ್ರದಿಂದ ( ಆ. ೩-೧೨ ) ವಿವೃತವಾಗಿರುವುದು. ಮತ್ತು ಉಪಾಕರಣ, ಉತ್ಸರ್ಜನ ಕರ್ಮಗಳ ಪ್ರಧಾನ ಹೋಮಗಳಲ್ಲಿ ಮಂಡಲಾದಿ ಋಕ್ಕುಗಳಿಗಾಗಿ ಈ ಸೂಕ್ತದ ಮೊದಲನೆಯ ಋಕ್ಕಿನ ವಿನಿಯೋಗವಿರುವುದೆಂದು ಸೂತ್ರೋದಾಹರಣೆಯನ್ನು ಹಿಂದೆಯೇ ತಿಳಿಸಲಾಗಿದೆ.

## ಸೂಕ್ತ—೧

ಮಂಡಲ—೧೦ । ಅನುವಾಕ—೧ । ಸೂಕ್ತ—೧ ।
ಅಷ್ಟಕ—೭ । ಅಧ್ಯಾಯ—೫ । ವರ್ಗ—೨೯ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ।
ಋಷಿಃ—ತ್ರಿತ ಆಪ್ತ್ಯಃ ॥
ದೇವತಾ—ಅಗ್ನಿಃ ।
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಗ್ರೇ ಬೃಹನ್ನುಷಸಾಮೂರ್ಧ್ವೋ ಅಸ್ಥಾನ್ನಿರ್ಜಗನ್ವಾನ್ತಮಸೋ ಜ್ಯೋತಿ-
ಷಾಗಾತ್ ।
ಅಗ್ನಿರ್ಭಾನುನಾ ರುಶತಾ ಸ್ವಂಗ ಆ ಜಾತೋ ವಿಶ್ವಾ ಸದ್ಮಾನ್ಯಪ್ರಾಃ ॥೧॥

॥ ಪದಪಾಠಃ ॥

ಅಗ್ರೇ । ಬೃಹನ್ । ಉಷಸಾಂ । ಊರ್ಧ್ವಃ । ಅಸ್ಥಾತ್ । ನಿಃಽಜಗನ್ವಾನ್ । ತಮಸಃ । ಜ್ಯೋತಿಷಾ । ಆ । ಅಗಾತ್

ಅಗ್ನಿಃ । ಭಾನುನಾ । ರುಶತಾ । ಸುಽಅಂಗಃ । ಆ । ಜಾತಃ । ವಿಶ್ವಾ । ಸದ್ಮಾನಿ । ಅಪ್ರಾಃ ॥ ೧

॥ ಸಾಯಣಭಾಷ್ಯಂ ॥

ಬೃಹನ್ಮಹಾನೇಷೋಽಗ್ನಿರುಷಸಾಮಗ್ರ ಉಷಸಾಮುಪರ್ಯುಷಃಕಾಲ ಊರ್ಧ್ವಃ ಪ್ರಜ್ವಲಿತಃ ಸನ್ ಜ್ವಾಲಾರೂಪೇಣಾಸ್ಥಾತ್ । ತಿಷ್ಠತಿ । ತತಸ್ತಮಸಃ । ರಾತ್ರಿನಾಮೈತತ್ । ರಾತ್ರೇರ್ನಿರ್ಜಗನ್ವಾನ್ನಿರ್ಗತಃ ॥ ಗಮೇಃ ಕ್ವಸಾವಿಡಭಾವೇ ರೂಪಂ ॥ ನಿರ್ಗತೋ ನಿಷ್ಕ್ರಾಂತವಾನ್ ಸೋಽಗ್ನಿರ್ಜ್ಯೋತಿಷಾ ಸ್ವೀಯೇನ ತೇಜಸಾ ಲಕ್ಷಿತಃ ಸನ್ನಾಗಾತ್ । ಗಾರ್ಹಪತ್ಯಾದ್ವಿಹ್ರಿಯಮಾಣ ಆಹವನೀಯಂ ಪ್ರತ್ಯಾಗಚ್ಛತಿ । ಅನಂತರಂ ಸ್ವಂಗಃ ಶೋಭನಜ್ವಾಲಾವಯವೋ ಜಾತಃ ಕರ್ಮಾರ್ಥಂ ಸಮುತ್ಪನ್ನ ಏಷೋಽಗ್ನೀ ರುಶತಾ ॥ ರೋಚತೇರ್ಜ್ವಲತಿಕರ್ಮಣ ಇದಂ ರೂಪಂ ॥ ಆರೋಚಮಾನೇನ । ಯದ್ವಾ । ರುಶತಿರ್ಹಿಂಸಾರ್ಥಃ । ತಮಸಾಂ ಹಿಂಸಕೇನ । ಭಾನುನಾ ತೇಜಸಾ ವಿಶ್ವಾ ಸದ್ಮಾನಿ ಸರ್ವಾँಲ್ಲೋಕಾನ್ ಯದ್ವಾ ಸದನಾನಿ ಯಜ್ಞಗೃಹಾಣ್ಯಾಪ್ರಾಃ । ಆಪೂರಯತಿ ॥ ಪ್ರಾ ಪೂರಣೇ । ತಿಙಾಂ ತಿಙೋ ಭವಂತೀತಿ ತಿಪಃ ಸಿಬಾದೇಶಃ ॥ ಅತ್ರ ವಾಜಸನೇಯಕಂ । ಅಗ್ರೇ ಬೃಹನ್ನುಷಸಾಮೂರ್ಧ್ವೋ ಅಸ್ಥಾದಿತ್ಯಗ್ರೇ ಹ್ಯೇಷ ಬೃಹನ್ನುಷಸಾಮೂರ್ಧ್ವಸ್ತಿಷ್ಠತಿ । ನಿರ್ಜಗನ್ವಾನ್ತಮಸೋ ಜ್ಯೋತಿಷಾಗಾದಿತಿ ನಿರ್ಜಗನ್ವಾ-

ವ್ಯಾತ್ರೇಸ್ತಮಸೋ ಜ್ಯೋತಿಷೈತಿ । ಅಗ್ನಿರ್ಭಾನುನಾ ರುಶತಾ ಸ್ವಂಗ ಇತ್ಯಗ್ನಿರ್ವಾ ಏಷ ಭಾನುನಾ ರುಶತಾ ಸ್ವಂಗ ಆ ಜಾತೋ ವಿಶ್ವಾ ಸದ್ಮಾನ್ಯಪ್ರಾ ಇತೀಮೇ ವೈ ಲೋಕಾ ವಿಶ್ವಾ ಸದ್ಮಾನಿ ತಾನೇಷ ಜಾತ ಆಪ್ರೂರಯತಿ । ಶತ. ೬-೭-೩-೧೦ । ಇತಿ ।

॥ ಪ್ರತಿಪದಾರ್ಥ ॥

**ಬೃಹನ್**—ಮಹಾತ್ಮನಾದ ಅಗ್ನಿಯು । **ಉಷಸಾಂ ಅಗ್ರೇ**—ಉಷಸ್ಸುಗಳ ಆವಿರ್ಭಾವಕಾಲದಲ್ಲೇ । **ಊರ್ಧ್ವಃ ಅಸ್ಥಾತ್**—ಪ್ರಜ್ವಲಿತನಾಗಿ ಮೇಲೆದ್ದು ನಿಂತಿದ್ದಾನೆ । **ತಮಸಃ**—ಕತ್ತಲುಳ್ಳ ರಾತ್ರಿಯಿಂದ । **ನಿರ್ಜಗನ್ವಾನ್**—ಹೊರಕ್ಕೆ ಬಂದವನಾಗಿ । **ಜ್ಯೋತಿಷಾ**—ತನ್ನ ಕಾಂತಿಯಿಂದೊಡಗೂಡಿ । **ಆಗಾತ್**—ಹೊರಬಂದಿದ್ದಾನೆ । **ಸ್ವಂಗಃ**—ಉತ್ತಮವಾದ ಅವಯವಗಳುಳ್ಳವನೂ । **ಜಾತಃ**—ಯಜ್ಞಾರ್ಥವಾಗಿ ಉತ್ಪನ್ನನಾದವನೂ ಆದ । **ಅಗ್ನಿಃ**—ಅಗ್ನಿಯು । **ರುಶತಾ**—ಪ್ರಕಾಶನೂನವಾದ । **ಭಾನುನಾ**—ತೇಜಸ್ಸಿನಿಂದ । **ವಿಶ್ವಾ ಸದ್ಮಾನಿ**—ಸಕಲ ಯಜ್ಞಗೃಹಗಳನ್ನೂ । **ಅಪ್ರಾಃ**—ತುಂಬುತ್ತಾನೆ.

॥ ಭಾವಾರ್ಥ ॥

ಮಹಾತ್ಮನಾದ ಅಗ್ನಿಯು ಉಷಸ್ಸುಗಳ ಆವಿರ್ಭಾವಕಾಲದಲ್ಲಿಯೇ ಪ್ರಜ್ವಲಿತನಾಗಿ ಮೇಲೆದ್ದು ನಿಂತಿದ್ದಾನೆ. ಕತ್ತಲುಳ್ಳ ರಾತ್ರಿಯಿಂದ ಹೊರಹೊರಟು ತನ್ನ ಕಾಂತಿಯಿಂದೊಡಗೂಡಿ ಹೊರಬಂದಿದ್ದಾನೆ. ಉತ್ತಮವಾದ ಅವಯವಗಳುಳ್ಳವನೂ ಯಜ್ಞಾರ್ಥವಾಗಿ ಉತ್ಪನ್ನನಾದವನೂ ಆದ ಅಗ್ನಿಯು ಪ್ರಕಾಶನೂನವಾದ ತೇಜಸ್ಸಿನಿಂದ ಸಕಲ ಲೋಕಗಳನ್ನು ಅಥವಾ ಯಜ್ಞಗೃಹಗಳನ್ನೂ ತುಂಬುತ್ತಾನೆ.

## English Translation

The great fire at the beginning of the dawn has sprung aloft, and issuing forth from the darkness has come with radiance. Agni, the bright-bodied, as soon as born, fills all dwellings with shining light.

॥ ವಿಶೇಷವಿಷಯಗಳು ॥

**ಬೃಹನ್ ಉಷಸಾಂ ಅಗ್ರೇ ಊರ್ಧ್ವಃ ಅಸ್ಥಾತ್**—ಬೃಹತ್ ಶಬ್ದಕ್ಕೆ ಎರಡು ಅರ್ಥಗಳನ್ನು ಹೇಳಬಹುದು. ದೊಡ್ಡದಾದ ಆಕಾರದಿಂದ ಮೇಲೆಕ್ಕೆದ್ದು ಅನೇಕ ಜ್ವಾಲೆಗಳಿಂದ ಕೂಡಿ ಪ್ರಕಾಶಿಸುವವನು ಎಂದು ಒಂದು ವಿಧವಾದ ಅರ್ಥವು. **ಬೃಹನ್** ಎಂದರೆ **ಮಹಾನ್**—ಮಹಾತ್ಮನಾದವನು, ಪೂಜ್ಯನು, ಅನೇಕ ಗುಣವಿಶಿಷ್ಟನು, ಸರ್ವರಿಂದಲೂ ಆದರಣೀಯನು ಎಂದು ಇನ್ನೊಂದು ಅರ್ಥವು. **ಉಷಸಾಂ ಅಗ್ರೇ**—ಉಷಸಾಮುಷಯರ್ಪಃಕಾಲೇ। ಉಷಃಕಾಲವು ಪ್ರಾದುರ್ಭಾವವಾದಕೂಡಲೇ; ಉಷಃ ಕಾಲವೆಂದರೆ ರಾತ್ರಿಯ ಕಗ್ಗತ್ತಲೆಯು ಕೊನೆಗೊಂಡು ಸೂರ್ಯನು ಉದಯಿಸುವುದಕ್ಕಿಂತ ಪೂರ್ವದಲ್ಲಿ ಬೆಳಕಾಗಿರುವ ಕಾಲ. ಈ ಉಷಃಕಾಲದ ಪ್ರಾರಂಭದಲ್ಲಿ ಎಂದರೆ ಕತ್ತಲೆಯು ಆಗತಾನೆ ಹೋಗುತ್ತಿರುವಾಗ ಸ್ವಲ್ಪ ಸ್ವಲ್ಪ ಬೆಳಕು ಉಂಟಾಗಿರುವ ಕಾಲ. ಇಂತಹ ಕಾಲದಲ್ಲಿ ಅಗ್ನಿಯು ತನ್ನ ಜ್ವಾಲೆಗಳಿಂದ ಊರ್ಧ್ವಮುಖನಾಗಿ ಮೇಲೆದ್ದು ಎಂದರೆ ದೊಡ್ಡದಾಗಿ ಉರಿಯುತ್ತಾ ಪ್ರಕಾಶಿಸುತ್ತಿರುವನೆಂದು ಅಭಿಪ್ರಾಯವು. ಯಜ್ಞವನ್ನು ಪ್ರಾತಃಕಾಲದಲ್ಲಿಯೇ ಪ್ರಾರಂಭಿಸುವುದರಿಂದಲೂ, ಯಜ್ಞಕ್ಕೆ ಮುಖ್ಯಸಾಧನನಾದ ಅಗ್ನಿಯನ್ನು ಪ್ರಾತಃಕಾಲದಲ್ಲಿಯೇ ಅರಣಿಗಳಿಂದ ಉತ್ಪನ್ನನನ್ನಾಗಿ ಜ್ವಲಿಸುವಂತೆ ಮಾಡುವುದರಿಂದಲೂ ಇಲ್ಲಿ ಅಗ್ನಿಯು ಉಷಃಕಾಲಾರಂಭದಲ್ಲಿ ಬೆಳಗುತ್ತಿರುವನೆಂದು ಋಷಿಯು ವರ್ಣಿಸಿದ್ದಾನೆ.

**ತಮಸಃ ನಿರ್ಜಗನ್ವಾನ್ ಜ್ಯೋತಿಷಾ ಆ ಅಗಾತ್**—ಉಷಃಕಾಲದ ಆವಿರ್ಭಾವದಲ್ಲಿ ಕತ್ತಲೆಯೂ ಹೊರಟುಹೋಗಿರುವುದು. ಆದ್ದರಿಂದ ಕತ್ತಲೆಯಿಂದ ಹೊರಹೊರಟ ಅಗ್ನಿಯು ತನ್ನ ಸ್ವಂತ ಪ್ರಕಾಶದಿಂದ ಬೆಳಗುತ್ತಾ ಗಾರ್ಹಪತ್ಯಾಗ್ನಿ ಕುಂಡದಿಂದ ಆಹವನೀಯಾಗ್ನಿಯ ಬಳಿಗೆ ಋತ್ವಿಕ್ಕುಗಳಿಂದ ಒಯ್ಯಲ್ಪಡುವನು. ಅದನ್ನೇ ಇಲ್ಲಿ ಅಗ್ನಿಯು ಕತ್ತಲೆಯಿಂದ ಹೊರಟು ತನ್ನ ಸ್ವಪ್ರಕಾಶದಿಂದ ಬೆಳಗುತ್ತಾ ಆಹವನೀಯಾಗ್ನಿಯ ಬಳಿಗೆ ಬಂದನೆಂದು ವರ್ಣಿಸಿದೆ.

**ಸ್ವಂಗಃ ಅಗ್ನಿಃ ಜಾತಃ ರುಶತಾ ಭಾನುನಾ ವಿಶ್ವಾ ಸದ್ಮಾನಿ ಆ ಅಪ್ರಾಃ**—ಇಲ್ಲಿ **ಸ್ವಂಗಃ** ಎಂದರೆ **ಶೋಭನಜ್ವಾಲಾವಯವಃ**। ಉತ್ತಮವಾದ ಅಂಗಗಳುಳ್ಳವನು. ಅಗ್ನಿಯ ಜ್ವಾಲೆಗಳೇ ಅವನ ಅಂಗಗಳು. ಆದ್ದರಿಂದ ಉತ್ತಮವಾದ ಜ್ವಾಲೆಗಳೆಂಬ ಅವಯವಗಳುಳ್ಳ ಅಗ್ನಿಯು **ಜಾತಃ** ಯಜ್ಞಾರ್ಥವಾಗಿ ಋತ್ವಿಗ್ಜನರಿಂದ ಅರಣಿಗಳಲ್ಲಿ ಕಡೆಯಲ್ಪಟ್ಟು ಉತ್ಪನ್ನನಾಗಿದ್ದಾನೆ. ಇಂತಹ ಅಗ್ನಿಯು ಸಮಸ್ತಲೋಕಗಳನ್ನು ಅಥವಾ ಯಜ್ಞಗೃಹಗಳನ್ನೆಲ್ಲಾ ತನ್ನ ಪ್ರಕಾಶದಿಂದ ತುಂಬುತ್ತಾನೆ. ಅಗ್ನಿಯ ಪ್ರಕಾಶದಿಂದ ಲೋಕವೆಲ್ಲಾ ಚೆನ್ನಾಗಿ ಬೆಳಗುವುದು ಅದರಲ್ಲಿಯೂ ಅಗ್ನಿಯ ಉದರ ಭಾಗವಾದ ಯಜ್ಞಗೃಹವು ಅಗ್ನಿಯ ಮಹಾತೇಜಸ್ಸಿನಿಂದ ಬೆಳಗುತ್ತಿರುವುದು ಎಂದು ಋಷಿಯು ಅಗ್ನಿಯ ಪ್ರಕಾಶನಸಾಮರ್ಥ್ಯವನ್ನು ವರ್ಣಿಸಿದಾನೆ.

ಭಾಷ್ಯಕಾರರು ಈ ಋಕ್ಕಿನ ಅರ್ಥವನ್ನೂ ವಿಶದಪಡಿಸುವ ಶತಪಥ ಬ್ರಾಹ್ಮಣದ ವಾಕ್ಯವನ್ನು ಉದಾಹರಿಸಿದಾರೆ—

> **ಅಗ್ರೇ ಬೃಹನ್ನುಷಸಾಮೂರ್ಧ್ವೋ ಅಸ್ಥಾದಿತ್ಯಗ್ರೇ ಹ್ಯೇಷ ಬೃಹನ್ನುಷಸಾಮೂರ್ಧ್ವಸ್ತಿಷ್ಠತಿ। ನಿರ್ಜಗನ್ವಾಂಸ್ತಮಸೋ ಜ್ಯೋತಿರಾಗಾದಿತಿ ನಿರ್ಜಗನ್ವಾನ್ ರಾತ್ರೇಸ್ತಮಸೋ ಜ್ಯೋತಿಷೈತಿ। ಅಗ್ನಿರ್ಭಾನುನಾ ರುಶತಾ ಸ್ವಂಗ ಇತ್ಯಗ್ನಿರ್ವಾ ಏಷ ಭಾನುನಾ ರುಶತಾ ಸ್ವಂಗ ಆ ಜಾತೋ ವಿಶ್ವಾ ಸದ್ಮಾನ್ಯಪ್ರಾ ಇತೀಮೇ ವೈ ಲೋಕಾ ವಿಶ್ವಾ ಸದ್ಮಾನಿ ತಾನೇಷ ಜಾತ ಆಪೂರಯತಿ॥**
>
> (ಶ. ಬ್ರಾ. ೬-೭-೩-೧೦)

ಈ ಶ್ರುತಿವಾಕ್ಯದ ಅರ್ಥವಿವರಣೆಯು ನಾವು ಮೇಲೆ ವಿವರಿಸಿರುವ ಅರ್ಥಾನುಸಾರವಾಗಿಯೇ ಇರುವುದರಿಂದ ಪುನಃ ತಿಳಿಸುವ ಅವಶ್ಯಕತೆ ಇರುವುದಿಲ್ಲ.

। ಸಂಹಿತಾಪಾಠಃ ।

**ಸ ಜಾತೋ ಗರ್ಭೋ ಅಸಿ ರೋದಸ್ಯೋರಗ್ನೇ ಚಾರುರ್ವಿಭೃತ ಓಷಧೀಷು।**
**ಚಿತ್ರಃ ಶಿಶುಃ ಪರಿ ತಮಾಂಸ್ಯಕ್ತೂನ್ಪ್ರ ಮಾತೃಭ್ಯೋ ಅಧಿ ಕನಿಕ್ರದದ್ಗಾಃ ॥**

। ಪದಪಾಠಃ ।

**ಸಃ । ಜಾತಃ । ಗರ್ಭಃ । ಅಸಿ । ರೋದಸ್ಯೋಃ । ಅಗ್ನೇ । ಚಾರುಃ । ವಿऽಭೃತಃ । ಓಷಧೀಷು ।**
**ಚಿತ್ರಃ । ಶಿಶುಃ । ಪರಿ । ತಮಾಂಸಿ । ಅಕ್ತೂನ್ । ಪ್ರ । ಮಾತೃऽಭ್ಯಃ । ಅಧಿ । ಕನಿಕ್ರದತ್ । ಗಾಃ ॥೨॥**

॥ ಸಾಯಣಭಾಷ್ಯಂ ॥

ಹೇ ಅಗ್ನೇ ಜಾತ ಉತ್ಪನ್ನಶ್ಚಾರುಃ ಕಲ್ಯಾಣರೂಪ ಓಷಧೀಷ್ವೋಷಧಿವಿಕಾರೇಷ್ವರಣೀಷು ವಿಭೃತೋ ವಿಶೇಷೇಣ ಮಥಿತ ಆಹವನೀಯಾದ್ಯಾತ್ಮನಾ ವಿವಿಧಂ ಹ್ರಿಯಮಾಣ ಓಷಧೀಷು ವರ್ತಮಾನಃ ಸ ತ್ವಂ ರೋದಸ್ಯೋರ್ದ್ಯಾವಾಪೃಥಿವ್ಯೋರ್ಗರ್ಭೋಽಸಿ ಗರ್ಭೋ ಭವಸಿ । ಅಗ್ನಿರೂಪ ಆದಿತ್ಯರೂಪ-ಶ್ಚೇತಿ । ಕಿಂ ಚ ಚಿತ್ರಶ್ಚಿತ್ರವರ್ಣಃ ಕಾಲೀ ಕರಾಲೀ ಚ ಮನೋಜವೇತ್ಯಾದಿಸಪ್ತಜಿಹ್ವಾಭಿರ್ನಾನಾರೂಪಃ ಯದ್ವಾ ಚಿತ್ರಶ್ಚಾಯನೀಯಃ ಶಿಶುರೋಷಧೀನಾಂ ಶಿಶುರಗ್ನಿಸ್ತಮಾಂಸ್ಯಕ್ತೂನ್ರಾತ್ರಿವಿಷಯಾಣ್ಯ-ಕ್ತೂನ್ಪರಿ ಭವಸಿ । ಸ್ವತೇಜಸಾಭಿಭವಸಿ । ಸ ತ್ವಂ ಮಾತೃಭ್ಯೋ ಮಾತೃಭೂತಾಭ್ಯ ಓಷಧೀಭ್ಯಃ । ಅಧಿಃ ಪಂಚಮ್ಯರ್ಥದ್ಯೋತಕಃ । ತಾಭ್ಯಃ ಕನಿಕ್ರದತ್ಪುನಃಪುನಃ ಶಬ್ದಂ ಕುರ್ವನ್ಪ್ರ ಗಾಃ । ಪ್ರಗಚ್ಛಸಿ । ಪ್ರಜಾಯಸೇ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಜಾತಃ—ನೀನು ಉತ್ಪನ್ನನಾದಾಗ । ಚಾರುಃ—ಆಕರ್ಷಕನಾಗಿ । ಓಷಧೀಷು—ಓಷಧಿವಿಕಾರಗಳಾದ ಅರಣಿಗಳಲ್ಲಿ । ವಿಭೃತಃ—ಧರಿಸಲ್ಪಟ್ಟವನಾಗಿದ್ದೀಯೆ । ಸಃ—ಅಂತಹ ನೀನು । ರೋದಸ್ಯೋಃ—ದ್ಯಾವಾಪೃಥಿವಿಗಳಿಗೆ । ಗರ್ಭಃ ಅಸಿ—ಗರ್ಭರೂಪನಾಗಿದ್ದೀಯೆ । ಚಿತ್ರಃ—ಅನೇಕ ವಿಧವಾದ ವರ್ಣವುಳ್ಳವನೂ । ಶಿಶುಃ—ಲತಾದಿಗಳಿಗೆ ಪುತ್ರರೂಪನೂ ಆದ ನೀನು । ಅಕ್ತೂನ್—ಅಂಧಕಾರ ರೂಪರಾದ ಶತ್ರುಗಳನ್ನೂ । ತಮಾಂಸಿ—ರಾತ್ರಿಯ ಕಗ್ಗತ್ತಲೆಗಳನ್ನೂ । ಪರಿ (ಭವಸಿ)—ನಾಶಮಾಡುತ್ತೀಯೆ । ಮಾತೃಭ್ಯಃ ಅಧಿ—ಮಾತೃರೂಪಗಳಾದ ಓಷಧಿಗಳಿಂದ । ಕನಿಕ್ರದತ್—ಶಬ್ದಮಾಡುತ್ತ । ಪ್ರ ಗಾಃ—ಹೊರ ಬರುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಉತ್ಪನ್ನನಾದಾಗ ಆಕರ್ಷಕನಾಗಿದ್ದು ಓಷಧಿವಿಕಾರಗಳಾದ ಅರಣಿಗಳಲ್ಲಿ ಧರಿಸಲ್ಪಟ್ಟವನಾಗಿದ್ದೀಯೆ. ಅಂತಹ ನೀನು ದ್ಯಾವಾಪೃಥಿವಿಗಳಿಗೆ ಗರ್ಭರೂಪನಾಗಿದ್ದೀಯೆ. ಅನೇಕವಿಧವಾದ ವರ್ಣವುಳ್ಳವನೂ, ಲತಾದಿಗಳಿಗೆ ಪುತ್ರರೂಪನೂ ಆದ ನೀನು ಅಂಧಕಾರರೂಪರಾದ ಶತ್ರುಗಳನ್ನೂ ರಾತ್ರಿಯ ಕಗ್ಗತ್ತಲೆಗಳನ್ನೂ ನಾಶ ಮಾಡುತ್ತೀಯೆ ಮಾತೃರೂಪಗಳಾದ ಓಷಧಿಗಳಿಂದ ಶಬ್ದಮಾಡುತ್ತ ಹೊರಬರುತ್ತೀಯೆ.

## English Translation

When born, you, O Agni, are the embryo of heaven and earth, beautiful, borne about in the plants; variegated, infantine, you disperse the nocturnal glooms; you issue roaring loudly from the maternal (sources).

॥ ವಿಶೇಷವಿಷಯಗಳು ॥

ಓಷಧೀಷು ವಿಭೃತಃ—ಓಷಧೀಷು ಓಷಧಿವಿಕಾರೇಷ್ವರಣೀಷು ವಿಶೇಷೇಣ ಮಥಿತಃ । ಯದ್ವಾ ಆಹವನೀಯಾದ್ಯಾತ್ಮನಾ ವಿವಿಧಂ ಹ್ರಿಯಮಾಣ ಓಷಧೀಷು ವರ್ತಮಾನಃ । ಓಷಧಿಗಳೆಂದರೆ ದೊಡ್ಡದಾಗಿ ಬೆಳೆದಿರುವ ವೃಕ್ಷಾದಿಗಳಿಂದ ಮಾಡಿರುವ ಅರಣಿಗಳು. ಈ ಅರಣಿಗಳಲ್ಲಿ ವಿಶೇಷರೀತಿಯಿಂದ ಎಂದರೆ ವಿಶ್ವೈಕ್ತರೀತಿ

ಯಿಂದ ಕಡೆಯಲ್ಪಟ್ಟು ಉತ್ಪನ್ನನಾದ ಅಗ್ನಿಯು ಅಥವಾ ಆಹವನೀಯಾದಿ ಅಗ್ನಿಕುಂಡಗಳಲ್ಲಿ ಋತ್ವಿಗ್ಜನರಿಂದ ಸ್ಥಾಪಿತನಾಗಿ ಓಷಧಿಗಳಿಂದ ಎಂದರೆ ಕಾಷ್ಠಾದಿಗಳಿಂದ ಪ್ರವೃದ್ಧ ಮಾನನಾಗಿ ಬೆಳಗುತ್ತಿರುವ ಅಗ್ನಿಯು ಎಂದು ಎರಡು ವಿಧವಾದ ಅರ್ಥವನ್ನೂ ಹೇಳಬಹುದು.

**ಗರ್ಭಃ ಅಸಿ ರೋದಸ್ಯೋಃ**—ಎಲೈ ಅಗ್ನಿಯೇ, ನೀನು ದ್ಯಾವಾಪೃಥಿವಿಗಳಲ್ಲಿ ಗರ್ಭರೂಪದಿಂದ ಸ್ಥಾಪಿತನಾಗಿದ್ದೀಯೆ. ಎಂದರೆ ಪೃಥಿಯಲ್ಲಿ ಪಾರ್ಥವಾಗ್ನಿ ಅಥವಾ ಯಜ್ಞಾಗ್ನಿರೂಪದಿಂದಲೂ, ಸ್ವರ್ಗದಲ್ಲಿ ಆದಿತ್ಯರೂಪದಿಂದಲೂ ಇದ್ದು ಪ್ರಕಾಶಿಸುತ್ತಿರುವೆ ಎಂಬ ಅಭಿಪ್ರಾಯವು.

**ಚಿತ್ರಃ ಶಿಶುಃ**—**ಚಿತ್ರವರ್ಣಃ ಕಾಲೀ ಕರಾಲೀ ಚ ಮನೋಜವಾ ಇತ್ಯಾದಿ ಸಪ್ತಜಿಹ್ವಾಭಿಃ ನಾನಾರೂಪಃ |** ಯದ್ವಾ ಚಿತ್ರಶ್ಚಾಯನೀಯಃ ಓಷಧೀನಾಂ ಶಿಶುರಗ್ನಿಃ । ಅಗ್ನಿಗೆ ಸಪ್ತಜಿಹ್ವೆಗಳಿರುವವೆಂದು ಪ್ರಸಿದ್ಧವು—

ಕಾಲೀ ಕರಾಲೀ ಚ ಮನೋಜವಾ ಚ
ಸುಲೋಹಿತಾ ಯಾ ಚ ಸುಧೂಮ್ರವರ್ಣಾ
ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ
ಲೇಲಾಯಮಾನಾ ಇತಿ ಸಪ್ತ ಜಿಹ್ವಾಃ ॥

(ಮುಂ. ಉ. ೧-೨-೪)

ಎಂದು ಮುಂಡಕೋಪನಿಷತ್ತಿನಲ್ಲಿ ಹೇಳಿದೆ. ಕಾಲೀ, ಕರಾಲೀ, ಮನೋಜವಾ, ಸುಲೋಹಿತಾ, ಸುಧೂಮ್ರವರ್ಣಾ, ಸ್ಫುಲಿಂಗಿನೀ, ವಿಶ್ವರುಚೀ ಎಂಬ ಸಪ್ತಜಿಹ್ವೆ ಅಥವಾ ಜ್ವಾಲೆಗಳಿಂದ ಬೆಳಗುತ್ತಿರುವ ವಿಚಿತ್ರವರ್ಣವುಳ್ಳ ಅಗ್ನಿಯು ; ಅಥವಾ ಓಷಧ್ಯಾದಿಗಳಲ್ಲಿ (ವೃಕ್ಷ, ವನಸ್ಪತಿ) ಹುಟ್ಟುವುದರಿಂದ ಅಗ್ನಿಯನ್ನು ಓಷಧಿಗಳ ಶಿಶುವೆಂದೂ ಹೇಳಬಹುದು ಎಂದು ಎರಡು ವಿಧ ಅರ್ಥವನ್ನು ವಿವರಿಸಿದಾರೆ.

**ತಮಾಂಸಿ ಅಕ್ತೂನ್**—**ರಾತ್ರಿವತ್ ಕೃಷ್ಣಾನ್ ಶತ್ರೂಂಶ್ಚ |** ಅಗ್ನಿಯು ಕತ್ತಲೆಯನ್ನು ನಾಶಪಡಿಸುವವನೂ ಅಥವಾ ರಾತ್ರಿಯಂತೆ ಕಪ್ಪುಬಣ್ಣವುಳ್ಳ ದಸ್ಯು ಜನರೇ ಮೊದಲಾದ ಶತ್ರುಗಳನ್ನು ನಾಶಮಾಡುವವನು.

**ಪ್ರ ಮಾತೃಭ್ಯಃ ಅಧಿ ಕನಿಕ್ರದತ್ ಗಾಃ**—ಇಲ್ಲಿ **ಮಾತೃಭ್ಯಃ** ಎಂದರೆ **ಮಾತೃಭೂತಾಭ್ಯ ಓಷಧೀಭ್ಯಃ** ತನಗೆ ಮಾತೃಪ್ರಾಯರಾದ ಓಷಧಿಗಳು ಎಂದರೆ ಕಾಷ್ಠಗಳು. ಅವುಗಳನ್ನು ದಹಿಸುವಾಗ ಚಟಪಟ ಎಂಬ ಶಬ್ದಗಳನ್ನು ಗಾಡುತ್ತಾ, ಪ್ರಜ್ವಲಿಸುತ್ತೀಯೆ ಎಂದಭಿಪ್ರಾಯವು.

ಸಂಹಿತಾಪಾಠಃ

**ವಿಷ್ಣುರಿತ್ಥಾ ಪರಮಮಸ್ಯ ವಿದ್ವಾಂಜ್ಜಾತೋ ಬೃಹನ್ನಭಿ ಪಾತಿ ತೃತೀಯಂ ।**
**ಆಸಾ ಯದಸ್ಯ ಪಯೋ ಅಕ್ರತ ಸ್ವಂ ಸಚೇತಸೋ ಅಭ್ಯರ್ಚಂತ್ಯತ್ರ ॥ ೩ ॥**

। ಪದಪಾಠಃ ।

ವಿಷ್ಣುಃ । ಇತ್ಥಾ । ಪರಮಂ । ಅಸ್ಯ । ವಿದ್ವಾನ್ । ಜಾತಃ । ಬೃಹನ್ । ಅಭಿ । ಪಾತಿ । ತೃತೀಯಂ ।

ಆಸಾ । ಯತ್ । ಅಸ್ಯ । ಪಯಃ । ಅಕ್ರತ । ಸ್ವಂ । ಸಚೇತಸಃ । ಅಭಿ । ಅರ್ಚಂತಿ । ಅತ್ರ ॥ ೩ ॥

। ಸಾಯಣಭಾಷ್ಯಂ ।

ವಿದ್ವಾನ್ ಜ್ಞಾನವಾನ್ ಜಾತಃ ಪ್ರಾದುರ್ಭೂತೋ ಬೃಹನ್ಮಹಾನ್ ವಿಷ್ಣುರಿತ್ಥಮನೇನ ಪ್ರಕಾರೇಣ ವಿಷ್ಣುರ್ವ್ಯಾಪನಶೀಲೋ ಜ್ಞಾನಾದಿಗುಣಯುಕ್ತೋಽಗ್ನಿರಸ್ಯ ಮೇ ತೃತೀಯಂ ತ್ರಯಾಣಾಂ ಪೂರಣಂ ತ್ರಿತಂ ಮಾಮಭಿ ಪಾತಿ । ಅಭಿರಕ್ಷತು । ಏಕತೋ ದ್ವಿತಸ್ತ್ರಿತ ಇತಿ ತ್ರಯೋ ಬಭೂವುಃ । ನಿ. ೪.೬ । ಇತಿ ಯಾಸ್ಕೇನೋಕ್ತಂ । ಕಿಂಚಾಸ್ಯಾಗ್ನೇಃ ಸ್ವಮಾತ್ಮೀಯಂ ಪಯ ಉದಕಮಾಸಾಸ್ಯೇನ ಯದ್ಯದಾಕ್ರತ ಕುರ್ವಂತಿ ಯಜಮಾನಾ ಯಾಚಂತೇ ತದಾನೀಮತ್ರಾಸ್ಮಿಲ್ಲೋಕೇ ಸ್ಥಿತಾಃ ಸ್ತೋತಾರಃ ಸಚೇತಸಃ ಸಮಾನಮನಸ್ಕಾ ಭೂತ್ವೈನಮಭ್ಯರ್ಚಂತಿ । ಅಭಿಷ್ಟುವಂತಿ ॥

। ಪ್ರತಿಪದಾರ್ಥ ।

ವಿದ್ವಾನ್ ಸರ್ವಜ್ಞನೂ । ಜಾತಃ— ಯಜ್ಞಾರ್ಥವಾಗಿ ಉತ್ಪನ್ನನೂ । ಬೃಹನ್—ಮಹತ್ತ್ವರೂಪನೂ । ಇತ್ಥಾ ಪರಮಂ—ಹೀಗೆ ವಿಶೇಷರೀತಿಯಲ್ಲಿ । ವಿಷ್ಣುಃ—ವ್ಯಾಪಕನೂ ಆದ ಅಗ್ನಿಯು । ಅಸ್ಯ ತೃತೀಯಂ—ತ್ರಿತಸಂಜ್ಞಕನಾದ ನನ್ನನ್ನು । ಅಭಿ ಪಾತಿ—ರಕ್ಷಿಸಲಿ । ಅಸ್ಯ—ಈ ಅಗ್ನಿಯ । ಸ್ವಂ—ಸ್ವಕೀಯವಾದ । ಪಯಃ—ಉದಕವನ್ನು । ಆಸಾ—ಮುಖದಿಂದ (ವೇದಮಂತ್ರ) ಯತ್—ಯಾವಾಗ ಅಕ್ರತ—ಯಾಚಿಸುವರೋ ಆಗ । ಅತ್ರ—ಈ ಲೋಕದ ಸ್ತೋತೃಗಳು । ಸಚೇತಸಃ—ಒಂದೇ ಮನಸ್ಸುಳ್ಳವರಾಗಿ । ಅಭ್ಯರ್ಚಂತಿ—ಅಗ್ನಿಯನ್ನು ಪ್ರಶಂಸಿಸುತ್ತಾರೆ.

। ಭಾವಾರ್ಥ ।

ಸರ್ವಜ್ಞನೂ, ಯಜ್ಞಾರ್ಥವಾಗಿ ಉತ್ಪನ್ನನೂ, ವಿಶೇಷರೀತಿಯಲ್ಲಿ ವ್ಯಾಪಿಸುವವನೂ ಆದ ಅಗ್ನಿಯು ತ್ರಿತಸಂಜ್ಞಕನಾದ ನನ್ನನ್ನು ರಕ್ಷಿಸಲಿ. ಈ ಅಗ್ನಿಯ ಸ್ವಕೀಯವಾದ ಉದಕವನ್ನು ಯಜಮಾನರು ಮುಖದಿಂದ ಬೇಡುವಾಗ ಈ ಲೋಕದ ಸ್ತೋತೃಗಳೆಲ್ಲರೂ ಒಂದೇ ಮನಸ್ಸಿನಿಂದ ಅಗ್ನಿಯನ್ನು ಪ್ರಶಂಸಿಸುತ್ತಾರೆ.

## English Translation

May he, who as soon as manifested is vast and wise, and thus (universally) pervading, defend (me), his third (manifestation); and when (the worshippers) ask with their mouths for his own water, animated by one purpose, they praise him in this world.

॥ ವಿಶೇಷವಿಷಯಂಗಳು ॥

**ತೃತೀಯಂ ಅಭಿ ಪಾತಿ—ತೃತೀಯಂ ತ್ರಯಾಣಾಂ ಪೂರಕಂ ಮಾಂ ಅಭಿರಕ್ಷತು** । ಏಕತ, ದ್ವಿತ, ತ್ರಿತ ಎಂಬುವರು ಮೂರುಮಂದಿ ಸಹೋದರರೆಂದೂ ಅವರಲ್ಲಿ ತ್ರಿತನು ಕೊನೆಯುವನೆಂದೂ ಈ ಸೂಕ್ತದ ದೃಷ್ಟವಾದ ಋಷಿಯೆಂದೂ ಹಿಂದೆಯೇ ಹೇಳಿದೆ. ಆದ್ದರಿಂದ ಸಹೋದರರಲ್ಲಿ ಮೂರನೆಯವನಾದ (ಕೊನೆಯವನಾದ) ನನ್ನನ್ನು ಅಗ್ನಿಯು ರಕ್ಷಿಸಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

**ಆಸಾ ಯತ್ ಅಸ್ಯ ಪಯಃ ಅಕ್ರತ ಸ್ವಂ**—ಸ್ತೋತ್ರಮಾಡುವ ಋತ್ವಿಗ್ಜನರು ಈ ಅಗ್ನಿಯನ್ನು ವೃಷ್ಟ್ಯುದಕಕ್ಕಾಗಿ ತಮ್ಮ ಮುಖದಿಂದ ಎಂದರೆ ತಮ್ಮ (ಬಾಯಿಂದ) ಪಠಿಸುವ ಸ್ತೋತ್ರಾದಿಗಳಿಂದ ಪ್ರಾರ್ಥಿಸುತ್ತಾರೆ ಎಂದಭಿಪ್ರಾಯವು.

ಸಚೇತಸಃ ಅಭ್ಯರ್ಚಂತಿ—ಸಮಾನಮನಸ್ಕಾ ಭೂತ್ವೈನಂ ಅಭಿಷ್ಟುವಂತಿ । ಈ ಋತ್ವಿಕ್ಕುಗಳು ಒಂದೇ ಮನಸ್ಸುಳ್ಳವರಾಗಿ ಎಂದರೆ ತಮಗೆ ವೃಷ್ಟ್ಯುದಕವು ದೊರಕಬೇಕೆಂಬ ಒಂದೇ ವಿಧವಾದ ಅಭಿಲಾಷೆಯಿಂದ ಅಗ್ನಿಯನ್ನು ಸ್ತೋತ್ರಮಾಡುತ್ತಾರೆ.

। ಸಂಹಿತಾಪಾಠಃ ।

ಉತ ಉ ತ್ವಾ ಪಿತುಭೃತೋ ಜನಿತ್ರೀರನ್ನಾವೃಧಂ ಪ್ರತಿ ಚರಂತ್ಯನ್ನೈಃ ।
ತಾ ಈಂ ಪ್ರತ್ಯೇಷಿ ಪುನರನ್ಯರೂಪಾ ಅಸಿ ತ್ವಂ ವಿಕ್ಷು ಮಾನುಷೀಷು
ಹೋತಾ ॥ ೪ ॥

। ಪದಪಾಠಃ ।

ಉತ । ಊಂ ಇತಿ । ತ್ವಾ । ಪಿತುಽಭೃತಃ । ಜನಿತ್ರೀಃ । ಅನ್ನಽವೃಧಂ । ಪ್ರತಿ । ಚರಂತಿ । ಅನ್ನೈಃ ।
ತಾಃ । ಈಂ । ಪ್ರತಿ । ಏಷಿ । ಪುನಃ । ಅನ್ಯಽರೂಪಾಃ । ಅಸಿ । ತ್ವಂ । ವಿಕ್ಷು । ಮಾನುಷೀಷು ।
ಹೋತಾ ॥ ೪ ॥

॥ ಸಾಯಣಭಾಷ್ಯಂ ।

ಹೇ ಅಗ್ನೇ ಉತ । ಉ ಇತ್ಯವಧಾರಣೇ । ಅಸ್ಮಾದೇವ ಕಾರಣಾತ್ ಪಿತುಭೃತಃ ಪಿತುನಾನ್ನೇನ ಸರ್ವಸ್ಯ ಜಗತೋ ಧಾರಯಿತ್ರ್ಯಃ ಪೋಷಯಿತ್ರ್ಯೋ ವಾ ಜನಿತ್ರೀರ್ಜನಯಿತ್ರ್ಯ ಓಷಧಯೋಽನ್ನಾವೃಧಮನ್ನಸ್ಯ ವರ್ಧಕಂ ತ್ವಾ ತ್ವಾಮನ್ನೈರ್ಹೇತುಭಿಃ ಪ್ರತಿ ಚರಂತಿ । ಪರಿಚರಂತಿ । ಅಭಿಗಚ್ಛಂತಿ । ತತಸ್ತ್ವಮೀಮೇನಾಸ್ತಾ ಓಷಧೀಃ ಪ್ರತ್ಯೇಷಿ । ಪ್ರತಿಗಚ್ಛಸಿ । ಪುನರಪ್ಯನ್ಯರೂಪಾ ಜೀರ್ಣಾ ಓಷಧೀರ್ದಾವಭೂತಸ್ತ್ವಂ ಗಚ್ಛಸಿ । ಕಿಂಚ ಮಾನುಷೀಷು ಮನುಷ್ಯಜಾತಿಷು ವಿಕ್ಷು ಪ್ರಜಾಸು । ಯದ್ವಾ । ವಿಕ್ಷ್ವಗ್ನಿ-

ಹೋತ್ರಾದಿಕ್ರಿಯಾಸ್ವಭಿನಿವಿಶಂತೀಷು ಮಾನುಷೀಷು ಮನುಷ್ಯಜಾತಿಷು । ಹೋತಾ ದೇವಾನಾ-ಮಾಹ್ವಾತಾ ಹೋಮನಿಷ್ಪಾದಕೋ ವಾಸಿ । ಭವಸಿ । ಮನುಷ್ಯೇಷು ಸ್ಥಿತ ಇತ್ಯರ್ಥೇ। ಬ್ರಾಹ್ಮಣಂ ದೇವ್ಯೋ ಹ್ಯೇಷ ಮರ್ತ್ಯೇಷ್ವಿತಿ ॥

। ಪ್ರತಿಪದಾರ್ಥ ।

(ಎಲೈ ಅಗ್ನಿಯೇ) **ಅತಃ**—ಆದುದರಿಂದಲೇ । **ಪಿತುಭೃತಃ**—ಅನ್ನದಿಂದ ಸಕಲ ಜಗತ್ತನ್ನೂ ಪೋಷಿಸುವುವೂ । **ಜನಿತ್ರೀಃ**—ಅಗ್ನ್ಯುತ್ಪಾದಕಗಳೂ ಆದ ಓಷಧಿಗಳು । **ಅನ್ನಾವೃಧಂ**—ಅನ್ನವರ್ಧಕನಾದ । **ತ್ವಾ**—ನಿನ್ನನ್ನು । **ಅನ್ನೈಃ**— ಅನ್ನನಿಮಿತ್ತವಾಗಿ । **ಪ್ರತಿ ಚರಂತಿ**—ಉಪಚರಿಸುತ್ತವೆ । **ಅನ್ಯರೂಪಾಃ**—ಬೇರೆ ರೂಪಗಳನ್ನು ತಾಳಿದ । **ಈಂ ತಾಃ**—ಅದೇ ಓಷಧಿಗಳನ್ನು । **ಪ್ರತ್ಯೇಷಿ**—ಪುನಃ ಹೋಗಿ ಸೇರಿಕೊಳ್ಳುತ್ತೀಯೆ । **ಮಾನುಷೀಷು**— ಮನುಷ್ಯಸಂಬಂಧಿಗಳಾದ । **ವಿಕ್ಷು**—ಪ್ರಜೆಗಳಲ್ಲಿ । **ಹೋತಾ ಅಸಿ**—ಹೋತೃರೂಪನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಅನ್ನದಿಂದ ಸಕಲ ಜಗತ್ತನ್ನೂ ಪೋಷಿಸುವುವೂ, ಅಗ್ನ್ಯುತ್ಪಾದಕಗಳೂ ಆದ ಓಷಧಿಗಳು ಅನ್ನವರ್ಧಕನಾದ ನಿನ್ನನ್ನು ಅನ್ನನಿಮಿತ್ತವಾಗಿ ಉಪಚರಿಸುತ್ತವೆ. ಬೇರೆ ರೂಪಗಳನ್ನು ತಾಳಿದ ಅದೇ ಓಷಧಿಗಳನ್ನು ನೀನು ಪುನಃ ಹೋಗಿ ಸೇರಿಕೊಳ್ಳುತ್ತೀಯೆ. ಮನುಷ್ಯಸಂಬಂಧಿಗಳಾದ ಪ್ರಜೆಗಳಲ್ಲಿ ನೀನು ಹೋತೃರೂಪನಾಗಿದ್ದೀಯೆ.

## English Translation

Therefore the genetrices (of all things, the herbs), the cherishers (of all) with food, wait on you who are the augmenter of food, with (sactificial) viands; you visit them again, when they have assumed other forms, you are amongst human beings the invoker (of the gods).

॥ ವಿಶೇಷವಿಷಯಗಳು ॥

**ಅನ್ಯರೂಪಾಃ**—ಓಷಧಿಗಳಲ್ಲಿ ಎರಡು ವಿಧವು. ಬೆಳೆಯುತ್ತಿರುವ ವನಸ್ಪತಿಗಳು ಅನ್ನನಿಮಿತ್ತವಾಗಿ ಅಗ್ನಿಯನ್ನು ಉಪಚರಿಸುತ್ತವೆ ಎಂದರೆ ತಮಗೆ ಅನ್ನಸ್ವರೂಪವಾದ ವೃಷ್ಟ್ಯುದಕಲಾಭಾರ್ಥವಾಗಿ ಅಗ್ನಿಯನ್ನು ಶುಶ್ರೂಷೆ ಮಾಡುತ್ತವೆ ಎಂದು ಒಂದು ವಿಧವಾದ ಅರ್ಥವು. ಎರಡನೆಯ ಅರ್ಥವು—ಓಷಧಿಗಳಲ್ಲಿ ಒಣಗಿರುವ ಕಾಷ್ಠಾದಿಗಳನ್ನು ಅಗ್ನಿಯಾದ ನೀನು ದಹಿಸಿ ಪ್ರವೃದ್ಧಮಾನನಾಗುತ್ತೀಯೆ ಎಂದು ಎರಡು ವಿಧವಾದ ಅರ್ಥಗಳು ಇಲ್ಲಿ ಸೂಚಿತವಾಗಿವೆ.

॥ ಸಂಹಿತಾಪಾಠಃ ॥

ಹೋತಾರಂ ಚಿತ್ರರಥಮಧ್ವರಸ್ಯ ಯಜ್ಞಸ್ಯಯಜ್ಞಸ್ಯ ಕೇತುಂ ರುಶಂತಂ ।
ಪ್ರತ್ಯರ್ಧಿಂ ದೇವಸ್ಯದೇವಸ್ಯ ಮಹ್ನಾ ಶ್ರಿಯಾ ತ್ವ೧ಗ್ನಿಮತಿಥಿಂ ಜನಾನಾಂ ॥

॥ ಪದಪಾಠಃ ॥

ಹೋತಾರಂ । ಚಿತ್ರಽರಥಂ । ಅಧ್ವರಸ್ಯ । ಯಜ್ಞಸ್ಯಽಯಜ್ಞಸ್ಯ । ಕೇತುಂ । ರುಶಂತಂ

ಪ್ರತಿಽಅರ್ಧಿಂ । ದೇವಸ್ಯಽದೇವಸ್ಯ । ಮಹ್ನಾ । ಶ್ರಿಯಾ । ತು । ಅಗ್ನಿಂ । ಅತಿಥಿಂ । ಜನಾನಾಂ ॥ ೫ ॥

॥ ಸಾಯಣಭಾಷ್ಯಂ ॥

ಆತಿಥ್ಯಾಯಾಂ ಸ್ವಿಷ್ಟಕೃತೋಽನುವಾಕ್ಯಾ ಹೋತಾರಮಿತ್ಯೇಷಾ । ಸೂತ್ರಿತಂ ಚ । ಹೋತಾರಂ ಚಿತ್ರರಥಮಧ್ವರಸ್ಯ ಪ್ರಪ್ರಾಯಮಗ್ನಿರ್ಭರತಸ್ಯ ಶೃಣ್ವ ಇತಿ ಸಂಯಾಜ್ಯೇ । ಆ. ೪-೫ । ಇತಿ ॥

ಅಧ್ವರಸ್ಯ ಯಜ್ಞಸ್ಯ ಹೋತಾರಮೇತನ್ನಾಮಾನಮೃತ್ವಿಜಂ ಯದ್ವಾ ಹೋತಾರಂ ದೇವಾನಾಮಾಹ್ವಾತಾರಂ ಚಿತ್ರರಥಂ ನಾನಾರೂಪರಥಮಧ್ವರಸ್ಯ ರಕ್ಷೋಭಿರಹಿಂಸಿತಸ್ಯ ಯಜ್ಞಸ್ಯ ಸರ್ವಸ್ಯ ಯಜ್ಞಸ್ಯ ಕೇತುಂ ಪ್ರಜ್ಞಾಪಕಂ ಪತಾಕಾಸ್ಥಾನೀಯಂ ವಾ ರುಶಂತಂ ಶ್ವೇತವರ್ಣಂ ಮಹ್ನಾ ಸ್ವಮಹತ್ತ್ವೇನ ದೇವಸ್ಯ ದೇವಸ್ಯ ಸರ್ವೇಷಾಂ ದೇವಾನಾಮರ್ಧಿಮಿಂದ್ರಂ ಪ್ರತಿ ಭವಂತಂ । ಯತ್ಸರ್ವೇಷಾಮರ್ಧಿಮಿಂದ್ರಂ ಪ್ರತೀತಿ ಬ್ರಾಹ್ಮಣಂ । ತಾದೃಶಂ ಜನಾನಾಂ ಯಜಮಾನಾನಾಮತಿಥಿವತ್ಪೂಜ್ಯಮಗ್ನಿಂ ತು ಕ್ಷಿಪ್ರಂ ಶ್ರಿಯಾ ಶ್ರಿಯೋಽರ್ಥಂ ವಯಂ ಸ್ತುಮಃ ॥

॥ ಪ್ರತಿಪದಾರ್ಥ ॥

**ಅಧ್ವರಸ್ಯ**—ಯಜ್ಞಕ್ಕೆ । **ಹೋತಾರಂ**—ಹೋತೃರೂಪನೂ । **ಚಿತ್ರರಥಂ**—ಅನೇಕ ರೂಪವಾದ ರಥವುಳ್ಳವನೂ । **ಯಜ್ಞಸ್ಯಯಜ್ಞಸ್ಯ**—ಯಜ್ಞಗಳಿಗೆಲ್ಲಾ । **ಕೇತುಂ**—ಪ್ರಜ್ಞಾಪಕನೂ । **ರುಶಂತಂ**—ಶ್ವೇತವರ್ಣವುಳ್ಳವನೂ । **ಮಹ್ನಾ**—ತನ್ನ ಮಹತ್ವದಿಂದ । **ದೇವಸ್ಯದೇವಸ್ಯ**—ಸಕಲ ದೇವತೆಗಳಿಗೂ । **ಪ್ರತಿ ಅರ್ಧಿಂ**—ಮೀರಿದ ಶಕ್ತಿಯುಳ್ಳವನೂ । **ಜನಾನಾಂ**—ಯಜಮಾನರಿಗೆ । **ಅತಿಥಿಂ**—ಪೂಜ್ಯನೂ ಆದ । **ಅಗ್ನಿಂ**—ಅಗ್ನಿಯನ್ನು । **ತು**—ಕ್ಷಿಪ್ರವಾಗಿ । **ಶ್ರಿಯಾ**—ಸಂಪದರ್ಥವಾಗಿ ನಾವು ಪ್ರಶಂಸಿಸುತ್ತೇವೆ.

॥ ಭಾವಾರ್ಥ ॥

ಯಜ್ಞಕ್ಕೆ ಹೋತೃರೂಪನೂ, ಅನೇಕರೂಪವಾದ ರಥವುಳ್ಳವನೂ ಯಜ್ಞಕ್ಕೆ ಪ್ರಜ್ಞಾಪಕನೂ, ಶ್ವೇತವರ್ಣವುಳ್ಳವನೂ, ತನ್ನ ಮಹತ್ವದಿಂದ ಸಕಲ ದೇವತೆಗಳಿಗಿಂತಲೂ ಮೀರಿದ ಶಕ್ತಿಯುಳ್ಳವನೂ ಯಜಮಾನರಿಗೆ ಪೂಜ್ಯನೂ ಆದ ಅಗ್ನಿಯನ್ನು ಕ್ಷಿಪ್ರವಾಗಿ ಸಂಪದರ್ಥವಾಗಿ ನಾವು ಪಶಂಸಿಸುತ್ತೇವೆ.

## English Translation

(We worship) Agni for prosperity, you, who are the invoker of the gods, the many-coloured conveyance of the sacrifice, the brilliant banner of every offering, the surpasser of every other deity in might, the guest of men.

॥ ವಿಶೇಷವಿಷಯಗಳು ॥

ಆತಿಥ್ಯೇಷ್ಟಿಯಲ್ಲಿ ಸ್ವಿಷ್ಟಕೃದ್ಧೋಮವು ನಡೆಯುವಾಗ ಹೋತಾರಂ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ ಹೋತಾರಂ ಚಿತ್ರರಥಮಧ್ವರಸ್ಯ ಪ್ರ ಪ್ರಾಯಮಗ್ನಿರ್ಭರತಸ್ಯ ಶೃಣ್ವೇ ಇತಿ ಸಂಯಾಜ್ಯೇ ಎಂಬ ಸೂತ್ರದಿಂದ (ಆ. ೪-೫) ವಿವೃತವಾಗಿರುವುದು.

ಯಜ್ಞಸ್ಯಯಜ್ಞಸ್ಯ, ದೇವಸ್ಯದೇವಸ್ಯ—ಇಂತಹ ಅಭ್ಯಸ್ತ ಪದಗಳಿಗೆ (ಪುನರಾವೃತ್ತಿ ಉಕ್ತವಾದ ಪದಗಳಿಗೆ) ಪ್ರತಿಯೊಂದು, ಅಥವಾ ಎಲ್ಲಾ ಎಂಬರ್ಥವಿರುವುದು. ಮೇಲಿನ ಶಬ್ದಗಳಿಗೆ ಪ್ರತಿಯಜ್ಞಕ್ಕೂ ಅಥವ ಎಲ್ಲಾ ಯಜ್ಞಗಳಿಗೂ, ಎಲ್ಲಾ ದೇವತೆಗಳಿಗೂ ಎಂದರ್ಥವು. ಇದರಂತೆ, ದಿವೇದಿವೇ, ಅಹರಹಃ ಮೊದಲಾದ ಅನೇಕ ಉದಾಹರಣೆಗಳನ್ನೂ ಕೊಡಬಹುದು.

॥ ಸಂಹಿತಾಪಾಠಃ ॥

ಸ ತು ವಸ್ತ್ರಾಣ್ಯಧ ಪೇಶನಾನಿ ವಸಾನೋ ಅಗ್ನಿರ್ನಾಭಾ ಪೃಥಿವ್ಯಾಃ ।
ಅರುಷೋ ಜಾತಃ ಪದ ಇಳಾಯಾಃ ಪುರೋಹಿತೋ ರಾಜನ್ಯಕ್ಷೀಹ ದೇವಾನ್ ॥ ೬ ॥

॥ ಪದಪಾಠಃ ॥

ಸಃ । ತು । ವಸ್ತ್ರಾಣಿ । ಅಧ । ಪೇಶನಾನಿ । ವಸಾನಃ । ಅಗ್ನಿಃ । ನಾಭಾ । ಪೃಥಿವ್ಯಾಃ ।
ಅರುಷಃ । ಜಾತಃ । ಪದೇ । ಇಳಾಯಾಃ । ಪುರಃऽಹಿತಃ । ರಾಜನ್ । ಯಕ್ಷಿ । ಇಹ । ದೇವಾನ್ ॥ ೬ ॥

॥ ಸಾಯಣಭಾಷ್ಯಂ ॥

ಹೇ ರಾಜನ್ದೀಪ್ಯಮಾನಾಗ್ನೇ ವಸ್ತ್ರಾಣ್ಯಾಚ್ಛಾದಕಾನಿ ತೇಜಾಂಸಿ ಅಥಾಪಿ ಚ ಪೇಶನಾನಿ ತೇಷಾಂ ತೇಜಸಾಂ ಕಾರ್ಷ್ಣ್ಯಶೌಕ್ಲ್ಯಾದೀನಿ ರೂಪಾಣಿ । ಯದ್ವಾ । ಅಧಾನಂತರಂ ಪೇಶನಾನಿ । ಪೇಶ ಇತಿ ಹಿರಣ್ಯನಾಮ । ಹಿರಣ್ಯವದ್ಧಿರಣ್ಯಸದೃಶಾನಿ ಭಾಸ್ವರಾಣಿ ತೇಜಾಂಸಿ ವಸಾನ ಆಚ್ಛಾದಯನ್ ಪೃಥಿವ್ಯಾ ನಾಭಾ ನಾಭೌ ನಾಭಿಸ್ಥಾನೀಯ ಇಳಾಯಾಸ್ಪದ ಉತ್ತರವೇದ್ಯಾಂ । ಏತದ್ವಾ ಇಳಾಯಾಸ್ಪದಂ ಯದುತ್ತರವೇದೀನಾಭಿಃ । ಐ. ಬ್ರಾ. ೧-೨೮ । ಇತ್ಯಾಮ್ನಾನಾತ್ । ತಸ್ಯಾಂ ಜಾತಃ ಸಮುತ್ಪನ್ನೋಽರುಷ ಆರೋಚಮಾನೋ ಯೋಽಗ್ನಿರೇವಂವಿಧೋಽಸಿ ಸ ತ್ವಂ ಪುರೋಹಿತಃ ಪುರತೋ ನಿಹಿತಃ ಪೂರ್ವಸ್ಯಾಂ ದಿಶ್ಯಾಹವನೀಯಾಯತನೇ ಸ್ಥಾಪಿತಃ ಸನ್ನಿಹಾಸ್ಮಿನ್ಯಜ್ಞೇ ದೇವಾನಿಂದ್ರಾದೀನ್ಯಕ್ಷಿ । ಯಜ । ಪೂಜಯ ॥

॥ ಪ್ರತಿಪದಾರ್ಥ ॥

ಅಧ—ಮತ್ತು । ರಾಜನ್—ಪ್ರಭುವಾದ ಎಲೈ ಅಗ್ನಿಯೇ । ವಸ್ತ್ರಾಣಿ—ನಿನಗೆ ಆಚ್ಛಾದಕವಾದ । ಪೇಶನಾನಿ—ತೇಜೋರೂಪಗಳನ್ನು । ವಸಾನಃ—ಧರಿಸಿದವನಾಗಿಯೂ । ಪೃಥಿವ್ಯಾಃ—ಪೃಥ್ವಿಯ । ನಾಭಾ—

ನಾಭಿರೂಪವಾದ | ಇಳಾಯಾಃ ಪದೇ—ಉತ್ತರವೇದಿಸ್ಥಾನದಲ್ಲಿ | ಜಾತಃ—ಉತ್ಪನ್ನನಾಗಿಯೂ | ಅರುಷಃ—ಆರೋಚಮಾ... | ಅಗ್ನಿಃ—ಪೂಜ್ಯನಾಗಿಯೂ | ಪುರೋಹಿತಃ—ಆಹವನೀಯಸ್ಥಾನದಲ್ಲಿ ಸ್ಥಾಪಿತನಾಗಿಯೂ ಇ... —ಈ ಯಜ್ಞದಲ್ಲಿ | ದೇವಾನ್—ಇಂದ್ರಾದಿದೇವತೆಗಳನ್ನು | ಯಕ್ಷಿ—ಪೂಜಿಸು.

॥ ಭಾವಾರ್ಥ ॥

ಪ್ರಭುವಾದ ಎಲೈ ಅಗ್ನಿಯೇ, ನಿನಗೆ ವಸ್ತ್ರದಂತೆ ಆಚ್ಛಾದಕಗಳಾದ ತೇಜೋರೂಪಗಳನ್ನು ಧರಿಸಿದವನಾಗಿಯೂ ಪೃಥ್ವಿಯ ನಾಭಿರೂಪವಾದ ಉತ್ತರವೇದಿಸ್ಥಾನದಲ್ಲಿ ಉತ್ಪನ್ನನಾಗಿಯೂ, ಆರೋಚಮಾನನಾಗಿಯೂ ಪೂಜ್ಯನಾಗಿಯೂ ಆಹವನೀಯಸ್ಥಾನದಲ್ಲಿ ಸ್ಥಾಪಿತನಾಗಿಯೂ ಇದ್ದು ಈ ಯಜ್ಞದಲ್ಲಿ ಇಂದ್ರಾದಿದೇವತೆಗಳನ್ನು ಪೂಜಿಸು.

## English Translation

Arrayed in splendid garments, that Agni (abides) on the navel of the earth ... you, royal (Agni), who are radiant, born on the foot-mark of Ila, offer worship here as purohita to the gods.

॥ ವಿಶೇಷವಿಷಯಗಳು ॥

ವಸ್ತ್ರಾಣಿ— ... ಅಗ್ನಿಗೆ ತೇಜಸ್ಸೇ ಎಂದರೆ ಪ್ರಕಾಶವೇ ವಸ್ತ್ರವಾಗಿರುವುದು ಎಂದು ಹೇಳುವುದು ರೂಢಿಯಾಗಿದೆ.

ನಾಭಾ ಪೃಥಿವ್ಯಾಃ ಇಳಾಯಾಃ ಪದೇ—ಪೃಥ್ವಿಗೆ ನಾಭಿಸ್ಥಾನೀಯವಾದ ಯಜ್ಞದ ಉತ್ತರವೇದಿಯಲ್ಲಿ ಎಂದರ್ಥವು. ಇಳಾಯಾಃ ಪದೇ ಎಂದರೆ ಉತ್ತರವೇದಿ ಎಂಬರ್ಥವನ್ನು ಸಮರ್ಥನೆ ಮಾಡುವುದಕ್ಕಾಗಿ ಭಾಷ್ಯಕಾರರು—ಏತದ್ವಾ ಇಳಾಯಾಸ್ಪದಂ ಯದುತ್ತರವೇದೀನಾಭಿಃ ಎಂಬ ಐತರೇಯಬ್ರಾಹ್ಮಣವಾಕ್ಯವನ್ನು (ಐ. ಬ್ರಾ. ೧-೨೮) ಉದಹರಿಸಿದಾರೆ. ಋಗ್ವೇದಸಂಹಿತೆಯಲ್ಲಿಯೂ ಉತ್ತರವೇದಿಯೆಂಬ ಅರ್ಥವಿರುವ ಕಡೆ ಇಳಸ್ಪದೇ ಸಮಿಧ್ಯಸೇ ಸ ನೋ ವಸೂನ್ಯಾ ಭರ (ಋ. ಸಂ. ೧೦-೧೯೧-೧) ಇತ್ಯಾದಿ ಋಕ್ಕುಗಳಲ್ಲಿ ಈ ಶಬ್ದ ಪ್ರಯೋಗವಿದೆ. ಇನ್ನು ನಾಭಾ ಪೃಥಿವ್ಯಾಃ ಎಂಬ ಶಬ್ದಗಳಿಗೆ ಪೃಥಿವಿಯ ನಾಭಿಸ್ಥಾನವಾದ ಉತ್ತರವೇದಿ ಎಂಬರ್ಥವು ಸಹ ಋಗ್ವೇದದಲ್ಲಿಯೇ ಅನೇಕ ಕಡೆ ಉಕ್ತವಾಗಿದೆ. ಉಚಥ್ಯಪುತ್ರನಾದ ದೀರ್ಘತಮಾಃ ಎಂಬಪ್ರಸಿದ್ಧನಾದ ಋಷಿಯು

ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ ಪೃಚ್ಛಾಮಿ ತ್ವಾ ಭುವನಸ್ಯ ನಾಭಿಃ।

(ಋ. ಸಂ. ೧-೧೬೪-೩೪)

ಎಂದು ಪ್ರಶ್ನೆಮಾಡಿ ಅದಕ್ಕೆ ಉತ್ತರವನ್ನು—

ಇಯಂ ವೇದಿಃ ಪರೋ ಅಂತಃ ಪೃಥಿವ್ಯಾ ಅಯಂ ಯಜ್ಞೋ ಭುವನಸ್ಯ ನಾಭಿಃ ॥

(ಋ. ಸಂ. ೧-೧೬೪-೩೫)

ಎಂಬಲ್ಲಿಯೇ ಹೇಳಿದಾನೆ. ಉದಾಹರಣೆಯಾಗಿ ಕೊಟ್ಟಿರುವ ಈ ಎರಡು ಋಕ್ಕುಗಳೂ ಬ್ರಹ್ಮೋದ್ಯ ಎಂದರೆ ಬ್ರಹ್ಮತತ್ತ್ವವನ್ನು ವಿಮರ್ಶೆಮಾಡುವ ಋಕ್ಕುಗಳು. ಎಂದರೆ ಅಶ್ವಮೇಧ ಯಜ್ಞದ ಮಧ್ಯದ ದಿನದಲ್ಲಿ ಹೋತೃವು ಯಜಮಾನ

ನನ್ನು ಪ್ರಶ್ನೆಮಾಡಲು ಅದಕ್ಕೆ ಯಜಮಾನನು ಎರಡನೆಯ ಋಕ್ಕಿನಿಂದ ಉತ್ತರವನ್ನು ಹೇಳುವನು. ಈ ವಿಧವಾದ ಬ್ರಹ್ಮವಿಮರ್ಶೆಯು ಮುಖ್ಯವಾದ ಯಜ್ಞಗಳಲ್ಲಿ ಹೋತೃವಿಗೂ ಬ್ರಹ್ಮನಿಗೂ ನಡೆಯುವುದು ರೂಢಿಯು. ಪ್ರಕೃತ ಋಕ್ಕಿನಲ್ಲಿ **ನಾಭಾ ಪೃಥಿವ್ಯಾಃ** ಎಂಬ ಶಬ್ದಗಳು ಉಪನ್ಯಸ್ತವಾಗಿರುವ ಋಕ್ಕಿನಲ್ಲಿ **ಭುವನಸ್ಯ ನಾಭಿಃ** ಎಂಬ ಶಬ್ದಗಳಿಂದ ಪ್ರತಿಪಾದಿತವಾಗಿವೆ. ಆದ್ದರಿಂದ ಈ ಎರಡು ವಿಧ ಶಬ್ದಗಳಿಗೂ ಒಂದೇ ವಿಧವಾದ ಅರ್ಥವಿರುವುದು. ಭುವನಕ್ಕೆ ಯಜ್ಞವೇದಿಯು ಹೇಗೆ ನಾಭಿಸ್ಥಾನವು ಎಂಬ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ವಿಮರ್ಶೆಮಾಡುವುದು ಅವಶ್ಯಕವು.

ನಾಭಿಶಬ್ದಕ್ಕೆ, ವಾಸಸ್ಥಾನ, ವ್ಯಾಪಕಸಂಬಂಧ, ಸಂನಾಹಕ ಎಂದರೆ ರಕ್ಷಕ, ಬಂಧಕ, ಉತ್ಪತ್ತಿಸ್ಥಾನ ಇತ್ಯಾದಿಯಾಗಿ ಬೇರೆ ಬೇರೆ ಅರ್ಥಗಳಿರುವುದನ್ನು ಹಿಂದೆ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಯಜ್ಞವೇ ನಾಭಿಯೆಂದು ಹೇಳಿದರೆ ಈ ಎಲ್ಲಾ ಅರ್ಥಗಳಲ್ಲೂ ಈ ಪದದ ಪ್ರಯೋಗವನ್ನು ತೋರಿಸಬಹುದು. **ಪೃಚ್ಛಾಮಿ ಯತ್ರ ಭುವನಸ್ಯ ನಾಭಿಃ** ಎಂದು ಹಿಂದಿನ ಋಕ್ಕಿನಲ್ಲಿ ಕೇಳಿರುವ ಪ್ರಶ್ನೆಗೆ ಉತ್ತರರೂಪವಾಗಿ ಈ ವಾಕ್ಯವಿದೆ. ಯಜ್ಞವೇ ಸಕಲ ವಿಶ್ವಗಳ ಉತ್ಪತ್ತಿಗೂ, ಸ್ಥಿತಿಗೂ ಕಾರಣವಾಗಿ ದೇವಮಾನವಾದಿಸಕಲ ಭೂತಗಳಿಗೂ ಪರಸ್ಪರ ಸಂಬಂಧವನ್ನು ಬೆಳಸುವ ಬಂಧಕಸಾಧನವಾಗಿರುವುದರಿಂದ ಇದು ನಾಭಿರೂಪದಲ್ಲಿದೆಯೆಂದು ತಾತ್ಪರ್ಯ.

**ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥**

(ಭ. ಗೀ. ೩.೧೧)

**ದೇವಾನ್ ಇಂದ್ರಾದೀನ್ ಭಾವಯತ ವರ್ಧಯತ ಅನೇನ ಯಜ್ಞೇನ । ತೇ ದೇವಾ ಭಾವಯಂತು ವೃಷ್ಟ್ಯಾದಿನಾ ಆಪ್ಯಾಯಯಂತು ವಃ ಯುಷ್ಮಾನ್ । ಏವಂ ಪರಸ್ಪರಂ ಅನ್ಯೋನ್ಯಂ ಭಾವಯಂತಃ ಶ್ರೇಯಃ ಪರಂ ಬ್ರಹ್ಮವಿಜ್ಞಾನಪ್ರಾಪ್ತಿಂ ಕ್ರಮೇಣ ಅವಾಪ್ಸ್ಯಥ। ಸ್ವರ್ಗಂ ವಾ ಪರಂ ಶ್ರೇಯಃ ಅವಾಪ್ಸ್ಯಥ**

(ಶಂ. ಭಾ.)

ಯಜ್ಞವೇ ದೇವತೆಗಳಿಗೆ ಅನ್ನರೂಪವೆಂದೂ, ಈ ಅನ್ನವನ್ನು ಮಾನವರು ಯಜ್ಞರೂಪದಿಂದ ಅರ್ಪಿಸಬೇಕೆಂದೂ, ಇದರಿಂದ ತೃಪ್ತರಾದ ದೇವತೆಗಳು ವೃಷ್ಟ್ಯಾದಿಗಳಿಂದ ಮಾನವರ ಸ್ಥಿತಿಗೂ, ವೃದ್ಧಿಗೂ ಕಾರಣರಾಗಬೇಕೆಂದೂ ಭಗವದ್ಗೀತೆಯಲ್ಲಿ ಉಪದೇಶವಿದೆ. ಇದರಿಂದ ಸಮಸ್ತವಾದ ಶ್ರೇಯಸ್ಸಿಗೂ ಯಜ್ಞವೇ ಸಾಧನವೆಂದಾಯಿತು. ಈ ಯಜ್ಞವು ಲೋಕಕ್ಕೆಲ್ಲಾ ಶ್ರೇಯಃಸಾಧನವು ಎಂಬ ತತ್ತ್ವವನ್ನರಿತು ಇದನ್ನು ಸೇವಾದೃಷ್ಟಿಯಿಂದಾಚರಿಸಿದರೆ ಇದು ಬ್ರಹ್ಮಜ್ಞಾನಕ್ಕೂ ಸಾಧನವಾಗುವುದೆಂದು ಶಂಕರಾದಿಗಳು ವಿವರಿಸಿದ್ದಾರೆ.

ಈ ಯಜ್ಞತತ್ತ್ವವು ವಿಶ್ವದ ಐಕ್ಯವನ್ನೂ ಈ ಐಕ್ಯದ ನೆಲೆಯು ಪರಬ್ರಹ್ಮವೆಂಬ ತತ್ತ್ವವನ್ನೂ ತಿಳಿಸುತ್ತದೆ. ಉಪನಿಷದಾದಿಗಳಲ್ಲಿ ಯಾವ ಮೂಲತತ್ತ್ವವನ್ನು ಪರಬ್ರಹ್ಮನೆಂದು ಕರೆದಿದೆಯೋ ಅದನ್ನು ಸಂಹಿತಾ ಮತ್ತು ಬ್ರಾಹ್ಮಣಗಳಲ್ಲಿ ಪ್ರಜಾಪತಿಯೆಂದು ಕರೆದಿದೆ. ಮತ್ತು ಯಜ್ಞಕ್ಕೂ ಪ್ರಜಾಪತಿಗೂ ತಾದಾತ್ಮ್ಯವನ್ನು ಹೇಳಿದೆ. ವಿಶ್ವಸೃಷ್ಟಿಯು ಪ್ರಜಾಪತಿಯ ಯಜ್ಞದ ಮತ್ತು ತಪಸ್ಸಿನ ಫಲವು. ಜಗತ್ಕಾರಣನೂ, ಜಗತ್ಸೃಷ್ಟಿಗೆ ಪೂರ್ವಭಾವಿಯಾಗಿ ಅದ್ವಿತೀಯನಾಗಿಯೂ ಇದ್ದ ಪ್ರಜಾಪತಿಯು ಸೃಷ್ಟಿಸಾಧನವಾದ ಯಜ್ಞವನ್ನು ನಿರ್ವಹಿಸಬೇಕಾದರೆ ಅದಕ್ಕೆ ಆಹುತಿಯಾಗಿ ತನ್ನನ್ನೇ ಅರ್ಪಿಸಬೇಕಾಯಿತು.

**ಯ ಆತ್ಮದಾ ಬಲದಾ ಯಸ್ಯ ವಿಶ್ವ ಉಪಾಸತೇ ಪ್ರಶಿಷಂ ಯಸ್ಯ ದೇವಾಃ ।**
**ಯಸ್ಯ ಛಾಯಾಮೃತಂ ಯಸ್ಯ ಮೃತ್ಯುಃ ಕಸ್ಮೈ ದೇವಾಯ ಹವಿಷಾ ವಿಧೇಮ ।**

(ಋ. ಸಂ. ೧೦-೧೨೧-೨)

ಇತ್ಯಾದಿಯಾಗಿ ವರ್ಣಿತವಾಗಿರುವಂತೆ ತನ್ನ ವಿಶ್ವಯಜ್ಞದಲ್ಲಿ ತನ್ನನ್ನೇ ಅರ್ಪಿಸಿ ಪ್ರಜಾಪತಿಯು ಸೃಷ್ಟಿಕಾರ್ಯವನ್ನು ನಿರ್ವಹಿಸಿದನು. ಅವನ ಆಜ್ಞೆಯನ್ನೇ ದೇವಾದಿಗಳೆಲ್ಲರೂ ನಿರ್ವಹಿಸುತ್ತಾರೆ. ಮೃತ್ಯುವೂ, ಅಮೃತತ್ವವೂ ಅವನ ಛಾಯೆಗಳು. ಅಂತಹ ವಿಶ್ವಹೇತುವಾದ ಪ್ರಜಾಪತಿಗೆ ನಾವೂ ಸಹ ಯಜ್ಞಾದಿಕರ್ಮಗಳನ್ನಾಚರಿಸಿ ಪುರೋಡಾಶಾದಿಗಳಿಂದ ಆರಾಧಿಸೋಣ ಎಂದು ಯಜ್ಞದ ಪ್ರಾಶಸ್ತ್ಯವನ್ನು ಸ್ತುತಿಸಿದೆ. ಯಜ್ಞವು ಸೃಷ್ಟಿಯ ಮೂಲವು; ಸ್ಥಿತಿಗೆ ಹೇತುವು ಮತ್ತು ಶ್ರೇಯಸ್ಸಿಗೆ ಸಾಧಕವು. ಈ ವಿಷಯವನ್ನೇ ಶತಪಥಬ್ರಾಹ್ಮಣದಲ್ಲಿ ಈ ರೀತಿ ವರ್ಣಿಸಿದೆ.

**ಅಥ ದೇವಾಃ । ಅನ್ಯೋನ್ಯಸ್ಮಿನ್ನೇವ ಜುಹ್ವತಶ್ಚೇರುಸ್ತೇಭ್ಯಃ ಪ್ರಜಾಪತಿರಾತ್ಮಾನಂ ಪ್ರದದೌ ಯಜ್ಞೋ ಹೈಷಾಮಾಸ ಯಜ್ಞೋ ಹಿ ದೇವನಾಮನ್ನಂ ।**

(ಶ. ಬ್ರಾ. ೧೧-೧-೮-೨)

ದೇವತೆಗಳು ಯಜ್ಞವನ್ನಾಚರಿಸಿ ಪರಸ್ಪರಾನುಕೂಲಿಕವಾದ ಆಹುತಿಗಳನ್ನರ್ಪಿಸಿದರು. ಆಗ ಪ್ರಜಾಪತಿಯು ಅವರಿಗೆ ತನ್ನನ್ನೇ ಅರ್ಪಿಸಿದನು. ಆಗ ಯಜ್ಞವೇ ದೇವತೆಗಳ ಸ್ವತ್ತಾಯಿತು. ಆದುದರಿಂದಲೇ ಯಜ್ಞವನ್ನು ದೇವತೆಗಳ ಅನ್ನವೆಂದು [ಎಂದರೆ ಅನ್ನಸಾಧನವೆಂದು] ಕರೆಯುತ್ತಾರೆ. ಇದಲ್ಲವೇ,

**ಸ ಏತೇನ ಯಜ್ಞೇನ । ದೇವೇಭ್ಯ ಆತ್ಮಾನಂ ನಿರಕ್ರೀಣೀತ ಸ ಯದ್ವ್ರತಮುಪೈತಿ ಯಥೈವ ತತ್ಪ್ರಜಾಪತಿರ್ದೇವೇಭ್ಯ ಆತ್ಮಾನಂ ಪ್ರಾಯಚ್ಛದೇವಮೇವೈಷ ಏತದ್ದೇವೇಭ್ಯ ಆತ್ಮಾನಂ ಪ್ರಯಚ್ಛತಿ ತಸ್ಮಾದು ಸಂಯತ ಏವೈತಾಗ್ಂ ರಾತ್ರಿಂ ಚಿಚರಿಷೇದ್ಯಥಾ ಹವಿಷಾ ಚರೇದೇವಗ್ಂ ಹವಿರ್ಹ್ಯೇಷ ದೇವಾನಾಂ ಭವತಿ ॥**

(ಶ. ಬ್ರಾ. ೧೧-೧-೮-೩)

ದೇವತೆಗಳ ಯಜ್ಞದಿಂದ ತೃಪ್ತನಾದ ಪ್ರಜಾಪತಿಯು ಅವರಿಗೆ ತನ್ನನ್ನೇ ಅರ್ಪಿಸಿದನಂತರ ಪುನಃ ಯಜ್ಞಪ್ರತಿನಿಧಿಯಾದ ತನ್ನ ಪ್ರತಿರೂಪವನ್ನು ಸೃಷ್ಟಿಸಿದನು. ಈ ರೀತಿ ಯಜ್ಞಾರ್ಥವಾಗಿ ತನ್ನ ಪ್ರತಿರೂಪವನ್ನು ಸೃಷ್ಟಿಸಿ ಯಜ್ಞವನ್ನು ಪ್ರತಿಬಿಂಬಿಸಿದುದರಿಂದ ತಿಳಿದವರು ಪ್ರಜಾಪತಿಯನ್ನೇ ಯಜ್ಞವೆಂಬ ಪರ್ಯಾಯನಾಮದಿಂದ ಕರೆಯುತ್ತಾರೆ.

**ಅಥ ಯದ್ಯಜ್ಞಂ ತನುತೇ । ಯಜ್ಞೇನೈವೈತದ್ದೇವೇಭ್ಯ ಆತ್ಮಾನಂ ನಿಷ್ಕ್ರೀಣೀತೇ ಯಥೈವ ತತ್ಪ್ರಜಾಪತಿರ್ನಿರಕ್ರೀಣೀತೈವಂ ಅಥ ಯದ್ಧವಿರ್ನಿರ್ವಪತಿ ಹವಿಷೈವೈತದ್ಯಜ್ಞಂ ನಿಷ್ಕ್ರೀಣಾತಿ ಹವಿರನುವಾಕ್ಯಾನುವಾಕ್ಯಾಮವದಾನೇನಾವದಾನಂ ಯಾಜ್ಯಯಾ ಯಾಜ್ಯಾಂ ವಷಟ್ಕಾರೇಣ ವಷಟ್ಕಾರಂ.... ......... .........॥**

(ಶ. ಬ್ರಾ. ೧೧-೧-೮-೪)

ಪ್ರಜಾಪತಿಯ ಮಾರ್ಗವನ್ನೇ ಅನುಸರಿಸಿ ಯಾವನು ಯಜ್ಞಕರ್ಮವನ್ನಾಚರಿಸುತ್ತಾನೆಯೋ ಮತ್ತು ತನ್ನ ಋಣವನ್ನು ತೀರಿಸಿ ಆ ದೇವಋಣದಿಂದ ಮುಕ್ತನಾಗುತ್ತಾನೆಯೋ ಅವನು ಪ್ರಜಾಪತಿಯ ಸೃಷ್ಟಿಕಾರ್ಯದಲ್ಲಿ ನೆರವಾಗುತ್ತಾನೆ, ಎಂದು ಶತಪಥದಲ್ಲಿ ಹೇಳಿರುವ ಅಂಶವನ್ನೇ ಭಗವದ್ಗೀತೆಯಲ್ಲೂ ಸಹ,

ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥
ಯಜ್ಞಶಿಷ್ಟಾಶಿನಸ್ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।
ತೇ ತ್ವಘಂ ಭುಂಜತೇ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥

(ಭ. ಗೀ. ೩-೧೨-೧೩)

ಯಜ್ಞದಿಂದ ತೃಪ್ತರಾದ ದೇವತೆಗಳು ಮಾನವರಿಗೆ ಅದಕ್ಕೆ ಪ್ರತಿಯಾಗಿ ಅವರವರ ಇಷ್ಟಾರ್ಥಗಳನ್ನು ಕೊಡುತ್ತಾರೆ. ದೇವತೆಗಳಿಂದ ಅನ್ನಾದಿಸಂಪತ್ತುಗಳನ್ನು ಪಡೆದು ಪುನಃ ಅದಕ್ಕೆ ಪ್ರತಿಯಾಗಿ ದೇವತೆಗಳಿಗೆ ತೃಪ್ತಿಕರವಾದ ಯಜ್ಞಾಹುತಿಯನ್ನರ್ಪಿಸದಿದ್ದರೆ ಅವನು ಚೋರನಾಗುತ್ತಾನೆ. ಯಜ್ಞಕರ್ಮವನ್ನು ನೆರವೇರಿಸುವ ಸತ್ಪುರುಷರು ಕಿಲ್ಬಿಷದಿಂದ ಮುಕ್ತರಾಗುತ್ತಾರೆ. ಅದಿಲ್ಲದವರು ಪಾಪಿಗಳಾಗಿ ಪಾಪಫಲವನ್ನನುಭವಿಸುತ್ತಾರೆ. ಏಕೆಂದರೆ ಈ ಯಜ್ಞವು ವಿಶ್ವಕ್ಕೆಲ್ಲಾ ಏಕಸಂಬಂಧವನ್ನು ತೋರಿಸತಕ್ಕ ತಂತುವಾಗಿದೆ ಇದನ್ನೇ ವಿಶ್ವಚಕ್ರವೆಂದೂ ಕರೆದಿದೆ ಉದಾಹರಣೆಗೆ—

ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥
ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ ।
ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ॥
ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥

(ಭ. ಗೀ. ೩-೧೪ ರಿಂದ ೧೬)

ಕರ್ಮರೂಪವಾದ ಯಜ್ಞದಿಂದ ಪರ್ಜನ್ಯವೂ (ವೃಷ್ಟಿಯೂ) ಪರ್ಜನ್ಯದಿಂದ ಅನ್ನವೂ ಅನ್ನದಿಂದ ಭೂತಗಳೂ ಉತ್ಪನ್ನವಾಗುವುವು. ಈ ಯಜ್ಞರೂಪವಾದ ಕರ್ಮವು ಬ್ರಹ್ಮನಿಂದ ಉತ್ಪನ್ನವಾಯಿತು ಆದುದರಿಂದ ವಿಶ್ವದ ಸೃಷ್ಟಿಯಿಂದ ಪ್ರಾರಂಭಿಸಿ ಸಕಲವಿಧವಾದ ವ್ಯವಹಾರಗಳಿಗೂ, ಪುನರಾವೃತ್ತಿರೂಪವಾದ ವಿಶ್ವಚಕ್ರಕ್ಕೂ ಸಹ ಮೂಲನಾದ ಪರಬ್ರಹ್ಮನೇ ಯಜ್ಞದಲ್ಲಿ ನಿತ್ಯವಾಗಿ ಪ್ರತಿಷ್ಠಿತನಾಗಿದ್ದಾನೆ ಯಾವ ವ್ಯಕ್ತಿಯು ಯಜ್ಞರೂಪವಾದ ಈ ವಿಶ್ವತತ್ತ್ವವನ್ನರಿಯದೆ. ನಿಯತವಾದ ಈ ವಿಶ್ವಚಕ್ರದ ಹಾದಿಯನ್ನನುಸರಿಸದೆ, ಸ್ವೇಚ್ಛೆಯಾಗಿರುವನೋ ಅವನು ಪಾಪಿಷ್ಠನು ಇತ್ಯಾದಿಯಾಗಿ ಗೀತಾದಿಗಳಲ್ಲಿ ಶ್ರುತಿವಾಕ್ಯಪ್ರತಿಪಾದಿತವಾದ ಯಜ್ಞತತ್ತ್ವವು ವಿವರಿಸಲ್ಪಟ್ಟಿದೆ 'ನಾಭೌ ಪೃಥಿವ್ಯಾಃ' ಎಂದು ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ ಈ ಯಜ್ಞತತ್ತ್ವವನ್ನು ಋಕ್ಸಂಹಿತೆಯು ಬೇರೆ ಭಾಗಗಳಲ್ಲಿಯೂ ಇದೇ ರೀತಿ ಪ್ರಶಂಸಿಸಿದೆ ಉದಾಹರಣೆಗೆ—

ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।
ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥

(ಋ. ಸಂ. ೧-೧೬೪-೫೦ ಮತ್ತು ೧೦-೯೦-೧೬)

ದೇವತೆಗಳು ತಮ್ಮ ಸಂಕಲ್ಪರೂಪವಾದುದೂ, ಧ್ಯಾನಾತ್ಮಕವಾದುದೂ ಆದ ಯಜ್ಞದಿಂದ ಯಜ್ಞಸ್ವರೂಪಿಯಾದ ಪ್ರಜಾಪತಿಯನ್ನು ಪೂಜಿಸಿದರು. ಪ್ರಾಪಂಚಿಕವಾದ ಧರ್ಮಗಳಿಗೆಲ್ಲಾ ಈ ವಿಧವಾದ ಯಜ್ಞವೇ ಮೂಲವಾಯಿತು.

ಈ ಯಜ್ಞದ ಧರ್ಮಗಳೇ ಅಂತರಿಕ್ಷದಲ್ಲಿ ಸ್ಥಾಪಿತವಾಗಿ ದ್ಯುಲೋಕಸ್ಥರಾದ ದೇವತೆಗಳನ್ನು ಅವರವರ ಸ್ಥಾನಗಳಲ್ಲಿರಿಸುತ್ತದೆ. ಯಜ್ಞದಿಂದಲೇ ಪ್ರಜಾಪತಿಯಿಂದ ಸೃಷ್ಟವಾದ ಸಕಲ ಭೂತಗಳೂ ತಮ್ಮ ಸ್ಥಿತಿಹೇತುವಾದ ಅನ್ನವನ್ನೂ, ಶಕ್ತಿಯನ್ನೂ ಪಡೆಯುತ್ತವೆ. ಆದುದರಿಂದ ಯಜ್ಞದ ಆವಶ್ಯಕತೆಯನ್ನು ತಿಳಿಸುತ್ತಾ ತೈತ್ತಿರೀಯಸಂಹಿತೆಯಲ್ಲಿ,

ಪ್ರಜಾಪತಿಃ ಪ್ರಜಾ ಅಸೃಜತ ತಾಸ್ಸೃಷ್ಟಾಃ ಕ್ಷುಧಂ ನ್ಯಾಯಂಸ್ತ ಏತಂ ನವರಾತ್ರಮಪಶ್ಯತ್ತಮಾ-ಹರತ್ತೇನಾಯಜತ ತತೋ ವೈ ಪ್ರಜಾಭ್ಯೋಽಕಲ್ಪತ ಯರ್ಹಿ ಪ್ರಜಾಃ ಕ್ಷುಧಂ ನಿಗಚ್ಛೇಯು-ಸ್ತರ್ಹಿ ನವರಾತ್ರೇಣ ಯಜೇತೇಮೇ ಹಿ ವಾ ಏತಾಸಾಂ ಲೋಕಾ ಅಕ್ಲೃಪ್ತಾ..........॥

(ತೈ. ಸಂ, ೭-೨-೪-೧)

ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದನಂತರ ಅವು ಹಸಿವಿನಿಂದ ಪೀಡಿತವಾದವು. ಅವುಗಳ ಕ್ಷುತ್ತಿನ ಶಮನಕ್ಕಾಗಿ ನವರಾತ್ರಾತ್ಮಕವಾದ ಯಜ್ಞವನ್ನು ವೀಕ್ಷಿಸಿ ಅದರಿಂದ ಯಜ್ಞವನ್ನು ನಿರ್ವಹಿಸಿದನು. ಅದರಿಂದ ಆ ಪ್ರಜೆಗಳ ಕ್ಷುತ್ತಿನ ಶಮನವಾಯಿತು. ಆದುದರಿಂದ ಕ್ಷುತ್ತಿನ ಶಮನಕ್ಕಾಗಿ ಯಜ್ಞವು ಆಚರಿಸಲ್ಪಡತಕ್ಕದ್ದು ನಿಯತವಾಗಿದೆ. ಆ ಯಜ್ಞವೇ ಮೂರು ಲೋಕಗಳನ್ನೂ ಒಂದು ಸ್ಥಿತಿಯಲ್ಲಿಯೂ ನಿಯಮನದಲ್ಲಿಯೂ ಇಡುತ್ತದೆ, ಹೇಗೆಂದರೆ,

ಕಲ್ಪಂತೇಽಸ್ಮಾ ಇಮೇ ಲೋಕಾ ಊರ್ಜಂ ಪ್ರಜಾಸು ದಧಾತಿ ತ್ರಿರಾತ್ರೇಣೈವೇಮಂ ಲೋಕಂ ಕಲ್ಪಯತಿ ತ್ರಿರಾತ್ರೇಣಾಂತರಿಕ್ಷಂ ತ್ರಿರಾತ್ರೇಣಾಮುಂ ಲೋಕಂ ಯಥಾ ಗುಣೇ ಗುಣಮನ್ವಸ್ಯ-ತ್ಯೇವಮೇವ ತಲ್ಲೋಕೇ ಲೋಕಮನ್ವಸ್ಯತಿ ಧೃತ್ಯಾ ಅಶಿಥಿಲಂ ಭಾವಾಯ..........॥

(ತೈ. ಸಂ, ೭-೨-೪-೨)

ನವರಾತ್ರರೂಪವಾದ ಈ ಯಜ್ಞದಿಂದ ಲೋಕತ್ರಯಕ್ಕೂ ಚೈತನ್ಯವು ದೊರೆಯಿತು. ತ್ರಿರಾತ್ರದಿಂದ ಪೃಥ್ವಿಗೂ, ತ್ರಿರಾತ್ರದಿಂದ ಅಂತರಿಕ್ಷಕ್ಕೂ, ಉಳಿದ ತ್ರಿರಾತ್ರದಿಂದ ದ್ಯುಲೋಕಕ್ಕೂ ಪ್ರಜಾಪತಿಯು ಸ್ಥಿತಿಶಕ್ತಿಯನ್ನು ಈ ಯಜ್ಞದ ಶಕ್ತಿಯಿಂದ ಕಲ್ಪಿಸಿದನು. ಓತಪ್ರೋತರೂಪದಿಂದ ತಂತುವಿನೊಡನೆ ತಂತುವನ್ನು ಸೇರಿಸಿ ಪಟವನ್ನು (ಬಟ್ಟೆಯನ್ನು) ನಿರ್ಮಿಸುವಂತೆ, ಶೈಥಿಲ್ಯವನ್ನು ತಪ್ಪಿಸುವುದಕ್ಕೂ ಮತ್ತು ವಿಶ್ವಕ್ಕೆಲ್ಲಾ ಒಂದೇ ಸಂಬಂಧರೂಪವಾದ ಶಕ್ತಿಯನ್ನು ಉತ್ಪಾದನೆ ಮಾಡಿ ಮೂರು ಲೋಕಗಳೂ ಅವುಗಳ ನಿಯತವಾದ ಸ್ಥಿತಿಯಲ್ಲಿರುವುದಕ್ಕೂ ಈ ಯಜ್ಞದಿಂದ ಲೋಕತ್ರಯಕ್ಕೂ ಓತಪ್ರೋತರೂಪವಾದ ಸಂಬಂಧವನ್ನು ಕಲ್ಪಿಸಿದನು. ಈ ಯಜ್ಞವು ವಿಶ್ವಜೀವದ ನಾಡಿಯಾಗಿದೆ. ಅದನ್ನು ಶತಪಥದಲ್ಲಿ ವರ್ಣಿಸುತ್ತಾ,

ಸರ್ವೇಷಾಂ ವಾ ಏಷ ಭೂತಾನಾಗ್ಂ ಸರ್ವೇಷಾಂ ದೇವಾನಾಮಾತ್ಮಾ ಯದ್ಯಜ್ಞಸ್ತಸ್ಯ ಸಮೃದ್ಧಿ-ಮನು ಯಜಮಾನಃ ಪ್ರಜಯಾ ಪಶುಭಿರ್ಋಧ್ಯತೇ ।

(ಶ. ಬ್ರಾ. ೧೪-೩-೨-೧)

ಈ ಯಜ್ಞವು ಸಕಲ ಮಾನವರ ಮತ್ತು ಸಕಲ ದೇವತೆಗಳ ಆತ್ಮವೇ ಆಗಿದೆ. ಯಾವನು ಈ ಯಜ್ಞವನ್ನು ನಿರ್ವಹಿಸುತ್ತಾನೋ ಆವನು ಸತ್ಸಂತಾನವನ್ನೂ ಪಶುಸಂಪತ್ತನ್ನೂ ಪಡೆಯುತ್ತಾನೆ. ಮತ್ತು,

**ಸ ಯದಗ್ನೌ ಜುಹೋತಿ । ತದ್ದೇವೇಷು ಜುಹೋತಿ ತಸ್ಮಾದ್ದೇವಾಃ ಸಂತ್ಯಥ ಯತ್ಸದಸಿ ಭಕ್ಷಯಂತಿ ತನ್ಮನುಷ್ಯೇಷು ಜುಹೋತಿ ತಸ್ಮಾನ್ಮನುಷ್ಯಾಃ ಸಂತ್ಯಥ ಯದ್ಧವಿರ್ಧಾನಯೋರ್ನಾರಾಶಗ್ಂಸಾಃ ಸೀದಂತಿ ತತ್ಪಿತೃಷು ಜುಹೋತಿ ತಸ್ಮಾತ್ಪಿತರಃ ಸಂತಿ ॥**

(ಶ. ಬ್ರಾ. ೨-೨-೨-೨೫)

ಅಗ್ನಿಯಲ್ಲಿ ಹುತವಾದುದು ದೇವತೆಗಳಿಗೆ ಅರ್ಪಿತವಾಗುತ್ತದೆ. ಆದುದರಿಂದಲೇ ದೇವತೆಗಳು ತಮ್ಮ ಸ್ಥಿತಿಯನ್ನು ಕಾಪಾಡಿಕೊಂಡಿದ್ದಾರೆ. ಸದಸ್ಸಿನಲ್ಲಿ ಹಂಚಲ್ಪಟ್ಟ (ಸೋಮ) ರಸದಿಂದ ಮಾನವರ ಸ್ಥಿತಿಯಿದೆ. ನಾರಾಶಂಸಪಾತ್ರೆಯಿಂದ ಅರ್ಪಿತವಾದ ಆಹುತಿಯು ಪಿತೃಗಳನ್ನು ತೃಪ್ತಿಪಡಿಸುತ್ತದೆ. ಆದುದರಿಂದ ಮಾನವನು ತನ್ನ ದೇವಋಣವನ್ನೂ ಪಿತೃಋಣವನ್ನು ಸಹ ಯಜ್ಞಕರ್ಮದಿಂದಲೇ ತೀರಿಸಬೇಕು. ಇದಿಲ್ಲದೇ ಇವನಿಗೆ ಋಣದಿಂದ ವಿಮೋಚನೆಯಿಲ್ಲ. ತೈತ್ತಿರೀಯ ಸಂಹಿತೆಯಿಂದ ಹಿಂದೆ ಉದಹರಿಸಿದ,

**" ತಲ್ಲೋಕೇ ಹ ಲೋಕಮನ್ವಸ್ಯತಿ ಧೃತ್ಯಾ ಅಶಿಥಿಲಂ ಭಾವಾಯ " ।**

(ತೈ. ಸಂ. ೭-೨-೪-೨)

ಎಂಬ ವಾಕ್ಯದಲ್ಲಿ ವಿಶ್ವದ ಅಸ್ತಿತ್ವವು ಶಿಥಿಲವಾಗದೇ ಭದ್ರವಾಗಿರುವುದಕ್ಕಾಗಿಯೂ ಮತ್ತು ಮೂರು ಲೋಕಗಳ ಸಂಬಂಧವೂ ಓತಪ್ರೋತಗಳಂತೆ ಹೆಣೆದುಕೊಂಡಿರುವುದಕ್ಕಾಗಿಯೂ ಸಹ ಯಜ್ಞಕರ್ಮದ ಅವಶ್ಯಕತೆಯಿದೆಯೆಂದು ತಿಳಿಸಿದೆ. ಋಣತ್ರಯದ ವಿಷಯವನ್ನು ಹೇಳುವಾಗಲೂ ಸಹ ಈ ಪರಸ್ಪರ ಬಂಧನವು ವರ್ಣಿತವಾಗುತ್ತದೆ ಉದಾಹರಣೆಗೆ ಶತಪಥ ಬ್ರಾಹ್ಮಣದಲ್ಲಿ,

**ಋಣಗ್ಂ ಹವೈ ಜಾಯತೇ ಯೋಽಸ್ತಿ ಸ ಜಾಯಮಾನ ಏವ ದೇವೇಭ್ಯ ಋಷಿಭ್ಯಃ ಪಿತೃಭ್ಯೋ ಮನುಷ್ಯೇಭ್ಯಃ ॥**

(ಶ. ಬ್ರಾ. ೧-೭-೨-೧)

ಪ್ರತಿಯೊಬ್ಬ ವ್ಯಕ್ತಿಯ ಸ್ಥಿತಿಯಕಾಲದಲ್ಲೂ ಸಹ ಅವನ ಜನ್ಮದಿಂದಲೇ ಪ್ರಾಪ್ತವಾದ ದೇವಋಣವೂ, ಋಷಿಋಣವೂ, ಪಿತೃಋಣವೂ ಅವನ ಮೇಲಿನ ಹೊರೆಯಾಗಿದ್ದೇ ಇರುತ್ತದೆ.

**ಸ ಯದೇವ ಯಜೇತ । ತೇನ ದೇವೇಭ್ಯ ಋಣಂ ಜಾಯತೇ ತದ್ಧ್ಯೇಭ್ಯ ಏತತ್ಕರೋತಿ ಯದೇಭ್ಯೋ ಜುಹೋತಿ ॥**

(ಶ. ಬ್ರಾ. ೧-೭-೨-೨)

ಈ ಋಣದಿಂದ ಮುಕ್ತನಾಗಿ ವಿಶ್ವದ ಸ್ಥಿತಿಯಲ್ಲಿ ತಾನೂ ಸಹ ಭಾಗವಹಿಸುವಂತೆ ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳಬೇಕಾದರೆ ಪ್ರತಿಯೊಂದು ವ್ಯಕ್ತಿಯೂ ಯಜ್ಞಮಾಡಿ ದೇವಋಣವನ್ನು ತೀರಿಸಿ ಆ ಋಣದಿಂದ ಮುಕ್ತನಾಗಲೇಬೇಕು.

**ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣವಾ ಜಾಯತೇ ಬ್ರಹ್ಮಚರ್ಯೇಣರ್ಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರಿವಾಸೀ ॥**

(ತೈ. ಸಂ. ೬.೩.೧೧-೫)

ಇದಲ್ಲದೆ ಬ್ರಾಹ್ಮಣನಾದವನು ! ಹುಟ್ಟುವಾಗಲೇ ಋಷಿಋಣ, ದೇವಋಣ, ಪಿತೃಋಣಗಳೆಂಬ ಮೂರು ವಿಧವಾದ ಋಣಗಳನ್ನು ಹೊತ್ತುಕೊಂಡೇ ಹುಟ್ಟುವನು. ಬ್ರಹ್ಮಚರ್ಯವ್ರತದಿಂದ ಗುರುಕುಲದಲ್ಲಿ ವಾಸಿಸುತ್ತಾ ನಿಯಮವಾಗಿ ಗುರುವಿನಿಂದ ಉಪದೇಶಪೂರ್ವಕವಾಗಿ ವೇದಾಧ್ಯಯನಮಾಡುವುದರಿಂದ ಋಷಿಋಣವು ತೀರುವುದು. ಯಜ್ಞಾದಿಗಳಿಂದ ದೇವತೆಗಳನ್ನು ಆರಾಧಿಸುವುದರಿಂದ ದೇವಋಣವು ತೀರುವುದು. ವಿವಾಹವಾದ ಪತ್ನಿಯಲ್ಲಿ ಧರ್ಮಪ್ರಜೋತ್ಪಾದನೆಮಾಡುವುದರಿಂದ ಪಿತೃಋಣವು ತೀರುವುದು ಎಂದು ತೈತ್ತರೀಯಸಂಹಿತೆ (ಯಜುರ್ವೇದ) ಯಲ್ಲಿಯೂ ಹೇಳಿದೆ ಇತ್ಯಾದಿಯಾಗಿ ವಿಶ್ವತತ್ತ್ವದಲ್ಲಿ ಪ್ರತಿವ್ಯಕ್ತಿಯೂ ಸಹ ತನ್ನ ಪ್ರಭಾವಪೂರಿತವಾದ ಅಸ್ತಿತ್ವವನ್ನು ಹೊಂದಬೇಕಾದರೆ ಯಜ್ಞವು ಈ ಸಾಮಾನ್ಯವಿಶೇಷಗಳಿಗೆ ಸಂಬಂಧವನ್ನು ಕಲ್ಪಿಸುವ ಸೂತ್ರವಾಗಿರುತ್ತದೆ. ಸೂತ್ರರೂಪವಾದ ಈ ಯಜ್ಞವು ಸಹ ವಿಶ್ವದ ವಿಕಾಸ ಮತ್ತು ಸಂಕೋಚಗಳೊಡನೆ ತಾನೂ ಸಹ ಒಂದು ಸಲ ಬೆಳೆಯುತ್ತದೆ. ಇನ್ನೊಂದು ಸಲ ಸಂಕುಚಿತವಾಗುತ್ತದೆ. ವಿಶ್ವಗತಿಯೊಡನೆ ತನ್ನ ಗತಿಯನ್ನು ಹೊಂದಿಸಿಕೊಳ್ಳುತ್ತದೆ. ಈ ಅಂಶವನ್ನು ವಿವರಿಸುತ್ತಾ ಶತಪಥಬ್ರಾಹ್ಮಣದಲ್ಲಿ ಯಜ್ಞಶಬ್ದದ ನಿರ್ವಚನವನ್ನು ತಿಳಿಸಿದೆ.

> **ಅಥ ಯಸ್ಮಾದ್ಯಜ್ಞೋ ನಾಮ । ಘ್ನಂತಿ ವಾ ಏನಮೇತದ್ಯದಭಿಷುಣ್ವಂತಿ ತದ್ಯದೇನಂ ತನ್ವತೇ ತದೇನಂ ಜನಯಂತಿ ಸ ತಾಯಮಾನೋ ಜಾಯತೇ ಸ ಯನ್ ಜಾಯತೇ ತಸ್ಮಾದ್ಯಜ್ಞೋ ಯಜ್ಞೋ ಹ ವೈ ನಾಮೈತದ್ಯಜ್ಞ ಇತಿ ।**

(ಶ. ಬ್ರಾ. ೩-೯-೪-೨೩)

ಅಭಿಷವಕಾಲದಲ್ಲಿ ಸೋಮಲತೆಯನ್ನು ಜಜ್ಜಿ ಹನನಮಾಡುತ್ತಾರೆ. ಪುನಃ ಉತ್ಪನ್ನವಾಗುವಂತೆ ಮಾಡುತ್ತಾರೆ. ಪ್ರಸಾರರೂಪವಾದ ಗತಿಯೊಂದಿಗೆ ಉತ್ಪನ್ನವಾಗುವುದರಿಂದ **ಯಜ್ಞ** ವೆಂಬ ಹೆಸರು ಪ್ರಸಿದ್ಧವಾಯಿತು ಎಂದು ಆವಶ್ಯಕತೆಗಳಿಗೆ ತಕ್ಕಂತೆ ಸಂಕೋಚವಿಕಾಸಗಳೂ ಇವೆಯೆಂದು ತಿಳಿಸಿದೆ. ಮತ್ತು ವಿಶ್ವದ ಸ್ಥಿತಿಗತಿಗಳಿಗನುಗುಣವಾಗಿಯೇ ಇರುವುದರಿಂದ ವಿಶ್ವಕ್ಕೆ ಉಪಕಾರಕವಾಗಿದೆ. ಅದು ಹೇಗೆಂದರೆ,

> **ಭುಜ್ಯುಃ ಸುಪರ್ಣ ಇತಿ। ಯಜ್ಞೋ ವೈ ಭುಜ್ಯುಃ ಯಜ್ಞೋ ಹಿ ಸರ್ವಾಣಿ ಭುನಕ್ತಿ ಯಜ್ಞೋ ಗಂಧರ್ವಃ..................॥**

(ಶ. ಬ್ರಾ. ೯-೪-೧-೧೧)

ಯಜ್ಞವು ಸಕಲ ಭೂತಗಳನ್ನೂ ತನ್ನ ಆಹುತಿಗಾಗಿ ಆಪೇಕ್ಷಿಸುತ್ತದೆ. ಪುನಃ ಸಕಲಭೂತಗಳ ಉಪಕಾರಕ್ಕಾಗಿ ಪ್ರಸರಿಸುತ್ತದೆ. ಇತ್ಯಾದಿಯಾಗಿ ವಿಶ್ವತತ್ತ್ವಕ್ಕೂ ಯಜ್ಞಕ್ಕೂ ಇರತಕ್ಕ ತಾದಾತ್ಮ್ಯಸಂಬಂಧವನ್ನು ತಿಳಿಸಿ ವ್ಯಾವಹಾರಿಕವಾದ ಸಮಸ್ತ ವಿಶ್ವವ್ಯವಹಾರಗಳಿಗೂ ಸಹ ಯಜ್ಞವು ಕಾರಣವು. ಅದೇ ರಕ್ಷಕವು ಮತ್ತು ಅದೇ ಸೂತ್ರರೂಪವಾದ ಸಂಬಂಧವು ಇತ್ಯಾದಿಯಾಗಿ ನಾನಾಶ್ರುತಿವಾಕ್ಯಗಳಲ್ಲಿ ವರ್ಣಿಸಿರುವ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿ "ನಾಭಾ ಪೃಥಿವ್ಯಾಃ" ಎಂಬ ವಾಕ್ಯದಿಂದ ವರ್ಣಿತವಾಗಿದೆ. ಆದುದರಿಂದಲೇ ವಿಶ್ವನಾಭಿಯಾದ ಈ ಯಜ್ಞವನ್ನು ನಿರ್ವಹಿಸಬೇಕಾದರೆ ದೇವಮಾನವಾದಿಗಳೆಲ್ಲರಿಗೂ ಸಮಾನವಾದ ಶ್ರದ್ಧೆಯು ಅತ್ಯವಶ್ಯವೆಂದು ತೋರಿಸಿದೆ.

ಯೋ ವೈ ಶ್ರದ್ಧಾಮನಾರಭ್ಯ ಯಜ್ಞೇನ ಯಜತೇ ನಾಸ್ಯೇಷ್ಟಾಯ ಶ್ರದ್ಧಧತೇಽಪಃ ಪ್ರಣಯತಿ ಶ್ರದ್ಧಾ ವಾ ಆಪಃ ಶ್ರದ್ಧಾಮೇವಾರಭ್ಯ ಯಜ್ಞೇನ ಯಜತ ಉಭಯೇಽಸ್ಯ ದೇವಮನುಷ್ಯಾ ಇಷ್ಟಾಯ ಶ್ರದ್ಧಧತೇ ॥

(ತೈ. ಸಂ. ೧-೬-೮-೧)

ಶ್ರದ್ಧಾರಹಿತನಾಗಿ ಯಜ್ಞಮಾಡಿದವನ ಯಜ್ಞವು ಸಿದ್ಧಿಸುವುದಿಲ್ಲ. ಶ್ರದ್ಧಾರೂಪವಾದ ಅಪ್ಪನ್ನು (ನೀರನ್ನು) ಮುಂದಿಟ್ಟುಕೊಂಡು ಯಜ್ಞವನ್ನು ನೆರವೇರಿಸತಕ್ಕದ್ದು. ದೇವಮಾನವಾದಿ ಸಕಲರೂ ಸಹ ಶ್ರದ್ಧೆಯಿಂದಲೇ ಯಜ್ಞದಲ್ಲಿ ಭಾಗವಹಿಸುವರು ಎಂದು ಶ್ರದ್ಧೆಯ ಆವಶ್ಯಕತೆಯನ್ನೂ ತಿಳಿಸಿದೆ.

ಯಜ್ಞತತ್ತ್ವದಲ್ಲಿಡಬೇಕಾದ ಈ ಶ್ರದ್ಧೆಯು ಕೇವಲ ಅಂಧಶ್ರದ್ಧೆಯಲ್ಲ. ಈ ಶ್ರದ್ಧೆಯು ಆಧ್ಯಾತ್ಮಿಕವಾದ ತತ್ತ್ವವನ್ನು ಗ್ರಹಣಮಾಡುವ ಶಕ್ತಿಯುಳ್ಳದ್ದಾಗಿರಬೇಕು. ಇದು ಜ್ಞಾನಸಾಧನೆಯಾದ ಯಜ್ಞಕ್ಕೂ ಬ್ರಹ್ಮತತ್ತ್ವಕ್ಕೂ ಇರುವ ಸಂಬಂಧವನ್ನರಿಯತಕ್ಕದ್ದು. ಆಧ್ಯಾತ್ಮಿಕಜ್ಞಾನದ ಆಧಾರದ ಮೇಲೆ ನಿಂತಿರುವ ಈ ಶ್ರದ್ಧೆಯುಳ್ಳ ಯಜಮಾನನು ತನಗೂ ಯಜ್ಞಕ್ಕೂ ತಾದಾತ್ಮ್ಯವನ್ನು ಕಲ್ಪಿಸಿಕೊಳ್ಳುತ್ತಾನೆ. ಅನಂತರ ಯಜ್ಞಕ್ಕೂ ಪ್ರಜಾಪತಿಗೂ ಇರುವ ತಾದಾತ್ಮ್ಯವನ್ನರಿಯುತ್ತಾನೆ. ಪ್ರಜಾಪತಿರೂಪಿಯಾದ ಪರಬ್ರಹ್ಮನ ವಿಶ್ವವ್ಯವಹಾರಗಳೆಲ್ಲವೂ ಈ ಯಜ್ಞತತ್ತ್ವದಲ್ಲಡಗಿರುತ್ತದೆಂದರಿಯುತ್ತಾನೆ. ಮತ್ತು ಆ ವಿಶ್ವಚಕ್ರದಲ್ಲಿ ತಾನೂ ಸಹ ಭಾಗವನ್ನು ವಹಿಸುತ್ತಾನೆ.

॥ ಸಂಹಿತಾಪಾಠಃ ॥

ಆ ಹಿ ದ್ಯಾವಾಪೃಥಿವೀ ಅಗ್ನ ಉಭೇ ಸದಾ ಪುತ್ರೋ ನ ಮಾತರಾ ತತಂಥ।
ಪ್ರ ಯಾಹ್ಯಚ್ಛೋಶತೋ ಯವಿಷ್ಠಾಥಾ ವಹ ಸಹಸ್ಯೇಹ ದೇವಾನ್ ॥ ೭ ॥

॥ ಪದಪಾಠಃ ॥

ಆ । ಹಿ । ದ್ಯಾವಾಪೃಥಿವೀ ಇತಿ । ಅಗ್ನೇ । ಉಭೇ ಇತಿ । ಸದಾ । ಪುತ್ರಃ । ನ । ಮಾತರಾ । ತತಂಥ ।
ಪ್ರ । ಯಾಹಿ । ಅಚ್ಛ । ಉಶತಃ । ಯವಿಷ್ಠ । ಅಥ । ಆ । ವಹ । ಸಹಸ್ಯ । ಇಹ । ದೇವಾನ್ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಮುಭೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಸದಾ ಸರ್ವದಾ ತತಂಥ । ಅತೇ-ವಿಥ । ಸ್ವತೇಜೋಭಿರ್ವಿಸ್ತಾರಯಸಿ ಖಲು ॥ ಬಭೂಥಾ ತತಂಥೇತಿ ಥಲಿ ನಿಪಾತಿತಃ ॥ ತತ್ರ ದೃಷ್ಟಾಂತಃ । ಪುತ್ರೋ ನ ಯಥಾ ಪುತ್ರೋ ಮಾತರಾ ಮಾತಾಪಿತರೌ ಕ್ಷೇಮಾ ಧನ್ಯೈಸ್ತನೋತಿ ತದ್ವತ್ । ಕಿಂಚ ಹೇ ಯವಿಷ್ಠ ಯುವತಮ ಸ ತ್ವಮುಶತಃ ಕಾಮಯಮಾನಾನಚ್ಛಾಭಿಲಕ್ಷ್ಯ ಪ್ರಯಾಹಿ । ಪ್ರಕರ್ಷೇಣಾಗಚ್ಛ । ಅಥಾನಂತರಂ ಹೇ ಸಹಸ್ಯ ಸಹಸೋ ಬಲಸ್ಯ ಪುತ್ರ ಹೇ ಅಗ್ನೇ ತ್ವಮಿಹಾಸ್ಮದೀಯೇ ಯಜ್ಞೇ ದೇವಾನಿಂದ್ರಾದೀನಾ ವಹ । ಪ್ರಾಪಯ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಪುತ್ರಃ**—ಪುತ್ರನು । **ಮಾತರಾ ನ**—ತನ್ನ ಮಾತಾಪಿತೃಗಳನ್ನು ತನ್ನ ಸಂಪತ್ತಿನಿಂದ ಪುಷ್ಟಿಗೊಳಿಸುವಂತೆ (ಭರಿಸುವಂತೆ) । **(ತ್ವಂ**—ನೀನು) । **ಉಭೇ ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳೆರಡನ್ನೂ । **ಸದಾ**—ಯಾವಾಗಲೂ । **ಆ ತತಂಥ**—ವಿಸ್ತೃತವಾಗುವಂತೆ ಮಾಡಿದ್ದೀಯೆ । **ಯವಿಷ್ಠ**—ಅತ್ಯಂತ ಯುವಕನಾದ ಎಲೈ ಅಗ್ನಿಯೇ । **ಉಶತಃ ಅಚ್ಛ**—ನಿನ್ನನ್ನು ಅಪೇಕ್ಷಿಸುವ ಯಜಮಾನರಿಗಭಿಮುಖವಾಗಿ । **ಪ್ರ ಯಾಹಿ**—ಅತಿಶಯವಾಗಿ ಬಾ । **ಅಥ**—ಅನಂತರ । **ಸಹಸ್ಯ**—ಶಕ್ತಿಪುತ್ರನಾದ ಎಲೈ ಅಗ್ನಿಯೇ । **ಇಹ**—ನಮ್ಮ ಈ ಯಜ್ಞದಲ್ಲಿ । **ದೇವಾನ್**—ಇಂದ್ರಾದಿದೇವತೆಗಳನ್ನು । **ಆ ವಹ**—ಕರೆತಂದು ಸೇರಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಪುತ್ರನು ತನ್ನ ಮಾತಾಪಿತೃಗಳನ್ನು ತನ್ನ ಸಂಪತ್ತಿನಿಂದ ಭರಿಸಿ ಪುಷ್ಟಿಗೊಳಿಸುವಂತೆ ನೀನು ದ್ಯಾವಾಪೃಥಿವಿಗಳೆರಡನ್ನೂ ಯಾವಾಗಲೂ ವಿಸ್ತೃತವಾಗುವಂತೆ ಮಾಡಿದ್ದೀಯೆ. ಅತ್ಯಂತ ಯುವಕನಾದ ಎಲೈ ಅಗ್ನಿಯೇ, ನಿನ್ನನ್ನು ಅಪೇಕ್ಷಿಸುವ ಯಜಮಾನರಿಗಭಿಮುಖವಾಗಿ ಅತಿಶಯವಾಗಿ ಬಾ. ಅನಂತರ ಶಕ್ತಿಪುತ್ರನಾದ ಎಲೈ ಅಗ್ನಿಯೇ, ನಮ್ಮ ಈ ಯಜ್ಞದಲ್ಲಿ ಇಂದ್ರಾದಿದೇವತೆಗಳನ್ನು ಕರೆತಂದು ಸೇರಿಸು.

English Translation

You have ever sustained, Agni, both heaven and earth, as a son (supports) his parents: come youngest (of the gods), to the presence of those desiring (you); Son of strength, bring hither the gods.

॥ ವಿಶೇಷವಿಷಯಗಳು ॥

**ಪುತ್ರಃ ಮಾತರಾ ನ**—ಇಲ್ಲಿ ಮಾತೃಶಬ್ದದ ದ್ವಿತೀಯಾದ್ವಿವಚನದ ಪ್ರಯೋಗವಿರುವುದರಿಂದ ಮಾತರಾ ಎಂಬ ಶಬ್ದಕ್ಕೆ **ಮಾತಾಪಿತರಾ** ತಾಯಿ ಮತ್ತು ತಂದೆಯು ಎಂಬರ್ಥವಿರುವುದು. ಪುತ್ರನು ತಾಯಿತಂದೆಗಳನ್ನು ಪೋಷಿಸುವಂತೆ ಎಂದರೆ ಇಲ್ಲಿ ವೃದ್ಧರಾಗಿ ಅಶಕ್ತರಾಗಿರುವ ತಂದೆತಾಯಿಗಳನ್ನು ಯುವಕನಾದ ಪುತ್ರನು ಆಹಾರಾದಿಗಳಿಂದ ಪೋಷಿಸುವಂತೆ ಎಂದರ್ಥವು. ತಂದೆತಾಯಿಗಳು ತಮ್ಮ ಪುತ್ರನನ್ನು ಬಾಲ್ಯಾವಸ್ಥೆಯಲ್ಲಿ ಕಾಪಾಡುವರು. ಕಾಲಕ್ರಮವಾಗಿ ತಂದೆತಾಯಿಗಳು ವೃದ್ಧರಾಗಿ ಕೆಲಸಕಾರ್ಯಗಳನ್ನು ಮಾಡಲು ಅಶಕ್ತರಾದಾಗ ಯುವಕನಾದ ಪುತ್ರನು ಅವರನ್ನು ಪೋಷಿಸಿ ಕಾಪಾಡುವುದು ಪುತ್ರನ ಕರ್ತವ್ಯವಾಗಿರುವುದು. ಈ ವಿಷಯವನ್ನೇ ಇಲ್ಲಿ **ಪುತ್ರೋ ನ ಮಾತರಾ** ಎಂಬ ದೃಷ್ಟಾಂತದಿಂದ ವಿವರಿಸಿದೆ.

## ಎರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪಿಪ್ರೀಹೀತಿ ಸಪ್ತರ್ಚಂ ದ್ವಿತೀಯಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್** । ಪಿಪ್ರೀಹೀತ್ಯನು—**ಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತಃ ಸೂಕ್ತವಿನಿಯೋಗಃ** ॥ ದರ್ಶಪೂರ್ಣಮಾಸಯೋ—

ರಾದ್ಯಾ ಸ್ವಿಷ್ಟಕೃತೋಽನುವಾಕ್ಯಾ । ಸೂತ್ರಿತಂ ಚ । ಅಥ ಸ್ವಿಷ್ಟಕೃತಃ ಪಿಪ್ರೀಹಿ ದೇವಾँ ಉಶತೋ ಯವಿಷ್ಠೇತ್ಯನುವಾಕ್ಯಾ । ಆ. ೧.೬ । ಇತಿ ॥

ಅನುವಾದವು—ಪಿಪ್ರೀಹಿ ಎಂಬ ಈ ಸೂಕ್ತವು ಹತ್ತನೆಯ ಮಂಡಲದ ಮೊದಲನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ—ಪಿಪ್ರೀಹಿ ಎಂದು ಹೇಳಿರುವುದು. ಪ್ರಾತರನುವಾಕಮಂತ್ರಗಳಿಗಾಗಿಯೂ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ. ಮತ್ತು ದರ್ಶಪೂರ್ಣಮಾಸ ಯಾಗಗಳಲ್ಲಿ ಈ ಸೂಕ್ತದ ಮೊದಲನೆಯ ಋಕ್ಕನ್ನು ಸ್ವಿಷ್ಟಕೃದ್ಧೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಅಶ್ವಲಾಯನ ಶ್ರೌತಸೂತ್ರದ—ಅಥ ಸ್ವಿಷ್ಟಕೃತಃ ಪಿಪ್ರೀಹಿ ದೇವಾँ ಉಶತೋ ಯವಿಷ್ಠೇತ್ಯನುವಾಕ್ಯಾ ಎಂಬ ಸೂತ್ರದಿಂದ (ಆ. ೧-೬) ವಿವೃತವಾಗಿರುವುದು.

## ಸೂಕ್ತ—೨

ಮಂಡಲ—೧೦ ॥ ಅನುವಾಕ—೧ ॥ ಸೂಕ್ತ—೨ ॥
ಅಷ್ಟಕ—೭ ॥ ಅಧ್ಯಾಯ—೫ ॥ ವರ್ಗ—೩೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿ—ತ್ರಿತ ಆಪ್ತ್ಯ ॥
ದೇವತಾ—ಅಗ್ನಿ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪಿಪ್ರೀಹಿ ದೇವಾँ ಉಶತೋ ಯವಿಷ್ಠ ವಿದ್ವಾँ ಋತೂँರ್ಋತುಪತೇ ಯಜೇಹ ।
ಯೇ ದೈವ್ಯಾ ಋತ್ವಿಜಸ್ತೇಭಿರಗ್ನೇ ತ್ವಂ ಹೋತೄಣಾಮಸ್ಯಾಯಜಿಷ್ಠಃ ॥

॥ ಪದಪಾಠಃ ॥

ಪಿಪ್ರೀಹಿ । ದೇವಾನ್ । ಉಶತಃ । ಯವಿಷ್ಠ । ವಿದ್ವಾನ್ । ಋತೂನ್ । ಋತುऽಪತೇ । ಯಜ । ಇಹ ।
ಯೇ । ದೈವ್ಯಾಃ । ಋತ್ವಿಜಃ । ತೇಭಿಃ । ಅಗ್ನೇ । ತ್ವಂ । ಹೋತೄಣಾಂ । ಅಸಿ । ಆऽಯಜಿಷ್ಠಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಯವಿಷ್ಠ ಯುವತಮಾಗ್ನೇ ಉಶತಃ ಸ್ತುತೀಃ ಶ್ರೋತುಂ ಕಾಮಯಮಾನಾನ್ದೇವಾನ್ಪಿಪ್ರೀಹಿ । ಹವಿರ್ಭಿಃ ಪ್ರೀಣಯ । ಹೇ ಋತುಪತ ಋತೂನಾಂ ದೇವಯಾಗಕಾಲಾನಾಂ ಸ್ವಾಮಿನ್ನಗ್ನೇ

ಋತೂನ್ಯಾಗಕಾಲಾನ್ವಿದ್ವಾಞ್ಜಾನನ್ತ್ವಮಿಹಾಸ್ಮಿನ್ಯಜ್ಞೇ ತಾನ್ಯಜ । ಪೂಜಯ । ಕಿಂಚ ಹೇ ಅಗ್ನೇ ದೈವ್ಯಾ ದೇವೇಷು ಭವಾಃ ಅಗ್ನಿರ್ಹೋತಾಶ್ವಿನಾವಧ್ವರ್ಯೂ ತ್ವಷ್ಟಾಗ್ನಿರ್ಮಿತ್ರ ಉಪವಕ್ತಾ । ತೈ. ಆ. ೩-೫ । ಇತ್ಯತ್ರೋಕ್ತಾ ಯ ಋತ್ವಿಜಃ ಸಂತಿ ತೇಭಿಸ್ತೈಃ ಸಹ ದೇವಾನ್ಯಜ । ಯದ್ವಾ । ದೈವ್ಯಾ ದೇವೇಷು ಭವಾ ಋತ್ವಿಜ ಆಶ್ವಲಾಯನೇನೋಕ್ತಾಶ್ಚಂದ್ರಮಾ ಬ್ರಹ್ಮಾದಿತ್ಯೋಽಧ್ವರ್ಯುಃ ಪರ್ಜನ್ಯ ಉದ್ಗಾತೇತಿ । ಆ. ಗೃ. ೧-೧೩. ೮,೯ । ತೈಃ ಸಹ ಯಜ । ಯಸ್ಮಾತ್ತ್ವಂ ಹೋತೄಣಾಂ ಮಧ್ಯ ಆಯಜಿಷ್ಠ ಅಭಿಮುಖ್ಯೇನ ದೇವಾನಾಂ ಯಷ್ಟೃತಮೋಽಸಿ ಭವಸಿ ॥

॥ ಪ್ರತಿಪದಾರ್ಥ ॥

**ಯವಿಷ್ಠ**—ಅತ್ಯಂತ ಯುವಕನಾದ ಎಲೈ ಅಗ್ನಿಯೇ । **ಉಶತಃ**—ಪ್ರಶಂಸೆಗಳನ್ನಪೇಕ್ಷಿಸುವ । **ದೇವಾನ್**—ದೇವತೆಗಳನ್ನು । **ಪಿಪ್ರೀಹಿ**—ಹವಿಸ್ಸುಗಳಿಂದ ತೃಪ್ತಿಪಡಿಸು । **ಋತುಪತೇ**—ಯಜ್ಞಕಾಲಗಳಿಗೆ ಒಡೆಯನಾದ ಎಲೈ ಅಗ್ನಿಯೇ । **ಋತೂನ್**—ಯಜ್ಞಕಾಲಗಳನ್ನು । **ವಿದ್ವಾನ್**—ಅರಿತ ನೀನು । **ಇಹ**—ಈ ಯಜ್ಞದಲ್ಲಿ । **ಯಜ**—ಅವರನ್ನು ಪೂಜಿಸು । **ಅಗ್ನೇ**—ಎಲೈ ಅಗ್ನಿಯೇ । **ದೈವ್ಯಾಃ**—ದೇವಸಂಬಂಧಿಗಳಾದ । **ಯೇ ಋತ್ವಿಜಃ**—ಯಾವ ಋತ್ವಿಕ್ಕುಗಳಿರುವರೋ । **ತೇಭಿಃ**—ಅವರೊಡನೆ ದೇವತೆಗಳನ್ನು ಪೂಜಿಸು । **ತ್ವಂ**—ನೀನು । **ಹೋತೄಣಾಂ**—ಹೋತೃಗಳ ನಡುವೆ । **ಆ ಯಜಿಷ್ಠಃ**—ಅತ್ಯಂತ ಶ್ರೇಷ್ಠನಾದ ದೇವಪೂಜಕನಾಗಿ । **ಅಸಿ**—ಆಗಿದ್ದೀಯೆ.

॥ ಭಾವಾರ್ಥ ॥

ಅತ್ಯಂತ ಯುವಕನಾದ ಎಲೈ ಅಗ್ನಿಯೇ, ಪ್ರಶಂಸೆಗಳನ್ನಪೇಕ್ಷಿಸುವ ದೇವತೆಗಳನ್ನು ಹವಿಸ್ಸುಗಳಿಂದ ತೃಪ್ತಿಪಡಿಸು. ಯಜ್ಞಕಾಲಗಳಿಗೆ ನಿಯಾಮಕನಾದ ಎಲೈ ಅಗ್ನಿಯೇ, ಯಜ್ಞಕಾಲಗಳನ್ನು ಅರಿತ ನೀನು ಈ ಯಜ್ಞದಲ್ಲಿ ಅವರನ್ನು ಪೂಜಿಸು. ಎಲೈ ಅಗ್ನಿಯೇ, ದೇವಸಂಬಂಧಿಗಳಾದ ಯಾವ ಋತ್ವಿಕ್ಕುಗಳಿರುವರೋ, ಅವರೊಡನೆ ದೇವತೆಗಳನ್ನು ಪೂಜಿಸು. ನೀನು ಹೋತೃಗಳ ನಡುವೆ ಅತ್ಯಂತ ಶ್ರೇಷ್ಠನಾದ ದೇವಪೂಜಕನಾಗಿ ಆಗಿದ್ದೀಯೆ.

## English Translation

Agni, youngest (of the deities), propitiate the desiring gods ; lord of seasons, cognizant of seasons, here offer worship ; worship with those who are the priests of the celestials ; among the ministrant priests you are the best offerer.

॥ ವಿಶೇಷವಿಷಯಗಳು ॥

**ಋತುಪತೇ, ಋತೂನ್ ವಿದ್ವಾನ್**—ಋತುಶಬ್ದಕ್ಕೆ ಕಾಲವೆಂಬ ಅರ್ಥವಿರುವುದೆಂದು ಯಾಸ್ಕರು ಹೇಳಿದಾರೆ. (ನಿ. ೮-೪ ಮತ್ತು ೧೨-೪೬) ಮತ್ತು ಋತುಶಬ್ದಕ್ಕೆ ಅರ್ಥವನ್ನೂ ರೂಪನಿಷ್ಪತ್ತಿಯನ್ನು ವಿವರಿಸುತ್ತಾ—

**ಮುಹೂರ್ತೋ ಮುಹುರೃತುಃ । ಋತುರರ್ತೇರ್ಗತಿಕರ್ಮಣಃ । ಮುಹುರ್ಮೂಢ ಇವ ಕಾಲೋ ಯಾವದಭೀಕ್ಷ್ಣಂ ಚೇತಿ । ಅಭೀಕ್ಷ್ಣಮಭಿಕ್ಷಣಂ ಭವತಿ । ಕ್ಷಣಃ ಕ್ಷಣೋತೇಃ ಪ್ರಕ್ಷ್ಣುತಃ ಕಾಲಃ । ಕಾಲಃ ಕಾಲಯತೇರ್ಗತಿಕರ್ಮಣಃ ॥**

(ನಿ. ೨-೨೫)

ಮುಹೂರ್ತವೆಂದರೆ **ಮುಹುಃ+ಋತುಃ** ಪುನಃ ಪುನಃ ಪ್ರಾಪ್ತವಾಗುವ ಕಾಲವು ಒಂದು ಕ್ಷಣವಾದಕೂಡಲೇ ಮತ್ತೊಂದು ಕ್ಷಣವು ಅದರ ಜತೆಗೆ ಸೇರಿಕೊಂಡೇ ಬರುವುದು. ಎಂದರೆ ಕಾಲವು ಅವಿಚ್ಛಿನ್ನವಾಗಿರುವುದು. ಋತು ಶಬ್ದವು ಹೋಗು, ಗತಿಸು, ಕಳೆದು ಹೋಗು ಇತ್ಯಾದ್ಯರ್ಥಗಳುಳ್ಳ **ಋ–ಗತೌ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಕಳೆದುಹೋಗುತ್ತಿರುವುದರಿಂದ ಋತುವಿಗೆ ಕಾಲವೆಂದು ಹೆಸರು. **ಕ್ಷಣ**ವೆಂದರೆ ಕಾಲದ ಬಹಳ ಸಣ್ಣವಿಭಾಗವು. ಈ ಶಬ್ದವು **ಕ್ಷಣ್**–ಹಿಂಸಿಸು, ಕತ್ತರಿಸು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಕ್ಷಣವೆಂದರೆ ಕಾಲದ (ಕತ್ತರಿಸಿದ) ಒಂದು ತುಂಡು. ಎಂದರೆ ಅತಿ ಸಣ್ಣವಿಭಾಗ. ಕಾಲಶಬ್ದವೂ ಸಹ ಹೋಗು ಎಂಬರ್ಥವುಳ್ಳ ಕಲ್ ಧಾತುವಿನಿಂದ ನಿಷ್ಪನ್ನವಾಗಿ ಕಳೆದುಹೋಗುತ್ತಿರುವ ಕಾಲ ಎಂದರ್ಥವಾಗುವುದು.

ಯಜ್ಞಯಾಗಾದಿಗಳನ್ನು ಮಾಡಬೇಕಾದರೆ, ಮಾಸ, ತಿಥಿ, ವಾರ, ನಕ್ಷತ್ರ ಮೊದಲಾದುವುಗಳಲ್ಲಿ ಪ್ರಶಸ್ತವಾಗಿರುವುದನ್ನು ನೋಡಿ ಆ ಕಾಲದಲ್ಲಿ ಮಾಡಬೇಕು. ಅಗ್ನಿಯು ಇಂತಹ ಕಾಲವಿಭಾಗಗಳನ್ನು, ಕಾಲಸ್ವರೂಪವನ್ನು ತಿಳಿದಿರುವನೆಂದು ವಿವರಿಸುವುದಕ್ಕಾಗಿ ಇಲ್ಲಿ **ಋತುಪತೇ** ಎಂಬ ಶಬ್ದದಿಂದ ಅಗ್ನಿಯನ್ನು ಸಂಬೋಧಿಸಲಾಗಿದೆ ಮತ್ತು **ಋತೂನ್ ವಿದ್ವಾನ್**—ಯಾವ ಕಾಲಗಳಲ್ಲಿ ಯಾವ ಯಜ್ಞಗಳನ್ನು ಮಾಡಬೇಕು ಯಾವ ಕಾಲಗಳಲ್ಲಿ ಬ್ರಾಹ್ಮಣಾದಿ ವರ್ಣಗಳು ಯಾವಯಾವ ಯಜ್ಞಗಳನ್ನು ಮಾಡಬೇಕು ಎಂಬ ವಿಷಯಪರಿಜ್ಞಾನವು ಅಗ್ನಿಗೆ ಇದೆ ಎಂದು ವಿವರಿಸುವುದಕ್ಕಾಗಿ **ಋತೂನ್ ವಿದ್ವಾನ್** ಕಾಲಸ್ವರೂಪವನ್ನು ತಿಳಿದವನು ಎಂದು ಅಗ್ನಿಯ ಗುಣವರ್ಣನೆ ಮಾಡಿದೆ.

**ಯೇ ದೈವ್ಯಾ ಋತ್ವಿಜಃ**—ಮನುಷ್ಯರಲ್ಲಿ ಹೋತೃ, ಅಧ್ವರ್ಯು ಮೊದಲಾದ ಋತ್ವಿಕ್ಕುಗಳಿರುವಂತೆಯೇ ದೇವತೆಗಳಲ್ಲಿಯೂ ಋತ್ವಿಕ್ಕುಗಳಿರುವವೆಂದು ಇಲ್ಲಿ ಹೇಳಿದೆ.

ಈ ವಿಷಯದಲ್ಲಿ ಭಾಷ್ಯಕಾರರು

**ಅಗ್ನಿರ್ಹೋತಾ । ಅಶ್ವಿನಾಧ್ವರ್ಯೂ । ತ್ವಷ್ಟಾಗ್ನೀತ್ ।**

(ತೈ. ಆ. ೩-೩)

ಎಂಬ ತೈತ್ತಿರೀಯಾರಣ್ಯಕದ ಶ್ರುತಿವಾಕ್ಯವನ್ನು ಉದಾಹರಿಸಿದಾರೆ. ದೇವತೆಗಳಲ್ಲಿ ಅಗ್ನಿಯು ಹೋತೃವೆಂಬ ಋತ್ವಿಜನು, ಅಶ್ವಿನೀದೇವತೆಗಳು ಅಧ್ವರ್ಯುಗಳು, ತ್ವಷ್ಟೃವು ಅಗ್ನೀಧ್ರನು ಇತ್ಯಾದಿ. ಆಶ್ವಲಾಯನ ಮಹರ್ಷಿಗಳೂ ಸಹ ತಮ್ಮ ಗೃಹ್ಯಸೂತ್ರದಲ್ಲಿ—**ಚಂದ್ರಮಾ ಬ್ರಹ್ಮಾದಿತ್ಯೋಽಧ್ವರ್ಯುಃ ಪರ್ಜನ್ಯ ಉದ್ಗಾತಾ**—ಎಂದರೆ ದೇವತೆಗಳಲ್ಲಿ ಚಂದ್ರನು ಬ್ರಹ್ಮನೆಂಬ ಋತ್ವಿಜನು, ಆದಿತ್ಯನು ಅಧ್ವರ್ಯುವು, ಪರ್ಜನ್ಯನು ಉದ್ಗಾತೃವೆಂಬ ಋತ್ವಿಜನು ಎಂದು ವಿವರಿಸಿದಾರೆ. (ಆ. ಗೃ. ೧-೨೩-೮, ೯).

॥ ಸಂಹಿತಾ ॥

**ವೇಷಿ ಹೋತ್ರಮುತ ಪೋತ್ರಂ ಜನಾನಾಂ ಮಂಧಾತಾಸಿ ದ್ರವಿಣೋದಾ ಋತಾವಾ ।**

ಸ್ವಾಹಾ ವಯಂ ಕೃಣವಾಮಾ ಹವೀಂಷಿ ದೇವೋ ದೇವಾನ್ಯಜತ್ವಗ್ನಿ-
ರರ್ಹನ್ ॥ ೨ ॥

। ಪದಪಾಠಃ ।

ವೇಷಿ । ಹೋತ್ರಂ । ಉತ । ಪೋತ್ರಂ । ಜನಾನಾಂ । ಮಂಧಾತಾ । ಅಸಿ । ದ್ರವಿಣಃಽದಾಃ । ಋತಽವಾ । ಸ್ವಾಹಾ । ವಯಂ । ಕೃಣವಾಮ । ಹವೀಂಷಿ । ದೇವಃ । ದೇವಾನ್ । ಯಜತು । ಅಗ್ನಿಃ । ಅರ್ಹನ್ ॥

। ಸಾಯಣಭಾಷ್ಯಂ ।

ಹೇ ಅಗ್ನೇ ಜನಾನಾಂ ಯಜಮಾನಾನಾರ್ಥಂ ಹೋತ್ರಂ ಹೋತುಃ ಕರ್ಮ ತೇನ ಕ್ರಿಯಮಾಣಂ ಸ್ತೋತ್ರಂ ವೇಷಿ ಕಾಮಯಸೇ । ಉತಾಪಿ ಚ ಪೋತ್ರಂ ಪೋತುಃ ಕರ್ಮ ತೇನ ಕ್ರಿಯಮಾಣಾಂ ಸ್ತುತಿಂ ಕಾಮಯಸೇ । ಕಿಂಚ ಮಂಧಾತಾ ಮೇಧಾವ್ಯೃತವಾ ಸತ್ಯವಾಂಸ್ತ್ವಂ ದ್ರವಿಣೋದಾ ಅಸಿ । ಧನಸ್ಯ ಪ್ರಧಾತಾ ಭವಸಿ । ಅಥ ಪರೋಕ್ಷಕೃತಃ । ವಯಂ ದೇವೇಭ್ಯೋ ಹವೀಂಷಿ ಸ್ವಾಹಾ ಕೃಣವಾಮ। ಸ್ವಾಹಾ ಕರವಾಮ । ಪ್ರಯಚ್ಛಾಮ । ತತೋ ದೇವೋ ದೀಪ್ಯಮಾನೋಽರ್ಹನ್ ಪ್ರಶಂಸ್ಯೋ ಯಜಮಾನಯೋಗ್ಯೋ ವಾಗ್ನಿರ್ದೇವಾನ್ಯಜತು । ತೈರ್ಹವಿರ್ಭಿಃ ಪೂಜಯತು ॥

। ಪ್ರತಿಪದಾರ್ಥ ।

(ಎಲೈ ಅಗ್ನಿಯೇ), ಜನಾನಾಂ—ಯಜಮಾನಾರ್ಥವಾಗಿ । **ಹೋತ್ರಂ**—ಹೋತೃವಿನ ಸ್ತೋತ್ರವನ್ನು । **ವೇಷಿ**—ಒಂದು ವೇಳೆ ಅಪೇಕ್ಷಿಸಿದರೂ । **ಉತ**—ಅಥವಾ । **ಪೋತ್ರಂ**—ಪೋತೃವಿನ ಸ್ತುತಿಯನ್ನಪೇಕ್ಷಿಸಿದರೂ । **ಮಂಧಾತಾ**—ಮೇಧಾವಿಯೂ । **ಋತವಾ**—ಸತ್ಯವಂತನೂ ಆದ ನೀನು । **ದ್ರವಿಣೋದಾಃ**—ಧನದಾತೃವಾಗಿ । **ಅಸಿ**—ಆಗಿದ್ದೀಯೆ । **ವಯಂ**—ನಾವು । **ಹವೀಂಷಿ**—ಹವಿಸ್ಸುಗಳನ್ನು । **ಸ್ವಾಹಾ ಕೃಣವಾಮ**—ದೇವತೆಗಳಿಗೆ ಸ್ವಾಹಾಪೂರ್ವಕವಾಗಿ ಅರ್ಪಿಸೋಣ । **ದೇವಃ**—ಪ್ರಕಾಶಮಾನನೂ । **ಅರ್ಹನ್**—ಪ್ರಶಸ್ಯನೂ ಆದ । **ಅಗ್ನಿಃ**—ಅಗ್ನಿಯು । **ದೇವಾನ್**—ದೇವತೆಗಳನ್ನು । **ಯಜತು**—ಪೂಜಿಸಲಿ.

। ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಯಜಮಾನನಾಗಿ ಒಂದು ವೇಳೆ ಹೋತೃವಿನ ಸ್ತೋತ್ರವನ್ನಪೇಕ್ಷಿಸಿದರೂ ಅಥವಾ ಪೋತೃವಿನ ಸ್ತುತಿಯನ್ನು ಅಪೇಕ್ಷಿಸಿದರೂ, ಮೇಧಾವಿಯೂ, ಸತ್ಯವಂತನೂ, ಆದ ನೀನು ಧನಧಾತೃವಾಗಿ ಆಗಿದ್ದೀಯೆ· ನಾವು ಹವಿಸ್ಸುಗಳನ್ನು ದೇವತೆಗಳಿಗೆ ಸ್ವಾಹಾಪೂರ್ವಕವಾಗಿ ಅರ್ಪಿಸೋಣ. ಪ್ರಕಾಶಮಾನನೂ, ಪ್ರಶಸ್ಯನೂ ಆದ ಅಗ್ನಿಯು ದೇವತೆಗಳನ್ನು ಪೂಜಿಸಲಿ.

## English Translation

Whether, Agni, you prefer the office of Hotri or Potri among men you are wise. the giver of wealth, the observer of truth; let us offer the

oblations with the (sacred) Swaha, and may the most excellent and divine Agni present them to the gods.

॥ ವಿಶೇಷವಿಷಯಗಳು ॥

**ದ್ರವಿಣೋದಾಃ**—ಈ ಶಬ್ದಕ್ಕೆ ಯಾಸ್ಕರು ವಿಸ್ತಾರವಾದ ವಿವರಣೆಯನ್ನು ಬರೆದಿರುವರು—

**ದ್ರವಿಣೋದಾಃ । ದ್ರವಿಣೋದಾಃ ಕಸ್ಮಾದ್ಧನಂ ದ್ರವಿಣಮುಚ್ಯತೇ । ಯದೇನದಭಿದ್ರವಂತಿ । ಬಲಂ ವಾ ದ್ರವಿಣಂ ಯದೇದೇನಾಭಿದ್ರವಂತಿ । ತಸ್ಯ ದಾತಾ ದ್ರವಿಣೋದಾಃ ॥** (ನಿ. ೮-೧)

ಇಲ್ಲಿ **ದ್ರವಿಣೋದಾಃ** ಎಂಬ ಶಬ್ದದ ನಿಷ್ಪತ್ತಿಯು, **ದ್ರವಿಣಂ ದದಾತೀತಿ ದ್ರವಿಣೋದಾಃ** । ದ್ರವಿಣ ಶಬ್ದಕ್ಕೆ ಧನ, ಬಲ ಎಂದು ಎರಡು ಅರ್ಥಗಳಿರುವುವು. ಆದುದರಿಂದ ದ್ರವಿಣೋದಾಃ ಎಂದರೆ ಧನವನ್ನು ಅಥವಾ ಬಲವನು ಕೊಡುವವನು ಎಂದರ್ಥವು. ಇದು ಈ ಶಬ್ದದ ಅವಯವಾರ್ಥವು. ಇದಲ್ಲದೆ ಯಾಸ್ಕರು ದ್ರವಿಣೋದಾಃ ಎಂಬ ಋಕ್ಕಿಗೆ ನಿರ್ವಚನವನ್ನು ಹೀಗೆ ಹೇಳಿರುವರು—

**ದ್ರವಿಣೋದಾ ಯಸ್ತ್ವಂ । ದ್ರವಿಣಸ ಇತಿ ದ್ರವಿಣಸಾದಿನ ಇತಿ ವಾ ದ್ರವಿಣಸಾನಿನ ಇತಿ ವಾ ದ್ರವಿಣಸಸ್ತಸ್ಮಾತ್ ಪಿಬತ್ವಿತಿ ವಾ । ಯಜ್ಞೇಷು ದೇವಮಿಳತೇ । ಯಾಚಂತಿ ಸ್ತುವಂತಿ, ವರ್ಧಯಂತಿ ಪೂಜಯಂತೀತಿ ವಾ ॥**

ಎಂದರೆ ಧನ, ಹವಿಸ್ಸು ಮುಂತಾದುವುಗಳನ್ನು ಅಪೇಕ್ಷಿಸುವ ಋತ್ವಿಜರು ದ್ರವಿಣೋದಾ ಎಂಬ ನಿನ್ನನ್ನು ಯಜ್ಞಗಳಲ್ಲಿ ಸೋಮಪಾನ ಮಾಡುವಂತೆ, ಪ್ರಾರ್ಥಿಸುತ್ತಾರೆ ಎಂದು ಮುಖ್ಯಾರ್ಥವು. ಇಲ್ಲಿ ದ್ರವಿಣೋದಾಃ ಎಂಬುದು ಪ್ರಥಮಾ ವಿಭಕ್ತಿಯ ಏಕವಚನವಾಗಿದ್ದರೂ ದೇವಂ ಎಂಬ ದ್ವಿತೀಯೈಕವಚನಕ್ಕೆ ಹೇಗೆ ವಿಶೇಷಣವಾಯಿತೆಂದರೆ—ದ್ರವಿಣೋದಾ ಯಃ ದೇವಃ ತಂ ದೇವಂ, ಯಾವ ದೇವನು ಧನದಾತನೋ ಆ ದೇವನನ್ನು ಎಂದು ಅರ್ಥವಾಗುವಂತೆ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. **ದ್ರವಿಣಸಃ** ಎಂದರೆ ಧನ ಅಥವಾ ಹವಿಸ್ಸನ್ನು ದೇವತಾಯಜನಾರ್ಥವಾಗಿ ಯಾಚಿಸುತ್ತಾರೆ, ಪ್ರಶಂಸೆಮಾಡುತ್ತಾರೆ, ಪೂಜಿಸುತ್ತಾರೆ ಎಂಬ ಅನೇಕ ಅರ್ಥಗಳನ್ನು ಹೇಳಬಹುದು.

**ತತ್ಕೋ ದ್ರವಿಣೋದಾ ಇಂದ್ರ ಇತಿ ಕ್ರೌಷ್ಟುಕಿಃ । ಸ ಬಲಧನಯೋರ್ದಾತೃತಮಸ್ತಸ್ಯ ಚ ಸರ್ವಾ ಬಲಕೃತಿಃ ॥**

ದ್ರವಿಣೋದಾಃ ಎಂಬ ಶಬ್ದದ ಅವಯವಾರ್ಥವನ್ನೇನೋ ಹೇಳಿದ್ದಾಯಿತು. ಆದರೆ ಈ ದ್ರವಿಣೋದಾಃ ಎಂಬ ದೇವತೆಯು ಯಾರು ? ಎಂದರೆ, ಇಂದ್ರನೇ ದ್ರವಿಣೋದಾಃ ಎಂಬುದಾಗಿ ಹೇಳಲ್ಪಡುವನು, ಏಕೆಂದರೆ ದ್ರವಿಣ ಶಬ್ದವು ಸೂಚಿಸುವ ಬಲ, ಧನ, ಇವುಗಳನ್ನು ಅತಿಶಯವಾಗಿ ಕೊಡುವವನು ಇಂದ್ರನೇ ಆದುದರಿಂದ ಇಂದ್ರನನ್ನೇ ದ್ರವಿಣೋದಾಃ ಎಂಬುದಾಗಿ ಹೇಳಬೇಕೆಂದು ಕ್ರೌಷ್ಟುಕಿ ಎಂಬುವರ ಅಭಿಪ್ರಾಯವು.

**ಅಥಾಪ್ಯಗ್ನಿಂ ದ್ರವಿಣೋದಸಮಾಹೈಷ ಪುನರೇತಸ್ಮಾಜ್ಜಾಯತೇ ।**
**ಯೋ ಅಶ್ಮನೋರಂತರಗ್ನಿಂ ಜಜಾನ ಇತ್ಯಪಿ ನಿಗಮೋ ಭವತಿ ॥**

ಮತ್ತು ಇವರು ಈ ಶಬ್ದಕ್ಕೆ ಮತ್ತೊಂದು ಅರ್ಥವನ್ನು ಹೇಳುವರು. ಇಂದ್ರನು ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನು. ಇವುಗಳ ಮಧ್ಯದಲ್ಲಿ ಅಗ್ನಿಯನ್ನೂ ಸೃಷ್ಟಿಸಿದನು. ಆದುದರಿಂದ ದ್ರವಿಣೋದಾಃ ಎಂಬ ಶಬ್ದಕ್ಕೆ ಅಗ್ನಿಯೆಂದೂ ಹೇಳ ಬಹುದು ಎಂದು. ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ "ಅಶ್ಮನೋರಂತರಗ್ನಿಂ ಜಜಾನ" ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು.

**ಅಥಾಪ್ಯೃತುಯಾಜೇಷು ದ್ರವಿಣೋದಸಃ ಪ್ರವಾದಾ ಭವಂತಿ । ತೇಷಾಂ ಪುನಃ ಪಾತ್ರಸ್ಯೇಂದ್ರ-ಪಾನಮಿತಿ ಭವತಿ ॥ ಅಥಾಪ್ಯೇನಂ ಸೋಮಪಾನೇನ ಸ್ತೌತಿ । ಅಥಾಪ್ಯಾಹ ದ್ರವಿಣೋದಾಃ ಪಿಬತು ದ್ರವಿಣೋದಸ ಇತಿ ॥**

ಋತುಗಳನ್ನು ಉದ್ದೇಶಿಸಿ ಮಾಡುವ ಯಜ್ಞಗಳಲ್ಲಿ ಋತ್ವಿಜರ ಹಸ್ತದಲ್ಲಿರುವ ಪಾತ್ರೆಯಿಂದ ಇಂದ್ರನು ಸೋಮಪಾನ ಮಾಡುವನೆಂದು ಹೇಳಿರುವುದರಿಂದಲೂ ಇಂದ್ರನನ್ನು ಸೋಮಪಾನಸಂಬಂಧವಾದ ಮಂತ್ರಗಳಿಂದ ಸ್ತೋತ್ರಮಾಡು ವುದರಿಂದಲೂ, ಋತ್ವಿಜರನ್ನು ದ್ರವಿಣೋದಸರೆಂದು ಕರೆಯುವ ರೂಢಿ ಇದೆ. ಇದೆಲ್ಲವೂ ಕ್ರೌಷ್ಟುಕಿ ಎಂಬುವರ ಮತವು

**ಅಯಮೇವಾಗ್ನಿರ್ದ್ರವಿಣೋದಾ ಇತಿ ಶಾಕಪೂಣಿಃ । ಆಗ್ನೇಯೇಷ್ವೇವ ಹಿ ಸೂಕ್ತೇಷು ದ್ರವಿಣೋದಸಃ ಪ್ರವಾದಾ ಭವಂತಿ ॥ ದೇವಾ ಅಗ್ನಿಂ ಧಾರಯನ್ದ್ರವಿಣೋದಾಮಿತ್ಯಪಿ ನಿಗಮೋ ಭವತಿ ॥**

ಅಗ್ನಿಯೇ ದ್ರವಿಣೋದಾಃ ಎಂದು ಶಾಕಪೂರ್ಣಿಯವರ ಮತವು ; ಏಕೆಂದರೆ, ಅಗ್ನಿಸಂಬಂಧವಾದ ಸೂಕ್ತಗಳಲ್ಲಿ ಋತ್ವಿಜರು ಅಗ್ನಿಯನ್ನು ಸ್ತುತಿಸುವಾಗ ದ್ರವಿಣೋದಾಃ ಎಂಬ ಶಬ್ದವನ್ನು ಅಗ್ನಿಗೆ ವಿಶೇಷಣಪದವನ್ನಾಗಿ ಉಪ ಯೋಗಿಸುವರು.

**ಯಥೋ ಏತಸ್ಯ ಬಲಧನಯೋರ್ದಾತೃತಮ ಇತಿ ಸರ್ವಾಸು ದೇವತಾಸ್ವೈಶ್ವರ್ಯಂ ವಿದ್ಯತೇ । ಯಥೋ ಏತದೋಜಸೋ ಜಾತಮುತಮನ್ಯ ಏನಮಿತಿ ಜಾಹೇತ್ಯಯಮಪ್ಯಗ್ನಿ-ರೋಜಸಾ ಬಲೇನ ಮಥ್ಯಮಾನೋ ಜಾಯತೇ ತಸ್ಮಾದೇನಮಾಹ ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಂ ॥**

ಸಮಸ್ತ ದೇವತೆಗಳಲ್ಲಿಯೂ ಐಶ್ವರ್ಯವಿರುವುದು. ಆದುದರಿಂದ ಅಗ್ನಿಯೂ ಬಲ, ಧನ ಇವುಗಳನ್ನು ಕೊಡುವನು. ಬಲಧನವನ್ನು ಕೊಡುವುದರಿಂದ ಅಗ್ನಿಯನ್ನೂ ದ್ರವಿಣೋದಾಃ ಎಂದು ಹೇಳಬಹುದು. ಇದಲ್ಲದೆ ದ್ರವಿಣ ಶಬ್ದಕ್ಕೆ ಬಲವೆಂದು ಅರ್ಥವಿರುವುದಷ್ಟೆ. ಅಗ್ನಿಯನ್ನು ಉತ್ಪತ್ತಿಮಾಡುವಾಗ ಬಲವನ್ನು ಉಪಯೋಗಿಸಿ (ಬಲವಾಗಿ) ಮಥನ ಮಾಡುವುದರಿಂದ ಅಗ್ನಿಯು ಬಲದಿಂದ ಹುಟ್ಟಿದನೆಂದು ಹೇಳುವ ಪ್ರತೀತಿ ಇದೆ. ಆದುದರಿಂದಲೇ ಅಗ್ನಿಯನ್ನು ಸಹಸಸ್ಪುತ್ರಂ. (ಸಹಸಃ–ಬಲದ, ಪುತ್ರಂ–ಪುತ್ರನಾದ ಅಗ್ನಿಯನ್ನು) ಸಹಸಃ ಸೂನುಂ, ಸಹಸೋ ಯಹುಂ ಎಂಬ ಶಬ್ದಗಳಿಂದ ಸ್ತುತಿಸುವರು.

**ದ್ರ್ವನ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ ।**
**ಸಹಸಸ್ಪುತ್ರೋ ಅದ್ಭುತಃ ॥** (ಋ. ಸಂ. ೨ ೭-೬)

**ತ್ವಂ ಹ ಯದ್ಯವಿಷ್ಠ್ಯ ಸಹಸಃ ಸೂನವಾಹುತ ।**
**ಋತಾ ವಾ ಯಜ್ಞಿಯೋ ಭುವಃ ॥** (ಋ. ಸಂ. ೮-೭೫-೩)

**ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।**
**ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥** (ಋ. ಸಂ. ೧-೭೯-೪)

ಎಂಬ ಋಕ್ಕುಗಳಲ್ಲಿ ಕ್ರಮವಾಗಿ ಸಹಸಸ್ಪುತ್ರ-ಸಹಸಃ ಸೂನು, ಸಹಸೋ ಯಹು ಎಂಬ ಶಬ್ದಗಳು ಅಗ್ನಿಯನ್ನು ಸ್ತುತಿಸುವಾಗ ಉಪಯೋಗಿಸಲ್ಪಟ್ಟಿರುವುವು. ಆದುದರಿಂದ ಬಲಗಳನ್ನು ಇತರ ದೇವತೆಗಳು ಕೊಡುವವರಾದರೂ ಅಗ್ನಿಯೇ ವಿಶೇಷವಾಗಿ ದ್ರವಿಣೋದಾಃ ಎಂಬ ಶಬ್ದದಿಂದ ಪ್ರತಿಪಾದಿತನಾಗಿರುವನು.

ಇಲ್ಲಿ **ಬೃಹದ್ದೇವತಾವಾಕ್ಯಗಳನ್ನುದಹರಿಸಿ ಈ ವಿಶೇಷಣವು** ಮುಖ್ಯವಾಗಿ ಯಾವ ದೇವತೆಗೆ ಸಂಬಂಧಿಸಿದುದು, ಇದರಿಂದ ಆ ದೇವತೆಯ ಯಾವ ಯಾವ ಗುಣಗಳು ತಿಳಿಯುವುವು ಎಂದು ನೋಡೋಣ.

ಬೃಹದ್ದೇವತೆಯಲ್ಲಿ ಮೊದಲು **ಅಗ್ನಿಯೆಂಬ** ಶಬ್ದದ ನಿರ್ವಚನವನ್ನು ತಿಳಿಸಿ ಅನಂತರ **ದ್ರವಿಣೋದಾಃ** ಎಂಬ ವಿಶೇಷಣವು ಅಗ್ನಿಗೆ ಏತಕ್ಕಾಗಿ ಉಪಯೋಗಿಸಲ್ಪಟ್ಟಿದೆ ಎಂಬುದನ್ನು ವಿಮರ್ಶಿಸಿದೆ.

**ಜಾತೋ ಯದಗ್ರೇ ಭೂತಾನಾಂ ಅಗ್ರಣೀರಧ್ವರೇ ಚ ಯತ್ ।**
**ನಾಮ್ನಾ ಸಂನಯತೇ ವಾಂಗಂ ಸ್ತುತೋಽಗ್ನಿರಿತಿ ಸೂರಿಭಿಃ ।**
(ಬೃ. ದೇ. ೨-೨೪)

ಸಕಲ ಭೂತಗಳಿಗೂ ಪ್ರಥಮದಲ್ಲಿ ಉತ್ಪನ್ನನಾಗಿರುವುದರಿಂದಲೂ, ಯಜ್ಞಯಾಗಾದಿಗಳಲ್ಲಿ ನೇತೃವಾಗಿರುವುದರಿಂದಲೂ, ತಾನು ಯಾವ ವಸ್ತುಗಳಲ್ಲಿ ಪ್ರವೇಶಿಸಿದರೂ ಅದನ್ನು ತನ್ನಲ್ಲಿಯೇ ಲೀನವಾಗಿ ಮಾಡಿಕೊಳ್ಳುವುದರಿಂದಲೂ ಸಹ **ಅಗ್ನಿಯೆಂದು** ಋಷಿಗಳಿಂದ ಸ್ತುತನಾಗಿದ್ದಾನೆ. ಈ ನಿರ್ವಚನವು ನಿರುಕ್ತದಲ್ಲಿ ಹೇಳಿರುವ **ಅಗ್ರಣೀರ್ಭವತಿ ಅಗ್ರಂ ಯಜ್ಞೇಷು ಪ್ರಣೀಯತೇ, ಅಂಗಂ ನಯತಿ ಸನ್ನಮಮಾನಃ ।** (ನಿ. ೭-೧೪)ಎಂಬ ನಿರ್ವಚನಗಳಿಗೆ ಅನುರೂಪವಾಗಿದೆ. ಅಗ್ನಿಶಬ್ದವನ್ನು ವಿವರಿಸಿದನಂತರ, **ದ್ರವಿಣೋದಾಃ** ಎಂಬ ಶಬ್ದದ ನಿರ್ವಚನವನ್ನು ತಿಳಿಸುತ್ತಾ—

**ದ್ರವಿಣಂ ಧನಂ ಬಲಂ ವಾಪಿ ಪ್ರಾಯಚ್ಛದ್ಯೇನ ಕರ್ಮಣಾ ।**
**ತತ್ಕರ್ಮ ದೃಷ್ಟ್ವಾ ಕುತ್ಸಸ್ತು ಪ್ರಾಹೈನಂ ದ್ರವಿಣೋದಸಂ ॥**
(ಬೃ. ದೇ. ೨-೨೫)

ಉದಾರವಾಗಿ ಧನವನ್ನೂ ಬಲವನ್ನು ಕೊಡತಕ್ಕ ಅಗ್ನಿಯ ಕರ್ಮಗಳನ್ನು ಕುತ್ಸಋಷಿಯು ಗ್ರಹಿಸಿ ಅಗ್ನಿಯನ್ನು ಧನದ ಅಥವಾ ಬಲದ ದಾತನಾದ **ದ್ರವಿಣೋದಾಃ** ಎಂದು ಸ್ತುತಿಸಿರುವನು.

**ದ್ರವಿಣೋದಾ ದ್ರವಿಣಸಸ್ತುರಸ್ಯ ದ್ರವಿಣೋದಾಃ ಸನರಸ್ಯ ಪ್ರ ಯಂಸತ್ ।**
**ದ್ರವಿಣೋದಾ ವೀರವತೀಮಿಷಂ ನೋ ದ್ರವಿಣೋದಾ ರಾಸತೇ ದೀರ್ಘಮಾಯುಃ ॥**
(ಋ. ಸಂ ೧-೯೬-೮)

ಎಂಬ ಋಕ್ಕಿನಲ್ಲಿರುವ ಕುತ್ಸಕೃತವಾದ ಅಗ್ನಿಪ್ರಶಂಸೆಯನ್ನು ಸೂಚಿಸಿ ಪುನಃ ಈ ಸೂಚನೆಯನ್ನು ಅಗ್ನಿದೇವತಾಕವಾದದ್ದೇ ಹೊರತು ಇತರ ದೇವತೆಗಳನ್ನು ಉದ್ದೇಶಿಸಿದುದಲ್ಲ ಎಂದು ಸಮರ್ಥಿಸಿದೆ.

ಅಯಂ ಹಿ ದ್ರವಿಣೋದೋಽಗ್ನಿರಯಂ ದಾತಾ ಬಲಸ್ಯ ಹಿ ।
ಜಾಯತೇ ಚ ಬಲೇನಾಯಂ ಮಥ್ಯಕೃತ್ಯೃಷಿಭಿರಧ್ವರೇ ॥
ದ್ರವಿಣೋದೋಽಗ್ನಿರೇವಾಯಂ ದ್ರವಿಣೋದಾಸ್ತದೋಚ್ಯತೇ ।
ಆಗ್ನೇಯೋಷ್ವೇವ ದೃಶ್ಯಂತೇ ಪ್ರವಾದಾ ದ್ರವಿಣೋದಸಃ ॥

(ಬೃ. ದೇ. ೩-೬೧ ; ೩-೬೫)

ಧನದಾತನೂ, ಬಲದಾತನೂ, ಬಲದಿಂದ ಉತ್ಪನ್ನನೂ ಆದುದರಿಂದಲೇ ಅಗ್ನಿಗೆ ದ್ರವಿಣೋದಾಃ ಎಂಬ ಪ್ರಶಂಸೆಯು ಸಲ್ಲುವುದು. ಆದುದರಿಂದ ಈ ವಿವರಣವು ಅಗ್ನಿದೇವತಾಕವೇ ಆಗಿರುವುದು ಎಂದು ಬೃಹದ್ದೇವತಾಕಾರರು ಸಮರ್ಥಿಸಿರುವರು.

॥ ಸಂಹಿತಾಪಾಠಃ ॥

ಆ ದೇವಾನಾಮಪಿ ಪಂಥಾಮಗನ್ಮ ಯಚ್ಛಕ್ನವಾಮ ತದನು ಪ್ರವೋಳ್ಹುಂ ।
ಅಗ್ನಿರ್ವಿದ್ವಾನ್ತ್ಸ ಯಜಾತ್ಸೇದು ಹೋತಾ ಸೋ ಅಧ್ವರಾನ್ತ್ಸ
ಋತೂನ್ಕಲ್ಪಯಾತಿ ॥ ೩ ॥

॥ ಪದಪಾಠಃ ॥

ಆ । ದೇವಾನಾಂ । ಅಪಿ । ಪಂಥಾಂ । ಅಗನ್ಮ । ಯತ್ । ಶಕ್ನವಾಮ । ತತ್ । ಅನು । ಪ್ರऽವೋಳ್ಹುಂ ।
ಅಗ್ನಿಃ । ವಿದ್ವಾನ್ । ಸಃ । ಯಜಾತ್ । ಸಃ । ಇತ್ । ಊಂ ಇತಿ । ಹೋತಾ । ಸಃ । ಅಧ್ವರಾನ್ । ಸಃ ।
ಋತೂನ್ । ಕಲ್ಪಯಾತಿ ॥ ೩ ॥

॥ ಸಾಯಣಭಾಷ್ಯಂ ॥

ದರ್ಶಪೂರ್ಣಮಾಸಾತಿಪತ್ತ್ಯಾದ್ಯೌ ನಿಮಿತ್ತೇ ಪಾಥಿಕೃತೀಷ್ಟಿಃ ಕರ್ತವ್ಯಾ । ತತ್ರಾ ದೇವಾನಾಮಿತ್ಯೇಷಾ ಯಾಜ್ಯಾ । ಸೂತ್ರಿತಂ ಚ । ವೇತ್ಥಾ ಹಿ ವೇಧೋ ಅಧ್ವನ ಆ ದೇವಾನಾಮಪಿ ಪಂಥಾಮಗನ್ಮ । ಆ. ೩.೧೦ । ಇತಿ ॥ ಪ್ರಾಯಣೀಯಾಯಾಮಪ್ಯೇಷೈವ ಯಾಜ್ಯೋದಯನೀಯಾಯಾಂ ಸೈವಾನುವಾಕ್ಯಾ । ಸೂತ್ರಿತಂ ಚ । ಅಗ್ನೇ ನಯ ಸುಪಥಾ ರಾಯೇ ಅಸ್ಮಾನಾ ದೇವಾನಾಮಪಿ ಪಂಥಾಮಗನ್ಮ । ಆ. ೪-೩ । ಇತಿ । ವಿಪರೀತಾಸ್ತು ಯಾಜ್ಯಾನುವಾಕ್ಯಾ ಇತಿ ॥

ದೇವಾನಾಂ ದೇವಲೋಕಾದಿಗಮನಸಾಧನಂ ದೇವಾನಾಂ ಸ್ವಭೂತಂ ಪಂಥಾಂ ಪಂಥಾನಂ ತಮಪಿ ವೈದಿಕಮಾರ್ಗಂ ವಯಮಾಗನ್ಮ । ಆಗತವಂತೋ ಭವೇಮ । ಯೇನ ದೇವಾನ್ಪ್ರಾಪ್ನುಮಃ ।

ತಥಾ ವಯಂ ಯತ್ಕರ್ಮಾನುಷ್ಠಾತುಂ ಶಕ್ನವಾಮ ಶಕ್ನುಮಃ ಸಮರ್ಥಾ ಭವಾಮಃ ತತ್ಕರ್ಮಾನುಕ್ರಮೇಣ ಪ್ರವೋಳ್ಹುಂ ಪ್ರಕರ್ಷೇಣ ವೋಢುಂ ಸಮಾಪ್ತಿಂ ಪ್ರಾಪಯಿತುಂ ಸಮರ್ಥಾ ಭವೇಮ! ಅನಂತರಂ ವಿದ್ವಾಂಸ್ತಂ ಪಂಥಾನಂ ಜಾನಾನಃ ಸೋಽಗ್ನಿರ್ಯಜಾತ್ । ದೇವಾನ್ಯಜತು । ಸೇದು ಸ ಏವ ಖಲು ಹೋತಾ ಮನುಷ್ಯಾಣಾಂ ಹೋಮನಿಷ್ಪಾದಕಃ । ತತಃ ಸ ಏವಾಗ್ನಿರಧ್ವರಾನ್ಯಜ್ಞಾನ್ ಋತೂನ್ ಕಾಲಾನ್ಕಲ್ಪಯಾತಿ । ಕಲ್ಪಯತು । ಕರೋತು ॥

। ಪ್ರತಿಪದಾರ್ಥ ।

**ದೇವಾನಾಂ**—ದೇವತೆಗಳ । **ಪಂಥಾಂ ಅಪಿ**—ಉತ್ತಮವಾದ ಮಾರ್ಗಗಳನ್ನು । **ಆ ಅಗನ್ಮ**—ನಾವು ಅನುಸರಿಸೋಣ । **ಯತ್**—ಯಾವ ಕರ್ಮವನ್ನಾಚರಿಸಲು । **ಶಕ್ನವಾಮ** ನಾವು ಶಕ್ತರಾಗಿದ್ದೇವೆಯೋ । **ತತ್-ಅನು** ಆ ಕರ್ಮವನ್ನು । **ಪ್ರ ವೋಳ್ಹುಂ**—ಉತ್ತಮವಾಗಿ ನಿರ್ವಹಿಸಲು ಶಕ್ತರಾಗೋಣ । **ವಿದ್ವಾನ್**—ಸನ್ಮಾರ್ಗವನ್ನರಿತ । **ಸಃ ಅಗ್ನಿಃ**—ಅದೇ ಅಗ್ನಿಯು । **ಯಜಾತ್**—ದೇವತೆಗಳನ್ನು ಪೂಜಿಸಲಿ । **ಸಃ ಇತ್**—ಅದೇ ಅಗ್ನಿಯು **ಹೋತಾ**—ಮಾನವರ ಯಜ್ಞಸಂಪಾದಕನು । **ಸಃ**—ಅದೇ ಅಗ್ನಿಯು । **ಅಧ್ವರಾನ್**-ಯಜ್ಞಗಳನ್ನೂ । **ಋತೂನ್**—ಯಜ್ಞಕಾಲಗಳನ್ನೂ । **ಕಲ್ಪಯಾತಿ**—ನಿಯಮಿಸಲಿ.

। ಭಾವಾರ್ಥ ।

ದೇವತೆಗಳ ಉತ್ತಮವಾದ ಮಾರ್ಗಗಳನ್ನು ನಾವು ಅನುಸರಿಸೋಣ. ಯಾವ ಕರ್ಮವನ್ನಾಚರಿಸಲು ನಾವು ಶಕ್ತರಾಗಿದ್ದೇವೆಯೋ, ಆ ಕರ್ಮವನ್ನು ಉತ್ತಮವಾಗಿ ನಿರ್ವಹಿಸಲು ಶಕ್ತರಾಗೋಣ. ಸನ್ಮಾರ್ಗವನ್ನರಿತ ಅದೇ ಅಗ್ನಿಯು ಮಾನವರ ಯಜ್ಞಸಂಪಾದಕನಾಗಿದ್ದಾನೆ. ಅದೇ ಅಗ್ನಿಯು ಯಜ್ಞಗಳನ್ನೂ ಯಜ್ಞಕಾಲಗಳನ್ನೂ ನಿಯಮಿಸಲಿ.

## English Translation

May we pursue the path that leads to the gods to convey that (worship) which we may be able (to offer). May that wise Agni minister ; for He verily is the ministrant priest, and let him prescribe the ceremonies and the seasons.

॥ ವಿಶೇಷವಿಷಯಗಳು ॥

ದರ್ಶಪೂರ್ಣಮಾಸಯಾಗಗಳಲ್ಲಿ ಪಥಿಕೃದಿಷ್ಟಿಯನ್ನು ಮಾಡಬೇಕು. ಆಗ ಆ ದೇವಾನಾಂ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ- **ವೇತ್ಥಾ ಹಿ ವೇಧೋ ಅಧ್ವನ ಆ ದೇವಾನಾಮಪಿ ಪಂಥಾಮಗನ್ಮ** ಎಂಬ ಸೂತ್ರದಿಂದ (ಆ. ೩ ೧೦) ವಿವೃತವಾಗಿರುವುದು. ಮತ್ತು ಪ್ರಾಯಣೀಯೇಷ್ಟಿಯಲ್ಲಿ ಅಗ್ನಿಯನ್ನುದ್ದೇಶಿಸಿ ಮಾಡುವ ಹೋಮದಲ್ಲಿ ಈ ಋಕ್ಕನ್ನೇ ಯಾಜ್ಯಾಮಂತ್ರವನ್ನಾಗಿಯೂ, ಉದಯನೀಯೇಷ್ಟಿಯಲ್ಲಿ **ಅನುವಾಕ್ಯಾ**ಮಂತ್ರವನ್ನಾಗಿಯೂ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಅಗ್ನೇ ನಯ ಸುಪಥಾ ರಾಯೇ ಅಸ್ಮಾನಾ ದೇವನಾಮಪಿ ಪಂಥಾಮಗನ್ಮ** ಎಂಬ ಸೂತ್ರದಿಂದ (ಆ. ೪-೩) ವಿವೃತ

ವಾಗಿರುವುದು. ಎಂದರೆ ಪ್ರಾಯಣೀಯೋದಯನೀಯೇಷ್ಟಿಗಳಲ್ಲಿ ಈ ಮಂತ್ರವನ್ನು ವ್ಯತ್ಯಸ್ತಮಾಡಿ ಒಂದರಲ್ಲಿ ಯಾಜ್ಯಾಮಂತ್ರವನ್ನಾಗಿಯೂ ಮತ್ತೊಂದರಲ್ಲಿ ಅನುವಾಕ್ಯಾಮಂತ್ರವನ್ನಾಗಿಯೂ ಪಠಿಸಬೇಕು.

। ಸಂಹಿತಾಪಾಠಃ ।

ಯದ್ವೋ ವಯಂ ಪ್ರಮಿನಾಮ ವ್ರತಾನಿ ವಿದುಷಾಂ ದೇವಾ ಅವಿದುಷ್ಟರಾಸಃ ।
ಅಗ್ನಿಷ್ಟದ್ವಿಶ್ವಮಾ ಪೃಣಾತಿ ವಿದ್ವಾನ್ಯೇಭಿರ್ದೇವಾँ ಋತುಭಿಃ ಕಲ್ಪಯಾತಿ ॥

। ಪದಪಾಠಃ ॥

ಯತ್ । ವಃ । ವಯಂ । ಪ್ರऽಮಿನಾಮ । ವ್ರತಾನಿ । ವಿದುಷಾಂ । ದೇವಾಃ । ಅವಿದುಃऽತರಾಸಃ ।
ಅಗ್ನಿಃ । ತತ್ । ವಿಶ್ವಂ । ಆ । ಪೃಣಾತಿ । ವಿದ್ವಾನ್ । ಯೇಭಿಃ । ದೇವಾನ್ । ಋತುऽಭಿಃ ।
ಕಲ್ಪಯಾತಿ ॥ ೪ ॥

। ಸಾಯಣಭಾಷ್ಯಂ ।

ವ್ರತಾತಿಪತ್ತೌ ವ್ರಾತಪತೀೇಷ್ಟಿಃ ಕರ್ತವ್ಯಾ । ತತ್ರ ಯದ್ವೋ ವಯಮಿತ್ಯೇಷಾ ಯಾಜ್ಯಾ । ಸೂತ್ರಿತಂ ಚ । ತ್ವಮಗ್ನೇ ವ್ರತಪಾ ಅಸಿ ಯದ್ವೋ ವಯಂ ಪ್ರಮಿನಾಮ ವ್ರತಾನಿ । ಆ. ೩-೧೩ । ಇತಿ ॥

ಹೇ ದೇವಾಃ ಅವಿದುಷ್ಟರಾಸೋऽವಿದ್ವತ್ತರಾ ಅತ್ಯಂತಮಜಾನಂತೋ ವಯಂ ಯುಷ್ಮಾಕಂ ಯತ್ ಯತ್ಕಿಂಚಿದ್ವ್ರತಾನಿ ಕರ್ಮಾಣಿ ವಿದುಷಾಂ ಭವತಾಂ ಜಾನತಾಮೇವ ಪ್ರಮಿನಾಮ ಪ್ರಹಿಂಸಿತವಂತಃ । ಭವತ್ಸು ಜಾನತ್ಸು ನಿತ್ಯನೈಮಿತ್ತಿಕಕರ್ಮಾಣಿ ವಿಲೋಪಿತವಂತ ಇತ್ಯರ್ಥಃ । ವಿದ್ವಾನೇತತ್ಸರ್ವಂ ಜಾನಾನೋऽಗ್ನಿಃ ಸ್ವಿಷ್ಟಕೃತ್ತದ್ವಿಶ್ವಂ ಸರ್ವಂ ಕರ್ಮಜಾತಮಾ ಪೃಣಾತಿ । ಆಪೂರಯತು । ಫಲಸಹಿತಂ ಕರೋತ್ವಿತ್ಯರ್ಥಃ । ಕೇನಾಪೂರಯತು ತತ್ರಾಹ । ಯೇಭಿರ್ಋತುಭಿರ್ಯಾಗಯೋಗ್ಯೈಃ ಕಾಲೈರ್ದೇವಾನ್ಕಲ್ಪಯಾತಿ ಕಲ್ಪಯತಿ ಕರ್ಮಾಂಗಭಾವಾಯ ಸಮರ್ಥಯತಿ ತೈರಾಪೂರಯತು ॥

। ಪ್ರತಿಪದಾರ್ಥ ।

**ದೇವಾಃ**—ಎಲೈ ದೇವತೆಗಳೇ, । **ಅವಿದುಷ್ಟರಾಸಃ**—ಅಜ್ಞಾನದಿಂದ ಕೂಡಿದ । **ವಯಂ**—ನಾವು । **ವಃ**—ನಿಮ್ಮ ವಿಷಯದಲ್ಲಿ । **ಯತ್ ವ್ರತಾನಿ**—ಯಾವ ಕರ್ಮಗಳನ್ನೇ ಆಗಲಿ । **ವಿದುಷಾಂ**—ನಿಮ್ಮ ಗೋಚರಕ್ಕೆ ಬಂದಂತೆಯೇ । **ಪ್ರಮಿನಾಮ**—ಹಿಂಸಿಸುವೆವೋ (ಆಚರಿಸುವುದಿಲ್ಲವೋ) । **ವಿದ್ವಾನ್**—ಇವನ್ನು ತಿಳಿದವನಾದ । **ಅಗ್ನಿಃ**—ಅಗ್ನಿಯು । **ಯೇಭಿಃ**—ಯಾವ । **ಋತುಭಿಃ**—ಯಾಗಯೋಗ್ಯವಾದ ಕಾಲಗಳಿಂದ । **ದೇವಾನ್**—ದೇವತೆಗಳನ್ನು । **ಕಲ್ಪಯಾತಿ**—ಕರ್ಮಭಾಗಿಗಳಾಗಿ ಮಾಡುವನೋ ।

ತತ್ ವಿಶ್ವಂ—ಆ ಎಲ್ಲಾ ಸಕಾಲಿಕವಾದ ಕರ್ಮಗಳನ್ನೂ । ಆ ಪೃಣಾತಿ—ನಿರ್ವಹಿಸಿ ಫಲಯೋಗ್ಯವಾಗುವಂತೆ ಮಾಡಲಿ.

। ಭಾವಾರ್ಥ ।

ಎಲೈ ದೇವತೆಗಳೇ, ಅಜ್ಞಾನದಿಂದ ಕೂಡಿದ ನಾವು ನಿಮ್ಮ ವಿಷಯದಲ್ಲಿ ಯಾವ ಕರ್ಮಗಳನ್ನೇ ಆಗಲಿ ನಿಮ್ಮ ಮುಂದೆಯೇ ಆಚರಿಸದೇ ಬಿಟ್ಟುಬಿಡುವೆವೋ ಆ ಕರ್ಮಗಳನ್ನು ಅಗ್ನಿಯು ನಮ್ಮ ಅಜ್ಞಾನವನ್ನು ತಿಳಿದವನಾಗಿಯೂ, ಸಕಲ ಕರ್ಮರಹಸ್ಯವನ್ನು ಅರಿತವನಾಗಿಯೂ ಆಯಾ ಯೋಗ್ಯವಾದ ಕಾಲಕ್ಕನುಗುಣವಾಗಿ ದೇವತೆಗಳನ್ನು ಕರ್ಮಭಾಗಿಗಳನ್ನಾಗಿ ಮಾಡುತ್ತ ಸಕಲ ಕರ್ಮಗಳನ್ನೂ ಸಫಲವಾಗುವಂತೆ ಮಾಡಲಿ.

## English Translation

O gods, when we who are most ignorant neglect the offices adderssed to you who are wise, may the wise Agni complete the whole by (appointing) those seasons by which he regulates the worship of the gods.

॥ ವಿಶೇಷವಿಷಯಗಳು ॥

ವ್ರಾತಪತೀಷ್ಟಿಯಲ್ಲಿ ಯದ್ವೋ ವಯಂ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ತ್ವಮಗ್ನೇ ವ್ರತಪಾ ಅಸಿ ಯದ್ವೋ ವಯಂ ಪ್ರಮಿನಾಮ ವ್ರತಾನಿ ಎಂಬ ಸೂತ್ರದಿಂದ (ಆ. ೩-೧೩) ವಿವೃತವಾಗಿರುವುದು.

ಯಜ್ಞದಲ್ಲಿ ಅಜ್ಞಾನದಿಂದ ಸಂಭವಿಸಬಹುದಾದ ಮಂತ್ರಲೋಪ, ಕ್ರಿಯಾಲೋಪ ಮೊದಲಾದ ದೋಷಗಳನ್ನು ಪರಿಹರಿಸಿ ಯಜ್ಞವನ್ನು ಸಾಂಗವಾಗಿ ನೆರವೇರುವಂತೆ ಮಾಡಬೇಕೆಂದು ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

॥ ಸಂಹಿತಾಪಾಠಃ ॥

ಯತ್ಪಾಕತ್ರಾ ಮನಸಾ ದೀನದಕ್ಷಾ ನ ಯಜ್ಞಸ್ಯ ಮನ್ವತೇ ಮರ್ತ್ಯಾಸಃ ।
ಅಗ್ನಿಷ್ಟದ್ಧೋತಾ ಕ್ರತುವಿದ್ವಿಜಾನನ್ಯಜಿಷ್ಠೋ ದೇವಾಁ ಋತುಶೋ
ಯಜಾತಿ ॥ ೫ ॥

॥ ಪದಪಾಠಃ ॥

ಯತ್ । ಪಾಕಽತ್ರಾ । ಮನಸಾ । ದೀನಽದಕ್ಷಾಃ । ನ । ಯಜ್ಞಸ್ಯ । ಮನ್ವತೇ । ಮರ್ತ್ಯಾಸಃ ।
ಅಗ್ನಿಃ । ತತ್ । ಹೋತಾ । ಕ್ರತುಽವಿತ್ । ವಿಽಜಾನನ್ । ಯಜಿಷ್ಠಃ । ದೇವಾನ್ । ಋತುಽಶಃ ।
ಯಜಾತಿ ॥ ೫ ॥

॥ ಸಾಯಣಭಾಷ್ಯಂ ॥

ದೀನದಕ್ಷಾ ದೀನಬಲಾ ದಿನೋತ್ಸಾಹಾ ವಾ ಮರ್ತ್ಯಾಸೋ ಮರ್ತ್ಯಾ ಮನುಷ್ಯಾ ಋತ್ವಿಜಃ ಪಾಕತ್ರಾ ಪಾಕೇನ ॥ ಬಹುಲಗ್ರಹಣಾದಸ್ಮಾದಪಿ ತೃತೀಯಾರ್ಥೇ ತ್ರಾಪ್ರತ್ಯಯಃ ॥ ಪಾಕೇನ ಪಕ್ತವ್ಯೇನ ವಿಶಿಷ್ಟ-ಜ್ಞಾನರಹಿತೇನಾಲ್ಪೇನ ವಾ ಮನಸಾ ಯುಕ್ತಾಃ ಸಂತೋ ಯಜ್ಞಸಂಬಂಧಿ ಯತ್ಕರ್ಮ ನ ಮನ್ವತೇ ನ ಜಾನಂತಿ ತತ್ಕರ್ಮ ವಿಜಾನನ್ ಹೋತಾ ದೇವಾನಾಮಾಹ್ವಾತಾ ಹೋಮನಿಷ್ಪಾದಕೋ ವಾ ಕ್ರತುವಿತ್ ಕರ್ಮವಿದ್ಯಜಿಷ್ಠೋ ದೇವಾನಾಮತಿಶಯೇನ ಯಷ್ಟಾ ಸೋಽಗ್ನಿಃ ಸ್ವಿಷ್ಟಕೃದೃತುಶಃ ಋತಾವೃತೌ ಸ್ವೇ ಸ್ವೇ ಯಾಗಯೋಗ್ಯೇ ಕಾಲೇ ದೇವಾನ್ಯಜಾತಿ । ಯಜತು । ಹವಿರ್ಭಿಃ ಪೂಜಯತು ॥

॥ ಪ್ರತಿಪದಾರ್ಥ ॥

**ದೀನದಕ್ಷಾಃ**—ಕೃಶವಾದ ಬಲವುಳ್ಳವರೂ । **ಮರ್ತ್ಯಾಸಃ**—ಮಾನವರೂ ಆದ ಋತ್ವಿಕ್ಕುಗಳು । **ಪಾಕತ್ರಾ**—ಪರಿಪಕ್ವವಿಲ್ಲದ । **ಮನಸಾ**—ಮನಸ್ಸಿನಿಂದ ಕೂಡಿದವರಾಗಿ । **ಯಜ್ಞಸ್ಯ ಯತ್**—ಮಾಡಬೇಕಾದ ಯಾವ ಯಾಗ ಕರ್ಮವನ್ನು । **ನ ಮನ್ವತೇ**—ಅರಿಯುವುದಿಲ್ಲವೋ । **ತತ್**—ಆಯಾ ಕರ್ಮವನ್ನು । **ವಿಜಾನನ್**—ಅರಿತವನಾಗಿ । **ಹೋತಾ**—ಹೋತೃರೂಪನೂ । **ಕ್ರತುವಿತ್**—ಕರ್ಮವನ್ನರಿತವನೂ । **ಯಜಿಷ್ಠಃ**—ಅತ್ಯಂತ ಪೂಜ್ಯನೂ ಆದ । **ಅಗ್ನಿಃ**—ಅಗ್ನಿಯು । **ಋತುಶಃ**—ಆಯಾ ಕಾಲಕ್ಕನುಸಾರವಾಗಿ । **ದೇವಾನ್**—ದೇವತೆಗಳನ್ನು । **ಯಜಾತಿ**—ಪೂಜಿಸಲಿ.

॥ ಭಾವಾರ್ಥ ॥

ಕೃಶವಾದ ಬಲವುಳ್ಳವರೂ, ಮಾನವರೂ ಆದ ಋತ್ವಿಕ್ಕುಗಳು ಪರಿಪಕ್ವವಿಲ್ಲದ ಮನಸ್ಸಿನಿಂದ ಕೂಡಿದವರಾಗಿ ಮಾಡಬೇಕಾದ ಯಾವ ಯಾಗಕರ್ಮವನ್ನು ಅರಿಯುವುದಿಲ್ಲವೋ ಆಯಾ ಕರ್ಮವನ್ನು ಅರಿತವನಾಗಿ ಹೋತೃರೂಪನೂ, ಕರ್ಮವನ್ನರಿತವನೂ, ಅತ್ಯಂತ ಪೂಜ್ಯನೂ ಆದ ಅಗ್ನಿಯು ಆಯಾ ಕಾಲಕ್ಕನುಸಾರವಾಗಿ ದೇವತೆಗಳನ್ನು ಪೂಜಿಸಲಿ.

## English Translation

Since men of feeble energies, with mind yet immature, are unaquaind with (the ritual of) the sacrifice, may Agni, the invoker (of the gods), e skilled in rites, well knowing (what is to be done), the best offerer, fer worship according to the fit season to the gods-

॥ ಸಂಹಿತಾಪಾಠಃ ॥

ವಿಶ್ವೇಷಾಂ ಹ್ಯಧ್ವರಾಣಾಮನೀಕಂ ಚಿತ್ರಂ ಕೇತುಂ ಜನಿತಾ ತ್ವಾ ಜಜಾನ।
ಸ ಆ ಯಜಸ್ವ ನೃವತೀರನು ಕ್ಷಾಃ ಸ್ಪಾರ್ಹಾ ಇಷಃ ಕ್ಷುಮತೀರ್ವಿಶ್ವ-
ಜನ್ಯಾಃ ॥ ೬ ॥

॥ ಪದಪಾಠಃ ॥

ವಿಶ್ವೇಷಾಂ । ಹಿ । ಅಧ್ವರಾಣಾಂ । ಅನೀಕಂ । ಚಿತ್ರಂ । ಕೇತುಂ । ಜನಿತಾ । ತ್ವಾ । ಜಜಾನ ।

ಸಃ । ಆ । ಯಜಸ್ವ । ನೃಽವತೀಃ । ಅನು । ಕ್ಷಾಃ । ಸ್ಪಾರ್ಹಾಃ । ಇಷಃ । ಕ್ಷುಽಮತೀಃ । ವಿಶ್ವಽಜನ್ಯಾಃ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವಿಶ್ವೇಷಾಂ ಸರ್ವೇಷಾಮಧ್ವರಾಣಾಂ ಯಜ್ಞಾನಾಮನೀಕಂ ಮುಖಂ ಪ್ರಧಾನಂ ಚಿತ್ರಂ ಚಾಯನೀಯಂ ನಾನಾರೂಪಂ ಕೇತುಂ ಪ್ರಜ್ಞಾಪಕಂ ತಾ ತ್ವಾಂ ಜನಿತಾ ಜನಯಿತಾ ಪ್ರಜಾಪತಿರ್ಯಜಮಾನೋ ವಾ ಜಜಾನ । ಜನಯಾಮಾಸ । ಉತ್ಪಾದಿತಃ ಸ ತ್ವಂ ನೃವತೀರ್ದಾಸಾದಿಗುಣಯುಕ್ತಾಃ ಕ್ಷಾಃ । ಪೃಥಿವೀನಾಮೈತತ್ । ಕ್ಷಯಂತ್ಯತ್ರೇತಿ ಕ್ಷಾ ಭೂಮಿಃ । ಅನ್ವಾ ಯಜಸ್ವ । ಅನುಪ್ರಯಚ್ಛ । ಯದ್ವಾ । ನೃವತೀರ್ನೃಭಿಃ ಸಂಸ್ಕೃತಾನಿ ಕ್ಷಾ ಅನು ಪೃಥಿವೀಂ ವೇದಿಲಕ್ಷಣಾಮನುಗತಾನಿ ವೇದ್ಯಾಮಾಸಾದಿತಾನಿ ಸ್ಪಾರ್ಹಾಃ ಸ್ಪೃಹಣೀಯಾನಿ ಕ್ಷುಮತೀಃ ಸ್ತುತಿಮಂತ್ರಲಕ್ಷಣಶಬ್ದವಂತಿ ವಿಶ್ವಜನ್ಯಾಃ ಸರ್ವಜನಹಿತಾನಿ ವೃಷ್ಟ್ಯನ್ನಹೇತುತ್ವಾತ್ ನಾನೀಷೋಽನ್ನಾನಿ ಹವಿರ್ಲಕ್ಷಣಾನಿ ಯಜಸ್ವ । ದೇವೇಭ್ಯಃ ಪ್ರಯಚ್ಛ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) ವಿಶ್ವೇಷಾಂ ಹಿ—ಸಮಸ್ತವಾದ । ಅಧ್ವರಾಣಾಂ—ಯಾಗಗಳಿಗೂ । ಅನೀಕಂ—ಪ್ರಧಾನನೂ । ಚಿತ್ರಂ—ಆಕರ್ಷಕನೂ । ಕೇತುಂ—ಪ್ರಜ್ಞಾಪಕನೂ ಆದ । ತ್ವಾ—ನಿನ್ನನ್ನು । ಜನಿತಾ—ಸೃಷ್ಟಿಕರ್ತನಾದ ಪ್ರಜಾಪತಿಯು । ಜಜಾನ—ಉತ್ಪನ್ನ ಮಾಡಿದನು ಸಃ—ಅಂತಹ ನೀನು । ನೃವತೀಃ—ಪುತ್ರಾದಿಗಳಿಂದ ಕೂಡಿದ । ಕ್ಷಾಃ—ಭೂಮಿಯನ್ನು । ಅನು ಆ ಯಜಸ್ವ—ಒದಗಿಸಿಕೊಡು । ಸ್ಪಾರ್ಹಾಃ—ಆಕರ್ಷಕವಾದವೂ । ಕ್ಷುಮತೀಃ—ಸ್ತುತಿರೂಪವಾದ ಶಬ್ದವುಳ್ಳವೂ । ವಿಶ್ವಜನ್ಯಾಃ—ಸಕಲ ಜನರಿಗೂ ಹಿತವಾದವೂ ಆದ । ಇಷಃ—ಅನ್ನಗಳನ್ನೂ ಒದಗಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಸಕಲ ಯಾಗಗಳಿಗೂ ಪ್ರಧಾನನೂ, ಆಕರ್ಷಕನೂ, ಪ್ರಜ್ಞಾಪಕನೂ ಆದ ನಿನ್ನನ್ನು ಸೃಷ್ಟಿಕರ್ತನಾದ ಪ್ರಜಾಪತಿಯು ಉತ್ಪನ್ನಮಾಡಿದನು. ಅಂತಹ ನೀನು ನಮಗೆ ಪುತ್ರಾದಿಗಳಿಂದ ಕೂಡಿದ ಭೂಮಿಯನ್ನು ಕೊಡು. ಆಕರ್ಷಕವಾದವೂ, ಸ್ತುತಿರೂಪವಾದ ಶಬ್ದದಿಂದ ಕೂಡಿದವೂ ಸಕಲ ಜನರಿಗೂ ಹಿತವಾದವೂ ಆದ ಹವಿಸ್ಸುಗಳನ್ನು ದೇವತೆಗಳಿಗೆ ಒದಗಿಸು.

## English Translation

The progenitor has engendered you the chief of all sacrifices, variegated, illuminating (all); offer (to the gods) the desirable all-sustaining praise-accompanied viands growing upon man-occupied earth.

॥ ವಿಶೇಷವಿಷಯಗಳು ॥

**ಜನಿತಾ ತ್ವಾ ಜಜಾನ— ಪ್ರಜಾಪತಿರ್ಯಜಮಾನೋ ವಾ ಜನಯಾಮಾಸ** । ಅಗ್ನಿಯಾದ ನಿನ್ನನ್ನು ಪ್ರಜಾಪತಿಯು (ಬ್ರಹ್ಮನು) ಸೃಷ್ಟಿಸಿದನು ಅಥವಾ ಪಾರ್ಥಿವಾಗ್ನಿ (ಯಜ್ಞಾಗ್ನಿ) ರೂಪದಿಂದಿರುವ ನಿನ್ನನ್ನು ಯಜ್ಞ ಮಾಡುವ ಯಜಮಾನನು ಋತ್ವಿಕ್ಕುಗಳ ಸಹಾಯದಿಂದ ಅರಣಿಗಳಲ್ಲಿ ಕಡೆದು ಉತ್ಪನ್ನನಾಗುವಂತೆ ಮಾಡಿದನು ಎಂದಭಿಪ್ರಾಯವು.

**ಸಃ ನೃವತೀಃ ಕ್ಷಾಃ ಅನು ಯಜಸ್ವ— ಸ ತ್ವಂ ದಾಸಾದಿಯುಕ್ತಾಃ ಭೂಮಿಃ ಅನುಪ್ರಯಚ್ಛ** ಎಲೈ ಅಗ್ನಿಯೇ ನೀನು ನಮಗೆ ಭೃತ್ಯಾದಿಗಳನ್ನೂ ಭೂಮಿಯನ್ನೂ ಒದಗಿಸಿಕೊಡು ಅಥವಾ ಭೃತ್ಯಾದಿಗಳಿಂದ ಚೆನ್ನಾಗಿ ಸುಸಂಸ್ಕೃತವಾದ ಎಂದರೆ ಉತ್ತು, ಬಿತ್ತಿ ಹದಗೊಳಿಸಲ್ಪಟ್ಟ ಮತ್ತು ಸಸ್ಯಾದಿಗಳಿಂದ ಸಮೃದ್ಧವಾದ ಭೂಮಿಯನ್ನು (ಹೊಲ, ಗದ್ದೆಗಳನ್ನು) ಒದಗಿಸಿಕೊಡು.

**ಸ್ಪಾರ್ಹಾ ಇಷಃ ಕ್ಷುಮತೀರ್ವಿಶ್ವಜನ್ಯಾಃ**— ಸರ್ವಜನರಿಗೂ ಹಿತಕರವೂ ಅಪೇಕ್ಷಣೀಯವೂ ಆದ ಮತ್ತು ಸ್ತುತ್ಯಾದಿಗಳಿಂದ ಪ್ರಾರ್ಥಿತವಾದ ಅನ್ನಾದ್ಯಾಹಾರಗಳನ್ನು ಒದಗಿಸಿಕೊಡು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ ।
ಪಂಥಾಮನು ಪ್ರವಿದ್ವಾನ್ಪಿತೃಯಾಣಂ ದ್ಯುಮದಗ್ನೇ ಸಮಿಧಾನೋ ವಿ ಭಾಹಿ ॥ ೭ ॥

॥ ಪದಪಾಠಃ ॥

ಯಂ । ತ್ವಾ । ದ್ಯಾವಾಪೃಥಿವೀ ಇತಿ । ಯಂ । ತ್ವಾ । ಆಪಃ । ತ್ವಷ್ಟಾ । ಯಂ । ತ್ವಾ । ಸುಽಜನಿಮಾ ಜಜಾನ ।
ಪಂಥಾಂ । ಅನು । ಪ್ರಽವಿದ್ವಾನ್ । ಪಿತೃಽಯಾನಂ । ದ್ಯುಽಮತ್ । ಅಗ್ನೇ । ಸಂಽಇಧಾನಃ । ವಿ । ಭಾಹಿ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯಂ ತ್ವಾ ತ್ವಾಂ ದ್ಯಾವಾಪೃಥಿವೀ ಜನಿತವತ್ಯೌ ಅದಿತ್ಯಾತ್ಮನಾಗ್ನ್ಯಾತ್ಮನಾ ವಾ । ತಥಾ ಯಂ ತ್ವಾಮಾಪೋ ಮೇಘಸ್ಥೋದಕಗತಾ ವಿದ್ಯುದಾತ್ಮನಾ ಸ್ಥಿತಂ ಜನಿತವತ್ಯಃ । ಯದ್ವಾ । ಆಪ

ಇತ್ಯಂತರಿಕ್ಷನಾಮ । ದ್ಯಾವಾಪೃಥಿವೀ ಅಂತರಿಕ್ಷಂ ಚೇಮೇ ತ್ರಯೋ ಲೋಕಾ ಯಂ ತ್ವಾಮಜೀಜನನ್ । ಕಿಂಚ ಸುಜನಿಮಾ ಶೋಭನಜನನಸ್ತ್ವಷ್ಟಾ ಪ್ರಜಾಪತಿರ್ಯಂ ತ್ವಾಂ ಜಜಾನ ಜನಯಾಮಾಸ ಹೇ ಅಗ್ನೇ ಪಿತೃಯಾಣಂ ಪಿತರೋ ಯೇನ ಮಾರ್ಗೇಣ ಗಚ್ಛಂತಿ ತಂ ಪಂಥಾಂ ಹವಿರ್ವಹನಮಾರ್ಗಮನು ಪ್ರವಿದ್ವಾನ್ ಪ್ರಜಾನಂಸ್ತ್ವಂ ಸಮಿಧಾನಃ ಸಮಿಧ್ಯಮಾನಃ ಸನ್ ದ್ಯುಮದ್ದೀಪ್ತಿಯುಕ್ತಂ ಯಥಾ ಭವತಿ ತಥಾ ವಿ ಭಾಹಿ । ವಿಶೇಷೇಣ ದೀಪ್ಯಸೇ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಯಂ ತ್ವಾ**—ಯಾವ ನಿನ್ನನ್ನು । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು ಉತ್ಪನ್ನ ಮಾಡಿದರೋ । **ಯಂ ತ್ವಾ**—ಯಾವ ನಿನ್ನನ್ನು । **ಅಪಃ**—ಉದಕಗಳು ನಿರ್ಮಿಸಿದವೋ । **ಯಂ ತ್ವಾ**—ಯಾವ ನಿನ್ನನ್ನು । **ಸುಜನಿಮಾ**—ಉತ್ತಮವಾದ ಸೃಷ್ಟಿಕರ್ತನಾದ । **ತ್ವಷ್ಟಾ**—ಪ್ರಜಾಪತಿಯು । **ಜಜಾನ**—ಸೃಷ್ಟಿಸಿದನೋ ಅಂತಹ ನೀನು । **ಪಿತೃಯಾಣಂ**—ಪಿತೃಗಳು ಸಂಚರಿಸುವ । **ಪಂಥಾಂ**—ಉತ್ತಮ ಮಾರ್ಗವನ್ನು । **ಅನು ಪ್ರವಿದ್ವಾನ್**—ಪೂರ್ಣವಾಗಿ ಅರಿತವನಾಗಿಯೂ । **ಸಮಿಧಾನಃ**—ಪ್ರಜ್ವಲಿತನಾಗಿಯೂ । **ದ್ಯುಮತ್**—ಕಾಂತಿಯನ್ನು ಬೀರುತ್ತಾ । **ವಿ ಭಾಹಿ**—ಅತಿಶಯವಾಗಿ ಪ್ರಕಾಶಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ನಿನ್ನನ್ನು ದ್ಯಾವಾಪೃಥಿವಿಗಳೂ ಉದಕಗಳೂ, ಉತ್ತಮವಾದ ಸೃಷ್ಟಿಕರ್ತನಾದ ಪ್ರಜಾಪತಿಯೂ ಉತ್ಪನ್ನಮಾಡಿದರೋ ಅಂತಹ ನೀನು ಪಿತೃಗಳು ಸಂಚರಿಸುವ ಉತ್ತಮವಾದ ಮಾರ್ಗವನ್ನು ಪೂರ್ಣವಾಗಿ ಅರಿತವನಾಗಿಯೂ, ಪ್ರಜ್ವಲಿತನಾಗಿಯೂ ಕಾಂತಿಯನ್ನು ಬೀರುತ್ತಾ ಅತಿಶಯವಾಗಿ ಪ್ರಕಾಶಿಸು.

## English Translation

Do you, Agni, whom the earth and heaven, whom the waters, whom Twashtri, the glorious creator, engendered, who are cognizant of the path, the road of the Pitris, shine brilliantly, being kindled.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧಕ್ಕೆ ಎರಡು ಮೂರು ವಿಧವಾಗಿ ಅರ್ಥಮಾಡಬಹುದೆಂದು ಭಾಷ್ಯಕಾರರು ತೋರಿಸಿದ್ದಾರೆ. **ದ್ಯಾವಾಪೃಥಿವೀ ಯಂ ತ್ವಾ ಜಜಾನ ಅಪಃ ಯಂ ತ್ವಾ ಜಜಾನ । ದ್ಯಾವಾಪೃಥಿವೀ ಆದಿತ್ಯಾತ್ಮನಾಗ್ನ್ಯಾತ್ಮನಾ ಯಂ ತ್ವಾ ಜನಿತವತ್ಯೌ ತಥಾ ಮೇಘೋದರಗತಾ ಅಪಃ ವಿದ್ಯುದಾತ್ಮನಾ ಸ್ಥಿತಂ ತ್ವಾಂ ಜನಿತವತ್ಯಃ ।** ದ್ಯಾವಾಪೃಥಿವಿಗಳು ಎಂದರೆ ಸ್ವರ್ಗವು ಅಗ್ನಿಯಾದ ನಿನ್ನನ್ನು ಸ್ವರ್ಗದಲ್ಲಿ ಆದಿತ್ಯರೂಪದಿಂದಲೂ, ಪೃಥಿವಿಯು ನಿನ್ನನ್ನು ಪಾರ್ಥಿವಾಗ್ನಿರೂಪದಿಂದಲೂ, ಮೇಘಗಳ ಮಧ್ಯದಲ್ಲಿರುವ ಉದಕಗಳು ನಿನ್ನನ್ನು ವಿದ್ಯುದಗ್ನಿ (ಮಿಂಚು) ರೂಪದಿಂದಲೂ ಉತ್ಪತ್ತಿ ಮಾಡಿದವು ಎಂದು ಒಂದು ರೀತಿಯಾದ ಅರ್ಥವು.

**ದ್ಯಾವಾಪೃಥಿವೀ ಅಪಃ ಯಂ ತ್ವಾಂ (ಜನಿತವತ್ಯಃ)** — ಇಲ್ಲಿ **ಅಪಃ** ಎಂಬ ಶಬ್ದವು ಅಂತರಿಕ್ಷವಾಚಿಯು ಭೂಮ್ಯಂತರಿಕ್ಷ ಸ್ವರ್ಗಗಳೆಂಬ ಮೂರು ಲೋಕಗಳೂ ಅಗ್ನಿಯನ್ನು ತಮ್ಮ ತಮ್ಮ ಲೋಕಗಳಲ್ಲಿ ವಿವಿಧರೂಪದಿಂದ ಉತ್ಪನ್ನಮಾಡಿದವು ಎಂದು ಮತ್ತೊಂದುವಿಧವಾದ ಅರ್ಥವು.

**ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ**—ದ್ಯಾವಾಪೃಥಿವಿಗಳು ಅಗ್ನಿಯನ್ನು ಉತ್ಪತ್ತಿಮಾಡಿದವು ಎಂದು ಮೇಲೆ ಹೇಳಿದ್ದರೂ ಅಗ್ನಿಯನ್ನು ಮೊದಲು ಸೃಷ್ಟಿಸಿದವನು ಪ್ರಜಾಪತಿಯೇ ಎಂದು ತಿಳಿಸುವುದಕ್ಕಾಗಿ ಈ ವಾಕ್ಯವನ್ನು ಋಷಿಯು ಹೇಳಿರುವನು. ಉತ್ತಮವಾದ ಜನ್ಮವುಳ್ಳ ಸೃಷ್ಟಿಕರ್ತನಾದ ಪ್ರಜಾಪತಿಯೇ ನಿನ್ನನ್ನು (ಅಗ್ನಿಯನ್ನು) ಉತ್ಪನ್ನ ಮಾಡಿದನು ಎಂದು ವಾಕ್ಯಾಭಿಪ್ರಾಯವು. ತ್ವಷ್ಟಾ ಎಂದರೆ ಇಲ್ಲಿ ಪ್ರಜಾಪತಿಯೆಂದೇ ಅರ್ಥಮಾಡಬೇಕು. ಏಕೆಂದರೆ ತೈತ್ತಿರೀಯ ಬ್ರಾಹ್ಮಣದಲ್ಲಿ—**ಪ್ರಜಾಪತಿರಗ್ನಿಮಸೃಜತ** (ತೈ. ಬ್ರಾ. ೨-೧-೨-೧) ಪ್ರಜಾಪತಿಯು ಅಗ್ನಿಯನ್ನು ಸೃಷ್ಟಿಸಿದನು ಎಂದು ಸ್ಪಷ್ಟವಾಗಿಯೇ ಹೇಳಿದೆ.

**ಪಿತೃಯಾಣಂ**—ಪಿತೃಗಳು ಸಂಚರಿಸುವ ಮಾರ್ಗ. ಈ ಶಬ್ದವು ಋಗ್ವೇದದಲ್ಲಿ ಪ್ರಕೃತಋಕ್ಕಿನಲ್ಲಿ ಮಾತ್ರ ಪಠಿತವಾಗಿದೆ. **ದೇವಯಾನಂ**—ದೇವತೆಗಳು ಸಂಚರಿಸುವ ಮಾರ್ಗ ಎಂಬ ಶಬ್ದವು ಅನೇಕ ಕಡೆಗಳಲ್ಲಿ ಪಠಿತವಾಗಿದೆ. ಈ ಎರಡುವಿಧ ಮಾರ್ಗಗಳ ಸ್ವರೂಪವೇನು ಇವುಗಳಿಗಿರುವ ವ್ಯತ್ಯಾಸವೇನು ಎಂದು ತಿಳಿದುಕೊಳ್ಳುವುದು ಅವಶ್ಯಕ ವಾಗಿದೆ.

ಉಪನಿಷತ್ತುಗಳಲ್ಲಿ **ದೇವಯಾನ, ಪಿತೃಯಾನ** ಎಂಬ ಪದಗಳಿಗೆ ಪಾರಿಭಾಷಿಕವಾದ ಅರ್ಥವಿದೆ. ಆದರೆ ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ **ದೇವಯಾನವೆಂಬ** ಪದಕ್ಕೆ ದೇವತೆಗಳು ಸಂಚರಿಸುವ ಮಾರ್ಗವೆಂದೇ ಅರ್ಥ ವಾಗುತ್ತದೆ. ಕೆಲವೆಡೆಗಳಲ್ಲಿ ಮಾತ್ರ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಆಧ್ಯಾತ್ಮಿಕವಾದ ತಾತ್ಪರ್ಯವೂ ಸೂಚಿತವಾಗಿದೆ

ಉಪನಿಷತ್ತುಗಳಲ್ಲಿ **ದೇವಯಾನ** ಮತ್ತು **ಪಿತೃಯಾನ** ಎಂಬ ಪದಗಳಿಂದ ಪುರುಷನ ಮರಣಾನಂತರ ಅವನ ದೇಹವು ಭಸ್ಮವಾಗಿ ನಿತ್ಯನಾಗಿರುವ ಆತ್ಮನು ಸಂಚರಿಸತಕ್ಕ ಮಾರ್ಗಗಳೆರಡು ಎಂದು ಪ್ರಸಿದ್ಧವಾಗಿದೆ. ಸತ್ಕರ್ಮಕ್ಕೆ ಫಲವನ್ನನುಭವಿಸಲು ಹೋಗತಕ್ಕ ಮಾರ್ಗಗಳಲ್ಲಿ ಒಂದು ದೇವಯಾನ ಇನ್ನೊಂದು ಪಿತೃಯಾನ. ಒಂದು ದೇವತೆಗಳ ಮಾರ್ಗ; ಮತ್ತೊಂದು ಪಿತೃಗಳ ಮಾರ್ಗ. **ಪಂಚಾಗ್ನಿವಿದ್ಯೆಯನ್ನರಿತು** ಸತ್ಯದಲ್ಲೇ ಶ್ರದ್ಧೆಯು ನ್ನಿಟ್ಟಿರುವವರು ದೇವಮಾರ್ಗದಲ್ಲಿ ಹೊರಟು ಪರಬ್ರಹ್ಮನನ್ನು ಸೇರುತ್ತಾರೆ. ಇವರ ಮರಣಾನಂತರ ಆತ್ಮನು ಜ್ವಾಲೆ ಯನ್ನು ಪ್ರವೇಶಿಸಿ ತನ್ಮೂಲಕ ಅಹಸ್ಸನ್ನೂ, ಶುಕ್ಲಪಕ್ಷವನ್ನೂ, ಉತ್ತರಾಯಣವನ್ನೂ, ಸಂವತ್ಸರವನ್ನೂ, ಆದಿತ್ಯ ನನ್ನೂ, ವಿದ್ಯುತ್ತನ್ನೂ ಪ್ರವೇಶಿಸಿ ತನ್ಮೂಲಕ ಅಮಾನವನಾದ ಪುರುಷನ ಸಹಾಯದಿಂದ ಪರಬ್ರಹ್ಮನನ್ನು ಪಡೆಯು ತ್ತಾನೆ-ಎಂಬ ವಿಷಯವನ್ನು ಉಪನಿಷತ್ತುಗಳಲ್ಲಿ ವರ್ಣಿಸಿದೆ.

ಯಾರು ಕೇವಲ ಯಜ್ಞದಿಂದಲೂ ದಾನಾದಿಗಳಿಂದಲೂ ಲೋಕವನ್ನು ತೃಪ್ತಿಗೊಳಿಸುತ್ತಾರೆಯೋ ಎಂದರೆ ಪಂಚಾಗ್ನಿವಿದ್ಯೆಯನ್ನರಿಯದೇ ಕೇವಲ ಸತ್ಕರ್ಮನಿರತರಾಗಿರುವರೋ ಅಂತಹವರು ಮರಣಾನಂತರ ಬೇರೆ ಮಾರ್ಗದಲ್ಲಿ ಸಂಚರಿಸುತ್ತಾರೆ. ದೇಹವು ದಗ್ಧವಾದನಂತರ ಆತ್ಮನು ಧೂಮದೊಂದಿಗೆ ಸೇರಿ ಅನಂತರ ರಾತ್ರಿಯನ್ನೂ, ತನ್ಮೂಲಕ ಕೃಷ್ಣಪಕ್ಷವನ್ನೂ, ತದ್ದ್ವಾರಾ ದಕ್ಷಿಣಾಯನವನ್ನೂ ಅನಂತರ ಪಿತೃಲೋಕವನ್ನೂ ಕೊನೆಗೆ ಚಂದ್ರಲೋಕವನ್ನೂ

ಸೇರುತ್ತಾರೆ. ಇದೇ ಅವರ ಚರಮಸ್ಥಾನವು. ಈ ಲೋಕದಲ್ಲಿ ಅವರ ಸತ್ಕರ್ಮಗಳಿಗನುಗುಣವಾದ ಫಲಗಳನ್ನು ಪೂರ್ಣವಾಗಿ ಅನುಭವಿಸಿ, ಪಿತೃಗಳೊಂದಿಗಿದ್ದು, ತಮ್ಮ ಕರ್ಮದ ಸಂಸ್ಕಾರವು ಮುಗಿದೊಡನೆಯೇ ಪುನಃ ಅದೇ ಧೂಮಮಾರ್ಗವಾಗಿ ಭೂಮಿಗೆ ಹಿಂತಿರುಗುತ್ತಾರೆ. ಇದೇ ಉಪನಿಷತ್ತುಗಳಲ್ಲಿ ನಿರೂಪಿಸಿರತಕ್ಕ **ದೇವಯಾನ** ಮತ್ತು **ಪಿತೃಯಾನಗಳ** ಸ್ವರೂಪಗಳು.

ಪ್ರಕೃತದಲ್ಲಿ ನಾವು ಗಮನಿಸಬೇಕಾದುದೇನೆಂದರೆ, ಮೇಲೆ ವಿವರಿಸಿದಂತೆ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಭಾವನೆಯನ್ನು ಪೂರ್ಣವಾಗಿ ಋಕ್ಸಂಹಿತೆಯಲ್ಲಿ ಉಪಯೋಗಿಸುವ **ದೇವಯಾನ** ಪದವು ಸೂಚಿಸುತ್ತದೆಯೇ ಅಥವಾ ಕೇವಲ ದೇವತೆಗಳು ಸಂಚರಿಸತಕ್ಕ ಭೌತಿಕವಾದ ಮಾರ್ಗವೆಂದರ್ಥವಾಗುತ್ತದೆಯೇ ಎಂಬುದು. ಇದರಂತೆಯೇ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ **ಪಿತೃಯಾನ** ಶಬ್ದಕ್ಕೂ ಸಹ ಯಾವ ಅರ್ಥ ಎಂಬುದನ್ನು ಪ್ರಕೃತದಲ್ಲಿ ವಿಮರ್ಶಿಸಬೇಕಾಗಿದೆ

ಋಕ್ಸಂಹಿತೆಯಲ್ಲಿ **ದೇವಯಾನ** ಎಂಬ ಪದವು ಒಟ್ಟು ಹದಿಮೂರು ಸಲ ಪ್ರಯೋಗಿಸಲ್ಪಟ್ಟಿದೆ. [೧-೭೨-೭; ೧-೧೮೩-೬; ೧-೧೮೪.೬, ೩-೫೮.೫ ೪-೩೭.೧; ೫-೪೩.೬; ೭-೩೮ ೮ ೭-೭೬.೨; ೧೦-೧೮-೧; ೧೦-೫೧.೨; ೧೦-೫೧.೫; ೧೦-೯೮.೧೧ ೧೦-೧೮೧.೩.] ಈ ಸಂದರ್ಭಗಳಲ್ಲೆಲ್ಲಾ ಸಾಯಣರು ಪ್ರಧಾನವಾಗಿ ಎರಡು ಅರ್ಥಗಳನ್ನು ಮಾತ್ರ ಹೇಳಿದ್ದಾರೆ. ಅವರ ವಿವರಣೆಯ ಪ್ರಕಾರ ಮೊದಲನೆಯದಾಗಿ ಯಜ್ಞಕರ್ತರಾದ ಮಾನವರು ತಮ್ಮ ಹವಿಸ್ಸುಗಳೊಂದಿಗೆ ದೇವತೆಗಳನ್ನು ಸಮೀಪಿಸಲು ಹೋಗತಕ್ಕ ಮಾರ್ಗವೆಂದೂ ಎರಡನೆಯದಾಗಿ ದೇವತೆಗಳು ತಮ್ಮ ಹವಿಸ್ಸಿನ ಸ್ವೀಕಾರಕ್ಕಾಗಿ ಭೂಮಿಗೆ ಬರತಕ್ಕ ಮಾರ್ಗವೆಂದೂ ಅರ್ಥವಾಗುತ್ತದೆ.

**ಪಿತೃಯಾನವೆಂಬ** ಪದವು ಋಕ್ಸಂಹಿತೆಯಲ್ಲಿ ಕೇವಲ ಒಂದು ಸಲ ಮಾತ್ರ ಪ್ರಯೋಗಿಸಲ್ಪಟ್ಟಿದೆ. ಆ ಪ್ರಯೋಗವು ಪ್ರಕೃತಋಕ್ಕಿನಲ್ಲಿ ಮಾತ್ರ—

**ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ।**
**ಪಂಥಾಮನು ಪ್ರವಿದ್ವಾನ್ ಪಿತೃಯಾಣಂ ದ್ಯುಮದಗ್ನೇ ಸಮಿಧಾನೋ ವಿ ಭಾಹಿ ॥**

(ಋ. ಸಂ. ೧೦-೨-೭)

ಎಂಬ ಋಕ್ಕಿನಲ್ಲಿ ದ್ಯಾವಾಪೃಥಿವಿಗಳಿಂದಲೂ ಉದಕಗಳಿಂದಲೂ, ಸೃಷ್ಟಿಕರ್ತನಿಂದಲೂ, ತ್ವಷ್ಟೃವಿನಿಂದಲೂ, ಉತ್ಪನ್ನನಾಗಿ ಪ್ರಜ್ವಲಿತನಾದವನೂ ಮತ್ತು **ಪಿತೃಯಾಣದ** ಸ್ವರೂಪವನ್ನು ಪೂರ್ಣವಾಗಿ ಅರಿತವನೂ ಆದ ಅಗ್ನಿಯು ಪ್ರಜ್ವಲಿತನಾದೊಡನೆಯೇ ಪ್ರಕಾಶಿತನಾಗಲಿ ಎಂದು ಪ್ರಾರ್ಥಿಸಿದೆ. ಋಕ್ಕಿನಲ್ಲಿ ಮೂರನೇ ಪಾದದಲ್ಲಿರುವ ಈ ಪದಕ್ಕೆ ಸಾಯಣರ ವಿವರಣೆಯಂತೆ "**ಪಿತೃಯಾಣಂ ಪಿತರೋ ಯೇನ ಮಾರ್ಗೇಣ ಗಚ್ಛಂತಿ ತಂ**" ಪಿತೃಗಳು ಯಾವ ಮಾರ್ಗದಲ್ಲಿ ಸಂಚರಿಸುವರೋ ಆ ಮಾರ್ಗವೆಂದರ್ಥ.

## ಮೂರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಇನೋ ರಾಜನ್ನಿತಿ ಸಪ್ತರ್ಚಂ ತೃತೀಯಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ಇನೇ ತ್ಯನುಕ್ರಾಂತಂ । ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ॥**

ಅನುವಾದವು—ಇನೋ ರಾಜನ್ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ ಇರುವವು. ಅನುಕ್ರಮಣಿಕೆಯಲ್ಲಿ—ಇನಃ ಎಂದು ಹೇಳಿರುವುದು. ಪ್ರಾತರನುವಾಕಮಂತ್ರಗಳಿಗಾಗಿಯೂ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೩

ಮಂಡಲ—೧೦ । ಅನುವಾಕ—೧ । ಸೂಕ್ತ—೩ ।
ಅಷ್ಟಕ—೭ । ಅಧ್ಯಾಯ—೫ । ವರ್ಗ—೩೦ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ।
ಋಷಿಃ—ತ್ರಿತ ಆಪ್ತ್ಯಃ ।
ದೇವತಾ—ಅಗ್ನಿಃ ।
ಛಂದಃ—ತ್ರಿಷ್ಟುಪ್ ॥

। ಸಂಹಿತಾಪಾಠಃ ।

ಇನೋ ರಾಜನ್ನರತಿಃ ಸಮಿದ್ಧೋ ರೌದ್ರೋ ದಕ್ಷಾಯ ಸುಷುಮಾಁ ಅದರ್ಶಿ ।
ಚಿಕಿದ್ವಿ ಭಾತಿ ಭಾಸಾ ಬೃಹತಾಸಿಕ್ನೀಮೇತಿ ರುಶತೀಮಪಾಜನ್ ॥ ೧ ॥

। ಪದಪಾಠಃ ।

ಇನಃ । ರಾಜನ್ । ಅರತಿಃ । ಸಂಽಇದ್ಧಃ । ರೌದ್ರಃ । ದಕ್ಷಾಯ । ಸುಸುಽಮಾನ್ । ಅದರ್ಶಿ ।
ಚಿಕಿತ್ । ವಿ । ಭಾತಿ । ಭಾಸಾ । ಬೃಹತಾ । ಅಸಿಕ್ನೀಂ । ಏತಿ । ರುಶತೀಂ । ಅಪಽಅಜನ್ ॥ ೧ ॥

। ಸಾಯಣಭಾಷ್ಯಂ ।

ಹೇ ರಾಜನ್ದೀಪ್ಯಮಾನಾಗ್ನೇ ತ್ವಮಿನ ಈಶ್ವರಃ ಸರ್ವಸ್ಯ ಭವಸಿ । ಅಥ ಪರೋಕ್ಷಃ । ಅರತಿರ್ಹವಿರಾದಾಯ ದೇವಾನ್ಪ್ರತಿ ಗಂತಾ ಸಮಿದ್ಧಃ ಸಂದೀಪ್ತೋ ರೌದ್ರಃ ಶತ್ರೂಣಾಂ ಭಯಂಕರಃ ಸುಷುಮಾನ್ । ಓಷಧ್ಯಾತ್ಮನಾ ಸ್ಥಿತೋಽಂಶುಃ ಸುಷ್ಠು ಸೂಯತ ಇತಿ ಸುಷುಃ ಸೋಮಃ । ತೇನ ತದ್ವಾನ್ ಶೋಭನಪ್ರಸವೋ ವಾ ಸೋಽಗ್ನಿರ್ದಕ್ಷಾಯ ಯಜಮಾನಾನಾಂ ಧನಾನಿವೃದ್ಧ್ಯರ್ಥಮದರ್ಶಿ । ಸರ್ವೈರ್ದೃಶ್ಯತೇ । ಕಿಂಚ ಚಿಕಿತ್ ಸರ್ವಂ ಜಾನಾನೋಽಗ್ನಿರ್ವಿ ಭಾತಿ । ವಿಶೇಷೇಣ ದೀಪ್ಯತೇ । ತಥಾ ಬೃಹತಾ ಮಹತಾ ಭಾಸಾ ತೇಜಸಾ ಜ್ವಾಲಾಲಕ್ಷಣೇನಾಸಿಕ್ನೀಂ ರಾತ್ರಿಮೇತಿ । ಸಾಯಂಹೋಮಸಿದ್ಧ್ಯರ್ಥಮೇವ ಗಚ್ಛತಿ । ಕಿಂ ಕುರ್ವನ್ । ರುಶತೀಂ ಶ್ವೇತವರ್ಣಾಂ ದೀಪ್ತಿಮಪಾಜನ್ನಪಗಮಯನ್ರಾತ್ರಿಂ ಗಚ್ಛತಿ । ಸಾಮರ್ಥ್ಯಾದ್ರಾತ್ರಿಂ ಪರಿತ್ಯಜನ್ನುಷಸಂ ಪ್ರಾತರ್ಹೋಮಸಿದ್ಧ್ಯರ್ಥಂ ಗಚ್ಛತೀತ್ಯರ್ಥೋ ಲಕ್ಷ್ಯತೇ ॥

ಗಳಲ್ಲಿ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ರಾತ್ರಿಯನ್ನು ಪ್ರವೇಶಮಾಡುತ್ತಾನೆ ಎಂದರೆ ಸಮಿಾಪಿಸುತ್ತಾನೆ. ರಾತ್ರಿ ಕಾಲದಲ್ಲಿ ಸೂರ್ಯನ ಬೆಳಕಿಲ್ಲದೆ ಕತ್ತಲೆಯಾಗಿರುವುದರಿಂದ ಅಗ್ನಿಯ ಪ್ರಕಾಶವು ಹೆಚ್ಚಾಗಿ ಗೋಚರವಾಗುವುದು. ಮತ್ತು ಅಗ್ನಿಯೇ ರಾತ್ರಿಕಾಲದಲ್ಲಿ ಆಹುತಿಗಳನ್ನು ಸ್ವೀಕರಿಸುವ ಪ್ರಧಾನದೇವತೆಯು. ಸೂರ್ಯನಿಗೆ ಹಗಲಿನಲ್ಲಿ ಮಾತ್ರ ಆಹುತಿಯು ಅರ್ಪಿಸಲ್ಪಡುವುದು. ಈ ವಿಷಯದಲ್ಲಿ ಯಜುರ್ವೇದದ ತೈತ್ತಿರೀಯಬ್ರಾಹ್ಮಣದಲ್ಲಿ ಒಂದು ಇತಿಹಾಸವಿದೆ—

ಯದಗ್ನಿಹೋತ್ರಂ । ತಸ್ಮಾದಗ್ನಿಹೋತ್ರಮುಚ್ಯತೇ । ತದ್ಧೂಯಮಾನಮಾದಿತ್ಯೋಽಬ್ರವೀತ್। ಮಾ ಹೌಷೀಃ । ಉಭಯೋರ್ವೈ ನಾವೇತದಿತಿ । ಸೋಽಗ್ನಿರಬ್ರವೀತ್ । ಕಥಂ ನೌ ಹೋಷ್ಯಂತೀತಿ । ಸಾಯಮೇವ ತುಭ್ಯಂ ಜುಹವನ್ । ಪ್ರಾತರ್ಮಹ್ಯಮಿತ್ಯಬ್ರವೀತ್ । ತಸ್ಮಾದಗ್ನಯೇ ಸಾಯಗ್‌ಂ ಹೂಯತೇ। ಸೂರ್ಯಾಯ ಪ್ರಾತಃ । ಆಗ್ನೇಯೀ ವೈ ರಾತ್ರಿಃ । ಐಂದ್ರಮಹಃ। ಯದನುದಿತೇ ಸೂರ್ಯೇ ಪ್ರಾತರ್ಜುಹುಯಾತ್ । ಉಭಯಮೇವಾಗ್ನೇಯಗ್‌ಂ ಸ್ಯಾತ್ । ಉದಿತೇ ಸೂರ್ಯೇ ಪ್ರಾತರ್ಜುಹೋತಿ । ತಥಾಗ್ನಯೇ ಸಾಯಗ್‌ಂ ಹೂಯತೇ.... .... .... ಅಗ್ನಿಂ ವಾವಾದಿತ್ಯಸ್ಸಾಯಂ ಪ್ರವಿಶತಿ । ತಸ್ಮಾದಗ್ನಿರ್ದೂರಾನ್ನಕ್ತಂ ದದೃಶೇ । ಉಭೇ ಹಿ ತೇಜಸೀ ಸಂಪದ್ಯೇತೇ । ಉದ್ಯಂತಂ ವಾವಾದಿತ್ಯಮಗ್ನಿರನು ಸಮಾರೋಹತಿ । ತಸ್ಮಾದ್ಧೂಮ ಏವಾಗ್ನೇರ್ದಿವಾ ದದೃಶೇ.... ........ .... ....ಅಗ್ನಿರ್ಜ್ಯೋತಿರ್ಜ್ಯೋತಿಸ್ಸೂರ್ಯಸ್ಸ್ವಾಹೇತ್ಯೇವ ಸಾಯಗ್‌ಂ ಹೋತವ್ಯಂ । ಸೂರ್ಯೋ ಜ್ಯೋತಿರ್ಜ್ಯೋತಿರಗ್ನಿಸ್ಸ್ವಾಹೇತಿ ಪ್ರಾತಃ । ತಥೋಭಾಭ್ಯಾಗ್‌ಂ ಸಾಯಗ್‌ಂ ಹೂಯತೇ । ಉಭಾಭ್ಯಾಂ ಪ್ರಾತಃ ।

(ತೈ. ಬ್ರಾ. ೨-೧-೨-೯ ರಿಂದ ೧೩)

ಪೂರ್ವದಲ್ಲಿ ಅಗ್ನಿಹೋತ್ರವೆಂಬ ಕರ್ಮದಲ್ಲಿ ಯಜಮಾನನು ಅಗ್ನಿಯಲ್ಲಿ ಹೋಮಮಾಡುತ್ತಿದ್ದನು. ಅಗ್ನಿಯಲ್ಲಿ ಹೋಮಮಾಡುತ್ತಿದ್ದುದರಿಂದ ಆ ಕರ್ಮಕ್ಕೆ ಅಗ್ನಿಹೋತ್ರವೆಂದು ಹೆಸರಾಯಿತು. ಈ ರೀತಿ ಅಗ್ನಿಯಲ್ಲಿ ಅಗ್ನಿಯನ್ನುದ್ದೇಶಿಸಿ ಹೋಮಮಾಡುತ್ತಿರುವ ಯಜಮಾನನನ್ನು ಕುರಿತು ಸೂರ್ಯನು—ಅಗ್ನಿಯಲ್ಲಿ ಅಗ್ನಿಯನ್ನು ಮಾತ್ರ ಉದ್ದೇಶಿಸಿ ಹೋಮಮಾಡುತ್ತಿರುವೆ. ನೀನು ಅರ್ಪಿಸುವ ಆಹುತಿಯು ಅಗ್ನಿಗೂ ನನಗೂ ಇಬ್ಬರಿಗೂ ಸೇರಬೇಕು, ಅಗ್ನಿಗೆ ಒಬ್ಬನಿಗೇ ಅಲ್ಲ ಎಂದನು. ಆಗ ಅಗ್ನಿಯು ಅದು ಹೇಗೆ ಇಬ್ಬರಿಗೂ ಸೇರಬೇಕು ಎಂದು ಪ್ರಶ್ನಿಸಿದನು. ಅದಕ್ಕೆ ಸೂರ್ಯನು ಸಾಯಂಕಾಲದಲ್ಲಿ ಮಾಡುವ ಹೋಮವು ಅಗ್ನಿಗೆ (ನಿನಗೆ) ಸೇರಬೇಕು. ಪ್ರಾತಃಕಾಲದಲ್ಲಿ ಮಾಡುವ ಹೋಮವು ನನಗೆ (ಸೂರ್ಯನಿಗೆ) ಸೇರಬೇಕು ಎಂದನು. ಅಗ್ನಿಹೋತ್ರವನ್ನು ಸಾಯಂಕಾಲ ಪ್ರಾತಃಕಾಲಗಳಲ್ಲಿ ಮಾಡುವುದರಿಂದ ಅಗ್ನಿ ಮತ್ತು ಸೂರ್ಯ ಎಂಬಿಬ್ಬರಿಗೂ ಆಹುತಿಗಳು ಸೇರಬೇಕು. ಆದ್ದರಿಂದ ರಾತ್ರಿಕಾಲದಲ್ಲಿ ಅಗ್ನಿಯನ್ನುದ್ದೇಶಿಸಿ ಹೋಮಮಾಡುವರು. ಸೂರ್ಯನಿಗೆ ಪ್ರಾತಃಕಾಲದಲ್ಲಿ ಹೋಮಮಾಡುವರು ಆದ್ದರಿಂದ ರಾತ್ರಿಗೆ ಅಗ್ನಿಯೇ ಅಧಿದೇವತೆಯಾದನು. ರಾತ್ರಿಯಲ್ಲಿ ಮಾಡಿದ ಹೋಮವೆಲ್ಲಾ ಅಗ್ನಿಗೇ ಸೇರಬೇಕು. ಸೂರ್ಯಾಸ್ತಮಾನದಿಂದ ಸೂರ್ಯೋದಯದವರೆಗಿನ ಮಧ್ಯಕಾಲವು ರಾತ್ರಿಯೆನಿಸುವುದು. ಆದ್ದರಿಂದ ಸೂರ್ಯೋದಯಕ್ಕೆ ಮುಂಚಿತವಾಗಿ ಮಾಡುವ ಹೋಮವು (ಆ ಕಾಲವು ರಾತ್ರಿಯೆಂದು ಭಾವಿಸಲ್ಪಟ್ಟಿರುವುದರಿಂದ) ಅಗ್ನಿಗೇ ಸೇರುವುದು. ಈ ಸಂದರ್ಭದಲ್ಲಿ ಸಾಯಂ ಪ್ರಾತರಾಹುತಿಗಳೆರಡೂ ಅಗ್ನಿಗೇ ಸೇರಿದಂತಾಯಿತು.

ಇದು ಇಬ್ಬರಿಗೂ ಸರಿಬೀಳಲಿಲ್ಲ. ಆದ್ದರಿಂದ ಸಾಯಂಕಾಲದಲ್ಲಿ ಅಗ್ನಿಯನ್ನು ಸೂರ್ಯನು ಪ್ರವೇಶಿಸಿ ಅದರಲ್ಲಿ ಅಂತರ್ಗತನಾಗಿರುವನು. ಅದರಂತೆ ಅಗ್ನಿಯು ಉದಯಿಸುವ ಸೂರ್ಯನಲ್ಲಿ ಪ್ರವೇಶಿಸಿ ಅಲ್ಲಿಯೇ ಹಗಲಿನಲ್ಲಿ ಅಂತರ್ಗತನಾಗಿರುವನು. ಈ ಕಾರಣದಿಂದ ಸಾಯಂಪ್ರಾತಃಕಾಲಗಳಲ್ಲಿ ಮಾಡುವ ಹೋಮಗಳು ಕಾಲವ್ಯತ್ಯಾಸವಿದ್ದರೂ ಉದ್ದಿಷ್ಟದೇವತೆಗಳಿಗೆ ಹೋಗಿ ಸೇರುವುದು. ಈ ರೀತಿ ಒಬ್ಬರು ಮತ್ತೊಬ್ಬರಲ್ಲಿ ಪ್ರವೇಶಿಸಿದ್ದರಿಂದ ಇಬ್ಬರಲ್ಲಿಯೂ ಇಬ್ಬರ ಗುಣಗಳೂ ಗೋಚರಿಸುವಂತಾಯಿತು. ರಾತ್ರಿಕಾಲದಲ್ಲಿ ಅಗ್ನಿಯು ಬಹಳ ಪ್ರಕಾಶಮಾನನಾಗಿ ಬಹಳ ದೂರದವರೆಗೂ ಕಾಣಿಸುವನು. ಹಗಲಿನಲ್ಲಿ ಅಗ್ನಿಯು ಉರಿಯುತ್ತಿದ್ದರೂ ದೂರದಲ್ಲಿ ಹೊಗೆಯು ಮಾತ್ರ ಕಾಣಿಸುವುದು. ಈ ರೀತಿ ಒಬ್ಬರಲ್ಲೊಬ್ಬರು ಅಂತಃ ಪ್ರವಿಷ್ಟರಾದ್ದರಿಂದ ಇವರನ್ನುದ್ದೇಶಿಸಿ ಮಂತ್ರಗಳನ್ನು ಪಠಿಸುವ ಕ್ರಮವೂ ವ್ಯತ್ಯಸ್ತವಾಗಿರುವುದು. ಸಾಯಂಪ್ರಾತಃಕಾಲಗಳೆರಡರಲ್ಲಿಯೂ ಇಬ್ಬರನ್ನೂ ಉದ್ದೇಶಿಸಿ ಹೋಮಮಾಡಬೇಕಾಗಿರುವುದು. ಆದರೆ ಸಾಯಂಕಾಲದಲ್ಲಿ ಅಗ್ನಿರ್ಜ್ಯೋತಿಃ ಎಂದು ಮೊದಲು ಅಗ್ನಿಯ ಹೆಸರನ್ನು ಉಚ್ಚರಿಸಿ ಅನಂತರ ಜ್ಯೋತಿಃ ಸೂರ್ಯಃ ಎಂದು ಮಂತ್ರವನ್ನು ಪಠಿಸಬೇಕು. ಪ್ರಾತಃಕಾಲದಲ್ಲಿ ಇದಕ್ಕೆ ವ್ಯತಿರಿಕ್ತವಾಗಿ ಸೂರ್ಯೋ ಜ್ಯೋತಿಃ ಎಂದು ಮೊದಲು ಸೂರ್ಯನ ಹೆಸರನ್ನೂ ಅನಂತರ ಜ್ಯೋತಿರಗ್ನಿಃ ಎಂದು ಅಗ್ನಿಯ ಹೆಸರನ್ನೂ ಪಠಿಸಿ ಹೋಮಮಾಡಬೇಕು. ಈ ರೀತಿ ಮಾಡುವುದರಿಂದ ಸಾಯಂಪ್ರಾತಃಕಾಲಗಳೆರಡರಲ್ಲಿಯೂ ಇಬ್ಬರಿಗೂ ಪ್ರಾಧಾನ್ಯತೆಯನ್ನು ಕೊಟ್ಟಂತೆಯೂ ಅಗ್ನಿಯನ್ನು ಸಾಯಂಕಾಲದಲ್ಲಿಯೂ ಸೂರ್ಯನನ್ನು ಪ್ರಾತಃಕಾಲದಲ್ಲಿಯೂ ಪ್ರತ್ಯೇಕ ಪ್ರತ್ಯೇಕವಾಗಿಯೂ ನಿರ್ದೇಶಿ ಹೋಮಮಾಡಿದಂತೆಯೂ ಆಗುವುದು.

॥ ಸಂಹಿತಾಪಾಠಃ ॥

ಕೃಷ್ಣಾಂ ಯದೇನೀಮಭಿ ವರ್ಪಸಾ ಭೂಜ್ಜನಯನ್ಯೋಷಾಂ ಬೃಹತಃ ಪಿತುರ್ಜಾಂ ।
ಊರ್ಧ್ವಂ ಭಾನುಂ ಸೂರ್ಯಸ್ಯ ಸ್ತಭಾಯನ್ ದಿವೋ ವಸುಭಿರರತಿರ್ವಿ ಭಾತಿ ॥ ೨ ॥

॥ ಪದಪಾಠಃ ॥

ಕೃಷ್ಣಾಂ । ಯತ್ । ಏನೀಂ । ಅಭಿ । ವರ್ಪಸಾ । ಭೂತ್ । ಜನಯನ್ । ಯೋಷಾಂ । ಬೃಹತಃ । ಪಿತುಃ । ಜಾಂ ।
ಊರ್ಧ್ವಂ । ಭಾನುಂ । ಸೂರ್ಯಸ್ಯ । ಸ್ತಭಾಯನ್ । ದಿವಃ । ವಸುಽಭಿಃ । ಅರತಿಃ । ವಿ । ಭಾತಿ ॥ ೨ ॥

॥ ಸಾಯಣಭಾಷ್ಯಂ ॥

ಸೋಽಗ್ನಿರ್ಯದ್ಯದಾ ಕೃಷ್ಣಾಂ ಕೃಷ್ಣವರ್ಣಾಮೇನೀಂ ಗಚ್ಛಂತೀಂ ರಾತ್ರಿಂ ವರ್ಪಸಾತ್ಮೀಯೇನ ಜ್ವಾಲಾಲಕ್ಷಣೇನ ರೂಪೇಣಾಭಿ ಭೂತ್ ಅಭಿಭವತಿ । ಕಿಂ ಕುರ್ವನ್ । ಬೃಹತೋ ಮಹತಃ ಪಿತುಃ

ಸರ್ವಸ್ಯ ಜಗತಃ ಪಾಲಯಿತುಃ ಪಿತೃಭೂತಾದ್ದಾದಿತ್ಯಾಜ್ಜಾಂ ಜಾಯಮಾನಾಂ ಯೋಷಾಮುಷಸಂ ಜನಯನ್ನಭಿವ್ಯಂಜಯನ್ । ತದಾನೀಮರತಿರ್ಗಮನಶೀಲೋಽಗ್ನಿರ್ದಿವೋ ದ್ಯುಲೋಕಸ್ಯ ವಸುಭಿರ್ವಾಸಯಿತೃಭಿರಾಚ್ಛಾದಕೈಃ ಸಂಧುಕ್ಷಣಸಮರ್ಥೈರಾತ್ಮೀಯೈಸ್ತೇಜೋಭಿಃ ಸೂರ್ಯಸ್ಯ ಭಾನುಂ ದೀಪ್ತಿಮೂರ್ಧ್ವಮುಪರಿಷ್ಟಾತ್ ಸ್ತಭಾಯನ್ ಸ್ತಂಭಯನ್ ವಿ ಭಾತಿ । ವಿಶೇಷೇಣ ದೀಪ್ಯತೇ ॥

॥ ಪ್ರತಿಪದಾರ್ಥ ॥

**ಬೃಹತಃ**—ಮಹಾತ್ಮನಾದ । **ಪಿತುಃ**—ಜಗತ್ಪಾಲಕನಿಂದ । **ಜಾಂ**—ಉತ್ಪನ್ನಳಾದ । **ಯೋಷಾಂ**—ಉಷಸ್ಸನ್ನು । **ಜನಯನ್**—ಪ್ರಕಟಮಾಡುತ್ತಾ । **ಯತ್**—ಯಾವಾಗ । **ಕೃಷ್ಣಾಂ**—ಕೃಷ್ಣವರ್ಣವುಳ್ಳ । **ಏನೀಂ**—ರಾತ್ರಿಯನ್ನು । **ವರ್ಪಸಾ**—ತನ್ನ ಜ್ವಾಲೆಯಿಂದ । **ಅಭಿ ಭೂತ್**—ಆಕ್ರಮಿಸುವನೋ (ಆಗ) । **ಅರತಿಃ**—ಸಂಚಾರಶೀಲನಾದ ಅಗ್ನಿಯು । **ದಿವಃ**—ದ್ಯುಲೋಕದ । **ವಸುಭಿಃ**—ಆಚ್ಛಾದಕಗಳಾದ ತನ್ನ ತೇಜಸ್ಸುಗಳಿಂದ । **ಸೂರ್ಯಸ್ಯ**—ಸೂರ್ಯನ । **ಭಾನುಂ**—ಕಾಂತಿಯನ್ನು । **ಊರ್ಧ್ವಂ**—ಮೇಲ್ಭಾಗದಲ್ಲಿಯೇ । **ಸ್ತಭಾಯನ್**—ತಡೆದು ನಿಲ್ಲಿಸುತ್ತ । **ವಿ ಭಾತಿ**—ಅತಿಶಯವಾಗಿ ಪ್ರಕಾಶಿಸುತ್ತಾನೆ.

॥ ಭಾವಾರ್ಥ ॥

ಮಹಾತ್ಮನಾದ ಜಗತ್ಪಾಲಕನಿಂದ ಉತ್ಪನ್ನಳಾದ ಉಷಸ್ಸನ್ನು ಪ್ರಕಟಿಸುತ್ತಾ ಯಾವಾಗ ಕೃಷ್ಣವರ್ಣವುಳ್ಳ ರಾತ್ರಿಯನ್ನು ತನ್ನ ಜ್ವಾಲೆಯಿಂದ ಆಕ್ರಮಿಸುವನೋ ಆಗ ಸಂಚಾರಶೀಲನಾದ ಅಗ್ನಿಯು ದ್ಯುಲೋಕದ ಆಚ್ಛಾದಕಗಳಾದ ತನ್ನ ತೇಜಸ್ಸುಗಳಿಂದ ಸೂರ್ಯನ ಕಾಂತಿಯನ್ನು ಮೇಲ್ಭಾಗದಲ್ಲಿಯೇ ತಡೆದು ನಿಲ್ಲಿಸುತ್ತ ಅತಿಶಯವಾಗಿ ಪ್ರಕಾಶಿಸುತ್ತಾನೆ.

## English Translation

**When he has overcome the dark departing (night) by his radiance, then, begetting the damsel, the daughter of the great father, he shines in his course with the treasures of heaven, establishing above the light of the sun.**

॥ ವಿಶೇಷವಿಷಯಗಳು ॥

**ಕೃಷ್ಣಾಂ ಏನೀಂ ವರ್ಪಸಾ ಅಭಿ ಭೂತ್**—ಈ ಅಗ್ನಿಯು ಕಳೆದು ಹೋಗುತ್ತಿರುವ ಕಗ್ಗತ್ತಲೆಯಿಂದ ಕೂಡಿದ ರಾತ್ರಿಯನ್ನು ತನ್ನ ಜ್ವಾಲಾರೂಪವಾದ ತೇಜಸ್ಸಿನಿಂದ ಸೋಲಿಸುತ್ತಾನೆ ಅಥವಾ ತಿರಸ್ಕರಿಸುತ್ತಾನೆ. ಇಲ್ಲಿ **ಕೃಷ್ಣಾಂ ಏನೀಂ** ಎಂದರೆ ರಾತ್ರಿಯು ಸೂರ್ಯಾಸ್ತಮಯಾನಂತರ ಪ್ರಾರಂಭವಾಗುವುದು. ಕಾಲಕಳೆದಂತೆಲ್ಲಾ ಕತ್ತಲೆಯು ಹೆಚ್ಚುಹೆಚ್ಚಾಗಿ ಆವರಿಸಿ ಗಾಢಾಂಧಕಾರವು ಪ್ರಾಪ್ತವಾಗುವುದು. ಇಂತಹ ಕಾಲದಲ್ಲಿ ಬೆಳಕನ್ನುಂಟು ಮಾಡಲು ಸೂರ್ಯನಿಲ್ಲದಿರುವುದರಿಂದ ಅಗ್ನಿಯೇ ತನ್ನ ಪ್ರಕಾಶಮಾನವಾಗಿ ಬೆಳಗುತ್ತಿರುವ ಜ್ವಾಲೆಗಳಿಂದ ಅಂಧಕಾರವನ್ನು ನಾಶಪಡಿಸಿ ಸರ್ವತ್ರ ಬೆಳಕನ್ನುಂಟುಮಾಡಿದನು. ರಾತ್ರಿಯ ಗಾಢಾಂಧಕರವನ್ನು ತನ್ನ ಪ್ರಕಾಶದಿಂದ ನಾಶಪಡಿಸುತ್ತದರಿಂದ ಅಗ್ನಿಯು ರಾತ್ರಿಯನ್ನು ಸೋಲಿಸಿದನೆಂದು ಇಲ್ಲಿ ಆಲಂಕಾರಿಕವಾಗಿ ಋಷಿಯು ವರ್ಣಿಸಿದಾನೆ.

**ಬೃಹತಃ ಪಿತುಃ ಜಾಂ ಯೋಷಾಂ ಜನಯನ್**—ಚರಾಚರಾತ್ಮಕವಾದ ಈ ದೊಡ್ಡ ಜಗತ್ತಿನ ಪಾಲಕನಾದ ಪ್ರಜಾಪತಿಯಿಂದ ಅಥವಾ ಆದಿತ್ಯನಿಂದ ಸೃಷ್ಟವಾದ ಉಷಃಕಾಲವನ್ನು ಪ್ರಕಟಿಸುತ್ತಾ, ಎಂದರೆ ರಾತ್ರಿಕಾಲದಲ್ಲಿ ಅಗ್ನಿಯು ತನ್ನ ತೇಜಸ್ಸಿನಿಂದ ಪ್ರಕಾಶಿಸುತ್ತಿರಲಾಗಿ ಕ್ರಮಕ್ರಮವಾಗಿ ರಾತ್ರಿಯು ಕಳೆದುಹೋಗುತ್ತಾ ಉಷಃಕಾಲವು ಪ್ರಾಪ್ತವಾಗುವುದೆಂದರ್ಥವಿರುವುದು. ಈ ಕಾರ್ಯವನ್ನು ಅಗ್ನಿಯು ಮಾಡುವನೆಂದು ಋಷಿಯು ಹೇಳಿದ್ದಾನೆ.

**ಅರತಿಃ ದಿವಃ ವಸುಭಿಃ ಸೂರ್ಯಸ್ಯ ಧಾಮನ್ ಊರ್ಧ್ವಂ ಸ್ತಭಾಯನ್ ವಿ ಭಾತಿ**—ರಾತ್ರಿಕಾಲದಲ್ಲಿ ಅಗ್ನಿಯು ಸರ್ವತ್ರ ವ್ಯಾಪಿಸಿರುವ ತನ್ನ ತೇಜಸ್ಸು (ಜ್ವಾಲೆ ಅಥವಾ ಕಿರಣ)ಗಳಿಂದ ಸ್ವರ್ಗ ಅಥವಾ ಅಂತರಿಕ್ಷದಲ್ಲಿ ಬಹುದೂರದವರೆಗೂ ಪ್ರಕಾಶವನ್ನುಂಟುಮಾಡುತ್ತಾ ಇರುವನು. ಆ ಕಾಲದಲ್ಲಿ ನಕ್ಷತ್ರಗಳು ಸಹಿತ ಸೂರ್ಯೋದಯಕಾಲವು ಪ್ರಾಪ್ತವಾಗಿರುವುದಿಲ್ಲವಾದ್ದರಿಂದ ಸೂರ್ಯನು ಉದಯಿಸದಂತೆ ಅಗ್ನಿಯು ತಡೆದು ತಾನು ವಿಶೇಷರೀತಿಯಿಂದ ಪ್ರಕಾಶಿಸುತ್ತಿರುವನೆಂದು ಔಪಚಾರಿಕವಾಗಿ ಋಷಿಯು ವರ್ಣಿಸಿದ್ದಾನೆ. ವಸ್ತುತಃ ಅಗ್ನಿಯು ಪ್ರಕಾಶದಿಂದ ಬೆಳಗುವುದಕ್ಕೂ, ಸೂರ್ಯನು ಉದಯಿಸುವುದಕ್ಕೂ ಏನೂ ಸಂಬಂಧವಿರುವುದಿಲ್ಲ. ಕಾಲಕ್ರಮದಲ್ಲಿ ಸೂರ್ಯನು ಉದಯಿಸಿಯೇ ಉದಯಿಸುತ್ತಾನೆ. ಅಲ್ಲಿಯವರೆಗೆ ಎಂದರೆ ಆ ಕಾಲದವರೆಗೆ ಸರ್ವತ್ರ ವ್ಯಾಪಿಸಿರುವ ಕತ್ತಲೆಯಲ್ಲಿ ಅಗ್ನಿಯು ವಿಶೇಷವಾಗಿ ಪ್ರಕಾಶಿಸುತ್ತಾನೆ. ಈ ಸಂದರ್ಭದಲ್ಲಿ ಸೂರ್ಯೋದಯವು ತಡವಾಗುವುದನ್ನು ಅಗ್ನಿಯ ಮಾಹಾತ್ಮ್ಯದಿಂದಲೇ ಆಗಿದೆಯೆಂದು ಅಗ್ನಿಯ ಗುಣವರ್ಣನೆ ಮಾಡುವುದಕ್ಕಾಗಿ ಋಷಿಯು ಈ ವಿಧವಾಗಿ ವರ್ಣಿಸಿದ್ದಾನೆ.

। ಸಂಹಿತಾಪಾಠಃ ।

ಭದ್ರೋ ಭದ್ರಯಾ ಸಚಮಾನ ಆಗಾತ್ಸ್ವಸಾರಂ ಜಾರೋ ಅಭ್ಯೇತಿ ಪಶ್ಚಾತ್ ।
ಸುಪ್ರಕೇತೈರ್ದ್ಯುಭಿರಗ್ನಿರ್ವಿತಿಷ್ಠನ್ರುಶದ್ಭಿರ್ವರ್ಣೈರಭಿ ರಾಮಮಸ್ಥಾತ್ ॥ ೩ ॥

। ಪದಪಾಠಃ ।

ಭದ್ರಃ । ಭದ್ರಯಾ । ಸಚಮಾನಃ । ಆ । ಅಗಾತ್ । ಸ್ವಸಾರಂ । ಜಾರಃ । ಅಭಿ । ಏತಿ । ಪಶ್ಚಾತ್ ।
ಸುಽಪ್ರಕೇತೈಃ । ದ್ಯುಽಭಿಃ । ಅಗ್ನಿಃ । ವಿಽತಿಷ್ಠನ್ । ರುಶತ್ಽಭಿಃ । ವರ್ಣೈಃ । ಅಭಿ । ರಾಮಂ । ಅಸ್ಥಾತ್ ॥ ೩ ॥

। ಸಾಯಣಭಾಷ್ಯಂ ।

ಭದ್ರೋ ಭಜನೀಯಃ ಕಲ್ಯಾಣೋ ಭದ್ರಯಾ ಭಜನೀಯಯಾ ದೀಪ್ತ್ಯೋಷಸಾ ವಾ ಸಚಮಾನಃ ಸೇವ್ಯಮಾನಃ ಸಂಗಚ್ಛಮಾನೋ ವಾಗ್ನಿರಾಗಾತ್ । ಆಜಗಾಮ । ಅರ್ಥಪತ್ತ್ಯಾದಾಹವನೀಯಂ ತತಃ ಪಶ್ಚಾಜ್ಜಾರೋ ಜರಯಿತಾ ಶತ್ರೂಣಾಂ ಸೋಽಗ್ನಿಃ ಸ್ವಸಾರಂ ಸ್ವಯಂಸಾರಿಣೀಮಾಗಚ್ಛತಿ ಭಗಿನೀಂ ವಾಗ್ನೇರುಷಸಮಭ್ಯೇತಿ । ಅಭಿಗಚ್ಛತಿ । ತಥಾ ಸುಪ್ರಕೇತೈಃ ಸುಪ್ರಜ್ಞಾನೈರ್ದ್ಯುಭಿರ್ದೀಪ್ತೈಸ್ತೇಜೋಭಿಃ ಸಹ

ವಿತಿಷ್ಠನ್ ಸರ್ವತೋ ವರ್ತಮಾನಃ ಸೋಽಗ್ನೀ ರುಶದ್ಭಿಃ ಶ್ವೇತೈರ್ವರ್ಣೈರ್ವಾರಕೈರಾತ್ಮೀಯೈಸ್ತೇಜೋಭೀ ರಾಮಂ ಕೃಷ್ಣಂ ಶಾರ್ವರಂ ತಮೋಽಭ್ಯಸ್ಥಾತ್ । ಸಾಯಂಹೋಮಕಾಲೇಽಭಿಭೂಯ ತಿಷ್ಠತಿ ॥

॥ ಪ್ರತಿಪದಾರ್ಥ ॥

**ಭದ್ರಃ**—ಕಲ್ಯಾಣಾತ್ಮಕನಾದ ಅಗ್ನಿಯು । **ಭದ್ರಯಾ**—ಮಂಗಳಕರವಾದ ತೇಜಸ್ಸಿನಿಂದ । **ಸಚಮಾನಃ**—ಸೇವಿಸಲ್ಪಟ್ಟವನಾಗಿ । **ಆಗಾತ್**—ಬಂದಿದ್ದಾನೆ ! **ಪಶ್ಚಾತ್**—ಅನಂತರ । **ಜಾರಃ**—ಶತ್ರುನಾಶಕನಾದ **ಅಗ್ನಿಃ**—ಅಗ್ನಿಯು । **ಸ್ವಸಾರಂ**—ತನ್ನ ಭಗಿನಿಯಾದ ಉಷಸ್ಸನ್ನು । **ಅಭ್ಯೇತಿ**—ಸಮೀಪಿಸುತ್ತಾನೆ । **ಸುಪ್ರಕೇತೈಃ**—ಉತ್ತಮವಾದ ಪ್ರಜ್ಞಾಪಕಗಳಾದ । **ದ್ಯುಭಿಃ**-ಕಾಂತಿಗಳಿಂದ । **ವಿತಿಷ್ಠನ್**-ಸರ್ವತ್ರ ವ್ಯಾಪಿಸಿರುವ । **ಅಗ್ನಿಃ**—ಅಗ್ನಿಯು । **ರುಶದ್ಭಿಃ**—ಶ್ವೇತವರ್ಣಗಳುಳ್ಳ । **ವರ್ಣೈಃ**—ತೇಜಸ್ಸುಗಳಿಂದ । **ರಾಮಂ**—ರಾತ್ರಿಯ ಕತ್ತಲೆಯನ್ನು । **ಅಭಿ ಅಸ್ಥಾತ್**—ಆಕ್ರಮಿಸಿ ನಿಂತಿದ್ದಾನೆ.

॥ ಭಾವಾರ್ಥ ॥

ಕಲ್ಯಾಣಾತ್ಮಕನಾದ ಅಗ್ನಿಯು ಮಂಗಳಕರವಾದ ತೇಜಸ್ಸಿನಿಂದ ಸೇವಿಸಲ್ಪಟ್ಟವನಾಗಿ ಬಂದಿದ್ದಾನೆ. ಅನಂತರ ಶತ್ರುನಾಶಕನಾದ ಅಗ್ನಿಯು ತನ್ನ ಭಗಿನಿಯಾದ ಉಷಸ್ಸನ್ನು ಸಮೀಪಿಸುತ್ತಾನೆ. ಉತ್ತಮವಾದ ಪ್ರಜ್ಞಾಪಕಗಳಾದ ಕಾಂತಿಗಳಿಂದ ಸರ್ವತ್ರ ವ್ಯಾಪಿಸಿರುವ ಅಗ್ನಿಯು ಶ್ವೇತವರ್ಣಗಳುಳ್ಳ ತೇಜಸ್ಸುಗಳಿಂದ ರಾತ್ರಿಯ ಕತ್ತಲೆಯನ್ನು ಆಕ್ರಮಿಸಿ ನಿಂತಿದ್ದಾನೆ

## English Translation

He has come auspicious, waited on by the auspicious (light); he afterwards approaches his sister (dawn) like a gallant: Agni, spreading everywhere, with omniscient rays overpowers the dark (night) with brilliant beams.

॥ ವಿಶೇಷವಿಷಯಗಳು ॥

ಸೇವಿಸಲ್ಪಡುವ ಮಂಗಳಕರನಾದ ಅಗ್ನಿಯು, ತನ್ನ ಮಂಗಳಕರವಾದ ತೇಜಸ್ಸಿನಿಂದ ಕೂಡಿ ತನ್ನ ಭಗಿನಿ (ಸೋದರಿ) ಯಾದ ಉಷಸ್ಸನ್ನು ಸಮೀಪಿಸುತ್ತಾನೆ. ಎಂದರೆ, ಅಗ್ನಿಯು ಸ್ವತೇಜಸ್ಸಿನಿಂದ ರಾತ್ರಿಯೆಲ್ಲಾ ಬೆಳಗುತ್ತಿರುವಾಗ ಕ್ರಮೇಣ ರಾತ್ರಿಯು ಕಳೆದುಹೋಗಿ ಉಷಃಕಾಲವು ಸಮೀಪಿಸುವಂತಾಯಿತು ಎಂಬುದನ್ನು ಸೂಚಿಸುವುದಕ್ಕಾಗಿ ಅಗ್ನಿಯು ಉಷಸ್ಸನ್ನು ಸಮೀಪಿಸುತ್ತಾನೆ ಎಂದು ಹೇಳಿದೆ. ಅಗ್ನಿಗೂ ರಾತ್ರಿಗೂ ಸಂಬಂಧವಿದೆ. ಆಗ್ನೇಯೀ ವೈ ರಾತ್ರಿಃ ಎಂಬ ಶ್ರುತಿವಾಕ್ಯವು ಇದನ್ನು ಸಮರ್ಥಿಸುತ್ತದೆ. ಅಗ್ನಿಯು ರಾತ್ರಿಕಾಲದಲ್ಲಿಯೇ ವಿಶೇಷವಾಗಿ ಪ್ರಕಾಶಿಸುವುದರಿಂದ ಅಗ್ನಿಗೂ ರಾತ್ರಿಗೂ ನಿಕಟಸಂಬಂಧವಿದ್ದಂತಾಯಿತು. ರಾತ್ರಿಯ ಅಂತ್ಯದಲ್ಲಿ ಉಷಃಕಾಲವು ಪ್ರಾದುರ್ಭಾವವಾಗುವುದರಿಂದ ರಾತ್ರಿಯಿಂದ ಉಷಃಕಾಲವು ಹುಟ್ಟಿದಂತಾಯಿತು. ಈ ರೀತಿ ಅಗ್ನಿಯೂ, ಉಷಃಕಾಲವೂ ರಾತ್ರಿಗೆ ಸಂಬಂಧಪಟ್ಟಿರುವುದರಿಂದ ಎಂದರೆ ರಾತ್ರಿಕಾಲಗಳಲ್ಲಿ ಇವರ ಜನನ (ಉತ್ಪತ್ತಿ) ಯಾಗುವುದರಿಂದ ಉಷಃಕಾಲವು ಅಗ್ನಿಗೆ ಭಗಿನಿ (ತಂಗಿ) ಯೆಂದು ಹೇಳುವುದು ನ್ಯಾಯವಾಗಿದೆ. ಈ ರೀತಿ ರಾತ್ರಿಕಾಲದಲ್ಲಿ ಬೆಳಗುವ ಅಗ್ನಿಯು

ರಾತ್ರಿಯ ಕಗ್ಗತ್ತಲೆಯನ್ನು ನಾಶಮಾಡುತ್ತಾ ಬೆಳಕನ್ನು ಬೀರುವ ತನ್ನ ತೇಜಸ್ಸುಗಳಿಂದ ದೇದೀಪ್ಯಮಾನನಾಗಿ ಪ್ರಕಾಶಿಸುತ್ತಿರುವನು ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಅಸ್ಯ ಯಾಮಾಸೋ ಬೃಹತೋ ನ ವಗ್ನೂನಿಂಧಾನಾ ಅಗ್ನೇಃ ಸಖ್ಯುಃ ಶಿವಸ್ಯ ।

ಈಡ್ಯಸ್ಯ ವೃಷ್ಣೋ ಬೃಹತಃ ಸ್ವಾಸೋ ಭಾಮಾಸೋ ಯಾಮನ್ನಕ್ತವಶ್ಚಿಕಿತ್ರೇ ॥

॥ ಪದಪಾಠಃ ॥

ಅಸ್ಯ । ಯಾಮಾಸಃ । ಬೃಹತಃ । ನ । ವಗ್ನೂನ್ । ಇಂಧಾನಾಃ । ಅಗ್ನೇಃ । ಸಖ್ಯುಃ । ಶಿವಸ್ಯ ।

ಈಡ್ಯಸ್ಯ । ವೃಷ್ಣಃ । ಬೃಹತಃ । ಸುಽಆಸಃ । ಭಾಮಾಸಃ । ಯಾಮನ್ । ಅಕ್ತವಃ । ಚಿಕಿತ್ರೇ ॥ ೪ ॥

॥ ಸಾಯಣಭಾಷ್ಯಂ ॥

ಬೃಹತೋ ಮಹತೋಽಸ್ಯಾಗ್ನೇಃ ಸಂಬಂಧಿನ ಇಂಧಾನಾ ದೀಪ್ಯಮಾನಾ ಯಾಮಾಸಃ । ಯಾಂತಿ ಗಚ್ಛಂತೀತಿ ಯಾಮಾ ರಶ್ಮಯಃ । ನ ವಗ್ನೂನ್ ಸ್ತುತಿಕಾರಿಣೋ ಜನಾನ್ನ ಬಾಧಂತೇ । ಕಿಂತು ಸಖ್ಯುಃ ಸ್ತುತ್ಯಸ್ತೋತೃತ್ವಲಕ್ಷಣೇನ ಸಖ್ಯೇನ ಸಖಿಭೂತಸ್ಯ ಶಿವಸ್ಯ ಕಲ್ಯಾಣಸ್ಯ ಭಕ್ತಾನಾಂ ಸುಖಕರಸ್ಯೇಡ್ಯಸ್ಯ ಸ್ತೋತವ್ಯಸ್ಯ ವೃಷ್ಣಃ ಕಾಮಾನಾಂ ವರ್ಷಿತುರ್ಬೃಹತೋ ಮಹತಃ ಸ್ವಾಸಃ ಶೋಭನಾಸ್ಯಸ್ಯಾಸ್ಯಾಗ್ನೇಃ ಸ್ವಭೂತಾ ಅಕ್ತವಸ್ತಮಾಂಸ್ಯಂಜಂತೋಽಪಗಮಯಂತ ಆಹುತಿಭಿಃ ಸಂಗತಾ ವಾ ಭಾಮಾಸಃ ॥ ಭಾಮ ಕ್ರೋಧೇ । ತೀಕ್ಷ್ಣಾ ಅಸಹ್ಯಾ ರಶ್ಮಯೋ ಯಾಮನ್ । ಯಾತಿ ದೇವಾನ್ಪ್ರತಿ ತರ್ಪಣಾಯ ಯಾಂತಿ ದೇವಾ ಯತ್ರ ತಂ ಪ್ರತ್ಯಂಗಭಾವಾಯೇತಿ ಯಾಮಾ ಯಜ್ಞಃ । ತಸ್ಮಿಂಶ್ಚಿಕಿತ್ರೇ । ಸರ್ವತೋ ಜಜ್ಞಿರೇ । ಪ್ರಥಿತಾ ಅಭೂವನ್ ॥

॥ ಪ್ರತಿಪದಾರ್ಥ ॥

ಬೃಹತಃ—ಮಹಾತ್ಮನಾದ । ಅಸ್ಯ ಅಗ್ನೇಃ—ಈ ಅಗ್ನಿಯ । ಇಂಧಾನಾಃ—ಪ್ರಕಾಶಮಾನಗಳಾದ । ಯಾಮಾಸಃ—ರಶ್ಮಿಗಳು । ವಗ್ನೂನ್—ಸ್ತುತಿಕರ್ತರನ್ನು । ನ (ಬಾಧಂತೇ)—ಹಿಂಸಿಸುವುದಿಲ್ಲ । ಸಖ್ಯುಃ—ಮಿತ್ರನೂ । ಶಿವಸ್ಯ—ಮಂಗಳಕರನೂ । ಈಡ್ಯಸ್ಯ—ಸ್ತುತ್ಯರ್ಹನೂ । ವೃಷ್ಣಃ—ಕಾಮವರ್ಷಕನೂ । ಬೃಹತಃ—ಮಹಾತ್ಮನೂ । ಸ್ವಾಸಃ—ಮಂಗಳಕರವಾದ ಮುಖವುಳ್ಳವನೂ ಆದ ಅಗ್ನಿಯ । ಅಕ್ತವಃ—ಆಹುತಿಗಳೊಡನೆ ಸೇರಿದ । ಭಾಮಾಸಃ—ರಶ್ಮಿಗಳು । ಯಾಮನ್—ಯಜ್ಞದಲ್ಲಿ । ಚಿಕಿತ್ರೇ—ಎಲ್ಲರಿಂದಲೂ ಅರಿಯಲ್ಪಡುತ್ತವೆ.

॥ ಭಾವಾರ್ಥ ॥

ಮಹಾತ್ಮನಾದ ಈ ಅಗ್ನಿಯ ಪ್ರಕಾಶಮಾನಗಳಾದ ರಶ್ಮಿಗಳು ಸ್ತುತಿಕರ್ತರನ್ನು ಹಿಂಸಿಸುವುದಿಲ್ಲ. ಮಿತ್ರನೂ ಮಂಗಳಕರನೂ, ಸ್ತುತ್ಯರ್ಹನೂ, ಕಾಮವರ್ಷಕನೂ, ಮಹಾತ್ಮನೂ, ಮಂಗಳಕರವಾದ ಮುಖವುಳ್ಳವನೂ ಆದ ಅಗ್ನಿಯ ಆಹುತಿಗಳೊಡನೆ ಸೇರಿದ ರಶ್ಮಿಗಳು ಯಜ್ಞದಲ್ಲಿ ಎಲ್ಲರಿಂದಲೂ ಅರಿಯಲ್ಪಡುತ್ತವೆ.

## English Translation

The blazing flames of that mighty Agni do not (deter) his adorers; the fierce flames of the friendly auspicious adorable (Agni), the showerer of (benefits), the vast, the strong-mouthed, are visible in the sacrifice.

॥ ವಿಶೇಷವಿಷಯಗಳು ॥

**ಯಾಮಾಸಃ—ಯಾಂತಿ ಗಚ್ಛಂತೀತಿ ಯಾಮಾ ರಶ್ಮಯಃ ।** ಅಗ್ನಿಯಿಂದ ಹೊರಹೊರಟು ಸುತ್ತಲೂ ಹರಡುವ ಸ್ವಭಾವವುಳ್ಳದ್ದರಿಂದ **ಯಾಮಾಃ** ಎಂದರೆ ರಶ್ಮಿಗಳು.

**ವಗ್ನ್ವಾನ್ ನ—ಸ್ತುತಿಕಾರಿಣೋ ಜನಾನ್ ನ ಬಾಧಂತೇ।** ಅಗ್ನಿಯ ಪ್ರಚಂಡವಾದ ಕಿರಣಗಳು ಅಥವಾ ದಹಿಸುವ ಶಕ್ತಿಯು ಶತ್ರುಜನರಿಗೆ ಕೆಡಕನ್ನು ಮಾಡುವ ಸಾಮರ್ಥ್ಯವುಳ್ಳದ್ದಾಗಿದ್ದರೂ ಅಗ್ನಿಯನ್ನು ಸ್ತುತಿಸುತ್ತಿರುವ ಜನರಿಗೆ ಯಾವ ಬಾಧೆಯನ್ನೂ ಉಂಟುಮಾಡುವುದಿಲ್ಲ. ಏಕೆಂದರೆ ಅಗ್ನಿಗೂ ಸ್ತೋತ್ರಮಾಡುವ ಜನರಿಗೂ ಒಂದು ವಿಧವಾದ ಸಖ್ಯತ್ವ (ಸ್ನೇಹ) ವಿದೆಯೆಂದು ಋಷಿಯು ಹೇಳಿದಾನೆ.

**ಸಖ್ಯೈಃ ಶಿವಸ್ಯ**—ಅಗ್ನಿಗೂ ಜನರಿಗೂ ಸ್ನೇಹವೆಂದರೇನು ಎಂದರೆ, **ಸ್ತುತ್ಯಸ್ತೋತೃತ್ವಯಷ್ಟೃಯಷ್ಟವ್ಯತ್ವಲಕ್ಷಣೇನ ಸಖ್ಯೇನ।** ಅಗ್ನಿಗೂ ಜನರಿಗೂ ಒಂದು ವಿಧವಾದ ಸಂಬಂಧವಿರುವುದು. ಅಗ್ನಿಯು ಸ್ತುತಿಸಲ್ಪಡುವವನು ; ಜನರು ಅಗ್ನಿಯನ್ನು ಸ್ತುತಿಸುವವರು. ಈ ವಿಧವಾದ ಸಂಬಂಧಕ್ಕೆ **ಸ್ತುತ್ಯಸ್ತೋತೃತ್ವವೆಂದು** ಹೆಸರು. ಅದರಂತೆಯೇ ಅಗ್ನಿಯನ್ನು ಜನರು ಆಹುತ್ಯಾದಿಗಳನ್ನು ಅರ್ಪಿಸಿ ಆರಾಧಿಸುವುದರಿಂದ **ಯಷ್ಟೃಯಷ್ಟವ್ಯತ್ವವೆಂಬ** ಸಂಬಂಧವೂ ಇದೆ. ಈ ವಿಧವಾದ ಸಂಬಂಧವನ್ನೇ ಅಗ್ನಿಗೂ ಸ್ತುತಿಕರ್ತರಿಗೂ ಇರುವ ಸಖ್ಯತ್ವ ಅಥವಾ ಸ್ನೇಹವೆಂದು ಋಷಿಯು ವರ್ಣಿಸಿದಾನೆ.

**ಭಾಮಾಸಃ—ಭಾಮ ಕ್ರೋಧೇ । ತೀಕ್ಷ್ಣಾ ಅಪ್ರಸಹ್ಯಾ ರಶ್ಮಯಃ।** ಕ್ರೋಧರೂಪವಾದ ಎಂದರೆ ಸಹಿಸಲಶಕ್ಯವಾದ ತೀಕ್ಷ್ಣವಾದ ಕಿರಣಗಳು. ಅಗ್ನಿಯು ಮಹಾಜ್ವಾಲೆಗಳಿಂದ ಸಹಿತನಾಗಿ ಉರಿಯುತ್ತಿರುವಾಗ ಅವರ ಸಮೀಪಕ್ಕೆ ಹೋಗಲು ಯಾರಿಂದಲೂ ಸಾಧ್ಯವಿಲ್ಲ. ಅಂತಹ ತೀಕ್ಷ್ಣವಾದ ಅಗ್ನಿಯ ರಶ್ಮಿಗಳು ಎಂದರ್ಥವು.

**ಯಾಮನ್-ಯಾತಿ ದೇವಾನ್ ಪ್ರತಿ ತರ್ಪಣಾಯ ಯಾಂತಿ ವಾ ದೇವಾ ಏತಂ ಪ್ರತ್ಯಂಗಭಾವಾಯೇತಿ ಯಾಮಾ ಯಜ್ಞಃ ।** ದೇವತೆಗಳನ್ನು ಆಹುತ್ಯರ್ಪಣಗಳಿಂದ ತೃಪ್ತಿಪಡಿಸುವುದರಿಂದ **ಯಾಮನ್** ಎಂದರೆ ಯಜ್ಞವು ಅಥವಾ ಈ ದೇವತೆಗಳೇ ತಮ್ಮ ಸಂತೋಷಾರ್ಥವಾಗಿ ಈ ಯಜ್ಞಭೂಮಿಗೆ ಆಹೂತರಾಗಿ ಹೋಗುವುದರಿಂದ ಯಾಮನ್ ಎಂದರೆ ಯಜ್ಞವು ಎಂದು ಎರಡು ವಿಧವಾಗಿ ಅರ್ಥವಿವರಣೆ ಮಾಡಿದಾರೆ.

॥ ಸಂಹಿತಾಪಾಠಃ ॥

ಸ್ವನಾ ನ ಯಸ್ಯ ಭಾಮಾಸಃ ಪವಂತೇ ರೋಚಮಾನಸ್ಯ ಬೃಹತಃ ಸುದಿವಃ ।
ಜ್ಯೇಷ್ಠೇಭಿರ್ಯಸ್ತೇಜಿಷ್ಠೈಃ ಕ್ರೀಳುಮದ್ಭಿರ್ವರ್ಷಿಷ್ಠೇಭಿರ್ಭಾನುಭಿರ್ನಕ್ಷತಿ ದ್ಯಾಂ ॥ ೫ ॥

॥ ಪದಪಾಠಃ ॥

ಸ್ವನಾಃ । ನ । ಯಸ್ಯ । ಭಾಮಾಸಃ । ಪವಂತೇ । ರೋಚಮಾನಸ್ಯ । ಬೃಹತಃ । ಸುಽದಿವಃ ।
ಜ್ಯೇಷ್ಠೇಭಿಃ । ಯಃ । ತೇಜಿಷ್ಠೈಃ । ಕ್ರೀಳುಮತ್ಽಭಿಃ । ವರ್ಷಿಷ್ಠೇಭಿಃ । ಭಾನುಽಭಿಃ । ನಕ್ಷತಿ । ದ್ಯಾಂ ।

॥ ಸಾಯಣಭಾಷ್ಯಂ ॥

ರೋಚಮಾನಸ್ಯ ದೀಪ್ಯಮಾನಸ್ಯ ಬೃಹತೋ ಮಹತಃ ಸುದಿವಃ ಶೋಭನದೀಪ್ತೇರ್ಯಸ್ಯಾಗ್ನೇಃ ಸ್ವಭೂತಾ ಭಾಮಾಸಃ । ಭಾ ದೀಪ್ತೌ । ದೀಪ್ತಾ ರಶ್ಮಯಃ ಸ್ವನಾ ನ ಸ್ವನಂತೋ ಮರುತ ಇವ ಪವಂತೇ ಸರ್ವತಃ ಶಬ್ದಂ ಕುರ್ವಂತೋ ಗಚ್ಛಂತಿ । ಕಿಂಚ ಯೋಽಗ್ನಿರ್ಜ್ಯೇಷ್ಠೇಭಿರತ್ಯಂತಂ ಪ್ರಶಸ್ತೈಸ್ತೇಜಿಷ್ಠೈಸ್ತೇಜಸ್ವಿತಮೈಃ ಕ್ರೀಳುಮದ್ಭಿಃ ಕ್ರೀಡನವದ್ಭಿರ್ವರ್ಷಿಷ್ಠೇಭಿರ್ವೃದ್ಧತಮೈರ್ಭಾನುಭಿರಾತ್ಮೀಯೈಸ್ತೇಜೋಭಿರ್ದ್ಯಾಂ ದ್ಯುಲೋಕಂ ನಕ್ಷತಿ ವ್ಯಾಪ್ನೋತೀತಿ । ಸ ತ್ವಂ ದೇವಾನಾವಹೇತ್ಯುತ್ತರೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

**ರೋಚಮಾನಸ್ಯ**—ಕಾಂತಿಯುತನಾದವನೂ । **ಬೃಹತಃ**—ಮಹತ್ಸ್ವರೂಪವುಳ್ಳವನೂ । **ಸುದಿವಃ**—ಉತ್ತಮವಾದ ಪ್ರಭೆಯುಳ್ಳವನೂ ಆದ । **ಯಸ್ಯ**—ಯಾವ ಅಗ್ನಿಯ । **ಭಾಮಾಸಃ**—ರಶ್ಮಿಗಳು । **ಸ್ವನಾ ನ**—ಮರುತ್ತುಗಳಂತೆ । **ಪವಂತೇ**—ಸರ್ವತ್ರ ಶಬ್ದಮಾಡಿಕೊಂಡು ಸಂಚರಿಸುವವೋ । **ಯಃ**—ಯಾವ ಅಗ್ನಿಯು । **ಜ್ಯೇಷ್ಠೇಭಿಃ**—ಅತ್ಯಂತ ಪ್ರಶಸ್ತವಾದವೂ । **ತೇಜಿಷ್ಠೈಃ**—ತೇಜೋಯುತವಾದವೂ । **ಕ್ರೀಳುಮದ್ಭಿಃ**—ಕ್ರೀಡೆಯಿಂದ ಕೂಡಿದವೂ । **ವರ್ಷಿಷ್ಠೇಭಿಃ**—ಅತ್ಯಂತ ಶ್ರೇಷ್ಠವಾದವೂ ಆದ । **ಭಾನುಭಿಃ**—ರಶ್ಮಿಗಳಿಂದ । **ದ್ಯಾಂ**—ದ್ಯುಲೋಕವನ್ನು । **ನಕ್ಷತಿ**—ವ್ಯಾಪಿಸುವನೋ (ಆ ಅಗ್ನಿಯು ದೇವತೆಗಳನ್ನು ಕರೆತರಲಿ).

॥ ಭಾವಾರ್ಥ ॥

ಕಾಂತಿಯುತನಾದವನೂ, ಮಹತ್ಸ್ವರೂಪವುಳ್ಳವನೂ, ಉತ್ತಮವಾದ ಪ್ರಭೆಯುಳ್ಳವನೂ ಆದ ಯಾವ ಅಗ್ನಿಯ ರಶ್ಮಿಗಳು ಮರುತ್ತುಗಳಂತೆ ಸರ್ವತ್ರ ಶಬ್ದಮಾಡಿಕೊಂಡು ಸಂಚರಿಸುವವೋ, ಯಾವ ಅಗ್ನಿಯು ಅತ್ಯಂತ ಪ್ರಶಸ್ತವಾದವೂ, ತೇಜೋಯುತವಾದವೂ, ಕ್ರೀಡೆಯಿಂದ ಕೂಡಿದವೂ, ಅತ್ಯಂತ ಪ್ರವೃದ್ಧವಾದವೂ ಆದ ರಶ್ಮಿಗಳಿಂದ ದ್ಯುಲೋಕವನ್ನು ವ್ಯಾಪಿಸುವನೋ ಆ ಅಗ್ನಿಯು ದೇವತೆಗಳನ್ನು ಕರೆತರಲಿ.

## English Translation

The flames of whom, radiant, vast, bright-shining, go roaring like the winds; who covers the sky with most excellent, most lustrous, most sportive, and most mighty rays ;—

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಅಗ್ನಿಯ ಗುಣವರ್ಣನೆ ಮಾತ್ರ ಇದ್ದು ಅರ್ಥ ಹೊಂದುವಂತೆ ವಾಕ್ಯವಿಲ್ಲದಿರುವುದರಿಂದ ಈ ಸೂಕ್ತದ ಏಳನೇ ಋಕ್ಕಿನಲ್ಲಿರುವ ಸ ಆ ವಕ್ಷಿ ಮಹಿ ನಃ—ಅಂತಹ ನೀನು ನಮ್ಮ ಯಜ್ಞಕ್ಕೆ ಮಹಾನುಭಾವರಾದ ದೇವತೆಗಳನ್ನು ಕರೆದುಕೊಂಡು ಬಾ ಎಂಬ ವಾಕ್ಯಕ್ಕೆ ಸಮನ್ವಯಮಾಡಬೇಕು.

ಸ್ವನಾಃ ನ—ಸ್ವನಂತೋ ಮರುತ ಇವ । ಬೀಸುತ್ತಿರುವ ಗಾಳಿಯು ಶಬ್ದಮಾಡುವಂತೆ ಅಗ್ನಿಯು ಕಾಷ್ಠಾದಿಗಳನ್ನು ದಹಿಸುವಾಗ ಚಟಚಟ ಎಂದು ಒಂದು ವಿಧವಾಗಿ ಶಬ್ದಮಾಡುವುದನ್ನು ಇಲ್ಲಿ ವರ್ಣಿಸಿದೆ.

ಜ್ಯೇಷ್ಠೇಭಿಃ ಯಃ ತೇಜಿಷ್ಠೈಃ ಕ್ರೀಳುಮದ್ಭಿಃ ವರ್ಷಿಷ್ಠೇಭಿಃ ಭಾನುಭಿಃ ದ್ಯಾಂ ನಕ್ಷತಿ—ಸ್ವರ್ಗವೂ ನಭೋಮಂಡಲವೂ ಅತ್ಯಂತ ಎತ್ತರದಲ್ಲಿರುವುದೆಂದು ಪ್ರಸಿದ್ಧಿಯಷ್ಟೆ. ಅಗ್ನಿಯು ಅತ್ಯಂತ ತೇಜೋಯುಕ್ತವಾದ ರಶ್ಮಿಗಳು ಅಥವಾ ಜ್ವಾಲೆಗಳು ಅತ್ಯಂತ ಎತ್ತರಕ್ಕೆ ಏಳುತ್ತಾ, ಆಟವಾಡುತ್ತಿರುವಂತೆ ತೋರುತ್ತಾ ಅತಿ ಎತ್ತರದಲ್ಲಿರುವ ಸ್ವರ್ಗವನ್ನೂ ಮುಟ್ಟುತ್ತಾನೆ ಎಂದರೆ ಅತಿ ಎತ್ತರಕ್ಕೆ ವ್ಯಾಪಿಸಿರುತ್ತಾನೆ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಅಸ್ಯ ಶುಷ್ಮಾಸೋ ದದೃಶಾನಪವೇರ್ಜೇಹಮಾನಸ್ಯ ಸ್ವನಯನ್ನಿಯುದ್ಭಿಃ ।
ಪ್ರತ್ನೇಭಿರ್ಯೋ ರುಶದ್ಭಿರ್ದೇವತಮೋ ವಿ ರೇಭದ್ಭಿರರತಿರ್ಭಾತಿ ವಿಭ್ವಾ ॥

॥ ಪದಪಾಠಃ ॥

ಅಸ್ಯ । ಶುಷ್ಮಾಸಃ । ದದೃಶಾನಽಪವೇಃ । ಜೇಹಮಾನಸ್ಯ । ಸ್ವನಯನ್ । ನಿಯುತ್ಽಭಿಃ ।
ಪ್ರತ್ನೇಭಿಃ । ಯಃ । ರುಶತ್ಽಭಿಃ । ದೇವಽತಮಃ । ವಿ । ರೇಭತ್ಽಭಿಃ । ಅರತಿಃ । ಭಾತಿ । ವಿಽಭ್ವಾ ॥

॥ ಸಾಯಣಭಾಷ್ಯಂ ॥

ದದೃಶಾನಪವೇರ್ದರ್ಶನೀಯಜ್ವಾಲಸ್ಯಾಗ್ನೇಃ । ಯದ್ವಾ । ಪವಿರ್ವಜ್ರ ಆಯುಧಂ । ದೃಶ್ಯಮಾನಾಯುಧಸ್ಯ ಜೇಹಮಾನಸ್ಯ । ಜೇಹತಿರ್ಗತಿಕರ್ಮಾ । ಹವಿರಾದಾಯ ದೇವಾನ್ಪ್ರತಿ ಗಚ್ಛತೋಽಸ್ಯಾಗ್ನೇಃ ಸ್ವಭೂತಾಃ ಶುಷ್ಮಾಸಃ ಶೋಷಕಾ ನಿಯುದ್ಭಿಃ । ನಿಯುತೋ ವಾಯೋರಿತಿ ನಾಮೋಕ್ತೇರಶ್ವಾ ನಿಯುತಃ । ತದ್ವ್ಯತಿರಿಕ್ತಾಭಿರ್ಯುಗ್ಭಿಃ ಸಂಯುಕ್ತಾ ರಶ್ಮಯಃ ಸ್ವನಯನ್ ಶಬ್ದಾಯಂತೇ । ಕಿಂಚ ದೇವತಮೋ

॥ ಸಂಹಿತಾಪಾಠಃ ॥

ಸ ಆ ವ॑ಕ್ಷಿ ಮ॒ಹಿ ನ॒ ಆ ಚ॑ ಸತ್ಸಿ ದಿ॒ವಸ್ಪೃ॑ಥಿ॒ವ್ಯೋರ॑ರ॒ತಿರ್ಯು॑ವ॒ತ್ಯೋಃ ।
ಅ॒ಗ್ನಿಃ ಸು॒ತುಕಃ॑ ಸು॒ತುಕೇ॑ಭಿ॒ರಶ್ವೈ॒ ರಭ॑ಸ್ವ॒ದ್ಭೀ ರಭ॑ಸ್ವಾ॒ಁ ಏಹ ಗ॑ಮ್ಯಾಃ ॥

॥ ಪದಪಾಠಃ ॥

ಸಃ । ಆ । ವ॒ಕ್ಷಿ । ಮ॒ಹಿ । ನ॒ಃ । ಆ । ಚ॒ । ಸ॒ತ್ಸಿ । ದಿ॒ವಃಪೃ॒ಥಿ॒ವ್ಯೋಃ । ಅ॒ರ॒ತಿಃ । ಯು॒ವ॒ತ್ಯೋಃ ॥
ಅ॒ಗ್ನಿಃ । ಸು॒ऽತುಕಃ । ಸು॒ऽತುಕೇ॑ಭಿಃ । ಅಶ್ವೈಃ । ರಭ॑ಸ್ವತ್ಽಭಿಃ । ರಭ॑ಸ್ವಾನ್ । ಆ । ಇ॒ಹ । ಗ॒ಮ್ಯಾಃ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸ ತಾದೃಶಸ್ತ್ವಂ ನೋಽಸ್ಮದೀಯೋ ಯಜ್ಞೇ ಮಹಿ ಮಹಾನ್ ದೇವಾನಾ ವಕ್ಷಿ । ಆವಹ । ಪ್ರಾಪಯ । ಕಿಂಚ ಯುವತ್ಯೋಃ ಪರಸ್ಪರಂ ಮಿಶ್ರಿತಯೋಸ್ತರುಣ್ಯೋರ್ವಾ ದಿವಸ್ಪೃಥಿವ್ಯೋರ್ದ್ಯಾವಾಪೃಥಿವ್ಯೋರ್ಮಧ್ಯೇಽರತಿರಗ್ನಿಃ ಸೂರ್ಯಾತ್ಮನಾ ಗಂತಾ ತ್ವಮಾ ಸತ್ಸಿ। ಅಸ್ಮಾಕಂ ಯಜ್ಞಮಾಸೀದ । ತಥಾ ಸುತುಕಃ । ತುಕಿರ್ಗತ್ಯರ್ಥಃ । ಸುಗಮಃ ಸ್ತೋತೃಭಿರ್ಯಷ್ಟೃಭಿಶ್ಚ ಸುಖೇನ ಪ್ರಾಪ್ತವ್ಯೋ ರಭಸ್ವಾನ್ವೇಗವಾನಗ್ನಿರಂಗನಾದಿಗುಣಯುಕ್ತಸ್ತ್ವಂ ಸುತುಕೇಭಿಃ ಸುಗಮ್ಯೈ ರಭಸ್ವದ್ಭಿರ್ವೇಗವದ್ಭಿರಶ್ವೈ ರೋಹಿದಾಖ್ಯೈಃ ಸಹೇಹಾಸ್ಮದೀಯೋ ಯಜ್ಞ ಆ ಗಮ್ಯಾಃ । ಆಗಚ್ಛ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಸಃ**—ಪ್ರಸಿದ್ಧನಾದ ನೀನು । **ನಃ**—ನಮ್ಮ ಯಜ್ಞಕ್ಕೆ । **ಮಹಿ** ಮಹಾತ್ಮರಾದ ದೇವತೆಗಳನ್ನು । **ಆ ವಕ್ಷಿ**—ಕರೆದುಕೊಂಡು ಬಾ । **ಯುವತ್ಯೋಃ**—ಪರಸ್ಪರ ಸೇರಿಕೊಂಡಿರುವ । **ದಿವಸ್ಪೃಥಿವ್ಯೋಃ**—ದ್ಯಾವಾಪೃಥಿವಿಗಳಲ್ಲೆಲ್ಲ । **ಅರತಿಃ**—ಸೂರ್ಯರೂಪದಲ್ಲಿ ಸಂಚರಿಸುವ ನೀನು । **ಆ ಸತ್ಸಿ**—ನಮ್ಮ ಯಜ್ಞಕ್ಕೆ ಬಾ । **ಸುತುಕಃ**—ಸುಖವಾದ ಪ್ರವೇಶಕ್ಕೆ ಅರ್ಹನೂ । **ರಭಸ್ವಾನ್**—ವೇಗವಂತನೂ ಆದ । **ಅಗ್ನಿಃ**—ಅಗ್ನಿಯು । **ಸುತುಕೇಭಿಃ**—ಉತ್ತಮವಾದ ಗಮನವುಳ್ಳವೂ । **ರಭಸ್ವದ್ಭಿಃ**—ವೇಗವುಳ್ಳವೂ ಆದ । **ಅಶ್ವೈಃ**—ಅಶ್ವಗಳೊಡಗೂಡಿ । **ಇಹ**—ನಮ್ಮ ಯಜ್ಞಕ್ಕೆ । **ಆ ಗಮ್ಯಾಃ**—ಬರಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಪ್ರಸಿದ್ಧನಾದ ನೀನು ನಮ್ಮ ಯಜ್ಞಕ್ಕೆ ಮಹಾತ್ಮರಾದ ದೇವತೆಗಳನ್ನು ಕರೆದುಕೊಂಡು ಬಾ. ಪರಸ್ಪರ ಸೇರಿಕೊಂಡಿರುವ ದ್ಯಾವಾಪೃಥಿವಿಗಳಲ್ಲೆಲ್ಲ ಸೂರ್ಯರೂಪದಲ್ಲಿ ಸಂಚರಿಸುವ ನೀನು ನಮ್ಮ ಯಜ್ಞಕ್ಕೆ ಬಾ. ಸುಖವಾದ ಪ್ರವೇಶಕ್ಕೆ ಅರ್ಹನೂ, ವೇಗವಂತನೂ ಆದ ಅಗ್ನಿಯು ಉತ್ತಮವಾದ ಗಮನವುಳ್ಳವೂ, ವೇಗವುಳ್ಳವೂ ಆದ ಅಶ್ವಗಳೊಡಗೂಡಿ ನಮ್ಮ ಯಜ್ಞಕ್ಕೆ ಬರಲಿ.

ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ, ಸುತುಕಃ ಎಂದರೆ ವೇಗಶಾಲಿಯಾದ ಅಗ್ನಿಯು. ಅಗ್ನಿಯು ದಹಿಸುವುದಕ್ಕೆ ಉಪಕ್ರಮಿಸಿದರೆ ಬಹುಬೇಗ ಎಲ್ಲವನ್ನೂ ವ್ಯಾಪಿಸಿ ದಹಿಸುತ್ತಾನೆ. ಆದ್ದರಿಂದ ಅತಿವೇಗವಾದ ಗಮನವುಳ್ಳವನು. ಇವನ ಅಶ್ವಗಳೂ ಸಹ ವೇಗಗಮನವುಳ್ಳವು. ಅಥವಾ ಉತ್ತಮ ಜಾತಿಯಲ್ಲಿ ಹುಟ್ಟಿದವು ಎಂದರೆ ಒಳ್ಳೆಯ ಜಾತ್ಯಶ್ವಗಳು. ಇವು ವೇಗವಾಗಿ ಓಡುವುದರಲ್ಲಿ ಪ್ರಸಿದ್ಧಿಯು ಎಂದು ನಿರ್ವಚನಾಭಿಪ್ರಾಯವು,

## ನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪ್ರ ತ ಇತಿ ಸಪ್ತರ್ಚಂ ಚತುರ್ಥಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ಪ್ರ ತ ಇತ್ಯನು-ಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ॥**

ಅನುವಾದವು— ಪ್ರ ತೇ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತದ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ ಪ್ರ ತೇ ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೪

ಮಂಡಲ—೧೦ ॥ ಅನುವಾಕ—೧ ॥ ಸೂಕ್ತ—೪ ॥
ಅಷ್ಟಕ—೭ ॥ ಅಧ್ಯಾಯ ೫ ॥ ವರ್ಗ ೩೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿ—ತ್ರಿತ ಆಪ್ತ್ಯಃ ॥
ದೇವತಾ—ಅಗ್ನಿಃ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಪ್ರ ತೇ ಯಕ್ಷಿ ಪ್ರ ತ ಇಯರ್ಮಿ ಮನ್ಮ ಭುವೋ ಯಥಾ ವಂದ್ಯೋ ನೋ ಹವೇಷು ।**
**ಧನ್ವನ್ನಿವ ಪ್ರಪಾ ಅಸಿ ತ್ವಮಗ್ನ ಇಯಕ್ಷವೇ ಪೂರವೇ ಪ್ರತ್ನ ರಾಜನ್ ॥ ೧ ॥**

॥ ಪದಪಾಠಃ ॥

**ಪ್ರ । ತೇ । ಯಕ್ಷಿ । ಪ್ರ । ತೇ । ಇಯರ್ಮಿ । ಮನ್ಮ । ಭುವಃ । ಯಥಾ । ವಂದ್ಯಃ । ನಃ । ಹವೇಷು ॥**
**ಧನ್ವನ್ಽಇವ । ಪ್ರಪಾ । ಅಸಿ । ತ್ವಂ । ಅಗ್ನೇ । ಇಯಕ್ಷವೇ । ಪೂರವೇ । ಪ್ರತ್ನ । ರಾಜನ್ ॥ ೧ ॥**

**ಭವಸಿ** । ಪ್ರಪಾ ಎಂದರೆ ನೀರನ್ನು ಕುಡಿಯಲು ಅನುಕೂಲವಾದ ಜಲಾಶಯ, ಭಾವಿ ಮುಂತಾದುವು. ಜಲರಹಿತವಾದ ಮರಳುಕಾಡಿನಲ್ಲಿ ಸಂಚರಿಸುವ ಪುರುಷನು ಬಾಯಾರಿಕೆಯಿಂದ ಬಳಲಿ ನೀರನ್ನು ಕುಡಿಯುವುದಕ್ಕೆ ಅನುಕೂಲವಾದ ಭಾವಿ ಮುಂತಾದ ಜಲಾಶಯವು ಸಿಕ್ಕಿದರೆ ಆಗ ಅವನಿಗೆ ಯಾವರೀತಿ ತೃಪ್ತಿಯುಂಟಾಗಿ ಸುಖವಾಗುವುದೋ ಅದರಂತೆ ಎಲೈ ಅಗ್ನಿಯೇ, ನೀನು ಯಜ್ಞ ಮಾಡುವ ಯಜಮಾನನಿಗೆ ಮರಳುಗಾಡಿನಲ್ಲಿರುವ ಜಲಾಶಯದಂತೆ ಸುಖವನ್ನುಂಟುಮಾಡುವವನಾಗು ಎಂದು ಪ್ರಪಾಶಬ್ದದ ದೃಷ್ಟಾಂತದಿಂದ ಅಗ್ನಿಯ ಗುಣವರ್ಣನೆಮಾಡಿದೆ.

॥ ಸಂಹಿತಾಪಾಠಃ ॥

ಯಂ ತ್ವಾ ಜನಾಸೋ ಅಭಿ ಸಂಚರಂತಿ ಗಾವ ಉಷ್ಣಮಿವ ವ್ರಜಂ ಯವಿಷ್ಠ ॥
ದೂತೋ ದೇವಾನಾಮಸಿ ಮರ್ತ್ಯಾನಾಮಂತರ್ಮಹಾಂಶ್ಚರಸಿ ರೋಚನೇನ ॥

॥ ಪದಪಾಠಃ ॥

ಯಂ । ತ್ವಾ । ಜನಾಸಃ । ಅಭಿ । ಸಂऽಚರಂತಿ । ಗಾವಃ । ಉಷ್ಣಂऽಇವ । ವ್ರಜಂ । ಯವಿಷ್ಠ ॥
ದೂತಃ । ದೇವಾನಾಂ । ಅಸಿ । ಮರ್ತ್ಯಾನಾಂ । ಅಂತಃ । ಮಹಾನ್ । ಚರಸಿ । ರೋಚನೇನ ॥ ೨ ॥

॥ ಸಾಯಣಭಾಷ್ಯಂ ॥

ಹೇ ಯವಿಷ್ಠ ಯುವತಮಾಗ್ನೇ ಯಂ ತ್ವಾ ತ್ವಾಂ ಜನಾಸೋ ಜನಾ ಯಜಮಾನಾಃ ಫಲಪ್ರಾಪ್ತ್ಯರ್ಥಮಭಿ ಸಂಚರಂತಿ ಅಭಿತಃ ಪರಿಚರಂತಿ ಸೇವಂತೇ । ತತ್ರ ದೃಷ್ಟಾಂತಃ । ಗಾವ ಉಷ್ಣಮಿವ ಯಥಾ ಗಾವಃ ಶೀತಾರ್ತಾ ಉಷ್ಣಂ ಶೀತಜನಿತದುಃಖಾಪನೋದನಾರ್ಥಮುಷ್ಣಂ ವ್ರಜಂ ಗೋಷ್ಠಮಭಿ ಗಚ್ಛಂತಿ ತದ್ವತ್ । ಸ ತ್ವಂ ದೇವಾನಾಮಿಂದ್ರಾದೀನಾಂ ಮರ್ತ್ಯಾನಾಂ ಮನುಷ್ಯಾಣಾಂ ಚ ದೂತೋಽಸಿ ಹವಿಷ್ಪ್ರಾಪಣದ್ವಾರಾ । ತತೋ ಮಹಾಂಸ್ತ್ವಮಂತರ್ದ್ಯಾವಾಪೃಥಿವ್ಯೋರ್ಮಧ್ಯೇ ಹವೀಂಷ್ಯಾದಾಯ ರೋಚನೇನಾಂತರಿಕ್ಷೇಣ ಲೋಕೇನ ಚರಸಿ । ಗಚ್ಛಸಿ । ತಂ ತ್ವಾಂ ಸ್ತುಮ ಇತಿ ಶೇಷಃ ॥

॥ ಪ್ರತಿಪದಾರ್ಥ ॥

**ಯವಿಷ್ಠ**—ಅತ್ಯಂತ ಯುವಕನಾದ ಎಲೈ ಅಗ್ನಿಯೇ । **ಗಾವಃ**—(ಶೈತ್ಯದಿಂದ ಹಿಂಸಿತವಾದ) ಗೋವುಗಳು । **ಉಷ್ಣಂ**—ಶಾಖದಿಂದ ಕೂಡಿದ । **ವ್ರಜಂ ಇವ**—ಕೊಟ್ಟಿಗೆಯನ್ನು ಆಶ್ರಯಿಸುವಂತೆ । **ಯಂ ತ್ವಾ**—ಪ್ರಸಿದ್ಧನಾದ ನಿನ್ನನ್ನು । **ಜನಾಸಃ**—ಯಜಮಾನರು । **ಅಭಿ ಸಂಚರಂತಿ**—ಸುತ್ತಲೂ ಸೇವಿಸುತ್ತಾರೆ । **ತ್ವಂ**—ನೀನು । **ದೇವಾನಾಂ**—ಇಂದ್ರಾದಿ ದೇವತೆಗಳಿಗೂ । **ಮರ್ತ್ಯಾನಾಂ**—ಮಾನವರಿಗೂ । **ದೂತಃ ಅಸಿ**—ದೂತನಾಗಿದ್ದೀಯೆ । **ಮಹಾನ್**—ಮಹಾತ್ಮನಾದ ನೀನು । **ಅಂತಃ**—ದ್ಯಾವಾಪೃಥಿವಿಗಳ ನಡುವೆ । **ರೋಚನೇನ**—ಪ್ರಭಾಯುತವಾದ ಲೋಕದಿಂದ । **ಚರಸಿ**—ಸಂಚರಿಸುತ್ತೀಯೆ ।

॥ ಭಾವಾರ್ಥ ॥

ಅತ್ಯಂತ ಯುವಕನಾದ ಎಲೈ ಅಗ್ನಿಯೇ, ಶೈತ್ಯದಿಂದ ಪೀಡಿತವಾದ ಗೋವುಗಳು ಶಾಖದಿಂದ ಕೂಡಿದ ಕೊಟ್ಟಿಗೆಯನ್ನು ಆಶ್ರಯಿಸುವಂತೆ ಪ್ರಸಿದ್ಧರಾದ ಯಜಮಾನರು ಸುತ್ತಲೂ ನಿನ್ನನ್ನೇ ಸೇವಿಸಿ ಆಶ್ರಯಿಸುತ್ತಾರೆ. ನೀನು ದೇವಮಾನವಾದಿಗಳಿಗೆಲ್ಲ ದೂತನಾಗಿದ್ದೀಯೆ. ಮಹಾತ್ಮನಾದ ನೀನು ದ್ಯಾವಾಪೃಥಿವಿಗಳ ನಡುವೆ ಪ್ರಭಾಯುತವಾದ ಲೋಕದಿಂದ ಸಂಚರಿಸುತ್ತೀಯೆ.

English Translation

Men have recourse to you, Agni, youngest (of the gods), as cattle hasten to the warm stall. You are the messenger of the gods and of the mortals ; mighty, you proceed by the firmament between (heaven and earth).

॥ ವಿಶೇಷವಿಷಯಗಳು ॥

ಯಾಸ್ಕರು **ವಾಹಿಷ್ಠಃ** ಎಂಬ ಶಬ್ದದ ಅರ್ಥವನ್ನು ವಿವರಿಸುತ್ತಾ ಈ ಋಕ್ಕಿನಲ್ಲಿರುವ **ದೂತೋ ದೇವಾನಾಮಸಿ ಮರ್ತ್ಯಾನಾಂ** ಎಂಬ ಮೂರನೆಯ ಪಾದವನ್ನು ಉದಾಹರಣೆಗಾಗಿ ಕೊಟ್ಟಿದ್ದಾರೆ. ವಾಹಿಷ್ಠಃ ಎಂದರೆ **ವೋಢೃತಮಃ ದೂತಃ** (ನಿ. ೫–೧) ಎಂದರ್ಥಮಾಡಿದ್ದಾರೆ. ಯಜಮಾನರು ಮಾಡುವ ಯಜ್ಞಗಳಲ್ಲಿ ದೇವತೆಗಳನ್ನು ಉದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡುವ ಹವಿಸ್ಸನ್ನು ಸ್ವರ್ಗದಲ್ಲಿರುವ ದೇವತೆಗಳ ಬಳಿಗೆ ಒಯ್ದು ಅವರಿಗೆ ತಲುಪಿಸುವುದರಿಂದ ಅಗ್ನಿಯು ಯಜಮಾನರಿಗೂ, ದೇವತೆಗಳಿಗೂ ಮಧ್ಯೆ ಇರುವ ದೂತನೆಂದು ಹೇಳಲ್ಪಡುವನು ಎಂದು ಅರ್ಥ ವಿವರಣೆ ಮಾಡಿದ್ದಾರೆ. ಒಬ್ಬ ಮನುಷ್ಯನಿಂದ ಮತ್ತೊಬ್ಬನ ಬಳಿಗೆ ಮಾತನ್ನಾಗಲಿ, ಇತರ ವಸ್ತುವನ್ನಾಗಲಿ ಒಯ್ದು ತಲುಪಿಸುವ ಪುರುಷನಿಗೆ ದೂತನೆಂದು ಹೆಸರು. ಅಗ್ನಿಯು ಇಲ್ಲಿ ಆ ಕಾರ್ಯವನ್ನು ಮಾಡುತ್ತಿರುವುದರಿಂದ ಅಗ್ನಿಯನ್ನು ಈ ಋಕ್ಕಿನಲ್ಲಿ ದೂತನೆಂದು ವರ್ಣಿಸಲಾಗಿದೆ. **ದೂತೋ ದೇವಾನಾಮಸಿ ಮರ್ತ್ಯಾನಾಂ** ಎಂಬ ಶಬ್ದಗಳಿಗೆ ಮನುಷ್ಯರ ಹವಿರಾದಿಗಳನ್ನು ದೇವತೆಗಳ ಬಳಿಗೆ ಒಯ್ಯುವ ದೂತನು ಎಂದು ಈ ವಾಕ್ಯದ ಅರ್ಥವು. ಇನ್ನು ದೂತನೆಂಬ ಶಬ್ದಕ್ಕೆ ಯಾಸ್ಕರು **ದೂತೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ** ಎಂದು ನಿರ್ವಚನವನ್ನು ಹೇಳಿದ್ದಾರೆ ಎಂದರೆ ದೂತಶಬ್ದವು ತ್ವರಿತಗೊಳಿಸು ಎಂಬರ್ಥವುಳ್ಳ ಜು ಧಾತುವಿನಿಂದಾಗಲಿ, ಓಡು ಎಂಬರ್ಥವುಳ್ಳ **ದ್ರು** ಧಾತುವಿನಿಂದಾಗಲಿ, ಅಥವಾ ಹಿಂದಿರುಗು ಎಂಬರ್ಥವುಳ್ಳ ವೃ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ದೂತನಾದವನು ತಾನು ಹೋಗುವ ಪ್ರದೇಶಕ್ಕೆ ತ್ವರಿತಗತಿಯಿಂದ ಎಂದರೆ ಬೇಗನೆ ಓಡುತ್ತಾ ಹೋಗಿ ಸೇರುವುದರಿಂದ ಮೇಲೆ ಹೇಳಿದ ಧಾತುಗಳಿಂದ ದೂತಶಬ್ದವು ನಿಷ್ಪನ್ನವಾಗಿದೆ ಎಂದಭಿಪ್ರಾಯವು.

**ಗಾವಃ ಉಷ್ಣಮಿವ ವ್ರಜಂ (ಸಂಚರಂತಿ)**—ಹಿಂದಿನ ಋಕ್ಕಿನಲ್ಲಿ ಅಗ್ನಿಯನ್ನು ಮರಳುಗಾಡಿನಲ್ಲಿರುವ ಜಲಾಶಯಕ್ಕೆ ಹೋಲಿಸಿ ಈ ಋಕ್ಕಿನಲ್ಲಿ ಗೋವುಗಳನ್ನು ಕಟ್ಟುವ ಕೊಟ್ಟಿಗೆಗೆ ಹೋಲಿಸಿದೆ. ಚಳಿಗಾಲದಲ್ಲಿ ಹಿಮದ ಕೊರೆತದಿಂದ ಹೊರಗೆ ಮೇಯುತ್ತಿದ್ದ ಗೋವುಗಳು ಸಾಯಂಕಾಲದಲ್ಲಿ ಉಷ್ಣೋತ್ಪಾದನಾದಿಗಳಿಂದ ಕೂಡಿ ಶೀತವಾಯು ಸ್ಪರ್ಶವಿಲ್ಲದೆ ಬೆಚ್ಚಗಿರುವ ಕೊಟ್ಟಿಗೆಗಳಿಗೆ ಯಾವರೀತಿ ಸಂತೋಷದಿಂದ ಪ್ರವೇಶಿಸುತ್ತವೆಯೋ ಅದರಂತೆ ಜನರು ಅಗ್ನಿಗಳಾದ ನಿನ್ನನ್ನು ಸುಖಾರ್ಥವಾಗಿ ಸೇವಿಸುತ್ತಾರೆ ಎಂದು ದೃಷ್ಟಾಂತದ ಅಭಿಪ್ರಾಯವು.

॥ ಸಂಹಿತಾಪಾಠಃ ॥

ಶಿಶುಂ ನ ತ್ವಾ ಜೇನ್ಯಂ ವರ್ಧಯಂತೀ ಮಾತಾ ಬಿಭರ್ತಿ ಸಚನಸ್ಯಮಾನಾ ॥
ಧನೋರಧಿ ಪ್ರವತಾ ಯಾಸಿ ಹರ್ಯಞ್ಜಿಗೀಷಸೇ ಪಶುರಿವಾವಸೃಷ್ಟಃ ॥

॥ ಪದಪಾಠಃ ॥

ಶಿಶುಂ । ನ । ತ್ವಾ । ಜೇನ್ಯಂ । ವರ್ಧಯಂತೀ । ಮಾತಾ । ಬಿಭರ್ತಿ । ಸಚನಸ್ಯಮಾನಾ ।
ಧನೋಃ । ಅಧಿ । ಪ್ರऽವತಾ । ಯಾಸಿ । ಹರ್ಯನ್ । ಜಿಗೀಷಸೇ । ಪಶುಃऽಇವ । ಅವऽಸೃಷ್ಟಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಜೇನ್ಯಂ ಜಯಶೀಲಂ ತ್ವಾ ತ್ವಾಂ ಶಿಶುಂ ನ ಪುತ್ರಮಿವ ವರ್ಧಯಂತೀ ಪೋಷಯಂತೀ ಮಾತಾ ಪೃಥಿವೀ ಸಚನಸ್ಯಮಾನಾ ಸಂಪರ್ಕಮಿಚ್ಛಂತೀ ಸತೀ ಬಿಭರ್ತಿ । ಧಾರಯತಿ । ಸ ತ್ವಂ ಹರ್ಯನ್ ಕಾಮಯಮಾನಸ್ತಸ್ಮಿಁಲ್ಲೋಕೇ ಧನೋರಧಿ । ಅಧಿಃ ಸಪ್ತಮ್ಯರ್ಥದ್ಯೋತಕಃ । ಅಂತರಿಕ್ಷಾತ್ಪ್ರವತಾ ಪ್ರವಣೇನ ಮಾರ್ಗೇಣ ಯಾಸಿ । ಯಜ್ಞಂ ಪ್ರತ್ಯಾಗಚ್ಛಸಿ । ಕಿಂಚ ತ್ವಮವಸೃಷ್ಟೋ ಯಷ್ಟೃಭಿರ್ಹವಿಃಪ್ರದಾಯ ಜಿಗೀಷಸೇ । ದೇವಾನ್ಪ್ರತಿ ಗಂತುಮಿಚ್ಛಸಿ । ಕಥಮಿವ । ಪಶುರಿವ ಯಥಾ ವಿಮುಕ್ತಃ ಪಶುರ್ಗೋಷ್ಠಂ ಪ್ರತ್ಯಾಗಚ್ಛತಿ ತದ್ವತ್ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಜೇನ್ಯಂ**—ಜಯಶೀಲನಾದ । **ತ್ವಾ**—ನಿನ್ನನ್ನು । **ಶಿಶುಂ ನ ವರ್ಧಯಂತೀ**—ಪುತ್ರನಂತೆ ಪೋಷಿಸುತ್ತ (ಪುತ್ರನನ್ನು ಪೋಷಿಸುವಂತೆ) । **ಮಾತಾ**—ಪೃಥ್ವಿಯು । **ಸಚನಸ್ಯಮಾನಾ**—ನಿನ್ನ ಸಂಪರ್ಕವನ್ನಪೇಕ್ಷಿಸುತ್ತ । **ಬಿಭರ್ತಿ**—ನಿನ್ನನ್ನು ಭರಿಸುತ್ತಾಳೆ । **ಹರ್ಯನ್**—ಯಜ್ಞಾಪೇಕ್ಷಿಯಾದ ನೀನು । **ಧನೋರಧಿ**—ಅಂತರಿಕ್ಷದಿಂದ । **ಪ್ರವತಾ**—ಅಧೋಮುಖವಾಗಿ ಬರುವ ಮಾರ್ಗದಿಂದ । **ಯಾಸಿ**—ಯಜ್ಞಾಭಿಮುಖವಾಗಿ ಬರುತ್ತೀಯೆ । **ಅವಸೃಷ್ಟಃ**—ನಿನ್ನ ಹವಿಸ್ಸನ್ನು ಪಡೆದನಂತರ । **ಪಶುಃ ಇವ**—ಹುಲ್ಲನ್ನು ಮೇದ ಪಶುವು ಪುನಃ ಕೊಟ್ಟಿಗೆಗೆ ಹೋಗಿಸೇರುವಂತೆ । **ಜಿಗೀಷಸೇ**—ಪುನಃ ದೇವತೆಗಳನ್ನು ಸೇರಲು ಅಪೇಕ್ಷಿಸುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಪುತ್ರನನ್ನು ಮಾತೆಯು ಪೋಷಿಸುವಂತೆ ಜಯಶೀಲನಾದ ನಿನ್ನ ಸಂಪರ್ಕವನ್ನಪೇಕ್ಷಿಸುವ ಪೃಥ್ವಿಯು ನಿನ್ನನ್ನು ಭರಿಸುತ್ತಾಳೆ. ಯಜ್ಞಾಪೇಕ್ಷಿಯಾದ ನೀನು ಅಂತರಿಕ್ಷದಿಂದ ಅಧೋಮುಖವಾಗಿ ಬರುವ ಮಾರ್ಗದಿಂದ ಯಜ್ಞಾಭಿಮುಖವಾಗಿ ಬರುತ್ತೀಯೆ. ನಿನ್ನ ಹವಿಸ್ಸನ್ನು ಪಡೆದ ನಂತರ, ಹುಲ್ಲನ್ನು ಮೇದ ಪಶುವು ಪುನಃ ಕೊಟ್ಟಿಗೆಗೆ ಹೋಗಿ ಸೇರುವಂತೆ ಪುನಃ ದೇವತೆಗಳನ್ನು ಸೇರಲು ಅಪೇಕ್ಷಿಸುತ್ತೀಯೆ.

## English Translation

Cherishing you, (Agni), the victorious, like a child, your mother (earth) desirous of your contact sustains you. You come, eager from above the firmament, by a downward path, and when released (after the oblation is offered), you desire to go back like cattle (to their stall).

॥ ಸಂಹಿತಾಪಾಠಃ ॥

ಮೂರಾ ಅಮೂರ ನ ವಯಂ ಚಿಕಿತ್ವೋ ಮಹಿತ್ವಮಗ್ನೇ ತ್ವಮಂಗ ವಿತ್ಸೇ ॥

ಶಯೇ ವವ್ರಿಶ್ಚರತಿ ಜಿಹ್ವಯಾದನ್ರೇರಿಹ್ಯತೇ ಯುವತಿಂ ವಿಶ್ಪತಿಃ ಸನ್ ॥ ೪ ॥

॥ ಪದಪಾಠಃ ॥

ಮೂರಾಃ । ಅಮೂರ । ನ । ವಯಂ । ಚಿಕಿತ್ವಃ । ಮಹಿತ್ವಂ । ಅಗ್ನೇ । ತ್ವಂ । ಅಂಗ । ವಿತ್ಸೇ ॥

ಶಯೇ । ವವ್ರಿಃ । ಚರತಿ । ಜಿಹ್ವಯಾ । ಅದನ್ । ರೇರಿಹ್ಯತೇ । ಯುವತಿಂ । ವಿಶ್ಪತಿಃ । ಸನ್ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಮೂರಾಮೂಢ ಅತ ಏವ ಚಿಕಿತ್ವಶ್ಚೇತನವನ್ ಹೇ ಅಗ್ನೇ ಮೂರಾ ಮೂಢಾ ವಯಂ ತವ ಮಹಾತ್ಮ್ಯಂ ನ ಜಾನೀಮಃ । ಕಿಂತು ಹೇ ಅಗ್ನೇ ತ್ವಮಂಗ । ಅಂಗೇತಿ ನಿಪಾತ ಏವಾರ್ಥೇ । ತ್ವಮೇವ ತವ ಮಹಿತ್ವಂ ಮಾಹಾತ್ಮ್ಯಂ ವಿತ್ಸೇ । ಜಾನಾಸಿ । ತ್ವತ್ತಃ ಕೋಽನ್ಯೋ ವೇದಿತುಮರ್ಹತಿ । ಕಿಂಚ ವವ್ರಿರ್ಜೀರ್ಣ ಓಷಧೀಸಂಗಃ ಶಯೇ । ಶೇತೇ । ತಿಷ್ಠತಿ । ಯದ್ವಾ । ವವ್ರಿರಿತಿ ರೂಪನಾಮ । ಸಾಮರ್ಥ್ಯಾಚ್ಚಾಂತರ್ಣೀತಮತ್ವರ್ಥಂ ದ್ರಷ್ಟವ್ಯಂ । ಆಹವನೀಯಾಖ್ಯೇನ ರೂಪೇಣ ರೂಪವಾಞ್ಶಯೇ । ಚರತಿ । ಅಥ ಜಿಹ್ವಯಾ ಜ್ವಾಲಾಖ್ಯಯಾದನ್ಹವೀಂಷಿ ಭಕ್ಷಯಂಶ್ಚರತಿ । ವಾಕ್ಯಭೇದಾದನಿಘಾತಃ ॥ ಕಿಂಚ ವಿಶ್ಪತಿರ್ವಿಶಾಂ ಸ್ವಾಮೀ ಸನ್ನಗ್ನಿರ್ಯುವತಿಮಾತ್ಮನೋ ಮಿಶ್ರಯಿತ್ರೀಮಾಹುತಿಂ ದೀರ್ಘಪ್ರಸೃತಯಾ ಜ್ವಾಲಯಾ ಜಿಹ್ವಯಾ ರೇರಿಹ್ಯತೇ । ಅತ್ಯರ್ಥಂ ಲೇಢಿ । ಆಸ್ವಾದಯತಿ । ಲಿಹ ಆಸ್ವಾದನೇ । ಯದ್ವಾ [illegible] । ಯುವಾ ಸೋಽಗ್ನಿರ್ಯುವತಿಂ ತರುಣೀಂ ಚೀರ್ಣೌಷಧಿಕಾಂ ಪೃಥಿವೀಮಾಸ್ವಾದಯತಿ ॥

॥ ಪ್ರತಿಪದಾರ್ಥ ॥

ಅಮೂರ—ಮೌಢ್ಯರಹಿತನೂ । ಚಿಕಿತ್ವಃ—ಉತ್ತಮವಾದ ಜ್ಞಾನವುಳ್ಳವನೂ ಆದ ಎಲೈ ಅಗ್ನಿಯೇ । ಮೂರಾಃ—ಮೂಢರಾದ । ವಯಂ—ನಾವು । ನ—ನಿನ್ನ ಮಹಾತ್ಮ್ಯವನ್ನರಿಯೆವು । ಅಗ್ನೇ—ಎಲೈ ಅಗ್ನಿಯೇ ।

**ತ್ವಂ ಅಂಗ**—ನೀನು ಮಾತ್ರ । **ಮಹಿತ್ವಂ**—ನಿನ್ನ ಮಹಾತ್ಮ್ಯವನ್ನು । **ವಿತ್ಸೇ**—ಅರಿತಿದ್ದೀಯೇ । **ವವ್ರಿಃ**—ಆ ಹವನೀಯಾಗ್ನಿರೂಪವನ್ನು ಧರಿಸಿ । **ಶಯೇ**—ಸ್ಥಿತನಾಗಿದ್ದೀಯೇ । **ಜಿಹ್ವಯಾ**—ನಾಲಿಗೆಯಿಂದ । **ಅದನ್**—ಹವಿಸ್ಸನ್ನು ಭಕ್ಷಿಸುತ್ತ । **ಚರತಿ**—ಅಗ್ನಿಯು ಸಂಚರಿಸುತ್ತಾನೆ । **ವಿಶ್ಪತಿಃ ಸನ್**—ಪ್ರಜಾಪಾಲಕನಾಗಿದ್ದುಕೊಂಡು । **ಯುವತಿಂ**—ತನ್ನೊಡನೆ ಸೇರುವ ಆಹುತಿಯನ್ನು । **ರೇರಿಹ್ಯತೇ**—ನೆಕ್ಕಿ ರುಚಿನೋಡುತ್ತಾನೆ ।

॥ ಭಾವಾರ್ಥ ॥

ಮೌಢ್ಯರಹಿತನೂ, ಉತ್ತಮವಾದ ಜ್ಞಾನವುಳ್ಳವನೂ ಆದ ಎಲೈ ಅಗ್ನಿಯೇ, ಮೂಢರಾದ ನಾವು ನಿನ್ನ ಮಹಾತ್ಮೆಯನ್ನು ಅರಿಯಲಾರೆವು. ನೀನು ಮಾತ್ರ ಅದನ್ನು ಅರಿತಿದ್ದೀಯೆ. ನಾಲಿಗೆಯಿಂದ ಹವಿಸ್ಸನ್ನು ಭಕ್ಷಿಸುತ್ತ ಅಗ್ನಿಯು ಸಂಚರಿಸುತ್ತಾನೆ. ಪ್ರಜಾಪಾಲಕನಾಗಿದ್ದುಕೊಂಡು ತನ್ನೊಡನೆ ಸೇರುವ ಆಹುತಿಯನ್ನು ನೆಕ್ಕಿ ರುಚಿಯನ್ನು ನೋಡುತ್ತಾನೆ.

English Translation

We, who are perplexed, know not, O unperplexed, intelligent one, your greatness : but you, Agni, verily know it. Wearing a form he reposes ; he moves about devouring (the offering) with his tongue (of flame) ; being lord of men, he licks up the mixed oblation.

॥ ವಿಶೇಷವಿಷಯಗಳು ॥

ಅಮೂರಎಂಬ ಶಬ್ದದ ಅರ್ಥವನ್ನು ವಿವರಿಸುತ್ತಾ ಯಾಸ್ಕರು—**ಮೂರಾ ಅಮೂರ ನ ವಯಂ ಚಿಕಿತ್ವೋ ಮಹಿತ್ವಮಗ್ನೇ ತ್ವಮಂಗ ವಿತ್ಸೇ** ಎಂಬ ವಾಕ್ಯಕ್ಕೆ **ಅಮೂರಃ। ಮೂಢಾ ವಯಂ ಸ್ಮೋऽಮೂಢಸ್ತ್ವಮಸಿ ನ ವಯಂ ವಿದ್ಮೋ ಮಹತ್ತ್ವಮಗ್ನೇ ತ್ವಂ ತು ವೇತ್ಥ** ।

(ನಿ. ೬-೮)

ಎಂದು ಅರ್ಥ ವಿವರಣೆಮಾಡಿದಾರೆ. ಮೂರ ಎಂದರೆ ಮೂಢ, ಅಮೂರ ಎಂದರೆ ಮೂಢನಲ್ಲದವನು, ವಿವೇಕಿಯು, ಬುದ್ಧಿವಂತನು ಎಂದರ್ಥವು. ಪ್ರಕೃತವಾಕ್ಯದಲ್ಲಿ–ಮೂಢನಲ್ಲದ ಎಂದರೆ ವಿವೇಕಿಯಾದ ಎಲೈ ಅಗ್ನಿಯೇ, ಮೂಢರಾದ, ಎಂದರೆ ವಿವೇಚನಾಶಕ್ತಿರಹಿತರಾದ ನಾವು ನಿನ್ನ ಮಾಹಾತ್ಮ್ಯೆಯನ್ನು ತಿಳಿಯಲಾರೆವು, ಆದರೆ ನೀನು ಮಾತ್ರ ತಿಳಿದಿರುವೆ ಎಂದು ನಿರ್ವಚನದ ಅಭಿಪ್ರಾಯವು.

**ಜಿಹ್ವಯಾ ಅದನ್ ರೇರಿಹ್ಯತೇ ಯುವತಿಂ ವಿಶ್ಪತಿಃ ಸನ್**—ಈ ವಾಕ್ಯದಲ್ಲಿ ಅಗ್ನಿಯ ಜಿಹ್ವೆ ಅಥವಾ ನಾಲಗೆಗಳೆಂದರೆ ಜ್ವಾಲೆಯು. ರೇರಿಹ್ಯತೇ ಎಂಬ ಪದದಲ್ಲಿರುವ ರಕಾರಕ್ಕೆಲಕಾರವು ಆದೇಶವಾಗಿ ಬರುವುದು ಎಂದರೆ ಲೇಲಿಹ್ಯತೇ ಎಂದಾಗುವುದು, ನೆಕ್ಕುವನು ಎಂದರ್ಥವು. ಋಗ್ವೇದದಲ್ಲಿ ಅನೇಕಕಡೆ ಲಕಾರಕ್ಕೆ ಬದಲಾಗಿ ರಕಾರವನ್ನು ಉಪಯೋಗಿಸುವ ರೂಢಿ ಇದೆ. ಉದಾಹರಣೆಗೆ **ಲಘು** ಎಂಬ ಶಬ್ದಕ್ಕೆ ಬದಲಾಗಿ ರಘು ಎಂಬ ಶಬ್ದವನ್ನು ಉಪಯೋಗಿಸಲಾಗಿದೆ. ಯುವತಿ ಶಬ್ದಕ್ಕೆ—**ಯು ಮಿಶ್ರಣೇ** ಎಂಬ ಧಾತುವಿಗೆ ಮಿಶ್ರಮಾಡು ಎಂದರ್ಥವಿರುವುದರಿಂದ ಆ ಧಾತುವಿನಿಂದ ನಿಷ್ಪನ್ನವಾದ ಯುವತಿಶಬ್ದಕ್ಕೆ ಆಜ್ಯ ಮೊದಲಾದ ವಸ್ತುಗಳೊಡನೆ ಮಿಶ್ರಮಾಡಿದ **ಹವಿಸ್ಸು** ಎಂದರ್ಥವು. ಆದ್ದರಿಂದ **ಈ** ವಾಕ್ಯಕ್ಕೆ–ಎಲೈ ಅಗ್ನಿಯೇ, ನೀನು ಸಕಲರಿಗೂ ಸ್ವಾಮಿಯಾಗಿ, ನಿನ್ನ ಜಿಹ್ವೆಯಂತಿರುವ ಜ್ವಾಲೆಯಿಂದ ಆಜ್ಯಮಿಶ್ರಿತವಾದ ಹವಿಸ್ಸನ್ನು ನೆಕ್ಕುತ್ತಾ ಭಕ್ಷಿಸುತ್ತಿರುವೆ ಎಂಬರ್ಥವು ಸೂಚಿತವಾಗಿರುವುದು.

॥ ಸಂಹಿತಾಪಾಠಃ ॥

ಕೂಚಿಜ್ಜಾಯತೇ ಸನಯಾಸು ನವ್ಯೋ ವನೇ ತಸ್ಥೌ ಪಲಿತೋ ಧೂಮ-
ಕೇತುಃ ॥
ಅಸ್ನಾತಾಪೋ ವೃಷಭೋ ನ ಪ್ರ ವೇತಿ ಸಚೇತಸೋ ಯಂ ಪ್ರಣಯಂತ
ಮರ್ತಾಃ ॥ ೫ ॥

॥ ಪದಪಾಠಃ ॥

ಕೂಽಚಿತ್ । ಜಾಯತೇ । ಸನಯಾಸು । ನವ್ಯಃ । ವನೇ । ತಸ್ಥೌ । ಪಲಿತಃ । ಧೂಮಽಕೇತುಃ ॥
ಅಸ್ನಾತಾ । ಆಪಃ । ವೃಷಭಃ । ನ । ಪ್ರ । ವೇತಿ । ಸಽಚೇತಸಃ । ಯಂ । ಪ್ರಽನಯಂತ । ಮರ್ತಾಃ ॥ ೫ ॥

॥ ಸಾಯಣಭಾಷ್ಯಂ ॥

ನವ್ಯೋ ನವತರಃ ಸ್ತುತ್ಯೋ ವಾಗ್ನಿಃ ಕೂಚಿತ್ ಕ್ವಚಿತ್ಪ್ರದೇಶೇ ಜಾಯತೇ । ಕುತ್ರ । ಸನಯಾಸು ಪುರಾಣೇಷು ಜೀರ್ಣಾಸ್ವೋಷಧೀಷ್ವರಣ್ಯೋಃ । ತಥಾ ಪಲಿತಃ ಪಾಲಯಿತಾ ಶ್ವೇತವರ್ಣೋ ಧೂಮಕೇತುರ್ಧೂಮಪ್ರಜ್ಞಾನೋಽಗ್ನಿರ್ವನೇ ಸರ್ವಸ್ಮಿನ್ನರಣ್ಯೇ ತಸ್ಥೌ । ತಿಷ್ಠತಿ । ಯದ್ವಾ । ವನ ಉದಕೇ ಮೇಘಗತೇ ವಿದ್ಯುದಾತ್ಮನಾ ತಿಷ್ಠತಿ ಚ । ಅಸ್ನಾತಾ ಸ್ನಾನಮಕುರ್ವನ್ನನಪೇಕ್ಷಿತಸ್ನಾನಃ ಸರ್ವದಾ ಶುದ್ಧಃ ಸೋಽಗ್ನಿರಾಪಃ ॥ ಸುಬ್ವ್ಯತ್ಯಯಃ ॥ ಅಪ ಉದಕಾನಿ ರಾಂತ್ಯರ್ಥಂ ಪ್ರ ವೇತಿ । ಪ್ರಗಚ್ಛತಿ । ತತ್ರ ದೃಷ್ಟಾಂತಃ । ವೃಷಭೋ ನ ಯಥಾ ವೃಷಭಸ್ತೃಷ್ಣೋಪಶಮನಾರ್ಥಮರಣ್ಯಮಧ್ಯಸ್ಥಾನ್ಯುದ-
ಕಾನಿ ಪ್ರಗಚ್ಛತಿ ತದ್ವತ್ । ಮರ್ತಾ ಮನುಷ್ಯಾ ಋತ್ವಿಜಃ ಸಚೇತಸಃ ಸಮಾನಮನಸ್ಕಾಃ ಸಮಾನ-
ಪ್ರಜ್ಞಾನಾಃ ಸಂತೋ ಯಮಗ್ನಿಂ ಪ್ರಣಯಂತ ಹವಿರ್ಭಿಃ ಪ್ರೀಣಯಂತಿ ॥

॥ ಪ್ರತಿಪದಾರ್ಥ ॥

**ನವ್ಯಃ**—ನೂತನನಾದ ಅಗ್ನಿಯು । **ಕೂಚಿತ್**—ಯಾವ ಪ್ರದೇಶದಲ್ಲಿ । **ಜಾಯತೇ**—ಉತ್ಪನ್ನನಾಗುತ್ತಾನೆ ? । **ವನೇ**—ವನದಲ್ಲಿ । **ಸನಯಾಸು**—ಅರಣಿಗಳ ನಡುವೆ । **ಪಲಿತಃ**—ಶ್ವೇತವರ್ಣವುಳ್ಳವನೂ । **ಧೂಮಕೇತುಃ**—ಧೂಮವೇ ಧ್ವಜವಾಗಿ ಉಳ್ಳವನೂ ಆದ ಅಗ್ನಿಯು । **ತಸ್ಥೌ**—ಸ್ಥಿತನಾಗಿದ್ದಾನೆ । **ಅಸ್ನಾತಾ**—ಸ್ನಾನವನ್ನಪೇಕ್ಷಿಸದೆ (ಶುದ್ಧನಾಗಿ) **ವೃಷಭೋ ಆಪಃ ನ**—ವೃಷಭವು ನೀರನ್ನು ಆಶ್ರಯಿಸುವಂತೆ । **ಪ್ರ ವೇತಿ**—ಅಗ್ನಿಯೂ ಉದಕವನ್ನಾಶ್ರಯಿಸುತ್ತಾನೆ । **ಮರ್ತಾಃ**—ಋತ್ವಿಕ್ಕುಗಳು । **ಸಚೇತಸಃ**—ಒಂದೇ ಮನಸ್ಸುಳ್ಳವರಾಗಿ । **ಯಂ**—ಅದೇ ಅಗ್ನಿಯನ್ನು । **ಪ್ರಣಯಂತ**—ಪ್ರೀತಿಗೊಳಿಸುತ್ತಾರೆ ।

॥ ಭಾವಾರ್ಥ ॥

ನೂತನನಾದ ಅಗ್ನಿಯು ಯಾವ ಪ್ರದೇಶದಲ್ಲಿ ಉತ್ಪನ್ನನಾಗುತ್ತಾನೆ? ವನದಲ್ಲಿ ಅರಣಿಗಳ ನಡುವೆ ಶ್ವೇತವರ್ಣವುಳ್ಳವನೂ ಧೂಮವನ್ನೇ ಧ್ವಜವಾಗಿಉಳ್ಳವನೂ ಆದ ಅಗ್ನಿಯು ಸ್ಥಿತನಾಗಿದ್ದಾನೆ. ಪರಿಶುದ್ಧನಾದರೂ ಸಹ, ವೃಷಭವು ಉದಕವನ್ನು ಆಶ್ರಯಿಸುವಂತೆ ಅಗ್ನಿಯೂ ಉದಕವನ್ನಾಶ್ರಯಿಸುತ್ತಾನೆ. ಋತ್ವಿಕ್ಕುಗಳು ಒಂದೇ ಮನಸ್ಸುಳ್ಳವರಾಗಿ ಅಗ್ನಿಯನ್ನು ಪ್ರೀತಿಗೊಳಿಸುತ್ತಾರೆ.

English Translation

Where is the new (Agni) born ? he is present in the old (plants) and in the wood, grey-haired, smoke-bannered : though not needing ablution,he hastens to the water like a (thirsty) bull, he whom men with one consent propitiate.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಋಷಿಯು, ಅಗ್ನಿಯು ಯಾವಪ್ರದೇಶದಲ್ಲಿ ಉತ್ಪನ್ನನಾಗುತ್ತಾನೆ ? ಎಂದು ಪ್ರಶ್ನೆಮಾಡಿ ಅದಕ್ಕೆ ಉತ್ತರವನ್ನೂ ತಾನೇ ಹೇಳಿದ್ದಾನೆ. ಹೇಗೆಂದರೆ—ವನದಲ್ಲಿ ಉತ್ಪನ್ನವಾಗುವ ಜೀರ್ಣವಾದ ವೃಕ್ಷಗಳಿಂದ ಎಂದರೆ ಮರದಿಂದ ಮಾಡಿದ ಅರಣಿಗಳಲ್ಲಿ ಕಡೆಯುವುದರಿಂದ ಅಗ್ನಿಯು ಉತ್ಪನ್ನನಾಗುತ್ತಾನೆ. ಹಾಗೆಯೇ ಅರಣ್ಯದಲ್ಲಿಯೂ ವೃಕ್ಷಗಳ ಸಂಘರ್ಷಣದಿಂದ ದಾವಾಗ್ನಿರೂಪದಲ್ಲಿ ಉತ್ಪನ್ನನಾಗುತ್ತಾನೆ. ಇದಲ್ಲದೆ ವನಶಬ್ದಕ್ಕೆ ಉದಕ ಎಂದೂ ಅರ್ಥವಿರುವುದರಿಂದ ಮೇಘಗಳ ಮಧ್ಯದಲ್ಲಿರುವ ಉದಕಗಳಲ್ಲಿ ವಿದ್ಯುದ್ರೂಪದಿಂದ (ಮಿಂಚು) ಲೂ ಉತ್ಪನ್ನನಾಗುತ್ತಾನೆ ಎಂದು ಮೂರುವಿಧವಾದ ಅಗ್ನಿಯ ಉತ್ಪತ್ತಿಯನ್ನು ವರ್ಣಿಸಿದ್ದಾನೆ.

**ಅಸ್ನಾತಾ ಆಪಃ ವೃಷಭೋ ನ**—ಈ ಅಗ್ನಿಯು ಯಾವಾಗಲೂ ಶುದ್ಧನಾಗಿಯೇ ಇರುವುದರಿಂದ ಇವನಿಗೆ ಮಲಾಪಹಾರಾರ್ಥವಾಗಿ ಸ್ನಾನದ ಅವಶ್ಯಕತೆ ಇರುವುದಿಲ್ಲ ಇಷ್ಟೇ ಅಲ್ಲ. ಈ ಅಗ್ನಿಯೇ ಇತರ ವಸ್ತುಗಳನ್ನು ಎಂದರೆ ಲೋಹಾದಿಗಳನ್ನು ತನ್ನ ಸ್ಪರ್ಶದಿಂದ ಶುದ್ಧಿಗೊಳಿಸುತ್ತಾನೆ. ಆದರೂ ಅಗ್ನಿಯು ನೀರಿನಲ್ಲಿ ವಾಸಮಾಡುವನೆಂದು ಪ್ರತೀತಿಇರುವುದು ಎಂದರೆ ವನದಲ್ಲಿರುವ ಮದಿಸಿದ ವೃಷಭವು ತನಗೆ ಸ್ನಾನಾಪೇಕ್ಷೆಯಿಲ್ಲದಿದ್ದರೂ ಬಿಸಲಿನ ತಾಪವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಜಲವನ್ನು ಪ್ರವೇಶಿಸುವಂತೆ ಈ ಅಗ್ನಿಯು ತಾನು ಸ್ನಾನದ ಅವಶ್ಯಕತೆ ಇಲ್ಲದೆ ಸ್ವತಃ ಶುದ್ಧನಾಗಿದ್ದರೂ ತನಗೆ ಇಷ್ಟಬಂದಾಗ ನೀರನ್ನು ಪ್ರವೇಶಿಸಿ ಅಲ್ಲಿರುವನೆಂದು ಋಷಿಯು ವರ್ಣಿಸಿದ್ದಾನೆ.

॥ ಸಂಹಿತಾಪಾಠಃ ॥

ತನೂತ್ಯಜೇವ ತಸ್ಕರಾ ವನರ್ಗೂ ರಶನಾಭಿರ್ದಶಭಿರಭ್ಯಧೀತಾಂ ॥

ಇಯಂ ತೇ ಅಗ್ನೇ ನವ್ಯಸೀ ಮನೀಷಾ ಯುಕ್ಷ್ವಾ ರಥಂ ನ ಶುಚಯದ್ಭಿ-

ರಂಗೈಃ ॥ ೬ ॥

॥ ಪದಪಾಠಃ ॥

ತನೂತ್ಯಜಾಇವ । ತಸ್ಕರಾ । ವನರ್ಗೂ ಇತಿ । ರಶನಾಭಿಃ । ದಶಽಭಿಃ । ಅಭಿ । ಅಧೀತಾಂ ॥

ಇಯಂ । ತೇ । ಅಗ್ನೇ । ನವ್ಯಸೀ । ಮನೀಷಾ । ಯುಕ್ಷ್ವ । ರಥಂ । ನ । ಶುಚಯತ್ಽಭಿಃ । ಅಂಗೈಃ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವನರ್ಗೂ ವನಗಾಮಿನೌ ತನೂತ್ಯಜಾ ಚೌರ್ಯೇ ಮರ್ತುಂ ಕೃತನಿಶ್ಚಯೌ ಧೃಷ್ಟೌ ತಸ್ಕರಾ ತಸ್ಕರೌ ಯಥಾ ಪಥಿಕಂ ಮೋಷಣಾರ್ಥಂ ರಜ್ಜ್ವಾ ಬಧ್ವಾಕೃಷ್ಯ ಚ ಕ್ವಚಿತ್ಪ್ರದೇಶೇ ಸ್ಥಾಪಯತಃ ತದ್ವತ್ । ತಥಾ ಯಾಸ್ಕಃ । ತನೂತ್ಯಕ್ ತನೂತ್ಯಕ್ತಾ ವನರ್ಗೂ ವನಗಾಮಿನಾವಗ್ನಿಮಂಥನೌ ಬಾಹೂ ತಸ್ಕರಾಭ್ಯಾಮುಪಮಿಮೀತೇ । ನಿ. ೩-೧೪ । ಇತ್ಯಾದಿ । ಅಧೀತಾಂ । ದಧಾತೇರ್ಲುಙಿ ಸಿಚೋ ಲುಕಿ ಛಂದಸ್ಯುಭಯಥೇತಿ ತಸ ಆರ್ಧಧಾತುಕತ್ವೇನ ಙಿತ್ವಾಭಾವಾದ್ಘುಮಾಸ್ಥೇತೀತ್ವಾಭಾವಃ । ತತೋ ಹೇ ಅಗ್ನೇ ತೇ ತ್ವದರ್ಥಂ ನವ್ಯಸೀ ನವತರೇಯಂ ಮನೀಷಾ ಸ್ತುತಿರ್ಮಯಾ ಕ್ರಿಯತೇ । ಏತಜ್ಜ್ಞಾತ್ವಾ ಶುಚಯದ್ಭಿಃ ಸರ್ವಂ ಪ್ರಕಾಶಯದ್ಭಿರಾತ್ಮೀಯೈರಂಗೈಸ್ತೇಜೋಭಿರಾತ್ಮಾನಂ ಮದೀಯಂ ಯಜ್ಞಂ ಪ್ರತಿ ಯುಕ್ಷ್ವ ಯೋಜಯ । ಕಥಮಿವ । ರಥಂ ನ ಯಥಾ ರಥಮಶ್ವೈಃ ಸಂಯೋಜಯಂತಿ ತದ್ವತ್ ॥

॥ ಪ್ರತಿಪದಾರ್ಥ ॥

ಎಲೈ ಅಗ್ನಿಯೇ) **ವನರ್ಗೂ**—ಕಾಡಿನಲ್ಲಿ ಸಂಚರಿಸುವವರೂ **ತನೂತ್ಯಜಾ**—ತಮ್ಮ ದೇಹವನ್ನೇ ತ್ಯಾಗಮಾಡುವ ಸಾಹಸವುಳ್ಳವರೂ ಆದ । **ತಸ್ಕರಾ**—ಇಬ್ಬರು ಚೋರರು । **ರಶನಾಭಿಃ**—ಹಗ್ಗಗಳಿಂದ ಜನರನ್ನು ಹಿಡಿಯುವಂತೆ । **ದಶಭಿಃ**—ಹತ್ತು ಅಂಗುಲಿಗಳಿಂದ **ಅಭ್ಯಧೀತಾಂ**—ಬಾಹುಗಳು ನಿನ್ನನ್ನು ಹಿಡಿಯುತ್ತವೆ (ನಿನ್ನ ಅರಣಿಯನ್ನು) । **ಅಗ್ನೇ**—ಎಲೈ ಅಗ್ನಿಯೇ । **ತೇ**—ನಿನ್ನನ್ನುದ್ದೇಶಿಸಿ । **ನವ್ಯಸೀ**—ನೂತನವಾದ । **ಇಯಂ ಮನೀಷಾ**—ಈ ಸ್ತುತಿಯು ನಿರ್ಮಿತವಾಗುತ್ತದೆ । **ರಥಂ ನ**—ರಥವು ಅಶ್ವಗಳೊಡನೆ ಸೇರಿಕೊಳ್ಳುವಂತೆ । **ಶುಚಯದ್ಭಿಃ**—ಪ್ರಕಾಶಗೊಳಿಸುವ । **ಅಂಗೈಃ**—ನಿನ್ನ ತೇಜಸ್ಸುಗಳೊಡನೆ । **ಯುಕ್ಷ್ವ**—ಸೇರಿಕೊ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಕಾಡಿನಲ್ಲಿ ಸಂಚರಿಸುವವರೂ, ತಮ್ಮ ಪ್ರಾಣವನ್ನೇ ಬಿಡಲು ಸಿದ್ಧರಾಗಿರುವವರೂ ಆದ ಚೋರರು ಹಗ್ಗಗಳಿಂದ ಜನರನ್ನು ಹಿಡಿದು ಕಟ್ಟುವಂತೆ ಹತ್ತು ಅಂಗುಲಿಗಳಿಂದಲೂ ಬಾಹುಗಳು ನಿನ್ನ ಕಾಷ್ಠವನ್ನು (ಅರಣಿಯನ್ನು) ಹಿಡಿಯುತ್ತವೆ. ಎಲೈ ಅಗ್ನಿಯೇ, ನಿನ್ನನ್ನುದ್ದೇಶಿಸಿ ನೂತನವಾದ ಈ ಸ್ತುತಿಯು ನಿರ್ಮಿತವಾಗುತ್ತದೆ. ರಥವು ಅಶ್ವಗಳೊಡನೆ ಸೇರಿಕೊಳ್ಳುವಂತೆ ಜಗತ್ತನ್ನು ಪ್ರಕಾಶಗೊಳಿಸುವ ನಿನ್ನ ತೇಜಸ್ಸುಗಳೊಡನೆ ಸೇರಿಕೊ.

## English Translation

As two daring robbers lurking in a forest seize (upon a traveller) with cords, (so the two hands seize upon the touchwood, with the ten

fingers). This new praise, Agni, is addressed to you : attach yourself (to my sacrifice) with your radiant members, as (they harness hosses) to a car.

॥ ವಿಶೇಷವಿಷಯಗಳು ॥

ಉಪಮಾರ್ಥವನ್ನು, ಅದರಲ್ಲಿಯೂ ಶ್ರೇಷ್ಠವಸ್ತುವಿನೊಡನೆ ಕನಿಷ್ಠವಸ್ತುವನ್ನು ಹೋಲಿಸಿ ಅರ್ಥವಿವರಣೆ ಮಾಡುವ ಸಂದರ್ಭದಲ್ಲಿ ಯಾಸ್ಕರು ಈ ಋಕ್ಕಿನ ಪೂರ್ವಾರ್ಧವನ್ನು ಉದಾಹರಣೆಗಾಗಿ ಕೊಟ್ಟು ಅದಕ್ಕೆ ನಿರ್ವಚನ ವನ್ನು ಹೇಳಿದಾರೆ—

**ಅಥಾಪಿ ಕನೀಯಸಾ ಜ್ಯಾಯಾಂಸಂ । ತನೂತ್ಯಜೇವ ತಸ್ಕರಾ ವನರ್ಗೂರಶನಾಭಿರ್ದಶಭಿರಭ್ಯ-ಧೀತಾಂ । ತನೂತ್ಯಕ್ ತನೂತ್ಯಕ್ತಾ । ವನರ್ಗೂ ವನಗಾಮಿನೌ । ಅಗ್ನಿಮಂಥನೌ ಬಾಹೂ ತಸ್ಕರಾಭ್ಯಾಮುಪಮಿಮೀತೇ । ತಸ್ಕರಸ್ತತ್ಕರೋ ಭವತಿ । ಕರೋತಿ ಯತ್ಪಾಪಕಮಿತಿ ನೈರುಕ್ತಾಃ । ತನೋತೇರ್ವಾ ಸ್ಯಾತ್ ಸಂತತಕರ್ಮಾ ಭವತಿ । ಅಹೋರಾತ್ರಕರ್ಮಾ ವಾ । ರಶನಾಭಿರ್ದಶಭಿರಭ್ಯಧೀತಾಂ ಇತಿ ಅಭ್ಯಧಾತಾಂ । ಜ್ಯಾಯಾಂಸ್ತತ್ರ ಗುಣೋಽಭಿ-ಪ್ರೇತಃ ॥** (ನಿ. ೩-೧೪)

ಈ ವಾಕ್ಯದಲ್ಲಿ ಅಗ್ನಿಮಥನಮಾಡುವಾಗ ಋತ್ವಿಗ್ಜನರ ಎರಡು ಕೈಗಳನ್ನು ಕಳ್ಳತನ ಮಾಡುವ ಇಬ್ಬರು ಚೋರರಿಗೆ ಹೋಲಿಸಲಾಗಿದೆ. ಇಲ್ಲಿ ಕಳ್ಳತನಮಾಡುವ ಚೋರರೆಂದರೆ ಸಾಮಾನ್ಯವಾಗಿ ರಾತ್ರಿಕಾಲದಲ್ಲಿ ಮನೆಗೆ ಯಾರೂ ಕಾಣದಂತೆ ನುಗ್ಗಿ ಅಥವಾ ಪ್ರವೇಶಿಸಿ ಧನಾದಿಗಳನ್ನು ಅಪಹರಿಸುವವರೆಂದು ತಿಳಿಯಕೂಡದು. ಈ ತರಹ ಕಳ್ಳರೂ ಕೆಲವರಿರುವರು. ಆದರೆ ಇಲ್ಲಿ **ವನರ್ಗೂ** ಎಂದಿರುವುದರಿಂದ ಇವರು ಬೇರೆವಿಧವಾದ ಕಳ್ಳರು. ಈ ವಿಧವಾದ ಕಳ್ಳರು ಕಾಡಿನಲ್ಲಿ ವಾಸಿಸುತ್ತಾ ಊರಿಂದೂರಿಗೆ ಪ್ರಯಾಣಮಾಡುತ್ತಿರುವ ಮಾರ್ಗಸ್ಥರನ್ನು ಹಿಂಸಿಸಿ ಎಂದರೆ ಹಗ್ಗ ಗಳಿಂದ ಕಟ್ಟಿಹಾಕಿ ಅವರಲ್ಲಿರುವ ಸರ್ವಸ್ವವನ್ನೂ ದೋಚಿಕೊಂಡು ಹೋಗುವವರು ಎಂದು ತಿಳಿಯಬೇಕು. ಈ ವಿಧವಾದ ಕಳ್ಳರು ಅನೇಕವೇಳೆ ತಮಗಿಂತಲೂ ಬಲಿಷ್ಠರಾದ ಮಾರ್ಗಸ್ಥರ ಗುಂಪನ್ನು ಎದುರಿಸುವಾಗ ತಮ್ಮ ಪ್ರಾಣಕ್ಕೆ ಅಪಾಯವಾಗುವ ಸಂಭವವುಂಟು. ಆದ್ದರಿಂದಲೇ ಇಲ್ಲಿ **ತನೂತ್ಯಜೇವ**—ಕದಿಯುವಾಗ ತಮ್ಮ ಪ್ರಾಣದ ಮೇಲೆಯೂ ಆಸೆಯಿಲ್ಲದೆ ಹೋರಾಡುವವರು ಎಂದು ಸೂಚಿಸಿದೆ. ಮತ್ತು **ವನರ್ಗೂ** ಎಂಬ ಶಬ್ದವು ವನ ಅಥವಾ ಕಾಡಿನಲ್ಲಿ ಮಾರ್ಗಮಧ್ಯದಲ್ಲಿ ಹೊಂಚುಹಾಕುತ್ತಿರುವವರು, ದಾರಿಹೋಕರು ಎಂಬರ್ಥವನ್ನು ಸೂಚಿಸುವುದು. ಇಲ್ಲಿ **ತನೂತ್ಯಜಾ** ಮತ್ತು **ವನರ್ಗೂ** ಎಂಬ ಶಬ್ದಗಳು ದ್ವಿವಚನಾಂತಪದಗಳಾದ್ದರಿಂದ ಇಬ್ಬರು ಚೋರರು ಎಂದರ್ಥವು. **ರಶನಾಭಿಃ** ಎಂಬ ಶಬ್ದಕ್ಕೆ ಹಗ್ಗಗಳಿಂದ ಎಂದೂ ಬೆರಳುಗಳಿಂದ ಎಂದೂ ಎರಡರ್ಥವಿರುವುದು. ಚೋರರ ವಿಷಯದಲ್ಲಿ **ರಶನಾಭಿಃ** ಎಂಬ ಶಬ್ದಕ್ಕೆ ಹಗ್ಗಗಳಿಂದ ಎಂದೂ ಋತ್ವಿಗ್ಜನರ ಪರವಾಗಿ ಬೆರಳುಗಳಿಂದೂ ಅರ್ಥಮಾಡ ಬೇಕು. ಆದ್ದರಿಂದ ಕಾಡಿನಲ್ಲಿ ಮಾರ್ಗಸ್ಥರ ಧನವನ್ನು ಅಪಹರಿಸುವುದಕ್ಕಾಗಿ ಪ್ರಾಣದ ಮೇಲಿನ ಆಶೆಯನ್ನು ತೊರೆದು ದಾರಿಕಾಯುತ್ತಿರುವ ಇಬ್ಬರು ಕಳ್ಳರು ಯಾವ ರೀತಿ ಪಥಿಕರನ್ನು ಹಗ್ಗಗಳಿಂದಲೂ, ತಮ್ಮ ಬೆರಳುಗಳಿಂದಲೂ ಧನಾಪ ಹರಣಾರ್ಥವಾಗಿ ಕಟ್ಟಿಹಾಕುವರೋ ಅದರಂತೆ ಯಜ್ಞಕರ್ಮದಲ್ಲಿ ಅಧ್ವರ್ಯುವಿನ ಎರಡು ಬಾಹುಗಳು ಅರಣಿಗಳಲ್ಲಿ ಅಗ್ನಿಯನ್ನು ಕಡೆಯುವುದಕ್ಕಾಗಿ ಮೇಲಿನ ಅರಣಿಯನ್ನು ಹಗ್ಗದಿಂದ ಬಿಗಿದು ತನ್ನ ಕೈಯ ಹತ್ತು ಬೆರಳುಗಳಿಂದಲೂ ಕಡೆದು ಅಗ್ನಿಯನ್ನು ಉತ್ಪಾದನೆ ಮಾಡುತ್ತಾನೆ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಇಲ್ಲಿ ತಸ್ಕರ ಎಂದರೆ ತತ್ಕರಃ ಕರೋತಿ ಯತ್ಪಾಪಕಮಿತಿ ನೈರುಕ್ತಾಃ । ಯಾವುದು ಪಾಪಕೆಲಸವೋ ಅದನ್ನೇ ಮಾಡುವನು ಎಂದು ತಸ್ಕರಶಬ್ದಕ್ಕೆ ನಿರುಕ್ತಕಾರರ ಅರ್ಥವಿರುವುದು ಅಥವಾ ತಸ್ಕರಶಬ್ದವು ತನು ವಿಸ್ತಾರೇ ಎಂಬ ಧಾತುವಿನಿಂದಲೂ ನಿಷ್ಪನ್ನವಾಗಬಹುದು. ಈ ಸಂದರ್ಭದಲ್ಲಿ ಯಾವಾಗಲೂ ಎಂದರೆ ರಾತ್ರಿಕಾಲದಲ್ಲಿಯೂ, ಹಗಲಿನಲ್ಲಿಯೂ ಕಳ್ಳತನವನ್ನು ಮಾಡುವವನು ಎಂದು ತಸ್ಕರಶಬ್ದಕ್ಕೆ ಅರ್ಥವನ್ನು ಹೇಳಬಹುದು. ಈ ದೃಷ್ಟಾಂತದಲ್ಲಿ ಉತ್ತಮಕಾರ್ಯವಾದ ಅಗ್ನಿಮಂಥನವನ್ನು ನೀಚಕಾರ್ಯವಾದ ತಸ್ಕರನ ವ್ಯಾಪಾರಕ್ಕೆ ಹೋಲಿಸಿ ಅರ್ಥವನ್ನು ವಿಶದಪಡಿಸಲಾಗಿದೆ ಎಂದು ಯಾಸ್ಕರು ವಿವರಿಸಿರುವರು.

॥ ಸಂಹಿತಾಪಾಠಃ ॥

ಬ್ರಹ್ಮ ಚ ತೇ ಜಾತವೇದೋ ನಮಶ್ಚೇಯಂ ಚ ಗೀಃ ಸದಮಿದ್ವರ್ಧನೀ ಭೂತ್ ॥

ರಕ್ಷಾ ಣೋ ಅಗ್ನೇ ತನಯಾನಿ ತೋಕಾ ರಕ್ಷೋತ ನಸ್ತನ್ವೋ೩ ಅಪ್ರಯುಚ್ಛನ್ ॥ ೭ ॥

॥ ಪದಪಾಠಃ ॥

ಬ್ರಹ್ಮ । ಚ । ತೇ । ಜಾತಽವೇದಃ । ನಮಃ । ಚ । ಇಯಂ । ಚ । ಗೀಃ । ಸದಂ । ಇತ್ । ವರ್ಧನೀ । ಭೂತ್ ।

ರಕ್ಷ । ನಃ । ಅಗ್ನೇ । ತನಯಾನಿ । ತೋಕಾ । ರಕ್ಷ । ಉತ । ನಃ । ತನ್ವಃ । ಅಪ್ರಽಯುಚ್ಛನ್ ॥ ೭ ॥

॥ ಸಾಯಣಭಾಷ್ಯಂ ॥

ಉಖಾಸಂಭರಣೀಯೇಷ್ಟಾವಗ್ನೇರ್ಬ್ರಹ್ಮಣ್ವತೋ ಯಾಜ್ಯಾ ಬ್ರಹ್ಮ ಚ ತ ಇತ್ಯೇಷಾ । ಸೂತ್ರಿತಂ ಚ । ಬ್ರಹ್ಮ ಚ ತೇ ಜಾತವೇದೋ ನಮಶ್ಚ ಪುರೂಣ್ಯಗ್ನೇ ಪುರುಧಾ ತ್ವಾಯಾ । ಆ. ೪-೧ । ಇತಿ ॥

ಹೇ ಜಾತವೇದೋ ಜಾತಪ್ರಜ್ಞಾಗ್ನೇ ತೇ ತ್ವದರ್ಥಂ ಬ್ರಹ್ಮಾಸ್ಮಾಭಿರ್ದೀಯಮಾನಂ ಹವೀರೂಪಮನ್ನಂ ವರ್ಧನೀ ವರ್ಧನಂ ಭೂತ್ । ಭವತು । ತಥಾ ನಮೋ ನಮಸ್ಕಾರಶ್ಚ ಕಿಂಚೇಯಮಿದಾನೀಂ ಕ್ರಿಯಮಾಣೈಷಾ ಸ್ತುತಿಃ ಸದಮಿತ್ ಸದೈವ ವರ್ಧನೀ ವರ್ಧಯಿತ್ರೀ ಭೂತ್ । ಭವತು । ತಸ್ಮಾದ್ಧೇ ಅಗ್ನೇ ನೋಽಸ್ಮಾಕಂ ತನಯಾನಿ ಪುತ್ರಾಂಸ್ತೋಕಾ ಪೌತ್ರಾಂಶ್ಚ ರಕ್ಷ । ಪಾಲಯ । ಉತಾಪಿ ಚಾಪ್ರಯುಚ್ಛನ್ನಪ್ರಮಾದ್ಯಂಸ್ತ್ವಂ ನೋಽಸ್ಮಾಕಂ ತನ್ವೋಽಂಗಾನಿ ರಕ್ಷ ॥

॥ ಪ್ರತಿಪದಾರ್ಥ ॥

ಜಾತವೇದಃ— ಜಾತವೇದೋರೂಪನಾದ ಎಲೈ ಅಗ್ನಿಯೇ । ತೇ—ನಿನ್ನನ್ನುದ್ದೇಶಿಸಿದ । ಬ್ರಹ್ಮ ಚ—ಹವಿಸ್ಸು । ವರ್ಧನೀ ಭೂತ್—ಪುಷ್ಟಿಸಾಧಕವಾಗಲಿ । ನಮಃ—ನಮಸ್ಕಾರವೂ । ಇಯಂ ಚ—ಈ ಸ್ತುತಿಯೂ ಸದಮಿತ್—ಸರ್ವದಾ । ವರ್ಧನೀ ಭೂತ್—ಪುಷ್ಟಿ ಸಾಧಕವಾಗಲಿ । ಅಗ್ನೇ ಎಲೈ ಅಗ್ನಿಯೇ ।

ನಃ—ನಮ್ಮ । ತನಯಾನಿ—ಪುತ್ರರನ್ನೂ । ತೋಕಾ—ಪೌತ್ರರನ್ನೂ । ರಕ್ಷ—ರಕ್ಷಿಸು । ಉತ—ಮತ್ತು । ಅಪ್ರಯುಚ್ಛನ್—ಸರ್ವದಾ ಜಾಗರೂಕನಾದ ನೀನು । ನಃ—ನಮ್ಮ । ತನ್ವಃ—ಶರೀರಗಳನ್ನೂ । ರಕ್ಷ—ರಕ್ಷಿಸು.

॥ ಭಾವಾರ್ಥ ॥

ಜಾತವೇದೋರೂಪನಾದ ಎಲೈ ಅಗ್ನಿಯೇ, ನಿನ್ನನ್ನುದ್ದೇಶಿಸಿದ ಹವಿಸ್ಸು ಪುಷ್ಟಿಸಾಧಕವಾಗಲಿ. ನಮ್ಮ ನಮಸ್ಕಾರವೂ, ಈ ಸ್ತುತಿಯೂ ಸರ್ವದಾ ಪುಷ್ಟಿಸಾಧಕವಾಗಲಿ. ಎಲೈ ಅಗ್ನಿಯೇ, ನಮ್ಮ ಪುತ್ರರನ್ನೂ, ಪೌತ್ರರನ್ನೂ ರಕ್ಷಿಸು. ಸರ್ವದಾ ಜಾಗರೂಕನಾದ ನೀನು ನಮ್ಮ ಶರೀರಗಳನ್ನು ರಕ್ಷಿಸು.

English Translation

May this oblation, Jatavedas, this reverence, this praise, ever magnify you. Protect, Agni, our sons, our grandsons, and diligently defend our persons.

॥ ವಿಶೇಷವಿಷಯಗಳು ॥

ಉಖಾಸಂಭರಣೇಷ್ಟಿಯಲ್ಲಿ ಬ್ರಹ್ಮಣ್ವಾನ್ ಅಗ್ನಿಃ ಎಂಬ ದೇವತೆಯನ್ನುದ್ದೇಶಿಸಿ ಮಾಡುವ ಹೋಮದಲ್ಲಿ ಬ್ರಹ್ಮ ಚ ತೇ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಬ್ರಹ್ಮ ಚ ತೇ ಜಾತವೇದೋ ನಮಶ್ಚ ಪುರೂಣ್ಯಗ್ನೇ ಪುರುಧಾ ತ್ವಾಯಾ** ಎಂಬ ಸೂತ್ರದಿಂದ (ಆ. ೪-೧) ವಿಹಿತವಾಗಿರುವುದು

ಸೂಕ್ತದ ಉಪಸಂಹಾರರೂಪವಾದ ಈ ಕೊನೆಯ ಋಕ್ಕಿನಲ್ಲಿ ಅಗ್ನಿಗೆ ಸ್ತುತಿಯನ್ನರ್ಪಿಸಿ ನಮಗೆ ಪುಷ್ಟಿಯನ್ನುಂಟುಮಾಡಿ ಪುತ್ರರನ್ನೂ, ಪೌತ್ರರನ್ನೂ, ನಮ್ಮನ್ನೂ ರಕ್ಷಿಸಬೇಕೆಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ.



## ಐದನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಏಕಃ ಸಮುದ್ರ ಇತಿ ಸಪ್ತರ್ಚಂ ಪಂಚಮಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ವಿನಿಯೋಗಶ್ಚ । ಏಕ ಇತ್ಯನುಕ್ರಾಂತಂ ॥**

ಅನುವಾದವು—**ಏಕಃ ಸಮುದ್ರಃ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಐದನೆಯ **ಸೂಕ್ತವು.** ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ವಿನಿಯೋಗವೂ ಹಿಂದಿನಂತೆಯೇ. ಅನುಕ್ರಮಣಿಕೆಯಲ್ಲಿ—**ಏಕಃ** ಎಂದು ಮೊದಲಾಗಿ ಹೇಳಿರುವುದು.

## ಸೂಕ್ತ—೫

ಮಂಡಲ—೧೦ ॥ ಅನುವಾಕ—೧ ॥ ಸೂಕ್ತ—೫ ॥
ಅಷ್ಟಕ—೭ ॥ ಅಧ್ಯಾಯ—೫ । ವರ್ಗ—೩೩ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ತ್ರಿತ ಆಪ್ತ್ಯಃ ॥
ದೇವತಾ—ಅಗ್ನಿಃ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಏಕಃ ಸಮುದ್ರೋ ಧರುಣೋ ರಯೀಣಾಮಸ್ಮದ್ಧೃದೋ ಭೂರಿಜನ್ಮಾ ವಿ ಚಷ್ಟೇ ॥
ಸಿಷಕ್ತ್ಯೂಧರ್ನಿಣ್ಯೋರುಪಸ್ಥ ಉತ್ಸಸ್ಯ ಮಧ್ಯೇ ನಿಹಿತಂ ಪದಂ ವೇಃ ॥ ೧ ॥

॥ ಪದಪಾಠಃ ॥

ಏಕಃ । ಸಮುದ್ರಃ । ಧರುಣಃ । ರಯೀಣಾಂ । ಅಸ್ಮತ್ । ಹೃದಃ । ಭೂರಿಽಜನ್ಮಾ । ವಿ । ಚಷ್ಟೇ ॥
ಸಿಸಕ್ತಿ । ಊಧಃ । ನಿಣ್ಯೋಃ । ಉಪಽಸ್ಥೇ । ಉತ್ಸಸ್ಯ । ಮಧ್ಯೇ । ನಿಽಹಿತಂ । ಪದಂ । ವೇರಿತಿ ವೇಃ ॥ ೧ ॥

॥ ಸಾಯಣಭಾಷ್ಯಂ ॥

ಸಮುದ್ರಃ ಯಸ್ಮಾದ್ಧನಾನ್ಯುದಕಾನಿ ವಾ ಸಮುದ್ದ್ರವಂತೀತಿ ತಾದೃಶೋ ರಯೀಣಾಂ ಧನಾನಾಂ ಧರುಣೋ ಧಾರಯಿತೈಕೋಽಸಹಾಯೋ ಭೂರಿಜನ್ಮಾ ಬಹುವಿಧಜನನೋ ನಾನಾಯಜ್ಞೇಷ್ವಾಹವನೀಯಾದಿಭಾವೇನ ಬಹುಜನನಃ ಸೋಽಗ್ನಿರಸ್ಮತ್ ॥ ಸುಪಾಂ ಸುಲುಗಿತಿ ಷಷ್ಠ್ಯಾ ಲುಕ್ ॥ ಅಸ್ಮಾಕಂ ಹೃದೋ ಹೃದಯಾನ್ಯಭಿಲಷಿತಾನಿ ವಿ ಚಷ್ಟೇ । ವಿಪಶ್ಯತಿ । ಜಾನಾತಿ । ಉಕ್ತಂ ಚ । ಮನೋ ವೈ ದೇವಾ ಮನುಷ್ಯಸ್ಯ ಜಾನಂತೀತಿ । ಕಿಂಚ ನಿಣ್ಯೋಃ । ಅಂತರ್ಹಿತನಾಮೈತತ್ । ಅಂತರ್ಹಿತಯೋರ್ಜ್ಯೋತಿಸ್ತಮೋಭ್ಯಾಮಾಚ್ಛಾದಿತಯೋಃ ಪ್ರಾತಃಸಾಯಂಕಾಲಯೋರುಪಸ್ಥ ಉಪಸ್ಥಾನೇ ಸಮೀಪೇ ವರ್ತಮಾನಮೂಧೋ ರಾತ್ರಿಂ ಸಿಷಕ್ತಿ । ಸೇವತೇ । ಉಪಜೀವತಿ । ಯದ್ವಾ । ನಿಣ್ಯೋರಂತರ್ಹಿತಸ್ಯಾಂತರಿಕ್ಷಸ್ಯ ಸಮೀಪೇ ವರ್ತಮಾನಮೂಧೋ ಮೇಘಂ ಸೇವತೇ । ಅಥ ಪ್ರತ್ಯಕ್ಷಃ । ಹೇ ಅಗ್ನೇ ಉತ್ಸಸ್ಯೋದಕಧಾರಕಸ್ಯ ಲೋಕಸ್ಯ ಮಧ್ಯೇ ಪದಮಪಾಂ ಸ್ಥಾನಂ ನಿಹಿತಂ । ತನ್ಮಾಧ್ಯಮಿಕಾಂ ವಾಚಂ ವೇಃ । ಗಚ್ಛ । ಯದ್ವಾ । ಉತ್ಸಸ್ಯ ಮೇಘಸ್ಯ ಮಧ್ಯೇ ನಿಹಿತಂ ಪದಂ ವಿದ್ಯುದಾಖ್ಯಂ ತತ್ ಸ್ವಾತ್ಮತಯಾ ಗಚ್ಛ ॥ ವೇಃ । ವೀ ಗತ್ಯಾದಿಷು । ಲಙಿ ಸಿಪಿ ರೂಪಂ । ವಾಕ್ಯಭೇದಾದನಿಘಾತಃ ॥

॥ ಪ್ರತಿಪದಾರ್ಥ ॥

**ಸಮುದ್ರಃ**—ಸಮುದ್ರದಂತೆ । **ರಯೀಣಾಂ**—ನಮ್ಮ ಧನಗಳಿಗೆ । **ಏಕಃ ಧರುಣಃ**—ಅದ್ವಿತೀಯನಾದ ಧಾರಕನೂ । **ಭೂರಿಜನ್ಮಾ**— ಅನೇಕವಿಧವಾದ ಜನ್ಮವುಳ್ಳವನೂ ಆದ ಅಗ್ನಿಯು । **ಅಸ್ಮತ್**—ನಮ್ಮ । **ಹೃದಃ**—ಹೃದಯದಲ್ಲಿರುವ ಇಷ್ಟಾರ್ಥಗಳನ್ನು । **ವಿ ಚಷ್ಟೇ**—ಪೂರ್ಣವಾಗಿ ಅರಿಯುತ್ತಾನೆ । **ನಿಣ್ಯೋಃ**—ತಮಸ್ಸಿನಿಂದ ಆಚ್ಛಾದಿತಗಳಾದ ಪ್ರಾತಃಕಾಲ ಮತ್ತು ಸಾಯಂಕಾಲಗಳಿಗೆ । **ಉಪಸ್ಥೇ**—ಸಮೀಪದಲ್ಲಿರುವ । **ಊಧಃ**—ರಾತ್ರಿಯನ್ನು । **ಸಿಷಕ್ತಿ**—ಸೇವಿಸುತ್ತಾನೆ । **ಉತ್ಸಸ್ಯ**—ಉದಕಾಧಾರಕವಾದ ಲೋಕದ । **ಮಧ್ಯೇ**—ಮಧ್ಯದಲ್ಲಿ । **ನಿಹಿತಂ**—ಸ್ಥಾಪಿತವಾದ । **ಪದಂ**—ಸ್ಥಾನಕ್ಕೆ । **ವೇಃ**—ಹೋಗು

॥ ಭಾವಾರ್ಥ ॥

ಸಂಪತ್ತುಗಳಿಗೆ ಆಶ್ರಯವಾದ ಸಮುದ್ರದಂತೆ ನಮ್ಮ ಧನಗಳಿಗೆ ಅದ್ವಿತೀಯನಾದ ಧಾರಕನೂ, ಅನೇಕ ವಿಧವಾದ ಜನ್ಮವುಳ್ಳವನೂ ಆದ ಅಗ್ನಿಯು ನಮ್ಮ ಹೃದಯದಲ್ಲಿರುವ ಇಷ್ಟಾರ್ಥಗಳನ್ನು ಪೂರ್ಣವಾಗಿ ಅರಿಯುತ್ತಾನೆ. ತಮಸ್ಸಿನಿಂದ ಆಚ್ಛಾದಿತಗಳಾದ ಪ್ರಾತಃಕಾಲ ಮತ್ತು ಸಾಯಂಕಾಲಗಳಿಗೆ ಸಮೀಪದಲ್ಲಿರುವ ರಾತ್ರಿಯನ್ನು ಸೇವಿಸುತ್ತಾನೆ. ಎಲೈ ಅಗ್ನಿಯೇ, ಉದಕಧಾರಕವಾದ ಲೋಕದ ಮಧ್ಯದಲ್ಲಿ ಸ್ಥಾಪಿತವಾದ ಸ್ಥಾನಕ್ಕೆ ಹೋಗು.

## English Translation

Agni, the sole capacious ocean of riches, who is of many births, beholds our hearts ; he waits on the cloud in the neighbourhood of the hidden (firmament) ; go, Agni, to your appointed place in the midst of the waters.

॥ ವಿಶೇಷವಿಷಯಗಳು ॥

**ಸಮುದ್ರಃ—ಯಸ್ಮಾದ್ಧನಾನ್ಯುದಕಾನಿ ವಾ ಸಮುದ್ದ್ರವಂತೀತಿ ತಾದೃಶಃ** । ಧನವನ್ನಾಗಲಿ, ಉದಕವನ್ನಾಗಲಿ ಸ್ರವಿಸುವುದರಿಂದ ಸಮುದ್ರವೆಂಬ ಹೆಸರು ಎಂದು ಇಲ್ಲಿ ಅರ್ಥಮಾಡಿದಾರೆ. ಸಮುದ್ರಕ್ಕೂ, ಧನಕ್ಕೂ ಹೇಗೆ ಸಂಬಂಧ ಎಂದರೆ **ರತ್ನಾಕರೋ ಜಲನಿಧಿಃ** ಎಂಬ ಕೋಶದ ಅರ್ಥದಂತೆ ಸಮುದ್ರವು ನಾನಾವಿಧ ರತ್ನಗಳಿಗೆ ಆಶ್ರಯಸ್ಥಾನವು ಎಂದು ಪ್ರಸಿದ್ಧಿಯಾಗಿರುವುದು.

**ಸಮುದ್ರ** ಶಬ್ದವು ಋಕ್ಸಂಹಿತೆಯಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದ ನಿರುಕ್ತಕಾರರು **ಸಮುದ್ರ** ಶಬ್ದವನ್ನು **ಅಂತರಿಕ್ಷ** ನಾಮಗಳಲ್ಲಿ ಸೇರಿಸಿರುವರು (ನಿ. ೨-೧೦). ಅನಂತರ ಪಾರ್ಥಿವವಾದ **ಸಮುದ್ರ**ಕ್ಕೂ **ಅಂತರಿಕ್ಷ**ಪರ್ಯಾಯವಾದ **ಸಮುದ್ರ**ಕ್ಕೂ ವ್ಯತ್ಯಾಸವನ್ನು ತೋರಿಸಿದ್ದಾರೆ. ಇವೆರಡಕ್ಕೂ ವ್ಯತ್ಯಾಸವನ್ನು ತಿಳಿಯದೇ ಸಂದೇಹಕ್ಕವಕಾಶವನ್ನು ಕೊಡುವಂತೆ ಅರ್ಥಮಾಡುವವರನ್ನು ಕುರಿತು,

**ತತ್ರ ಸಮುದ್ರ ಇತ್ಯೇತತ್ಪಾರ್ಥಿವೇನ ಸಮುದ್ರೇಣ ಸಂದಿಹ್ಯತೇ** । ಅಂತರಿಕ್ಷ ಪರ್ಯಾಯವಾದ ಸಮುದ್ರವನ್ನು ಅನೇಕರು ಪಾರ್ಥಿವಸಮುದ್ರವೆಂದು ಭ್ರಮಿಸಿ ಅರ್ಥಮಾಡುತ್ತಾರೆ. (ಅದು ಸರಿಯಲ್ಲ) ಎಂದು ಸಮುದ್ರ ಶಬ್ದಕ್ಕೆ ನಿರ್ವಚನವನ್ನು ತೋರಿಸಿದ್ದಾರೆ.

**ಸಮುದ್ರಃ ಕಸ್ಮಾತ್ಸಮುದ್ದ್ರವಂತ್ಯಸ್ಮಾದಾಪಃ ಸಮಭಿದ್ರವಂತ್ಯೇನಮಾಪಃ ಸಂಮೋದಂತೇಽಸ್ಮಿನ್ ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ.** (ನಿ. ೨-೧೦)

ಮೊದಲನೆಯದಾಗಿ ಚಲಿಸು ಎಂದರ್ಥವನ್ನು ಕೊಡುವ ದ್ರು ಧಾತುವಿನೊಡನೆ **ಸಮ್,** ಉದ್ ಎಂಬ ಎರಡು ಉಪಸರ್ಗಗಳೂ ಸೇರಿ ಮೇಲಕ್ಕೆ ಉಕ್ಕಿ ಹರಿಯುತ್ತವೆ ಎಂದು ತಾತ್ಪರ್ಯವನ್ನು ಕೊಡುತ್ತದೆಯಾದ್ದರಿಂದಲೂ, ಅಥವಾ ಎರಡನೆಯದಾಗಿ ಅದೇ **ದ್ರು** ಧಾತುವಿನೊಡನೆ **ಸಮ್, ಅಭಿ** ಎಂಬ ಉಪಸರ್ಗಗಳು ಸೇರಿಕೊಂಡು (ನದಿಯ) ನೀರುಗಳು ಇದರ ಕಡೆಗೆ ಹರಿದುಬರುತ್ತವೆಯೆಂಬ ಅರ್ಥವನ್ನು ಕೊಡುವುದರಿಂದಾಗಲಿ, ಅಥವಾ **ಸಂತೋಷಪಡು** ಎಂದರ್ಥವನ್ನು ಕೊಡುವ **ಮುದ್** ಧಾತುವಿನೊಡನೆ **ಸಮ್** ಎಂಬ ಉಪಸರ್ಗವು ಸೇರಿ ಜಲಚರ ಪ್ರಾಣಿಗಳು ಇದರಲ್ಲಿ ಹರ್ಷವನ್ನನುಭವಿಸುತ್ತವೆ ಎಂಬರ್ಥವನ್ನು ಕೊಡುವುದರಿಂದಲಾಗಲಿ ಅಥವಾ ಉದಕಕ್ಕೆ ನಿಧಿಯಾಗಿರುವುದರಿಂದಲಾಗಲಿ ಅಥವಾ **ತೇವಮಾಡು** ಎಂದರ್ಥವನ್ನು ಕೊಡುವ **ಉದ್** ಧಾತುವಿನೊಡನೆ **ಸಮ್** ಉಪಸರ್ಗವು ಸೇರಿ ನೆನೆಯಿಸು ಎಂದು ತಾತ್ಪರ್ಯವನ್ನು ಕೊಡುವುದರಿಂದಾಗಲಿ, **ಸಮುದ್ರ**ನೆಂಬ ಪದವು ನಿಷ್ಪನ್ನವಾಗಿದೆಯೆಂದು ಆ ಪದದ ನಿರ್ವಚನವನ್ನು ತೋರಿಸಿದ್ದಾರೆ (ನಿ. ೨-೧೦). ಈ ಸಂದರ್ಭದಲ್ಲಿ ಅಂತರಿಕ್ಷವಾಚ್ಯವಾದ ಸಮುದ್ರ ಶಬ್ದಕ್ಕೂ ಪಾರ್ಥಿವವಾದ ಸಮುದ್ರಕ್ಕೂ ವ್ಯತ್ಯಾಸವನ್ನು ತೋರಿಸುವುದಕ್ಕೆ ಒಂದು ಇತಿಹಾಸವನ್ನೂ ಉದಾಹರಿಸಿದ್ದಾರೆ.

(ನಿ. ೨-೧೧)

**ತಯೋರ್ವಿಭಾಗಸ್ತತ್ರೇತಿಹಾಸಮಾಚಕ್ಷತೇ । ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ । ಸ ಶಂತನುಃ ಕನೀಯಾನಭಿಷೇಚಯಾಂಚಕ್ರೇ । ದೇವಾಪಿಸ್ತಪಃ ಪ್ರತಿಪೇದೇ । ತತಃ ಶಂತನೋ ರಾಜ್ಯೇ ದ್ವಾದಶ ವರ್ಷಾಣಿ ದೇವೋ ನ ವವರ್ಷ । ತಮೂಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾ ಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ । ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ ತಸ್ಯೈತದ್ವರ್ಷಕಾಮಸೂಕ್ತಂ ತಸ್ಯೈಷಾ ಭವತಿ ॥**

ಕುರುವಂಶಸ್ಥರೂ, ಋಷ್ಟಿಷೇಣ ಪುತ್ರರೂ ಆದ **ದೇವಾಪಿ** ಮತ್ತು **ಶಂತನು** ಎಂಬುವರಲ್ಲಿ ಚಿಕ್ಕವನಾದ ಶಂತನುವು ತಾನೇ ಪಟ್ಟಾಭಿಷಿಕ್ತನಾಗಿ ಆ ರಾಜ್ಯಕ್ಕೆ ದೊರೆಯಾದನು. ದೇವಾಪಿಯು ತಪಶ್ಚರಣೆಗಾಗಿ ಕಾಡಿಗೆ ಹೊರಟು ಹೋದನು. ಅಲ್ಲಿಂದ ಮೊದಲು ಹನ್ನೆರಡು ವರ್ಷಗಳ ಕಾಲ ಶಂತನುವಿನ ರಾಜ್ಯದಲ್ಲಿ ಮಳೆಯಾಗಲಿಲ್ಲ. ಆಗ ಬ್ರಾಹ್ಮಣರು ಶಂತನುವನ್ನು ಕುರಿತು, ನೀನು ದೊಡ್ಡವನಾದ ನಿಮ್ಮಣ್ಣನನ್ನು ಕಾಡಿಗೆ ಕಳುಹಿಸಿ ನೀನೇ ದೊರೆಯಾಗಿರುವುದರಿಂದ ನೀನು ಪಾಪಕೃತ್ಯವನ್ನು ಮಾಡಿದಂತಾಯಿತು. ಆದುದರಿಂದ ವೃಷ್ಟಿದೇವನು ನಿನ್ನ ರಾಜ್ಯದಲ್ಲಿ ಮಳೆಯನ್ನು ಸುರಿಸಿಲ್ಲ ಎಂದರು. ಆಗ ಶಂತನುವು ದೇವಾಪಿಯನ್ನು ರಾಜ್ಯಾಭಿಷಿಕ್ತನನ್ನಾಗಿಮಾಡಲು ಪ್ರಯತ್ನಿಸಿದಾಗ ದೇವಾಪಿಯು ನಾನು ನಿನಗೆ ಪುರೋಹಿತನಾಗಿದ್ದುಕೊಂಡು ನಿನಗಾಗಿ ಯಜ್ಞವನ್ನು ನೆರವೇರಿಸುತ್ತೇನೆ ಎಂದು ವೃಷ್ಟ್ಯರ್ಥವಾಗಿ ಯಜ್ಞವನ್ನು ಮಾಡಿಸಿದನು. ಅನಂತರ ಊರ್ಧ್ವಭಾಗದಲ್ಲಿರುವ **ಸಮುದ್ರದಿಂದ** ಅಧೋಭಾಗದಲ್ಲಿರುವ **ಸಮುದ್ರಕ್ಕೆ** ಮಳೆಯು ಸುರಿಯಿತು ಎಂದು ಎರಡು ಸಮುದ್ರಗಳಿಗೂ ವ್ಯತ್ಯಾಸವನ್ನು ತೋರಿಸುವ,

**ಆರ್ಷ್ಟಿಷೇಣೋ ಹೋತ್ರಮೃಷಿರ್ನಿಷೀದನ್ ದೇವಾಪಿರ್ದೇವಸುಮತಿಂ ಚಿಕಿತ್ವಾನ್ ।**
**ಸ ಉತ್ತರಸ್ಮಾದಧರಂ ಸಮುದ್ರಮಪೋ ದಿವ್ಯಾ ಅಸೃಜದ್ವರ್ಷ್ಯಾ ಅಭಿ ।**
(ಋ. ಸಂ. ೧೦-೯೮-೫)

ಈ ಋಕ್ಕನ್ನು ಉದಹರಿಸಿ ಇಲ್ಲಿರುವ **ಊರ್ಧ್ವಸಮುದ್ರಕ್ಕೂ ಅಧರಸಮುದ್ರಕ್ಕೂ** ವ್ಯತ್ಯಾಸವನ್ನು ತೋರಿಸಿದ್ದಾರೆ. ಇಲ್ಲಿ ಉತ್ತರಸಮುದ್ರವೆಂದರೆ ಅಂತರಿಕ್ಷವೆಂದೂ, **ಅಧರಸಮುದ್ರ**ವೆಂದರೆ ಪಾರ್ಥಿವಸಮುದ್ರವೆಂದೂ ಅರ್ಥ. ಋಕ್ಸಂಹಿತೆಯಲ್ಲಿ **ಸಮುದ್ರ**ಶಬ್ದಕ್ಕೆ ಕೆಲವೆಡೆಗಳಲ್ಲಿ ನಿಷ್ಕೃಷ್ಟವಾಗಿ ಪಾರ್ಥಿವಸಮುದ್ರವೆಂದೇ ಹೇಳಬಹುದು. ಆದರೆ,

**ಯಥಾ ವಾತೋ ಯಥಾ ವನಂ ಯಥಾ ಸಮುದ್ರ ಏಜತಿ ।**
(ಋ. ಸಂ. ೫-೭೮-೮)

ಇತ್ಯಾದಿ ಋಕ್ಕುಗಳಲ್ಲಿ **ಅಂತರಿಕ್ಷ** ಪರ್ಯಾಯವೇ ಅಥವಾ **ಪಾರ್ಥಿವ** ಸಮುದ್ರವೇ ಎಂದು ಹೇಳಲು ಕಷ್ಟವಾಗುವುದು.

**ಅಗ್ನಿಂ ವಿಶ್ವಾ ಅಭಿ ಪೃಕ್ಷಃ ಸಚಂತೇ ಸಮುದ್ರಂ ನ ಸ್ರವತಃ ಸಪ್ತ ಯಹ್ವೀಃ ।**
(ಋ. ಸಂ. ೧-೭೧-೭)

**ಸಂ ಯಂ ಸ್ತುಭೋಽವನಯೋ ನ ಯಂತಿ ಸಮುದ್ರಂ ನ ಸ್ರವತೋ ರೋಧಚಕ್ರಾಃ ।**
(ಋ. ಸಂ. ೧-೧೯೦ ೭)

**ಯಾ ಆಪೋ ದಿವ್ಯಾ ಉತ ವಾ ಸ್ರವಂತಿ ಖನಿತ್ರಿಮಾ ಉತ ವಾ ಯಾಃ ಸ್ವಯಂಜಾಃ ।**
**ಸಮುದ್ರಾರ್ಥಾ ಯಾಃ ಶುಚಯಃ ಪಾವಕಾಸ್ತಾ ಆಪೋ ದೇವೀರಿಹ ಮಾಮವಂತು ।**
(ಋ. ಸಂ. ೭-೪೯-೨)

ಇತ್ಯಾದಿ ನಾನಾ ಋಕ್ಕುಗಳಲ್ಲಿ ಪಾರ್ಥಿವಸಮುದ್ರವೆಂದು ನಿಷ್ಕರ್ಷವಾಗಿ ಹೇಳಬಹುದು. ಕೆಲವು ಕಡೆಗಳಲ್ಲಿ ಈ ಪದವು ವಿಶೇಷಣವಾಗಿ ಉಪಯೋಗಿಸಲ್ಪಟ್ಟು **ಪ್ರವಿಸತಕ್ಕ** ಎಂಬರ್ಥವನ್ನು ಕೊಡುತ್ತದೆ

**ಅದ್ಭಿರ್ಯಾತಿ ವರುಣಃ ಸಮುದ್ರೈರ್ಯುಷ್ಮಾಁ ಇಚ್ಛಂತಃ ಶವಸೋ ನಪಾತಃ ।**

(ಋ. ಸಂ. ೧-೧೬೧-೪)

ಎಂಬ ಋಕ್ಕಿನಲ್ಲಿ **ಸಮುದ್ರೈಃ ಸಮುಂದನಸ್ವಭಾವೈಃ ಅದ್ಭಿಃ** ಪ್ರವಿಸತಕ್ಕ ಸ್ವಭಾವವುಳ್ಳ ಉದಕಗಳೊಡನೆ ಎಂದರ್ಥ. ಹೀಗೆಯೇ ಸಂದರ್ಭಾನುಸಾರವಾಗಿ ಅರ್ಥಮಾಡಬೇಕು.

**ಭೂರಿಜನ್ಮಾ—ಬಹುವಿಧಜನನೋ ನಾನಾಯಜ್ಞೇಷ್ವಾಹವನೀಯಾದಿಭಾವೇನ ಬಹುಜನನಃ ಸೋಽಗ್ನಿಃ ।** ಅನೇಕ ಜನ್ಮಗಳುಳ್ಳ ಅಗ್ನಿಯು ಎಂದರ್ಥವು. ಅನೇಕ ಯಜಮಾನರು ತಮ್ಮ ತಮ್ಮ ಅನೇಕವಾದ ಯಜ್ಞಗಳಲ್ಲಿ ಅರಣಿಗಳಲ್ಲಿ ಅಗ್ನಿಯನ್ನು ಬೇರೆಬೇರೆ ಕಡೆದು ಆಹವನೀಯಾದಿಸ್ಥಾನಗಳಲ್ಲಿ ಸ್ಥಾಪಿಸುವರು. ಅನೇಕ ಯಜ್ಞಗಳಲ್ಲಿ ಅಗ್ನಿಯನ್ನು ಕಡೆದು ಉತ್ಪತ್ತಿಮಾಡುವುದರಿಂದ ಅಗ್ನಿಯನ್ನು **ಭೂರಿಜನ್ಮಾ**—ಅನೇಕಜನ್ಮವುಳ್ಳವನೆಂದು ಕರೆಯುವುದು ಸಹಜವಾಗಿದೆ.

**ಏಕಃ**—ಅಸಹಾಯನು. ಇನ್ನೊಬ್ಬರ ಸಹಾಯವನ್ನು ಅಪೇಕ್ಷಿಸದೆ ಯಾವ ಕಾರ್ಯವನ್ನಾದರೂ ತಾನೊಬ್ಬನೇ ನಿರ್ವಹಿಸುವ ಸಾಮರ್ಥ್ಯವುಳ್ಳವನು.

**ಆಸ್ಮತ್ ಹೃದಃ ವಿ ಚಷ್ಟೇ—ಅಸ್ಮಾಕಂ ಹೃದಯಾನ್ಯಭಿಲಷಿತಾನಿ ಜಾನಾತಿ** । ಈ ಅಗ್ನಿಯು ಯಜ್ಞಮಾಡುವ ಅಥವಾ ಸ್ತೋತ್ರಮಾಡುವ ನಮ್ಮ ಹೃದಯದಲ್ಲಿ ಎಂದರೆ ಮನಸ್ಸಿನಲ್ಲಿರುವ ಅಭಿಲಾಷೆಗಳನ್ನು ತಿಳಿಯುವನು ಒಬ್ಬರ ಮನಸ್ಸಿನಲ್ಲಿರುವುದನ್ನು ಮತ್ತೊಬ್ಬರು ತಿಳಿಯಲು ಸಾಧ್ಯವಿಲ್ಲವಷ್ಟೆ. ಆದರೆ ಅಗ್ನಿಗೆ ಇನ್ನೊಬ್ಬರ ಮನಸ್ಸಿನಲ್ಲಿರುವುದನ್ನೂ ತಿಳಿಯುವ ಸಾಮರ್ಥ್ಯವಿರುವುದು.

**ನಿಣ್ಯೋಃ ಉಪಸ್ಥೇ ಊಧಃ ಸಿಷಕ್ತಿ**—ಈ ವಾಕ್ಯಕ್ಕೆ ಎರಡುವಿಧವಾದ ಅರ್ಥವನ್ನು ವಿವರಿಸಿರುವರು. ಜ್ಯೋತಿಸ್ಸಿನಿಂದಲೂ ತಮಸ್ಸಿನಿಂದಲೂ ಆವೃತವಾದ ಪ್ರಾತಃಸಾಯಂಕಾಲಗಳ ಸಮೀಪದಲ್ಲಿ ರಾತ್ರಿಯನ್ನು ಸೇವಿಸುತ್ತಾನೆ ಎಂದರೆ ಸಮೀಪಿಸುತ್ತಾನೆ. ಪ್ರಾತಃಕಾಲದಲ್ಲಿ ಬೆಳಕಿರುವುದು. ಸಾಯಂಕಾಲದಲ್ಲಿ ಕತ್ತಲೆ ಇರುವುದು. ರಾತ್ರಿಯು ಇವೆರಡಕ್ಕೂ ಸಂಬಂಧಿಸಿದಂತೆ ಇರುವುದು ಎಂದರೆ ರಾತ್ರಿಯ ಪ್ರಾರಂಭದಲ್ಲಿ ಕತ್ತಲಿನಿಂದ ಕೂಡಿದ ಸಾಯಂಕಾಲವೂ ರಾತ್ರಿಯ ಕೊನೆಯಲ್ಲಿ ಬೆಳಕಿನಿಂದ ಕೂಡಿದ ಪ್ರಾತಃಕಾಲವೂ ಇರುವುದು. ಆದ್ದರಿಂದ ಸಾಯಂಪ್ರಾತಃಕಾಲಗಳೆರಡರ ಸಂಬಂಧವುಳ್ಳ ರಾತ್ರಿಯಲ್ಲಿ ಅಗ್ನಿಯು ಬೆಳಗುತ್ತಾನೆ ಎಂದಭಿಪ್ರಾಯವು. ಇದು ಒಂದುವಿಧವಾದ ಅರ್ಥವು. **ನಿಣ್ಯೋಃ** ಎಂದರೆ ಅಂತರ್ಹಿತವಾದ ಅಂತರಿಕ್ಷದ ಎಂದರ್ಥವು. ಈ ಅಂತರಿಕ್ಷದಲ್ಲಿರುವ ಮೇಘದಲ್ಲಿ ಅಗ್ನಿಯು ವಿದ್ಯುದಗ್ನಿಯ ಸ್ವರೂಪದಿಂದ ಬೆಳಗುತ್ತಿರುವನು ಎಂದು ಇನ್ನೊಂದು ವಿಧವಾದ ಅರ್ಥವು.

**ಉತ್ಸಸ್ಯ ಮಧ್ಯೇ ನಿಹಿತಂ ಪದಂ ವೇಃ**—ಈ ವಾಕ್ಯಕ್ಕೂ ಎರಡುವಿಧವಾದ ಅರ್ಥಗಳನ್ನು ಹೇಳಬಹುದು. ಉದಕಕ್ಕೆ ಧಾರಕವಾದ ಲೋಕದ ಮಧ್ಯದಲ್ಲಿ ಉದಕದ ಅಥವಾ ಅಂತರಿಕ್ಷ ಸ್ಥಾನದಲ್ಲಿ ಇರುವ ಮಾಧ್ಯಮಿಕಾ ವಾಕ್ಕೆಂಬ ಸ್ಥಾನಕ್ಕೆ ಅಥವಾ ಉದಕದಿಂದ ಕೂಡಿದ ಮೇಘದ ಮಧ್ಯದಲ್ಲಿರುವ ನಿನ್ನ ಸ್ವರೂಪವೇ ಆದ ವಿದ್ಯುದಗ್ನಿ ಸ್ಥಾನಕ್ಕೆ ಹೋಗು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಸಮಾನಂ ನೀಳಂ ವೃಷಣೋ ವಸಾನಾಃ ಸಂ ಜಗ್ಮಿರೇ ಮಹಿಷಾ ಅರ್ವ-
ತೀಭಿಃ ॥
ಋತಸ್ಯ ಪದಂ ಕವಯೋ ನಿ ಪಾಂತಿ ಗುಹಾ ನಾಮಾನಿ ದಧಿರೇ ಪರಾಣಿ ॥

॥ ಪದಪಾಠಃ ॥

ಸಮಾನಂ । ನೀಳಂ । ವೃಷಣಃ । ವಸಾನಾಃ । ಸಂ । ಜಗ್ಮಿರೇ । ಮಹಿಷಾಃ । ಅರ್ವತೀಭಿಃ ॥
ಋತಸ್ಯ । ಪದಂ । ಕವಯಃ । ನಿ । ಪಾಂತಿ । ಗುಹಾ । ನಾಮಾನಿ । ದಧಿರೇ । ಪರಾಣಿ ॥ ೨ ॥

॥ ಸಾಯಣಭಾಷ್ಯಂ ॥

**ವೃಷಣ ಆಹುತೀನಾಂ ಸೇಕ್ತಾರಃ ಸಮಾನಮೇಕಂ ನೀಳಂ ಸ್ಥಾನಮಗ್ನಿಂ ವಸಾನಾ ಮಂತ್ರೈರಾಚ್ಛಾದಯಂತೋ ಮಹಿಷಾ ಮಹಾಂತೋ ಯಜಮಾನಾ ಅರ್ವತೀಭಿರ್ಗಮನಶೀಲಾಭಿಃ ಸಂ ಜಗ್ಮಿರೇ ।**

ಸಮಾಗಚ್ಛಂತೇ । ಅಶ್ವವಂತೋಽಭೂವನ್ । ಯದ್ವಾ । ಅಗ್ನಿಮೇವಾತ್ಮೀಯಯಜ್ಞಂ ಪ್ರತ್ಯಾಗಂತುಂ ರೋಹಿದಾಖ್ಯಾಭಿರ್ವಡವಾಭಿಃ ಸಂಯೋಜಿತವಂತಃ । ತಥಾ ಕವಯೋ ಮೇಧಾವಿನ ಋತಸ್ಯೋದಕಸ್ಯ ಪದಮಾಸ್ಪದಸ್ಥಾನಮಗ್ನಿಂ ನಿ ಪಾಂತಿ । ನಿತರಾಂ ರಕ್ಷಂತಿ । ಹವಿರ್ಭಿಃ ಸ್ತುತಿಭಿಶ್ಚಾರಾಧಯಂತೀತ್ಯರ್ಥಃ । ತತೋ ಗುಹಾ ಗುಹಾಯಾಮಂತರಿಕ್ಷೇ ಸ್ಥಿತಾನಿ ದಿವ್ಯಾನಿ ನಾಮಾನ್ಯುದಕಾನಿ ದಧಿರೇ । ಧಾರಯಂತಿ । ಯದ್ವಾ ಗುಹಾ ಗೂಢೇ ಸಂವೃತೇ ಹೃದಯೇ ಪರಾಣಿ ಪ್ರಧಾನಾನ್ಯಗ್ನಿರ್ಜಾತವೇದಾ ವೈಶ್ವಾನರ ಇತ್ಯಾದೀನಿ ನಾಮಾನಿ ದಧಿರೇ । ಕುರ್ವಂತಿ । ಸ್ತುವಂತೀತ್ಯರ್ಥಃ ॥

। ಪ್ರತಿಪದಾರ್ಥ ।

ವೃಷಣಃ—ಆಹುತಿಗಳನ್ನರ್ಪಿಸುವವರೂ । **ಸಮಾನಂ**—ಎಲ್ಲರಿಗೂ ಸಮಾನವಾದ । ನೀಳಂ—ಪೂಜಾಸ್ಥಾನವಾದ ಅಗ್ನಿಯನ್ನು । **ವಶಾನಾಃ**—ಮಂತ್ರಗಳಿಂದ ಆಚ್ಛಾದಿಸುವವರೂ । **ಮಹಿಷಾಃ**—ಮಹಾತ್ಮರೂ ಆದ ಯಜಮಾನರು । **ಅರ್ವತೀಭಿಃ**—ಅಶ್ವಗಳೊಂದಿಗೆ । **ಸಂ ಜಗ್ಮಿರೇ**-ಯೋಜಿಸಿದ್ದಾರೆ । **ಕವಯಃ**—ಮೇಧಾವಿಗಳು । **ಋತಸ್ಯ**—ಉದಕದ । **ಪದಂ**—ಸ್ಥಾನವನ್ನು । **ನಿ ಪಾಂತಿ**—ರಕ್ಷಿಸುತ್ತಾರೆ । **ಗುಹಾ**—ತಮ್ಮ ಗೂಢವಾದ ಹೃದಯದಲ್ಲಿ ಧ್ಯಾತವಾಗುವ । **ಪರಾಣಿ ನಾಮಾನಿ**—ಅಗ್ನಿಯ ಉತ್ಕೃಷ್ಟವಾದ ನಾಮಗಳನ್ನು । **ದಧಿರೇ**—ಧರಿಸಿದ್ದಾರೆ.

॥ ಭಾವಾರ್ಥ ॥

ಆಹುತಿಗಳನ್ನರ್ಪಿಸುವವರೂ, ಎಲ್ಲರಿಗೂ ಸಮಾನವಾದ ಪೂಜಾಸ್ಥಾನವಾದ ಅಗ್ನಿಯನ್ನು ಮಂತ್ರಗಳಿಂದ ಆಚ್ಛಾದಿಸುವವರೂ ಮಹಾತ್ಮರೂ ಆದ ಯಜಮಾನರು ಅಶ್ವಗಳೊಂದಿಗೆ ಅಗ್ನಿಯನ್ನು ತಮ್ಮ ಯಾಗಕ್ಕೆ ಬರಲು ಯೋಜಿಸಿದ್ದಾರೆ. ಮೇಧಾವಿಗಳು ಉದಕದ ಸ್ಥಾನವನ್ನು ರಕ್ಷಿಸುತ್ತಾರೆ. ತಮ್ಮ ಗೂಢವಾದ ಹೃದಯದಲ್ಲಿ ಧ್ಯಾತವಾಗುವ ಅಗ್ನಿಯ ಉತ್ಕೃಷ್ಟವಾದ ನಾಮಗಳನ್ನು ಧರಿಸಿದ್ದಾರೆ.

## English Translation

Great (worshippers), showerers (of oblations) enveloping with their hymns the common dark (fire), have associated (him) with his horses (to the sacrifice). Sages, preserve (by oblations) the place of the water and support the divine rains in the vault (of heaven).

॥ ವಿಶೇಷವಿಷಯಗಳು ॥

**ವೃಷಣಃ ಸಮಾನಂ ನೀಳಂ ವಸಾನಾಃ ಮಹಿಷಾಃ ಅರ್ವತೀಭಿಃ ಸಂ ಜಗ್ಮಿರೇ**—ಈ ವಾಕ್ಯಕ್ಕೆ ಭಾಷ್ಯಕಾರರು ಎರಡು ವಿಧ ಅರ್ಥವಿವರಣೆ ಮಾಡಿದ್ದಾರೆ. ಅಗ್ನಿಗೆ ಆಹುತಿಯನ್ನರ್ಪಿಸುವವರೂ ಅಗ್ನಿಯನ್ನು ಮಂತ್ರಗಳಿಂದ ಆಚ್ಛಾದಿಸುವವರೂ ಎಂದರೆ ಸ್ತುತಿಸುವವರೂ ಆದ ಶ್ರೇಷ್ಠರಾದ ಯಜಮಾನರು ಅಶ್ವಗಳಿಂದ ಯುಕ್ತರಾಗಿ ಆದರು ಎಂದರೆ ಅಗ್ನಿಯ ಅನುಗ್ರಹದಿಂದ ಅಶ್ವಗಳನ್ನು ಪಡೆದರು. ಅಥವಾ ಅಗ್ನಿಯು ತಮ್ಮ ಯಜ್ಞಭೂಮಿಗೆ ಬರುವುದಕ್ಕಾಗಿ ರೋಹಿತ ಎಂಬ ಅಗ್ನಿಯ ಅಶ್ವಗಳಿಂದ ಅಗ್ನಿಯ ರಥವನ್ನು ಹೂಡಿದರು ಎಂದೂ ಅರ್ಥವು.

**ಋತಸ್ಯ ಪದಂ ಕವಯಃ ನಿ ಪಾಂತಿ**—ಮೇಧಾವಿಗಳಾದ ಋತ್ವಿಗ್ಜನರು ಉದಕದ ಆವಾಸಸ್ಥಾನವಾಗಿರುವ-ಎಂದರೆ ಉದಕದಲ್ಲಿ ಆಶ್ರಯವನ್ನು ಪಡೆದಿದ್ದ ಅಗ್ನಿಯನ್ನು ಚೆನ್ನಾಗಿ ರಕ್ಷಿಸುತ್ತಾರೆ. ಎಂದರೆ ಹವಿರರ್ಪಣೆಯಿಂದಲೂ ಸ್ತೋತ್ರಪಠನಗಳಿಂದಲೂ ಅಗ್ನಿಯನ್ನು ವಿಶೇಷವಾಗಿ ಆರಾಧಿಸುತ್ತಾರೆ.

**ಗುಹಾ ನಾಮಾನಿ ದಧಿರೇ ಪರಾಣಿ**—ಅಂತರಿಕ್ಷದಲ್ಲಿ ಇರುವ ದಿವ್ಯವಾದ ಎಂದರೆ ಸ್ವರ್ಗೀಯವಾದ ಉದಕವನ್ನು ಧರಿಸುತ್ತಾರೆ. ಅಥವಾ ಗೂಢ ಪ್ರದೇಶವಾದ ಹೃದಯಾಂತರಾಳದಲ್ಲಿ ಅಗ್ನಿಯ ವಿವಿಧನಾಮಗಳಾದ ಜಾತವೇದಾಃ, ವೈಶ್ವಾನರ ಮೊದಲಾದ ಹೆಸರುಗಳನ್ನು ಧ್ಯಾನಿಸಿ ಸ್ತುತಿಸುತ್ತಾರೆ ಎಂದೂ ಅರ್ಥಮಾಡಬಹುದು.

॥ ಸಂಹಿತಾಪಾಠ ॥

ಋತಾಯಿನೀ ಮಾಯಿನೀ ಸಂ ದಧಾತೇ ಮಿತ್ವಾ ಶಿಶುಂ ಜಜ್ಞತುರ್ವರ್ಧಯಂತೀ ॥
ವಿಶ್ವಸ್ಯ ನಾಭಿಂ ಚರತೋ ಧ್ರುವಸ್ಯ ಕವೇಶ್ಚಿತ್ತಂತುಂ ಮನಸಾ ವಿಯಂತಃ ॥

॥ ಪದಪಾಠಃ ॥

ಋತಯಿನೀ ಇತ್ಯೃತಽಯಿನೀ । ಮಾಯಿನೀ ಇತಿ । ಸಂ । ದಧಾತೇ ಇತಿ । ಮಿತ್ವಾ । ಶಿಶುಂ ।
ಜಜ್ಞತುಃ । ವರ್ಧಯಂತೀ ಇತಿ ॥
ವಿಶ್ವಸ್ಯ । ನಾಭಿಂ । ಚರತಃ । ಧ್ರುವಸ್ಯ । ಕವೇಃ । ಚಿತ್ । ತಂತುಂ । ಮನಸಾ । ವಿಽಯಂತಃ ॥ ೩ ॥

॥ ಸಾಯಣಭಾಷ್ಯಂ ॥

ಋತಾಯಿನೀ ಋತವತ್ಯೌ ಸತ್ಯವತ್ಯೌ ಅತ ಏವ ಮಾಯಿನೀ ಪ್ರಜ್ಞಾವತ್ಯೌ ಕರ್ಮಯುಕ್ತೇ ವಾ ದ್ಯಾವಾಪೃಥಿವ್ಯೌ ಯಜ್ಞಸಾಧನಭೂತೇ ಅರಣೀ ವೇಮಮಗ್ನಿಂ ಸಂ ದಧಾತೇ । ಸಮ್ಯಗ್ಧಾರಯತಃ । ಅಗ್ನಿಂ ಸೂರ್ಯಾತ್ಮನಾ ಕೇವಲಾಗ್ನ್ಯಾತ್ಮನಾ ವಾ ಸಂ ದಧಾತೇ । ಮಿತ್ವಾ ಕಾಲಪರಿಮಾಣಂ ಕೃತ್ವಾ ಯದ್ವಾ ಸಂಪರಿಚ್ಛಿದ್ಯ ಶಿಶುಂ ಶಂಸನೀಯಂ ಬಾಲಮಗ್ನಿಂ ಜಜ್ಞತುಃ । ಜನಯತಃ । ವರ್ಧಯಂತೀ ವರ್ಧಯಂತ್ಯೌ ದ್ಯಾವಾಪೃಥಿವ್ಯೌ। ಲೋಕೇ ಯಥಾ ಪರಿಚ್ಛೇದಾಯ ಪುತ್ರಂ ಪಿತರೌ ಜನಯತಸ್ತದ್ವತ್। ತತೋ ವಿಶ್ವಸ್ಯ ಸರ್ವಸ್ಯ ಚರತೋ ಜಂಗಮಸ್ಯ ಧ್ರುವಸ್ಯ ಸ್ಥಾವರಸ್ಯ ಚ ಜಗತೋ ನಾಭಿಂ ನಾಭಿಭೂತಂ ಮಧ್ಯಂ ಪ್ರಧಾನಭೂತಂ ವಾ ಕವೇರ್ಮೇಧಾವಿನೋಽಗ್ನೇಸ್ತಂತುಂ ತನಿತಾರಂ ವೈಶ್ವಾನರಾಖ್ಯಮಂತಮೇವ ಮನಸಾ ವಿಯಂತೋ ವಿವಿಧಂ ಗಚ್ಛಂತೋ ಮನುಷ್ಯಾಃ ಸುಖೇನ ಯುಜ್ಯಂತ ಇತಿ ಶೇಷಃ। ತಂ ವಯಂ ಯಜಾಮ ಇತಿ ॥

। ಪ್ರತಿಪದಾರ್ಥ ।

**ಋತಾಯಿನೀ**—ಸತ್ಯಾತ್ಮಕರೂ । **ಮಾಯಿನೀ**—ಪ್ರಜ್ಞಾಯುತರೂ ಆದ ದ್ಯಾವಾಪೃಥಿವಿಗಳು । **ಸಂ ದಧಾತೇ**—ಅಗ್ನಿಯನ್ನು ಧರಿಸಿದ್ದಾರೆ । **ಮಿತ್ವಾ**—ಕಾಲಪರಿಚ್ಛೇದಕರಾಗಿ । **ಶಿಶುಂ**—ಪುತ್ರರೂಪನಾದ ಅಗ್ನಿಯನ್ನು । **ಜಜ್ಞತುಃ ವರ್ಧಯಂತೀ**—ಉತ್ಪನ್ನಮಾಡಿದ್ದಾರೆ ಮತ್ತು ಅವನನ್ನು ಪುಷ್ಟಿಗೊಳಿಸಿದ್ದಾರೆ (ಅಥವಾ ಅವನನ್ನು ಪುಷ್ಟಿಗೊಳಿಸಿ ಉತ್ಪನ್ನಮಾಡಿದ್ದಾರೆ) । **ವಿಶ್ವಸ್ಯ**—ಸಕಲವಾದ । **ಚರತಃ**—ಚರಾತ್ಮಕವಾದ ಜಗತ್ತಿಗೂ । **ಧ್ರುವಸ್ಯ ಚಿತ್**—ಸ್ಥಿರವಾದ ವಿಶ್ವಕ್ಕೂ । **ನಾಭಿಂ**—ನಾಭಿಭೂತವಾದ । **ಕವೇಃ**—ಮೇಧಾವಿಯಾದ ಅಗ್ನಿಯ । **ತಂತುಂ**—ವೈಶ್ವಾನರ ಸಂಜ್ಞಕವಾದ ಅಂಶವನ್ನು । **ಮನಸಾ**—ಮನಸ್ಸಿನಲ್ಲಿಯೇ । **ವಿಯಂತಃ**—ಧ್ಯಾನಿಸುತ್ತಾ (ಅವನನ್ನು ಪೂಜಿಸೋಣ) ।

। ಭಾವಾರ್ಥ ।

ಸತ್ಯಾತ್ಮಕರೂ ಪ್ರಜ್ಞಾಯುತರೂ ಆದ ದ್ಯಾವಾಪೃಥಿವಿಗಳು ತಮ್ಮ ಮಧ್ಯದಲ್ಲಿ ಅಗ್ನಿಯನ್ನು ಧರಿಸಿದ್ದಾರೆ. ಕಾಲಪರಿಚ್ಛೇದಕರಾದ ಅವರು ಪುತ್ರರೂಪನಾದ ಅಗ್ನಿಯನ್ನು ಉತ್ಪನ್ನಮಾಡಿ ಬೆಳೆಸಿದ್ದಾರೆ. ಸಕಲ ಚರಾಚರಾತ್ಮಕವಾದ ಜಗತ್ತಿಗೆಲ್ಲ ನಾಭಿಭೂತವಾದ ಮೇಧಾವಿಯಾದ ಅಗ್ನಿಯ ವೈಶ್ವಾನರಸಂಜ್ಞಕವಾದ ಅಂಶವನ್ನು ಮನಸ್ಸಿನಲ್ಲಿಯೇ ಧ್ಯಾನಿಸುತ್ತಾ ಅವನನ್ನು ಪೂಜಿಸೋಣ.

## English Translation

The two observers of the truth, the two possessors of wisdom, (heaven and earth) sustain (this Agni) ; measuring the time, they have brought forth and reared a son ; and (men), pondering in their minds on that navel of the universe, movable and immovable, the thread of the sage (Agni, are blessed with happiness).

॥ ಸಂಹಿತಾಪಾಠಃ ॥

**ಋತಸ್ಯ ಹಿ ವರ್ತನಯಃ ಸುಜಾತಮಿಷೋ ವಾಜಾಯ ಪ್ರದಿವಃ ಸಚಂತೇ ॥**

**ಅಧೀವಾಸಂ ರೋದಸೀ ವಾವಸಾನೇ ಘೃತೈರನ್ನೈರ್ವಾವೃಧಾತೇ ಮಧೂನಾಂ ॥ ೪ ॥**

। ಪದಪಾಠಃ ।

**ಋತಸ್ಯ । ಹಿ । ವರ್ತನಯಃ । ಸುಽಜಾತಂ । ಇಷಃ । ವಾಜಾಯ । ಪ್ರಽದಿವಃ । ಸಚಂತೇ ॥**

**ಅಧೀವಾಸಂ । ರೋದಸೀ ಇತಿ । ವವಸಾನೇ ಇತಿ । ಘೃತೈಃ । ಅನ್ನೈಃ । ವವೃಧಾತೇ ಇತಿ । ಮಧೂನಾಂ ।**

॥ ಸಾಯಣಭಾಷ್ಯಂ ॥

ಋತಸ್ಯ ಯಜ್ಞಸ್ಯ ವರ್ತನಯಃ ಪ್ರವರ್ತಕಾ ಇಷೋಽಭಿಲಷಿತಾನೀಚ್ಛಂತಃ ಪ್ರದಿವಃ ಪುರಾತನಾ ಋತ್ವಿಗ್ಯಜಮಾನಾಃ ಸುಜಾತಮಾಧಾನಕಾಲೇ ಸುಷ್ಠೂತ್ಪನ್ನಮಗ್ನಿಂ ವಾಜಾಯ ಬಲಾರ್ಥಮನ್ನಾರ್ಥಂ ವಾ ಸಚಂತೇ ಹಿ । ಸೇವಂತೇ ಖಲು । ಅಪಿ ಚ ವಾಸಸಾನೇ ಸರ್ವಸ್ಯ ಜಗತ ಆಚ್ಛಾದಯಿತ್ರ್ಯೌ ರೋದಸೀ ದ್ಯಾವಾಪೃಥಿವ್ಯಾವಧೀವಾಸನೋಷಧಿನಕ್ಷತ್ರಾದ್ಯಾತ್ಮನಾ ನಿವಸಂತಂ । ಯದ್ವಾ । ಅಧಿರುಪರ್ಯರ್ಥೇ । ತ್ರಯಾಣಾಂ ಲೋಕಾನಾಮುಪರ್ಯಗ್ನಿವಿದ್ಯುದಾದಿತ್ಯಾತ್ಮನಾ ನಿವಸಂತಂ । ಅಗ್ನಿಂ ಮಧೂನಾಮುದಕಾನಾಂ ಜನ್ಯತ್ವೇನ ಸಂಬಂಧಿಭಿರ್ಘೃತೈರನ್ನೈಃ ಪುರೋಡಾಶಾದಿಭಿಶ್ಚ ವಾವೃಧಾತೇ । ವರ್ಧಯಾಂ ಚಕ್ರತುಃ । ವರ್ಧಯತಃ । ತಸ್ಮಾದ್ವಯಮಪಿ ತಮಗ್ನಿಮಭಿಷ್ಟುಮ ಇತ್ಯಭಿಪ್ರಾಯಃ ॥

॥ ಪ್ರತಿಪದಾರ್ಥ ॥

**ಋತಸ್ಯ**—ಯಜ್ಞಕ್ಕೆ । **ವರ್ತನಯಃ**—ಪ್ರವರ್ತಕರೂ । **ಇಷಃ**—ಅನ್ನೇಚ್ಛುಗಳೂ । **ಪ್ರದಿವಃ**—ಪುರಾತನರೂ ಆದ ಋತ್ವಿಗ್ಯಜಮಾನರು । **ಸುಜಾತಂ**—ಉತ್ತಮವಾದ ಉತ್ಪನ್ನವುಳ್ಳ ಅಗ್ನಿಯನ್ನು । **ವಾಜಾಯ**—ಅನ್ನಲಾಭಾರ್ಥವಾಗಿ । **ಸಚಂತೇ ಹಿ**—ಸೇವಿಸುತ್ತಾರೆ । **ವಾಸಸಾನೇ**—ಸಕಲ ಜಗತ್ತನ್ನೂ ಆವರಿಸುವ । **ರೋದಸೀ**—ದ್ಯಾವಾಪೃಥಿವಿಗಳು । **ಅಧೀವಾಸಂ**—ಲೋಕತ್ರಯವನ್ನೂ ರೂಪವೈವಿಧ್ಯವನ್ನು ಹೊಂದಿರುವ ಅಗ್ನಿಯನ್ನು । **ಮಧೂನಾಂ**—ಉದಕಹೇತುಗಳಾದ । **ಘೃತೈಃ**—ಆಜ್ಯಾಹುತಿಗಳಿಂದಲೂ । **ಅನ್ನೈಃ**—ಪುರೋಡಾಶಾದಿಗಳಿಂದಲೂ । **ವಾವೃಧಾತೇ**—ಬೆಳೆಸುತ್ತಾರೆ ।

॥ ಭಾವಾರ್ಥ ॥

ಯಜ್ಞಕ್ಕೆ ಪ್ರವರ್ತಕರೂ, ಅನ್ನೇಚ್ಛುಗಳೂ, ಪುರಾತನರೂ ಆದ ಋತ್ವಿಗ್ಯಜಮಾನರು ಉತ್ತಮವಾದ ಉತ್ಪನ್ನವುಳ್ಳ ಅಗ್ನಿಯನ್ನು ಅನ್ನಲಾಭಾರ್ಥವಾಗಿ ಸೇವಿಸುತ್ತಾರೆ. ಸಕಲ ಜಗತ್ತನ್ನು ಆವರಿಸುವ ದ್ಯಾವಾಪೃಥಿವಿಗಳು ರೂಪವೈವಿಧ್ಯದಿಂದ ಮೂರು ಲೋಕವನ್ನೂ ಆಕ್ರಮಿಸಿರುವ ಅಗ್ನಿಯನ್ನು ಉದಕಹೇತುಗಳಾದ ಆಜ್ಯಾಹುತಿಗಳಿಂದಲೂ ಪುರೋಡಾಶಾದ್ಯನ್ನಗಳಿಂದಲೂ ಬೆಳೆಸುತ್ತಾರೆ.

## English Translation

The ancient celebrators of the rite desiring (boons) wait on (Agni) rightly born, for the sake of food : the all-comprising heaven and earth cherish him, who abides above the heavens, with the sacrificial butter and food (produced) from the water.

॥ ಸಂಹಿತಾಪಾಠಃ ॥

ಸಪ್ತ ಸ್ವಸ್ರೂರರುಷೀರ್ವಾವಶಾನೋ ವಿದ್ವಾನ್ಮಧ್ವ ಉಜ್ಜಭಾರಾ ದೃಶೇ ಕಂ ॥
ಅಂತರ್ಯೇಮೇ ಅಂತರಿಕ್ಷೇ ಪುರಾಜಾ ಇಚ್ಛನ್ವವ್ರಿಮವಿದತ್ಪೂಷಣಸ್ಯ ॥

॥ ಪದಪಾಠಃ ॥

ಸಪ್ತ । ಸ್ವಸೄಃ । ಅರುಷೀಃ । ವಾವಶಾನಃ । ವಿದ್ವಾನ್ । ಮಧ್ವಃ । ಉತ್ । ಜಭಾರ । ದೃಶೇ । ಕಂ ॥

ಅಂತಃ । ಯೇಮೇ । ಅಂತರಿಕ್ಷೇ । ಪುರಾಽಜಾಃ । ಇಚ್ಛನ್ । ವವ್ರಿಂ । ಅವಿದತ್ । ಪೂಷಣಸ್ಯ ॥ ೫ ॥

॥ ಸಾಯಣಭಾಷ್ಯಂ ॥

ವಾವಶಾನಃ ಕಾಮಯಮಾನೋ ವಾಶ್ಯಮಾನಃ ಸ್ತೋತೃಭಿಃ ಸ್ತೂಯಮಾನೋ ವಾ ವಿದ್ವಾನ್ ಸರ್ವಂ ಜಾನಾನಃ ಸೋಽಗ್ನಿರರುಷೀರಾರೋಚಮಾನಾಃ ಸಪ್ತ ಸಪ್ತಸಂಖ್ಯಾಕಾಃ ಸ್ವಸೄಃ ಸ್ವಯಂಸಾರಿಣೀಃ ಕಾಲೀ ಕರಾಲೀ ಚೇತ್ಯಾದಿಕಾಃ ಸಪ್ತ ಜಿಹ್ವಾ ಮಧ್ವೋ ಮದಕರಾದ್ಯಜ್ಞಾದುಜ್ಜಭಾರ । ಉಜ್ಜಹಾರ । ಊರ್ಧ್ವಂ ಹೃತವಾನ್ । ಯಜ್ಞೇ ಸ್ವತೇಜಸಾ ಪ್ರಾದುರ್ಭೂತ ಇತ್ಯರ್ಥಃ । ಕಿಮರ್ಥಂ ಕಂ ಸುಖೇನ ದೃಶೇ ಸರ್ವೇಷಾಮೇವ ಪದಾರ್ಥಾನಾಂ ದರ್ಶನಾರ್ಥಂ । ಕಿಂಚ ಪುರಾಜಾಃ ಪುರಾಜಾತಃ ಸೋಽಗ್ನಿರ್ದ್ಯಾವಾಪೃಥಿವ್ಯೋರಂತರ್ಮಧ್ಯೇಽಂತರಿಕ್ಷೇ ಸ್ಥಿತಃ ಸ್ವಾ ಜಿಹ್ವಾ ಯೇಮೇ । ನಿಯಮಿತವಾನ್ । ಸರ್ವತ್ರ ತೇಜೋಯುಕ್ತೋ ವರ್ತತ ಇತ್ಯರ್ಥಃ । ಅಪಿ ಚೇಚ್ಛನ್ಯಜಮಾನಾನ್ಕಾಮಯಮಾನೋಽಗ್ನಿಃ ಪೂಷಣಸ್ಯ । ಪೂಷೇತಿ ಪೃಥಿವೀನಾಮ । ಪಾರ್ಥಿವಸ್ಯ ಲೋಕಸ್ಯ ವವ್ರಿಂ ರೂಪಂ ಪೃಶ್ನಿವರ್ಣಮವಿದತ್ । ಪ್ರಾಯಚ್ಛತ್ । ಯದ್ವಾ । ಮೂರ್ಧಾ ಭುವೋ ಭವತಿ ನಕ್ತಮಗ್ನಿಸ್ತತಃ ಸೂರ್ಯೋ ಜಾಯತೇ ಪ್ರಾತರುದ್ಯನ್ । ಋ. ೧೦-೮೮-೬ । ಇತಿ ಮಂತ್ರಾಂತರೇ ದರ್ಶನಾದಾದಿತ್ಯಾತ್ಮನಾಗ್ನಿಃ ಸ್ತೂಯತೇ । ಕಾಮಯಮಾನಃ ಸೂರ್ಯಾತ್ಮಾಗ್ನಿಃ ಸಪ್ತಸಂಖ್ಯಾಕಾನ್ ಸ್ವಸೄ ರಶ್ಮೀನ್ ಮಧ್ವಃ ಸಮುದ್ರೋದಕಾದುದ್ಧೃತವಾನ್ । ಪ್ರಾಪ್ತಃ । ಅಂತರಿಕ್ಷೇ ವಿದ್ಯುದಾತ್ಮನಾ ಸ್ಥಿತ್ವಾ ವೃಷ್ಟಿಲಕ್ಷಣಂ ರೂಪಂ ಪೃಥಿವ್ಯಾಃ ಪ್ರಯಚ್ಛತಿ ॥

॥ ಪ್ರತಿಪದಾರ್ಥ ॥

**ವಾವಶಾನಃ**—ಸ್ತುತಿಕರ್ತರಿಂದ ಪ್ರಶಂಸಿತನೂ । **ವಿದ್ವಾನ್**—ಸಕಲವನ್ನೂ ತಿಳಿದವನೂ ಆದ ಅಗ್ನಿಯು । **ಅರುಷೀಃ**—ಆಕರ್ಷಕಗಳಾದವೂ । **ಸಪ್ತ**—ಸಪ್ತ ಸಂಖ್ಯಾಕಗಳೂ । **ಸ್ವಸೄಃ**—ಸ್ವಯಂ ಪ್ರಸಾರಕಗಳೂ ಆದ ಜ್ವಾಲೆಗಳನ್ನು । **ಮಧ್ವಃ**—ಯಜ್ಞಶಾಲೆಯಿಂದ । **ಕಂ**—ಸುಖವಾಗಿ । **ದೃಶೇ**—ಎಲ್ಲರಿಗೂ ಗೋಚರವಾಗಲು । **ಉಜ್ಜಭಾರ**—ಮೇಲೆತ್ತಿ ಹರಡಿದ್ದಾನೆ । **ಪುರಾಜಾಃ**—ಪೂರ್ವೋತ್ಪನ್ನನಾದ ಅಗ್ನಿಯು । **ಅಂತಃ**—ದ್ಯಾವಾಪೃಥಿವಿಗಳ ಮಧ್ಯಭಾಗವಾದ । **ಅಂತರಿಕ್ಷೇ**—ಅಂತರಿಕ್ಷದಲ್ಲಿ ಸ್ಥಿತನಾಗಿ । **ಯೇಮೇ**—ತನ್ನ ಜ್ವಾಲೆಗಳನ್ನು ನಿಯಮಿಸಿದ್ದಾನೆ । **ಇಚ್ಛನ್**—ಯಜಮಾನರನ್ನು ಅನುಗ್ರಹಿಸಲಪೇಕ್ಷಿಸಿ । **ಪೂಷಣಸ್ಯ**—ಪಾರ್ಥಿವಲೋಕಕ್ಕೆ । **ವವ್ರಿಂ**—ಪೃಶ್ನಿವರ್ಣದ ರೂಪವನ್ನು । **ಅವಿದತ್**—ಕೊಟ್ಟಿದ್ದಾನೆ.

॥ ಭಾವಾರ್ಥ ॥

ಸ್ತುತಿಕರ್ತರಿಂದ ಪ್ರಶಂಸಿತನೂ, ಸಕಲವನ್ನೂ ತಿಳಿದವನೂ ಆದ ಅಗ್ನಿಯು ಆಕರ್ಷಕಗಳಾದವೂ, ಸಪ್ತಸಂಖ್ಯಾಕಗಳೂ, ಸ್ವಯಂಪ್ರಸರಿಸುವುವೂ ಆದ ಜ್ವಾಲೆಗಳನ್ನು ಎಲ್ಲರಿಗೂ ಸುಖವಾಗಿ ಕಾಣಿಸುವಂತೆ ಯಜ್ಞಶಾಲೆ

ಯಿಂದ ಮೇಲೆತ್ತಿ ಹರಡಿದ್ದಾನೆ. ಪೂರ್ವೋತ್ಪನ್ನನಾದ ಅಗ್ನಿಯು ದ್ಯಾವಾಪೃಥಿವಿಗಳ ಮಧ್ಯಭಾಗವಾದ ಅಂತರಿಕ್ಷದಲ್ಲಿ ಸ್ಥಿತನಾಗಿ ತನ್ನ ಜ್ವಾಲೆಗಳನ್ನು ನಿಯಮಿಸಿದ್ದಾನೆ. ಯಜಮಾನರನ್ನು ಅನುಗ್ರಹಿಸಲಪೇಕ್ಷಿಸಿ ಪಾರ್ಥಿವಲೋಕಕ್ಕೆ ಪೃಶ್ನಿವರ್ಣದ (ನಾನಾವರ್ಣದ) ರೂಪವನ್ನು ಕೊಟ್ಟಿದ್ದಾನೆ.

## English Translation

The wise Agni glorified (by his worshippers) has from the sacrifice raised aloft, for the ready manifestation of (all things), the seven radiant sisters (flames) ; which when formealy engendered he restrained in thr firmament, until desirous of (adorers) he bestowed form upon the region of the earth.

॥ ವಿಶೇಷವಿಷಯಗಳು ॥

ವಾವಶಾನಃ—ಈ ಶಬ್ದಕ್ಕೆ ಯಾಸ್ಕರು **ವಾವಶಾನೋ ವಷ್ಟೇರ್ವಾ ವಾಶ್ಯತೇರ್ವಾ ಸಪ್ತ ಸ್ವಸ್ರಾರರುಷೀರ್ವಾವಶಾನಃ ಇತ್ಯಪಿ ನಿಗಮೋ ಭವತಿ** (ನಿ. ೫-೧) ಎಂದು ನಿರ್ವಚನವನ್ನು ಹೇಳಿದಾರೆ. ವಾವಶಾನಃ ಎಂಬ ಶಬ್ದವು ಅಪೇಕ್ಷಿಸು ಎಂಬರ್ಥವುಳ್ಳ **ವಶ್** ಧಾತುವಿನಿಂದಾಗಲಿ, ಘಟ್ಟಿಯಾಗಿ ಶಬ್ದಮಾಡು ಎಂಬರ್ಥವಿರುವ **ವಾಶ್** ಧಾತುವಿನಿಂದಾಗಲಿ ನಿಷ್ಪನ್ನವಾಗುತ್ತದೆ. ಆದ್ದರಿಂದ **ವಾವಶಾನಃ** ಎಂಬ ಶಬ್ದಕ್ಕೆ ಅಪೇಕ್ಷಿಸುವ ಅಥವಾ ಶಬ್ದಮಾಡುವ ಎಂದರ್ಥವು.

॥ ಸಂಹಿತಾಪಾಠಃ ॥

**ಸಪ್ತ ಮರ್ಯಾದಾಃ ಕವಯಸ್ತತಕ್ಷುಸ್ತಾಸಾಮೇಕಾಮಿದಭ್ಯಂಹುರೋ-ಗಾತ್ ॥**
**ಆಯೋರ್ಹ ಸ್ಕಂಭ ಉಪಮಸ್ಯ ನೀಳೇ ಪಥಾಂ ವಿಸರ್ಗೇ ಧರುಣೇಷು ತಸ್ಥೌ ॥ ೬ ॥**

॥ ಪದಪಾಠಃ ॥

ಸಪ್ತ । ಮರ್ಯಾದಾಃ । ಕವಯಃ । ತತಕ್ಷುಃ । ತಾಸಾಂ । ಏಕಾಂ । ಇತ್ । ಅಭಿ । ಅಂಹುರಃ । ಗಾತ್ ॥
ಆಯೋಃ । ಹ । ಸ್ಕಂಭಃ । ಉಪಽಮಸ್ಯ । ನೀಳೇ । ಪಥಾಂ । ವಿಽಸರ್ಗೇ । ಧರುಣೇಷು । ತಸ್ಥೌ ॥ ೬ ॥

॥ ಸಾಯಣಭಾಷ್ಯಂ ॥

**ಕವಯೋ ಮೇಧಾವಿನ ಋಷಯಃ ಸಪ್ತ ಮರ್ಯಾದಾಃ । ಕಾಮಜೇಭ್ಯಃ ಕ್ರೋಧಜೇಭ್ಯಶ್ಚೋದ್ಧೃತಾಃ ಪಾನಮಕ್ಷಾಃ ಸ್ತ್ರಿಯೋ ಮೃಗಯಾ ದಂಡಃ ಪಾರುಷ್ಯಮನ್ಯದೂಷಣಮಿತಿ ಸಪ್ತ ಮರ್ಯಾದಾಃ । ಯದ್ವಾ । ಸ್ತೇಯಂ ಗುರುತಲ್ಪಾರೋಹಣಂ ಬ್ರಹ್ಮಹತ್ಯಾಂ ಸುರಾಪಾನಂ ದುಷ್ಕೃತ-**

ಕರ್ಮಣಃ ಪುನಃಪುನಃಸೇವಾಂ ಪಾತಕೇಽನೃತೋದ್ಯಂ । ನಿ. ೬-೨೭ । ಇತಿ ನಿರುಕ್ತೇ ನಿರ್ದಿಷ್ಟಾಃ ಸಪ್ತ ಮರ್ಯಾದಾಃ । ಅವಸ್ಥಿತಾಸ್ತತಕ್ಷುಃ । ತಕ್ಷತಿಃ ಕರೋತಿಕರ್ಮಾ । ಸುಷ್ಠು ಲಂಘನೀಯಾಶ್ಚಕ್ರುಃ । ಕೃತವಂತ ಇತ್ಯರ್ಥಃ । ತಾಸಾಂ ಮರ್ಯಾದಾನಾಮೇಕಾಮಿದೇಕಾಮೇವಾಂಹುರಃ ಪಾಪವಾನ್ ಪುರುಷೋಽಭಿ ಗಾತ್ ಅಭಿಗಚ್ಛತಿ ಯಸ್ತ್ವೇವಂ ಕರೋತಿ ಸ ಪಾಪವಾನ್ಭವತೀತ್ಯರ್ಥಃ । ಕಿಂಚಾ-ಯೋಸ್ತಸ್ಯ ಮನುಷ್ಯಸ್ಯ ಸ್ಕಂಭಃ ಸ್ಕಂಭಯಿತಾ ನಿರೋಧಕೋಽಗ್ನಿರುಪಮಸ್ಯ ಸಮೀಪಭೂತಸ್ಯಾಯೋ-ರ್ನೀಳೇ ಸ್ಥಾನೇ ಪಥಾಮಾದಿತ್ಯರೂಪಸ್ಯ ಸ್ವಸ್ಯ ರಶ್ಮೀನಾಂ ವಿಸರ್ಗೇ ವಿಸರ್ಜನಸ್ಥಾನೇಽಂತರಿಕ್ಷಮಧ್ಯೇ ವರ್ತಮಾನೇಷು ಧರುಣೇಷೂದಕೇಷು ತಸ್ಥೌ । ವಿದ್ಯುದಾತ್ಮನಾ ತಿಷ್ಠತಿ । ಅನೇನ ಲೋಕತ್ರಯವರ್ತಿ-ತ್ವಮಿತಿ ॥

॥ ಪ್ರತಿಪದಾರ್ಥ ॥

ಕವಯಃ—ಮೇಧಾವಿಗಳಾದ ಋಷಿಗಳು । ಸಪ್ತ ಮರ್ಯಾದಾಃ—ಏಳುವಿಧವಾದ ನೀತಿನಿಯಮಗಳನ್ನು । ತತಕ್ಷುಃ—ನಿಯಮಿಸಿದ್ದಾರೆ (ಏಳುವಿಧವಾದ ಪಾಪಗಳನ್ನೂ ತೋರಿಸಿ ಅವನ್ನು ನಿರೋಧಿಸಿದ್ದಾರೆ) । ತಾಸಾಂ—ಅವುಗಳಲ್ಲಿ । ಏಕಾಂ ಇತ್—ಒಂದೊಂದನ್ನು ಮಾತ್ರ ಆಚರಿಸಿದರೂ । ಅಂಹುರಃ—ಪುರುಷನು ಪಾಪಿಷ್ಠನಾಗಿ । ಅಭಿ ಗಾತ್—ಆಗುತ್ತಾನೆ । ಆಯೋಃ—ಮಾನವನಿಗೆ । ಸ್ಕಂಭಃ—ಆ ಪಾಪನಿರೋಧಕನಾದ ಅಗ್ನಿಯು । ಉಪಮಸ್ಯ—ಸಮೀಪಸ್ಥವಾದ । ನೀಳೇ—ಸ್ಥಾನದಲ್ಲಿಯೂ । ಪಥಾಂ—ಆದಿತ್ಯನ ರಶ್ಮಿಗಳಿಗೆ । ವಿಸರ್ಗೇ—ಪ್ರಸಾರಸ್ಥಾನವಾದ ಅಂತರಿಕ್ಷದಲ್ಲಿಯೂ । ಧರುಣೇಷು—ಉದಕಗಳಲ್ಲಿಯೂ । ತಸ್ಥೌ—ಸ್ಥಿತನಾಗಿದ್ದಾನೆ ।

॥ ಭಾವಾರ್ಥ ॥

ಮೇಧಾವಿಗಳಾದ ಋಷಿಗಳು ಸುರಾಪಾನ, ದ್ಯೂತ ಇತ್ಯಾದಿ ಏಳುವಿಧವಾದ ಪಾಪಗಳನ್ನೂ ನಿರ್ದೇಶಿಸಿ ಅವನ್ನು ನಿರೋಧಿಸುವ ನೀತಿಗಳನ್ನು ನಿಯಮಿಸಿದ್ದಾರೆ. ಅವುಗಳಲ್ಲಿ ಒಂದೊಂದನ್ನೇ ಮಾತ್ರ ಆಚರಿಸಿದರೂ ಮಾನವನು ಪಾಪಿಷ್ಠನಾಗಿ ಆಗುತ್ತಾನೆ. ಮಾನವನಿಗೆ ಆ ಪಾಪನಿರೋಧಕನಾದ ಅಗ್ನಿಯು ಸಮೀಪಸ್ಥವಾದ ಸ್ಥಾನದಲ್ಲಿಯೂ ಆದಿತ್ಯನ ರಶ್ಮಿಗಳಿಗೆ ಪ್ರಸಾರಸ್ಥಾನವಾದ ಅಂತರಿಕ್ಷದಲ್ಲಿಯೂ ಸ್ಥಿತನಾಗಿದ್ದಾನೆ.

## English Translation

The wise have established seven rules of conduct ; he is a sinner who deviates from any one of them Agni is the obstructor of (that) man, he abides in the dwelling of his neighbour, in the region of the scattering of the rays, and in the recipient (waters).

॥ ವಿಶೇಷವಿಷಯಗಳು ॥

**ಸಪ್ತಮರ್ಯಾದಾಃ**—ಈ ಮಂತ್ರದಲ್ಲಿ ಮಾನವನು ಆಚರಿಸಬಹುದಾದ ಪಾಪದ ಸ್ವರೂಪವನ್ನೂ ಅದರ ಪ್ರಭೇದಗಳನ್ನೂ ತಿಳಿಸಿ ಇಂತಹ ಪಾಪವನ್ನು ತಡೆಗಟ್ಟುವ ಅಗ್ನಿಯ ಪ್ರಶಂಸೆಯಿರುತ್ತದೆ. ಆಧ್ಯಾತ್ಮಿಕತತ್ತ್ವಕ್ಕೂ ನೀತಿಯುತವಾದ ಮಾನವನ ಜೀವನಕ್ಕೂ ಸಂಬಂಧವನ್ನು ಸೂಚಿಸಿದೆ. ಸದಸದಾತ್ಮಕವಾದ ಸಕಲವಿಶ್ವಕ್ಕೂ ಮೂಲಭೂತನಾದ ಅಗ್ನಿಯು ಸೃಷ್ಟಿಗಿಂತಲೂ ಪೂರ್ವಭಾವಿಯೆಂದು ವರ್ಣಿಸಿ ಆ ಮೂಲತತ್ತ್ವದಿಂದಲೇ ಜಗತ್ತಿನ

ಸೃಷ್ಟಿಯೆಂದೂ, ಜಗತ್ತಿನ ವೈವಿಧ್ಯವೆಲ್ಲ ಆ ತತ್ತ್ವದ ಆವಿರ್ಭಾವವೇ ಎಂದೂ ವರ್ಣಿಸಿವೆ. ಈ ಮೂಲತತ್ತ್ವವು ಅಗ್ನಿರೂಪದಲ್ಲಿದ್ದು ಮಾನವನನ್ನು ಪಾಪವನ್ನಾಚರಿಸದಿರುವಂತೆ ತಡೆಯುತ್ತದೆಯೆಂದು ಅಗ್ನಿಯ ಪಾಪನಿರೋಧಕತ್ವ ವನ್ನು ಪ್ರಕೃತವಾದ ಮಂತ್ರದಲ್ಲಿ ಪ್ರಶಂಸಿಸಿದೆ.

**ಸಪ್ತ ಮರ್ಯಾದಾಃ** ಎಂಬುದರಿಂದ ಪಾಪದ ಪ್ರಭೇದಗಳನ್ನು ತಿಳಿಸಿದೆ. **ಮರ್ಯಾದಾಃ** ಎಂದರೆ ಪಾಪವೆಂದ ರ್ಥಮಾಡಿದೆ. ಸಾಧಾರಣವಾಗಿ, **ಮರ್ಯಾದಾ** ಎಂಬ ಪದಕ್ಕೆ ಸೀಮಾ ಎಲ್ಲೆ (Boundary) ಎಂದು ಲೌಕಿಕವಾದ ಪ್ರಯೋಗದಲ್ಲಿ ತಾತ್ಪರ್ಯವಿರುತ್ತದೆ. ನೀತಿಯನಿಯಮ ಅಥವಾ ಎಲ್ಲೆ ಎಂದರ್ಥವಾಗುತ್ತದೆ. ಪ್ರಕೃತದಲ್ಲಿ ಪಾಪವೆಂ ದರ್ಥಮಾಡಿದರೆ **ಮರ್ತ್ಯ+ಅದ**—ಮಾನವನನ್ನು ತಿನ್ನತಕ್ಕದ್ದು ಎಂದು ತಾತ್ಪರ್ಯವಾಗುತ್ತದೆ.

ಈ ಪಾಪವು ಏಳುವಿಧವೆಂದು ತಿಳಿಸಿದೆ. ಅವು ಯಾವುವೆಂದರೆ :—

೧) **ಪಾನಂ**—ಮದ್ಯಾದಿ ನಿಷಿದ್ಧವಸ್ತುಗಳ ಪಾನವು.

೨) **ಅಕ್ಷಾಃ**—ಪಗಡೆ ಮುಂತಾದ ದ್ಯೂತಕೃತ್ಯ, ತದಂಗವಾದ ಮೋಸ.

೩) **ಸ್ತ್ರಿಯಃ**—ಸ್ತ್ರೀ ವ್ಯಸನ, ತತ್ಪರಿಣಾಮಗಳು.

೪) **ಮೃಗಯಾ**—ಕಾಡಿನ ಜಂತುಗಳನ್ನು ಬೇಟೆಯಾಡಿ ಹಿಂಸಿಸುವುದು.

೫) **ದಂಡಃ**—ಅನ್ಯಾಯವಾಗಿ ಇತರರನ್ನು ಶಿಕ್ಷಿಸುವುದು (ರಾಜದಂಡವಲ್ಲ).

೬) **ಪಾರುಷ್ಯಂ**—ಇತರರ ಮನಃಕ್ಲೇಶವಾಗುವಂತೆ ಕ್ರೂರಭಾಷಣ ಮತ್ತು ವ್ಯವಹಾರ.

೭) **ಅನ್ಯದೂಷಣಂ**—ಇತರರನ್ನು ಅನ್ಯಾಯವಾಗಿ ದೂಷಿಸುವುದು.

ಸಪ್ತಮರ್ಯಾದೆಗಳೆಂದು ಕರೆಯಲ್ಪಟ್ಟಿವೆ. ಈ ಸಂಖ್ಯೆಗಳನ್ನು ವಿವರಿಸುತ್ತಾ ಸಾಯಣರು ಈ ಸಂದರ್ಭದಲ್ಲಿ ಉಕ್ತವಾಗಿರುವ ನಿರುಕ್ತಕಾರರ ವಾಕ್ಯವನ್ನೂ ಉದಹರಿಸಿದ್ದಾರೆ. ಅಲ್ಲಿರುವ ಪರಿಸಂಖ್ಯಾನವು ಕೊಂಚ ವ್ಯತ್ಯಾಸ ವಾಗಿದೆ. ನಿರುಕ್ತವಾಕ್ಯದ ಪ್ರಕಾರ ಪಾಪಪ್ರಭೇದಗಳು ಈ ರೀತಿಯಲ್ಲಿರುತ್ತವೆ—

**ಸಪ್ತೈವ ಮರ್ಯಾದಾಃ ಕವಯಶ್ಚಕ್ರುಸ್ತಾಸಾಮೇಕಾಮಪ್ಯಭಿಗಚ್ಛನ್ನಂಹಸ್ವಾನ್ ಭವತಿ । ಸ್ತೇಯಂತಲ್ಪಾ ರೋಹಣಂ ಬ್ರಹ್ಮಹತ್ಯಾಂ ಭ್ರೂಣಹತ್ಯಾಂ ಸುರಾಪಾನಂ ದುಷ್ಕೃತಸ್ಯ ಕರ್ಮಣಃ ಪುನಃಪುನಃಸೇವಾಂ ಪಾತಕೇऽನೃತೋದ್ಯಮಿತಿ ॥**

(ನಿ. ೬-೨೭.)

೧) **ಸ್ತೇನಂ**—ಕಳ್ಳತನವನ್ನು ಮಾಡುವುದು.

೨) **ತಲ್ಪಾರೋಹಣಂ**—ಗುರುಪತ್ನಿಯನ್ನು ಮೋಹಿಸಿ ಅತಿಕ್ರಮ ಪ್ರವೇಶಮಾಡುವುದು.

೩) **ಬ್ರಹ್ಮಹತ್ಯಾ**—ಬ್ರಾಹ್ಮಣನನ್ನು ಕೊಲ್ಲುವುದು.

೪) **ಭ್ರೂಣಹತ್ಯಾ**—ಗರ್ಭಪಿಂಡವನ್ನು ನಾಶಮಾಡುವುದು.

೫) **ಸುರಾಪಾನಂ**—ಮದ್ಯಾದಿ ನಿಷಿದ್ಧವಸ್ತುಗಳನ್ನು ಸೇವಿಸುವುದು.

೬) **ದುಷ್ಕೃತಸ್ಯ ಕರ್ಮಣಃ ಪುನಃಪುನಃಸೇವಾ**—ಕೆಟ್ಟಕೆಲಸವನ್ನು ಆಶ್ರಯಿಸಿ ಅದನ್ನು ಪದೇ ಪದೇ ಮಾಡುತ್ತಿರುವುದು.

೭) **ಅನೃತೋದ್ಯಂ**—ಪಾಪಕರ್ಮವನ್ನು ಸಮರ್ಥಿಸಲು ಸುಳ್ಳನ್ನು ಹೇಳುವುದು.

ಈ ಏಳೂ ಮರ್ಯಾದೆಗಳೆಂದು ಕರೆಯಲ್ಪಟ್ಟಿವೆಯೆಂದು ನಿರುಕ್ತಕಾರರ ಮತ. ಇವುಗಳಲ್ಲಿ ಒಂದೊಂದು ಪಾಪವನ್ನು ಮಾತ್ರ ಮಾಡಿದರೂ ಅವನು ಮಹಾ ಪಾತಕಿಯೆನಿಸುವನು.

ಛಾಂದೊಗ್ಯಾದಿಗಳಲ್ಲಿ ಪಾತಕವು ಐದುವಿಧವೆಂದು ನಿರ್ದೇಶಿಸಿದೆ. ಅವು ಯಾವುವೆಂದರೆ,

**ಸ್ತೇನೋ ಹಿರಣ್ಯಸ್ಯ ಸುರಾಂ ಪಿಬಂಶ್ಚ ಗುರೋಸ್ತಲ್ಪಮಾವಸನ್ ಬ್ರಹ್ಮಹಾ (ಚೈತೇ ಪತಂತಿ ಚತ್ವಾರಃ) ಪಂಚಮಶ್ಚಾಚರಂಸ್ತೈಃ ಇತಿ ।**

(ಛಾ. ಉ. ೫-೧೦-೯)

೧) ಚಿನ್ನವನ್ನು ಕದಿಯುವುದು, ೨) ಸುರಾಪಾನ ೩) ಗರುಪತ್ನಿಯೊಡನೆ ಅತಿಕ್ರಮಪ್ರವೇಶ ೪) ಬ್ರಹ್ಮಹತ್ಯೆ ಈ ನಾಲ್ಕು ಕರ್ಮವನ್ನು ಮಾಡುವವರು ಪತಿತರು. ಐದನೆಯದಾಗಿ, ೫) ಈ ನಾಲ್ಕು ಕರ್ಮಗಳನ್ನು ಮಾಡುವ ಪತಿತರೊಡನೆ ಸರ್ವದಾ ಸಂಪರ್ಕವನ್ನಿಟ್ಟುಕೊಂಡಿರುವುದು. ಈ ಐವರೂ ಪಾತಕಿಗಳು ಎಂದು ತಿಳಿಸಿದೆ. ಸಾಧಾರಣವಾಗಿ ಈ ಐದುವಿಧಗಳೇ ಧರ್ಮಶಾಸ್ತ್ರಾದಿಗಳಲ್ಲಿಯೂ ಪ್ರಸಿದ್ಧವಾಗಿವೆ. ಧರ್ಮಶಾಸ್ತ್ರಾದಿಗಳಲ್ಲಿ ಈ ಪರಿಸಂಖ್ಯಾನಕ್ರಮಗಳನ್ನು ತಿಳಿಸುವುದು ಪ್ರಕೃತದಲ್ಲಿ ಅನುಚಿತವಾಗಲಾರದು.

ಮಹಾ ಪಾತಕಗಳು ಸಪ್ತವಿಧಗಳೆಂದು ಕೆಲವೆಡೆಗಳಲ್ಲಿಯೂ ಐದುವಿಧಗಳೆಂದು ಇನ್ನು ಕೆಲವೆಡೆಗಳಲ್ಲಿಯೂ ಪರಿಗಣಿತವಾಗಿವೆ. ಅವುಗಳಲ್ಲಿ **ಕಾಮಜ, ಕ್ರೋಧಜ** ಎಂದು ಎರಡು ಪ್ರಭೇದಗಳಿವೆಯೆಂದು ಸಾಯಣರ ವಾಕ್ಯವು ಸೂಚಿಸುತ್ತದೆ. ಧರ್ಮಶಾಸ್ತ್ರಾದಿಗಳಲ್ಲಿಯೂ ಸಹ ಈ ಎರಡು ವಿಧಗಳು ಸ್ಪಷ್ಟವಾಗಿ ತಿಳಿಸಲ್ಪಟ್ಟಿವೆ. ಅವುಗಳಲ್ಲಿ ಕಾಮಜವಾವುದು, ಕ್ರೋಧಜವಾವುದು ಎಂಬುದರ ವಿಷಯವನ್ನು ಪರಿಶೀಲಿಸುತ್ತಾ ಯಾಜ್ಞವಲ್ಕ್ಯಸ್ಮೃತಿಯಲ್ಲಿ ಈ ರೀತಿ ತಿಳಿಸಿದೆ.

ಮೇಲೆ ಹೇಳಿದಂತೆ ನಿರುಕ್ತದಲ್ಲಿಯೂ, ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿಯೂ ಮುಖ್ಯವಾದ ಪಾಪಕೃತ್ಯಗಳು ಏಳು ಎಂದು ಹೇಳಿದ್ದರೂ, ಪಾಪಗಳಲ್ಲಿ ಅನೇಕವಿಧವಿರುವುದನ್ನೂ ಪಾಪಮಾಡಿದವನು ಪವಮಾನಸೋಮದೇವತೆಯನ್ನು ಸ್ತುತಿಸುವ ೬೧೦ ಋಕ್ಕುಗಳನ್ನು ಎಂದರೆ ಋಗ್ವೇದ ಸಂಹಿತೆಯ ೯ ನೆಯ ಮಂಡಲದ ಪ್ರಾರಂಭದಲ್ಲಿರುವ ಗಾಯತ್ರೀ ಛಂದಸ್ಸಿನ ೬೧೦ ಋಕ್ಕುಗಳನ್ನೊಳಗೊಂಡಿರುವ ೧-೬೭ ಸೂಕ್ತಗಳನ್ನು ಗುರುಮುಖದಿಂದ ನಿಯಮವಾಗಿ ಅಧ್ಯಯನಮಾಡಿದಲ್ಲಿ ಅಂತಹ ಪುರುಷನ ನಾನಾವಿಧ ಪಾಪಗಳನ್ನು ಪರಿಹಾರಮಾಡಿ ಪರಿಶುದ್ಧನನ್ನಾಗಿ ಮಾಡುತ್ತೇನೆಂದು ವೇದಪುರುಷನೇ ಪರಿಶಿಷ್ಟಮಂತ್ರಗಳಲ್ಲಿ ಹೇಳಿದಾನೆ. ಅವುಗಳನ್ನು ಇಲ್ಲಿ ವಿವರಿಸಲಾಗಿದೆ.

**ಋಷಯಸ್ತು ತಪಸ್ತೇಪುಃ ಸರ್ವೇ ಸ್ವರ್ಗಜಿಗೀಷವಃ ।**
**ತಪಂತಸ್ತಪಸೋಗ್ರೇಣ ಪಾವಮಾನೀರ್ಋಚೋಽಬ್ರುವನ್**

(ಪರಿಶಿಷ್ಟ. ೧೮-೬)

ಪೂರ್ವದಲ್ಲಿ ಸ್ವರ್ಗವನ್ನು ಪಡೆಯಬೇಕೆಂಬ ಇಚ್ಛೆಯಿಂದ ಸಮಸ್ತ ಋಷಿಗಳೂ ಉಗ್ರವಾದ ತಪಸ್ಸನ್ನು ಮಾಡಿ ಈ ಪಾವಮಾನೀಋಕ್ಕುಗಳನ್ನು ಅಧ್ಯಯನಮಾಡಿ ಅವುಗಳ ಪಾಪಪರಿಹಾರಕವಾದ ಪ್ರಶಂಸೆಯನ್ನು ಈ ರೀತಿ ಮಾಡಿರುವರು.

**ಯನ್ಮೇ ಗರ್ಭೇ ವಸತಃ ಪಾಪಮುಗ್ರಂ ಯಜ್ಜಾಯಮಾನಸ್ಯ ಚ ಕಿಂಚಿದನ್ಯತ್ ।**
**ಜಾತಸ್ಯ ಚ ಯಚ್ಚಾಪಿ ಚ ವರ್ಧತೋ ಮೇ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೭)

ಸರ್ವೇಶ್ವರನಾದ ವೇದಪುರುಷನು ಈ ರೀತಿ ಹೇಳುವನು—ಯಾವ ಪುರುಷನು ಗರ್ಭವಾಸದಲ್ಲಿರುವಾಗಲೂ, ಅನಂತರ ಹುಟ್ಟುವಾಗಲೂ, ಹುಟ್ಟಿದ ಮೇಲೆಯೂ ಬೆಳೆಯುತ್ತಿರುವಾಗಲೂ ಅತ್ಯುಗ್ರವಾದ ಪಾಪವನ್ನು ಮಾಡಿದ್ದರೂ ಅವನು ಪಾವಮಾನೀಮಂತ್ರಗಳನ್ನು ಅಧ್ಯಯನ ಮಾಡಿದಲ್ಲಿ ಅಂತಹ ಪಾಪಗಳೆಲ್ಲಾ ನಾಶಮಾಡಿ ಅವನನ್ನು ಪರಿಶುದ್ಧನನ್ನಾಗಿ ಮಾಡುತ್ತೇನೆ.

**ಮಾತಾಪಿತ್ರೋರ್ಯನ್ನ ಕೃತಂ ವಚೋ ಮೇ ಯತ್ಸ್ಥಾವರಂ ಜಂಗಮಮಾಬಭೂವ ।**
**ವಿಶ್ವಸ್ಯ ತತ್ಪ್ರಹೃಷಿತಂ ವಚೋ ಮೇ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೮)

ತಂದೆತಾಯಿಗಳ ಮಾತನ್ನು ಮೀರಿದ ಪಾಪವನ್ನು ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚದ ಯಾವ ಪ್ರಾಣಿಗೇ ಆಗಲಿ ಅಹಿತವನ್ನು ಬಯಸಿ ಆಡುವ ಮಾತಿನಿಂದ ಯಾವ ಪಾಪವು ಉಂಟಾಗುವುದೋ ಅಂತಹ ಪಾಪವನ್ನು ಪರಿಹರಿಸಿ ಪರಿಶುದ್ಧನನ್ನಾಗಿ ಮಾಡುತ್ತೇನೆ.

**ಗೋಘ್ನಾತ್ ತಸ್ಕರತ್ವಾತ್ ಸ್ತ್ರೀವಧಾದ್ಯಚ್ಚ ಕಿಲ್ಬಿಷಂ ।**
**ಪಾಪಕಂ ಚ ಚರಣೇಭ್ಯಸ್ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೯)

ಗೋಹತ್ಯ, ಕಳ್ಳತನ, ಸ್ತ್ರೀಹತ್ಯ, ಕಾಲುಗಳಿಂದ ಪ್ರಾಣಿಗಳನ್ನು ತುಳಿದು ಹಿಂಸಿಸುವ ಕೃತ್ಯ ಇವುಗಳಿಂದ ಉಂಟಾಗಬಹುದಾದ ಪಾಪವನ್ನು ಪರಿಹರಿಸಿ ಶುದ್ಧನನ್ನಾಗಿ ಮಾಡುತ್ತೇನೆ.

**ಬ್ರಹ್ಮವಧಾತ್ಸುರಾಪಾನಾತ್ಸ್ವರ್ಣಸ್ತೇಯಾದ್ವೃಷಲಿಗಮನಮೈಥುನಸಂಗಮಾತ್ ।**
**ಗುರೋರ್ದಾರಾಧಿಗಮನಾಚ್ಚ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೧೦)

ಬ್ರಹ್ಮಹತ್ಯ, ಮದ್ಯಪಾನ, ಚಿನ್ನವನ್ನು ಕದಿಯುವುದು, ತಂಗಿಗೆ ಮದುವೆಯಾಗಿದ್ದರೂ ತನಗೆ ಮದುವೆಯಾಗದಿರುವ ವೃಷಲಿ ಎಂಬ ಸ್ತ್ರೀಯನ್ನು ಸಂಗಮಾಡಿದ ಪಾಪ, ಗುರುವಿನ ಪತ್ನಿಯಲ್ಲಿ ಸಂಭೋಗಮಾಡಿದ ಪಾಪ ಇವುಗಳನ್ನೆಲ್ಲಾ ಪರಿಹರಿಸಿ ಶುದ್ಧನನ್ನಾಗಿಮಾಡುತ್ತೇನೆ.

**ಬಾಲಘ್ನಾನ್ಮಾತೃಪಿತೃವಧಾದ್ಭೂಮಿತಸ್ಕರಾತ್ಸರ್ವವರ್ಣಗಮನಸನ್ಮೈಥುನಸಂಗಮಾತ್ ।**
**ಪಾಪೇಭ್ಯಶ್ಚ ಪ್ರತಿಗ್ರಹಾತ್ಸದ್ಯಃ ಪ್ರಹರತಿ ಸರ್ವದುಷ್ಕೃತಂ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೧೧)

ಮಕ್ಕಳನ್ನು ಕೊಲ್ಲುವುದು, ತಂದೆತಾಯಿಗಳನ್ನು ಕೊಲ್ಲುವುದು, ಹೊಲಗದ್ದೆ ಮೊದಲಾದ ಭೂಮಿಯನ್ನು ಮೋಸದಿಂದ ಅಪಹರಿಸುವುದು, ಎಲ್ಲಾ ನೀಚಜಾತಿಯ ಸ್ತ್ರೀಯರೊಂದಿಗೆ ಸಂಗಮಾಡುವುದು, ದುರ್ದಾನವನ್ನು ಸ್ವೀಕರಿಸುವುದು, ಇತರ ಕೆಟ್ಟಕೆಲಸಗಳನ್ನು ಮಾಡುವುದು ಇವುಗಳಿಂದ ಯಾವಯಾವ ಪಾಪಗಳು ಸಂಭವಿಸುವವೋ ಆ ಪಾಪಗಳನ್ನೆಲ್ಲಾ ಪರಿಹರಿಸಿ ಪರಿಶುದ್ಧನನ್ನಾಗಿ ಮಾಡುತ್ತೇನೆ

**ಕ್ರಯವಿಕ್ರಯಾದ್ಯೋನಿದೋಷಾದ್ಭಕ್ಷಾದ್ಭೋಜ್ಯಾತ್ಪ್ರತಿಗ್ರಹಾತ್ ।**
**ಅಸಂಭೋಜನಾಚ್ಚಾಪಿ ನೃಶಂಸಂ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ ೧೮-೧೨)

ಅನ್ಯಾಯರೀತಿಯಿಂದ ಎಂದರೆ ಮೋಸದಿಂದ ಕೊಳ್ಳುವುದು, ಮಾರುವುದು, ಸಿಕ್ಕಿದ ಸ್ತ್ರೀಯರ ಸಂಗಮಾಡುವುದು, ತಿನ್ನಬಾರದ ಪದಾರ್ಥಗಳನ್ನು ತಿನ್ನುವುದು, ಸ್ವೀಕಾರಾರ್ಹವಲ್ಲದ ವಸ್ತುಗಳನ್ನು ಸ್ವೀಕರಿಸುವುದು, ಮನೆಗೆ ಬಂದ ಅತಿಥಿಯನ್ನು ಬಿಟ್ಟು ಭೋಜನಮಾಡುವುದು ಇವುಗಳಿಂದ ಸಂಭವಿಸುವ ಪಾಪಗಳನ್ನು ಪರಿಹರಿಸುತ್ತೇನೆ.

**ದುರ್ಯಷ್ಟಂ ದುರಧೀತಂ ಪಾಪಂ ಯಚ್ಚಾಜ್ಞಾನತೋ ಕೃತಂ ।**
**ಅಯಾಜಿತಾಶ್ಚಾಸಂಯಾಜ್ಯಾಸ್ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೧೩)

ವಿಧ್ಯುಕ್ತರೀತಿಯನ್ನು ಬಿಟ್ಟು ಬೇರೆವಿಧವಾಗಿ ಯಜ್ಞಮಾಡುವುದು, ನಿಯಮರಹಿತವಾಗಿ ವೇದಾಧ್ಯಯನಮಾಡುವುದು ಅಜ್ಞಾನದಿಂದ ಮಾಡಿದ ಪಾಪ, ಯಜ್ಞವನ್ನು ಮಾಡಲು ಅರ್ಹರಲ್ಲದವರಿಗೆ ಯಜ್ಞಮಾಡಿಸುವುದು, ಯಜ್ಞಾರ್ಹರಿಗೆ ಮಾಡಿಸದಿರುವುದು ಈ ವಿಧವಾದ ದುಷ್ಕೃತ್ಯಗಳಿಂದ ಸಂಭವಿಸುವ ಪಾಪಗಳನ್ನು ಪರಿಹರಿಸಿ ಶುದ್ಧನನ್ನಾಗಿ ಮಾಡುತ್ತೇನೆ

**ಅಮಂತ್ರಮನ್ನಂ ಯತ್ಕಿಂಚಿದ್ಧೂಯತೇ ಚ ಹುತಾಶನೇ ।**
**ಸಂವತ್ಸರಕೃತಂ ಪಾಪಂ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೧೪)

ವಿಧ್ಯುಕ್ತಮಂತ್ರಪಠನವಿಲ್ಲದೆ ಅಥವಾ ತಪ್ಪುತಪ್ಪಾಗಿ ಮಂತ್ರವನ್ನು ಪಠಿಸುತ್ತಾ ಅಗ್ನಿಯಲ್ಲಿ ಹವಿಸ್ಸನ್ನು ಹೋಮ ಮಾಡುವುದರಿಂದ ಸಂಭವಿಸುವ ಪಾಪವನ್ನೂ, ಸಂವತ್ಸರದಲ್ಲಿ ಯಾವಯಾವ ಪಾಪಗಳನ್ನು ಮಾಡಿದ್ದರೂ ಅವೆಲ್ಲವನ್ನೂ ಪರಿಹಾರಮಾಡಿ ಅವನನ್ನು ಪರಿಶುದ್ಧನನ್ನಾಗಿ ಮಾಡುತ್ತೇನೆ.

**ಋತಸ್ಯ ಯೋನಯೋಽಮೃತಸ್ಯ ಧಾಮ ವಿಶ್ವಾ ದೇವೇಭ್ಯಃ ಪುಣ್ಯಗಂಧಾಃ ।**
**ತಾ ನ ಆಪಃ ಪ್ರ ವಹಂತು ಪಾಪಂ ಶುದ್ಧಾ ಗಚ್ಛಾಮಿ ಸುಕೃತಾಮು ಲೋಕಂ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೧೫)

ಸತ್ಯ ಅಥವಾ ಯಜ್ಞಕ್ಕೆ ಮುಖ್ಯ ಆಧಾರಭೂತವೂ, ಶಾಶ್ವತವಾದ ಸ್ವರ್ಗದಲ್ಲಿ ನೆಲೆಸಿರುವವೂ, ದೇವತೆಗಳಿಗೆ ಪ್ರಿಯವನ್ನುಂಟುಮಾಡುವವೂ ಆದ ಸ್ವರ್ಗೀಯೋದಕಗಳು ಮೇಲೆ ಹೇಳಿದ ಪಾಪಗಳನ್ನು ಕೊಚ್ಚಿಕೊಂಡು ಹೋಗಲಿ. ಆ ಪುರುಷನನ್ನು ಶುದ್ಧನನ್ನಾಗಿ ಮಾಡಿ ಉತ್ತಮ ಲೋಕವನ್ನು ಪಡೆಯುವಂತೆ ಮಾಡುವೆನು.

ಮೇಲೆ ಹೇಳಿದ ಮಂತ್ರಗಳಲ್ಲಿ ನಾನಾವಿಧ ಪಾಪಗಳ ವರ್ಣನೆ ಇದೆ. ಪಾಪಗಳ ಸಂಖ್ಯೆಯು ಇಲ್ಲಿಗೆ ಮುಗಿಯಿತೆಂದು ಯಾರೂ ಭಾವಿಸಬಾರದು. ಇನ್ನೂ ಎಷ್ಟೋ ವಿಧವಾದ ಪಾಪಗಳಿರುವವು. ಅವುಗಳನ್ನೆಲ್ಲಾ ಇಲ್ಲಿ ವಿವರಿಸುವುದು ಸಾಧ್ಯವಿಲ್ಲ ಮತ್ತು ಆರೀತಿ ವಿವರಿಸುವುದು ಅಪ್ರಕೃತ. ಮುಖ್ಯವಾಗಿ ಎಲ್ಲಾವಿಧ ಪಾಪಗಳೂ ಮೇಲೆ ಹೇಳಿದ ಏಳು ವಿಧ ಪಾಪಗಳಲ್ಲಿಯೇ ಅಡಗಿರುವವು ಎಂದು ಭಾವಿಸಬೇಕು.

। ಸಂಹಿತಾಪಾಠಃ ।

ಅಸಚ್ಚ ಸಚ್ಚ ಪರಮೇ ವ್ಯೋಮನ್ದಕ್ಷಸ್ಯ ಜನ್ಮನ್ನದಿತೇರುಪಸ್ಥೇ ॥
ಅಗ್ನಿರ್ಹ ನಃ ಪ್ರಥಮಜಾ ಋತಸ್ಯ ಪೂರ್ವ ಆಯುನಿ ವೃಷಭಶ್ಚ ಧೇನುಃ ॥

॥ ಪದಪಾಠಃ ॥

ಅಸತ್ । ಚ । ಸತ್ । ಚ । ಪರಮೇ । ವಿಽಓಮನ್ । ದಕ್ಷಸ್ಯ । ಜನ್ಮನ್ । ಅದಿತೇಃ । ಉಪಽಸ್ಥೇ ।
ಅಗ್ನಿಃ । ಹ । ನಃ । ಪ್ರಥಮಽಜಾಃ । ಋತಸ್ಯ । ಪೂರ್ವೇ । ಆಯುನಿ । ವೃಷಭಃ । ಚ । ಧೇನುಃ ॥ ೭ ॥

॥ ಸಾಯಣಭಾಷ್ಯಂ ॥

ಅಸದವ್ಯಾಕೃತಂ ಸಚ್ಚ ವ್ಯಾಕೃತಂ । ಅಸದೇವೇದಮಗ್ರ ಆಸೀತ್ ತತ್ಸದಾಸೀತ್ ತತ್ಸಮಭವತ್ । ಛಾಂ. ಉ. ೩-೧೯-೧ ಇತಿ ಶ್ರುತೇಃ । ಸದಸದಾತ್ಮಕಂ ಜಗತ್ಸರ್ವಂ ಪರಮ ಉತ್ತಮೇ ಜ್ಞಾನಸಹಿತೇ ವ್ಯೋಮನ್ವ್ಯೋಮನಿ ಕಾರಣಾತ್ಮನಿ ಜಾತಮಭೂತ್ಸದಾ । ಅದಿತೇಃ ಪೃಥಿವ್ಯಾ ಉಪಸ್ಥ ಉಪಸ್ಥಾನೇ ಸಮೀಪೇ ದಕ್ಷಸ್ಯ ಪ್ರಜಾಪತೇಃ । ಯದ್ವಾ । ದಕ್ಷಸ್ಯ । ಸ ತ್ರೇಧಾತ್ಮಾನಂ ವ್ಯಭಜತಾದಿತ್ಯಂ ತೃತೀಯಂ ವಾಯುಂ ತೃತೀಯಮಿತಿ ಶ್ರುತೇಃ । ಶತ. ೧೦-೬-೫-೩ । ತೃತೀಯಸ್ಯ ದ್ಯುಲೋಕಸ್ಯಾಧಿಷ್ಠಾತೃತ್ವಾದಾದಿತ್ಯಸ್ಯ । ಜನ್ಮಞ್ಜನ್ಮನಿ । ತತ ಏವಂ ಸತಿ ಮನುಷ್ಯಸ್ಯ ಸೃಷ್ಟಿಕ್ರಮಾತ್ಪೂರ್ವಮಗ್ನಿರ್ಹಾಗ್ನಿರೇವರ್ತಸ್ಯ ಕರ್ಮಫಲಸ್ಯ ಭೋಕ್ತೄಣಾಂ ನೋಽಸ್ಮಾಕಂ ಪ್ರಥಮಜಾಃ ಪ್ರಥಮಜಾತಃ ಸಮುತ್ಪನ್ನಃ । ತೇಜೋ ರಸೋ ನಿರವರ್ತತಾಗ್ನಿಃ । ಶತ. ೧೦-೬-೫-೨ । ಬೃ. ಉ. ೧-೧-೨-೨ । ಇತಿ ಶ್ರವಣಾತ್ । ಪಶ್ಚಾತ್ತತ್ಪ್ರಕರಣೇ ತತೋ ಮನುಷ್ಯಾ ಅಜಾಯಂತೇತಿ ಪ್ರಥಮತ ಏವ ಮನುಷ್ಯಸೃಷ್ಟೇರಭಿಹಿತತ್ವಾತ್ ಅನಂತರಂ ಪೂರ್ವೇ । ಉತ್ತರ ಸೃಷ್ಟಿಮಪೇಕ್ಷ್ಯ ಪೂರ್ವತ್ವಂ । ಆಯುನಿ ಕಾಲೇಽಯಮಗ್ನಿರೇವ ವೃಷಭಶ್ಚಾಸೀತ್ ಧೇನುಶ್ಚಾಭವತ್ । ಸ್ತ್ರೀಪುಂಸವತ್ ಸ್ತ್ರೀಪುಂಸಾತ್ಮಕೋಽಭವದಿತ್ಯರ್ಥಃ ।

॥ ಪ್ರತಿಪದಾರ್ಥ ॥

**ಅಸತ್**—ಅವ್ಯಾಕೃತವಾದ ರೂಪವುಳ್ಳವನೂ । **ಸಚ್ಚ**—ವ್ಯಾಕೃತವಾದ ರೂಪವುಳ್ಳವನೂ ಆದ ಅಗ್ನಿಯು । **ಪರಮೇ**—ಅತ್ಯುತ್ತಮವಾದ । **ವ್ಯೋಮನ್**—ಅಂತರಿಕ್ಷದಲ್ಲಿಯೂ । **ಅದಿತೇಃ**—ಪೃಥ್ವಿಯ । **ಉಪಸ್ಥೇ**—ಮಧ್ಯಭಾಗದಲ್ಲಿಯೂ । **ದಕ್ಷಸ್ಯ**—ಪ್ರಜಾಪತಿಯ । **ಜನ್ಮನ್**—ಉತ್ಪತ್ತಿಸ್ಥಾನವಾದ ದ್ಯುಲೋಕದಲ್ಲಿಯೂ (ಅಸ್ತಿತ್ವವನ್ನು ಹೊಂದಿದ್ದಾನೆ) । **ಅಗ್ನಿರ್ಹ**—ಅಗ್ನಿಯೇ । **ಋತಸ್ಯ**—ಕರ್ಮಕಾರಕರಾದ । **ನಃ**—ನಮಗಿಂತಲೂ । **ಪ್ರಥಮಜಾಃ**—ಮೊದಲು ಉತ್ಪನ್ನನಾಗಿದ್ದಾನೆ । **ಪೂರ್ವೇ**—ಜಗತ್ತಿನ ಸೃಷ್ಟಿಗಿಂತಲೂ ಮೊದಲು ಇದ್ದ । **ಆಯುನಿ**—ಕಾಲದಲ್ಲಿ । **ವೃಷಭಶ್ಚ**—ಅಗ್ನಿಯೇ ವೃಷಭನಾಗಿಯೂ । **ಧೇನುಃ ಚ**—ಧೇನುವಾಗಿಯೂ ಇದ್ದನು.

॥ ಭಾವಾರ್ಥ ॥

ಅವ್ಯಾಕೃತವಾದ ರೂಪವುಳ್ಳವನೂ, ವ್ಯಾಕೃತವಾದ ರೂಪವುಳ್ಳವನೂ ಆದ ಅಗ್ನಿಯು ಅತ್ಯುತ್ತಮವಾದ ಅಂತರಿಕ್ಷದಲ್ಲಿಯೂ, ಪೃಥ್ವಿಯ ಮಧ್ಯಭಾಗದಲ್ಲಿಯೂ, ಪ್ರಜಾಪತಿಯ ಉತ್ಪತ್ತಿಸ್ಥಾನವಾದ ದ್ಯುಲೋಕದಲ್ಲಿಯೂ ಅಸ್ತಿತ್ವವನ್ನು ಹೊಂದಿದ್ದಾನೆ. ಕರ್ಮಕಾರಕರಾದ ನಮಗಿಂತಲೂ ಅಗ್ನಿಯೇ ಮೊದಲು ಉತ್ಪನ್ನನಾಗಿದ್ದಾನೆ. ಜಗತ್ತಿನ ಸೃಷ್ಟಿಗಿಂತಲೂ ಪೂರ್ವದಲ್ಲಿ ಅಗ್ನಿಯೇ ಪುಂರೂಪನಾಗಿಯೂ ಸ್ತ್ರೀರೂಪನಾಗಿಯೂ ಇದ್ದನು.

## English Translation

Non-existent, and existent (is Agni) in the supreme heaven, in the birth-place of Daksha, and in the presence of Aditi : Agni is elder born to us (who enjoy the fruit) of the sacrifice ; in the olden time he was the bull and the cow.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಋಷಿಯು ಸದಸದಾತ್ಮಕ ಬ್ರಹ್ಮಸ್ವರೂಪವನ್ನು ತಿಳಿಸಿ ಅಗ್ನಿಯ ಮಹಸ್ಸ್ವರೂಪವನ್ನು ಪ್ರಕಾರಾಂತರವಾಗಿ ವರ್ಣಿಸಿದಾನೆ.

**ಅಸತ್ ಚ ಸತ್ ಚ ಪರಮೇ ವ್ಯೋಮನ್**—ಪರಮೇ ವ್ಯೋಮನ್ ಎಂಬ ಶಬ್ದಗಳು ನಾಮರೂಪರಹಿತವಾದ ಅವ್ಯಕ್ತಬ್ರಹ್ಮಸ್ವರೂಪವನ್ನು ತಿಳಿಸುವ ಶಬ್ದಗಳು. ಪರಬ್ರಹ್ಮನ ಈ ವಿಧವಾದ ಅವ್ಯಕ್ತಸ್ವರೂಪವನ್ನು ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ । ( ತೈ. ಉ. ೧-೮ ) ಅಸದೇವೇದಮಗ್ರ ಆಸೀತ್ ತತ್ಸದಾಸೀತ್ ತತ್ಸಮಭವತ್ (ಛಾ. ಉ. ೩-೧೯-೧) ಇತ್ಯಾದಿ ಉಪನಿಷದ್ವಾಕ್ಯಗಳು ವರ್ಣಿಸುವುವು. ಎಂದರೆ ಸೃಷ್ಟಿಗೆ ಪೂರ್ವದಲ್ಲಿ ನಾಮರೂಪನಿರ್ದೇಶಗಳಿಲ್ಲದ ಬ್ರಹ್ಮ ಒಂದೇ ಇದ್ದಿತು. ಅದಕ್ಕೆ ಆಕಾರವಾಗಲೀ, ರೂಪವಾಗಲೀ ಇರಲಿಲ್ಲ. ಕೇವಲ ಜ್ಞಾನಮಯವೂ ಅನಂತವೂ ಆಗಿದ್ದಿತು. ಈ ಸ್ವರೂಪವನ್ನೇ **ಸತ್ಯಂ ಜ್ಞಾನಮನಂತಂ ಬ್ರಹ್ಮ** (ತೈ. ಉ. ೨-೧-೧) ಎಂಬ ಉಪನಿಷದ್ವಾಕ್ಯವು ಪ್ರತಿಪಾದಿಸುವುದು. ಈ ದೆಶೆಯಲ್ಲಿರುವ ಅವ್ಯಕ್ತಸ್ವರೂಪಕ್ಕೆ ಅಸತ್ ಎಂದು ವೇದಾಂತ ಗ್ರಂಥಾದಿಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಹೇಳಿದೆ. ಈ ಶಬ್ದವು ಅಸ ಭುವಿ ಎಂಬ ಧಾತುವಿನಿಂದ ನಿಷ್ಪನ್ನವಾಗಿರುವ ಸತ್ ಎಂಬ ಶಬ್ದದ ನಿಷೇಧಾರ್ಥವನ್ನು ಸೂಚಿಸುವ ಶಬ್ದವು. ಸತ್ ಎಂದರೆ ಇರುವುದು.

ಗೋಚರಿಸುವುದು. ಅಸತ್ ಎಂದರೆ ನಾಮರೂಪಗಳಿಲ್ಲದ ಸ್ಥಿತಿಯು ಅದರ ಸ್ಥಿತಿಯನ್ನು ನೋಡಲಾಗುವುದಿಲ್ಲ. ಸರಿಯಾಗಿ ತಿಳಿಯಲಾಗುವುದಿಲ್ಲ. ಆದರೂ ನಿರ್ಗುಣಸ್ವಭಾವದ ಅಂತಹ ಪರಬ್ರಹ್ಮದಲ್ಲಿ ಸತ್ಯ ಜ್ಞಾನ ಅನಂತತ್ವವೆಂಬ ಗುಣಗಳಿದ್ದು ಆ ಗುಣಗಳ ಎಂದರೆ ಸತ್ತ್ವರಜಸ್ತಮೋಗುಣಗಳ ಆವಿರ್ಭಾವದಿಂದಲೇ ಆ ತತ್ತ್ವವು ಸೃಷ್ಟಿಕಾಲದಲ್ಲಿ ವ್ಯಕ್ತರೂಪವನ್ನು ಹೊಂದಿ ಎಲ್ಲರಿಗೂ ಗೋಚರಿಸುವ ಸ್ವಭಾವವುಳ್ಳದ್ದಾಯಿತು. ಇದನ್ನೇ ಸತ್ ಎಂಬ ಶಬ್ದದಿಂದ ಕರೆಯಲಾಗಿದೆ. ಈ ಸತ್ ಎಂಬ ಸ್ಥಿತಿಯು ಸೃಷ್ಟಿಕಾಲಗಳಲ್ಲಿ ಮಾತ್ರ ಇದ್ದು ಲಯಕಾಲದಲ್ಲಿ ಕ್ರಮಕ್ರಮವಾಗಿ ಬ್ರಹ್ಮವಸ್ತುವಿನಲ್ಲಿ ಐಕ್ಯವಾಗಿ ಅವ್ಯಕ್ತರೂಪದಿಂದ ಸೃಷ್ಟಿಗೆ ಮುಂಚಿನಂತೆ ಇರುವುದು. ಈ ವಿಷಯವು ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ವೇದಾಂತವಿಚಾರಕ್ಕೆ ಸಂಬಂಧಪಟ್ಟಿರುವುದರಿಂದ ಪ್ರಕೃತ ಋಕ್ಕಿನ ವಿವರಣೆಯಲ್ಲಿ ಈ ವಿಷಯವನ್ನು ವಿಸ್ತಾರವಾಗಿ ವಿವರಿಸುವುದು ಸಾಧ್ಯವಿಲ್ಲ. ಮುಖ್ಯಾಭಿಪ್ರಾಯವೇನೆಂದರೆ—ಗುಣರಹಿತವೂ ಆಕಾಶದಂತೆ ನಾಮರೂಪಗಳಿಲ್ಲದೆ ಅನಂತವಾಗಿರುವುದೂ ಆದ ಪರಬ್ರಹ್ಮದಿಂದ ಸದಸದಾತ್ಮಕವಾದ ಈ ಜಗತ್ತೆಲ್ಲವೂ ಆವಿರ್ಭೂತವಾಯಿತು ಎಂದು ಋಷಿಯು ಹೇಳಿದಾನೆ. ಈ ವಿಷಯವನ್ನು ಮುಂದೆ ಬೇರೆ ಸಂದರ್ಭದಲ್ಲಿ ವಿಸ್ತಾರವಾಗಿ ವಿವರಿಸಲಾಗುವುದು.

**ದಕ್ಷಸ್ಯ ಜನ್ಮನ್ನದಿತೇಃ ಉಪಸ್ಥೇ**—ಸೃಷ್ಟಿಕಾಲದಲ್ಲಿ ಪ್ರಜಾಪತಿಯು ಭೂಮಿಯ ಮೇಲೆ ಮೊದಲು ಅಗ್ನಿಯನ್ನು ಸೃಷ್ಟಿಸಿದನು ಎಂದು ಋಷಿಯು ಹೇಳಿದಾನೆ ಅಥವಾ **ಸ ತ್ರೇಧಾತ್ಮಾನಂ ವ್ಯಭಜತಾದಿತ್ಯಂ ತೃತೀಯಂ ವಾಯುಂ ತೃತೀಯಂ** ಎಂಬ ಶತಪಥಬ್ರಾಹ್ಮಣವಾಕ್ಯದಂತೆ ಪ್ರಜಾಪತಿಯು ಸೃಷ್ಟಿಮಾಡಬೇಕೆಂದು ಅಪೇಕ್ಷಿಸಿ ತನ್ನನ್ನೇ ಮೂರುಭಾಗವಾಗಿ ವಿಭಾಗಿಸಿದನು. ಆ ವಿಭಾಗದಲ್ಲಿ ಆದಿತ್ಯನೊಬ್ಬನು. ಅಗ್ನಿಯೇ ಸ್ವರ್ಗದಲ್ಲಿ ಆದಿತ್ಯರೂಪದಿಂದ ಇರುವನೆಂದು ಹೇಳಿರುವುದರಿಂದ ಆದಿತ್ಯನನ್ನೂ ಮೊದಲು ಸೃಷ್ಟಿಸಿದನು ಎಂದರೆ ಅಗ್ನಿಯನ್ನು ಸೃಷ್ಟಿಸಿದನು ಎಂದೇ ಅರ್ಥವು. ಸೃಷ್ಟಿಮಾಡುವಾಗ ಪ್ರಜಾಪತಿಯು **ತ್ರೇಧಾತ್ಮಾನಂ ವ್ಯಭಜತ**—ತನ್ನನ್ನೇ ಮೂರುಭಾಗವಾಗಿ ವಿಭಾಗಿಸಿಕೊಂಡನು ಎಂದು ಹೇಳಿರುವುದಕ್ಕೆ ಕಾರಣವೇನೆಂದರೆ, ಸೃಷ್ಟಿಗೆ ಪೂರ್ವದಲ್ಲಿ ಅವ್ಯಕ್ತಸ್ವರೂಪದಿಂದಿದ್ದ ಬ್ರಹ್ಮ (ಪ್ರಜಾಪತಿ) ಮಾತ್ರವೇ ಇದ್ದು ಸೃಷ್ಟಿಮಾಡಲು ಬೇರೆ ಯಾವ ವಸ್ತುವೂ ಇಲ್ಲದಿದ್ದುದರಿಂದ ತನ್ನನ್ನೇ ವಿಭಾಗಿಸಿಕೊಂಡನು ಎಂದು ಇಲ್ಲಿ ಹೇಳಿದೆ. ಹೀಗೆ ಹೇಳಿರುವುದರಿಂದ ಈಗ ಪ್ರಪಂಚದಲ್ಲಿ ಕಂಡುಬರುತ್ತಿರುವ ಸ್ಥಾವರಜಂಗಮಾತ್ಮಕವಾದ ವಸ್ತುಗಳೆಲ್ಲವೂ ಬ್ರಹ್ಮನ ಅಂಶವೇ ಆಗಿರುವುದೆಂದೂ, ಬ್ರಹ್ಮವನ್ನು ಬಿಟ್ಟು ಬೇರೆ ವಸ್ತುವೇ ಇಲ್ಲನೆಂದೂ ತಿಳಿಯಬೇಕು. ಇದಲ್ಲದೆ ಬೃಹದಾರಣ್ಯಕೋಪನಿಷತ್ತಿನಲ್ಲಿಯೂ—ಸಹ **ತೇಜೋರಸೋ ನಿರವರ್ತತಾಗ್ನಿಃ** (ಬೃ. ಉ. ೧-೧-೨-೨) ಸೃಷ್ಟಿಕಾಲದಲ್ಲಿ ಪರಬ್ರಹ್ಮನಿಂದ ರಸರೂಪವಾದ ತೇಜಸ್ಸು ಆವಿರ್ಭವಿಸಿತು ಎಂದರೆ ಹೊರಕ್ಕೆ ಬಂದಿತು ಎಂದಿದೆ. ಈ ಶ್ರುತಿವಾಕ್ಯವೂ, ಅಗ್ನಿಯನ್ನೇ ಮೊದಲು ಸೃಷ್ಟಿಸಿದನೆಂಬ ವಿಷಯವನ್ನು ಸಮರ್ಥಿಸುವುದು.

**ಅಗ್ನಿಃ ಹ ನಃ ಪ್ರಥಮಜಾಃ ಋತಸ್ಯ ಪೂರ್ವೇ ಆಯುನಿ ವೃಷಭಃ ಚ ಧೇನುಃ**—ಮೇಲೆ ಹೇಳಿದಂತೆ ಪ್ರಜಾಪತಿಯು ಅಗ್ನಿಯನ್ನು ಸೃಷ್ಟಿಸಿದನಂತರ ಕರ್ಮಫಲವನ್ನು ಅನುಭವಿಸುವ ನಮ್ಮನ್ನು ಎಂದರೆ ಮನುಷ್ಯರನ್ನು ಸೃಷ್ಟಿಸಿದನು. ಎಂದರೆ ಮನುಷ್ಯರ ಸೃಷ್ಟಿಗೆ ಪೂರ್ವಭಾವಿಯಾಗಿಯೇ ಅಗ್ನಿಯ ಉತ್ಪತ್ತಿಯಾಯಿತು. ಮತ್ತು ಆ ಕಾಲದಲ್ಲಿಯೇ ಎಂದರೆ ಅಗ್ನಿಯನ್ನು ಸೃಷ್ಟಿಮಾಡಿದಾಗಲೇ ಮುಂದೆ ಮನುಷ್ಯರ ಸೃಷ್ಟಿಯಾಗಬೇಕೆಂಬ ಅಪೇಕ್ಷೆಯಿಂದ ಅಗ್ನಿಯೇ **ವೃಷಭಃ ಧೇನುಃ ಚ** ಸ್ತ್ರೀಪುಂಸಾತ್ಮಕರೂಪವುಳ್ಳವನಾಗಿ ಆದನು. ಇಲ್ಲಿ ವೃಷಭಶಬ್ದವು ಪುರುಷನನ್ನೂ, ಧೇನುಶಬ್ದವು ಸ್ತ್ರೀಯನ್ನೂ ಸೂಚಿಸುವುದು. ಮನುಷ್ಯರಲ್ಲಿ ಪ್ರಜಾಭಿವೃದ್ಧಿಯನ್ನುಂಟುಮಾಡುವುದಕ್ಕಾಗಿ ಸ್ತ್ರೀಪುರುಷ ಭೇದಗಳನ್ನು ಪ್ರಜಾಪತಿಯು ಸೃಷ್ಟಿಸಿದನೆಂದಭಿಪ್ರಾಯವು.

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಋಕ್ಸಂಹಿತಾಭಾಷ್ಯೇಽಸಪ್ತಮಾಷ್ಟಕೇ ಪಂಚಮೋಽಧ್ಯಾಯಃ ಸಮಾಪ್ತಃ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯಲ್ಲಿ ಏಳನೆಯ ಅಷ್ಟಕದಲ್ಲಿ ಐದನೆಯ ಧ್ಯಾಯವು ಸಮಾಪ್ತವು.

॥ ಓಂ ತತ್ಸತ್ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥





॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥
ಸಪ್ತಮಸ್ಯಾಷ್ಟಕಸ್ಯೇತ್ಥಂ ವ್ಯಾಖ್ಯಾಷಿರ್ೀತ್ವಂಚಪಂಚ ಸುಧೀಃ ।
ಸಾಯಣಾಹ್ವಸ್ತತಃ ಷಷ್ಠಮಧ್ಯಾಯಂ ವ್ಯಾಚಿಕೀರ್ಷತಿ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ಅಥ ಸಪ್ತಮಾಷ್ಟಕೇ ಷಷ್ಠೋಽಧ್ಯಾಯಃ

### ಏಳನೆಯ ಅಷ್ಟಕದಲ್ಲಿ ಆರನೆಯ ಅಧ್ಯಾಯವು.

### ಹತ್ತನೆಯ ಮಂಡಲದಲ್ಲಿ ಆರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ದಶಮೇ ಮಂಡಲೇ ಪ್ರಥಮೇಽನುವಾಕೇ ಷೋಡಶಸೂಕ್ತಾನಿ । ತತ್ರಾಯಂ ಸ ಯಸ್ಯೇತಿ ಸಪ್ತರ್ಚಂ ಷಷ್ಠಂ ಸೂಕ್ತಂ ಆಪ್ತ್ಯಸ್ಯ ತ್ರಿತಸ್ಯಾರ್ಷಂ ತ್ರೈಷ್ಟುಭಮಾಗ್ನೇಯಂ । ಅಯಮಿತ್ಯನು–ಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ॥**

ಅನುವಾದವು—ಋಗ್ವೇದಸಂಹಿತೆಯ ಹತ್ತನೆಯ ಮಂಡಲದಲ್ಲಿರುವ ಪ್ರಥಮಾನುವಾಕದಲ್ಲಿ ಹದಿನಾರು ಸೂಕ್ತಗಳಿರುವವು ಅವುಗಳಲ್ಲಿ **ಅಯಂ ಸ ಯಸ್ಯ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ತ್ರಿತಃ ಆಪ್ತ್ಯಃ ಎಂಬುವನು ಋಷಿಯು; ಅಗ್ನಿಯು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಯಂ** ಎಂದು ಮೊದಲಾಗಿ ಹೇಳಿರುವುದು

ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳ ಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೬

ಮಂಡಲ—೧೦ ॥ ಅನುವಾಕ—೧ ॥ ಸೂಕ್ತ—೬ ।
ಅಷ್ಟಕ—೭ ॥ ಅಧ್ಯಾಯ—೬ ॥ ವರ್ಗ ೧ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿ—ತ್ರಿತ ಆಪ್ತ್ಯಃ ॥
ದೇವತಾ—ಅಗ್ನಿಃ ।
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಯಂ ಸ ಯಸ್ಯ ಶರ್ಮನ್ನವೋಭಿರಗ್ನೇರೇಧತೇ ಜರಿತಾಭಿಷ್ಟೌ ।
ಜ್ಯೇಷ್ಠೇಭಿರ್ಯೋ ಭಾನುಭಿರ್ಋಷೂಣಾಂ ಪರ್ಯೇತಿ ಪರಿವೀತೋ ವಿಭಾವಾ ॥೧॥

॥ ಪದಪಾಠಃ ॥

ಅಯಂ । ಸಃ । ಯಸ್ಯ । ಶರ್ಮನ್ । ಅವಃऽಭಿಃ । ಅಗ್ನೇಃ । ಏಧತೇ । ಜರಿತಾ । ಅಭಿಷ್ಟೌ ।
ಜ್ಯೇಷ್ಠೇಭಿಃ । ಯಃ । ಭಾನುಃऽಭಿಃ । ಋಷೂಣಾಂ । ಪರಿऽಏತಿ । ಪರಿऽವೀತಃ । ವಿಭಾऽವಾ ॥ ೧ ॥

॥ ಸಾಯಣಭಾಷ್ಯಂ ॥

ಜರಿತಾ ಸ್ತೋತಾಭಿಷ್ಟೌ ಯಾಗೇ ಕೃತೇ ಯಸ್ಯಾಗ್ನೇರವೋಭಿಃ ಪಾಲನೈಃ ಶರ್ಮಞ್ಛರ್ಮಣಿ ಸ್ವಗೃಹ ಏಧತೇ ವರ್ಧತೇ ಸೋಽಯಮಗ್ನಿರ್ಯಾಗಾರ್ಥಮಸ್ಮಾಭಿರಾಹೂತ ಇತಿ ಶೇಷಃ । ವಿಭಾವಾ ದೀಪ್ತಿಮಾನ್ ಯೋಽಗ್ನಿರ್ಋಷೂಣಾಂ ಸೂರ್ಯರಶ್ಮೀನಾಂ ಜ್ಯೇಷ್ಠೇಭಿಃ ಪ್ರಶಸ್ತೈರ್ಭಾನುಭಿಸ್ತೇಜೋಭಿಃ ಪರಿವೀತಃ ಪರಿವೃತಃ ಪರ್ಯೇತಿ ಸರ್ವತೋ ಗಚ್ಛತಿ । ಯತ್ರ ಯತ್ರ ಗಂತವ್ಯಂ ತತ್ರ ತತ್ರಾಪ್ರತಿಹತಗತಿರ್ಗಚ್ಛತೀತ್ಯರ್ಥಃ ॥

। ಪ್ರತಿಪದಾರ್ಥ ।

**ಜರಿತಾ**—ಸ್ತುತಿಕರ್ತನು । **ಅಭಿಷ್ಟೌ**—ತನ್ನ ಯಾಗಕಾಲದಲ್ಲಿ । **ಯಸ್ಯ ಅಗ್ನೇಃ**—ಯಾವ ಅಗ್ನಿಯ । **ಅವೋಭಿಃ**—ರಕ್ಷಣೆಗಳಿಂದ । **ಶರ್ಮನ್**—ಯಜ್ಞಗೃಹದಲ್ಲಿ । **ಏಧತೇ**—ವೃದ್ಧಿಯನ್ನು ಹೊಂದುವನೋ । **ಸಃ ಅಯಂ**—ಅವನೇ ಈ ಅಗ್ನಿಯು । **ವಿಭಾವಾ**—ಪ್ರಭಾಯುತನಾದ । **ಯಃ**—ಯಾವ ಅದೇ ಅಗ್ನಿಯು ।

**ಋಷೂಣಾಂ**—ಸೂರ್ಯರಶ್ಮಿಗಳ । **ಜ್ಯೇಷ್ಠೇಭಿಃ**—ಪ್ರಶಸ್ತ್ಯಗಳಾದ । **ಭಾನುಭಿಃ**—ತೇಜಸ್ಸುಗಳಿಂದ । **ಪರಿವೀತಃ**—ಸುತ್ತುವರಿಯಲ್ಪಟ್ಟವನಾಗಿ । **ಪರ್ಯೇತಿ**—ಸರ್ವತ್ರ ಸಂಚರಿಸುತ್ತಾನೆ ।

॥ ಭಾವಾರ್ಥ ॥

ಸ್ತುತಿಕರ್ತನು ತನ್ನ ಯಾಗಕಾಲದಲ್ಲಿ ಯಾವ ಅಗ್ನಿಯ ರಕ್ಷಣೆಗಳಿಂದ ಯಜ್ಞಗೃಹದಲ್ಲಿ ವೃದ್ಧಿಯನ್ನು ಹೊಂದುವನೋ ಅವನೇ ಈ ಅಗ್ನಿಯು. ಪ್ರಭಾಯುತನೂ, ಪ್ರಸಿದ್ಧನೂ ಆದ ಅಗ್ನಿಯು ಸೂರ್ಯರಶ್ಮಿಗಳ ಪ್ರಶಸ್ತ್ಯಗಳಾದ ತೇಜಸ್ಸುಗಳಿಂದ ಸುತ್ತುವರಿಯಲ್ಪಟ್ಟವನಾಗಿ ಸರ್ವತ್ರ ಸಂಚರಿಸುತ್ತಾನೆ.

## English Translation

This is that Agni by whose protections the worshipper (diligent) in sacrifice prospers in his dwelling: who radiant, travels everywhere invested with the excellent splendours of his rays.

॥ ಸಂಹಿತಾಪಾಠಃ ॥

ಯೋ ಭಾನುಭಿರ್ವಿಭಾವಾ ವಿಭಾತ್ಯಗ್ನಿರ್ದೇವೇಭಿರ್ಋತಾವಾಜಸ್ರಃ ।
ಆ ಯೋ ವಿವಾಯ ಸಖ್ಯಾ ಸಖಿಭ್ಯೋಽಪರಿಹ್ವೃತೋ ಅತ್ಯೋ ನ ಸಪ್ತಿಃ ॥

॥ ಪದಪಾಠಃ ॥

ಯಃ । ಭಾನುಽಭಿಃ । ವಿಭಾಽವಾ । ವಿಽಭಾತಿ । ಅಗ್ನಿಃ । ದೇವೇಭಿಃ । ಋತಽವಾ । ಅಜಸ್ರಃ ॥
ಆ । ಯಃ । ವಿವಾಯ । ಸಖ್ಯಾ । ಸಖಿಽಭ್ಯಃ । ಅಪರಿಽಹ್ವೃತಃ । ಅತ್ಯಃ । ನ । ಸಪ್ತಿಃ ॥ ೨ ॥

॥ ಸಾಯಣಭಾಷ್ಯಂ ॥

ಋತವಾ ಸತ್ಯವಾನುದಕವಾನ್ಯಜ್ಞವಾನ್ವಾಜಸ್ರೋಽನುಪಕ್ಷೀಣೋಽಹಿಂಸಿತೋ ವಾ । ಕೇನಚಿದನಭಿಭೂತ ಇತ್ಯರ್ಥಃ । ವಿಭಾವಾ ದೀಪ್ತಿಮಾನ್ಯೋಽಗ್ನಿರ್ದೇವೇಭಿರ್ದೇವ್ಯೈರ್ದ್ಯೋತಮಾನೈರ್ಭಾನುಭಿಸ್ತೇಜೋಭಿರ್ವಿಭಾತಿ ವಿವಿಧಂ ದೀಪ್ಯತೇ ಕಿಂಚ ಯೋಽಗ್ನಿಃ ಸಖ್ಯಾ ಸಖ್ಯಾನಿ ಸಖಿಭಿಃ ಕರ್ತವ್ಯಾನಿ ಕರ್ಮಾಣಿ ಹವಿರಾದೀನಿ । ಕರ್ತುಮಿತಿ ಶೇಷಃ । ಸಖಿಭ್ಯಃ ಸಖಿಭೂತಾನಾಂ ಯಜಮಾನಾನಾಮರ್ಥಾಯಾಪರಿಹ್ವೃತೋಽಪರಿಹಿಂಸಿತಃ । ಅಪರಿಶ್ರಾಂತ ಇತ್ಯರ್ಥಃ । ಆ ವಿವಾಯ ಅಭಿಮುಖ್ಯೇನ ಗಚ್ಛತಿ । ತತ್ರ ದೃಷ್ಟಾಂತಃ । ಸಪ್ತಿಃ । ಸದಾಸರ್ಪಣ ಇತ್ಯರ್ಥಃ । ಅತ್ಯೋ ನ ಯಥಾ ಸತತಗಮನಸಮರ್ಥೋಽಶ್ವೋಽಪರಿಶ್ರಾಂತೋ ಗಚ್ಛತಿ ತದ್ವತ್ । ಸೋಽಯಮಗ್ನಿರಸ್ಮಾಭಿರ್ಯಾಗಾರ್ಥಮಾಹೂತ ಇತಿ ಪೂರ್ವವದ್ಯೋಜ್ಯಂ ॥

॥ ಪ್ರತಿಪದಾರ್ಥ ॥

**ಋತವಾ**—ಸತ್ಯವಂತನೂ । **ಅಜಸ್ರಃ**—ಕ್ಷಯರಹಿತನೂ । **ವಿಭಾವಾ**—ಕಾಂತಿಯುತನೂ ಆದ । **ಯಃ ಅಗ್ನಿಃ**—ಯಾವ ಅಗ್ನಿಯು । **ದೇವೇಭಿಃ**—ಪ್ರಕಾಶಮಾನಗಳಾದ । **ಭಾಸುಭಿಃ**—ತೇಜಸ್ಸುಗಳೊಡನೆ । **ವಿಭಾತಿ**—ಅತಿಶಯವಾಗಿ ಪ್ರಕಾಶಿಸುವನೋ । **ಯಃ**—ಯಾವ ಅಗ್ನಿಯು । **ಅಪರಿಹ್ವೃತಃ**—ಕೊಂಚವೂ ಆಲಸ್ಯವಿಲ್ಲದೇ । **ಸಪ್ತಿಃ**—ಸರ್ವದಾ ಸಂಚರಿಸುವ । **ಅತ್ಯೋ ನ**—ಅಶ್ವದಂತೆ । **ಆ ವಿವಾಯ**—ಯಜಮಾನರಲ್ಲಿಗೆ ಬರುವನೋ ಅವನು । **ಸಖಿಭ್ಯಃ**—ತನ್ನ ಮಿತ್ರರಾದ ಯಜಮಾನಾದಿಗಳಿಗೆ । **ಸಖ್ಯಾ**—ಆ ಮಿತ್ರರ ಹವಿರಾದಿಗಳನ್ನು ಸ್ವೀಕರಿಸಲು ಬರುತ್ತಾನೆ. (ಅವರನ್ನು ಅನುಗ್ರಹಿಸಲು ಬರುತ್ತಾನೆ) ।

॥ ಭಾವಾರ್ಥ ॥

ಸತ್ಯವಂತನೂ, ಕ್ಷಯರಹಿತನೂ, ಕಾಂತಿಯುತನೂ ಆದ ಯಾವ ಅಗ್ನಿಯು ಪ್ರಕಾಶಮಾನಗಳಾದ ತೇಜಸ್ಸುಗಳೊಡನೆ ಅತಿಶಯವಾಗಿ ಪ್ರಕಾಶಿಸುವನೋ, ಯಾವ ಅಗ್ನಿಯು ಕೊಂಚವೂ ಆಲಸ್ಯವಿಲ್ಲದೇ ಸರ್ವದಾ ಸಂಚರಿಸುವ ಅಶ್ವದಂತೆ ಯಜಮಾನರಲ್ಲಿಗೆ ಬರುವನೋ ಅವನು ತನ್ನ ಮಿತ್ರರಾದ ಯಜಮಾನಾದಿಗಳಿಗೆ ಆ ಮಿತ್ರರ ಹವಿರಾದಿಗಳನ್ನು ಸ್ವೀಕರಿಸಲು ಮತ್ತು ಅವರನ್ನು ಅನುಗ್ರಹಿಸಲು ಬರುತ್ತಾನೆ.

## English Translation

Agni, the observer of truth, the eternal, who shines resplendent with celestial splendours, who comes untiring like a swift horse, (bringing) frendly gifts to his friends.

॥ ಸಂಹಿತಾಪಾಠಃ ॥

**ಈಶೇ ಯೋ ವಿಶ್ವಸ್ಯಾ ದೇವವೀತೇರೀಶೇ ವಿಶ್ವಾಯುರುಷಸೋ ವ್ಯುಷ್ಟೌ ।**
**ಆ ಯಸ್ಮಿನ್ಮನಾ ಹವೀಂಷ್ಯಗ್ನಾವರಿಷ್ಟರಥಃ ಸ್ಕಭ್ನಾತಿ ಶೂಷೈಃ ॥ ೨ ॥**

॥ ಪದಪಾಠಃ ॥

**ಈಶೇ । ಯಃ । ವಿಶ್ವಸ್ಯಾಃ । ದೇವಽವೀತೇಃ । ಈಶೇ । ವಿಶ್ವಽಆಯುಃ । ಉಷಸಃ । ವಿಽಉಷ್ಟೌ ।**
**ಆ । ಯಸ್ಮಿನ್ ಮನಾ । ಹವೀಂಷಿ । ಅಗ್ನೌ । ಅರಿಷ್ಟಽರಥಃ । ಸ್ಕಭ್ನಾತಿ । ಶೂಷೈಃ ॥ ೨ ॥**

॥ ಸಾಯಣಭಾಷ್ಯಂ ॥

ಯೋಽಗ್ನಿರ್ವಿಶ್ವಸ್ಯಾ ದೇವವೀತೇಃ ಸರ್ವಸ್ಯ ಯಜ್ಞಸ್ಯೇಶೇ ಈಷ್ಟೇ । ಅಪಿ ಚ ವಿಶ್ವಾಯುಃ ಸರ್ವತ್ರಾಪ್ರತಿಹತಗಮನ ಉಷಸೋ ವ್ಯುಷ್ಟೌ ವಿವಾಸನ ಉದಯಕಾಲೇ ಹೋಮಾರ್ಥಂ ಯಜಮಾ-

ನಾನಾವಿಧಾಶೇ ಈಷ್ಟೇ। ಶೂಷ್ಯೈಃ ಶತ್ರುಬಲ್ಯೈರರಿಷ್ಟರಥೋಽಹಿಂಸಿತಯಜ್ಞರಥಃ ಸರ್ವ ಏವ ಯಜಮಾನೋ ಯಸ್ಮಿನ್ನಗ್ನೌ ಮನಾ ಮನನೀಯಾನಿ ಹವೀಂಷ್ಯಾ ಸ್ತಭ್ನಾತಿ ಆದರೇಣ ಪ್ರತಿಬಧ್ನಾತಿ ಪ್ರಕ್ಷಿಪತಿ। ಸೋಽಯಮಗ್ನಿರಸ್ಮಾಭಿರ್ಯಾಗಾರ್ಥಮಾಹೂತ ಇತ್ಯರ್ಥಃ॥

। ಪ್ರತಿಪದಾರ್ಥ ।

**ಯಃ**—ಯಾವ ಅಗ್ನಿಯು। **ವಿಶ್ವಸ್ಯಾಃ**—ಸಮಸ್ತವಾದ। **ದೇವವೀತೇಃ**—ಯಜ್ಞಕ್ಕೂ। **ಈಶೇ**—ಪ್ರಭುವಾಗಿದ್ದಾನೆಯೋ। **ವಿಶ್ವಾಯುಃ**—ಸರ್ವತ್ರ ಸಂಚರಿಸಬಲ್ಲವನಾಗಿ। **ಉಷಸಃ**—ಉಷಸ್ಸಿನ। **ವ್ಯುಷ್ಟೌ**—ಉದಯಕಾಲದಲ್ಲಿ। **ಈಶೇ**—ಯಜಮಾನನಾಗಿದ್ದಾನೆಯೋ। **ಯಸ್ಮಿನ್**—ಯಾವ। **ಅಗ್ನೌ**—ಅಗ್ನಿಯಲ್ಲಿ। **ಶೂಷ್ಯೈಃ**—ಶತ್ರುಬಲಗಳಿಂದ। **ಅರಿಷ್ಟರಥಃ**—ಅಹಿಂಸಿತವಾದ ರಥವುಳ್ಳ ಯಜಮಾನನು। **ಮನಾಃ**—ಧ್ಯಾನಪೂರ್ವಕವಾದ। **ಹವೀಂಷಿ**—ಹವಿಸ್ಸುಗಳನ್ನು। **ಆ ಸ್ತಭ್ನಾತಿ**—ಅರ್ಪಿಸುವನೋ ಆ ಅಗ್ನಿಯನ್ನು ನಾವು ಕರೆಯುತ್ತೇವೆ।

॥ ಭಾವಾರ್ಥ ॥

ಯಾವ ಅಗ್ನಿಯು ಸಕಲ ಯಜ್ಞಕ್ಕೂ ಪ್ರಭುವಾಗಿರುವನೋ, ಮತ್ತು ಸರ್ವತ್ರ ಸಂಚರಿಸಬಲ್ಲವನಾಗಿ ಉಷಸ್ಸಿನ ಉದಯಕಾಲದಲ್ಲೇ ಯಾಜಮಾನ್ಯವನ್ನು ವಹಿಸುವನೋ ಅಲ್ಲದೇ, ಯಾವ ಅಗ್ನಿಯಲ್ಲಿ ಶತ್ರುಬಲಗಳಿಂದ ಅಹಿಂಸಿತವಾದ ರಥವುಳ್ಳ ಯಜಮಾನನು ಧ್ಯಾನಪೂರ್ವಕವಾದ ಹವಿಸ್ಸುಗಳನ್ನು ಅರ್ಪಿಸುವನೋ ಆ ಅಗ್ನಿಯನ್ನು ನಾವು ಕರೆಯುತ್ತೇವೆ.

## English Translation

Who rules over every oblation to the gods, who all-pervading rules at the opening of the dawn, and in whom (the sacrificer), whose sacrifice is undisturbed by his foes, throws his choice oblations.—

। ಸಂಹಿತಾಪಾಠಃ ।

ಶೂಷೇಭಿರ್ವೃಧೋ ಜುಷಾಣೋ ಅರ್ಕೈರ್ದೇವಾँ ಅಚ್ಛಾ ರಘುಪತ್ವಾ
ಜಿಗಾತಿ।
ಮಂದ್ರೋ ಹೋತಾ ಸ ಜುಹ್ವಾ ಯಜಿಷ್ಠಃ ಸಂಮಿಶ್ಲೋ ಅಗ್ನಿರಾ
ಜಿಘರ್ತಿ ದೇವಾನ್॥ ೪॥

। ಪದಪಾಠಃ ॥

ಶೂಷೇಭಿಃ। ವೃಧಃ। ಜುಷಾಣಃ। ಅರ್ಕೈಃ। ದೇವಾನ್। ಅಚ್ಛ। ರಘುಽಪತ್ವಾ। ಜಿಗಾತಿ।
ಮಂದ್ರಃ। ಹೋತಾ। ಸಃ। ಜುಹ್ವಾ। ಯಜಿಷ್ಠಃ। ಸಂಽಮಿಶ್ಲಃ। ಅಗ್ನಿಃ। ಆ। ಜಿಘರ್ತಿ। ದೇವಾನ್॥

॥ ಸಾಯಣಭಾಷ್ಯಂ ॥

ವೃಧೋ ವರ್ಧಿತೋಽಗ್ನಿಃ ಶೂಷೇಭಿರ್ಹವಿಲಕ್ಷಣೈರ್ಬಲೈಃ। ಬಲನಿಮಿತ್ತೈರ್ಹವಿರ್ಭಿರಿತ್ಯರ್ಥಃ। ಅರ್ಕೈಃ ಸ್ತೋತ್ರೈಶ್ಚ ಜುಷಾಣಃ ಸೇವ್ಯಮಾನಃ ಸನ್ ದೇವಾನಿಂದ್ರಾದೀನಚ್ಛಾಪ್ತುಂ ರಘುಪತ್ವಾ ಲಘುಪತನಃ ಶೀಘ್ರಗಾಮೀ ಜಿಗಾತಿ। ಗಚ್ಛತಿ। ಗತ್ವಾ ಚ ಮಂದ್ರಃ ಸ್ತುತ್ಯೋ ಹೋತಾ ದೇವಾನಾಮಾಹ್ವಾತಾ ಹೋಮನಿಷ್ಪಾದಕೋ ವಾ ಯಜಿಷ್ಠೋ ಯಷ್ಟೃತಮಃ ಸಂಮಿಶ್ಲಃ ಸ್ವಗುಣೈ-ರ್ದೇವೈರ್ವಾ ಸಂಪ್ರಯುಕ್ತಃ ಸೋಽಗ್ನಿರ್ದೇವಾನ್ಪ್ರತಿ ಹವಿರಾ ಜಿಘರ್ತಿ। ಆಹಾರಯತಿ। ದೇವೇಭ್ಯೋ ಹವಿರ್ದದಾತೀತ್ಯರ್ಥಃ॥

ಪ್ರತಿಪದಾರ್ಥ ॥

ವೃಧಃ—ಪುಷ್ಟನಾದ ಅಗ್ನಿಯು। ಶೂಷೇಭಿಃ—ಶಕ್ತಿಕಾರಕವಾದ ಹವಿಸ್ಸುಗಳಿಂದಲೂ। ಅರ್ಕೈಃ—ಸ್ತೋತ್ರಗಳಿಂದಲೂ। ಜುಷಾಣಃ—ಸೇವಿಸಲ್ಪಟ್ಟವನಾಗಿ। ದೇವಾನ್—ಇಂದ್ರಾದಿ ದೇವತೆಗಳನ್ನು। ಅಚ್ಛ—ಹೋಗಿ ಸೇರಲು। ರಘುಪತ್ವಾ—ಶೀಘ್ರಗಾಮಿಯಾಗಿ। ಜಿಗಾತಿ—ಹೋಗುತ್ತಾನೆ। ಮಂದ್ರಃ—ಸ್ತುತಿಗೆ ಅರ್ಹನೂ। ಹೋತಾ—ಹೋತೃರೂಪನೂ। ಯಜಿಷ್ಠಃ—ಅತ್ಯಂತ ಪೂಜ್ಯನೂ। ಸಂಮಿಶ್ಲಃ—ದೇವಗಣಗಳಿಂದ ಕೂಡಿದವನೂ ಆದ। ಸಃ ಅಗ್ನಿಃ—ಅದೇ ಅಗ್ನಿಯು। ದೇವಾನ್—ದೇವತೆಗಳಿಗೆ। ಜುಹ್ವಾ—ತನ್ನ। ಜ್ವಾಲೆಯ ಮೂಲಕ। ಆ ಜಿಘರ್ತಿ—ಹವಿರಾದಿಗಳನ್ನರ್ಪಿಸುತ್ತಾನೆ।

॥ ಭಾವಾರ್ಥ ॥

ಪುಷ್ಟನಾದ ಅಗ್ನಿಯು ಶಕ್ತಿಕಾರಕವಾದ ಹವಿಸ್ಸುಗಳಿಂದಲೂ, ಸ್ತೋತ್ರಗಳಿಂದಲೂ, ಸೇವಿಸಲ್ಪಟ್ಟವನಾಗಿ ಇಂದ್ರಾದಿ ದೇವತೆಗಳನ್ನು ಹೋಗಿ ಸೇರಲು ಶೀಘ್ರಗಾಮಿಯಾಗಿ ಹೋಗುತ್ತಾನೆ. ಸ್ತುತಿಗೆ ಅರ್ಹನೂ ಹೋತೃರೂಪನೂ, ಅತ್ಯಂತ ಪೂಜ್ಯನೂ ದೇವಗುಣಗಳಿಂದ ಕೂಡಿದವನೂ ಆದ ಅದೇ ಅಗ್ನಿಯು ದೇವತೆಗಳಿಗೆ ತನ್ನ ಜ್ವಾಲಾರೂಪವಾದ ಪಾತ್ರೆಯಿಂದ ಹವಿರಾದಿಗಳನ್ನರ್ಪಿಸುತ್ತಾನೆ.

English Translation

Magnified by our oblations, propitiated by our praises, swift-moving, he proceeds to the persence of the gods ; the aborable invoker of the deites, most entitled to worship, associated (with the gods), Agni presents to them (the oblation) with the sacrificial ladle.

॥ ಸಂಹಿತಾಪಾಠಃ ॥

ತಮುಸ್ರಾಮಿಂದ್ರಂ ನ ರೇಜಮಾನಮಗ್ನಿಂ ಗೀರ್ಭಿರ್ನಮೋಭಿ ರಾಕೃಣುಧ್ವಂ।

ಆ ಯಂ ವಿಪ್ರಾಸೋ ಮತಿಭಿರ್ಗೃಣಂತಿ ಜಾತವೇದಸಂ ಜುಹ್ವಂ ಸಹಾನಾಂ ॥ ೫ ॥

॥ ಪದಪಾಠಃ ॥

ತಂ । ಉಸ್ರಾಂ । ಇಂದ್ರಂ । ನ । ರೇಜಮಾನಂ । ಅಗ್ನಿಂ । ಗೀಃಽಭಿಃ । ನಮಃಽಭಿಃ । ಆ । ಕೃಣುಧ್ವಂ ।
ಆ । ಯಂ । ವಿಪ್ರಾಸಃ । ಮತಿಽಭಿಃ । ಗೃಣಂತಿ । ಜಾತಽವೇದಸಂ । ಜುಹ್ವಂ । ಸಹಾನಾಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜಃ ಯೂಯಮುಸ್ರಾಂ ಭೋಗಾನಾಮುತ್ಸ್ರಾವಿಣಂ ದಾತಾರಂ ರೇಜಮಾನಂ ಜ್ವಾಲಾತ್ಮನಾ ಕಂಪಮಾನಂ ತಮಗ್ನಿಮಿಂದ್ರಂ ನೇಂದ್ರಮಿವ ಗೀರ್ಭಿಃ ಸ್ತುತಿಭಿರ್ನಮೋಭಿರ್ಹವಿರ್ಭಿಶ್ಚಾಕೃಣುಧ್ವಂ ಅಸ್ಮದಭಿಮುಖಂ ಕುರುತ । ವಿಪ್ರಾಸೋ ಮೇಧಾವಿನಃ ಸ್ತೋತಾರಃ ಸಹಾನಾಂ ಶತ್ರುಬಲಾದ್ಯಭಿಭವಿತೄಣಾಂ ದೇವಾನಾಂ ಜುಹ್ವಮಾಹ್ವಾತಾರಂ ಜಾತವೇದಸಂ ಜಾತಧನಂ ಜಾತಪ್ರಜ್ಞಂ ವಾ ಯಮಗ್ನಿಮಾ ಗೃಣಂತಿ ಆದರೇಣ ಸ್ತುವಂತಿ । ತಮಾ ಕೃಣುಧ್ವಮಿತಿ ಪೂರ್ವೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) **ವಿಪ್ರಾಸಃ**—ಮೇಧಾವಿಗಳಾದ ಸ್ತುತಿಕರ್ತರು । **ಸಹಾನಾಂ**—ಶಕ್ತಿಯುತರಾದ ದೇವತೆಗಳಿಗೆ । **ಜುಹ್ವಂ**—ಆಹ್ವಾನವನ್ನು ಕೊಡತಕ್ಕವನೂ । **ಜಾತವೇದಸಂ**—ಜಾತವೇದೋರೂಪನೂ ಆದ । **ಯಂ**—ಯಾವ ಅಗ್ನಿಯನ್ನು । **ಮತಿಭಿಃ**—ಸ್ತೋತ್ರಗಳಿಂದ । **ಆ ಗೃಣಂತಿ**—ಆದರದಿಂದ ಸ್ತುತಿಸುವರೋ ಅಂತಹ । **ಉಸ್ರಾಂ**—ಭೋಗಪ್ರದನೂ । **ರೇಜಮಾನಂ**—ಜ್ವಾಲೆಯೊಡನೆ ಕಂಪಿಸುವವನೂ ಆದ । **ತಂ ಅಗ್ನಿಂ**—ಆ ಅಗ್ನಿಯನ್ನು । **ಇಂದ್ರಂ ನ**—ಇಂದ್ರನನ್ನು ಕರೆಯುವಂತೆ । **ಗೀರ್ಭಿಃ**—ಸ್ತುತಿಗಳಿಂದಲೂ । **ನಮೋಭಿಃ**—ಹವಿಸ್ಸುಗಳಿಂದಲೂ । **ಆ ಕೃಣುಧ್ವಂ**—ನಮಗಭಿಮುಖವಾಗುವಂತೆ ಮಾಡಿರಿ ।

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಮೇಧಾವಿಗಳಾದ ಸ್ತುತಿಕರ್ತರು ಶಕ್ತಿಯುತರಾದ ದೇವತೆಗಳಿಗೆ ಆಹ್ವಾನವನ್ನು ಕೊಡತಕ್ಕವನೂ, ಜಾತವೇದೋರೂಪನೂ ಆದ ಯಾವ ಅಗ್ನಿಯನ್ನು ಸ್ತೋತ್ರಗಳಿಂದ ಆದರಪೂರ್ವಕವಾಗಿ ಸ್ತುತಿಸುವರೋ ಅಂತಹ ಭೋಗಪ್ರದನೂ ಜ್ವಾಲೆಯೊಡನೆ ಕಂಪಿಸುವವನೂ ಆದ ಅಗ್ನಿಯನ್ನು ಇಂದ್ರನನ್ನು ಯಜ್ಞಕ್ಕೆ ಕರೆತರುವಂತೆ ಸ್ತುತಿಗಳಿಂದಲೂ ಹವಿಸ್ಸುಗಳಿಂದಲೂ ನಮಗಭಿಮುಖನಾಗುವಂತೆ ಮಾಡಿರಿ.

## English Translation

Bring before us with praises, and with adorations, the brilliant Agni, the bestower of enjoyments, as if he were Indra, him, whom wise wor-

shippers praise with hymns as Jatavedas, the sacrificer to the victorious Gods.

। ಸಂಹಿತಾಪಾಠಃ ॥

ಸಂ ಯಸ್ಮಿನ್ವಿಶ್ವಾ ವಸೂನಿ ಜಗ್ಮುರ್ವಾಜೇ ನಾಶ್ವಾಃ ಸಪ್ತೀವಂತ ಏವೈಃ ।
ಅಸ್ಮೇ ಊತೀರಿಂದ್ರವಾತತಮಾ ಅರ್ವಾಚೀನ ಅಗ್ನ ಆ ಕೃಣುಷ್ವ ॥ ೬ ॥

। ಪದಪಾಠಃ ॥

ಸಂ । ಯಸ್ಮಿನ್ । ವಿಶ್ವಾ । ವಸೂನಿ । ಜಗ್ಮುಃ । ವಾಜೇ । ನ । ಅಶ್ವಾಃ । ಸಪ್ತಿವಂತಃ । ಏವೈಃ ।

ಅಸ್ಮೇ । ಇತಿ । ಊತೀಃ । ಇಂದ್ರವಾತ್ಽತಮಾಃ । ಅರ್ವಾಚೀನಾಃ । ಅಗ್ನೇ । ಆ । ಕೃಣುಷ್ವ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯಸ್ಮಿಂಸ್ತ್ವಯಿ ವಿಶ್ವಾನಿ ವಸೂನಿ ಧನಾನಿ ಸಂ ಜಗ್ಮುಃ ಸ್ವತ್ವೇನ ಸಂಗತಾನಿ ಭವಂತಿ । ತತ್ರ ದೃಷ್ಟಾಂತಃ । ಏವೈರ್ಗಮನೈಃ ಸಪ್ತೀವಂತಃ ಸರ್ಪಣವಂತಃ ಶೀಘ್ರಗಮನಸಮರ್ಥಾ ಅಶ್ವಾ ವಾಜೇ ನ ಯಥಾ ಸಂಗ್ರಾಮೇ ಸಂಗತಾಸ್ತದ್ವತ್ । ಹೇ ಅಗ್ನೇ ಸ ತ್ವಮಿಂದ್ರವಾತತಮಾ ಇಂದ್ರೇಣಾಭಿಗತಾ ಊತೀ ರಕ್ಷಾ ಅಸ್ಮೇ ಅಸ್ಮಾಸ್ವರ್ವಾಚೀನಾ ಅಭಿಮುಖೀರಾ ಕೃಣುಷ್ವ । ಆದರೇಣ ಕುರು ॥

। ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಏವೈಃ**—ತಮ್ಮ ವೇಗಗಮನಗಳಿಂದ । **ಸಪ್ತೀವಂತಃ**—ಶೀಘ್ರಗಾಮಿಗಳಾದ **ಅಶ್ವಾಃ**—ಅಶ್ವಗಳು । **ವಾಜೇ ನ**—ಸಂಗ್ರಾಮದಲ್ಲಿ ಹೋಗಿ ಸೇರುವಂತೆ । **ಯಸ್ಮಿನ್**—ಯಾವ ನಿನ್ನಲ್ಲಿ । **ವಿಶ್ವಾ-ವಸೂನಿ**—ಸಕಲ ಧನಗಳೂ । **ಸಂ ಜಗ್ಮುಃ**—ಒಟ್ಟಿಗೆ ಸೇರಿಕೊಂಡಿರುವುವೋ ಅಂತಹ ನೀನು । **ಇಂದ್ರವಾತ-ತಮಾಃ**—ಇಂದ್ರನಿಗಿಂತಲೂ ಅತಿಶಯವಾಗಿ । **ಊತೀಃ**—ರಕ್ಷಣೆಗಳನ್ನು । **ಅಸ್ಮೇ**—ನಮಗೆ । **ಅರ್ವಾಚೀನಾಃ**-ಅಭಿಮುಖವಾಗುವಂತೆ । **ಆ ಕೃಣುಷ್ವ**—ಮಾಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ತಮ್ಮ ವೇಗಗಮನಗಳಿಂದ ಶೀಘ್ರಗಾಮಿಗಳಾದ ಅಶ್ವಗಳು ಸಂಗ್ರಾಮದಲ್ಲಿ ಹೋಗಿ ಸೇರುವಂತೆ ಯಾವ ನಿನ್ನಲ್ಲಿ ಸಕಲ ಧನಗಳೂ ಒಟ್ಟಿಗೆ ಸೇರಿಕೊಂಡಿರುವವೋ ಅಂತಹ ನೀನು ಇಂದ್ರನಿಗಿಂತಲೂ ಅತಿಶಯವಾಗಿ ನಮಗೆ ರಕ್ಷಣೆಗಳನ್ನು ನೀಡು.

## English Translation

O Agni, in whom all treasures are brought together as fleet horses are brought together in battle : bestow upon us protections even more effective than those of Indra.

॥ ಸಂಹಿತಾಪಾಠಃ ॥

ಅಧಾ ಹ್ಯಗ್ನೇ ಮಹ್ನಾ ನಿಷದ್ಯಾ ಸದ್ಯೋ ಜಜ್ಞಾನೋ ಹವ್ಯೋ ಬಭೂಥ ।
ತಂ ತೇ ದೇವಾಸೋ ಅನು ಕೇತಮಾಯನ್ನಧಾವರ್ಧಂತ ಪ್ರಥಮಾಸ
ಊಮಾಃ ॥ ೭ ॥

॥ ಪದಪಾಠಃ ॥

ಅಧ । ಹಿ । ಅಗ್ನೇ । ಮಹ್ನಾ । ನಿಽಸದ್ಯ । ಸದ್ಯಃ । ಜಜ್ಞಾನಃ । ಹವ್ಯಃ । ಬಭೂಥ ।

ತಂ । ತೇ । ದೇವಾಸಃ । ಅನು । ಕೇತಂ । ಆಯನ್ । ಅಧ । ಅವರ್ಧಂತ । ಪ್ರಥಮಾಸಃ । ಊಮಾಃ ॥

॥ ಸಾಯಣಭಾಷ್ಯಂ ॥

ಅಧಾನಂತರಂ ಹಿ ಯಸ್ಮಾದ್ಧೇ ಅಗ್ನೇ ತ್ವಂ ಮಹ್ನಾ ಮಹತ್ತ್ವೇನ ಜಜ್ಞಾನೋ ಜಾಯಮಾನೋ ಜ್ವಲನ್ನಿಷದ್ಯೋಪವಿಶ್ಯ ಸದ್ಯಸ್ತಸ್ಮಿನ್ಪ್ರಜನನಕಾಲ ಏವ ಹವ್ಯೋ ಹವನಾರ್ಹ ಆಹುತಿಪ್ರಕ್ಷೇಪಣಾರ್ಹೋ ಬಭೂಥ ಭವಸಿ ತಸ್ಮಾತ್ಕಾರಣಾದ್ದೇವಾಸೋ ಹವಿಷಾಂ ದಾತಾರ ಋತ್ವಿಗ್ಯಜಮಾನಾಸ್ತೇ ತವ ಸ್ವಭೂತಂ ತಂ ತಾದೃಶಂ ಕೇತಂ ಪ್ರಜ್ಞಾನಲಕ್ಷಣಮನ್ವಾಯನ್ । ಅನುಗಚ್ಛಂತಿ । ದೀಪ್ತೇ ತ್ವಯಿ ಹವೀಂಷಿ ಜುಹ್ವತೀತ್ಯರ್ಥಃ । ಅಧಾನಂತರಮೃತ್ವಿಗಾದಯಃ ಪ್ರಥಮಾಸಃ ಕ್ರಿಯಾಭಿಜನವಿದ್ಯಾಗುಣೈರುತ್ಕೃಷ್ಟಾ ಊಮಾಸ್ತ್ವಯಾ ರಕ್ಷಿತಾಃ ಸಂತೋಽವರ್ಧಂತ । ವರ್ಧಂತೇ ॥

। ಪ್ರತಿಪದಾರ್ಥ ।

ಅಗ್ನೇ—ಎಲೈ ಅಗ್ನಿಯೇ । ಹಿ—ಯಾವ ಕಾರಣದಿಂದ । ಮಹ್ನಾ—ನಿನ್ನ ಮಹತ್ವದ ಫಲವಾಗಿ । **ಜಜ್ಞಾನಃ**—ಉತ್ಪನ್ನನಾಗಿಯೂ । **ನಿಷದ್ಯ**—ಕುಳಿತವನಾಗಿಯೂ । **ಸದ್ಯಃ**—ಉತ್ಪನ್ನನಾದೊಡನೆಯೇ । **ಹವ್ಯಃ**—ಹವಿಸ್ಸನ್ನು ಸ್ವೀಕರಿಸಲು ಅರ್ಹನಾಗಿ । **ಬಭೂಥ**—ಆದೆಯೋ ಆ ಕಾರಣದಿಂದಲೇ । **ದೇವಾಸಃ**—ಹವಿಸ್ಸನ್ನು ಅರ್ಪಿಸುವ ಋತ್ವಿಗ್ಯಜಮಾನರು । **ತೇ**—ನಿನ್ನ । **ತಂ ಕೇತಂ**—ಪ್ರಸಿದ್ಧವಾದ ಚಿಹ್ನವನ್ನು । **ಅನು ಆಯನ್**—ಅನುಸರಿಸುತ್ತಾರೆ । **ಅಧ**—ಅನಂತರದಲ್ಲಿ । **ಪ್ರಥಮಾಸಃ**—ಅತ್ಯುತ್ಕೃಷ್ಟವಾದ ಗುಣಗಳುಳ್ಳವರಾಗಿಯೂ । **ಊಮಾಃ**—ನಿನ್ನಿಂದ ರಕ್ಷಿತರಾಗಿಯೂ । **ಅವರ್ಧಂತ**—ವೃದ್ಧಿಯನ್ನು ಹೊಂದುತ್ತಾರೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ಕಾರಣದಿಂದ ನಿನ್ನ ಮಹತ್ವದ ಫಲವಾಗಿ ನೀನು ಉತ್ಪನ್ನನಾಗಿಯೂ, ಕುಳಿತವನಾಗಿಯೂ, ಉತ್ಪನ್ನನಾದೊಡನೆಯೇ ಹವಿಸ್ಸನ್ನು ಸ್ವೀಕರಿಸಲು ಅರ್ಹನಾಗಿ ಆದೆಯೋ ಆ ಕಾರಣದಿಂದಲೇ, ಹವಿಸ್ಸನ್ನು ಅರ್ಪಿಸುವ ಋತ್ವಿಗ್ಯಜಮಾನರು ನಿನ್ನ ಪ್ರಸಿದ್ಧವಾದ ಚಿಹ್ನವನ್ನು ಅನುಸರಿಸುತ್ತಾರೆ. ಅನಂತರ, ಅತ್ಯುತ್ಕೃಷ್ಟವಾದ ಗುಣಗಳುಳ್ಳವರಾಗಿಯೂ, ನಿನ್ನಿಂದ ರಕ್ಷಿತರಾಗಿಯೂ ವೃದ್ಧಿಯನ್ನು ಹೊಂದುತ್ತಾರೆ.

English Translation

Since you, Agni, born in your glory, and having sat down (on the altar), are immediately entitled to the oblation : therefore the holy (priests) come to that your ensign and the most worthy (worshippers) prosper protected (by you).

## ಏಳನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಸ್ವಸ್ತಿ ನ ಇತಿ ಸಪ್ತರ್ಚಂ ಸಪ್ತಮಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ಸ್ವಸ್ತೀತ್ಯನುಕ್ರಾಂತಂ ॥ ಉಕ್ತಃ ಸೂಕ್ತವಿನಿಯೋಗಃ ॥ ಸ್ವಸ್ತ್ಯಯನ್ಯಾಂ ಪ್ರಧಾನಸ್ಯ ಸ್ವಸ್ತಿ ನ ಇತ್ಯೇಷಾನುವಾಕ್ಯಾ । ಸೂತ್ರಿತಂ ಚ । ಅಗ್ನಿಃ ಸ್ವಸ್ತಿಮಾನ್ ಸ್ವಸ್ತಿ ನೋ ದಿವೋ ಅಗ್ನೇ ಪೃಥಿವ್ಯಾಃ । ಆ. ೨-೧೦ । ಇತಿ ॥**

ಅನುವಾದವು—**ಸ್ವಸ್ತಿ ನಃ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾ ಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ **ಸ್ವಸ್ತಿ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. **ಸ್ವಸ್ತ್ಯಯನೀ** ಎಂಬ ಇಷ್ಟಿಯ ಪ್ರಧಾನಹೋಮದಲ್ಲಿ **ಸ್ವಸ್ತಿ ನಃ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಅಗ್ನಿಃ ಸ್ವಸ್ತಿಮಾನ್ ಸ್ವಸ್ತಿ ನೋ ದಿವೋ ಅಗ್ನೇ ಪೃಥಿವ್ಯಾಃ** ಎಂಬ ಸೂತ್ರದಿಂದ (ಆ. ೨-೧೦) ವಿವೃತವಾಗಿರುವುದು

### ಸೂಕ್ತ—೭

ಮಂಡಲ—೧೦ । ಅನುವಾಕ—೧ । ಸೂಕ್ತ—೭ ।
ಅಷ್ಟಕ—೭ । ಅಧ್ಯಾಯ—೬ । ವರ್ಗ—೧ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ।
ಋಷಿಃ—ತ್ರಿತ ಆಪ್ತ್ಯಃ ॥
ದೇವತಾ—ಅಗ್ನಿಃ ।
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಸ್ವಸ್ತಿ ನೋ ದಿವೋ ಅಗ್ನೇ ಪೃಥಿವ್ಯಾ ವಿಶ್ವಾಯುರ್ಧೇಹಿ ಯಜಥಾಯ ದೇವ ।
ಸಚೇಮಹಿ ತವ ದಸ್ಮ ಪ್ರಕೇತೈರುರುಷ್ಯಾ ಣ ಉರುಭಿರ್ದೇವ ಶಂಸೈಃ ॥ ೧ ॥

॥ ಪದಪಾಠಃ ॥

ಸ್ವಸ್ತಿ । ನಃ । ದಿವಃ । ಅಗ್ನೇ । ಪೃಥಿವ್ಯಾಃ । ವಿಶ್ವಽಆಯುಃ । ಧೇಹಿ । ಯಜಥಾಯ । ದೇವ ।
ಸಚೇಮಹಿ । ತವ । ದಸ್ಮ । ಪ್ರಽಕೇತೈಃ । ಉರುಷ್ಯ । ನಃ । ಉರುಽಭಿಃ । ದೇವ । ಶಂಸೈಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ದೇವ ದಾನಾದಿಗುಣವಿಶಿಷ್ಟಾಗ್ನೇ ತ್ವಂ ದಿವಃ ಪೃಥಿವ್ಯಾ ದ್ಯಾವಾಪೃಥಿವ್ಯೋಃ ಸಕಾಶಾನ್ನೋಽಸ್ಮಭ್ಯಂ ವಿಶ್ವಾಯುಃ ಸರ್ವಾನ್ನಂ ಸ್ವಸ್ತಿ ಪುತ್ರಾದಿ ಯಜಥಾಯ ದೇವಯಾಗಾರ್ಥಂ ಧೇಹಿ । ಪ್ರಯಚ್ಛ । ಸರ್ವೋಪದ್ರವರಹಿತಾಃ ಸರ್ವಾನ್ನಪುತ್ರಯುಕ್ತಾಶ್ಚ ಸಂತೋ ವಯಂ ಯಥಾ ಯಜ್ವಾನೋ ಭವೇಮ ತಥಾಸ್ಮಾನ್ಕುರ್ವಿತಿ ವಾಕ್ಯಶೇಷಃ । ಅಪಿ ಚ ವಯಂ ಸಚೇಮಹಿ । ಹೇ ದಸ್ಮ ದರ್ಶನೀಯ ದೇವಾಗ್ನೇ ಉರುಭಿರ್ಬಹುಭಿಃ ಶಂಸೈಃ ಶಂಸನೀಯೈಸ್ತವ ಸಂಬಂಧಿಭಿಃ ಪ್ರಕೇತೈಃ ಪಾಲನೋಪಾಯಪ್ರಜ್ಞಾನೈರ್ನೋಽಸ್ಮಾನುರುಷ್ಯ । ರಕ್ಷ ॥

॥ ಪ್ರತಿಪದಾರ್ಥ ॥

**ದೇವ**—ದೇವತಾತ್ಮನಾದ । **ಅಗ್ನೇ**—ಎಲೈ ಅಗ್ನಿಯೇ । **ದಿವಃ**—ದ್ಯುಲೋಕದಿಂದಲೂ । **ಪೃಥಿವ್ಯಾಃ**—ಪೃಥ್ವಿಯಿಂದಲೂ । **ನಃ**—ನಮಗೆ । **ವಿಶ್ವಾಯುಃ**—ಸಕಲವಿಧವಾದ ಅನ್ನವನ್ನೂ । **ಸ್ವಸ್ತಿ**—ಪುತ್ರಾದಿ ಸಂಪತ್ತನ್ನೂ । **ಯಜಥಾಯ**—ದೇವಪೂಜಾರ್ಥವಾಗಿ । **ಧೇಹಿ**—ಒದಗಿಸಿಕೊಡು । **ದಸ್ಮ**—ಆಕರ್ಷಕವಾದ ರೂಪವುಳ್ಳವನೂ । **ದೇವ**—ದೇವತಾತ್ಮನೂ ಆದ ಎಲೈ ಅಗ್ನಿಯೇ । **ಉರುಭಿಃ**—ಪ್ರಭೂತವಾದವೂ । **ಶಂಸೈಃ**—ಪ್ರಶಂಸನೀಯವಾದವೂ ಆದ । **ತವ ಪ್ರಕೇತೈಃ**—ನಿನ್ನ ಪಾಲನಾದಿ ಸಂಕೇತಗಳಿಂದ । **ಸಚೇಮಹಿ**—ನಾವು ಒಟ್ಟುಗೂಡಿರುವಂತಾಗಲಿ । **ನಃ**—ನಮ್ಮನ್ನು । **ಉರುಷ್ಯ**—ರಕ್ಷಿಸು.

॥ ಭಾವಾರ್ಥ ॥

ದೇವತಾತ್ಮನಾದ ಎಲೈ ಅಗ್ನಿಯೇ, ದ್ಯುಲೋಕದಿಂದಲೂ ಪೃಥ್ವಿಯಿಂದಲೂ ನಮಗೆ ಸಕಲವಿಧವಾದ ಅನ್ನವನ್ನೂ ಪುತ್ರಾದಿಸಂಪತ್ತನ್ನೂ ದೇವಪೂಜಾರ್ಥವಾಗಿ ಒದಗಿಸಿಕೊಡು. ಆಕರ್ಷಕವಾದ ರೂಪವುಳ್ಳವನೂ ದೇತಾತ್ಮನೂ ಆದ ಎಲೈ ಅಗ್ನಿಯೇ, ಪ್ರಭೂತವಾದವೂ, ಪ್ರಶಂಸನೀಯವಾದವೂ ಆದ ಪಾಲನಾದಿ ನಿನ್ನ ಸಂಕೇತಗಳಿಂದ ನಾವು ಒಟ್ಟುಗೂಡಿರುವಂತಾಗಲಿ. ನಮ್ಮನ್ನು ರಕ್ಷಿಸು.

English Translation

Divine Agni, bestow upon us from earth and heaven prosperity and abundant food, that we may be able to offer sacrifices. May we be associated beautiful (Agni), with your indications (of favour) : protect us, divine Agni on account of our many hymns.

। ಸಂಹಿತಾಪಾಠಃ ।

ಇಮಾ ಅಗ್ನೇ ಮತಯಸ್ತುಭ್ಯಂ ಜಾತಾ ಗೋಭಿರಶ್ವೈರಭಿ ಗೃಣಂತಿ ರಾಧಃ ।
ಯದಾ ತೇ ಮರ್ತೋ ಅನು ಭೋಗಮಾನಡ್ವಸೋ ದಧಾನೋ ಮತಿಭಿಃ ಸುಜಾತ ॥ ೨ ॥

॥ ಪದಪಾಠಃ ॥

ಇಮಾಃ । ಅಗ್ನೇ । ಮತಯಃ । ತುಭ್ಯಂ । ಜಾತಾಃ । ಗೋಭಿಃ । ಅಶ್ವೈಃ । ಅಭಿ । ಗೃಣಂತಿ । ರಾಧಃ ।
ಯದಾ । ತೇ । ಮರ್ತಃ । ಅನು । ಭೋಗಂ । ಆನಟ್ । ವಸೋ ಇತಿ । ದಧಾನಃ । ಮತಿಽಭಿಃ । ಸುಽಜಾತ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಇಮಾ ಈದೃಶ್ಯೋ ಮತಯಃ ಸ್ತುತಯಸ್ತುಭ್ಯಂ ತ್ವದರ್ಥಂ ಜಾತಾ ಅಸ್ಮದಾದಿಸ್ತೋತೃಮುಖಾದುತ್ಪನ್ನಾಃ । ಉಚ್ಚಾರಿತಾ ಇತ್ಯರ್ಥಃ । ಗೋಭಿರಶ್ವೈಶ್ಚ ಸಹಿತಂ ರಾಧಸ್ತ್ವಯಾ ದೀಯಮಾನಂ ಹಿರಣ್ಯಾದಿಕಂ ಧನಮಭಿ ಗೃಣಂತಿ । ಅಭಿಷ್ಟುವಂತಿ । ಅಸ್ಮತ್ಸ್ತುತ್ಯನುರೂಪಾನ್ನಮಸ್ಮಭ್ಯಂ ತ್ವಯಾ ದತ್ತಮಿತಿ ಪ್ರಶಂಸಂತಿ । ಯದಾ ಮರ್ತೋಽಸ್ಮದಾದಿಕೋ ಮನುಷ್ಯಸ್ತೇ ತ್ವಯಾ ದೀಯಮಾನಂ ಭೋಗಂ ಭೋಗಾರ್ಹಂ ಧನಮನ್ವಾನಟ್ ಪ್ರಾಪ್ನೋತಿ ಲಭತೇ ತದಾ ಹೇ ವಸೋ ಪ್ರಶಸ್ಯವಸುಮನ್ । ಯದ್ವಾ । ಸ್ವೇನ ತೇಜಸಾ ಸರ್ವಸ್ಯಾಚ್ಛಾದಯಿತಃ । ಹೇ ಸುಜಾತ ಶೋಭನಕರ್ಮಾರ್ಥಮುತ್ಪನ್ನಾಗ್ನೇ ತ್ವಂ ದಧಾನೋಽಸ್ಮಭ್ಯಂ ಧನಂ ಪ್ರಯಚ್ಛನ್ ಮತಿಭಿರಸ್ಮದೀಯಾಭಿಃ ಸ್ತೂಯಸ ಇತಿ ಶೇಷಃ ॥

। ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ತುಭ್ಯಂ—ನಿನ್ನನ್ನುದ್ದೇಶಿಸಿ । ಜಾತಾಃ—ಉತ್ಪನ್ನವಾದ । ಇಮಾಃ ಮತಯಃ—ಈ ಸ್ತುತಿಗಳು । ಗೋಭಿಃ—ಗೋವುಗಳೊಡನೆಯೂ । ಅಶ್ವೈಃ—ಅಶ್ವಗಳೊಡನೆಯೂ ಕೂಡಿದ ।

**ರಾಧಃ**—ಧನವನ್ನು । **ಅಭಿ ಗೃಣಂತಿ**—ಸ್ತುತಿಸುತ್ತವೆ । **ವಸೋ**— ನಿನ್ನ ತೇಜಸ್ಸಿನಿಂದ ಎಲ್ಲವನ್ನೂ ಆವರಿಸುವ ವನೂ । **ಸುಜಾತ**—ಉತ್ತಮವಾದ ಉತ್ಪತ್ತಿಯುಳ್ಳವನೂ ಆದ ಎಲೈ ಅಗ್ನಿಯೇ । **ಯದಾ**—ಯಾವಾಗ । **ಮರ್ತಃ**—ಮಾನವನು । **ತೇ**—ನಿನ್ನಿಂದ ದತ್ತವಾದುದೂ । **ಭೋಗಂ**—ಭೋಗಾರ್ಹವಾದುದೂ ಆದ ಧನವನ್ನು । **ಆನು ಆನಟ್**—ಹೊಂದುವನೋ ಆಗ । **ದಧಾನಃ**—ನೀನು ನಮಗೂ ಧನವನ್ನು ಕೊಡುತ್ತ । **ಮತಿಭಿಃ**—ನಮ್ಮ ಸ್ತುತಿಗಳಿಂದ ಪ್ರಶಂಸಿಸಲ್ಪಡುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನನ್ನುದ್ದೇಶಿಸಿ ನಿರ್ಮಿತವಾದ ಈ ಸ್ತುತಿಗಳು ಗೋವುಗಳೊಡನೆಯೂ, ಅಶ್ವಗಳೊಡನೆಯೂ ಕೂಡಿದ ಧನವನ್ನು ಪ್ರಾರ್ಥಿಸುತ್ತವೆ. ಸ್ವತೇಜಸ್ಸಿನಿಂದ ಎಲ್ಲವನ್ನೂ ಆವರಿಸುವವನೂ ಉತ್ತಮವಾದ ಉತ್ಪತ್ತಿಯುಳ್ಳ ವನೂ ಆದ ಎಲೈ ಅಗ್ನಿಯೇ, ಯಾವಾಗ ಮಾನವನು ನಿನ್ನಿಂದ ದತ್ತವಾದುದೂ, ಭೋಗಾರ್ಹವಾದುದೂ ಆದ ಧನವನ್ನು ಹೊಂದುವನೋ ಆಗ ನೀನು ನಮಗೂ ಧನವನ್ನು ಕೊಡುತ್ತ ನಮ್ಮ ಸ್ತುತಿಗಳಿಂದ ಪ್ರಶಂಸಿಸಲ್ಪತ್ತೀಯೆ.

English Translation

These hymns, addressed, Agni, to you, praise you for wealth, together with cattle and horses : when a mortal obtains the means of enjoyment from you, (then), opulent and well-born Agni, you, who are the granter of benefits, (are celebrated) by our praises.

॥ ಸಂಹಿತಾಪಾಠಃ ॥

ಅಗ್ನಿಂ ಮನ್ಯೇ ಪಿತರಮಗ್ನಿಮಾಪಿಮಗ್ನಿಂ ಭ್ರಾತರಂ ಸದಮಿತ್ಸಖಾಯಂ ।
ಅಗ್ನೇರನೀಕಂ ಬೃಹತಃ ಸಪರ್ಯಂ ದಿವಿ ಶುಕ್ರಂ ಯಜತಂ ಸೂರ್ಯಸ್ಯ ॥

॥ ಪದಪಾಠಃ ॥

ಅಗ್ನಿಂ । ಮನ್ಯೇ । ಪಿತರಂ । ಅಗ್ನಿಂ । ಆಪಿಂ । ಅಗ್ನಿಂ । ಭ್ರಾತರಂ । ಸದಂ । ಇತ್ । ಸಖಾಯಂ ।
ಅಗ್ನೇಃ । ಅನೀಕಂ । ಬೃಹತಃ । ಸಪರ್ಯಂ । ದಿವಿ । ಶುಕ್ರಂ । ಯಜತಂ । ಸೂರ್ಯಸ್ಯ ॥ ೩ ॥

॥ ಸಾಯಣಭಾಷ್ಯಂ ॥

ಅಹಂ ಸ್ತೋತಾ ಪಿತರಮಗ್ನಿಮೇವ ಮನ್ಯೇ । ಜಾನೇ । ಆಪಿಂ ಬಂಧುಮಗ್ನಿಮೇವ ಮನ್ಯೇ । ಭ್ರಾತರಮಗ್ನಿಮೇವ ಮನ್ಯೇ । ಸದಮಿತ್ ಸದೈವಾವಿಸಂವಾದಿನಂ ಸಖಾಯಮಗ್ನಿಮೇವ ಜಾನಾಮಿ । ಬೃಹತೋ ಮಹತೋಽಗ್ನೇರನೀಕಮಾಹವನೀಯಾಖ್ಯಂ ಮುಖಂ ಸಪರ್ಯಂ । ಪರಿಚರಾಮಿ । ತತ್ರ ಲುಪ್ತೋಪಮಮೇತತ್ । ದಿವಿ ದ್ಯುಲೋಕೇ ಸ್ಥಿತಂ ಯಜತಂ ಯಷ್ಟವ್ಯಂ ಪೂಜನೀಯಂ ಸೂರ್ಯಸ್ಯ ಸಂಬಂಧಿ ಶುಕ್ರಂ ದೀಪ್ತಿಮನ್ಮಂಡಲಂ ಯಥಾ ಕಶ್ಚಿದಭಿಪ್ರೇತಾರ್ಥಸಿದ್ಧ್ಯೈ ಆರಾಧಯತಿ ತದ್ವತ್ ॥

॥ ಪ್ರತಿಪದಾರ್ಥ ॥

**ಅಹಂ**—ನಾನು | **ಅಗ್ನಿಂ**—ಅಗ್ನಿಯನ್ನು | **ಪಿತರಂ**—ನನ್ನ ತಂದೆಯೆಂದು | **ಮನ್ಯೇ**—ತಿಳಿಯುತ್ತೇನೆ | **ಅಗ್ನಿಂ**—ಅಗ್ನಿಯನ್ನು | **ಆಪಿಂ**—ಬಂಧುವನ್ನಾಗಿ ತಿಳಿಯುತ್ತೇನೆ | **ಅಗ್ನಿಂ**—ಅಗ್ನಿಯನ್ನು | **ಭ್ರಾತರಂ**—ನನ್ನ ಒಡಿಯ ಸಹೋದರನೆಂದೇ ಭಾವಿಸುತ್ತೇನೆ | **ಸದಮಿತ್**—ಸರ್ವದಾ | **ಅಗ್ನಿಂ**—ಅಗ್ನಿಯನ್ನೇ | **ಸಖಾಯಂ**—ನನ್ನ ಮಿತ್ರನೆಂದೇ ಅರಿಯುತ್ತೇನೆ | **ಯಜತಂ**—ಪೂಜಾರ್ಹವಾದುದೂ | **ಶುಕ್ರಂ**—ಪ್ರಭಾಯುತವಾದೂ ಆದ | **ಸೂರ್ಯಸ್ಯ**—ಸೂರ್ಯಮಂಡಲವನ್ನು ಆರಾಧಿಸುವಂತೆ | **ಬೃಹತಃ**—ಮಹಾತ್ಮನಾದ | **ಅಗ್ನೇಃ**—ಅಗ್ನಿಯ | **ಅನೀಕಂ**—ಮುಖವನ್ನು | **ಸಪರ್ಯಂ**—ಪೂಜಿಸುತ್ತೇನೆ.

॥ ಭಾವಾರ್ಥ ॥

ನಾನು ಅಗ್ನಿಯನ್ನೇ ನನ್ನ ಪಿತೃವೆಂದರಿಯುತ್ತೇನೆ. ಅವನೇ ನನ್ನ ಬಂಧುವೆಂದೂ, ಸಹೋದರನೆಂದೂ, ಆಪ್ತನಾದ ಮಿತ್ರನೆಂದೂ ತಿಳಿಯುತ್ತೇನೆ. ಪೂಜಾರ್ಹವಾದುದೂ, ಪ್ರಭಾಯುತವಾದುದೂ ಆದ ಸೂರ್ಯಮಂಡಲವನ್ನು ಆರಾಧಿಸುವಂತೆ ಮಹಾತ್ಮನಾದ ಅಗ್ನಿಯ ಮುಖವನ್ನು ನಾನು ಪೂಜಿಸುತ್ತೇನೆ.

English Translation

I regard Agni as a father, as a kinsman, as a brother, as a constant friend. I reverence the face of the mighty Agni, radiant in heaven, adorable as the sun.

॥ ಸಂಹಿತಾಪಾಠಃ ॥

ಸಿಧ್ರಾ ಅಗ್ನೇ ಧಿಯೋ ಅಸ್ಮೇ ಸನುತ್ರೀರ್ಯಂ ತ್ರಾಯಸೇ ದಮ ಆ ನಿತ್ಯ-
ಹೋತಾ ।
ಋತಾವಾ ಸ ರೋಹಿದಶ್ವಃ ಪುರುಕ್ಷುರ್ದ್ಯುಭಿರಸ್ಮಾ ಅಹಭಿರ್ವಾಮಮಸ್ತು ॥

॥ ಪದಪಾಠಃ ॥

ಸಿಧ್ರಾಃ । ಅಗ್ನೇ । ಧಿಯಃ । ಅಸ್ಮೇ ಇತಿ । ಸನುತ್ರೀಃ । ಯಂ । ತ್ರಾಯಸೇ । ದಮೇ । ಆ । ನಿತ್ಯಽ-
ಹೋತಾ ।
ಋತಽವಾ । ಸಃ । ರೋಹಿತ್ಽಅಶ್ವಃ । ಪುರುಽಕ್ಷುಃ । ದ್ಯುಽಭಿಃ । ಅಸ್ಮೈ । ಅಹಽಭಿಃ । ವಾಮಂ । ಅಸ್ತು ॥

। ಸಾಯಣಭಾಷ್ಯಂ ।

ಹೇ ಅಗ್ನೇ ಸನುತ್ರೀಃ ಸಂಭಕ್ತ್ರ್ಯೋಽಸ್ಮೇ ಅಸ್ಮಾಕಂ ಸಂಬಂಧಿನ್ಯೋ ಧಿಯಃ ಸ್ತುತಯಃ ಸಿಧ್ರಾಃ ಸಿದ್ಧಾ ನಿಷ್ಪನ್ನಾಃ । ತ್ವದರ್ಥಮಸ್ಮಾಭಿಃ ಕೃತಾ ಇತ್ಯರ್ಥಃ । ದಮ ಆ ಅಸ್ಮದ್ಯಜ್ಞಗೃಹೇ ಮರ್ಯಾದತ-

ಯೋವಸ್ಥಿತೆಸ್ತ್ವಂ ನಿತ್ಯಹೋತಾ ಸತತಂ ಹೋಮನಿಷ್ಪಾದಕೋ ದೇವಾನಾಮಾಹ್ವಾತಾ ವಾ ಸನ್ ಯಂ ತ್ರಾಯಸೇ ಕರ್ಮಣ್ಯೈಗುಣ್ಯಾದ್ರಕ್ಷಸಿ ಸೋಽಹಂ ತ್ವತ್ಪ್ರಸಾದಾತ್ತ್ವತ್ಸಾಯುಜ್ಯಂ ಗತಃ ಸನ್ನೃತವಾ ಯಜ್ಞವಾನ್ ಸತ್ಯವಾನ್ ವಾ ಸ್ಯಾಮಿತಿ ಶೇಷಃ ರೋಹಿದಶ್ವೋ ರೋಹಿತ್ಸಂಜ್ಞಕಾಶ್ವಃ ಪುರುಕ್ಷುರ್ಬಹ್ವನ್ನಶ್ಚ ಸ್ಯಾಂ । ಕಿಂಚಾಸ್ಮಾ ಈದೃಗ್ಭೂತಾಯ ತುಭ್ಯಂ ದ್ಯುಭಿರ್ದೀಪ್ತೈರಹಭಿರಹಃಸು ದಿವಸೇಷು ವಾಮಂ ವನನೀಯಂ ಹವಿರಸ್ತು ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಸನುತ್ರೀಃ—ಭಕ್ತಿಯುತವಾದ । ಅಸ್ಮೇ ಧಿಯಃ—ನಮ್ಮ ಸ್ತುತಿಗಳು ಸಿಧ್ರಾಃ—ನಿನಗಾಗಿಯೇ ನಿರ್ಮಿತವಾಗಿವೆ । ದಮ ಆ—ನಮ್ಮ ಯಾಗಗೃಹದಲ್ಲಿ । ನಿತ್ಯಹೋತಾ—ಸರ್ವದಾ ಹೋತೃವಾಗಿರುವ ನೀನು । ಯಂ—ಯಾವ ನನ್ನನ್ನು । ತ್ರಾಯಸೇ—ರಕ್ಷಿಸುವೆಯೋ । ಸಃ—ಆ ನಾನು । ಋತವಾ—ಸರ್ವದಾ ಯಜ್ಞವಂತನಾಗಿರುವಂತಾಗಲಿ । ರೋಹಿದಶ್ವಃ—ಹೊಂಬಣ್ಣದ ಅಶ್ವವುಳ್ಳವನಾಗಿಯೂ । ಪುರುಕ್ಷುಃ—ಪ್ರಭೂತವಾದ ಅನ್ನವುಳ್ಳವನಾಗಿಯೂ ಆಗುವಂತಾಗಲಿ । ಅಸ್ಮೈ—ನಿನಗೆ । ದ್ಯುಭಿಃ—ಪ್ರಕಾಶಮಾನಗಳಾದ । ಅಹಭಿಃ—ದಿವಸಗಳಲ್ಲಿ । ವಾಮಂ—ಆಕರ್ಷಕವಾದ ಹವಿಸ್ಸು । ಅಸ್ತು—ಅರ್ಪಿತವಾಗಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಭಕ್ತಿಯುತವಾದ ನಮ್ಮ ಸ್ತುತಿಗಳು ನಿನಗಾಗಿಯೇ ನಿರ್ಮಿತವಾಗಿವೆ. ನಮ್ಮ ಯಾಗಗೃಹದಲ್ಲಿ ಸರ್ವದಾ ಹೋತೃವಾಗಿರುವ ನೀನು ಯಾವ ನನ್ನನ್ನು ರಕ್ಷಿಸುವೆಯೋ ಆ ನಾನು ಸರ್ವದಾ ಯಜ್ಞವಂತನಾಗಿರುವಂತಾಗಲಿ. ಹೊಂಬಣ್ಣದ ಅಶ್ವವುಳ್ಳವನಾಗಿಯೂ, ಪ್ರಭೂತವಾದ ಅನ್ನವುಳ್ಳವನಾಗಿಯೂ ಆಗುವಂತಾಗಲಿ. ನಿನಗೆ ಪ್ರಕಾಶಮಾನವಾದ ದಿವಸಗಳಲ್ಲಿ ಆಕರ್ಷಕವಾದ ಹವಿಸ್ಸು ಅರ್ಪಿತವಾಗಲಿ.

## English Translation

Agni, our earnest praises have been composed for you. May he whom you, the perpetual invoker of the gods, protect in the sacrificial chamber, be rich in sacrifices, the master of red steeds, the possessor of abundant food ; may the desirable (oblation) be granted him on shining days.

॥ ಸಂಹಿತಾಪಾಠಃ ॥

ದ್ಯುಭಿರ್ಹಿತಂ ಮಿತ್ರಮಿವ ಪ್ರಯೋಗಂ ಪ್ರತ್ನಮೃತ್ವಿಜಮಧ್ವರಸ್ಯ ಜಾರಂ ।
ಬಾಹುಭ್ಯಾಮಗ್ನಿಮಾಯವೋಽಜನಂತ ವಿಕ್ಷು ಹೋತಾರಂ ನ್ಯಸಾದಯಂತ ॥

॥ ಪದಪಾಠಃ ॥

ದ್ಯುಽಭಿಃ । ಹಿತಂ । ಮಿತ್ರಂಽಇವ । ಪ್ರಽಯೋಗಂ । ಪ್ರತ್ನಂ । ಋತ್ವಿಜಂ । ಅಧ್ವರಸ್ಯ । ಜಾರಂ ।
ಬಾಹುಽಭ್ಯಾಂ । ಅಗ್ನಿಂ । ಆಯವಃ । ಅಜನಂತ । ವಿಕ್ಷು । ಹೋತಾರಂ । ನಿ । ಅಸಾದಯಂತ ॥ ೫ ॥

॥ ಸಾಯಣಭಾಷ್ಯಂ ॥

ದ್ಯುಭಿರ್ಹಿತಂ ದೀಪ್ತ್ಯೈರಾಹಿತಂ ಮಿತ್ರಮಿವ ಸ್ನಿಗ್ಧಮಿವ ಪ್ರಯೋಗಂ ಪ್ರಯೋಕ್ತವ್ಯಂ ಪ್ರತ್ನಂ ಪುರಾಣಮೃತ್ವಿಜಂ ಹೋತೃಸಂಜ್ಞಕಂ । ಅಗ್ನಿರ್ವೈ ದೇವಾನಾಂ ಹೋತಾಸೀದಿತಿ ಶ್ರುತೇಃ । ಅಧ್ವರಸ್ಯ ಜಾರಂ ಸಮಾಪಯಿತಾರಂ ಏವಂಭೂತಮಗ್ನಿಮಾಯವೋ ಯಜಮಾನಾ ಮನುಷ್ಯಾ ಬಾಹುಭ್ಯಾಮಜನಂತ । ಜನಿತವಂತಃ । ಕಿಂಚ ವಿಕ್ಷು ಮನುಷ್ಯೇಷು । ತದಾಕಾರೇಷು ದೇವೇಷ್ವಿತ್ಯರ್ಥಃ । ಹೋತಾರಮಾಹ್ವಾತಾರಂ ನ್ಯಸಾದಯಂತ । ನಿಯಮೇನ ಸಾದಿತವಂತಃ । ದೇವಾನಾಂ ಯಾಗಾರ್ಥಂ ನಿರೂಪಿತವಂತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ದ್ಯುಭಿಃ**—ಪ್ರಭೆಗಳಿಂದ । **ಹಿತಂ**—ಆವೃತನೂ । **ಮಿತ್ರಮಿವ**—ಮಿತ್ರನಂತೆ । **ಪ್ರಯೋಗಂ**—ಉಪಕಾರಕನೂ । **ಪ್ರತ್ನಂ**—ಪುರಾತನನೂ । **ಋತ್ವಿಜಂ**—ಹೋತೃರೂಪನಾದ ಋತ್ವಿಕ್ಕೂ । **ಅಧ್ವರಸ್ಯ**—ಯಜ್ಞಕ್ಕೆ । **ಜಾರಂ**—ನಿರ್ವಾಹಕನೂ ಆದ । **ಅಗ್ನಿಂ**—ಅಗ್ನಿಯನ್ನು । **ಆಯವಃ**—ಮಾನವರು (ಯಜಮಾನರು) । **ಬಾಹುಭ್ಯಾಂ**—ತಮ್ಮ ತೋಳುಗಳಿಂದ । **ಅಜನಂತ**—ಉತ್ಪನ್ನ ಮಾಡಿದ್ದಾರೆ । **ವಿಕ್ಷು**—ಮಾನವರ ನಡುವೆ । **ಹೋತಾರಂ**—ಹೋತೃರೂಪನನ್ನಾಗಿ । **ನ್ಯಸಾದಯಂತ**—ಸ್ಥಾಪಿಸಿದ್ದಾರೆ.

॥ ಭಾವಾರ್ಥ ॥

ಪ್ರಭೆಗಳಿಂದ ಆವೃತನೂ, ಮಿತ್ರನಂತೆ ಉಪಕಾರಕನೂ, ಪುರಾತನನೂ, ಹೋತೃರೂಪನಾದ ಋತ್ವಿಕ್ಕೂ, ಯಜ್ಞಕ್ಕೆ ನಿರ್ವಾಹಕನೂ ಆದ ಅಗ್ನಿಯನ್ನು ಯಜಮಾನರು ತಮ್ಮ ತೋಳುಗಳಿಂದ ಕಡೆದು ಉತ್ಪನ್ನಮಾಡಿದ್ದಾರೆ. ಮಾನವರ ನಡುವೆ ಹೊತೃವನ್ನಾಗಿ ಸ್ಥಾಪಿಸಿದ್ದಾರೆ

English Translation

Men have generated with their arms Agni, who is decorated with rays of light, selected as a friend, the ancient priest, the accomplisher of the sacrifice, and they have appointed him amongst people, the invoker of the gods.

॥ ಸಂಹಿತಾಪಾಠಃ ॥

ಸ್ವಯಂ ಯಜಸ್ವ ದಿವಿ ದೇವ ದೇವಾನ್ಕಿಂ ತೇ ಪಾಕಃ ಕೃಣವದಪ್ರಚೇತಾಃ ।
ಯಥಾಯಜ ಋತುಭಿರ್ದೇವ ದೇವನೇವಾ ಯಜಸ್ವ ತನ್ವಂ ಸುಜಾತ ॥ ೭ ॥

॥ ಪದಪಾಠಃ ॥

ಸ್ವಯಂ । ಯಜಸ್ವ । ದಿವಿ । ದೇವ । ದೇವಾನ್ । ಕಿಂ ತೇ । ಪಾಕಃ । ಕೃಣವತ್ । ಅಪ್ರಚೇತಾಃ ।

ಯಥಾ । ಅಯಜಃ । ಋತುಽಭಿಃ । ದೇವ । ದೇವಾನ್ । ಏವ । ಯಜಸ್ವ । ತನ್ವಂ । ಸುಽಜಾತ ॥ ೭ ॥

॥ ಸಾಯಣಭಾಷ್ಯಂ ॥

ಹೇ ದೇವ ದ್ಯೋತಮಾನಾಗ್ನೇ ತ್ವಂ ದಿವಿ ದ್ಯುಲೋಕೇ ಸ್ಥಿತಾನ್ದೇವಾನಿಂದ್ರಾದೀನ್ ಸ್ವಯ-ಮಾತ್ಮನೈವ ಯಜಸ್ವ । ಪಾಕಃ ಪಕ್ತವ್ಯಪ್ರಜ್ಞೋಽಪ್ರಚೇತಾ ಅಪ್ರಕೃಷ್ಟಜ್ಞಾನೋ ಮನುಷ್ಯಸ್ತೇ ತವ ಕಿಂ ಕೃಣವತ್ । ಕಿಂ ಕರೋತಿ । ತ್ವಯಾನಧಿಷ್ಠಿತಃ ಕಿಂಚಿದಪಿ ನ ಜಾನಾತೀತ್ಯರ್ಥಃ । ಕಿಂಚ ಹೇ ದೇವ ತ್ವಮೃತುಭಿಃ ಕಾಲವಿಶೇಷೈರ್ದೇವಾನ್ಯಥಾಯಜಃ ಇಷ್ಟವಾನಸಿ ಏವ್ಮೇವಂ ಹೇ ಸುಜಾತ ಶೋಭನ-ಜನ್ಮನ್ನಗ್ನೇ ತನ್ವಮಾತ್ಮಾನಮಪಿ ಯಜಸ್ವ ॥

॥ ಪ್ರತಿಪದಾರ್ಥ ॥

**ದೇವ**—ಪ್ರಕಾಶಮಾನನಾದ ಎಲೈ ಅಗ್ನಿಯೇ । **ದಿವಿ**—ದ್ಯುಲೋಕಸ್ಥರಾದ । **ದೇವಾನ್**—ದೇವತೆಗಳನ್ನು । **ಸ್ವಯಂ**—ನೀನಾಗಿಯೇ । **ಯಜಸ್ವ**—ಪೂಜಿಸು । **ಪಾಕಃ**—ಅಪರಿಪಕ್ವವಾದ ಬುದ್ಧಿಯುಳ್ಳವನೂ । **ಅಪ್ರಚೇತಾಃ**—ಉತ್ತಮವಾದ ಜ್ಞಾನವಿಲ್ಲದವನೂ ಆದ ಪುರುಷನು । **ತೇ**—ನಿನ್ನ ಮಹಿಮೆಯನ್ನರಿತು । **ಕಿಂ ಕೃಣವತ್**—ಯಾವರೀತಿ ಪೂಜಿಸಬಲ್ಲನು ? । **ದೇವ**—ಎಲೈ ಅಗ್ನಿಯೇ । **ಋತುಭಿಃ**—ಆಯಾ ಕಾಲಾನುಗುಣವಾಗಿ । **ದೇವಾನ್**—ದೇವತೆಗಳನ್ನು । **ಯಥಾ ಅಯಜಃ**—ಯಾವ ರೀತಿ ಪೂಜಿಸಿದ್ದೀಯೋ । **ಏವ**—ಅದೇ ರೀತಿ । **ಸುಜಾತ**—ಉತ್ತಮವಾದ ಉತ್ಪನ್ನವುಳ್ಳ ಎಲೈ ಅಗ್ನಿಯೇ । **ತನ್ವಂ**—ನಿನ್ನನ್ನೂ ಸಹ । **ಯಜಸ್ವ**—ಪೂಜಿಸಿಕೋ.

॥ ಭಾವಾರ್ಥ ॥

ಪ್ರಕಾಶವಾನನಾದ ಎಲೈ ಅಗ್ನಿಯೇ. ದ್ಯುಲೋಕಸ್ಥರಾದ ದೇವತೆಗಳನ್ನು ನೀನಾಗಿಯೇ ಪೂಜಿಸು. ಅಪರಿಪಕ್ವವಾದ ಬುದ್ಧಿಯುಳ್ಳವನೂ, ಉತ್ತಮವಾದ ಜ್ಞಾನವಿಲ್ಲದವನೂ ಆದ ಪುರುಷನು ನಿನ್ನ ಮಹಿಮೆಯನ್ನರಿಯದೇ ಇರುವುದರಿಂದ ನಿನ್ನನ್ನು ಉತ್ತಮವಾಗಿ ಪೂಜಿಸಲಾರನು. ಎಲೈ ಅಗ್ನಿಯೇ, ಆಯಾ ಕಾಲಾನುಗುಣವಾಗಿ ನೀನು ದೇವತೆಗಳನ್ನು ಯಾವ ರೀತಿ ಪೂಜಿಸಿದ್ದೀಯೋ ಅದೇ ರೀತಿ ಉತ್ತಮವಾದ ಉತ್ಪನ್ನವುಳ್ಳ ಎಲೈ ಅಗ್ನಿಯೇ, ನಿನ್ನನ್ನೂ ಸಹ ಪೂಜಿಸಿಕೋ.

## English Translation

Offer sacrifice yourself, divine (Agni), to the gods in heaven : what can one who is ignorant and of immature undestanding effect for you ? As in due seasons, divine (Agni), you have sacrificed to the gods, so you, well-engendered (Agni), sacrifice to your own person.

॥ ಸಂಹಿತಾಪಾಠಃ ॥

ಭವಾ ನೋ ಅಗ್ನೇಽವಿತೋತ ಗೋಪಾ ಭವಾ ವಯಸ್ಕೃದುತ ನೋ ವಯೋಧಾಃ ।
ರಾಸ್ವಾ ಚ ನಃ ಸುಮಹೋ ಹವ್ಯದಾತಿಂ ತ್ರಾಸ್ವೋತ ನಸ್ತನ್ವೋ೩ ಅಪ್ರಯುಚ್ಛನ್ ॥ ೭ ॥

॥ ಪದಪಾಠಃ ॥

ಭವ । ನಃ । ಅಗ್ನೇ । ಅವಿತಾ । ಉತ । ಗೋಪಾಃ । ಭವ । ವಯಃಽಕೃತ್ । ಉತ । ನಃ । ವಯಃಽಧಾಃ ।
ರಾಸ್ವ । ಚ । ನಃ । ಸುಽಮಹಃ । ಹವ್ಯಽದಾತಿಂ । ತ್ರಾಸ್ವ । ಉತ । ನಃ । ತನ್ವಃ । ಅಪ್ರಽಯುಚ್ಛನ್ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ನೋಽಸ್ಮಾಕಮವಿತಾ ದೃಷ್ಟಭಯೇಭ್ಯೋ ರಕ್ಷಕೋ ಭವ । ಭೂಯಾಃ । ಉತಾಪಿ ಚ ಗೋಪಾ ಅದೃಷ್ಟಭಯೇಭ್ಯೋ ಗೋಪ್ತಾ ರಕ್ಷಕೋ ಭವ । ಉತಾಪಿ ಚ ವಯಸ್ಕೃದನ್ನಸ್ಯ ಕರ್ತಾ ಭವ । ವಯೋಧಾ ಅನ್ನಸ್ಯ ದಾತಾ ಭವ । ಹೇ ಸುಮಹಃ ಸುಷ್ಠು ಪೂಜನೀಯಾಗ್ನೇ ತ್ವಂ ಸ್ವಭೂತಾಂ ಹವ್ಯದಾತಿಂ ಹವಿಷೋ ದಾತಿಂ ನೋಽಸ್ಮಭ್ಯಂ ರಾಸ್ವ ಚ । ಪ್ರಯಚ್ಛ । ಉತಾಪಿ ಚ ನೋಽಸ್ಮಾಕಂ ಸ್ವಭೂತಾಸ್ತನ್ವಃ ಶರೀರಾಣ್ಯಪ್ರಯುಚ್ಛನ್ನಪ್ರಮಾದ್ಯಂಸ್ತ್ರಾಸ್ವ । ಪಾಲಯ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ನಃ**—ನಮಗೆ । **ಅವಿತಾ**—ರಕ್ಷಕನಾಗಿ । **ಭವ**—ಆಗು । **ಉತ**—ಮತ್ತು । **ಗೋಪಾಃ**—ನಮ್ಮ ರಕ್ಷಕನಾಗಿರು । ಉತ—ಮತ್ತು । **ವಯಸ್ಕೃತ್**—ನಮಗೆ ಅನ್ನವನ್ನು ಉತ್ಪನ್ನಮಾಡುವವನಾಗಿ । **ಭವ**—ಆಗಿರು । **ವಯೋಧಾಃ**—ಅನ್ನದಾತನಾಗಿರು । **ಸುಮಹಃ**—ಉತ್ತಮವಾದ ಪೂಜೆಗೆ ಅರ್ಹನಾದ ಎಲೈ ಅಗ್ನಿಯೇ । **ನಃ**—ನಮಗೆ । **ಹವ್ಯದಾತಿಂ**—ಹವಿರ್ದಾನಕ್ಕೆ ಅರ್ಹತೆಯನ್ನು । **ರಾಸ್ವ**—ಕೊಡು । **ಉತ**—ಮತ್ತು । **ನಃ**—ನಮ್ಮ । **ತನ್ವಃ**—ಶರೀರಗಳನ್ನು । **ಅಪ್ರಯುಚ್ಛನ್**—ಜಾಗರೂಕನಾಗಿ । **ತ್ರಾಸ್ವ**—ರಕ್ಷಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮಗೆ ರಕ್ಷಕನಾಗಿರು. ನಮ್ಮ ಎಲ್ಲಾ ಆಪತ್ತುಗಳನ್ನು ದೂರಮಾಡಿ ರಕ್ಷಿಸು. ನಮಗೆ ಅನ್ನವನ್ನು ಉತ್ಪನ್ನಮಾಡಿ ಅದನ್ನು ದಾನಮಾಡು. ಉತ್ತಮವಾದ ಪೂಜೆಗೆ ಅರ್ಹನಾದ ಎಲೈ ಅಗ್ನಿಯೇ, ನಮಗೆ ಹವಿರ್ದಾನಕ್ಕೆ ಅರ್ಹತೆಯನ್ನು ಕೊಡು. ನಮ್ಮ ಶರೀರಗಳನ್ನು ಜಾಗರೂಕನಾಗಿ ರಕ್ಷಿಸು.

## English Translation

Be our protector, Agni, (in obvious peril) : be our presever (in un, seen danger), be the provider and giver of sustenance ; bestow upon us- mighty Agni, the donation of oblations, and ever attentive, protect our persons.

|| ವಿಶೇಷವಿಷಯಗಳು ||

ಸೂಕ್ತದ ಉಪಸಂಹಾರರೂಪವಾದ ಈ ಋಕ್ಕಿನಲ್ಲಿ ರಕ್ಷಣೆಯನ್ನೂ ಅನ್ನಾದ್ಯಾಹಾರಗಳನ್ನೂ ಕೊಟ್ಟು ದೇವತೆಗಳಿಗೆ ಆಹುತ್ಯಾದಿಗಳನ್ನು ಅರ್ಪಿಸಲು ಅರ್ಹತೆಯನ್ನುಂಟುಮಾಡಿ ಸದಾಕಾಲದಲ್ಲಿಯೂ ರಕ್ಷಿಸಬೇಕೆಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ. ಇಲ್ಲಿ ರಕ್ಷಣೆಯೆಂದರೆ ಕಣ್ಣಿಗೆ ಕಾಣಿಸುವ ಶತ್ರುಗಳಿಂದಲೂ, ದುಷ್ಟಮೃಗಗಳಿಂದಲೂ ಕಾಪಾಡುವುದು ಒಂದುವಿಧ ರಕ್ಷಣೆಯೆಂದೂ, ಕಣ್ಣಿಗೆ ಕಾಣಿಸದಿರುವ ವ್ಯಾಧಿ ಮುಂತಾದವುಗಳಿಂದಲೂ, ಪಾಪಗಳಿಂದಲೂ ರಕ್ಷಿಸುವುದು ಇನ್ನೊಂದುವಿಧವಾದ ರಕ್ಷಣೆಯೆಂದೂ ರಕ್ಷಣೆಯಲ್ಲಿ ಎರಡುವಿಧಗಳನ್ನು ಭಾಷ್ಯಕಾರರು ವಿವರಿಸಿದ್ದಾರೆ.

# ಎಂಟನೆಯ ಸೂಕ್ತವು

## ಪೀಠಿಕೆ.

ಈ ಸೂಕ್ತಕ್ಕೂ ಇದರ ಮುಂದಿನ ಸೂಕ್ತಕ್ಕೂ ತ್ವಷ್ಟೃಪುತ್ರನಾದ ತ್ರಿಶಿರಾಃ ಎಂಬುವನು ಋಷಿಯು. ಈ ತ್ರಿಶಿರಾ ಎಂಬುವನು ಪೂರ್ವದಲ್ಲಿ ದೇವತೆಗಳಿಗೆ ಪುರೋಹಿತನಾಗಿದ್ದನು. ಇವನಿಗೆ ಅಸುರರ ಸಂಬಂಧವಿತ್ತು ಎಂದರೆ ಅಸುರರ ಕನ್ಯೆಯಲ್ಲಿ ಉತ್ಪನ್ನನಾಗಿದ್ದನು. ಆದ್ದರಿಂದ ಇವನಿಗೆ ಅಸುರರ ವಿಷಯದಲ್ಲಿಯೂ ಅಭಿಮಾನವಿತ್ತು. ಅಸುರಪಕ್ಷಪಾತಿಯಾದ ಇವನು ದೇವತೆಗಳಿಗೆ ಹೇಗಾದರೂ ಕೇಡನ್ನುಮಾಡಬಹುದೆಂದು ಇಂದ್ರನು ಹೆದರಿ ಇವನನ್ನು ಸಂಹರಿಸಬೇಕೆಂದು ಇಷ್ಟಪಟ್ಟನು. ಈ ವಿಷಯದಲ್ಲಿ ತ್ರಿತನೂ (ತ್ರಿತ ಆಪ್ತ್ಯಃ ಎಂಬ ಋಷಿಯೂ) ಇವನಿಗೆ ಸಹಾಯಕನಾದನು. ಈ ತ್ರಿತನಿಗಾಗಿಯೇ ಎಂದರೆ ತ್ರಿತನನ್ನು ಸಂತೋಷಪಡಿಸುವುದಕ್ಕಾಗಿಯೇ ಇಂದ್ರನು ಇವನನ್ನು ಸಂಹರಿಸಿದನೆಂದು ಕೆಲವುಕಡೆ ಹೇಳಿದೆ.

ಅಸ್ಮಭ್ಯಂ ತತ್ತ್ವಾಷ್ಟ್ರಂ ವಿಶ್ವರೂಪಮರಂಧಯಃ ಸಾಖ್ಯಸ್ಯ ತ್ರಿತಾಯ ||

(ಋ. ಸಂ. ೨-೧೧-೧೯)

ಎಂಬ ಋಕ್ಕಿನಲ್ಲಿ ತ್ರಿತನ ಮೇಲಿನ ಸ್ನೇಹಕ್ಕಾಗಿಯೇ ಇಂದ್ರನು ವಿಶ್ವರೂಪನನ್ನು ಸಂಹರಿಸಿದನೆಂದು ಹೇಳಿದೆ. ಬೃಹದ್ದೇವತೆಯಲ್ಲಿ (ಆರನೆಯ ಅಧ್ಯಾಯದಲ್ಲಿ) ಇವನ ವಿಷಯವಾಗಿ ಈ ರೀತಿ ಹೇಳಿದೆ—

ಪ್ರ ಕೇತುನೇತಿ ತ್ವಾಷ್ಟ್ರಸ್ತು ತ್ರಿಶಿರಾಃ ಸೂಕ್ತಮುತ್ತರಂ || ೧೪೭ ||
ಋಚಸ್ತ್ವಸ್ಯ ಷಳಾಗ್ನೇಯ್ಯಂ ತೃಚಸ್ತ್ವಸ್ಯೇತಿ ಯಃ ಪರಃ |
ತೇನೇಂದ್ರಮಭಿತುಷ್ಟಾವ ಸ್ವಸ್ಯಾಂತೇ ಇತಿ ನಃ ಶ್ರುತಿಃ || ೧೪೮ ||

ಪ್ರಕೇತುನಾ ಎಂಬ ಈ ಸೂಕ್ತಕ್ಕೆ ತ್ವಷ್ಟೃಪುತ್ರನಾದ ತ್ರಿಶಿರಾಃ ಎಂಬುವನು ಋಷಿಯು. ಈ ಸೂಕ್ತದ ಮೊದಲಿನ ಆರು ಋಕ್ಕುಗಳಲ್ಲಿ ಅಗ್ನಿಯನ್ನೂ, ಮುಂದಿನ ಮೂರು ಋಕ್ಕುಗಳಲ್ಲಿ ಇಂದ್ರನನ್ನೂ ಈ ಋಷಿಯು ಸ್ತುತಿಸಿರುವನು.

ಅಭವತ್ಸ ಹಿ ದೇವಾನಾಂ ಪುರೋಧಾಃ ಪ್ರಿಯಕಾಮ್ಯಯಾ ।
ಅಸುರಾಣಾಂ ಸ್ವಸುಃ ಪುತ್ರಸ್ತ್ರಿಶಿರಾ ವಿಶ್ವರೂಪಧೃಕ್ ॥ ೧೪೯ ॥
ತಮೃಷಿಂ ಪ್ರಹಿತಂ ತ್ವಿಂದ್ರೋ ದೇವೇಷು ಬುಬುಧೇಽಸುರೈಃ ।
ಸೋಽಸ್ಯ ವಜ್ರೇಣ ತಾನ್ಯಾಶು ಶಿರಾಂಸಿ ತ್ರೀಣ್ಯಥಾಚ್ಛಿದತ್ ॥ ೧೫೦ ॥

ಈ ತ್ರಿಶಿರಾಃ ಎಂಬ ಋಷಿಯು ಪೂರ್ವದಲ್ಲಿ ದೇವತೆಗಳ ಪುರೋಹಿತನಾಗಿದ್ದನು. ಇವನು ಅಸುರರಿಗೆ ಸೋದರಿಯ ಪುತ್ರನಾದ್ದರಿಂದ ಇವನು ಅಸುರರ ಪಕ್ಷಪಾತಿಯಾಗಿಯೇ ಇದ್ದನು. ದೇವತೆಗಳಿಗೆ ಈ ವಿಷಯವು ತಿಳಿದು ಅಸುರರೇ ತಮ್ಮ ಅನುಕೂಲಕ್ಕೋಸ್ಕರ ಇವನನ್ನು ದೇವತೆಗಳ ಗುಟ್ಟನ್ನು ತಿಳಿದುಕೊಳ್ಳುವುದಕ್ಕಾಗಿ ವಿಶ್ವರೂಪ ಎಂಬ ಹೆಸರಿನಿಂದ ಗೂಢಚಾರನಾಗಿರುವಂತೆ ದೇವತೆಗಳ ಮಧ್ಯದಲ್ಲಿ ಪುರೋಹಿತನನ್ನಾಗಿ ಸ್ಥಾಪಿಸಿರಬಹುದೆಂದು ದೇವತೆಗಳಿಗೆ ಅನುಮಾನ ಉಂಟಾಯಿತು. ಆದ್ದರಿಂದ ಇಂದ್ರನು ತನ್ನ ವಜ್ರಾಯುಧವನ್ನು ಹಿಡಿದುಕೊಂಡು ಈ ತ್ರಿಶಿರನ ಮೂರು ಶಿರಸ್ಸುಗಳನ್ನು ಕತ್ತರಿಸಿಹಾಕಿದನು.

ತಸ್ಯ ಯತ್ಸೋಮಪಾನಂ ತು ಮುಖಂ ಸೋಽಭೂತ್ಕಪಿಂಜಲಃ ।
ಕಲವಿಂಕಃ ಸುರಾಪಾಣಾಂ ಅನ್ನಾದಂ ತಿತ್ತಿರಿಸ್ತ್ವಭೂತ್ ॥ ೧೫೧ ॥

ಆ ತ್ರಿಶಿರನ ಮೂರು ಶಿರಸ್ಸುಗಳಲ್ಲಿ ಸೋಮಪಾನಮಾಡುತ್ತಿದ್ದ ಮುಖವು ಕಪಿಂಜಲವೆಂಬ ಪಕ್ಷಿಯಾಯಿತು. ಸುರಾಪಾನಮಾಡುತ್ತಿದ್ದ ಮುಖವು ಕಲವಿಂಕ ಎಂಬ ಪಕ್ಷಿಯಾಯಿತು. ಅನ್ನವನ್ನು ತಿನ್ನುತ್ತಿದ್ದ ಮುಖವು ತಿತ್ತಿರಿ ಎಂಬ ಪಕ್ಷಿಯಾಯಿತು.

ತಂ ವಾಗಭ್ಯವದದ್ಬ್ರಹ್ಮೀ ಬ್ರಹ್ಮಹಾಸಿ ಶತಕ್ರತೋ ।
ಪ್ರಪನ್ನಂ ಹತವಾನ್ಯಸ್ಮಾದ್ವಿಶ್ವರೂಪಂ ಪರಾಙ್ಮುಖಂ ॥ ೧೫೨ ॥

ಆ ಕಾಲದಲ್ಲಿ ಒಂದು ಅಶರೀರವಾಣಿಯು ಕೇಳಿಸಿತು. ಅದು ಇಂದ್ರನನ್ನು ಕುರಿತು—ಎಲೈ ಇಂದ್ರನೇ, ನೀನು ಪರಾಙ್ಮುಖನಾಗಿದ್ದ ಎಂದರೆ ಎದುರಾಗಿಲ್ಲದೆ ಬೇರೆಕಡೆ ತಿರುಗಿಕೊಂಡಿದ್ದ ವಿಶ್ವರೂಪನನ್ನು ಹಿಂಭಾಗದಿಂದ ಹೋಗಿ ಅವನನ್ನು ಕೊಂದಿರುವೆ. ಇವನು ಬ್ರಾಹ್ಮಣನಾದ್ದರಿಂದ ನಿನಗೆ ಬ್ರಹ್ಮಹತ್ಯಾದೋಷವು ಬಂದಿದೆ ಎಂದು ಹೇಳಿತು.

ತಮಭ್ಯಸಿಂಚತ್ಸೂಕ್ತೇನ ಋಷಿರಾಪ ಇತಿ ಸ್ವಯಂ ।
ಸಿಂಧುದ್ವೀಪೋಽಪನುತ್ತ್ಯರ್ಥಂ ತಸ್ಯಾಶ್ಲೀಲಸ್ಯ ಪಾಪ್ಮನಃ ॥ ೧೫೩ ॥

(ಬೃ. ದೇ. ೬ನೇ ಅಧ್ಯಾಯ)

ಈ ಪಾಪಪರಿಹಾರಾರ್ಥವಾಗಿ ಇಂದ್ರನು ಮುಂದಿನ ಸೂಕ್ತದ ಋಷಿಯಾದ ಸಿಂಧುದ್ವೀಪ ಋಷಿಯನ್ನು ಪ್ರಾರ್ಥಿಸಲು ಆ ಋಷಿಯು ಆಪೋ ಹಿ ಷ್ಠಾ ಎಂಬ ಒಂಬತ್ತು ಋಕ್ಕಿನ ಸೂಕ್ತಪಠನದಿಂದ (ಋ. ಸಂ. ೧೦-೯ನೇ ಸೂಕ್ತ) ಉದಕ

ವನ್ನು ತೆಗೆದುಕೊಂಡು ಅಭಿಮಂತ್ರಿಸಿ ಇಂದ್ರನಿಗೆ ಸ್ನಾನಮಾಡಿಸಿದನು. ಆದರಿಂದ ಇಂದ್ರನ ಪಾಪವು ಪರಿಹಾರವಾಯಿತು ಎಂದು ಹೇಳಿದೆ. ತೈತ್ತಿರೀಯಸಂಹಿತೆಯಲ್ಲಿ ಈ ವಿಷಯವು ಸ್ವಲ್ಪ ವ್ಯತ್ಯಸ್ತವಾಗಿ ವಿವರಿಸಲ್ಪಟ್ಟಿದೆ. ಅದನ್ನೂ ಮುಂದೆ ವಿವರಿಸುತ್ತೇವೆ.

ಈ ಸೂಕ್ತದಲ್ಲಿ ತ್ರಿತನೆಂಬ ರಾಜರ್ಷಿಗಾಗಿ ವಿಶ್ವರೂಪನೆಂಬ ತ್ವಷ್ಟೃವಿನ ಮಗನನ್ನು ಸಂಹರಿಸಿದೆ ಎಂದು ಋಷಿಯು ಇಂದ್ರನನ್ನು ಸ್ತುತಿಸಿರುವರು. ಈ ತ್ರಿತನು ಯಾರು, ಇವನ ವಿಷಯವೇನು ಎಂದು ಮುಂತಾದ ಇವನಿಗೆ ಸಂಬಂಧಿಸಿದ ಅನೇಕವಿಷಯಗಳನ್ನು ನಾವು ಹಿಂದೆಯೇ ಎಂದರೆ ಇದೇ ಭಾಗದ ಪುಟ 187, ಭಾಗ ೮ ಪುಟ. 443 ಮತ್ತು 473 ಇತ್ಯಾದಿ ಸ್ಥಳಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ತ್ರಿತಶಬ್ದವು ಅನೇಕ ಋಕ್ಕುಗಳಲ್ಲಿರುವುದಾದರೂ ಇವನ ವಿಷಯವಾಗಿ ಅಧಿಕಾಂಶಗಳು ಏನೂ ತಿಳಿಯಬರುವಂತಿಲ್ಲ. ಅಥವಾ ವೇದದಲ್ಲಿಯೂ ಐದಾರು ಸ್ಥಳಗಳಲ್ಲಿ ತ್ರಿತ ಎಂಬ ಶಬ್ದದ ಪ್ರಯೋಗವಿದ್ದರೂ ಅಲ್ಲಿಯೂ ಏನೂ ತಿಳಿಯಬರುವುದಿಲ್ಲ. ಇವನಿಗೂ ಇಂದ್ರನಿಗೂ ಇರುವ ಸಾಹಚರ್ಯವು ಮಾತ್ರ ಅನೇಕಕಡೆಗಳಲ್ಲಿದೆ. ಎಲ್ಲ ಕಡೆಗಳಲ್ಲಿಯೂ ಹೇಳಿರುವಂತೆ ತ್ರಿತನು ಬಹಳದೂರದಲ್ಲಿರುವ ದೇವತೆ, ಅವನಲ್ಲಿಗೆ ಪಾಪ ಅಥವಾ ದುಃಸ್ವಪ್ನಗಳು ಕಳುಹಿಸಲ್ಪಡುತ್ತನೆ, ಎಂದು ಮಾತ್ರ ಜ್ಞಾತವಾಗುತ್ತದೆ. (ಅ. ವೇ. ೧-೧೩೧-೧, ೩ ; ೧೯-೫೬-೪) ತೈತ್ತಿರೀಯ ಸಂಹಿತೆಯಲ್ಲಿ ಅವನು ದೀರ್ಘಾಯುಸ್ಸನ್ನು ಕೊಡತಕ್ಕವನು ಎಂದಿದೆ (ತೈ. ಸಂ. ೧-೮-೧೦-೨) ಅವನು ಅಮರತ್ವದಾಯಕವಾದ ಸೋಮರಸವನ್ನು ಸಿದ್ಧಮಾಡುವವನು. ತ್ರಿತನು ಏಕತ, ದ್ವಿತ ಮತ್ತು ತ್ರಿತರೆಂಬ ಮೂರುಮಂದಿ ಸಹೋದರರಲ್ಲೊಬ್ಬನು. ಈ ಮೂವರೂ ಅಗ್ನಿಪುತ್ರರು; ತ್ರಿತನು ನೀರಿನಿಂದ ಉದ್ಭವಿಸಿದನು ಎಂದು ಶ. ಬ್ರಾ. ೧-೨-೩-೧, ೨ ಮತ್ತು ತೈ. ಬ್ರಾ. ೩-೨-೮-೧೦, ೧೧ ಇತ್ಯಾದಿ ಬ್ರಾ

ಋಗ್ವೇದದಲ್ಲಿ ಹೇಳಿರುವಂತೆ ೩-೪ ಸಂದರ್ಭಗಳಲ್ಲಿ ಇಂದ್ರ ಮತ್ತು ತ್ರಿತರು ಒಂದೇ ಕಾರ್ಯವನ್ನು (ರಾಕ್ಷಸ ವಧೆಯನ್ನು) ಮಾಡಿದಾರೆ. ಒಂದು ಸಲ ಇಂದ್ರನು ತ್ರಿತನಿಗೆ ಪ್ರಚೋದಕನಾಗಿದ್ದಾನೆ. ಮತ್ತೊಂದು ಕಡೆ ತ್ರಿತನಿಂದ ಇಂದ್ರನೇ ಪ್ರೋತ್ಸಾಹಿತನಾಗಿದ್ದಾನೆ ಎಂದು ಹೇಳಿದೆ. ಎರಡು ಸಲ ಇಂದ್ರನು ತ್ರಿತನಿಗಾಗಿ ಕೆಲಸ ಮಾಡಿದಾನೆ. ಪ್ರಕೃತವಾದ ಈ ಸೂಕ್ತದಲ್ಲಿ ಹೇಳಿರುವಂತೆ ತ್ರಿತನಿಗಾಗಿ ಇಂದ್ರನು ವಿಶ್ವರೂಪನೆಂಬುವನನ್ನು, ಸಂಹರಿಸಿದ್ದಾನೆ. ತ್ರಿತನು ಅಗ್ನಿಯನ್ನು ಹುಡುಕುತ್ತಾನೆ; ಸ್ವರ್ಗದಲ್ಲಿ ಅಗ್ನಿಯನ್ನು ಜ್ವಲನಗೊಳಿಸುತ್ತಾನೆ; ಮನುಷ್ಯರ ಗೃಹಗಳಲ್ಲಿ ಅಗ್ನಿಯು ಬದಲು ವಾಸಿಸುತ್ತಾನೆ; ಅವನ ವಾಸಸ್ಥಳ ಬಹುದೂರದಲ್ಲಿ ಗುಪ್ತವಾಗಿದೆ; ಅಲ್ಲಿ ಸೋಮವೂ ಇದೆ. ಇಂದ್ರನು ಸೋಮಪಾನಮಾಡುತ್ತಾನೆ. ಆದರೆ ತ್ರಿತನು ಸೋಮವನ್ನು ಸಿದ್ಧಮಾಡುತ್ತಾನೆ. ಇಂದ್ರತ್ರಿತರಿಗೆ ಈ ವ್ಯತ್ಯಾಸವಿದೆ.

ಮೇಲೆ ಹೇಳಿದ ಅಂಶಗಳಿಂದ ತ್ರಿತನು ವಿದ್ಯುದ್ದೇವತೆ ಎಂದರೆ, ಅಗ್ನಿಯ ಅಂತರಿಕ್ಷದ ರೂಪವೆನ್ನಬಹುದು ; ಅಗ್ನಿ, ವಾಯು, ಇಂದ್ರ ಮತ್ತು ಸೂರ್ಯರೆಂಬ ದೇವತೆಗಳಂತೆ ಇವನು ಮಧ್ಯಮದೇವತೆ. ಆದರೆ ಈ ದೇವತೆಯ ಕಾರ್ಯಗಳೆಲ್ಲವೂ ಇಂದ್ರನಿಂದಲೇ ಮಾಡಲ್ಪಟ್ಟವೆಯಾಗಿ ಋಗ್ವೇದದಲ್ಲಿ ಇವನು ಅಪ್ರಧಾನದೇವತೆಯಾಗಿದ್ದಾನೆ. ವಿದ್ಯುದ್ರೂಪನಾಗಿ ಸ್ವರ್ಗದಿಂದ ಸೋಮವನ್ನು ಭೂಮಿಗೆ ತಂದುದರಿಂದಲೇ ತ್ರಿತನಿಗೂ ಸೋಮನಿಗೂ ಸಂಬಂಧವು ಉಕ್ತವಾಗಿರಬಹುದು. ಆಧಾರಗಳು ಹೆಚ್ಚಾಗಿಲ್ಲದ್ದರಿಂದ ಇವನ ವಿಷಯದಲ್ಲಿ ಒಬ್ಬೊಬ್ಬ ಪಂಡಿತರು ಒಂದೊಂದು

ರೀತಿ ಅಭಿಪ್ರಾಯಪಟ್ಟಿದ್ದಾರೆ. ಕೆಲವನ್ನು ಮಾತ್ರ ಹೇಳುವುದಾದರೆ ರಾತ್ (Roth) ಎಂಬ ಪಂಡಿತನು ನೀರು ಮತ್ತು ಗಾಳಿಯ ದೇವತೆಯೆಂದೂ, ಹಿಲ್‌ಬ್ರಾಂಡ್ (Hillbratnd) ಎಂಬುವನು ಉದ್ದೀಪ್ತವಾದ ಆಕಾಶದದೇವತೆ ಯೆಂದೂ, ಪೆರಿ (Perry) ಎಂಬುವನು ಬಿರುಗಾಳಿಯ ದೇವತೆಯೆಂತಲೂ ಹೇಳಿರುತ್ತಾರೆ. ಪಿಶ್ಚೆಲ್ (Pischel) ಎಂಬ ಮತ್ತೊಬ್ಬ ಪಂಡಿತನು ಮೊದಲು ಸಮುದ್ರ ಮತ್ತು ನೀರಿನ ದೇವತೆ, ಅನಂತರ ಮನುಷ್ಯರಲ್ಲಿ ವೈದ್ಯ, ಆಮೇಲೆ ದೇವತ್ವವನ್ನು ಪಡೆದನೆಂದು ಹೇಳಿದ್ದಾನೆ. ಹಾರ್ಡಿ (Hardy) ಎಂಬುವನು ಚಂದ್ರದೇವತೆಯೆಂದಿದಾನೆ.

ಪ್ರಕೃತಸೂಕ್ತದಲ್ಲಿ ತ್ರಿತನು ಇಂದ್ರನ ಸ್ನೇಹಭಾವವನ್ನು ಹೊಂದಿರುವುದರಿಂದ ಅದಕ್ಕಾಗಿ ಇಂದ್ರನು ವಿಶ್ವರೂಪ ನೆಂಬ ತ್ವಷ್ಟೃಪುತ್ರನನ್ನು ಕೊಂದನೆಂದು ಹೇಳಿದೆ.

ವಿಶ್ವರೂಪನೆಂಬುವನನ್ನು ಇಂದ್ರನು ಸಂಹಾರಮಾಡಿದ ವಿಷಯವು ತೈತ್ತಿರೀಯ ಸಂಹಿತೆಯ ಎರಡನೇ ಕಾಂಡದಲ್ಲಿ ಐದನೆಯ ಪ್ರಪಾಠಕದ ಪ್ರಾರಂಭಭಾಗದಲ್ಲಿ ಹೇಳಿದೆ. ಋಗ್ವೇದದಲ್ಲಿಯೂ ಈ ವಿಷಯವಾಗಿ-

**ಭೂರೀದಿಂದ್ರ ಉದಿನಕ್ಷಂತಮೋಜೋಽವಾಭಿನತ್ಸತ್ಪತಿರ್ಮನ್ಯಮಾನಂ ।**
**ತ್ವಾಷ್ಟ್ರಸ್ಯ ಚಿದ್ವಿಶ್ವರೂಪಸ್ಯ ಗೋನಾಮಾಚಕ್ರಾಣಸ್ತ್ರೀಣಿ ಶೀರ್ಷಾ ಪರಾ ವರ್ಕ್ ॥**

(ಋ. ಸಂ. ೧೦-೮-೯)

ಎಂಬ ಋಕ್ಕಿನಲ್ಲಿ ಇಂದ್ರನು—ತ್ವಷ್ಟೃಪುತ್ರನಾದ ವಿಶ್ವರೂಪನೆಂಬುವನ ಮೂರು ತಲೆಗಳನ್ನು ಕತ್ತರಿಸಿಹಾಕಿದನು ಎಂದು ಹೇಳಿದೆ. ಈ ಕಾರ್ಯವನ್ನು ಇಂದ್ರನು ತ್ರಿತನಿಗಾಗಿ ಮಾಡಿದನೆಂದೂ ತ್ರಿತನು ಈ ವಿಷಯದಲ್ಲಿ ಇಂದ್ರನಿಗೆ ಸಹಾಯಮಾಡಿದನೆಂದೂ ಅದೇ ಸೂಕ್ತದ ೭ನೆಯ ಋಕ್ಕಿನಲ್ಲಿ ಹೇಳಿದೆ—

**ಅಸ್ಯ ತ್ರಿತಃ ಕ್ರತುನಾ ವವ್ರೇ ಅಂತರಿಚ್ಛನ್ ಧೀತಿಂ ಪಿತುರೇವೈಃ ಪರಸ್ಯ ।**
**ಸಚಸ್ಯಮಾನಃ ಪಿತ್ರೋರುಪಸ್ಥೇ ಜಾಮಿ ಬ್ರುವಾಣ ಆಯುಧಾನಿ ವೇತಿ ।**
**ಸ ಪಿತ್ರ್ಯಾಣ್ಯಾಯುಧಾನಿ ವಿದ್ವಾನಿಂದ್ರೇಷಿತ ಆಪ್ತ್ಯೋ ಅಭ್ಯಯುಧ್ಯತ್ ।**
**ತ್ರಿಶೀರ್ಷಾಣಂ ಸಪ್ತರಶ್ಮಿಂ ಜಘನ್ವಾನ್ ತ್ವಾಷ್ಟ್ರಸ್ಯ ಚಿನ್ನಿಃ ಸಸೃಜೇ ತ್ರಿತೋ ಗಾಃ ॥**

(ಋ. ಸಂ. ೧೦-೮-೭, ೮)

ಈ ಋಕ್ಕುಗಳ ಭಾಷ್ಯದಲ್ಲಿ ಸಾಯಣರು ಒಂದು ಉಪಾಖ್ಯಾನವನ್ನೂ ಹೇಳಿದ್ದಾರೆ—ಇಂದ್ರನು ಮೂರು ಶಿರಸ್ಸುಗಳುಳ್ಳ ತ್ವಷ್ಟೃಪುತ್ರನಾದ ವಿಶ್ವರೂಪನನ್ನು ಕೊಲ್ಲಲು ತ್ರಿತನ ಸಹಾಯವನ್ನು ಕೋರಿದನು. ಅದಕ್ಕೆ ತ್ರಿತನು ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳಲು ತನಗೆ ಯಜ್ಞಗಳಲ್ಲಿ ಹವಿರ್ಭಾಗವನ್ನು ಕೊಡಬೇಕೆಂದು ವರವನ್ನು ಕೇಳಿದನು. ಇಂದ್ರನು ಅದಕ್ಕೊಪ್ಪಿ ಹಸ್ತಪ್ರಕ್ಷಾಳನಕ್ಕಾಗಿ ನೀರನ್ನೂ ಯಜ್ಞಭಾಗವನ್ನೂ ಕೊಟ್ಟನು ಬಳಿಕ ತ್ರಿತನು ತನ್ನ ತಂದೆಯ ಸಂಬಂಧವಾದ ಆಯುಧಗಳಿಂದ ಸಜ್ಜುಗೊಂಡು ಇಂದ್ರಪ್ರೇರಿತನಾಗಿ ತ್ವಷ್ಟೃಪುತ್ರನಾದ ವಿಶ್ವರೂಪನೆಂಬುವನ ಕೂಡ ಯುದ್ಧಮಾಡಿ ಅವನನ್ನು ತನ್ನ ಆಯುಧಗಳಿಂದ ಬಲವಾಗಿ ಹೊಡೆದು ಮೂರ್ಛೆಗೊಳಿಸಿದನು. ಅನಂತರ ಇಂದ್ರನು ಆ ವಿಶ್ವರೂಪನ ಮೂರು ತಲೆಗಳನ್ನು ಕತ್ತರಿಸಿಹಾಕಿದನು ಎಂದು ಮೇಲಿನ ಋಕ್ಕುಗಳಲ್ಲಿ ಹೇಳಿದೆ.

ಇದೇ ವಿಷಯವನ್ನೇ ವಿಸ್ತಾರವಾಗಿ ತೈತ್ತಿರೀಯ ಸಂಹಿತೆಯಲ್ಲಿ ಹೇಳಿದೆ. ತೈ. ಸಂ. (೨-೫-೧-೧) ಅದನೂ ಅರ್ಥಸಹಿತವಾಗಿ ಇಲ್ಲಿ ವಿವರಿಸಿದೆ—

**ವಿಶ್ವರೂಪೋ ವೈ ತ್ವಾಷ್ಟ್ರಃ ಪುರೋಹಿತೋ ದೇವಾನಾಮಾಸೀತ್ ಸ್ವಸ್ರಿಯೋಽಸುರಾಣಾಂ ತಸ್ಯ ತ್ರೀಣಿ ಶೀರ್ಷಾಣ್ಯಾಸನ್ಸೋಮಪಾನಗ್‌ಂ ಸುರಾಪಾನಮನ್ನಾದನಗ್‌ಂ ಸ ಪ್ರತ್ಯಕ್ಷಂ ದೇವೇಭ್ಯೋ ಭಾಗಮವದತ್ ಪರೋಕ್ಷಮಸುರೇಭ್ಯಃ ॥**

ಪೂರ್ವಕಾಲದಲ್ಲಿ ತ್ವಷ್ಟೃಪುತ್ರನಾದ ವಿಶ್ವರೂಪನೆಂಬುವನು ದೇವತೆಗಳಿಗೆ ಪುರೋಹಿತನಾಗಿದ್ದನು. ಇವನು ಅಸುರರ ತಂಗಿಯ ಮಗನಾದ್ದರಿಂದ ಅಸುರರಲ್ಲಿಯೂ ಇವನಿಗೆ ಅಭಿಮಾನವಿತ್ತು. ಈ ವಿಶ್ವರೂಪನಿಗೆ ಮೂರು ಶಿರಸ್ಸು (ತಲೆಗಳು) ಇದ್ದವು. ಆ ಮೂರು ತಲೆಗಳಲ್ಲಿ ಒಂದರಿಂದ ಸೋಮಪಾನಮಾಡುತ್ತಿದ್ದನು, ಮತ್ತೊಂದರಿಂದ ಸುರಾ (ಮದ್ಯ) ಪಾನಮಾಡುತ್ತಿದ್ದನು, ಮೂರನೆಯ ಶಿರಸ್ಸಿನಿಂದ ಅನ್ನಾದ್ಯಾಹಾರಗಳನ್ನು ತಿನ್ನುತ್ತಿದ್ದನು. ಹೀಗಿರುವಾಗ ಈ ವಿಶ್ವರೂಪನು ಯಜ್ಞದಲ್ಲಿ ದೇವತೆಗಳಿಗೆ ಹವಿರ್ಭಾಗವನ್ನು ದೊರಕಿಸಿಕೊಡುವುದಾಗಿ ಎಲ್ಲರೆದುರಿಗೂ ಹೇಳುತ್ತಿದ್ದನು. ಆದರೆ ಒಳೊಗೊಳಗೇ ಯಾರಿಗೂ ತಿಳಿಯದಂತೆ ಅಸುರರಿಗೆ ಸಹಾಯಮಾಡುತ್ತಿದ್ದನು.

**ಸರ್ವಸ್ಮೈ ವೈ ಪ್ರತ್ಯಕ್ಷಂ ಭಾಗಂ ವದಂತಿ ಯಸ್ಮಾ ಏವ ಪರೋಕ್ಷಂ ವದಂತಿ ತಸ್ಯ ಭಾಗ ಉದಿತಸ್ತಸ್ಮಾದಿಂದ್ರೋಽಬಿಭೇದೀದೃಙ್ವೈ ರಾಷ್ಟ್ರಂ ವಿಪರ್ಯಾವರ್ತಯತೀತಿ ತಸ್ಯ ವಜ್ರಮಾದಾಯ ಶೀರ್ಷಾಣ್ಯಚ್ಛಿನತ್ ॥**

ಜನರು ಎಲ್ಲರಿಗೂ ಭಾಗವನ್ನು ಕೊಡುತ್ತೇನೆಂದು ಪ್ರತ್ಯಕ್ಷವಾಗಿ ಎಲ್ಲರೆದುರಿಗೂ ಮಾತುಕೊಡುವರು. ಆದರೆ ಆ ಕೊಟ್ಟಮಾತನ್ನು ನೆರವೇರಿಸುವವರು ಅತಿವಿರಳ. ಭಾಗವನ್ನು ಕೊಡುತ್ತೇನೆಂದು (ಪರೋಕ್ಷವಾಗಿ) ರಹಸ್ಯವಾಗಿ (ಏಕಾಂತವಾಗಿ) ನಂಬಿಕೆಯಾಗುವಂತೆ ಮಾತುಕೊಟ್ಟಲ್ಲಿ ಆ ವಚನವನ್ನು ಖಂಡಿತವಾಗಿಯೂ ಪಾಲಿಸುತ್ತಾರೆ. ಆದುದರಿಂದ ವಿಶ್ವರೂಪನ ರಹಸ್ಯಸಂಧಾನವನ್ನು ಕಂಡು ಇಂದ್ರನು ಹೆದರಿದನು, ಇವನು ತನಗೆ ದ್ರೋಹವೆಸಗಿ ರಾಷ್ಟ್ರವನ್ನು ಬೇರೆಯವರ (ಅಸುರರ) ವಶಮಾಡುವನೆಂದು ಹೆದರಿ ತನ್ನ ವಜ್ರಾಯುಧವನ್ನು ತೆಗೆದುಕೊಂಡು ಆ ವಿಶ್ವರೂಪನ ಮೂರು ಶಿರಸ್ಸುಗಳನ್ನೂ ಕತ್ತರಿಸಿದನು

**ಯತ್ಸೋಮಪಾನಮಾಸೀತ್ಸ ಕಪಿಂಜಲೋಽಭವದ್ಯತ್ಸುರಾಪಾನಗ್‌ಂ ಸ ಕಲವಿಂಕೋ ಯದನ್ನಾದನಗ್‌ಂ ಸ ತಿತ್ತಿರಿಸ್ತಸ್ಯಾಂಜಲಿನಾ ಬ್ರಹ್ಮಹತ್ಯಾಮುಪಾಗೃಹ್ಣಾತ್ತಾಗ್‌ಂ ಸಂವತ್ಸರಮಬಿಭಸ್ತಂ ಭೂತಾನ್ಯಭ್ಯಕ್ರೋಶನ್ ಬ್ರಹ್ಮಹನ್ನಿತಿ ॥**

ಆಗ ಇಂದ್ರನು ಕತ್ತರಿದ ಮೂರುಶಿರಸ್ಸುಗಳಲ್ಲಿ ಸೋಮಪಾನ ಮಾಡುತ್ತಿದ್ದ ಶಿರಸು ಕಪಿಂಜಲವೆಂಬ (hazecock) ಪಕ್ಷಿಯಾಯಿತು, ಸುರಾಪಾನವನ್ನು ಮಾಡುತ್ತಿದ್ದ ಎರಡನೆಯ ಶಿರಸ್ಸು ಕಲವಿಂಕ ಎಂದರೆ ಗುಬ್ಬಚ್ಚಿ (sparrow) ಆಯಿತು; ಅನ್ನವನ್ನು ತಿನ್ನುತ್ತಿದ್ದ ಮೂರನೆಯ ಶಿರಸು ತಿತ್ತಿರಿಯೆಂಬ (partridge) ಪಕ್ಷಿಯಾಯಿತು. ಆಗ ಇಂದ್ರನು ಬ್ರಾಹ್ಮಣನಾದ ವಿಶ್ವರೂಪನನ್ನು ಕೊಂದದ್ದರಿಂದ ಬ್ರಹ್ಮಹತ್ಯಾದೋಷವು ಪ್ರಾಪ್ತವಾಗಲು ಅದನ್ನು ತನ್ನ ಕೈಯಿಂದಲೇ ಸ್ವೀಕರಿಸಬೇಕಾಯಿತು. ಅದರಂತೆ ಅವನು ಬ್ರಹ್ಮಹತ್ಯಾ ದೋಷವನ್ನು ಒಂದು ಸಂವತ್ಸರದವರೆಗೂ

ಧರಿಸಿದ್ದನು. ಪ್ರಾಣಿಗಳೆಲ್ಲಾ ಅವನನ್ನು (ಇಂದ್ರನನ್ನು) ನೋಡಿ "ಎಲೈ ಇಂದ್ರನೇ, ನೀನು ಬ್ರಹ್ಮಹತ್ಯೆಯನ್ನು ಮಾಡಿದವನು" ಎಂದು ಕೂಗುತ್ತಿದ್ದವು.

> **ಸ ಪೃಥಿವೀಮುಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪ್ರತಿಗೃಹಾಣೇತಿ ಸಾಬ್ರವೀದ್ವರಂ ವೃಣೈ ಖಾತಾತ್ಪರಾಭವಿಷ್ಯಂತೀಂ ಮನ್ಯೇ ತತೋ ಮಾ ಪರಾಭೂವಮಿತಿ ಪುರಾ ತೇ ಸಂವತ್ಸರಾ-ದಪಿರೋಹಾದಿತ್ಯಬ್ರವೀತ್ತಸ್ಮಾತ್ಪುರಾ ಸಂವತ್ಸರಾತ್ಪೃಥಿವ್ಯೈ ಖಾತಾಮಪಿರೋಹತಿ ವಾರೇ-ವೃತಗ್ಂ ಹ್ಯಸ್ಯೈ ತೃತೀಯಂ ಬ್ರಹ್ಮಹತ್ಯಾಯೈ ಪ್ರತ್ಯಗೃಹ್ಣಾತ್ತತ್ಸ್ವಕೃತಮಿರಿಣಮಭವತ್ತಸ್ಮಾ-ದಾಹಿತಾಗ್ನಿಃ ಶ್ರದ್ಧಾದೇವಃ ಸ್ವಕೃತ ಇರಿಣೇ ನಾವಸ್ಯೇದ್ಬ್ರಹ್ಮಹತ್ಯಾಯೈ ಹ್ಯೇಷ ವರ್ಣಃ ॥**

ಇದನ್ನು ಕಂಡ ಇಂದ್ರನು (ಲಜ್ಜೆಗೊಂಡು) ಬ್ರಹ್ಮಹತ್ಯಾಪರಿಹಾರಕ್ಕಾಗಿ ಪೃಥಿವಿಯ (ಭೂಮಿಯ) ಬಳಿಗೆ ಹೋಗಿ ಎಲೈ ಭೂಮಿಯೇ, ನನಗೆ ಪ್ರಾಪ್ತವಾಗಿರುವ ಈ ಬ್ರಹ್ಮಹತ್ಯದಲ್ಲಿ ಮೂರನೇ ಒಂದು ಭಾಗವನ್ನು ನೀನು ತೆಗೆದುಕೊ ಎಂದು ಹೇಳಲು, ಅದಕ್ಕೆ ಭೂಮಿಯು ಹಾಗಾದರೆ ನಾನು ಒಂದು ವರವನ್ನು ಕೇಳುವೆನು—ಜನರು ಭೂಮಿಯನ್ನು ಅಗೆದು ಹಳ್ಳಮಾಡುವರು, ಆದರಿಂದ ನನಗೆ ಅಪಮಾನವಾಗಿರುವುದು. ಆರೀತಿ ಆಗದಂತೆ ವರವನ್ನು ಕೊಡಬೇಕು ಎಂದು ಕೇಳಿತು, ಇಂದ್ರನು ಹಾಗೆಯೇ ಆಗಲಿ. ಆರೀತಿ ಅಗೆದ ಹಳ್ಳವು ಯಾವ ಪ್ರಯತ್ನವೂ ಇಲ್ಲದೆ ಒಂದುವರ್ಷ ದೊಳಗಾಗಿ ತಾನಾಗಿಯೇ ಮುಚ್ಚಿಹೋಗಿ ಭೂಮಿಯು ಮುಂಚಿನಂತೆ ಸಮನಾಗಲಿ ಎಂದುವರವನ್ನು ಕೊಟ್ಟನು. ಆದ್ದರಿಂದ ಭೂಮಿಯಲ್ಲಿ ಅಗೆದ ಹಳ್ಳ ಮುಂತಾದುವು ಒಂದುವರ್ಷ ಕಳೆಯುವುದರೊಳಗಾಗಿ ತಾನಾಗಿಯೇ ಮುಚ್ಚಿ ಹೋಗುವುವು. ಇದನ್ನೇ ಭೂಮಿಯು ಕೇಳಿಕೊಂಡ ವರವು. ಈರೀತಿಯಾದ ವರವನ್ನು ಪಡೆದು ಭೂಮಿಯು ಇಂದ್ರನ ಬ್ರಹ್ಮಹತ್ಯಾದೋಷದ ಮೂರನೇ ಒಂದು ಭಾಗವನ್ನು ತೆಗೆದುಕೊಂಡಿತು. ಆ ಲಾಗಾಯಿತು ಭೂಮಿಗೆ ಅದು ಸ್ವಾಭಾವಿಕವಾಯಿತು. ಆದ್ದರಿಂದ ಅಗ್ನಿಹೋತ್ರ ಅಥವಾ ಯಜ್ಞಯಾಗಾದಿಗಳನ್ನು ಮಾಡಿದ ಮತ್ತು ದೇವತೆ ಗಳಲ್ಲಿ ಶ್ರದ್ಧಾಭಕ್ತಿಗಳನ್ನಿಟ್ಟಿರುವ ಪುರುಷನು ಭೂಮಿಯಲ್ಲಿ ಅಗೆದು ಹಳ್ಳವಾಗಿರುವ ಭಾಗವನ್ನು ಯಜ್ಞಮಾಡಲು ಯಜ್ಞವೇದಿಯನ್ನಾಗಿ ಆರಿಸಿಕೊಳ್ಳಬಾರದು. ಏಕೆಂದರೆ ಅಂತಹ ಅಗೆದಿರುವ ಹಳ್ಳಪ್ರದೇಶವು ಭೂಮಿಯು ತಾನು ವಹಿಸಿಕೊಂಡ ಬ್ರಹ್ಮಹತ್ಯದ ಸಂಕೇತ (ವರ್ಣ) ವಾಗಿರುವುದು.

> ಸ ವನಸ್ಪತೀನುಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪ್ರತಿಗೃಹ್ಣೀತೇತಿ ತೇಽಬ್ರುವನ್ ವರಂ ವೃಣಾಮಹೈ ವೃಕ್ಣಾತ್ಪರಾಭವಿಷ್ಯಂತೋ ಮನ್ಯಾಮಹೇ ತತೋ ಮಾ ಪರಾಭೂಮೇ-ತ್ಯಾವ್ರಶ್ಚನಾದ್ವೋ ಭೂಯಾಗ್ಂಸ ಉತ್ತಿಷ್ಠಾನಿತ್ಯಬ್ರವೀತ್ತಸ್ಮಾದಾವ್ರಶ್ಚನಾದ್ವೃಕ್ಷಾಣಾಂ ಭೂಯಾಗ್ಂಸ ಉತ್ತಿಷ್ಠಂತಿ ವಾರೇವೃತಗ್ಂ ಹ್ಯೇಷಾಂ ತೃತೀಯಂ ಬ್ರಹ್ಮಹತ್ಯಾಯೈ ಪ್ರತ್ಯ-ಗೃಹ್ಣನ್ತ್ಸ ನಿರ್ಯಾಸೋಽಭವತ್ತಸ್ಮಾನ್ನಿರ್ಯಾಸಸ್ಯ ನಾಶ್ಯಂ ಬ್ರಹ್ಮಹತ್ಯಾಯೈ ಹ್ಯೇಷ ವರ್ಣೋಽಥೋ ಖಲು ಯ ಏವ ಲೋಹಿತೋ ಯೋ ವಾವ್ರಶ್ಚನಾನ್ನಿರ್ಯೇಷತಿ ತಸ್ಯ ನಾಶ್ಯಂ ಕಾಮಮನ್ಯಸ್ಯ ॥

ಬಳಿಕ ಇಂದ್ರನು ವೃಕ್ಷಗಳ ಸಮೀಪಕ್ಕೆ ಹೋಗಿ—ಎಲೈ ವೃಕ್ಷಗಳೇ, ನನ್ನ ಬ್ರಹ್ಮಹತ್ಯಾದೋಷದಲ್ಲಿ ಮೂರನೇ ಒಂದು ಭಾಗವನ್ನು ನೀವು ತೆಗೆದುಕೊಳ್ಳಿ ಎನಲು, ಅದಕ್ಕೆ ವೃಕ್ಷಗಳು—ಹಾಗಾದರೆ ನಾವು ಒಂದು ವರವನ್ನು ಅಪೇಕ್ಷಿ

ಸುವೆವು—ಜನರು ವೃಕ್ಷದ ಕೊಂಬೆ ಮೊದಲಾದವನ್ನು ಕತ್ತರಿಸುವರು. ಆದರಿಂದ ನಮಗೆ ಅಭಿಭವವಾಗುವುದು-ಅಂತಾಗದಂತೆ ವರವನ್ನು ಕೊಡಬೇಕೆನ್ನಲು, ಇಂದ್ರನು-ಒಳ್ಳೇದು, ಹಾಗೆ ಕತ್ತರಿಸಿದಾಗ ಕತ್ತರಿಸಿದ ಭಾಗದ ಸುತ್ತಲೂ ಅಧಿಕವಾದ ಕೊನೆಗಳು ಚಿಗುರುವಂತಾಗಲಿ ಎಂದು ವರವನ್ನು ಕೊಟ್ಟನು. ಆದ್ದರಿಂದ ವೃಕ್ಷಗಳು ಕೇಳಿಕೊಂಡ ವರದಂತೆ ಕೊನೆಗಳನ್ನು ಕತ್ತರಿಸಿದಾಗ ಆ ಭಾಗದಲ್ಲಿ ಹೆಚ್ಚು ಕೊನೆಗಳು ಚಿಗುರುವುವು. ಬಳಿಕ ವೃಕ್ಷಗಳು ತಮ್ಮ ಮಾತಿನಂತೆ ಇಂದ್ರನ ಬ್ರಹ್ಮಹತ್ಯೆಯಲ್ಲಿ ಮೂರನೇ ಒಂದು ಭಾಗವನ್ನು ಸ್ವೀಕರಿಸಿದವು. ಮರವನ್ನು ಕಡಿದಾಗ ಹೊರಡುವ ರಸವೇ ಈ ಬ್ರಹ್ಮಹತ್ಯೆಯ ಚಿಹ್ನೆಯು. ಆದ್ದರಿಂದ ಈ ಮರ ಕಡಿಯುವುದರಿಂದ ಹೊರಹೊರಡುವ ರಸವನ್ನು ಯಾರೂ ಕುಡಿಯಬಾರದು ಏಕೆಂದರೆ ಅದು ಬ್ರಹ್ಮಹತ್ಯೆಯ ವರ್ಣವು. ಅಥವಾ ವೃಕ್ಷದ ಕತ್ತರಿಸುವಿಕೆಯಿಂದ ಹೊರಡುವ ರಸವು ಕೆಂಪಾಗಿ ಇದ್ದಲ್ಲಿ ಅದನ್ನು ಕುಡಿಯಬಾರದು. ಹಾಗಿಲ್ಲದಿದ್ದರೆ ಇಷ್ಟಪಟ್ಟರೆ ಕುಡಿಯಬಹುದು.

**ಸ ಸ್ತ್ರೀಷಗ್ಂಸಾದಮುಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪ್ರತಿಗೃಹ್ಣೀತೇತಿ ತಾ ಅಬ್ರುವನ್ವರಂ ವೃಣಾಮಹಾ ಋತ್ವಿಯಾತ್ ಪ್ರಜಾಂ ವಿಂದಾಮಹೈ ಕಾಮಮಾವಿಜನಿತೋಃ ಸಂಭವಾಮೇತಿ ತಸ್ಮಾದೃತ್ವಿಯಾತ್ ಸ್ತ್ರಿಯಃ ಪ್ರಜಾಂ ವಿಂದಂತೇ ಕಾಮಮಾ ವಿಜನಿತೋಃ ಸಂಭವಂತಿ ವಾರೇವೃತಗ್ಂ ಹ್ಯಾಸಾಂ ತೃತೀಯಂ ಬ್ರಹ್ಮಹತ್ಯಾಯೈ ಪ್ರತ್ಯಗೃಹ್ಣನ್ತ್ಸಾ ಮಲವದ್ವಾಸಾ ಅಭವತ್ ॥**

ಅನಂತರ ಇಂದ್ರನು ಸ್ತ್ರೀಯರ ಗುಂಪಿಗೆ ಹೋಗಿ ಅವರನ್ನು ಕುರಿತು—ಎಲೌ ಸ್ತ್ರೀಯರೇ, ನನ್ನ ಬ್ರಹ್ಮಹತ್ಯಾದೋಷದಲ್ಲಿ ಉಳಿದಿರುವ ಮೂರನೇ ಒಂದು ಭಾಗವನ್ನು ನೀವು ತೆಗೆದುಕೊಳ್ಳಿ ಎನಲು ಅದಕ್ಕೆ ಸ್ತ್ರೀಯರು-ಹಾಗಾದರೆ ನಾವು ಒಂದು ವರವನ್ನಪೇಕ್ಷಿಸುವೆವು-ನಾವು ಮುಟ್ಟಾದನಂತರ (ಋತುಸ್ನಾನಾನಂತರ) ನಮಗೆ ಮಕ್ಕಳಾಗಬೇಕು. ಮತ್ತು ಪ್ರಸವವಾಗುವವರೆಗೂ (ಹೆರಿಗೆಯಾಗುವವರೆಗೂ ನಾವು ಇಷ್ಟಪಟ್ಟಲ್ಲಿ ಸಂಭೋಗದಿಂದ ಕಾಮತೃಪ್ತಿಯನ್ನು ಹೊಂದುವಂತಾಗಬೇಕೆಂದು ಕೇಳಲು, ಇಂದ್ರನು ಹಾಗೆಯೇ ಆಗಲೆಂದನು. ಆದುದರಿಂದ ಸ್ತ್ರೀಯರು ಮುಟ್ಟಾದ ನಂತರ ಸಂತಾನವನ್ನು ಪಡೆಯುವರು ಮತ್ತು ಹೆರಿಗೆಯಾಗುವವರೆಗೂ ತಮ್ಮಿಷ್ಟಬಂದಾಗ ಸಂಭೋಗಿಸುವರು. ಏಕೆಂದರೆ ಇದನ್ನೇ ಅವರು ಕೇಳಿಕೊಂಡಿರುವ ವರವು. ಅನಂತರ ಆ ಸ್ತ್ರೀಯರು ಇಂದ್ರನ ಬ್ರಹ್ಮಹತ್ಯಾದೋಷದ ಮೂರನೇ ಒಂದು ಭಾಗವನ್ನು ವಹಿಸಿಕೊಂಡರು. ಸ್ತ್ರೀಯರು ಮುಟ್ಟಾದಾಗ ದ್ರವಿಸುವ ರಜಸ್ಸೇ ಈ ಬ್ರಹ್ಮಹತ್ಯೆಯ ಚಿಹ್ನೆಯಾಗಿರುವುದು. ರಜಸ್ಸು ದ್ರವಿಸುವ ಕಾಲದಲ್ಲಿ (ಮುಟ್ಟಾದಾಗ) ಸ್ತ್ರೀಯರು ಅಪವಿತ್ರರು (ಅಶುದ್ಧರು).

**ತಸ್ಮಾನ್ಮಲವದ್ವಾಸಸಾ ನ ಸಂವದೇತ ನ ಸಹಾಸೀತ ನಾಸ್ಯಾ ಅನ್ನಮದ್ಯಾದ್ಬ್ರಹ್ಮಹತ್ಯಾಯೈ ಹ್ಯೇಷಾ ವರ್ಣಂ ಪ್ರತಿಮುಚ್ಯಾಸ್ತೇಽಥೋ ಖಲ್ವಾಹುರಭ್ಯಂಜನಂ ವಾವ ಸ್ತ್ರಿಯಾ ಅನ್ನ-ಮಭ್ಯಂಜನಮೇವ ನ ಪ್ರತಿಗೃಹ್ಯಂ ಕಾಮಮನ್ಯದಿತಿ ॥**

ಆದುದರಿಂದ ಮುಟ್ಟಾಗಿರುವ ಸ್ತ್ರೀಯೊಡನೆ ಮಾತನಾಡಬಾರದು, ಅವಳು ಕೊಟ್ಟ ಅಥವಾ ಮುಟ್ಟಿದ ಆಹಾರವನ್ನು ತಿನ್ನಬಾರದು. ಏಕೆಂದರೆ ಬ್ರಹ್ಮಹತ್ಯಾದೋಷದ ಚಿಹ್ನೆಯಾದ ಅಶುದ್ಧವಾದ ರಜೋದ್ರವವನ್ನು ಸ್ರವಿಸುತ್ತಿರುವಳು.

ಮುಟ್ಟಾಗಿರುವ ಕಾಲದಲ್ಲಿ ತೈಲಾಭ್ಯಂಜನಾದಿಗಳನ್ನು ಮಾಡಬಾರದು ಅಥವಾ ಆ ಕಾಲದಲ್ಲಿ ಅವಳಿಂದ (ಅವಳು ಮುಟ್ಟಿದ) ಅನ್ನಾದಿಗಳನ್ನು ಯಾರೂ ಸ್ವೀಕರಿಸಬಾರದು.

**ಯಾಂ ಮಲವದ್ವಾಸಸಗ್ಂ ಸಂಭವಂತಿ ಯಸ್ತತೋ ಜಾಯತೇ ಸೋಽಭಿಶಸ್ತೋ ಯಾಮರಣ್ಯೇ ತಸ್ಯೈ ಸ್ತೇನೋ ಯಾಂ ಪರಾಚೀಂ ತಸ್ಯೈ ಹ್ರೀತಮುಖ್ಯಪಗಲ್ಭೋ ಯಾ ಸ್ನಾತಿ ತಸ್ಯಾ ಅಪ್ಸು ಮಾರುಕೋ ಯಾಭ್ಯಂಕ್ತೇ ತಸ್ಯೈ ದುಶ್ಚರ್ಮಾ ಯಾ ಪ್ರಲಿಖತೇ ತಸ್ಯೈ ಖಲತಿರಪಮಾರೀ ಯಾಂಕ್ತೇ ತಸ್ಯೈ ಕಾಣೋ ಯಾ ದತೋ ಧಾವತೇ ತಸ್ಯೈ ಶ್ಯಾವದನ್ ಯಾ ನಖಾನಿ ನಿಕೃತಂತೇ ತಸ್ಯೈ ಕುನಖೀ ಯಾ ಕೃಣತ್ತಿ ತಸ್ಯೈ ಕ್ಲೀಬೋ ಯಾ ರಜ್ಜುಗ್ಂ ಸೃಜತಿ ತಸ್ಯಾ ಉದ್ಬಂಧುಕೋ ಯಾ ಪರ್ಣೇನ ಪಿಬತಿ ತಸ್ಯಾ ಉನ್ಮಾದುಕೋ ಯಾ ಖರ್ವೇಣ ಪಿಬತಿ ತಸ್ಯೈ ಖರ್ವಸ್ತಿಸ್ರೋ ರಾತ್ರೀರ್ವ್ರತಂ ಚರೇದಂಜಲಿನಾ ವಾ ಪಿಬೇದಖರ್ವೇಣ ವಾ ಪಾತ್ರೇಣ ಪ್ರಜಾಯೈ ಗೋಪೀಥಾಯ ॥**

(ತೈ. ಸಂ. ೨-೫-೧-೧ ರಿಂದ ೭)

ರಜಸ್ವಲೆಯಾಗಿರುವ ಕಾಲದಲ್ಲಿ (ಮುಟ್ಟಾಗಿರುವಾಗ) ಸಂಭೋಗಮಾಡಿದರೆ ಅದರಿಂದ ಹುಟ್ಟುವ ಪುತ್ರನು ಶಾಪಗ್ರಸ್ತನಾಗುವನು, ರಜಸ್ವಲೆಯಾದ ಸ್ತ್ರೀಯು ಅರಣ್ಯದಲ್ಲಿ ಸಂಭೋಗಿಸಿದರೆ ಅವಳಿಗೆ ಹುಟ್ಟುವ ಪುತ್ರನು ಕಳ್ಳನಾಗುವನು; ಮುಖವನ್ನು ಮುಚ್ಚಿಕೊಂಡು ಅಥವಾ ಬೇರೆಕಡೆ ತಿರುಗಿಸಿಕೊಂಡು ಸಂಭೋಗಮಾಡಿದರೆ ಹುಟ್ಟುವ ಮಗನು ನಾಚಿಕೆಯಿಂದ ಯಾರೊಡನೆಯೂ ಸರಿಯಾಗಿ ಮಾತನಾಡಲಾರದ ಮುಖೇಡಿಯಾಗುವನು; ಮುಟ್ಟಾದಕಾಲದಲ್ಲಿ ಸ್ನಾನಮಾಡುವ ಸ್ತ್ರೀಗೆ ಹುಟ್ಟುವ ಮಗನು ನೀರಿನಲ್ಲಿ ಮುಳುಗಿ ಸಾಯುವನು; ಅಭ್ಯಂಜನ ಮಾಡಿಕೊಳ್ಳುವ ಸ್ತ್ರೀಯ ಪುತ್ರನು ಚರ್ಮರೋಗದಿಂದ, (ಕುಷ್ಟ, ತೊನ್ನು) ಪೀಡಿತನಾಗುವನು; ತಲೆಯನ್ನು ಬಾಚಿಕೊಳ್ಳುವ ಸ್ತ್ರೀಗೆ ಹುಟ್ಟುವ ಮಗನು ತಲೆಯಲ್ಲಿ ಕೂದಲಿಲ್ಲದ ಬೋಳನಾಗುವನು ಮತ್ತು ಶಕ್ತಿಹೀನನಾಗುವನು. ಕಣ್ಣಿಗೆ ಕಪ್ಪನ್ನು ಹಚ್ಚಿಕೊಳ್ಳುವ ಸ್ತ್ರೀಗೆ ಹುಟ್ಟುವ ಪುತ್ರನು ಕುರುಡನಾಗುವನು, ಆಕಾಲದಲ್ಲಿ ಹಲ್ಲನ್ನುಜ್ಜಿಕೊಳ್ಳುವ ಸ್ತ್ರೀಗೆ ಹುಟ್ಟುವ ಪುತ್ರನಿಗೆ ಕೊಳಕಾದ ಹಲ್ಲುಗಳಿರುವವು; ಉಗುರನ್ನು ಕತ್ತರಿಸಿಕೊಳ್ಳುವ ಸ್ತ್ರೀಗೆ ಹುಟ್ಟುವ ಮಗನಿಗೆ ನೋಡುವುದಕ್ಕೆ ವಿಕಾರವಾದ ಕೆಟ್ಟ ಉಗುರುಗಳಿರುವವು, ಆ ಕಾಲದಲ್ಲಿ (ಚಾಪೆ ಮೊದಲಾದವನ್ನು) ಹೆಣೆಯುವ ಸ್ತ್ರೀಗೆ ಹುಟ್ಟುವ ಪುತ್ರನು ನಪುಂಸಕನಾಗುವನು, ಹಗ್ಗವನ್ನು ಹೊಸೆಯುವ ಸ್ತ್ರೀಗೆ ಹುಟ್ಟುವ ಪುತ್ರನು ಆತ್ಮಹತ್ಯೆಯಿಂದ ಮೃತನಾಗುವನು (ಪದ್ಮಪತ್ರಾದಿ) ಎಲೆಗಳಿಂದ ನೀರುಕುಡಿಯುವ ಸ್ತ್ರೀಗೆ ಹುಟ್ಟುವ ಪುತ್ರನು ಕುಡುಕನಾಗುವನು, ಮುರಿದುಹೋದ ಅಥವಾ ಒಡಕಾದ ಪಾತ್ರೆಯಿಂದ ನೀರುಕುಡಿಯುವ ಸ್ತ್ರೀಗೆ ಅಂಗಹೀನನಾದ ಅಥವಾ ಅಂಗವಿಕಾರವುಳ್ಳ ಪುತ್ರನಾಗುವನು. ಆದುದರಿಂದ ಸ್ತ್ರೀಯರು ಮುಟ್ಟಾಗಿರುವಾಗ ಮೂರು ರಾತ್ರೆಗಳು ಕಳೆಯುವವರೆಗೆ ಬಹಳ ಕಟ್ಟುನಿಟ್ಟಾಗಿ ವ್ರತವನ್ನು (ನಿಯಮವನ್ನು) ಪಾಲಿಸಬೇಕು. ಒಳ್ಳೆಯ ಸಂತತಿ ಪ್ರಾಪ್ತಿಗಾಗಿ ಸ್ತ್ರೀಯರು ಆಕಾಲದಲ್ಲಿ ನೀರುಕುಡಿಯುವಾಗ ಬೊಗಸೆಯಿಂದಾಗಲಿ ಅಥವಾ ಮುರಿಯದಿರುವ ಚೆನ್ನಾಗಿರುವ ಪಾತ್ರೆಯಿಂದಲೇ ನೀರುಕುಡಿಯಬೇಕು.

ಮೇಲೆ ಹೇಳಿದ ಅಂಶಗಳಲ್ಲಿ ಇಂದ್ರನು ವಿಶ್ವರೂಪನನ್ನು ಸಂಹರಿಸಿದ ವಿಷಯವೂ ಅವನ ಸಂಹಾರದಿಂದ ಇಂದ್ರನಿಗೆ ಪ್ರಾಪ್ತವಾದ ಬ್ರಹ್ಮಹತ್ಯಾದೋಷವೂ, ಆ ದೋಷಪರಿಹಾರಕ್ಕಾಗಿ ಇಂದ್ರನು ಆಚರಿಸಿದ ಕೃತ್ಯಗಳೂ

ಆದರ ಪರಿಣಾಮವಾಗಿ ಸ್ತ್ರೀಯರು ರಜಸ್ವಲೆಯರಾಗಿರುವಾಗ ನಿಯಮವಾಗಿರಬೇಕೆಂಬ ವಿಷಯವೂ ಉಕ್ತವಾಗಿದೆ. ಪ್ರಕೃತಸಂದರ್ಭದಲ್ಲಿ ವಿಶ್ವರೂಪನ ವಧೆಯ ವಿವರ ಮಾತ್ರ ಗ್ರಾಹ್ಯವಾಗಿದ್ದರೂ ಅದಕ್ಕೆ ಸಂಬಂಧಿಸಿದ ಮತ್ತು ಅದೇ ಅನುವಾಕದಲ್ಲಿರುವ ಇತರವಿಷಯಗಳ ಪ್ರಸ್ತಾಪವನ್ನೂ ಇಲ್ಲಿ ಮಾಡಲಾಗಿದೆ. ಏಕೆಂದರೆ ಪುರಾಣಾದಿಗಳಲ್ಲಿ ಇಂದ್ರನಿಗೆ ವೃತ್ರವಧೆಯಿಂದ ಬ್ರಹ್ಮಹತ್ಯಾದೋಷಪ್ರಾಪ್ತವಾಯಿತೆಂದೂ ಅದರ ಪರಿಹಾರಕ್ಕಾಗಿ ಇಂದ್ರನು ಮೇಲೆ ಹೇಳಿದಂತೆ ಪ್ರಯತ್ನಪಟ್ಟನೆಂದೂ ಹೇಳಿರುವುದರಿಂದ ವೇದ ಮತ್ತು ಪುರಾಣಾದಿಗಳ ವಿವರಗಳಿಗೆ ಇರುವ ವ್ಯತ್ಯಾಸವನ್ನು ತೋರಿಸುವುದಕ್ಕಾಗಿ ಈ ವಿವರಣೆಯು ಅವಶ್ಯಕವಾಯಿತು.



## ಎಂಟನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಪ್ರ ಕೇತುನೇತಿ ನವರ್ಚಮಷ್ಟಮಂ ಸೂಕ್ತಂ ತ್ರೈಷ್ಟುಭಂ । ತ್ವಾಷ್ಟ್ರಪುತ್ರಸ್ತ್ರಿಶಿರಾ ನಾಮರ್ಷಿಃ । ಆದಿತಃ ಷಡಾಗ್ನೇಯ್ಯಸ್ತತಸ್ತಿಸ್ರ ಐಂದ್ರ್ಯಃ । ತಥಾ ಚಾನುಕ್ರಾಂತಂ । ಪ್ರ ಕೇತುನಾ ನವ ತ್ರಿಶಿರಾಸ್ತ್ವಾಷ್ಟ್ರಸ್ತ್ರ್ಯೃಚೋಽಂತ್ಯ ಐಂದ್ರ ಇತಿ ॥ ಆದಿತಃ ಷಣ್ಣಾಂ ಪ್ರಾತರನುವಾಕಾಶ್ವಿನಶಸ್ತ್ರಯೋರಾಗ್ನೇಯಕ್ರತಾವುಕ್ತೋ ವಿನಿಯೋಗಃ ॥**

ಅನುವಾದವು—**ಪ್ರ ಕೇತುನಾ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ತ್ವಷ್ಟೃಪುತ್ರನಾದ ತ್ರಿಶಿರಾಃ ಎಂಬುವನು ಋಷಿಯು. ಈ ಸೂಕ್ತದ ಮೊದಲಿನ ಆರು ಋಕ್ಕುಗಳಿಗೆ ಅಗ್ನಿಯು ದೇವತೆಯು ; ಕೊನೆಯ ಮೂರು ಋಕ್ಕುಗಳಿಗೆ ಇಂದ್ರನು ದೇವತೆಯು. ಅನುಕ್ರಮಣಿಯಲ್ಲಿ **ಪ್ರ ಕೇತುನಾ ನವ ತ್ರಿಶಿರಾಸ್ತ್ವಾಷ್ಟ್ರಸ್ತ್ರ್ಯೃಚೋಽನ್ತ್ಯ ಐಂದ್ರ್ಯಃ** ಎಂದು ಹೇಳಿರುವುದು. ಈ ಸೂಕ್ತದ ಮೊದಲಿನ ಆರು ಋಕ್ಕುಗಳಿಗೆ ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಲ್ಲಿ ಆಗ್ನೇಯಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಗಾಗಿ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೮

ಮಂಡಲ—೧೦ । ಅನುವಾಕ—೧ । ಸೂಕ್ತ—೮ ।
ಅಷ್ಟಕ—೭ । ಅಧ್ಯಾಯ—೬ । ವರ್ಗ—೩, ೪ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ।
ಋಷಿಃ—ತ್ರಿಶಿರಾಸ್ತ್ವಾಷ್ಟ್ರಃ ॥
ದೇವತಾ—೧-೬. ಅಗ್ನಿಃ । ೭-೯. ಇಂದ್ರಃ ।
ಛಂದಃ—ತ್ರಿಷ್ಟುಪ್ ॥

। ಸಂಹಿತಾಪಾಠಃ ।

ಪ್ರ ಕೇತುನಾ ಬೃಹತಾ ಯಾತ್ಯಗ್ನಿರಾ ರೋದಸೀ ವೃಷಭೋ ರೋರವೀತಿ ।
ದಿವಶ್ಚಿದಂತಾಁ ಉಪಮಾಁ ಉದಾನಳಗಾಮುಪಸ್ಥೇ ಮಹಿಷೋ ವವರ್ಧ ॥

॥ ಪದಪಾಠಃ ॥

ಪ್ರ । ಕೇತುನಾ । ಬೃಹತಾ । ಯಾತಿ । ಅಗ್ನಿಃ । ಆ । ರೋದಸೀ ಇತಿ । ವೃಷಭಃ । ರೋರವೀತಿ ।
ದಿವಃ । ಚಿತ್ । ಅಂತಾನ್ । ಉಪऽಮಾನ್ । ಉತ್ । ಆನಟ್ । ಅಪಾಂ । ಉಪऽಸ್ಥೇ । ಮಹಿಷಃ ।
ವವರ್ಧ ॥ ೧ ॥

॥ ಸಾಯಣಭಾಷ್ಯಂ ॥

ಅಗ್ನಿರ್ಬೃಹತಾ ಮಹತಾ ಕೇತುನಾ ಪ್ರಜ್ಞಾನೇನ ಯುಕ್ತಃ ಸನ್ನಿದಾನೀಂ ರೋದಸೀ ದ್ಯಾವಾಪೃಥಿವ್ಯೌ ಪ್ರ ಯಾತಿ । ಪ್ರಕರ್ಷೇಣ ಗಚ್ಛತಿ । ಕಿಂಚ ದೇವಾನಾಮಾಹ್ವಾನಕಾಲೇ ವೃಷಭ ಇವ ರೋರವೀತಿ । ಅತ್ಯರ್ಥಂ ಶಬ್ದಂ ಕರೋತಿ । ದಿವಶ್ಚಿದ್ದ್ಯುಲೋಕಸ್ಯಾಪ್ಯಂತಾನವಸಾನಾನುಪಮಾನ್ ಸಮೀಪಾಂಶ್ಚ ಪ್ರದೇಶಾನ್ ಜ್ವಲನಾತ್ಮನಾದಿತ್ಯಾತ್ಮನಾ ವಾ ಸ್ಥಿತ ಉದಾನಟ್ । ಊರ್ಧ್ವಂ ವ್ಯಾಪ್ನೋತಿ । ಅಪಾಂ ವೃಷ್ಟಿಲಕ್ಷಣಾನಾಮುದಕಾನಾಮುಪಸ್ಥ ಉಪಸ್ಥಾನೇಽಂತರಿಕ್ಷೇ ವೈದ್ಯುತಾತ್ಮನಾ ಮಹಿಷೋ ಮಹಾನ್ವವರ್ಧ । ವರ್ಧತೇ ॥

। ಪ್ರತಿಪದಾರ್ಥ ।

ಅಗ್ನಿಃ—ಅಗ್ನಿಯು । ಬೃಹತಾ—ಮಹತ್ತಾದ । ಕೇತುನಾ—ಪ್ರಜ್ಞಾಪಕ ಚಿಹ್ನದಿಂದ ಕೂಡಿ । ಆ—ಈಗ । ರೋದಸೀ—ದ್ಯಾವಾಪೃಥಿವಿಗಳಲ್ಲೆಲ್ಲ । ಪ್ರ ಯಾತಿ—ಅತಿಶಯವಾಗಿ ಸಂಚರಿಸುತ್ತಾನೆ । ವೃಷಭಃ—ವೃಷಭದಂತೆ । ರೋರವೀತಿ—ಗರ್ಜನೆಮಾಡುತ್ತಾನೆ । ದಿವಶ್ಚಿತ್—ಅಂತರಿಕ್ಷ ಪ್ರದೇಶದ । ಅಂತಾನ್—ಕೊನೆಯ ಪ್ರದೇಶಗಳನ್ನೂ । ಉಪಮಾನ್—ಸಮೀಪ ಪ್ರದೇಶಗಳನ್ನೂ । ಉದಾನಟ್—ಆಕ್ರಮಿಸಿ ವ್ಯಾಪಿಸುತ್ತಾನೆ । ಅಪಾಂ—ವೃಷ್ಟಿರೂಪವಾದ ಉದಕಗಳ । ಉಪಸ್ಥೇ—ಆಶ್ರಯಸ್ಥಾನವಾದ ಅಂತರಿಕ್ಷದಲ್ಲಿ । ಮಹಿಷಃ—ಮಹಾತ್ಮನಾದ ಅಗ್ನಿಯು । ವವರ್ಧ—ವಿದ್ಯುದ್ರೂಪದಲ್ಲಿ ವೃದ್ಧಿಯನ್ನು ಹೊಂದುತ್ತಾನೆ.

। ಭಾವಾರ್ಥ ।

ಅಗ್ನಿಯು ಮಹತ್ತಾದ ಪ್ರಜ್ಞಾಪಕಚಿಹ್ನದಿಂದ ಕೂಡಿ ಈಗ ದ್ಯಾವಾಪೃಥಿವಿಗಳಲ್ಲೆಲ್ಲ ಅತಿಶಯವಾಗಿ ಸಂಚರಿಸುತ್ತಾನೆ. ವೃಷಭದಂತೆ ಗರ್ಜನೆಮಾಡುತ್ತಾನೆ. ಅಂತರಿಕ್ಷ ಪ್ರದೇಶದ ಕೊನೆಯ ಭಾಗಗಳನ್ನೂ ಸಮೀಪಪ್ರದೇಶ

ಗಳನ್ನೂ ಆಕ್ರಮಿಸಿ ವ್ಯಾಪಿಸುತ್ತಾನೆ. ವೃಷ್ಟಿರೂಪವಾದ ಉದಕಗಳ ಆಶ್ರಯಸ್ಥಾನವಾದ ಅಂತರಿಕ್ಷದಲ್ಲಿ ಮಹಾತ್ಮನಾದ ಅಗ್ನಿಯು ವಿದ್ಯುದ್ರೂಪದಲ್ಲಿ ವೃದ್ಧಿಯನ್ನು ಹೊಂದುತ್ತಾನೆ.

English Translation

Agni traverses heaven and earth with a vast banner ; he roars (like) a bull ; he spreads aloft over the remote and proximate (regions) of the sky ; mighty, he increases in the lap of the water.

॥ ಸಂಹಿತಾಪಾಠಃ ॥

ಮುಮೋದ ಗರ್ಭೋ ವೃಷಭಃ ಕಕುದ್ಮಾನಸ್ರೇಮಾ ವತ್ಸಃ ಶಿಮೀವಾ
ಅರಾವೀತ್ ।
ಸ ದೇವತಾತ್ಯುದ್ಯತಾನಿ ಕೃಣ್ವನ್ತ್ಸ್ವೇಷು ಕ್ಷಯೇಷು ಪ್ರಥಮೋ ಜಿಗಾತಿ ॥

॥ ಪದಪಾಠಃ ॥

ಮುಮೋದ । ಗರ್ಭಃ । ವೃಷಭಃ । ಕಕುತ್ಽಮಾನ್ । ಅಸ್ರೇಮಾ । ವತ್ಸಃ । ಶಿಮೀಽವಾನ್ । ಅರಾವೀತ್ ।

ಸಃ । ದೇವಽತಾತಿ । ಉತ್ಽಯತಾನಿ । ಕೃಣ್ವನ್ । ಸ್ವೇಷು । ಕ್ಷಯೇಷು । ಪ್ರಥಮಃ । ಜಿಗಾತಿ ॥ ೨ ॥

॥ ಸಾಯಣಭಾಷ್ಯಂ ॥

ಗರ್ಭೋ ದ್ಯಾವಾಪೃಥಿವ್ಯೋರಂತರ್ಗತೋ ವೃಷಭಃ ಕಾಮಾನಾಂ ವರ್ಷಿತಾಗ್ನಿಃ ಕಕುದ್ಮಾನುನ್ನತತೇಜಸ್ಕೋ ಮುಮೋದ ಮೋದತೇ । ಕಿಂಚಾಸ್ರೇಮಾ । ಪ್ರಶಸ್ಯನಾಮೈತತ್ । ಪ್ರಶಸ್ತೋ ವತ್ಸೋ ನಕ್ತೋಷಸೋರ್ವತ್ಸಭೂತಃ ಸಾಯಂಪ್ರಾತರಾಹುತ್ಯುಪಜೀವನಾತ್ ಶಿಮೀವಾನ್ ಹವಿರ್ವಹನದೇವಾಹ್ವಾನಾದಿಕರ್ಮವಾನಗ್ನಿರರಾವೀತ್ । ದೇವಾಹ್ವಾನಾದಿಶಬ್ದಂ ಕರೋತಿ । ಸೋಽಗ್ನಿರ್ದೇವತಾತಿ ಯಜ್ಞ ಉದ್ಯತಾನ್ಯುದ್ಯಮಾನ್ಯುತ್ಸಾಹಕಕರ್ಮಾಣಿ ಕೃಣ್ವನ್ ಕುರ್ವನ್ ಸ್ವೇಷು ಕ್ಷಯೇಷ್ವಾತ್ಮೀಯೇಷ್ವಾಹವನೀಯಾದಿಸ್ಥಾನೇಷು ಸ್ಥಿತಃ ಪ್ರಥಮೋ ದೇವಾನಾಂ ಸ್ಥಾನೇಷು ಮುಖ್ಯೋ ಜಿಗಾತಿ । ಗಚ್ಛತಿ ॥

॥ ಪ್ರತಿಪದಾರ್ಥ ॥

**ಗರ್ಭಃ**—ದ್ಯಾವಾಪೃಥಿವಿಗಳಿಗೆ ಗರ್ಭಭೂತನೂ । **ವೃಷಭಃ**—ಕಾಮುವರ್ಷಕನೂ । **ಕಕುದ್ಮಾನ್**—ಉನ್ನತವಾದ ತೇಜಸ್ಸುಳ್ಳವನೂ ಆದ ಅಗ್ನಿಯು । **ಮುಮೊದ** ಹರ್ಷಗೊಳ್ಳುತ್ತಾನೆ । **ಅಸ್ರೇಮಾ**—ಪ್ರಶಂಸಾ

ರ್ಹನೂ । **ವತ್ಸಃ**—ಅಹೋರಾತ್ರಗಳ ಪುತ್ರರೂಪನೂ । **ಶಿಮೀವಾನ್**—ಹವಿರಾದಾನಕರ್ಮವುಳ್ಳವನೂ ಆದ ಅಗ್ನಿಯು । **ಅರಾವೀತ್**— ಶಬ್ದವನ್ನು ಮಾಡುತ್ತಾನೆ । **ಸಃ**—ಅದೇ ಅಗ್ನಿಯು । **ದೇವತಾತಿ**—ದೇವಪೂಜಕವಾದ ಯಜ್ಞದಲ್ಲಿ । **ಉದ್ಯತಾನಿ**—ಉತ್ಸಾಹಯುತವಾದ ಕರ್ಮಗಳನ್ನು । **ಕೃಣ್ವನ್**—ನೆರವೇರಿಸುತ್ತ । **ಸ್ವೇಷು**— ತನ್ನದೇ ಆದ । **ಕ್ಷಯೇಷು**—ಆಹವನೀಯಾದಿಸ್ಥಾನಗಳಲ್ಲಿದ್ದು । **ಪ್ರಥಮಃ**—ದೇವತೆಗಳಲ್ಲೆಲ್ಲ ಮುಖ್ಯನಾಗಿ । **ಜಿಗಾತಿ**—ಸಂಚರಿಸುತ್ತಾನೆ.

॥ ಭಾವಾರ್ಥ ॥

ದ್ಯಾವಾಪೃಥಿವಿಗಳಿಗೆ ಗರ್ಭಭೂತನೂ, ಕಾಮವರ್ಷಕನೂ, ಉನ್ನತವಾದ ತೇಜಸ್ಸುಳ್ಳವನೂ ಆದ ಅಗ್ನಿಯು ಹರ್ಷಗೊಳ್ಳುತ್ತಾನೆ. ಪ್ರಶಂಸಾರ್ಹನೂ, ಅಹೋರಾತ್ರಗಳ ಪುತ್ರರೂಪನೂ, ಹವಿರಾದಾನಕರ್ಮವುಳ್ಳವನೂ ಆದ ಅಗ್ನಿಯು ಶಬ್ದವನ್ನು ಮಾಡುತ್ತಾನೆ. ಅದೇ ಅಗ್ನಿಯು ದೇವಪೂಜಕವಾದ ಯಜ್ಞದಲ್ಲಿ ಉತ್ಸಾಹಯುತವಾದ ಕರ್ಮಗಳನ್ನು ನೆರವೇರಿಸುತ್ತಾ ತನ್ನದೇ ಆದ ಆಹವನೀಯಾದಿಸ್ಥಾನಗಳಲ್ಲಿದ್ದು ದೇವತೆಗಳಲ್ಲೆಲ್ಲ ಮುಖ್ಯನಾಗಿ ಸಂಚರಿಸುತ್ತಾನೆ.

## English Translation

The emoryo (of heaven and earth), the showerer (of benefits), the glorious, rejoices ; the excellent child (of morn and eve), the celebrator of holy rites calls aloud : assiduous in exertions at the worship of the gods, he moves chief in his own abodes.

॥ ಸಂಹಿತಾಪಾಠಃ ॥

ಆ ಯೋ ಮೂರ್ಧಾನಂ ಪಿತ್ರೋರರಬ್ಧ ನ್ಯಧ್ವರೇ ದಧಿರೇ ಸೂರೋ ಅರ್ಣಃ ।
ಅಸ್ಯ ಪತ್ಮನ್ನರುಷೀರಶ್ವಬುಧ್ನಾ ಋತಸ್ಯ ಯೋನೌ ತನ್ವೋ ಜುಷಂತ ॥ ೩ ॥

॥ ಪದಪಾಠಃ ॥

ಆ । ಯಃ । ಮೂರ್ಧಾನಂ । ಪಿತ್ರೋಃ । ಅರಬ್ಧ । ನಿ । ಅಧ್ವರೇ । ದಧಿರೇ । ಸೂರಃ । ಅರ್ಣಃ ।
ಅಸ್ಯ । ಪತ್ಮನ್ । ಅರುಷೀಃ । ಅಶ್ವಽಬುಧ್ನಾಃ । ಋತಸ್ಯ । ಯೋನೌ । ತನ್ವಃ । ಜುಷಂತ ॥ ೩ ॥

॥ ಸಾಯಣಭಾಷ್ಯಂ ॥

ಯೋಽಗ್ನಿಃ ಪಿತ್ರೋರ್ಮಾತಾಪಿತೃಭೂತಯೋರ್ದ್ಯಾವಾಪೃಥಿವ್ಯೋರ್ಮೂರ್ಧಾನಮಾರಬ್ಧ ಸ್ವತೇಜೋಭಿರಾರಭತೇ । ಯದ್ವಾ । ಮಾತಾಪಿತೃಭೂತಯೋರರಣ್ಯೋರ್ಮೂರ್ಧಾನಂ ಶಿರೋವತ್ಸ್ಥ-

**ಧಾನಭೂತಂ ಮಂಥನಪ್ರದೇಶಂ । ಆ ಋಕ್ಷಪರ್ಥೇ । ಆರಬ್ಧ ಈಷದ್ಧಿನಸ್ತಿ । ನಿರ್ಮಥನಕಾಲೇಽಪಿ ದಾಹೇನ ದಗ್ಧುಂ ಸಮರ್ಥಃ । ಸೂರಃ ಸುವೀರ್ಯಸ್ಯಾಗ್ನೇರರ್ಣೋ ಗಮನಶೀಲಂ ತೇಜೋಽಧ್ವರೇ ಯಜ್ಞೇ ನಿ ದಧಿರೇ । ಯಷ್ಟಾರೋ ನಿಯಮೇನ ಧಾರಯಂತಿ । ಅಸ್ಯಾಗ್ನೇಃ ಪತ್ಮನ್ಪತನೇಽರುಷೀರಾರೋಚಮಾನಾ ಋತಸ್ಯ ಯಜ್ಞಸ್ಯ ಯೋನೌ ಸ್ಥಾನೇಽಶ್ವಬುಧ್ನಾ ವ್ಯಾಪ್ತಮೂಲಾ ಅಶನಬಂಧನಾ ವಾ । ಹವಿರಾಹಾರಾನ್ವಿತಾ ಇತ್ಯರ್ಥಃ । ತನ್ವಸ್ತದೀಯಾಸ್ತನೂರ್ಜುಷಂತ । ಕವಯಃ ಸೇವಂತೇ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಅಗ್ನಿಯು । **ಪಿತ್ರೋಃ**—ತನ್ನ ಮಾತಾಪಿತೃಗಳಾದ ದ್ಯಾವಾಪೃಥಿವಿಗಳ । **ಮೂರ್ಧಾನಂ**—ಉನ್ನತಪ್ರದೇಶವನ್ನು । **ಆ ಅರಬ್ಧ**—ತನ್ನ ತೇಜಸ್ಸಿನಿಂದ ಆಕ್ರಮಿಸಿರುವನೋ । **ಸೂರಃ**—ವೀರ್ಯವಂತನಾದ ಅದೇ ಅಗ್ನಿಯ । **ಅರ್ಣಃ**—ಸಂಚಾರಶೀಲವಾದ ತೇಜಸ್ಸನ್ನು । **ಅಧ್ವರೇ**—ಯಜ್ಞದಲ್ಲಿ । **ನಿ ದಧಿರೇ**—ಋತ್ವಿಕ್ಕುಗಳು ಸ್ಥಾಪಿಸಿದ್ದಾರೆ । **ಅಸ್ಯ**—ಅಗ್ನಿಯ । **ಪತ್ಮನ್**—ಸಂಚಾರಕಾಲದಲ್ಲಿ । **ಅರುಷೀಃ**—ಆಕರ್ಷಕವಾದವೂ । **ಋತಸ್ಯ**—ಯಜ್ಞದ । **ಯೋನೌ**—ಸ್ಥಾನದಲ್ಲಿ । **ಅಶ್ವಬುಧ್ನಾಃ**—ಮೂಲಸ್ಥಾನವನ್ನೆಲ್ಲ ಆಕ್ರಮಿಸಿರುವುವೂ ಆದ । **ತನ್ವಃ**—ಅಗ್ನಿಯ ತೇಜೋರೂಪವಾದ ಶರೀರವನ್ನು । **ಜುಷಂತ**—ಅವರು ಸೇವಿಸುತ್ತಾರೆ.

॥ ಭಾವಾರ್ಥ ॥

ಯಾವ ಅಗ್ನಿಯು ತನ್ನ ಮಾತಾಪಿತೃಗಳಾದ ದ್ಯಾವಾಪೃಥಿವಿಗಳ ಉನ್ನತಪ್ರದೇಶವನ್ನು ತನ್ನ ತೇಜಸ್ಸಿನಿಂದ ಆಕ್ರಮಿಸಿರುವನೋ, ವೀರ್ಯವಂತನಾದ ಅದೇ ಅಗ್ನಿಯು ಸಂಚಾರಶೀಲವಾದ ತೇಜಸ್ಸನ್ನು ಯಜ್ಞದಲ್ಲಿ ಋತ್ವಿಕ್ಕುಗಳು ನಿಯಮಿಸಿ ಸ್ಥಾಪಿಸಿದ್ದಾರೆ. ಅಗ್ನಿಯು ಸಂಚಾರಕಾಲದಲ್ಲಿ ಆಕರ್ಷಕವಾದವೂ ಯಜ್ಞಸ್ಥಾನದಲ್ಲಿ ಮೂಲಪ್ರದೇಶವನ್ನೆಲ್ಲಾ ಆವರಿಸಿರುವುವೂ ಆದ ಅಗ್ನಿಯ ತೇಜೋರೂಪವಾದ ಶರೀರವನ್ನು ಅವರು ಸೇವಿಸುತ್ತಾರೆ.

English Translation

They have placed in the sacrifice the radiance of the powerful Agni, who seizes hold of the forehead of his parents, gratifying his cherished, radiant, and expanding limbs, in their course, in their chamber of sacrifice.

॥ ಸಂಹಿತಾಪಾಠಃ ॥

ಉಷಉಷೋ ಹಿ ವಸೋ ಅಗ್ರಮೇಷಿ ತ್ವಂ ಯಮಯೋರಭವೋ ವಿಭಾವಾ ।

ಋತಾಯ ಸಪ್ತ ದಧಿಷೇ ಪದಾನಿ ಜನಯನ್ಮಿತ್ರಂ ತನ್ವೇ೩ ಸ್ವಾಯೈ ॥ ೪ ॥

॥ ಪದಪಾಠಃ ॥

ಉಷಃ೽ಉಷಃ । ಹಿ । ವಸೋ ಇತಿ । ಅಗ್ರಂ । ಏಷಿ । ತ್ವಂ । ಯಮಯೋಃ । ಅಭವಃ । ವಿಭಾ೽ವಾ । ಋತಾಯ । ಸಪ್ತ । ದಧಿಷೇ । ಪದಾನಿ । ಜನಯನ್ । ಮಿತ್ರಂ । ತನ್ವೇ । ಸ್ವಾಯೈ ॥ ೪ ॥

॥ ಸಾಯಣಭಾಷ್ಯಂ ॥

ಹೇ ವಸೋ ಸ್ವೇನ ತೇಜಸಾ ಸರ್ವಸ್ಯಾಚ್ಛಾದಯಿತರ್ವಸುಮನ್ವಾ ಪ್ರಶಸ್ಯ ವಾಗ್ನೇ ತ್ವಮುಷ ಉಷಃ ಸರ್ವಸ್ಯಾ ಏವೋಷಸೋಽಗ್ರಂ ಪೂರ್ವಮೇಷಿ । ಪ್ರಾಪ್ನೋಷಿ । ಅಪಿ ಚ ಯಮಯೋರ್ಯುಗ್ಮಯೋಃ ಪರಸ್ಪರಮನಿಯುಕ್ತಯೋರಹೋರಾತ್ರಯೋರ್ವಿಭಾವಾ ದೀಪ್ತಿಮಾನಭವಃ । ಭವಸಿ । ತನ್ವೇ ಸ್ವಾಯಾ ಆತ್ಮೀಯಾಚ್ಛರೀರಾನ್ಮಿತ್ರಮಾದಿತ್ಯಂ ಜನಯನ್ನುತ್ಪಾದಯನ್ ಸಪ್ತ ಪದಾನಿ ಸಪ್ತಸಂಖ್ಯಾಕಾನಿ ಧಿಷ್ಣ್ಯಾದಿಸ್ಥಾನಾನ್ಯೃತಾಯ ಯಜ್ಞಾರ್ಥಂ ದಧಿಷೇ । ಧಾರಯಸಿ ॥

॥ ಪ್ರತಿಪದಾರ್ಥ ॥

**ವಸೋ**—ನಿನ್ನ ತೇಜಸ್ಸಿನಿಂದ ಸಕಲವನ್ನೂ ವ್ಯಾಪಿಸುವ ಎಲೈ ಅಗ್ನಿಯೇ । **ತ್ವಂ**—ನೀನು । **ಉಷಃ ಉಷಃ**—ಪ್ರತಿಯೊಂದು ಉಷಃಕಾಲದಲ್ಲಿಯೂ **ಅಗ್ರಂ**—ಪೂರ್ವಸ್ಥಾನವನ್ನು । **ಏಷಿ**—ಪಡೆಯುತ್ತೀಯೆ । **ಯಮಯೋಃ**—ಅಹೋರಾತ್ರಗಳೆರಡನ್ನೂ । **ವಿಭಾವಾ**—ಪ್ರಕಾಶಪಡಿಸುವವನಾಗಿ । **ಅಭವಃ**—ಆಗಿದ್ದೀಯೆ । **ಸ್ವಾಯೈ**—ನಿನ್ನ । **ತನ್ವೇ**—ಶರೀರದಿಂದ । **ಮಿತ್ರಂ**—ಆದಿತ್ಯನನ್ನು । **ಜನಯನ್**—ಉತ್ಪನ್ನಮಾಡುತ್ತ । **ಸಪ್ತ ಪದಾನಿ**—ಸಪ್ತಸಂಖ್ಯಾಕವಾದ ಸ್ಥಾನವನ್ನು । **ಋತಾಯ**—ಯಜ್ಞಾರ್ಥವಾಗಿ । **ದಧಿಷೇ**—ಧರಿಸಿದ್ದೀಯೆ.

॥ ಭಾವಾರ್ಥ ॥

ಸ್ವತೇಜಸ್ಸಿನಿಂದ ಸಕಲವನ್ನೂ ವ್ಯಾಪಿಸತಕ್ಕ ಎಲೈ ಅಗ್ನಿಯೇ, ನೀನು ಪ್ರತಿಯೊಂದು ಉಷಃಕಾಲದಲ್ಲಿಯೂ ಪೂರ್ವಸ್ಥಾನವನ್ನು ಪಡೆಯುತ್ತೀಯೆ. ಅಹೋರಾತ್ರಗಳೆರಡನ್ನೂ ಪ್ರಕಾಶಪಡಿಸುವವನಾಗಿ ಆಗಿದ್ದೀಯೆ. ನಿನ್ನ ಶರೀರದಿಂದಲೇ ಆದಿತ್ಯನನ್ನು ಉತ್ಪನ್ನಮಾಡುತ್ತ ಸಪ್ತಸಂಖ್ಯಾಕವಾದ ಸ್ಥಾನವನ್ನು ಯಜ್ಞಾರ್ಥವಾಗಿ ಧರಿಸಿದ್ದೀಯೆ.

English Translation

Opulent Agni, you precede dawn after dawn. You are the illuminator of the twin (day and night) : engendering Mitra from your own preson, you retain seven places for sacrifice

॥ ಸಂಹಿತಾಪಾಠಃ ॥

ಭುವಶ್ಚಕ್ಷುರ್ಮಹ ಋತಸ್ಯ ಗೋಪಾ ಭುವೋ ವರುಣೋ ಯದೃತಾಯ ವೇಷಿ

ಭುವೋ ಅಪಾಂ ನಪಾಜ್ಜಾತವೇದೋ ಭುವೋ ದೂತೋ ಯಸ್ಯ ಹವ್ಯಂ
ಜುಜೋಷಃ ॥ ೫ ॥

॥ ಪದಪಾಠಃ ॥

ಭುವಃ । ಚಕ್ಷುಃ । ಮಹಃ । ಋತಸ್ಯ । ಗೋಪಾಃ । ಭುವಃ । ವರುಣಃ । ಯತ್ । ಋತಾಯ । ವೇಷಿ ।
ಭುವಃ । ಅಪಾಂ । ನಪಾತ್ । ಜಾತಽವೇದಃ । ಭುವಃ । ದೂತಃ । ಯಸ್ಯ । ಹವ್ಯಂ । ಜುಜೋಷಃ ॥೫॥

॥ ಸಾಯಣಭಾಷ್ಯಂ ॥

ಮಹೋ ಮಹತ ಋತಸ್ಯ ಯಜ್ಞಸ್ಯ ಹೇ ಅಗ್ನೇ ತ್ವಂ ಚಕ್ಷುರಿವ ಪ್ರಕಾಶಕೋ ಭುವಃ । ಭವಸಿ । ಗೋಪಾ ಯಜ್ಞಸ್ಯ ರಕ್ಷಕಸ್ತ್ವಮೇವ ಭವಸಿ । ಯದ್ಯದರ್ತಾಯ ಸೋಮರಸಲಕ್ಷಣಸ್ಯೋದಕಸ್ಯಾದಾನಾರ್ಥಂ ವರುಣ ಆದಿತ್ಯೋ ವೇಷಿ ಗಚ್ಛಸಿ ತದಾ ತ್ವಮೇವ ಭುವಃ । ಭವಸಿ ಹೇ ಜಾತವೇದೋ ಜಾತಪ್ರಜ್ಞಾಗ್ನೇ ಅಪಾಂ ವೃಷ್ಟಿಲಕ್ಷಣಾನಾಮುದಕಾನಾಂ ನಪಾತ್ ಪೌತ್ರಸ್ತ್ವಮೇವ ಭುವಃ । ಭವಸಿ । ಅದ್ಭ್ಯೋ ಹಿ ಮೇಘೋ ಜಾಯತೇ ಮೇಘಾದಗ್ನಿರ್ವಿದ್ಯುದ್ರೂಪೋ ಜಾಯತ ಇತ್ಯಪಾಂ ಪೌತ್ರತ್ವಮುಚ್ಯತೇ । ಯಸ್ಯ ಯಜಮಾನಸ್ಯ ಹವ್ಯಂ ಹವಿರ್ಜುಜೋಷಃ ಸೇವಸೇ ತಸ್ಯ ದೂತೋ ಭುವಃ । ಭವಸಿ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ ನೀನು) **ಮಹಃ**—ಮಹತ್ತಾದ । **ಋತಸ್ಯ**—ಯಜ್ಞಕ್ಕೆ । **ಚಕ್ಷುಃ**—ಪ್ರಕಾಶಕನಾಗಿ । **ಭುವಃ**—ಆಗಿದ್ದೀಯೆ । **ಗೋಪಾಃ**—ಯಜ್ಞರಕ್ಷಕನಾಗಿದ್ದೀಯೆ । **ಯತ್**—ಯಾವಾಗ । **ಋತಾಯ**—ಉದಕಾರ್ಥವಾಗಿ । (ಯಜ್ಞಾರ್ಥವಾಗಿ) । **ವೇಷಿ**—ಹೋಗುವೆಯೋ ಆಗ । **ವರುಣಃ**—ವರುಣರೂಪನಾಗಿ । **ಭುವಃ**—ಆಗುತ್ತೀಯೆ । **ಜಾತವೇದಃ**—ಜಾತಪ್ರಜ್ಞನಾದ ಎಲೈ ಅಗ್ನಿಯೇ । **ಅಪಾಂ**—ವೃಷ್ಟ್ಯುದಕಗಳಿಗೆ । **ನಪಾತ್**—ಪೌತ್ರರೂಪನಾಗಿ । **ಭುವಃ**—ಆಗಿದ್ದೀಯೆ । **ಯಸ್ಯ**—ಯಾವ ಯಜಮಾನನ । **ಹವ್ಯಂ**—ಹವಿಸ್ಸನ್ನು । **ಜುಜೋಷಃ**—ಸೇವಿಸುವೆಯೋ । **ದೂತಃ**—ಅವನಿಗೆ ದೂತನಾಗಿ । **ಭುವಃ**—ಆಗಿದ್ದೀಯೆ.

। ಭಾವಾರ್ಥ ।

ಎಲೈ ಅಗ್ನಿಯೇ, ನೀನು ಯಜ್ಞಕ್ಕೆ ಪ್ರಕಾಶಕನಾಗಿದ್ದೀಯೆ. ಯಜ್ಞರಕ್ಷಕನಾಗಿದ್ದೀಯೆ. ಯಾವಾಗ ನೀನು ಯಜ್ಞಾರ್ಥವಾಗಿ ಹೋಗುವೆಯೋ ಆಗ ವರುಣರೂಪನಾಗಿದ್ದೀಯೆ. ಜಾತಪ್ರಜ್ಞನಾದ ಎಲೈ ಅಗ್ನಿಯೇ, ವೃಷ್ಟ್ಯುದಕಗಳಿಗೆ ಪೌತ್ರರೂಪನಾಗಿ ಆಗಿದ್ದೀಯೆ. ಯಾವ ಯಜಮಾನನ ಹವಿಸ್ಸನ್ನು ಸೇವಿಸುವೆಯೋ, ಅವನಿಗೆ ದೂತನಾಗಿ ಆಗಿದ್ದೀಯೆ.

## English Translation

You are the eye, the protector of the great sacrifice : when you proceed to the rite, you are Varuna ; you are the grandson of the waters, Jatavedas ; you are the messenger (of him) whose oblation you enjoy.

। ಸಂಹಿತಾಪಾಠಃ ।

ಭುವೋ ಯಜ್ಞಸ್ಯ ರಜಸಶ್ಚ ನೇತಾ ಯತ್ರಾ ನಿಯುದ್ಭಿಃ ಸಚಸೇ ಶಿವಾಭಿಃ ।
ದಿವಿ ಮೂರ್ಧಾನಂ ದಧಿಷೇ ಸ್ವರ್ಷಾಂ ಜಿಹ್ವಾಮಗ್ನೇ ಚಕೃಷೇ ಹವ್ಯವಾಹಂ ॥ ೬ ॥

॥ ಪದಪಾಠಃ ॥

ಭುವಃ । ಯಜ್ಞಸ್ಯ । ರಜಸಃ । ಚ । ನೇತಾ । ಯತ್ರ । ನಿಯುತ್ಽಭಿಃ । ಸಚಸೇ । ಶಿವಾಭಿಃ ।
ದಿವಿ । ಮೂರ್ಧಾನಂ । ದಧಿಷೇ । ಸ್ವಃಽಸಾಂ । ಜಿಹ್ವಾಂ । ಅಗ್ನೇ । ಚಕೃಷೇ । ಹವ್ಯಽವಾಹಂ ॥ ೬ ॥

। ಸಾಯಣಭಾಷ್ಯಂ ।

ದರ್ಶಪೂರ್ಣಮಾಸಯೋರಾಗ್ನೇಯಸ್ಯ ಯಾಜ್ಯಾ ಭುವೋ ಯಜ್ಞಸ್ಯೇತ್ಯೇಷಾ । ಸೂತ್ರಿತಂ ಚ । ತಾಸಾಂ ಯಾಜ್ಯಾನುವಾಕ್ಯಾ ಅಗ್ನಿರ್ಮೂರ್ಧಾ ಭುವೋ ಯಜ್ಞಸ್ಯ । ಆ-೧-೬ । ಇತಿ ॥ ಆಗ್ನೇಯಿಾ ಕಾಚಿತ್ಕಾಮ್ಯೇಷ್ಟಿಃ । ತಸ್ಯಾಮೇಷೈವ ಯಾಜ್ಯಾ । ಸೂತ್ರಿತಂ ಚ । ಆಗ್ನೇಯ್ಯಾ ಉತ್ತರೇ ನಿತ್ಯೇ ಮೂರ್ಧನ್ವತಃ । ಆ. ೨-೧೦ । ಇತಿ ॥

ಹೇ ಅಗ್ನೇ ತ್ವಂ ಯತ್ರ ಯಸ್ಮಿನ್ನಂತರಿಕ್ಷೇ ಶಿವಾಭಿಃ ಕಲ್ಯಾಣೀಭಿರ್ನಿಯುದ್ಭಿರ್ನಿಯುತ್ಸಂಜ್ಞಕಾಭಿರಶ್ವಜಾತಿಭಿಃ ಸಂಬದ್ಧಂ ವಾಯುಂ ಸಚಸೇ ಸಂಗಚ್ಛಸೇ ತಸ್ಮಿನ್ನಂತರಿಕ್ಷೇ ಯಜ್ಞಸ್ಯ ರಜಸಶ್ಚೋದಕಸ್ಯ ಚ ನೇತಾ ಪ್ರಾಪಯಿತಾ ಭುವಃ । ಭವಸಿ । ಅಗ್ನಿರ್ವಾ ಇತೋ ವೃಷ್ಟಿಂ ಸಮೀರಯತೀತಿ ಶ್ರುತೇಃ । ಕಿಂಚ ದಿವಿ ದ್ಯುಲೋಕೇ ಮೂರ್ಧಾನಂ ಶಿರೋವತ್ಪ್ರಧಾನಭೂತಂ ಸ್ವರ್ಷಾಂ ಸರ್ವಸ್ಯ ಸಂಭಕ್ತಾರಮಾದಿತ್ಯಂ ದಧಿಷೇ । ಹವಿರ್ವಹನದ್ವಾರೇಣ ಧಾರಯಸಿ । ಹೇ ಅಗ್ನೇ ತ್ವಂ ಜಿಹ್ವಾಂ ಜ್ವಾಲಾಂ ಹವ್ಯವಾಹಂ ಹವಿಷೋ ವೋಢ್ರೀಂ ಚಕೃಷೇ । ಕರೋಷಿ ॥

। ಪ್ರತಿಪದಾರ್ಥ ।

(ಎಲೈ ಅಗ್ನಿಯೇ) **ಯತ್ರ**—ಯಾವ ಅಂತರಿಕ್ಷದಲ್ಲಿ । **ಶಿವಾಭಿಃ**—ಮಂಗಳಕರಗಳಾದ । **ನಿಯುದ್ಭಿಃ**—ಅಶ್ವಗಳಿಂದ ಕೂಡಿದ ವಾಯುವನ್ನು । **ಸಚಸೇ**—ಸೇರಿಕೊಳ್ಳುವೆಯೋ ಅಲ್ಲಿ । **ಯಜ್ಞಸ್ಯ**—ಯಜ್ಞಾರ್ಥವಾದ ।

**ರಜಸಃ**—ಉದಕಕ್ಕೆ । **ನೇತಾ**—ಪ್ರಾಪಕನಾಗಿ । **ಭುವಃ**—ಆಗುತ್ತೀಯೆ । **ದಿವಿ**—ದ್ಯುಲೋಕದಲ್ಲಿ । **ಮೂರ್ಧಾನಂ**—ಶಿರಸ್ಸಿನಂತೆ ಪ್ರಧಾನನಾದವನೂ । **ಸ್ವರ್ಷಾಂ**—ಸರ್ವತ್ರ ವ್ಯಾಪಿಸುವವನೂ ಆದ ಆದಿತ್ಯನನ್ನು । **ದಧಿಷೇ**—ಧರಿಸಿದ್ದೀಯೆ । **ಅಗ್ನೇ**—ಎಲೈ ಅಗ್ನಿಯೇ । **ಜಿಹ್ವಾಂ**—ನಿನ್ನ ಜ್ವಾಲಾರೂಪವಾದ ನಾಲಿಗೆಯನ್ನು । **ಹವ್ಯವಾಹಂ**— ಹವಿಸ್ಸನ್ನು ವಹಿಸುವಂತೆ । **ಚಕೃಷೇ**—ಮಾಡುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ಅಂತರಿಕ್ಷದಲ್ಲಿ ಮಂಗಳಕರಗಳಾದ ಅಶ್ವಗಳಿಂದ ಕೂಡಿದ ವಾಯುವನ್ನು ಸೇರಿಕೊಳ್ಳುವೆಯೋ, ಅಲ್ಲಿ ಯಜ್ಞಾರ್ಥವಾದ ಉದಕಕ್ಕೆ ನೀನು ಪ್ರಾಪಕನಾಗುತ್ತೀಯೆ. ದ್ಯುಲೋಕಕ್ಕೆ ಶಿರಸ್ಸಿನಂತೆ ಪ್ರಧಾನನಾದವನೂ, ಸರ್ವತ್ರ ವ್ಯಾಪಿಸುವವನೂ ಆದ ಆದಿತ್ಯನನ್ನು ಧರಿಸಿದ್ದೀಯೆ. ಎಲೈ ಅಗ್ನಿಯೇ, ನಿನ್ನ ಜ್ವಾಲಾರೂಪವಾದ ನಾಲಿಗೆಯನ್ನು ನೀನು ಹವಿರ್ವಾಹಕವಾಗುವಂತೆ ಮಾಡುತ್ತೀಯೆ.

## English Translation

You are the leader of the sacrifice and sacrificial water to the place in which you are associated with the auspicious steeds of the wind : you sustain the all-enjoying (sun) as chief in heaven ; you, Agni, make your tongue the bearer of the oblation

॥ ವಿಶೇಷ ವಿಷಯಗಳು ॥

ದರ್ಶಪೂರ್ಣಮಾಸೇಷ್ಟಿಗಳಲ್ಲಿ ಅಗ್ನಿಯನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ಭುವೋ ಯಜ್ಞಸ್ಯ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ - **ತಾಸಾಂ ಯಾಜ್ಯಾನುವಾಕ್ಯಾ ಅಗ್ನಿರ್ಮೂರ್ಧಾ ಭುವೋ ಯಜ್ಞಸ್ಯ** ಎಂಬ ಸೂತ್ರದಿಂದ (ಆ. ೧-೬) ವಿವೃತವಾಗಿರುವುದು. ಮತ್ತು ಆಗ್ನೇಯೀ ಎಂಬ ಒಂದು ಕಾಮ್ಯೇಷ್ಟಿಯಲ್ಲಿಯೂ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ-**ಆಗ್ನೇಯ್ಯಾ ಉತ್ತರೇ ನಿತ್ಯೇ ಮೂರ್ಧನ್ವತಃ** ಎಂಬ ಸೂತ್ರದಿಂದ (ಆ. ೨ ೧೦) ವಿವೃತವಾಗಿರುವುದು.

॥ ಸಂಹಿತಾಪಾಠ ॥

ಅಸ್ಯ ತ್ರಿತಃ ಕ್ರತುನಾ ವವ್ರೇ ಅಂತರಿಚ್ಛನ್ಧೀತಿಂ ಪಿತುರೇವೈಃ ಪರಸ್ಯ ।
ಸಚಸ್ಯಮಾನಃ ಪಿತ್ರೋರುಪಸ್ಥೇ ಜಾಮಿ ಬ್ರುವಾಣ ಆಯುಧಾನಿ ವೇತಿ ॥

॥ ಪದಪಾಠಃ ॥

ಅಸ್ಯ । ತ್ರಿತಃ । ಕ್ರತುನಾ । ವವ್ರೇ । ಅಂತಃ । ಇಚ್ಛನ್ । ಧೀತಿಂ । ಪಿತುಃ । ಏವೈಃ । ಪರಸ್ಯ ।
ಸಚಸ್ಯಮಾನಃ । ಪಿತ್ರೋಃ । ಉಪಽಸ್ಥೇ । ಜಾಮಿ । ಬ್ರುವಾಣಃ । ಆಯುಧಾನಿ । ವೇತಿ ॥ ೭ ॥

॥ ಸಾಯಣಭಾಷ್ಯಂ ॥

ಅಸ್ಮಿಂಸ್ತೃಚ ಇಮಮರ್ಥಂ ಬ್ರವೀತಿ । ಹೇ ತ್ರಿತ ಸರ್ವೇಷಾಮಾಯುಧಾನಿ ವೇತ್ತಾ ತ್ವಂ ತ್ವಷ್ಟೃಪುತ್ರಸ್ಯ ತ್ರಿಶಿರಸೋ ವದಾರ್ಥಂ ಮಮ ಸಾಹಾಯ್ಯಂ ಕುರ್ವತೀಂದ್ರೇಣೈವಂ ಪೃಷ್ಟಸ್ತ್ರಿತಃ ಸ್ವವೀರ್ಯವೃದ್ಧ್ಯರ್ಥಂ ಯಜ್ಞಭಾಗಂ ವವ್ರೇ । ಸ ಚೇಂದ್ರಸ್ತಸ್ಮೈ ಪಾಣಿಪ್ರಕ್ಷಾಲನಾರ್ಥಂ ಚ ಜಲಂ ಯಜ್ಞಭಾಗಂ ಚ ದತ್ತವಾನ್ । ಅನೇನ ಯಜ್ಞಭಾಗೇನ ವೃದ್ಧವೀರ್ಯಸ್ತ್ರಿತ ಏತತ್ಸಂಜ್ಞಕ ಋಷಿರೇನ್ವೈ-ರಾತ್ಮನೋ ರಕ್ಷಣೈರ್ಯುಕ್ತೋಽಂತರ್ಯಜ್ಞಸ್ಯ ಮಧ್ಯೇ ಧೀತಿಂ ಭಾಗಮಿಚ್ಛನ್ ಪರಸ್ಯೋತ್ಕೃಷ್ಟಸ್ಯ ಪಿತುಃ ಸರ್ವಸ್ಯ ಜಗತಃ ಪಾಲಯಿತುರಸ್ಯೇಂದ್ರಸ್ಯ ಕ್ರತುನಾ ತ್ರಿಶಿರಸೋ ಮಮ ವಧಾರ್ಥಂ ಸಾಹಾಯ್ಯ-ಭೂತೇನ ಕರ್ಮಣಾ ನಿಮಿತ್ತೇನ ವವ್ರೇ । ಸಖಾಯಂ ವೃತವಾನ್ । ಕಿಂಚ ಪಿತ್ರೋರ್ಮಾತಾಪಿತೃಭೂತ-ಯೋರ್ದ್ಯಾವಾಪೃಥಿವ್ಯೋರುಪಸ್ಥೇ ಸಮೀಪಸ್ಥೇ ಯಜ್ಞೇ ಸಚಸ್ಯಮಾನ ಋತ್ವಿಗ್ಭಿಃ ಸೇವ್ಯಮಾನಸ್ತ್ರಿತೋ ಜಾಮಿ ಯೋಗ್ಯಮಿಂದ್ರಸ್ಯಾನುರೂಪಂ ಸ್ತೋತ್ರಂ ಬ್ರುವಾಣ ಇಂದ್ರಸ್ಯ ಬಲವೃದ್ಧ್ಯರ್ಥಮುಚ್ಚಾರಯ-ನ್ನಾಯುಧಾನಿ ಸ್ವಭೂತಾನಿ ವೇತಿ । ತ್ವಷ್ಟೃಪುತ್ರಸ್ಯ ಮಮ ವದಾರ್ಥಮಾಗಚ್ಛತಿ ॥

॥ ಪ್ರತಿಪದಾರ್ಥ ॥

ತ್ರಿತಃ—ತ್ರಿತಸಂಜ್ಞಕನಾದ ಋಷಿಯು । ಏನ್ವೈಃ—ಆತ್ಮರಕ್ಷಣೆಗಳಿಂದ ಕೂಡಿ । ಅಂತಃ—ಯಜ್ಞಮಧ್ಯದಲ್ಲಿ । ಧೀತಿಂ—ಭಾಗವನ್ನು । ಇಚ್ಛನ್—ಅಪೇಕ್ಷಿಸುತ್ತಾ । ಪರಸ್ಯ—ಉತ್ಕೃಷ್ಟನೂ । ಪಿತುಃ—ಪಾಲಕನೂ ಆದ । ಅಸ್ಯ—ಈ ಇಂದ್ರನ ಸಖ್ಯವನ್ನು । ಕ್ರತುನಾ—ಸಹಾಯ ಕರ್ಮನಿಮಿತ್ತವಾಗಿ । ವವ್ರೇ—ಬೇಡಿದನು । ಪಿತ್ರೋಃ—ಜಗತ್ಪಿತೃಗಳಾದ ದ್ಯಾವಾಪೃಥಿವಿಗಳ । ಉಪಸ್ಥೇ—ಸಮೀಪಸ್ಥವಾದ ಯಜ್ಞದಲ್ಲಿ । ಸಚಸ್ಯಮಾನಃ—ಋತ್ವಿಕ್ಕುಗಳಿಂದ ಸೇವಿಸಲ್ಪಟ್ಟವನಾಗಿಯೂ । ಜಾಮಿ—ಇಂದ್ರಪ್ರೀತಿಕರವಾದ ಸ್ತೋತ್ರವನ್ನು । ಬ್ರುವಾಣಃ—ಪಠಿಸುತ್ತಲೂ । ಆಯುಧಾನಿ—ತನ್ನ ಆಯುಧಗಳನ್ನು । ವೇತಿ—ಹಿಡಿಯುತ್ತಾನೆ ।

॥ ಭಾವಾರ್ಥ ॥

ತ್ರಿತಸಂಜ್ಞಕನಾದ ಋಷಿಯು ಆತ್ಮರಕ್ಷಣೆಗಳಿಂದ ಕೂಡಿ ಯಜ್ಞದಲ್ಲಿ ಭಾಗವನ್ನು ಅಪೇಕ್ಷಿಸುತ್ತ ಉತ್ಕೃಷ್ಟನೂ ಪಾಲಕನೂ ಆದ ಇಂದ್ರನ ಸಖ್ಯವನ್ನು ತ್ರಿಶಿರಸ್ಸಿನ ವಧಕ್ಕಾಗಿ ಸಹಾಯಾರ್ಥವಾಗಿ ಬೇಡಿದನು. ಜಗತ್ತಿಗೆ ಮಾತಾಪಿತೃಗಳಾದ ದ್ಯಾವಾಪೃಥಿವಿಗಳ ಸಮೀಪಸ್ಥವಾದ ಯಜ್ಞದಲ್ಲಿ ಋತ್ವಿಕ್ಕುಗಳಿಂದ ಸೇವಿಸಲ್ಪಟ್ಟವನಾಗಿಯೂ ಇಂದ್ರಪ್ರೀತಿಕರವಾದ ಸ್ತೋತ್ರವನ್ನು ಪಠಿಸುತ್ತಲೂ, ತನ್ನ ಆಯುಧವನ್ನು ಹಿಡಿಯುತ್ತಾನೆ.

## English Translation

Trita by (his own) powers, desiring a share (of the sacrifice), for the sake of taking part in the exploit of the supreme protector (of the world), chose (Indra as his friend) ; attended (by the priests) in the proximity of the parental heaven and earth, and reciting appropriate praise, he takes up his weapons.

॥ ಸಂಹಿತಾಪಾಠಃ ॥

ಸ ಪಿತ್ರ್ಯಾಣ್ಯಾಯುಧಾನಿ ವಿದ್ವಾನಿಂದ್ರೇಷಿತ ಆಪ್ತ್ಯೋ ಅಭ್ಯಯುಧ್ಯತ್ ।
ತ್ರಿಶೀರ್ಷಾಣಂ ಸಪ್ತರಶ್ಮಿಂ ಜಘನ್ವಾನ್ ತ್ವಾಷ್ಟ್ರಸ್ಯ ಚಿನ್ನಿಃ ಸಸೃಜೇ ತ್ರಿತೋ ಗಾಃ ॥ ೮ ॥

॥ ಪದಪಾಠಃ ॥

ಸಃ । ಪಿತ್ರ್ಯಾಣಿ । ಆಯುಧಾನಿ । ವಿದ್ವಾನ್ । ಇಂದ್ರಽಇಷಿತಃ । ಆಪ್ತ್ಯಃ । ಅಭಿ । ಅಯುಧ್ಯತ್ ।
ತ್ರಿಽಶೀರ್ಷಾಣಂ । ಸಪ್ತಽರಶ್ಮಿಂ । ಜಘನ್ವಾನ್ । ತ್ವಾಷ್ಟ್ರಸ್ಯ । ಚಿತ್ ನಿಃ । ಸಸೃಜೇ । ತ್ರಿತಃ । ಗಾಃ ।

॥ ಸಾಯಣಭಾಷ್ಯಂ ॥

ಆಪ್ತ್ಯ ಆಪ್ತ್ಯಸ್ಯ ಪುತ್ರೋಽಪಾಂ ಪುತ್ರೋ ವಾ ॥ ತಕಾರೋಪಜನಶ್ಛಾಂದಸಃ ॥ ಸ ತ್ರಿತಃ ಪಿತ್ರ್ಯಾಣಿ ಸ್ವಪಿತೃಸಂಬಂಧೀನ್ಯಾಯುಧಾನಿ ವಿದ್ವಾಞ್ಜಾನನ್ನಿಂದ್ರೇಷಿತಸ್ತ್ರಿಶಿರಸಾ ಮಯಾ ಸಹ ಯುದ್ಧಾರ್ಥಮಿಂದ್ರೇಣ ಪ್ರೇಷಿತಃ ಸನ್ನಭ್ಯಯುಧ್ಯತ್ । ಅಭಿಮುಖ್ಯೇನ ಯುದ್ಧವಾನ್ । ತದನಂತರಂ ಸಪ್ತರಶ್ಮಿಂ ಶತ್ರುನಿಯಮನಾರ್ಥಂ ಸಪ್ತಪ್ರಗ್ರಹಹಸ್ತಂ । ಯದ್ವಾ । ಸಪ್ತರಶ್ಮಿರಾದಿತ್ಯಃ । ತತ್ಸದೃಶಂ । ತ್ರಿಶೀರ್ಷಾಣಂ ತ್ರಿಶಿರಸ್ಕಂ ಮಾಂ ಜಘನ್ವಾನ್ । ಹತವಾನ್ । ಮೂರ್ಛಿತಂ ಕೃತವಾನಿತ್ಯರ್ಥಃ । ಕಿಂಚ ತ್ರಿತಸ್ತ್ವಾಷ್ಟ್ರಸ್ಯ ಚಿತ್ತ್ವಷ್ಟೃಪುತ್ರಸ್ಯ ಮಮಾಪಿ ಗಾಃ ಪಶೂನ್ನಿಃ ಸಸೃಜೇ । ವಿಸೃಷ್ಟವಾನ್ । ಅಪಹೃತವಾನಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಆಪ್ತ್ಯಃ**—ಉದಕಗಳಿಗೆ ಪುತ್ರನಾದ । **ಸಃ**—ತ್ರಿತನು । **ಪಿತ್ರ್ಯಾಣಿ**—ತನ್ನ ಪಿತೃವಿಗೆ ಸೇರಿದ । **ಆಯುಧಾನಿ**—ಆಯುಧಗಳನ್ನು । **ವಿದ್ವಾನ್**—ಅರಿತವನಾಗಿಯೂ । **ಇಂದ್ರೇಷಿತಃ**—ಇಂದ್ರನಿಂದ ಪ್ರೇರಿತನಾಗಿಯೂ । **ಅಭ್ಯಯುಧ್ಯತ್**—ಶತ್ರುವಿನೊಂದಿಗೆ ಯುದ್ಧಮಾಡಿದನು । **ಸಪ್ತರಶ್ಮಿಂ**—ಏಳುರಶ್ಮಿ (ಆಯುಧ) ಗಳುಳ್ಳವನೂ । **ತ್ರಿಶೀರ್ಷಾಣಂ** — ಮೂರು ತಲೆಯುಳ್ಳವನೂ ಆದ ಶತ್ರುವನ್ನು (ನನ್ನನ್ನು) । **ಜಘನ್ವಾನ್**—ಕೊಂದನು । **ತ್ರಿತಃ**—ತ್ರಿತನು । **ತ್ವಾಷ್ಟ್ರಸ್ಯ ಚಿತ್**—ತ್ವಷ್ಟೃಪುತ್ರನ । **ಗಾಃ**—ಪಶುಗಳನ್ನು । **ನಿಃ ಸಸೃಜೇ**—ಬಿಡಿಸಿದನು ।

॥ ಭಾವಾರ್ಥ ॥

ಉದಕಗಳಿಗೆ ಪುತ್ರನಾದ ತ್ರಿತನು ತನ್ನ ಪಿತೃವಿಗೆ ಸೇರಿದ ಆಯುಧಗಳನ್ನು ಅರಿತವನಾಗಿಯೂ, ಇಂದ್ರನಿಂದ ಪ್ರೇರಿತನಾಗಿಯೂ ಶತ್ರುವಿನೊಂದಿಗೆ ಯುದ್ಧಮಾಡಿದನು. ಏಳು ವಿಧವಾದ ಆಯುಧಗಳುಳ್ಳವನೂ, ಮೂರು ತಲೆಯುಳ್ಳವನೂ ಆದ ಶತ್ರುವನ್ನು ಕೊಂದನು. ತ್ರಿತನು ತ್ವಷ್ಟೃಪುತ್ರನ ಪಶುಗಳನ್ನು ಬಿಡಿಸಿದನು.

## English Translation

He, the son of the waters, incited by Indra, skilled in his paternal weapons, fought against (the enemy), and slew the seven-rayed, three-headed (Asura) : then Trita set free the cows of the son of Twashtri.

। ಸಂಹಿತಾಪಾಠಃ ।

ಭೂರೀದಿಂದ್ರ ಉದಿನಕ್ಷಂತಮೋಜೋಽವಾಭಿನತ್ಸತ್ಪತಿರ್ಮನ್ಯಮಾನಂ ॥
ತ್ವಾಷ್ಟ್ರಸ್ಯ ಚಿದ್ವಿಶ್ವರೂಪಸ್ಯ ಗೋನಾಮಾಚಕ್ರಾಣಸ್ತ್ರೀಣಿ ಶೀರ್ಷಾ ಪರಾ ವರ್ಕ್ ॥ ೯ ॥

ಪದಪಾಠಃ

ಭೂರಿ । ಇತ್ । ಇಂದ್ರಃ । ಉತ್ಽಇನಕ್ಷಂತಂ । ಓಜಃ । ಅವ । ಅಭಿನತ್ । ಸತ್ಽಪತಿಃ । ಮನ್ಯಮಾನಂ
ತ್ವಾಷ್ಟ್ರಸ್ಯ । ಚಿತ್ । ವಿಶ್ವಽರೂಪಸ್ಯ । ಗೋನಾಂ । ಆಽಚಕ್ರಾಣಃ । ತ್ರೀಣಿ । ಶೀರ್ಷಾ । ಪರಾ
ವರ್ಗಿತಿ ವರ್ಕ್ ॥ ೯ ॥

। ಸಾಯಣಭಾಷ್ಯಂ ।

ಸತ್ಪತಿಃ ಸತಾಂ ಪಾಲಕ ಇಂದ್ರೋ ಭೂರೀದ್ಬಹ್ವೇವ ಪೂರ್ವತುಲ್ಯಮತಿರಿಕ್ತಂ ವೌಜೋ ಬಲಮುದಿನಕ್ಷಂತಂ ವ್ಯಾಪ್ನುವಂತಂ ಮನ್ಯಮಾನಂ ಶೂರಮಿತ್ಯಾತ್ಮಾನಂ ಚಿಂತಯಂತಂ । ಯದ್ವಾ । ಮನ್ಯತಿರ್ದೀಪ್ತಿಕರ್ಮಾ ಕ್ರೋಧಕರ್ಮಾ ವಾ । ದೀಪ್ಯಮಾನಂ ಕ್ರುಧ್ಯಂತಂ ವಾ । ತ್ವಷ್ಟೃಪುತ್ರಂ ಮಾಮವಾಭಿನತ್ । ವಜ್ರೇಣ ವಿದಾರಿತವಾನ್ । ವಿದಾರ್ಯ ತ್ವಾಷ್ಟ್ರಸ್ಯ ಚಿತ್ತ್ವಷ್ಟೃಪುತ್ರಸ್ಯಾಪಿ ಗೋನಾಂ ಗವಾಂ । ಸ್ವಾಮಿನ ಇತಿ ಶೇಷಃ । ವಿಶ್ವರೂಪಸ್ಯ ಮಮ ತ್ರೀಣಿ ಶೀರ್ಷಾ ಶೀರ್ಷಾಣ್ಯಾಚಕ್ರಾಣ ಆ ಸಮಂತಾಚ್ಛಬ್ದಂ ಕುರ್ವನ್ ಪರಾ ವರ್ಕ್ । ಪರಾಙ್ಮುಖಸ್ಯ ವೃಕ್ಣವಾನ್ । ಛಿನ್ನವಾನಿತ್ಯರ್ಥಃ । ಈದೃಶಂ ಭಾವಿ ವಸ್ತು ವಿಶ್ವರೂಪಃ ಸ್ವಪ್ನಾಂತೇಽನೇನ ತೃಚೇನ ದೃಷ್ಟವಾನ್ ॥

। ಪ್ರತಿಪದಾರ್ಥ ।

**ಸತ್ಪತಿಃ**—ಸಜ್ಜನರ ಪಾಲಕನಾದ । **ಇಂದ್ರಃ**—ಇಂದ್ರನು । **ಭೂರೀತ್**—ಅತ್ಯಧಿಕವಾಗಿಯೇ । **ಓಜಃ**—ಬಲವನ್ನು । **ಉದಿನಕ್ಷಂತಂ**—ಹೊಂದಿದವನೂ । **ಮನ್ಯಮಾನಂ**—ತಾನೇ ಅಧಿಕನೆಂಬ ದುರಭಿಮಾನವಿದ್ದವನೂ ಆದ ತ್ವಷ್ಟೃಪುತ್ರನನ್ನು । **ಅವಾಭಿನತ್**—ಸೀಳಿಹಾಕಿದನು । **ತ್ವಾಷ್ಟ್ರಸ್ಯ ಚಿತ್**—ತ್ವಷ್ಟೃಪುತ್ರನೂ । **ಗೋನಾಂ**—ಗೋವುಗಳಿಗೆ ಒಡೆಯನೂ ಆದ । **ವಿಶ್ವರೂಪಸ್ಯ**—ವಿಶ್ವರೂಪನ । **ತ್ರೀಣಿ ಶೀರ್ಷಾ**—ಮೂರು ಶಿರಸ್ಸುಗಳನ್ನೂ । **ಆಚಕ್ರಾಣಃ**—ಶಬ್ದಮಾಡುತ್ತ । **ಪರಾ ವರ್ಕ್**—ಸೀಳಿಹಾಕಿದನು.

॥ ಭಾವಾರ್ಥ ॥

ಸಜ್ಜನರ ಪಾಲಕನಾದ ಇಂದ್ರನು ಅತ್ಯಧಿಕವಾಗಿಯೇ ಬಲವನ್ನು ಹೊಂದಿದವನೂ, ತಾನೇ ಅಧಿಕನೆಂಬ ದುರಭಿಮಾನವಿದ್ದವನೂ ಆದ ತ್ವಷ್ಟೃಪುತ್ರನನ್ನು ಸೀಳಿಹಾಕಿದನು. ತ್ವಷ್ಟೃಪುತ್ರನೂ, ಗೋವುಗಳಿಗೆ ಒಡೆಯನೂ ಆದ ವಿಶ್ವರೂಪನ ಮೂರು ಶಿರಸ್ಸುಗಳನ್ನು ಶಬ್ದಮಾಡುತ್ತಾ ಸೀಳಿಹಾಕಿದನು. (ಹೀಗೆಂದು ಈ ಸೂಕ್ತದ ಋಷಿಯಾದ ವಿಶ್ವರೂಪನು ತನ್ನ ಸ್ವಪ್ನದಲ್ಲಿ ಕಂಡನು).

English Translation

Indra, the protector of the virtuous, crushed the arrogant (foe), attaining vast strength ; shouting, he cut off the three heads of the multifom son of Twashtri (the lord) of cattle.

## ಒಂಭತ್ತನೆಯ ಸೂಕ್ತವು.

### ಪೀಠಿಕೆ.

ಈ ಸೂಕ್ತದಲ್ಲಿ ಉದಕಾಭಿಮಾನಿಗಳಾದ ಅಬ್ದೇವತೆಗಳನ್ನು ಸ್ತುತಿಸಲಾಗಿದೆ. ಈ ಸೂಕ್ತಕ್ಕೆ ತ್ರಿಶಿರಾಸ್ತ್ವಾಷ್ಟ್ರಃ ಎಂಬ ತ್ವಷ್ಟೃಪುತ್ರನಾದ ತ್ರಿಶಿರಾ ಎಂಬುವನು ಅಥವಾ ಸಿಂಧುದ್ವೀಪ ಆಂಬರೀಷಃ ಎಂಬುವನು ಋಷಿಯು. ಈ ಸೂಕ್ತದ ೬ನೇ ಋಕ್ಕು ಪ್ರಥಮ ಮಂಡಲದ ೨೩ನೇ ಸೂಕ್ತದ ೨೦ನೆಯ ಋಕ್ಕಿನಲ್ಲಿ ಪಠಿತವಾಗಿದೆ. ಅದರಲ್ಲಿರುವ **ಅಪ್ಸು ಮೇ ಸೋಮಃ** ಎಂಬ ಈ ಋಕ್ಕು ನಾಲ್ಕು ಪಾದಗಳುಳ್ಳ ಅನುಷ್ಟುಪ್ ಛಂದಸ್ಕವಾಗಿದೆ. ಪ್ರಕೃತ ಸೂಕ್ತದಲ್ಲಿರುವ ೬ನೆಯ ಋಕ್ಕಿನಲ್ಲಿ ಮೂರು ಪಾದಗಳು ಮಾತ್ರವಿದ್ದು ಗಾಯತ್ರೀ ಛಂದಸ್ಸಿನ ಮಂತ್ರವಾಗಿದೆ. ಕೊನೆಯ ಪಾದವಾದ **ಆಪಶ್ಚ ವಿಶ್ವಭೇಷಜೀಃ** ಎಂಬ ಪಾದವಿರುವುದಿಲ್ಲ. ಪ್ರಥಮ ಮಂಡಲದ ೨೩ನೆಯ ಸೂಕ್ತಕ್ಕೆ ಕಣ್ವಪುತ್ರನಾದ ಮೇಧಾತಿಥಿ ಎಂಬುವನು ಋಷಿಯು. ಪ್ರಕೃತ ಸೂಕ್ತಕ್ಕೆ ಹಿಂದೆ ಹೇಳಿದಂತೆ ತ್ರಿಶಿರಾಸ್ತ್ವಾಷ್ಟ್ರಃ ಅಥವಾ ಸಿಂಧುದ್ವೀಪನು ಋಷಿಯು. ಇದರಂತೆ ಪ್ರಕೃತ ಸೂಕ್ತದ ೭, ೮, ೯ನೆಯ ಋಕ್ಕುಗಳೂ ಏನೂ ವ್ಯತ್ಯಾಸವಿಲ್ಲದೆ ೨೩ನೆ ಸೂಕ್ತದ ೨೧, ೨೨, ೨೩ನೇ ಋಕ್ಕುಗಳಾಗಿ ಪಠಿತವಾಗಿರುತ್ತವೆ. ಈ ಕಾರಣದಿಂದ ಎಂದರೆ ಪ್ರಕೃತಸೂಕ್ತದ ೬, ೭, ೮, ೯ ಎಂಬ ನಾಲ್ಕು ಋಕ್ಕುಗಳು ಹಿಂದೆಯೇ ಪ್ರಥಮ ಮಂಡಲದ ೨೩ನೇ ಸೂಕ್ತದಲ್ಲಿ ೨೦, ೨೧, ೨೨, ೨೩ನೇ ಋಕ್ಕುಗಳಾಗಿ ಪುನಃ ಪಠಿತವಾಗಿರುವುದರಿಂದ ಈ ಋಕ್ಕುಗಳ ಭಾಷ್ಯವನ್ನು ಭಾಷ್ಯಕಾರರು ಪುನಹ ಬರೆದು ಅರ್ಥ ವಿವರಣೆಮಾಡಿಲ್ಲ. ಆದರೂ ಹಿಂದೆ ಮಾಡಿರುವ ಭಾಷ್ಯವನ್ನೂ ವಿವರಣೆಯನ್ನೂ ಮತ್ತೆ ಬರೆದಿರುತ್ತೇವೆ.

ಆಪಃ ಎಂಬ ಉದಕಾಭಿಮಾನಿದೇವತೆಗಳನ್ನು ಸ್ತುತಿಸುವ ಈ ಸೂಕ್ತಕ್ಕೆ ವಿಶೇಷ ಮಹತ್ತ್ವವಿದೆ. ಈ ಸೂಕ್ತ ಪಠನದಿಂದ ಅಭಿಮಂತ್ರಿತವಾದ ಉದಕಗಳಿಂದ ಸಿಂಧುದ್ವೀಪಋಷಿಯು-ಇಂದ್ರನು ವಿಶ್ವರೂಪನೆಂಬ ತನ್ನ ಪುರೋಹಿತನನ್ನು ಸಂಹಾರಮಾಡಿದುದರಿಂದ ಪ್ರಾಪ್ತವಾದ ಬ್ರಹ್ಮಹತ್ಯಾದೋಷವನ್ನು ಪರಿಹಾರಮಾಡಿ ಪರಿಶುದ್ಧನನ್ನಾಗಿ

ಏಡಿದನೆಂದು ಬೃಹದ್ದೇವತೆಯಲ್ಲಿಯೂ ಋಗ್ವಿಧಾನದಲ್ಲಿಯೂ ಹೇಳಿದೆ. ಇದಲ್ಲದೆ ದ್ವಿಜರಾದವರು ಪ್ರತಿದಿನವೂ ತಾವು ಸಾಯಂಪ್ರಾತಃಕಾಲಗಳಲ್ಲಿ ಪಾಪಪರಿಹಾರಾರ್ಥವಾಗಿ ಆಚರಿಸುವ ಸಂಧ್ಯಾವಂದನಾದಿಗಳಲ್ಲಿ ಈ ಸೂಕ್ತವನ್ನು ಪಠಿಸಿ ಅಭಿಮಂತ್ರಿತವಾದ ಉದಕದಿಂದ ಪ್ರೋಕ್ಷಣೆಮಾಡಿಕೊಳ್ಳುವರು. ಈ ಸೂಕ್ತದ ಮಹತ್ತ್ವವನ್ನೂ ಪಾಪಪರಿಹಾರಕ ಶಕ್ತಿಯನ್ನೂ ಋಗ್ವಿಧಾನವೆಂಬ ಗ್ರಂಥದಲ್ಲಿ ವಿವರಿಸಿರುವುದನ್ನು ಇಲ್ಲಿ ಹೇಳಿದೆ—

**ಆಪೋ ಹಿ ಷ್ಠೇತಿ ನಿಯತಃ ಪ್ರಯುಂಜೀತ ಸದಾ ದ್ವಿಜಃ ।**
**ಸ್ನಾನಾರ್ಥಂ ಶುದ್ಧಿಕಾಮಸ್ತು ಜಪೇತ ತ್ರಿಃ ಸಮಾಹಿತಃ ॥**

(ಋಗ್ವಿಧಾನ. ಅಧ್ಯಾಯ ೩. ಶ್ಲೋ. ೨೦)

ಶರೀರಶುದ್ಧಿಯನ್ನಪೇಕ್ಷಿಸುವ ದ್ವಿಜನು ಸ್ನಾನಮಾಡುವಾಗ ಶುದ್ಧವಾದ ಮನಸ್ಸಿನಿಂದ **ಆಪೋ ಹಿ ಷ್ಠಾ** ಎಂಬ ಈ ಸೂಕ್ತವನ್ನು ಮೂರಾವರ್ತಿ ಪಠಿಸಬೇಕು.

**ಅಪ್ಸು ಚೈವ ನಿಮಜ್ಜಿತ್ವಾ ತ್ರಿಃ ಪಠೇತ್ ಸುಸಮಾಹಿತಃ ॥೨೧॥**

**ಬ್ರಹ್ಮಹಾ ತು ಕಪಾಲೇನ ಖಟ್ವಾಂಗೀ ಚೀರಸಂವೃತಃ ।**
**ಚರೇದ್ದ್ವಾದಶ ವರ್ಷಾಣಿ ಸ್ವಕರ್ಮ ಪರಿಕೀರ್ತಯನ್ ॥೨೨॥**

**ಅಜಪನ್ ಮನಸೈವೈತದಾಪೋ ಹಿ ಷ್ಠೇತಿ ಸಂಸ್ಮರೇತ್ ।**
**ಊರ್ಧ್ವಂ ತು ಪಂಚಮಾದ್ವರ್ಷಾಜ್ಜಪೇದೇವ ಸಹಸ್ರಶಃ ॥೨೩॥**

**ಅಪರಸ್ತು ತ್ರಿಸಾಹಸ್ರೋ ಜಪಃ ಸ್ಯಾತ್ಪ್ರತ್ಯಹಂ ಸದಾ ।**
**ಪೂರ್ಣೇ ತು ದ್ವಾದಶೇ ವರ್ಷೇ ಬ್ರಹ್ಮಹಾ ವಿಪ್ರಮುಚ್ಯತೇ ॥೨೪॥**

ಈ ಮಂತ್ರ ಜಪಮಾಡುವ ಕ್ರಮವು ಹೇಗೆಂದರೆ—ಸೊಂಟದವರೆಗೂ ಇರುವ ನೀರಿನಲ್ಲಿ ಇಳಿದು ಅಲ್ಲಿ ನಿಂತುಕೊಂಡು ಅನನ್ಯಮನಸ್ಕನಾಗಿ ಈ ಸೂಕ್ತವನ್ನು ಜಪಮಾಡಬೇಕು. ಬ್ರಹ್ಮಹತ್ಯಾಮಾಡಿದ ಪುರುಷನು ತನ್ನ ಪಾಪಪರಿಹಾರಾರ್ಥವಾಗಿ ನಾರುಬಟ್ಟೆಯನ್ನುಟ್ಟುಕೊಂಡು ಕಪಾಲಖಟ್ವಗಳನ್ನು ಕೈಯಲ್ಲಿ ಧರಿಸಿ ತಾನು ಮಾಡಿದ ಪಾಪಕೃತ್ಯವನ್ನು ಜನರಿಗೆ ಅಲ್ಲಲ್ಲಿ ತಿಳಿಸುತ್ತಾ, ಹನ್ನೆರಡು ವರ್ಷಗಳವರೆಗೆ ಸಂಚರಿಸುತ್ತಿರಬೇಕು. ಪ್ರತಿದಿನವೂ ಸ್ನಾನಕಾಲದಲ್ಲಿ ಈ ಸೂಕ್ತವನ್ನು ಉಚ್ಚರಿಸುತ್ತಾ ಅಥವಾ ಮನಸ್ಸಿನಲ್ಲಿಯೇ ಜಪಿಸುತ್ತಾ ಸ್ನಾನಮಾಡಬೇಕು. ಐದನೆಯ ವರ್ಷದಿಂದ ಮುಂದಕ್ಕೆ ದಿನಕ್ಕೆ ಸಾವಿರಸಲದಂತೆ ಈ ಸೂಕ್ತವನ್ನು ಜಪಿಸಬೇಕು. ಕೊನೆಕೊನೆಯಲ್ಲಿ ಪ್ರತಿದಿನವೂ ಮೂರುಸಾವಿರ ಜಪಮಾಡಬೇಕು. ಈರೀತಿ ಹನ್ನೆರಡುವರ್ಷ ಪರ್ಯಂತರ ಈ ಸೂಕ್ತವನ್ನು ಜಪಿಸುತ್ತಿದ್ದಲ್ಲಿ ಆ ಪುರುಷನ ಬ್ರಹ್ಮಹತ್ಯಾದೋಷವು ಪರಿಹಾರವಾಗಿ ಅವನು ಶುದ್ಧನಾಗುವನು.

**ಸಮೇತ್ಯ ಬ್ರಾಹ್ಮಣಾನ್ ಬ್ರೂಯುರಥ ತಂ ಚರಿತವ್ರತಂ ।**
**ಆಚರಿತಂ ಭವೇತ್ಕಿಂಚಿನ್ಮಿಥ್ಯಾವಾದೀ ಪತೇತ್ತ್ವಸಃ ॥೨೫॥**
**ದಶಾವರಾನ್ ದಶ ಪರಾನ್ ಹನ್ಯಾತ್ಸ್ವಮನೃತಂ ವದನ್ ।**
**ಓಂ ಭೋ ಇತಿ ವದೇದ್ವಿಪ್ರೈರನುಜ್ಞಾತಃ ಶುಚಿರ್ಜಪೇತ್ ॥೨೬॥**

ಸ್ಥಾಲೀಪಾಕಂ ಚ ಕುರ್ವೀತ ಸೋಽಗ್ನಯೇ ವ್ರತಚಾರಿಣೇ ।
ಏವಂ ಸ ಮುಚ್ಯತೇ ಪಾಪಾತ್ಸಾವಿತ್ರೀಂ ಪ್ರತಿಪದ್ಯ ಚ ॥೨೭॥

ಈರೀತಿ ಹನ್ನೆರಡುವರ್ಷಗಳವರೆಗೆ ಜಪಮಾಡಿದನಂತರ ಬ್ರಾಹ್ಮಣರನ್ನು ಸಭೆಯಲ್ಲಿ ಸೇರಿಸಿ ಕೈಮುಗಿದುಕೊಂಡು ಈರೀತಿ ಹೇಳಬೇಕು—ಎಲೈ ಬ್ರಾಹ್ಮಣರೇ, ಈಗ ನಾನು ಹನ್ನೆರಡು ವರ್ಷಗಳವರೆಗೆ ವ್ರತವನ್ನಾಚರಿಸಿರುವೆನು. ಹಾಗೊಂದುವೇಳೆ ವ್ರತವನ್ನು ಆಚರಿಸದೆ ಸುಳ್ಳುಹೇಳಿದ ಪಕ್ಷದಲ್ಲಿ ನನಗೆ ಪುನಃ ಶಿಕ್ಷೆಯಾಗಲಿ. ಸುಳ್ಳುಹೇಳಿದ್ದಕ್ಕಾಗಿ ನನ್ನ ವಂಶದ ಹಿರಿಯರಲ್ಲಿ ಹಿಂದಿನ ಹತ್ತುಮಂದಿಯನ್ನು ಮುಂದಿನ ಹತ್ತುಜನರನ್ನೂ ಕೊಂದ ಪಾಪವು ನನಗೆ ಬರಲಿ ಎಂದು ಶಪಥಮಾಡಿ ಬ್ರಾಹ್ಮಣರಿಂದ ಅನುಜ್ಞಪ್ತನಾಗಿ ಶುಚಿರ್ಭೂತನಾಗಿ ಮತ್ತೊಂದಾವರ್ತಿ ಮಂತ್ರಜಪವನ್ನು ಮಾಡಬೇಕು ಬಳಿಕ **ಅಗ್ನೇ ವ್ರತಪತೇ** ಎಂದು ಅಗ್ನಿಯನ್ನುದ್ದೇಶಿಸಿ ಹೋಮಮಾಡುವುದಕ್ಕಾಗಿ ಸ್ಥಾಲೀಪಾಕ ಕ್ರಮದಿಂದ ಅಗ್ನಿಯಲ್ಲಿ ಆಹುತಿಯನ್ನರ್ಪಿಸಿ ಗಾಯತ್ರೀಮಂತ್ರಜಪವನ್ನು ಮಾಡಬೇಕು. ಈರೀತಿ ಮಾಡಿದರೆ ಅವನು ಮಾಡಿದ ಬ್ರಹ್ಮಹತ್ಯಾಪಾಪವು ಪರಿಹಾರವಾಗಿ ಶುದ್ಧನಾಗುವನು.

ಬ್ರಹ್ಮಹಾ ತು ಪುರಾ ಶಕ್ರಸ್ತ್ವಾಷ್ಟ್ರಂ ಹತ್ವಾ ತ್ವೃಷಿಂ ಪ್ರಭುಂ ।
ಸಿಂಧುದ್ವೀಪಸ್ತಮೇತಾಭಿರಭಿಷಿಚ್ಯ ವ್ಯಮೋಚಯತ್ ॥೨೮॥

ಹಿಂದೆ ಇಂದ್ರನು ತನಗೆ ಪುರೋಹಿತನಾಗಿದ್ದ ತ್ವಷ್ಟೃಪುತ್ರನಾದ ವಿಶ್ವರೂಪನನ್ನು ಕೊಂದದ್ದರಿಂದ ಅವನಿಗೆ ಬ್ರಹ್ಮ ಹತ್ಯಾದೋಷವು ಪ್ರಾಪ್ತವಾಯಿತು. ಆಗ ಈ ಸೂಕ್ತದ ಋಷಿಯಾದ ಸಿಂಧುದ್ವೀಪಋಷಿಯು ಈ ಸೂಕ್ತದ ಮಂತ್ರಗಳನ್ನು ಪಠಿಸಿ ಮಂತ್ರಪೂತವಾದ ಜಲದಿಂದ ಇಂದ್ರನಿಗೆ ಸ್ನಾನಮಾಡಿಸಿ ಅವನನ್ನು ಬ್ರಹ್ಮಹತ್ಯಾಪಾಪದಿಂದ ಬಿಡುಗಡೆಮಾಡಿದನು.

ಬ್ರಹ್ಮಸ್ವಂ ಚ ಗುರೋರ್ದ್ರವ್ಯಂ ಸ್ತೇಯಂ ಕೃತ್ವಾ ಜಪನ್ನಿಮಾಃ ।
ಅನೇನೈವ ವಿಧಾನೇನ ಷಡ್ಭಿರ್ವರ್ಷೈಃ ಪ್ರಮುಚ್ಯತೇ ॥೨೯॥

ಬ್ರಹ್ಮಹಾ ಚ ಸುರಾಪಶ್ಚ ನಿಯಮೇನ ಜಪನ್ನಿಮಾಃ ।
ಅನೇನೈವೋಪಚಾರೇಣ ಬ್ರಹ್ಮಘ್ನ ಇವ ಮುಚ್ಯತೇ ॥೩೦॥

ಬ್ರಾಹ್ಮಣನ ಸ್ವತ್ತನ್ನು ಅಪಹರಿಸುವುದರಿಂದಲೂ ಗುರುವಿನ ವಿತ್ತಾಪಹಾರವನ್ನು ಮಾಡುವುದರಿಂದಲೂ ಸಂಭವಿಸುವ ಮಹಾಪಾಪವು, ಹಿಂದೆ ಹೇಳಿದ ಕ್ರಮದಂತೆ ಈ ಸೂಕ್ತವನ್ನು ಆರುವರ್ಷಗಳವರೆಗೆ ಜಪಮಾಡಿದಲ್ಲಿ ಪಾಪ ಪರಿಹಾರವಾಗಿ ಪರಿಶುದ್ಧನಾಗುವನು. ಇದಲ್ಲದೆ ಬ್ರಹ್ಮಹತ್ಯಮಾಡಿದವನು, ಮದ್ಯಪಾನಮಾಡಿದವನು ಸಹ ಈ ಸೂಕ್ತವನ್ನು ಹಿಂದೆ ಹೇಳಿದ ಕ್ರಮದಲ್ಲಿ ಜಪಿಸಿದಲ್ಲಿ ಅವನು ಮಾಡಿದ ಪಾಪಗಳಿಂದ ಮುಕ್ತನಾಗುವನು.

ಪ್ರಾತರುತ್ಥಾಯ ಸತತಂ ಕುರ್ಯಾನ್ಮಾರ್ಜನಮಾತ್ಮನಃ ।
ರಾತ್ರೌ ಕೃತಸ್ಯ ಪಾಪಸ್ಯ ಅವಿಜ್ಞಾತಸ್ಯ ನಿಷ್ಕೃತಿಃ ॥೩೧॥

ಸಾಯಂ ಚ ನಿತ್ಯಮೇತಾಭಿಃ ಕುರ್ಯಾನ್ಮಾರ್ಜನಮಾತ್ಮನಃ ।
ದಿವಾ ಕೃತಸ್ಯ ಪಾಪಸ್ಯ ಅವಿಜ್ಞಾತಸ್ಯ ನಿಷ್ಕೃತಿಃ ॥೩೨॥

ಪ್ರಾತಃಕಾಲದಲೆದ್ದು ಸ್ನಾನಾದಿಗಳಿಂದ ಶುಚಿರ್ಭೂತನಾಗಿ ಈ ಸೂಕ್ತದ ಮಂತ್ರಗಳನ್ನು ಪಠಿಸುತ್ತಾ ತನ್ನ ಶರೀರವನ್ನು ನೀರಿನಿಂದ ಪ್ರೋಕ್ಷಿಸಿಕೊಳ್ಳಬೇಕು. ಪ್ರಾತಃಕಾಲದಲ್ಲಿ ಈರೀತಿ ಮಾಡುವ ಮಾರ್ಜನದಿಂದ ರಾತ್ರಿಕಾಲದಲ್ಲಿ ಕಾಣದೆ ಮಾಡಿದ ಪಾಪವು ಪರಿಹಾರವಾಗುವುದು. ಹಾಗೆಯೇ ಸಾಯಂಕಾಲದಲ್ಲಿ ಪ್ರೋಕ್ಷಣೆಮಾಡಿಕೊಳ್ಳುವುದರಿಂದ ಹಗಲಿನಲ್ಲಿ ಕಾಣದೆ ಮಾಡಿದ ಪಾಪಗಳು ಪರಿಹಾರವಾಗುವುವು ಎಂದು ಈ ಸೂಕ್ತದ ಪಾಪಪರಿಹಾರಕಶಕ್ತಿಯನ್ನು ಪ್ರಶಂಸಿಸಲಾಗಿದೆ.

ಸಾಯಣಭಾಷ್ಯಂ ॥

**ಆಪೋ ಹೀತಿ ನವರ್ಚಂ ನವಮಂ ಸೂಕ್ತಂ । ಅಂಬರೀಷಸ್ಯ ರಾಜ್ಞಃ ಪುತ್ರಃ ಸಿಂಧುದ್ವೀಪ ಋಷಿಸ್ತ್ವಾಷ್ಟ್ರಪುತ್ರಸ್ತ್ರಿಶಿರಾ ವಾ । ಇದಮಾಪ ಇತ್ಯಾದಿಕೇ ದ್ವೇ ಅನುಷ್ಟುಭೌ । ಈಶಾನಾ ಇತಿ ವರ್ಧಮಾನಾ । ಆಪಃ ಪೃಣೀತೇತಿ ಪ್ರತಿಷ್ಠಾ । ಶಿಷ್ಟಾ ಗಾಯತ್ರ್ಯಃ । ಆಪೋ ದೇವತಾ । ತಥಾ ಚಾನುಕ್ರಾಂತಂ । ಆಪೋ ಹಿ ಸಿಂಧುದ್ವೀಪೋ ವಾಂಬರೀಷ ಆಪಂ ಗಾಯತ್ರಂ ದ್ವ್ಯನುಷ್ಟುಬಂತಂ ಪಂಚಮೀ ವರ್ಧಮಾನಾ ಸಪ್ತಮೀ ಪ್ರತಿಷ್ಠೇತಿ ॥ ಗತಃ ಸೂಕ್ತವಿನಿಯೋಗಃ ॥ ಆಗ್ನಿಮಾರುತ ಆಪೋ ಹಿ ಷ್ಠೇತ್ಯಾದ್ಯಾಸ್ತಿಸ್ರಃ । ಸೂತ್ರಿತಂ ಚ । ಆಪೋ ಹಿ ಷ್ಠೇತಿ ತಿಸ್ರೋ ನಿಯುತವಾಪ ಉಪಸ್ಪೃಶನ್ ಆ.೫-೨೮ । ಇತಿ ।**

ಅನುವಾದವು—**ಆಪೋ ಹಿ ಷ್ಠಾ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಂಬರೀಷನೆಂಬ ರಾಜನ ಪುತ್ರನಾದ ಸಿಂಧುದ್ವೀಪ ಎಂಬುವನು ಋಷಿಯು ಅಥವಾ ತ್ವಷ್ಟ್ರುಪುತ್ರನಾದ ತ್ರಿಶಿರಾಃ ಎಂಬುವನು ಋಷಿಯು. ಈ ಸೂಕ್ತದ **ಇದಮಾಪಃ** ಎಂದು ಮೊದಲಾಗುವ ಎರಡು ಋಕ್ಕುಗಳು (೮-೯ ಋಕ್ಕುಗಳು) ಅನುಷ್ಟುಪ್‌ಛಂದಸ್ಕವು. **ಈಶಾನಾ** ಎಂಬ ೫ನೆಯ ಋಕ್ಕು ವರ್ಧಮಾನಾ ಎಂಬ ಛಂದಸ್ಸಿನದು. **ಆಪಃ ಪೃಣೀತ** ಎಂಬ ೭ನೆಯ ಋಕ್ಕು ಪ್ರತಿಷ್ಠಾ ಎಂಬ ಛಂದಸ್ಸಿನದು. ಉಳಿದ ಋಕ್ಕುಗಳು ಗಾಯತ್ರೀಛಂದಸ್ಕವು. ಆಪಃ (ಉದಕಗಳು) ಎಂಬುದು ದೇವತೆಯು. ಅನುಕ್ರಮಣಿಕೆಯಲ್ಲಿ—**ಆಪೋ ಹಿ ಸಿಂಧುದ್ವೀಪೋ ವಾಂಬರೀಷ ಆಪಂ ಗಾಯತ್ರಂ ದ್ವ್ಯನುಷ್ಟುಬಂತಂ ಪಂಚಮೀ ವರ್ಧಮಾನಾ ಸಪ್ತಮೀ ಪ್ರತಿಷ್ಠಾ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಆಗ್ನಿಮಾರುತಶಸ್ತ್ರಮಂತ್ರಗಳಲ್ಲಿ **ಆಪೋ ಹಿ ಷ್ಠಾ** ಎಂಬ ಈ ಸೂಕ್ತದ ಮೊದಲಿನ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಅಶ್ವಲಾಯನ ಶ್ರೌತಸೂತ್ರದ—**ಆಪೋ ಹಿ ಷ್ಠೇತಿ ತಿಸ್ರೋ ನಿಯುತವಾಪ ಉಪಸ್ಪೃಶನ್** ಎಂಬ ಸೂತ್ರದಿಂದ (ಆ. ೫-೨೦) ವಿವೃತವಾಗಿರುವುದು.

## ಸೂಕ್ತ—೯

**ಮಂಡಲ—೧೦ । ಅನುವಾಕ—೧ । ಸೂಕ್ತ—೯ ।**
**ಅಷ್ಟಕ—೭ ॥ ಅಧ್ಯಾಯ—೬ ॥ ವರ್ಗ—೫ ।**
**ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ।**
**ಋಷಿಃ**—ತ್ರಿಶಿರಾಸ್ತ್ವಾಷ್ಟ್ರಃ ಸಿಂಧುದ್ವೀಪೋ ವಾಂಬರೀಷಃ ॥
**ದೇವತಾ**—ಆಪಃ ।
**ಛಂದಃ**—೧-೪, ೬. ಗಾಯತ್ರೀ । ೫. ವರ್ಧಮಾನಾ । ೭. ಪ್ರತಿಷ್ಠಾ । ೮-೯. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಆಪೋ ಹಿ ಷ್ಠಾ ಮಯೋಭುವಸ್ತಾ ನ ಊರ್ಜೇ ದಧಾತನ ।
ಮಹೇ ರಣಾಯ ಚಕ್ಷಸೇ ॥ ೧ ॥

॥ ಪದಪಾಠಃ ॥

ಆಪಃ । ಹಿ । ಸ್ಥ । ಮಯಃಽಭುವಃ । ತಾಃ । ನಃ । ಊರ್ಜೇ । ದಧಾತನ ।
ಮಹೇ । ರಣಾಯ । ಚಕ್ಷಸೇ ॥ ೧ ॥

॥ ಸಾಯಣಭಾಷ್ಯಂ ॥

ಹಿ ಯಸ್ಮಾತ್ಕಾರಣಾದಾಪೋ ಯೂ ಯೂಯಂ ಮಯೋಭುವಃ ಸುಖಸ್ಯ ಭಾವಯಿತ್ರ್ಯಃ ಸ್ಥ ಭವಥ ತಾಸ್ತಾದೃಶ್ಯೋ ಯೂಯಂ ನೋಽಸ್ಮಾನೂರ್ಜೇಽನ್ನಾಯ ದಧಾತನ । ಧತ್ತ । ಅನ್ನಪ್ರಾಪ್ತಿಯೋಗ್ಯಾನಸ್ಮಾನ್ ಕುರುತ । ಅನ್ನಮಸ್ಮಭ್ಯಂ ದತ್ತೇತ್ಯರ್ಥಃ । ಮಹೇ ಮಹತೇ ರಣಾಯ ರಮಣೀಯಾಯ ಚಕ್ಷಸೇ ದರ್ಶನಾಯ ಸಮ್ಯಗ್ಜ್ಞಾನಾಯ ಚ ಧತ್ತ । ಅಸ್ಮಾನ್ ಸಮ್ಯಗ್ಜ್ಞಾನಂ ಪ್ರತಿ ಯೋಗ್ಯಾನ್ಕುರುತೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಆಪಃ**—ಎಲೈ ಅಬ್ದೇವತೆಗಳೇ । **ಹಿ**—ಯಾವ ನಿಮ್ಮ ಮಾಹಾತ್ಮ್ಯದಿಂದ । **ಮಯೋಭುವಃ**—ಸುಖದಾತ್ರಿಯರಾಗಿ । **ಸ್ಥ**—ಆಗಿದ್ದೀರೋ । **ತಾಃ**—ಅಂತಹ ಮಾಹಾತ್ಮ್ಯವುಳ್ಳ ನೀವು । **ನಃ**—ನಮ್ಮನ್ನು । **ಊರ್ಜೇ**—ಅನ್ನಕ್ಕೆ ಪಾತ್ರರನ್ನಾಗಿ । **ದಧಾತನ**—ಮಾಡಿ । **ಮಹೇ**—ಮಹತ್ತಾದುದೂ । **ರಣಾಯ**—ರಮಣೀಯವಾದುದೂ ಆದ । **ಚಕ್ಷಸೇ**—ದರ್ಶನಕ್ಕೂ ಯೋಗ್ಯರನ್ನಾಗಿ ಮಾಡಿರಿ.

॥ ಭಾವಾರ್ಥ ॥

ಎಲೈ ಅಬ್ದೇವತೆಗಳೇ, ಯಾವ ನಿಮ್ಮ ಮಾಹಾತ್ಮ್ಯದಿಂದ ನೀವು ಸುಖದಾತ್ರಿಯರಾಗಿ ಆಗಿದ್ದೀರೋ, ಅಂತಹ ಮಾಹಾತ್ಮ್ಯವುಳ್ಳ ನೀವು ನಮ್ಮನ್ನು ಅನ್ನಕ್ಕೆ ಪಾತ್ರರನ್ನಾಗಿ ಮಾಡಿರಿ. ಮಹತ್ತಾದುದೂ, ರಮಣೀಯವಾದುದೂ ಆದ ದರ್ಶನಕ್ಕೂ ಯೋಗ್ಯರನ್ನಾಗಿ ಮಾಡಿರಿ.

## English Translation

Since, Waters, you are the sources of happiness, grant to us to enjoy abundance, and great and delightful perception.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಈರೀತಿ ಬರೆದಿರುತ್ತಾರೆ—

**ಆಪಃ । ಆಪ ಆಪ್ನೋತೇಃ । ತಾಸಾಮೇಷಾ ಭವತಿ । ಆಪೋ ಹಿ ಷ್ಠಾ ಮಯೋಭುವಸ್ತಾ ನ**

**ಊರ್ಜೇ ದಧಾತನ । ಮಹೇ ರಣಾಯ ಚಕ್ಷಸೇ ॥ ಆಪೋ ಹಿ ಷ್ಠ ಸುಖಭುವಸ್ತಾ ನೋಽನ್ನಾಯ ಧತ್ತ ಮಹತೇ ಚ ನೋ ರಣಾಯ ರಮಣೀಯಾಯ ಚ ದರ್ಶನಾಯ ॥**

(ನಿ. ೯-೨೭)

**ಆಪ್ಲೃ ವ್ಯಾಪ್ತೌ** ಎಂಬ ಧಾತುವಿನಿಂದ **ಆಪಃ** ಎಂಬ ಶಬ್ದವು ನಿಷ್ಪನ್ನವಾಗಿದೆ. ಈ ಧಾತುವಿಗೆ ವ್ಯಾಪಿಸು ಹೊಂದಿಸಿಕೊಡು ಎಂದರ್ಥವಿರುವುದು. **ಆಪಃ** ಎಂದರೆ ಉದಕಗಳು ಹರಡಿಕೊಳ್ಳುವ ಸ್ವಭಾವವುಳ್ಳವು ಎಂದರೆ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸುವವು ಮತ್ತು ಸುಖ, ಆರೋಗ್ಯ ಮೊದಲಾದವುಗಳನ್ನುಹೊಂದಿಸಿಕೊಡುವವು ಎಂದು **ಆಪಃ** ಎಂಬ ಶಬ್ದದ ಅರ್ಥವು. ಈ ಅರ್ಥವನ್ನು ವಿವರಿಸುವುದಕ್ಕಾಗಿ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅರ್ಥವಿವರಣೆಮಾಡಿದಾರೆ—ಎಲೈ ಉದಕಾಭಿಮಾನಿ ದೇವತೆಗಳೇ, ನೀವು (ಸಕಲರಿಗೂ) ಸುಖವನ್ನುಂಟುಮಾಡುವವರು. ಇಂತಹ ಗುಣವಿಶಿಷ್ಟರಾದ ನೀವು ನಮಗೆ ಅನ್ನಾದ್ಯಾಹಾರಗಳನ್ನು ಒದಗಿಸಿಕೊಡಿ ಮತ್ತು ಶ್ರೇಷ್ಠವೂ ರಮಣೀಯವೂ ಆದ ಸುಖ (ಸ್ಥಿತಿಯನ್ನು) ವನ್ನೂ ನಾವು ನೋಡುವಂತೆ ಅನುಗ್ರಹಿಸಿ ಎಂದು ನಿರ್ವಚನಾಭಿಪ್ರಾಯವು.

॥ ಸಂಹಿತಾಪಾಠಃ ॥

ಯೋ ವಃ ಶಿವತಮೋ ರಸಸ್ತಸ್ಯ ಭಾಜಯತೇಹ ನಃ ।

ಉಶತೀರಿವ ಮಾತರಃ ॥ ೨ ॥

॥ ಪದಪಾಠಃ ॥

ಯಃ । ವಃ । ಶಿವಽತಮಃ । ರಸಃ । ತಸ್ಯ । ಭಾಜಯತ । ಇಹ । ನಃ ।

ಉಶತೀಃಽಇವ । ಮಾತರಃ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಆಪಃ ವೋ ಯುಷ್ಮಾಕಂ ಸ್ವಭೂತೋ ಯೋ ರಸಃ ಶಿವತಮಃ ಸುಖತಮ ಇಹಾಸ್ಮಿಲ್ಲೋಕೇ ತಸ್ಯ ತಂ ರಸಂ ನೋಽಸ್ಮಾನ್ ಭಾಜಯತ । ಸೇವಯತ । ಉಪಯೋಜಯತೇತ್ಯರ್ಥಃ । ತತ್ರ ದೃಷ್ಟಾಂತಃ । ಉಶತೀರಿವೋಶತ್ಯ ಇವ ಪುತ್ರಸಮೃದ್ಧಿಂ ಕಾಮಯಮಾನಾ ಮಾತರಃ ಸ್ತನ್ಯಂ ರಸಂ ಯಥಾ ಭಾಜಯಂತಿ ಪ್ರಾಪಯಂತಿ ತದ್ವತ್ ॥**

॥ ಪ್ರತಿಪದಾರ್ಥ ॥

(ಎಲೈ ಅಬ್ದೇವತೆಗಳೇ) **ವಃ**—ನಿಮ್ಮ । **ಯಃ**—ಯಾವ । **ರಸಃ**—ರಸವು । **ಶಿವತಮಃ**—ಅತ್ಯಂತ ಸುಖಕರವಾಗಿರುವುದೋ । **ತಸ್ಯ**—ಆ ರಸವನ್ನು । **ಉಶತೀಃ ಇವ**—ಪುತ್ರನ ಪುಷ್ಟಿಯನ್ನುಅಪೇಕ್ಷಿಸುವ । **ಮಾತರಃ**—ಮಾತೃಗಳಂತೆ । **ನಃ**—ನಮಗೆ (ನಮ್ಮಿಂದ) । **ಇಹ**—ಈ ಲೋಕದಲ್ಲಿ । **ಭಾಜಯತ**—ಪಾನಮಾಡುವಂತೆ ಮಾಡಿರಿ.

॥ ಭಾವಾರ್ಥ ॥

ಎಲೈ ಅಬ್ದೇವತೆಗಳೇ, ನಿಮ್ಮ ಯಾವ ರಸವು ಅತ್ಯಂತ ಸುಖಕರವಾಗಿರುವುದೋ, ಆ ರಸವನ್ನು ಪುತ್ರನ ಪುಷ್ಟಿಯನ್ನು ಅಪೇಕ್ಷಿಸುವ ಮಾತೃಗಳು ಮಕ್ಕಳಿಗೆ ಸ್ತನ್ಯಪಾನವನ್ನು ಮಾಡಿಸುವಂತೆ ನಮ್ಮಿಂದ ಪಾನಮಾಡಿಸಿರಿ.

English Translation

Give us to partake in this world of your most auspicious juice, like affectionate mothers.

॥ ಸಂಹಿತಾಪಾಠಃ ॥

ತಸ್ಮಾ ಅರಂ ಗಮಾಮ ವೋ ಯಸ್ಯ ಕ್ಷಯಾಯ ಜಿನ್ವಥ ।

ಆಪೋ ಜನಯಥಾ ಚ ನಃ ॥ ೩ ॥

॥ ಪದಪಾಠಃ ॥

ತಸ್ಮೈ । ಅರಂ । ಗಮಾಮ । ವಃ । ಯಸ್ಯ । ಕ್ಷಯಾಯ । ಜಿನ್ವಥ ।

ಆಪಃ । ಜನಯಥ । ಚ । ನಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಆಪಃ ಯೂಯಂ ಯಸ್ಯ ಪಾಪಸ್ಯ ಕ್ಷಯಾಯ ವಿನಾಶಾಯಾಸ್ಮಾಞ್ಜಿನ್ವಥ ಪ್ರೀಣಯಥ ತಸ್ಮೈ ತಾದೃಶಾಯ ಪಾಪಕ್ಷಯಾಯಾರಂ ಕ್ಷಿಪ್ರಂ ವೋ ಯುಷ್ಮಾನ್ ಗಮಾಮ । ಗಮಯಾಮ । ವಯಂ ಶಿರಸಿ ಪ್ರಕ್ಷಿಪಾಮೇತ್ಯರ್ಥಃ । ಯದ್ವಾ ಯಸ್ಯಾನ್ನಸ್ಯ ಕ್ಷಯಾಯ ನಿವಾಸಾರ್ಥಂ ಯೂಯಮೋಷಧೀರ್ಜಿನ್ವಥ ತರ್ಪಯಥ ತಸ್ಮೈ ತದನ್ನಮುದ್ದಿಶ್ಯ ವಯಮರಮಲಂ ಪರ್ಯಾಪ್ತಂ ಯಥಾ ಭವತಿ ತಥಾ ವೋ ಯುಷ್ಮಾನ್ಗಮಾಮ । ಗಚ್ಛಾಮ । ಕಿಂಚ ಹೇ ಆಪಃ ನೋಽಸ್ಮಾಞ್ಜನಯಥ ಚ । ಪುತ್ರಪೌತ್ರಾದಿಜನನೇ ಪ್ರಯೋಜಯತೇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಅಬ್ದೇವತೆಗಳೇ) **ಯಸ್ಯ**—ಯಾವ ಪಾಪದ । **ಕ್ಷಯಾಯ**—ನಾಶಕ್ಕಾಗಿ । **ಜಿನ್ವಥ**—ನಮ್ಮನ್ನು ಪ್ರೀತಿಗೊಳಿಸುವಿರೋ । **ತಸ್ಮೈ**—ಅದಕ್ಕಾಗಿ । **ವಃ**—ನಿಮ್ಮನ್ನು । **ಅರಂ**—ಕ್ಷಿಪ್ರವಾಗಿ । **ಗಮಾಮ**—ಸಮೀಪಿಸಿ ಆಶ್ರಯಿಸುವೆವು । **ಆಪಃ**—ಎಲೈ ಅಬ್ದೇವತೆಗಳೇ । **ನಃ**—ನಮಗೆ । **ಜನಯಥ ಚ**—ಪುತ್ರಪೌತ್ರಾದಿಗಳು ಉತ್ಪನ್ನರಾಗುವಂತೆ ಅನುಗ್ರಹಿಸಿ.

॥ ಭಾವಾರ್ಥ ॥

ಎಲೈ ಅಬ್ದೇವತೆಗಳೇ, ಯಾವ ಪಾಪದ ನಾಶಕ್ಕಾಗಿ ನಮ್ಮನ್ನು ಪ್ರೀತಿಗೊಳಿಸುವಿರೋ ಅದಕ್ಕಾಗಿ ನಿಮ್ಮನ್ನು ಕ್ಷಿಪ್ರವಾಗಿ ಸಮೀಪಿಸಿ ಆಶ್ರಯಿಸುವೆವು, ನಮಗೆ ಪುತ್ರಪೌತ್ರಾದಿಗಳು ಉತ್ಪನ್ನವಾಗುವಂತೆ ಮಾಡಿರಿ.

English Translation

Let us quickly have recourse to you, for that your (faculty) of removing (sin) by which you gladden us: waters, bestow upon us progeny.

ಸಂಹಿತಾಪಾಠಃ ॥

ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ

ಶಂ ಯೋರಭಿ ಸ್ರವಂತು ನಃ ॥ ೪ ॥

ಪದಪಾಠಃ ॥

ಶಂ । ನಃ । ದೇವೀಃ । ಅಭಿಷ್ಟಯೇ । ಆಪಃ । ಭವಂತು । ಪೀತಯೇ

ಶಂ । ಯೋಃ । ಅಭಿ । ಸ್ರವಂತು । ನಃ ॥ ೪ ॥

॥ ಸಾಯಣಭಾಷ್ಯಂ ॥

ನೋಽಸ್ಮಾಕಂ ಪಾಪಾಪನೋದದ್ವಾರೇಣ ಶಂ ಸುಖಂ ಭವಂತು ದೇವೀರ್ದೇವ್ಯ ಆಪಃ । ಅಭಿಷ್ಟಯೇಽಸ್ಮದ್ಯಜ್ಞಾಯ ಭವಂತು । ಯಜ್ಞಾಂಗಭಾವಾಯ ಚ ಭವಂತ್ವಿತ್ಯರ್ಥಃ । ಪೀತಯೇ ಪಾನಾಯ ಚ ಭವಂತು ತಥಾ ಶಮುತ್ಪನ್ನಾನಾಂ ರೋಗಾಣಾಂ ಶಮನಂ ಯೋರ್ಯಾವನಮನುತ್ಪನ್ನಾನಾಂ ಪೃಥಕ್ಕರಣಂ ಚ ಕುರ್ವಂತು । ಅಪಿ ಚ ನೋಽಸ್ಮಾಕಮಭ್ಯುಪರಿ ಸ್ರವಂತು । ಶುದ್ಧ್ಯರ್ಥಂ ಸಿಂಚಂತು ॥

॥ ಪ್ರತಿಪದಾರ್ಥ ॥

**ಆಪಃ**—ಅಬ್ದೇವತೆಗಳು । **ನಃ**—ನಮಗೆ । **ಶಂ**—ಸುಖದಾಯಕರಾಗಿ । **ಭವಂತು**—ಆಗಿರಲಿ । **ದೇವೀಃ**—ದೇವತಾತ್ಮಗಳಾದ ಉದಕಗಳು । **ಅಭಿಷ್ಟಯೇ**—ನಮ್ಮ ಇಷ್ಟಾರ್ಥಸಿದ್ಧಿಕಾರಕಗಳಾಗಲಿ । **ಪೀತಯೇ**—ನಮಗೆ ಪಾನಯೋಗ್ಯಗಳಾಗಲಿ । **ಶಂ**—ರೋಗನಾಶಕವಾದ ಸುಖವನ್ನು । **ಯೋಃ**—ರೋಗಪರಿಹಾರವನ್ನೂ ಉಂಟುಮಾಡಲಿ । **ನಃ ಅಭಿ**—ನಮ್ಮ ಮೇಲೆ । **ಸ್ರವಂತು**—ಸೋಕಿಸಲಿ.

॥ ಭಾವಾರ್ಥ ॥

ಅಬ್ದೇವತೆಗಳು ನಮಗೆ ಸುಖದಾಯಕರಾಗಿ ಆಗಿರಲಿ. ದೇವತಾತ್ಮಗಳಾದ ಉದಕಗಳು ನಮ್ಮ ಇಷ್ಟಾರ್ಥಸಿದ್ಧಿಕಾರಕಗಳಾಗಲಿ. ನಮಗೆ ಪಾನಯೋಗ್ಯಗಳಾಗಲಿ. ರೋಗನಾಶಕವಾದ ಸುಖವನ್ನೂ ರೋಗಪರಿಹಾರವನ್ನೂ ಉಂಟುಮಾಡಲಿ. ನಮ್ಮ ಮೇಲೆ ಸೋಕಿಸಲಿ.

English Translation

May the divine waters be propitious to our worship, (may

they be good) for our drinking; may they flow round us, and be our health and safety.

॥ ಸಂಹಿತಾಪಾಠಃ ॥

ಈಶಾನಾ ವಾರ್ಯಾಣಾಂ ಕ್ಷಯಂತೀಶ್ಚರ್ಷಣೀನಾಂ ।
ಅಪೋ ಯಾಚಾಮಿ ಭೇಷಜಂ ॥ ೫ ॥

॥ ಪದಪಾಠಃ ॥

ಈಶಾನಾಃ । ವಾರ್ಯಾಣಾಂ । ಕ್ಷಯಂತೀಃ । ಚರ್ಷಣೀನಾಂ ।
ಅಪಃ । ಯಾಚಾಮಿ । ಭೇಷಜಂ ॥ ೫ ॥

॥ ಸಾಯಣಭಾಷ್ಯಂ ॥

ವಾರ್ಯಾಣಾಂ ವಾರಿಪ್ರಭವಾನಾಂ ವ್ರೀಹಿಯವಾದೀನಾಂ ಯದ್ವಾ ವರಣೀಯಾನಾಂ ಧನಾನಾಮೀಶಾನಾ ಈಶ್ವರಾಶ್ಚರ್ಷಣೀನಾಂ ಮನುಷ್ಯಾಣಾಂ ಕ್ಷಯಂತೀರ್ನಿವಾಸಯಿತ್ರೀರಪ ಉದಕಾನಿ ಭೇಷಜಂ । ಸುಖನಾಮೈತತ್ । ಪಾಪಾಪನೋದನಂ ಸುಖಂ ಯಾಚಾಮಿ । ಅಹಂ ಪ್ರಾರ್ಥಯೇ ॥

। ಪ್ರತಿಪದಾರ್ಥ ।

ವಾರ್ಯಾಣಾಂ—ಉದಕದಿಂದ ಉತ್ಪನ್ನವಾಗತಕ್ಕ ವ್ರೀಹ್ಯಾದಿಗಳಿಗೆ । ಈಶಾನಾಃ—ಒಡೆಯರಾದವರೂ । ಚರ್ಷಣೀನಾಂ—ಮಾನವಾದಿಗಳಿಗೆ । ಕ್ಷಯಂತೀಃ—ವಸತಿದಾಯಕರೂ ಆದ । ಅಪಃ—ಅಬ್ದೇವತೆಗಳಿಂದ । ಭೇಷಜಂ—ಪಾಪನಾಶಕವಾದ ಸುಖವನ್ನು । ಯಾಚಾಮಿ—ಪ್ರಾರ್ಥಿಸುತ್ತೇನೆ.

। ಭಾವಾರ್ಥ ।

ಉದಕದಿಂದ ಉತ್ಪನ್ನವಾಗತಕ್ಕ ವ್ರೀಹ್ಯಾದಿಗಳಿಗೆ ಒಡೆಯರೂ, ಮಾನವಾದಿಗಳಿಗೆ ವಸತಿದಾಯಕರೂ ಆದ ಅಬ್ದೇವತೆಗಳಿಂದ ಪಾಪನಾಶಕವಾದ ಸುಖವನ್ನು ಪ್ರಾರ್ಥಿಸುತ್ತೇನೆ.

## English Translation

Waters, sovereigns of precious (treasures), granters of habitations to men, I solicit of you medicine (for my infirmities).

। ಸಂಹಿತಾಪಾಠಃ ।

ಅಪ್ಸು ಮೇ ಸೋಮೋ ಅಬ್ರವೀದಂತರ್ವಿಶ್ವಾನಿ ಭೇಷಜಾ ।
ಅಗ್ನಿಂ ಚ ವಿಶ್ವಶಂಭುವಂ ॥ ೬ ॥

॥ ಪದಪಾಠಃ ॥

ಅಪ್ಽಸು । ಮೇ । ಸೋಮಃ । ಅಬ್ರವೀತ್ । ಅಂತಃ । ವಿಶ್ವಾನಿ । ಭೇಷಜಾ ।

ಅಗ್ನಿಂ । ಚ । ವಿಶ್ವಽಶಂಭುವಂ ॥ ೬ ॥

॥ ಸಾಯಣಭಾಷ್ಯಂ ॥

ಅಪ್ಸು ಜಲೇಷ್ವಂತರ್ಮಧ್ಯೇ ವಿಶ್ವಾನಿ ಭೇಷಜಾ ಸರ್ವಾಣ್ಯೌಷಧಾನಿ ಸಂತೀತಿ ಮೇ ಮಹ್ಯಂ ಮಂತ್ರದರ್ಶಿನೇ ಮುನಯೇ ಸೋಮೋ ದೇವೋಽಬ್ರವೀತ್ । ತಥಾ ವಿಶ್ವಶಂಭುವಂ ಸರ್ವಸ್ಯ ಜಗತಃ ಸುಖಕರಮೇತನ್ನಾಮಕಂ ಚಾಗ್ನಿಂ ಚಾಪ್ಸು ವರ್ತಮಾನಂ ಸೋಮೋಽಬ್ರವೀತ್ । ತಥಾ ಚ ತೈತ್ತಿರೀಯಾ ಅಗ್ನೇಸ್ತ್ರಯೋ ಜ್ಯಾಯಾಂಸ ಇತ್ಯನುವಾಕೇ ಸೋಽಪಃ ಪ್ರಾವಿಶದಿತ್ಯಗ್ನೇರಪ್ಸು ಪ್ರವೇಶಮಾಮನಂತಿ । ತೈ. ಸಂ. ೨-೬-೬-೧ । ಲತಾಗುಲ್ಮವೃಕ್ಷಮೂಲಾದೀನಾಮೌಷಧಾನಾಂ ವೃಷ್ಟಿಜನ್ಯತ್ವೇನ ಜಲವರ್ತಿತ್ವಂ ಪ್ರಸಿದ್ಧಂ ।

॥ ಪ್ರತಿಪದಾರ್ಥ ॥

**ಅಪ್ಸು**—ಉದಕಗಳ । **ಅಂತಃ**—ಮಧ್ಯಭಾಗದಲ್ಲಿ । **ವಿಶ್ವಾನಿ**—ಸಕಲವಾದ । **ಭೇಷಜಾ**—ರೋಗನಾಶಕವಾದ ಔಷಧಿಗಳಿರುವುವೆಂದೂ । **ಅಗ್ನಿಂ ಚ**—(ಉದಕ ಮಧ್ಯಗತನಾದ) ಅಗ್ನಿಯನ್ನು । **ವಿಶ್ವಶಂಭುವಂ**—ವಿಶ್ವಕ್ಕೆಲ್ಲ ಸುಖಕಾರಕನೆಂದೂ । **ಸೋಮಃ**—ಸೋಮದೇವನು । **ಮೇ**—ನನಗೆ । **ಅಬ್ರವೀತ್**—ಹೇಳಿದನು.

॥ ಭಾವಾರ್ಥ ॥

ಸಕಲ ರೋಗಗಳನ್ನೂ ನಾಶಮಾಡತಕ್ಕ ಔಷಧಿಗಳೂ, ವಿಶ್ವಕ್ಕೆಲ್ಲಾ ಸುಖಕಾರಕನಾದ ಅಗ್ನಿಯೂ ಉದಕಗಳ ಮಧ್ಯವರ್ತಿಗಳಾಗಿರುವರೆಂದು ಸೋಮದೇವನು ನನಗೆ ಹೇಳಿದನು.

English Translation

Soma has declared to me: all medicaments, as well as Agni, the benefector of the universe, are in the waters.

॥ ವಿಶೇಷವಿಷಯಗಳು ॥

ಈ ಋಕ್ಕಿನ ಮುಖ್ಯಾಭಿಪ್ರಾಯವು-ನೀರಿನಲ್ಲಿ ಸಮಸ್ತ ಜಗತ್ತಿಗೂ ಸುಖವನ್ನುಂಟುಮಾಡುವ ಅಗ್ನಿಯು ವಿದ್ಯುದ್ರೂಪದಿಂದಿರುವನು ಮತ್ತು ಪ್ರಾಣಿಗಳ ವ್ಯಾಧಿಗಳನ್ನು ಪರಿಹಾರ ಮಾಡುವ ಸಮಸ್ತ ಔಷಧಿಗಳೂ ನೀರಿನಲ್ಲಿಯೇ ಇರುವುವು ಎಂದು ಸೋಮನೇ ನನಗೆ ಹೇಳಿರುವನು ಎಂದು. ನೀರಿನಲ್ಲಿ ಅಗ್ನಿಯು ಇರುವನೆಂಬ ವಿಚಾರದಲ್ಲಿ ಭಾಷ್ಯಕಾರರು (ತೈ. ಸಂ. ೨-೬-೬೬೧) ಯಲ್ಲಿರುವ **ಅಗ್ನೇಸ್ತ್ರಯೋ ಜ್ಯಾಯಾಗ್ಂಸೋ ಭ್ರಾತರ ಅಸನ್**

ಎಂಬ ಅನುವಾಕದಲ್ಲಿರುವ ' **ಸೋಽಪಃ ಪ್ರಾವಿಶತ್ತಂ ದೇವತಾಃ ಪ್ರೈಷಮೈಚ್ಛನ್** ' ಎಂಬ ವಾಕ್ಯವನ್ನು ಉದಹರಿಸಿರುವರು. ಇದರ ವಿವರಣೆಯನ್ನೂ ಋಗ್ವೇದದಲ್ಲಿ ಈ ವಿಷಯವಾಗಿ ಇರುವ ವಿವರಣೆಯನ್ನೂ ನಾವು ಹಿಂದೆಯೇ ವಿವರಿಸಿದ್ದೇವೆ.

**ಅಗ್ನಿಂ ಚ ವಿಶ್ವಶಂಭುವಂ**—ಅಗ್ನಿಯಿಂದ ಸಮಸ್ತ ಜಗತ್ತಿಗೂ ಉಂಟಾಗುವ ಪ್ರಯೋಜನವನ್ನು ಹೆಚ್ಚಾಗಿ ವಿವರಿಸುವ ಅವಶ್ಯಕತೆಯಿಲ್ಲ. ಅಗ್ನಿಯು ನಮಗೆ ಚಳಿಯಾಗಿರುವಾಗ ಶಾಖವನ್ನು ಕೊಡುವುದಲ್ಲದೆ ಆಹಾರಾದಿಗಳನ್ನು ಬೇಯಿಸುವುದಕ್ಕೂ ಇನ್ನೂ ಅನೇಕ ಉಪಯೋಗವಾದ ಅಥವಾ ಅತ್ಯವಶ್ಯಕವಾದ ಕಾರ್ಯಗಳಲ್ಲಿ ನಾವು ಅಗ್ನಿಯನ್ನು ಉಪಯೋಗಿಸುತ್ತೇವೆ. ಈ ವಿಷಯವು ಸರ್ವರ ಅನುಭವ ವೇದ್ಯವಾಗಿರುವುದರಿಂದ ಹೆಚ್ಚು ಹೇಳಬೇಕಾದ ಅವಶ್ಯಕತೆ ಇಲ್ಲ.

। ಸಂಹಿತಾಪಾಠಃ ।

**ಆಪಃ ಪೃಣೀತ ಭೇಷಜಂ ವರೂಥಂ ತನ್ವೇ೩ ಮಮ ।**

**ಜ್ಯೋಕ್ ಚ ಸೂರ್ಯಂ ದೃಶೇ ॥ ೭ ॥**

। ಪದಪಾಠಃ ॥

**ಆಪಃ । ಪೃಣೀತ । ಭೇಷಜಂ । ವರೂಥಂ । ತನ್ವೇ । ಮಮ ।**

**ಜ್ಯೋಕ್ । ಚ । ಸೂರ್ಯಂ । ದೃಶೇ ॥ ೭ ॥**

॥ ಸಾಯಣಭಾಷ್ಯಂ ॥

**ಹೇ ಆಪೋ ಮಮ ತನ್ವೇ ಶರೀರಾರ್ಥಂ ವರೂಥಂ ರೋಗನಿವಾರಕಂ ಭೇಷಜಮೌಷಧಂ ಪೃಣೀತ । ಪೂರಯತ । ಕಿಂಚ ಜ್ಯೋಕ್ ಚಿರಂ ಸೂರ್ಯಂ ದೃಶೇ ದ್ರಷ್ಟುಂ ನಿರೋಗಾ ವಯಂ ಶಕ್ನುಯಾಮೇತಿ ಶೇಷಃ ॥ ಪೃಣೀತ । ಪೄ ಪಾಲನಪೂರಣಯೋಃ । ಲೋಣ್ಮಧ್ಯಮಬಹುವಚನಂ ಥ । ತಸ್ಯ ತಸ್ಥಸ್ಥಮಿಪಾಮಿತಿ ತಾದೇಶಃ । ಕ್ರ್ಯಾದಿಭ್ಯಃ ಶ್ನಾ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವಃ । ಈಹಲ್ಯಘೋರಿತೀತ್ವಂ । ಋವರ್ಣಾಚ್ಚೇತಿ ಣತ್ವಂ । ಸತಿ ಶಿಷ್ಟಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯ ಇತಿ ತಿಙಃ ಸ್ವರಃ ಶಿಷ್ಯತೇ । ಆಪ ಇತ್ಯಸ್ಯಾಮಂತ್ರಿತಂ ಪೂರ್ವಮವಿದ್ಯಮಾನವದಿತ್ಯವಿದ್ಯಮಾನವತ್ತ್ವೇ ಪಾದಾದಿತ್ವಾನ್ನಿಘಾತಾಭಾವಃ । ವರೂಥಂ । ವೃಞ್ ವರಣೇ । ಜ್ರೂವೃಞ್ಭ್ಯಾಮೂಥನ್ । ಉ. ೨-೬ । ನಿತ್ತ್ವಾದಾದ್ಯುದಾತ್ತಃ । ತನ್ವೇ । ಜಾತಿ ಹ್ರಸ್ವಶ್ಚ । ಪಾ. ೧-೪-೬ । ಇತಿ ನದೀಸಂಜ್ಞಾ ಪಾಕ್ಷಿಕೀತ್ಯಾಡಾಗಮಾಭಾವಃ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತ್ಯುದಾತ್ತತ್ವೇ ಪ್ರಾಪ್ತೇ ವ್ಯತ್ಯಯೇನೋದಾತ್ತಸ್ವರಿತಯೋರಿತಿ ಸ್ವರಿತತ್ವಂ । ದೃಶೇ । ದೃಶೇ ವಿಖ್ಯೇ ಚ । ಪಾ. ೩-೪-೧೧ । ಇತಿ ತುಮರ್ಥೇ ನಿಪಾತ್ಯತೇ ॥**

|| ಪ್ರತಿಪದಾರ್ಥ ||

**ಆಪಃ**—ಎಲ್ಲೈ ಉದಕಗಳೇ, ಅಥವಾ ಉದಕಾಭಿಮಾನಿದೇವತಗಳೇ । **ಮಮ**—ನನ್ನ । **ತನ್ವೇ**—ಶರೀರಕ್ಕಾಗಿ । **ವರೂಥಂ**—ರೋಗನಿವಾರಕವಾದ । **ಭೇಷಜಂ**—ಔಷಧವನ್ನು । **ಪೃಣೀತ**—ಪೂರ್ಣಮಾಡಿ (ಎಂದರೆ ಶರೀರವು ರೋಗವಿಲ್ಲದಂತೆ ಪೂರ್ಣವಾಗಿರುವಂತೆ ಮಾಡಿರಿ) । (ಹೀಗೆ ಮಾಡುವುದರಿಂದ ನಾನು) **ಸೂರ್ಯಂ**—ಸೂರ್ಯನನ್ನು । **ಜ್ಯೋಕ್**—ಬಹಳಕಾಲದವರೆಗೆ । **ದೃಶೇ**—ನೋಡುವೆನು (ನೋಡಲು ಸಮರ್ಥನಾಗುವೆನು ಎಂದರೆ ಬಹುಕಾಲ ಜೀವಿಸಲು ಸಮರ್ಥನಾಗುವೆನು).

|| ಭಾವಾರ್ಥ ||

ಎಲೈ ಉದಕಗಳೇ (ಅಥವಾ ಉದಕಾಭಿಮಾನಿ ದೇವತೆಗಳೇ), ನನ್ನ ಶರೀರವು ರೋಗವಿಲ್ಲದಂತೆ ಇರುವುದಕ್ಕಾಗಿ ಉತ್ತಮವಾದ ಔಷಧವನ್ನು ಪೂರ್ಣಮಾಡಿ (ಸಿದ್ಧಪಡಿಸಿ) ಅದರಿಂದ ನಾನು ರೋಗರಹಿತನಾಗಿ ಬಹುಕಾಲ ಸೂರ್ಯನನ್ನು ನೋಡುವಂತಾಗಲಿ ಎಂದರೆ ಬಹುಕಾಲ ಜೀವಿಸುವಂತಾಗಲಿ.

## English Translation

Waters, bring to perfection all disease-dispelling medicaments for the good of my body, that I may long behold the Sun.

|| ವಿಶೇಷವಿಷಯಗಳು ||

**ಪೃಣೀತ—ಪೃ ಪಾಲನಪೂರಣಯೋಃ** || ಪೂರ್ಣಮಾಡಿರಿ ಎಂದರೆ ಶರೀರದಲ್ಲಿ ರೋಗಾದಿಗಳಿಲ್ಲದಂತೆ, ಶರೀರವು ತನ್ನ ಕೆಲಸಗಳನ್ನು ಕ್ರಮವಾಗಿ ಮಾಡಲು ಶಕ್ತವಾಗುವಂತೆ ಮಾಡಿರಿ ಎಂದಭಿಪ್ರಾಯವು.

**ವರೂಥಂ—ವರಣೀಯಂ, ರೋಗನಿವಾರಕಂ** || ಅಪೇಕ್ಷಣೀಯವಾದ ಎಂದರೆ ರೋಗನಿವಾರಕವಾದ.

**ಜ್ಯೋಕ್ ಚ ಸೂರ್ಯಂ ದೃಶೇ**—ಸೂರ್ಯನನ್ನು ಬಹುಕಾಲ ನೋಡುತ್ತಿರುವುದು ಎಂದರೆ ಬಹುಕಾಲ ಜೀವಿಸಿರುವುದು ಎಂದರ್ಥವು. ಇದೇ ಅರ್ಥವನ್ನು ಸೂಚಿಸುವ ಕೆಲವು ಋಕ್ಕುಗಳು ಋಗ್ವೇದದಲ್ಲಿ ಕೆಲವಿವೆ.—

**ತಸ್ಮಾ ಅಗ್ನಿರ್ಭಾರತಃ ಶರ್ಮ ಯಂಸಜ್ಜ್ಯೋಕ್ ಪಶ್ಯಾತ್ಸೂರ್ಯಮುಚ್ಚರಂತಂ ।**

(ಋ. ಸಂ. ೪-೨೫-೪.)

**ತವ ಕ್ರತ್ವಾ ತವೋತಿಭಿರ್ಜ್ಯೋಕ್ ಪಶ್ಯೇಮ ಸೂರ್ಯಂ ||**

(ಋ. ಸಂ. ೯-೪-೬.)

**ಶಂ ನಃ ಕ್ಷೇತ್ರಮುರು ಜ್ಯೋತೀಂಷಿ ಸೋಮ ಜ್ಯೋಙ್ನಃ ಸೂರ್ಯಂ ದೃಶಯೇ ರಿರೀಹಿ ||**

(ಋ. ಸಂ. ೯-೯೧-೬)

**ಉದ್ಯಂತಂ ತ್ವಾ ಮಿತ್ರಮಹೋ ದಿವೇದಿವೇ ಜ್ಯೋಗ್ಜೀವಾಃ ಪ್ರತಿ ಪಶ್ಯೇಮ ಸೂರ್ಯ ||**

(ಋ. ಸಂ. ೧೦-೩೭-೭)

**ಜ್ಯೋಕ್ ಪಶ್ಯೇಮ ಸೂರ್ಯಮುಚ್ಚರಂತಮನುಮತೇ ಮೃಳಯಾ ನಃ ಸ್ವಸ್ತಿ ॥**

(ಋ. ಸಂ. ೧೦-೫೯-೬)

ಇವುಗಳಲ್ಲದೆ ಯಜುರ್ವೇದದಲ್ಲಿಯೂ—"**ಪಶ್ಯೇಮ ಶರದಃ ಶತಂ....ಜ್ಯೋಕ್ ಚ ಸೂರ್ಯಂ ದೃಶೇ**" "**ಜ್ಯೋಕ್ ಚ ಪಶ್ಯಾಮಿ ಸೂರ್ಯಂ**" ಮೊದಲಾದ ಈ ಅಭಿಪ್ರಾಯವನ್ನು ಸೂಚಿಸುವ ಅನೇಕ ವಾಕ್ಯಗಳಿವೆ.

॥ ಸಂಹಿತಾಪಾಠಃ ॥

## ಇದಮಾಪಃ ಪ್ರ ವಹತ ಯತ್ಕಿಂ ಚ ದುರಿತಂ ಮಯಿ ।
## ಯದ್ವಾಹಮಭಿದುದ್ರೋಹ ಯದ್ವಾ ಶೇಪ ಉತಾನೃತಂ ॥ ೮ ॥

॥ ಪದಪಾಠಃ ॥

ಇದಂ । ಆಪಃ । ಪ್ರ । ವಹತ । ಯತ್ । ಕಿಂ । ಚ । ದುಃऽಇತಂ । ಮಯಿ ।

ಯತ್ । ವಾ । ಅಹಂ । ಅಭಿऽದುದ್ರೋಹ । ಯತ್ । ವಾ । ಶೇಪೇ । ಉತ । ಅನೃತಂ ॥ ೮ ॥

॥ ಸಾಯಣಭಾಷ್ಯಂ ॥

ಮಯಿ ಯಜಮಾನೇ ಯತ್ಕಿಂ ಚ ದುರಿತಮಜ್ಞಾನಾನ್ನಿಷ್ಪನ್ನಂ । ವಾಥವಾಹಂ ಯಜಮಾನೋಽಭಿದುದ್ರೋಹ ಸರ್ವತೋ ಬುದ್ಧಿಪೂರ್ವಕಂ ದ್ರೋಹಂ ಕೃತವಾನಸ್ಮಿ ವಾಥವಾ ಶೇಪೇ ಸಾಧುಜನಂ ಶಪ್ತವಾನಸ್ಮೀತಿ ಯದಸ್ತಿ। ಉತಾಪಿ ಚಾನೃತಮುಕ್ತವಾನಿತಿ ಯದಸ್ತಿ ತದಿದಂ ಸರ್ವಮುಪರಾಧಜಾತಂ ಪ್ರ ವಹತ । ಮತ್ತೋಽಪನೀಯ ಪ್ರವಾಹೇಣಾನ್ಯತೋ ನಯತ ॥ ಮಯಿ ಮಪರ್ಯಂತಸ್ಯ ತ್ವಮಾವೇಕವಚನ ಇತಿ ಮಾದೇಶೇ ಕೃತೇಽತೋ ಗುಣ ಇತಿ ಪರರೂಪೇ ಚ ಸತಿ ಯೋಽಚೀತಿ ದಕಾರಸ್ಯ ಯಕಾರಾದೇಶಃ । ಏಕಾದೇಶಸ್ವರೇಣ ಮಕಾರಾತ್ಪರಸ್ಯಾಕಾರಸ್ಯೋದಾತ್ತತ್ವಂ। ದುದ್ರೋಹ। ದ್ರುಹ ಜಿಘಾಂಸಾಯಾಂ। ಣಲಿ ಗುಣೇ ದ್ವಿರ್ವಚನಹ್ರಸ್ವಹಲಾದಿಶೇಷಾಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ಯದ್ವೃತ್ತಯೋಗಾನ್ನಿಘಾತಾಭಾವಃ। ಶೇಪೇ। ಶಪ ಆಕ್ರೋಶೇ। ಲಿಟಿ ವ್ಯತ್ಯಯೇನ ತಙ್ । ಉತ್ತಮೈಕವಚನಮಿಟ್। ಟೇರೇತ್ವಂ । ಅತ ಏಕಹಲ್ಮಧ್ಯೇ ಪಾ. ೬-೪-೧೨೦ । ಇತ್ಯೇತ್ವಾಭ್ಯಾಸಲೋಪೌ। ಪ್ರತ್ಯಯಸ್ವರೇಣಾಂತೋದಾತ್ತತ್ವಂ। ಪೂರ್ವವನ್ನಿಘಾತಾಭಾವಃ॥

॥ ಪ್ರತಿಪದಾರ್ಥ ॥

ಮಯಿ—ಯಜಮಾನನಾದ ನನ್ನಲ್ಲಿ । **ಯತ್ಕಿಂಚ**—ಯಾವುದಾದರೂ । **ದುರಿತಂ**—ಅಜ್ಞಾನದಿಂದ ಮಾಡಿದ ಪಾಪಗಳಿವೆಯೋ। **ವಾ**—ಅಥವಾ । **ಅಹಂ**—ನಾನು । **ಯತ್ ಅಭಿದುದ್ರೋಹ**—ಬುದ್ಧಿಪೂರ್ವಕವಾಗಿ (ಯಾರಿಗಾದರೂ) ದ್ರೋಹವೆಣಿಸಿದ್ದರೂ । **ವಾ**—ಅಥವಾ । **ಯತ್ ಶೇಪೇ**—ಯಾರ ವಿಚಾರವಾಗಿ ಕೆಟ್ಟ

ಮಾತನ್ನಾಡಿದ್ದರೂ | **ಉತ**—ಮತ್ತು | **ಅನೃತಂ**—ಸುಳ್ಳನ್ನು (ಹೇಳಿದ್ದರೂ) | **ಇದಂ**—ಅಂತಹ ಪಾಪವನ್ನು **ಆಪಃ**—ಉದಕಗಳು | **ಪ್ರವಹತ**—(ನನ್ನಿಂದ ಬೇರ್ಪಡಿಸಿ) ಪ್ರವಾಹರೂಪದಿಂದ ಕೊಚ್ಚಿಕೊಂಡು ಹೋಗಲಿ.

॥ ಭಾವಾರ್ಥ ॥

ನನ್ನಲ್ಲಿರಬಹುದಾದ ಅಜ್ಞಾನವಶದಿಂದ ಮಾಡಿದ ಪಾಪಗಳು, ಅಥವಾ ನಾನು ಯಾರಿಗಾದರೂ ದ್ರೋಹ ವೆಣಿಸಿದ್ದರೂ, ಅಥವಾ ಕೆಟ್ಟಮಾತನ್ನಾಡಿದ್ದರೂ ಮತ್ತು ಸುಳ್ಳನ್ನು ಹೇಳಿದ್ದರೂ ಅಂತಹ ಪಾಪಗಳೆಲ್ಲವನ್ನೂ ಉದಕಗಳು ( ಹರಿಯುವ ನೀರು) ಪ್ರವಾಹರೂಪದಲ್ಲಿ ಕೊಚ್ಚಿಕೊಂಡು ಹೋಗಲಿ.

English Translation

Waters, take away whatever sin has been (found) in me, whether I have (knowingly) done wrong, or have pronounced imprecations (against holy men), or have spoken untruth.

| ವಿಶೇಷವಿಷಯಗಳು ||

**ದುರಿತಂ**—ಅಜ್ಞಾನಾಸ್ಸಿಷ್ಪನ್ನಂ ಕಾಯಿಕಂ ಪಾಪಂ | ಅಜ್ಞಾನದಿಂದ ಅಥವಾ ಬುದ್ಧಿಪೂರ್ವಕವಾಗಿ ಮಾಡಿದ ಕಾರ್ಯರೂಪವಾದ ಪಾಪವು ಎಂದರೆ ಯಾರನ್ನಾದರೂ ಹೊಡೆಯುವುದು ಮೊದಲಾದ ಬಲಪ್ರಯೋಗಮಾಡಿ ಮಾಡುವ ಪಾಪಗಳು ಎಂದರ್ಥವು.

**ಅಭಿದುದ್ರೋಹ**—ಮನಸ್ಸಿನಿಂದ ಕೆಟ್ಟದ್ದನ್ನು ಯೋಚಿಸುವುದಕ್ಕೆ ದ್ರೋಹವೆಂದು ಹೆಸರು. ಇದು ಮಾನಸಿಕವಾದ ಪಾಪವು.

**ಶೇಪೇ, ಅನೃತಂ**—ಬೈಯ್ಯುವುದು ಮತ್ತು ಸುಳ್ಳು ಹೇಳುವುದು ಮೊದಲಾದವು ಮಾತಿನಿಂದ ಮಾಡುವ ಪಾಪವು. ಇದು ವಾಚಿಕವು ಈ ಮೂರು ವಿಧವಾದ ಪಾಪಗಳನ್ನು ಹರಿಯುವ ನೀರು ಕೊಚ್ಚಿಕೊಂಡು ಹೋಗಲೆಂದು ಪ್ರಾರ್ಥನೆಯು.

। ಸಂಹಿತಾಪಾಠಃ ।

**ಆಪೋ ಅದ್ಯಾನ್ವಚಾರಿಷಂ ರಸೇನ ಸಮಗಸ್ಮಹಿ ॥**

**ಪಯಸ್ವಾನಗ್ನ ಆ ಗಹಿ ತಂ ಮಾ ಸಂ ಸೃಜ ವರ್ಚಸಾ ॥ ೯ ॥**

॥ ಪದಪಾಠಃ ॥

**ಆಪಃ | ಅದ್ಯ | ಅನು | ಅಚಾರಿಷಂ | ರಸೇನ | ಸಂ | ಅಗಸ್ಮಹಿ |**

**ಪಯಸ್ವಾನ್ | ಅಗ್ನೇ | ಆ | ಗಹಿ | ತಂ | ಮಾ | ಸಂ | ಸೃಜ | ವರ್ಚಸಾ ॥ ೯**

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ದಿನೇಽವಭೃಥಾರ್ಥಮಪೋಽನ್ವಚಾರಿಷಂ । ಜಲಾನ್ಯನುಪ್ರವಿಷ್ಟೋಽಸ್ಮಿ । ಪ್ರವಿಶ್ಯ ಚ ರಸೇನ ಜಲಸಾರೇಣ ಸಮಗಸ್ಮಹಿ । ಸಂಗತಾಃ ಸ್ಮಃ । ಹೇ ಅಗ್ನೇ ಪಯಸ್ವಾನ್ ಜಲೇ ವರ್ತಮಾನತ್ವೇನ ಪಯೋಯುಕ್ತಸ್ತ್ವಮಾ ಗಹಿ । ಅಸ್ಮಿನ್ಕರ್ಮಣ್ಯಾಗಚ್ಛ । ತಂ ಮಾ ತಾದೃಶಂ ಸ್ನಾತಂ ಮಾಂ ವರ್ಚಸಾ ತೇಜಸಾ ಸಂ ಸೃಜ । ಸಂಯೋಜಯ ॥ ಅಪಃ । ಕರ್ಮಣಿ ಶಸಿ ಪ್ರಾಪ್ತೇ ವ್ಯತ್ಯಯೇನ ಜಸ್ । ಅಚಾರಿಷಂ । ಚರ ಗತ್ಯರ್ಥಃ । ಲುಙಿ ಚ್ಲೇಃ ಸಿಚ್ । ಆರ್ಧಧಾತುಕಸ್ಯೇಡ್ವಲಾದೇಃ । ಪಾ. ೭-೨-೩೫ । ಇತೀಟ್ । ನೇಟಿ । ಪಾ. ೭-೨-೪ । ಇತಿ ವೃದ್ಧಿಪ್ರತಿಷೇಧೇಽಪ್ರಾಪ್ತೇ ತದಪವಾದತಯಾತೋ ಲ್ರಾಂತಸ್ಯ ಪಾ. ೭-೨-೨ । ಇತ್ಯುಪಧಾಯಾ ವೃದ್ಧಿಃ । ಅಗಸ್ಮಹಿ । ಸಮೋ ಗಮ್ಯೃಚ್ಛೀತ್ಯಾತ್ಮನೇಪದಂ । ಪಾ. ೧-೩-೨೯ । ಚ್ಲೇಃ ಸಿಚ್ । ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಗಭಾವಶ್ಛಾಂದಸಃ । ಏಕಾಚ ಉಪದೇಶೇಽನುದಾತ್ತಾದಿತೀಟ್ಪ್ರತಿಷೇಧಃ । ವಾ ಗಮಃ । ಪಾ. ೧-೨-೧೩ । ಇತಿ ಸಿಚಃ ಕಿತ್ತ್ವಾದನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಗಹಿ । ಲೋಟಿ ಗಮೇಃ ಸಿಪೋ ಹಿಃ । ಅಪಿತ್ತ್ವೇನ ಙಿತ್ತ್ವಾದನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಅತೋ ಹೇರಿತಿ ಲುಗ್ನ ಭವತಿ । ಅಸಿದ್ಧವದತ್ರಾಭಾದಿತಿ ಮಲೋಪಸ್ಯಾಸಿದ್ಧತ್ವಾತ್ ॥

॥ ಪ್ರತಿಪದಾರ್ಥ ॥

ಅದ್ಯ—ಈಗ (ಈ ದಿನದಲ್ಲಿ) । ಅಪಃ—ಉದಕಗಳನ್ನು (ನೀರನ್ನು) । ಅನ್ವಚಾರಿಷಂ—(ಅವಭೃಥ ಸ್ನಾನಾರ್ಥವಾಗಿ) ಪ್ರವೇಶಿಸಿರುವೆನು । (ಬಳಿಕ) । ರಸೇನ—ಜಲದ ಸಾರದಿಂದ । **ಸಮಗಸ್ಮಹಿ**—ಕೂಡಿರುವೆವು । (ಹೇ) ಅಗ್ನೇ—ಎಲೈ ಅಗ್ನಿಯೇ । **ಪಯಸ್ವಾನ್**—ನೀರಿನಿಂದ ಯುಕ್ತನಾದ ಎಂದರೆ ನೀರಿನಲ್ಲಿ ಇರುವ ನೀನು । ಆ ಗಹಿ—(ಈ ಸ್ನಾನಕರ್ಮದಲ್ಲಿ) ಬಾ । (ಮತ್ತು) ತಂ ಮಾ—(ಸ್ನಾನಮಾಡಿದ) ನನ್ನನ್ನು । **ವರ್ಚಸಾ**—ತೇಜಸ್ಸಿನಿಂದ । **ಸಂಸೃಜ**—ಸೇರಿಸು.

॥ ಭಾವಾರ್ಥ ॥

(ಅವಭೃಥ) ಸ್ನಾನಾರ್ಥವಾಗಿ ಈಗ ನೀರನ್ನು ಪ್ರವೇಶಿಸಿರುವೆನು. ನೀರಿನಲ್ಲಿರುವ ಸಾರವೆಲ್ಲವೂ ನಮ್ಮೊಡನೆ ಸೇರಲಿ. ಎಲೈ ಅಗ್ನಿಯೇ ನೀನು ನೀರಿನಲ್ಲಿ ಇರುವವನಾದುದರಿಂದ ಈ ಸ್ನಾನಕರ್ಮಕ್ಕೆ ಬಂದು ಸ್ನಾನಮಾಡಿದ ನನ್ನನ್ನು ತೇಜಸ್ವಿಯನ್ನಾಗಿ ಮಾಡು.

## English Translation

I have this day entered into the waters: we have mingled with their essence. Agni abiding in the waters approach, and fill me (thus bathed) with vigour.

॥ ವಿಶೇಷವಿಷಯಗಳು ॥

**ಅಪಃ—ದ್ವಿತೀಯಾರ್ಥೇ ಪ್ರಥಮಾ—**ಎಂದು ಸ್ಕಂದಸ್ವಾಮಿಯು ಹೇಳಿರುವರು ಎಂದರೆ ಅಪಃ ಎಂಬ ಪ್ರಥಮಾವಿಭಕ್ತಿಯ ಶಬ್ದಕ್ಕೆ ಅಪಃ ಎಂಬ ದ್ವಿತೀಯಾವಿಭಕ್ತಿಯ ಅರ್ಥವನ್ನು ಹೇಳಬೇಕು.

**ರಸೇನ**—ಜಲಸಾರೇಣ, ಜಲಸಾರದಿಂದ, essence of water ಎಂದರೆ ಶುದ್ಧವಾದ ಜಲವು ನನ್ನ ಶರೀರದ ಅಂತರ್ಬಾಹ್ಯದೋಷಗಳನ್ನು (ಕೊಳೆಯನ್ನು) ಪರಿಹರಿಸಲಿ ಎಂದಭಿಪ್ರಾಯವು.

**ಪಯಸ್ವಾನ್—ಪಯಸಾ ಜಲೇನ ಯುಕ್ತಃ ಅಥವಾ ಪಯಸಿ ತಿಷ್ಠತೀತಿ ಪಯಸ್ವಾನ್** ನೀರಿನಲ್ಲಿ ಇರುವವನು. ಯಜುರ್ವೇದದಲ್ಲಿ '**ಸೋಽಪಃ ಪ್ರಾವಿಶತ್**' ಮೊದಲಾದ ವಾಕ್ಯಗಳು, ಅಗ್ನಿಯು ನೀರಿನಲ್ಲಿ ಅಡಗಿ ಕೊಂಡಿದ್ದನೆಂದು ಹೇಳುವವು. ಆದುದರಿಂದ ಅಗ್ನಿಯು ನೀರಿನಲ್ಲಿ ಇರುವನು ಎಂದು ಅನೇಕ ಸಂದರ್ಭಗಳಲ್ಲಿ ಹೇಳಿರುವುದು. ಈ ಋಕ್ಕಿನ ಉತ್ತರಾರ್ಧವು ಅಗ್ನಿದೇವತಾಕವಾಗಿರುವುದು.

ಈ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರವು—

**ಸಸ್ರುಷೀಸ್ತದಪಸೋ ದಿವಾ ನಕ್ತಂ ಚ ಸಸ್ರುಷೀಃ ।**

**ವರೇಣ್ಯಕ್ರತೂರಹಮಾ ದೇವೀರವಸೇ ಹುವೇ ॥**

ಹಗಲು ಮತ್ತು ರಾತ್ರಿಕಾಲದಲ್ಲಿಯೂ ಸಹ ಎಡಬಿಡದೆ ಪ್ರವಹಿಸುತ್ತಿರುವವೂ ತಮ್ಮ ಶ್ರೇಷ್ಠವಾದ ಕರ್ತವ್ಯ ವನ್ನು ನಿರ್ವಹಿಸುತ್ತಿರುವುವೂ, ಬುದ್ಧಿಯುಕ್ತವೂ ಆದ ಉದಕಗಳನ್ನು ಅಥವಾ ಉದಕಾಭಿಮಾನಿ ದೇವತೆಗಳನ್ನು ನನ್ನ ರಕ್ಷಣೆಗಾಗಿ ಪ್ರಾರ್ಥಿಸಿ ಕರೆಯುತ್ತೇನೆ ಎಂದು ಮಂತ್ರದ ಮುಖ್ಯಾರ್ಥವು.



## ಹತ್ತನೆಯ ಸೂಕ್ತವು.

## ಪೀ ಠಿ ಕೆ .

ಈ ಸೂಕ್ತದಲ್ಲಿಯೂ ಮುಂದಿನ ಕೆಲವು ಸೂಕ್ತಗಳಲ್ಲಿಯೂ ಯಮನ ಮತ್ತು ಪಿತೃಗಳ ವಿಷಯವು ಉಕ್ತವಾಗಿದೆ. ಈ ಸೂಕ್ತದಲ್ಲಿ ಯಮನಿಗೂ ಅವನ ಸಹೋದರಿಯಾದ ಯಮಿ ಎಂಬುವಳಿಗೂ ನಡೆದ ಸಂಭಾಷಣೆ ಇದೆ. ಆದ್ದರಿಂದ ಈ ಸೂಕ್ತದ ಪೀಠಿಕೆಯಲ್ಲಿ ಯಮನ ವಿಷಯವನ್ನೂ ಯಮಿಯೊಡನೆ ನಡೆದ ಸಂಭಾಷಣೆಯನ್ನೂ ಮಾತ್ರ ವಿವರಿಸಲಾಗಿದೆ. ಪಿತೃಗಳ ವಿಷಯವನ್ನು ಮುಂದಿನ ಸೂಕ್ತಗಳಲ್ಲಿ ವಿವರಿಸಲಾಗುವುದು. ಪಿತೃಗಳೆಂದರೆ ಇಲ್ಲಿ ಪರಲೋಕವಾಸಿಗಳಾದ ತಂದೆ ಮೊದಲಾದ ವಂಶದ ಹಿರಿಯರು, ಪೂರ್ವಜರು ಎಂದರ್ಥವು. ವಂಶದ ಹಿರಿಯರಲ್ಲಿ ಮೃತರಾದವರು ಪರಲೋಕದಲ್ಲಿ ಉತ್ತಮವಾದ ಸ್ಥಾನವನ್ನು ಪಡೆದು ಅಲ್ಲಿ ವಾಸಿಸುತ್ತಿರುವರೆಂದೂ ಈ ಪಿತೃಗಳಿಗೆ ಯಮನೇ ರಾಜನೆಂದೂ ಋಗ್ವೇದದಲ್ಲಿ ಹೇಳಿದೆ. ಆದ್ದರಿಂದ ಮುಂದಿನ ಕೆಲವು ಸೂಕ್ತಗಳಲ್ಲಿ ಯಮನಿಗೂ ಪಿತೃಗಳಿಗೂ ಇರುವ ನಿಕಟವಾದ ಸಂಬಂಧವನ್ನು ವಿವರಿಸಲಾಗಿದೆ.

# ಯಮನ ಪ್ರಶಂಸೆ

## ಯಮನ ಮಾಹಾತ್ಮ್ಯ

ಯಮನ ಸ್ವರೂಪವನ್ನು ವಿವರಿಸುವಾಗ ಋಕ್ಸಂಹಿತೆಯಲ್ಲಿ ಅನೇಕ ವಿಧವಾದ ವರ್ಣನೆಗಳಿರುವುದರಿಂದ ಅವನ ಸ್ವರೂಪವನ್ನು ಹೀಗೆಯೇ ಸರಿ ಎಂದು ನಿಷ್ಕರ್ಷಿಸುವುದು ಪ್ರಯಾಸವಾಗುತ್ತದೆ. ಈ ವಿಷಯದಲ್ಲಿ ಪಾಶ್ಚಾತ್ತ್ಯ ವಿದ್ವಾಂಸರಲ್ಲಿ ಒಬ್ಬೊಬ್ಬರು ಒಂದೊಂದು ವಿಧವಾಗಿ ಕಲ್ಪನೆಯನ್ನು ಮಾಡಿರುತ್ತಾರೆ. ಯಮನು ಮಾನವವ್ಯಕ್ತಿಯೇ ಅಥವಾ ದೇವತೆಯೇ ಎಂಬ ವಿಷಯದಲ್ಲಿಯೂ ವಿಮರ್ಶೆ ಇದ್ದೇ ಇರುತ್ತದೆ. ಕೇವಲ ಆಧುನಿಕದೃಷ್ಟಿಯಿಂದಲೇ ವಿಮರ್ಶಿಸಿ ಈ ವಿಷಯದಲ್ಲಿ ಒಂದು ನಿಷ್ಕೃಷ್ಟವಾದ ಅಭಿಪ್ರಾಯವನ್ನು ಕೊಡುವುದು ತಪ್ಪಾಗುತ್ತದೆ. ಸಾಂಪ್ರದಾಯಿಕವಾದ ಸನ್ನಿವೇಶಗಳಿಗನುಗುಣವಾಗಿ ಶಾಸ್ತ್ರೀಯವಾದ ದೃಷ್ಟಿಯಿಂದ ವಿಮರ್ಶಿಸುವುದೇ ಉಚಿತವಾಗಿರುತ್ತದೆ.

ಋಕ್ಸಂಹಿತೆಯಲ್ಲಿ ಯಮನ ಸ್ವರೂಪವನ್ನು ವಿವರಿಸುವ ಸನ್ನಿವೇಶಗಳನ್ನು ಪರಿಶೀಲಿಸಿದರೆ, ಕೇವಲ ಯಮನನ್ನೇ ಉದ್ದೇಶಿಸಿ ಪ್ರಶಂಸಿಸುವ ನಾಲ್ಕು ಸೂಕ್ತಗಳು ಮಾತ್ರ ದೊರೆತವಾಗಿವೆ. ಪ್ರಾಯಃ ಮೊದಲನೆಯ ಮತ್ತು ಹತ್ತನೆಯ ಮಂಡಲಗಳಲ್ಲಿ ಮಾತ್ರ ಈ ದೇವತೆಯ ಪ್ರಶಂಸೆಯು ಅಧಿಕವಾಗಿರುತ್ತದೆ. ಯಾವ ಮಂತ್ರದಲ್ಲಾಗಲಿ ಯಮನನ್ನು ದೇವತೆಯೆಂದು ನಿಷ್ಕೃಷ್ಟವಾಗಿ ತಿಳಿಸಿಲ್ಲವೆಂದು ಕೆಲವು ಪಾಶ್ಚಾತ್ತ್ಯವಿದ್ವಾಂಸರ ಮತ. ಆದರೆ ಇತರ ದೇವತೆಗಳೊಡನೆ ಯಮನ ಪ್ರಶಂಸೆಯೂ ಇರುವ ಸನ್ನಿವೇಶಗಳು ಬಹಳವಾಗಿರುತ್ತವೆ. ಉದಾಹರಣೆಗೆ—

**ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ।**
**ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥**

(ಋ. ಸಂ. ೧-೧೬೪-೪೬)

ಒಬ್ಬನೇ ಆದ ಈಶ್ವರನನ್ನು ಇಂದ್ರನೆಂದೂ, ಮಿತ್ರನೆಂದೂ, ವರುಣನೆಂದೂ ಅಗ್ನಿಯೆಂದೂ ಕರೆಯುತ್ತಾರೆ. ಅಲ್ಲದೇ ಇವನೇ ದಿವ್ಯಾತ್ಮನೂ, ಶ್ರೇಷ್ಠವಾದ ಪತನವುಳ್ಳವನೂ ಆದ ಗರುತ್ಮಂತನಾಗಿದ್ದಾನೆ. ಮೇಧಾವಿಗಳಾದ ವಿಪ್ರರು ಏಕಾತ್ಮನಾದ ಒಬ್ಬ ಈಶ್ವರನನ್ನೇ ಅಗ್ನಿಯೆಂದೂ, ಯಮನೆಂದೂ, ಮಾತರಿಶ್ವನೆಂದೂ, ನಾನಾವಿಧವಾಗಿ ಕರೆಯುತ್ತಾರೆ ಎಂದರೆ, **ಯಮನೂ** ಮೂಲತತ್ತ್ವದ ಒಂದಂಶವೆಂದಾಯಿತು. ವರುಣಾದಿಗಳಿಗೆ ಯಾವ ಮಹತ್ತ್ವವಿದೆಯೋ, **ಯಮ**ನಿಗೂ ಅದೇ ಮಹತ್ತ್ವವೆಂದು ಸ್ಪಷ್ಟವಾಗಿದೆ. ಅಲ್ಲದೇ,

**ಯಸ್ಮಿನ್ವೃಕ್ಷೇ ಸುಪಲಾಶೇ ದೇವೈಃ ಸಂಪಿಬತೇ ಯಮಃ ।**
**ಅತ್ರಾ ನೋ ವಿಶ್ಪತಿಃ ಪಿತಾ ಪುರಾಣಾ ಅನು ವೇನತಿ ॥**

(ಋ. ಸಂ. ೧೦-೧೩೫-೧)

ಯಾವ ಪಲಾಶಪೂರ್ಣವಾದ ವೃಕ್ಷದಲ್ಲಿ **ಯಮನು** ಇತರ ದೇವತೆಗಳೊಡನೆ ಕೂಡಿ ಸೋಮಪಾನಮಾಡುವನೋ, ಅಲ್ಲಿ ಪ್ರಜಾಪಾಲಕನೂ, ಪ್ರಭುವೂ ಆದ ಗೃಹಪತಿಯು ಹಿಂದಿನವರೊಂದಿಗೆ ಸೇರಿಕೊಳ್ಳಲು ನಮಗೆ ಆಹ್ವಾನವನ್ನು ಕೊಡುತ್ತಾನೆ ಎಂದೂ ವರ್ಣಿತವಾಗಿದೆ.

ವರುಣ (೧೦-೧೪-೭;) ಬೃಹಸ್ಪತಿ (೧೦-೧೭-೧೪) ಅಗ್ನಿ (೧೦-೫೧-೫) ಇತ್ಯಾದಿ ದೇವತೆಗಳೊಡನೆ ಯಮನನ್ನು ಅಧಿಕವಾಗಿ ಸ್ತುತಿಸಿದೆ. ಇದೂ ಅಲ್ಲದೇ, **ಮಹತ್ತದುಲ್ಬಂ ಸ್ಥವಿರಂ** (೧೦-೫೧-೧) ಎಂಬ ಮಂತ್ರದಲ್ಲಿ ಅಗ್ನಿಯು ಗೂಢವಾಗಿ ನೀರಿನಲ್ಲಿ ಅಡಗಿಕೊಂಡುದೂ, ಆಗ ಒಬ್ಬ ದೇವನು ಮಾತ್ರ ಈ ಅಗ್ನಿಯನ್ನು ಕಂಡುದೂ ತಿಳಿಸಿದೆ. ಆದರೆ, ಆ ದೇವತೆಯು ಯಾರೆಂದರೆ,

**ಐಚ್ಛಾಮ ತ್ವಾ ಬಹುಧಾ ಜಾತವೇದಃ ಪ್ರವಿಷ್ಟಮಗ್ನೇ ಅಪ್ಸ್ವೋಷಧೀಷು ।**
**ತಂ ತ್ವಾ ಯಮೋ ಅಚಿಕೇಚ್ಚಿತ್ರಭಾನೋ ದಶಾಂತರುಷ್ಯಾದತಿರೋಚಮಾನಂ ॥**

**(ಋ. ಸಂ. ೧೦-೫೧-೩ )**

ಎಲೈ ಅಗ್ನಿಯೇ, ಪ್ರಭೂತವಾದ ಸಾರವುಳ್ಳ ನೀರಿನಲ್ಲಿ ಅಡಗಿಕೊಂಡಿದ್ದವನೂ, ಅನೇಕ ರೂಪಗಳಲ್ಲಿ ಓಷಧ್ಯಾದಿಗಳಲ್ಲಿ ಅಡಗಿದ್ದವನೂ, ಆದ ನಿನ್ನನ್ನು ನಾವು ಅನೇಕ ವಿಧದಲ್ಲಿ ಹುಡುಕಿದೆವು. ಆದರೆ ಮಹತ್ಪ್ರಕಾಶವನ್ನು ಹರಡುವ ಕಿರಣಗಳುಳ್ಳ ನಿನ್ನನ್ನು **ಯಮನು** ಮಾತ್ರ ಅರಿತನು ಎಂದಿದೆ. ೧೦-೫೧-೧ ನೇ ವಾಕ್ಯದಲ್ಲಿ ದೇವತೆಯು ಅಗ್ನಿಯನ್ನು ಹುಡುಕಿದನು ಎಂಬುದೂ, ಪ್ರಕೃತವಾದ ಈ ಮಂತ್ರದಲ್ಲಿ ಯಮನೇ ಅಗ್ನಿಯನ್ನು ಕಂಡನು ಎಂಬುದೂ ಯಮನು ದೇವತೆಯೆಂಬುದನ್ನು ನಿಷ್ಕೃಷ್ಟವಾಗಿ ತಿಳಿಸುತ್ತದೆ. ಈ ದೇವತೆಯೇ, ಪಿತೃಗಳಿಗೆಲ್ಲಾ **ರಾಜನು.**

**ಪ್ರೇಹಿ ಪ್ರೇಹಿ ಪಥಿಭಿಃ ಪೂರ್ವ್ಯೇಭಿರ್ಯತ್ರಾ ನಃ ಪೂರ್ವೇ ಪಿತರಃ ಪರೇಯುಃ ।**
**ಉಭಾ ರಾಜಾನಾ ಸ್ವಧಯಾ ಮದಂತಾ ಯಮಂ ಪಶ್ಯಾಸಿ ವರುಣಂ ಚ ದೇವಂ ॥**

**(ಋ. ಸಂ. ೧೦-೧೪.೭)**

ಎಲೈ ಪ್ರೇತನೇ, ಹಿಂದಿನ ನಮ್ಮ ಪಿತೃಗಳೆಲ್ಲರೂ ಯಾವ ಮಾರ್ಗದಿಂದ ಹೋದರೋ, ಆ ಮಾರ್ಗದಲ್ಲಿ ನೀನೂ ಹೊರಡು. ಅಲ್ಲಿ ಸರ್ವಪಿತೃಗಳಿಗೂ ರಾಜನಾದ ಯಮನನ್ನು ಮತ್ತು ವರುಣನನ್ನು ನೀನು ಕಾಣುವೆ ಇತ್ಯಾದ್ಯನೇಕ ವಾಕ್ಯಗಳು ಯಮನನ್ನು ಪಿತೃಗಳಿಗೆಲ್ಲ ರಾಜನೆಂದು ವರ್ಣಿಸಿವೆ. ಅವನನ್ನು ಪ್ರಶಂಸಿಸುವ ವಾಕ್ಯಗಳಲ್ಲೆಲ್ಲ ಅವನಿಗೂ ಪಿತೃಗಳಿಗೂ ಇರುವ ನಿಕಟವಾದ ಸಂಬಂಧವನ್ನು ತಿಳಿಸಿದೆ. ಅದರಲ್ಲೂ ಅಂಗಿರಸ್ಸುಗಳಿಗೂ ಯಮನಿಗೂ ಇರುವ ಸಂಬಂಧವು ಬಹಳ ನಿಕಟವಾದುದು. ಮೃತರಾದ ಮಾನವರಿಗೆಲ್ಲ ಅವನು ಆಶ್ರಯದಾತನೆಂದು ಸ್ತುತನಾಗಿದ್ದಾನೆ. (೧೦-೧೪-೯).

## ೨. ಯಮನ ಸ್ಥಾನ

ದ್ಯುಲೋಕದ ಅತ್ಯಂತ ಕೊನೆಯ ಪ್ರದೇಶವೇ ಯಮನ ಆವಾಸಸ್ಥಾನ ಎಂದು ವರ್ಣಿಸುವ—

**ಯತ್ರ ರಾಜಾ ವೈವಸ್ವತಃ ಯತ್ರಾವರೋಧನಂ ದಿವಃ ॥**

(ಋ. ಸಂ. ೯-೧೧೩-೮)

ಇತ್ಯಾದಿ ವಾಕ್ಯಗಳು ಯಮನ ಆವಾಸಸ್ಥಾನವನ್ನೂ ಅವನ ಪ್ರಭುತ್ವವನ್ನೂ ವರ್ಣಿಸುತ್ತವೆ. ಅಲ್ಲದೇ, ದ್ಯುಲೋಕ ಪ್ರಭುತ್ವವು **ಯಮ** ಮತ್ತು **ಆದಿತ್ಯ** ಇವರಿಬ್ಬರಿಗೆ ಸೇರಿದುದು. ಅವುಗಳಲ್ಲಿ ಆದಿತ್ಯನ ಸ್ಥಾನವೂ ಯಮನಸ್ಥಾನವೂ ಪರಿಕ್ಲೃಪ್ತವಾಗಿವೆ. ಹೇಗೆಂದರೆ—

**ತಿಸ್ರೋ ದ್ಯಾವಃ ಸವಿತುರ್ದ್ವಾ ಉಪಸ್ಥಾ ಏಕಾ ಯಮಸ್ಯ ಭುವನೇ ವಿರಾಷಾಟ್ ।**
**ಆಣಿಂ ನ ರಥ್ಯಮಮೃತಾಧಿ ತಸ್ಥುರಿಹ ಬ್ರವೀತು ಯ ಉ ತಚ್ಚಿಕೇತತ್ ॥**

(ಋ. ಸಂ. ೧-೩೫-೬)

ಸ್ವರ್ಗೋಪಲಕ್ಷಿತವಾದ ಲೋಕಗಳು ಮೂರು. ಅವುಗಳಲ್ಲಿ ದ್ಯುಲೋಕ ಮತ್ತು ಭೂಲೋಕಗಳು ಆದಿತ್ಯನಿಂದ ಪ್ರಕಾಶಿತವಾಗತಕ್ಕವು. ಮಧ್ಯಮವಾದ ಅಂತರಿಕ್ಷ ಲೋಕವು ಯಮನಿಗೆ ಸೇರಿದುದು. ಮೃತಿಯನ್ನು ಹೊಂದಿ ಪ್ರೇತರೂಪವನ್ನು ಹೊಂದುವ ಜೀವಗಳು ಈ ಯಮನ ಲೋಕವಾದ ಅಂತರಿಕ್ಷದ ಮೂಲಕ ಸಂಚರಿಸತಕ್ಕವು ಎಂದು ಯಮನ ಸ್ಥಾನವನ್ನು ತಿಳಿಸಿದೆ. ಈ ದ್ಯುಲೋಕ ಮತ್ತು ಅಂತರಿಕ್ಷ ಲೋಕಗಳ ವಿಷಯದಲ್ಲಿ ನಿಷ್ಕೃಷ್ಟವಾದ ಅರ್ಥವನ್ನು ಹೇಳುವುದು ಶ್ರಮವಾಗುತ್ತದೆ. ಹೇಗೆಂದರೆ, ರೂಢಿಯಲ್ಲಿರುವ ನಂಬಿಕೆಯಂತೆ ದ್ಯುಲೋಕವು ಅಂತರಿಕ್ಷಕ್ಕಿಂತಲೂ ಮೇಲಿರತಕ್ಕದ್ದು ಮತ್ತು ಅದಕ್ಕಿಂತಲೂ ಉತ್ತಮವಾದುದು. ಯಮನ ಲೋಕವು ಅಂತರಿಕ್ಷವೇ ಆದರೆ ಅದು ದ್ಯುಲೋಕಕ್ಕಿಂತಲೂ ಉತ್ತಮವಾದುದಾಗುವುದಿಲ್ಲ. ಆದರೆ, ಕೆಲವೆಡೆಗಳಲ್ಲಿ ಯಮನ ಲೋಕವೇ ಅತ್ಯುತ್ತಮವಾದುದೆಂದೂ ವರ್ಣಿತವಾಗಿದೆ. ಉದಾಹರಣೆಗೆ—

**ಸಂಗಚ್ಛಸ್ವ ಪಿತೃಭಿಃ ಸಂ ಯಮೇನೇಷ್ಟಾಪೂರ್ತೇನ ಪರಮೇ ವ್ಯೋಮನ್ ॥**

(ಋ. ಸಂ. ೧೦-೧೪-೮)

ಇತ್ಯಾದಿ ವಾಕ್ಯಗಳಲ್ಲಿ ಯಮನ ಲೋಕವು ಅತ್ಯುತ್ಕೃಷ್ಟವಾದುದೆಂದೇ ಹೇಳಿದೆ. ಇಲ್ಲಿ ಶಾಶ್ವತವಾದ ಜ್ಯೋತಿಯು ಬೆಳಗುವುದು, (ಋ. ಸಂ. ೯-೧೧೩-೯). ಆದರೆ ಈ ಸ್ಥಾನವು ಸೂರ್ಯನ ಸ್ಥಾನವೆಂದೂ ವಿದಿತವಾಗಿದೆ. ಹೇಗೆಂದರೆ,

**ಯತ್ರಾನುಕಾಮಂ ಚರಣಂ ತ್ರಿನಾಕೇ ತ್ರಿದಿವೇ ದಿವಃ ।**
**ಲೋಕಾ ಯತ್ರ ಜ್ಯೋತಿಷ್ಮಂತಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥**

(ಋ. ಸಂ. ೯-೧೧೩-೯)

ಎಂಬ ಪ್ರಾರ್ಥನೆಯಲ್ಲಿ ಈ ದ್ಯುಲೋಕವು ಶಾಶ್ವತವಾದ ಪ್ರಭೆಯುಳ್ಳದ್ದಾಗಿರುವುದೆಂದು ವರ್ಣಿತವಾಗಿದೆ. ಈ ದ್ಯುಲೋಕವು ಸೂರ್ಯಲೋಕವೆಂದು ಹಿಂದೆ ತಿಳಿಸಿದೆ. ಅಲ್ಲದೇ, ಅತ್ಯುತ್ತಮವಾದುದೂ ವಿಧ್ಯುಕ್ತವಾದ ಆಚರಣೆಯುಳ್ಳದ್ದೂ ಆದ ಜೀವವು ದೇಹದಿಂದ ಬೇರೆಯಾದೊಡನೆಯೇ ಸೂರ್ಯರಶ್ಮಿಯ ರೂಪವನ್ನು ಹೊಂದಿ ಸೂರ್ಯಲೋಕದಲ್ಲಿ ಚಿರವಾದ ಸ್ಥಾನವನ್ನು ಹೊಂದುತ್ತದೆಂದು ಅನೇಕ ಕಡೆಗಳಲ್ಲಿ ಪ್ರಶಂಸಿಸಿದೆ.

**ಸಹಸ್ರಣೀಥಾಃ ಕವಯೋ ಯೇ ಗೋಪಾಯಂತಿ ಸೂರ್ಯಂ ।**

(ಋ. ಸಂ. ೧೦-೧೫೪-೫)

ಎಲೈ ಯಮನೇ, ಸಹಸ್ರಾರು ಚಕ್ಷುಸ್ಸುಳ್ಳ ಯಾವ ಕವಿಗಳು ಸೂರ್ಯನನ್ನು ರಕ್ಷಿಸುವರೋ ಅಂತಹ ತಪೋಯುಕ್ತರಾದ ಋಷಿಗಳನ್ನು ನೀನು ಅನುಗ್ರಹಿಸು ಎಂಬಲ್ಲಿಯೂ ಈ ಅಂಶವು ಸ್ಪಷ್ಟವಾಗಿದೆ. ಆದಿತ್ಯನ ಸದನಕ್ಕೂ ಯಮನ ಸದನಕ್ಕೂ ತಾದಾತ್ಮ್ಯವನ್ನು ತೋರಿಸತಕ್ಕ ಇನ್ನೂ ಅನೇಕ ಸಂದರ್ಭಗಳು ವಿಶದವಾಗಿವೆ. ಉದಾಹರಣೆಗೆ—

**ಇದಂ ಯಮಸ್ಯ ಸಾದನಂ ದೇವಮಾನಂ ಯದುಚ್ಯತೇ ।**
**ಇಯಮಸ್ಯ ಧಮ್ಯತೇ ನಾಳೀರಯಂ ಗೀರ್ಭಿಃ ಪರಿಷ್ಕೃತಃ ॥**
(ಋ. ಸಂ. ೧೦-೧೩೫-೭)

ಎಂಬಲ್ಲಿ **ಯಮಸ್ಯ** ಎಂಬ ಪದಕ್ಕೆ ಮೊದಲನೆಯದಾಗಿ ಲೋಕನಿಯಾಮಕನಾದ ಆದಿತ್ಯನೆಂದು ಮೊದಲು ಅರ್ಥವನ್ನು ತಿಳಿಸಿ ಅನಂತರ ಎರಡನೆಯದಾಗಿ ಯಮನೆಂದು ಅರ್ಥವನ್ನು ಹೇಳಿದೆ. ಈ ಯಮನ ಲೋಕವು ದೇವತೆಗಳಿಂದ ನಿರ್ಮಿತವಾದುದು. ಇಲ್ಲಿ ವೇಣುವಾದ್ಯವು ಶುದ್ಧವಾದ ಧ್ವನಿಯಿಂದ ಈ ಪ್ರದೇಶವನ್ನೆಲ್ಲಾ ಆವರಿಸಿದೆ. ಸುತ್ತಲೂ ಸ್ತುತಿಪಾಠಗಳು ಮೊಳಗುತ್ತಿವೆ. ಸಕಲ ಪ್ರದೇಶವೂ ಸುಸಂಸ್ಕೃತವಾಗಿವೆಯೆಂದು ವರ್ಣಿಸಿದೆ. ಮತ್ತು ಮುಂದಿನ ಮಂತ್ರದಲ್ಲಿ (ಋ- ಸಂ. ೧೦-೧೩೬-೧) **ಕೇಶೀದಂ ಜ್ಯೋತಿರುಚ್ಯತೇ** ಎಂಬ ಸಂದರ್ಭದಲ್ಲಿ ಆದಿತ್ಯಮಂಡಲದ ತೇಜೋರಾಶಿಯೆಂದರ್ಥಮಾಡಿದೆ. ಹೀಗೆ ಅನೇಕ ಕಡೆಗಳಲ್ಲಿ ಯಮನ ಸ್ಥಾನನಿರ್ದೇಶಕಾಲದಲ್ಲೆಲ್ಲ ಆದಿತ್ಯನಿಗೂ ಯಮನಿಗೂ ತಾದಾತ್ಮ್ಯವನ್ನು ತೋರಿಸಿದೆ.

## ೩. ಯಮನ ಮಾತಾಪಿತೃಗಳು

ಯಮನ ತಂದೆಯು ವಿವಸ್ವಾನ್ ಮತ್ತು ತಾಯಿಯು ಸರಣ್ಯೂ. ಸರಣ್ಯೂವು ವಿವಸ್ವಂತನ ಪತ್ನೀ,

**ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ ।**
**ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ॥**
(ಋ. ಸಂ. ೧೦-೧೭-೧)

**ತ್ವಷ್ಟೃ** ನಾಮಕನಾದ ದೇವನು ತನ್ನ ಮಗಳಾದ ಸರಣ್ಯೂವನ್ನು **ವಿವಸ್ವಾನ್** ಎಂಬವನಿಗೆ ಕೊಟ್ಟು ವಿವಾಹವನ್ನು ಮಾಡಿದನು. ಈ ಸರಣ್ಯೂವು ಯಮನಿಗೂ ಇವನ ಒಡಹುಟ್ಟಿದ ಯಮಿಗೂ ತಾಯಿಯು. ಈ ಸರಣ್ಯೂವು **ಯಮ** ಮತ್ತು **ಯಮೀ** ಎಂಬಿಬ್ಬರನ್ನು ಹಡೆದಳು. (**ಅಜಹಾದು ದ್ವಾ ಮಿಥುನಾ ಸರಣ್ಯೂಃ** (ಋ. ಸಂ.೧೦-೧೭-೨), ಈ ಯಮನು ಅನೇಕಸಲ **ವೈವಸ್ವತನೆಂದೇ** ನಿರ್ದಿಷ್ಟನಾಗಿದ್ದಾನೆ. (ಋ. ಸಂ. ೧೦-೧೪-೧ ಇತ್ಯಾದಿ)

**ಗಂಧರ್ವೋ ಅಪ್ಸ್ವಪ್ಯಾ ಚ ಯೋಷಾ ಸಾ ನೋ ನಾಭಿಃ ಪರಮಂ ಜಾಮಿ ತನ್ನೌ ॥**
(ಋ. ಸಂ. ೧೦-೧೦-೪)

ಎಂಬಲ್ಲಿ ಯಮಿಯು ಯಮನನ್ನು ಪ್ರಾರ್ಥಿಸುವಾಗ ತಾವಿಬ್ಬರೂ ಗಂಧರ್ವನ ಪುತ್ರ ಮತ್ತು ಪುತ್ರಿಯರೆಂದೂ, ಸಹೋದರ ಮತ್ತು ಸಹೋದರಿಯರೆಂದೂ ಹೇಳಿಕೊಳ್ಳುತ್ತಾಳೆ. ಆದರೆ **ಯಮನು** ಆದಿತ್ಯ ಪರ್ಯಾಯನಾದರೆ ಆಗ **ಯಮಿ** ಶಬ್ದಾರ್ಥವೇನು ? ನಿರುಕ್ತಾದಿಗಳಲ್ಲಿ ಈ ಪದಗಳ ನಿಷ್ಕೃಷ್ಟಾರ್ಥವೇನು ಎಂಬುದನ್ನು ಅರಿಯಬೇಕು. ಮುದಿಂದ ಪ್ರಥಮತಃ, ಯಮನ ಸ್ವರೂಪ ವರ್ಣನವು ಋಕ್ಸಂಹಿತೆಯಲ್ಲಿ ಯಾವರೀತಿ ವಿವೃತವಾಗಿವೆಯೆಂದು **ತಿಳಿದು** ಆಧಾರದ ಮೇಲೆ **ಯಮ** ಶಬ್ದದ ಉಳಿದ ಅರ್ಥಗಳನ್ನು ಪರ್ಯಾಲೋಚಿಸಬಹುದು.

## ೪. ಯಮನ ಸ್ವರೂಪವರ್ಣನೆ

ಯಮನು ಪಿತೃಗಳಿಗೆಲ್ಲ ಅಧಿದೇವತೆಯೆಂದೂ ಪಿತೃಲೋಕದ ಪ್ರಭುವೆಂದೂ ವರ್ಣಿತನಾಗಿದ್ದಾನೆ. **ಯತ್ರ ರಾಜಾ ವೈವಸ್ವತಃ** । (ಋ. ಸಂ. ೯-೧೧೩-೮). **ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ**

**ಹವಿಷಾ ದುವಸ್ಯ** (ಋ. ಸಂ. ೧೦-೧೪-೧) **ಯಮರಾಜ್ಞೋ ಗಚ್ಛತು ರಿಪ್ರವಾಹಃ** (ಋ. ಸಂ. ೧೦-೧೬-೯) ಇತ್ಯಾದಿ ಸ್ಥಳಗಳಲ್ಲಿ ಯಮನನ್ನು **ರಾಜನೆಂದು** ನಿರ್ದೇಶಿಸಿದೆ. ಯಮನೂ ಮತ್ತು ವರುಣನೂ ಪಿತೃಲೋಕದ ಪ್ರಭುಗಳೆಂದು ಒಟ್ಟಿಗೆ ವರ್ಣಿತವಾಗಿರುವ ಸನ್ನಿವೇಶಗಳೂ ಅನೇಕವಾಗಿವೆ. **ಉಭಾ ರಾಜಾನಾ ಸ್ವಧಯಾ ಮದಂತಾ ಯಮಂ ಪಶ್ಯಾಸಿ ವರುಣಂ ಚ ದೇವಂ** (೧೦-೧೪-೭). ಅವನ ಸ್ವರೂಪವು ಬಹಳ ಭೀಕರ ವಾದುದು. ಪಾಪಿಗಳನ್ನು ಶಿಕ್ಷಿಸುವ ವರುಣನ ಪಾಶದಂತೆಯೇ ಯಮನ ಪಾಶವೂ ಪಾಪಿಗಳನ್ನು ಶಿಕ್ಷಿಸತಕ್ಕದ್ದು.

> **ಮುಂಚಂತು ಮಾ ಶಪಥ್ಯಾ ೩ ದಥೋ ವರುಣ್ಯಾದುತ ।**
> **ಅಥೋ ಯಮಸ್ಯ ಪಡ್ಬೀಶಾತ್ಸರ್ವಸ್ಮಾದ್ದೇವಕಿಲ್ಬಿಷಾತ್ ॥**

(ಋ. ಸಂ. ೧೦.೯೭-೧೬)

ನನ್ನನ್ನು ಶಾಪಜನಿತವಾದ ಪಾಪಗಳಿಂದಲೂ, ವರುಣನ ನಿಗ್ರಹರೂಪವಾದ ಪಾಶದಿಂದಲೂ ಓಷಧಿಗಳು ಮುಕ್ತ ನನ್ನಾಗಿ ಮಾಡಲಿ ಎಂಬ ಪ್ರಾರ್ಥನೆಯಲ್ಲಿ ಯಮನ ಪಾಶವನ್ನು **ಪಡ್ಬೀಶವೆಂದು** ವರ್ಣಿಸಿದೆ. ಪಾದಗಳನ್ನು ಚಲಿಸಲಾಗದಂತೆ ಬಂಧಿಸುವ ಪಾಶವೆಂದರ್ಥ. ಹೀಗೆಯೇ ಇನ್ನೂ ಅನೇಕ ಸ್ಥಳಗಳಲ್ಲಿ ಯಮನ ಭೀಕರ ಸ್ವರೂಪವು ವರ್ಣಿತವಾಗಿದೆ. ಯಮನ ಕರ್ತವ್ಯವೇನೆಂಬುದನ್ನು ತಿಳಿದರೆ ಈ ಅಂಶವು ಇನ್ನೂ ವಿಶದವಾಗುತ್ತದೆ.

## ೫. ಯಮದೂತರು, ಅವರ ಸ್ವರೂಪ

ಯಮನು ಸತ್ಕರ್ಮಕರ್ತರನ್ನು ಆಯಾ ಕರ್ಮಾರ್ಹವಾದ ಉತ್ತಮ ಪ್ರದೇಶಗಳಿಗೆ ಮರಣಾನಂತರ ಕರೆದೊಯ್ಯುತ್ತಾನೆ. ಪಾಪಿಗಳನ್ನು ಅವರಿಗೆ ಅರ್ಹವಾದ ಸ್ಥಾನವನ್ನು ಕಲ್ಪಿಸುತ್ತಾನೆ. (ಋ. ಸಂ. ೧೦-೧೪-೧). ಅಲ್ಲದೇ, ಈ ಯಮನೇ, ಮಾನವರಿಗೆ ಮರಣಕಾರಕವಾದ ಮೃತ್ಯುವು

> **ಯದುಲೂಕೋ ವದತಿ ಮೋಘಮೇತದ್ಯತ್ಕಪೋತಃ ಪದಮಗ್ನೌ ಕೃಣೋತಿ ।**
> **ಯಸ್ಯ ದೂತಃ ಪ್ರಹಿತ ಏಷ ಏತತ್ತಸ್ಮೈ ಯಮಾಯ ನಮೋ ಅಸ್ತು ಮೃತ್ಯವೇ ॥**

(ಋ. ಸಂ. ೧೦-೧೬೫-೪)

ಎಂಬಲ್ಲಿ, **ಗೂಬೆ, ಕಪೋತ** ಎಂಬ ಪಕ್ಷಿಗಳು **ಯಮನ** ದೂತರೆಂದು ಸೂಚಿತವಾಗಿವೆ. ಯಮನಿಗೂ ಮೃತ್ಯುವಿಗೂ ತಾದಾತ್ಮ್ಯವನ್ನು ಹೇಳಿದೆ. ಆದುದರಿಂದಲೇ **ಗೂಬೆಯ** ಕೂಗೂ ಮತ್ತು ದರ್ಶನವೂ ಅವಲಕ್ಷಣವೆಂಬ ನಂಬಿಕೆ ಯಿರುತ್ತದೆ. ಇದಲ್ಲದೇ, **" ಯೌ ತೇ ಶ್ವಾನೌ "** (೧೦-೧೪-೧೧) ಇತ್ಯಾದಿ ವಾಕ್ಯಗಳಿಂದ ಯಮನ ದೂತರಾದ ಎರಡು ಶ್ವಾನಗಳ ವರ್ಣನೆಗಳು ವಿವೃತವಾಗಿವೆ. (**ಸಾರಮೇಯಸಂಜ್ಞಕಗಳಾದ** ಈ ಶ್ವಾನಗಳ ಸ್ವರೂಪವನ್ನು ಮುಂದೆ ೧೦ನೇ ಮಂಡಲದ ೧೪ನೇ ಸೂಕ್ತದ ಪೀಠಿಕೆಯಲ್ಲಿ ತಿಳಿಸಲಾಗುತ್ತದೆ.) ಈ ಶ್ವಾನಗಳಿಗೆ ನಾಲ್ಕು ಕಣ್ಣುಗಳೂ, ವಿಸ್ತೃತವಾದ ಮೂಗುಗಳೂ ಇರುವುವು ಎಂಬ ವಿವರವು ಇವುಗಳ ವಿಕಾರರೂಪಗಳನ್ನು ತಿಳಿಸುತ್ತವೆ. ಆದರೆ, ಸತ್ಕರ್ಮಕರ್ತರು ಈ ಶ್ವಾನಗಳಿಗೆ ಭಯಪಡಬೇಕಾದುದಿಲ್ಲ. ಇವು ಮರಣಾನಂತರ ಅವರ ಮಾರ್ಗಗಳನ್ನು ರಕ್ಷಿಸುವುವಾಗಿವೆ.

ಇವೇ ನಾಯಿಗಳನ್ನು ಅಥರ್ವವೇದದಲ್ಲೂ ವರ್ಣಿಸಿದೆ. ಇವುಗಳಲ್ಲಿ ಒಂದು ಶ್ಯಾಮವರ್ಣವುಳ್ಳದ್ದೆಂದೂ ತಿಳಿಸಿದೆ. (ಅ. ವೇ. ೮.೧.೯ ರಲ್ಲು ಯಮದೂತರನ್ನು ಬಹುವಚನದಲ್ಲಿ ನಿರ್ದೇಶಿಸಿದೆ. ಆದರೆ ಅವುಗಳನ್ನು ಶ್ವಾನಗಳೆಂದು ತಿಳಿಸಿಲ್ಲ.

**ವೈವಸ್ವತೇನ ಪ್ರಹಿತಾನ್ಯಮದೂತಾಂಶ್ಚರತೋಽಪಸೇಧಾಮಿ ಸರ್ವಾನ್ ।**

(ಅ. ವೇ. ೮-೨-೧೧)

ವಿವಸ್ವತ್ಪುತ್ರನಾದ ಯಮನಿಂದ ಕಳುಹಲ್ಪಟ್ಟ ಸಕಲ ದೂತರನ್ನು ತಪ್ಪಿಸಿಕೊಳ್ಳುತ್ತೇನೆ ಎಂದಿರುತ್ತದೆ. ಈ ಯಮ ದೂತರು ಶ್ವಾನಗಳಾಗಲಿ ಅಥವಾ ಯಾರಾದರಾಗಲಿ ಅವರ ಭಯಜನಕತ್ವವು ಘೋರವಾಗಿಯೇ ಇರುತ್ತದೆ. ಯಮ ದೂತರಂತೆಯೇ ಯಮನ ಆಯುಧವೂ ಭಯಜನಕವಾಗಿರುತ್ತದೆ.

**ಮಾ ನೋ ಹೇತಿರ್ವಿವಸ್ವತ ಆದಿತ್ಯಾಃ ಕೃತ್ರಿಮಾ ಶರುಃ ।**
**ಪುರಾ ನು ಜರಸೋ ವಧೀತ್ ॥**

(ಋ ಸಂ. ೮-೬೭-೨೦)

ಎಲೈ ಆದಿತ್ಯರೇ, ಭೀತಿಜನಕವೂ, ಹಿಂಸಾಕಾರಕವೂ ಆದ ಯಮನ ಆಯುಧವು ನಮ್ಮನ್ನು ಹಿಂಸಿಸದಿರಲಿ. ಅದರ ಹಿಂಸೆಯ ಫಲವಾಗಿ ನಾವು ಕ್ಷಯವನ್ನು ಹೊಂದದಿರುವಂತಾಗಲಿ ಇತ್ಯಾದಿಯಾಗಿ ಪ್ರಾರ್ಥಿಸಿದೆ.

## ೬. ಯಮ ಮತ್ತು ಯಮೀ

**ಯಮ** ಶಬ್ದವು 'ಅವಳಿ' (twin) ಎಂಬರ್ಥದಲ್ಲಿ ಅನೇಕ ಕಡೆಗಳಲ್ಲಿ ಪ್ರಯುಕ್ತವಾಗಿದೆ. **ಯಮ** ಶಬ್ದವೇ ಯಮ ಮತ್ತು ಯಮೀ ಎಂಬ ಎರಡರ್ಥಗಳನ್ನು ಸೂಚಿಸುವುದಾಗಿದೆ.

**ಮನರ್ಯನ್ನ್ಯತ್ರಾವ್ಯತಸ್ಯ ನಾಮ ಸಲಕ್ಷ್ಮಾ ಯದ್ವಿಷುರೂಪಾ ಭವಾತಿ ।**

(ಋ. ಸಂ. ೧೦-೧೨-೬)

ಈ ಯಮನ ರೂಪವನ್ನರಿಯುವುದು ಶ್ರಮ. ಅವನಿಗೆ ಒಂದೇ ವಿಧವಾದ ಚಿಹ್ನವಿದ್ದರೂ ಅವನು ಅನೇಕವಾದ ರೂಪವುಳ್ಳವನಾಗಿದ್ದಾನೆ ಎಂದಿದೆ. ಇಲ್ಲಿ **ಸಲಕ್ಷ್ಮಾ, ವಿಷುರೂಪಾ** ಎಂಬ ಎರಡು ವಿಶೇಷಣಗಳಿಗೂ ಒಟ್ಟಿಗೆ ಒಂದೇ ಸನ್ನಿವೇಶನಲ್ಲಿ ಅರ್ಥವನ್ನು ಹೇಳುವಾಗ ಯಮಯಮಿಯರ ತಾದಾತ್ಮ್ಯವೂ, ಐಕ್ಯದಲ್ಲಿ ಭಿನ್ನತೆಯೂ ತೋರುತ್ತದೆ ಅದನ್ನೇ, ಯಮನೂ ಸಹ ತನ್ನ ವಾಕ್ಕಿನಿಂದಲೇ ಹೇಳುತ್ತಾನೆ.

**ನ ತೇ ಸಖಾ ಸಖ್ಯಂ ವಷ್ಟ್ಯೇತತ್ಸಲಕ್ಷ್ಮಾ ಯದ್ವಿಷುರೂಪಾ ಭವಾತಿ**

(ಋ. ಸಂ. ೧೦-೧೦-೨)

ಆದರೆ, ಈ ವಿಶೇಷಣಗಳು ಸಂದರ್ಭಾನುಸಾರವಾಗಿ ವಿವರಿಸಲ್ಪಡಬೇಕಾಗಿರುತ್ತವೆ. ಋ. ಸಂ. ೧೦.೧೦-೧೦ ರಲ್ಲಿ ಯಮಯಮಿಯರನ್ನು ಜಾಮಿಗಳೆಂದು ಸ್ತುತಿಸಿದೆ. **ಜಾಮಿ** ಶಬ್ದಕ್ಕೆ ಕೇವಲ ಆಪ್ತಬಂಧುವೆಂದರ್ಥ. ಆಪ್ತಬಂಧತ್ವವು ದಂಪತಿಗಳಲ್ಲಿರಬಹುದು. ಸಹೋದರ ಮತ್ತು ಸಹೋದರಿಯರಲ್ಲಿರಬಹುದು. ಉದಾಹರಣೆಗೆ, ದ್ಯಾವಾಪೃಥಿವಿ

ಗಳನ್ನು, **ಜಾಮಿ, ಸ್ವಸಾರಾ, ದಂಪತೀ** ಇತ್ಯಾದಿ ವಿಶೇಷಣಗಳಿಂದ ಅನೇಕ ಕಡೆಗಳಲ್ಲಿ ಸ್ತುತಿಸಿದೆ. (ಋ. ಸಂ. ೩-೫೪-೭; ೧-೧೮೫-೫;). ಒಂದೇ ತತ್ತ್ವದ ಎರಡು ಸ್ವರೂಪಗಳೆಂದು ಹೇಳಬಹುದು.

**ಸಾಮ** ತತ್ತ್ವಕ್ಕೆ **ಸಾಮ** ಮತ್ತು **ಋಕ್** ಎಂಬ (ಸಾ+ಅಮ) ಎರಡು ರೂಪಗಳಿರುವಂತೆಯೂ, ಪ್ರಜಾಪತಿತತ್ತ್ವವು **ಮನಸ್** ಮತ್ತು **ವಾಕ್** ಎಂಬ ಎರಡು ತತ್ತ್ವಗಳನ್ನು ಹೊಂದಿರುವಂತೆಯೂ, ಅಗ್ನಿಯು **ಬ್ರಹ್ಮ** ಮತ್ತು **ಕ್ಷತ್ತ್ರ** ಎಂಬ ಎರಡು ರೂಪಗಳನ್ನು ಹೊಂದಿರುವಂತೆಯೂ, **ಯಮ** ತತ್ತ್ವವು **ಯಮ** ಮತ್ತು **ಯಮೀ** ಎಂಬ ಪ್ರಭೇದಗಳನ್ನು ಒಳಗೊಂಡಿರುತ್ತದೆಯೆಂದು ಹೇಳಲು ಅವಕಾಶವಿರುತ್ತದೆ.

**ಯಮೋ ಹಿ ಜಾತ ಇಂದ್ರೇಣ ಸಹ** (ನಿ. ೧೦-೨೧) ಇತ್ಯಾದಿವಾಕ್ಯಗಳಿಂದ ಯಮನಿಗೂ ಅಗ್ನಿಗೂ ತಾದಾತ್ಮ್ಯವನ್ನು ತಿಳಿಸಿದೆ. ಇಂದ್ರಾಗ್ನಿಗಳು **ಯಮ**ರೆಂದೂ ಕೆಲವೆಡೆಗಳಲ್ಲಿ ವರ್ಣಿತವಾಗಿದೆ. ಇಂದ್ರನಿಗೂ ಪೃಥ್ವಿಗೂ ಸಹ ತಾದಾತ್ಮ್ಯವನ್ನು ಹೇಳಿರುವ ಪ್ರಕರಣಗಳೂ ಇವೆ. (ಐ. ಬ್ರಾ. ೩-೩೮). ಯಮನೇ ಅಗ್ನಿಯು; ಯಮಿಯೇ ಪೃಥ್ವಿಯು ಎಂದು ಶತಪಥಬ್ರಾಹ್ಮಣವು ತಿಳಿಸುತ್ತದೆ. (ಶ. ಬ್ರಾ. ೭-೨-೧-೧೦). **ವೃಹೇವ ರಥ್ಯೇವ ಚಕ್ರಾ"** ಎಂಬ ಯಮಿಯ ವಾಕ್ಯವು ಯಮಯಮಿಯರನ್ನು ರಥಚಕ್ರಗಳಿಗೆ ಹೋಲಿಸುತ್ತವೆ.

**ನ್ಯ೧ ಘ್ನ್ಯಸ್ಯ ಮೂರ್ಧನಿ ಚಕ್ರಂ ರಥಸ್ಯ ಯೇಮಥುಃ ।**
**ಪರಿ ದ್ಯಾಮನ್ಯದೀಯತೇ ।**

(ಋ. ಸಂ. ೧-೩೦-೧೯)

ಇತ್ಯಾದಿ ಸ್ಥಳಗಳಲ್ಲಿ ಯಾವ ಎರಡು ಚಕ್ರಗಳು ನಿರ್ದಿಷ್ಟವಾಗಿವೆಯೋ, ಅವು ವಿಶ್ವಧಾರಕವಾದ ಚಕ್ರಗಳು. ನಿರುಕ್ತಕಾರರು **ಅಶ್ವಿನೀ** ದೇವತೆಗಳ ಸ್ವರೂಪವನ್ನು ವಿವರಿಸುವಾಗ ಅಶ್ವಿನೀದ್ವಯವು ಅಹೋರಾತ್ರಗಳೆಂದು ಕೆಲವರೂ ದ್ಯಾವಾಪೃಥಿವಿಗಳೆಂದು ಕೆಲವರೂ ಹೀಗೆಯೇ ಇನ್ನೂ ಕೆಲವು ಪ್ರಸಿದ್ಧವಾದ ದೇವತಾದ್ವಯವನ್ನು ಸೂಚಿಸುವ ಪದವೆಂದು ಮತ್ತೆ ಕೆಲವರೂ ಹೇಳಿರುವ ಅಭಿಪ್ರಾಯ ಪ್ರಭೇದಗಳನ್ನು ತಿಳಿಸಿದ್ದಾರೆ. **ಅಶ್ವಿನೀ** ಪದವು ಹಾಗೆಯೆ **ಯಮ** ಮತ್ತು **ಯಮಿ**ಗಳ ಸಂಯೋಗವನ್ನೂ ಸೂಚಿಸಬಹುದೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಋ. ಸಂ. ೧೦-೨೪-೪ ಮತ್ತು ಐದನೆಯ ಮಂತ್ರಗಳಲ್ಲಿ ಯಾವ **ಸಮೀಚೀ** ಇತ್ಯಾದಿ ಪದಗಳಿಂದ ಅಶ್ವಿನಿಗಳ ಪ್ರಶಂಸೆಯಿರುತ್ತದೆಯೋ ಅದೇ ವಿಶೇಷಣದಿಂದ ದ್ಯಾವಾಪೃಥಿಗಳ ಅಥವಾ ಯಮಯಮಿಗಳ ಪ್ರಶಂಸೆಯಿರಬಹುದು. ಋ. ಸಂ. ೨-೩೯ ನೇ ಸೂಕ್ತದಲ್ಲಿ ಅಶ್ವಿನಿಗಳನ್ನು ವರ್ಣಿಸಲು ತೋರಿಸಿರುವ ಉಪಮಾನಗಳನ್ನು ಪರಿಶೀಲಿಸಿದರೆ ಅಶ್ವಿನಿಗಳು ಸ್ತ್ರೀಪುಮಾನ್‌ಗಳ ದ್ವಂದ್ವವೆಂಬುದೂ ಸಹ ಸೂಚಿತವಾಗುತ್ತವೆ. **ದಂಪತೀವ, ಚಕ್ರವಾಕೇವ** ಇತ್ಯಾದಿ ಉಪಮಾನಗಳು ಈ ಅಂಶವನ್ನು ತಿಳಿಸುತ್ತವೆ. (ಅಲ್ಲದೇ ಗ್ರಾವಾಣೇವ ಇತ್ಯಾದ್ಯುಪಮಾನಗಳೂ ಸಹ ಇವೆ). ಇವುಗಳ ಜೊತೆಯಲ್ಲಿ **ಓಷ್ಠಾವಿವ** ಎಂಬ ಉಪಮಾನವೂ ಇರುತ್ತದೆ. **ಓಷ್ಠಾ** ಎಂಬ ಪದವು ದ್ಯಾವಾಪೃಥಿವಿಗಳ ದ್ವಂದ್ವವನ್ನು ಅನೇಕ ಕಡೆಗಳಲ್ಲಿ ಸೂಚಿಸಿವೆ.

ಋ. ಸಂ. ೧-೧೮೦-೪ ರಲ್ಲಿ ಇಂದ್ರಾಗ್ನಿಗಳನ್ನು **ಅಶ್ವಿನಾ** ಎಂದು ಸಂಬೋಧಿಸಿದೆ.

,, ಅದೇ ಇಂದ್ರಾಗ್ನಿಗಳನ್ನು **ನಾಸತ್ಯಾ** ಎಂದು ನಿರ್ದೇಶಿಸಿದೆ.

,, ದ್ಯಾವಾಪೃಥಿವಿಗಳಿಗೂ ಅಶ್ವಿನಿಗಳಿಗೂ ತಾದಾತ್ಮ್ಯವನ್ನು ತಿಳಿಸಿದೆ.

ಹೀಗೆ **ಯಮ** ಶಬ್ದದಿಂದಲೇ ಯಾವ ದ್ವಯವು ಸೂಚಿತವಾಗಬಹುದೋ ಆ ದ್ವಯವು ಇಂದ್ರಾಗ್ನೀ, ಅಶ್ವಿನಾ ಇತ್ಯಾದಿ ದ್ವನ್ದ್ವಗಳನ್ನೂ ಸೂಚಿಸಬಹುದೆಂದು ಅನೇಕ ಕಡೆ ಸಾಯಣರು ಅಭಿಪ್ರಾಯಪಟ್ಟಿದ್ದಾರೆ. ಆದುದರಿಂದ ಅಶ್ವಿನಿಗಳ ಉತ್ಪತ್ತಿಕ್ರಮಕ್ಕೂ ಯಮನ ಉತ್ಪತ್ತಿಕ್ರಮಕ್ಕೂ ಸಾದೃಶ್ಯವನ್ನು ತೋರಿಸುವ ಸನ್ನಿವೇಶಗಳಿವೆಯೇ ಎಂಬುದನ್ನು ಪರಿಶೀಲಿಸಬಹುದಾಗಿದೆ.

ವಿವಸ್ವಾನ್ ಮತ್ತು ತ್ವಷ್ಟೃದುಹಿತೃವಾದ ಸರಣ್ಯೂ ಎಂಬ ದಂಪತಿಗಳಿಂದ ಯಮನ ಉತ್ಪತ್ತಿಯೆಂದು ಹಿಂದೆ ತಿಳಿಸಿದೆ. (ಋ. ಸಂ. ೧೦-೧೦-೪; ೧೦-೧೭-೧) ಬೃಹದ್ದೇವತೆಯಲ್ಲಿ ಯಮನ ಉತ್ಪತ್ತಿಯನ್ನು ವಿವರಿಸುತ್ತಾ ಅದರ ಗೂಢಾರ್ಥವನ್ನು ಸಹ ವಿವರಿಸಿದೆ.

**ತತಃ ಸರಣ್ವ್ಯಾಂ ಜಜ್ಞಾತೇ ಯಮಯಮ್ಯೌ ವಿವಸ್ವತಃ ।**
**ತೌ ಚಾಪ್ಯುಭೌ ಯಮಾವೇವ ಜಾಯಾಂಸ್ತಾಭ್ಯಾಂ ತು ವೈ ಯಮಃ ॥**

(ಬೃ. ದೇ. ೬-೧೬೩)

ಅನಂತರ ವಿವಸ್ವಂತನ ಪತ್ನಿಯಾದ ಸರಣ್ಯುವಿನಲ್ಲಿ **ಯಮ** ಮತ್ತು **ಯಮೀ** ಎಂಬ ಇಬ್ಬರು ಜನಿಸಿದರು. ಇಬ್ಬರೂ ಅವಳಿ ಮಕ್ಕಳು. ಆದರೆ ಇವರಿಬ್ಬರಲ್ಲಿ ಯಮನೇ ದೊಡ್ಡವನು ಎಂದಿದೆ. ಈ ಪ್ರಕರಣವು ಮೇಲೆ ಸೂಚಿಸಿದಂತೆ ಯಮಯಮಿಗಳಿಗೂ ಅಶ್ವಿನೀದ್ವಯಕ್ಕೂ ಇರುವ ತಾದಾತ್ಮ್ಯಬೋಧಕವಾದ ಅಂಶವನ್ನು ತಿಳಿಸುತ್ತದೆ. ಅಶ್ವಿನೀ ದೇವತೆಗಳು ಯಾವ ತತ್ತ್ವವನ್ನು ಪ್ರತಿಬಿಂಬಿಸುವರೆಂಬುದರಲ್ಲಿ ನಿರುಕ್ತಕಾರರೇ ನಿಷ್ಕೃಷ್ಟವಾದ ಅಭಿಪ್ರಾಯವನ್ನು ತಿಳಿಸಲಾಗಲಿಲ್ಲ. ಅವರೇ **ಯಮ** ಮತ್ತು **ಯಮೀ** ಎಂದೂ ನಾಮಾಂಕಿತರಾಗಿರಬಹುದು ಎಂಬುದಕ್ಕೂ ಸಹ ಋಕ್ಸಂಹಿತೆಯಲ್ಲಿಯೇ ಅವಕಾಶವಿರುತ್ತದೆ. ಉದಾಹರಣೆಗೆ—

**ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ ।**
**ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ॥**

(ಋ. ಸಂ. ೧೦-೧೭-೨)

ವಿವಸ್ವಂತನಿಗೆ ಪರಿಣಯಾರ್ಥವಾಗಿ ಅರ್ಪಿಸಿದ ಸರಣ್ಯುವು ಅದೃಶ್ಯಳಾಗಲು ಆಗ ಅದೇ ರೂಪವನ್ನು ಹೊಂದಿದ ಇನ್ನೊಂದು ಸ್ತ್ರೀಯನ್ನು ದೇವತೆಗಳು ವಿವಸ್ವಂತನಿಗೆ ಅರ್ಪಿಸಿದರು. ಅವಳು ಅಶ್ವರೂಪಿಣಿಯಾಗಿಯೂ ಇದ್ದುದರಿಂದ **ಅಶ್ವಿನೀ** ದೇವತೆಗಳನ್ನು ಹಡೆದಳು, ಎಂದಿದೆ. ಸಾಯಣರು ಈ ಪ್ರಕರಣವನ್ನು ವಿವರಿಸುವಾಗ **ಸಾಶ್ವರೂಪಿಣೀ ಸರಣ್ಯೂಸ್ತದಾ ಅಶ್ವಿನಾವಭರತ್ ।** ಆ ಅಶ್ವರೂಪಿಣಿಯಾದ ಸರಣ್ಯುವೇ ಅಶ್ವಿನಿಗಳನ್ನು ಹಡೆದಳು ಎಂದು ತಿಳಿಸಿದ್ದಾರೆ. **ಯಮಾಚಿದತ್ರ ಯಮಸೂರಸೂತ** (ಋ. ಸಂ. ೩-೩೯-೩) ಎಂಬಲ್ಲಿಯೂ ಸಹ ಯಾವ **ಯಮರ** ಉತ್ಪತ್ತಿವರ್ಣನವಿದೆಯೋ ಅದನ್ನೂ ಸಹ ಈ ರೀತಿಯಲ್ಲಿಯೇ ವಿವರಿಸಬಹುದು.

ಹಿಂದೆ ಉದಾಹೃತವಾದ ಶತಪಥ ಬ್ರಾಹ್ಮಣದ ವಾಕ್ಯದಲ್ಲಿ (೭-೨-೧-೧೦) ಯಾವ ಯಮ ಮತ್ತು ಯಮಿ ಗಳನ್ನು ಅಗ್ನಿ ಮತ್ತು ಪೃಥ್ವೀ ಎಂದು ನಿರ್ದೇಶಿಸಿದೆಯೋ ಅವರು ಒಂದೇ ತತ್ತ್ವದ ಎರಡು ಅಂಶಗಳೆಂಬುದು ಅನೇಕ ಆಧಾರಗಳಿಂದ ತಿಳಿಯುತ್ತದೆ. ಇವು ಅಂಗದ್ವಯವನ್ನೂ ಅವುಗಳ ಸಾಹಚರ್ಯವನ್ನೂ ತೋರಿಸುವ ಸಂದರ್ಭದಲ್ಲಿ ವಿಶ್ವಸೃಷ್ಟಿಯ ಮೂಲವನ್ನೂ ಸೂಚಿಸುವುವಾಗಿವೆ.

**ಸ ವೈ ನೈವ ರೇಮೇ ತಸ್ಮಾದೇಕಾಕೀ ನ ರಮತೇ ಸ ದ್ವಿತೀಯಮೈಚ್ಛತ್ । ಸ ಹೈತಾವಾನಾಸ ಯಥಾ ಸ್ತ್ರೀಪುಮಾಂಸೌ ಸಂಪರಿಷ್ವಕ್ತೌ ಸ ಇಮಮೇವಾತ್ಮಾನಂ ದ್ವೇಧಾಪಾತಯತ್ತತಃ ಪತಿಶ್ಚ ಪತ್ನೀ ಚಾಭವತಾಂ ತಸ್ಮಾದಿದಮರ್ಧಬೃಗಲಮಿವ ಸ್ವ ಇತಿ ಹ ಸ್ಮಾಹ ಯಾಜ್ಞ-ವಲ್ಕ್ಯಸ್ತಸ್ಮಾದಯಮಾಕಾಶಃ ಸ್ತ್ರಿಯಾ ಪೂರ್ಯತ ಏವ ತಾಂ ಸಮಭವತ್ತತೋ ಮನುಷ್ಯಾ ಅಜಾಯಂತ ।**

(ಬೃ. ಉ. ೧-೪-೩)

ಆದಿಯಲ್ಲಿ ವಿಶ್ವಾತ್ಮರೂಪವಾದ ಏಕತತ್ತ್ವಮಾತ್ರವಿದ್ದಿತು. ಅದು ನಾನಾ ರೂಪವನ್ನು ಪಡೆದ ಹೊರತು ಹರ್ಷದ ಅನುಭವವು ಉಂಟಾಗಲಾರದೆಂದು ಯೋಚಿಸಿ ತನ್ನ ಸಾಹಚರ್ಯಕ್ಕಾಗಿ ಇನ್ನೊಂದು ವ್ಯಕ್ತಿಯನ್ನು ಸೃಷ್ಟಿಸಲು ಇಚ್ಛಿಸಿತು. ಈ ತತ್ತ್ವವು ಸ್ತ್ರೀಪುಂಗಳೆರಡರ ಐಕ್ಯವನ್ನು ಪಡೆಯುವ ಮಹತ್ತ್ವವನ್ನು ಹೊಂದಿದ್ದಿತು. ಅದುದರಿಂದ ಸ್ತ್ರೀರೂಪಿಯಾಗಿಯೂ, ಪುಂರೂಪಿಯಾಗಿಯೂ ವಿಭಕ್ತವಾಗುವಂತೆ ಮಾಡಿಕೊಂಡಿತು. ಆಗ ಪತ್ನೀ ಪತಿ ಎಂಬ ಎರಡು ವಿಭಾಗಗಳಾಗಿ ಅವೆರಡೂ ದಾಂಪತ್ಯಸಂಬಂಧವನ್ನು ಹೊಂದಿದವು. ಆದುದರಿಂದ, ಯಾಜ್ಞವಲ್ಕ್ಯ ಮಹರ್ಷಿಯು ಹೇಳಿದಂತೆ ಆಕಾಶರೂಪವಾದ ಜಗತ್ತು ಒಂದೇ ತತ್ತ್ವದಿಂದ ವ್ಯಾಪ್ತವಾಗಿದ್ದರೂ ಸ್ತ್ರೀಯೊಡನೆ ಸಂಬಂಧವನ್ನು ಹೊಂದಿದುದರ ಪರಿಣಾಮವಾಗಿ ಮಾನವರ ಉತ್ಪನ್ನವಾಯಿತು ಎಂದು ತಿಳಿಸಿದೆ.

ಆದುದರಿಂದ ವಿವಸ್ವತ್ ಮತ್ತು ಸರಣ್ಯೂ ಎಂಬ ಎರಡು ಹೆಸರುಗಳೂ ಈ ವಿಶ್ವೈಕ್ಯವನ್ನು ಹೊಂದಿರುವ ಆದಿತತ್ತ್ವದ ಎರಡು ಅಂಶಗಳೆಂದರೆ ತಪ್ಪಾಗಲಾರದು. ಮಾನವನ ಉತ್ಪತ್ತಿಗೆ ಮೂಲವನ್ನು ತಿಳಿಸುವಾಗ ಇದೇ ವಿಷಯವನ್ನು ವಿವರಿಸುತ್ತ ಶತಪಥಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

**ಯಮು ಹ ತದ್ವಿಚಕ್ರುಃ ಸ ವಿವಸ್ವಾನಾದಿತ್ಯಸ್ತಸ್ಯೇಮಾಃ ಪ್ರಜಾಃ ।**

(ಶ. ಬ್ರಾ. ೩. ೧.೩-೪)

ವಿಶ್ವಸೃಷ್ಟಿಯ ಪೂರ್ವಭಾವಿಯಾಗಿ ನಿರ್ಮಿತವಾದ ಈ ಅಂಶವೇ **ವಿವಸ್ವಾನ್** ಎಂಬ ಸಂಜ್ಞೆಯಿಂದ ಪ್ರತೀತವಾದ ಆದಿತ್ಯತತ್ತ್ವವು. ಈ ವಿವಸ್ವತ್‌ಸಂಜ್ಞಕನಾದ ಆದಿತ್ಯನಿಂದಲೇ ಸಕಲ ಪ್ರಜೆಗಳ ಉತ್ಪತ್ತಿಯು. ಇದನ್ನೇ ಋಕ್ಸಂಹಿತೆಯಲ್ಲಿಯೂ ಸಹ ವಿವರಿಸುತ್ತ

**ಅಮೀ ಯೇ ಸಪ್ತ ರಶ್ಮಯಸ್ತತ್ರಾ ಮೇ ನಾಭಿರಾತತಾ ।**

(ಋ. ಸಂ. ೧-೧೦೫-೯)

ಎಂದು ತಿಳಿಸಿದೆ. ತೈತ್ತಿರೀಯಸಂಹಿತೆಯಲ್ಲಿಯೂ ಸಹ **ತತೋ ವಿವಸ್ವಾನಾದಿತ್ಯೋಽಜಾಯತ** (ತೈ. ಸಂ. ೬-೧-೬-೨) ಎಂದು ಪಠಿಸಿದೆ. (ಈ ವಿವರವನ್ನು ಮುಂದೆ ವಿಶ್ವಸೃಷ್ಟಿಯ ಕ್ರಮವನ್ನು ವಿವರಿಸುವ ಸೂಕ್ತಗಳನ್ನು ವಿಮರ್ಶಿಸುವಾಗ ತಿಳಿಸಲಾಗುತ್ತದೆ).

ಮೇಲೆ, **ಯಮನ** ಸ್ಥಾನನಿರ್ದೇಶವನ್ನು ಸೂಚಿಸುವಾಗ ಆದಿತ್ಯನಿಗೂ ಯಮನಿಗೂ ತಾದಾತ್ಮ್ಯವನ್ನೇ ಹೇಳುವ ಸನ್ನಿವೇಶಗಳನ್ನು ವಿವರಿಸಲಾಗಿದೆ. ಪ್ರಕೃತದಲ್ಲಿ ವಿವಸ್ವಾನ್, ಆದಿತ್ಯ, ಯಮ ಈ ನಾಮಗಳೆಲ್ಲವೂ ಒಂದಲ್ಲ ಒಂದು ವಿಧದಲ್ಲಿ ಒಂದೇ ತತ್ತ್ವದ ಬೇರೆ ಬೇರೆ ನಾಮಗಳು ಅಥವಾ ಕಾರ್ಯಕಾರಣಸಂಬಂಧವನ್ನು ಹೊಂದಿದವು ಎಂದು

ಸಂಹಿತಾವಾಕ್ಯಗಳ ಆಧಾರದ ಮೇಲೆ ನಿಷ್ಕೃಷ್ಟವಾಗಿ ಹೇಳಬಹುದು. ಈ ಒಂದೇ ತತ್ತ್ವವನ್ನು ಋಕ್ಸಂಹಿತೆಯ ವಾಕ್ಯಗಳಲ್ಲಿ ಈ ರೀತಿ ತಿಳಿಸಿದೆ.

**ಯಮೇನ ದತ್ತಂ ತ್ರಿತ ಏನಮಾಯುನಗಿಂದ್ರ ಏಣಂ ಪ್ರಥಮೋ ಅಧ್ಯತಿಷ್ಠತ್ ।**
**ಗಂಧರ್ವೋ ಅಸ್ಯ ರಶನಾಮಗೃಭ್ಣಾತ್ಸೂರಾದಶ್ವಂ ವಸವೋ ನಿರತಷ್ಟ ॥**
**ಅಸಿ ಯಮೋ ಅಸ್ಯಾದಿತ್ಯೋ ಅರ್ವನ್ನಸಿ ತ್ರಿತೋ ಗುಹ್ಯೇನ ವ್ರತೇನ ।**
**ಅಸಿ ಸೋಮೇನ ಸಮಯಾ ವಿಪೃಕ್ತ ಆಹುಸ್ತೇ ತ್ರೀಣಿ ದಿವಿ ಬಂಧನಾನಿ ॥**

(ಋ. ಸಂ. ೧-೧೬೩-೨,೩)

ಯಮನಿಂದ ದತ್ತವಾದ ಈ ಅಶ್ವವನ್ನು ಪೃಥಿವ್ಯಾದಿ ಮೂರು ಸ್ಥಾನಗಳಲ್ಲಿ ಸಂಚರಿಸತಕ್ಕ ವಾಯುವು ರಥಕ್ಕೆ ಸೇರಿಸಿದನು. ಈ ಅಶ್ವವನ್ನು ಶ್ರೇಷ್ಠವಾದ ಇಂದ್ರನು ಹತ್ತಿ ಕುಳಿತನು. ಸೋಮರಾಜನು ಈ ಅಶ್ವದ ಲಗಾಮನ್ನು ಹಿಡಿದನು. ಸೂರ್ಯರಶ್ಮಿಗಳು ಅಥವಾ ಯಮಾದಿಗಳು ಈ ಅಶ್ವವನ್ನು ಆದಿತ್ಯನಿಂದ ಸಂಪಾದಿಸಿದರು. ಈ ಅಗ್ನಿಯೇ ಯಮರೂಪನು, ಆದಿತ್ಯರೂಪನು, ಅವನೇ ವ್ಯಾಯ್ವಾತ್ಮಕನು ಇತ್ಯಾದಿ ವರ್ಣನಗಳಲ್ಲಿ ಅಗ್ನಿಗೂ, ಯಮನಿಗೂ ತಾದಾತ್ಮ್ಯವನ್ನು ತಿಳಿಸಿದೆ.

**ಯಮೋ ಯಚ್ಛತೀತಿ ಸತಃ । ಅಗ್ನಿರಪಿ ಯಮ ಉಚ್ಯತೇ ।** ನಿಯಮಿಸುವ ಸಾಮರ್ಥ್ಯವಿರುವುದರಿಂದ ಅಗ್ನಿಗೂ (ನಿ. ೧೦. ೧೯) ಯಮನೆಂದು ಪರ್ಯಾಯನಾಮವೆಂದು ನಿರುಕ್ತಕಾರರು ಅಭಿಪ್ರಾಯಪಟ್ಟಿದ್ದಾರೆ. **ಯಮೋ ಹ ಜಾತೋ ಯಮೋ ಜನಿತ್ವಂ** (ಋ. ಸಂ. ೧. ೬೬. ೮) ಎಂಬ ಋಕ್ಕನ್ನುದಾಹರಿಸಿ **ಯಮ** ಶಬ್ದವು ಅಗ್ನಿಪರ್ಯಾಯವೆಂದೂ ತೋರಿಸಿದ್ದಾರೆ. ಸಾಯಣರು ೧-೬೬-೮ ನೇ ಮಂತ್ರಕ್ಕೆ ತಾತ್ಪರ್ಯವನ್ನು ವಿವರಿಸುವಾಗ **ಯಮ** ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ತಿಳಿಸಿದ್ದಾರೆ. **ಯಚ್ಛತಿ ದದಾತಿ ಸ್ತೋತೃಭ್ಯಃ ಕಾಮಾನಿತಿ ಯಮೋಽಗ್ನಿರುಚ್ಯತೇ ॥** ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡಿಸಿ ಕೊಡುವುದರಿಂದ ಅಗ್ನಿಗೆ ಯಮನೆಂದು ಹೆಸರು ಎಂದು ಒಂದು ವಿಧವಾಗಿಯೂ, **ಇಂದ್ರಾಗ್ನ್ಯೋರ್ಯುಗಪದುತ್ಪನ್ನತ್ವಾದಗ್ನೇರ್ಯಮತ್ವಂ** ಇಂದ್ರನೂ ಅಗ್ನಿಯೂ ಒಟ್ಟಿಗೆ ಉತ್ಪನ್ನರಾದುದರಿಂದ ಅಗ್ನಿಗೆ **ಯಮನೆಂದು** ಹೆಸರೆಂದು ಇನ್ನೊಂದು ವಿಧವಾಗಿಯೂ ಅರ್ಥ ಮಾಡಿದ್ದಾರೆ **ಯಮೋ ಹ ಜಾತ ಇಂದ್ರೇಣ ಸಹ ಸಂಗತಃ** ಎಂಬ ನಿರುಕ್ತಕಾರರ ವಾಕ್ಯವು ಈ ಎರಡನೆಯ ಅರ್ಥವನ್ನು ಸಮರ್ಥಿಸುತ್ತವೆ.

**ಬಳಿತ್ಥಾ ಮಹಿಮಾ ವಾಮಿಂದ್ರಾಗ್ನೀ ಪನಿಷ್ಠ ಆ ।**
**ಸಮಾನೋ ವಾಂ ಜನಿತಾ ಭ್ರಾತರಾ ಯುವಂ ಯಮಾವಿಹೇಹ ಮಾತರಾ ।**

(ಋ. ಸಂ. ೬-೫೯-೨)

ಎಂಬಲ್ಲಿ **ಯುವಂ ಯಮೌ** ನೀವಿಬ್ಬರೂ ಒಟ್ಟಿಗೆ ಹುಟ್ಟಿದವರು ಎಂದು ಇಂದ್ರಾಗ್ನಿಗಳ ಸಹಕಾಲೀನವಾದ ಉತ್ಪತ್ತಿಯನ್ನು ಹೇಳುವುದರಿಂದಲೂ ಸಹ ಎರಡನೆಯ ಅರ್ಥವನ್ನು ಹೇಳಬಹುದು.

ಮೇಲೆ ಉದಾಹೃತವಾಗಿರುವ ಬೃಹದಾರಣ್ಯಕೋಪನಿಷದ್ವಾಕ್ಯದಿಂದ ಯಾವ ಆದಿತತ್ತ್ವದ ಸ್ತ್ರೀಪುಂರೂಪವಾದ ಎರಡು ಅಂಶಗಳ ಸ್ವರೂಪವನ್ನು ವರ್ಣಿಸಿದೆಯೋ ಅದೇ ಅಂಶಗಳನ್ನು **ಯಮ** ಮತ್ತು **ಯಮೀ** ಎಂಬ ತತ್ತ್ವಗಳೂ ತಿಳಿಸುತ್ತವೆ.

ಹೀಗೆ ಪುಂಸ್ತ್ರೀರೂಪಗಳೆರಡನ್ನೂ **ಯಮ**ಶಬ್ದವು ಸೂಚಿಸುವುದಾದರೂ ಸಹ ಪ್ರಕೃತದಲ್ಲಿ ಪುಂರೂಪಿಯಾದ ಯಮನ ಸ್ವರೂಪ ಮತ್ತು ಪ್ರಭಾವಗಳೇನು ಎಂಬುದನ್ನು ಪರಿಶೀಲಿಸಬೇಕಾಗಿರುತ್ತದೆ.

**ಯಮೋ ನೋ ಗಾತುಂ ಪ್ರಥಮೋ ವಿವೇದ** (ಋ. ಸಂ. ೧೦-೧೪-೨) ಇತ್ಯಾದಿ ವಾಕ್ಯಗಳಿಂದ ಯಮನೇ ಪಿತೃಮಾರ್ಗವನ್ನು ಪ್ರಥಮತಃ ಅರಿತವನು ಮತ್ತು ಮೃತರಾದ ಪಿತೃಗಳಿಗೆ ರಾಜನು ಎಂದು ಹೇಳಿರುತ್ತದೆ. ಯಾರಿಂದಲೂ ಉರುಳಿಸಲಾಗದ ಉತ್ತಮಸ್ಥಾನದಲ್ಲಿ ಯಮನು ಪಿತೃಗಳನ್ನು ಸ್ಥಾಪಿಸುತ್ತಾನೆ. ಆದುದರಿಂದ,

**ಪಿತೃಭಿಶ್ಚಾಂಗಿರೋಭಿಶ್ಚ ಸಂಸ್ತುತೋ ದೃಶ್ಯತೇ ಯಮಃ ।**
**ಮಂತ್ರೇಷು ಬಹುಶಃ ಪಾದೇ ವಿವಸ್ವಂತಂ ಪಿತಾ ಹಿ ಸಃ ॥**

(ಬೃ. ದೇ. ೬-೧೫೭)

ಯಮನು ಪಿತೃಗಳೊಡನೆಯೂ ಅಂಗಿರಸ್ಸುಗಳೊಡನೆಯೂ ಅನೇಕವಿಧವಾಗಿ ಸ್ತುತನಾಗಿದ್ದಾನೆ. **ವಿವಸ್ವಂತಂ** ಎಂಬ ಮಂತ್ರದಲ್ಲಿ ಅವನೇ ಪಿತೃವೆಂದು ಪರಿಗಣಿತನಾಗಿದ್ದಾನೆ ಎಂದಿದೆ. ಮತ್ತು

**ಸಂಸ್ಕಾರ್ಯಪ್ರೇತಸಂಯುಕ್ತೈಃ ಪಿತೃಭಿಃಸ್ತೂಯತೇ ಯಮಃ ।**
**ಪ್ರೇಹಿ ಪ್ರೇಹೀತಿ ತಿಸೃಷು ಪ್ರೇತಾಶಿಷ ಉದಾಹೃತಾಃ ॥**
**ಪಿತೄಣಾಂ ಹಿ ಪತಿರ್ದೇವೋ ಯಮಸ್ತಸ್ಮಾತ್ಸ ಸೂಕ್ತಭಾಕ್ ।**

(ಬೃ. ದೇ. ೬-೧೫೮-೯)

ಪಿತೃಗಳೊಂದಿಗೆ ಸೇರಿದ ಯಮನು, ಪಿತೃಸಂಸ್ಕಾರಕ್ಕೆ ಅರ್ಹತೆಯನ್ನು ಹೊಂದಿದ ಮೃತನ ಜೊತೆಯಲ್ಲಿ ಪ್ರಶಂಸಿತನಾಗುತ್ತಾನೆ. ಈ ಪ್ರಶಂಸೆಯು ಪ್ರೇಹಿ ಪ್ರೇಹಿ ಎಂಬ ಮೂರು ಮಂತ್ರಗಳಲ್ಲಿರುತ್ತದೆ. (೧೦-೧೪-೭,೮,೯) ಇದೇ ಯಮನು ಪಿತೃಗಳಿಗೆಲ್ಲ ಪ್ರಭುವು. ಆದುದರಿಂದ ಯಮನು **ಸೂಕ್ತಭಾಕ್** ಎನ್ನಿಸಿಕೊಳ್ಳುವನು ಎಂದಿರುತ್ತದೆ. ಇಲ್ಲಿ **ಸೂಕ್ತಭಾಕ್** ಎಂಬ ವಿಶೇಷಣವು ಯಮನ ಯಾವ ಸ್ವರೂಪವನ್ನು ತಿಳಿಸುತ್ತದೆಯೆಂದು ಸೂಕ್ಷ್ಮವಾಗಿ ಪರಿಶೀಲಿಸಬಹುದು.

ದೇವತೆಗಳನ್ನು ಪೃಥ್ವೀಸ್ಥರು, ಅಂತರಿಕ್ಷಸ್ಥರು ಮತ್ತು ದ್ಯುಲೋಕಸ್ಥರು ಎಂದು ನಿರುಕ್ತಕಾರರು ಮೂರು ವಿಭಾಗಮಾಡಿರುತ್ತಾರೆ. ಆದರೆ ಆ ವಿಭಾಗದಲ್ಲಿ ಕೆಲವು ನ್ಯೂನತೆಗಳಿರುತ್ತವೆ. ಆ ವಿಷಯದ ಮೇಲೆ ಚರ್ಚೆಯು ಈ ಸಂದರ್ಭದಲ್ಲಿ ಅಪ್ರಕೃತ. ಈ ವಿಭಾಗದಂತೆಯೇ ದೇವತೆಗಳನ್ನು **ಹವಿರ್ಭಾಜಃ ಸೂಕ್ತಭಾಜಃ** ಎಂದು ಎರಡು ವಿಭಾಗಗಳನ್ನಾಗಿ ಮಾಡಬಹುದು. ಎಂದರೆ ಹವಿಸ್ಸುಗಳನ್ನು (ಅಥವಾ ಸೋಮವನ್ನು) ಸೇವಿಸತಕ್ಕವರೆಂದೂ ಮತ್ತು ಸೂಕ್ತಗಳನ್ನು ಸೇವಿಸತಕ್ಕವರೆಂದೂ ಅರ್ಥ.

**ಮಾತಲೀ ಕವ್ಯೈರ್ಯಮೋ ಅಂಗಿರೋಭಿರ್ಬೃಹಸ್ಪತಿರ್ಋಕ್ವಭಿರ್ವಾವೃಧಾನಃ ।**
**ಯಾಂಶ್ಚ ದೇವಾ ವಾವೃಧುರ್ಯೇ ಚ ದೇವಾನ್ತ್ಸ್ವಾಹಾನ್ಯೇ ಸ್ವಧಯಾನ್ಯೇ ಮದಂತಿ ॥**

(ಋ. ಸಂ-೧೦-೧೪-೩)

ಇತ್ಯಾದಿ ಮಂತ್ರಗಳಲ್ಲಿ— **ಕವ್ಯ, ಋಕ್, ಸ್ವಾಹಾ, ಸ್ವಧಾ** ಇತ್ಯಾದಿಗಳಿಂದ ತೃಪ್ತಿಯನ್ನು ಹೊಂದತಕ್ಕ ದೇವಗಣಗಳೂ ಪಿತೃಗಳೂ ನಿರ್ದಿಷ್ಟರಾಗಿದ್ದಾರೆ. ಈ ವಿಭಾಗಗಳಿಗೆ ಸೇರಿದ ದೇವತಾಸಂಖ್ಯೆಯನ್ನೂ ಮತ್ತು ಪಿತೃಗಳ ಸಂಖ್ಯೆಯನ್ನೂ ಬೇರೆ ಕಡೆ ವಿಮರ್ಶಿಸಲಾಗುತ್ತದೆ. ಪ್ರಕೃತದಲ್ಲಿ **ಯಮನ** ಸ್ಥಾನವೇನು ಎಂಬುದನ್ನು ಮಾತ್ರ ತಿಳಿಯಬೇಕಾಗಿರುತ್ತದೆ. ಯಮನು ಪಿತೃಗಳ ಗುಂಪಿಗೆ ಸೇರಿದವನು, ಪಿತೃಗಳಿಗೆ ಪ್ರಭುವು ಎಂದು ವರ್ಣಿತನಾಗಿ ದ್ದಾನೆ. ಈ ಪಿತೃಗಳನ್ನೂ ಸಹ ಮೂರು ವಿಭಾಗಮಾಡಿರುತ್ತದೆ.

**ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ ।**

(ಋ. ಸಂ ೧೦.೧೫.೧)

ಅವರಲೋಕದವರು, ಪರಲೋಕದವರು ಮತ್ತು ಮಧ್ಯಮಲೋಕದವರು ಎಂದು ಪಿತೃಗಳಲ್ಲಿ ಮೂರು ವಿಭಾಗಗಳಿರುತ್ತವೆ. ಯಮನು ಅಂತರಿಕ್ಷಸ್ಥನೆಂದು ಪರಿಗಣಿತನಾಗಿರುತ್ತಾನೆ. ಮಧ್ಯಮಲೋಕದ ಪಿತೃಗಳಂತೆಯೇ ಅವನು **ಸ್ವಧೆ** ಯನ್ನು ಸ್ವೀಕರಿಸತಕ್ಕವನು. ಆದರೆ ನಿರುಕ್ತದ ವರ್ಗೀಕರಣದ ಪ್ರಕಾರ **ಯಮನು** ದ್ಯುಲೋಕಸ್ಥರಾದ ದೇವತೆಗಳ ಗುಂಪಿಗೆ ಸೇರಿದವನೂ ಮತ್ತು ಅಂತರಿಕ್ಷಲೋಕಕ್ಕೆ ಸೇರಿದವನೂ ಆಗಿರುತ್ತಾನೆ. (ನಿರುಕ್ತದ ಪ್ರಕಾರ ಸೂಕ್ತಭಾಜಃ ಹವಿರ್ಭಾಜಃ ಮತ್ತು ನಿಪಾತಭಾಜಃ ಎಂಬ ವಿಭಾಗಗಳನ್ನು ಈ ಪೀಠಿಕೆಯ ಕೊನೆಯಲ್ಲಿ ಕೊಟ್ಟಿರುತ್ತೇವೆ.) ಆದರೆ ಒಬ್ಬನೇ ಯಮನು ಈ ಎರಡು ಗುಂಪಿಗೂ ಹೇಗೆ ಸೇರಬಲ್ಲನು ಎಂಬ ಪ್ರಶ್ನೆಯು ಏಳುವುದಾದರೆ, ಯಾಸ್ಕರೂ ಮತ್ತು ದುರ್ಗಾಚಾರ್ಯರೂ ಸಹ ಈ ರೀತಿ ವಿವರಿಸುತ್ತಾರೆ.

**(ನಿರುಕ್ತ. ೧೨-೨೯ ದುರ್ಗಾಚಾರ್ಯವಿವೃತಿ.)**

ಅಂತರಿಕ್ಷಸ್ಥನಾದ ಎಂದರೆ ಮಧ್ಯಮ ಲೋಕದಲ್ಲಿ ಪ್ರಶಂಸಿತನಾಗುವ ಯಮನು ಪಿತೃಗಳಿಗೆ ಅಧಿದೇವನು ಮತ್ತು ದ್ಯುಲೋಕಸ್ಥನೆಂದು ಪ್ರಶಂಸಿತನಾಗುವ ಯಮನು ಆದಿತ್ಯರೂಪನು. ಈ ರೀತಿ ವಿವರಣೆಯೂ ಸಹ ಒಂದೇ **ಯಮನ** ಎರಡು ವಿರುದ್ಧವಾದ ಅಂಶಗಳನ್ನು ತಿಳಿಸುತ್ತದೆ ಆದುದರಿಂದ ಇದು ಸಮರ್ಪಕವಾಗಿಲ್ಲ ಎಂದು ಹೇಳುವಂತಿಲ್ಲ. ಒಂದೇ ತತ್ತ್ವದ ಎರಡು ಅಂಶಗಳು ಎರಡು ಲೋಕಗಳಲ್ಲೂ ವ್ಯಾಪಿಸಿವೆಯೆಂದು ಧಾರಾಳವಾಗಿ ಹೇಳಬಹುದು. ಅದೂ ಅಲ್ಲದೇ ಪಿತೃಗಣಕ್ಕೆ ಸೇರಿದ ಯಮನು ಪಿತೃಗಳಿಗಿಂತಲೂ ಉತ್ಕೃಷ್ಟನು ಎಂದು ಹೇಳುವುದಕ್ಕೂ ಇದು ಆಧಾರವಾಗಿರುತ್ತದೆ. ಕೇವಲ ಮಧ್ಯಮಲೋಕಕ್ಕೇ ಸೇರಿದ ಪಿತೃಗಳಿಗಿಂತಲೂ ಯಮನು ಉತ್ತಮನೆಂದರ್ಥ. **ಸಂಗಮನಂ ಜನಾನಾಂ** ಇತ್ಯಾದಿ ವಿಶೇಷಣಗಳು ಈ ಅಂಶವನ್ನು ತಿಳಿಸುತ್ತವೆ

**ಯಸ್ಮಿನ್ವೃಕ್ಷೇ ಸುಪಲಾಶೇ ದೇವೈಃ ಸಂಪಿಬತೇ ಯಮಃ**

(ಋ. ಸಂ. ೧೦-೧೩೫-೧)

ಎಂದು ಹಿಂದೆ ಉದಾಹರಿಸಿರುವ ವಾಕ್ಯದಲ್ಲಿ ಯಮನು **ಸೋಮಪನು** ಎಂಬ ವಿಷಯವೂ ಇದನ್ನು ಸಮರ್ಥಿಸುತ್ತದೆ.

**ಉಭಾ ರಾಜಾನಾ ಸ್ವಧಯಾ ಮದಂತಾ ಯಮಂ ಪಶ್ಯಾಸಿ ವರುಣಂ ಚ ದೇವಂ ।**

(ಋ. ಸಂ. ೧೦-೧೪-೭)

ಇತ್ಯಾದಿ ಸ್ಥಳಗಳಲ್ಲಿ ಯಮನೂ ಮತ್ತು ವರುಣನೂ ಸಮಾನವಾದ ಸಂತೋಷವನ್ನನುಭವಿಸುತ್ತಿರುವ ಪ್ರಭುಗಳು ಎಂದು ವರ್ಣಿಸಿರುವುದು ಯಮನ ದಿವ್ಯತ್ವವನ್ನು ತೋರಿಸುವುದಾಗಿದೆ. ಯಮನಂತೆಯೇ ವರುಣನೂ ಸಹ ದ್ಯುಲೋಕ ಮತ್ತು ಅಂತರಿಕ್ಷಲೋಕ ಈ ಎರಡಕ್ಕೂ ಸೇರಿದವನು. ಆದರೆ, ದ್ಯುಲೋಕಸ್ಥನಾದ ಯಮನು ಸೋಮಪನು, ದ್ಯುಲೋಕದ ವರುಣನು ಸ್ತುತಿಗಳಿಗೆ ಅರ್ಹನು ಎಂದಿರುವುದರಿಂದ ವರುಣನ ಸ್ಥಾನವು ಯಮನ ಸ್ಥಾನಕ್ಕಿಂತಲೂ ಉತ್ತಮವಾದುದೆಂದು ತಿಳಿಯುತ್ತದೆ. ಆದರೆ, ಈ ರೀತಿಯ ಬೇರೆಬೇರೆ ಅಂಶಗಳನ್ನು ತೋರಿಸಿರುವ ವರ್ಣನೆಗಳು ಯಮನ ಬೇರೆ ಬೇರೆ ಶಕ್ತಿಗಳನ್ನು ನಿರ್ದೇಶಿಸುವುವು ಎಂದು ಹೇಳಬಹುದು.

**ಯಮ** ಎಂಬುದು ವಿಶ್ವನಿಯಾಮಕವಾದ ಶಕ್ತಿ. ಆ ಶಕ್ತಿಯು ಸಕಲಜಗತ್ತಿನ ನೀತಿಯನ್ನೂ ನಿಯಮಿಸುವುದಾಗಿದೆ. ಈ ಶಕ್ತಿಯು ಮೂರು ಲೋಕಗಳನ್ನೂ ವ್ಯಾಪಿಸಿದೆ. ತ್ರಿಲೋಕವ್ಯಾಪಕವಾದ ಈ ಶಕ್ತಿಯನ್ನು ಆದಿತ್ಯನೆಂದಾಗಲಿ, ಅಗ್ನಿಯೆಂದಾಗಲೀ ಕರೆಯಬಹುದು. ಯಮನಿಗೂ, ವಿಶ್ವವ್ಯಾಪಕನಾದ ಆದಿತ್ಯನಿಗೂ ತಾದಾತ್ಮ್ಯವನ್ನು ತೋರಿಸಿರುವ ವಾಕ್ಯಗಳನ್ನು ಹಿಂದೆ ಉದಾಹರಿಸಿದೆ. **ಕೇಶೀದಂ ಜ್ಯೋತಿರುಚ್ಯತೇ** ಇತ್ಯಾದಿವಾಕ್ಯಗಳು ಆದಿತ್ಯರೂಪನಾದ ಯಮನ ಜ್ಯೋತೀರೂಪವನ್ನು ತಿಳಿಸುತ್ತವೆ. **ವಿವಸ್ವಾನ್** ಎಂಬ ಪದವೂ ಸಹ **ವಸ್** ಧಾತುವಿನಿಂದ ನಿಷ್ಪನ್ನವಾಗಿ, '**ಈಶಾವಾಸ್ಯಂ**' ಎಂಬ ವಾಕ್ಯವು ಯಾವ ವಿಶ್ವವ್ಯಾಪಕವನ್ನು ತಿಳಿಸುವುದೋ ಅದೇ ಶಕ್ತಿಯನ್ನು ತೋರಿಸುತ್ತದೆ. ಮೂರು ಲೋಕಗಳಲ್ಲೂ ವ್ಯಾಪಿಸಿರುವ ಅಗ್ನಿಯೂ ಸಹ ಈ ಯಮನ ರೂಪಾಂತರವಾಗಿರುತ್ತಾನೆ. ನಿರುಕ್ತಕಾರರು ಸಹ **ಅಗ್ನಿರಪಿ ಯಮ ಉಚ್ಯತೇ** (ನಿ. ೧೦,೨೦) ಎಂದಿರುವ ಅಂಶವನ್ನು ಬೃಹದ್ದೇವತಾಕಾರರೂ ಸಹ,

**ಇಹ ಪ್ರಜಾಃ ಪ್ರಯಚ್ಛನ್ ಸ ಸಂಗೃಹೀತ್ವಾ ಪ್ರಯಾತಿ ಚ ।**
**ಋಷಿರ್ವಿವಸ್ವತಃ ಪುತ್ರಂ ತೇನಾಹೈನಂ ಯಮೋ ಯಮಂ ॥**

(ಬೃ. ದೇ. ೨-೪೮)

ಇಲ್ಲಿ ಪುತ್ರಾದಿಗಳನ್ನು ಕೊಡುತ್ತಲೂ ಇಲ್ಲಿಯ ಹವಿಸ್ಸುಗಳನ್ನು ಲೋಕಾಂತರಗಳಿಗೆ ಕೊಂಡುಹೋಗಿ ಹಂಚುತ್ತಲೂ ಇರುವುದರಿಂದ ಅಗ್ನಿಯನ್ನು ಸಹ **ಯಮ**ಸಂಜ್ಞೆಯಿಂದ ನಿರ್ದೇಶಿಸುತ್ತಾರೆಂದು ತಿಳಿಸಿದೆ. **ಯಮೋ ಯಚ್ಛತೀತಿ ಸತಃ** (ನಿ. ೧೦-೧೯) ಕೊಡುವುದಾರಿಗೆ, ಎಲ್ಲೆಲ್ಲಿ ಎಂದರೆ, ಅಗ್ನಿರೂಪದಲ್ಲಿ ಪಿತೃಗಳಿಗೆ, ದೇವತೆಗಳಿಗೆ ಮತ್ತು ಅಸುರರಿಗೆ ಮೂರು ಲೋಕದಲ್ಲೂ ಹಂಚುತ್ತಾನೆ. ಅದು ಹೇಗೆಂದರೆ—

ಪಿತೃದೇವಾಸುರಾಣಾಂ ಚ **ಅಭವನ್ನಗ್ನಯಸ್ತ್ರಯಃ** ।
**ಹವ್ಯಕವ್ಯವಹೌ ಚೋಭೌ ಸಹರಕ್ಷಾಶ್ಚ ನಾಮ ಯಃ** ॥

(ಬೃ. ದೇ. ೬-೧೬೦)

ಪಿತೃಗಳು, ದೇವತೆಗಳು ಮತ್ತು ಅಸುರರು ಈ ಮೂರು ಗುಂಪುಗಳಿಗೂ ಸಂಬಂಧಿಸಿದಂತೆ ಅಗ್ನಿಗೆ ಮೂರುರೂಪಗಳಿರುವುವು, ಹವ್ಯ ಮತ್ತು ಕವ್ಯಗಳನ್ನು ವಹಿಸುವ ಅಗ್ನಿ ಮತ್ತು **ಸಹರಕ್ಷಃ** ಎಂದು ಮೂರು ವಿಭಾಗ.

ಹೀಗೆ **ಯಮಶಬ್ದಕ್ಕೆ ಯಚ್ಛತಿ, ಯಮಯತಿ** ಇತ್ಯಾದ್ಯರ್ಥಗಳಿರುವುದರಿಂದಲೂ, **ಯಮ**ಶಬ್ದದಿಂದ ನಿರ್ದಿಷ್ಟವಾಗಿರುವ ತತ್ತ್ವವು ತನ್ನ ರೂಪಾಂತರಗಳಿಂದ ಈ ಎಲ್ಲ ಕಾರ್ಯಗಳನ್ನೂ ನಿರ್ವಹಿಸುವುದರಿಂದಲೂ ಈ ಹೆಸರು

ಪ್ರಸಿದ್ಧವಾಗಿದೆಯೆಂದು ಹೇಳಬಹುದು. ವಿಶ್ವದ ಸೃಷ್ಟಿಗೂ ಸ್ಥಿತಿಗೂ ಯಾವ **ಯಜ್ಞ**ವು ಮೂಲವೆಂದೂ ನಿಯಾಮಕವೆಂದೂ ಸಂಹಿತಾದಿಗಳಲ್ಲಿ ಪ್ರಸಿದ್ಧವಾಗಿದೆಯೋ ಆ ಯಜ್ಞವನ್ನು ಮೊದಲು ವಿಸ್ತರಿಸಿದವನೇ ಯಮನು. ಯಜ್ಞಮೂಲವೂ ಯಜ್ಞನಿರ್ವಾಹಕನೂ ಆದ ಅಗ್ನಿಯನ್ನು ಮೊದಲು ಸಾಕ್ಷಾತ್ಕರಿಸಿದವನೇ (೧೦-೫೧-೧-೪) ಯಮನೆಂದು ಮೇಲೆ ತಿಳಿಸಿದೆ. ದೇವಪಿತ್ರಾದಿಗಳ ಸ್ಥಿತಿಗತಿಗಳಿಗೆ ಅಗ್ನಿರೂಪನಾದ ಯಮನೇ ಕಾರಣನೆಂದೂ ಮೇಲೆ ತಿಳಿಸಿದೆ. ಆದರಂತೆಯೇ, ಸಕಲ ವಿಶ್ವವ್ಯವಹಾರಗಳಿಗೂ ಮೂಲವೂ ಪ್ರಚೋದಕವೂ ಆದ ಯಜ್ಞದ ವಿಸ್ತೃತಿಗೂ ಯಮನೇ ಕಾರಣನು.

**ತ ಇನ್ನಿಣ್ಯಂ ಹೃದಯಸ್ಯ ಪ್ರಕೇತೈಃ ಸಹಸ್ರವಲ್ಶಮಭಿ ಸಂ ಚರಂತಿ ।**
**ಯಮೇನ ತತಂ ಪರಿಧಿಂ ವಯಂತೋಽಪ್ಸರಸ ಉಪ ಸೇದುರ್ವಸಿಷ್ಠಾಃ ॥**

(ಋ. ಸಂ. ೭-೩೩-೯)

ಇತ್ಯಾದಿ ವಾಕ್ಯಗಳಲ್ಲಿ ಈ ವಿಷಯವು ತಿಳಿಸಲ್ಪಟ್ಟಿದೆ. ಇಂತಹ ಸನ್ನಿವೇಶಗಳಲ್ಲಿ **ಯಮ**ಶಬ್ದಕ್ಕೆ ಸರ್ವನಿಯಂತೃವಾದವನೂ ವಿಶ್ವಕ್ಕೆಲ್ಲ ಕಾರಣಾತ್ಮನೂ ಆದ ಪರಮಾತ್ಮ ತತ್ತ್ವವೆಂದು ಸಾಯಣರು ವಿವರಿಸಿದ್ದಾರೆ. (**ವಿಶ್ವನಿಯಂತ್ರಾ ಕಾರಣಾತ್ಮನಾ ವಿಸ್ತೃತಂ ಪರಿಧಿಂ । ಪರಿಧಿರಿತ್ಯನೇನ ಜನ್ಮಾದಿಪ್ರವಾಹೋ ವಿವಕ್ಷಿತಃ ।**) ಅಲ್ಲದೇ,

**ತ್ರಿಕದ್ರುಕೇಭಿಃ ಪತತಿ ಷಳುರ್ವೀರೇಕಮಿದ್ಬೃಹತ್ ।**
**ತ್ರಿಷ್ಟುಬ್ಗಾಯತ್ರೀ ಛಂದಾಂಸಿ ಸರ್ವಾ ತಾ ಯಮ ಆಹಿತಾ ॥**

(ಋ. ಸಂ ೧೦-೧೪-೧೬)

ಇತ್ಯಾದಿ ವಾಕ್ಯಗಳಿಂದ ಯಮನ ಯಜ್ಞಮೂಲತತ್ತ್ವವು ಪ್ರತಿಪಾದಿತವಾಗಿದೆ. ಯಜ್ಞನಿರ್ವಹಣಕ್ಕೆ ಸಾಧಕವಾದ ಗಾಯತ್ರ್ಯಾದಿ ಸಪ್ತಚ್ಛಂದಸ್ಸುಗಳೂ ಯಮನಲ್ಲಿಯೇ ಸ್ಥಾಪಿತವಾಗಿವೆಯೆಂದು ಈ ಸನ್ನಿವೇಶಗಳಲ್ಲಿ ಪ್ರಶಂಸಿತವಾಗಿವೆ. ಇಂತಹ ಅನೇಕ ಸನ್ನಿವೇಶಗಳು ಯಮನ ಸರ್ವದೇವತಾನಿಯಾಮಕತ್ವವನ್ನೂ ಸಹ ತಿಳಿಸುತ್ತವೆ. **ದೇವೇಭ್ಯಃ ಕಮವೃಣೀತ........ ಯಮಸ್ತನ್ವಂ ಪ್ರಾರಿರೇಚೀತ್** (ಋ. ಸಂ. ೧೦-೧೩-೪) ಇತ್ಯಾದಿ ವಾಕ್ಯಗಳು ಯಮನ ವಿಶ್ವಶಕ್ತಿಯನ್ನೂ ವಿವರಿಸುತ್ತವೆ.

ಹೀಗೆ **ಯಮ** ಶಬ್ದದಿಂದ ಪ್ರತಿಪಾದಿತವಾಗತಕ್ಕ ತತ್ತ್ವವು ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಈ ಮೂರು ಅಂಶಗಳನ್ನೂ ನಿಯಮಿಸಿ ನಿರ್ವಹಿಸತಕ್ಕದ್ದು ಎಂದು ಸಂಹಿತಾವಾಕ್ಯಗಳೇ ಪ್ರತಿಪಾದಿಸುತ್ತವೆ. ಪುರಾಣಾದಿಗಳಲ್ಲಿ **ಯಮನು** ಕೇವಲ ಲಯಕಾರಕನೂ, ಮೃತರ ಕರ್ಮಕ್ಕನುಗುಣವಾದ ಫಲವನ್ನು ಕೊಡತಕ್ಕವನೂ, ಕ್ರೂರಿಗಳನ್ನು ಶಿಕ್ಷಿಸುವ ಭಯಂಕರನೂ ಆದ ದೇವತೆಯೆಂದು ಮಾತ್ರ ವರ್ಣಿತವಾಗಿದೆ. ಆದರೆ, ಋಕ್ಸಂಹಿತಾವಾಕ್ಯಗಳು **ಯಮನ** ಸರ್ವಶಕ್ತಿತ್ವವನ್ನೂ, ಸರ್ವನಿಯಾಮಕತ್ವವನ್ನೂ ಉಪನಿಷದ್ವಾಕ್ಯಗಳು ಈ ರೀತಿ ಸ್ತುತಿಸುತ್ತವೆ.

**"............ ತಮಂತರ್ಯಾಮಿಣಂ ಯ ಇಮಂ ಚ ಲೋಕಂ ಪರಂ ಚ ಲೋಕಂ ಸರ್ವಾಣಿ ಚ ಭೂತಾನಿ ಯೋಽಂತರೋ ಯಮಯತೀತಿ ಸೋಽಬ್ರವೀತ್ಪತಂಜಲಃ ಕಾಪ್ಯೋ ನಾಹಂ ತಂ ಭಗವನ್ವೇದೇತಿ ಸೋಽಬ್ರವೀತ್ಪತಂಜಲಂ ಕಾಪ್ಯಂ ಯಾಜ್ಞಿಕಾಂಶ್ಚ ಯೋ ವೈ ತತ್ಕಾಪ್ಯ**

**ಸೂತ್ರಂ ವಿದ್ಯಾತ್ತಂ ಚಾಂತರ್ಯಾಮಿಣಮಿತಿ ..................... ವೇದ ವಾ ಅಹಂ ತತ್ಸೂತ್ರಂ ತಂ ಚಾಂತರ್ಯಾಮಿಣಮಿತಿ .......... ||"**

(ಬೃ. ಉ. ೭-೭-೧)

ಪತಂಜಲ ಕಾಪ್ಯನ ಪತ್ನಿಯನ್ನು ಹಿಡಿದಿದ್ದ ಗಂಧರ್ವನು ಕಾಪ್ಯನ ಮನೆಯಲ್ಲಿ ನೆರೆದಿದ್ದ ಯಾಜ್ಞಿಕರಿಗೆ ಹಾಕಿದ ಪ್ರಶ್ನೆಯನ್ನು ಉದ್ದಾಲಕ ಆರುಣಿಯು ಯಾಜ್ಞವಲ್ಕ್ಯನಿಗೆ ತಿಳಿಸುತ್ತ ಆ ಪ್ರಶ್ನೆಗೆ ಯಾಜ್ಞವಲ್ಕ್ಯನಿಂದ ಉತ್ತರವನ್ನು ನಿರೀಕ್ಷಿಸುತ್ತಾನೆ. ಆ ಪ್ರಶ್ನೆಯೇನೆಂದರೆ, "ಎಲೈ ಯಾಜ್ಞಿಕರೇ, ಯಾವ ವಿಶ್ವನಿಯಾಮಕಶಕ್ತಿಯು ಈ ಲೋಕವನ್ನೂ, ಸಕಲ ಲೋಕಗಳನ್ನೂ, ಸಕಲ ಭೂತಗಳನ್ನೂ ನಿಯಮಿಸುವುದೋ, ಆ ನಿಯಾಮಕಶಕ್ತಿ ಯಾವುದು ? ಎಂದು ಗಂಧರ್ವನು ಕೇಳಿದುದನ್ನು ಯಾಜ್ಞವಲ್ಕ್ಯನಿಗೆ ತಿಳಿಸಿದಾಗ, ಯಾಜ್ಞವಲ್ಕ್ಯನು ಆ ಶಕ್ತಿಯ ಸ್ವರೂಪವನ್ನು ಈ ರೀತಿ ತಿಳಿಸುತ್ತಾನೆ.

ಈ ಶಕ್ತಿಯು ಅಧಿದೈವಿಕವಾದ ವಿಶ್ವವನ್ನೂ ಆಧ್ಯಾತ್ಮಿಕವಾದ ವಿಶ್ವವನ್ನು ನಿಯಮಿಸುವುದಾಗಿದೆ. ಹೇಗೆಂದರೆ—

**ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ .... .... .... ಯಃ**
**ಪೃಥಿವೀಮಂತರೋ ಯಮಯತ್ಯೇಷ ತ ಆತ್ಮಾಂತರ್ಯಾಮ್ಯಮೃತಃ ||೩||**
**.... .... .... .... ಅಪೋಽಂತರೋ ಯಮಯತಿ .... .... .... .... ||೪||**
**ಯೋಽಗ್ನೌ ತಿಷ್ಠನ್......... ಅಗ್ನಿಮಂತರೋ ಯಮಯತಿ || ೫ ||**

(ಶ. ೭. ೩-೧೪)

ಈ ವಿಶ್ವನಿಯಾಮಕ ತತ್ತ್ವವು, ಪೃಥಿವೀ, ಅಪ್ಪು, ಅಗ್ನಿ, ಅಂತರಿಕ್ಷ, ವಾಯು, ದ್ಯುಲೋಕ, ಸೂರ್ಯ, ದಿಕ್ಕುಗಳು, ಚಂದ್ರ, ಆಕಾಶ, ಅಂಧಕಾರ, ತೇಜಸ್ಸು ಇತ್ಯಾದಿ ಸಕಲ ಜಗತ್ತಿನಲ್ಲಿಯೂ ವ್ಯಾಪಿಸಿರುತ್ತದೆ. ಅವುಗಳಲ್ಲಿ ಅಂತರ್ಯಾಮಿ ಯಾಗಿದ್ದುಕೊಂಡು ಅವುಗಳ ವ್ಯವಹಾರಗಳನ್ನು ನಿಯಮಿಸುತ್ತದೆ. ಇದೇ ವಿಶ್ವಾತ್ಮಾ ಎಂದು ಈ ನಿಯಾಮಕ ಶಕ್ತಿಯ ಅಧಿದೈವಿಕ ಶಕ್ತಿಯನ್ನು ತಿಳಿಸಿ, ನಂತರ,

**ಯಃ ಸರ್ವೇಷು ಭೂತೇಷು ತಿಷ್ಠನ್ ಸರ್ವೇಭ್ಯೋ ಭೂತೇಭ್ಯೋ .... .... ಯಃ ಸರ್ವಾಣಿ ಭೂತಾನ್ಯಂತರೋ ಯಮಯತಿ .... .... .... .... .... .... .... .... ಏಷ ತ ಆತ್ಮಾಂತರ್ಯಾಮ್ಯಮೃತೋಽದೃಷ್ಟಃ .... .... ||**

(ಶ. ೭. ೧೫-೨೩)

ಹೀಗೆಯೇ ಈ ಶಕ್ತಿಯು, ಪ್ರಾಣ, ವಾಕ್, ಚಕ್ಷುಸ್, ಶ್ರೋತ್ರ, ಮನಸ್—ಇತ್ಯಾದ್ಯಾಧ್ಯಾತ್ಮಿಕ ಜಗತ್ತಿಗೆಲ್ಲಾ ಅಂತರ್ಯಾಮಿಯಾಗಿ ನಿಯಾಮಕಶಕ್ತಿಯಾಗಿರುತ್ತದೆ ಎಂದು ಯಾಜ್ಞವಲ್ಕ್ಯನು ವಿವರಿಸುತ್ತಾನೆ. "**ಇದಂ ಯಮಸ್ಯ ಸಾದನಂ**" (ಋ. ಸಂ. ೧೦-೧೩೫-೭) ಇತ್ಯಾದಿ ವಾಕ್ಯಗಳಿಂದ ಯಾವ ಆದಿತ್ಯರೂಪನಾದ ಯಮನ ಪ್ರಶಂಸೆಯಿರುವುದೋ ಅದೇ ಮಾಹಾತ್ಮ್ಯ ಪ್ರಶಂಸೆಯು ಈ ಉಪನಿಷದ್ವಾಕ್ಯಗಳಲ್ಲಿಯೂ ಇರುತ್ತದೆ.

## ಯಮನ ವಿಷಯವಾಗಿ ಋಕ್ಕುಗಳಲ್ಲಿ ಕಂಡುಬರುವ ಕೆಲವು ವಿವರಣೆಗಳು

ಮೃತರಲ್ಲಿ ಪುಣ್ಯವಂತರಿಗೆಲ್ಲಾ ಯಮನು ಮುಖಂಡನು. ವೇದಗಳಲ್ಲಿ ಪರಲೋಕದ ವಿಷಯವೇ ಹೆಚ್ಚು ಪ್ರಸಕ್ತಿಯಿಲ್ಲದಿರುವುದರಿಂದ, ಯಮನನ್ನು ಸ್ತುತಿಸುವುದು ಮೂರೇ ಸೂಕ್ತಗಳಲ್ಲಿ (೧೦-೧೪ ; ೧೩೫ ;

೧೫೪). ಮತ್ತೊಂದರಲ್ಲಿ (೧೦-೧೦), ಯಮ ಮತ್ತು ಅವನ ಸೋದರಿ ಯಮಿಗೆ ನಡೆದ ಸಂವಾದವಿದೆ. ಯಮನ ಹೆಸರು ಸುಮಾರು ಐವತ್ತು ಸಲ, ಸಾಧಾರಣವಾಗಿ ಒಂದು ಮತ್ತು ಹತ್ತನೆಯ ಮಂಡಲಗಳಲ್ಲಿ, ಅದರಲ್ಲೂ ಹತ್ತನೆಯ ಮಂಡಲದಲ್ಲಿಯೇ ವಿಶೇಷವಾಗಿ ಬಂದಿದೆ.

ಅವನು ದೇವತೆಗಳೊಡನೆ ಕ್ರೀಡಾಮಗ್ನನಾಗಿರುತ್ತಾನೆ (೭.೭೬-೪; ೧೦-೧೩೫-೧). ವರುಣ (೧೦-೧೪--೭), ಬೃಹಸ್ಪತಿ (೧೦-೧೩-೪; ೧೦-೧೪-೩), ಮತ್ತು ವಿಶೇಷವಾಗಿ ಮೃತಾತ್ಮರನ್ನು ಬೇರೆ ಲೋಕಗಳಿಗೆ ಸಾಗಿಸುವ ಅಗ್ನಿ, ಇವರುಗಳೊಡನೆ ಉಕ್ತನಾಗಿದಾನೆ. ಅಗ್ನಿಯು ಯಮನ ಸ್ನೇಹಿತ (೧೦-೨೧-೫) ಮತ್ತು ಪುರೋಹಿತ (೧೦-೫೨-೩). ಒಬ್ಬ ದೇವತೆ ಮತ್ತು ಯಮ (ಇಬ್ಬರೂ ಒಂದೇ ಎಂದು ಸೂಚಿತವಾಗುತ್ತದೆ)ನೂ ಸೇರಿ, ನೀರಿನಲ್ಲಿ ಅಡಗಿಕೊಂಡಿದ್ದ ಅಗ್ನಿಯನ್ನು ಕಂಡುಹಿಡಿದರು (೧೦-೫೧-೩). ಅಗ್ನಿ, ಯಮ ಮತ್ತು ಮಾತರಿಶ ಇವು ಮೂರೂ ಒಬ್ಬನ ಹೆಸರುಗಳು (೧-೧೬೪-೪೬). ಅಗ್ನಿ ಮೊದಲಾದ ದೇವತೆಗಳ ಪಟ್ಟಿಯಲ್ಲಿ ಯಮನೂ ಸೇರಿದಾನೆ (೧೦-೬೪-೩; ೧೦-೯೨-೧೧).

ಈ ಮೇಲೆ ಹೇಳಿದ ವಾಕ್ಯಗಳಿಂದ ಯಮನೂ ಒಬ್ಬ ದೇವತೆಯೆಂದು ಊಹಿಸಬಹುದು. ದೇವತೆ ಎಂದು ಸ್ಪಷ್ಟವಾಗಿ ಕರೆದಿಲ್ಲ; ಮೃತರಾದವರಿಗೆ ರಾಜನೆಂದು ಹೇಳಿದೆ (ಯಮರಾಜ್ಞಃ ೧೦-೧೬-೯). ಸತ್ತ ನಂತರ, ಜೀವನು ಕಾಣುವುದು ಯಮ ಮತ್ತು ವರುಣದೇವ, ಇವರಿಬ್ಬರನ್ನು (೧೦-೧೪-೭). ಒಂದು ಸೂಕ್ತ ಪೂರ್ತಿಯಾಗಿ (೧೦-೧೪), ಯಮ ಮತ್ತು ಪಿತೃಗಳಿಗಿರುವ ಸಂಬಂಧದಲ್ಲಿ ಅದರಲ್ಲಿಯೂ ಅಂಗಿರಸರಿಗೆ ಉಕ್ತ ವಾಗಿದೆ. ಯಮನು ಅವರೊಡನೆ ಯಾಗಕ್ಕೆ ಬರುತ್ತಾನೆ ಮತ್ತು ಸಂತೋಷಪಡುತ್ತಾನೆ (೧೦-೧೪-೩, ೪; ೧೦-೧೫-೮). ಬಂಗಾರದಂತೆ ಕಣ್ಣುಗಳೂ, ಕಬ್ಬಿಣದ ಗೊರಸೂ ಉಳ್ಳ ಅವನ ಅಶ್ವಗಳ ವಿಷಯವು ಪ್ರಸ್ತಾಪಿತವಾಗಿದೆ (ತೈ. ಆ. ೬-೫-೨; ಆಪ. ಶ್ರೌ. ಸೂ. ೧೬-೬). ಅವನು ಜನಗಳನ್ನೆಲ್ಲಾ ಒಂದುಗೂಡಿಸುವವನು (೧೦-೧೪-೧), ಮೃತರಾದರಿಗೆ ವಿಶ್ರಾಂತಿಸ್ಥಾನವನ್ನು ಕಲ್ಪಿಸುತ್ತಾನೆ (೧೦-೧೪-೯; ಅ. ವೇ. ೧೮-೨-೩೭;) ಮತ್ತು ಅವರಿಗೆ ಒಂದು ಪ್ರತ್ಯೇಕ ವಾಸಗೃಹವನ್ನು ಕಲ್ಪಿಸುತ್ತಾನೆ (೧೦-೧೮-೧೩).

ಯಮನ ಸ್ಥಾನವು ಆಕಾಶದ ಒಂದು ಮೂಲೆಯಲ್ಲಿದೆ (೯-೧೧೩-೮). ಮೂರು ಸ್ವರ್ಗಗಳಲ್ಲಿ, ಎರಡು ಸವಿತೃವಿಗೂ, ಒಂದು ಯಮನಿಗೂ ಸೇರಿದೆ (೧-೩೫-೬; ೧-೧೨೩-೬ನ್ನು ಹೋಲಿಸಿ); ಯಮನ ಲೋಕವೇ ಮೂರನೆಯದು ಮತ್ತು ಅತ್ಯುನ್ನತವಾದುದು. ವಾಜಸನೇಯ ಸಂಹಿತೆಯಲ್ಲಿ (೧೨-೬೩), ಯಮನು ಯಮಿಯೊಡಗೂಡಿ, ಈ ಅಂತ್ಯದ ಎತ್ತರದಲ್ಲಿ ಸ್ವರ್ಗದಲ್ಲಿ ವಾಸಿಸುತ್ತಾನೆ ಎಂದಿದೆ. ಅವನ ಈ ಸ್ಥಾನದಲ್ಲಿ—ಇದೇ ದೇವತೆಗಳ ಸ್ಥಾನವೂ ಹೌದು.—ಯಮನ ಸುತ್ತಲೂ ವೇಣುನಾದವೂ, ಗಾನವೂ ಕೇಳಿಬರುತ್ತವೆ (೧೦-೧೩೫-೭).

ಯಮನಿಗೋಸ್ಕರ ಸೋಮರಸವು ಸಿದ್ಧಪಡಿಸಲ್ಪಡುತ್ತದೆ; ಅವನಿಗೆ ಘೃತವು ಅರ್ಪಿತವಾಗುತ್ತದೆ (೧೦-೧೪-೧೩, ೧೪); ಮತ್ತು ಯಾಗಶಾಲೆಗೆ ಬಂದು, ಆಸನದಲ್ಲಿ ಆಸೀನನಾಗಬೇಕೆಂದು ಪ್ರಾರ್ಥನೆ (೧೦-೧೪-೪) ಇದೆ.

ವಿವಸ್ವಂತನು ಅವನ ಜನಕ (೧೦-೧೪-೫) ಮತ್ತು ಸರಣ್ಯು ಎಂಬುವಳು ತಾಯಿಯೆಂದು ಉಕ್ತವಾಗಿದೆ (೧೦-೧೭-೧). ಅನೇಕ ಸಲ ವೈವಸ್ವತನೆಂದು ಕರೆದಿದೆ (೧೦-೧೪-೧; ಇತ್ಯಾದಿ). ಅವನಿಗೆ ಅಧಿಕರಾರೂ ಇಲ್ಲದುದರಿಂದ, ಯಮನೇ ವಿವಸ್ವತನಿಗಿಂತ ಶ್ರೇಷ್ಠನು (ಅ. ವೇ. ೧೮-೨-೩೨; ೧೮-೩-೬೧, ೬೨ಗಳನ್ನು ಹೋಲಿಸಿ).

ಯಮ ಯಮಿಗಳ ಸಂವಾದದಲ್ಲಿ ತಾವಿಬ್ಬರೂ ಗಂಧರ್ವ ಮತ್ತು ಜಲದೇವತೆಯ (ಅಪ್ಯಾ ಯೋಷಾ) ಮಕ್ಕಳೆಂದು ಹೇಳಿಕೊಂಡಿದ್ದಾರೆ (೧೦-೧೦-೪). ಯಮನೊಬ್ಬನೇ ಮರ್ತ್ಯನೆಂದು ಯಮಿಯು ಹೇಳುತ್ತಾಳೆ (೧೦-೧೦-೩). ಯಮನು ದೇಹವನ್ನು ತ್ಯಜಿಸಿ ಮೃತ್ಯುವನ್ನೇ ಅಪೇಕ್ಷಿಸಿದನೆಂದು ಇದೆ. (೧೦-೧೩-೪). ಅವನು ಅನಂತರ ಬರುವ ಅನೇಕರಿಗೆ ದಾರಿಯನ್ನು ತೋರಿಸುತ್ತಾ, ಬೇರೆ ಲೋಕಕ್ಕೆ ಹೋದನು; ಇಲ್ಲಿಗೇ ಪುರಾತನರಾದ ಪಿತೃಗಳೂ ಹೋಗಿರುವುದು (೧೦-೧೪-೧, ೨). ಅವನೇ ಮೃತರಾದ ಮರ್ತ್ಯರಿಗೆಲ್ಲಾ ಮೊದಲಿನವನು (ಅ. ವೇ. ೧೮-೩-೧೩). ಇಲ್ಲಿ ಮರ್ತ್ಯರೆಂದರೆ ಮನುಷ್ಯರೇ ಇರಬೇಕು; ಆದರೆ, ಬೇರೆ ಕೆಲವು ಸಂದರ್ಭಗಳಲ್ಲಿ, ಮರ್ತಪದದಿಂದ ದೇವತೆಗಳೂ ಉದ್ದಿಷ್ಟರಾಗಿದ್ದಾರೆ. ಯಮನು ಸತ್ತವರಲ್ಲಿ ಮೊದಲನೆಯವನೂ, ಬಹಳ ಪುರಾತನನೂ ಆದುದರಿಂದ, ಅವರಿಗೆಲ್ಲಾ ಒಡೆಯನೆನಿಸಿಕೊಳ್ಳುವುದು ಸ್ವಾಭಾವಿಕವೇ. ಅವನಿಗೆ ವಿಶ್ಪತಿ (ನೆಲಸಿದವರಿಗೆಲ್ಲಾ ಒಡೆಯ), ನಮ್ಮ ತಂದೆ ಎಂಬ ವಿಶೇಷಣಗಳಿವೆ (೧೦-೧೩೫-೧). ಯಮನ ಮೂಲಕವೇ, ಮುಂದೆ ಮನುಷ್ಯರಿಗೆಲ್ಲಾ, ವಿವಸ್ವಾನ್ ಆದಿತ್ಯನ ವಂಶಜರೆಂಬ ನಾಮಧೇಯವು ಬಂದಿರುವುದು (ತೈ. ಸಂ. ೬-೫-೬-೨; ಶ. ಬ್ರಾ. ೩-೧-೩-೪ ಮತ್ತು ಋ. ಸಂ. ೧-೧೦೫-೯ ಗಳನ್ನು ಹೋಲಿಸಿ). ಯಮನಿಂದ ದತ್ತನಾದ 'ಆಕಾಶದಲ್ಲಿ ಸಂಚರಿಸುವ ಅಶ್ವ'ವು, ಅಮರರಾಗತಕ್ಕವರಿಗೆ ಯಮನು ಕೊಡುವ ಸ್ಥಾನವೇ ಇರಬಹುದು (೧-೧೬೩-೨; ೧-೮೩-೫ನ್ನು ಹೋಲಿಸಿ); ಹೀಗೆಯೇ ಯಮನಿಗೂ ಆದಿತ್ಯನಿಗೂ ಸಂಬಂಧವು ಋಗ್ವೇದದಲ್ಲಿಯೂ ಉಕ್ತವಾಗಿದೆಯೆನ್ನಬಹುದು.

ಮೃತ್ಯುವೇ ಯಮನ ಮಾರ್ಗ (೧-೩೮-೫) ಮತ್ತು ಒಂದು ಸಲ (೧-೧೬೫-೪; ಮೈ. ಸಂ. ೨-೫-೬ ಮತ್ತು ಅ. ವೇ. ೬-೨೮-೩೧ ಮತ್ತು ೬-೯೩-೧ ಗಳನ್ನು ಹೋಲಿಸಿ) ಅವನೇ ಮೃತ್ಯುವೆಂತಲೂ ಹೇಳಿದೆ. ಯಮನು ಉಪಯೋಗಿಸುವ ಶೃಂಖಲೆಗಳು ವರುಣನ ಪಾಶಕ್ಕೆ ಉಪಮಿತವಾಗಿವೆ (೧೦-೯೭-೧೬). ಇಂತಹ ವಾಕ್ಯಗಳು ಮತ್ತು ಅವನ ದೂತರ ಲಕ್ಷಣಗಳಿಂದ ಯಮನು ಭಯಂಕರನೆಂದು ತೋರಬಹುದು. ಅಥರ್ವ ವೇದದಲ್ಲಿ ಮತ್ತು ಇತರ ವೈದಿಕ ಇತಿಹಾಸಗಳಲ್ಲಿ, ಮರಣ ಮತ್ತು ಮರಣಾನಂತರದ ದುಃಖಾನುಭವಗಳು ಯಮಕರ್ತೃಕವಾದುವೆಂದು ಹೇಳಿರುವುದರಿಂದ, ಯಮನೇ ಮೃತ್ಯುದೇವತೆಯೆಂದು ಪರಿಗಣಿತನಾಗಿದ್ದಾನೆ. ಆದರೆ ಪುರಾಣಗಳಲ್ಲಿಯೂ ಕೂಡ, ನರಕವೊಂದೇ ಯಮನ ರಾಜ್ಯವಲ್ಲವೆಂದು ಸ್ಪಷ್ಟವಾಗಿದೆ. ಇತರ ಸಂಹಿತೆಗಳಲ್ಲಿಯೂ, ಅಂತಕ, ಮೃತ್ಯು, ನಿರ್ಋತಿ (ರೋಗ) ಇವರುಗಳ ಪಟ್ಟಿಯಲ್ಲಿ ಯಮನೂ ಒಬ್ಬನು (ವಾ. ಸಂ. ೩೯-೧೩; ಅ. ವೇ. ೬-೨೯-೩; ಮೈ. ಸಂ. ೨-೫-೬) ಮತ್ತು ಮೃತ್ಯುವು ಅವನ ದೂತ (ಅ. ವೇ. ೫-೩೦-೧೨; ೧೮-೨-೨೭; ಇತ್ಯಾದಿ). ಮೃತ್ಯುವು ಮನುಷ್ಯರಿಗೆ ಅಧಿಪತಿಯೆಂದೂ ಯಮನು ಪ್ರೇತಗಳಿಗೆ ಅಧಿಪತಿಯೆಂದೂ (ಅ. ವೇ. ೫-೨೪-೧೩, ೧೪), ನಿದ್ರೆಯು (ನಿದ್ರಾಧಿದೇವತೆಯು) ಯಮನ ರಾಜ್ಯದಿಂದ ಬರುತ್ತಾಳೆಂದೂ (ಅ. ವೇ. ೧೯-೫೬-೧) ಹೇಳಿದೆ.

ಯಮ ಎಂಬ ಪದಕ್ಕೆ 'ಅವಳಿ' ಎಂಬರ್ಥದಲ್ಲಿಯೂ ಪ್ರಯೋಗವಿದೆ. ಸಾಧಾರಣವಾಗಿ ಪುಲ್ಲಿಂಗ ಅಥವಾ ಸ್ತ್ರೀಲಿಂಗ ದ್ವಿವಚನದಲ್ಲಿ—ಮತ್ತು ಲಗಾಮು ಅಥವಾ ಮಾರ್ಗದರ್ಶಕ ಎಂಬರ್ಥದಲ್ಲಿಯೂ ಈ ಶಬ್ದದ ಪ್ರಯೋಗಗಳಿವೆ. ಯಮ ಮತ್ತು ಯಮಿಗಳು ಯಮಳರೆಂದೇ ಭಾವನೆ (೧೦-೧೦). ಇತರ ಗ್ರಂಥಗಳಲ್ಲಿ, ಯಮನನ್ನು ಮೃತ್ಯುದೇವತೆ, ದುಷ್ಟಶಿಕ್ಷಕ ಮೊದಲಾದ ರೀತಿಯಲ್ಲಿ ವರ್ಣಿಸುವಾಗ, ಈ ಪದವು ಯಮ್ (ಹತೋಟಿಯಲ್ಲಿಟ್ಟುಕೋ) ಧಾತುವಿನಿಂದ ನಿಷ್ಪನ್ನವಾದುದೆಂದು ಅಭಿಪ್ರಾಯವಿದ್ದರೂ, ಇದಕ್ಕೆ ವೇದಗಳಲ್ಲಿ ಆಧಾರವಿಲ್ಲವೇ ಇಲ್ಲವೆನ್ನಬಹುದು.

## ನಿರುಕ್ತದ ವಿಭಾಗಕ್ರಮದಂತೆ ಸೂಕ್ತಭಾಜರೂ, ಹವಿರ್ಭಾಜರೂ ಮತ್ತು ನಿಪಾತಭಾಜರೂ ಆದ ದೇವತೆಗಳು

### (೧) ಸೂಕ್ತಭಜರು

#### ಪೃಥ್ವೀಸ್ಥಾನದೇವತೆಗಳು

ಅಶ್ವಃ, ಶಕುನಿಃ, ಮಂಡೂಕಾಃ, ಅಕ್ಷಾಃ, ಗ್ರಾವಾಣಃ, ನಾರಾಶಂಸಾಃ, ರಥಃ, ದುಂದುಭಿಃ, ಇಷುಧಿಃ, ಹಸ್ತಘ್ನಃ, ಅಭಿಷವಃ ಧನುಃ ಜ್ಯಾಃ, ಇಷುಃ, ಅಶ್ವಾಜನೀ, ಉಲೂಖಲಂ, ವೃಷಭಃ, ದ್ರುಘಣಃ, ಪಿತುಃ, ನದ್ಯಃ ಆಪಃ, ಓಷಧಯಃ, ರಾತ್ರಿಃ, ಅರಣ್ಯಾನೀ, ಶ್ರದ್ಧಾ, ಪೃಥಿವೀ, ಅಪ್ವಾ, ಉಲೂಖಲಮುಸಲೇ, ಹವಿರ್ಧಾನೇ, ದ್ಯಾವಾ ಪೃಥಿವೀ, ವಿಪಾಟ್ಛುತುದ್ರೀ, ಆರ್ತ್ನೀ, ಶುನಾಸೀರೌ. (೩೩).

#### ಮಧ್ಯಸ್ಥಾನದೇವತೆಗಳು

ಮೇನಃ, ಅಸುನೀತಿಃ, ಋತಃ, ಇಂದುಃ, ಅಹಿಃ, ಅಹಿರ್ಬುಧ್ನ್ಯಃ, ಸುಪರ್ಣಃ, ಪುರೂರವಾಃ, ಸೋಮಃ ಚಂದ್ರಮಾಃ, ವೈಶ್ವಾನರಃ. ಧಾತಾ, ಮರುತಃ, ರುದ್ರಾಃ, ಋಭವಃ, ಅಂಗಿರಸಃ, ಪಿತರಃ, ಅಥರ್ವಾಣಃ, ಭೃಗವಃ, ರಾಕಾ, ಯಮೀ, ಊರ್ವಶೀ, ಪೃಥಿವೀ, ಇಂದ್ರಾಣೀ, ಗೌರೀ, ಗೌಃ, ಧೇನುಃ, ಅಘ್ನ್ಯಾ, ಅದಿತಿಃ, ಪರಮಾ, ವಾಕ್, ಅನುಮತಿಃ ಪಥ್ಯಾ, ಸ್ವಸ್ತಿಃ, ಉಷಾಃ, ಇಳಾ, ರೋದಸಿ, (೩೭).

#### ಅಂತರಿಕ್ಷಸ್ಥಾನದೇವತೆಗಳು

ಉಷಾಃ, ಸೂರ್ಯಃ, ವೃಷಾಕಪಾಯೀ, ಸರಣ್ಯೂಃ, ಸವಿತಾ, ಭಗಃ, ಸೂರ್ಯಾ, ಪೂಷಾ, ವಿಷ್ಣುಃ, ವರುಣಃ ಕೇಶೀ, ಕೇಶಿನಃ ವೃಷಾಕಪಿಃ, ಸಪ್ತರ್ಷಯಃ, ದೇವಃ, ಸಾಧ್ಯಾಃ, ವಾಜಿನಃ, ದೇವಪತ್ನ್ಯಃ (೧೮).

### (೨) ಹವಿರ್ಭಾಜರು

#### ಪೃಥ್ವೀಸ್ಥಾನದೇವತೆಗಳು

ಅಗ್ನಿಃ, ದ್ರವಿಣೋದಾಃ, ಇಧ್ಮಃ, ತನೂನಪಾತ್, ನರಾಶಂಸಃ, ಇಳಃ, ಬರ್ಹಿಃ, ದ್ವಾರಃ, ಉಷಾಸಾನಕ್ತಾ, ದೈವ್ಯಾಹೋತಾರಾ, ತಿಸ್ರೋದೇವೀಃ, ತ್ವಷ್ಟಾ, ವನಸ್ಪತಿಃ, ಸ್ವಾಹಾಕೃತಯಃ, ಅಗ್ನಾಯೀ, ದೇವೀಜೋಷ್ಟ್ರೀ, ದೇವೀ ಊರ್ಜಾಹುತೀ. (೧೭).

#### ಮಧ್ಯಸ್ಥಾನದೇವತೆಗಳು

ವಾಯುಃ, ವರುಣಃ, ರುದ್ರಃ, ಇಂದ್ರಃ, ಪರ್ಜನ್ಯಃ, ಬ್ರಹ್ಮಣಸ್ಪತಿಃ, ಕ್ಷೇತ್ರಸ್ಯ ಪತಿಃ, ವಾಸ್ತೋಷ್ಪತಿಃ, ವಾಚಸ್ಪತಿಃ, ಅಪಾಂನಪಾತ್, ಯಮಃ, ಮಿತ್ರಃ, ಕಃ, ಸರಸ್ವಾನ್, ವಿಶ್ವಕರ್ಮಾ, ತಾರ್ಕ್ಷ್ಯಃ, ಮನ್ಯುಃ, ದಧಿಕ್ರಾ, ಸವಿತಾ, ತ್ವಷ್ಟಾ, ವಾತಃ, ಅಗ್ನಿಃ, ಪ್ರಜಾಪತಿಃ, ಸರಸ್ವತೀ, ಸಿನೀವಾಲೀ, ಕುಹೂಃ, ಶ್ಯೇನ, ಮೃತ್ಯು, ಸೋಮ(೨೯).

#### ದ್ಯುಸ್ಥಾನದೇವತೆಗಳು

ಅಶ್ವಿನೌ, ಯಮಃ, ವಿಶ್ವೇದೇವಾಃ, ಆದಿತ್ಯಾಃ, ಹವಿಃ, ವಸನಃ.

(೩) ನಿಪಾತಭಾಜಃ

a) ಜಾತವೇದಾಃ, ವೈಶ್ವಾನರಃ.

b) ವಿಧಾತಾ, ಆಪ್ತ್ಯಃ,

c) ತ್ವಷ್ಟಾ, ವೈಶ್ವನರಃ, ಪೃಥಿವೀ, ಸಮುದ್ರಃ, ಅಥರ್ವಾ, ಮನುಃ, ದಧ್ಯಂಙ್, ಅಜ ಏಕಪಾತ್,

ಬೃಹದ್ದೇವತೆಯಲ್ಲಿ ಉಕ್ತಮಂತ್ರರೆಂದೂ, ಹವಿರ್ಭಾಜರೆಂದೂ ಸಹ ದೇವತೆಗಳ ವಿಭಾಗವನ್ನು ತೋರಿಸುತ್ತ ಈ ರೀತಿ ತಿಳಿಸಿದೆ.

**ಸಪ್ತರ್ಷಯೋ ವಸವಶ್ಚಾಪಿ ದೇವಾ ಅಥರ್ವಾಣೋ ಭೃಗವಃ ಸೋಮಸೂರ್ಯಾಃ ।**
**ಪಥ್ಯಾ ಸ್ವಸ್ತೀ ರೋದಸೀ ಚೋಕ್ತಮಂತ್ರೇ ಕುಹೂರ್ಗುಂಗೂರದಿತಿರ್ಧೇನುರಘ್ನ್ಯಾ ॥**
**ಅಸುನೀತಿರಿಳಾ ಚಾಪ್ತ್ಯಾ ವಿಧಾತಾನುಮತಿರ್ಹ ಯಾ ।**
**ಅಂಗಿರೋಭಿಃ ಸಹೈತಾಃ ಸ್ಯುರುಕ್ತಮಂತ್ರಾಶ್ಚ ದೇವತಾಃ ॥**

(ಬೃ. ದೇ. ಅ. ೧೨೫–೧೨೬)

ಎಂದರೆ, ಸಪ್ತರ್ಷಿಗಳು, ವಸುಗಳು, ದೇವತೆಗಳು, ಅಥರ್ವರು, ಭೃಗುಗಳು, ಸೋಮನು, ಸೂರ್ಯ, ಸೂರ್ಯಾ, ಪಥ್ಯಾ, ಸ್ವಸ್ತೀ, ರೋದಸೀ, ಕುಹೂಃ, ಗುಂಗೂಃ, ಅದಿತಿಃ, ಧೇನುಃ, ಅಘ್ನ್ಯಾ, ಅಸುನೀತಿ, ಇಳಾ, ಆಪ್ತ್ಯಾ, ಅನುಮತಿ ಮತ್ತು ಅಂಗಿರಸ್ಸುಗಳು.

**ವೈಶ್ವಾನರೋ ಹಿ ಸುಪರ್ಣೋ ವಿವಸ್ವಾನ್ ಪ್ರಜಾಪತಿರ್ದಾರ್ಕ್ಷ್ಯಃ ಸುಧನ್ವಾ ನಗೋಹ್ಯಃ ।**
**ಅಪಾಂನಪಾದರ್ಯಮಾ ವಾತಜೂತಿರಿಳಸ್ಪತಿಶ್ಚಾಪಿ ರಥಸ್ಪತಿಶ್ಚ ॥**
**ಋಭವಃ ಪರ್ಜನ್ಯಃ ಪರ್ವತಾ ಗ್ನಾಶ್ಚ ದಕ್ಷೋ ಭಗೋ ದೇವಪತ್ನೀರ್ದಿತಶ್ಚ ।**
**ಆದಿತ್ಯಾ ರುದ್ರಾಃ ಪಿತರೋಽಥ ಸಾಧ್ಯಾ ನಿಪಾತಿನೋ ವೈಶ್ವದೇವೇಷು ಸರ್ವೇ ॥**

(ಬೃ. ದೇ, ಅ. ೧೨೭-೧೨೮)

ವೈಶ್ವಾನರ, ಸುಪರ್ಣ, ವಿವಸ್ವಾನ್ ಇತ್ಯಾದಿಗಳು ಹವಿರ್ಭಾಜರು. ನಿಪಾತಭಾಜರೂ ಇಲ್ಲಿಯೇ ಅಂತರ್ಗತರಾಗಿದ್ದಾರೆ.

## ಯಮನಿಗೂ ಯಮಿಗೂ ಸಂಭೋಗಾರ್ಥವಾಗಿ ನಡೆದ ಸಂಭಾಷಣೆಯು

ಈ ಸಂಭಾಷಣೆಯಲ್ಲಿ ಶಬ್ದಗಳ ಪ್ರತ್ಯೇಕವಿವರಣೆಯನ್ನೂ, ಅನ್ವಯಕ್ರಮವನ್ನೂ ಕ್ಲಿಷ್ಟವಾದ ಶಬ್ದಗಳಿಂದ ವಿವರಿಸದೆ ಸಂಭಾಷಣೆಯ ಮುಖ್ಯ ಸಾರಾಂಶವನ್ನು ಮಾತ್ರ ಕೊಟ್ಟಿದೆ—

(೧) ಯಮಿಯು ಯಮನನ್ನು ಕುರಿತು ಹೇಳುತ್ತಾಳೆ—ಎಲೈ ಯಮನೇ, ಸಮುದ್ರಮಧ್ಯದಲ್ಲಿರುವ ಈ ದ್ವೀಪವು ವಿಸ್ತಾರವಾಗಿದ್ದರೂ ನಿರ್ಜನಪ್ರದೇಶವಾಗಿರುವುದು ಎಂದರೆ ರಹಸ್ಯಸ್ಥಳವಾಗಿರುವುದು. ಗರ್ಭವಾಸದಿಂದಲೂ ಎಂದರೆ ನಾವಿಬ್ಬರೂ ಹುಟ್ಟಿದಾರಭ್ಯ ಜತೆಯಲ್ಲಿಯೇ ಬೆಳೆದು ಸ್ನೇಹಿತರಾಗಿರುವೆವು. ಆದ್ದರಿಂದ ಈಗ ನಾನು ಸ್ತ್ರೀ

ಸಹಜವಾದ ಲಜ್ಜೆಯನ್ನು ಬಿಟ್ಟು ನಿನ್ನೊಡನೆ ಸ್ತ್ರೀಪುರುಷರಿಗೆ ಸಹಜವಾದ ಸಂಪರ್ಕವನ್ನು ಎಂದರೆ ಸಂಭೋಗವನ್ನು ಮಾಡಲು ಅಪೇಕ್ಷಿಸುವೆನು. ಸಂಭೋಗದ ಪರಿಣಾಮವಾಗಿನಮ್ಮಿಬ್ಬರಿಗೂ ಜನಿಸುವ ಸರ್ವಗುಣೋಪೇತನಾದ ಪುತ್ರನು ನನ್ನ ಉದರದಲ್ಲಿ ಜನಿಸುವುದಕ್ಕಾಗಿ ಸೃಷ್ಟಿಕರ್ತನಾದ ಪ್ರಜಾಪ್ರತಿಯು ನನ್ನಲ್ಲಿ ಗರ್ಭವನ್ನು ಉಂಟುಮಾಡಲಿ.

(೨) ಯಮ—ಎಲೈ ಯಮಿಯೇ, ಗರ್ಭವಾಸದಿಂದ ನಾನು ನಿನ್ನ ಜತೆಯಲ್ಲಿಯೇ ಇದ್ದು ಬೆಳೆದು ನಿನ್ನೊಡನೆ ಸ್ನೇಹದಿಂದಿದ್ದರೂ, ಸ್ತ್ರೀಪುರುಷರಿಗೆ ಅರ್ಹವಾದ ಸಂಭೋಗವನ್ನು ನಿನ್ನೊಡನೆ ಇಚ್ಛಿಸುವುದಿಲ್ಲ. ನಾವಿಬ್ಬರೂ ಏಕೋದರರು ಎಂದರೆ ಒಂದೇ ತಾಯಿಯ ಗರ್ಭದಲ್ಲಿ ಹುಟ್ಟಿಬೆಳೆದವರು. ಅನೇಕವಿಷಯಗಳಲ್ಲಿ ನಮ್ಮಿಬ್ಬರಲ್ಲಿಯೂ ಸಮಾನವಾದ ಗುಣಗಳಿವೆ. ಆದರೆ ನೀನು ನನಗೆ ಸಹೋದರಿಯಾದ್ದರಿಂದ ನಿನ್ನ ಸಂಗವನ್ನು ನಾನು ಅಪೇಕ್ಷಿಸುವುದಿಲ್ಲ. ಏಕೆಂದರೆ ಪ್ರಜಾಪತಿಯ ಅಥವಾ ಬ್ರಹ್ಮನ ಪುತ್ರರೂ ವೀರರೂ ದ್ಯುಲೋಕವಾಸಿಗಳೂ ಆದ ದೇವತೆಗಳು ಈ ಕಾರ್ಯ ವನ್ನು ಎಂದರೆ ಸಹೋದರ ಸಹೋದರಿಯರ ಪರಸ್ಪರ ಸಂಭೋಗವನ್ನುನಿಷಿದ್ಧವೆಂದು ಸಾರಿದ್ದಾರೆ.

(೩) ಯಮಿ—ಎಲೈ ಯಮನೇ, ನೀನು ಹಾಗೆಂದಿಗೂ ಭಾವಿಸಬೇಡ. ದೇವತೆಗಳೂ ಸಹ ಶಾಸ್ತ್ರಾದಿಗಳಲ್ಲಿ ನಿಷಿದ್ಧವೆಂದು ಹೇಳಲ್ಪಟ್ಟಿರುವ ಸಂಗಗಳಲ್ಲಿ ಅನುರಕ್ತರಾಗಿರುವ ಎಷ್ಟೋ ದೃಷ್ಟಾಂತಗಳಿವೆ. ಸೃಷ್ಟಿಕರ್ತನಾದ ಪ್ರಜಾ ಪತಿಯೇ ತನ್ನ ಮಗಳಲ್ಲಿ ಅನುರಕ್ತನಾಗಿ ಅವಳೊಡನೆ ಕೂಡಿ ಸುಖಿಸಲಿಲ್ಲವೇ? ಇವೆಲ್ಲಕ್ಕೂ ನಮ್ಮ ಮನಸ್ಸೇ ಕಾರಣವು. ನಾನು ನಿನ್ನನ್ನು ಮನಃಪೂರ್ವಕವಾಗಿ ಪ್ರೀತಿಸುತ್ತೇನೆ. ನೀನೂ ಸಹ ನನ್ನನ್ನು ಪ್ರೀತಿಸುವುದರಲ್ಲಿ ಯಾವ ಸಂದೇಹವೂ ಇಲ್ಲ. ಆದ್ದರಿಂದ ಹಿಂದೆ ಪ್ರಜಾಪತಿಯು ತನ್ನ ಪುತ್ರಿಯಲ್ಲಿ ಸಂಭೋಗಮಾಡಿದಂತೆ ನೀನೂ ನನ್ನಲ್ಲಿ ಪ್ರವೇಶಿಸಿ ಎಂದರೆ ನನ್ನ ಪತಿಯಂತೆ ನನ್ನಲ್ಲಿ ಸಂಭೋಗಮಾಡಿ ನನಗೆ ಸುಖವನ್ನುಂಟುಮಾಡು.

(೪) ಯಮ—ಎಲೈ ಯಮಿಯೇ, ಹಿಂದೆ ಸರ್ವಶಕ್ತನಾದ ಪ್ರಜಾಪತಿಯು ಮಾಡಿದಂತೆ ನಾವು ಈಗ ಮಾಡುವುದು ಸಾಧ್ಯವಿಲ್ಲ. ಇದುವರೆಗೆ ನಾವಿಬ್ಬರೂ ಸತ್ಯವನ್ನೇ ನುಡಿಯುತ್ತಾ ನ್ಯಾಯಮಾರ್ಗದಲ್ಲಿಯೇ ಪ್ರವೃತ್ತ ರಾಗಿದ್ದೇವೆ. ಅಗಮ್ಯಾಗಮನ ಮೊದಲಾದ ಯಾವ ನಿಷಿದ್ಧಕರ್ಮಾಚರಣೆಯನ್ನೂ ಮಾಡಿಲ್ಲ. ಅಂತರಿಕ್ಷಸ್ಥನಾದ ಆದಿತ್ಯನೂ ಅವನ ಪತ್ನಿಯಾದ ಸರಣ್ಯೂದೇವಿಯು ನಮಗೆ ತಂದೆತಾಯಿಗಳು. ಅಂತಹ ಲೋಕಪೂಜ್ಯರಾದ ತಂದೆ ತಾಯಿಗಳ ಪುತ್ರರಾದ ನಾವು ಅಗಮ್ಯಾಗಮನವೆಂಬ ನಿಷಿದ್ಧಕಾರ್ಯವನ್ನು ಮಾಡಲಾದೀತೆ? ನಮ್ಮಿಬ್ಬರಿಗೂ ಇರುವ ಸಂಬಂಧವು ಸಹೋದರ ಸಹೋದರಿಯರಿಗಿರಬೇಕಾದ ಉತ್ಕೃಷ್ಟ ಸಂಬಂಧವು. ಪತಿಪತ್ನಿಯರಿಗಿರಬೇಕಾದ ಅನುರಾಗ ಸಂಬಂಧವಲ್ಲ.

(೫-೭) ಯಮಿ—ಎಲೈ ಯಮನೇ, ಸಮಸ್ತಪ್ರಾಣಿವರ್ಗಕ್ಕೂ ಅವರವರಿಗೆ ಸಹಜವಾದ ರೂಪಾದಿ ಗಳನ್ನು ಕೊಟ್ಟು ನಿಯಮಿಸುವ ತ್ವಷ್ಟೃಪ್ರಜಾಪತಿಯೇ ನಮ್ಮಿಬ್ಬರನ್ನೂ ಒಂದೇ ಗರ್ಭದಲ್ಲಿ ಬೆಳೆಯುವಂತೆ ಮಾಡಿ ಗರ್ಭವಾಸದಿಂದಲೂ ನಾವಿಬ್ಬರೂ ದಂಪತಿಗಳಾಗಿರಬೇಕೆಂದು ನಿಯಮಿಸಿದ್ದಾನೆ. ಸರ್ವಶಕ್ತನಾದ ಈ ಪ್ರಜಾ ಪತಿಯ ನಿಯಮರೂಪವಾದ ಆಜ್ಞೋಲ್ಲಂಘನೆಯನ್ನು ಮಾಡಲು ಯಾರೂ ಶಕ್ತರಲ್ಲ. ಆದ್ದರಿಂದ ಪ್ರಜಾಪತಿಯ ನಿಯಮಕ್ಕೆ ಅನುಸಾರವಾಗಿಯೇ ನಾವು ದಂಪತಿಗಳಂತೆ ಇದ್ದು ಸಂಭೋಗದಿಂದ ಸುಖವನ್ನನುಭವಿಸೋಣ. ಮಾತೃ ಗರ್ಭದಿಂದ ನಮಗೆ ಉಂಟಾದ ಈ ದಂಪತಿಸಂಬಂಧವನ್ನು ಸಕಲ ಜಗತ್ತಿಗೂ ಮಾತಾಪಿತೃಗಳಾದ ದ್ಯಾವಾಪೃಥಿವಿಗಳೂ ತಿಳಿದೇ ಇರುವರು.

(೬) ಈ ದಿನ ನಡೆಯುವ ಪ್ರಥಮ ದಿವಸದ ಸಮಾಗಮ ಸಂಬಂಧವು ಯಾರಿಗೆ ತಿಳಿಯುವುದು? ಇದು ರಹಸ್ಯಸ್ಥಳವು. ಇಲ್ಲಿ ಯಾರೂ ಇಲ್ಲ. ಇಲ್ಲಿ ನಡೆಯುವ ನಮ್ಮ ಸಂಭೋಗವನ್ನು ಯಾರು ನೋಡುವರು? ಮತ್ತು ಅದು ಇತರರಿಗೆ ಹೇಗೆ ಗೊತ್ತಾಗುವುದು? ಮಿತ್ರಾವರುಣರ ಸ್ಥಾನವಾದ ಅಹೋರಾತ್ರಗಳು (ಕಾಲವು) ಅತಿ ವಿಸ್ತಾರವಾಗಿದೆ. ಆಗ ಮಾನವಾದಿಪ್ರಾಣಿಗಳು ಆಚರಿಸುವ ಪಾಪಪುಣ್ಯರೂಪವಾದ ಸರ್ವಕರ್ಮಗಳಿಗೂ ಅವರವರ ಕರ್ಮಕ್ಕನುಸಾರವಾಗಿ ನರಕವನ್ನೋ ಸ್ವರ್ಗವನ್ನೋ ಪಡೆಯುವಂತೆ ಅನುಗ್ರಹಿಸುವ ಶಕ್ತಿಯು ಯಮರಾಜನಾದ ನಿನಗೇ ಇದೆ. ಇಂತಹ ಶಕ್ತಿಯಿರುವ ನೀನು ಏಕೆ ಹೆದರಬೇಕು? ಈ ವಿಷಯದಲ್ಲಿ ನೀನು ಏನು ಹೇಳುವೆ?

(೭) ಎಲೈ ಯಮನೇ, ನನ್ನಲ್ಲಿ ನಿನಗೆ ಕಾಮಾಸಕ್ತಿಯು ಉಂಟಾಗಲಿ. ಒಂದೇ ಹಾಸಿಗೆಯಲ್ಲಿ ಇಬ್ಬರೂ ಜತೆಯಲ್ಲಿ ಒಟ್ಟಿಗೆ ಮಲಗಿ ಪತಿಪತ್ನಿಯರಂತೆ ಸಂಭೋಗಸುಖವನ್ನು ಅನುಭವಿಸೋಣ. ಅನಂತರ ಪತ್ನಿಯು ಅನುಸರಿಸಬೇಕಾದ ಧರ್ಮದಂತೆ ರತಿಕ್ರಿಯೆಯಲ್ಲಿ ರತಿಕಾಮೋತ್ಸುಕಳಾದ ನಾನು ನನ್ನ ಶರೀರವನ್ನು ಅತ್ಯಂತ ಪ್ರೀತಿಯಿಂದ ನಿನಗೆ ಅರ್ಪಿಸುವೆನು. ಬಳಿಕ ನಾವಿಬ್ಬರೂ, ರಥದ ಎರಡು ಚಕ್ರಗಳು ಒಂದೇ ವಿಧವಾದ ಚಲನೆಯಿಂದ ರಥವನ್ನು ಒಯ್ಯುವಂತೆ ನಾವಿಬ್ಬರೂ ಪತಿಪತ್ನಿಯರಂತೆ ಸುಖಸಂತೋಷಗಳನ್ನು ಅನುಭವಿಸುತ್ತಾ ಧರ್ಮಾರ್ಥಕಾಮಗಳನ್ನು ನಿರ್ವಹಿಸೋಣ.

(೮-೧೦) ಯಮ—ಎಲೈ ಯಮಿಯೇ, ಈ ಲೋಕದಲ್ಲಿಯೂ ಕೂಡ ದೇವತೆಗಳಿಂದ ನಿಯಮಿಸಲ್ಪಟ್ಟ ಗೂಢಚಾರರು ಸಮಸ್ತ ಪ್ರಾಣಿಗಳ ಶುಭಾಶುಭಕರ್ಮಗಳನ್ನು ಅಹೋರಾತ್ರಗಳಲ್ಲಿಯೂ ನೋಡುತ್ತಾ ಸಂಚರಿಸುತ್ತಾರೆ. ಅವರು ಒಂದು ಕ್ಷಣಕಾಲ ಮಾತ್ರವೂ ಸಹ ವಿಶ್ರಾಂತಿಯಿಲ್ಲದೆ ಸಂಚರಿಸುತ್ತಾರೆ. ಒಂದು ನಿಮಿಷವೂ ಅವರು ಕಣ್ಣನ್ನು ಮುಚ್ಚುವುದಿಲ್ಲ. ನಾವು ಮಾಡುವ ಶುಭಾಶುಭ ಕರ್ಮಗಳನ್ನು ಅವರು ನೋಡಿಯೇ ನೋಡುತ್ತಾರೆ. ಅದುದರಿಂದ ಎಲೈ ಪಾಪಕರ್ಮನಿರತಳಾದ ಸ್ತ್ರೀಯೇ, ನೀನು ಇನ್ನು ಮೇಲೆ ನಿನ್ನ ಅಸಹ್ಯಕರವಾದ ಸಂಭಾಷಣೆಯಿಂದ ನನ್ನನ್ನು ಹಿಂಸಿಸಬೇಡ. ದೂರ ಸರಿದು ಹೋಗು. ನಿನಗೆ ನಿನ್ನ ಪಾಪಕರ್ಮದಲ್ಲಿ ಸಹಾಯಕನಾದ ಬೇರೆ ಪುರುಷನೊಂದಿಗೆ ಸೇರಿ ನೀನು ಹೇಳುವಂತೆ ರಥಚಕ್ರಗಳಂತೆ ಧರ್ಮಾರ್ಥಕಾಮಗಳನ್ನು ನಿರ್ವಹಿಸು.

(೯) ರಾತ್ರಿಕಾಲದಲ್ಲಿಯೂ, ಹಗಲಿನಲ್ಲಿಯೂ ಯಜ್ಞಮಾಡುವ ಯಜಮಾನನು ಯಮನಿಗೆ ಯಜ್ಞದಲ್ಲಿ ಹವಿರ್ಭಾಗವನ್ನರ್ಪಿಸಲಿ. ಸೂರ್ಯನು ಪ್ರತಿದಿನವೂ ಯಮನ ತೃಪ್ತಿಗಾಗಿಯೇ ಉದಯಿಸಲಿ. ಪರಸ್ಪರ ಬಂಧುಭೂತರಾದ ಅಹೋರಾತ್ರಿಗಳು ದ್ಯಾವಾಪೃಥಿವಿಗಳಿಂದ ಸಹಿತರಾಗಿ ಯಮನ ಸುಖಕ್ಕಾಗಿಯೇ ಸಹಕರಿಸಲಿ. ಈ ಯಮಿಯು ತನಗೆ ಸೋದರನಲ್ಲದ ಮತ್ತೊಬ್ಬ ಪುರುಷನನ್ನು ವರಿಸಲಿ.

(೧೦) ಎಲೈ ಯಮಿಯೇ, ಸಹೋದರಿಯರು ತಮ್ಮ ಸಹೋದರರನ್ನೇ ವರಿಸಿ ತಮ್ಮ ಪತಿಗಳನ್ನಾಗಿ ಮಾಡಿಕೊಳ್ಳುವ ಕಾಲವು ಮುಂದೆ ಬರುತ್ತದೆ. ಎಲೈ ಸುಂದರಿಯೇ, ಆದುದರಿಂದ ನೀನು ನನ್ನನ್ನು ಕಾಮಿಸುವುದನ್ನು ಬಿಟ್ಟು ನನಗಿಂತಲೂ ಬೇರೆಯಾದ ಮತ್ತೊರ್ವ ಸುಂದರಪುರುಷನನ್ನು ಪತಿಯಾಗಿ ಸ್ವೀಕರಿಸು. ನಿನ್ನ ಕಾಮಾಭಿಲಾಷೆಯನ್ನು ಪೂರೈಸುವ ಆ ಪುರುಷನಿಗೆ ಶಯನಕಾಲದಲ್ಲಿ ನಿನ್ನ ಬಾಹು (ತೋಳು) ವನ್ನೇ ತಲೆದಿಂಬನ್ನಾಗಿ ಮಾಡಿ ಅವನೊಡನೆ ಯಥೇಚ್ಛವಾಗಿ ರಮಿಸು ಮತ್ತು ಅವನನ್ನು ಸುಖಪಡಿಸು.

(೧೧) ಯಮಿ—ಎಲೈ ಯಮನೇ, ಸಹೋದರನಿರುವಾಗ ಅವನ ಸಹೋದರಿಯು ಕಷ್ಟಕ್ಕೀಡಾಗಿ ಅನಾಥಳಂತೆ ಪ್ರಲಪಿಸುತ್ತಿರುವಾಗ ಅದನ್ನು ಲಕ್ಷಿಸದಿರುವ ಸಹೋದರನು ನಿಜವಾದ ಸಹೋದರನೆನಿಸುವನೇ? ಅದರಂತೆ

ಸಹೋದರಿಯಿದ್ದೂ ತನ್ನ ಸಹೋದರನ ದುಃಖಶಮನವನ್ನು ಮಾಡದಿರುವ ಸಹೋದರಿಯು ನಿಜವಾದ ಸಹೋದರಿಯೇ? ಎಂದಿಗೂ ಅಲ್ಲ. ಕಾಮಪರವಶಳಾದ ನಾನು ಕಾಮದಿಂದ ಪೀಡಿತಳಾಗಿ ನಿನ್ನನ್ನು ಅನೇಕ ವಿಧಗಳಲ್ಲಿ ಕಾಮತೃಪ್ತಿಗಾಗಿ ಬೇಡಿಕೊಳ್ಳುತ್ತಿದ್ದೇನೆ. ನನ್ನ ಶರೀರದೊಂದಿಗೆ ನಿನ್ನ ಶರೀರವನ್ನು ಸೇರಿಸಿ ಸಂಭೋಗದಿಂದ ಸುಖವನ್ನನುಭವಿಸು.

(೧೨) ಯಮ—ಎಲೈ ಯಮಿಯೇ ನೀನು ಹೇಳುವಂತೆ ನಿನ್ನ ಶರೀರದೊಡನೆ ನನ್ನ ಶರೀರಸಂಪರ್ಕವನ್ನು ಮಾಡಿ ನಿನ್ನೊಡನೆ ಸಂಭೋಗಮಾಡಲು ನಾನು ಇಚ್ಛಿಸುವುದಿಲ್ಲ. ಸಹೋದರನಾದವನು ತನ್ನ ತಂಗಿಯಲ್ಲೇ ಅನುರಕ್ತನಾಗಿ ಅವಳೊಡನೆ ಸಂಭೋಗಿಸಿದಲ್ಲಿ ಅವನನ್ನು ಮಹಾಪಾಪಿಷ್ಠನೆಂದು ಶಿಷ್ಟಾಚಾರವನ್ನು ತಿಳಿದ ಸಜ್ಜನರು ಹೇಳುವರು. ಆದ್ದರಿಂದ ಎಲೈ ಸುಂದರಿ, ನೀನು ನನ್ನನ್ನು ಬಿಟ್ಟು ನಿನಗೆ ಅರ್ಹನಾದ ಬೇರೊಬ್ಬ ಸುಂದರತರುಣನೊಡನೆ ಸಂಭೋಗಸಂಬಂಧವಾದ ಸುಖಸಂತೋಷಗಳನ್ನನುಭವಿಸು. ನಿನ್ನ ಸಹೋದರನಾದ ಈ ಯಮನು ನಿನ್ನೊಡನೆ ಸಂಭೋಗಿಸಲು ಇಚ್ಛಿಸುವುದಿಲ್ಲ.

(೧೩) ಯಮೀ—ಎಲೈ ಯಮನೇ, ನೀನು ತುಂಬಾ ದುರ್ಬಲನಾಗಿರುವೆ (ಮೂರ್ಖನಾಗಿರುವೆ). ಇದು ಬಹಳ ಕಷ್ಟವು. ನಿನ್ನ ಮನಸ್ಸನ್ನು ಮನಸ್ಸಿನಲ್ಲಿರುವುದನ್ನೂ ನಾವು ಯಾರೂ ತಿಳಿಯಲಾರೆವು. ತನ್ನನ್ನೇ ಕಟ್ಟಿಬಿಗಿದಿರುವ ಹಗ್ಗವನ್ನು ಅಶ್ವವು ಬಿಗಿದಪ್ಪುವಂತೆಯೂ ಬಳ್ಳಿಗಳು ವೃಕ್ಷವನ್ನು ಸುತ್ತುವರಿದು ಅಪ್ಪಿಕೊಳ್ಳುವಂತೆಯೂ ಸುಂದರನಾದ ನಿನ್ನನ್ನು ಬೇರೊಬ್ಬ ಸ್ತ್ರೀಯು ಅನುರಾಗದಿಂದ ಆಲಂಗಿಸಿಕೊಳ್ಳುವುದನ್ನು ನೋಡಿ ಹೇಗೆ ಸಹಿಸಲಿ ?

(೧೪) ಯಮ—ಎಲೈ ಯಮಿ, ನೀನು ನನ್ನನ್ನು ಬಿಟ್ಟು ಅನ್ಯಪುರುಷನನ್ನೇ ಆಲಂಗಿಸು. ಆವನೂ ಸಹ ನಿನ್ನನ್ನು ಆಲಂಗಿಸಲಿ. ಲತೆಯು ತನಗೆ ಆಶ್ರಯಭೂತವಾದ ವೃಕ್ಷವನ್ನು ಬಿಗಿದುಪ್ಪುವಂತೆ ನೀವಿಬ್ಬರೂ ಒಬ್ಬರನ್ನೊಬ್ಬರು ಆಲಂಗಿಸಿಕೊಂಡು ಸುಖವಾಗಿರಿ. ನೀನು ಆ ಪುರುಷನ ಮನೋಭಿಲಾಷೆಯಂತೆ ನಡೆದುಕೋ. ಆ ಪುರುಷನೂ ಸಹ ನಿನ್ನ ಮನಸ್ಸಿನಂತೆಯೇ ನಡೆಯುತ್ತಾ ಸುಂದರಾಂಗಿಯಾದ ನಿನ್ನೊಡನೆ ಸಂಭೋಗಸುಖವನ್ನನುಭವಿಸಲಿ.

ಈ ಸೂಕ್ತವನ್ನು ಜಪಮಾಡುವ ವಿಷಯದಲ್ಲಿ ಋಗ್ವಿಧಾನವೆಂಬ ಗ್ರಂಥದಲ್ಲಿ ಶೌನಕಮಹರ್ಷಿಯು ಈರೀತಿ ಹೇಳಿರುವರು—

**ಉಪತಿಷ್ಠೇತ ರಾಜಾನಂ ಯಮಂ ಸೂಕ್ತೇನ ವೈ ದ್ವಿಜಃ ।**
**ಸ್ಥಾಲೀಪಾಕಂ ಚ ಕುರ್ವೀತ ಪಕ್ಷಯೋರ್ಯಮದೈವತಂ ॥ ೩೫ ॥**
**ಅಷ್ಟಮ್ಯಾಂ ಚ ಚತುರ್ದಶ್ಯಾಂ ಯಜೇತ ಹವಿಷಾ ಯಮಂ ॥**

ದ್ವಿಜನಾದವನು ಯಮಧರ್ಮರಾಜನನ್ನು ಈ ಸೂಕ್ತವನ್ನು ಪಠಿಸುತ್ತಾ ಪ್ರಾರ್ಥಿಸಬೇಕು. ಅನಂತರ ಪೂರ್ವಾಪರ ಪಕ್ಷಗಳೆರಡರಲ್ಲಿಯೂ ಅಷ್ಟಮಿ ಮತ್ತು ಚತುರ್ದಶೀ ತಿಥಿಗಳಲ್ಲಿ ಸ್ಥಾಲೀಪಾಕವಿಧಾನದಿಂದ ಸಂಸ್ಕೃತಾಗ್ನಿಯಲ್ಲಿ ಯಮನನ್ನುದ್ದೇಶಿಸಿ ಮಂತ್ರಪೂರ್ವಕವಾಗಿ ಹೋಮಮಾಡಬೇಕು.

**ಪರೇಯಿವಾಂಸಮೇತತ್ಸೂಕ್ತಮತ್ರ ಪ್ರಯೋಜಯೇತ್ ॥ ೩೬ ॥**
**ಪುರಾಯುಷಃ ಪ್ರಮೀಯೇತ ನ ಜಾತು ಸ ಕಥಂಚನ ।**
**ಪ್ರೀಯತೇಽಸ್ಯ ಯಮೋ ರಾಜಾ ಸ್ಮೃತಿಂ ಚಾಂತೇ ಪ್ರಯಚ್ಛತಿ ॥ ೩೭ ॥**

**ಧರ್ಮರಾಜಾಯ ಸ್ವಾಹೇತಿ ಮಂತ್ರಾಂತೇ ಜುಹಾಯದ್ಧವಿಃ ।**
**ವೈಶಾಖ್ಯಾಂ ಪೌರ್ಣಮಾಸ್ಯಾಂ ತು ಕರ್ಮ ನಿತ್ಯಂ ಪ್ರಯೋಜಯೇತ್ ॥ ೩೮ ॥**

ಈ ಹೋಮಕಾಲದಲ್ಲಿ **ಪರೇಯಿವಾಂಸಂ** ಎಂಬ ಸೂಕ್ತದ (೧೦ನೇ ಮಂಡಲದ ೧೪ನೇ ಸೂಕ್ತದ ಮಂತ್ರಗಳನ್ನು ಪಠಿಸುತ್ತಾ ಹೋಮಮಾಡಬೇಕು. ಈರೀತಿ ಮಾಡಿದಲ್ಲಿ ಅವನ ಆಯುಃಪ್ರಮಾಣವು ಮುಗಿಯುವ ಮೊದಲೇ ಅವನಿಗೆ ಮರಣವು ಪ್ರಾಪ್ತವಾಗುವ ಸಂಭವವಿರುವುದಿಲ್ಲ. ಎಂದರೆ ಪುರುಷನ ಜೀವಿತಕಾಲವಾದ ನೂರುವರ್ಷಗಳವರೆಗೆ ಜೀವಿಸಿರುವನು. ಈ ವಿಧವಾದ ಹೋಮದಿಂದ ಯಮರಾಜನು ಸಂತುಷ್ಟನಾಗುವನು ಮತ್ತು ಆ ಪುರುಷನ ಮರಣ ಕಾಲದಲ್ಲಿ ಅವನಿಗೆ ಸ್ಮೃತಿರಾಹಿತ್ಯವಿಲ್ಲದೆ ಕೊನೆಯವರೆಗೂ ಜ್ಞಾನವುಳ್ಳವನಾಗಿಯೇ ಇರುವನು. ಪ್ರತಿ ಮಂತ್ರದ ಕೊನೆಯಲ್ಲಿಯೂ **ಧರ್ಮರಾಜಾಯ ಸ್ವಾಹಾ** ಎಂದು ಸೇರಿಸಿ ಹೋಮಮಾಡಬೇಕು. ವೈಶಾಖಮಾಸದ ಪೌರ್ಣಮಿ ಯಲ್ಲಿ ಈ ಹೋಮಕರ್ಮವನ್ನು ಮುಖ್ಯವಾಗಿ ಆಚರಿಸಬೇಕು.

**ಅಯನೇ ಪರ್ವಸು ಸ್ನಾತ್ವಾ ಯಃ ಪ್ರದದ್ಯಾತ್ತಿಲೋದಕಂ ।**
**ಯಮಾಯ ಸಗಣಾಯೈವ ತದ್ಭಯಂ ನ ಸ ವಿಂದತೇ ॥ ೩೯ ॥**

(ಋಗ್ವಿಧಾನ ೩ನೇ ಅಧ್ಯಾಯ)

ಉತ್ತರಾಯನ ದಕ್ಷಿಣಾಯನ ಕಾಲಗಳಲ್ಲಿಯೂ ಪರ್ವಕಾಲಗಳಲ್ಲಿಯೂ ಯಾವಪುರುಷನು ಸ್ನಾನಮಾಡಿ ಪರಿವಾರ ಸಹಿತನಾದ ಯಮರಾಜನನ್ನುದ್ದೇಶಿಸಿ ತಿಲೋದಕದಿಂದ (ಎಳ್ಳು ನೀರು) ತರ್ಪಣವನ್ನು ಕೊಡುವನೋ ಅವನಿಗೆ ಯಮ ನಿಂದ ಯಾವವಿಧವಾದ ಭಯವೂ ಇರುವುದಿಲ್ಲ.



॥ ಸಾಯಣಭಾಷ್ಯಂ ॥

ಓ ಚಿದಿತಿ ಚತುರ್ದಶರ್ಚಂ ದಶಮಂ ಸೂಕ್ತಂ । ಅತ್ರಾನುಕ್ರಮ್ಯತೇ ॥ ಓ ಚಿತ್ಷಳೂನಾ ವೈವಸ್ವತಯೋರ್ಯಮಯಮ್ಯೋಃ ಸಂವಾದಃ ಷಷ್ಠ್ಯಯುಗ್ಭಿರ್ಯಮೀ ಮಿಥುನಾರ್ಥಂ ಯಮಂ ಪ್ರೋವಾಚ ಸ ತಾಂ ನವಮೀಯುಗ್ಭಿರನಿಚ್ಛನ್ ಪ್ರತ್ಯಾಚಷ್ಟ ಇತಿ । ತತಃ ಷಷ್ಠ್ಯಾಂ ಪ್ರಥಮಾತೃತೀ-ಯಾದ್ಯಯುಕ್ಷು ವಿವಸ್ವತಃ ಪುತ್ರೀ ಯಮ್ಯೃಷಿರ್ಯಮೋ ದೇವತಾ । ಯಸ್ಯ ವಾಕ್ಯಂ ಸ ಋಷಿರ್ಯಾ ತೇನೋಚ್ಯತೇ ಸಾ ದೇವತೇತಿ ನ್ಯಾಯಾತ್ । ತಥಾ ನವಮ್ಯಾಂ ದ್ವಿತೀಯಾಚತುರ್ಥೀಪ್ರಭೃತಿಷು ಯುಕ್ಷು ವೈವಸ್ವತೋ ಯಮ ಋಷಿರ್ಯಮೀ ದೇವತಾ । ಅನಾದೇಶಪರಿಭಾಷಯಾ ತ್ರಿಷ್ಟುಪ್ ॥ ಗತೋ ವಿನಿಯೋಗಃ ॥

ಅನುವಾದವು—ಓ ಚಿತ್ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ **ಓ ಚಿತ್ ಷಳೂನಾ ವೈವಸ್ವತಯೋರ್ಯ-ಮಯಮ್ಯೋಃ ಸಂವಾದಃ ಷಷ್ಠ್ಯಯುಗ್ಭಿರ್ಯಮೀ ಮಿಥುನಾರ್ಥಂ ಯಮಂ ಪ್ರೋವಾಚ ಸ ತಾಂ ನವಮೀಯುಗ್ಭಿರನಿಚ್ಛನ್ ಪ್ರತ್ಯಾಚಷ್ಟೇ** ಎಂದು ಹೇಳಿರುವುದು. ಈ ಸೂಕ್ತದಲ್ಲಿ ವಿವಸ್ವಂತನ ಪುತ್ರನಾದ

ಯಮನಿಗೂ, ಅವನ ಸಹೋದರಿಯಾದ ಯಮೀ ಎಂಬ ಸ್ತ್ರೀಗೂ ಪರಸ್ಪರ ಸಂಭೋಗಾರ್ಥವಾಗಿ ನಡೆದ ಸಂಭಾಷಣೆ ಇದೆ. ೧, ೩, ೫-೭, ೧೧, ೧೩ ನೇ ಋಕ್ಕುಗಳನ್ನು ಯಮಿಯೂ, ೨, ೪, ೮-೧೦, ೧೨, ೧೪ ನೇ ಋಕ್ಕುಗಳನ್ನು ಯಮನೂ ಪರಸ್ಪರ ಎಂದರೆ ಒಬ್ಬರನ್ನೊಬ್ಬರು ಉದ್ದೇಶಿಸಿ ಹೇಳಿದಾರೆ. ಆದ್ದರಿಂದ ಈ ಸೂಕ್ತದ ೧, ೩ ಮೊದಲಾದ ಅಸಮಸಂಖ್ಯೆಯ ಋಕ್ಕುಗಳಿಗೂ ಮತ್ತು ಆರನೆಯ ಋಕ್ಕಿಗೂ ವೈವಸ್ವತೀ ಯಮೀ ಎಂಬ ಸ್ತ್ರೀಯು ಋಷಿಯು, ಯಮನೇ ದೇವತೆಯು. **ಯಸ್ಯ ವಾಕ್ಯಂ ಸ ಋಷಿರ್ಯಾ ತೇನೋಚ್ಯತೇ ಸಾ ದೇವತಾ** ಎಂಬ ನ್ಯಾಯದಂತೆ ಋಕ್ಕಿನಲ್ಲಿರುವ ವಾಕ್ಯವನ್ನು ಯಾರು ಪಠಿಸುವರೋ ಅವರೇ ಆ ಋಕ್ಕಿಗೆ ಋಷಿಯು. ವಾಕ್ಯದಲ್ಲಿ ಪ್ರತಿಪಾದಿತವಾಗಿರುವ ವಿಷಯವೇ ಆ ಋಕ್ಕಿಗೆ ದೇವತೆಯು ಎಂಬ ನ್ಯಾಯಾನುಸಾರವಾಗಿ ಮೇಲೆ ಹೇಳಿದ ೧, ೩ ಮೊದಲಾದ ಅಸಮಸಂಖ್ಯೆಯ (೯ನೇ ಋಕ್ಕನ್ನು ಬಿಟ್ಟು) ಮತ್ತು ಆರನೆಯ ಋಕ್ಕನ್ನು ಯಮಿ ಎಂಬ ಸ್ತ್ರೀಯು ಹೇಳಿರುವುದರಿಂದ ಆ ಋಕ್ಕುಗಳಿಗೆ ಯಮಿಯೇ ಋಷಿಯು; ಆ ಋಕ್ಕುಗಳಲ್ಲಿ ಯಮನ ವಿಷಯವು ಪ್ರತಿಪಾದಿತವಾಗಿರುವುದರಿಂದ ಆ ಋಕ್ಕುಗಳಿಗೆ ಯಮನೇ ದೇವತೆಯು. ಅದರಂತೆಯೇ ಈ ಸೂಕ್ತದ ೨, ೪ ಮೊದಲಾದ ಸಮಸಂಖ್ಯೆಯ (೬ನೇ ಋಕ್ಕನ್ನು ಬಿಟ್ಟು) ಋಕ್ಕುಗಳಿಗೂ ಅಸಮಸಂಖ್ಯೆಯಾದ ೯ನೇ ಋಕ್ಕಿಗೂ ವೈವಸ್ವತೋ ಯಮಃ ಎಂಬುವನು ಋಷಿಯು; ಯಮಿಯೇ ದೇವತೆಯು; ತ್ರಿಷ್ಟುಪ್ ಛಂದಸ್ಸು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦

ಮಂಡಲ—೧೦ । ಅನುವಾಕ—೧ । ಸೂಕ್ತ—೧೦ ।
ಅಷ್ಟಕ—೭ । ಅಧ್ಯಾಯ—೬ ॥ ವರ್ಗ—೬, ೭, ೮ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ।
ಋಷಿಃ—೧, ೩, ೫-೭, ೧೧, ೧೩. ಯಮೀ ವೈವಸ್ವತೀ । ೨, ೪, ೮-೧೦, ೧೨, ೧೪. ಯಮೋ ವೈವಸ್ವತಃ ॥
ದೇವತಾ—೧. ೩, ೫-೭, ೧೧, ೧೩. ಯಮೋ ವೈವಸ್ವತಃ । ೨, ೪, ೮-೧೦, ೧೨, ೧೪. ಯಮೀ ವೈವಸ್ವತೀ ।
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಓ ಚಿತ್ಸಖಾಯಂ ಸಖ್ಯಾ ವವೃತ್ಯಾಂ ತಿರಃ ಪುರೂ ಚಿದರ್ಣವಂ ಜಗನ್ವಾನ್।
ಪಿತುರ್ನಪಾತಮಾ ದಧೀತ ವೇಧಾ ಅಧಿ ಕ್ಷಮಿ ಪ್ರತರಂ ದೀಧ್ಯಾನಃ ॥ ೧ ॥

॥ ಪದಪಾಠಃ ॥

ಓ ಇತಿ । ಚಿತ್ । ಸಖಾಯಂ । ಸಖ್ಯಾ । ವವೃತ್ಯಾಂ । ತಿರಃ । ಪುರು । ಚಿತ್ । ಅರ್ಣವಂ । ಜಗನ್ವಾನ್ ।
ಪಿತುಃ । ನಪಾತಂ । ಆ । ದಧೀತ । ವೇಧಾಃ । ಅಧಿ । ಕ್ಷಮಿ । ಪ್ರಽತರಂ । ದೀಧ್ಯಾನಃ ॥ ೧ ॥

॥ ಸಾಯಣಭಾಷ್ಯಂ ॥

ಅತ್ರಾಸ್ಮಿನ್ಸೂಕ್ತೇ ವೈವಸ್ವತಯೋರ್ಯಮಯಮ್ಯೋಃ ಸಂವಾದ ಉಚ್ಯತೇ । ಅಸ್ಯಾಮೃಚಿ ಯಮಂ ಪ್ರತಿ ಯಮೀ ಪ್ರೋವಾಚ । ತಿರೋಽಂತರ್ಹಿತಮಪ್ರಕಾಶಮಾನಂ । ನಿರ್ಜನಪ್ರದೇಶಮಿತ್ಯರ್ಥಃ ।ಪುರು ಚಿದ್ಬಹ್ವಪಿ ವಿಸ್ತೀರ್ಣಂ ಚಾರ್ಣವಂ ಸಮುದ್ರೈಕದೇಶಮವಾಂತರದ್ವೀಪಂ ಜಗನ್ವಾನ್ ಗತವತೀ ಯಮೀ । ಚಿದಿತಿ ಪೂಜಾರ್ಥೇ । ಪೂಜಿತಮಿಷ್ಟಂ । ಶ್ರೇಷ್ಠಮಿತ್ಯರ್ಥಃ । ಸಖಾಯಂ ಗರ್ಭವಾಸಾದಾರಭ್ಯ ಸಖೀಭೂತಂ ಯಮಂ ಸಖ್ಯಾ ಸಖ್ಯಾಯ ಸ್ತ್ರೀಪುರುಷಸಂಪರ್ಕಜನಿತಮಿತ್ರತ್ವಾಯ ಓ ವವೃತ್ಯಾಂ । ಆವರ್ತಯಾಮಿ । ಅಭಿಮುಖ್ಯೇನ ಸ್ಥಿತ್ವಾ ಲಜ್ಜಾಂ ಪರಿತ್ಯಜ್ಯ ತ್ವತ್ಸಂಭೋಗಂ ಕರೋಮೀತ್ಯರ್ಥಃ । ಧರ್ಮಸ್ಯ ತ್ವರಿತಾ ಗತಿರಿತಿ ನ್ಯಾಯೇನ ಕಾಮಸ್ಯ ತ್ವರಿತತ್ವಾತ್ । ಅಪಿ ಚ ಪಿತುರಾವಯೋರ್ಭವಿಷ್ಯತಃ ಪುತ್ರಸ್ಯ ಪಿತೃಭೂತಸ್ಯ ತವಾರ್ಥಾಯಾಧಿ ಕ್ಷಮ್ಯಧಿ ಪೃಥಿವ್ಯಾಂ । ಪೃಥಿವೀಸ್ಥಾನೀಯೇ ಮಮೋದರ ಇತ್ಯರ್ಥಃ । ಪ್ರತರಂ ಪ್ರಕೃಷ್ಟಂ । ಸರ್ವಗುಣೋಪೇತಮಿತ್ಯರ್ಥಃ । ನಪಾತಂ ಗರ್ಭಲಕ್ಷಣಮಪತ್ಯಂ ವೇಧಾ ವಿಧಾತಾ ಪ್ರಜಾಪತಿರ್ದೀಧ್ಯಾನ ಆವಯೋರನುರೂಪಸ್ಯ ಪುತ್ರಸ್ಯ ಜನನಾರ್ಥಮಾವಾಂ ಧ್ಯಾಯನ್ನಾ ದಧೀತ । ಪ್ರಜಾಪತಿರ್ಧಾತಾ ಗರ್ಭಂ ದಧಾತು ತೇ । ಋ. ೧೦-೧೮೪-೧. ಇತ್ಯುಕ್ತತ್ವಾತ್

॥ ಪ್ರತಿಪದಾರ್ಥ ॥

**ತಿರಃ**—ನಿರ್ಜನಪ್ರದೇಶವಾದುದೂ । **ಪುರು ಚಿತ್**—ಅತಿ ವಿಸ್ತೃತವಾದುದೂ । **ಅರ್ಣವಂ**—ಸಮುದ್ರಮಧ್ಯವರ್ತಿಯೂ ಆದ ಪ್ರದೇಶಕ್ಕೆ । **ಜಗನ್ವಾನ್**—ನಾನು ಬಂದಿದ್ದೇನೆ । **ಚಿತ್**—ಶ್ರೇಷ್ಠನೂ । **ಸಖಾಯಂ**—ಆಪ್ತನೂ ಆದ ಯಮನನ್ನು । **ಸಖ್ಯಾ**—ನಮ್ಮಿಬ್ಬರ ಪ್ರೇಮಸಂಪಾದನೆಗಾಗಿ । **ಓ ವವೃತ್ಯಾಂ**—ನನಗಭಿಮುಖನಾಗುವಂತೆ ಮಾಡುವೆನು । **ವೇಧಾಃ**—ಸೃಷ್ಟಿಕರ್ತನಾದ ಪ್ರಜಾಪತಿಯು । **ದೀಧ್ಯಾನಃ**—ಪೂರ್ಣವಾಗಿ ಆಲೋಚಿಸಿ **ಪಿತುಃ**—ನಮ್ಮ (ನನ್ನ ಮತ್ತು ಯಮನ) ಸಂಬಂಧದಿಂದ ಉತ್ಪನ್ನವಾಗುವ ಶಿಶುವಿಗೆ । **ಅಧಿ ಕ್ಷಮಿ**—ಪೃಥ್ವೀಸ್ಥಾನೀಯವಾದ ನನ್ನ ಉದರದಲ್ಲಿ । **ಪ್ರತರಂ**—ಅತ್ಯುತ್ಕೃಷ್ಟವಾದ । **ನಪಾತಂ**—ಗರ್ಭವನ್ನು । **ಆ ದಧೀತ**—ಸ್ಥಾಪಿಸಲಿ.

॥ ಭಾವಾರ್ಥ ॥

ನಿರ್ಜನಪ್ರದೇಶವಾದುದೂ, ಅತಿ ವಿಸ್ತೃತವಾದುದೂ, ಸಮುದ್ರ ಮಧ್ಯವರ್ತಿಯೂ ಆದ ಈ ದ್ವೀಪಕ್ಕೆ ನಾನು ಬಂದಿದ್ದೇನೆ. ಶ್ರೇಷ್ಠನೂ, ಆಪ್ತನೂ ಆದ ಯಮನನ್ನು ನಮ್ಮಿಬ್ಬರ ಪ್ರೇಮಸಂಪಾದನೆಗಾಗಿ ನನಗಭಿಮುಖನಾಗುವಂತೆ ಮಾಡುತ್ತೇನೆ. ಸೃಷ್ಟಿಕರ್ತನಾದ ಪ್ರಜಾಪತಿಯು ಪೂರ್ಣವಾಗಿ ಆಲೋಚಿಸಿ ನನ್ನ ಮತ್ತು ಯಮನ ಸಂಬಂಧದಿಂದ ಉತ್ಪನ್ನವಾಗುವ ಶಿಶುವಿಗೆ ಪೃಥ್ವೀಸ್ಥಾನೀಯವಾದ ನನ್ನ ಉದರದಲ್ಲಿ ಅತ್ಯುತ್ಕೃಷ್ಟವಾದ ಗರ್ಭವನ್ನು ಸ್ಥಾಪಿಸಲಿ.

## English Translation

(Yami speaks). I invite my friend to friendship, having come o'er vast and desert ocean ; may Vedhas, after reflecting, place in my womb the offspring (of you) the father, endowed with excellent qualities.

। ಸಂಹಿತಾಪಾಠಃ ।

ನ ತೇ ಸಖಾ ಸಖ್ಯಂ ವಷ್ಟ್ಯೇತತ್ಸಲಕ್ಷ್ಮಾ ಯದ್ವಿಷುರೂಪಾ ಭವಾತಿ ।
ಮಹಸ್ಪುತ್ರಾಸೋ ಅಸುರಸ್ಯ ವೀರಾ ದಿವೋ ಧರ್ತಾರ ಉರ್ವಿಯಾ ಪರಿ ಖ್ಯನ್ ॥ ೨ ॥

॥ ಪದಪಾಠಃ ।

ನ । ತೇ । ಸಖಾ । ಸಖ್ಯಂ । ವಷ್ಟಿ । ಏತತ್ । ಸSಲಕ್ಷ್ಮಾ । ಯತ್ । ವಿಷುSರೂಪಾ । ಭವಾತಿ ।
ಮಹಃ । ಪುತ್ರಾಸಃ । ಅಸುರಸ್ಯ ॥ ವೀರಾಃ । ದಿವಃ। ಧರ್ತಾರಃ । ಉರ್ವಿಯಾ । ಪರಿ । ಖ್ಯನ್ ॥ ೨ ॥

। ಸಾಯಣಭಾಷ್ಯಂ ।

ಯಮ ಆತ್ಮಾನಂ ಪರೋಕ್ಷೀಕೃತ್ಯ ಯಮೀಂ ಪ್ರತ್ಯುವಾಚ । ಹೇ ಯಮಿ ತೇ ತವ ಸಖಾ ಗರ್ಭವಾಸಲಕ್ಷಣೇನ ಸಖೀಭೂತೋ ಯಮ ಏತದೀದೃಶಂ ತ್ವಯೋಕ್ತಂ ಸ್ತ್ರೀಪುರುಷಲಕ್ಷಣಂ ಸಖ್ಯಂ ನ ವಷ್ಟಿ। ನ ಕಾಮಯತೇ। ಯದ್ಯಸ್ಮಾತ್ಕಾರಣಾದ್ಯಮೀ ಸಲಕ್ಷ್ಮಾ ಸಮಾನಯೋನಿತ್ವಲಕ್ಷಣಾ ವಿಷುರೂಪಾ ಭಗಿನೀತ್ವಾದ್ವಿಷಮರೂಪಾ ಭವಾತಿ ಭವತಿ । ತಸ್ಮಾನ್ನ ವಷ್ಟೀತ್ಯರ್ಥಃ । ಇದಾನೀಂ ತಿರಃ ಪುರೂ ಚಿದರ್ಣವಂ ಜಗನ್ವಾನಿತ್ಯಸ್ಯ ಪ್ರತಿವಚನಮುಚ್ಯತೇ । ಮಹೋ ಮಹತೋऽಸುರಸ್ಯ ಪ್ರಾಣವತಃ ಪ್ರಜ್ಞಾವತೋ ವಾ ಪ್ರಜಾಪತೇಃ ಪುತ್ರಾಸಃ ಪುತ್ರಭೂತಾ ವೀರಾಃ । ವೀರೋ ವೀರಯತ್ಯಮಿತ್ರಾನ್ವೇತೇರ್ವಾ ಸ್ಯಾದ್ಗತಿಕರ್ಮಣೋ ವೀರಯತೇರ್ವಾ । ನಿ. ೧-೭ । ಇತಿ ನಿರುಕ್ತಂ । ಶತ್ರೂಣಾಂ ವಿವಿಧಮೀರಯಿತಾರೋ ಧರ್ತಾರೋ ಧಾರಯಿತಾರೋ ದಿವೋ ದ್ಯುಲೋಕಸ್ಯ । ಪ್ರದರ್ಶನಮೇತತ್ । ದ್ಯುಪ್ರಭೃತೀನಾಂ ದ್ಯುಲೋಕಾನಾಮಿತ್ಯರ್ಥಃ ॥ .... .... .... ॥ [ಧರ್ತಾರಃ ಉರ್ವಿಯಾ ಉರವಃ ಮಾಂ ಪರಿಚಕ್ಷತೇ ನ ಕರ್ತವ್ಯಮಿತಿ ವದಂತಿ]

॥ ಪ್ರತಿಪದಾರ್ಥ ॥

(ಎಲೈ ಯಮಿಯೇ) **ಯತ್**—ಯಾವ ಕಾರಣದಿಂದ । **ವಿಷುರೂಪಾ**—ಸ್ತ್ರೀಯಾದುದರಿಂದ ನನಗಿಂತಲೂ ಭಿನ್ನರೂಪಳಾವ ನೀನು । **ಸಲಕ್ಷ್ಮಾ ಭವಾತಿ**—ಒಂದೇ ಯೋನಿಯಲ್ಲಿ ಉತ್ಪನ್ನಳಾಗಿರುವೆಯೋ ಆದುದರಿಂದ । **ತೇ**—ನಿನ್ನ । **ಸಖಾ**—ಆಪ್ತನಾದ ನಾನು । **ಏತತ್**—ನಿನ್ನಿಂದ ನಿರ್ದಿಷ್ಟವಾದ । **ಸಖ್ಯಂ**—ಸಂಬಂಧವನ್ನು । **ನ ವಷ್ಟಿ**—ಅಪೇಕ್ಷಿಸುವುದಿಲ್ಲ । **ಮಹಃ**—ಮಹಾತ್ಮನಾದ । **ಅಸುರಸ್ಯ**—ಪ್ರಜಾಪತಿಯ । **ಪುತ್ರಾಸಃ**—ಪುತ್ರರೂ । **ವೀರಾಃ**—ಪರಾಕ್ರಮವುಳ್ಳವರೂ । **ದಿವಃ**—ದ್ಯುಲೋಕದ । **ಧರ್ತಾರಃ**—ಧಾರಕರೂ । **ಉರ್ವಿಯಾ**—ಅತ್ಯಧಿಕರೂ ಆದ ದೇವತೆಗಳು । **ಪರಿ ಖ್ಯನ್**—ಈ ಕಾರ್ಯವನ್ನು ನಿಷೇಧಿಸುವಂತೆ ಹೇಳುತ್ತಾರೆ.

॥ ಭಾವಾರ್ಥ ॥

ಎಲೈ ಯಮಿಯೇ, ಯಾವ ಕಾರಣದಿಂದ ನನಗಿಂತಲೂ ಭಿನ್ನರೂಪಳಾದ ನೀನು (ಸ್ತ್ರೀರೂಪಳಾದರೂ) ಒಂದೇ ಯೋನಿಯಲ್ಲಿ ಉತ್ಪನ್ನಳಾಗಿರುವೆಯೋ, ಆದುದರಿಂದ ನಿನ್ನ ಆಪ್ತನಾದ ನಾನು ನಿನ್ನಿಂದ ನಿರ್ದಿಷ್ಟವಾದ

ಸಂಬಂಧವನ್ನು ಅಪೇಕ್ಷಿಸುವುದಿಲ್ಲ. ಮಹಾತ್ಮನಾದ ಪ್ರಜಾಪತಿಯ ಪುತ್ರರೂ ಪರಾಕ್ರಮವುಳ್ಳವರೂ, ದ್ಯುಲೋಕದ ಧಾರಕರೂ ಅತ್ಯಧಿಕರೂ ಆದ ದೇವತೆಗಳು ಈ ಕಾರ್ಯವನ್ನು ನಿಷೇಧಿಸುವಂತೆ ಹೇಳುತ್ತಾರೆ.

English Translation

(Yama speaks). Your friend desires not this friendship, for although of one origin, she is of different form; the hero sons of the great Asura (prajapati) the upholders of heaven, enjoying vast renown, do not permit this intercourse.

॥ ಸಂಹಿತಾಪಾಠಃ ॥

ಉಶಂತಿ ಘಾ ತೇ ಅಮೃತಾಸ ಏತದೇಕಸ್ಯ ಚಿತ್ತ್ಯಜಸಂ ಮರ್ತ್ಯಸ್ಯ ।
ನಿ ತೇ ಮನೋ ಮನಸಿ ಧಾಯ್ಯಸ್ಮೇ ಜನ್ಯುಃ ಪತಿಸ್ತನ್ವ೧ಮಾ ವಿವಿಶ್ಯಾಃ ॥

॥ ಪದಪಾಠಃ ॥

ಉಶಂತಿ । ಘ । ತೇ । ಅಮೃತಾಸಃ । ಏತತ್ । ಏಕಸ್ಯ । ಚಿತ್ । ತ್ಯಜಸಂ । ಮರ್ತ್ಯಸ್ಯ ।
ನಿ । ತೇ । ಮನಃ । ಮನಸಿ । ಧಾಯಿ । ಅಸ್ಮೇ ಇತಿ । ಜನ್ಯುಃ । ಪತಿಃ । ತನ್ವಂ । ಆ । ವಿವಿಶ್ಯಾಃ ॥ ೩ ॥

॥ ಸಾಯಣಭಾಷ್ಯಂ ॥

ಪುನರಪಿ ಯಮೀ ಯಮಂ ಪ್ರತ್ಯುವಾಚ । ಘೇತಿ ನಿಪಾತೋಽಪ್ಯರ್ಥೇ । ಹೇ ಯಮ ತೇ ಪ್ರಸಿದ್ಧಾ ಅಮೃತಾಸಃ ಪ್ರಜಾಪತ್ಯಾದಯೋಽಪಿ ದೇವಾ ಏತದೀದೃಶಂ ಶಾಸ್ತ್ರೇಣಾಗಮ್ಯತ್ವೇನೋಕ್ತಂ ತ್ಯಜಸಂ । ತ್ಯಜ್ಯತೇ ಪರಸ್ಮೈ ಪ್ರದೀಯತ ಇತಿ ತ್ಯಜಸಂ ದುಹಿತೃಭಗಿನ್ಯಾದಿಸ್ತ್ರೀಜಾತಂ । ಉಶಂತಿ । ಕಾಮಯಂತೇ । ಏಕಸ್ಯ ಚಿತ್ ಸರ್ವಸ್ಯ ಜಗತೋ ಮುಖ್ಯಸ್ಯಾಪಿ ಪ್ರಜಾಪತ್ಯಾದೇಃ ಸ್ವದುಹಿತೃಭಗಿನ್ಯಾದೀನಾಂ ಸಂಬಂಧೋಽಸ್ತೀತಿ ಶೇಷಃ । ಅತಃ ಕಾರಣಾತ್ತೇ ತವ ಮನಶ್ಚಿತ್ತಮಸ್ಮೇ ಅಸ್ಮಾಕಂ । ಮಮೇತ್ಯರ್ಥಃ । ಮನಸಿ ಚಿತ್ತೇ ನಿ ಧಾಯಿ । ನಿಧೀಯತಾಂ । ಅಹಂ ತ್ವಾಂ ಕಾಮಯೇ ತ್ವಂ ಮಾಮಪಿ ಕಾಮಯಸ್ವೇತ್ಯರ್ಥಃ । ಅಪಿ ಚ । ಜನ್ಯುರಿತಿ ಲುಪ್ತೋಪಮಮೇತತ್ । ಜನ್ಯುರಿವ ಯಥಾ ಜನಯಿತಾ ಪ್ರಜಾಪತಿಃ ಪತಿರ್ಭರ್ತಾ ಭೂತ್ವಾ ಸ್ವದುಹಿತುಃ ಶರೀರಂ ಸಂಭೋಗೇನಾವಿಷ್ಟವಾನ್ ತಥಾ ತ್ವಮಪಿ ಮಮ ಪತಿರ್ಭೂತ್ವಾ ತನ್ವಂ ಮದೀಯಂ ಶರೀರಮಾ ವಿವಿಶ್ಯಾಃ । ಸಂಭೋಗೇನಾವಿಶ । ಯೋನೌ ಪ್ರಜನನಪ್ರಕ್ಷೇಪೋಪಗೂಹನಚುಂಬನಾದಿನಾ ಮಾಂ ಸಂಭುಕ್ಷ್ವೇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಯಮನೇ) **ತೇ**—ಪ್ರಸಿದ್ಧರಾದ । **ಅಮೃತಾಸಃ**—ದೇವತೆಗಳೂ ಕೂಡ । **ಏತತ್**—ಇಂತಹ । **ತ್ಯಜಸಂ**—ತ್ಯಾಜ್ಯವಾದ ಭಗಿನ್ಯಾದಿಸಂಬಂಧವನ್ನೂ ಸಹ । **ಉಶಂತಿ**—ಅಪೇಕ್ಷಿಸುತ್ತಾರೆ । **ಏಕಸ್ಯ ಚಿತ್**—ವಿಶ್ವಕ್ಕೆಲ್ಲ ಪ್ರಭುವಾದ ಪ್ರಜಾಪತಿಯ ವಿಷಯದಲ್ಲೂ ಇಂತಹ ಸಂಬಂಧವು ಪ್ರಸಿದ್ಧವಾಗಿದೆ । **ತೇ**—ನಿನ್ನ । **ಮನಃ**—ಮನಸ್ಸು । **ಅಸ್ಮೇ**—ನನ್ನ । **ಮನಸಿ**—ಮನಸ್ಸಿನೊಡನೆ । **ನಿ ಧಾಯಿ**—ಒಂದಾಗಿಸಲ್ಪಡಲಿ । **ಜನ್ಯುಃ**—ಸರ್ವಜನಕನಾದ ಪ್ರಜಾಪತಿಯು ಹೇಗೆ ತನ್ನ ದುಹಿತೃವಿಗೆ ಪತಿಯಾಗಿ ಅವಳ ಶರೀರಕ್ಕೆ ಸೌಖ್ಯವನ್ನುಂಟುಮಾಡಿದನೋ ಅದರಂತೆ । **ತನ್ವಂ**—ನನ್ನ ಶರೀರವನ್ನು । **ಆ ವಿವಿಶ್ಯಾಃ**—ಪ್ರವೇಶಿಸಿ ಅದನ್ನು ಸುಖಯುಕ್ತವನ್ನಾಗಿ ಮಾಡು.

॥ ಭಾವಾರ್ಥ

ಎಲೈ ಯಮನೇ, ಪ್ರಸಿದ್ಧರಾದ ದೇವತೆಗಳೂ ಕೂಡ ಇಂತಹ ತ್ಯಾಜ್ಯವಾದ ಭಗಿನ್ಯಾದಿಸಂಬಂಧವನ್ನು ಅಪೇಕ್ಷಿಸುತ್ತಾರೆ. ವಿಶ್ವಕ್ಕೆಲ್ಲ ಪ್ರಭುವಾದ ಪ್ರಜಾಪತಿಯ ವಿಷಯದಲ್ಲೂ ಇಂತಹ ಸಂಬಂಧವು ಪ್ರಸಿದ್ಧವಾಗಿದೆ. ನಿನ್ನ ಮನಸ್ಸು ನನ್ನ ಮನಸ್ಸಿನೊಡನೆ ಒಂದಾಗಲಿ. ಸರ್ವಜನಕನಾದ ಪ್ರಜಾಪತಿಯು ತನ್ನ ದುಹಿತೃವಿಗೆ ಪತಿಯಾಗಿ ಅವಳ ಶರೀರಕ್ಕೆ ಯಾವರೀತಿ ಸೌಖ್ಯವನ್ನುಂಟುಮಾಡಿದನೋ ಅದರಂತೆ ನನ್ನ ಶರೀರವನ್ನು ಪ್ರವೇಶಿಸಿ ಅದನ್ನು ಸುಖಯುಕ್ತವನ್ನಾಗಿ ಮಾಡು.

English Translation

(Yami speaks). Even the immortals take pleasure in (a union) like this which is forbidden to every mortal; let your mind then concur with mine, and as prajapati the progenitor (of all) was the husband (of his own daughter), so you enjoy my person.

॥ ವಿಶೇಷವಿಷಯಗಳು ॥

ಈ ಸುಕ್ತಿನಲ್ಲಿ ಯಮಿಯು ಯಮನನ್ನು ತನ್ನೊಡನೆ ಸಂಭೋಗಿಸುವಂತೆ ಪ್ರೇರಿಸುತ್ತಾ ಇರುವಾಗ ಯಮನು ಸಹೋದರಸಹೋದರಿಯರು ಪರಸ್ಪರ ಸಂಭೋಗಮಾಡುವುದು ನಿಷಿದ್ಧವೆಂದು ಹೇಳಲು ಅದಕ್ಕೆ ಪ್ರತಿಯಾಗಿ ಯಮಿಯು—ದೇವತೆಗಳೇ ಇಂತಹ ಅನೇಕ ನಿಷಿದ್ಧಕಾರ್ಯಗಳನ್ನು ಮಾಡಿರುವರು, ನಾವು ಏತಕ್ಕೆ ಮಾಡಬಾರದು ? ಅದರಿಂದ ದೋಷವೇನೂ ಇಲ್ಲ. ಪೂರ್ವದಲ್ಲಿ ಸೃಷ್ಟಿಕರ್ತನಾದ ಪ್ರಜಾಪತಿಯೇ ತನ್ನ ಮಗಳಲ್ಲಿ ಮೋಹಗೊಂಡು ಕ್ರೀಡಿಸಲಿಲ್ಲವೇ ? ಎಂದು ದೇವತೆಗಳು ಮಾಡಿದ ಅಕೃತ್ಯವನ್ನು ಉದಾಹರಣೆಯಾಗಿ ಹೇಳಿರುತ್ತಾಳೆ. ಆದ್ದರಿಂದ, ಪ್ರಜಾಪತಿಯು ತನ್ನ ಪುತ್ರಿಯಲ್ಲಿ ರಮಿಸಿದನೆಂದು ಹೇಳಿರುವ ವೃತ್ತಾಂತವನ್ನು ಇಲ್ಲಿ ಸೂಚಿಸುವುದು ಆವಶ್ಯಕವಾಗಿದೆ. ಈ ವಿಷಯವು ಐತರೇಯ ಬ್ರಾಹ್ಮಣದ ೧೩ ನೆಯ ಅಧ್ಯಾಯದ ಎಂಟನೆಯ ಖಂಡದಲ್ಲಿ ಉಕ್ತವಾಗಿರುವುದನ್ನು ಇಲ್ಲಿ ವಿವರಿಸುತ್ತೇವೆ—

**ಪ್ರಜಾಪತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯದ್ದಿವಮಿತ್ಯನ್ಯ ಆಹುರುಷಸಮಿತ್ಯನ್ಯೇ ತಾಮೃಶ್ಯೋ ಭೂತ್ವಾ ರೋಹಿತಂ ಭೂತಾಮಭ್ಯೈತ್ತಂ ದೇವಾ ಅಪಶ್ಯನ್ನಕೃತಂ ವೈ ಪ್ರಜಾಪತಿಃ ಕರೋತೀತಿ ತೇ ತಮೈಚ್ಛನ್ಯ ಏನಮಾರಿಷ್ಯತ್ಯೇತಮನ್ಯೋನ್ಯಸ್ಮಿನ್ನಾವಿಂದಂಸ್ತೇಷಾಂ ಯಾ**

**ಏವ ಘೋರತಮಾಸ್ತನ್ವ ಆಸಂಸ್ತಾ ಏಕಧಾ ಸಮಭರಂಸ್ತಾಃ ಸಂಭೃತಾ ಏಷ ದೇವೋಽಭವತ್ತದಸ್ಯೈತದ್ಭೂತವನ್ನಾಮ ಭವತಿ ವೈ ಸ ಯೋಽಸ್ಯೈತದೇವಂ ನಾಮ ವೇದ ||**

(ಐ. ಬ್ರಾ. ೧೩-೩೩)

ಪೂರ್ವದಲ್ಲಿ ಸೃಷ್ಟಿಕರ್ತನಾದ ಪ್ರಜಾಪತಿಯು ತನ್ನ ಸ್ವಂತ ಪುತ್ರಿಯನ್ನು ಕಾಮದೃಷ್ಟಿಯಿಂದ ನೋಡಿ ಅವಳಲ್ಲಿ ರಮಿಸ ಬೇಕೆಂದು ಮನಸ್ಸುಮಾಡಿದನು. ಈ ಪುತ್ರಿಯು ಯಾರು ಎಂಬ ವಿಷಯದಲ್ಲಿ ಮತಭೇದವಿದೆ. ಕೆಲವು ಋಷಿಗಳು– ಈ ಪುತ್ರಿಯು ದ್ಯುಲೋಕಾಭಿಮಾನಿದೇವತೆಯೆಂದೂ ಮತ್ತೆ ಕೆಲವರು ಉಷೋದೇವತೆಯೆಂದೂ ಹೇಳುವರು. ಅದು ಹೇಗಾದರೂ ಇರಲಿ. ಬಳಿಕ ಪ್ರಜಾಪತಿಯು ಋಶ್ಯವೆಂಬ ಚುಕ್ಕೆಗಳುಳ್ಳ ಒಂದು ವಿಧವಾದ ಜಿಂಕೆಯ ರೂಪವನ್ನು ಧರಿಸಿದನು. ಪುತ್ರಿಯು ಕೆಂಪುಬಣ್ಣವುಳ್ಳ ಹೆಣ್ಣು ಜಿಂಕೆಯ ರೂಪವನ್ನು ತಾಳಿದಳು. ಅನಂತರ ಪ್ರಜಾಪತಿಯು ಅವಳಲ್ಲಿ ಸಂಭೋಗಕ್ರಿಯೆಯಿಂದ ಕ್ರೀಡಿಸಿದನು. ಈ ರೀತಿ ದುಷ್ಕೃತ್ಯದಲ್ಲಿ ನಿರತನಾಗಿದ್ದ ಪ್ರಜಾಪತಿಯನ್ನು ದೇವತೆಗಳು ನೋಡಿ ತಮ್ಮ ತಮ್ಮಲ್ಲಿ ಹೀಗೆ ಮಾತನಾಡಿಕೊಂಡರು—ಸೃಷ್ಟಿಕರ್ತನಾದ ಈ ಪ್ರಜಾಪತಿಯೇ ಇಂತಹ ಸರ್ವರಿಂದಲೂ ನಿಷಿದ್ಧವಾದ ಅಕೃತ್ಯವನ್ನು ಮಾಡುತ್ತಿರುವನು. ಇದನ್ನು ಮಾಡಬೇಡವೆಂದು ತಡೆದು ಅವನಿಗೆ ತಕ್ಕ ಶಿಕ್ಷೆಯನ್ನು ಮಾಡಬೇಕೆಂದು ನಿಶ್ಚಯಿಸಿ ತಮ್ಮಲ್ಲಿ ಈ ಕಾರ್ಯವನ್ನು ಧೈರ್ಯದಿಂದ ಮಾಡಲು ಸಮರ್ಥರಾದವರು ಯಾರೆಂದು ಪ್ರತಿಯೊಬ್ಬರನ್ನೂ ಪ್ರಶ್ನಿಸಲಾಗಿ ಅಂತಹ ಸಮರ್ಥರು ತಮ್ಮಲ್ಲಿ ಯಾರೂ ಇಲ್ಲವೆಂದು ತಿಳಿಯಬಂದಿತು. ಆದ್ದರಿಂದ ಅವರೆಲ್ಲರೂ ಸೇರಿ ಒಂದು ಉಪಾಯವನ್ನು ಮಾಡಿದರು. ದೇವತೆಗಳಲ್ಲಿ ಅತ್ಯುಗ್ರವಾದ ಎಂದರೆ ಘೋರರೂಪವುಳ್ಳವರೆಲ್ಲರೂ ತಮ್ಮ ತಮ್ಮ ಘೋರರೂಪಗಳನ್ನು ಒಂದಾಗಿ ಸೇರಿಸಿ ಒಂದು ಆಕೃತಿಯನ್ನಾಗಿ ಮಾಡಲು, ಅದು ಬಹಳ ಭಯಂಕರಾಕಾರವುಳ್ಳ ಪುರುಷನಾಗಿರುವುದನ್ನು ಕಂಡು ಅವನನ್ನು ರುದ್ರನೆಂದು ಕರೆದರು. ಆ ರುದ್ರನ ಶರೀರಾಕೃತಿಯು ಭೂತಾಕಾರವಾಗಿ ಭಯಂಕರವಾಗಿದ್ದುದರಿಂದ ಅವನಿಗೆ ಭೂತವಾನ್ ಎಂದರೆ ಭೂತಪತಿ ಎಂದೂ ಹೆಸರಾಯಿತು. ಈ ವಿಷಯವನ್ನು ತಿಳಿದವನು ಭೂತಿಮಾನ್ ಎಂದರೆ ಐಶ್ವರ್ಯವಂತನಾಗುವನು.

**ತಂ ದೇವಾ ಅಬ್ರುವನ್ನಯಂ ವೈ ಪ್ರಜಾಪತಿರಕೃತಮಕರಿಮಂ ವಿಧ್ಯೇತಿ ಸ ತಥೇತ್ಯಬ್ರವೀತ್ಸ ವೈ ವೋ ವರಂ ವೃಣಾ ಇತಿ ವೃಣೀಷ್ವೇತಿ ಸ ಏತಮೇವ ವರಮವೃಣೀತ ಪಶೂನಾಮಾಧಿಪತ್ಯಂ ತದಸ್ಯೈತತ್ಪಶುಮನ್ನಾಮ ಪಶುಮಾನ್ಭವತಿ ಯೋಽಸ್ಯೈತದೇವಂ ನಾಮ ವೇದ ||**

ಬಳಿಕ ದೇವತೆಗಳು ಭಯಂಕರಾಕಾರದಿಂದಿದ್ದ ರುದ್ರನನ್ನು ನೋಡಿ–ಎಲೈ ರುದ್ರನೇ, ಪ್ರಜಾಪತಿಯು ತನ್ನ ಪುತ್ರಿಯಲ್ಲಿಯೇ ಅನುರಕ್ತನಾಗಿ ಲೋಕವಿರುದ್ಧವಾದ ಅಕರ್ಮಾಚರಣೆಯನ್ನು ಮಾಡಿರುವನು ಆದ್ದರಿಂದ ಇವನನ್ನು ಶಿಕ್ಷಿಸಲು ನಿನ್ನ ಬಾಣದಿಂದ ಇವನನ್ನು ಪ್ರಹರಿಸು ಎಂದು ಪ್ರಾರ್ಥಿಸಿದರು. ಆಗ ರುದ್ರನು—ಒಳ್ಳೇದು, ಹಾಗೆಯೇ ಮಾಡುವೆನು. ಆದರೆ ಈ ಕೆಲಸಮಾಡುವುದಕ್ಕಾಗಿ ನನಗೆ ಒಂದು ವರವನ್ನು ಕೊಡಬೇಕೆನಲು ದೇವತೆಗಳು ಅದಕ್ಕೊಪ್ಪಿ ನಿನಗೆ ಬೇಕಾದ ವರವನ್ನು ಕೇಳೆಂದರು. ರುದ್ರನು– ನಾನು ಪಶುಗಳಿಗೆಲ್ಲಾ ಒಡೆಯನಾಗಬೇಕು. ಎಂದರೆ ಪಶುಗಳ ಆಧಿಪತ್ಯವನ್ನು ಪಡೆದು ಪಶುಪತಿ ಎಂಬ ಹೆಸರಿನಿಂದ ಪ್ರಸಿದ್ಧನಾಗಬೇಕು. ಇದೇ ನಾನು ಕೇಳುವ ವರವು ಎನ್ನಲು, ದೇವತೆಗಳು ಅದಕ್ಕೆ ಸಮ್ಮತಿಸಿ ಹಾಗೆಯೇ ಆಗಲೆಂದು ವರವನ್ನು ಕೊಟ್ಟರು. ಈ ವಿಷಯವನ್ನು ತಿಳಿದವನು-ಗೋವುಗಳೇ ಮೊದಲಾದ ಪಶುಸಂಪತ್ತನ್ನು ಪಡೆದು ಸುಖಿಸುವನು.

**ತಮಭ್ಯಾಯತ್ಯಾವಿಧ್ಯತ್ಸ ವಿದ್ಧ ಊರ್ಧ್ವ ಉದಪ್ರಪತತ್ತಮೇತಂ ಮೃಗ ಇತ್ಯಾಚಕ್ಷತೇ ಯ ಉ ಏವ ಮೃಗವ್ಯಾಧಃ ಸ ಉ ಏವ ಸ ಯಾ ರೋಹಿತ್ಸಾ ರೋಹಿಣೀ ಯೋ ಏವೇಷುಸ್ತ್ರಿಕಾಂಡಾ ಸೋ ಏವೇಷುಸ್ತ್ರಿಕಾಂಡಾ |**

ಅನಂತರ ರುದ್ರನು ತನ್ನ ಧನುಸ್ಸಿನಲ್ಲಿ ಬಾಣವನ್ನು ಹೂಡಿ ಹೆದೆಯನ್ನು ಕಿವಿಯವರೆಗೂ ಎಳೆದು ಮೃಗರೂಪದಲ್ಲಿದ್ದ ಪ್ರಜಾಪತಿಯ ಕಡೆಗೆ ಗುರಿಯಿಟ್ಟು ಹೊಡೆದನು. ಆ ಬಾಣದಿಂದ ನೊಂದ ಪ್ರಜಾಪತಿಯು ಮೃಗರೂಪದಿಂದಲೇ ಊರ್ಧ್ವಾಭಿಮುಖವಾಗಿ ಆಕಾಶಕ್ಕೆ ನೆಗೆದನು. ಇದನ್ನು ನೋಡಿದ ಜನರೆಲ್ಲರೂ ಆಕಾಶದಲ್ಲಿ ಮೃಗರೂಪದಿಂದಿರುವ ಪ್ರಜಾಪತಿಯೇ ರೋಹಿಣೀ ಮತ್ತು ಆರ್ದ್ರಾನಕ್ಷತ್ರಗಳ ಮಧ್ಯದಲ್ಲಿ ಮೃಗಶೀರ್ಷಾ ನಕ್ಷತ್ರರೂಪದಿಂದ (stars in the Orion) ಪ್ರಕಾಶಿಸುತ್ತಿರುವನೆಂದು ಹೇಳುವರು. ಪ್ರಜಾಪತಿಯನ್ನು ಬಾಣದಿಂದ ಪ್ರಹರಿಸಿದ ರುದ್ರನು ಮೃಗವ್ಯಾಧನೆಂಬ ಹೆಸರಿನಿಂದ ಪ್ರಸಿದ್ಧನಾದನು. ಆಕಾಶದಲ್ಲಿ ನಕ್ಷತ್ರಗಳ ಮಧ್ಯದಲ್ಲಿ ಕಾಣುತ್ತಿರುವ ಲೋಕಪ್ರಸಿದ್ಧವಾದ ಮೃಗವ್ಯಾಧನೇ (name of star) ಇವನು ಎಂದು ಪ್ರಸಿದ್ಧಿಯಾಯಿತು. ಕೆಂಪುಜಿಂಕೆಯ ರೂಪದಿಂದಿದ್ದ ಪ್ರಜಾಪತಿಯ ಪುತ್ರಿಯು ಆಕಾಶದಲ್ಲಿ ರಕ್ತವರ್ಣದಿಂದ ಬೆಳಗುವ ರೋಹಿಣೀ ನಕ್ಷತ್ರವಾದಳು (constellation) ರುದ್ರನು ಬಿಟ್ಟ ಬಾಣದಲ್ಲಿ, ಕಾಂಡ, ಲೋಹ, ತುದಿ (shaft, steel and point) ಎಂಬ ಮೂರು ಭಾಗಗಳು ಈಗಲೂ ಜನರು ಉಪಯೋಗಿಸುವ ಬಾಣಗಳಲ್ಲಿ ಸೇರಿ ಉಪಯೋಗಿಸಲ್ಪಡುವವು.

**ತದ್ವಾ ಇದಂ ಪ್ರಜಾಪತೇ ರೇತಃ ಸಿಕ್ತಮಧಾವತ್ತತ್ಸರೋಽಭವತ್ತೇ ದೇವಾ ಅಬ್ರುವನ್ಮೇದಂ ಪ್ರಜಾಪತೇ ರೇತೋ ದುಷದಿತಿ ಯದಬ್ರುವನ್ಮೇದಂ ಪ್ರಜಾಪತೇ ರೇತೋ ದುಷದಿತಿ ತನ್ಮಾದುಷಮಭವತ್ತನ್ಮಾದುಷಸ್ಯ ಮಾದುಷತ್ವಂ ಮಾದುಷಂ ಹ ವೈ ನಾಮೈತದ್ಯನ್ಮಾನುಷಂ ತನ್ಮಾನುಷಮಿತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ॥**

(ಐ. ಬ್ರಾ. ೧೩-೩೩)

ಮೃಗರೂಪದಲ್ಲಿದ್ದ ಪ್ರಜಾಪತಿಯು ಹೆಣ್ಣುಜಿಂಕೆಯ ರೂಪದಲ್ಲಿದ್ದ ತನ್ನ ಪುತ್ರಿಯಲ್ಲಿ ಸೇಚನ ಮಾಡಿದ ವೀರ್ಯವು ಬಹಳವಾಗಿದ್ದುದರಿಂದ ಭೂಮಿಯ ಮೇಲೆ ಬಿದ್ದು ಪ್ರವಾಹರೂಪದಿಂದ ಹರಿಯುತ್ತಾ ತಗ್ಗಾದ ಒಂದು ಪ್ರದೇಶದಲ್ಲಿ ನಿಂತಿತು. ಅದು ಒಂದು ದೊಡ್ಡ ಸರೋವರವಾಗಿ ಪರಿಣಮಿಸಿತು. ಇದನ್ನು ನೋಡಿದ ದೇವತೆಗಳು ಈ ಪ್ರಜಾಪತಿಯ ರೇತಸ್ಸು ದೂಷ್ಯವಾದದ್ದಲ್ಲ, ಅಸ್ಪೃಶ್ಯವೂ ಅಲ್ಲ, ಎಂದು ಇದನ್ನು ಪ್ರಶಂಸೆ ಮಾಡಿದುದರಿಂದ ಈ ವೀರ್ಯವು ಮಾದುಷಂ (ದೂಷ್ಯವಾದದ್ದಲ್ಲ) ಎಂಬ ಹೆಸರಿನಿಂದಲೇ ಪ್ರಸಿದ್ಧವಾಯಿತು. ವಸ್ತುತಃ ಈ ವೀರ್ಯವು ದೋಷರಹಿತವಾದದ್ದರಿಂದ ಇದನ್ನು ಮಾದುಷವೆಂದು ಕರೆಯುವುದೇ ನ್ಯಾಯವು. ಜನರು ಮಾತನಾಡುವಾಗ ಮಾದುಷ ಎಂಬ ಶಬ್ದದಲ್ಲಿರುವ ದು ಎಂಬ ಅಕ್ಷರಕ್ಕೆ ಬದಲಾಗಿ ನು ಎಂಬ ಅಕ್ಷರ ವ್ಯತ್ಯಯದಿಂದ ಮಾನುಷ ಎಂದು ಉಚ್ಚರಿಸುವರು. ಆದ್ದರಿಂದ ಪ್ರಜಾಪತಿಯ ವೀರ್ಯದಿಂದ ಉತ್ಪನ್ನರಾದ ಬ್ರಾಹ್ಮಣ ಕ್ಷತ್ರಿಯಾದಿ ಶರೀರಗಳು ಮಾನುಷವೆಂದೇ ಹೇಳಲ್ಪಡುವುವು. ಮನುಷ್ಯರಿಗೆ ಮಾನುಷ ಎಂದು ಹೆಸರು ಬರಲು ಇದೇ ಕಾರಣವು. ಆದರೆ ದೇವತೆಗಳ ವಿಷಯವು ಹಾಗಲ್ಲ. ಅವರು ಮಾದುಷಶಬ್ದದಲ್ಲಿ ವರ್ಣವ್ಯತ್ಯಯವನ್ನು ಮಾಡದೆ ಮಾದುಷವೆಂದೇ ವ್ಯವಹರಿಸುವರು. ಈ ಮಾದುಷ ಶಬ್ದವು ಸಾಧಾರಣವಾಗಿ ಬಳಕೆಯಲ್ಲಿರುವುದಿಲ್ಲ. ಏಕೆಂದರೆ ದೇವತೆಗಳು ಪರೋಕ್ಷಪ್ರಿಯರಾದ್ದರಿಂದ ಇದ್ದುದನ್ನು ಇದ್ದಂತೆಯೇ ಎಂದರೆ ಸ್ಪಷ್ಟವಾಗಿ ತಿಳಿಯುವಂತೆ ಹೇಳದೆ ಶಬ್ದಗಳನ್ನು ಗೂಢಾರ್ಥಯುಕ್ತವಾಗಿಯೇ ಉಪಯೋಗಿಸಲು ಇಚ್ಛಿಸುವರು.

**ತದಗ್ನಿನಾ ಪರ್ಯಾದಧುಸ್ತನ್ಮರುತೋಽಧೂನ್ವಂಸ್ತದಗ್ನಿರ್ನ ಪ್ರಾಚ್ಯಾವಯತ್ತದಗ್ನಿನಾ ವೈಶ್ವಾನರೇಣ ಪರ್ಯಾದಧುಸ್ತನ್ಮರುತೋಽಧೂನ್ವಂಸ್ತದಗ್ನಿರ್ವೈಶ್ವಾನರಃ ಪ್ರಾಚ್ಯಾವಯತ್ತಸ್ಯ ಯದ್ರೇತಸಃ ಪ್ರಥಮಮುದದೀಪ್ಯತ ತದಸಾವಾದಿತ್ಯೋಽಭವದ್ಯದ್ದ್ವಿತೀಯಮಾಸೀತ್ತ-**

**ದ್ಭೃಗುರಭವತ್ತಂ ವರುಣೋ ನ್ಯಗೃಹ್ಣೀತ ತಸ್ಮಾತ್ಸ ಭೃಗುರ್ವಾರುಣಿರಥ ಯತ್ತೃತೀಯ-**
**ಮದೀದೇದಿವ ತ ಆದಿತ್ಯಾ ಅಭವನ್ಯೇಽಙ್ಗಾರಾ ಆಸಂಸ್ತೇಽಙ್ಗಿರಸೋಽಭವನ್ಯದಂಗಾರಾಃ**
**ಪುನರವಶಾಂತಾ ಉದದೀಪ್ಯಂತ ತದ್ಬೃಹಸ್ಪತಿರಭವತ್ ।**

(ಐ. ಬ್ರಾ. ೧೩-೩೪)

ಸರೋವರ ರೂಪದಲ್ಲಿ ನಿಂತಿದ್ದ ಪ್ರಜಾಪತಿಯ ರೇತಸ್ಸನ್ನು ದೇವತೆಗಳು ದೋಷರಹಿತವನ್ನಾಗಿ ಮಾಡಿದನಂತರ ಅದು ದ್ರವರೂಪದಲ್ಲಿಯೇ ಇದ್ದರೆ ಅದನ್ನು ಕಾಪಾಡುವುದು ಕಷ್ಟವೆಂದು ಯೋಚಿಸಿ ಅದರಲ್ಲಿರುವ ದ್ರವವನ್ನು (ನೀರಿನ ಭಾಗವನ್ನು) ಪ್ರತ್ಯೇಕಿಸಬೇಕೆಂದು ಉದ್ದೇಶಿಸಿ ಆ ರೇತಃಸರೋವರದ ಸುತ್ತಲೂ ಅಗ್ನಿಯನ್ನು ಸ್ಥಾಪಿಸಿ ಅದರ ಶಾಖ ದಿಂದ ರೇತಸ್ಸು ಕಾದು ದ್ರವೀಭಾವರಹಿತವಾಗಿ ಘನವಸ್ತುವಾದ ಪಿಂಡಗಳಾಗುವಂತೆ ಪ್ರಯತ್ನಿಸಿದರು. ಅಗ್ನಿಯು ಉರಿಯುತ್ತಿರುವಾಗ ಗಾಳಿಯು ಬೀಸುವುದು ಸಹಜವಷ್ಟೆ. ಮತ್ತು ಗಾಳಿಯಿಂದ ಸರೋವರದ ದ್ರವವು ಬತ್ತಿಹೋಗಲು ಸಹಾಯವಾಗುವುದೆಂದು ಯೋಚಿಸಿ ಅಗ್ನಿಯ ಜತೆಗೆ ದೇವತೆಗಳು ಗಾಳಿಯನ್ನು ಬೀಸುವಂತೆ ಮಾಡಿದರು. ಆದರೆ ಬೀಸುತ್ತಿರುವ ಪ್ರಬಲವಾದ ಗಾಳಿಯಿಂದ ಸರೋವರವು ಅಲ್ಲೋಲಕಲ್ಲೋಲವಾಗಿ ಅಗ್ನಿಯ ಶಾಖವು ಎಷ್ಟಿದ್ದರೂ ರೇತಸ್ಸು ಘನೀಭೂತವಾಗಲಿಲ್ಲ. ದ್ರವರೂಪದಲ್ಲಿಯೇ ಇದ್ದಿತು. ಸರೋವರದಲ್ಲಿದ್ದ ರೇತಸ್ಸಿನಲ್ಲಿ ಬಹಳವಾದ ದ್ರವಾಂಶವಿದ್ದದ್ದರಿಂದ ಅದನ್ನು ಪಿಂಡಾಕಾರಕ್ಕೆ ಪರಿವರ್ತಿಸಲು ಅಗ್ನಿಗೆ ಅಶಕ್ಯವಾಯಿತು. ಅದನ್ನು ಕಂಡು ದೇವತೆಗಳು ಪುನಃ ಆಲೋಚಿಸಿ ವೈಶ್ವಾನರನೆಂಬ ಅಗ್ನಿವಿಶೇಷವನ್ನು ಹಿಂದಿನಂತೆ ಸರೋವರದಸುತ್ತಲೂ ಸ್ಥಾಪಿಸಿದರು. ವೈಶ್ವಾನರನೆಂಬುವುದು ಅಗ್ನಿಯ ಒಂದು ವಿಶೇಷರೂಪವು. ಈ ವೈಶ್ವಾನರಾಗ್ನಿಯೇ ಪ್ರಾಣಿಗಳ ಉದರದಲ್ಲಿ ಶಾಖರೂಪದಿಂದಿದ್ದು ಪ್ರಾಣಿಗಳು ಭುಜಿಸುವ ಆಹಾರಾದಿಗಳನ್ನು ಪಚನಮಾಡುವನು. ಈ ವಿಷಯದಲ್ಲಿ—

**ಅಹಂ ವೈಶ್ವಾನರೋ ಭೂತ್ವಾಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥**

ಎಂದು ಭಗವಂತನೇ ಹೇಳಿದಾನೆ. ಎಂದರೆ ನಾನೇ (ಭಗವಂತನೇ) ವೈಶ್ವಾನರಾಗ್ನಿರೂಪದಿಂದ ಪ್ರಾಣಿಗಳ ದೇಹಗಳಲ್ಲಿ ಪ್ರಾಣ ಅಪಾನ ಎಂಬ ಪ್ರಾಣವಾಯುಗಳೊಡನೆ ಇದ್ದುಕೊಂಡು ಪ್ರಾಣಿಗಳು ಭುಜಿಸುವ ನಾಲ್ಕು ವಿಧವಾದ ಅನ್ನಾದ್ಯಾಹಾರಗಳನ್ನು ಪಚನಮಾಡುತ್ತೇನೆ ಎಂದು ಹೇಳಿರುವುದರಿಂದ ಸಾಮಾನ್ಯಾಗ್ನಿಗಿಂತ ವೈಶ್ವಾನರಾಗ್ನಿಗೆ ವಿಶೇಷ ಶಕ್ತಿ ಸಾಮರ್ಥ್ಯಗಳಿವೆಯೆಂದಾಯಿತು. ಅನಂತರ ಈ ವೈಶ್ವಾನರಾಗ್ನಿಯು ತನ್ನ ಸಾಮರ್ಥ್ಯದಿಂದ ಸರೋವರದಲ್ಲಿದ್ದ ದ್ರವೀಭೂತವಾದ ರೇತಸ್ಸನ್ನು ದ್ರವರಹಿತವನ್ನಾಗಿ ಮಾಡಿ ಘನೀಭೂತವನ್ನಾಗಿ ಅನೇಕ ಪಿಂಡ (ಉಂಡೆ) ಗಳಾಗುವಂತೆ ಪರಿವರ್ತಿಸಿದನು. ವೈಶ್ವನರಾಗ್ನಿಯ ಜ್ವಾಲೆಗಳ ಸಂಪರ್ಕದಿಂದ ಜಾಜ್ವಲ್ಯಮಾನವಾಗಿ ಉರಿಯುತ್ತಿರುವ ಒಂದು (ಮೊದಲನೆಯ) ಪಿಂಡದಿಂದ ಆದಿತ್ಯನ (ಸೂರ್ಯನ) ಆವಿರ್ಭಾವವಾಯಿತು. ಎರಡನೇ ಪಿಂಡದಿಂದ ಭೃಗುಋಷಿಯು ಉತ್ಪನ್ನನಾದನು. ಈ ಭೃಗುಋಷಿಯನ್ನು ವರುಣನು ತನ್ನ ಪುತ್ರನನ್ನಾಗಿ ಪರಿಗ್ರಹಿಸಿದನು. ಆದ್ದರಿಂದಲೇ ತೈತ್ತಿರೀಯಶಾಖೆಯವರು (ಯಜುರ್ವೇದಾಧ್ಯಾಯಿಗಳು) **ಭೃಗುರ್ವೈ ವಾರುಣಿಃ। ವರುಣಂ ಪಿತರಮುಪಸಸಾರ** ಎಂದು ಪಠಿಸುವರು. ಎಂದರೆ ವರುಣದೇವನ ಪುತ್ರನಾದ ಭೃಗುಋಷಿಯು ತನ್ನ ತಂದೆಯಾದ ವರುಣನನ್ನು ಸಮೀಪಿಸಿ ಇಂತು ಪ್ರಶ್ನೆಗೈದನು ಎಂದು ಇದರ ಅರ್ಥವು. ಇದರಿಂದ ಭೃಗುವು ವರುಣನ ಪುತ್ರನೆಂದು ಪ್ರಸಿದ್ಧನಾದನು. ಬಳಿಕ ಉರಿಯುತ್ತಿರುವ ಮೂರನೆಯ ಪಿಂಡದಿಂದ ಆದಿತ್ಯರು ಎಂದರೆ ಆದಿತಿಪುತ್ರರು ಅಥವಾ ದ್ವಾದಶಾದಿತ್ಯರು ಉತ್ಪನ್ನರಾ

ದರು. ಓಂಡಗಳು ಉರಿದ ಬಳಿಕ ಅಲ್ಲಿ ನಿಲ್ಲುವ ಪ್ರಕಾಶಮಾನವಾದ ಕೆಂಡಗಳಿಂದ ಅಂಗಿರಾ ಎಂಬ ಹೆಸರಿನ ಋಷಿಗಳು ಹುಟ್ಟಿದರು. ಆರಿಹೋಗದೆ ಇನ್ನೂ ಸ್ವಲ್ಪ ಸ್ವಲ್ಪ ಉರಿಯುತ್ತಲೇ ಇದ್ದ ಕೆಂಡಗಳಿಂದ ಬೃಹಸ್ಪತಿಯ ಜನನವಾಯಿತು.

**ಯಾನಿ ಪರಿಕ್ಷಾಣಾನ್ಯಾಸಂಸ್ತೇ ಕೃಷ್ಣಾಃ ಪಶವೋಽಭವನ್ಯಾ ಲೋಹಿನೀ ಮೃತ್ತಿಕಾ ತೇ ರೋಹಿತಾ ಅಥ ಯದ್ಭಸ್ಮಾಸೀತ್ತತ್ಪರುಷ್ಯಂ ವ್ಯಸರ್ಪದ್ಗೌರೋ ಗವಯ ಋಶ್ಯ ಉಷ್ಟ್ರೋ ಗರ್ದಭ ಇತಿ ಯೇ ಚೈತೇಽರುಣಾಃ ಪಶವಸ್ತೇ ಚ ॥**
(ಐ ಬ್ರಾ. ೧೩-೩೪)

ಕೆಂಡಗಳು ಆರಿಹೋಗಿ ಅದರಿಂದುಂಟಾದ ಕಪ್ಪುಬಣ್ಣದ ಇಜ್ಜಲುಗಳಿಂದ ಕಪ್ಪುಬಣ್ಣದ ಮೃಗಗಳು ಉತ್ಪನ್ನವಾದವು. ಅಗ್ನಿಯ ಕಾವಿನಿಂದ ಭೂಮಿಯು ಕೆಂಪಾಗಿ ಅದರಿಂದ ಕೆಂಪುಬಣ್ಣದ ಪಶುಗಳು ಉತ್ಪನ್ನವಾದವು ಬೆಂಕಿಯು. ಪೂರ್ತಿಯಾಗಿ ಉರಿದುಹೋದಮೇಲೆ ಕೆಳಗೆ ನಿಲ್ಲುವ ಬೂದಿಯಿಂದ ಒರಟು ಶರೀರಗಳುಳ್ಳ ವನ್ಯಮೃಗಗಳು ಎಂದರೆ ಕಾಡು ಮೃಗಗಳು ಉತ್ಪನ್ನವಾಗಿ ಅವುಗಳು ಅರಣ್ಯದಲ್ಲಿ ವಾಸಿಸಲು ಹೊರಟುಹೋದವು. ಕಾಡುಮೃಗಗಳೆಂದರೆ, ಜಿಂಕೆ, ಹುಲ್ಲೇಕರು, ಕಾಡುಕೋಣ, ಒಂಟೆ, ಕತ್ತೆ ಮತ್ತು ಇತರ ದುಷ್ಟಮೃಗಳೆಂದರ್ಥವು ಮತ್ತು ಹಿಂದೆ ಹೇಳಿದ ಕೆಂಪುಬಣ್ಣದ ಪಶುಗಳೂ ಸಹ ವಾಸಮಾಡಲು ಅರಣ್ಯಕ್ಕೇ ಹೊರಟುಹೋದವು.

ಈ ಉಪಾಖ್ಯಾನದಲ್ಲಿ ರುದ್ರನು ಪ್ರಜಾಪತಿಯನ್ನು ಪ್ರಹರಿಸಿ ಸಂಹರಿಸಲುದ್ಯುಕ್ತನಾದನೆಂದು ಹೇಳಿದೆಯಷ್ಟೆ. ಪ್ರಜಾಪತಿಯು ಸೃಷ್ಟಿಕರ್ತನೂ, ಸರ್ವಶಕ್ತನೂ, ಜಗನ್ನಿಯಾಮಕನೂ ಆಗಿರುವುದರಿಂದ ಅವನನ್ನು ಸಂಹರಿಸಲು ಅಥವಾ ಹಿಂಸಿಸಲು ಯಾರಿಂದಲೂ ಸಾಧ್ಯವಿಲ್ಲ. ಆದ್ದರಿಂದ ಇಲ್ಲಿ ಹೇಳಿರುವ ವಿಷಯವು ಅಸಂಬದ್ಧವಲ್ಲವೇ ಎಂದು ಕೆಲವರು ಪ್ರಶ್ನಿಸುವರು. ಅದಕ್ಕೆ ಸಮಾಧಾನವಾಗಿ ಭಾಷ್ಯಕಾರರು ತಮ್ಮ ವಿವರಣೆಯಲ್ಲಿ ರುದ್ರನು ಸಂಹರಿಸಲುದ್ಯುಕ್ತನಾದುದು ಪ್ರಜಾಪತಿಯನ್ನಲ್ಲ. ಪ್ರಜಾಪತಿಯು ಆಚರಿಸಿದ ದುಷ್ಕರ್ಮವನ್ನು ಎಂದರೆ ಆ ದುಷ್ಟಕರ್ಮವೇ ಪಾಪ್ಮನ್ ಎಂಬ ಹೆಸರಿನಿಂದ ಬೇರೊಂದು ರೂಪವನ್ನು ಹೊಂದಿ ಪ್ರಜಾಪತಿಯ ಸಮೀಪವರ್ತಿಯಾಗಿದ್ದಿತು. ಅದನ್ನೇ ರುದ್ರನು ಸಂಹರಿಸಿದನೆಂದು ಸಮಾಧಾನವನ್ನು ಹೇಳಿರುವರು.

॥ ಸಂಹಿತಾಪಾಠಃ ॥

**ನ ಯತ್ಪುರಾ ಚಕೃಮಾ ಕದ್ಧ ನೂನಮೃತಾ ವದಂತೋ ಅನೃತಂ ರಪೇಮ।**
**ಗಂಧರ್ವೋ ಅಪ್ಸ್ವಪ್ಯಾ ಚ ಯೋಷಾ ಸಾ ನೋ ನಾಭಿಃ ಪರಮಂ ಜಾಮಿ ತನ್ನೌ ॥ ४ ॥**

॥ ಪದಪಾಠಃ ॥

**ನ । ಯತ್ । ಪುರಾ । ಚಕೃಮ । ಕತ್ । ಹ । ನೂನಂ । ಋತಾ । ವದಂತಃ । ಅನೃತಂ । ರಪೇಮ । ಗಂಧರ್ವಃ । ಅಪ್ಽಸು । ಅಪ್ಯಾ । ಚ । ಯೋಷಾ । ಸಾ । ನಃ । ನಾಭಿಃ । ಪರಮಂ । ಜಾಮಿ । ತತ್ । ನೌ ॥ ४ ॥**

ಸಾಯಣಭಾಷ್ಯಂ

ಯಮೋ ಯಮೀಂ ಪ್ರತಿಬ್ರೂತೇ । ಪುರಾ ಪೂರ್ವಂ ಪ್ರಜಾಪತೇರ್ಯದಗಮ್ಯಾಗಮನಪರಿ-ಮಿತಸಾಮರ್ಥ್ಯೇನೇತಿತ್ವಾತ್ಕೃತಂ ತಥಾ ವಯಂ ನ ಚಕೃಮ । ನಾಕುರ್ಮ । ವಯಮೃತಾನಿ ಸತ್ಯಾನಿ ವದಂತೋ ಬ್ರುವಂತೋಽನೃತಮಸತ್ಯಂ ಕದ್ಧ ಕದಾ ಖಲು ನೂನಂ ನಿಶ್ಚಿತಂ ರಪೇಮ । ವದೇಮ । ನ ಕದಾಚಿದಪೀತ್ಯರ್ಥಃ । ಅಗಮ್ಯಾಗಮನಂ ನ ಕುರ್ಮ ಇತಿ ಯಾವತ್ । ಅಪಿ ಚಾಪ್ಸು । ಅಂತರಿಕ್ಷನಾ-ಮೈತತ್। ಅಂತರಿಕ್ಷೇ ಸ್ಥಿತೋ ಗಂಧರ್ವೋ ಗವಾಂ ರಶ್ಮೀನಾಮುದಕಾನಾಂ ವಾ ಧಾರಯಿತಾದಿತ್ಯೋಽ-ಪ್ಯಾಂತರಿಕ್ಷಸ್ಥಾ ಸಾ ಪ್ರಸಿದ್ಧಾ ಯೋಷಾದಿತ್ಯಸ್ಯ ಭಾರ್ಯಾ ಸರಣ್ಯೂಶ್ಚ ನೋ ನಾವಾವಯೋರ್ನಾಭಿರು-ತ್ಪತ್ತಿಸ್ಥಾನಂ । ಮಾತಾಪಿತರಾವಿತ್ಯರ್ಥಃ । ತತ್ತಸ್ಮಾತ್ಕಾರಣಾನ್ನಾವಾವಯೋರ್ಜಾಮಿ ಬಾಂಧವ-ಮುತ್ಕೃಷ್ಟಂ । ಏವಂ ಸತ್ಯಾವಯೋರಗಮ್ಯಾಗಮನರೂಪತ್ವಾತ್ಕರ್ತುಮಯುಕ್ತಂ ತಸ್ಮಾದೇತನ್ನ ಕರೋಮೀತ್ಯಭಿಪ್ರಾಯಃ ॥

॥ ಪ್ರತಿಪದಾರ್ಥ ॥

(ಎಲೈ ಯಮಿಯೇ) **ಪುರಾ**—ಪೂರ್ವದಲ್ಲಿ । **ಯತ್**—ಪ್ರಜಾಪತಿಯು ಯಾವ ಕಾರ್ಯವನ್ನು ಮಾಡಿದನೋ ಅದನ್ನು । **ನ ಚಕೃಮ**—ನಾನು ಮಾಡಲಾಗುವುದಿಲ್ಲ । **ಋತಾ**—ಸತ್ಯವಾಕ್ಯಗಳನ್ನು । **ವದಂತಃ**—ಹೇಳುತ್ತ । **ಅನೃತಂ**—ಅಸತ್ಯವನ್ನು । **ಕತ್ ಹ**—ಹೇಗೆ ತಾನೇ । **ನೂನಂ**—ನಿಶ್ಚಯವಾಗಿಯೂ । **ರಪೇಮ**—ಹೇಳಬಲ್ಲೆವು । **ಅಪ್ಸು**—ಅಂತರಿಕ್ಷಸ್ಥನಾದ । **ಗಂಧರ್ವಃ**—ಆದಿತ್ಯನೂ । **ಅಪ್ಯಾ ಸಾ**—ಪ್ರಸಿದ್ಧಳೂ ಅಂತರಿಕ್ಷಸ್ಥಳೂ ಆದ । **ಯೋಷಾ ಚ**—(ಆದಿತ್ಯಪತ್ನಿಯಾದ) ಸರಣ್ಯುವೂ । **ನಃ**—ನಮ್ಮಿಬ್ಬರಿಗೂ । **ನಾಭಿಃ**—ಉತ್ಪತ್ತಿಸ್ಥಾನರಾಗಿದ್ದಾರೆ । **ತತ್**—ಆದ್ದರಿಂದ । **ನೌ**—ನಮ್ಮಿಬ್ಬರಿಗೂ ಇರುವ । **ಜಾಮಿ**—ಬಂಧುತ್ವವು । **ಪರಮಂ**—ಅತ್ಯುತ್ಕೃಷ್ಟವಾಗಿದೆ.

॥ ಭಾವಾರ್ಥ ॥

ಎಲೈ ಯಮಿಯೇ, ಸರ್ವಶಕ್ತನಾದ ಪ್ರಜಾಪತಿಯು ಪೂರ್ವದಲ್ಲಿ ಯಾವ ಕಾರ್ಯವನ್ನು ಮಾಡಿದನೋ ಅದನ್ನು ನಾನು ಈಗ ಮಾಡಲಾಗುವುದಿಲ್ಲ. ಇಲ್ಲಿಯವರೆಗೆ ಸತ್ಯವಾಕ್ಯವನ್ನು ಹೇಳುತ್ತ ಈಗ ಅಸತ್ಯವನ್ನು ಹೇಗೆ ಹೇಳಬಲ್ಲೆವು? ಅಂತರಿಕ್ಷಸ್ಥನಾದ ಆದಿತ್ಯನೂ, ಅಂತರಿಕ್ಷಸ್ಥಳಾದ (ಆದಿತ್ಯಪತ್ನಿಯಾದ) ಸರಣ್ಯುವೂ ನಮ್ಮಿಬ್ಬರಿಗೂ ಸಮಾನವಾದ ಉತ್ಪತ್ತಿಸ್ಥಾನರಾಗಿದ್ದಾರೆ. ಆದುದರಿಂದ ನಮ್ಮಿಬ್ಬರಿಗೂ ಇರುವ ಸಹೋದರ ಸಹೋದರಿಯರೆಂಬ ಬಂಧುತ್ವವು ಅತ್ಯುತ್ಕೃಷ್ಟವಾಗಿದೆ. (ನಮ್ಮ ದಾಂಪತ್ಯ ಸಂಬಂಧವು ಸಾಧ್ಯವಿಲ್ಲ.)

## English Translation

(Yama speaks). We connot do what was done formerly; for how can we who speak truth, utter now that which is untrue? Gandharva (the sun) was in the watery (firmament), and the water was his bride She is our common parent, hence our near affinity.

॥ ಸಂಹಿತಾಪಾಠಃ ॥

ಗರ್ಭೇ ನು ನೌ ಜನಿತಾ ದಂಪತೀ ಕರ್ದೇವಸ್ತ್ವಷ್ಟಾ ಸವಿತಾ ವಿಶ್ವರೂಪಃ ।
ನಕಿರಸ್ಯ ಪ್ರ ಮಿನಂತಿ ವ್ರತಾನಿ ವೇದ ನಾವಸ್ಯ ಪೃಥಿವೀ ಉತ ದ್ಯೌಃ ॥ ೫ ॥

॥ ಪದಪಾಠಃ ॥

ಗರ್ಭೇ । ನು । ನೌ । ಜನಿತಾ । ದಂಪತೀ ಇತಿ ದಂಽಪತೀ । ಕಃ । ದೇವಃ । ತ್ವಷ್ಟಾ । ಸವಿತಾ । ವಿಶ್ವಽರೂಪಃ ।
ನಕಿಃ । ಅಸ್ಯ । ಪ್ರ । ಮಿನಂತಿ । ವ್ರತಾನಿ । ವೇದ । ನೌ । ಅಸ್ಯ । ಪೃಥಿವೀ । ಉತ । ದ್ಯೌಃ ॥ ೫ ॥

॥ ಸಾಯಣಭಾಷ್ಯಂ ॥

**ತ್ವಷ್ಟಾ ರೂಪಾಣಾಂ ಕರ್ತಾ ಸವಿತಾ ಸರ್ವೇಷಾಂ ಶುಭಾಶುಭಸ್ಯ ಪ್ರೇರಕೋ ವಿಶ್ವರೂಪಃ ಸರ್ವಾತ್ಮಕೋ ದೇವೋ ದಾನಾದಿಗುಣಯುಕ್ತೋ ಜನಿತಾ ಜನಯಿತಾ ಪ್ರಜಾಪತಿರ್ಗರ್ಭೇ ನು ಗರ್ಭಾವಸ್ಥಾಯಾಮೇವ ನಾವಾವಾಂ ದಂಪತೀ ಜಾಯಾಪತೀ ಕಃ । ಕೃತವಾನ್ ಏಕೋದರೇ ಸಹವಾಸಿತ್ವಾತ್ । ಅಸ್ಯ ಪ್ರಜಾಪತೇರ್ವ್ರತಾನಿ ಕರ್ಮಾಣಿ ನಕಿಃ ಪ್ರ ಮಿನಂತಿ । ನ ಕೇಚಿತ್ಪ್ರಹಿಂಸಂತಿ । ನ ಲೋಪಯಂತೀತ್ಯರ್ಥಃ । ಅತಃ ಕಾರಣಾದ್ಗರ್ಭಾವಸ್ಥಾಯಾಮೇವಾವಯೋಃ ಪ್ರಜಾಪತಿಕೃತೇ ದಂಪತಿತ್ವೇ ಸತಿ ಸಂಭೋಗಂ ಕುರ್ವಿತ್ಯರ್ಥಃ । ಅಪಿ ಚ ನಾವಾವಯೋರಸ್ಯೇದಂ ಮಾತುರುದರೇ ಸಹವಾಸಜನಿತಂ ದಂಪತಿತ್ವಂ ಪೃಥಿವೀ ಭೂಮಿರ್ವೇದ । ಜಾನಾತಿ । ಉತಾಪಿ ಚ ದ್ಯೌರ್ದ್ಯುಲೋಕೋಽಪಿ ಜಾನಾತಿ ॥**

॥ ಪ್ರತಿಪದಾರ್ಥ ॥

**ತ್ವಷ್ಟಾ**—ಜಗತ್ತಿನ ರೂಪನಿರ್ಮಾಪಕನೂ । **ಸವಿತಾ**—ಸರ್ವಪ್ರೇರಕನೂ । **ವಿಶ್ವರೂಪಃ**—ಸರ್ವಾತ್ಮಕನೂ । **ದೇವಃ**—ದೇವತಾತ್ಮನೂ । **ಜನಿತಾ**—ಸರ್ವಜನಕನೂ ಆದ ಪ್ರಜಾಪತಿಯು । **ನೌ**—ನಮ್ಮನ್ನು । **ಗರ್ಭೇ ನು**—ನಾವು ಗರ್ಭದಲ್ಲಿರುವಾಗಲೇ । **ದಂಪತೀ**—ಗಂಡಹೆಂಡಿರನ್ನಾಗಿ । **ಕಃ**—ಮಾಡಿದ್ದಾನೆ । **ಅಸ್ಯ**—ಈ ಪ್ರಜಾಪತಿಯ । **ವ್ರತಾನಿ**—ಕರ್ಮಗಳನ್ನು । **ನಕಿಃ**—ಯಾರೂ ಕೂಡ । **ಪ್ರ ಮಿನಂತಿ**—ಹಿಂಸಿಸಲಾರರು । **ನೌ**—ನಮ್ಮ । **ಅಸ್ಯ**—ಈ ದಾಂಪತ್ಯಸಂಬಂಧವನ್ನು । **ಪೃಥಿವೀ**—ಭೂಮಿಯು । **ವೇದ**—ಅರಿತಿದ್ದಾಳೆ । **ಉತ**—ಮತ್ತು । **ದ್ಯೌಃ**—ದ್ಯುಲೋಕವೂ ಅರಿತಿದೆ.

॥ ಭಾವಾರ್ಥ ॥

ಜಗತ್ತಿನ ರೂಪನಿರ್ಮಾಪಕನೂ, ಸರ್ವಪ್ರೇರಕನೂ, ಸರ್ವಾತ್ಮನೂ, ದೇವತಾತ್ಮನೂ, ಸರ್ವಜನಕನೂ ಆದ ಪ್ರಜಾಪತಿಯು ನಮ್ಮನ್ನು ನಾವು ಗರ್ಭದಲ್ಲಿರುವಾಗಲೇ ಗಂಡಹೆಂಡಿರನ್ನಾಗಿ ಮಾಡಿದ್ದಾನೆ. ಈ ಪ್ರಜಾಪತಿಯ ಕರ್ಮಗಳನ್ನು ಯಾರೂ ಕೂಡ ಹಿಂಸಿಸಲಾರರು. ನಮ್ಮ ಈ ದಾಂಪತ್ಯಸಂಬಂಧವನ್ನು ದ್ಯಾವಾಪೃಥಿವಿಗಳಿಬ್ಬರೂ ಅರಿತಿದ್ದಾರೆ.

## English Translation

(Yami speaks). The divine omniform generator Twashtri, the progenitor, made us two husband and wife, even in the womb : none frustrate his undertaking ; earth and heaven are conscious of this our (union)

॥ ಸಂಹಿತಾಪಾಠಃ ॥

ಕೋ ಅಸ್ಯ ವೇದ ಪ್ರಥಮಸ್ಯಾಹ್ನಃ ಕ ಈಂ ದದರ್ಶ ಕ ಇಹ ಪ್ರ ವೋಚತ್।
ಬೃಹನ್ಮಿತ್ರಸ್ಯ ವರುಣಸ್ಯ ಧಾಮ ಕದು ಬ್ರವ ಆಹನೋ ವೀಚ್ಯಾ ನೄನ್ ॥೬॥

॥ ಪದಪಾಠಃ ॥

ಕಃ । ಅಸ್ಯ । ವೇದ । ಪ್ರಥಮಸ್ಯ । ಅಹ್ನಃ । ಕಃ । ಈಂ । ದದರ್ಶ । ಕಃ । ಇಹ । ಪ್ರ । ವೋಚತ್ ।
ಬೃಹತ್ । ಮಿತ್ರಸ್ಯ । ವರುಣಸ್ಯ । ಧಾಮ । ಕತ್ । ಊಂ ಇತಿ। ಬ್ರವಃ । ಆಹನಃ । ವೀಚ್ಯಾ । ನೄನ್ ॥

॥ ಸಾಯಣಭಾಷ್ಯಂ ॥

ಪ್ರಥಮಸ್ಯಾಹ್ನಃ ಸಂಬಂಧ್ಯಸ್ಯೇದಮನ್ಯೋನ್ಯಸಂಗಮನಂ ಕೋ ವೇದ । ಜಾನಾತಿ । ಪ್ರಥಮೇಽಹನಿ ಯತ್ಕ್ರಿಯತೇ ತದನುಮಾನಮಾಶ್ರಿತ್ಯ ನ ಕಶ್ಚಿದಪಿ ಜ್ಞಾತುಂ ಶಕ್ನೋತೀತ್ಯರ್ಥಃ । ಇಹಾಸ್ಮಿನ್ಪ್ರದೇಶೇ ಪ್ರತ್ಯಕ್ಷತಃ ಕ ಈಮಿದಂ ಸಂಗಮನಂ ದದರ್ಶ । ಪಶ್ಯತಿ । ಕಃ ಪ್ರ ವೋಚತ್ । ಪ್ರಖ್ಯಾಪಯತಿ । ನ ಕೋಽಪೀತ್ಯರ್ಥಃ ॥ ಮಿತ್ರಸ್ಯ ವರುಣಸ್ಯ ಮಿತ್ರಾವರುಣಯೋರ್ಬೃಹನ್ಮಹದ್ಧಾಮ ಸ್ಥಾನಮಹೋರಾತ್ರಂ ಯದಸ್ತಿ ತತ್ರ ನೄನ್ಮನುಷ್ಯಾನ್ ವೀಚ್ಯಾ ನರಕೇಣ ಹೇ ಆಹನ ಆಹಂತರ್ಮರ್ಯಾದಯಾ ಹಿಂಸಿತಃ । ಸ್ವಕೃತಶುಭಾಶುಭಕರ್ಮಾಪೇಕ್ಷಯಾ ಮನುಷ್ಯಾದಿಪ್ರಾಣಿನಾಂ ನರಕಪಾತೇನ ಸ್ವರ್ಗಪ್ರಾಪಣೇನ ನಿಗ್ರಹಾನುಗ್ರಹಯೋಃ ಕರ್ತರಿತ್ಯರ್ಥಃ । ಏವಂಭೂತ ಹೇ ಯಮ ತ್ವಂ ಕದು ಬ್ರವಃ । ಕಿಂ ವಾ ಬ್ರವೀಷಿ ॥

॥ ಪ್ರತಿಪದಾರ್ಥ ॥

**ಪ್ರಥಮಸ್ಯ ಅಹ್ನಃ**—ಮೊದಲನೆಯ ದಿವಸದ । **ಅಸ್ಯ**—ಈ ಅನ್ಯೋನ್ಯಸಂಭೋಗವನ್ನು । **ಕಃ ವೇದ**—ಯಾವನು ತಾನೇ ಅರಿಯುತ್ತಾನೆ । **ಇಹ**—ಈ ಪ್ರದೇಶದಲ್ಲಿ । **ಈಂ**—ಈ ಸಂಗಮನವನ್ನು । **ಕಃ ದದರ್ಶ**—ಯಾವನು ನೋಡುತ್ತಾನೆ । **ಕಃ ಪ್ರವೋಚತ್**—ಯಾವನು ಪ್ರಕಟಿಸಿ ಹೇಳಬಲ್ಲನು । **ಮಿತ್ರಸ್ಯ**—ಮಿತ್ರನಿಗೂ । **ವರುಣಸ್ಯ**—ವರುಣನಿಗೂ । **ಬೃಹತ್ ಧಾಮ**—ಮಹತ್‌ಸ್ಥಾನವಾದ ಅಹೋರಾತ್ರಗಳಲ್ಲಿ । **ನೄನ್**—ಮಾನವರನ್ನು । **ವೀಚ್ಯಾ**—ನರಕದಿಂದ । **ಆಹನಃ**—ಹಿಂಸಿಸುವ ಎಲೈ ಯಮನೇ ! **ಕದು ಬ್ರವಃ**—ನೀನು ಈ ವಿಷಯದಲ್ಲಿ ಏನನ್ನು ಹೇಳುವೆ ?

॥ ಭಾವಾರ್ಥ ॥

ಮೊದಲನೆಯ ದಿನದ ಈ ಅನ್ಯೋನ್ಯಸಂಗಮನವನ್ನು ಯಾವನು ತಾನೇ ಅರಿಯುತ್ತಾನೆ. ಈ ಪ್ರದೇಶದಲ್ಲಿ ಈ ಸಂಗಮನವನ್ನು ಯಾವನು ನೋಡಿದ್ದಾನೆ ? ಯಾವನು ಇದನ್ನು ಪ್ರಕಟಿಸಿ ಹೇಳಬಲ್ಲನು ? ಮಿತ್ರನಿಗೂ, ವರುಣನಿಗೂ, ಮಹತ್ಸ್ಥಾನವಾದ ಅಹೋರಾತ್ರಗಳಲ್ಲಿ ಮಾನವರನ್ನು ನರಕರೂಪದಿಂದ ಹಿಂಸಿಸುವ ಎಲೈ ಯಮನೇ, ನೀನು ಈ ವಿಷಯದಲ್ಲಿ ಏನನ್ನು ಹೇಳುವೆ ?

English Translation

(Yami speaks). Who knows anything of this (his) first day (of intercourse) ? Who will behold it ? Who will here reveal it ? The dwelling of Mitra and of Varuna is vast. What do you say, you who punish men with hell ?

| ವಿಶೇಷವಿಷಯಗಳು ||

ಅಹನಃ ಎಂಬ ಶಬ್ದದ ವಿಷಯದಲ್ಲಿ ಯಾಸ್ಕರು ಬರೆದಿರುವ ನಿರ್ವಚನವನ್ನೂ ಅರ್ಥವಿವರಣೆಯನ್ನೂ ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗಿದೆ. (372ನೇ ಪೇಜು ನೋಡಿ).

॥ ಸಂಹಿತಾಪಾಠಃ ॥

ಯಮಸ್ಯ ಮಾ ಯಮ್ಯಂ೧ ಕಾಮ ಆಗನ್ತ್ಸಮಾನೇ ಯೋನೌ ಸಹಶೇಯ್ಯಾಯ ।
ಜಾಯೇವ ಪತ್ಯೇ ತನ್ವಂ ರಿರಿಚ್ಯಾಂ ವಿ ಚಿದ್ವೃಹೇವ ರಥ್ಯೇವ ಚಕ್ರಾ ॥ ೭ ॥

॥ ಪದಪಾಠಃ ॥

ಯಮಸ್ಯ । ಮಾ । ಯಮ್ಯಂ । ಕಾಮಃ । ಆ । ಅಗನ್ । ಸಮಾನೇ । ಯೋನೌ । ಸಹಽಶೇಯ್ಯಾಯ ।
ಜಾಯಾಽಇವ । ಪತ್ಯೇ । ತನ್ವಂ । ರಿರಿಚ್ಯಾಂ । ವಿ । ಚಿತ್ । ವೃಹೇವ । ರಥ್ಯಾಽಇವ । ಚಕ್ರಾ ॥ ೭ ॥

॥ ಸಾಯಣಭಾಷ್ಯಂ ॥

ಯಮಸ್ಯ ತವ ಕಾಮೋಽಭಿಲಾಷೋ ಯಮ್ಯಂ ಯಮೀಂ ಮಾಂ ಮಾಂ ಪ್ರತ್ಯಾಗನ್ । ಆಗಚ್ಛತು । ಮಮೋಪರಿ ತವ ಯಮಸ್ಯ ಸಂಭೋಗೇಚ್ಛಾ ಜಾಯತಾಮಿತ್ಯರ್ಥಃ । ಕಿಮರ್ಥಂ । ಸಮಾನೇ ಯೋನಾವೇಕಸ್ಮಿನ್ ಸ್ಥಾನೇ ಶಯ್ಯಾಖ್ಯೇ ಸಹಶೇಯ್ಯಾಯ ಸಹಶಯನಾರ್ಥಂ । ತದನಂತರಂ ಪೂರ್ಣಮನೋರಥಾ ಸತೀ ಜಾಯೇವ ಪತ್ಯೇ ಯಥಾ ಭಾರ್ಯಾ ಪತ್ಯುರರ್ಥಾಯ ಪರಯಾ ಪ್ರೀತ್ಯಾ

ವಿಶ್ವಸ್ತಾ ಸತೀ ರತಿಕಾಮಾ ಸ್ವಶರೀರಂ ಪ್ರಕಾಶಯತಿ ಏವಂ ತನ್ವಮಾತ್ಮೀಯಂ ಶರೀರಂ ರಿರಿಚ್ಯಾಂ ವಿವಿಚ್ಯಾಂ । ತ್ವದರ್ಥಂ ಪ್ರಕಾಶಯೇಯಮಿತ್ಯರ್ಥಃ । ಕಿಂಚ । ಚಿದಿತಿ ಪೂರಣಃ । ವಿವೃಹೇವ ॥ ವೃಹೂ ಉದ್ಯಮನೇ ॥ ಧರ್ಮಾರ್ಥಕಾಮಾನ್ವಿವಿಧಮುದ್ಯಚ್ಛಾವಃ । ತತ್ರ ದೃಷ್ಟಾಂತಃ । ರಥ್ಯೇವ ಚಕ್ರಾ ರಥಸ್ಯಾವಯವಭೂತೇ ಚಕ್ರೇ ಯಥಾ ರಥಮುದ್ಯಚ್ಛತಸ್ತದ್ವತ್ ॥

॥ ಪ್ರತಿಪದಾರ್ಥ ॥

**ಸಮಾನೇ ಯೋನೌ**—ಒಂದೇ ಹಾಸಿಗೆಯಲ್ಲಿ । **ಸಹಶೇಯ್ಯಾಯ**—ಒಟ್ಟಿಗೆ ಮಲಗಲು । **ಯಮಸ್ಯ**—ಯಮನಾದ ನಿನ್ನ । **ಕಾಮಃ**—ಅಭಿಲಾಷೆಯು । **ಯಮ್ಯಂ**—ಯಮಿ ಸಂಜ್ಞಕಳಾದ । **ಮಾ**—ನನ್ನನ್ನು (ಸೇರಬೇಕೆಂಬುದಾಗಿ) । **ಆಗನ್**—ಉಂಟಾಗಲಿ । **ಪತ್ಯೇ**—ತನ್ನ ಪತಿಗೆ । **ಜಾಯೇವ**—ಪತ್ನಿಯು ಶರೀರವನ್ನು ಪೂರ್ಣವಾಗಿ ಅರ್ಪಿಸುವಂತೆ । **ತನ್ವಂ**—ನನ್ನ ಶರೀರವನ್ನು । **ರಿರಿಚ್ಯಾಂ**—ನಾನು ನಿನಗೆ ಅರ್ಪಿಸುವೆನು । **ಚಕ್ರಾ**—ರಥದ ಚಕ್ರಗಳು । **ರಥ್ಯೇವ**—ರಥವನ್ನು ಒಟ್ಟಿಗೆ ವಹಿಸುವಂತೆ । **ವಿ ವೃಹೇವ**—ನಾವಿಬ್ಬರೂ ಒಟ್ಟಿಗೆ ಧರ್ಮಾರ್ಥ ಕಾಮಗಳನ್ನು ನಿರ್ವಹಿಸೋಣ ।

॥ ಭಾವಾರ್ಥ ॥

ಎಲೈ ಯಮನೇ, ಒಂದೇ ಹಾಸಿಗೆಯಲ್ಲಿ ನಾವಿಬ್ಬರೂ ಒಟ್ಟಿಗೆ ಮಲಗುವುದಕ್ಕೋಸ್ಕರ ನನ್ನೊಡನೆ ಸಹಕರಿಸಬೇಕೆಂಬ ಅಭಿಲಾಷೆಯು ನಿನ್ನಲ್ಲಿ ಉಂಟಾಗಲಿ. ಪತ್ನಿಯು ತನ್ನ ಪತಿಗೆ ತನ್ನ ದೇಹವನ್ನು ಪೂರ್ಣವಾಗಿ ಅರ್ಪಿಸುವಂತೆ ನಾನು ನಿನಗೆ ನನ್ನ ಶರೀರವನ್ನು ಅರ್ಪಿಸುವೆನು. ರಥದ ಚಕ್ರಗಳು ರಥವನ್ನು ಒಟ್ಟಿಗೆ ವಹಿಸುವಂತೆ ನಾವಿಬ್ಬರೂ ಒಟ್ಟಿಗೆ ಧರ್ಮಾರ್ಥಕಾಮಗಳನ್ನು ನಿರ್ವಹಿಸೋಣ.

## English Translation

(Yami speaks). O yama, the desire may come to you to lie with me in the same bed ; I will abandon my person to you as a wife to her husband ; let us exert ourselves in union like the two wheels of a waggon.

॥ ಸಂಹಿತಾಪಾಠಃ ॥

ನ ತಿಷ್ಠಂತಿ ನ ನಿ ಮಿಷಂತ್ಯೇತೇ ದೇವಾನಾಂ ಸ್ಪಶ ಇಹ ಯೇ ಚರಂತಿ ।
ಅನ್ಯೇನ ಮದಾಹನೋ ಯಾಹಿ ತೂಯಂ ತೇನ ವಿ ವೃಹ ರಥ್ಯೇವ ಚಕ್ರಾ ॥

॥ ಪದಪಾಠಃ ॥

ನ । ತಿಷ್ಠಂತಿ । ನ । ನಿ । ಮಿಷಂತಿ । ಏತೇ । ದೇವಾನಾಂ । ಸ್ಪಶಃ । ಇಹ । ಯೇ । ಚರಂತಿ ।
ಅನ್ಯೇನ । ಮತ್ । ಆಹನಃ । ಯಾಹಿ । ತೂಯಂ । ತೇನ । ವಿ । ವೃಹ । ರಥ್ಯಾಽಇವ । ಚಕ್ರಾ ॥ ೮ ॥

॥ ಸಾಯಣಭಾಷ್ಯಂ ॥

ಯಮ್ಯಾ ಪ್ರತ್ಯಾಖ್ಯಾತೋ ಯಮಃ ಪುನರಾಹ । ಇಹಾಸ್ಮಿಂಲ್ಲೋಕೇ ದೇವಾನಾಂ ಸಂಬಂಧಿನೋ ಯೇ ಸ್ಪಶೋಽಹೋರಾತ್ರಾದಯಶ್ಚಾರಾಶ್ಚರಂತಿ ಸರ್ವೇಷಾಂ ಶುಭಾಶುಭಲಕ್ಷಣಕರ್ಮಪ್ರತ್ಯವೇಕ್ಷಣಾರ್ಥಂ ಪರಿಭ್ರಮಂತಿ ಏತೇ ಚಾರಾಃ ಕ್ಷಣಮಾತ್ರಮಪಿ ಚರಣವ್ಯಾಪಾರರಹಿತಾ ನ ತಿಷ್ಠಂತಿ । ನ ನಿಮಿಷಂತಿ । ನಿಮೇಷಣಂ ನ ಕುರ್ವಂತಿ । ಶುಭಮಶುಭಂ ವಾ ಯಃ ಕರೋತಿ ತಂ ನಿರೀಕ್ಷಂತೇ ಚೇತ್ಯರ್ಥಃ। ಹೇ ಆಹನೋ ಮಮಾಪಹಂತ್ರ್ಯಸಭ್ಯಭಾಷಣೇನ ದುಃಖಯಿತ್ರಿ ತ್ವಂ ಮನ್ಮತ್ತೋಽನ್ಯೇನ ತ್ವತ್ಸದೃಶೇನ ಸಹ ತೂಯಂ ಕ್ಷಿಪ್ರಂ ಯಾಹಿ । ಸಂಗಚ್ಛ । ಗತ್ವಾ ಚ ತೇನ ವಿ ವೃಹ । ಧರ್ಮಾರ್ಥಕಾಮಾನುದ್ಯಚ್ಛ । ತತ್ರ ದೃಷ್ಟಾಂತಃ । ರಥ್ಯೇವ ಚಕ್ರಾ ಯಥಾ ರಥಾವಯವಭೂತೇ ಚಕ್ರೇ ರಥಮುದ್ಯಚ್ಛತಸ್ತದ್ವತ್ ॥

॥ ಪ್ರತಿಪದಾರ್ಥ ॥

(ಎಲೈ ಯಮಿಯೇ) **ದೇವಾನಾಂ**—ದೇವತೆಗಳಿಂದ ನಿಯಮಿತರಾದ। **ಯೇ ಸ್ಪಶಃ**—ಯಾವ ಗೂಢಚಾರರುಂಟೋ ಅವರು । **ಇಹ ಚರಂತಿ**— ಸರ್ವತ್ರ (ಇಲ್ಲಿಲ್ಲಿ) ।ಸಂಚರಿಸುತ್ತಾರೆ । **ಏತೇ**—ಅವರು । **ನ ತಿಷ್ಠಂತಿ**—ಕೊಂಚವೂ ವಿಶ್ರಾಂತರಾಗುವುದಿಲ್ಲ। **ನ ನಿಮಿಷಂತಿ**—ಕಣ್ಣೆವೆಯಿಕ್ಕದೆ ಎಲ್ಲವನ್ನೂ ಗಮನಿಸುತ್ತಾರೆ । **ಆಹನಃ**—ನಿನ್ನ ಪಾಪೇಚ್ಛೆಯಿಂದ ನನ್ನನ್ನು ಹಿಂಸಿಸುವ ಎಲೈ ಯಮಿಯೇ, । **ಮತ್**—ನನಗಿಂತಲೂ। **ಅನ್ಯೇನ**—ಬೇರೆಯಾದವನೊಡನೆ। **ತೂಯಂ**—ಕ್ಷಿಪ್ರವಾಗಿ। **ಯಾಹಿ**—ಸಂಬಂಧವನ್ನು ಹೊಂದು। **ಚಕ್ರಾ**—ರಥ ಚಕ್ರಗಳು। **ರಥ್ಯೇವ**—ಒಟ್ಟಿಗೆ ರಥವನ್ನು ವಹಿಸುವಂತೆ। **ತೇನ**—ಅವನೊಡನೆ ಕೂಡಿ। **ವಿ ವೃಹ**—ನೀವಿಬ್ಬರೂ ಒಟ್ಟಿಗೆ ನಿಮ್ಮ ಕಾರ್ಯಗಳನ್ನು ನಿರ್ವಹಿಸಿ

॥ ಭಾವಾರ್ಥ ॥

ಎಲೈ ಯಮಿಯೇ, ದೇವತೆಗಳಿಂದ ನಿಯಮಿತರಾದ ಯಾವ ಗೂಢಚಾರರುಂಟೋ ಅವರು ಇಲ್ಲಿಲ್ಲಿ (ಸರ್ವತ್ರ) ಸಂಚರಿಸುತ್ತಾರೆ. ಅವರು ಕೊಂಚವೂ ವಿಶ್ರಾಂತರಾಗುವುದಿಲ್ಲ. ಕಣ್ಣನ್ನು ಮುಚ್ಚದೇ ಎಲ್ಲವನ್ನೂ ವೀಕ್ಷಿಸುತ್ತಾರೆ. ನಿನ್ನ ಪಾಪೇಚ್ಛೆಯಿಂದ ನನ್ನನ್ನು ಹಿಂಸಿಸತಕ್ಕ ಎಲೈ ಯಮಿಯೇ, ನನಗಿಂತಲೂ ಬೇರೆಯಾದವನೊಡನೆ ಕ್ಷಿಪ್ರವಾಗಿ ಸಂಬಂಧವನ್ನು ಹೊಂದು. ರಥಚಕ್ರಗಳು ಒಟ್ಟಿಗೆ ರಥವನ್ನು ವಹಿಸುವಂತೆ ಅವನೊಡನೆ ಕೂಡಿ ನೀವಿಬ್ಬರೂ ಒಟ್ಟಿಗೆ ನಿಮ್ಮ ಕಾರ್ಯಗಳನ್ನು ನಿರ್ವಹಿಸಿ.

## English Translation

(Yama Speaks)- The spies of the Gods who wander upon earth, never stop, never close their eyes. Associate quickly, destructress, with some other than with me, ond exert yourselves in union, like the two wheels of a waggon.

॥ ವಿಶೇಷವಿಷಯಗಳು ॥

**ಆಹನಃ**—ಈ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿನ ಉತ್ತರಾರ್ಧಕ್ಕೆ ನಿರ್ವಚನವನ್ನು ಹೇಳಿದಾರೆ—

ಆಹನಃ । ಅನ್ಯೇನ ಮದಾಹನೋ ಯಾಹಿ ತೂಯಂ । ಅನ್ಯೇನ ಮದಹನೋ ಗಚ್ಛ ಕ್ಷಿಪ್ರ-ಮಾಹಂಸೀವ ಭಾಷಮಾಣೇತ್ಯಸಭ್ಯಭಾಷಣಾದಾಹನಾ ಇವ ಭವತ್ಯೇತಸ್ಮಾದಾಹನಃ ಸ್ಯಾತ್ ।

(ನಿ ೫-೨)

ಎಂದರೆ, ಎಲೈ ಅಸಭ್ಯಸ್ತ್ರೀಯೇ, ನನ್ನನ್ನು ಬಿಟ್ಟು ಅನ್ಯಕುಲದ ಬೇರೊಬ್ಬ ಪುರುಷನೊಡನೆ ಬೇಗನೆ ಹೋಗು. ಎಲೈ ಅಸಚ್ಚರಿತ್ರಳೇ, ನನ್ನನ್ನು ಬಿಟ್ಟು ಇತರ ಪುರುಷನೊಡನೆ ಬೇಗನೆ ಹೊರಟುಹೋಗು. ನೀನು ಈ ರೀತಿ ಮಾತನಾಡುತ್ತಿರುವುದು ನನಗೆ ಬಹಳ ಸಂಕಟವನ್ನುಂಟುಮಾಡುತ್ತದೆ. ಆಹನಾ ಎಂಬ ಶಬ್ದವು ಕೆಟ್ಟ ಮಾತನ್ನು ಎಂದರೆ ಅಸಭ್ಯವರ್ತನೆಯ ಸ್ತ್ರೀಯರು, ವ್ಯಭಿಚಾರಮಾಡುವ ಸ್ತ್ರೀಯರು ಆಡುವ ಮಾತಿನಂತೆ ಮಾತನಾಡುವವಳು. ಆಹನಃ ಎಂಬುದು ಸಂಬುದ್ಧ್ಯೇಕವಚನಾಂತ ಶಬ್ದವು. ಇದಕ್ಕೂ ಸಹ ಮೇಲೆ ಹೇಳಿದ ಅರ್ಥವೇ ಅನ್ವಯಿಸುವುದು.

॥ ಸಂಹಿತಾಪಾಠ ॥

ರಾತ್ರೀಭಿರಸ್ಮಾ ಅಹಭಿರ್ದಶಸ್ಯೇತ್ಸೂರ್ಯಸ್ಯ ಚಕ್ಷುರ್ಮುಹುರುನ್ಮಿಮೀ-ಯಾತ್ ।

ದಿವಾ ಪೃಥಿವ್ಯಾ ಮಿಥುನಾ ಸಬಂಧೂ ಯಮೀರ್ಯಮಸ್ಯ ಬಿಭೃಯಾದ-ಜಾಮಿ ॥ ೯ ॥

॥ ಪದಪಾಠಃ ॥

ರಾತ್ರೀಭಿಃ । ಅಸ್ಮೈ । ಅಹಃऽಭಿಃ ದಶಸ್ಯೇತ್ । ಸೂರ್ಯಸ್ಯ । ಚಕ್ಷುಃ । ಮುಹುಃ । ಉತ್ ಮಿಮೀ-ಯಾತ್ ।

ದಿವಾ । ಪೃಥಿವ್ಯಾ । ಮಿಥುನಾ । ಸಬಂಧೂ ಇತಿ ಸऽಬಂಧೂ । ಯಮೀಃ । ಯಮಸ್ಯ । ಬಿಭೃಯಾತ್ । ಅಜಾಮಿ ॥ ೯ ॥

॥ ಸಾಯಣಭಾಷ್ಯಂ ॥

ರಾತ್ರಿಭೀರಹಭಿರಹೋರಾತ್ರಯೋರಸ್ಮೈ ಯಮಾಯ ಕಲ್ಪಿತಂ ಭಾಗಂ ಸರ್ವೋ ಯಜಮಾನೋ ದಶಸ್ಯೇತ್ । ಪ್ರಯಚ್ಛತು । ಸೂರ್ಯಸ್ಯ ಸಂಬಂಧಿ ಚಕ್ಷುಸ್ತೇಜೋ ಮುಹುರ್ಮುಹುರಸ್ಮೈ ಯಮಾಯೋನ್ಮಿಮೀಯಾತ್ । ಉದೇತು । ದಿವಾ ಪೃಥಿವ್ಯಾ ದ್ಯಾವಾಪೃಥಿವೀಭ್ಯಾಂ ಸಹ ಮಿಥುನೌ ಸಬಂಧೂ ಸಮಾನಬಂಧೂ ಅಹೋರಾತ್ರೇ ಅಸ್ಮೈ ಯಮಾಯ । ಏತಜ್ಜ್ಞಾತ್ವೇಯಂ ಯಮೀರ್ಯ-ಮಸ್ಯಾಜಾಮ್ಯಭ್ರಾತರಂ ಬಿಭೃಯಾತ್ । ಧಾರಯತು । ಯತ್ನೇನ ಪರಿಗೃಹ್ಣಾತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಸ್ಮೈ**—ಈ ಯಮನನ್ನುದ್ದೇಶಿಸಿ । **ರಾತ್ರಿಭಿಃ**—ರಾತ್ರಿಕಾಲಗಳಲ್ಲಿಯೂ । **ಅಹಭಿಃ**—ಅಹಸ್ಸುಗಳಲ್ಲಿಯೂ । **ದಶಸ್ಯೇತ್**—ಯಜಮಾನನು ಹವಿಸ್ಸನ್ನರ್ಪಿಸಲಿ । **ಸೂರ್ಯಸ್ಯ**—ಸೂರ್ಯನ । **ಚಕ್ಷುಃ**—ತೇಜಸ್ಸು । **ಮುಹುಃ**—ಅನೇಕವೇಳೆ । **ಉನ್ಮಿಮೀಯಾತ್**—ಈ ಯಮನಿಗಾಗಿ ಪ್ರಾದುರ್ಭವಿಸಲಿ । **ದಿವಾ ಪೃಥಿವ್ಯಾ**—ದ್ಯಾವಾಪೃಥಿವಿಗಳೊಡನೆ । **ಮಿಥುನಾ**—ಒಟ್ಟುಗೂಡಿದವೂ । **ಸಬಂಧೂ**—ಸಮಾನವಾದ ಬಂಧುತ್ವವುಳ್ಳವೂ ಆದ ಅಹೋರಾತ್ರಗಳು ಯಮನ ತೃಪ್ತಿಗಾಗಿರಲಿ । **ಯಮೀಃ**—ಈ ಯಮಿಯು । **ಯಮಸ್ಯ**—ಯಮನೊಡನೆ । **ಅಜಾಮಿ**—ಅಭ್ರಾತೃಕವಾದ ಸಂಬಂಧವನ್ನು । **ಬಿಭೃಯಾತ್**—ಹೊಂದಲಿ.

॥ ಭಾವಾರ್ಥ ॥

ಅಹೋರಾತ್ರಗಳಲ್ಲೆಲ್ಲಾ ಯಜಮಾನರು ಈ ಯಮನನ್ನೇ ಉದ್ದೇಶಿಸಿ ಹವಿಸ್ಸನ್ನರ್ಪಿಸಲಿ. ಅನೇಕ ಕಾಲಗಳಲ್ಲಿ ಸೂರ್ಯನ ತೇಜಸ್ಸು ಈ ಯಮನಿಗಾಗಿಯೇ ಪ್ರಾದುರ್ಭವಿಸಲಿ. ದ್ಯಾವಾಪೃಥಿವಿಗಳೊಡನೆ ಒಟ್ಟುಗೂಡಿದವೂ ಸಮಾನವಾದ ಬಂಧುತ್ವವುಳ್ಳವೂ ಆದ ಅಹೋರಾತ್ರಗಳು ಯಮನ ತೃಪ್ತಿಗಾಗಿರಲಿ. ಯಮಿಯು ಯಮನೊಡನೆ ಅಭ್ರಾತೃಕವಾದ (ದಾಂಪತ್ಯ) ಸಂಬಂಧವನ್ನು ಹೊಂದಲಿ.

## English Translation

(Yama speaks). To him (Yama) let every worshipper sacrifice both day and night, on him let the eyes of the Sun repeatedly rise; (for him may) the kindred pair (day and night unite) with heaven and earth. Yami will adhere to the non-affinity of Yama.

॥ ಸಂಹಿತಾಪಾಠಃ ॥

ಆ ಘಾ ತಾ ಗಚ್ಛಾನುತ್ತರಾ ಯುಗಾನಿ ಯತ್ರ ಜಾಮಯಃ ಕೃಣವನ್ನಜಾಮಿ ।
ಉಪ ಬರ್ಬೃಹಿ ವೃಷಭಾಯ ಬಾಹುಮನ್ಯಮಿಚ್ಛಸ್ವ ಸುಭಗೇ ಪತಿಂ ಮತ್ ॥ ೧೦ ॥

॥ ಪದಪಾಠಃ ॥

ಆ । ಘ । ತಾ । ಗಚ್ಛಾನ್ । ಉತ್ऽತರಾ । ಯುಗಾನಿ । ಯತ್ರ । ಜಾಮಯಃ । ಕೃಣವನ್ । ಅಜಾಮಿ ।
ಉಪ । ಬರ್ಬೃಹಿ । ವೃಷಭಾಯ । ಬಾಹುಂ । ಅನ್ಯಂ । ಇಚ್ಛಸ್ವ । ಸುಽಭಗೇ । ಪತಿಂ । ಮತ್ ॥ ೧೦ ॥

॥ ಸಾಯಣಭಾಷ್ಯಂ ॥

ಯತ್ರ ಯೇಷು ಕಾಲೇಷು ಜಾಮಯೋಃ ಭಗಿನ್ಯೋಽಜಾಮ್ಯಭ್ರಾತರಂ ಪತಿಂ ಕೃಣವನ್ ಕರಿಷ್ಯಂತಿ ತಾ ತಾನ್ಯುತ್ತರಾಣಿ ಯುಗಾನಿ ಕಾಲವಿಶೇಷಾ ಆ ಗಚ್ಛಾನ್ । ಆ ಗಮಿಷ್ಯಂತಿ । ಘೇತಿ ಪೂರಣಃ । ಯಸ್ಮಾದೇವಂ ತಸ್ಮಾದ್ಧೇ ಸುಭಗೇ ತ್ವಮಿದಾನೀಂ ಮನ್ಮತ್ತೋಽನ್ಯಂ ಪತಿಂ ಭರ್ತಾರಮಿಚ್ಛಸ್ವ। ಕಾಮಯಸ್ವ। ತದನಂತರಂ ವೃಷಭಾಯ ತವ ಯೋನೌ ರೇತಃ ಸೇಕ್ತ್ರೇ ಪುರುಷಾಯಾತ್ಮೀಯಂ ಬಾಹುಮುಪ ಬರ್ಬೃಹಿ । ಶಯನಕಾಲ ಉಪಬರ್ಹಣಂ ಕುರು ॥

॥ ಪ್ರತಿಪದಾರ್ಥ ॥

(ಎಲೈ ಯಮಿಯೇ) **ಯತ್ರ**—ಯಾವ ಕಾಲಗಳಲ್ಲಿ । **ಜಾಮಯಃ**—ಸಹೋದರಿಗಳು । ಅಜಾಮಿ—ಭ್ರಾತೃಗಳಲ್ಲದವರನ್ನು । **ಕೃಣವನ್**—ತಮ್ಮ ಪತಿಗಳನ್ನಾಗಿ ಮಾಡಿಕೊಳ್ಳುವರೋ । **ತಾ**—ಅಂತಹ । **ಉತ್ತರಾ**—ಮುಂದೆ ಬರತಕ್ಕ । **ಯುಗಾನಿ**—ಕಾಲವಿಶೇಷಗಳು । **ಆ ಅಗಚ್ಛಾನ್**—ಒದಗಿಬರುತ್ತವೆ. (ಆದುದರಿಂದ) । **ಸುಭಗೇ**—ಎಲೈ ಸುಂದರಿಯೇ, । **ಮತ್**—ನನಗಿಂತಲೂ । **ಅನ್ಯಂ**—ಬೇರೆಯಾದವನನ್ನು । **ಪತಿಂ**—ನಿನ್ನ ಪತಿಯನ್ನಾಗಿ । **ಇಚ್ಛಸ್ವ**—ಅಪೇಕ್ಷಿಸು । **ವೃಷಭಾಯ**—ಶಕ್ತಿಯುತನಾದ ಆ ಪುರುಷನಿಗೆ । **ಬಾಹುಂ**—ನಿನ್ನ ಬಾಹುವನ್ನು । **ಉಪಬರ್ಬೃಹಿ**—ತಲೆದಿಂಬನ್ನಾಗಿ ಮಾಡು ।

॥ ಭಾವಾರ್ಥ ॥

ಎಲೈ ಯಮಿಯೇ, ಯಾವ ಕಾಲಗಳಲ್ಲಿ ಸಹೋದರಿಗಳು ತಮ್ಮ ಭ್ರಾತೃಗಳಲ್ಲದವರನ್ನು ತಮ್ಮ ಪತಿಗಳನ್ನಾಗಿ ಮಾಡಿಕೊಳ್ಳುವರೋ, ಅಂತಹ ಕಾಲವಿಶೇಷಗಳು ಮುಂದೆ ಒದಗಿಬರುತ್ತವೆ. ಎಲೈ ಸುಂದರಿಯೇ, ಆದುದರಿಂದ ನೀನು ನನಗಿಂತಲೂ ಬೇರೆಯಾದವನನ್ನು ನಿನಗೆ ಪತಿಯನ್ನಾಗಿ ಅಪೇಕ್ಷಿಸಿ ವರಿಸು. ನಿನ್ನ ಕಾಮವನ್ನು ಪೂರೈಸುವ ಶಕ್ತಿಯುಳ್ಳ ಆ ಪುರುಷನಿಗೆ ನಿನ್ನ ಬಾಹುವನ್ನು ತಲೆದಿಂಬನ್ನಾಗಿ ಮಾಡಿ ಅವನನ್ನು ಸುಖಪಡಿಸು.

## English Translation

(Yama speaks). The subsequent ages will come, when sisters will choose one who is not a brother (as a husband); therefore, auspicious one, choose another husband than me, and make your arm a pillow for your mate.

॥ ವಿಶೇಷವಿಷಯಗಳು ॥

**ಜಾಮಿಃ** ಎಂಬ ಶಬ್ದದ ಅರ್ಥವನ್ನು ವಿವರಿಸುತ್ತಾ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಈ ರೀತಿ ಹೇಳಿದ್ದಾರೆ.

ಜಾಮಿಃ । ಆ ಘಾ ತಾ ಗಚ್ಛಾನುತ್ತರಾ ಯುಗಾನಿ ಯತ್ರ ಜಾಮಯಃ ಕೃಣವನ್ನಜಾಮಿ। ಉಪ ಬರ್ಬೃಹಿ ವೃಷಭಾಯ ಬಾಹುಮನ್ಯಮಿಚ್ಛಸ್ವ ಸುಭಗೇ ಪತಿಂ ಮತ್॥ ಆಗಮಿಷ್ಯತಿ ತಾನ್ಯುತ್ತರಾಣಿ ಯುಗಾನಿ ಯತ್ರ ಜಾಮಯಃ ಕರಿಷ್ಯಂತ್ಯಜಾಮಿಕರ್ಮಾಣಿ । ಜಾಮ್ಯತಿರೇಕನಾಮ।

ಬಾಲಿಶಸ್ಯ ವಾ । ಅಸಮಾನಜಾತೀಯಸ್ಯ ವೋಪಜನಃ । ಉಪಧೇಹಿ ವೃಷಭಾಯ ಬಾಹು-ಮನ್ಯಮಿಚ್ಛಸ್ವ ಸುಭಗೇ ಪತಿಂ ಮದಿತಿ ವ್ಯಾಖ್ಯಾತಂ ॥

(ನಿ. ೪-೨೦)

ಜಾಮಿ ಶಬ್ದಕ್ಕೆ ಬಂಧುವೆಂಬ ಅರ್ಥವಿರುವುದು ಮತ್ತು ಭಗಿನೀ (ಸಹೋದರಿಯೆಂಬ) ಮೂರ್ಖ ಎಂಬ ಅರ್ಥವೂ ಇರುವುದು. ಅಜಾಮಿ ಎಂದರೆ ಬಂಧುಗಳಲ್ಲದವರು ಮಾಡುವ ಕಾರ್ಯ. ಪರಸ್ಪರ ಆಚರಿಸುವ ಕರ್ಮ. ಎಂದರೆ ವಿವಾಹಾತ್ಪೂರ್ವದಲ್ಲಿ ಪತಿಪತ್ನಿಯರಿಗೆ ಯಾವ ಸಂಬಂಧವೂ ಇರುವುದಿಲ್ಲ. ಕನ್ಯೆಯ ಕುಲವೇ ಬೇರೆ, ವರನ ಕುಲವೇ ಬೇರೆ. ಈ ರೀತಿ ಬೇರೆಬೇರೆ ಕುಲದವರು ಒಬ್ಬರನ್ನೊಬ್ಬರು ವರಿಸಿ ವಿವಾಹಮಾಡಿಕೊಳ್ಳುವುದು ಸಂಪ್ರದಾಯವು. ಈ ವಿಧವಾದ ಕರ್ಮಕ್ಕೂ ಜಾಮಿ ಎಂದು ಹೆಸರು. ಅಜಾಮಿ ಎಂದರೆ ಅದಕ್ಕೆ ವ್ಯತಿರೇಕವಾದ ಕರ್ಮ. ಎಂದರೆ ಕನ್ಯೆಯೂ ವರನೂ ಒಂದೇ ಕುಲದವರಾಗಿದ್ದು ಅದರಲ್ಲಿಯೂ ಸಹೋದರ ಸಹೋದರಿಯರಾಗಿದ್ದಲ್ಲಿ ಅವರ ವಿವಾಹವು ನಿಷಿದ್ಧವು. ಈ ರೀತಿಯಾದ ನಿಷಿದ್ಧಕರ್ಮಕ್ಕೆ ಅಜಾಮಿ ಎಂದು ಹೆಸರು. ಪ್ರಕೃತ ಋಕ್ಕಿನಲ್ಲಿ ಈ ನಿಷಿದ್ಧಕರ್ಮವಾದ ಸಂಭೋಗ ಕ್ರಿಯೆಯನ್ನು ಸಹೋದರ ಸಹೋದರಿಯರು ಮಾಡುವ ಕಾಲವು ಮುಂದೆ ಬರುತ್ತದೆಯೆಂದು ಸೂಚಿಸಲಾಗಿದೆ. ಎಂದರೆ ಈಗ (ಋಷಿಯ ಕಾಲದಲ್ಲಿ) ಸಹೋದರ ಸಹೋದರಿಯರಿಗೆ ಪರಸ್ಪರ ಸಂಭೋಗ ಕರ್ಮವು ನಿಷಿದ್ಧವು. ಉತ್ತರೋತ್ತರ ಎಂದರೆ ಮುಂದೆ ಕಲಿಕಾಲದಲ್ಲಿ ಈ ವಿಧವಾದ ಸದ್ವರ್ತನೆಯನ್ನು ಜನರು ಬಿಟ್ಟು ಸ್ವೇಚ್ಛೆಯಾಗಿ ನಿಷಿದ್ಧಕಾರ್ಯವಾದ (ಸಹೋದರ ಸಹೋದರಿಯರಿಗೆ ಪರಸ್ಪರ ನಡೆಯುವ) ಸಂಭೋಗಕ್ರಿಯೆಯಲ್ಲಿ ಆಸಕ್ತರಾಗುವರು. ಅಂತಹ ಕಾಲವು ಮುಂದೆ ಬರುವುದು. ಆದ್ದರಿಂದ ಎಲೌ ಶೋಭನಾಂಗಿ, ನನ್ನನ್ನು ಬಿಟ್ಟು ನಿನ್ನನ್ನು ಕಾಮರತಿಯಿಂದ ತೃಪ್ತಿಪಡಿಸುವ ಬೇರೊಬ್ಬ ಪುರುಷನನ್ನು ಪತಿಯನ್ನಾಗಿ ವರಿಸಿ ನಿನ್ನ ಬಾಹುವೆಂಬ ದಿಂಬಿನಲ್ಲಿ ಅವನಿಗೆ ಆಶ್ರಯವನ್ನು ಕೊಟ್ಟು ಅವನೊಡನೆ ರತಿಸುಖವನ್ನನುಭವಿಸು ಎಂದು ಋಷಿಯು ವರ್ಣಿಸಿದ್ದಾನೆ.

। ಸಂಹಿತಾಪಾಠಃ ।

ಕಿಂ ಭ್ರಾತಾಸದ್ಯದನಾಥಂ ಭವಾತಿ ಕಿಮು ಸ್ವಸಾ ಯನ್ನಿರ್ಋತಿರ್ನಿ-ಗಚ್ಛಾತ್ ।
ಕಾಮಮೂತಾ ಬಹ್ವೇ೩ತದ್ರಪಾಮಿ ತನ್ವಾ ಮೇ ತನ್ವಂ೧ ಸಂ ಪಿಪೃಗ್ಧಿ ॥

। ಪದಪಾಠಃ ॥

ಕಿಂ । ಭ್ರಾತಾ । ಅಸತ್ । ಯತ್ । ಅನಾಥಂ । ಭವಾತಿ । ಕಿಂ । ಊಂ ಇತಿ । ಸ್ವಸಾ । ಯತ್ ।
ನಿಃऽಋತಿಃ । ನಿऽಗಚ್ಛಾತ್ ।
ಕಾಮಂऽಮೂತಾ । ಬಹು । ಏತತ್ । ರಪಾಮಿ । ತನ್ವಾ । ಮೇ । ತನ್ವಂ । ಸಂ । ಪಿಪೃಗ್ಧಿ ॥ ೧೧ ॥

॥ ಸಾಯಣಭಾಷ್ಯಂ ॥

ಯಮಿಾ ಯಮೇನ ಪ್ರತ್ಯಾಖ್ಯಾತಾ ಪುನರಾಹ । ಯದ್ಯಸ್ಮಿನ್ಭ್ರಾತರಿ ಸತಿ ಸ್ವಸ್ರಾದಿಕಮ-ನಾಥಂ ನಾಥರಹಿತಂ ಭವತಿ ಸ ಭ್ರಾತಾ ಕಿಮುಸತ್ । ಕಿಂ ಭವತಿ । ನ ಭವತೀತ್ಯರ್ಥಃ । ಕಿಂಚ ಯಸ್ಯಾಂ ಭಗಿನ್ಯಾಂ ಸತ್ಯಾಂ ಭ್ರಾತರಂ ನಿರ್ಋತಿರ್ದುಃಖಂ ನಿಗಚ್ಛಾತ್ ನಿಯಮೇನ ಗಚ್ಛತಿ ಪ್ರಾಪ್ನೋತಿ ಸಾ ಸ್ವಸಾ ಕಿಮು । ಕಿಂ ವಾ ಭವತಿ । ಭ್ರಾತೃಭಗಿನ್ಯೋಶ್ಚ ಪರಸ್ಪರಂ ಪ್ರೀತಿರ್ಯೇನ ಕೇನಚಿದುಪಾಯೇ-ನಾವಶ್ಯಂ ಕಾರ್ಯೇತ್ಯಭಿಪ್ರಾಯಃ । ಸಾಹಂ ಕಾಮಮೂತಾ ಕಾಮೇನ ಮೂರ್ಛಿತಾ ಸತೀ ಬಹು ನಾನಾಪ್ರಕಾರಮೇತದೀದೃಶಮುಕ್ತಂ ವಕ್ಷ್ಯಮಾಣಂ ಚ ರಪಾಮಿ । ಪ್ರಲಪಾಮಿ । ಏತಜ್ಜ್ಞಾತ್ವಾ ಮೇ ಮಮ ತನ್ವಾ ಶರೀರೇಣ ತನ್ವಂ ಶರೀರಂ ಸಂ ಪಿಪೃಗ್ಧಿ । ಸಂಪರ್ಚಯ । ಸಂಭೋಗೇನ ಸಂಶ್ಲೇಷಯ । ಮಾಂ ಸಮ್ಯಗ್ಭುಂಕ್ಷ್ವೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯತ್ ಅಸತ್**—ಯಾವ ಸಹೋದರನಿರುವಾಗ। **ಅನಾಥಂ ಭವಾತಿ**—ಸಹೋದರಿಯು ಅನಾಥೆಯಾಗಿರು ವಳೋ । **ಭ್ರಾತಾ ಕಿಂ**—ಅವನು ನಿಜವಾಗಿಯೂ ಸಹೋದರನೆನ್ನಿಸಿಕೊಳ್ಳುವನೇ। **ಯತ್**—ಯಾವ ಸಹೋದರಿ ಯಿರುವಾಗ । **ನಿರ್ಋತಿಃ**—ದುಃಖವು । **ನಿಗಚ್ಛಾತ್**—ಭ್ರಾತೃವನ್ನು ಸೇರಿ ಪೀಡಿಸುವುದೋ । **ಸ್ವಸಾ ಕಿಮು**—ಅವಳು ನಿಜವಾಗಿಯೂ ಸಹೋದರಿಯೆನಿಸಿಕೊಳ್ಳುವಳೇ ? (ಎಲೈ ಯಮನೇ) । **ಕಾಮಭೂತಾ**—ಕಾಮದಿಂದ ಪೀಡಿತಳಾಗಿ। **ಬಹು**—ಅನೇಕ ವಿಧವಾಗಿ । **ಏತತ್**—ಈ ಪ್ರಾರ್ಥನಾರೂಪದಲ್ಲಿ । **ರಪಾಮಿ**—ನಾನು ಬೇಡಿಕೊಳ್ಳುತ್ತಿದ್ದೇನೆ । **ಮೇ**—ನನ್ನ । **ತನ್ವಾ**—ಶರೀರದೊಂದಿಗೆ । **ತನ್ವಂ**—ನಿನ್ನ ಶರೀರವನ್ನು । **ಸಂ ಪಿಪೃಗ್ಧಿ**—ಸೇರಿಸಿ ಸುಖವನ್ನನುಭವಿಸು.

॥ ಭಾವಾರ್ಥ ॥

ಎಲೈ ಯಮನೇ, ಯಾವ ಸಹೋದರನಿರುವಾಗ ಸಹೋದರಿಯು ಅನಾಥೆಯಾಗಿರುವಳೋ, ಅವನು ನಿಜ ವಾಗಿಯೂ ಸಹೋದರನೆನ್ನಿಸಿಕೊಳ್ಳುವನೇ ? ಯಾವ ಸಹೋದರಿಯಿರುವಾಗ ಭ್ರಾತೃವನ್ನು ದುಃಖವು ಪೀಡಿಸುವುದೋ ಅವಳು ನಿಜವಾಗಿಯೂ ಸಹೋದರಿಯೆನ್ನಿಸಿಕೊಳ್ಳುವಳೇ ? ಕಾಮದಿಂದ ಪೀಡಿತಳಾಗಿ ನಾನು ಅನೇಕವಿಧದಲ್ಲಿ ಈ ಪ್ರಾರ್ಥನಾರೂಪದಲ್ಲಿ ಬೇಡಿಕೊಳ್ಳುತ್ತಿದ್ದೇನೆ. ನನ್ನ ಶರೀರದೊಂದಿಗೆ ನಿನ್ನ ಶರೀರವನ್ನು ಸೇರಿಸಿ ಸುಖವನ್ನನುಭವಿಸು.

## English Translation

(Yami speaks). Is he a brother whose sister has no supporter in her brother ? Is she a sister who will allow (her brother) to approach misfortune? Overcome by desire, I strongly urge this one request ; unite your person with mine.

॥ ಸಂಹಿತಾಪಾಠಃ ॥

ನ ವಾ ಉ ತೇ ತನ್ವಾ ತನ್ವಂ೧ ಸಂ ಪಪೃಚ್ಯಾಂ ಪಾಪಮಾಹುರ್ಯಃ

ಸ್ವಸಾರಂ ನಿಗಚ್ಛಾತ್।

ಅನ್ಯೇನ ಮತ್ಪ್ರಮುದಃ ಕಲ್ಪಯಸ್ವ ನ ತೇ ಭ್ರಾತಾ ಸುಭಗೇ ವಷ್ಟ್ಯೇತತ್

॥ ಪದಪಾಠಃ ॥

ನ । ವೈ । ಊಂ ಇತಿ । ತೇ । ತನ್ವಾ । ತನ್ವಂ । ಸಂ । ಪಪೃಚ್ಯಾಂ । ಪಾಪಂ । ಆಹುಃ । ಯಃ । ಸ್ವಸಾರಂ । ನಿಽಗಚ್ಛಾತ್ ।

ಅನ್ಯೇನ । ಮತ್ । ಪ್ರಽಮುದಃ । ಕಲ್ಪಯಸ್ವ । ನ । ತೇ । ಭ್ರಾತಾ । ಸುಽಭಗೇ । ವಷ್ಟಿ । ಏತತ್ ॥೧೨॥

॥ ಸಾಯಣಭಾಷ್ಯಂ

ಯಮೋ ಯಮೀಂ ಪ್ರತ್ಯುಕ್ತವಾನ್ । ಹೇ ಯಮಿ ತೇ ತವ ತನ್ವಾ ಶರೀರೇಣ ತನ್ವ-ಮಾತ್ಮೀಯಂ ಶರೀರಂ ನ ವೈ ಸಂ ಪಪೃಚ್ಯಾಂ । ನೈವ ಸಂಪರ್ಚಯಾಮಿ। ನೈವಾಹಂ ತ್ವಾಂ ಸಂಭೋಕ್ತು-ಮಿಚ್ಛಾಮೀತ್ಯರ್ಥಃ। ಯೋ ಭ್ರಾತಾ ಸ್ವಸಾರಂ ಭಗಿನೀಂ ನಿಗಚ್ಛಾತ್ ನಿಯಮೇನೋಪಗಚ್ಛತಿ । ಸಂಭುಂಕ್ತೇ ಇತ್ಯರ್ಥಃ । ತಂ ಪಾಪಂ ಪಾಪಕಾರಿಣಮಾಹುಃ । ಶಿಷ್ಟಾ ವದಂತಿ । ಏತಜ್ಜ್ಞಾತ್ವಾ ಹೇ ಸುಭಗೇ ಸುಷ್ಠು ಭಜನೀಯೇ ಹೇ ಯಮಿ ತ್ವಂ ಮನ್ಮತ್ತೋಽನ್ಯೇನ ತ್ವದ್ಯೋಗ್ಯೇನ ಪುರುಷೇಣ ಸಹ ಪ್ರಮುದಃ ಸಂಭೋಗಲಕ್ಷಣಾನ್ಪ್ರಹರ್ಷಾನ್ಕಲ್ಪಯಸ್ವ । ಸಮರ್ಥಯ । ತೇ ತವ ಭ್ರಾತಾ ಯಮ ಏತದೀದೃಶಂ ತ್ವಯಾ ಸಹ ಮೈಥುನಂ ಕರ್ತುಂ ನ ವಷ್ಟಿ । ನ ಕಾಮಯತೇ । ನೇಚ್ಛತಿ ॥

॥ ಪ್ರತಿಪದಾರ್ಥ ॥

(ಎಲೈ ಯಮಿಯೇ) **ತೇ**—ನಿನ್ನ । **ತನ್ವಾ**—ಶರೀರದೊಂದಿಗೆ । **ತನ್ವಂ**—ನನ್ನ ಶರೀರವನ್ನು । **ನ ವೈ ಸಂ ಪಪೃಚ್ಯಾಂ**—ನಾನು ಖಂಡಿತ ಸೇರಿಸುವುದಿಲ್ಲ । **ಯಃ**—ಯಾವ ಸಹೋದರನು । **ಸ್ವಸಾರಂ**—ತನ್ನ ಸಹೋದರಿಯನ್ನು । **ನಿಗಚ್ಛಾತ್**—ಕೂಡುವನೋ (ಅವನನ್ನು) । **ಪಾಪಂ**—ಪಾಪಿಷ್ಠನೆಂದು । **ಆಹುಃ**—ತಿಳಿದವರು ಹೇಳುತ್ತಾರೆ । **ಸುಭಗೇ**—ಎಲೈ ಸುಂದರಿಯೇ । **ಮತ್**—ನನಗಿಂತಲೂ । **ಅನ್ಯೇನ**—ಬೇರೆ ಪುರುಷನೊಂದಿಗೆ ಸೇರಿ । **ಪ್ರಮುದಃ**-ಅನೇಕ ವಿಧವಾದ ಸುಖಗಳನ್ನು । **ಕಲ್ಪಯಸ್ವ**—ಹೊಂದಿಸಿಕೊ । **ತೇ**—ನಿನ್ನ। **ಭ್ರಾತಾ**—ಸಹೋದರನಾದ ನಾನು । **ಏತತ್**—ಈ ಸಂಬಂಧವನ್ನು । **ನ ವಷ್ಟಿ**—ಅಪೇಕ್ಷಿಸುವುದಿಲ್ಲ.

। ಭಾವಾರ್ಥ ।

ಎಲೈ ಯಮಿಯೇ, ನಿನ್ನ ಶರೀರದೊಂದಿಗೆ ನನ್ನ ಶರೀರವನ್ನು ನಾನು ಖಂಡಿತ ಸೇರಿಸುವುದಿಲ್ಲ. ಯಾವ ಸಹೋದರನು ತನ್ನ ಸಹೋದರಿಯನ್ನು ಕೂಡುವನೋ, ಅವನನ್ನು ತಿಳಿದವರು ಪಾಪಿಷ್ಠನೆಂದು ಕರೆಯುತ್ತಾರೆ. ಎಲೈ ಸುಂದರಿಯೇ, ನನಗಿಂತಲೂ ಬೇರೆಯಾದ ಪುರುಷನೊಂದಿಗೆ ಸೇರಿ ಅನೇಕ ವಿಧವಾದ ಸುಖಗಳನ್ನು ಪಡೆ. ನಿನ್ನ ಸಹೋದರನಾದ ನಾನು ಈ ಸಂಬಂಧವನ್ನಪೇಕ್ಷಿಸುವುದಿಲ್ಲ.

English Translation

(Yama speaks). I will not unite my persons with yours ; they call him who approaches a sister, a sinner. Enjoy pleasure with some other than me ; your brother, auspicious one, has no such desire

॥ ಸಂಹಿತಾಪಾಠಃ ॥

ಬತೋ ಬತಾಸಿ ಯಮ ನೈವ ತೇ ಮನೋ ಹೃದಯಂ ಚಾವಿದಾಮ ।
ಅನ್ಯಾ ಕಿಲ ತ್ವಾಂ ಕಕ್ಷ್ಯೇವ ಯುಕ್ತಂ ಪರಿ ಷ್ವಜಾತೇ ಲಿಬುಜೇವ ವೃಕ್ಷಂ ॥

॥ ಪದಪಾಠಃ ॥

ಬತಃ । ಬತ । ಅಸಿ । ಯಮ । ನ । ಏವ । ತೇ । ಮನಃ । ಹೃದಯಂ । ಚ । ಅವಿದಾಮ ।
ಅನ್ಯಾ । ಕಿಲ । ತ್ವಾಂ । ಕಕ್ಷ್ಯಾಽಇವ । ಯುಕ್ತಂ । ಪರಿ । ಸ್ವಜಾತೇ । ಲಿಬುಜಾಽಇವ । ವೃಕ್ಷಂ ॥ ೧೩ ॥

॥ ಸಾಯಣಭಾಷ್ಯಂ ॥

ಯಮೀ ಪ್ರತ್ಯುವಾಚ । ಹೇ ಯಮ ತ್ವಂ ಬತೋ ದುರ್ಬಲೋಽಸಿ । ಬತೇತಿ ನಿಪಾತಃ ಖೇದಾನುಕಂಪಯೋಃ । ಅನುಕಂಪ್ಯಶ್ಚಾಸಿ । ತೇ ತ್ವದೀಯಂ ಮನೋ ಮನೋಗತಂ ಸಂಕಲ್ಪಂ ಹೃದಯಂ ಚ ಬುದ್ಧಿಗತಮಧ್ಯವಸಾಯಂ ಚ ನೈವಾವಿದಾಮ । ವಯಂ ನ ಜಾನೀಮ ಏವ । ಮತ್ತೋಽನ್ಯಾ ಕಾಚಿತ್ಸ್ತ್ರೀ ತ್ವಾಂ ಪರಿ ಷ್ವಜಾತೇ ಕಿಲ । ತತ್ರ ದೃಷ್ಟಾಂತದ್ವಯಮುಚ್ಯತೇ । ಕಕ್ಷ್ಯೇವ ಯುಕ್ತಂ ಯಥಾ ಕಕ್ಷ್ಯಾ ರಜ್ಜುರ್ಯುಕ್ತಮಾತ್ಮನಾ ಸಂಬದ್ಧಮಶ್ವಂ ಪರಿಷ್ವಜತೇ ತದ್ವತ್ । ಲಿಬುಜೇವ ವೃಕ್ಷಂ ಯಥಾ ಲಿಬುಜಾ ವ್ರತತಿರ್ಗಾಢಂ ವೃಕ್ಷಂ ಪರಿಷ್ವಜತೇ ತದ್ವಚ್ಚ । ಅನ್ಯಸ್ಯಾಂ ಸ್ತ್ರಿಯಾಮಾಸಕ್ತಸ್ತ್ವಂ ಮಾಂ ಪರಿಷ್ವಕ್ತುಂ ನೇಚ್ಛಸೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಮ**—ಎಲೈ ಯಮನೇ । (**ತ್ವಂ**—ನೀನು) । **ಬತ**—ಖಂಡಿತವಾಗಿಯೂ । **ಬತಃ**—ದುರ್ಬಲನಾಗಿ । **ಅಸಿ**—ಆಗಿದ್ದೀಯೆ । **ತೇ**—ನಿನ್ನ । **ಮನಃ**—ಮನಸ್ಸನ್ನಾಗಲಿ । **ಹೃದಯಂ ಚ**—ಹೃದಯವನ್ನಾಗಲಿ । **ನೈವ ಅವಿದಾಮ**—ನಾವು ಖಂಡಿತ ಅರಿಯಲಾರೆವು । **ಕಕ್ಷ್ಯಾ ಇವ**—ಹಗ್ಗವು । **ಯುಕ್ತಂ**—ತನ್ನನ್ನು ಹೊಂದಿಕೊಂಡಿರುವ ಅಶ್ವವನ್ನು ಕಟ್ಟಿಕೊಳ್ಳುವಂತೆಯೂ । **ಲಿಬುಜಾ ಇವ**—ಲತೆಯು । **ವೃಕ್ಷಂ**—ವೃಕ್ಷವನ್ನು ಅಪ್ಪಿಕೊಳ್ಳುವಂತೆಯೂ, । **ಅನ್ಯಾ ಕಿಲ**—ಬೇರೊಬ್ಬ ಸ್ತ್ರೀಯು । **ತ್ವಾಂ**—ನಿನ್ನನ್ನು । **ಪರಿ ಷ್ವಜಾತೇ**—ಅಪ್ಪಿಕೊಳ್ಳುತ್ತಾಳೆ.

॥ ಭಾವಾರ್ಥ ॥

ಎಲೈ ಯಮನೇ, ನೀನು ಖಂಡಿತವಾಗಿಯೂ ದುರ್ಬಲನಾಗಿ ಆಗಿದ್ದೀಯೆ. ನಿನ್ನ ಮನಸ್ಸನ್ನಾಗಲಿ, ನಿನ್ನ ಹೃದಯವನ್ನಾಗಲಿ ನಾವು ಖಂದಿತ ಅರಿಯಲಾರೆವು. ಹಗ್ಗವು ತನ್ನನ್ನು ಹೊಂದಿರುವ ಅಶ್ವವನ್ನು ಕಟ್ಟಿಕೊಳ್ಳುವಂತೆಯೂ, ಲತೆಯು ವೃಕ್ಷವನ್ನು ಅಪ್ಪಿಕೊಳ್ಳುವಂತೆಯೂ ಬೇರೊಬ್ಬ ಸ್ತ್ರೀಯು ನಿನ್ನನ್ನಪ್ಪಿಕೊಳ್ಳುತ್ತಾಳೆ.

## English Translation

(Yami speaks). Alas, Yama, you are feeble; we understand not your mind or your heart. Some other female embraces you as a girth a horse, or as a creeper a tree.

॥ ವಿಶೇಷವಿಷಯಗಳು ॥

ಬತಃ ಎಂಬ ಶಬ್ದದ ಅರ್ಥವನ್ನು ವಿವರಿಸುತ್ತಾ ಯಾಸ್ಕರು ಪ್ರಕೃತ ಋಕ್ಕಿನ ನಿರ್ವಚನವನ್ನು ಹೇಳಿದಾರೆ—

**ಬತಃ । ಬತ ಇತಿ ನಿಪಾತಃ ಖೇದಾನುಕಂಪಯೋಃ । ಬತೋ ಬತಾಸಿ ಯಮ ನೈವ ತೇ ಮನೋ ಹೃದಯಂ ಚಾವಿದಾಮ । ಅನ್ಯಾ ಕಿಲ ತ್ವಾಂ ಕಕ್ಷ್ಯೇವ ಯುಕ್ತಂ ಪರಿಷ್ವಜಾತೇ ಲಿಬುಜೇವ ವೃಕ್ಷಂ ॥ ಬತೋ ಬಲಾದತೀತೋ ಭವತಿ । ದುರ್ಬಲೋ ಬತಾಸಿ ಯಮ ನೈವ ತೇ ಮನೋ ಹೃದಯಂ ಚ ವಿಜಾನೀಮೋಽನ್ಯಾ ಕಿಲ ತ್ವಾಂ ಪರಿಷ್ವಂಕ್ಷ್ಯತೇ ಕಕ್ಷ್ಯೇವ ಯುಕ್ತಂ ಲಿಬುಜೇವ ವೃಕ್ಷಂ । ಲಿಬುಜಾ ವ್ರತತಿರ್ಭವತಿ ಲೀಯತೇ ವಿಭಜಂತೀತಿ । ವ್ರತತಿರ್ವರಣಾಚ್ಚ ಸಂಯನಾಚ್ಚ ತತನಾಚ್ಚ ॥**

(ನಿ ೬-೨೮)

ಬತ ಎಂಬ ಶಬ್ದವು ಸಖೇದಾಶ್ಚರ್ಯಗಳನ್ನೂ ಅಥವಾ ವ್ಯಸನವನ್ನೂ ಮರುಕವನ್ನೂ ಸೂಚಿಸುವ ನಿಪಾತವು (ಅವ್ಯಯವು). ಎಲೈ ಯಮನೇ, ನಿನ್ನ ಮನಸ್ಸು ಧೈರ್ಯಯುಕ್ತವಾಗಿಲ್ಲ. ಅತಿ ದುರ್ಬಲವಾಗಿರುವುದು. ಎಂದರೆ ಮನಃಸ್ಥಿಮಿತಿಯಿಲ್ಲ. ನಿನ್ನ ಮನಸ್ಸನ್ನು ಹೀಗೆಯೇ ಸರಿ ಎಂದು ನಾವು ತಿಳಿಯಲಾರೆವು. ಆಹಾ ಕಷ್ಟ, ಕಷ್ಟ ! ಲತೆಯು ಸಮೀಪದಲ್ಲಿರುವ ವೃಕ್ಷವನ್ನು ಸುತ್ತಿಕೊಳ್ಳುವಂತೆ ಬೇರೊಬ್ಬ ಸ್ತ್ರೀಯು ನಿನ್ನನ್ನು ತನ್ನ ಬಾಹುಗಳಿಂದ ಬಿಗಿದಪ್ಪಿಕೊಳ್ಳುವಳು. ಇದನ್ನು ನೋಡಿ ಸಹಿಸುವುದು ಬಹುಕಷ್ಟವು. ಲಿಬುಜಾ ಎಂದರೆ ಒಂದುವಿಧ ಬಳ್ಳಿಯು. ಇದು ತನ್ನ ಲತೆಯನ್ನು ವೃಕ್ಷದಲ್ಲೆಲ್ಲಾ ವ್ಯಾಪಿಸುವಂತೆ ಸುತ್ತಿಕೊಳ್ಳುವುದು. ಈ ರೀತಿ ವಿಭಾಗಿಸಿ ಅಥವಾ ವ್ಯಾಪಿಸಿ ವೃಕ್ಷದಲ್ಲಿಯೇ ಸೇರಿಕೊಳ್ಳುವುದರಿಂದ ಲಿಬುಜಾ ಎಂದರೆ ವ್ರತತಿ ಅಥವಾ ಬಳ್ಳಿಗೆ ಹೆಸರು. ಇದರಂತೆಯೇ ವ್ರತತಿಶಬ್ದವೂ ಸಹ ತನಗೆ ಬೇಕಾದ ವೃಕ್ಷವನ್ನು ಆರಿಸಿಕೊಳ್ಳು ಎಂಬರ್ಥವಿರುವ ವೃ ಧಾತುವಿನಿಂದಾಗಲಿ, ಅಥವಾ ಸುತ್ತಿಕೊಳ್ಳು ಎಂಬರ್ಥವಿರುವ ಸಿ ಧಾತುವಿನಿಂದಾಗಲಿ, ಸುತ್ತಲೂ ಹರಡು ಎಂಬರ್ಥವಿರುವ ತನು ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ಶಬ್ದಕ್ಕೆ ಬಳ್ಳಿ, ಲತೆಯೆಂದೇ ಅರ್ಥವಿರುವುದು.



॥ ಸಂಹಿತಾಪಾಠಃ ॥

ಅನ್ಯಮೂ ಷು ತ್ವಂ ಯಮ್ಯನ್ಯ ಉ ತ್ವಾಂ ಪರಿ ಷ್ವಜಾತೇ ಲಿಬುಜೇವ ವೃಕ್ಷಂ।
ತಸ್ಯ ವಾ ತ್ವಂ ಮನ ಇಚ್ಛಾ ಸ ವಾ ತವಾಧಾ ಕೃಣುಷ್ವ ಸಂವಿದಂ
ಸುಭದ್ರಾಂ ॥ ೧೪ ॥

॥ ಪದಪಾಠಃ ॥

ಅನ್ಯಂ। ಊಂ ಇತಿ। ಸು। ತ್ವಂ। ಯಮಿ। ಅನ್ಯಃ। ಊಂ ಇತಿ। ತ್ವಾಂ। ಪರಿ। ಸ್ವಜಾತೇ। ಲಿಬುಜಾऽಇವ। ವೃಕ್ಷಂ।
ತಸ್ಯ। ವಾ। ತ್ವಂ। ಮನಃ। ಇಚ್ಛ। ಸಃ। ವಾ। ತವ। ಅಧ। ಕೃಣುಷ್ವ। ಸಂऽವಿದಂ। ಸುऽಭದ್ರಾಂ॥

॥ ಸಾಯಣಭಾಷ್ಯಂ ॥

ಯಮಃ ಪುನರಪ್ಯಾಹ। ಹೇ ಯಮಿ ತ್ವಮನ್ಯಮು ಅನ್ಯಂ ಪುರುಷಮೇವ ಸು ಸುಷ್ಠು ಪರಿಷ್ವಜ। ಅನ್ಯ ಉ ಅನ್ಯೋऽಪಿ ಪುರುಷಸ್ತ್ವಾಂ ಪರಿಷ್ವಜಾತೇ। ತತ್ರ ದೃಷ್ಟಾಂತಃ। ಲಿಬುಜೇವ ವೃಕ್ಷಂ ಯಥಾ ವಲ್ಲೀ ಗಾಢಂ ವೃಕ್ಷಂ ಪರಿಷ್ವಜತೇ ತದ್ವತ್। ತಥಾ ಸತಿ। ವಾಶಬ್ದಃ ಸಮುಚ್ಚಯೇ। ತ್ವಂ ತಸ್ಯ ಚ ಪುರುಷಸ್ಯ ಮನ ಇಚ್ಛ। ಕಾಮಯ। ತಸ್ಯ ತ್ವಂ ವಶವರ್ತಿನೀ ಭವೇತ್ಯರ್ಥಃ। ಸ ಚ ಪುರುಷಸ್ತವ ಮನ ಇಚ್ಛತು। ಅಧಾಥ ಪರಸ್ಪರವಶವರ್ತಿತ್ವಾನಂತರಂ ತ್ವಂ ತೇನ ಸಹ ಸುಭದ್ರಾಂ ಸುಕಲ್ಯಾಣೀಂ ಸಂವಿದಂ ಪರಸ್ಪರಸಂಭೋಗಸುಖಸಂವಿತ್ತಿಂ ಕೃಣುಷ್ವ। ಕುರುಷ್ವ॥

॥ ಪ್ರತಿಪದಾರ್ಥ ॥

**ಯಮಿ**—ಎಲೈ ಯಮಿಯೇ। **ತ್ವಂ**—ನೀನು। **ಅನ್ಯಮು**—ಬೇರೆ ಪುರುಷನನ್ನೇ। **ಸು**—ಅತಿಶಯವಾಗಿ ಆಲಂಗಿಸಿಕೊ। **ಅನ್ಯ ಉ**—ಬೇರೆ ಪುರುಷನು। **ಲಿಬುಜಾ**—ಲತೆಯು। **ವೃಕ್ಷಂ ಇವ**—ವೃಕ್ಷವನ್ನು ಅಪ್ಪಿಕೊಳ್ಳುವಂತೆ। **ತ್ವಾಂ**—ನಿನ್ನನ್ನು। **ಪರಿ ಷ್ವಜಾತೇ**—ಆಲಂಗಿಸಿಕೊಳ್ಳುತ್ತಾನೆ। **ತ್ವಂ**—ನೀನು। **ತಸ್ಯ**—ಆ ಪುರುಷನ। **ಮನಃ**—ಮನಸ್ಸನ್ನು। **ಇಚ್ಛ**—ಅಪೇಕ್ಷಿಸು। **ಸಃ**—ಅವನು। **ತವ**—ನಿನ್ನನ್ನಿಚ್ಛಿಸಲಿ (ಪ್ರೀತಿಸಲಿ)। **ಸುಭದ್ರಾಂ**—ಕಲ್ಯಾಣಾತ್ಮಕವಾದ। **ಸಂವಿದಂ**—ಸಂಬಂಧವನ್ನು। **ಕೃಣುಷ್ವ**—ಮಾಡಿಕೊ.

॥ ಭಾವಾರ್ಥ ॥

ಎಲೈ ಯಮಿಯೇ, ನೀನು ಬೇರೆ ಪುರುಷನನ್ನು ಅತಿಶಯವಾಗಿ ಆಲಂಗಿಸಿಕೊ. ಬೇರೆ ಪುರುಷನು, ಲತೆಯು ವೃಕ್ಷವನ್ನು ಅಪ್ಪಿಕೊಳ್ಳುವಂತೆ ನಿನ್ನನ್ನು ಆಲಂಗಿಸಲಿ. ನೀನು ಅವನನ್ನು ಪ್ರೀತಿಸು. ಅವನು ನಿನ್ನನ್ನು ಗಾಢವಾಗಿ ಪ್ರೀತಿಸಲಿ. ಅವನೊಡನೆ ಕಲ್ಯಾಣಾತ್ಮಕವಾದ ಸಂಬಂಧವನ್ನು ಬೆಳೆಸು.

English Translation

(Yama speaks). You, Yami, embrace another; and let another embrace you as a creeper a tree: seek his affection, let him seek yours; and make a happy union.

|| ವಿಶೇಷವಿಷಯಗಳು ||

**ಯಮೀ**—ಎಂಬ ಶಬ್ದವನ್ನು ವಿವರಿಸುತ್ತಾ ಯಾಸ್ಕರು ಪ್ರಕೃತ ಋಕ್ಕಿಗೆ ಈ ರೀತಿ ನಿರ್ವಚನವನ್ನು ಹೇಳಿದ್ದಾರೆ—

**ಯಮೀ | ಯಮೀ ವ್ಯಾಖ್ಯಾತಾ | ತಸ್ಯೈಷಾ ಭವತಿ| ಅನ್ಯಮೂ ಷು ತ್ವಂ ಯಮ್ಯನ್ಯ ಉ ತ್ವಾಂ ಪರಿ ಷ್ವಜಾತೇ ಲಿಬುಜೇವ ವೃಕ್ಷಂ | ತಸ್ಯ ವಾ ತ್ವಂ ಮನ ಇಚ್ಛಾ ಸ ವಾ ತವಾಧಾ ಕೃಣುಷ್ವ ಸಂವಿದಂ ಸುಭದ್ರಾಂ || ಅನ್ಯಮೇವ ಹಿ ತ್ವಂ ಯಮ್ಯನ್ಯಸ್ತ್ವಾಂ ಪರಿಷ್ವಂಕ್ಷ್ಯತೇ ಲಿಬುಜೇವ ವೃಕ್ಷಂ ತಸ್ಯ ವಾ ತ್ವಂ ಮನ ಇಚ್ಛ ಸ ವಾ ತವಾಧಾನೇಸ ಕುರುಷ್ವ ಸಂವಿದಂ ಸುಭದ್ರಾಂ ಕಲಾಣಭದ್ರಾಂ || ಯಮೀ ಯಮಂ ಚಕಮೇ ತಾಂ ಪ್ರತ್ಯಾಚಕ್ಷೇತ್ಯಾಖ್ಯಾನಂ ||**

(ನಿ. ೧೧-೩೪)

ಯಮೀ ಎಂಬ ಶಬ್ದವನ್ನು ಹಿಂದೆಯೇ ವಿವರಿಸಲಾಗಿದೆ. ಮುಂದಿನ (ಪ್ರಕೃತ)ಋಕ್ಕು ಯಮೀ ಎಂಬ ಸ್ತ್ರೀಯನ್ನು ಸಂಭೋಧಿಸುವ ಮಂತ್ರವಾಗಿದೆ–ಎಲೈ ಯಮಿಯೇ, ನಿಜವಾಗಿಯೂ ನೀನು(ನನ್ನನ್ನು ಬಿಟ್ಟು)ಬೇರೊಬ್ಬ ಪುರುಷನನ್ನು, ಲತೆಯು ವೃಕ್ಷವನ್ನು ಸುತ್ತಿಕೊಳ್ಳುವಂತೆ, ಬಿಗಿದಪ್ಪಿ ಆಲಂಗಿಸಿಕೋ. ಅವನ ಮನಸ್ಸನ್ನು ನೀನೂ, ನಿನ್ನ ಮನಸ್ಸನ್ನು ಅವನೂ ಪರಸ್ಪರ ತಿಳಿದು ವರ್ತಿಸಿರಿ. ಎಲೌ ಯಮಿಯೇ ಅವನೊಡನೆ ಈ ವಿಧವಾದ ರತಿಸುಖದಿಂದ ಉತ್ತಮವಾದ ಸುಖಸಂತೋಷಗಳನ್ನು ಪಡೆದು ಆನಂದವಾಗಿರಿ. ಹಿಂದೆ ಯಮೀ ಎಂಬ ಸ್ತ್ರೀಯು ತನ್ನ ಅಣ್ಣನಾದ ಯಮನನ್ನೇ ಪ್ರೀತಿಸಿ ಅವನೊಡನೆ ಸಂಭೋಗೇಚ್ಛೆಯನ್ನು ಬಯಸಿದಾಗ ಯಮನು ಯಮಿಗೆ ಹೇಳಿದ ಮಾತಿದು.

# ಹನ್ನೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ವೃಷೇತಿ ನವರ್ಚಮೇಕಾದಶಂ ಸೂಕ್ತಮಾಂಗೇರ್ಹವಿರ್ಧಾನಸ್ಯಾರ್ಷಮಾಗ್ನೇಯಂ | ಸಪ್ತಮ್ಯಾದ್ಯಾಸ್ತಿಸ್ರಸ್ತ್ರಿಷ್ಟುಭಃ ಶಿಷ್ಟಾ ಜಗತ್ಯಃ| ತಥಾ ಚಾನುಕ್ರಾಂತಂ | ವೃಷಾ ನವಾಂಗಿರ್ಹವಿರ್ಧಾನ ಆಗ್ನೇಯಂ ತು ತ್ರಿತ್ರಿಷ್ಟುಬಂತಮಿತಿ || ಗತಃ ಸೂಕ್ತವಿನಿಯೋಗಃ ||**

ಅನುವಾದವು—**ವೃಷಾ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಹವಿರ್ಧಾನ ಆಂಗಿಃ ಎಂಬುವನು ಋಷಿಯು ; ಅಗ್ನಿಯು ದೇವತೆಯು ; ಈ ಸೂಕ್ತದ ಏಳನೆಯ ಋಕ್ಕಿನಿಂದ ಮುಂದಿನ ಮೂರು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಮಿಕ್ಕ

ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ವೃಷಾ ಸಪ್ತಾಂಗಿರ್ಹವಿರ್ಧಾನ ಆಗ್ನೇಯಂ ತು ತ್ರಿತ್ರಿಷ್ಟುಬಂತಂ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೧

ಮಂಡಲ—೧೦ ॥ ಅನುವಾಕ—೧ ॥ ಸೂಕ್ತ—೧೧ ॥
ಅಷ್ಟಕ—೭ ॥ ಅಧ್ಯಾಯ—೬ ॥ ವರ್ಗ—೯, ೧೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
ಋಷಿಃ—ಹವಿರ್ಧಾನ ಆಂಗಿಃ ॥
ದೇವತಾ—ಅಗ್ನಿಃ ॥
ಛಂದಃ—೧-೬. ಜಗತೀ । ೭-೯. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ವೃಷಾ ವೃಷ್ಣೇ ದುದುಹೇ ದೋಹಸಾ ದಿವಃ ಪಯಾಂಸಿ ಯಹ್ವೋ ಅದಿತೇ-
ರದಾಭ್ಯಃ ।
ವಿಶ್ವಂ ಸ ವೇದ ವರುಣೋ ಯಥಾ ಧಿಯಾ ಸ ಯಜ್ಞಿಯೋ ಯಜತು
ಯಜ್ಞಿಯಾँ ಋತೂನ್ ॥ ೧ ॥

॥ ಪದಪಾಠಃ ॥

ವೃಷಾ । ವೃಷ್ಣೇ । ದುದುಹೇ । ದೋಹಸಾ । ದಿವಃ । ಪಯಾಂಸಿ । ಯಹ್ವಃ । ಅದಿತೇಃ । ಅದಾಭ್ಯಃ ।
ವಿಶ್ವಂ । ಸಃ । ವೇದ । ವರುಣಃ । ಯಥಾ । ಧಿಯಾ । ಸಃ । ಯಜ್ಞಿಯಃ । ಯಜತು । ಯಜ್ಞಿಯಾನ್
ಋತೂನ್ ॥ ೧ ॥

॥ ಸಾಯಣಭಾಷ್ಯಂ ॥

ವೃಷಾಹುತಿದ್ವಾರೇಣ ವೃಷ್ಟೇರ್ವರ್ಷಿತಾ ಯಹ್ವೋ ಮಹಾನದಾಭ್ಯಃ ಕೇನಾಪ್ಯಹಿಂಸ್ಯೋಽಗ್ನಿರದಿತೇರಕ್ಷೀಣಯಾಗಕ್ರಿಯಸ್ಯ ವೃಷ್ಣೋ ಯಜ್ಞದ್ವಾರೇಣ ಸ್ತುತೀನಾಂ ಹವಿಷಾಂ ವಾ ವರ್ಷಿತುರ್ಯಜಮಾನಸ್ಯಾರ್ಥಾಯ ದೋಹಸಾ ದೋಹನೇನ ಮಹತಾ ಪ್ರಕ್ಷಾರಣೇನ ದಿವಃ ಸಕಾಶಾತ್ಪಯಾಂಸಿ ವೃಷ್ಟಿಲಕ್ಷಣಾನ್ಯುದಕಾನಿ ದುದುಹೇ । ದೋಗ್ಧಿ । ಪ್ರಕ್ಷಾರಯತಿ । ಕಿಂಚ ಯಥಾ ವರುಣ ಆದಿತ್ಯೋ ಧಿಯಾತ್ಮಾನುರೂಪಯಾ ಪ್ರಜ್ಞಯಾ ವಿಶ್ವಂ ಸರ್ವಂ ವೇದ ಜಾನಾತಿ ತಥಾ ಸೋಽಯಮಗ್ನಿರ್ಜಾನಾತೀತ್ಯರ್ಥಃ । ಯಜ್ಞಿಯೋ ಯಜ್ಞಾರ್ಹೋ ಯಜ್ಞಿಯಾನ್ ಯಜ್ಞಾರ್ಹಾನೃತೂನ್ಯಜತು । ಪೂಜಯತು ।

॥ ಪ್ರತಿಪದಾರ್ಥ ॥

**ವೃಷಾ**—ಇಷ್ಟಾರ್ಥಪ್ರದನೂ । **ಯಹ್ವಃ**—ಮಹಾತ್ಮನೂ । **ಅದಾಭ್ಯಃ**—ಅಹಿಂಸಿತನೂ ಆದ ಅಗ್ನಿಯು । **ಅಧಿತೇಃ**—ಕ್ಷಯರಹಿತವಾದ ಯಜ್ಞಕರ್ಮವುಳ್ಳವನೂ । **ವೃಷ್ಣಃ** — ಹವಿಸ್ಸುಗಳನ್ನರ್ಪಿಸುವವನೂ ಆದ ಯಜಮಾನನಿಗೆ । **ದೋಹಸಾ**—ಮೇಘವನ್ನು ಹಿಂಡಿ ಕರೆಯುವುದರಿಂದ। **ದಿವಃ**—ಅಂತರಿಕ್ಷದಿಂದ। **ಪಯಾಂಸಿ**—ವೃಷ್ಟ್ಯುದಕಗಳನ್ನು । **ದುದುಹೇ**—ಕರೆಯುತ್ತಾನೆ । **ಯಥಾ**—ಯಾವ ರೀತಿಯಲ್ಲಿ । **ವರುಣಃ**—ಆದಿತ್ಯನು । **ಧಿಯಾ**—ತನ್ನ ಪ್ರಜ್ಞೆಯಿಂದ। **ವಿಶ್ವಂ**—ಸಮಸ್ತವನ್ನೂ। **ವೇದ**—ಅರಿಯುತ್ತಾನೆಯೋ ಅದರಂತೆ। **ಸಃ**-ಅಗ್ನಿಯೂ ಸಹ ಅರಿಯುತ್ತಾನೆ। **ಯಜ್ಞಿಯಃ**—ಯಜ್ಞಾರ್ಹನಾದ । **ಸಃ**— ಅಗ್ನಿಯು । **ಯಜ್ಞಿಯಾನ್** — ಪೂಜಾರ್ಹವಾದ । **ಋತೂನ್**—ಯಜ್ಞಕಾಲಗಳನ್ನಾಶ್ರಯಿಸಿ । **ಯಜತು**—ಪೂಜಿಸಲಿ. ।

॥ ಭಾವಾರ್ಥ ॥

ಇಷ್ಟಾರ್ಥಪ್ರದನೂ, ಮಹಾತ್ಮನೂ, ಅಹಿಂಸಿತನೂ ಆದ ಅಗ್ನಿಯು ಕ್ಷಯರಹಿತವಾದ ಯಜ್ಞಕರ್ಮವುಳ್ಳವನೂ, ಹವಿಸ್ಸುಗಳನ್ನರ್ಪಿಸುವವನೂ ಆದ ಯಜಮಾನನಿಗೋಸ್ಕರ ಮೇಘಗಳನ್ನು ಹಿಂಡಿ ವೃಷ್ಟಿಯನ್ನು ಸುರಿಸುತ್ತಾನೆ. ಯಾವ ರೀತಿ ಆದಿತ್ಯನು ತನ್ನ ಪ್ರಜ್ಞೆಯಿಂದ ಸಕಲವನ್ನೂ ಅರಿಯುವನೋ, ಅದರಂತೆ ಅಗ್ನಿಯೂ ಸಹ ಅರಿಯುತ್ತಾನೆ. ಯಜ್ಞಾರ್ಹನಾದ ಅಗ್ನಿಯು ಪೂಜಾರ್ಹವಾದ ಯಜ್ಞಕಾಲಗಳನ್ನಾಶ್ರಯಿಸಿ ಪೂಜಿಸಲಿ.

English Translation

The great, the unconquerable (Agni), the showerer, milks openly with a (great) milking the streams (of prosperity) from heaven for the unwearying sacrifice r; like Vaurna, he knows everything by his understanding : may he who is skilled in sacrifice observe the sacrificirl seasons.

॥ ಸಂಹಿತಾಪಾಠಃ ॥

ರಪದ್ಗಂಧರ್ವೀರಪ್ಯಾ ಚ ಯೋಷಣಾ ನದಸ್ಯ ನಾದೇ ಪರಿ ಪಾತು ಮೇ ಮನಃ ।
ಇಷ್ಟಸ್ಯ ಮಧ್ಯೇ ಅದಿತಿರ್ನಿ ಧಾತು ನೋ ಭ್ರಾತಾ ನೋ ಜ್ಯೇಷ್ಠಃ ಪ್ರಥಮೋ ವಿ ವೋಚತಿ ॥ ೨ ॥

॥ ಪದಪಾಠಃ ॥

ರಪತ್ । ಗಂಧರ್ವೀಃ । ಅಪ್ಯಾ । ಚ । ಯೋಷಣಾ । ನದಸ್ಯ । ನಾದೇ । ಪರಿ । ಪಾತು । ಮೇ । ಮನಃ । ಇಷ್ಟಸ್ಯ । ಮಧ್ಯೇ । ಅದಿತಿಃ । ನಿ । ಧಾತು । ನಃ । ಭ್ರಾತಾ । ನಃ। ಜ್ಯೇಷ್ಠಃ । ಪ್ರಥಮಃ । ವಿ । ವೋಚತಿ॥

॥ ಸಾಯಣಭಾಷ್ಯಂ ॥

ರಪದ್ರಪಿತವತ್ಯಗ್ನಿಗುಣಾನುಕ್ತವತೀ ಗಂಧರ್ವೀರ್ಗಂಧರ್ವಸ್ಯ ಸ್ತ್ರ್ಯಪ್ಯಾಭಿಃ ಸಂಸ್ಕೃತಾ ಯೋಷಣಾಹುತಿಲಕ್ಷಣಾ ಸ್ತ್ರೀ ಚ । ಅಗ್ನಿಂ ತರ್ಪಿತವತೀತಿ ಶೇಷಃ । ನದಸ್ಯ । ಸ್ತೋತ್ರನಾಮ್ಯೈತತ್ । ಸ್ತೋತುರ್ಮೇ ಮಮ ಸ್ವಭೂತಂ ಮನೋ ನಾದೇ ಸ್ತುತಿಲಕ್ಷಣೇ ಶಬ್ದೇ ಪರಿ ಪಾತು । ಅಗ್ನಿಃ ಸಮ್ಯ-ಗ್ರಕ್ಷತು । ಅಹಂ ಸಮಾಹಿತಮನಾ ಭೂತ್ವಾ ಸಮ್ಯಕ್ ಸ್ತುತಿಂ ಕರೋಮೀತ್ಯರ್ಥಃ । ಕಿಂಚಾದಿತಿರಖಂ-ಡನೀಯೋಽಗ್ನಿರ್ನೋಽಸ್ಮಾನಿಷ್ಟಸ್ಯ ಯಾಗಸ್ಯ ಮಧ್ಯೇ ನಿ ಧಾತು। ನಿದಧಾತು । ನಿತರಾಂ ಸ್ಥಾಪಯತು । ಪ್ರಥಮಃ ಸರ್ವೇಷಾಂ ಯಜಮಾನಾನಾಂ ಮುಖ್ಯೋ ನೋಽಸ್ಮಾಕಂ ಜ್ಯೇಷ್ಠೋ ಭ್ರಾತಾ ವಿ ವೋಚತಿ । ವಿಶೇಷೇಣ ಬ್ರವೀತಿ । ಸ್ತೌತೀತ್ಯರ್ಥಃ । ನಾಹಮೇವ ಕೇವಲೋ ಯಜನಶೀಲಃ ಕಿಂತು ಸರ್ವ ಏವಾಸ್ಮತ್ಕುಲೀನೋ ದೇವಯಾಗಪ್ರಿಯ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ರಪತ್—ಅಗ್ನಿಗುಣಗಳನ್ನು ಪಠಿಸತಕ್ಕ । **ಗಂಧರ್ವೀಃ**—ಗಂಧರ್ವಿಯೂ । **ಅಪ್ಯಾ**—ಉದಕದಿಂದ ಸಂಸ್ಕೃತ ಳಾದವಳೂ । **ಯೋಷಣಾ ಚ**—ಆಹುತಿರೂಪವುಳ್ಳವಳೂ ಆದ ಸ್ತ್ರೀಯೂ । **ನದಸ್ಯ**—ಸ್ತುತಿಕರ್ತನಾದ । **ಮೇ**—ನನ್ನ । **ಮನಃ**—ಮನಸ್ಸನ್ನು । **ನಾದೇ**—ಸ್ತುತಿರೂಪವಾದ ಶಬ್ದದಲ್ಲಿ । **ಪರಿಪಾತು**—ಪೂರ್ಣವಾಗಿ ರಕ್ಷಿಸಲಿ । **ಅದಿತಿಃ**—ಪರಿಪೂರ್ಣನಾದ ಅಗ್ನಿಯು । **ನಃ**—ನಮ್ಮನ್ನು । **ಇಷ್ಟಸ್ಯ**—ಯಾಗದ । **ಮಧ್ಯೇ**—ಮಧ್ಯ ದಲ್ಲಿ । **ನಿ ಧಾತು**—ಸ್ಥಾಪಿಸಲಿ । **ಪ್ರಥಮಃ**—ಯಜ್ಞಕರ್ತರಲ್ಲೆಲ್ಲ ಮುಖ್ಯನೂ । **ನಃ**—ನಮ್ಮ । **ಜ್ಯೇಷ್ಠಃ ಭ್ರಾತಾ**—ಜ್ಯೇಷ್ಠಭ್ರಾತೃವೂ । **ವಿ ವೋಚತಿ**—ಸ್ತುತಿಪಾಠವನ್ನು ಪಠಿಸುತ್ತಾನೆ. ।

॥ ಭಾವಾರ್ಥ ॥

ಅಗ್ನಿಗುಣಗಳನ್ನು ಪಠಿಸತಕ್ಕ ಗಂಧರ್ವಿಯೂ, ಉದಕದಿಂದ ಸಂಸ್ಕೃತಳೂ, ಆಹುತಿರೂಪವುಳ್ಳವಳೂ ಆದ ಸ್ತ್ರೀಯೂ, ಸ್ತುತಿಕರ್ತನಾದ ನನ್ನ ಮನಸ್ಸನ್ನು ಸ್ತುತಿಕ್ರಿಯೆಯಲ್ಲಿಯೇ ನೆಲೆಸುವಂತೆ ಮಾಡಲಿ, ಪರಿಪೂರ್ಣನಾದ ಅಗ್ನಿಯು ನಮ್ಮನ್ನು ಯಾಗದ ಮಧ್ಯದಲ್ಲಿ ಸ್ಥಾಪಿಸಲಿ. ಯಜ್ಞಕರ್ತರಲ್ಲೆಲ್ಲ ಮುಖ್ಯನೂ, ನಮ್ಮ ಜ್ಯೇಷ್ಠಭ್ರಾತೃವೂ ಸಹ ಸ್ತುತಿಪಾಠವನ್ನು ಪಠಿಸುತ್ತಾನೆ.

English Translation

The Gandharvi and the water-consecrated feminine oblation praise Agni: may He be favourable to the thought of me, raising my voice in his praise: may Agni place us in the midst of the sacrifice; the chief (of the worshippers), our elder brother, repeats his various laudations.

॥ ಸಂಹಿತಾಪಾಠಃ ॥

**ಸೋ ಚಿನ್ನು ಭದ್ರಾ ಕ್ಷುಮತೀ ಯಶಸ್ವತ್ಯುಷಾ ಉವಾಸ ಮನವೇ ಸ್ವರ್ವತೀ।**

ಯದೀಮುಶಂತಮುಶತಾಮನು ಕ್ರತುಮಗ್ನಿಂ ಹೋತಾರಂ ವಿದಥಾಯ

ಜೀಜನತ್ ॥ ೩ ॥

॥ ಪದಪಾಠಃ ॥

ಸೋ ಇತಿ । ಚಿತ್ । ನು । ಭದ್ರಾ । ಕ್ಷುऽಮತೀ । ಯಶಸ್ವತೀ । ಉಷಾಃ । ಉವಾಸ । ಮನವೇ ।

ಸ್ವಃऽವತೀ ।

ಯತ್ । ಈಂ । ಉಶಂತಂ । ಉಶತಾಂ । ಅನು । ಕ್ರತುಂ । ಅಗ್ನಿಂ । ಹೋತಾರಂ । ವಿದಥಾಯ ।

ಜೀಜನತ್ ॥ ೩ ॥

॥ ಸಾಯಣಭಾಷ್ಯಂ ॥

ಭದ್ರಾ ಭಜನೀಯಾ ಕ್ಷುಮತೀ ಶಬ್ದವತೀ ಯಶಸ್ವತ್ಯನ್ನವತೀ ಕೀರ್ತಿಮತೀ ವಾ ಸೋ ಚಿತ್ ಸೈವ ಪ್ರಸಿದ್ಧೋಷಾ ಮನವೇ ಮನುಷ್ಯಾಯ ಯಜಮಾನಾಯ ಸ್ವರ್ವತ್ಯಾದಿತ್ಯವತೀ ಸತೀ ನು ಕ್ಷಿಪ್ರಮುವಾಸ । ಉಷಿತವತೀ । ಉದಿತವತೀತ್ಯರ್ಥಃ । ಕದೋದಿತವತೀತಿ ಉಚ್ಯತೇ । ಯದ್ಯದೋ-ಶಂತಂ ಸ್ತುತಿಂ ಹವಿಶ್ಚ ಕಾಮಯಮಾನಮುಶತಾಂ ಯಷ್ಟುಂ ಕಾಮಯಮಾನಾನಾಂ ಸಂಬಂಧಿನಂ ಹೋತಾರಂ ದೇವಾನಾಮಾಹ್ವಾತಾರಂ ಹೋಮನಿಷ್ಪಾದಕಂ ವೇಮೇನಮಗ್ನಿಮನು ಕ್ರತುಂ ಸ್ತುತಿ-ಕರ್ಮಣಃ ಪಶ್ಚಾದ್ವಿದಥಾಯ ಯಜನೀಯಾಯ ಯಜ್ಞಾರ್ಥಂ ಜೀಜನನ್ । ಋತ್ವಿಗ್ಯಜಮಾನಾ ಜನಯಂತೀತ್ಯರ್ಥಃ । ತದೋದಿತವತೀತಿ ಸಂಬಂಧಃ ।

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ಉಶಂತಂ**—ಹವಿಸ್ಸನ್ನು ಅಪೇಕ್ಷಿಸುವವನೂ । **ಉಶತಾಂ**—ಹವಿಸ್ಸನ್ನು ಅಪೇಕ್ಷಿಸುವ ದೇವತೆಗಳಿಗೆ । **ಹೋತಾರಂ**—ಆಹ್ವಾನವನ್ನು ಕೊಡತಕ್ಕವನೂ ಆದ । **ಈಂ ಅಗ್ನಿಂ**—ಈ ಅಗ್ನಿಯನ್ನು । **ಅನುಕ್ರತುಂ**—ಸ್ತುತಿಕರ್ಮವಾದನಂತರವೇ । **ವಿದಥಾಯ**—ಯಜ್ಞಾರ್ಥವಾಗಿ । **ಜೀಜನನ್**—ಋತ್ವಿಕ್ಕುಗಳು ಉತ್ಪನ್ನಮಾಡಿದರೋ ಆಗ । **ಭದ್ರಾ**—ಮಂಗಳಕಾರಕಳೂ । **ಕ್ಷುಮತೀ**—ಶಬ್ದಯುಕ್ತಳೂ । **ಯಶಸ್ವತೀ**—ಅನ್ನವಂತಳೂ । **ಸೋ ಚಿತ್ ಉಷಾಃ**—ಪ್ರಸಿದ್ಧಳೂ ಆದ ಅದೇ ಉಷೋದೇವಿಯು । **ಮನವೇ**—ಮಾನವನ ಹಿತಕ್ಕಾಗಿ । **ಸ್ವರ್ವತೀ**—ಆದಿತ್ಯನೊಡಗೂಡಿದವಳಾಗಿ । **ನು**—ಕ್ಷಿಪ್ರವಾಗಿ । **ಉವಾಸ**—ಉದಯಿಸಿದ್ದಾಳೆ.

॥ ಭಾವಾರ್ಥ ॥

ಹವಿಸ್ಸನ್ನು ಸ್ವತಃ ಅಪೇಕ್ಷಿಸುವವನೂ, ಹವಿಸ್ಸನ್ನು ಅಪೇಕ್ಷಿಸುವ ದೇವತೆಗಳಿಗೆ ಆಹ್ವಾನವನ್ನು ಕೊಡತಕ್ಕವನೂ ಆದ ಈ ಅಗ್ನಿಯನ್ನು ಸ್ತುತಿಕರ್ಮವಾದನಂತರವೇ, ಯಜ್ಞಾರ್ಥವಾಗಿ ಋತ್ವಿಕ್ಕುಗಳು ಯಾವಾಗ ಉತ್ಪನ್ನಮಾಡಿದರೋ ಆಗಲೆ, ಮಂಗಳಕಾರಕಗಳೂ, ಶಬ್ದಯುಕ್ತಳೂ ಅನ್ನವಂತಳೂ, ಪ್ರಸಿದ್ಧಳೂ ಆದ ಅದೇ ಉಷೋದೇವಿಯು ಮಾನವನ ಹಿತಕ್ಕಾಗಿ ಆದಿತ್ಯನೊಡಗೂಡಿದವಳಾಗಿ ಕ್ಷಿಪ್ರವಾಗಿ ಉದಯಿಸಿದ್ದಾಳೆ.

## English Translation

That very auspicious, resounding, famous Dawn, ascends bringing the sun to man ; when for the sacrifice after the worship they give birth to that Agni, the desirer, the invoker of the desiring (gods).

॥ ಸಂಹಿತಾಪಾಠಃ ॥

ಅಧ ತ್ಯಂ ದ್ರಪ್ಸಂ ವಿಭ್ವಂ ವಿಚಕ್ಷಣಂ ವಿರಾಭರದಿಷಿತಃ ಶ್ಯೇನೋ ಅಧ್ವರೇ ।
ಯದೀ ವಿಶೋ ವೃಣತೇ ದಸ್ಮಮಾರ್ಯಾ ಅಗ್ನಿಂ ಹೋತಾರಮಧ ಧೀರ-
ಜಾಯತ ॥ ೪ ॥

॥ ಪದಪಾಠಃ ॥

ಅಧ । ತ್ಯಂ । ದ್ರಪ್ಸಂ । ವಿಽಭ್ವಂ । ವಿಽಚಕ್ಷಣಂ । ವಿಃ । ಆ । ಅಭರತ್ । ಇಷಿತಃ । ಶ್ಯೇನಃ । ಅಧ್ವರೇ ।
ಯದಿ । ವಿಶಃ । ವೃಣತೇ । ದಸ್ಮಂ । ಆರ್ಯಾಃ । ಅಗ್ನಿಂ । ಹೋತಾರಂ । ಅಧ । ಧೀಃ । ಅಜಾಯತ ॥

॥ ಸಾಯಣಭಾಷ್ಯಂ ॥

ಅಧಾಥಾನಂತರಂ ಶ್ಯೇನಃ ಶ್ಯೇನಾಖ್ಯೋ ವಿಃ ಪಕ್ಷ್ಯಧ್ವರೇ ಯಾಗ ಇಷಿತೋಽಗ್ನಿಪ್ರೇಷಿತಃ ವಿಭ್ವಂ ಮಹಾಂತಂ ವಿಚಕ್ಷಣಂ ಸರ್ವಸ್ಯ ವಿಶೇಷೇಣ ದ್ರಷ್ಟಾರಂ ತ್ಯಂ ತಂ ಪ್ರಸಿದ್ಧಂ ದ್ರಪ್ಸಂ ನಾತ್ಯಲ್ಪಂ ನಾತಿಬಹುಲಂ ಸೋಮಮಾಭರತ್ । ಆಹೃತವಾನ್ । ಅಪಿ ಚ ಯದಿ ಯದಾರ್ಯಾ ಅಭಿಗಮನೀಯಂ ತಂ ವ್ರಜಂತೋ ವಿಶೋ ಯಜಮಾನಾ ಮನುಷ್ಯಾ ದಸ್ಮಂ ದರ್ಶನೀಯಂ ಶತ್ರೂಣಾಮುಪಕ್ಷಪಯಿತಾರಂ ವಾ ಹೋತಾರಮಗ್ನಿಂ ವೃಣತೇ ಪ್ರಾರ್ಥಯಂತೇ ಅಧ ತದಾ ಧೀರ್ಯಾಗಾದಿಕ್ರಿಯಾಜಾಯತ । ಯಜ್ವಭಿಃ ಪ್ರತಾಯತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಅಧ—ಅನಂತರ । ಶ್ಯೇನಃ—ಶ್ಯೇನಸಂಜ್ಞಕವಾದ । ವಿಃ—ಪಕ್ಷಿಯು । ಅಧ್ವರೇ—ಯಾಗದಲ್ಲಿ । ಇಷಿತಃ—ಅಗ್ನಿಯಿಂದ ಪ್ರೇರಿತನಾಗಿ । ವಿಭ್ವಂ—ಮಹಾತ್ಮನೂ । ವಿಚಕ್ಷಣಂ—ಸೂಕ್ಷ್ಮದೃಷ್ಟಿಯುಳ್ಳವನೂ । ತ್ಯಂ—ಪ್ರಸಿದ್ಧನೂ । ದ್ರಪ್ಸಂ—ಸ್ರವಿಸತಕ್ಕವನೂ ಆದ ಸೋಮನನ್ನು । ಅಭರತ್—ತಂದಿತು । ಯದಿ—ಯಾವಾಗ । ಆರ್ಯಾಃ—ಅಗ್ನಿ ಪೂಜಕರಾದ । ವಿಶಃ—ಯಜಮಾನರು । ದಸ್ಮಂ—ಆಕರ್ಷಕವಾದ ರೂಪವುಳ್ಳವನೂ ಹೋತಾರಂ—ಹೋತೃರೂಪನೂ ಆದ । ಅಗ್ನಿಂ—ಅಗ್ನಿಯನ್ನು । ವೃಣತೇ—ಪ್ರಾರ್ಥಿಸುವರೋ । ಅಧ—ಆಗ । ಧೀಃ—ಯಾಗರೂಪವಾದ ಕ್ರಿಯೆಯು । ಅಜಾಯತ—ಪ್ರಾರಂಭವಾಯಿತು. ।

॥ ಭಾವಾರ್ಥ ॥

ಶ್ಯೇನಸಂಜ್ಞಕವಾದ ಪಕ್ಷಿಯು ಯಾಗದಲ್ಲಿ ಅಗ್ನಿಯಿಂದ ಪ್ರೇರಿತನಾಗಿ ಮಹಾತ್ಮನೂ, ಸೂಕ್ಷ್ಮದೃಷ್ಟಿಯುಳ್ಳವನೂ, ಪ್ರಸಿದ್ಧನೂ, ಸ್ರವಿಸತಕ್ಕವನೂ ಆದ ಸೋಮನನ್ನು ತಂದಿತು. ಯಾವಾಗ ಅಗ್ನಿಪೂಜಕರಾದ ಯಜಮಾನರು ಆಕರ್ಷಕವಾದ ರೂಪವುಳ್ಳವನೂ, ಹೋತೃರೂಪನೂ ಆದ ಅಗ್ನಿಯನ್ನು ಪ್ರಾರ್ಥಿಸುವರೋ, ಆಗ ಯಾಗರೂಪವಾದ ಕ್ರಿಯೆಯು ಪ್ರಾರಂಭಿಸಲ್ಪಟ್ಟಿತು.

English Translation

The hawk sent (by Agni) to the sacrifice has brought the dripping copious all-seeing (soma) libration. When the Arya people choose the victorious Agni as the ministrant priest, then the sacred rite is celebrated.

॥ ಸಂಹಿತಾಪಾಠಃ ॥

ಸದಾಸಿ ರಣ್ವೋ ಯವಸೇವ ಪುಷ್ಯತೇ ಹೋತ್ರಾಭಿರಗ್ನೇ ಮನುಷಃ ಸ್ವಧ್ವರಃ।
ವಿಪ್ರಸ್ಯ ವಾ ಯಚ್ಛಶಮಾನ ಉಕ್ಥ್ಯಂ೧ ವಾಜಂ ಸಸವಾಁ ಉಪಯಾಸಿ ಭೂರಿಭಿಃ ॥ ೫ ॥

ಪದಪಾಠಃ

ಸದಾ। ಅಸಿ। ರಣ್ವಃ। ಯವಸಾಽಇವ। ಪುಷ್ಯತೇ। ಹೋತ್ರಾಭಿಃ। ಅಗ್ನೇ। ಮನುಷಃ। ಸುಽಅಧ್ವರಃ। ವಿಪ್ರಸ್ಯ। ವಾ। ಯತ್। ಶಶಮಾನಃ। ಉಕ್ಥ್ಯಂ। ವಾಜಂ। ಸಸಽವಾನ್। ಉಪಽಯಾಸಿ। ಭೂರಿಽಭಿಃ ॥ ೫ ॥

। ಸಾಯಣಭಾಷ್ಯಂ ।

ಹೇ ಅಗ್ನೇ ತ್ವಂ ಸದಾ ಸತತಂ ರಣ್ವೋಽಸಿ। ರಮಣೀಯೋ ಭವಸಿ। ತತ್ರ ದೃಷ್ಟಾಂತಃ। ಯವಸೇವ ಪುಷ್ಯತೇ ಯಥಾ ಯವಸಾನಿ ತೃಣಾನಿ ಚ ಪುಷ್ಟಿಂ ಕುರ್ವತೇ ಹಸ್ತ್ಯಶ್ವಗೋಮಹಿಷಾದಿಪುಷ್ಟಿದಾಯ ಸರ್ವದಾ ರಮಣೀಯಾನಿ ಭವಂತಿ ತದ್ವತ್। ಅಪಿ ಚ ಹೇ ಅಗ್ನೇ ಮನುಷೋ ಮನುಷ್ಯಸ್ಯ ಸ್ವಭೂತೈರ್ಹೋತ್ರಾಭಿಃ। ಹೋತ್ರೇತಿ ಯಜ್ಞನಾಮೈತತ್। ಯಜ್ಞೈಃ ಸ್ವಧ್ವರಃ ಶೋಭನಯಜ್ಞೋ ಭವೇತಿ ಶೇಷಃ। ವಿಪ್ರಸ್ಯ ವಾ ಸ್ತೋತುರ್ವಾ ಯದ್ಯಸ್ಯ ಯಜಮಾನಸ್ಯ ವಾ ಸ್ವಭೂತಮುಕ್ಥ್ಯಂ ಸ್ತೋತ್ರಂ ಶಶಮಾನಃ ಪ್ರಶಂಸನ್ ವಾಜಂ ಹವಿರ್ಲಕ್ಷಣಮನ್ನಂ ಸಸವಾನ್ ಸಂಭಜಮಾನಸ್ತ್ವಂ ಭೂರಿಭಿರ್ಬಹುಭಿರ್ದೇವೈಃ ಸಹೋಪಯಾಸಿ ಉಪಗಚ್ಛಸಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ, । **ಪುಷ್ಯತೇ**—ತಮ್ಮ ಪುಷ್ಟಿಯನ್ನಪೇಕ್ಷಿಸತಕ್ಕ ಪಶ್ವಾದಿಗಳಿಗೆ । **ಯವಸೇವ**—ಹುಲ್ಲುಗಾವಲು ಆಕರ್ಷಕವಾಗಿರುವಂತೆ । **ತ್ವಂ**—ನೀನು । **ಸದಾ**—ಯಾವಾಗಲೂ । **ರಣ್ವಃ**—ಆಕರ್ಷಕನಾಗಿ । **ಅಸಿ**—ಆಗಿದ್ದೀಯೆ । **ಮನುಷಃ**—ಮಾನವನ । **ಹೋತ್ರಾಭಿಃ**—ಯಜ್ಞಗಳಿಂದ । **ಸ್ವಧ್ವರಃ**—ಶ್ರೇಷ್ಠರೀತಿಯಿಂದ ಪೂಜಿತನಾಗಿ ಆಗು । **ವಿಪ್ರಸ್ಯ**—ಸ್ತುತಿಕರ್ತನ । **ವಾ**—ಅಥವಾ । **ಯತ್**—ಯಾವುದೇ ಆಗಲಿ ಯಜಮಾನನ । **ಉಕ್ಥ್ಯಂ**—ಸ್ತೋತ್ರವನ್ನು । **ಶಶಮಾನಃ**—ಪ್ರಶಂಸಿಸುತ್ತಲೂ । **ವಾಜಂ**—ಹವಿಸ್ಸಿನ ರೂಪದ ಅನ್ನವನ್ನು । **ಸಸವಾನ್**—ಸೇವಿಸುತ್ತಲೂ । **ಭೂರಿಭಿಃ**—ಅಧಿಕವಾದ ದೇವತೆಗಳೊಡನೆ । **ಉಪಯಾಸಿ**—ಸಮೀಪಿಸಿ ಬಾ ।

॥ ಭಾವಾರ್ಥ ॥

ಎಲೈ ಅಗ್ನಿಯೇ, ತಮ್ಮ ಪುಷ್ಟಿಯನ್ನಪೇಕ್ಷಿಸತಕ್ಕ ಪಶ್ವಾದಿಗಳಿಗೆ ಹುಲ್ಲುಗಾವಲು ಆಕರ್ಷಕವಾಗಿರುವಂತೆ ನೀನು ಯಾವಾಗಲೂ ನಮಗೆ ಆಕರ್ಷಕನಾಗಿದ್ದೀಯೆ. ಮಾನವನ ಯಜ್ಞಗಳಿಂದ ಶ್ರೇಷ್ಠರೀತಿಯಿಂದ ಪೂಜಿತನಾಗು. ಸ್ತುತಿಕರ್ತನ ಅಥವಾ ಯಜಮಾನನ ಸ್ತೋತ್ರವನ್ನು ಪ್ರಶಂಸಿಸುತ್ತಲೂ, ಹವಿಸ್ಸಿನ ರೂಪದ ಅನ್ನವನ್ನು ಸೇವಿಸುತ್ತಲೂ ಅಧಿಕವಾದ ದೇವತೆಗಳೊಡನೆ ನಮ್ಮ ಯಜ್ಞಕ್ಕೆ ಸಮೀಪಿಸಿ ಬಾ.

English Translation

You, Agni, are ever pleasing (to your worshippers), as pasture satisfies (the herds) ; be well-worshipped with man's sacrifices ; if commending the praise of the wise, and partaking of the (sacrificial) food, you come with many (divinities to the rite).

॥ ಸಂಹಿತಾಪಾಠಃ ॥

ಉದೀರಯ ಪಿತರಾ ಜಾರ ಆ ಭಗಮಿಯಕ್ಷತಿ ಹರ್ಯತೋ ಹೃತ್ತ ಇಷ್ಯತಿ ।
ವಿವಕ್ತಿ ವಹ್ನಿಃ ಸ್ವಪಸ್ಯತೇ ಮಖಸ್ತವಿಷ್ಯತೇ ಅಸುರೋ ವೇಪತೇ ಮತೀ ॥

॥ ಪದಪಾಠಃ ॥

ಉತ್ । ಈರಯ । ಪಿತರಾ । ಜಾರಃ । ಆ । ಭಗಂ । ಇಯಕ್ಷತಿ । ಹರ್ಯತಃ । ಹೃತ್ತಃ । ಇಷ್ಯತಿ ।
ವಿವಕ್ತಿ । ವಹ್ನಿಃ । ಸು೮ಅಪಸ್ಯತೇ । ಮಖಃ । ತವಿಷ್ಯತೇ । ಅಸುರಃ । ವೇಪತೇ । ಮತೀ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಮಿಯಂ ಜ್ಯೋತಿಃ ಪಿತರಾ ಪಿತರೌ ಸರ್ವಪ್ರಾಣಿನಾಂ ಮಾತಾಪಿತೃಭೂತೇ ದ್ಯಾವಾಪೃಥಿವ್ಯೌ ಪ್ರತ್ಯುದ್ಗಮಯ । ತತ್ರ ದೃಷ್ಟಾಂತಃ । ಆಕಾರ ಉಪಮಾರ್ಥೇ । ರಾತ್ರೇರ್ನಕ್ಷತ್ರಾದಿ-ನಾಂ ಚ ಜರಯಿತೃತ್ವಾಜ್ಜಾರ ಆದಿತ್ಯಃ । ಸ ಯಥಾ ದ್ಯಾವಾಪೃಥಿವ್ಯೌ ಪ್ರತಿ ಭಗಂ ಭಜನೀಯಂ ತಿರುದ್ಗಮಯತಿ ತದ್ವತ್ । ಹರ್ಯತೋ ಯಾಗಂ ಕಾಮಯಮಾನಾನ್ಪ್ರತೀಯಕ್ಷತಿ । ಮಾನೋ ಯಷ್ಟುಮಿಚ್ಛತಿ । ಹೃತ್ತ್ರೋ ಹೃದಯೇನ ಚೇಷ್ಯತಿ । ಇಷಿರಯಂ ಗತ್ಯರ್ಥಃ ಸ್ಯೋಪಸರ್ಗಪೂರ್ವೋ ದ್ರಷ್ಟವ್ಯಃ । ಅಧೀಷ್ಯತಿ ದೇವಾನ್ಯಷ್ಟುಮಧಿಗಚ್ಛತಿ । । ವಿವಕ್ಷತಿ । ಶಸ್ತ್ರಲಕ್ಷಣಾಃ ಸ್ತುತೀರ್ವಕ್ತುಮಿಚ್ಛತಿ । ವಹ್ನಿರ್ವೋಢಾ ಸ್ತುತೀನಾಂ ನ್ಪ್ರತಿ ಪ್ರಾಪಯಿತಾ ಹೋತಾ ಚ ಸ್ವಪಸ್ಯತೇ । ಶೋಭನಮಾತ್ಮೀಯಂ ಕರ್ಮ ಕರ್ತುಮಿಚ್ಛತಿ । ಃ । ಯಜ್ಞಾನಾಂ ಮುಖಮೇತತ್ । ಅತ್ರ ತತ್ಪ್ರಯೋಕ್ತಾಧ್ವರ್ಯುರುಚ್ಯತೇ । ಸ ಚ ತವಿಷ್ಯತೇ । ತವಿಷಿ-ದ್ಧ್ಯರ್ಥಃ । ಸ ಚಾತ್ರಾಂತರ್ಣೀತಸನರ್ಥಶ್ಚ ದ್ರಷ್ಟವ್ಯಃ । ತುತುವಿಷತಿ । ಸ್ತೋತ್ರಲಕ್ಷಣಾಃ ಸ್ತುತೀ-ರ್ಯಿತುಮಿಚ್ಛತೀತ್ಯರ್ಥಃ । ಅಸುರಃ ಪ್ರಾಣವಾನ್ ಪ್ರಜ್ಞಾವಾನ್ವಾ । ಬ್ರಹ್ಮೇತಿ ಶೇಷಃ । ಮತೀ ತ್ಯಾ ಬುದ್ಧ್ಯಾ ವೇಪತೇ । ಕರ್ಮವೈಗುಣ್ಯಾದ್ಭಿಭ್ಯತ್ಕಂಪತೇ । ಹೇ ಅಗ್ನೇ ಯತೋ ಯಜಮಾನಃ ತ್ವಿಜಶ್ಚ ಸ್ವಸ್ವಕರ್ಮ ಕರ್ತುಂ ತ್ವಾಮಾಗಚ್ಛಂತಿ ಅತಸ್ತ್ವಂ ಶೀಘ್ರಮುದ್ಗಮಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಜಾರಃ—ಆದಿತ್ಯನು । **ಭಗಂ**—ಪೂಜ್ಯವಾದ ತನ್ನ ತೇಜಸ್ಸನ್ನು ಪ್ರಸರಿಸುವಂತೆ । **ಪಿತರಾ**—ದ್ಯಾವಾಪೃಥಿಗಳಿಗಭಿಮುಖವಾಗಿ । **ಉದೀರಯ**—ನಿನ್ನ ತೇಜಸ್ಸನ್ನು ಪ್ರಸರಿಸು । **ಹರ್ಯತಃ**—ಯಜ್ಞಾಪೇಕ್ಷಿಗಳಾದ ದೇವತೆನ್ನು । **ಆ ಇಯಕ್ಷತಿ**—ಯಜಮಾನನು ಪೂಜಿಸಲಿಚ್ಛಿಸುತ್ತಾನೆ । **ಹೃತ್ತಃ**—ಮನಃಪೂರ್ವಕವಾಗಿ । **ಇಷ್ಯತಿ**—ಸುತ್ತಾನೆ । **ವಿವಕ್ತಿ**—ಸ್ತುತಿಯನ್ನು ಪಠಿಸಲಿಚ್ಛಿಸುತ್ತಾನೆ । **ವಹ್ನಿಃ**—ಹೋತೃವು । **ಸ್ವಪಸ್ಯತೇ**—ಉತ್ತಮ ಕರ್ಮವಮಾಡಲಿಚ್ಛಿಸುತ್ತಾನೆ । **ಮಖಃ**—ಅಧ್ವರ್ಯುವು । **ತವಿಷ್ಯತೇ**—ಸ್ತುತಿಯನ್ನು ಅಧಿಕಗೊಳಿಸಲಿಚ್ಛಿತ್ತಾನೆ । **ಅಸುರಃ**—ಬ್ರಹ್ಮನು । **ಮತೀ**—ತನ್ನ ಬುದ್ಧಿಯೊಡಗೂಡಿ । **ವೇಪತೇ**—ಕರ್ಮನಿರತನಾಗುತ್ತಾನೆ. ।

॥ ಭಾವಾರ್ಥ ॥

ಎಲೈ ಅಗ್ನಿಯೇ, ಆದಿತ್ಯನು ಪೂಜ್ಯವಾದ ತನ್ನ ತೇಜಸ್ಸನ್ನು ಪ್ರಸರಿಸುವಂತೆ, ದ್ಯಾವಾಪೃಥಿವಿಗಳಿಗಭಿಮುಖ ನಿನ್ನ ತೇಜಸ್ಸನ್ನು ಪ್ರಸರಿಸು. ಯಜ್ಞಾಪೇಕ್ಷಿಗಳಾದ ದೇವತೆಗಳನ್ನು ಯಜಮಾನನು ಪೂಜಿಸಲಿಚ್ಛಿಸುತ್ತಾನೆ. ಃಪೂರ್ವಕವಾಗಿ ಇಚ್ಛಿಸುತ್ತಾನೆ. ಸ್ತುತಿಯನ್ನು ಪಠಿಸಲಿಚ್ಛಿಸುತ್ತಾನೆ. ಹೋತೃವು ಉತ್ತಮವಾದ ಕರ್ಮ ಡಲಿಚ್ಛಿಸುತ್ತಾನೆ, ಅಧ್ವರ್ಯುವು ಸ್ತುತಿಯನ್ನು ಅಧಿಕಗೊಳಿಸಲಿಚ್ಛಿಸುತ್ತಾನೆ. ಬ್ರಹ್ಮನು ತನ್ನ ಬುದ್ಧಿಯೊಡ ಡಿ ಕರ್ಮನಿರತನಾಗುತ್ತಾನೆ.

## English Translation

Wake up the parents, as the Sun his splendour: (the worshipper) sires to offer worship to (the deities) who are pleased by it; with all his

heart he wishes (to do so); he desires to repeat (your praise); the bearer (of the oblation) is anxious to effect the good work; the sacrifice longs for augmentation, the prudent (sacrificer) trembles in his thoughts.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ ಆ ಎಂಬ ಶಬ್ದದ ಅನೇಕಾರ್ಥಗಳನ್ನು ವಿವರಿಸುವಾಗ ಯಾಸ್ಕರು ಆ ಎಂಬ ಶಬ್ದಕ್ಕೆ ಉಪಮಾರ್ಥವೂ ಇರುವುದೆಂದು ಹೇಳಿ ಆ ಸಂದರ್ಭದಲ್ಲಿ ಈ ಋಕ್ಕನ್ನು ಉದಾಹರಿಸಿದಾರೆ—

**ಅಥಾಪ್ಯುಪಮಾರ್ಥೇ ದೃಶ್ಯತೇ । ಜಾರ ಆ ಭಗಂ । ಜಾರ ಇವ ಭಗಂ । ಆದಿತ್ಯೋಽತ್ರ ಜಾರ ಉಚ್ಯತೇ । ರಾತ್ರೇರ್ಜರಯಿತಾ । ಸ ಏವ ಭಾಸಾಂ ॥**

(ನಿ. ೩-೧೬)

ಆ ಎಂಬ ಉಪಸರ್ಗಕ್ಕೆ ಉಪಮಾರ್ಥದಲ್ಲಿಯೂ ಎಂದರೆ ಹೋಲಿಕೆಯಲ್ಲಿಯೂ ಪ್ರಯೋಗವಿದೆ. ಪ್ರಕೃತಋಕ್ಕಿನಲ್ಲಿರುವ **ಜಾರ ಆ ಭಗಂ** ಎಂಬ ವಾಕ್ಯದಲ್ಲಿ ಆದಿತ್ಯನಂತೆ ಪೂಜ್ಯವಾದ ಎಂದು ಆ ಎಂಬ ಶಬ್ದಕ್ಕೆ ಅಂತೆ ಎಂದು ಉಪಮಾರ್ಥವಿರುವುದು. ಇಲ್ಲಿ ಜಾರ ಶಬ್ದಕ್ಕೆ ಆದಿತ್ಯನೆಂದರ್ಥವು. **ರಾತ್ರೇರ್ಜರಯಿತಾ ತದುದಯೇ ಹಿ ರಾತ್ರಿರ್ಜೀರ್ಯತೇ ವಿಪರಿಣಮತೀತ್ಯರ್ಥಃ**—ಎಂದರೆ ರಾತ್ರಿಯನ್ನು ಕೊನೆಗಾಣಿಸುವವನಾದ್ದರಿಂದ ಆದಿತ್ಯನಿಗೆ ಜಾರನೆಂದು ಹೆಸರು. ಸೂರ್ಯನು ಉದಯಿಸುವುದರಿಂದ ರಾತ್ರಿಕಾಲವು ಕೊನೆಗೊಳ್ಳುವುದು ಎಂದಭಿಪ್ರಾಯವು.

। ಸಂಹಿತಾಪಾಠಃ ।

ಯಸ್ತೇ ಅಗ್ನೇ ಸುಮತಿಂ ಮರ್ತೋ ಅಕ್ಷತ್ಸಹಸಃ ಸೂನೋ ಅತಿ ಸ ಪ್ರ ಶೃಣ್ವೇ ।
ಇಷಂ ದಧಾನೋ ವಹಮಾನೋ ಅಶ್ವೈರಾ ಸ ದ್ಯುಮಾಁ ಅಮವಾನ್ಭೂಷತಿ ದ್ಯೂನ್ ॥ ೭ ॥

॥ ಪದಪಾಠಃ ॥

ಯಃ । ತೇ । ಅಗ್ನೇ । ಸುಽಮತಿಂ । ಮರ್ತಃ । ಅಕ್ಷತ್ । ಸಹಸಃ । ಸೂನೋ ಇತಿ । ಅತಿ । ಸಃ । ಪ್ರ । ಶೃಣ್ವೇ ।
ಇಷಂ । ದಧಾನಃ । ವಹಮಾನಃ । ಅಶ್ವೈಃ । ಆ । ಸಃ । ದ್ಯುಽಮಾನ್ । ಅಮಽವಾನ್ । ಭೂಷತಿ । ದ್ಯೂನ್ ॥ ೭ ॥

॥ ಸಾಯಣಭಾಷ್ಯಂ ॥

ಹೇ ಸಹಸಃ ಸೂನೋ ಬಲಸ್ಯ ಪುತ್ರಾಗ್ನೇ ತ್ವದೀಯಾಂ ಸುಮತಿಂ ಶೋಭನಾಮನುಗ್ರಾಹಿಕಾಂ ದ್ಧಿಂ ಯೋ ಮರ್ತೋ ಮನುಷ್ಯೋ ಯಜಮಾನೋಽಕ್ಷತ್ ಅಶ್ನುತೇ । ಅನುಗ್ರಹಶೀಲಂ ತ್ವಾಂ ಃಭಿರ್ಹವಿರ್ಭಿಶ್ಚ ಪರಿಚರತೀತ್ಯರ್ಥಃ । ಸ ಯಜಮಾನೋಽತಿ ಪ್ರ ಶ್ರಣ್ವೇ । ಸರ್ವಾಁಲ್ಲೋಕಾನತೀತ್ಯ ಕರ್ಷೇಣ ಶ್ರೂಯತೇ । ಪ್ರಖ್ಯಾತೋ ಭವತೀತ್ಯರ್ಥಃ । ಕೀದೃಶಃ । ಇಷಮನ್ನಂ ದಧಾನೋಽರ್ಥಿಭ್ಯಃ ಯುಜ್ಞಾನ್ ಅಶ್ವೈರ್ವಹಮಾನಃ । ಕಿಂಚ ಸ ಏವ ದ್ಯುಮಾನ್ದೀಪ್ತಿಮಾನ್ ಶರೀರಪತನಾನಂತರಂ ಸ್ಥಾನವಾನ್ಪ್ರಾಮವಾನ್ಬಲವಾನಾ ದ್ಯೂನ್ । ದ್ಯುರಿತ್ಯಹರ್ನಾಮ ॥ ಕಾಲಾಧ್ವನೋರತ್ಯಂತಸಂಯೋಗೇ ತೀಯಾ ದ್ವಿತೀಯಾ ॥ ಆದಿತ್ಯೈಕತ್ರ್ಯಕಾಣ್ಯಹಾನಿ । ಆಚಂದ್ರಾರ್ಕಮಿತ್ಯರ್ಥಃ । ಭೂಷತಿ । ಭವತಿ ॥

॥ ಪ್ರತಿಪದಾರ್ಥ ॥

ಸಹಸಃ ಸೂನೋ—ಶಕ್ತಿಪುತ್ರನಾದ । ಅಗ್ನೇ—ಎಲೈ ಅಗ್ನಿಯೇ। ತೇ—ನಿನ್ನ । ಸುಮತಿಂ—ಉತ್ತಮ ದ ಅನುಗ್ರಹಬುದ್ಧಿಯನ್ನು । ಯಃ ಮರ್ತಃ—ಯಾವ ಯಜಮಾನನು । ಅಕ್ಷತ್—ಪಡೆಯುವನೋ । ಸಃ— ಯಜಮಾನನು । ಇಷಂ—ಅನ್ನವನ್ನು । ದಧಾನಃ—ಯಾಚಕರಿಗೆ ಕೊಡುತ್ತಲೂ । ಅಶ್ವೈಃ—ಅಶ್ವಗಳಿಂದ । ಹಮಾನಃ—ವಹಿಸಲ್ಪಡುತ್ತಲೂ । ಅತಿ ಪ್ರಶೃಣ್ವೇ—ಅಧಿಕವಾಗಿ ಕೀರ್ತಿಯನ್ನು ಪಡೆಯುತ್ತಾನೆ । ಸಃ—ಅದೇ ಜಮಾನನು । ಆ ದ್ಯೂನ್—ಪ್ರತಿದಿನವೂ । ದ್ಯುಮಾನ್—ಕಾಂತಿಯುತನಾಗಿಯೂ । ಅಮವಾನ್—ಶಕ್ತಿ ತನಾಗಿಯೂ । ಭೂಷತಿ—ಆಗುತ್ತಾನೆ. ।

॥ ಭಾವಾರ್ಥ ॥

ಶಕ್ತಿಪುತ್ರನಾದ ಎಲೈ ಅಗ್ನಿಯೇ, ನಿನ್ನ ಉತ್ತಮವಾದ ಅನುಗ್ರಹಬುದ್ಧಿಯನ್ನು ಯಾವ ಯಜಮಾನನು ಯುವನೋ ಆ ಯಜಮಾನನು ಅನ್ನವನ್ನು ಯಾಚಕರಿಗೆ ಕೊಡುತ್ತಲೂ ಅಶ್ವಗಳಿಂದ ವಹಿಸಲ್ಪಡುತ್ತಲೂ, ಕವಾಗಿ ಕೀರ್ತಿಯನ್ನು ಪಡೆಯುತ್ತಾನೆ. ಅದೇ ಯಜಮಾನನು ಪ್ರತಿದಿನವೂ ಕಾಂತಿಯುತನಾಗಿಯೂ, ಶಕ್ತಿ ತನಾಗಿಯೂ ಆಗುತ್ತಾನೆ.

## English Translation

Agni, son of strength, the mortal who obtains your fovaur is widely lebrated : possessing abundant food, and being conveyed by horses, ustrious and vigorous, he graces the days of his existence.

॥ ಸಂಹಿತಾಪಾಠಃ ॥

ಯದಗ್ನ ಏಷಾ ಸಮಿತಿರ್ಭವಾತಿ ದೇವೀದೇವೇಷು ಯಜತಾ ಯಜತ್ರ ।
ರತ್ನಾ ಚ ಯದ್ವಿಭಜಾಸಿ ಸ್ವಧಾವೋ ಭಾಗಂ ನೋ ಅತ್ರ ವಸುಮಂತಂ ವೀತಾತ್ ॥ ೮ ॥

॥ ಪದಪಾಠಃ ॥

ಯತ್ । ಅಗ್ನೇ । ಏಷಾ । ಸಂಽಇತಿಃ । ಭವಾತಿ । ದೇವೀ । ದೇವೇಷು । ಯಜತಾ । ಯಜತ್ರ ।

ರತ್ನಾ । ಚ । ಯತ್ । ವಿಽಭಜಾಸಿ । ಸ್ವಧಾಽವಃ । ಭಾಗಂ । ನಃ । ಅತ್ರ । ವಸುಽಮಂತಂ । ವೀತಾತ್ ॥

॥ ಸಾಯಣಭಾಷ್ಯಂ ॥

ಮಹಾವ್ರತೇ ಸಂಸ್ಥಿತೇ ಮರುತ್ವತೀಯೇ ಯದಗ್ನ ಏಷೇತ್ಯನಯಾ ಚತುರ್ಗೃಹೀತಮಾಜ್ಯಂ ಜುಹುಯಾತ್ । ತಥೈವ ಪಂಚಮಾರಣ್ಯಕೇ ಸೂತ್ರಿತಂ । ಯದಗ್ನ ಏಷಾ ಸಮಿತಿರ್ಭವಾತಿ ॥ ಐ. ಆ. ೫.೧-೧ । ಇತಿ ॥

ಹೇ ಯಜತ್ರ ಯಷ್ಟವ್ಯಾಗ್ನೇ ಯದ್ಯದೈಷಾ ಸಮಿತಿರಸ್ಮತ್ಕರ್ತೃಕಾ ಸ್ತುತಿಸಂಹತಿರ್ಯಜತಾ ಯಜತೇಷು ಯಷ್ಟವ್ಯೇಷು ದೇವೇಷು ಮಧ್ಯೇ ದೇವೀ ದ್ಯೋತಮಾನಾ ಭವಾತಿ । ಯಷ್ಟವ್ಯಾ ದೇವಾ ಅಸ್ಮಾಭಿಃ ಸ್ತೂಯಂತ ಇಜ್ಯಂತೇ ಚೇತ್ಯರ್ಥಃ । ಹೇ ಸ್ವಧಾವಃ ಹವಿರ್ಲಕ್ಷಣಾನ್ನವನ್ನಗ್ನೇ ತ್ವಂ ಯದ್ಯದಾ ರತ್ನಾ ಚ ರತ್ನಾನಿ ರಮಣೀಯಾನಿ ಧನಾನಿ ಸ್ತೋತೃಭ್ಯೋ ಯಷ್ಟೃಭ್ಯಶ್ಚ ವಿಭಜಾಸಿ ವಿಭಜಸಿ ಅತ್ರ ತದಾನೀಂ ತಥಾ ನೋಽಸ್ಮಾನ್ಸ್ಪ್ರತಿ ವಸುಮಂತಂ ಧನವಂತಂ ನಾನಾಧನಾವಯವೋಪೇತಂ ಭಾಗಮಂಶಂ ವೀತಾತ್ ॥ ವೀ ಗತ್ಯಾದಿಷು । ತುಹ್ಯೋಸ್ತಾತಙ್ಙಾಶಿಷ್ಯನ್ಯತರಸ್ಯಾಂ । ಪಾ-೭-೧-೩೫ । ಇತಿ ಹೇಃ ಸ್ಥಾನೇ ತಾತಙ್ । ಅಂತರ್ಣೀತಣ್ಯರ್ಥಶ್ಚಾತ್ರ ದ್ರಷ್ಟವ್ಯಃ ॥ ಪಯಯ । ಆಗಮಯ । ಅಸ್ಮಭ್ಯಂ ಪ್ರಯಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸ್ವಧಾವಃ**—ಹವಿಸ್ಸಿನ ರೂಪದ ಅನ್ನವಂತನೂ । **ಯಜತ್ರ**—ಪೂಜ್ಯನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ಯತ್**—ಯಾವಾಗ । **ಏಷಾ ಸಮಿತಿಃ**—ನಮ್ಮ ಈ ಸ್ತುತಿಸಮೂಹವು । **ಯಜತಾ**—ಪೂಜಾರ್ಹರಿಂದ । **ದೇವೇಷು**—ದೇವತೆಗಳಲ್ಲಿ ಸೇರಿ । **ದೇವೀ**—ಪ್ರಕಾಶಮಾನವಾಗಿ । **ಭವಾತಿ**—ಆಗುವುದೋ । **ಯತ್**—ಯಾವಾಗ । **ರತ್ನಾ ಚ**-ರಮಣೀಯವಾದ ಧನಗಳನ್ನು । **ವಿಭಜಾಸಿ**—ನೀನು ಸ್ತೋತೃಗಳಿಗೆ ವಿಭಾಗಮಾಡುವೆಯೋ । **ಅತ್ರ**—ಆ ಕಾಲದಲ್ಲಿ **ನಃ**—ನಮಗೂ । **ವಸುಮಂತಂ**—ಸಂಪದ್ಯುಕ್ತವಾದ । **ಭಾಗಂ**—ಭಾಗವನ್ನು । **ವೀತಾತ್**—ಒದಗಿಸು. ।

॥ ಭಾವಾರ್ಥ ॥

ಹವಿಸ್ಸಿನ ರೂಪದ ಅನ್ನವಂತನೂ, ಪೂಜ್ಯನೂ ಆದ ಎಲೈ ಅಗ್ನಿಯೇ, ಯಾವಾಗ ನಮ್ಮ ಈ ಸ್ತುತಿಸಮೂಹವು ಪೂಜಾರ್ಹರಾದ ದೇವತೆಗಳಲ್ಲಿ ಸೇರಿ ಪ್ರಕಾಶಮಾನವಾಗಿ ಆಗುವುದೋ, ಯಾವಾಗ ರಮಣೀಯವಾದ ಧನಗಳನ್ನು ನೀನು ಸ್ತೋತೃಗಳಿಗೆ ವಿಭಾಗಮಾಡಿಕೊಡುವೆಯೋ, ಆ ಕಾಲದಲ್ಲಿ ನಮಗೂ ಸಂಪದ್ಯುಕ್ತವಾದ ಭಾಗವನ್ನು ಒದಗಿಸು.

English Translation

When, adorable Agni, this united praise is resplendent amongst the orable gods, and when you, bearer of the oblation, apportion the ecious (treasures), then allot to us a valuable share

ವಿಶೇಷವಿಷಯಗಳು ||

ಮಹಾವ್ರತೇಷ್ಟಿಯು ನಡೆಯುತ್ತಿರುವಾಗ ಮರುತ್ವತೀಯಶಸ್ತ್ರಮಂತ್ರಗಳಲ್ಲಿ **ಯದಗ್ನ ಏಷಾ** ಎಂಬ ಈ ಕ್ಕಿನಿಂದ ಆಜ್ಯವನ್ನು ನಾಲ್ಕಾವರ್ತಿ ತೆಗೆದುಕೊಂಡು ಸ್ರುಕ್ಕಿನಲ್ಲಿ ಇಟ್ಟುಕೊಂಡು ಹೋಮಮಾಡಬೇಕೆಂದು ರೇಯಾರಣ್ಯಕದ ಪಂಚಮಾರಣ್ಯಕದ—**ಯದಗ್ನ ಏಷಾ ಸಮಿತಿರ್ಭವಾತಿ** ಎಂಬ ವಾಕ್ಯದಿಂದ ನಿರ್ದಿಷ್ಟ ಿರುವುದು.

॥ ಸಂಹಿತಾಪಾಠಃ ॥

ಶ್ರುಧೀ ನೋ॑ ಅಗ್ನೇ॒ ಸದ॑ನೇ ಸ॒ಧಸ್ಥೇ॑ ಯು॒ಕ್ಷ್ವಾ ರಥ॑ಮ॒ಮೃತ॑ಸ್ಯ ದ್ರವಿ॒ತ್ನುಂ ।
ಆ ನೋ॑ ವಹ॒ ರೋದ॑ಸೀ ದೇ॒ವಪು॑ತ್ರೇ॒ ಮಾಕಿ॑ರ್ದೇ॒ವಾನಾ॒ಮಪ॑ ಭೂರಿ॒ಹ
ಸ್ಯಾಃ ॥ ೯ ॥

॥ ಪದಪಾಠಃ ॥

ಧಿ । ನಃ॒ । ಅ॒ಗ್ನೇ॒ । ಸದ॑ನೇ । ಸ॒ಧಽಸ್ಥೇ॑ । ಯು॒ಕ್ಷ್ವ । ರಥ॑ಂ । ಅ॒ಮೃತ॑ಸ್ಯ । ದ್ರ॒ವಿ॒ತ್ನುಂ ।
। ನಃ॒ । ವ॒ಹ॒ । ರೋದ॑ಸೀ॒ ಇತಿ॑ । ದೇ॒ವಪು॑ತ್ರೇ॒ ಇತಿ॑ ದೇ॒ವಽಪು॑ತ್ರೇ । ಮಾಕಿ॑ಃ । ದೇ॒ವಾನಾ॑ಂ । ಅಪ॑ । ಭೂ॒ಃ । ಇ॒ಹ । ಸ್ಯಾ॒ಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸಧಸ್ಥೇ ಸಹಸ್ಥಾನೇ ಸರ್ವದೇವತಾಸಾಧಾರಣೇ ಸದನೇ ಯಜ್ಞಗೃಹೇ ಸ್ಥಿತಃ ಸನ್ನೋ- ದೀಯಂ ವಚನಂ ಶ್ರುಧಿ । ಶೃಣು । ಕಿಂ ತದ್ವಚನಂ ಉಚ್ಯತೇ । ಅಮೃತಸ್ಯ ದೇವಪಾನಸ್ಯ ಮಧು- ೀ ದ್ರವಿತ್ನುಂ ದ್ರಾವಕಂ ರಥಮಾತ್ಮೀಯಂ ಯುಕ್ಷ್ವ । ಆಹ್ವಾನಾರ್ಥಂ ದೇವಾನ್ಪ್ರತಿ ಗಮನಾ- ಾಶ್ವೈಃ ಸಂಯುಕ್ಷ್ವ । ಸಂಯುಕ್ತೇನ ರಥೇನ ಗತ್ವಾ ನೋಽಸ್ಮಾಕಂ ಯಜ್ಞಂ ಪ್ರತಿ ದೇವಪುತ್ರೇ ವಸ್ಯ ಪ್ರಜಾಪತೇರ್ದುಹಿತರೌ ಯದ್ವಾ ದೇವಾಃ ಪುತ್ರಾ ಯಯೋಸ್ತೇ ರೋದಸೀ ದ್ಯಾವಾಪೃಥಿವ್ಯಾ- ವಹ । ಪ್ರಾಪಯ । ದೇವಾನಾಂ ಮಧ್ಯೇ ಕಶ್ಚಿದ್ದೇವೋಽಪ ಭೂರಪಭವಿತಾಸ್ಮದ್ಯಜ್ಞಾದಪಗಂತಾ ಕಿಃ ಸ್ಯಾತ್ । ತ್ವಂ ಚೇಹಾಸ್ಮಿನ್ಯಜ್ಞೇ ಸ್ಯಾಃ । ಸಂನಿಹಿತೋ ಭವ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ | **ಸಧಸ್ಥೇ**—ದೇವತೆಗಳೆಲ್ಲರೂ ಒಟ್ಟುಗೂಡುವ | **ಸದನೇ**—ಯಜ್ಞಗೃಹ ದಲ್ಲಿದ್ದು | **ನಃ**—ನಮ್ಮ ಸ್ತುತಿಯನ್ನು | **ಶ್ರುಧಿ**—ಕೇಳು | **ಅಮೃತಸ್ಯ**—ಅಮೃತವನ್ನು | **ಪ್ರಪಿತ್ವಂ**—ಸುರಿಸತಕ್ಕ | **ರಥಂ**—ರಥವನ್ನು | **ಯುಕ್ಷ್ವ**—ಯೋಜಿಸು | **ನಃ**—ನಮ್ಮ ಯಜ್ಞಕ್ಕೆ | **ದೇವಪುತ್ರೇ**—ಪ್ರಜಾಪತಿಯ ಪುತ್ರಿಯ ರಾದ | **ರೋದಸೀ**—ದ್ಯಾವಾಪೃಥಿವಿಗಳನ್ನು | **ಆ ವಹ**—ಕರೆದುಕೊಂಡು ಬಾ | **ದೇವಾನಾಂ**—ದೇವತೆಗಳ ನಡುವೆ | **ಮಾಕಿಃ ಅಪ ಭೂಃ**—ಯಾರೂ ತಪ್ಪಿಸಿಕೊಳ್ಳದಿರಲಿ | **ಇಹ**—ನಮ್ಮ ಯಜ್ಞದಲ್ಲಿ | **ಸ್ಯಾಃ**—ನೀನೂ ಸಮೀಪಸ್ಥನಾಗಿರು. |

॥ ಭಾವಾರ್ಥ

ಎಲೈ ಅಗ್ನಿಯೇ, ದೇವತೆಗಳೆಲ್ಲರೂ ಒಟ್ಟುಗೂಡುವ ಯಜ್ಞಗೃಹದಲ್ಲಿದ್ದು ನಮ್ಮ ಸ್ತುತಿಯನ್ನು ಕೇಳು. ಅಮೃತ ವನ್ನು ಸುರಿಸತಕ್ಕ ನಿನ್ನ ರಥವನ್ನು ಯೋಜಿಸು. ನಮ್ಮ ಯಜ್ಞಕ್ಕೆ ಪ್ರಜಾಪತಿಯ ಪುತ್ರಿಯರಾದ ದ್ಯಾವಾಪೃಥಿವಿ ಗಳನ್ನು ಕರೆದುಕೊಂಡು ಬಾ. ನಮ್ಮ ಯಜ್ಞಕ್ಕೆ ದೇವತೆಗಳ ನಡುವೆ ಯಾರೂ ತಪ್ಪಿಸಿಕೊಳ್ಳದಿರಲಿ. ನೀನೂ ನಮ್ಮ ಸಮೀಪಸ್ಥನಾಗಿರು.

English Translation

Agni, present in the dwelling common (to the deities) hear us: harness your swift chariot of ambrosia: bring to us the heaven and earth, the daughters of the divine (Prajapati), let none of the gods be absent, and you youself be present.

## ಹನ್ನೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ದ್ಯಾವೇತಿ ನವರ್ಚಂ ದ್ವಾದಶಂ ಸೂಕ್ತಮಾಂಗೇರ್ಹವಿರ್ಧಾನಸ್ಯಾರ್ಷಂ ತ್ರೈಷ್ಟುಭಮಾಗ್ನೇಯಂ | ದ್ಯಾವೇತ್ಯನುಕ್ರಾಂತಂ ॥ ಗತೋ ವಿನಿಯೋಗಃ ॥**

ಅನುವಾದವು—**ದ್ಯಾವಾ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹವಿರ್ಧಾನ ಆಂಗಿಃ ಎಂಬುವನು ಋಷಿಯು. ಅಗ್ನಿಯು ದೇವತೆಯು; ತ್ರಿಷ್ಟುಪ್ ಛಂದಸ್ಸು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಿದೆ.

## ಸೂಕ್ತ—೧೨

ಮಂಡಲ—೧೦ ॥ ಅನುವಾಕ—೧ ॥ ಸೂಕ್ತ—೧೨ ॥
ಅಷ್ಟಕ—೭ ॥ ಅಧ್ಯಾಯ—೬ ॥ ವರ್ಗ—೧೧, ೧೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
ಋಷಿಃ—ಹವಿರ್ಧಾನ ಆಂಗಿಃ ॥
ದೇವತಾ—ಅಗ್ನಿಃ ।
ಛಂದಃ—ತ್ರಿಷ್ಟುಪ್॥

॥ ಸಂಹಿತಾಪಾಠಃ ॥

ದ್ಯಾವಾ ಹ ಕ್ಷಾಮಾ ಪ್ರಥಮೇ ಋತೇನಾಭಿಶ್ರಾವೇ ಭವತಃ ಸತ್ಯವಾಚಾ ।
ದೇವೋ ಯನ್ಮರ್ತಾನ್ಯಜಥಾಯ ಕೃಣ್ವನ್ ಸೀದದ್ಧೋತಾ ಪ್ರತ್ಯಙ್ ಸ್ವಮಸುಂ ಯನ್ ॥ ೧ ॥

॥ ಪದಪಾಠಃ ॥

ದ್ಯಾವಾ । ಹ । ಕ್ಷಾಮಾ । ಪ್ರಥಮೇ ಇತಿ । ಋತೇನ । ಅಭಿऽಶ್ರಾವೇ । ಭವತಃ । ಸತ್ಯऽವಾಚಾ ।
ದೇವಃ । ಯತ್ । ಮರ್ತಾನ್ । ಯಜಥಾಯ । ಕೃಣ್ವನ್ । ಸೀದತ್ । ಹೋತಾ । ಪ್ರತ್ಯಙ್ । ಸ್ವಂ । ಅಸುಂ । ಯನ್ ॥ ೧ ॥

॥ ಸಾಯಣಭಾಷ್ಯಂ ॥

ಸತ್ಯವಾಚಾ ಸತ್ಯವಾಚೌ ಸತ್ಯವಾದಿನ್ಯೌ ಪ್ರಥಮೇ ಪ್ರಧಾನಭೂತೇ ದ್ಯಾವಾ ಕ್ಷಾಮಾ ದ್ಯುಕ್ಷಾಮೇ ದ್ಯಾವಾಪೃಥಿವ್ಯಾವೃತೇನ ಸತ್ಯಭೂತೇನ ದೇವಯಜನೇನ ಸಹಾಭಿಶ್ರಾವೇ । ಅಭಿಮುಖ್ಯೇನ ಶ್ರೂಯತ ಇತ್ಯಭಿಶ್ರಾವ ಆಹ್ವಾನಂ । ತಸ್ಮಿನ್ನಸ್ಮದ್ಯಜ್ಞನಿಮಿತ್ತೇऽಗ್ನೇಃ ಸಂಬಂಧಿನ್ಯಾಹ್ವಾನೇ ಭವತಃ ॥ ಲೋಡರ್ಥೇ ಲಟ್ ॥ ಭವತಾಂ । ಯದ್ಯದಾ ದೇವೋ ದ್ಯೋತಮಾನೋऽಗ್ನಿರ್ಯಜಥಾಯ ಯಜ್ಞಾಯ ಮರ್ತಾನ್ಮನುಷ್ಯಾನ್ ಕೃಣ್ವನ್ಪ್ರೇರಯನ್ ಪ್ರತ್ಯಙಾಹ್ವಾನಾರ್ಥಂ ದೇವಾನಾಂ ಪ್ರತ್ಯಂಚಿತಾ ಸ್ವಮಸುಮಾತ್ಮೀಯಂ ಜ್ವಾಲಾಲಕ್ಷಣಂ ಪ್ರಾಣಂ ಯನ್ ಪ್ರಾಪ್ನುವನ್ ಹೋತಾ ದೇವಾನಾಮಾಹ್ವಾತಾ ಸೀದತ್ ವೇದ್ಯಾಂ ನಿಷೀದತಿ । ತದಾಸ್ಮದ್ಯಜನಕಾಲೇ ದ್ಯಾವಾಪೃಥಿವೀ ಪ್ರಮುಖೋऽಗ್ನಿರಾಹ್ವಯತ್ವಿತ್ಯರ್ಥಃ ॥

॥ ಪ್ರತಿಪದಾರ್ಥ

ಯತ್—ಯಾವಾಗ । ದೇವಃ—ಪ್ರಕಾಶಮಾನನಾದ ಅಗ್ನಿಯು । ಯಜಥಾಯ—ಯಜ್ಞಾರ್ಥವಾಗಿ । ಮರ್ತಾನ್—ಮಾನವರನ್ನು । ಕೃಣ್ವನ್—ಪ್ರೇರಿಸುತ್ತಲೂ । ಪ್ರತ್ಯಙ್—ಅವರ ಮುಂಭಾಗದಲ್ಲಿ । ಸ್ವಂ

ಅಸುಂ—ತನ್ನ ಜ್ವಾಲೆಯನ್ನು । ಯನ್—ಹೊಂದುತ್ತಲೂ । ಹೋತಾ—ಹೋತೃರೂಪನಾಗಿ । ಸೀದತ್—ಕುಳಿತುಕೊಳ್ಳುವನೋ ಆಗ । ಸತ್ಯವಾಚಾ—ಸತ್ಯಾತ್ಮಕವಾದ ವಾಕ್ಕುಳ್ಳವರೂ । ಪ್ರಥಮೇ—ಪ್ರಧಾನಭೂತರೂ ಆದ । ದ್ಯಾವಾ ಕ್ಷಾಮಾ—ದ್ಯಾವಾಪೃಥಿವಿಗಳು । ಋತೇನ—ಸತ್ಯರೂಪರಾದ ದೇವಜನರೊಂದಿಗೆ । ಅಭಿಶ್ರಾವೇ-ಅಗ್ನಿಯ ಆಹ್ವಾನಕ್ಕೆ ಪಾತ್ರರಾಗಿ । ಭವತಃ—ಆಗಿರಲಿ.

॥ ಭಾವಾರ್ಥ ॥

ಪ್ರಕಾಶಮಾನನಾದ ಅಗ್ನಿಯು ಯಜ್ಞಾರ್ಥವಾಗಿ ಮಾನವರನ್ನು ಪ್ರೇರಿಸುತ್ತಲೂ, ಅವರ ಮುಂಭಾಗದಲ್ಲಿ ತನ್ನ ಜ್ವಾಲೆಯನ್ನು ಪ್ರಸರಿಸುತ್ತಲೂ, ಯಾವಾಗ ಹೋತೃವಿನ ಸ್ಥಾನದಲ್ಲಿ ಕುಳಿತುಕೊಳ್ಳುವನೋ, ಆಗ ಸತ್ಯಾತ್ಮಕವಾದ ವಾಕ್ಕುಳ್ಳವರೂ, ಪ್ರಧಾನಭೂತರೂ ಆದ ದ್ಯಾವಾಪೃಥಿಗಳು ಸತ್ಯರೂಪರಾದ ದೇವಜನರೊಂದಿಗೆ ಅಗ್ನಿಯ ಆಹ್ವಾನವನ್ನು ಸ್ವೀಕರಿಸಲಿ.

English Translation

Haven and earth, declarers of truth, principal (of things), be present at the invocation, associated with the rite, when the divine (Agni), exciting mortals to sacrifice, sits down in their presence as the invoker (of the gods) putting forth his flame.

॥ ಸಂಹಿತಾಪಾಠಃ ॥

ದೇವೋ ದೇವಾನ್ಪರಿಭೂರೃತೇನ ವಹಾ ನೋ ಹವ್ಯಂ ಪ್ರಥಮಶ್ಚಿಕಿ-
ತ್ವಾನ್ ।
ಧೂಮಕೇತುಃ ಸಮಿಧಾ ಭಾಋಜೀಕೋ ಮಂದ್ರೋ ಹೋತಾ ನಿತ್ಯೋ
ವಾಚಾ ಯಜೀಯಾನ್ ॥ ೨ ॥

ಪದಪಾಠಃ

ದೇವಃ । ದೇವಾನ್ । ಪರಿಽಭೂಃ । ಋತೇನ । ವಹ । ನಃ । ಹವ್ಯಂ । ಪ್ರಥಮಃ । ಚಿಕಿತ್ವಾನ್ ।
ಧೂಮಽಕೇತುಃ । ಸಂಽಇಧಾ । ಭಾಃಽಋಜೀಕಃ । ಮಂದ್ರಃ । ಹೋತಾ । ನಿತ್ಯಃ । ವಾಚಾ । ಯಜೀ-
ಯಾನ್ ॥ ೨ ॥

॥ ಸಾಯಣಭಾಷ್ಯಂ ॥

ದೇವೋ ದ್ಯೋತಮಾನೋಽಗ್ನಿಸ್ತ್ವಂ ದೇವಾನಿಂದ್ರಾದೀನ್ಪರಿಭೂರಾಹ್ವಾನಹವಿರ್ನಯನದ್ವಾ-ರೇಣ ಪರಿಭೂಃ ಪರಿಗೃಹ್ಣನ್ನೃತೇನ ಯಜ್ಞೇನ ಸಹ ನೋಽಸ್ಮಾಕಂ ಹವ್ಯಂ ಹವಿರ್ವಹ । ಪ್ರಾಪಯ ।

**ಕೇದೃಶಸ್ತ್ವಂ । ಪ್ರಥಮೋ ದೇವಾನಾಂ ಮುಖ್ಯಃ ಚಿಕಿತ್ವಾನ್ ಸರ್ವಂ ಜಾನನ್ ಧೂಮಕೇತುರ್ಧೂಮಸ್ಯ ಕೇತಾ ವಾ ಧೂಮಧ್ವಜೋ ವಾ ಧೂಮಪ್ರಜ್ಞಾನೋ ವಾ ಸಮಿಧಾ ಸಮಿಂಧನೇನ ದೀಪನೇನ ಭಾಋ- ಜೀಕ ಋಜುದೀಪ್ತಿಃ । ಊರ್ಧ್ವಜ್ವಲನ ಇತ್ಯರ್ಥಃ । ಮಂದ್ರಃ ಸ್ತುತ್ಯಃ ಹೋತಾಹ್ವಾತಾ ನಿತ್ಯೋ ಧ್ರುವೋ ವಾಚಾ ಯಜೀಯಾನತಿಶಯೇನ ಯಷ್ಟಾ ಚ ।**

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಪ್ರಥಮಃ**—ದೇವತೆಗಳಲ್ಲೆಲ್ಲ ಮುಖ್ಯನೂ । **ಚಿಕಿತ್ವಾನ್**—ಸಕಲವನ್ನೂ ಅರಿತವನೂ। **ಧೂಮಕೇತುಃ**—ಧೂಮರೂಪವಾದ ಧ್ವಜವುಳ್ಳವನೂ । **ಸಮಿಧಾ**—ಪ್ರಜ್ವಲನಕರ್ಮದಿಂದ। **ಭಾಋಜೀಕಃ**—ಊರ್ಧ್ವಮುಖವಾದ ಜ್ವಲನವುಳ್ಳವನೂ । **ಮಂದ್ರಃ**—ಸ್ತುತ್ಯನೂ । **ಹೋತಾ**—ಹೋತೃರೂಪನೂ । **ನಿತ್ಯಃ**—ಶಾಶ್ವತನೂ । **ವಾಚಾ**—ಸ್ತುತಿಪೂರ್ವಕವಾಗಿ। **ಯಜೀಯಾನ್**—ದೇವತೆಗಳನ್ನು ಪೂಜಿಸುವವನೂ । **ದೇವಃ**—ಪ್ರಕಾಶಮಾನನೂ ಆದ ನೀನು । **ದೇವಾನ್**—ಇಂದ್ರಾದಿದೇವತೆಗಳನ್ನು। **ಪರಿಭೂಃ**—ಸುತ್ತುವರಿದು । **ಋತೇನ**—ಯಜ್ಞಪೂರ್ವಕವಾಗಿ । **ನಃ**—ನಮ್ಮ । **ಹವ್ಯಂ**—ಹವಿಸ್ಸನ್ನು । **ವಹ**—ಅವರಿಗೆ ವಹಿಸು

॥ ಭಾವಾರ್ಥ ॥

ಎಲೈ ಅಗ್ನಿಯೇ, ದೇವತೆಗಳಲ್ಲೆಲ್ಲ ಮುಖ್ಯನೂ, ಸಕಲವನ್ನೂ ಅರಿತವನೂ, ಧೂಮರೂಪವಾದ ಧ್ವಜವುಳ್ಳವನೂ, ಪ್ರಜ್ವಲನಕರ್ಮದಿಂದ ಊರ್ಧ್ವಮುಖವಾದ ಜ್ವಲನವುಳ್ಳವನೂ, ಸ್ತುತ್ಯನೂ, ಪ್ರಕಾಶಮಾನನೂ, ಆದ ನೀನು ಇಂದ್ರಾದಿದೇವತೆಗಳನ್ನು ಸುತ್ತುವರಿದು ಯಜ್ಞಪೂರ್ವಕವಾಗಿ ನಮ್ಮ ಹವಿಸ್ಸನ್ನು ಅವರಿಗೆ ವಹಿಸು.

English Translation

You, bright (Agni), surrounding the gods, carry our oblation with due rites; you, who are the chief (of the deities), the wise, the smoke-bannered, fuel-kindled, straight-flaming, adorable, the invoker, the constant sacrificer with prayer.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ **ಭಾಋಜೀಕಃ** ಎಂಬ ಶಬ್ದಕ್ಕೆ ಯಾಸ್ಕರು—**ಭಾಋಜೀಕಃ ಪ್ರಸಿದ್ಧಭಾಃ । ಧೂಮಕೇತುಃ ಸಮಿಧಾ ಭಾಋಜೀಕಃ ಇತ್ಯಪಿ ನಿಗಮೋ ಭವತಿ** (ನಿ. ೬-೪) ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ, ಭಾಋಜೀಕಃ ಎಂಬ ಶಬ್ದಕ್ಕೆ ಪ್ರಸಿದ್ಧವಾದ ಕಾಂತಿಯುಳ್ಳ ಎಂದರ್ಥವು. ಈ ವಿಷಯದಲ್ಲಿ ಪ್ರಕೃತ ಋಕ್ಕಿನ **ಧೂಮಕೇತುಃ ಸಮಿಧಾ ಭಾಋಜೀಕಃ** ಎಂಬ ವಾಕ್ಯವೇ ಪ್ರತ್ಯುದಾಹರಣೆಯೆಂದು ಹೇಳಿದಾರೆ.

॥ ಸಂಹಿತಾಪಾಠಃ ॥

ಸ್ವಾವೃಗ್ದೇವಸ್ಯಾಮೃತಂ ಯದೀ ಗೋರತೋ ಜಾತಾಸೋ ಧಾರಯಂತ ಉರ್ವೀ ।

ವಿಶ್ವೇ ದೇವಾ ಅನು ತತ್ತೇ ಯಜುರ್ಗುರ್ದುಹೇ ಯದೇನೀ ದಿವ್ಯಂ ಘೃತಂ
ವಾಃ ॥ ೩ ॥

॥ ಪದಪಾಠಃ ॥

ಸ್ವಾವೃಕ್ । ದೇವಸ್ಯ । ಅಮೃತಂ । ಯದಿ । ಗೋಃ । ಅತಃ । ಜಾತಾಸಃ । ಧಾರಯಂತೇ । ಉರ್ವೀ ಇತಿ ।

ವಿಶ್ವೇ । ದೇವಾಃ । ಅನು । ತತ್ । ತೇ । ಯಜುಃ । ಗುಃ । ದುಹೇ । ಯತ್ । ಏನೀ । ದಿವ್ಯಂ । ಘೃತಂ ।
ವಾರಿತಿ ವಾಃ ॥ ೩ ॥

॥ ಸಾಯಣಭಾಷ್ಯಂ ॥

ದೇವಸ್ಯಾಗ್ನೇಃ ಸ್ವಾವೃಕ್ ಸ್ವಾರ್ಜನಮಮೃತಮುದಕಂ ಸ್ವತೇಜಸಃ ಸಕಾಶಾದ್ಯದಿ ಯದೋತ್ಪದ್ಯತೇ ತದಾತೋಽಸ್ಮಾದ್ಗೋರುದಕಾಜ್ಜಾತಾಸ ಉತ್ಪನ್ನಾ ಓಷಧಯ ಉರ್ವೀ ದ್ಯಾವಾಪೃಥಿವ್ಯೌ ಧಾರಯಂತಿ । ವಿಶ್ವೇ ದೇವಾಃ ಸರ್ವೇ ಸ್ತೋತಾರಸ್ತೇ ತವ ಸಂಬಂಧಿ ತದ್ಯಜುರುದಕಸ್ಯ ತದ್ದಾನಮನು ಗುಃ । ಅನುಗಾಯಂತಿ । ಏನೀ ಶ್ವೇತಾ ದೀಪ್ತಿರ್ದಿವ್ಯಂ ದಿವಿ ಭವಂ ಘೃತಂ ಕ್ಷರದ್ಯದ್ವಾ ವೃಷ್ಟಿಲಕ್ಷಣಂ ಯದುದಕಂ ದುಹೇ ದೋಗ್ಧಿ ॥

॥ ಪ್ರತಿಪದಾರ್ಥ ॥

ದೇವಸ್ಯ—ದೇವತಾತ್ಮನಾದ ಅಗ್ನಿಯ । ಸ್ವಾವೃಕ್—ಸ್ವಯಂಸಂಘಟಿತವಾದ । ಅಮೃತಂ—ಉದಕವು । ಯದಿ—ಯಾವಾಗ ಉತ್ಪನ್ನವಾಗುವುದೋ ಆಗ । ಅತಃ ಗೋಃ—ಅದೇ ಉದಕದಿಂದ । ಜಾತಾಸಃ—ಉತ್ಪನ್ನಗಳಾದ ಓಷಧಿಗಳು । ಉರ್ವೀ—ದ್ಯಾವಾಪೃಥಿವಿಗಳನ್ನು ಧರಿಸುತ್ತವೆ । ಯತ್—ಯಾವಾಗ । ಏನೀ—ಪ್ರಕಾಶಮಾನಗಳಾದ ನಿನ್ನ ಜ್ವಾಲೆಗಳು । ದಿವ್ಯಂ—ದ್ಯುಲೋಕಸ್ಥವಾದುದೂ । ಘೃತಂ—ಸ್ರವಿಸುವುದೂ । ವಾಃ—ವೃಷ್ಟಿರೂಪವೂ ಆದ ಉದಕವನ್ನು । ದುಹೇ—ಕರೆಯುವುದೋ ಆಗ । ವಿಶ್ವೇ ದೇವಾಃ—ಸಕಲ ಸ್ತುತಿಕರ್ತರೂ । ತೇ—ನಿನ್ನಿಂದ ದತ್ತವಾದ । ತತ್ ಯಜುಃ—ಆ ಉದಕದಾನವನ್ನು । ಅನು ಗುಃ—ಪ್ರಶಂಸಿಸುತ್ತಾರೆ.

॥ ಭಾವಾರ್ಥ ॥

ದೇವತಾತ್ಮನಾದ ಅಗ್ನಿಯ ಸ್ವಯಂಸಂಘಟಿತವಾದ ಉದಕವು ಯಾವಾಗ ಉತ್ಪನ್ನವಾಗುವುದೋ ಆಗ ಅದೇ ಉದಕದಿಂದ ಉತ್ಪನ್ನವಾದ ಓಷಧಿಗಳು ದ್ಯಾವಾಪೃಥಿವಿಗಳನ್ನು ಧರಿಸುತ್ತವೆ. ಎಲೈ ಅಗ್ನಿಯೇ, ಯಾವಾಗ ಪ್ರಕಾಶಮಾನಗಳಾದ ಜ್ವಾಲೆಗಳು ದ್ಯುಲೋಕಸ್ಥವಾದುದೂ, ಸ್ರವಿಸುವುದೂ, ವೃಷ್ಟಿರೂಪವೂ ಆದ ಉದಕವನ್ನು ಕರೆಯುವುದೋ ಆಗ ಸಕಲ ಸ್ತುತಿಕರ್ತರೂ ನಿನ್ನಿಂದ ದತ್ತವಾದ ಆ ಉದಕದಾನವನ್ನು ಪ್ರಶಂಸಿಸುತ್ತಾರೆ.

## English Translation

When the self-aggregated ambrosia of the divine Agni is generated from his radiance, then the products from it sustain both heaven and earth,

all the worshippers glorify this your oblation, the celestial nutritious water which your white lustre milks forth.

॥ ಸಂಹಿತಾಪಾಠ ॥

ಅರ್ಚಾಮಿ ವಾಂ ವರ್ಧಾಯಾಪೋ ಘೃತಸ್ನೂ ದ್ಯಾವಾಭೂಮೀ ಶೃಣುತಂ ರೋದಸೀ ಮೇ ।
ಅಹಾ ಯದ್ದ್ಯಾವೋಽಸುನೀತಿಮಯನ್ಮಧ್ವಾ ನೋ ಅತ್ರ ಪಿತರಾ ಶಿಶೀತಾಂ ॥

॥ ಪದಪಾಠಃ ॥

ಅರ್ಚಾಮಿ । ವಾಂ । ವರ್ಧಾಯ । ಅಪಃ । ಘೃತಸ್ನೂ ಇತಿ ಘೃತಽಸ್ನೂ । ದ್ಯಾವಾಭೂಮೀ ಇತಿ । ಶೃಣುತಂ । ರೋದಸೀ ಇತಿ । ಮೇ ।
ಅಹಾ । ಯತ್ । ದ್ಯಾವಃ । ಅಸುಽನೀತಿಂ । ಆಯನ್ । ಮಧ್ವಾ । ನಃ । ಅತ್ರ । ಪಿತರಾ । ಶಿಶೀತಾಂ ॥೪॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಮಪೋ ಮದೀಯಂ ಯಜ್ಞರೂಪಂ ಕರ್ಮ ವರ್ಧಾಯ । ಪ್ರೋತ್ಸರ್ಪಿತೇ ಸತಿ ಹೇ ಘೃತಸ್ನೂ ವೃಷ್ಟ್ಯುದಕಸ್ಯ ಪ್ರಸವಿತ್ರ್ಯೌ ಹೇ ದ್ಯಾವಾಭೂಮೀ ದ್ಯಾವಾಪೃಥಿವ್ಯೌ ವಾಂ ಯುವಾಮರ್ಚಾಮಿ ॥ ಋಚ ಸ್ತುತೌ ॥ ಸ್ತೌಮಿ । ಹೇ ರೋದಸೀ ದ್ಯಾವಾಪೃಥಿವ್ಯೌ ಯುವಾಂ ಮೇ ಮದೀಯಂ ಸ್ತೋತ್ರಂ ಶೃಣುತಂ । ಯದ್ಯಸ್ಮಿನ್ನಹಾ । ಅಹಃಶಬ್ದಸಾಮರ್ಥ್ಯಾದಹೋರಾತ್ರಸಾಧ್ಯಂ ಕರ್ಮೋಚ್ಯತೇ ॥ ಸುಪಾಂ ಸುಲುಗಿತಿ ಸಪ್ತಮ್ಯೇಕವಚನಸ್ಯಾಜಾದೇಶಃ ॥ ಅಹನ್ಯಹೋರಾತ್ರಸಾಧ್ಯಕರ್ಮಣಿ ದ್ಯಾವಃ ಸ್ತೋತಾರೋಽಸುನೀತಿಂ । ಅಸುಃ ಪ್ರಜ್ಞಾ । ತಯಾ ನೀಯತ ಇತ್ಯಸುನೀತಿಃ ಸ್ತುತಿಃ । ತಾಮಯನ್ ಗಚ್ಛಂತಿ ಅತ್ರಾಸ್ಮಿನ್ಕರ್ಮಣಿ ಪಿತರಾ ಸರ್ವಸ್ಯ ಮಾತಾಪಿತೃಭೂತೇ ದ್ಯಾವಾಪೃಥಿವ್ಯೌ ನೋಽಸ್ಮಾನ್ವೃಷ್ಟ್ಯುದಕೇನ ಶಿಶೀತಾಂ । ಸ್ನಾನಪಾನಾದಿನಾ ಸಂಸ್ಕುರುತಾಂ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) ಅಪಃ—ನನ್ನ ಯಜ್ಞಕರ್ಮವನ್ನು । ವರ್ಧಾಯ—ಪುಷ್ಟಿಗೊಳಿಸು । ಘೃತಸ್ನೂ—ಉದಕವನ್ನು ಸುರಿಸತಕ್ಕ । ದ್ಯಾವಾಭೂಮೀ—ಎಲೈ ದ್ಯಾವಾಪೃಥಿವಿಗಳೇ । ವಾಂ—ನಿಮ್ಮನ್ನು । ಅರ್ಚಾಮಿ—ಸ್ತುತಿಸುತ್ತೇನೆ । ರೋದಸೀ—ಎಲೈ ದ್ಯಾವಾಪೃಥಿವಿಗಳೇ । ಮೇ—ನನ್ನ ಸ್ತೋತ್ರವನ್ನು । ಶೃಣುತಂ—ಕೇಳಿರಿ । ಅಹಾ—ಅಹೋರಾತ್ರಗಳಲ್ಲೂ ನೆರವೇರುವ । ಯತ್—ಯಾವ ಕರ್ಮದಲ್ಲಿ । ದ್ಯಾವಃ—ಸ್ತುತಿಕರ್ತರು ।

**ಅಸುನೀತಿಂ**—ಸ್ತುತಿಯನ್ನು । **ಅಯನ್**—ನಿರ್ಮಿಸುವರೋ । **ಅತ್ರ**—ಆ ಕರ್ಮದಲ್ಲಿ । **ಪಿತರಾ**—ಜಗತ್ತಿಗೆ ಮಾತಾಪಿತೃಗಳಾದ ದ್ಯಾವಾಪೃಥಿವಿಗಳು । **ಮಧ್ವಾ**—ವೃಷ್ಟ್ಯುದಕದಿಂದ । **ನಃ**—ನಮ್ಮನ್ನು । **ಶಿಶೀತಾಂ**—ಸಂಸ್ಕರಿಸಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನನ್ನ ಯಜ್ಞಕರ್ಮವನ್ನು ಪುಷ್ಟಿಗೊಳಿಸು. ಉದಕವನ್ನು ಸುರಿಸತಕ್ಕ ಎಲೈ ದ್ಯಾವಾ-ಪೃಥಿವಿಗಳೇ, ನಿಮ್ಮನ್ನು ಸ್ತುತಿಸುತ್ತೇನೆ. ಎಲೈ ದ್ಯಾವಾಪೃಥಿವಿಗಳೇ, ನನ್ನ ಸ್ತೋತ್ರವನ್ನು ಕೇಳಿರಿ. ಅಹೋ-ರಾತ್ರಗಳಲ್ಲೂ ನೆರವೇರುವ ಯಾವ ಕರ್ಮದಲ್ಲಿ ಸ್ತುತಿಕರ್ತರು ಸ್ತುತಿಯನ್ನು ನಿರ್ಮಿಸುವರೋ, ಆ ಕರ್ಮದಲ್ಲಿ ಜಗತ್ತಿಗೆ ಮಾತಾಪಿತೃಗಳಾದ ದ್ಯಾವಾಪೃಥಿವಿಗಳು ವೃಷ್ಟ್ಯುದಕದಿಂದ ನಮ್ಮನ್ನು ಸಂಸ್ಕರಿಸಲಿ.

## English Translation

I worship you, waters that pour forth ghee, and you, heaven and earth, for your increase ; hear me, you worlds ; when worshippers at the daily or nightly rite proceed to their pious purpose, then may the parents (of all) sanctify us with ambrosia.

॥ ಸಂಹಿತಾಪಾಠಃ ॥

ಕಿಂ ಸ್ವಿನ್ನೋ ರಾಜಾ ಜಗೃಹೇ ಕದಸ್ಯಾತಿ ವ್ರತಂ ಚಕೃಮಾ ಕೋ ವಿ ವೇದ ।

ಮಿತ್ರಶ್ಚಿದ್ಧಿ ಷ್ಮಾ ಜುಹುರಾಣೋ ದೇವಾಞ್ಛ್ಲೋಕೋ ನ ಯಾತಾ-

ಮಪಿ ವಾಜೋ ಅಸ್ತಿ ॥ ೫ ॥

॥ ಪದಪಾಠಃ ॥

ಕಿಂ । ಸ್ವಿತ್ । ನಃ । ರಾಜಾ । ಜಗೃಹೇ । ಕತ್ । ಅಸ್ಯ । ಅತಿ । ವ್ರತಂ । ಚಕೃಮ । ಕಃ । ವಿ । ವೇದ ।

ಮಿತ್ರಃ । ಚಿತ್ । ಹಿ । ಸ್ಮ । ಜುಹುರಾಣಃ । ದೇವಾನ್ । ಶ್ಲೋಕಃ । ನ । ಯಾತಾಂ । ಅಪಿ । ವಾಜಃ ।

ಅಸ್ತಿ ॥ ೫ ॥

॥ ಸಾಯಣಭಾಷ್ಯಂ ।

ಕಿಂಸ್ವಿಚ್ಛಬ್ದೋ ವಿತರ್ಕಾರ್ಥೇ । ಕಿಂವಾ ರಾಜಾ ದೀಪ್ಯಮಾನೋಽಗ್ನಿರ್ನೋಽಸ್ಮಾಕಂ ಸ್ವಭೂ-ತಾನಿ ಹವೀಂಷಿ ಸ್ತುತೀಶ್ಚ ಜಗೃಹೇ ಪರಿಗೃಹ್ಣೀಯಾತ್ ಕಿಂವಾಸ್ಯಾಗ್ನೇರಿತಿ ವ್ರತಮತಿಪೂಜಿತಂ ಪರಿಚರ-ಣಾಖ್ಯಂ ಕರ್ಮ ಚಕೃಮ ವಯಂ ಕ್ರಿಯಾಸ್ಮ । ಕರ್ಮವೈಗುಣ್ಯಾದ್ಭೀತಸ್ಯ ಪೂರ್ವಾರ್ಧ ವಿತರ್ದ್ವಚನಮು-

ಕ್ತಂ । ಉತ್ತರಾರ್ಧ ಇದಾನೀಂ ತನ್ನಿರಾಕ್ರಿಯತೇ । ಹಿ ಸ್ಮೇತೀಮೌ ಪೂರಣೌ । ಚಿದಿತ್ಯುಪಮಾರ್ಥೇ । ಜುಹುರಾಣಃ ಸ್ನಿಗ್ಧಮಾಹೂಯಮಾನೋ ಮಿತ್ರಃ ಸ್ನಿಗ್ಧೋ ಯಥಾ ಗಚ್ಛೇತ್ ತಥಾ । ನೇತಿ ಸಂಪ್ರತ್ಯರ್ಥೇ । ಶ್ಲೋಕೋಽಸ್ಮದೀಯಾ ಸ್ತುತಿಲಕ್ಷಣಾ ವಾಗ್ದೇವಾನಿಂದ್ರಾದೀನ್ಯಾತಾಂ । ಗಚ್ಛತು । ಅಪಿ ವಾಜೋ ಹವಿರಾಖ್ಯಂ ಚಾನ್ನಂ ಯದಸ್ತಿ ತದಪಿ ದೇವಾನ್ಪ್ರತಿ ಗಚ್ಛತು । ದೇವಾಃ ಸ್ತುತಿಂ ಹವಿಶ್ಚ ಪ್ರತಿಗೃಹ್ಣಂತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

ರಾಜಾ—ಪ್ರಕಾಶಮಾನನಾದ ಅಗ್ನಿಯು । **ನಃ**—ನಮ್ಮ ಹವಿಸ್ಸುಗಳನ್ನು । **ಕಿಂ ಸ್ವಿತ್ ಜಗೃಹೇ**—ನಿಜವಾಗಿಯೂ ಸ್ವೀಕರಿಸುವನೇ ?। **ಅಸ್ಯ**—ಅಗ್ನಿಯನ್ನುದ್ದೇಶಿಸಿದ । **ಅತಿವ್ರತಂ**—ಉಪಚಾರರೂಪವಾದ ಕರ್ಮವನ್ನು। **ತತ್ ಚಕೃಮ**—ನಾವು ನಿಜವಾಗಿಯೂ ಆಚರಿಸಿದ್ದೇವೆಯೆ ? । **ಕಃ ವಿ ವೇದ**—ಇದನ್ನು ಯಾರು ಅರಿತಿದ್ದಾರೆ । **ಜುಹುರಾಣಃ**—ವಿಶ್ವಾಸದಿಂದ ಕರೆಯಲ್ಪಡುವ । **ಮಿತ್ರಶ್ಚಿತ್**—ಮಿತ್ರನು ಪ್ರೀತಿಯಿಂದ ಹೋಗುವಂತೆ । **ಶ್ಲೋಕಃ**—ನಮ್ಮ ಸ್ತುತಿಯು । **ದೇವಾನ್**—ಇಂದ್ರಾದಿ ದೇವತೆಗಳಲ್ಲಿಗೆ । **ಯಾತಾಂ**—ಹೋಗಿ ಸೇರಲಿ। **ಅಪಿ**—ಮತ್ತು । **ವಾಜಃ ಅಸ್ತಿ**—ಯಾವ ಹವಿಸ್ಸಿನ ರೂಪದ ಅನ್ನವಿದೆಯೋ ಅದೂ ಹೋಗಿ ಸೇರಲಿ.

॥ ಭಾವಾರ್ಥ ॥

ಪ್ರಕಾಶಮಾನನಾದ ಅಗ್ನಿಯು ನಮ್ಮ ಹವಿಸ್ಸುಗಳನ್ನು ನಿಜವಾಗಿಯೂ ಸ್ವೀಕರಿಸುವನೇ ? ಈ ಅಗ್ನಿಯನ್ನುದ್ದೇಶಿಸಿದ ಉಪಚಾರರೂಪವಾದ ಕರ್ಮವನ್ನು ನಾವು ನಿಜವಾಗಿಯೂ ಆಚರಿಸಿದ್ದೇವೆಯೋ ? ಇದನ್ನು ಯಾರು ಅರಿತಿದ್ದಾರೆ ? ವಿಶ್ವಾಸದಿಂದ ಕರೆಯಲ್ಪಡುವ ಮಿತ್ರನು ಪ್ರೀತಿಯಿಂದ ಹೋಗುವಂತೆ, ನಮ್ಮ ಸ್ತುತಿಯು ಇಂದ್ರಾದಿದೇವತೆಗಳಲ್ಲಿಗೆ ಹೋಗಿ ಸೇರಲಿ. ನಮ್ಮಿಂದ ಅರ್ಪಿತವಾದ ಹವಿಸ್ಸೂ ಹೋಗಿ ಸೇರಲಿ.

English Translation

But will the royal Agni accept our oblations ? Have we duly performed our vows to him ? Who decides ? As a friend affectionately invited, so let our praise now proceed to the gods ; together with the sacrificial food that is left over.

॥ ಸಂಹಿತಾಪಾಠಃ ॥

ದುರ್ಮಂತ್ವತ್ರಾಮೃತಸ್ಯ ನಾಮ ಸಲಕ್ಷ್ಮಾ ಯದ್ವಿಷುರೂಪಾ ಭವಾತಿ ।
ಯಮಸ್ಯ ಯೋ ಮನವತೇ ಸುಮಂತ್ವಗ್ನೇ ತಮೃಷ್ವ ಪಾಹ್ಯಪ್ರಯುಚ್ಛನ್ ॥

॥ ಪದಪಾಠಃ ॥

ದುಃऽಮಂತು । ಅತ್ರ । ಅಮೃತಸ್ಯ । ನಾಮ । ಸಽಲಕ್ಷ್ಮಾ । ಯತ್ । ವಿಷುಽರೂಪಾ । ಭವಾತಿ ।
ಯಮಸ್ಯ । ಯಃ । ಮನವತೇ । ಸುಽಮಂತು । ಅಗ್ನೇ । ತಂ । ಋಷ್ವ । ಪಾಹಿ । ಅಪ್ರಽಯುಚ್ಛನ್ ॥

॥ ಸಾಯಣಭಾಷ್ಯಂ ॥

ಅತ್ರಾಸ್ಮಿನ್ಕರ್ಮಣಿ ಕೃತೇಽಮೃತಸ್ಯ ಯಮಸ್ಯ ನಾಮ ದುರ್ಮಂತು ದುರ್ವಚನಂ ಭವತಿ । ಯದ್ಯಸ್ಮೈ ಸಲಕ್ಷ್ಮಾ ವಿಷಮರೂಪಾ ಭಗಿನೀ ಭಾರ್ಯಾ ಭವತಿ । ತತ್ತು ನ ತಥಾ ಇತಿ ಯಮಂ ಯಃ ಸ್ತೌತಿ ಸುವಚನಮಸ್ಯ ನಾಮೇತಿ ತಂ ಸ್ತೋತಾರಂ ದರ್ಶನೀಯಾಗ್ನೇ ಅಪ್ರಯುಚ್ಛನ್ ಅಪ್ರಮಾದ್ಯನ್ ರಕ್ಷಃ ॥

ಯದ್ವಾಸ್ಯ ಅಮೃತಸ್ಯ ಮರಣಧರ್ಮರಹಿತಸ್ಯ ಸೂರ್ಯಸ್ಯ । ಅಸ್ಯ ಮರಣಧರ್ಮರಾಹಿತ್ಯಂ ತು ಸೂರ್ಯೋ ವಿಷಮಾ ಸಜಾಮಿತ್ಯಸ್ಯಾಂ ಋಚಿ ಪ್ರಸಿದ್ಧಂ । ತಾದೃಶಸ್ಯ ಸಂಬಧಿ ನಾಮ ನಾಮಕಮುದಕಂ ಅತ್ರ ಅಸ್ಯಾಂ ಪೃಥಿವ್ಯಾಂ ವಿಷುರೂಪಾ ನಾನಾರೂಪಂ ಭವಾತಿ ಭವತಿ । ಉದಕಸ್ಯ ನಾನಾರೂಪತ್ವಂ ಯಾ ಆಪೋ ದಿವ್ಯಾ ಇತಿ ಮಂತ್ರೇ ಸ್ಫುಟಮುಕ್ತಂ । ಕೀದೃಶಂ ತತ್ । ದುರ್ಮಂತಂ ನಿರಪರಾಧಂ ಪ್ರಹ್ವಸ್ವಭಾವತ್ವಾತ್ । ಪುನಃ ಕೀದೃಶಂ । ಸಲಕ್ಷ್ಮಾ ಮಧುರರಸರೂಪಲಕ್ಷಣೋಪೇತಂ । ಕಿಂ ಚ ಯಃ ಸೂರ್ಯಃ ಯಮಸ್ಯ ಸಂಯಮಿನೀಪತೇಃ ಸುಮಂತು ಸುತರಾಮಪರಾಧಂ ಮಾತೃತಾಡನರೂಪಂ ಮನವತೇ ಅವಬುಧ್ಯತೇ ಸರ್ವಜ್ಞತ್ವಾತ್ । ಯದ್ವಾ ಧಾತೂನಾಮನೇಕಾರ್ಥತ್ವಾತ್ ಕ್ಷಮತ ಇತ್ಯರ್ಥಃ । ತಂ ತಾದೃಶಂ ಜಲಜನಕಂ ಸರ್ವಜ್ಞಂ ಕ್ಷಮಾಶೀಲಂ ಸೂರ್ಯಂ ಹೇ ಋಷ್ವ ಮಹನ್ನಗ್ನೇ ಅಪ್ರಯುಚ್ಛನ್ ಅಪ್ರಮಾದ್ಯನ್ ತ್ವಂ ಪಾಹಿ । ಆಹುತಿಪ್ರದಾನೇನ ರಕ್ಷಣದ್ವಾರಾತ್ಮರಕ್ಷಣಂ ಪ್ರಾರ್ಥಯತೇ ಋಷಿಃ ॥

॥ ಪ್ರತಿಪದಾರ್ಥ ॥

**ಅತ್ರ**—ಈ ಕರ್ಮಕಾಲದಲ್ಲಿ । **ಯಮಸ್ಯ**—ಯಮನ । **ನಾಮ**—ಸ್ವರೂಪವು । **ದುರ್ಮಂತು**—ತಿಳಿಯಲು ಶ್ರಮವಾಗಿದೆ । **ಯತ್ ಸಲಕ್ಷ್ಮಾ**—ಒಂದೇ ವಿಧವಾದ ಚಿಹ್ನವಿದ್ದರೂ । **ವಿಷುರೂಪಾ**—ಅನೇಕವಿಧವಾದ ರೂಪವುಳ್ಳವನಾಗಿ । **ಭವಾತಿ**—ಆಗಿರುತ್ತಾನೆ । **ಸುಮಂತು**—ಅವನ ಸ್ವರೂಪವನ್ನು ಚೆನ್ನಾಗಿ ಅರಿತವನೂ । **ಋಷ್ವ**—ಮಹಾತ್ಮನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ಮನವತೇ**—ಮಾನವರಿಗೆ ಹಿತಕಾರಿಯಾದ । **ಯಮಸ್ಯ**—ಯಮನಿಗೆ । **ಯಃ**—ಯಾರು ಪೂಜೆಯನ್ನರ್ಪಿಸುವರೋ । **ತಂ**—ಅವನನ್ನು । **ಅಪ್ರಯುಚ್ಛನ್**—ಆಲಸ್ಯರಹಿತನಾಗಿ । **ಪಾಹಿ**—ರಕ್ಷಿಸು.

॥ ಭಾವಾರ್ಥ ॥

ಈ ಕರ್ಮಕಾಲದಲ್ಲಿ ಯಮನ ಸ್ವರೂಪವನ್ನು ತಿಳಿಯಲು ಶ್ರಮವಾಗಿದೆ. ಅವನಿಗೆ ಒಂದೇ ವಿಧವಾದ ಚಿಹ್ನವಿದ್ದರೂ ಅವನು ಅನೇಕವಿಧವಾದ ರೂಪವುಳ್ಳವನಾಗಿರುತ್ತಾನೆ. ಅವನ ಸ್ವರೂಪವನ್ನು ಚೆನ್ನಾಗಿ ಅರಿತವನೂ, ಮಹಾತ್ಮನೂ ಆದ ಎಲೈ ಅಗ್ನಿಯೇ, ಮಾನವರಿಗೆ ಹಿತಕಾರಿಯಾದ ಯಮನಿಗೆ ಯಾರು ಪೂಜೆಯನ್ನರ್ಪಿಸುವರೋ, ಅವನನ್ನು ಆಲಸ್ಯರಹಿತನಾಗಿ ರಕ್ಷಿಸು.

## English Translation

Hard to understand is the nature of the immortal, for although of one origin, she is of a different form ; cherish him delegently, great Agni, who understands Yama's nature easy to be understood.

॥ ಸಂಹಿತಾಪಾಠಃ ॥

ಯಸ್ಮಿನ್ದೇವಾ ವಿದಥೇ ಮಾದಯಂತೇ ವಿವಸ್ವತಃ ಸದನೇ ಧಾರಯಂತೇ ।
ಸೂರ್ಯೇ ಜ್ಯೋತಿರದಧುರ್ಮಾಸ್ಯ೧ ಕ್ತೂನ್ಪರಿ ದ್ಯೋತನಿಂ ಚರತೋ
ಅಜಸ್ರಾ ॥ ೭ ॥

ಪದಪಾಠಃ ॥

ಯಸ್ಮಿನ್ । ದೇವಾಃ । ವಿದಥೇ । ಮಾದಯಂತೇ । ವಿವಸ್ವತಃ । ಸದನೇ । ಧಾರಯಂತೇ ।
ಸೂರ್ಯೇ । ಜ್ಯೋತಿಃ । ಅದಧುಃ । ಮಾಸಿ । ಅಕ್ತೂನ್ । ಪರಿ । ದ್ಯೋತನಿಂ । ಚರತಃ । ಅಜಸ್ರಾ । ೭॥

॥ ಸಾಯಣಭಾಷ್ಯಂ ॥

ಯಸ್ಮಿನ್ನಗ್ನೌ ಯಜ್ಞಸ್ಯ ಪ್ರಧಾನಾಂಶೇ ಸತಿ ದೇವಾ ಇಂದ್ರಾದಯೋ ವಿದಥೇ ಯಜ್ಞೇ ಮಾದಪವಿಷಾತ್ಮಾನಂ ತರ್ಪಯಂತಿ ತೃಪ್ಯಂತಿ ವಾ । ಅಪಿ ಚ ವಿವಸ್ವತೋ ಮನುಷ್ಯಸ್ಯ ಯಜಮಾಭೂತೇ ಸದನೇ ವೇದ್ಯಾಖ್ಯೇ ಸ್ಥಾನೇ ಧಾರಯಂತೇ । ಆತ್ಮಾನಂ ಸ್ಥಾಪಯಂತಿ ಚ । ಸೂರ್ಯೇ ಜ್ಯೋತಿರಹರಾಖ್ಯಂ ತೇಜೋಽದಧುಃ । ಸ್ಥಾಪಿತವಂತಃ । ಮಾಸಿ ಚಂದ್ರಮಸ್ಯಕ್ತೂ- ಸ್ಥಾಪಿತವಂತಃ । ತದನಂತರಮಜಸ್ರಾನುಪಕ್ಷೀಣೌ ಸೂರ್ಯಾಚಂದ್ರಮಸೌ ದ್ಯೋತನಿಂ ಪರಿ ಚರತಃ । ಪರಿಗಚ್ಛತಃ । ಸರ್ವತ್ರ ಪ್ರಾಪ್ನುತಃ ॥

॥ ಪ್ರತಿಪದಾರ್ಥ ॥

**ಯಸ್ಮಿನ್**—ಯಾವ ಅದೇ ಪ್ರಖ್ಯಾತನಾದ ಅಗ್ನಿಯಲ್ಲಿ ಆಹುತಿಯನ್ನು ಅರ್ಪಿಸುವುದರಿಂದ । **ದೇವಾಃ**—ದೇವತೆಗಳು । **ವಿಧಥೇ**—ಯಜ್ಞ ಗೃಹದಲ್ಲಿ । **ಮಾದಯಂತೇ**—ಹರ್ಷವನ್ನು ಹೊಂದುತ್ತಾರೆ । **ವಿವಸ್ವ**-ಮಾನನ । **ಸದನೇ**—ಯಜ್ಞಗೃಹದಲ್ಲಿ । **ಧಾರಯಂತೇ**—ತಮ್ಮ ಅಸ್ತಿತ್ವವನ್ನು ಸ್ಥಾಪಿಸುತ್ತಾರೆ (ಆದ **ಸೂರ್ಯೇ**—ಸೂರ್ಯನಲ್ಲಿ। **ಜ್ಯೋತಿಃ**—ತೇಜಸ್ಸನ್ನು । **ಅದಧುಃ**—ಸ್ಥಾಪಿಸಿದ್ದಾರೆ । **ಮಾಸಿ**—ಚಂದ್ರನಲ್ಲಿ —ರಾತ್ರಿಗಳನ್ನು ಸ್ಥಾಪಿಸಿದ್ದಾರೆ । **ಅಜಸ್ರಾ**—ಶಾಶ್ವತರಾದ ಸೂರ್ಯ ಮತ್ತು ಚಂದ್ರರು । **ದ್ಯೋತನಿಂ**—ಯನ್ನು । **ಪರಿ ಚರತಃ**—ಸುತ್ತಲೂ ಹರಡುತ್ತಾರೆ.

॥ ಭಾವಾರ್ಥ ॥

ಖ್ಯಾತನಾದ ಅಗ್ನಿಯಲ್ಲಿ ಆಹುತಿಯನ್ನು ಅರ್ಪಿಸುವುದರಿಂದ ಇಂದ್ರಾದಿದೇವತೆಗಳು ಯಜ್ಞ ಗೃಹದಲ್ಲಿ ಹೊಂದುತ್ತಾರೆ. ಯಜಮಾನನ ಯಜ್ಞ ಗೃಹದಲ್ಲಿ ಸ್ಥಾಪಿತರಾಗುತ್ತಾರೆ. ಈ ರೀತಿ ಹರ್ಷವನ್ನು ಹೊಂದಿಂದಲೇ, ಸೂರ್ಯನಲ್ಲಿ ತೇಜಸ್ಸನ್ನು ಸ್ಥಾಪಿಸಿದ್ದಾರೆ. ಚಂದ್ರನಲ್ಲಿ ರಾತ್ರಿಯನ್ನು ಸ್ಥಾಪಿಸಿದ್ದಾರೆ. ಶಾಶ್ವತ ಮತ್ತು ಚಂದ್ರರು ತಮ್ಮ ಕಾಂತಿಯನ್ನು ಸುತ್ತಲೂ ಹರಡುತ್ತಾರೆ.

English Translation

In him the gods find pleasure at the sacrifice; they seat themselves on the altar of the sacrificer. They placed light in the sun; beams in the moon; and these untiring shed their light around.

। ಸಂಹಿತಾಪಾಠಃ ।

ಯಸ್ಮಿನ್ದೇವಾ ಮನ್ಮನಿ ಸಂಚರಂತ್ಯಪೀಚ್ಯೇ ३ ನ ವಯಮಸ್ಯ ವಿದ್ಮ ।
ಮಿತ್ರೋ ನೋ ಅತ್ರಾದಿತಿರನಾಗಾನ್ತ್ಸವಿತಾ ದೇವೋ ವರುಣಾಯ ವೋಚತ್ ॥ ೮ ॥

॥ ಪದಪಾಠಃ ॥

ಯಸ್ಮಿನ್ । ದೇವಾಃ । ಮನ್ಮನಿ । ಸಂऽಚರಂತಿ । ಅಪೀಚ್ಯೇ । ನ । ವಯಂ । ಅಸ್ಯ । ವಿದ್ಮ ।
ಮಿತ್ರಃ । ನಃ । ಅತ್ರ । ಅದಿತಿಃ । ಅನಾಗಾನ್ । ಸವಿತಾ । ದೇವಃ । ವರುಣಾಯ । ವೋಚತ್ ॥ ೮ ॥

। ಸಾಯಣಭಾಷ್ಯಂ ।

ದೇವಾ ಇಂದ್ರಾದಯೋ ಯಸ್ಮಿನ್ನಗ್ನೌ ಮನ್ಮನಿ ಜ್ಞಾನಭೂತೇ ಜ್ಞಾನವತ್ಸರ್ವಪ್ರಕಾಶಕೇ ಸತಿ ಸಂಚರಂತಿ ಸ್ವಾಧಿಕಾರೇ ಸಂಪ್ರವರ್ತಂತೇ ಅಪೀಚ್ಯೇऽಂತರ್ಹಿತೇ ಸ್ಥಿತಮಗ್ನೇಃ ಸ್ವರೂಪಂ ವಯಂ ನ ವಿದ್ಮ । ತತ್ತ್ವತೋ ನ ಜಾನೀಮಃ । ಅತ್ರಾಸ್ಮಿನ್ಯಜ್ಞೇऽಂಗಭಾವಾಯ ವರ್ತಮಾನೋ ಮಿತ್ರೋ ವರುಣಾಯ ಸರ್ವೇಷಾಂ ಪಾಪಾನಾಂ ನಿವಾರಯಿತ್ರೇऽಗ್ನಯೇ ನೋऽಸ್ಮಾನನಾಗಾನಪಾಪಾನ್ವೋಚತ್ ಬ್ರವೀತು । ತಥಾದಿತಿರ್ದೇವಮಾತಾ ಸವಿತಾ ಸರ್ವಸ್ಯ ಪ್ರೇರಕೋ ದೇವಶ್ಚ ಬ್ರವೀತು ॥

॥ ಪ್ರತಿಪದಾರ್ಥ ॥

**ದೇವಾಃ**—ಇಂದ್ರಾದಿ ದೇವತೆಗಳು । **ಯಸ್ಮಿನ್**—ಅದೇ ಅಗ್ನಿಯು । **ಮನ್ಮನಿ**—ನಮ್ಮ ಗೋಚರಕ್ಕೆ ಪ್ರಕಾಶಿತನಾಗಿರುವಾಗ । **ಸಂಚರಂತಿ**—ಸಂಚರಿಸುತ್ತಾರೆ । **ಅಸ್ಯ**—ಇವನ ಸ್ವರೂಪವನ್ನು । **ಅಪೀಚ್ಯೇ**—ಅಗ್ನಿಯು ಮರೆಯಾದಾಗ । **ವಯಂ**—ನಾವು । **ನ ವಿದ್ಮ**—ತಿಳಿಯಲಾಗುವುದಿಲ್ಲ । **ಅತ್ರ**-ಈ ಯಜ್ಞದಲ್ಲಿ ಭಾಗವನ್ನು ಹೊಂದುವ । **ಮಿತ್ರಃ**—ಮಿತ್ರದೇವನು । **ವರುಣಾಯ**—ಪಾಪನಿವಾರಕನಾದ ಅಗ್ನಿಯ ಮುಂದೆ । **ನಃ**-ನಮ್ಮನ್ನು । **ಅನಾಗಾನ್**—ಪಾಪರಹಿತರೆಂದು । **ವೋಚತ್**—ಪ್ರಕಟಿಸಲಿ । **ಅದಿತಿಃ**—ಅದಿತಿಯೂ । **ದೇವಃ**—ದೇವತಾತ್ಮನಾದ । **ಸವಿತಾ**—ಸವಿತೃವೂ ಪ್ರಕಟಿಸಿ ಹೇಳಲಿ.

॥ ಭಾವಾರ್ಥ ॥

ಈ ಅಗ್ನಿಯು ಸರ್ವರಿಗೆಲ್ಲಾ ಗೋಚರನಾಗಿ ಜ್ಞಾನವಿಷಯನಾದಾಗ ಇಂದ್ರಾದಿದೇವತೆಗಳು ಇಲ್ಲಿ ಸಂಚರಿಸುತ್ತಾರೆ. ಅಗ್ನಿಯು ಮರೆಯಾದಾಗ ನಾವು ಅವನ ಸ್ವರೂಪವನ್ನು ತಿಳಿಯಲಾಗುವುದಿಲ್ಲ. ಈ ಯಜ್ಞದಲ್ಲಿ ಭಾಗವನ್ನು ಕೊಂಡುವ ಮಿತ್ರದೇವನು ಪಾಪನಿವಾರಕನಾದ ಅಗ್ನಿಯ ಮುಂದೆ ನಮ್ಮನ್ನು ಪಾಪರಹಿತರೆಂದು ಪ್ರಕಟಿಸಲಿ. ಅದಿತಿಯೂ, ದೇವತಾತ್ಮನಾದ ಸವಿತೃವೂ ನಮ್ಮನ್ನು ಪಾಪರಹಿತರೆಂದು ಪ್ರಕಟಿಸಲಿ.

English Translation

When he, the all-illumining, is there, the gods assemble; but when he concealed, we know not (his abode); so at this sacrifice let Mitra and Aditi and Savitri proclaim us to Varuna as free from sin.

॥ ಸಂಹಿತಾಪಾಠಃ ॥

ಶ್ರುಧೀ ನೋ ಅಗ್ನೇ ಸದನೇ ಸಧಸ್ಥೇ ಯುಕ್ಷ್ವಾ ರಥಮಮೃತಸ್ಯ ದ್ರವಿತ್ನುಂ ।
ಆ ನೋ ವಹ ರೋದಸೀ ದೇವಪುತ್ರೇ ಮಾಕಿರ್ದೇವಾನಾಮಪ ಭೂರಿಹ ಸ್ಯಾಃ ॥ ೯ ॥

॥ ಪದಪಾಠಃ ॥

ಶ್ರುಧಿ । ನಃ । ಅಗ್ನೇ । ಸದನೇ । ಸಧಽಸ್ಥೇ । ಯುಕ್ಷ್ವ । ರಥಂ । ಅಮೃತಸ್ಯ । ದ್ರವಿತ್ನುಂ ।
ಆ । ನಃ । ವಹ । ರೋದಸೀ ಇತಿ । ದೇವಪುತ್ರೇ ಇತಿ ದೇವಽಪುತ್ರೇ । ಮಾಕಿಃ । ದೇವಾನಾಂ । ಅಪ । ಭೂಃ । ಇಹ । ಸ್ಯಾಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸಧಸ್ಥೇ ಸಹಸ್ಥಾನೇ ಸರ್ವದೇವತಾಸಾಧಾರಣೇ ಸದನೇ ಯಜ್ಞಗೃಹೇ ಸ್ಥಿತಃ ಸನ್ನೋಽಸ್ಮದೀಯಂ ವಚನಂ ಶ್ರುಧಿ । ಶೃಣು । ಕಿಂ ತದ್ವಚನಂ ಉಚ್ಯತೇ । ಅಮೃತಸ್ಯ ದೇವಪಾನಸ್ಯ ಮಧುನೋ ದ್ರವಿತ್ನುಂ ದ್ರಾವಕಂ ರಥಮಾತ್ಮೀಯಂ ಯುಕ್ಷ್ವ । ಆಹ್ವಾನಾರ್ಥಂ ದೇವಾನ್ಪ್ರತಿ ಗಮನಾಯಾಶ್ವೈಃ ಸಂಯುಕ್ಷ್ವ । ಸಂಯುಕ್ತೇನ ರಥೇನ ಗತ್ವಾ ನೋಽಸ್ಮಾಕಂ ಯಜ್ಞಂ ಪ್ರತಿ ದೇವಪುತ್ರೇ ದೇವಸ್ಯ ಪ್ರಜಾಪತೇರ್ದುಹಿತರೌ ಯದ್ವಾ ದೇವಾಃ ಪುತ್ರಾ ಯಯೋಸ್ತೇ ರೋದಸೀ ದ್ಯಾವಾಪೃಥಿವ್ಯಾವಾ ವಹ । ಪ್ರಾಪಯ । ದೇವಾನಾಂ ಮಧ್ಯೇ ಕಶ್ಚಿದ್ದೇವೋಽಪ ಭೂರಪಭವಿತಾಸ್ಮದ್ಯಜ್ಞಾದಪಗಂತಾ ಮಾಕಿಃ ಸ್ಯಾತ್ । ತ್ವಂ ಚೇಹಾಸ್ಮಿನ್ಯಜ್ಞೇ ಸ್ಯಾಃ । ಸಂನಿಹಿತೋ ಭವ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಸಧಸ್ಥೇ**—ದೇವತೆಗಳೆಲ್ಲರೂ ಒಟ್ಟುಗೂಡುವ । **ಸದನೇ**—ಯಜ್ಞಗೃಹದಲ್ಲಿದ್ದು । **ನಃ**—ನಮ್ಮ ಸ್ತುತಿಯನ್ನು । **ಶ್ರುಧಿ**—ಕೇಳು । **ಅಮೃತಸ್ಯ**—ಅಮೃತವನ್ನು । **ದ್ರವಿತ್ನುಂ**—ಸುರಿಸತಕ್ಕ। **ರಥಂ**—ರಥವನ್ನು । **ಯುಕ್ಷ್ವ**—ಯೋಜಿಸು । **ನಃ**—ನಮ್ಮ ಯಜ್ಞಕ್ಕೆ । **ದೇವಪುತ್ರೇ**—ಪ್ರಜಾಪತಿಯ ಪುತ್ರಿಯರಾದ । **ರೋದಸೀ**—ದ್ಯಾವಾಪೃಥಿವಿಗಳನ್ನು । **ಆ ವಹ**—ಕರೆದುಕೊಂಡು ಬಾ । **ದೇವಾನಾಂ**—ದೇವತೆಗಳ ನಡುವೆ । **ಮಾಕಿಃ ಅಪ ಭೂಃ**—ಯಾರೂ ತಪ್ಪಿಸಿಕೊಳ್ಳದಿರಲಿ । **ಇಹ**—ನಮ್ಮ ಯಜ್ಞದಲ್ಲಿ । **ಸ್ಯಾಃ**—ನೀನೂ ಸಮೀಪಸ್ಥನಾಗಿರು. ।

॥ ಭಾವಾರ್ಥ ॥

ಎಲೈ ಅಗ್ನಿಯೇ, ದೇವತೆಗಳೆಲ್ಲರೂ ಒಟ್ಟುಗೂಡುವ ಯಜ್ಞಗೃಹದಲ್ಲಿದ್ದು ನಮ್ಮ ಸ್ತುತಿಯನ್ನು ಕೇಳು. ಅಮೃತವನ್ನು ಸುರಿಸತಕ್ಕ ನಿನ್ನ ರಥವನ್ನು ಯೋಜಿಸು. ನಮ್ಮ ಯಜ್ಞಕ್ಕೆ ಪ್ರಜಾಪತಿಯ ಪುತ್ರಿಯರಾದ ದ್ಯಾವಾಪೃಥಿವಿಗಳನ್ನು ಕರೆದುಕೊಂಡು ಬಾ. ನಮ್ಮ ಯಜ್ಞಕ್ಕೆ ದೇವತೆಗಳ ನಡುವೆ ಯಾರೂ ತಪ್ಪಿಸಿಕೊಳ್ಳದಿರಲಿ. ನೀನೂ ನಮ್ಮ ಸಮೀಪಸ್ಥನಾಗಿರು.

English Translation

Agni, present in the dwelling common (to the deities) hear us: harness your swift chariot of ambrosia: bring to us the heaven and earth, the daughters of the divine (Prajapati), let none of the gods be absent, and you youself be present.

# ಹದಿಮೂರನೆಯ ಸೂಕ್ತವು

## ಪೀಠಿಕೆ.

## ಹವಿರ್ಧಾನಶಕಟಗಳು

ಗಂಧರ್ವರಾಜನಾದ ಸೋಮನನ್ನು ಯಜ್ಞಭೂಮಿಗೆ ತರಲು ಸಾಧನವಾದ ಗಾಡಿಗಳಿಗೆ ಹವಿರ್ಧಾನಶಕಟಗಳೆಂದು ಹೆಸರು. ಯಾವ ರೀತಿ ಸೋಮನು ದೇವಮಾನವಾದಿಗಳಿಗೆಲ್ಲ ಪ್ರಭುವಾಗಿರುವನೋ, ಅದೇ ರೀತಿ ಅವನನ್ನು ಕರೆದೊಯ್ಯುವ ಈ ಶಕಟಗಳೂ ಸಹ ದೇವಮಾನವಾದಿಗಳಿಗೆಲ್ಲ ಪ್ರಭುರೂಪದಲ್ಲಿರುತ್ತವೆ.

**ಸಪ್ತ ಕ್ಷರಂತಿ ಶಿಶವೇ ಮರುತ್ವತೇ ಪಿತ್ರೇ ಪುತ್ರಾಸೋ ಅಪ್ಯವೀವತನ್ನೃತಂ ।**
**ಉಭೇ ಇದಸ್ಯೋಭಯಸ್ಯ ರಾಜತ ಉಭೇ ಯತೇತೇ ಉಭಯಸ್ಯ ಪುಷ್ಯತಃ ॥**

(ಋ. ಸಂ. ೧೦-೧೩-೫)

ಎಂಬಲ್ಲಿ ಸೋಮನನ್ನು ಹವಿರ್ಧಾನಶಕಟಗಳಿಗೆ ಪುತ್ರರೂಪನೆಂದು ಪ್ರಶಂಸಿಸಿ ಇಂತಹ ಪುತ್ರನನ್ನು ಹೊಂದಿರುವ ಹವಿರ್ಧಾನ ಶಕಟಗಳು ಸಕಲ ದೇವಮಾನಾದಿಗಳಿಗೂ ಪ್ರಭುಗಳೆಂದೂ, ದೇವಮಾನವಾದಿಗಳಿಗೆಲ್ಲ ಪೋಷಕಗಳೆಂದೂ ಸಹ ಸ್ತುತಿಸಿದೆ. ಜಗತ್ಪೋಷಕವೂ ಜಗದ್ಧಾರಕವೂ ಆದ ಯಜ್ಞಕ್ಕೆ ಸೋಮನು ಯಾವ ರೀತಿ ಅತ್ಯವಶ್ಯಕವಾದ ಸಾಧಕನೋ ಅದರಂತೆಯೇ ಆ ಸೋಮನನ್ನು ತರತಕ್ಕ ಶಕಟಗಳೂ ಸಾಧಕವಾಗಿರುತ್ತವೆ. ಸೋಮನು ಯಾವ ರೀತಿ ದಿವ್ಯಾಂಶ ಸಂಭೂತನೋ, ಅದೇ ರೀತಿ ಈ ಹವಿರ್ಧಾನ ಶಕಟಗಳೂ ಸಹ ದಿವ್ಯಾಂಶಸಂಭೂತವಾಗಿರುತ್ತವೆ. ಇವುಗಳ ಉತ್ಪತ್ತಿ ಕ್ರಮವನ್ನು ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿರುತ್ತೆ.

**ದೇವಾಸುರಾ ವಾ ಏಷು ಲೋಕೇಷು ಸಮಯತಂತ ತೇ ವಾ ಅಸುರಾ ಇಮಾನೇವ ಲೋಕಾನ್ ಪುರೋಽಕುರ್ವತ ಯಥೌಜೀಯಾಂಸೋ ಬಲೀಯಾಂಸ ಏವಂ ತೇ ವಾ ಅಯಸ್ಮಯೀಮೇವೇಮಾಮಕುರ್ವತೆ ರಜತಾಮಂತರಿಕ್ಷಂ ಹರಿಣೀಂ ದಿವಂ ತೇ ತಥೇಮಾನ್ ಲೋಕಾನ್ ಪುರೋಽಕುರ್ವತ ತೇ ದೇವಾ ಅಬ್ರುವನ್ ಪುರೋ ವಾ ಇಮೇಽಸುರಾ ಇಮಾನ್ ಲೋಕಾನಕ್ರತ ಪುರ ಇಮಾನ್ ಲೋಕಾನ್ ಪ್ರತಿಕರವಾಮಹಾ ಇತಿ ತಥೇತಿ ತೇ ಸದ ಏವಾಸ್ಯಾಃ ಪ್ರತ್ಯಕುರ್ವತಾಗ್ನೀಧ್ರಮಂತರಿಕ್ಷಾದ್ಧವಿರ್ಧಾನೇ ದಿವಃ .... .... .... ||**

(ಐ. ಬ್ರಾ. ೧-೨೩)

ದೇವತೆಗಳೂ ಮತ್ತು ಅಸುರರೂ ಸಹ ಈ ಲೋಕಗಳನ್ನಾಕ್ರಮಿಸಲು ಸ್ಪರ್ಧಿಸಿದರು. ಆಗ ಅಸುರರು ಲೋಕಗಳನ್ನೆಲ್ಲ ದುರ್ಗಗಳನ್ನಾಗಿ ಮಾಡಿಕೊಂಡರು. ಪೃಥ್ವಿಯನ್ನು ಉಕ್ಕಿನ ಕೋಟೆಯನ್ನಾಗಿಯೂ, ಅಂತರಿಕ್ಷವನ್ನು ರಜತಮಯವನ್ನಾಗಿಯೂ ದ್ಯುಲೋಕವನ್ನು ಸುವರ್ಣಮಯವಾದ ಕೋಟೆಯನ್ನಾಗಿಯೂ ಮಾಡಿಕೊಂಡರು. ಆಗ ದೇವತೆಗಳೆಲ್ಲರೂ ಸೇರಿ "ಅಸುರರು ಈ ಲೋಕಗಳನ್ನು ಕೋಟೆಗಳನ್ನಾಗಿ ಮಾಡಿಕೊಂಡಿರುವರು. ನಾವೂ ಸಹ ತತ್ಪ್ರತಿಯಾಗಿ ಅದಕ್ಕಿಂತಲೂ ಅಧಿಕವಾದ ಶಕ್ತಿಯುಳ್ಳ ಕೋಟೆಗಳನ್ನು ಮಾಡಿಕೊಳ್ಳೋಣ" ಎಂದು ನಿರ್ಧರಿಸಿದರು. ಅದರಂತೆ ಪ್ರಯತ್ನಿಸಿ ಈ ಪೃಥ್ವಿಯಿಂದ ಸದಸ್ಸನ್ನೂ, ಅಂತರಿಕ್ಷದಿಂದ ಆಗ್ನೀಧ್ರವನ್ನೂ ದ್ಯುಲೋಕದಿಂದ ಹವಿರ್ಧಾನವನ್ನೂ ನಿರ್ಮಿಸಿಕೊಂಡರು ಎಂದಿರುತ್ತದೆ. ಹವಿರ್ಧಾನಗಳು ಕೇವಲ ಜಗತ್ಪೋಷಕವೇ ಅಲ್ಲದೆ, ದೇವತೆಗಳಿಗೆ ರಕ್ಷಕವೂ ಆಗಿರುವುವು ಎಂದು ಇದರಿಂದ ತಿಳಿಯುತ್ತದೆ. ಅಲ್ಲದೇ ಹವಿರ್ಧಾನದ ಮಹಿಮೆಯನ್ನು ಶತಪಥ ಬ್ರಾಹ್ಮಣದಲ್ಲಿ ಅತಿಶಯವಾಗಿ ಸ್ತುತಿಸಿದೆ. ಹವಿರ್ಧಾನವೆಂದರೇನು ? ಹವಿರ್ಧಾನವೆಂಬ ಹೆಸರು ಏತಕ್ಕೆ ಬಂದಿತು? ಇದರ ಮಹತ್ತ್ವವೇನು ? ಎಂಬ ಈ ವಿಷಯಗಳನ್ನೂ ಕೆಳಗೆ ಉದಾಹರಿಸಿರುವ ವಾಕ್ಯಗಳಲ್ಲಿ ಈ ರೀತಿ ವರ್ಣಿಸಿರುತ್ತೆ.

**ಪುರುಷೋ ವೈ ಯಜ್ಞಃ । ಪುರುಷಸ್ತೇನ ಯಜ್ಞೋ ಯದೇನಂ ಪುರುಷಸ್ತನುತ ಏಷ ವೈ ತಾಯಮಾನೋ ಯಾವಾನೇವ ಪುರುಷಸ್ತಾವಾನ್ವಿಧೀಯತೇ ತಸ್ಮಾತ್ಪುರುಷೋ ಯಜ್ಞಃ ||**

(ಶ. ಬ್ರಾ. ೩-೫-೩-೧)

ಯಜ್ಞವೇ ಪುರುಷರೂಪಿಯು, ಪುರುಷನು ಯಜ್ಞವನ್ನು ವಿಸ್ತರಿಸಿ ಹರಡುವುದರಿಂದಲೇ ಯಜ್ಞಕ್ಕೂ ಪುರುಷನಿಗೂ ತಾದಾತ್ಮ್ಯವಿರುತ್ತದೆ. ಇಂತಹ ವಿಸ್ತರಣದಿಂದ ಯಜ್ಞವೂ ಪುರುಷನಷ್ಟೇ ಪ್ರಮಾಣವನ್ನು ಹೊಂದುತ್ತದೆ. ಈ ಪ್ರಮಾಣಸಾದೃಶ್ಯದಿಂದಲೂ,ನಿರ್ಮಾತೃನಿರ್ಮಾಪಕಸಂಬಂಧದಿಂದಲೂ ಸಹ ಯಜ್ಞವು ಪುರುಷಸಂಜ್ಞಕವಾಗಿರುತ್ತದೆ.

**ಶಿರ ಏವಾಸ್ಯ ಹವಿರ್ಧಾನಂ । ವೈಷ್ಣವಂ ದೇವತಯಾಥ ಯದಸ್ಮಿನ್ತ್ಸೋಮೋ ಭವತಿ ಹವಿರ್ವೈ ದೇವಾನಾಗ್ಂ ಸೋಮಸ್ತಸ್ಮಾದ್ಧವಿರ್ಧಾನಂ ನಾಮ ॥**
(ಶ. ಬ್ರಾ. ೩-೫-೩-೨)

ಈ ಯಜ್ಞಕ್ಕೆ ಹವಿರ್ಧಾನವೇ ಶಿರಸ್ಸು, ವಿಷ್ಣುವೇ ಈ ಹವಿರ್ಧಾನದ ದೇವತೆ. ಇದರಲ್ಲಿ ಸೋಮವು ತುಂಬಿರುತ್ತದೆ. ಸೋಮವು ದೇವತೆಗಳನ್ನುದ್ದೇಶಿಸಿ ಅರ್ಪಿಸುವ ಹವಿಸ್ಸು. ಈ ಸೋಮದೊಡನೆ ತುಂಬಿರುವುದರಿಂದ ಈ ಶಕಟಕ್ಕೆ ಹವಿರ್ಧಾನವೆಂದು ಹೆಸರು.

**ಉಭಯತೋದ್ವಾರಗ್ಂ ಹವಿರ್ಧಾನಂ ಭವತಿ । ಉಭಯತೋದ್ವಾರಗ್ಂ ಸದಸ್ತಸ್ಮಾದಯಂ ಪುರುಷ ಅಂತಗ್ಂ ಸಂತೃಣಃ ಪ್ರಣಿಕ್ತೇ ಹವಿರ್ಧಾನೇ ಉಪತಿಷ್ಠತೇ** (ಶ. ಬ್ರಾ. ೩-೫-೩-೭)

ಈ ಹವಿರ್ಧಾನಕ್ಕೆ ಎರಡು ಕಡೆಗಳಲ್ಲಿಯೂ ದ್ವಾರಗಳಿರುತ್ತವೆ. ಅದರಂತೆಯೇ ಸದಸ್ಸಿಗೂ ಎರಡು ಕಡೆಯೂ ದ್ವಾರಗಳಿರುತ್ತವೆ. ಆದುದರಿಂದ ಪುರುಷನಿಗೂ ಇದೇ ಸ್ಥಿತಿಯಿದೆ. ಪರಿಶುದ್ಧಿಯನ್ನು ಹೊಂದಿದನಂತರ ಅದರೊಳಕ್ಕೆ ಪ್ರವೇಶಿಸುತ್ತಾನೆ.

ಈ ಹವಿರ್ಧಾನವು ದಕ್ಷಿಣದಿಕ್ಕಿಗೊಂದು ಮತ್ತು ಉತ್ತರದಿಕ್ಕಿಗೊಂದೂ ಇರುತ್ತದೆ. ದಕ್ಷಿಣ ದಿಗ್ಭಾಗದ ಹವಿರ್ಧಾನವು ಎರಡರಲ್ಲಿ ದೊಡ್ಡದು. ಅದು ಅಧ್ವರ್ಯುವಿನ ನೇತೃತ್ವದಲ್ಲಿರುತ್ತದೆ. ಉತ್ತರದಿಗ್ಭಾಗದ್ದು ಅಧ್ವರ್ಯುವಿನ ಸಹಾಯಕನಾದ ಪ್ರತಿಪ್ರಸ್ಥಾತೃವಿನ ನೇತೃತ್ವದಲ್ಲಿರುತ್ತದೆ. ಇವರಿಬ್ಬರೂ ಸಹ ತಮ್ಮ ತಮ್ಮ ಹವಿರ್ಧಾನವನ್ನು ಪಶ್ಚಿಮದ ಕಡೆಗೆ ಒಯ್ಯುವರು. ನಂತರ ಪ್ರದಕ್ಷಿಣಪುರಃಸರವಾಗಿ ಇಬ್ಬರೂ ಯಜ್ಞವೇದಿಯ**ಅಂತಃಪಾತ**ದ ಸಮೀಪಕ್ಕೆ ಕರೆದೊಯ್ಯುತ್ತಾರೆ.

**ತೇ ಸಮವರ್ತಯಂತಿ । ದಕ್ಷಿಣೇನೈವ ದಕ್ಷಿಣಮುತ್ತರೇಣೋತ್ತರಂ ಯದ್ವರ್ಷೀಯಸ್ತದ್ದಕ್ಷಿಣಂ ಸ್ಯಾತ್ ॥**

(ಶ. ಬ್ರಾ ೩-೫-೩-೮)

ನಂತರ ಪ್ರದಕ್ಷಿಣಪುರಃಸರವಾಗಿ ದಕ್ಷಿಣ ಮತ್ತು ಉತ್ತರದಿಕ್ಕುಗಳಲ್ಲಿ ಆ ಎರಡು ಹವಿರ್ಧಾನಗಳನ್ನೂ ಒಯ್ಯುವರು. ದಕ್ಷಿಣ ದಿಕ್ಕಿನ ಹವಿರ್ಧಾನವೇ ಎರಡರಲ್ಲಿ ದೊಡ್ಡದು.

**ತಯೋಃ ಸಮವವೃಕ್ತಯೋಃ। ಛದಿರಧಿನಿದಧತಿ। ಯದಿ ಛದಿರ್ನ ವಿಂದೇಯುಶ್ಛದಿಃ ಸಂಮಿತಾಂ ಭಿತ್ತಿಂ ಪ್ರತ್ಯಾನಹ್ಯಂತಿ ರರಾಟ್ಯಾಂ ಪರಿಶ್ರಯಂತ್ಯುಚ್ಛ್ರಯಿಾಭ್ಯಾಂ ಛದಿಃ ಪಶ್ಚಾದಧಿನಿದಧತಿ ಛದಿಃ ಸಮ್ಮಿತಾಂ ವಾ ಭಿತ್ತಿಂ** (ಶ. ಬ್ರಾ. ೩-೫-೩-೯)

ಪ್ರದಕ್ಷಿಣಾನಂತರ ಅವುಗಳನ್ನು ಯಜ್ಞವೇದಿಯಲ್ಲಿರಿಸಿ ಅವುಗಳ ಮೇಲೆ **ಛದಿ** ಸಂಜ್ಞಕವಾದ (ಅಥವಾ ದರ್ಭೆ ಹುಲ್ಲಿನಿಂದ ಮಾಡಿದ ಚಾಪೆ) ಹುಲ್ಲನ್ನು ಹೊದ್ದಿಸುವರು. ಅಥವಾ ಜೊಂಡು ಹುಲ್ಲಿನ ಚಾಪೆಯು ಸಿಕ್ಕದಿದ್ದರೆ, ತತ್ಸಮಾನವಾದ ಜೊಂಡಿನ ಚಾಪೆಯನ್ನು ಹಾಸಬಹುದು. ಮತ್ತು ನೇರವಾದ ಎರಡು ತಡಿಕೆಗಳ ಮಧ್ಯೆ ಸ್ಥಾಪಿಸುತ್ತಾರೆ. ಮತ್ತು ಮೊದಲನೆಯ ಚಾಪೆಯ ಹಿಂದೆ ಎರಡನೆಯ ಚಾಪೆಯನ್ನಿಟ್ಟು ಮುಚ್ಚುವರು.

**ವಿಪ್ರಾ ವಿಪ್ರಸ್ಯ ಬೃಹತೋ ವಿಪಶ್ಚಿತಃ । .... .... ಮಹೀ ದೇವಸ್ಯ ಸವಿತುಃ ಪರಿಷ್ಟುತಿಃ ಸ್ವಾಹೇತಿ ತತ್ಸಾವಿತ್ರಂ ಪ್ರಸವಾಯ ಜುಹೋತಿ** (ಶ. ಬ್ರಾ. ೩-೫-೩-೧೨)

ಅನಂತರ ವಿಪ್ರರಲ್ಲಿ ಅತ್ಯಂತ ಮೇಧಾವಿಗಳೂ, ಶ್ರೇಷ್ಠವಾದ ಶ್ರದ್ಧೆ ಮತ್ತು ಜ್ಞಾನಗಳ ಪ್ರೇರಕರೂ ಆದ ಬ್ರಹ್ಮಜ್ಞಾನಿಗಳ್ಳೆಯುತ್ವಿಕ್ಕುಗಳು .... .... "ದೇವತಾತ್ಮನಾದ ಸವಿತೃವಿನ ಸ್ತುತಿಯು ಮಹತ್ತ್ವವುಳ್ಳದ್ದು" ಎಂಬ ಪ್ರಶಂಸಾವಾಕ್ಯಗಳೊಡನೆ ಸರ್ವಪ್ರೇರಕನಾದ ಸವಿತೃವಿಗೆ ಆಜ್ಯಾಹುತಿಯನ್ನು (ಅಧ್ವರ್ಯುವು) ಅರ್ಪಿಸುವರು.

**ಅಥಾಪರಂ ಚತುರ್ಗೃಹೀತಮಾಜ್ಯಂ ಗೃಹೀತ್ವಾ । ಉಪನಿಷ್ಕ್ರಾಮತಿ ದಕ್ಷಿಣಯಾ ದ್ವಾರಾ ಪತ್ನೀಂ ನಿಷ್ಕ್ರಾಮಯಂತಿ ಸ ದಕ್ಷಿಣಸ್ಯ ಹವಿರ್ಧಾನಸ್ಯ ದಕ್ಷಿಣಾಯಾಂ ವರ್ತನ್ಯಾಗ್ಂ ಹಿರಣ್ಯಂ ನಿಧಾಯ ಜುಹೋತೀದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ । ಸಮೂಢ-ಮಸ್ಯ ಪಾಗ್ಂ ಸುರೇ ಸ್ವಾಹೇತಿ ಸಗ್ ಸ್ರವಂ ಪತ್ನ್ಯೈ ಪಾಣಾವಾನಯತಿ ಸಾಕ್ಷಸ್ಯ ಸಂತಾ-ಪಮುಪಾನಕ್ತಿ ದೇವಶ್ರುತಾ ದೇವೇಷ್ವಾಘೋಷತಮಿತಿ ಪ್ರಯಚ್ಛತಿ ಪ್ರತಿಪ್ರಸ್ಥಾತ್ರೇಸ್ರುಚಂ ಚಾಜ್ಯವಿಲಾಪನೀಂ ಚ ಪರ್ಯಾಣಯಂತಿ ಪತ್ನೀಮುಭೌ ಜಘನೇನಾಗ್ನೀ** (ಶ. ಬ್ರಾ. ೩-೫-೩-೧೩)

ಯಜಮಾನನು ಚತುರ್ಗೃಹೀತವಾದ ಆಜ್ಯವನ್ನು ಹಿಡಿದು ಎರಡನೆಯ ಸಲ ಮುಂಭಾಗದ ಬಾಗಿಲಿನಿಂದ ಹೊರಕ್ಕೆ ಬರುತ್ತಾನೆ. ಅವನ ಪತ್ನಿಯು ದಕ್ಷಿಣಭಾಗದ ದ್ವಾರದಿಂದ ಹೊರಕ್ಕೆ ಒಯ್ಯಲ್ಪಡುತ್ತಾಳೆ. ಆಗ ಯಜಮಾನನು ದಕ್ಷಿಣದಿಕ್ಕಿನ ಹವಿರ್ಧಾನದ ಬಲಗಡೆಯ ಚಕ್ರಮಾರ್ಗದಲ್ಲಿ ಒಂದು ಸುವರ್ಣನಾಣ್ಯವನ್ನಿಟ್ಟು ಅನಂತರ **ಇದಂ ವಿಷ್ಣುರ್ವಿಚಕ್ರಮೇ** ...... ...... ...... **ಸಮೂಢಂ** ...... ...... .... ವಿಷ್ಣುವು ಈ ಮೂರು ಲೋಕಗಳನ್ನು ಸಂಚರಿಸಿ ಆಕ್ರಮಿಸಿದನು. ಮೂರು ಸಲದ ಅವನ ಪಾದಪ್ರಕ್ಷೇಪಣದಿಂದ ಉಂಟಾದ ಧೂಳಿನಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಯಿತು" ಎಂಬ ವಿಷ್ಣುವಿನ ಪ್ರಶಂಸೆಯನ್ನು ಪಠಿಸಿ (ಋ. ಸಂ. ೧. ೨೨. ೧೭) ಆಜ್ಯವನ್ನರ್ಪಿಸುತ್ತಾನೆ. ಅದರಲ್ಲಿ ಉಳಿದ ಆಜ್ಯಭಾಗವನ್ನು ಪತ್ನಿಯ ಕೈಯಲ್ಲಿ ಸುರಿಯುತ್ತಾನೆ. ಆಗ ಅವಳು "ದೇವತೆಗಳಿಗೆ ಈ ಆಗಮನವನ್ನು ತಿಳಿಸಬೇಕು" ಎಂದು ಪ್ರಾರ್ಥಿಸುತ್ತ ಆ ರಥ (ಹವಿರ್ಧಾನ) ಚಕ್ರದ ಅಕ್ಷಕ್ಕೆ ಸಿಕ್ಕಿಸುವ ಅಣಿಯನ್ನು ಆ ಆಜ್ಯಭಾಗದಿಂದ ಲೇಪಿಸುತ್ತಾಳೆ. ಅನಂತರ ಯಜಮಾನನು ಆಜ್ಯಪಾತ್ರೆಯನ್ನೂ ಆ ಅಣಿಯನ್ನೂ (ಸಂತಾಪ) ತನ್ನ ಸಹಾಯಕನಲ್ಲಿ ರಿಸುತ್ತಾನೆ. ಆಗ ತತ್ಪತ್ನಿಯು ಹಿಂಭಾಗದ ದ್ವಾರದಿಂದ ಒಳಕ್ಕೆ ಹೋಗುತ್ತಾಳೆ.

**ಚತುರ್ಗೃಹೀತಮಾಜ್ಯಂ ಗೃಹೀತ್ವಾ । ಪ್ರತಿಪ್ರಸ್ಥಾತೋತ್ತರಸ್ಯ ಹವಿರ್ಧಾನಸ್ಯ ದಕ್ಷಿಣಾಯಾಂ ವರ್ತನ್ಯಾಂ ಹಿರಣ್ಯಂ ನಿಧಾಯ ಜುಹೋತೀರಾವತೀ ಧೇನುಮತೀ ಹಿ ಭೂತಗ್ಂ ಸೂಯ ವಸಿನೀ ಮನವೇ ದಶಸ್ಯಾ । ವ್ಯಸ್ಕಭ್ನಾತ್ ರೋದಸೀ ವಿಷ್ಣವೇತೇ ದಾಧರ್ಥ ಪೃಥಿವೀ-ಮಭಿತೋ ಮಯೂಖೈಃ ಸ್ವಾಹೇತಿ ಸಗ್ಂ ಸ್ರವಂ ಪತ್ನ್ಯೈ ಪಾಣಾವಾನಯತಿ ಸಾಕ್ಷಸ್ಯ ಸಂ-ತಾಪಮುಪಾನಕ್ತಿ ದೇವಶ್ರುತಾ ದೇವೇಷ್ವಾಘೋಷತಮಿತಿ ತದ್ಯದೇವಂ ಜುಹೋತಿ**

ಆಗ ಚತುರ್ಗೃಹೀತವಾದ ಆಜ್ಯವನ್ನು ಹಿಡಿದು, ಸಹಾಯಕನು ಉತ್ತರದಿಗ್ಭಾಗದ ರಥ (ಹವಿರ್ಧಾನ)ದ ಚಕ್ರಮಾರ್ಗದಲ್ಲಿ ಸುವರ್ಣನಾಣ್ಯವನ್ನಿಟ್ಟು "ಎಲೈ ವಿಷ್ಣುವೇ, ನೀನು ಗೋಸಂಪತ್ತಿನೊಡನೆಯೂ, ಅನ್ನಸಂಪತ್ತಿನೊಡನೆಯೂ ಕೂಡಿದವನಾಗಿ ಮಾನವನಿಗೆ (ಯಜಮಾನನಿಗೆ) ಉಪಕಾರಕನಾಗಿರು. ನೀನು ಈ ಎರಡು ಲೋಕಗಳನ್ನೂ ಬೇರೆ ಮಾಡಿ ಸ್ಥಾಪಿಸಿದೆ. ನಿನ್ನ ತೇಜಸ್ಸಿನಿಂದ ಈ ಪೃಥ್ವಿಯನ್ನು ಸರ್ವತ್ರ ಧರಿಸಿದ್ದೀಯೆ" ಎಂದು ವಿಷ್ಣುವಿನ ಪ್ರಶಂಸೆ

ಯನ್ನು ಪಠಿಸಿ (ಋ. ಸಂ. ೭. ೯೯. ೩) ಸ್ವಾಹಾಕಾರಪೂರ್ವಕವಾಗಿ ಆಜ್ಯವನ್ನು ಅರ್ಪಿಸುತ್ತಾನೆ. ನಂತರ ಉಳಿದ ಭಾಗವನ್ನು ಪತ್ನಿಯ ಕೈಗೆ ಸುರಿಯುತ್ತಾನೆ. ಅವಳು ಹಿಂದಿನಂತೆಯೇ, "ದೇವತೆಗಳಿಗೆ ಈ ಆಗಮನವನ್ನು ತಿಳಿಸಬೇಕು" ಎಂದು ಪ್ರಾರ್ಥಿಸಿ ಆ ರಥಚಕ್ರದ ಅಕ್ಷಕ್ಕೆ ಸಿಕ್ಕಿಸುವ ಆಣಿಗೆ ಆಜ್ಯಲೇಪನವನ್ನು ಮಾಡುತ್ತಾಳೆ. ಈ ರೀತಿ ಆಜ್ಯಾಹುತಿಯನ್ನರ್ಪಿಸಿ, ಅಕ್ಷದ ಆಣಿಗೆ ಆಜ್ಯಲೇಪನವನ್ನು ಮಾಡುವ ಕಾರಣವೇನೆಂದರೆ ; —

**ದೇವಾ ಹ ವೈ ಯಜ್ಞಂ ತನ್ವಾನಾಃ । ತೇಽಸುರ ರಕ್ಷಸೇಭ್ಯ ಆಸಂಗಾದ್ಬಿಭಯಾಂ ಚಕ್ರು-ರ್ವಜ್ರೋ ವಾ ಆಜ್ಯಂ ತ ಏತೇನ ವಜ್ರೇಣಾಜ್ಯೇನ ದಕ್ಷಿಣತೋ ನಾಷ್ಟ್ರಾ ರಕ್ಷಾಗ್ಂಸ್ಯವಾ-ಘ್ನಂಸ್ತಥೈಷಾಂ ನಿಯಾನಂ ನಾನ್ವವಾಯಂಸ್ತಥೋ ಏವೈಷ ಏತೇನ ವಜ್ರೇಣಾಜ್ಯೇನ ದಕ್ಷಿಣ-ತೋ ನಾಷ್ಟ್ರಾ ರಕ್ಷಾಗ್ಂಸ್ಯವಹಂತಿ ತಥಾಸ್ಯ ನಿಯಾನಂ ನಾನ್ವವಯಂತಿ ತದ್ಯದ್ವೈಷ್ಣವೀ-ಭ್ಯಾಮೃಗ್ಭ್ಯಾಂ ಜುಹೋತಿ ವೈಷ್ಣವಗ್ಂ ಹಿ ಹವಿರ್ಧಾನಂ** (ಶ. ಬ್ರಾ. ೩-೫-೩-೧೪)

ಒಂದು ಸಲ ದೇವತೆಗಳು ಯಜ್ಞಕರ್ಮವನ್ನಾಚರಿಸುತ್ತಿದ್ದಾಗ, ಅಸುರರಾಕ್ಷಸರ ಆಕ್ರಮಣವುಂಟಾಗಬಹುದೆಂದು ಹೆದರಿದರು. ವಜ್ರಾಯುಧಕ್ಕೆ ಸಮಾನವಾದ ಆಜ್ಯದ ಸಹಾಯದಿಂದ ಅವರು ದಕ್ಷಿಣದಿಕ್ಕಿನಿಂದ ಸಂಭವಿಸಬಹುದಾದ ಆಪತ್ತನ್ನು ನಿವಾರಿಸಿಕೊಂಡರು. ಹಾಗೆಯೇ ಈಗಲೂ ಸಹ ಹವಿರ್ಧಾನಕ್ಕೆ ಆಜ್ಯವನ್ನೂ ಅರ್ಪಿಸಿ ಅದರಿಂದ ಲೇಪಿಸುವುದರಿಂದ ಆ ದಿಕ್ಕಿನ ಆಪತ್ತು ತಪ್ಪುತ್ತದೆ. ಮತ್ತು ಹವಿರ್ಧಾನವು ವಿಷ್ಣುದೇವತೆಗೆ ಸಂಬಂಧಿಸಿದುದರಿಂದ ವಿಷ್ಣುವನ್ನು ಋಙ್ಮಂತ್ರಗಳಿಂದ ಪ್ರಶಂಸಿಸಿ ಪೂಜಿಸಬೇಕಾಗಿದೆ. ಯಜಮಾನನ ಪತ್ನಿಯೂ ಸಹ ಇದರಲ್ಲಿ ಭಾಗವಹಿಸುವುದರ ಆವಶ್ಯಕತೆಯೇನೆಂದರೆ ;—

**ಅಥ ಯತ್ಪತ್ನ್ಯಕ್ಷಸ್ಯ ಸಂತಾಪಮುಪಾನಕ್ತಿ । ಪ್ರಜನನಮೇವೈತತ್ಕ್ರಿಯತೇ ಯದಾ ವೈ ಸ್ತ್ರೀಯೈ ಚ ಪುಸಂಶ್ಚ ಸಂತಪ್ಯತೇಽಥ ರೇತಃ ಸಿಚ್ಯತೇ ತತ್ತತಃ ಪ್ರಜಾಯತೇ ಪರಾಗು-ಪಾನಕ್ತಿ ಪರಾಗ್ಘ್ಯೇವ ರೇತಃ ಸಿಚ್ಯತೇಽಥಾಹ ಹವಿರ್ಧಾನಾಭ್ಯಾಂ ಪ್ರವರ್ತ್ಯಮಾನಾಭ್ಯಾಮ-ನುಬ್ರೂಹೀತಿ** (ಶ. ಬ್ರಾ. ೩-೫-೩-೧೬)

ಪತ್ನಿಯು ಸಂತಾಪಸಂಜ್ಞಕವಾದ ಆಣಿಗೆ ಆಜ್ಯಲೇಪನವನ್ನು ಮಾಡುವುದರಲ್ಲಿ ಗೂಢಾರ್ಥವಿರುತ್ತದೆ. ಪತಿಪತ್ನಿಯರು ಸೇರಿ ಶ್ರಮವನ್ನು ವಹಿಸಿದಾಗ ರೇತಸ್ಸೇಚನವುಂಟಾಗಿ ಪ್ರಜೋತ್ಪತ್ತಿಯಾಗುತ್ತದೆ. ಅದರಂತೆಯೇ, ಈಗಲೂ ಇವರ ಸಾಹಚರ್ಯವೂ, ಯಜಮಾನನ ಜೊತೆಯಲ್ಲಿದ್ದು ಪತ್ನಿಯು ಆಣಿಗೆ ಆಜ್ಯಲೇಪನಮಾಡುವುದೂ ಉತ್ಪತ್ತಿಯ ಮೂಲವಾಗಿರುತ್ತದೆ. ಅವಳು ಲೇಪನಮಾಡಿದೊಡನೆಯೇ, ಅವನು ಹೋತೃವನ್ನು ಕುರಿತು "ಹವಿರ್ಧಾನಗಳು ಚಲಿಸುವಾಗ ಅವುಗಳನ್ನು ಪ್ರಶಂಸಿಸುವ ವಾಕ್ಯಗಳನ್ನು ಪಠಿಸು" ಎಂದು ಸೂಚಿಸುತ್ತಾನೆ.

**ಅಥ ವಾಚಯತಿ । ಪ್ರಾಚೀ ಪ್ರೇತಮಧ್ವರಂ ಕಲ್ಪಯಂತೀ ಇತ್ಯಧ್ವರೋ ವೈ ಯಜ್ಞಃ ಪ್ರಾಚೀ ಪ್ರೇತಂ ಯಜ್ಞಂ ಕಲ್ಪಯಂತೀ ಇತ್ಯೇವೈತದಾಹೋರ್ಧ್ವಂ ಯಜ್ಞಂ ನಯತಂ ಮಾ ಜೀಹ್ವರತಮಿತ್ಯೂರ್ಧ್ವಮಿಮಂ ಯಜ್ಞಂ ದೇವಲೋಕಂ ನಯತಮಿತ್ಯೇವೈತದಾಹ ಮಾ ಜೀಹ್ವರತಮಿತಿ ತದೇತಸ್ಮಾ ಅಹ್ವಲಾಮಾಶಾಸ್ತೇ ಸಮುದ್ಗ್ರಹ್ಯೇವ ಪ್ರವರ್ತಯೇಯುರ್ಯಥಾ ನೋತ್ಸರ್ಜೇತಾಮಸುರ್ಯಾ ವಾ ಏಷಾ ವಾಗ್ಯಾಕ್ಷೇ ನೇದಿಹಾಸುರ್ಯಾ ವಾಗ್ವದಾದಿತಿ ಯದ್ಯುತ್ಸರ್ಜೇತಾಂ** (ಶ. ಬ್ರಾ. ೩-೫-೩-೧೭)

ಎಲೈ ಹವಿರ್ಧಾನಗಳೇ, ನೀವು ಮುಂದುವರಿಯಿರಿ. ಯಜ್ಞಕಲ್ಪವನ್ನು ಮುಂದುವರಿಯುವಂತೆ ಮಾಡಿರಿ" ಪಠಿಸುವಂತೆ ನಿರ್ದೇಶವನ್ನು ಕೊಡುತ್ತಾನೆ. ಈ ಪ್ರಾರ್ಥನೆಯಲ್ಲಿ ಯಜ್ಞವು ನ್ಯೂನತೆಯನ್ನು ಹೊಂದದೆ ದೇವತೆಗಳಲ್ಲಿಗೆ ಒಪ್ಪಿಸಲ್ಪಡಬೇಕು ಎಂಬುವೇ ಉದ್ದಿಶ್ಯ. "ಈ ಯಜ್ಞವು ಕುಂಠಿತವಾಗುವಂತೆ ಮಾಡಬೇಡಿರಿ" ಎಂಬ ಪ್ರಾರ್ಥನೆಯಿಂದ ಯಜ್ಞಕರ್ತನು ಕರ್ತವ್ಯಪರಾಙ್ಮುಖನಾಗದೆ ಪೂರ್ಣಕರ್ಮನಾಗಿರುವಂತೆ ಮಾಡಬೇಕೆಂದರ್ಥ. ಅಕ್ಷದಲ್ಲಿ ಉಂಟಾಗುವ ಶಬ್ದವು ಆಸುರ ಶಬ್ದವಾಗಿರುವುದರಿಂದ ರಥಚಕ್ರವು ರಥವನ್ನು ಕುಗ್ಗಿಸದೇ ಮುಂದುವರಿಸಲಿ. ಅಕ್ಷದ ಪ್ರದೇಶದಲ್ಲಿ ಉಂಟಾಗುವ ಕಿರುಗುಟ್ಟುವ ಶಬ್ದವು ಅಶುಭಸೂಚಕವಾಗುತ್ತದೆ. ಆದರೆ, ಒಂದು ವೇಳೆ ಅಸುರಸಂಬಂಧವಾದ ಆ ಕಿರುಗುಟ್ಟುವ ಶಬ್ದವುಂಟಾದರೆ ;—(ಇಲ್ಲಿ **ಆಸುರ್ಯಾ ವಾಕ್** ಎಂಬುದನ್ನು ತೈತ್ತಿರೀಯ ಸಂಹಿತೆಯಲ್ಲಿ **ವಾರುಣೀ ದುರ್ವಾಕ್** ಎಂದು ವರ್ಣಿಸಿರುತ್ತೆ. ತೈತ್ತಿರೀಯ ಸಂಹಿತೆಯಲ್ಲಿರುವ ಹವಿರ್ಧಾನಸ್ತುತಿಯನ್ನು ಮುಂದೆ ವಿವರಿಸಲಾಗುತ್ತದೆ.)

**ಏತದ್ವಾಚಯೇತ್ । ಸ್ವಂ ಗೋಷ್ಠಮಾವದತಂ ದೇವೀ ದುರ್ಯೇ ಆಯುರ್ಮಾ ನಿರ್ವಾದಿಷ್ಟಂ ಪ್ರಜಾಂ ಮಾ ನಿರ್ವಾದಿಷ್ಟಮಿತಿ ತಸ್ಯೋಹ್ಯೈಷಾ ಪ್ರಾಯಶ್ಚಿತ್ತಿಃ ॥ ೧೮ ॥**

ಆ ದುಷ್ಟಶಬ್ದದಿಂದ ಕೇಡುಂಟಾಗದಿರುವಂತೆ ಪ್ರಾರ್ಥಿಸಬೇಕು. "ಎಲೈ ದಿವ್ಯಾಶ್ರಯವುಳ್ಳವರೇ, ನಿಮ್ಮಷ್ಟಕ್ಕೆ ಮಾತ್ರ ಶಬ್ದಮಾಡಿಕೊಳ್ಳಿರಿ ನನ್ನ ಜೀವಘಾತವಾಗುವಂತೆಯೂ, ನನ್ನ ಸಂತತಿಚ್ಛೇದವಾಗುವಂತೆಯೂ ಮಾಡಬೇಡಿರಿ" ಎಂದು ಯಜಮಾನನಿಂದ ಪಠಿಸಲ್ಪಡಬೇಕು. ಇದೇ ಅದರ ಪರಿಹಾರಮಾರ್ಗ.

**ತದಾಹುಃ । ಉತ್ತರವೇದೇಃ ಪ್ರತ್ಯಙ್ ಪ್ರಕ್ರಾಮೇತ್ತ್ರೀನ್ ವಿಕ್ರಮಾಂಸ್ತದ್ಧವಿರ್ಧಾನೇ ಸ್ಥಾಪಯೇತ್ತ್ವಾ ಹವಿರ್ಧಾನಯೋರ್ಮಾತ್ರೇತಿ ನಾತ್ರಮಾತ್ರಾಸ್ತಿ ಯತ್ರೈವ ಸ್ವಯಂ ಮನಸಾ ಮನ್ಯೇತ ನಾಹೈವ ಸತ್ರಾತ್ಯಂತಿಕೇ ನೋ ದೂರೇ ತತ್ ಸ್ಥಾಪಯೇತ್ ॥ ೧೯ ॥**

ಈ ಪ್ರಾಯಶ್ಚಿತ್ತಕರ್ಮವು ಸಫಲವಾಗಬೇಕಾದರೆ, ಉತ್ತರವೇದಿಯಿಂದ ಪಶ್ಚಿಮಾಭಿಮುಖವಾಗಿ ಮೂರು ಹೆಜ್ಜೆಗಳಷ್ಟು ದೂರ ಹೋಗಿ ಅಲ್ಲಿ ಹವಿರ್ಧಾನಗಳನ್ನು ನಿಲ್ಲಿಸಬೇಕು. ಇದೇ ಹವಿರ್ಧಾನಗಳ ಪರಿಮಿತಿಯು. ಆದರೆ, ಇದರಲ್ಲಿ ನಿಯಮಿತವಾದ ಪ್ರಮಾಣವೇನಿಲ್ಲ, ತನಗೆ ಯಾವ ಸ್ಥಾನವು ಅನುಕೂಲವಾಗಿ ತೋರುವುದೋ ಅಲ್ಲಿ ನಿಲ್ಲಿಸಬಹುದು. ಆದರೆ, ಆ ಸ್ಥಾನವು ಉತ್ತರವೇದಿಗೆ ಅತಿ ದೂರದಲ್ಲಾಗಲಿ ಅಥವಾ ಅತಿ ಹತ್ತಿರದಲ್ಲಾಗಲಿ ಇರಬಾರದು.

**ತೇಽಭಿಮಂತ್ರಯತೇ । ಅತ್ರ ರಮೇಥಾಂ ವರ್ಷ್ಮನ್ ಪೃಥಿವ್ಯಾ ಇತಿ ವರ್ಷ್ಮ ಹ್ಯೇತತ್ಪೃಥಿವ್ಯೈ ಭವತಿ ದಿವಿ ಹ್ಯಸ್ಯಾಹವನೀಯೋ ಭವತಿ ನಭ್ಯಸ್ಥೇ ಕರೋತಿ ತದ್ಧಿ ಕ್ಷೇಮಸ್ಯ ರೂಪಂ**
(ಶ. ಬ್ರಾ ೩-೫-೩-೨೦)

"ಪೃಥ್ವಿಯ ಈ ಎತ್ತರವಾದ ಪ್ರದೇಶದಲ್ಲಿ ರಮಿಸಿರಿ". ಎಂದು ಪಠಿಸಿ ಹವಿರ್ಧಾನಗಳಿಗೆ ವಂದಿಸತಕ್ಕದ್ದು. ಈ ವೇದಿಯೇ ಪೃಥ್ವಿಯಲ್ಲಿ ಅತ್ಯಂತ ಎತ್ತರವಾದ ಪ್ರದೇಶವಾಗಿರುವುದು (ಎತ್ತರವೆಂದರೆ ಶ್ರೇಷ್ಠವಾದ ಎಂದು ತಾತ್ಪರ್ಯವನ್ನಿಟ್ಟುಕೊಳ್ಳಬೇಕು) ಮತ್ತು ಆ ಹವಿರ್ಧಾನಗಳನ್ನು ಅವುಗಳ ನಾಭಿಯನ್ನಾಶ್ರಯಿಸಿ ನಿಲ್ಲುವಂತೆ ಮಾಡುತ್ತಾನೆ. ನಾಭಿಯೇ ಸುಸ್ಥಿತಿಗೆ ಆಧಾರವು.

**ಅಥೋತ್ತರೇಣ ಪರ್ಯೇತ್ಯಾಧ್ವರ್ಯುಃ । ದಕ್ಷಿಣಗ್ಂ ಹವಿರ್ಧಾನಮುಪಸ್ತಭ್ನಾತಿ ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಗ್ಂಸಿ । ಯೋ ಅಸ್ಕಭಾಯದು-ತ್ತರಗ್ಂ ಸಧಸ್ಥಂ ವಿಚಕ್ರಮಾಣಸ್ತ್ರೇಧೋರುಗಾಯೋ ವಿಷ್ಣವೇ ತ್ವೇತಿ ಮೇಥೀಮುಪನಿ-ಹಂತೀತರತ ಸ್ತತೋ ಯದು ಚ ಮಾನುಷೇ ॥೨೧॥** (ಶ. ಬ್ರಾ. ೩.೫.೩.೨೧)

ಅನಂತರ ಅಧ್ವರ್ಯುವು ಉತ್ತರದಿಕ್ಕಿನಿಂದ ಬಳಸಿ ಹೋಗಿ ದಕ್ಷಿಣದಿಕ್ಕಿನ ಹವಿರ್ಧಾನಕ್ಕೆ ಆಸರೆಯನ್ನು ಕೊಟ್ಟು ನಿಲ್ಲಿಸುತ್ತಾನೆ. ಅದು ಸುಸ್ಥಿರವಾಗಿ ನಿಲ್ಲಲು "ಪೃಥಿವ್ಯಾದಿ ಲೋಕಗಳನ್ನೆಲ್ಲಾ ವಿಶೇಷರೀತಿಯಿಂದ ನಿರ್ಮಿಸಿದವನೂ, ತಾನು ಸೃಷ್ಟಿಸಿದ ಲೋಕಗಳಲ್ಲಿ ವಿಧವಿಧವಾಗಿ ಸಂಚರಿಸುತ್ತಲೂ, ಅತಿ ವಿಸ್ತೃತವಾದ ಅಂತರಿಕ್ಷಲೋಕವನ್ನು ನಿರ್ಮಿಸಿ ಸಕಲಲೋಕಗಳನ್ನು ಸ್ಥಿರವಾಗಿ ಸ್ಥಾಪಿಸಿದವನೂ, ಸರ್ವವ್ಯಾಪಕನೂ ಆದ ವಿಷ್ಣುವಿನ ವೀರ್ಯಕರ್ಮಗಳನ್ನು ನಾನು ಪಠಿಸುತ್ತೇನೆ" ಎಂದು ಪಠಿಸಿ (೧. ೧೫೪. ೧) ಅದನ್ನು ಸ್ಥಿರವಾಗಿ ನಿಲ್ಲಿಸುತ್ತಾನೆ. ಸಾಧಾರಣವಾದ ಕಾಲದಲ್ಲಿ ಸ್ಥಾಪಿಸುವ ಕ್ರಮಕ್ಕಿಂತಲೂ ವಿಶೇಷರೀತಿಯಲ್ಲಿ ಅದನ್ನು ಸ್ಥಾಪಿಸಲಾಗುತ್ತದೆ. ವಿಷ್ಣುವನ್ನು ಉದ್ದೇಶಿಸಿಯೇ ಈ ಸ್ಥಾಪನೆಯು ಭದ್ರಪಡಿಸಲ್ಪಡುತ್ತದೆ

**ಅಥ ಪ್ರತಿಪ್ರಸ್ಥಾತಾ । ಉತ್ತರಗ್ಂ ಹವಿರ್ಧಾನಮುಪಸ್ತಭ್ನಾತಿ ದಿವೋ ವಾ ವಿಷ್ಣವುತ ವಾ ಪೃಥಿವ್ಯಾ ಮಹೋ ವಾ ವಿಷ್ಣವುರೋರಂತರಿಕ್ಷಾತ್ । ಉಭಾ ಹಿ ಹಸ್ತಾ ವಸುನಾ ಪೃಣಸ್ವಾ ಪ್ರಯಚ್ಛ ದಕ್ಷಿಣಾದೋತ ಸವ್ಯಾದ್ವಿಷ್ಣವೇ ತ್ವೇತಿ ಮೇಥೀಮುಪನಿಹಂತೀತರತಸ್ತತೋ ಯದು ಚ ಮಾನುಷೇ ತದ್ಯದ್ವೈಷ್ಣವ್ಯರ್ಯಜುರ್ಭಿರುಪಚರಂತಿ ವೈಷ್ಣವಗ್ಂಹಿ ಹವಿರ್ಧಾನಂ ।**

ಅನಂತರ ಅಧ್ವರ್ಯುವಿನ ಸಹಾಯಕನಾದ ಪ್ರತಿಪ್ರಸ್ಥಾತೃವು ಉತ್ತರದಿಕ್ಕಿನ ಹವಿರ್ಧಾನವನ್ನು ಸ್ಥಾಪಿಸುತ್ತಾನೆ. "ಎಲೈ ವಿಷ್ಣುವೇ, ದ್ಯುಲೋಕದಿಂದಾಗಲಿ, ಪೃಥ್ವಿಯಿಂದಾಗಲೀ ಅಥವಾ ಅತ್ಯಂತ ವಿಸ್ತೃತವಾದ ಅಂತರಿಕ್ಷದಿಂದಾಗಲಿ ನಿನ್ನ ಎರಡು ಹಸ್ತಗಳನ್ನು ಸಂಪತ್ತಿನಿಂದ ತುಂಬಿಕೊಂಡು ಬಂದು ನಮ್ಮ ಎಡಬಲ ಪಾರ್ಶ್ವಗಳೆರಡುಕಡೆಗಳಲ್ಲಿಯೂ ನಮ್ಮನ್ನು ಸಂಪತ್ತಿನಿಂದ ಆವರಿಸುವಂತೆ ಮಾಡು" ಎಂದು ವಿಷ್ಣುವನ್ನು ಪ್ರಶಂಸಿಸಿ ಸಾಧಾರಣವಾದ ಕಾಲದಲ್ಲಿ ಸ್ಥಾಪಿಸುವುದಕ್ಕಿಂತಲೂ ಬೇರೆ ಸ್ಥಾನದಲ್ಲಿ ಅದನ್ನು ಸ್ಥಾಪಿಸುತ್ತಾನೆ. ಹವಿರ್ಧಾನವು ವಿಷ್ಣುಸಂಬಂಧಿಯಾದುದರಿಂದಲೇ ವಿಷ್ಣುವಿನ ಪ್ರಶಂಸೆಯು ಅತ್ಯವಶ್ಯವಾಗಿರುತ್ತದೆ.

**ಅಥ ಮಧ್ಯಮಂ ಛದಿರುಪಸ್ಪೃಶ್ಯ ವಾಚಯತಿ । ಪ್ರತದ್ವಿಷ್ಣುಃ ಸ್ತವತೇ ವೀರ್ಯೇಣ ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ । ಯಸ್ಯೋರುಷು ತ್ರಿಷು ವಿಕ್ರಮಣೇಷ್ವಧಿಕ್ಷಿಯಂತಿ ಭುವನಾನಿ ವಿಶ್ವಾ । ಇತೀದಗ್ಂ ಹ್ಯೇವಾಸ್ಯೈತಚ್ಛೀರ್ಷಕಪಾಲಂ ಯದಿದಮುಪರಿಷ್ಟಾದಧೀವ ಹ್ಯೇತತ್ ಕ್ಷಿಯಂತ್ಯನ್ಯಾನಿ ಶೀರ್ಷಕಪಾಲಾನಿ ತಸ್ಮಾದಾಹಾಧಿಕ್ಷಿಯಂತೀತಿ ॥**

(ಶ ಬ್ರಾ. ೩-೫-೩-೨೩)

ಮಧ್ಯಭಾಗದಲ್ಲಿ ಹರಡಿರುವ ಜೊಂಡಿನ ಚಾಪೆಯನ್ನು ಮುಚ್ಚುತ್ತಾ "ಅತ್ಯಂತ ವಿಸ್ತೃತವಾದವೂ, ಮೂರು ಸಂಖ್ಯೆಗಳುಳ್ಳವೂ ಆದ ಯಾವ ವಿಷ್ಣುವಿನ ಪಾದಗಳ ಪ್ರಕ್ಷೇಪಗಳಲ್ಲಿ ಸಕಲ ಭೂತಗಳೂ ನೆಲೆಸಿ ನಿಂತಿವೆಯೋ ಮತ್ತು ಯಾವ ವಿಷ್ಣುವು ಸಿಂಹಾದಿ ವನಮೃಗಗಳಂತೆ ಶತ್ರುಗಳಿಗೆ ಭಯಂಕರನೂ, ಶತ್ರುಗಳನ್ನು ಅತಿಯಾಗಿ ಹಿಂಸಿಸುವವನೂ ಮತ್ತು

.ರ್ವತಗಳ ಎತ್ತರವಾದ ಪ್ರದೇಶದಲ್ಲಿರುವವನೂ ಆಗಿರುವನೋ ಆ ವಿಷ್ಣುವು ತನ್ನ ವೀರ್ಯಕರ್ಮಗಳೊಡನೆ ವಿಶೇಷ ವಾಗಿ ಹೊಗಳಲ್ಪಡುತ್ತಾನೆ" (ಋ. ಸಂ. ೧-೧೫೪-೨) ಎಂಬ ವಿಷ್ಣುಪ್ರಶಂಸೆಯನ್ನು ಪಠಿಸುತ್ತಾನೆ. ಈ ಜೋಂಡಿನ ಚಾಪೆಯೇ ಹವಿರ್ಧಾನವ (ವಿಷ್ಣುವಿನ) ಶೀರ್ಷದ ಕಪಾಲರೂಪಿಯಾಗಿರುತ್ತದೆ. ಉಳಿದ ಕಪಾಲಗಳೆಲ್ಲವೂ ಇದನ್ನೇ ಆಶ್ರಯಿಸಿರುತ್ತವೆ. ಆದುದರಿಂದಲೇ ಉತ್ತಮವಾದ ಪ್ರಶಂಸೆಯನ್ನು ಪಠಿಸುತ್ತಾನೆ.

**ಅಥ ರರಾಟ್ಯಾಮುಪಸ್ಪೃಶ್ಯ ವಾಚಯತಿ । ವಿಷ್ಣೋ ರರಾಟಮಸೀತಿ ಲಲಾಟಗ್ಂ ಹ್ಯೇವಾಸ್ಯೈತ-ದಸ್ಯೋಚ್ಛ್ರಾಯ್ಯಾ ಉಪಸ್ಪೃಶ್ಯ ವಾಚಯತಿ ವಿಷ್ಣೋಃ ಶ್ನಪ್ತ್ರೇ ಸ್ಥ ಇತಿ ಸ್ರಕ್ವೇ ಹ್ಯೇವಾ ಸ್ಯೈತೇಽಥ ಯದಿದಂ ಪಶ್ಚಾಚ್ಛದಿರ್ಭವತೀದಂ .... .... ಯದಿ ಪಶ್ಚಾತ್ ॥**

ಅನಂತರ ಮುಂಭಾಗದ ಬಂಧನವನ್ನು ಸ್ಪರ್ಶಿಸುತ್ತ, "ಎಲೈ ಬಂಧನವೇ, ನೀನು ವಿಷ್ಣುವಿನ ಅಲಂಕಾರರೂಪ ವಾದ ಶೀರ್ಷದ ಪಟ್ಟಿಯಾಗಿದ್ದೀಯೆ." ಎಂದು ಪ್ರಶಂಸಿಸುತ್ತಾನೆ. ಅನಂತರ, ನೇರವಾದ ಮೇಲ್ಪಟ್ಟಿಗಳನ್ನು ಸ್ಪರ್ಶಿಸುತ್ತ "ನೀವು ವಿಷ್ಣುವಿನ ದವಡೆ ಪ್ರದೇಶಗಳಾಗಿದ್ದೀರಿ" ಎಂದು ಪ್ರಶಂಸಿಸುತ್ತಾನೆ. ಹಿಂಭಾಗದಲ್ಲಿರುವ ಛದಿಯು ಶೀರ್ಷಕಪಾಲವಾಗಿರುತ್ತದೆ.

**ಅಥ ಲಸ್ಪೂಜನ್ಯಾ ಸ್ಯಂದ್ಯಯಾ ಪ್ರಸೀವ್ಯತಿ । ವಿಷ್ಣೋಃ ಸ್ಯೂರಸೀತ್ಯಥ ಗ್ರಂಥಿಂ ಕರೋತಿ ವಿಷ್ಣೋರ್ಧ್ರುವೋಽಸೀತಿ ನೇದ್ವ್ಯವಪದ್ಯಾತಾ ಇತಿ ತಂ ಕೃತೇ ಕರ್ಮನ್ವಿಸ್ಯತಿ ತತೋ ಹ್ಯಾಧ್ವರ್ಯುಂ ವಾ ಯಜಮಾನಂ ವಾ ಗ್ರಾಹೋ ನ ವಿಂದತಿ ತನ್ನಿಷ್ಠಿತಮಭಿಮೃಶತಿ ವೈಷ್ಣವ-ಮಸೀತಿ ವೈಷ್ಣವಗ್ಂಹಿ ಹವಿರ್ಧಾನಂ ॥** (ಶ. ಬ್ರಾ. ೩-೫-೩-೨೫)

"ನೀನು ವಿಷ್ಣುವಿನ ತಂತುವಾಯನು" ಎಂದು ಸ್ತುತಿಸಿ ಸೂಜಿಯಲ್ಲಿ ನೂಲನ್ನು ಸೇರಿಸಿ ಮೇಲ್ಭಾಗದ ಕಟ್ಟನ್ನು ಹೊಲೆಯುತ್ತಾನೆ. ಅದು ಕೆಳಕ್ಕೆ ಬೀಳದಂತೆ ಒಂದು ಗ್ರಂಥಿಯಿಂದ ಅದನ್ನು ಬಿಗಿದು ಕಟ್ಟಿ "ನೀನು ವಿಷ್ಣುವಿನ ಸ್ಥಿರವಾದ ಗ್ರಂಥಿ" ಎಂದು ಸ್ತುತಿಸುತ್ತಾನೆ. ಕರ್ಮವು ಪರ್ಯವಸಾನವನ್ನು ಹೊಂದಿದೊಡನೆಯೇ ಆ ಗ್ರಂಥಿಯನ್ನು ಬಿಚ್ಚುತ್ತಾನೆ. ಈ ಕಾರಣದಿಂದ ಅಧ್ವರ್ಯುವನ್ನಾಗಲಿ ಯಜಮಾನನನ್ನಾಗಲಿ ಯಾವ ಆಲಸ್ಯವೂ ಮುಟ್ಟುವು ದಿಲ್ಲ. ಹವಿರ್ಧಾನವೇ ವಿಷ್ಣುಸಂಬಂಧಿಯಾದುದರಿಂದ "ನೀನು ವಿಷ್ಣುವಿನ ಆತ್ಮಸಂಬಂಧಿಯಾಗಿದ್ದೀಯೆ" ಎಂದು ಅದನ್ನು ಪ್ರಶಂಸಿಸುತ್ತಾನೆ.

ಈ ಹವಿರ್ಧಾನಸ್ತುತಿಯೂ ವರ್ಣನವೂ ತೈತ್ತಿರೀಯ ಸಂಹಿತೆಯಲ್ಲಿಯೂ ಸಹ ಈ ಅಂಶಗಳನ್ನೇ ಪ್ರಶಂಸಿಸಿದ್ದರೂ ಸಹ ಅಲ್ಲಿಯ ವಿವರಣೆಯಲ್ಲಿ ಕೆಲವು ವ್ಯತ್ಯಾಸಗಳಿರುವುದರಿಂದ ಅಲ್ಲಿಯ ಭಾಗಗಳನ್ನು ಇಲ್ಲಿ ಉದಾಹರಿಸಿದೆ. ತೈತ್ತಿರಿಯ ಸಂಹಿತೆಯಲ್ಲಿ ಹವಿರ್ಧಾನದ ಪ್ರಶಂಸೆಯು ಈ ರೀತಿಯಿರುತ್ತದೆ—

**ಬಧ್ನಮುವ ಸ್ಯತಿ ವರುಣಪಾಶಾದೇವೈನೇ ಮುಂಚತಿ ಪ್ರಣೇನೇಕ್ತಿ ಮೇಧ್ಯೇ ಏವೈನೇ ಕರೋತಿ ಸಾವಿತ್ರಿಯರ್ಚಾ ಹುತ್ವಾ ಹವಿರ್ಧಾನೇ ಪ್ರ ವರ್ತಯತಿ ಸವಿತೃಪ್ರಸೂತ ಏವೈನೇ ಪ್ರ ವರ್ತ ಯತಿ ವರುಣೋ ವಾ ಏಷ ದುರ್ವಾಗುಭಯತೋ ಬದ್ಧೋ ಯದಕ್ಷಸ್ಸ ಯದುತ್ಸರ್ಜೇದ್ಯ-ಜಮಾನಸ್ಯ ಗೃಹಾನಭ್ಯುತ್ಸರ್ಜೇತ್ಸುವಾಗ್ದೇವ ದುರ್ಯಾಗ್ಂಅವದೇತ್ಯಾಹ ಗೃಹಾ ವೈ ದುರ್ಯಾ-ಶ್ಶಾಂತ್ಯೈ । ಪತ್ನೀ ಉಪಾನಕ್ತಿ ॥** (ತೈ. ಸಂ. ೬-೨-೯-೧)

ಬಂಧನವನ್ನು ಬಿಡಿಸಿದೊಡನೆಯೇ ವರುಣಪಾಶವನ್ನು ಬಿಡಿಸಿದಂತೆಯಾಗಿ ಹವಿರ್ಧಾನಗಳು ಯಜ್ಞಕ್ರಿಯೆಯಲ್ಲಿ ಭಾಗವನ್ನು ವಹಿಸಲು ಯೋಗ್ಯವಾಗುವುವು. ಸವಿತೃದೇವತೆಯನ್ನುದ್ದೇಶಿಸಿದ ಮಂತ್ರವನ್ನು ಪಠಿಸಿ ಆಹುತಿಯನ್ನರ್ಪಿಸಿದ ನಂತರ ಹವಿರ್ಧಾನಗಳನ್ನು ಮುಂದಕ್ಕೆ ತರುತ್ತಾನೆ. ಸವಿತೃವಿನ ಪ್ರೇರಣೆಯೇ ಈ ರೀತಿ ಹವಿರ್ಧಾನಗಳನ್ನು ಮುಂದಕ್ಕೆ ತರಲು ಸಹಾಯಕವಾಗುತ್ತದೆ. ಎರಡು ಕಡೆಗಳಲ್ಲಿಯೂ ಸೇರಿಕೊಂಡಿರುವ ಇರಚಿನಪಟ್ಟಿಯು ವರುಣಸಂಬಂಧಿಯಾದುದು. ಅದು ಕಿರುಗುಟ್ಟುವ ದುಷ್ಟಶಬ್ದವನ್ನು ಮಾಡಬಾರದು. ಒಂದು ವೇಳೆ ಆ ಶಬ್ದವನ್ನು ಮಾಡಿದರೆ ಯಜಮಾನನ ಗೃಹಕ್ಕೆ ತೊಂದರೆಯಾಗುತ್ತದೆ. **"ಗೃಹಾನ್ ಅಭಿಲಕ್ಷ್ಯ ಶಬ್ದಂ ಕರೋತಿ । ತೇಷ್ವರಿಷ್ಟಂ ಕರೋತಿ ।** ಯಜಮಾನನ ಗೃಹಗಳಿಗೆ ತೊಂದರೆಯುಂಟಾಗುವಂತೆ ಮಾಡುತ್ತವೆ. ಎಲೈ ವಾಗ್ದೇವತೆಯೇ, ನಮ್ಮ ಗೃಹಗಳಿಗೆ ಒಳ್ಳೆಯವನ್ನು ಮಾಡಲು ಯೋಗ್ಯವಾದ ಉತ್ತಮವಾದ ಶಬ್ದವನ್ನು ಮಾಡು" ಎಂದು ಪ್ರಾರ್ಥಿಸುತ್ತಾನೆ. ಆಗ ಅವನ ಪತ್ನಿಯು ಅವಕ್ಕೆ ಆಜ್ಯಲೇಪವನ್ನು ಮಾಡುತ್ತಾಳೆ.

> **ಪತ್ನೀ ಹಿ ಸರ್ವಸ್ಯ ಮಿತ್ರಂ ಮಿತ್ರತ್ವಾಯ ಯದ್ವೈ ಪತ್ನೀ ಯಜ್ಞಸ್ಯ ಕರೋತಿ ಮಿಥುನಂ ತದಥೋ ಪತ್ನಿಯಾ ಏವೈಷ ಯಜ್ಞಸ್ಯಾನ್ವಾರಂಭೋಽನವಚ್ಛಿತ್ತ್ಯೈ ವರ್ತ್ಮನಾ ವಾ ಅನ್ವಿತ್ಯ ಯಜ್ಞಗ್ಂರಕ್ಷಾಗ್ಂಸಿ ಜಿಘಾಗ್ಂಸಂತಿ ವೈಷ್ಣವೀಭ್ಯಾಮೃಗ್ಭ್ಯಾಂ ವರ್ತ್ಮನೋರ್ಜುಹೋತಿ ಯಜ್ಞೋ ವೈ ವಿಷ್ಣುರ್ಯಜ್ಞಾದೇವ ರಕ್ಷಾಗ್ಂಸ್ಯಪಹಂತಿ ಯದಧ್ವರ್ಯುರನಗ್ನಾವಾಹುತಿಂ ಜುಹುಯಾದಂಧೋಽಧ್ವರ್ಯುಸ್ಸ್ಯಾದ್ರಕ್ಷಾಗ್ಂಸಿ ಯಜ್ಞಗ್ಂಹನ್ಯುಃ ॥**

ಯಜಮಾನಪತ್ನಿಯು ಯಜ್ಞಕರ್ಮದಲ್ಲಿ ಭಾಗವಹಿಸಿರುವ ಸಕಲರಿಗೂ ಮಿತ್ರಭೂತಳು. ಪತ್ನಿಯು ಭಾಗವಹಿಸುವುದರಿಂದಲೇ ಯಜ್ಞಕ್ಕೆ ಅನುಕೂಲವಾದ ಮಿಥುನತ್ವವು ಪ್ರಾಪ್ತವಾಗುತ್ತದೆ. **'ಯಜ್ಞಸ್ಯ ಸಂತತ್ಯೈ ಪತ್ನ್ಯನ್ವಾರಭತೇ'** (ತೈ. ಸಂ. ೬-೨-೧-೧) ಇತ್ಯಾದಿ ವಾಕ್ಯಗಳಲ್ಲಿ ವರ್ಣಿತವಾಗಿರುವಂತೆ ಯಜ್ಞವು ನಿರ್ವಿಘ್ನವಾಗಿ ನೆರವೇರಲು ಅವಳು ಯಜ್ಞಸೂತ್ರವನ್ನು ಹಿಡಿದಿರುವಳು. ಪ್ರಕೃತದಲ್ಲಿ ಅವಳೇ ರಥದ ಇರಚಿಯ ಶಬ್ದವನ್ನು ಆಜ್ಯಲೇಪದಿಂದ ನಿಲ್ಲಿಸುವವಳಾಗಿದ್ದಾಳೆ. ಅದಿಲ್ಲದಿದ್ದರೆ, ರಾಕ್ಷಸರು ಆ ಶಬ್ದವನ್ನನುಸರಿಸಿ ಬಂದು ಯಜ್ಞಕ್ಕೆ ವಿಘ್ನವನ್ನುಂಟುಮಾಡುತ್ತಿದ್ದರು. ಅದನ್ನು ತಪ್ಪಿಸಲು ಯಜಮಾನನು ಇನ್ನೂ ಒಂದು ಪರಿಹಾರಮಾರ್ಗವನ್ನನುಸರಿಸುತ್ತಾನೆ. ವಿಷ್ಣುಪ್ರಶಂಸಕವಾದ ಮಂತ್ರಗಳನ್ನು ಪಠಿಸಿ ಆಹುತಿಯನ್ನರ್ಪಿಸುವನು. ಯಜ್ಞವೇ ವಿಷ್ಣುರೂಪಿಯು. ಆದುದರಿಂದ ಈ ವಿಷ್ಣುಮಂತ್ರಪಠನದ ಸಹಾಯದಿಂದ ರಾಕ್ಷಸರನ್ನು ಓಡಿಸುತ್ತಾನೆ. ಅಧ್ವರ್ಯುವು ಅಗ್ನಿರಹಿತವಾದ ಸ್ಥಾನದಲ್ಲಿ ಆಹುತಿಯನ್ನರ್ಪಿಸಿದ್ದೇ ಆದರೆ ಆಗ ಅವನು ಅಂಧನಾಗುತ್ತಾನೆ. ಆಗಲೂ ಸಹ ರಾಕ್ಷಸರು ಬಂದು ಯಜ್ಞಕ್ಕೆ ಹಿಂಸೆಯನ್ನುಂಟುಮಾಡಬಹುದು ಆದುದರಿಂದ;—

> **ಹಿರಣ್ಯಮುಪಾಸ್ಯ ಜುಹೋತ್ಯಗ್ನಿವತ್ಯೇವ ಜುಹೋತಿ ನಾಂಧೋಽಧ್ವರ್ಯುರ್ಭವತಿ ನ ಯಜ್ಞಗ್ಂ ರಕ್ಷಾಗ್ಂಸಿ ಘ್ನಂತಿ ಪ್ರಾಚೀ ಪ್ರೇತಮಧ್ವರಂ ಕಲ್ಪಯಂತೀ ಇತ್ಯಾಹ ಸುವರ್ಗಮೇವೈನೇ ಲೋಕಂ ಗಮಯತ್ಯತ್ರ ರಮೇಥಾಂ ವರ್ಷ್ಮನ್ ಪೃಥಿವ್ಯಾ ಇತ್ಯಾಹ ವರ್ಷ್ಮ ಹ್ಯೇತತ್ಪೃಥಿವ್ಯಾ ಯದ್ದೇವಯಜನಗ್ಂ ಶಿರೋ ವಾ ಏತದ್ಯಜ್ಞಸ್ಯ ಯದ್ಧವಿರ್ಧಾನಂ ದಿವೋ ವಾ ವಿಷ್ಣವುತ ವಾ ಪೃಥಿವ್ಯಾ ಇತ್ಯಾಶೀರ್ಪದಯರ್ಚಾ ದಕ್ಷಿಣಸ್ಯ ಹವಿರ್ಧಾನಸ್ಯ ಮೇಥೀಂ ನಿ ಹಂತಿ ಶೀರ್ಷತ ಏವ ಯಜ್ಞಸ್ಯ ಯಜಮಾನ ಆಶಿಷೋಽವರುಂಧೇ ॥**

ರಥಮಾರ್ಗದಲ್ಲಿ ಅಗ್ನಿಯನ್ನು ಪ್ರತಿಬಿಂಬಿಸಲು ಅಲ್ಲಿ ಆಹುತ್ಯರ್ಪಣಕ್ಕೆ ಮೊದಲು ಸುವರ್ಣನಾಣ್ಯವನ್ನು ಹಾಕುತ್ತಾನೆ. ಆಗ ಅವನ ಆಹುತಿಯು ಅಗ್ನಿಯಲ್ಲಿ ಅರ್ಪಿಸಿದಂತೆಯೇ ಆಗುತ್ತದೆ. ಅಧ್ವರ್ಯುವು ಅಂಧನೂ ಆಗುವುದಿಲ್ಲ. ಯಜ್ಞಕ್ಕೂ ರಾಕ್ಷಸರ ಹಿಂಸೆಯಿರುವುದಿಲ್ಲ. ಆಗ ಹವಿರ್ಧಾನಗಳನ್ನುದ್ದೇಶಿಸಿ “ ನೀವು ಯಜ್ಞಾಭಿಮುಖವಾಗಿ ಮುಂದುವರೆಯಿರಿ.” ಎಂದು ಪ್ರಾರ್ಥಿಸಿ ಅವು ಸ್ವರ್ಗಕ್ಕೆ ಹೋಗುವಂತೆ ಮಾಡುತ್ತಾನೆ. ಯಜ್ಞವೇದಿಯೇ ಅತಿ ಎತ್ತರವಾದ ಸ್ಥಾನವಾದು ದರಿಂದ ಆ ಯಜ್ಞವೇದಿಯಲ್ಲಿ ಸ್ಥಾಪಿತವಾಗಿರುವ ಹವಿರ್ಧಾನಗಳನ್ನುದ್ದೇಶಿಸಿ “ ಎತ್ತರವಾದ ಪ್ರದೇಶದಲ್ಲಿ ರಮಿಸಿರಿ ” ಎಂದು ಪ್ರಾರ್ಥಿಸುತ್ತಾನೆ.

ಈ ಹವಿರ್ಧಾನವೇ ಯಜ್ಞಶಿರಸ್ಸು. “ **ದಿವೋ ವಾ ವಿಷ್ಣೋ** ” ಎಂಬ ಮಂತ್ರವನ್ನು ಪಠಿಸಿ ದಕ್ಷಿಣ ದಿಗ್ಭಾಗದ ಹವಿರ್ಧಾನವನ್ನು ಸ್ಥಾಪಿಸುತ್ತಾನೆ. ಆದುದರಿಂದಲೇ ಯಜಮಾನನು ಯಜ್ಞಾರಂಭದಲ್ಲಿಯೇ ಆಶೀರ್ವಚನ ವನ್ನು ಪಡೆಯುತ್ತಾನೆ.

> ದಂಡೋ ವಾ ಔಪರಸ್ತೃತೀಯಸ್ಯ ಹವಿರ್ಧಾನಸ್ಯ ವಷಟ್ಕಾರೇಣಾಕ್ಷಮಚ್ಛಿನದ್ಯತ್ತೃತೀಯಂ ಛದಿರ್ಹವಿರ್ಧಾನಯೋರುದಾಹ್ರಿಯತೇ ತೃತೀಯಸ್ಯ ಹವಿರ್ಧಾನಸ್ಯಾವರುಧ್ಯೈ ಶಿರೋ ವಾ ಏತದ್ಯಜ್ಞಸ್ಯ ಯದ್ಧವಿರ್ಧಾನಂ ವಿಷ್ಣೋ ರರಾಟಮಸಿ ವಿಷ್ಣೋಃ ಪೃಷ್ಠಮಸೀತ್ಯಾಹ ತಸ್ಮಾ-ದೇತಾವದ್ಧಾ ಶಿರೋ ವಿಷ್ಯೂತಂ ವಿಷ್ಣೋಃಸ್ಯೂರಸಿ ವಿಷ್ಣೋರ್ಧ್ರುವಮಸೀತ್ಯಾಹ ವೈಷ್ಣವ-ಗ್ಂಹಿ ದೇವತಯಾ ಹವಿರ್ಧಾನಂ ಯಂ ಪ್ರಥಮಂ ಗ್ರಂಥಿಂ ಗ್ರಥ್ನೀಯಾದ್ಯತ್ತಂ ನ ವಿಸ್ರಗ್ಂಸ ಯೇದಮೇಹೇನಾಧ್ವರ್ಯುಃ ಪ್ರ ಮೀಯೇತ ತಸ್ಮಾತ್ಸ ವಿಸ್ರಸ್ಯಃ ||
>
> (ತೈ. ಸಂ. ೬-೨-೯.೬)

ವಷಟ್ಕಾರ ಪಠನದಿಂದ ಉಪರವಂಶಸ್ಥನಾದ ದಂಡನು ಮೂರನೆಯ ಹವಿರ್ಧಾನದ ಅಕ್ಷವನ್ನು ಮುರಿದನು. ಆದುದರಿಂದ, ಪ್ರಕೃತದಲ್ಲಿ ಹವಿರ್ಧಾನದ ಮೇಲೆ ಹೊದ್ದಿಸಿರುವ ಮೂರನೆಯ ಹೊದ್ದಿಕೆಯೇ ಮೂರನೆಯ ಹವಿರ್ಧಾನದ ಪ್ರತಿನಿಧಿಯಾಗಿರುತ್ತದೆ. ಹವಿರ್ಧಾನವೇ ಯಜ್ಞದ ಶಿರಸ್ಸು. ಎಲೈ ಹವಿರ್ಧಾನವೇ ನೀನೇ ವಿಷ್ಣುವಿನ ಲಲಾಟವು, ನೀನೇ ವಿಷ್ಣುವಿನ ಪೃಷ್ಠಭಾಗವು, ಎಂದು ಅದನ್ನು ಪ್ರಶಂಸಿಸುತ್ತಾನೆ. ಆದುದ ರಿಂದಲೇ ಈ ಶಿರಸ್ಸು ಅನೇಕ ಸಲ ವಿಭಕ್ತವಾಗುತ್ತದೆ. ನೀನೇ ವಿಷ್ಣುವಿನ ತಂತುವಾಗಿರುವೆ. ನೀನೇ ವಿಷ್ಣುವಿನ ಶಾಶ್ವತವಾದ ಸ್ಥಿತಿಯೂ ಆಗಿರುವೆ, ಎಂದೂ ಸಹ ಪ್ರಶಂಸಿಸಲ್ಪಡುತ್ತದೆ. ಈ ಹವಿರ್ಧಾನವು ಪೂರ್ಣವಾಗಿ ವಿಷ್ಣು ದೇವತಾಕವಾಗಿಯೇ ಇರುತ್ತದೆ. ಕೊನೆಯಲ್ಲಿ ಗ್ರಂಥಿ ವಿಸ್ರಂಸನವು. (ಬಿಚ್ಚುವುದು) ಮೊದಲು ಕಟ್ಟಿದ ಗ್ರಂಥಿಯನ್ನು ಬಿಚ್ಚದಿದ್ದರೆ, ಅಧ್ವರ್ಯುವಿಗೆ ಮೂತ್ರಕೋಶವು ಕಟ್ಟಿ ಅವನು ನಾಶವಾದಾನು. ಆದುದರಿಂದ ಈ ಗ್ರಂಥಿವಿಸ್ರಂಸನವು ಅತ್ಯವಶ್ಯವಾಗಿರುವುದು ಇತ್ಯಾದಿಯಾಗಿ ಹವಿರ್ಧಾನದ ಪ್ರಶಂಸೆಯಿರುತ್ತದೆ. ಇದೇ ಹವಿರ್ಧಾನ ಶಕಟಗಳ ನಿಜವಾದ ಸ್ವರೂಪವನ್ನೂ ಅವುಗಳ ಮಾಹಾತ್ಮ್ಯವನ್ನೂ ಸಹ ಐತರೇಯಬ್ರಾಹ್ಮಣದಲ್ಲಿ ಈರೀತಿ ವರ್ಣಿಸಿದೆ. (ಐ.ಬ್ರಾ. ೧-೨೩). ಅದನ್ನು ಪ್ರಶಂಸಿಸುವ ಮಂತ್ರ ಪಠನ ಕ್ರಮವನ್ನು ನಿರ್ದೇಶಿಸಿದೆ.

**ಹವಿರ್ಧಾನಾಭ್ಯಾಂ ಪ್ರೋಹ್ಯಮಾಣಾಭ್ಯಾಮನುಬ್ರೂಹೀತ್ಯಾಹಾಧ್ವರ್ಯುಃ** |

ಯಜ್ಞಭೂಮಿಗೆ ತರಲ್ಪಡಬೇಕಾದ ಹವಿರ್ಧಾನಗಳನ್ನುದ್ದೇಶಿಸಿ ಅವುಗಳ ಪ್ರಶಂಸಾತ್ಮಕವಾದ ಮಂತ್ರಗಳನ್ನು ಪಠಿಸುಎಂದು ಅಧ್ವರ್ಯುವು ಹೋತೃವಿಗೆ ತಿಳಿಸುತ್ತಾನೆ. ಅವುಗಳಲ್ಲಿ ಮೊದಲನೆಯದಾಗಿ,

**ಯುಜೇ ವಾಂ ಬ್ರಹ್ಮ ಪೂರ್ವ್ಯಂ ನಮೋಭಿರಿತ್ಯನ್ವಾಹ** (ಐ. ಬ್ರಾ. ೧-೨೯)

ಎಲೈ ಹವಿರ್ಧಾನಗಳೇ, ಅತ್ಯಂತ ಪ್ರಾಚೀನವಾದ ಮಂತ್ರಗಳನ್ನು ಪಠಿಸಿ ನಿಮ್ಮನ್ನು ಹವಿರಾದಿಗಳೊಡನೆ ಯೋಜಿಸುತ್ತೇನೆ ಎಂದು ಹೋತೃವು ಪ್ರಥಮತಃ ಈ ಮಂತ್ರವನ್ನು ಪಠಿಸುತ್ತಾನೆ. ಈ ಮಂತ್ರವನ್ನು ಏತಕ್ಕೆ ಪಠಿಸಬೇಕೆಂದರೆ ;—

**ಬ್ರಹ್ಮಣಾ ವಾ ಏತೇ ದೇವಾ ಅಯುಂಜತ ಯದ್ಧವಿರ್ಧಾನೇ ಬ್ರಹ್ಮಣೈವೈನೇ ಏತದ್ಯುಂಕ್ತೇ ನ ವೈ ಬ್ರಹ್ಮಣ್ವದ್ರಿಷ್ಯತಿ ||** (ಐ. ಬ್ರಾ ೧-೨೯)

ಪೂರ್ವದಲ್ಲಿ ದೇವತೆಗಳೂ ಸಹ ಈ ಮಂತ್ರದಿಂದಲೇ ಹವಿರ್ಧಾನಗಳನ್ನು ಯೋಜಿಸಿದರು. ಆದುದರಿಂದ ಈಗಲೂ ಸಹ ಅದೇ ನ್ಯಾಯವಾಗಿದೆ. ಈ ಮಂತ್ರಶಕ್ತಿಯನ್ನು ಹೊಂದಿದವನಿಗೆ ನಾಶವಿಲ್ಲವು. ಆದುದರಿಂದ ಪ್ರಥಮತಃ ಈ ಮಂತ್ರವನ್ನು ಪಠಿಸಿ ಅನಂತರ ದ್ಯಾವಾಪೃಥಿವಿಗಳನ್ನು ಪ್ರಶಂಸಿಸುವ ಮೂಲಮಂತ್ರಗಳನ್ನು ಪಠಿಸುತ್ತಾನೆ. ಅವು ಯಾವುವೆಂದರೆ ;—

**ಪ್ರೇತಾಂ ಯಜ್ಞಸ್ಯ ಶಂಭುವೇತಿ ತೃಚಂ ದ್ಯಾವಾಪೃಥಿವೀಯಮನ್ವಾಹ |**

**೧) ಪ್ರೇತಾಂ ಯಜ್ಞಸ್ಯ ಶಂಭುವಾ ; ೨) ದ್ಯಾವಾ ನಃ ಪೃಥಿವೀ ಇಮಂ ; ೩) ಆವಾಮುಪಸ್ಥಮದ್ರುಹಾ** (ಋ. ಸಂ. ೨, ೪೧. ೧೯-೨೧) ಎಂಬ ಈ ಮೂರು ಮಂತ್ರಗಳು. ಈ ಮಂತ್ರಗಳನ್ನು ಪಠಿಸುವಾಗ ಇನ್ನೊಂದು ಶಂಕೆಗೆ ಅವಕಾಶವಿರುತ್ತದೆ. ಅದೇನೆಂದರೆ—

**ತದಾಹುರ್ಯದ್ಧವಿರ್ಧಾನಾಭ್ಯಾಂ ಪ್ರೋಹ್ಯಮಾಣಾಭ್ಯಾಮನುವಾಚಾಹಾಥ ಕಸ್ಮಾತ್ತೃಚಂ ದ್ಯಾವಾಪೃಥಿವೀಯಮನ್ವಾಹೇತಿ ದ್ಯಾವಾಪೃಥಿವೀ ವೈ ದೇವಾನಾಂ ಹವಿರ್ಧಾನೇ ಆಸ್ತಾಂ ತೇ ಉ ಏವಾದ್ಯಾಪಿ ಹವಿರ್ಧಾನೇ ತೇ ಹೀದಮಂತರೇಣ ಸರ್ವಂ ಹವಿರ್ಯದಿದಂ ಕಿಂ ಚ ತಸ್ಮಾತ್ತೃಚಂ ದ್ಯಾವಾಪೃಥಿವೀಯ ಮನ್ವಾಹ ||** (ಐ. ಬ್ರಾ. ೧-೨೯)

ಯಜ್ಞಭೂಮಿಗೆ ಒಯ್ಯಲ್ಪಡುವ ಹವಿರ್ಧಾನಗಳನ್ನುದ್ದೇಶಿಸಿ ಪ್ರಶಂಸಾತ್ಮಕವಾದ ಮಂತ್ರಗಳನ್ನು ಪಠಿಸಬೇಕೆಂದಿರುವಾಗ, ಪ್ರಕೃತದಲ್ಲಿ ದ್ಯಾವಾಪೃಥಿವಿಗಳನ್ನುದ್ದೇಶಿಸಿದ ಮಂತ್ರಪಠನದ ಆವಶ್ಯಕತೆಯೇನು ಎಂಬುದೇ ಶಂಕೆ. ಆದರೆ ಆ ಶಂಕೆಗೆ ಅವಕಾಶವಿಲ್ಲ. ಹೇಗೆಂದರೆ, ದ್ಯಾವಾಪೃಥಿವಿಗಳೆರಡೂ ದೇವತೆಗಳಿಗೆ ಹಿಂದೆ ಹವಿರ್ಧಾನಗಳಾಗಿದ್ದವು. ಈಗಲೂ ಅವೇ ದೇವತೆಗಳ ಹವಿರ್ಧಾನಗಳು. ಸಕಲ ಹವಿಸ್ಸುಗಳೂ ಮತ್ತು ಉಳಿದ ಸಕಲ ವಸ್ತುಗಳೂ ಸಹ ದ್ಯಾವಾಪೃಥಿವಿಗಳೊಳಗೇ ಅಂತರ್ಗತವಾಗಿರುವುದರಿಂದ ಅವುಗಳಿಗೆ ಹವಿರ್ಧಾನಗಳೆಂಬ ಹೆಸರು ಪ್ರಸಿದ್ಧವಾಗಿದೆ. ಆದುದರಿಂದಲೇ, ಅವುಗಳನ್ನುದ್ದೇಶಿಸಿದ ಮೂರು ಮಂತ್ರಗಳನ್ನು ಪಠಿಸತಕ್ಕದ್ದು. ಅನಂತರ,

**ಯಮೇ ಇವ ಯತಮಾನೇ ಯದೈತಂ ಪ್ರ ವಾಂ ಭರನ್ಮಾನುಷಾ ದೇವಯಂತಃ |**
**(ಋ. ಸಂ. ೧೦-೧೩-೨)**

ಎಂಬ ಐದನೆಯ ಮಂತ್ರವನ್ನು ಪಠಿಸತಕ್ಕದ್ದು. ಈ ಮಂತ್ರದಲ್ಲಿ ಪ್ರಶಂಸಿಸುವ ಗುಣಗಳಾವುವೆಂದರೆ ;—
**ಮೊದಲನೆಯ ಪಾದದಲ್ಲಿ ;—**

೧) **ಯಮೇ ಇವ ಹ್ಯೇತೇ ಯತಮಾನೇ ಪ್ರಬಾಹುಗಿತಃ ।** (ಐ. ಬ್ರಾ. ೧-೨೯)

ಲೋಕದಲ್ಲಿ ಒಂದೇ ಮಾತೃವಿನ ಉದರದಲ್ಲಿ ಒಟ್ಟಿಗೆ ಜನಿಸಿದ ಅವಳಿ ಕನ್ಯೆಯರು ಯಾವ ರೀತಿ ಒಟ್ಟಿಗೆ ಇರುವರೋ ಅದರಂತೆ ಈ ಶಕಟಗಳೂ ಸಹ ಜಗದುಪಕಾರಾರ್ಥವಾಗಿ ಯಾವಾಗಲೂ ಒಟ್ಟಾಗಿಯೇ ಇರುತ್ತವೆ. ಅವಳಿ ಕನ್ಯೆಯಂತೆ ಇವೆರಡೂ ಸಹ ಒಂದನ್ನೊಂದು ಹೋಲುತ್ತ ಇಬ್ಬರಿಗೂ ಸಮಾನವಾದ ಗುಣಗಳಿಂದ ಶೋಭಿಸುತ್ತಿರುತ್ತವೆ ಯಾದ್ದರಿಂದ **ಯಮೇ ಇವ** ಎಂಬ ಮಂತ್ರಪಠನದಿಂದ ಪ್ರಶಂಸಿಸಲ್ಪಡಬೇಕು, ಎರಡನೆಯ ಪಾದದಲ್ಲಿ;—

೨. **ಪ್ರವಾಂ ಭರನ್ಮಾನುಷಾ ದೇವಯಂತಃ ಇತಿ ದೇವಯಂತೋ ಹ್ಯೇನೇ ಮಾನುಷಾಃ ಪ್ರಭರಂತಿ ।**

ಎಲೈ ಹವಿರ್ಧಾನಗಳೇ, ಯಾವ ನಿಮ್ಮ ಮಾಹಾತ್ಮ್ಯದಿಂದ ಪ್ರಾಣಿಗಳಿಗೆ ಉಪಕಾರಾರ್ಥವಾಗಿ ನೀವು ಪ್ರಯತ್ನಿಸುವಿರೋ, ಅದುದರಿಂದಲೇ, ದೇವಪೂಜಾನಿರತರಾದ ಋತ್ವಿಗ್ಯಜಮಾನರು ನಿಮ್ಮನ್ನು ಅತಿಶಯವಾದ ಭಕ್ತಿಯಿಂದ ಕೂಡಿ ಯಜ್ಞಭೂಮಿಗೆ ಬರಮಾಡಿಕೊಳ್ಳುತ್ತಾರೆ ಎಂಬ ಹವಿರ್ಧಾನಗಳ ಜಗದುಪಕಾರಸ್ವರೂಪವು ಸೂಚಿತವಾಗುತ್ತವೆ. ಮೂರನೆಯದಾಗಿ (ಉತ್ತರಾರ್ಧದಲ್ಲಿ)

೩. **ಆಸೀದತಂ ಸ್ವಮು ಲೋಕಂ ವಿದಾನೇ ಸ್ವಾಸಸ್ಥೇ ಭವತಮಿಂದವೇ ನಃ ಇತಿ ಸೋಮೋ ವೈ ರಾಜೇಂದುಃ ಸೋಮಾಯೈವೈನೇ ಏತದ್ರಾಜ್ಞ ಆಸದೇಽಚೀಕ್ಲೃಪತ್ ॥**

ಎಲೈ ಹವಿರ್ಧಾನಗಳೇ, ನೀವು ಸೋಮರಾಜನಿಗೆ ಅತ್ಯುತ್ತಮವಾದ ಆಸನಗಳಾಗಿದ್ದೀರಿ. ಆದುದರಿಂದ ನೀವು ಯಜ್ಞಭೂಮಿಯಲ್ಲಿ ನಿಮ್ಮ ಸ್ಥಾನಗಳನ್ನರಿತು ಕುಳಿತುಕೊಳ್ಳಿರಿ ಎಂದು ಪ್ರಾರ್ಥಿಸಿದೆ. ಅನಂತರ ಆರನೆಯ ಮಂತ್ರದ ಪಠನವು. ಈ ಕಾಲದಲ್ಲಿ,—

**ಅಧಿ ದ್ವಯೋರದಧಾ ಉಕ್ಥ್ಯಂ ೧ ವಚ ಇತಿ ದ್ವಯೋರ್ಹ್ಯೇತತ್ತೃತೀಯಂ ಛದಿರಧಿ ನಿಧೀಯತೇ ।** (ಐ. ಬ್ರಾ. ೧-೨೯)

ಎಂಬ ಮಂತ್ರವನ್ನು ಪಠಿಸುತ್ತಾನೆ. ಇದು ಮೂರನೆಯ ಹವಿರ್ಧಾನದ ಪ್ರಶಂಸೆಯು. ಮೂರನೆಯ ಹವಿರ್ಧಾನವೆಂದರೆ, ತತ್ತ್ರಿನಿಧಿರೂಪವಾದ ಛದಿಯೆಂದರ್ಥ. ಹವಿರ್ಧಾನದ ಒಳಗಡೆ ಸೋಮನನ್ನು ಪ್ರತಿಷ್ಠಾಪಿಸಲು ಹರಡುವ ಹೊದ್ದಿಕೆಗೆ **ಛದಿ** ಯೆಂದು ಹೆಸರು. ಇಂತಹ ಎರಡು ಛದಿಗಳನ್ನು ಸಹ ಎರಡು ಹವಿರ್ಧಾನಗಳಲ್ಲಿಯೂ ಹರಡಿ ಅವುಗಳ ಮೇಲೆ ಮೂರನೆಯ ಛದಿಯನ್ನು ಹೊದ್ದಿಸಬೇಕು ಅದನ್ನೇ ಮೂರನೆಯ ಹವಿರ್ಧಾನವೆಂದೂ ಕರೆಯುವುದುಂಟು. ಇದನ್ನೇ **ದಂಡೋ ವಾ ಔಪರಸ್ತೃತೀಯಸ್ಯ ಹವಿರ್ಧಾನಸ್ಯ** ಎಂದು ತೈತ್ತಿರೀಯಸಂಹಿತೆಯಲ್ಲಿ ವರ್ಣಿಸಿರುತ್ತದೆ. ಈ ವಾಕ್ಯವನ್ನು ಮೇಲೆ ಉದಾಹರಿಸಿ ವಿವರಿಸಿರುತ್ತ. **ದಂಡೋ ವಾ ಔದುಂಬರಃ** ಎಂಬ ಪಾಠಾಂತರವೂ ಇರುತ್ತದೆ) **ದ್ವಯೋರ್ಹ್ಯೇತತ್ತೃತೀಯಂ ಛದಿರಧಿ ನಿಧೀಯತೇ ।** ಎಂದು ಐತರೇಯ ಬ್ರಾಹ್ಮಣವು ತಿಳಿಸುತ್ತದೆ.

**ಉಕ್ಥ್ಯಂ ವಚ ಇತಿ ಯದಾಹ ಯಜ್ಞಿಯಂ ವೈ ಕರ್ಮೋಕ್ಥ್ಯಂ ವಚೋ ಯಜ್ಞಮೇವೈತೇನ ಸಮರ್ಧಯತಿ ।**

ಎಂದರೆ, ಈ ಮಂತ್ರದ (೧. ೮೩. ೩) ತಾತ್ಪರ್ಯವು ಹೀಗಿರುತ್ತದೆ. ಯಾವ ರೀತಿ ಎರಡು ಹವಿರ್ಧಾನಗಳಿಗೂ ಸಮಾನವಾದ ಒಂದೇ ಛದಿಯು ಹೊದ್ದಿಸಲ್ಪಟ್ಟಿರುವುದೋ ಅದರಂತೆಯೇ, ಎರಡು ಹವಿರ್ಧಾನಗಳಿಗೂ ಸಂಬಂಧಿಸಿದಂತೆ ಒಂದೇ ಸ್ತುತಿಮಂತ್ರವು ಅರ್ಪಿತವಾಗುವುದೆಂದರ್ಥ. ಈ ಮಂತ್ರವು ಯಜ್ಞಕರ್ಮಕ್ಕೆ ಸಾಧನವು. ಈ ಸಾಧನದಿಂದಲೇ ಯಜ್ಞದ ವೃದ್ಧಿಯುಂಟಾಗುತ್ತದೆ.

**ಯತಸ್ರುಚಾ ಮಿಥುನಾ ಯಾ ಸಪರ್ಯತಃ । ಅಸಂಯತ್ತೋ ವ್ರತೇ ತೇ ಕ್ಷೇತಿ ಪುಷ್ಯತೀತಿ ।**
ವಿವಾಹಿತರಾದ ನೂತನ ದಂಪತಿಗಳು ಪೂಜಿತರಾಗುವಂತೆ ಸ್ರುಕ್ಪಾತ್ರೆಗಳಿಂದ ಸಿದ್ಧವಾದ ಈ ಹವಿರ್ಧಾನಗಳು ಪೂಜಿತವಾಗುತ್ತವೆ. ಇಂತಹ ಹವಿರ್ಧಾನಗಳನ್ನು ಯಜ್ಞಕ್ಕಾಗಿ ಸಿದ್ಧವಾಗಿಟ್ಟುಕೊಂಡಿರುವ ಅಧ್ವರ್ಯುವು ಶಾಂತಿಸಮೃದ್ಧನಾಗುತ್ತಾನೆ.

**ಯದೇವಾದಃ ಪೂರ್ವಂ ಯತ್ತವದ್ವದಮಾಹ ತದೇವೈತೇನ ಶಾಂತ್ಯಾ ಶಮಯತಿ ॥**

**ಅಸಂಯತ್ತಃ** ಎಂಬ ಯಾವ ಪದಪ್ರಯೋಗವಿರುವುದೋ ಅದು ಶಾಂತಿಸಮೃದ್ಧಿಯನ್ನು ಸೂಚಿಸುತ್ತದೆ. ಅದರಿಂದ ಯುದ್ಧರಹಿತನಾದವನಾಗಿ ಹೋತೃವೂ (ಯಜಮಾನನೂ, ಮತ್ತು ಅಧ್ವರ್ಯುವೂ) ಯಜ್ಞಕಾರ್ಯವನ್ನು ನಿರ್ವಹಿಸುತ್ತಾನೆಂದರ್ಥ.

**ಭದ್ರಾ ಶಕ್ತಿರ್ಯಜಮಾನಾಯ ಸುನ್ವತ ಇತ್ಯಾಶಿಷಮಾಶಾಸ್ತೇ ॥**

ಸೋಮಾಭಿಷವಕರ್ಮವನ್ನು ಮುಗಿಸಿ ಸೋಮರೂಪವಾದ ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗೆ ಸಕಲ ಸನ್ಮಂಗಳಗಳೂ ಉಂಟಾಗಲಿ ಎಂದು ಆಶಂಸೆಯೂ ಈ ಮಂತ್ರದ ಕೊನೆಯ ಪಾದದಿಂದ ಪಠಿತವಾಗುತ್ತದೆ. ಅನಂತರ, ಏಳನೆಯದಾಗಿ ;—

**ವಿಶ್ವಾರೂಪಾಣಿ ಪ್ರತಿಮುಂಚತೇ ಕವಿರಿತಿ ವಿಶ್ವರೂಪಾಮನ್ವಾಹ ಸ ರರಾಟ್ಯಾಮೀಕ್ಷಮಾಣೋಽನುಬ್ರೂಯಾತ್ । ವಿಶ್ವಮಿವ ಹಿ ರೂಪಂ ರರಾಟ್ಯಾಃ ಶುಕ್ಲಮಿವ ಚ ಕೃಷ್ಣಮಿವ ಚ । ವಿಶ್ವಂ ರೂಪಮವರುಂಧ ಆತ್ಮನೇ ಚ ಯಜಮಾನಾಯ ಚ ಯತ್ರೈವಂ ವಿದ್ವಾನೇತಾಂ ರರಾಟ್ಯಾಮೀಕ್ಷಮಾಣೋಽನ್ವಾಹ ।**

ಅನಂತರ ಹೋತೃವು **ವಿಶ್ವಾ ರೂಪಾಣಿ** ಎಂಬ ಮಂತ್ರವನ್ನು ಪಠಿಸುತ್ತಾನೆ. (ಋ. ಸಂ. ೫-೮೧-೨), ಈ ಮಂತ್ರವನ್ನು **ರರಾಟಿ**ಯನ್ನು ವೀಕ್ಷಿಸುತ್ತ ಪಠಿಸಬೇಕೆಂದು ಹೇಳಿದೆ. ಹವಿರ್ಧಾನಮಂಟಪದ ಪ್ರಾಗ್ಭಾಗದಲ್ಲಿ ಕಟ್ಟಲ್ಪಡಬೇಕಾದ ದರ್ಭಮಾಲೆಗೆ **ರರಾಟಿ** ಯೆಂದು ಹೆಸರು- ಈ ದರ್ಭಮಾಲೆಯು, ಶುಕ್ಲಕೃಷ್ಣ ಇತ್ಯಾದಿ ನಾನಾ ರೂಪಗಳನ್ನು ಪ್ರದರ್ಶಿಸುವುದರಿಂದ ವಿಶ್ವರೂಪವಿರುವ ಈ ಮಾಲೆಯನ್ನು ವೀಕ್ಷಿಸುತ್ತ ಈ ಮಂತ್ರವನ್ನು ಪಠಿಸಿದರೆ, ಪ್ರಜಾ, ಪಶು ಮತ್ತು ಇತರ ಸಂಪತ್ತುಗಳು ಹೀಗೆ ವಿಶ್ವರೂಪವನ್ನುಳ್ಳ ಸಂಪತ್ಸಮೃದ್ಧಿಯನ್ನು ತಾನೂ ಸಂಪಾದಿಸಿ ಯಜಮಾನನಿಗೂ ಒದಗಿಸುವನು. ಆದುದರಿಂದ ಈ ಕರ್ಮವು ವಿಹಿತವಾಗಿವೆ. ಕೊನೆಯಲ್ಲಿ ಎಂಟನೆಯ ಮಂತ್ರವು ಪಠಿತವಾಗುತ್ತದೆ.

**ಪರಿ ತ್ವಾ ಗಿರ್ವಣೋ ಗಿರ ಇತ್ಯುತ್ತಮಯಾ ಪರಿದಧಾತಿ । ಸ ಯದ್ಯೈವಂ ಹವಿರ್ಧಾನೇ ಸಂಪರಿಶ್ರಿತೇ ಮನ್ಯೇತಾಥ ಪರಿದಧ್ಯಾತ್ ।**

**ಪರಿ ತ್ವಾ** (೧-೧೦-೧೨) ಎಂಬ ಮಂತ್ರದಿಂದ ಈ ಕರ್ಮವನ್ನು ಸಮಾಪ್ತಿಗೊಳಿಸುವನು "ಎಲೈ ಸ್ತುತಿಪ್ರಿಯನಾದ ದೇವನೇ, ನಾವು ಮಾಡುವ ಸ್ತುತಿರೂಪವಾದ ಈ ವಾಕ್ಯಗಳು ನಿನ್ನನ್ನು ಸುತ್ತಲೂ ಬಂದು ಸೇರಿ ನಿನಗೆ ಸಂತೋಷ ವನ್ನುಂಟುಮಾಡಲಿ. ಈ ವಾಕ್ಯಗಳು ನಿನಗೆ ಸಂತೋಷವನ್ನುಂಟು ಮಾಡುವುದರಿಂದ ನಿನ್ನ ಆಯುಸ್ಸನ್ನು ವೃದ್ಧಿಪಡಿಸಲಿ ತತ್ಫಲರಾಗಿ ನಮ್ಮ ಆಯುಸ್ಸೂ ವೃದ್ಧಿಯಾಗಿ ನನಗೂ ಸಂತೋಷವುಂಟಾಗಲಿ" ಎಂಬುದೇ ಈ ಮಂತ್ರದ ತಾತ್ಪರ್ಯ. ಹೋತೃವು ಯಾವಾಗ ಹವಿರ್ಧಾನಗಳನ್ನು ಛದಿಯಿಂದ ಪೂರ್ಣವಾಗಿ ಆಚ್ಛಾದನಮಾಡುವನೋ ಆಗ ಈ ಮಂತ್ರವನ್ನು ಪಠಿಸಬೇಕು.

**ಅನಗ್ನಂಭಾವುಕಾ ಹ ಹೋತುಶ್ಚ ಯಜಮಾನಸ್ಯ ಚ ಭಾರ್ಯಾ ಭವಂತಿ ಯತ್ರೈವಂ ವಿದ್ವಾನೇ-ತಯಾ ಹವಿರ್ಧಾನಯೋಃ ಸಂಪರಿಶ್ರಿತಯೋಃ ಪರಿದಧಾತಿ ॥**

ಈ ತತ್ತ್ವವನ್ನರಿತ ಹೋತೃವು, ಹವಿರ್ಧಾನಗಳನ್ನು ಛದಿಯಿಂದ ಹೊದ್ದಿಸಿದ ನಂತರ ಈ ಮಂತ್ರವನ್ನು ಪಠಿಸಿದರೆ, ಅವನ ಮತ್ತು ಯಜಮಾನನ ಪತ್ನಿಯರೂ ಸಹ ನಗ್ನತ್ವವನ್ನನುಭವಿಸದೆ ಸಕಲ ವಿಧವಾದ ವಸ್ತ್ರಗಳಿಂದಲೂ ಆಚ್ಛಾದಿತರೂ ಅಲಂಕೃತರೂ ಆಗುತ್ತಾರೆ.

**ಯಜುಷಾ ವಾ ಏತೇ ಸಂಪರಿಶ್ರಿಯೇತೇ ಯದ್ಧವಿರ್ಧಾನೇ ಯಜುಷೈವೇನೇ ಏತತ್ಪರಿಶ್ರಯಂತಿ। ತೌ ಯದ್ಯೈವಾಧ್ವರ್ಯುಶ್ಚ ಪ್ರತಿಪ್ರಸ್ಥಾತಾ ಚೋಭಯತೋ ಮೇಥ್ಯೌ ನಿಹನ್ಯಾತಾಮಥ ಪರಿದಧ್ಯಾತ್ । ಅತ್ರ ಹಿ ತೇ ಸಂಪರಿಶ್ರಿತೇ ಭವತಃ ॥**

**ದಿವೋ** ವಾ ವಿಷ್ಣವುತ (ತೈ. ಸಂ- ೧-೨.೧೩) ಎಂಬ ಯಜುರ್ಮಂತ್ರವನ್ನು ಪಠಿಸಿ ಹವಿರ್ಧಾನಗಳನ್ನು ಹೊದ್ದಿಸತಕ್ಕದ್ದು. ಹಾಗೆಯೇ, ಆ ಯಜುರ್ಮಂತ್ರವನ್ನೇ ಪಠಿಸಿ ಹೊದ್ದಿಸುತ್ತಾರೆ. ಮೇಲೆ ವಿವರಿಸಿರುವಂತೆ, ಯಾವಾಗ ಅಧ್ವರ್ಯುವೂ ಮತ್ತು ಪ್ರತಿಪ್ರಸ್ಥಾತೃವೂ ಸಹ ಎರಡು ಭಾಗಗಳ **ಮೇಥಿ** ಗಳನ್ನೂ (ಕರ್ಣರೂಪವಾದ ದ್ವಾರಸ್ತಂಭಗಳು) ಮುಟ್ಟುವರೋ ಆಗ ಈ ಆಚ್ಛಾದನ ಕರ್ಮವು ನೆರವೇರುತ್ತದೆ.

**ತಾ ಏತಾ ಅಷ್ಟಾವನ್ವಾಹ ರೂಪಸಮೃದ್ಧಾ ಏತದ್ವೈಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ ತಾಸಾಂ ತ್ರಿಃ ಪ್ರಥಮಾಮನ್ವಾಹ ತ್ರಿರುತ್ತ-ಮಾಂ ತಾ ದ್ವಾದಶ ಸಂಪದ್ಯಂತೇ ದ್ವಾದಶ ವೈ ಮಾಸಾಃ ಸಂವತ್ಸರಃ ಸಂವತ್ಸರಃ ಪ್ರಜಾಪತಿಃ ಪ್ರಜಾಪತ್ಯಾಯತನಾಭಿರೇವಾಭೀ ರಾಧ್ನೋತಿ ಯ ಏವಂ ವೇದ ತ್ರಿಃ ಪ್ರಥಮಾಂ ತ್ರಿರುತ್ತ-ಮಾಮನ್ವಾಹ ಯಜ್ಞಸ್ಯೈವ ತದ್ಬರ್ಸೌ ನಹ್ಯತಿ ಸ್ಥೇಮ್ನೇ ಬಲಾಯಾವಿಸ್ರಂಸಾಯ ॥**

(ಐ. ಬ್ರಾ. ೧. ೨೯)

ರೂಪಸಮೃದ್ಧಿಯಿಂದ ಕೂಡಿದ ಎಂಟು ಮಂತ್ರಗಳನ್ನು ಹೋತೃವು ಈ ಹವಿರ್ಧಾನ ಪೂಜಾಕಾಲದಲ್ಲಿ ಪಠಿಸುತ್ತಾನೆ. ರೂಪಸಮೃದ್ಧಿ ಎಂದರೆ ನೆರವೇರಿಸಲ್ಪಡುವ ಕರ್ಮಕ್ಕೆ ಅನುಸಾರವಾದ ಅರ್ಥವುಳ್ಳ ಮಂತ್ರಗಳನ್ನು ಪಠಿಸುವುದು ಎಂದರ್ಥವು. ಇಂತಹ ರೂಪಸಮೃದ್ಧಿಯಿಂದ ಆಚರಿಸಿದ ಕರ್ಮವು ಮಾತ್ರ ಸಂಪೂರ್ಣತೆಯನ್ನು ಪಡೆಯುತ್ತದೆ. ಈ ಎಂಟು ಮಂತ್ರಗಳಲ್ಲಿ ಮೊದಲನೆಯದನ್ನು ಮೂರು ಸಲವೂ ಕೊನೆಯದನ್ನು ಮೂರು ಸಲವೂ ಪಠಿಸುವನು. ಎಂದರೆ ಒಟ್ಟಿಗೆ ಹನ್ನೆರಡು ಸಂಖ್ಯೆಗಳುಳ್ಳವಾದವು. ಸಂವತ್ಸರವು ಮಾಸಾತ್ಮಕವಾದಹನ್ನೆರಡು ಅವಯವಗಳುಳ್ಳ

ವಾಗಿರುತ್ತಾನೆ. ಪ್ರಜಾಪತಿಯೇ ಈ ಸಂವತ್ಸರರೂಪನು. ಈ ತತ್ತ್ವವನ್ನರಿತವನು ಪ್ರಜಾಪತಿಯ ಉತ್ತಮವಾದ ಸಂವತ್ಸರಾತ್ಮಕವಾದವೂ ಮಾಸರೂಪವಾದವೂ ಆದ ಗೃಹಗಳಲ್ಲಿ ವಾಸಿಸುತ್ತಾನೆ. (ಸಕಲಕಾಲಗಳಲ್ಲಿಯೂ ಸುಖವನ್ನು ಹೊಂದುತ್ತಾನೆ). ಈ ರೀತಿ ಮೊದಲನೆಯ ಮಂತ್ರವನ್ನು ಮೂರು ಸಲವೂ ಕೊನೆಯ ಮಂತ್ರವನ್ನು ಮೂರು ಸಲವೂ ಪಠಿಸುವುದರಿಂದ ಈ ಯಜ್ಞವನ್ನು ಬಿಚ್ಚಿಹೋಗದಂತೆ ಭದ್ರವಾಗಿ ಗಂಟುಹಾಕಿ ಕಟ್ಟಿದಂತಾಗುತ್ತದೆ. ಈಭದ್ರವಾದ ಗಂಟು ಯಜಮಾನಾದಿಗಳ ಜೀವನದಲ್ಲಿ ಭದ್ರತೆಗೂ, ಸಂಪತ್ಸಮೃದ್ಧಿಗೂ, ಅಕುಂಠಿತವಾದ ಬೆಳೆವಣಿಗೆಗೂ ಸಹಾಯವಾಡುತ್ತದೆ.

॥ ಸಾಯಣಭಾಷ್ಯಂ ॥

**ಯುಜೇ ವಾಮಿತಿ ಪಂಚರ್ಚಂ ತ್ರಯೋದಶಂ ಸೂಕ್ತಂ । ಆದಿತೇಃ ಪುತ್ರಸ್ಯ ವಿವಸ್ವತ ಆರ್ಷಂ ಹವಿರ್ಧಾನಾಖ್ಯೇ ಯೇ ದ್ವೇ ಶಕಟೇ ತದ್ದೇವತ್ಯಮಿದಂ । ಅಂತ್ಯಾ ಜಗತೀ ಶಿಷ್ಟಾಸ್ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ಯುಜೇ ಪಂಚ ವಿವಸ್ವಾನಾದಿತ್ಯೋ ಹಾವಿರ್ಧಾನಂ ಜಗತ್ಯಂತಮಿತಿ ॥ ಗತಃ ಸೂಕ್ತ-ವಿನಿಯೋಗಃ ॥ ಹವಿರ್ಧಾನಪ್ರವರ್ತನೇ ಯುಜೇ ವಾಮಿತ್ಯೇಕಾ । ಸೂತ್ರಿತಂ ಚ । ಅಂತರಾ ವರ್ತ್ಮ-ಪಾದಯೋರ್ಯುಜೇ ವಾಂ ಬ್ರಹ್ಮ ಪೂರ್ವ್ಯಂ ನಮೋಭಿಃ । ಆ. ೪-೯ ॥ ಇತಿ ॥**

ಅನುವಾದವು—**ಯುಜೇ ವಾಂ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅದಿತಿಪುತ್ರನಾದ ವಿವಸ್ವಾನ್ ಎಂಬುವನು ಋಷಿಯು. ಹವಿರ್ಧಾನವೆಂದು ಪ್ರಸಿದ್ಧವಾದ ಯಜ್ಞಾದಿಗಳಲ್ಲಿ ಸೋಮಲತೆಗಳನ್ನು ತರುವ ಎರಡು ಗಾಡಿಗಳೇ ಈ ಸೂಕ್ತದ ದೇವತೆಯು; ಈ ಸೂಕ್ತದ ಕೊನೆಯ ಋಕ್ಕು ಜಗತೀಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಯುಜೇ ಪಂಚ ವಿವಸ್ವಾನಾದಿತ್ಯೋ ಹಾವಿರ್ಧಾನಂ ಜಗತ್ಯಂತಂ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಹವಿರ್ಧಾನಪ್ರವರ್ತನಕರ್ಮದಲ್ಲಿ **ಯುಜೇ ವಾಂ** ಎಂಬ ಮೊದಲನೆಯ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಂತರಾ ವರ್ತ್ಮ ಪಾದಯೋರ್ಯುಜೇ ವಾಂ ಬ್ರಹ್ಮ ಪೂರ್ವ್ಯಂ ನಮೋಭಿಃ** ಎಂಬ ಸೂತ್ರದಿಂದ (ಆ. ೪-೯) ವಿವೃತವಾಗಿರುವುದು.

## ಸೂಕ್ತ—೧೩

ಮಂಡಲ—೧೦ ॥ ಅನುವಾಕ—೧ ॥ ಸೂಕ್ತ—೧೩ ॥
ಅಷ್ಟಕ—೭ ॥ ಅಧ್ಯಾಯ ೬ ॥ ವರ್ಗ—೧೩ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ವಿವಸ್ವಾನಾದಿತ್ಯಃ ॥
ದೇವತಾ—ಹವಿರ್ಧಾನೇ ॥
ಛಂದಃ—೧-೪. ತ್ರಿಷ್ಟುಪ್ । ೫. ಜಗತೀ ॥

॥ ಸಂಹಿತಾಪಾಠಃ ॥

**ಯುಜೇ ವಾಂ ಬ್ರಹ್ಮ ಪೂರ್ವ್ಯಂ ನಮೋಭಿರ್ವಿ ಶ್ಲೋಕ ಏತು ಪಥ್ಯೇವ ಸೂರೇಃ ।**

**ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾ ಆ ಯೇ ಧಾಮಾನಿ ದಿವ್ಯಾನಿ ತಸ್ಥುಃ ॥**

॥ ಪದಪಾಠಃ ॥

ಯುಜೇ । ವಾಂ । ಬ್ರಹ್ಮ । ಪೂರ್ವ್ಯಂ । ನಮಃಽಭಿಃ । ವಿ । ಶ್ಲೋಕಃ । ಏತು । ಪಥ್ಯಾಽಇವ । ಸೂರೇಃ ।

ಶೃಣ್ವಂತು । ವಿಶ್ವೇ । ಅಮೃತಸ್ಯ । ಪುತ್ರಾಃ । ಆ । ಯೇ । ಧಾಮಾನಿ । ದಿವ್ಯಾನಿ । ತಸ್ಥುಃ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಹವಿರ್ಧಾನಶಕಟೇ ವಾಂ ಯುವಾಮುಹಂ ಪೂರ್ವ್ಯಂ ಪೂರ್ವಸ್ಮಿನ್ಕಾಲೇ ಭವಂ । ಅನಾದಿಕಾಲಪ್ರವೃತ್ತಮಿತ್ಯರ್ಥಃ । ಏವಂಭೂತಂ ಬ್ರಹ್ಮ ಮಂತ್ರಂ । ಉಚ್ಚಾರ್ಯೇತಿ ಶೇಷಃ । ನಮೋಭಿಃ ಸೋಮಾದಿಹವಿರ್ಲಕ್ಷಣೈರನ್ನೈರ್ಯುಜೇ । ಯುನಜ್ಮಿ । ಯುವಯೋರುಪರಿ ಸೋಮಾದಿಕಮಾರೋಪ್ಯ ಪತ್ನೀಶಾಲಾತೋ ಹವಿರ್ಧಾನಂ ಪ್ರತಿ ಯುವಾಂ ನಯಾಮೀತ್ಯರ್ಥಃ । ಏವಂಭೂತಯೋರ್ಯುವಯೋಃ ಶ್ಲೋಕಃ ಶಬ್ದೋ ವ್ಯೇತು । ವಿಶ್ವಾನ್ದೇವಾನ್ಪ್ರತಿ ವಿವಿಧಂ ಗಚ್ಛತಾಂ । ತತ್ರ ದೃಷ್ಟಾಂತಃ । ಪಥ್ಯೇವ ಸೂರೇಃ ಯಥಾ ಸ್ತೋತುಃ ಸ್ವಭೂತಾ ಪಥ್ಯಾ ಪರಿಣಾಮಸುಖಾವಹಾಹುತಿರ್ವಿಶ್ವಾನ್ದೇವಾನ್ಪ್ರತಿ ವಿವಿಧಂ ಗಚ್ಛತಿ ತದ್ವತ್ । ಅಮೃತಸ್ಯಾಮರಣಧರ್ಮಣಃ ಪ್ರಜಾಪತೇಃ ಪುತ್ರಾ ವಿಶ್ವೇ ದೇವಾ ಏವಂಭೂತಂ ಶಬ್ದಂ ಶೃಣ್ವಂತು ಯೇ ದೇವಾ ದಿವ್ಯಾನಿ ದಿವಿ ಭವಾನಿ ಧಾಮಾನಿ ಸ್ಥಾನಾನ್ಯಾ ತಸ್ಥುಃ ಅಧಿಷ್ಠಿತವಂತಃ । ತೇ ಶೃಣ್ವಂತ್ವಿತ್ಯರ್ಥಃ ॥**

॥ ಪ್ರತಿಪದಾರ್ಥ ॥

(ಎಲೈ ಶಕಟಗಳೇ) **ವಾಂ**—ನಿಮ್ಮನ್ನು ಉದ್ದೇಶಿಸಿ । **ಪೂರ್ವ್ಯಂ**—ಪುರಾತನವಾದ । **ಬ್ರಹ್ಮ**—ಸ್ತೋತ್ರವನ್ನು ಪಠಿಸುತ್ತ । **ನಮೋಭಿಃ**—ಹವಿಸ್ಸುಗಳಿಂದ । **ಯುಜೇ**—ನಿಮ್ಮನ್ನು ತುಂಬುತ್ತೇನೆ । **ಸೂರೇಃ**—ಋಷಿಯ । **ಪಥ್ಯೇವ**—ಸ್ತುತಿಯು ನಾನಾ ದಿಕ್ಕುಗಳನ್ನು ಆಶ್ರಯಿಸಿ ದೇವತೆಗಳಲ್ಲಿ ಸೇರುವಂತೆ । **ಶ್ಲೋಕಃ**—ನಿಮ್ಮ ಶಬ್ದವು । **ವಿ ಏತು**—ಸಕಲ ದೇವತೆಗಳಿಗೂ ಹೋಗಿ ಸೇರಲಿ । **ಯೇ**—ಯಾವ ದೇವತೆಗಳು । **ದಿವ್ಯಾನಿ**—ದ್ಯುಲೋಕಸಂಬಂಧಿಯಾದ । **ಧಾಮಾನಿ**—ಸ್ಥಾನಗಳನ್ನು । **ಆ ತಸ್ಥುಃ**—ಆಶ್ರಯಿಸಿದ್ದಾರೆಯೋ ಅಂತಹವರೂ । **ಅಮೃತಸ್ಯ**—ಮರಣಧರ್ಮರಹಿತನಾದ ಪ್ರಜಾಪತಿಯ । **ಪುತ್ರಾಃ**—ಪುತ್ರರೂ ಆದ । **ವಿಶ್ವೇ**—ಸಕಲ ದೇವತೆಗಳೂ । **ಶೃಣ್ವಂತು**—ನಿಮ್ಮ ಶಬ್ದಗಳನ್ನು ಕೇಳಲಿ.

॥ ಭಾವಾರ್ಥ ॥

ಎಲೈ ಶಕಟಗಳೇ, ನಿಮ್ಮನ್ನು ಉದ್ದೇಶಿಸಿ ಪುರಾತನವಾದ ಸ್ತೋತ್ರವನ್ನು ಪಠಿಸುತ್ತಾ ಹವಿಸ್ಸುಗಳಿಂದ ನಿಮ್ಮನ್ನು ತುಂಬುತ್ತೇನೆ. ಋಷಿಯ ಸ್ತುತಿಯು ನಾನಾ ದಿಕ್ಕುಗಳನ್ನೂ ಆಶ್ರಯಿಸಿ ದೇವತೆಗಳಲ್ಲಿ ಸೇರುವಂತೆ ನಿಮ್ಮ ಶಬ್ದವು ಸಕಲ ದೇವತೆಗಳಿಗೂ ಹೋಗಿ ಸೇರಲಿ. ಯಾವ ದೇವತೆಗಳು ದ್ಯುಲೋಕಸಂಬಂಧಿಯಾದ ಸ್ಥಾನಗಳನ್ನು ಆಶ್ರಯಿಸಿದ್ದಾರೆಯೋ ಅಂತಹವರೂ, ಮರಣಧರ್ಮರಹಿತನಾದ ಪ್ರಜಾಪತಿಯ ಪುತ್ರರೂ ಆದ ಸಕಲ ದೇವತೆಗಳೂ ನಿಮ್ಮ ಶಬ್ದಗಳನ್ನು ಕೇಳಲಿ.

## English Translation

I load you two with sacred offerings, repeating an ancient prayer; may the sound (of your approach) reach (the gods) like the path of the worshipper, may all the sons of the immortal (Prajapati) who inhabit the celestial regions hear (the sound).

॥ ಸಂಹಿತಾಪಾಠಃ ॥

ಯಮೇ ಇವ ಯತಮಾನೇ ಯದೈತಂ ಪ್ರ ವಾಂ ಭರನ್ಮಾನುಷಾ ದೇವಯಂತಃ ।
ಆ ಸೀದತಂ ಸ್ವಮು ಲೋಕಂ ವಿದಾನೇ ಸ್ವಾಸಸ್ಥೇ ಭವತಮಿಂದವೇ ನಃ ॥೨॥

॥ ಪದಪಾಠಃ ॥

ಯಮೇ ಇವೇತಿ ಯಮೇಽಇವ । ಯತಮಾನೇ ಇತಿ । ಯತ್ । ಐತಂ । ಪ್ರ । ವಾಂ । ಭರತ್ ಮಾನುಷಾಃ । ದೇವಽಯಂತಃ ।
ಆ । ಸೀದತಂ । ಸ್ವಂ । ಊಂ ಇತಿ । ಲೋಕಂ । ವಿದಾನೇ ಇತಿ । ಸ್ವಾಸಸ್ಥೇ ಇತಿ ಸುಽಆಸಸ್ಥೇ । ಭವತಂ । ಇಂದವೇ । ನಃ ॥ ೨ ॥

॥ ಸಾಯಣಭಾಷ್ಯಂ ॥

ಅತ್ರೈವ ಹವಿರ್ಧಾನಪ್ರವರ್ತನೇ ಯಮೇ ಇವ ಇತ್ಯೇಷಾ । ಸೂತ್ರಿತಂ ಚ । ಯಮೇ ಇವ ಯತಮಾನೇ ಯದೈತಮಧಿದ್ವಯೋರದಧಾ ಉಕ್ಥ್ಯಂ ವಚ ಇತ್ಯರ್ಧರ್ಚ ಆರಮೇತ್ । ಆ. ೪-೯ । ಇತಿ॥

ಯಮೇ ಇವ ಯಥಾ ಸಹೋತ್ಪನ್ನೇ ಅಪತ್ಯೇ ಸಂಚರತಃ ತಥಾ ಯತಮಾನೇ ಗಮನಹವಿರ್ಧಾರಣಾದಿಸ್ವಾಧಿಕಾರಕರ್ಮಣಿ ಪ್ರವರ್ತಮಾನೇ ಹವಿರ್ಧಾನಶಕಟೇ ಯುವಾಂ ಯದ್ಯದೈತಂ ಹವಿರ್ಧಾನಸ್ಥಾನಂ ಪ್ರತಿಗಚ್ಛತಃ ತದಾ ದೇವಯಂತೋ ದೇವಕಾಮಾ ಮಾನುಷಾ ಯಜಮಾನಾ ವಾಂ ಯುವಾಂ ಪ್ರ ಭರನ್ । ಪ್ರಭರಂತಿ । ಕಿಂಚ ಯುವಾಂ ಸ್ವಮು ಲೋಕಮಾತ್ಮೀಯಮೇವ ಹವಿರ್ಧಾನಾಖ್ಯಂ ಸ್ಥಾನಂ ವಿದಾನೇ ಜಾನತೀ ಆ ಸೀದತಂ । ತತೋ ನೋಽಸ್ಮಾಕಮಿಂದವೇ ಸೋಮಾರ್ಥಂ ಸ್ವಾಸಸ್ಥೇ ಶೋಭನನಿವಾಸಸ್ಥಾನೇ ಭವತಂ ॥

॥ ಪ್ರತಿಪದಾರ್ಥ ॥

**ಯಮೇ ಇವ**—ಒಟ್ಟಿಗೆ ಹುಟ್ಟಿದ ಅವಳಿಮಕ್ಕಳಂತೆ । **ಯತಮಾನೇ**—ಒಟ್ಟಿಗೆ ದೇವಕಾರ್ಯದಲ್ಲಿ ನಿರತ ರಾದ ಎತ್ತಿನ ಶಕಟಗಳೇ । **ಯತ್**—ಯಾವಾಗ । **ಐತಂ**—ನೀವು ಹವಿರ್ಧಾನಸ್ಥಾನಕ್ಕೆ ಬರುವಿರೋ ಆಗ । **ದೇವಯಂತಃ**—ದೇವಪೂಜಾನಿರತರಾದ । **ಮಾನುಷಾಃ**—ಯಜಮಾನರು । **ವಾಂ**—ನಿಮ್ಮನ್ನು । **ಪ್ರ ಭರನ್**—ಅತಿಶಯವಾಗಿ ಹೊಂದುತ್ತಾರೆ । **ಸ್ವ ಮು ಲೋಕಂ**—ನಿಮ್ಮದೇ ಆದ ಹವಿರ್ಧಾನಸ್ಥಾನವನ್ನು । **ವಿದಾನೇ**—ನಿರ್ಮಿಸಿಕೊಳ್ಳುತ್ತ । **ಆ ಸೀದತಂ**—ಅದನ್ನು ಆಶ್ರಯಿಸಿರಿ । **ನಃ**—ನಮ್ಮ । **ಇಂದವೇ**—ಸೋಮಕ್ಕೆ । **ಸ್ವಾಸಸ್ಥೇ**—ಉತ್ತಮವಾದ ನಿವಾಸಸ್ಥಾನವನ್ನು । **ಭವತಂ**—ಆಗಿರಿ.

॥ ಭಾವಾರ್ಥ ॥

ಒಟ್ಟಿಗೆ ಹುಟ್ಟಿದ ಅವಳಿಮಕ್ಕಳಂತೆ ಒಟ್ಟಿಗೆ ದೇವಕಾರ್ಯದಲ್ಲಿ ನಿರತರಾದ ಎತ್ತಿನ ಶಕಟಗಳೇ, ಯಾವಾಗ ನೀವು ಹವಿರ್ಧಾನಸ್ಥಾನಕ್ಕೆ ಬರುವಿರೋ ಆಗ ದೇವಪೂಜಾನಿರತರಾದ ಯಜಮಾನರು ನಿಮ್ಮನ್ನು ಅತಿಶಯವಾಗಿ ಧರಮಾಡಿಕೊಳ್ಳುತ್ತಾರೆ. ನೀವು ನಿಮ್ಮ ಸ್ವಂತವಾದ ಹವಿರ್ಧಾನಸ್ಥಾನವನ್ನು ಆಶ್ರಯಿಸಿರಿ. ನಿಮ್ಮ ಸೋಮಕ್ಕೆ ಉತ್ತಮವಾದ ನಿವಾಸಸ್ಥಾನವನ್ನುಂಟುಮಾಡುವವರಾಗಿರಿ.

## English Translation

When you two came, like twins, busily engaged, then devout worshippers brought you forward: knowing your place there abide and be fair storehouses for our Soma.

॥ ವಿಶೇಷವಿಷಯಗಳು ॥

ಹವಿರ್ಧಾನಪ್ರವರ್ತನವೆಂಬ ಕರ್ಮದಲ್ಲಿ **ಯಮೇ ಇವ**—ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯಮೇ ಇವ ಯತಮಾನೇ ಯದೈತಮಿತಿ ದ್ವಯೋರದಧಾ ಉಕ್ಥ್ಯಂ ವಚ ತೃರ್ಧರ್ಚ ಆರಮೇತ್** ಎಂಬ ಸೂತ್ರದಿಂದ (ಆ. ೪-೯) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಪಂಚ ಪದಾನಿ ರುಪೋ ಅನ್ವರೋಹಂ ಚತುಷ್ಪದೀಮನ್ವೇಮಿ ವ್ರತೇನ ।
ಅಕ್ಷರೇಣ ಪ್ರತಿ ಮಿಮ ಏತಾಮೃತಸ್ಯ ನಾಭಾವಧಿ ಸಂ ಪುನಾಮಿ ॥ ೩ ॥

ಪದಪಾಠಃ

ಪಂಚ । ಪದಾನಿ । ರುಪಃ । ಅನು । ಆರೋಹಂ । ಚತುಃಽಪದೀಂ । ಅನು । ಏಮಿ । ವ್ರತೇನ ।
ಅಕ್ಷರೇಣ । ಪ್ರತಿ । ಮಿಮೇ । ಏತಾಂ । ಋತಸ್ಯ । ನಾಭೌ । ಅಧಿ । ಸಂ । ಪುನಾಮಿ ॥ ೩ ॥

॥ ಸಾಯಣಭಾಷ್ಯಂ ॥

ರುಪೋ ಯುಷ್ಟ್ರಾಣಾಂ ಸ್ವರ್ಗಮಾರೋಪಯಿತುರ್ಯಜ್ಞಸ್ಯಾಂಗತ್ವೇನ ಸಂಬಂಧೀನಿ ಪಂಚ-ಸಂಖ್ಯಾಕಾನಿ ಧಾನಾಸೋಮಪಶುಪುರೋಡಾಶಾಜ್ಯಾಖ್ಯಾನಿ ಪದಾನಿ ವೃಷ್ಟಿಹೇತುತ್ವೇನ ದೇವಾನ್ಪ್ರತಿ ಗಂತ್ರ್ಯಾಣಿ ಹವೀಂಷ್ಯನ್ವರೋಹಂ। ಅನುರೋಹಾಮಿ। ಶಕಟೇಯೋಃ ಸ್ಥಾಪನವಹನಾನಂತರಂ ಕರಣಂ ಕರೋಮೀತ್ಯರ್ಥಃ। ಕಿಂಚ ಚತುಷ್ಪದೀಂ ಚತುರ್ಭಿಃ ಪಾದೈರ್ಯುಕ್ತಾಂ ತ್ರಿಷ್ಟುಬಾದಿಚ್ಛಂದಸಂ ಕ್ರಿಯಾಂ ವ್ರತೇನ ಪ್ರಯೋಗಕರ್ಮಣಾನ್ವೇಮಿ। ಅನುಗಚ್ಛಾಮಿ। ಯಥಾಕಾಲಂ ಪ್ರಯುನಜ್ಮೀತ್ಯರ್ಥಃ। ಅಕ್ಷರೇಣ ಪ್ರಣವಾಖ್ಯೇನೈತಾಮುಪಸ್ಥಿತಾಂ ಪ್ರತಿಗರಕ್ರಿಯಾಂ ಪ್ರತಿ ಮಿಮೇ। ನಿರ್ಮಮೇ। ಅಪಿ ಚರ್ತಸ್ಯ ಯಜ್ಞಸ್ಯ। ಅಧೀತಿ ಸಪ್ತಮ್ಯರ್ಥಾನುವಾದೀ। ನಾಭೌ ನಾಭಿಭೂತೇ ವೇದ್ಯಾಖ್ಯೇ ಸ್ಥಾನೇ ಸಂ ಪುನಾಮಿ। ಸಂಶೋಧಯಾಮಿ। ದಶಾಪವಿತ್ರೇಣ ಸೋಮಂ ಸಂಸ್ಕರೋಮೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಶಕಟಗಳೇ) **ರುಪಃ**—ಯಜ್ಞಸಂಬಂಧಿಗಳಾದ। **ಪಂಚ ಪದಾನಿ**—ಧಾನ, ಸೋಮ, ಪಶು, ಪುರೋಡಾಶ, ಆಜ್ಯ ಎಂಬ ಐದುವಿಧವಾದ ಹವಿಸ್ಸುಗಳನ್ನೂ। **ಅನ್ವರೋಹಮ್**—ನಿಮ್ಮಿಂದ ವಹಿಸುವಂತೆ ಮಾಡುತ್ತೇನೆ। **ಚತುಷ್ಪದೀಂ**—ನಾಲ್ಕು ಪಾದಗಳಿಂದ ಕೂಡಿದ (ಛಂದೋಯುಕ್ತವಾದ) ಸ್ತುತಿಗಳನ್ನೂ। **ವ್ರತೇನ**—ವಿಧ್ಯುಕ್ತವಾದ ಕರ್ಮಗಳೊಡನೆ। **ಅನ್ವೇಮಿ**—ಕಾಲಾನುಗುಣವಾಗಿ ಪ್ರಯೋಗಿಸುತ್ತೇನೆ। **ಅಕ್ಷರೇಣ**—ಪ್ರಣವರೂಪವಾದ್ಯ ಅಕ್ಷರದಿಂದ। **ಏತಾಂ**—ಈ ಪ್ರತಿಗರಸಂಜ್ಞಕವಾದ ಕ್ರಿಯೆಯನ್ನು। **ಪ್ರತಿ ಮಿಮೇ**—ನಿರ್ಮಿಸುತ್ತೇನೆ। **ಋತಸ್ಯ ಅಧಿ**—ಯಜ್ಞದಲ್ಲಿ। **ನಾಭೌ**—ನಾಭಿರೂಪವಾದ ವೇದಿಯಲ್ಲಿ। **ಸಂ ಪುನಾಮಿ**—ಸೋಮವನ್ನು ಸಂಸ್ಕರಿಸುತ್ತೇನೆ.

॥ ಭಾವಾರ್ಥ ॥

ಎಲೈ ಶಕಟಗಳೇ, ಯಜ್ಞಸಂಬಂಧಿಗಳಾದ ಧಾನ, ಸೋಮ, ಪಶು, ಪುರೋಡಾಶ, ಆಜ್ಯ ಎಂಬ ಐದು ವಿಧವಾದ ಹವಿಸ್ಸುಗಳನ್ನೂ ನಿಮ್ಮಿಂದ ವಹಿಸುವಂತೆ ಮಾಡುತ್ತೇನೆ. ನಾಲ್ಕು ಪಾದಗಳಿಂದ ಕೂಡಿದ (ಛಂದೋಬದ್ಧವಾದ ಸ್ತುತಿಗಳನ್ನೂ ವಿಧ್ಯುಕ್ತವಾದ ಕರ್ಮಗಳೊಡನೆ ಕಾಲಾನುಗುಣವಾಗಿ ಪ್ರಯೋಗಿಸುತ್ತೇನೆ. ಪ್ರಣವರೂಪವಾದ ಅಕ್ಷರದಿಂದ ಈ ಪ್ರತಿಗರಸಂಜ್ಞಕವಾದ ಕ್ರಿಯೆಯನ್ನು ನಿರ್ಮಿಸುತ್ತೇನೆ. ಯಜ್ಞದಲ್ಲಿ ನಾಭಿರೂಪವಾದ ವೇದಿಯಲ್ಲಿ ಸೋಮವನ್ನು ಸಂಸ್ಕರಿಸುತ್ತೇನೆ.

English Translation

I make the five stages of the sacrifice ascend; I take four steps by pious observances; with the sacred syllable, I perfect this (adoration); I purify (the Soma) on the navel of the sacrifice.

॥ ಸಂಹಿತಾಪಾಠಃ ॥

ದೇವೇಭ್ಯಃ ಕಮವೃಣೀತ ಮೃತ್ಯುಂ ಪ್ರಜಾಯೈ ಕಮಮೃತಂ ನಾವೃಣೀತ ।
ಬೃಹಸ್ಪತಿಂ ಯಜ್ಞಮಕೃಣ್ವತ ಋಷಿಂ ಪ್ರಿಯಾಂ ಯಮಸ್ತನ್ವಂ೧ ಪ್ರಾರಿ-ರೇಚೀತ್ ॥ ೪ ॥

॥ ಪದಪಾಠಃ ॥

ದೇವೇಭ್ಯಃ । ಕಂ । ಅವೃಣೀತ । ಮೃತ್ಯುಂ । ಪ್ರಽಜಾಯೈ । ಕಂ । ಅಮೃತಂ । ನ । ಅವೃಣೀತ । ಬೃಹಸ್ಪತಿಂ । ಯಜ್ಞಂ । ಅಕೃಣ್ವತ । ಋಷಿಂ । ಪ್ರಿಯಾಂ । ಯಮಃ । ತನ್ವಂ । ಪ್ರ । ಆರಿರೇಚೀತ್ ॥೪॥

॥ ಸಾಯಣಭಾಷ್ಯಂ ॥

ದೇವೇಭ್ಯೋ ದೇವಾನಾಂ ಮೃತ್ಯುಂ ಮಾರಯಿತಾರಂ ಕಂ ಸ್ವಪುರುಷಮವೃಣೀತ । ಪ್ರಾರ್ಥಯತೇ । ಪ್ರಯುಂಕ್ತೇ । ಕಿಂಚ ಪ್ರಜಾಯೈ ದೇವವ್ಯತಿರಿಕ್ತಾಯಾ ಮನುಷ್ಯಾದಿಕಾಯಾಃ ಪ್ರಜಾಯಾ ಅಮೃತಮಮಾರಕಮವಿನಾಶಕಂ ಕಂ ವಾ ಸ್ವಪುರುಷಂ ನಾವೃಣೀತ । ನ ಪ್ರಯುಂಕ್ತೇ । ಹವಿರ್ಧಾರಣಕ್ರಿಯಾಯಾಂ ಪ್ರವೃತ್ತಾಯಾಂ ಸತ್ಯಾಂ ಪೂರ್ವೋಕ್ತಾನಾಂ ಸರ್ವೇಷಾಂ ಸ್ಥಿತೇರವಶ್ಯಂಭಾವಿತ್ವಾನ್ನ ಕಂಚಿದಪಿ ವಿನಾಶಕಂ ಸ್ವಪುರುಷಂ ಯಮೋ ನಿರೂಪಯತೀತ್ಯರ್ಥಃ । ಅಪಿ ಚ ಬೃಹಸ್ಪತಿಂ ಬೃಹತಾಂ ದೇವಾನಾಂ ಹವಿರ್ಧಾರಣೇ ಪಾಲಕಂ ಬೃಹತಾಂ ಮಂತ್ರಾಣಾಂ ಸ್ವಾಮಿನಂ ಋಷಿಂ ಸರ್ವಸ್ಯ ದೃಷ್ಟಾದೃಷ್ಟಫಲಸ್ಯ ದ್ರಷ್ಟಾರಂ ಯಜ್ಞಮಕೃಣ್ವತ । ಋತ್ವಿಗ್ಯಜಮಾನಾಃ ಕುರ್ವಂತಿ । ಅಪಿ ಚ ಯಮಃ ಪ್ರಿಯಾಂ ತನ್ವಮಸ್ಮದೀಯಮಿಷ್ಟಂ ಶರೀರಂ ಪ್ರಾರಿರೇಚೀತ್ । ಧಾತೂನಾಮನೇಕಾರ್ಥತ್ವಾದ್ರಿಚಿರತ್ರ ಪರಿಹಾರಾರ್ಥೇ ವರ್ತತೇ । ಪ್ರರೇಚಯತಿ । ಮೃತ್ಯೋಃ ಸಕಾಶಾತ್ಪರಿಹರತಿ । ಕರ್ಮವೈಗುಣ್ಯಜನಿತದೋಷಾಭಾವಾದಸ್ಮಾಕಂ ಜೀವಿತಂ ನಾಪಹರತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ದೇವೇಭ್ಯಃ**—ದೇವತೆಗಳಿಗೆ । **ಮೃತ್ಯುಂ**—ಮಾರಕನಾದ । **ಕಂ**—ಯಾವ ಪುರುಷನನ್ನು । **ಅವೃಣೀತ**—(ಯಮನು) ನಿಯೋಜಿಸಿದ್ದಾನೆ । **ಪ್ರಜಾಯೈ**—ಮಾನವರಿಗೆ । **ಅಮೃತಂ**—ನಾಶಕನಲ್ಲದವನನ್ನು । **ಕಂ** (ವಾ)—ಯಾರನ್ನು ತಾನೇ । **ನಾವೃಣೀತ**—ನಿಯೋಜಿಸಿಲ್ಲ । **ಬೃಹಸ್ಪತಿಂ**—ಬೃಹಸ್ಪತಿಸಂಜ್ಞಕನಾದ । **ಋಷಿಂ**—ಋಷಿಯನ್ನು । **ಯಜ್ಞಂ**—ಯಜ್ಞರೂಪನನ್ನಾಗಿ । **ಅಕೃಣ್ವತ**—ಋತ್ವಿಗ್ಯಜಮಾನರು ಕಲ್ಪಿಸಿದ್ದಾರೆ । **ಯಮಃ**—ಯಮದೇವನು । **ಪ್ರಿಯಾಂ**—ಪ್ರಿಯವಾದ । **ತನ್ವಂ**—ನಮ್ಮ ಶರೀರವನ್ನು । **ಪ್ರಾರಿರೇಚೀತ್**—ಸುರಕ್ಷಿತವಾಗಿಟ್ಟಿದ್ದಾನೆ.

॥ ಭಾವಾರ್ಥ ॥

ದೇವತೆಗಳಿಗೆ ಮಾರಕನಾದ ಯಾವ ಪುರುಷನನ್ನು ಯಮನು ನಿಯೋಜಿಸಿದ್ದಾನೆ ? ಮಾನವರಿಗೆ ನಾಶಕನಲ್ಲದವನನ್ನು ಯಾರನ್ನು ತಾನೇ ನಿಯೋಜಿಸಿಲ್ಲ ? ಬೃಹಸ್ಪತಿಸಂಜ್ಞಕನಾದ ಋಷಿಯನ್ನು ಯಜ್ಞರೂಪನನ್ನಾಗಿ ಋತ್ವಿಗ್ಯಜಮಾನರು ಕಲ್ಪಿಸಿದ್ದಾರೆ. ಯಮದೇವನು ನಮ್ಮ ಪ್ರಿಯವಾದ ಶರೀರವನ್ನು ಸುರಕ್ಷಿತವಾಗಿಟ್ಟಿದ್ದಾನೆ.

## English Translation

Whom has he selected as the slayer of the gods ? Whom has he not elected as non-slayer of the human race ? They have made the Rishi Brihaspati the sacrifice, Yama preserves our loved bodies.

॥ ಸಂಹಿತಾಪಾಠ ॥

ಸಪ್ತ ಕ್ಷರಂತಿ ಶಿಶವೇ ಮರುತ್ವತೇ ಪಿತ್ರೇ ಪುತ್ರಾಸೋ ಅಪ್ಯವೀವತನ್ನೃತಂ।
ಉಭೇ ಇದಸ್ಯೋಭಯಸ್ಯ ರಾಜತ ಉಭೇ ಯತೇತೇ ಉಭಯಸ್ಯ ಪುಷ್ಯತಃ ॥ ೫ ॥

॥ ಪದಪಾಠಃ ॥

ಸಪ್ತ । ಕ್ಷರಂತಿ । ಶಿಶವೇ । ಮರುತ್ವತೇ । ಪಿತ್ರೇ । ಪುತ್ರಾಸಃ । ಅಪಿ । ಅವೀವತನ್ । ಋತಂ ।
ಉಭೇ ಇತಿ । ಇತ್ । ಅಸ್ಯ । ಉಭಯಸ್ಯ । ರಾಜತಃ । ಉಭೇ ಇತಿ । ಯತೇತೇ ಇತಿ । ಉಭಯಸ್ಯ । ಪುಷ್ಯತಃ ॥ ೫ ॥

॥ ಸಾಯಣಭಾಷ್ಯಂ ॥

ಮರುತ್ವತೇ । ಮರುತಃ ಸ್ತೋತಾರಃ । ಸ್ತುತಿದ್ವಾರೇಣ ತದ್ವತೇ ಪಿತ್ರ ಋತ್ವಿಜಾಂ ಪಿತೃಭೂತಾಯ ಶಿಶವೇ ಶಂಸನೀಯಾಯ ಹವಿರ್ಧಾನಶಕಟಯೋಃ ಸುಖಾಸೀನಭೂತಾಯ ಸೋಮಾಯ ಸಪ್ತ ಛಂದಾಂಸಿ ಕ್ಷರಂತಿ । ಸ್ತುತಿತ್ವೇನ ಗಚ್ಛಂತಿ । ಅಪಿ ಚ ಪುತ್ರಾಸೋಽಪಿ ಸೋಮಸ್ಯ ಪುತ್ರಭೂತಾ ಋತ್ವಿಜೋಽಪ್ಯೃತಂ ಸತ್ಯಭೂತಂ ಸ್ತೋತ್ರಮವೀವತನ್ । ಸಂಗಮಯಂತಿ । ಸದ್ಗುಣಗ್ರಾಹಿಣೀಂ ಸ್ತುತಿಂ ಕುರ್ವಂತೀತ್ಯರ್ಥಃ । ಉಭೇ ಇದ್ದ್ವೇ ಏವ ಹವಿರ್ಧಾನಶಕಟೇ ಅಸ್ಯೋಭಯಸ್ಯ ದೇವಜಾತಸ್ಯ ಮನುಷ್ಯಜಾತಸ್ಯ ಚ ರಾಜತಃ । ಈಶಾತೇ । ಉಭೇ ಏವ ಶಕಟೇ ಯತೇತೇ । ಕರ್ಮಾನುಷ್ಠಾನೇ ಪ್ರಯತ್ನಂ ಕುರುತಃ । ಉಭಯಸ್ಯ ದೇವಜಾತಸ್ಯ ಮನುಷ್ಯಜಾತಸ್ಯ ಚ ಪುಷ್ಯತಃ । ಹವಿರ್ಧಾರಣದ್ವಾರೇಣ ಪುಷ್ಟಿಂ ಕುರುತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಮರುತ್ವತೇ**—ಸ್ತುತಿಯುಕ್ತನೂ । **ಪಿತ್ರೇ**—ಋತ್ವಿಕ್ಕುಗಳಿಗೆ ಪಿತೃಭೂತನೂ । **ಶಿಶವೇ**—ಶಕಟಗಳಿಗೆ ಪುತ್ರರೂಪನೂ ಆದ ಸೋಮನಿಗಭಿಮುಖವಾಗಿ । **ಸಪ್ತ**—ಸಪ್ತಛಂದಸ್ಸುಗಳೂ । **ಕ್ಷರಂತಿ**—ಸ್ತುತಿರೂಪದಲ್ಲಿ ಹರಿಯುತ್ತವೆ । **ಪುತ್ರಾಸಃ ಅಪಿ**—ಸೋಮನಿಗೆ ಪುತ್ರರೂಪರಾದ ಋತ್ವಿಕ್ಕುಗಳು । **ಋತಂ**—ಸತ್ಯಾತ್ಮಕವಾದ ಸ್ತುತಿಯನ್ನು । **ಅವೀವತನ್**—ಅರ್ಪಿಸುತ್ತಾರೆ । **ಉಭೇ ಇತ್**—ಈ ಶಕಟಗಳೆರಡೂ । **ಅಸ್ಯ ಉಭಯಸ್ಯ**—ದೇವಮಾನವಾದಿಗಳೆಲ್ಲ । **ರಾಜತಃ**—ಪ್ರಭುಗಳಾಗಿದ್ದಾರೆ । **ಉಭೇ**—ಈ ಎರಡು ಶಕಟಗಳೂ । **ಯತೇತೇ**—ಕರ್ಮಾರ್ಥವಾಗಿ ಪ್ರಯತ್ನಿಸುತ್ತವೆ । **ಉಭಯಸ್ಯ**—ದೇವಮಾನವಾದಿಗಳಿಗೆಲ್ಲ । **ಪುಷ್ಯತಃ**—ಪೋಷಕರಾಗಿದ್ದೀರಿ.

॥ ಭಾವಾರ್ಥ ॥

ಸ್ತುತಿಯುಕ್ತನೂ, ಋತ್ವಿಕ್ಕುಗಳಿಗೆ ಪಿತೃಭೂತನೂ, ಶಕಟಗಳಿಗೆ ಪುತ್ರರೂಪನೂ ಆದ ಸೋಮನಿಗಭಿಮುಖವಾಗಿ ಸಪ್ತಛಂದಸ್ಸುಗಳೂ ಸ್ತುತಿರೂಪದಲ್ಲಿ ಹರಿಯುತ್ತವೆ. ಸೋಮನಿಗೆ ಪುತ್ರರೂಪರಾದ ಋತ್ವಿಕ್ಕುಗಳು ಸತ್ಯಾತ್ಮ

ಕವಾದ ಸ್ತುತಿಯನ್ನು ಅರ್ಪಿಸುತ್ತಾರೆ. ಈ ಶಕಟಗಳೆರಡೂ ದೇವಮಾನವಾದಿಗಳಿಗೆಲ್ಲ ಪ್ರಭುಗಳಾಗಿದ್ದಾರೆ. ಈ ಎರಡು ಶಕಟಗಳೂ ಕರ್ಮಾರ್ಥವಾಗಿ ಪ್ರಯತ್ನಿಸುತ್ತಾರೆ. ಎಲೈ ಶಕಟಗಳೇ, ನೀವು ದೇವಮಾನವಾದಿಗಳಿಗೆಲ್ಲ ಪೋಷಕರಾಗಿದ್ದೀರಿ.

English Translation

The seven (metres) offer laudation to the glorious, the adorable parent (the Soma), his sons (the priests) utter his true (praise); you both are lords of both (men and gods), you both exert yourselves and are the nourishers of both (men and gods).



# ಹದಿನಾಲ್ಕನೆಯ ಸೂಕ್ತವು.

## ಪೀಠಿಕೆ

ಈ ಸೂಕ್ತದಲ್ಲಿಯೂ ಮುಂದಿನ ಕೆಲವು ಸೂಕ್ತಗಳಲ್ಲಿಯೂ ಪಿತೃಗಳನ್ನೂ ಅವರಲ್ಲಿರುವ ಭೇದಪ್ರಭೇದಗಳನ್ನೂ ಅವರು ವಾಸಿಸುವ ಪ್ರದೇಶ ಅಥವಾ ಲೋಕಗಳನ್ನೂ ವಿವರಿಸುವ ಕೆಲವು ವರ್ಣನೆಗಳಿವೆ. ಪಿತೃಗಳು ಎಂದರೇನು? ಅವರು ಯಾರು, ಅವರ ಸ್ವರೂಪವೇನು ? ಎಂಬ ವಿಷಯವನ್ನೂ ಮೊದಲು ತಿಳಿದುಕೊಳ್ಳಬೇಕು. ಭೂಮಿಯ ಮೇಲೆ ವಾಸಿಸುವ ಮನುಷ್ಯರು ಮೃತರಾದನಂತರ ಅವರ ಪಾರ್ಥಿವಶರೀರವು ನಿಶ್ಚೇಷ್ಟಿತವಾಗಿ ಶರೀರದ ನಾನಾಭಾಗಗಳು ಪೃಥಿವ್ಯಾದಿ ಪಂಚಭೂತಗಳಲ್ಲಿ ಸೇರಿಹೋಗುವುವು. ಪಂಚಭೂತಗಳೆಂದರೆ ಪೃಥಿವೀ, ನೀರು, ವಾಯು, ಅಗ್ನಿ ಆಕಾಶಗಳು. ಎಂದರೆ ಶರೀರದಲ್ಲಿರುವ ಮೂಳೆ ಮೊದಲಾದ ಘಟ್ಟಿಪದಾರ್ಥಗಳು ಪೃಥಿವಿಯಲ್ಲಿಯೂ, ದ್ರವರೂಪವಾದ ರಕ್ತಾದಿಗಳು ನೀರಿನಲ್ಲಿಯೂ, ಪ್ರಾಣವಾಯುಗಳು ವಾಯುವಿನಲ್ಲಿಯೂ, ದೇಹದಲ್ಲಿ ಶಾಖರೂಪದಲ್ಲಿರುವ ಅಗ್ನಿಯು ಅಗ್ನಿಯಲ್ಲಿಯೂ, ಉಳಿದಭಾಗವು ಆಕಾಶದಲ್ಲಿಯೂ ಕಾಲಕ್ರಮದಲ್ಲಿ ಬೆರತುಹೋಗುವುವು. ಆದರೆ ಈ ಪಂಚಭೂತಗಳಲ್ಲಿ ವಿಲೀನವಾಗದಿರುವ ಚೈತನ್ಯವೊಂದಿರುವುದು. ಅದರಿಂದಲೇ ಪುರುಷನು ಜೀವಿಸಿರುವಕಾಲದಲ್ಲಿ ಶರೀರದ ಸಮಸ್ತವ್ಯಾಪಾರಗಳೂ ನಡೆಯುವುವು. ಅದು ಶರೀರದೊಂದಿಗೆ ನಾಶವಾಗುವುದಿಲ್ಲ. ಅದು ಸೂಕ್ಷ್ಮರೂಪದಿಂದಿದ್ದು ತಾನು ಮಾಡಿದ ಕರ್ಮಗಳ ಫಲಾನುಸಾರವಾಗಿ ಸೂಕ್ಷ್ಮಲೋಕಗಳಾದ ಸ್ವರ್ಗಾದಿಗಳಲ್ಲಿ ಸುಖದುಃಖಾದಿಗಳನ್ನು ಅನುಭವಿಸುತ್ತ ಅನೇಕಕಾಲವಿರುವುದು ಈ ಚೈತನ್ಯವನ್ನೇ ಆತ್ಮ, ಜೀವ, ಮನಸ್ಸು, ಜ್ಯೋತಿ ಎಂಬ ಶಬ್ದಗಳಲ್ಲಿ ಋಗ್ವೇದದಲ್ಲಿ ವರ್ಣಿಸಿದೆ. ಈ ಆತ್ಮವು ಮೃತಶರೀರದಿಂದ ಬೇರೆಯಾದಮೇಲೆ ಕೆಲವು ಕಾಲ ಪ್ರೇತಶರೀರದಲ್ಲಿದ್ದು ಅನಂತರ ಸ್ವರ್ಗಾದಿಗಳಿಗೆಹೋಗುವುದು. ಸ್ವರ್ಗಾದಿಗಳಲ್ಲಿರುವ ಮೃತರ ಆತ್ಮಗಳನ್ನೇ ಪಿತೃಗಳೆಂದು ಕರೆಯುವ ರೂಢಿ ಇದೆ. ಎಂದರೆ ನಮ್ಮ ಹಿರಿಯರಾಗಿದ್ದು ಪೂರ್ವದಲ್ಲಿ ಎಂದರೆ ನಾವು ಹುಟ್ಟುವುದಕ್ಕಿಂತ ಮೊದಲು ಈ ಭೂಮಿಯ ಮೇಲೆ ಬದುಕಿ ಬಾಳಿ ಮೃತರಾದನಂತರ ಸ್ವರ್ಗಾದಿ ಉತ್ತಮ ಲೋಕಗಳಲ್ಲಿ ಈಗಲೂ ಸುಖಸಂತೋಷಗಳನ್ನು ಅನುಭವಿಸುತ್ತಿರುವ ಸೂಕ್ಷ್ಮರೂಪದಿಂದಿರುವ ವ್ಯಕ್ತಿಗಳಿಗೆ ಪಿತೃಗಳೆಂದು ಹೆಸರು.

# ಪಿತೃಗಳು, ಪಿತೃಲೋಕಗಳು ಮತ್ತು ಪಿತೃಪೂಜೆ.

ಪುರುಷನು ಯಜ್ಞಯಾಗಾದಿ ಸತ್ಕರ್ಮಗಳನ್ನಾಚರಿಸುವ ಫಲವಾಗಿ ಮರಣಾನಂತರ ಪಿತೃತ್ವಸ್ಥಾನವನ್ನು ಪಡೆದು ಆಯಾ ಕರ್ಮಕ್ಕನುಗುಣವಾದ ಲೋಕಕ್ಕೆ ಯಮರಾಜನಿಂದ ಒಯ್ಯಲ್ಪಡುವನೆಂದು ವೈದಿಕಸಂಹಿತೆಯ ವಾಕ್ಯಗಳು ಪಿತೃಗಳನ್ನೂ ಯಮನನ್ನೂ ಪ್ರಶಂಸಿಸುತ್ತವೆ.

**ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಮನುಪಸ್ಪಶಾನಂ ।**
**ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯ ॥**
(ಋ. ಸಂ. ೧೦-೧೪-೧)

ಅತ್ಯುತ್ತಮವಾದ ಕರ್ಮಗಳನ್ನಾಚರಿಸಿದ ಸಜ್ಜನರನ್ನು ಅವರವರ ಕರ್ಮಾನುಗುಣವಾದ ಭೋಗಗಳನ್ನೊದಗಿಸುವ ಲೋಕಗಳಿಗೆ ಕರೆದೊಯ್ಯುವವನೂ ಪ್ರಭುವೂ ಆದ ಯಮನನ್ನು ಪೂಜಿಸು ಎಂದಿರುವ ಇಂತಹ ಮಂತ್ರಗಳು ಅನೇಕವಾಗಿವೆ. ಇಂತಹ ಮಂತ್ರಗಳು ಅನೇಕ ತತ್ತ್ವಾರ್ಥಗಳನ್ನು ತಿಳಿಸುವುವಾಗಿವೆ.

೧) ಮರಣಾನಂತರ, ದೇಹನಾಶವಾದ ಮೇಲೆ, ದೇಹಕ್ಕಿಂತಲೂ ಭಿನ್ನವಾದುದೂ ನಶ್ವರವಲ್ಲದುದೂ ಆದ ಅಂಶವು ತನ್ನ ಐಹಿಕವಾದ ಕರ್ಮಾನುಗುಣವಾಗಿ ನಿಯತವಾಗಿರತಕ್ಕ ಲೋಕವನ್ನು ಹೋಗಿ ಸೇರುತ್ತದೆಯೆಂದೂ,

೨) ಇಂತಹ ಲೋಕವು ತ್ರಿಸಂಖ್ಯಾಕವಾಗಿದ್ದು ಪಿತೃಲೋಕಗಳೆಂದೆನ್ನಿಸಿಕೊಳ್ಳುವುವೆಂದೂ,

೩) ಪಿತೃಗಳಿಗೆಲ್ಲ ರಾಜನಾದ ಯಮನೇ ಈ ಲೋಕಗಳಿಗೆಲ್ಲ ಪ್ರಭುವೆಂದೂ, ಇವುಗಳಲ್ಲಿ ಉತ್ತಮವಾದ ಲೋಕವು ಅತ್ಯಂತ ತೇಜೋಯುತವೆಂದೂ,

೪) ಈ ಲೋಕಸ್ಥರಾದ ಪಿತೃಗಳೂ ಸಹ ಜೀವಿಸಿರುವ ಪುತ್ರಾದಿಗಳಿಗೆ ದೇವತೆಗಳಂತೆಯೇ, ತಮ್ಮ ಅನುಗ್ರಹವನ್ನಿತ್ತು ಅವರುಗಳಿಂದ ಅರ್ಪಿತವಾಗುವ 'ಸ್ವಧಾ' ರೂಪವಾದ ಹವಿಸ್ಸನ್ನು ಸ್ವೀಕರಿಸುವವರೆಂದೂ ತಿಳಿಸಲಾಗಿದೆ.

ಉಪನಿಷದಾದಿಗಳಲ್ಲಿ **ಆತ್ಮಾ** ಎಂದು ಯಾವ ನಿತ್ಯತತ್ತ್ವವು ಪ್ರಶಂಸಿಸಲ್ಪಡುವುದೋ ಮತ್ತು ಆ ಆತ್ಮನು ನಿತ್ಯಸಾಯುಜ್ಯವನ್ನು ಪಡೆಯುವ ಸ್ವರೂಪಯೋಗ್ಯತೆಯುಳ್ಳದ್ದು ಎಂದು ಯಾವ ಆತ್ಮಶಕ್ತಿಯು ವರ್ಣಿತವಾಗಿರುವುದೋ, ಅದೇ **ಆತ್ಮನು** ಅದೇ ಪರಿಭಾಷೆಯಿಂದ ಋಕ್ಸಂಹಿತೆಯಲ್ಲಿ ತಿಳಿಸಲ್ಪಟ್ಟಿರುವುದೇ, ಅಥವಾ ಈ ಎರಡು ವರ್ಣನೆಗಳಿಗೂ ವ್ಯತ್ಯಾಸವಿರುತ್ತದೆಯೋ ಎಂಬ ವಿಷಯದಲ್ಲಿ ಅನೇಕ ಚರ್ಚೆಗಳಿರುತ್ತವೆ.

ಆ ಚರ್ಚೆಗೆ ಇಲ್ಲಿ ಅವಕಾಶವಿಲ್ಲ ಆ ಚರ್ಚೆಯ ಕ್ರಮವನ್ನು ಮುಂದೆ ಸಂದರ್ಭಾನುಸಾರವಾಗಿ ಅವಶ್ಯಕತೆಯಿದ್ದಲ್ಲಿ ತಿಳಿಸಲಾಗುತ್ತದೆ. ಪಿತೃಗಳು ಎಂದೆನ್ನಿಸಿಕೊಳ್ಳುವ ಅರ್ಹತೆಯು ಯಾವಾಗ? ಯಾರಿಗೆ; ಅವರ ಸ್ವರೂಪಗಳೇನು? ಮರಣಾನಂತರ ದೇಹಕ್ಕೆ ಯಾವ ವಿಧವಾದ ಸಂಸ್ಕಾರದಿಂದ ಮುಕ್ತಿ? ದೇಹಾನಂತರ ಉಳಿಯುವ ಅಂಶವು ಯಾವ ರೀತಿ ವರ್ಣಿತವಾಗಿದೆ? ಇವರ ಅಂತಿಮ ಸ್ಥಾನವೇನು? ಕರ್ಮವಾಸನೆಯು ದೇಹಾನಂತರವೂ ಅನುಸರಿಸುವುದೇ ಇತ್ಯಾದಿ ವಿಷಯಗಳನ್ನು ಪ್ರಕೃತದಲ್ಲಿ ಅತ್ಯವಶ್ಯವಾಗಿ ಚರ್ಚಿಸಬೇಕಾಗಿರುತ್ತದೆ. ಈ ಪ್ರಕರಣವನ್ನು ಕೆಳಗೆ ತಿಳಿಸುವಂತೆ ವಿಭಾಗಿಸಿ ಆಯಾ ಅಂಶಗಳನ್ನು ವೈದಿಕವಾಕ್ಯಗಳ ಆಧಾರದ ಮೇಲೆ ಪರಿಶೀಲಿಸಬಹುದು.

೧) ಪಾರ್ಥಿವದೇಹಕ್ಕಿಂತಲೂ ಭಿನ್ನವಾದ (ಆತ್ಮ) ತತ್ತ್ವ.
೨) ಪಿತೃಗಣಗಳು ಮತ್ತು ಪಿತೃಲೋಕಗಳು
೩) ಪುನರುತ್ಪತ್ತಿ ಮತ್ತು ಜನ್ಮಾಂತರ.
೪) ಪ್ರೇತಸಂಸ್ಕಾರ.
೫) **ಪಿತೃಶ್ರಾದ್ಧ.**

### 1) ಪಾರ್ಥಿವದೇಹಕ್ಕಿಂತಲೂ ಭಿನ್ನವಾದ ತತ್ತ್ವ ಮತ್ತು ಅದರ ಸ್ವರೂಪಃ

**ಆತ್ಮನ್, ಅಜೋಭಾಗ, ಜೀವ, ಪ್ರಾಣ, ಮನಸ್, ಸುವರ್ಣ, ಅಸು ಜ್ಯೋತಿ**| ಈ ಪದಗಳು, ದೇಹಕ್ಕಿಂತಲೂ ಭಿನ್ನವಾದುದೂ, ನಶ್ವರವಲ್ಲದುದೂ, **ಅದೆ ಪುರು**ಷಾಂಶವನ್ನು ಸೂಚಿಸತಕ್ಕ ಪದಗಳಾಗಿರುತ್ತವೆ· ಋಕ್ಸಂಹಿತೆಯಲ್ಲಿಯೂ ಇತರ ವೈದಿಕವಾಕ್ಯಗಳಲ್ಲಿ**ಯೂ** ಈ ದೇಹಾತಿರಿಕ್ತವಾದ ಪುರುಷಾಂಶವನ್ನು ಯಾವ ರೀತಿ ವರ್ಣಿಸಿದೆ, ಈ ಪದಗಳು ಆ ನಿತ್ಯವಸ್ತುವನ್ನು ಯಾವ ರೀತಿ ಪ್ರತಿಬಿಂಬಿಸುತ್ತವೆ ಇತ್ಯಾದಿ ವಿಷಯಗಳನ್ನು ಸದ್ಯಃ ಪರಿಶೀಲಿಸಬೇಕು.

**ಜೀವಿಸು, ಉಸಿರಾಡು** ಇತ್ಯಾದ್ಯರ್ಥಗಳನ್ನು ಕೊಡತಕ್ಕ **ಅನ್** ಧಾತುವಿನಿಂದ **ಆತ್ಮನ್** ಪದವು ನಿಷ್ಪನ ವಾಗಿರುತ್ತದೆ. ಈ **ಆತ್ಮನ್** ಎಂಬ ಪದವು ಋಕ್ಸಂಹಿತೆಯಲ್ಲಿ ಅನೇಕ ಸಂದರ್ಭಗಳಲ್ಲಿ ರೂಪಾಂತರವನ್ನು ಹೊಂದಿ ಪ್ರಯುಕ್ತವಾಗಿರುತ್ತವೆ. **ಆತ್ಮದಾಃ, ಆತ್ಮವತ್, ಆತ್ಮನ್ವತೀಭಿಃ, ಆತ್ಮಾಇವ, ಆತ್ಮನ್ವಂತಂ, ಶತಾತ್ಮಾ, ಶತಾತ್ಮಾನಂ**, ಇತ್ಯಾದಿ ಪ್ರಯೋಗಗಳು ದೇಹಾತಿರಿಕ್ತವಾದ ಅಂಶವನ್ನು ಸೂಚಿಸುತ್ತವೆ. ಇದರ ನಿಷ್ಕೃಷ್ಟವಾದ ಅರ್ಥವನ್ನು ಇದಮಿತ್ಥಂ ಎಂದು ಹೇಳುವಂತಿಲ್ಲ. ಒಂದೊಂದು ಕಡೆ ಒಂದೊಂದರ್ಥವು ಭಾಷ್ಯಗಳಲ್ಲಿ ಹೇಳಲ್ಪಟ್ಟಿದೆ· ಉದಾಹರಣೆಗೆ

**ಕೋ ದದರ್ಶ ಪ್ರಥಮಂ ಜಾಯಮಾನಮಸ್ಥನ್ವಂತಂ ಯದನಸ್ಥಾ ಬಿಭರ್ತಿ ।**
**ಭೂಮ್ಯಾ ಅಸುರಸೃಗಾತ್ಮಾ ಕ್ವ ಸ್ವಿತ್ಕೋ ವಿದ್ವಾಂಸಮುಪ ಗಾತ್ಪ್ರಷ್ಟುಮೇತತ್ ॥**
(ಋ. ಸಂ. ೧-೧೬೪-೪)

ಎಂಬಲ್ಲಿ **ಅಸುಃ ಆತ್ಮಾ** ಎಂಬ ಎರಡು ಪದಗಳೂ ಪ್ರಯೋಗಿಸಲ್ಪಟ್ಟಿವೆ. **ಭೂಮ್ಯಾಃ ಅಸುರಸೃಕ್** ಎಂಬುದರಿಂದ ಪಾರ್ಥಿವವಾದ ಸ್ಥೂಲಶರೀರವನ್ನು ವರ್ಣಿಸಿದೆ. **ಅಸುಃ ಪ್ರಾಣಃ ತದುಪಲಕ್ಷಿತಂ ಸೂಕ್ಷ್ಮಶರೀರಂ ಅಸೃಕ್ ಶೋಣಿತಂ** ಎಂದು ಸಾಯಣರು ವಿವರಿಸಿದ್ದಾರೆ. ಪ್ರಾಣವೂ ಚೈತನ್ಯರೂಪಿಯಾದರೂ ಸಹ ಪಾರ್ಥಿವವೇ ಆಗಿರುತ್ತವೆ. ಭೌತಿಕಶರೀರದಲ್ಲಿ **ಸ್ಥೂಲ ಸೂಕ್ಷ್ಮ** ಎಂಬ ಎರಡು ಭೇದಗಳನ್ನು ಮಾಡಿ ಪ್ರಾಣವು ಸೂಕ್ಷ್ಮಶರೀರವೆಂದೂ ಅಸೃಗಾದಿಗಳು ಸ್ಥೂಲಶರೀರವೆಂದೂ ವಿಭಾಗಿಸಲ್ಪಟ್ಟಿದೆ. ಪ್ರಾಣರೂಪವಾದ ಚೇತನಕ್ಕೂ ಆತ್ಮರೂಪವಾದ ಚೇತನಕ್ಕೂ ವ್ಯತ್ಯಾಸವಿದೆಯೆಂದೂ ಸಹ ಸಾಯಣರ ವಿವರಣೆಯು ತಿಳಿಸುತ್ತದೆ. ಆತ್ಮನನ್ನು **ಪಂಚಭೂತಾತ್ಮಕ ಶರೀರಸಂಬದ್ಧಚೇತನಃ** ಎಂದು ವರ್ಣಿಸುವಾಗ ಭೌತಿಕಶರೀರಕ್ಕೂ ಆತ್ಮನಿಗೂ ಇರುವ ವ್ಯತ್ಯಾಸವನ್ನು ತಿಳಿಸಿದೆ. ದೇಹದ ವ್ಯಾಪಾರಗಳಿಗೆ ನಿಯಾಮಕಶಕ್ತಿ ಎಂಬರ್ಥದಲ್ಲಿಯೂ ಸಹ ಈ ಪದದ ಪ್ರಯೋಗವಿರುತ್ತದೆ. **ಆತ್ಮಾ ತೇ ವಾತಃ** ಇತ್ಯಾದಿ ಸಂದರ್ಭಗಳಲ್ಲಿ (೭-೮೭-೨) ಜಗನ್ನಿಯಾಮಕ ಶಕ್ತಿಯೆಂದೂ ಅರ್ಥ. ಇದು ದೇಹಾತಿರಿಕ್ತವಾದುದು. ಈ ಅಂಶವನ್ನೇ ತಿಳಿಸುತ್ತ—

**ಅಜೋ ಭಾಗಸ್ತಪಸಾ ತಂ ತಪಸ್ವ ತಂ ತೇ ಶೋಚಿಸ್ತಪತು ತಂ ತೇ ಅರ್ಚಿಃ ।**
**ಯಾಸ್ತೇ ಶಿವಾಸ್ತನ್ವೋ ಜಾತವೇದಸ್ತಾಭಿರ್ವಹೈನಂ ಸುಕೃತಾಮು ಲೋಕಂ ॥**
(ಋ. ಸಂ. ೧೦-೧೬-೪)

ಎಂಬಲ್ಲಿ ಸಾಯಣರು ಅಜ ಶಬ್ದದ ಅರ್ಥವನ್ನು ವಿವರಿಸುತ್ತ ಅಜಃ ಜನನರಹಿತಃ ಶರೀರೇಂದ್ರಿಯಭಾಗವ್ಯತಿರಿಕ್ತಃ ಅಂತರಪುರುಷಲಕ್ಷಣೋ ಯೋ ಭಾಗೋsಸ್ತಿ ಎಂದು ತಿಳಿಸಿದ್ದಾರೆ. ಜನನರಹಿತವಾದುದೂ, ಶರೀರೇಂದ್ರಿಯಗಳಿಗೆ ಭಿನ್ನವಾದುದೂ, ಪುರುಷಶರೀರದ ಒಳಗೆ ಅಡಗಿರುವುದೂ ಆದ ಭಾಗವೆಂದರ್ಥ. ಈ ಭಾಗವನ್ನು ದಹಿಸಬೇಡ, ಅದು ನಾಶವಾಗುವಂತೆ ಮಾಡಬೇಡ ಎಂದೂ ಅದನ್ನು ಶಾಶ್ವತವಾದ ಸ್ಥಾನಕ್ಕೆ ತಲಪುವಂತೆ ಮಾಡು ಎಂದೂ ಅಗ್ನಿಯನ್ನು ಮೇಲಿನ ಮಂತ್ರದಲ್ಲಿ ಪ್ರಾರ್ಥಿಸಿದೆ.

ಇದರಂತೆಯೇ ಜೀವ ಎಂಬ ಪದದ ಪ್ರಯೋಗವೂ ಇರುತ್ತದೆ. ಈ ಪದವು ಅನೇಕಕಡೆಗಳಲ್ಲಿ ಪ್ರಯುಕ್ತವಾಗಿರುತ್ತದೆ. ಆದರೆ ಎಲ್ಲಾ ಸಂದರ್ಭಗಳಲ್ಲಿಯೂ ಒಂದೇ ಅರ್ಥವನ್ನು ಹೇಳಿಲ್ಲ. ಪ್ರತ್ಯೇಕವಾದ ಆತ್ಮ ಎಂಬರ್ಥದಲ್ಲಿ ಎರಡುಕಡೆ ಮಾತ್ರ ಪ್ರಯುಕ್ತವಾಗಿರುತ್ತದೆ.

**ಉದೀರ್ಧ್ವಂ ಜೀವೋ ಅಸುರ್ನ ಆಗಾದಪ ಪ್ರಾಗಾತ್ತಮ ಆ ಜ್ಯೋತಿರೇತಿ ॥**
(ಋ ಸಂ. ೧-೧೧೩-೧೬)

**ಜೀವೋ ಮೃತಸ್ಯ ಚರತಿ ಸ್ವಧಾಭಿರಮರ್ತ್ಯೋ ಮರ್ತ್ಯೇನಾ ಸಯೋನಿಃ ॥**
(ಋ. ಸಂ. ೧-೧೬೪-೩೦)

ಎಂಬೆರಡು ಸನ್ನಿವೇಶಗಳಲ್ಲಿ ಮಾತ್ರ ಸಾಯಣರು ಜೀವಶಬ್ದಕ್ಕೆ ಜೀವಾತ್ಮ ಎಂಬ ಅರ್ಥವನ್ನೂ ತಿಳಿಸಿದ್ದಾರೆ. ಮೃತವಾಗುವ ಶರೀರಕ್ಕೆ ಸಂಬಂಧಿಸಿದುದೆಂದೂ, ಮರಣಾರ್ಹರಾದ ಜೀವದೊಡನೆ ಸಮಾನಸ್ಥಾನವುಳ್ಳದ್ದೆಂದೂ ಇದರ ಸ್ವರೂಪವನ್ನು ತಿಳಿಸಿದ್ದಾರೆ. **ಜೀವಾಪೇತಂ ವಾವ ಕಿಲೇದಂ ಮ್ರಿಯತೇ, ನ ಜೀವೋ ಮ್ರಿಯತೇ** (ಛಾ. ಉ. ೬-೧೧-೩) ಎಂಬ ಉಪನಿಷದ್ವಾಕ್ಯವನ್ನು ಉದಾಹರಿಸಿ ಜೀವ ಮತ್ತು ದೇಹಗಳಿಗಿರುವ ವ್ಯತ್ಯಾಸವನ್ನು ವಿವರಿಸಿದ್ದಾರೆ. ಇದರಂತೆಯೇ, **ಪ್ರಾಣ, ಮನಸ್** ಎಂಬ ಪದಗಳೂ **ಚೇತನ** ಎಂಬರ್ಥದಲ್ಲಿ ಪ್ರಯುಕ್ತವಾಗಿವೆ. ಅಲ್ಲದೇ,

**ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿ ಷಸ್ವಜಾತೇ ।**
(೧-೧೬೪-೨೦)

ಎಂಬಲ್ಲಿ **ಸುಪರ್ಣ** ಶಬ್ದವು ಜೀವಾತ್ಮಪರ್ಯಾಯವೆಂದು ತಿಳಿಸಿದ್ದಾರೆ. ಹೀಗೆ ನಾನಾ ಪದಗಳ ಪ್ರಯೋಗಗಳು ಶರೀರ ಭಿನ್ನವಾದ ನಿತ್ಯತತ್ತ್ವವನ್ನು ತಿಳಿಸುವುವಾಗಿರುತ್ತವೆ. ಒಟ್ಟಿನಲ್ಲಿ ಋಕ್ಸಂಹಿತಾವಾಕ್ಯಗಳಲ್ಲಿ ಸೂಕ್ತದ್ರಷ್ಟೃಗಳಾದ ಋಷಿಗಳು **ಆತ್ಮನ** ವಿಷಯದಲ್ಲಿ ತಮ್ಮ ಅಭಿಪ್ರಾಯಗಳನ್ನು ತಿಳಿಸುತ್ತ,

೧) ಪುರುಷನಲ್ಲಿ ಅಚೇತನಕ್ಕಿಂತಲೂ ಭಿನ್ನವಾದ ಒಂದು ಚೈತನ್ಯಾಂಶವಿರುತ್ತದೆ.

೨) ಅದು ದೇಹಾತಿರಿಕ್ತವಾದುದು. ದೇಹವು ನಾಶವಾದ ಮೇಲೂ ಅದು ಉಳಿಯುತ್ತದೆ.

೩) ಅದು ಜನನಮರಣರಹಿತವೂ ಶಾಶ್ವತವೂ ಆದುದು.

೪) ಅದು ಐಹಿಕಜೀವನದಲ್ಲಿ ದೇಹದ ಸತ್ತ್ವವೂ ದೇಹವ್ಯಾಪಾರಗಳ ನಿಯಾಮಕವೂ ಆಗಿರುತ್ತದೆ.

೫) ಅದು ಪಾರ್ಥಿವ ಜೀವನದಲ್ಲಿ ದೇಹಸಂಪರ್ಕವನ್ನು ಹೊಂದಿರುವಾಗ ಯಾವ ಕರ್ಮವನ್ನು ಮಾಡುವುದೋ ಆ ಕರ್ಮದಫಲವನ್ನು ದೇಹದಿಂದ ಬೇರೆಯಾದಾಗಲೂಸಹ ಅನುಭವಿಸುತ್ತದೆ, ಇತ್ಯಾದ್ಯಂಶಗಳನ್ನು ವಿಶದಪಡಿಸಿದ್ದಾರೆ.

ಮೃತನಾದ ಪುರುಷನಿಗೆ ಅವನವನ ಕರ್ಮಾನುಸಾರವಾಗಿ ಹೋಗಲು ದೇವಯಾನ, ಪಿತೃಯಾನ ಮತ್ತು ನರಕಯಾನ ಎಂಬ ಮೂರು ಮಾರ್ಗಗಳಿಗೆ. (ಋಕ್ಸಂಹಿತೆಯಲ್ಲಿ ಮೊದಲನೆಯ ಎರಡು ಮಾರ್ಗಗಳೂ ಸ್ಪಷ್ಟವಾಗಿ ವರ್ಣಿತವಾಗಿವೆ. ಮೂರನೆಯದಾದ **ನರಕಯಾನವು** ಕೆಲವು ವಿವರಣೆಗಳಿಂದ ಕೇವಲ ಸೂಚಿತವಾಗಿದೆ). ಇವುಗಳಲ್ಲಿ ದೇವಯಾನ ಮತ್ತು ಪಿತೃಯಾನ ಎಂಬೆರಡು ಮಾರ್ಗಗಳ ವ್ಯತ್ಯಾಸವನ್ನು ಹಿಂದೆ ಸೂಕ್ಷ್ಮವಾಗಿ ತಿಳಿಸಿದೆ. ಪಿತೃಯಾನವಾವುದು, ಪಿತೃತ್ವವು ಯಾರಿಗೆ ಮತ್ತು ಪಿತೃಲೋಕದ ಸ್ವರೂಪವೇನು ಎಂಬುದನ್ನು ಮಾತ್ರ ಪ್ರಕೃತದಲ್ಲಿ ತಿಳಿಯಬೇಕಾದ ಅಂಶವಾಗಿರುತ್ತದೆ.

## 2) ಪಿತೃಗಣಗಳು ; ಪಿತೃಲೋಕಗಳು

**ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ |**
**ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು ||**

(ಋ. ಸಂ. ೧೦-೧೫-೧)

ಎಂಬ ಮಂತ್ರದಲ್ಲಿ ಪಿತೃಲೋಕಗಳು ನಿರ್ದಿಷ್ಟವಾಗಿವೆ. **ತ್ರಿವಿಧಾಃ ಪಿತರಃ ಉತ್ತಮಾ ಮಧಮಾ ಅಧಮಾಶ್ಚೇತಿ |** ಉತ್ತಮರು, ಮಧ್ಯಮರು, ಅಧಮರು ಎಂದು ಮೂರು ವಿಧವಾದ ಪಿತೃಗಣಗಳಿವೆ. ಇವರೆಲ್ಲರೂ ಸಹ ಋತಜ್ಞರೆಂದು ವರ್ಣಿತರಾಗಿದ್ದಾರೆ. ಕರುಣೆಯಿಂದ ಎಲ್ಲರನ್ನೂ ರಕ್ಷಿಸಲಿ ಎಂದು ಪ್ರಾರ್ಥಿತರಾಗಿದ್ದಾರೆ. ಆದರೆ, ಇವರ ಪಿತೃತ್ವವು ಹೇಗೆ, ಇವರೆಲ್ಲರೂ ಮೊದಲು ಪೃಥ್ವಿಯಲ್ಲಿ ಮಾನವತ್ವವನ್ನು ಹೊಂದಿ ನಂತರ ಅವರವರ ಸತ್ಕರ್ಮಾನುಷ್ಠಾನದ ಫಲವಾಗಿ ಮರಣಾನಂತರ ಪಿತೃಲೋಕವನ್ನು ಸೇರಿದವರೇ ಅಥವಾ, ಅನಾದಿಕಾಲದಿಂದಲೂ ಈ ಲೋಕಗಳಲ್ಲಿರತಕ್ಕವರೇ, ಇವರಿಗೂ ದಿವ್ಯಾಂಶವಿದೆಯೇ ಇತ್ಯಾದಿ ವಿಷಯಗಳನ್ನು ನಿಷ್ಕೃಷ್ಟವಾಗಿ ಹೇಳಲು ಶ್ರಮವಾಗುತ್ತದೆ. ಅನೇಕರು ದಿವ್ಯತ್ವವನ್ನು ಹೊಂದಿ ಅತ್ಯುತ್ತಮವಾದ ದಿವ್ಯಲೋಕದಲ್ಲಿ ವಾಸಿಸುತ್ತಿರುವರೆಂದು ವರ್ಣಿತರಾಗಿದ್ದಾರೆ. ಇದಲ್ಲದೇ;— ಮೂರು ಬಗೆಯ ಪಿತೃಗಳ ಗಣಗಳನ್ನು ವಿಭಾಗಿಸುತ್ತ ಈ ಗಣಗಳನ್ನು ಶತಪಥದಲ್ಲಿ ಈ ರೀತಿ ನಿರ್ದೇಶಿಸಿದೆ—

**ತದ್ಯೇ ಸೋಮೇನೇಜಾನಾಃ| ತೇ ಪಿತರಃ ಸೋಮವಂತೋಽಥ ಯೇ ದತ್ತೇನ ಪಕ್ವೇನ ಲೋಕಂ ಜಯಂತಿ ತೇ ಪಿತರೋ ಬರ್ಹಿಷದೋಽಥ ಯೇ ತತೋ ನಾನ್ಯತರಚ್ಚನ ಯಾನಗ್ನಿರೇವ ದಹನ್ತ್ಸ್ವದಯತಿ ತೇ ಪಿತರೋಽಗ್ನಿಷ್ವಾತ್ತಾ ಏತ ಉ ಯೇ ತೇ ಪಿತರಃ ||**

(ಶ. ಬ್ರಾ. ೨.೬.೧-೭)

ಸೋಮವನ್ನರ್ಪಿಸಿ ಯಜ್ಞವನ್ನು ನೆರವೇರಿಸಿದ ಪಿತೃಗಳು **ಸೋಮವಂತರು.** ಪಕ್ವವಾದ ಪುರೋಡಾಶಾದಿಗಳಿಂದ **ದೇವಲೋಕವನ್ನು** ಗಳಿಸಿದವರು **ಬರ್ಹಿಷದರು.** ಇವೆರಡೂ ಇಲ್ಲದೇ, ಕೇವಲ ಅಗ್ನಿಯಿಂದ ಮಾತ್ರ ದಗ್ಧರಾದವರು

ಅಗ್ನಿಷ್ವಾತ್ತರು ಹೀಗೆ ಮೂರು ವಿಭಾಗಗಳಿಂದ ಪಿತೃಗಳು ನಿರ್ದಿಷ್ಟರಾಗಿದ್ದಾರೆ. ಈ ಹೆಸರುಗಳು ಅವರವರ ಕರ್ಮಾನುಸಾರವಾಗಿವೆ. ಹೀಗೆ ಪಿತೃಗಣಗಳ ವಿಭಾಗಕ್ರಮವು ಎರಡು ಬಗೆಯುಳ್ಳವಾಗಿರುತ್ತವೆ. ಶ್ರಾದ್ಧಪ್ರಕರಣ ಮೇಲಿನ ವಿಭಾಗವನ್ನು ಪರಿಶೀಲಿಸಿದರೆ, **ಪರಾಸಃ** ಎಂದು ವರ್ಣಿತರಾಗಿರುವ ಪಿತೃಗಳು ಅತ್ಯತಿಶಯವಾದ ದಿವ್ಯಸ್ವರೂಪವನ್ನು ಹೊಂದಿರುವವರಾಗಿದ್ದಾರೆ.

ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ ||
(ಋ. ಸಂ. ೧೦-೧೪-೬)

ಋಭುಗಳು, ಮರುತ್ತುಗಳು, ಅಂಗಿರಸ್ಸುಗಳು, ವಿರೂಪರು, ನವಗ್ವರು, ದಶಗ್ವರು, ಅಥರ್ವರು, ಭೃಗುಗಳು ಮತ್ತು ಕುಶಿಕರು ಇವರೆಲ್ಲರೂ ಈ ಗುಂಪಿಗೆ ಸೇರಿದವರು. ಇವರೆಲ್ಲರೂ ಸಹ ತಮ್ಮ ಉತ್ಕೃಷ್ಟವಾದ ಕರ್ಮಗಳಿಂದ ದಿವ್ಯತ್ವವನ್ನು ಪಡೆದು ಅಮರ್ತ್ಯರಾಗಿ ದೇವತೆಗಳಂತೆಯೇ ಪೂಜ್ಯಾರ್ಹರಾದವರು.

**ಇಂದ್ರಸ್ಯ ಸಖ್ಯಮೃಭವಃ ಸಮಾನಶುರ್ಮನೋರ್ನಪಾತೋ ಅಪಸೋ ದಧನ್ವಿರೇ ।**
**ಸೌಧನ್ವನಾಸೋ ಅಮೃತತ್ವಮೇರಿರೇ ವಿಷ್ಟ್ವೀ ಶಮೀಭಿಃ ಸುಕೃತಃ ಸುಕೃತ್ಯಯಾ ||**
(ಋ. ಸಂ. ೩-೬೦-೩)

ಮಾನವರ ಗುಂಪಿಗೆ ಸೇರಿದವರೂ ಸುಧನ್ವನಪುತ್ರರೂ ಆದ ಋಭುಗಳು ಉತ್ತಮವಾದ ಯಜ್ಞಕರ್ಮವನ್ನಾಚರಿಸಿ ಇಂದ್ರನ ಸಖ್ಯವನ್ನು ಹೊಂದಿದರು. ಸುಧನ್ವಪುತ್ರರಾದ ಋಭುಗಳು ತಮ್ಮ ಉತ್ತಮವಾದ ಕರ್ಮದಿಂದ ದಿವ್ಯತ್ವವನ್ನೂ ಮರಣರಾಹಿತ್ಯವನ್ನೂ ಪಡೆದರು ಎಂಬ ಪ್ರಶಂಸೆಯು ಅನೇಕ ಸಂದರ್ಭಗಳಲ್ಲಿ ಬೇರೆಬೇರೆ ರೂಪದಲ್ಲಿ ಪುನರುಕ್ತವಾಗಿರುತ್ತದೆ. (೪-೩೫-೮ ಇತ್ಯಾದಿ)

**ತೇಽವರ್ಧಂತ ಸ್ವತವಸೋ ಮಹಿತ್ವನಾ ನಾಕಂ ತಸ್ಥುರುರು ಚಕ್ರಿರೇ ಸದಃ ।**
**ವಿಷ್ಣುರ್ಯದ್ಧಾವದ್ವೃಷಣಂ ಮದಚ್ಯುತಂ ವಯೋ ನ ಸೀದನ್ನಧಿ ಬರ್ಹಿಷಿ ಪ್ರಿಯೇ ||**
(ಋ. ಸಂ. ೧-೮೫-೭)

ಸ್ವಶಕ್ತಿಯಿಂದಲೇ ಸಂಚರಿಸಕ್ಕವರೂ ಅತ್ಯಧಿಕವಾದ ಮಾಹತ್ಮ್ಯವುಳ್ಳವರೂ ಆದ ಮರುತ್ತುಗಳು ಸ್ವರ್ಗಲೋಕವನ್ನು ಹತ್ತಿ ಅಲ್ಲಿ ವಾಸಿಸುವ ಅಧಿಕಾರವನ್ನು ಪಡೆದಿದ್ದಾರೆ. ಅಂತಹ ಮರುತ್ತುಗಳು ನಮ್ಮನ್ನು ಅನುಗ್ರಹಿಸಲಿ.

**ಯೇ ಯಜ್ಞೇನ ದಕ್ಷಿಣಯಾ ಸಮಕ್ತಾ ಇಂದ್ರಸ್ಯ ಸಖ್ಯಮಮೃತತ್ವಮಾನಶ ।**
**ತೇಭ್ಯೋ ಭದ್ರಮಂಗಿರಸೋ ವೋ ಅಸ್ತು ಪ್ರತಿ ಗೃಭ್ಣೀತ ಮಾನವಂ ಸುಮೇಧಸಃ ||**
(ಋ. ಸಂ. ೧೦-೬೨-೧)

ಯಜ್ಞಾರ್ಹವಾದ ಹವಿಸ್ಸುಗಳಿಂದಲೂ ದಕ್ಷಿಣೆಗಳಿಂದಲೂ ಕೂಡಿ ದೇವಪೂಜೆಯನ್ನು ಮಾಡಿದ ಎಲೈ ಅಂಗಿರಸ್ಸುಗಳೇ, ನೀವು ನಿಮ್ಮ ಸತ್ಕರ್ಮಗಳಿಂದ ಇಂದ್ರನ ಸಖ್ಯವನ್ನು ಪಡೆದಿರಿ. ಆದುದರಿಂದಲೇ ನಿಮಗೆ ಮರಣರಾಹಿತ್ಯವೂ ಲಭಿಸಿತು. ಸತ್ಕರ್ಮಕಾರಿಗಳೂ, ಸದ್ಗತಿಯನ್ನು ಪಡೆದವರೂ ಆದ ಎಲೈ ಅಂಗಿರಸ್ಸುಗಳೇ, ನಮ್ಮನ್ನು ಅನುಗ್ರಹಿಸಿರಿ. ಇತ್ಯಾದಿಯಾಗಿ, ಋಭುಗಳು, ಮರುತ್ತುಗಳೂ, ಅಂಗಿರಸ್ಸುಗಳೂ ಸಹ ದಿವ್ಯತ್ವವನ್ನು ಪಡೆದ ಸನ್ನಿವೇಶಗಳನ್ನು ತಿಳಿಸಿವೆ. ಇದರಂತೆಯೇ,

ಮಕ್ಷೂ ಕನಾಯಾಃ ಸಖ್ಯಂ ನವಗ್ವಾ ಋತಂ ವದಂತ ಋತಯುಕ್ತಿಮಗ್ಮನ್ ।
(೧೦-೬೧-೧೦)

ಇತ್ಯಾದಿ ವಾಕ್ಯಗಳಿಂದ ನವಗ್ವರು, ದಶಗ್ವರು, ಭೃಗುಗಳು ಇತ್ಯಾದಿ ಪಿತೃಗಣಕ್ಕೆ ಸೇರಿದ ಋಷಿಗಳ ಮಹಾತ್ಮ್ಯವನ್ನು ಸ್ತುತಿಸಿದೆ. ಪ್ರಾಯಶಃ ಇವರೆಲ್ಲರೂ ಸಹ ಆದಿತ್ಯನ ದಿವ್ಯತೇಜಸ್ಸನ್ನು ಹೊಂದಿದವರು ಎಂದೂ ಸೂರ್ಯಸಂಧಿಬಂಗಳಾದ ಪೂಷಾದಿದೇವತೆಗಳಿಂದ ರಕ್ಷಿತರಾದವರು ಎಂದೂ ವರ್ಣಿತರಾಗಿದ್ದಾರೆ. ಆ ಲೋಕಕ್ಕೆ ಹೋಗಿ ಸೇರತಕ್ಕ ಪ್ರೇತಗಳಿಗೂ ಪೂಷನೇ ರಕ್ಷಕನಾಗಿರು ಎಂದು ಪ್ರಾರ್ಥಿಸಿದೆ.

ಆಯುರ್ವಿಶ್ವಾಯುಃ ಪರಿ ಪಾಸತಿ ತ್ವಾ ಪೂಷಾ ತ್ವಾ ಪಾತು ಪ್ರಪಥೇ ಪುರಸ್ತಾತ್ ।
ಯತ್ರಾಸತೇ ಸುಕೃತೋ ಯತ್ರ ತೇ ಯಯುಸ್ತತ್ರ ತ್ವಾ ದೇವಃ ಸವಿತಾ ದಧಾತು ॥
(ಋ. ಸಂ. ೧೦-೧೭-೪)

ಸರ್ವಾಂತರ್ಯಾಮಿಯಾದ ವಾಯುವು ನಿನ್ನನ್ನು ರಕ್ಷಿಸಲಿ. ಸ್ವರ್ಗದ ಉತ್ತಮವಾದ ಮಾರ್ಗದಲ್ಲಿ ಹೋಗುವ ನಿನ್ನನ್ನು ಪೂಷದೇವನು ರಕ್ಷಿಸಲಿ. ಹಿಂದೆ ತಮ್ಮ ದಿವ್ಯಕರ್ಮದಿಂದ ಉತ್ತಮವಾದ ಲೋಕವನ್ನು ಪಡೆದ ಯಾವ ಉತ್ತಮವಾದ ಪಿತೃಗಳು ಇರುವರೋ ಅಲ್ಲಿ ಸವಿತೃವು ನಿನ್ನನ್ನು ಸ್ಥಾಪಿಸಲಿ ಎಂದು ಈ ಪಿತೃಗಳ ಉತ್ತಮವಾದ ಲೋಕದಲ್ಲಿ ಸೂರ್ಯನ ಸಂಬಂಧವು ತಿಳಿಸಲ್ಪಟ್ಟಿದೆ. ಕೆಳಗೆ ಉದಾಹೃತವಾಗಿರುವ ಕೆಲವು ಮಂತ್ರಗಳು ಉತ್ತಮಗಣಕ್ಕೆ ಸೇರಿದ ಪಿತೃಗಳಿಗೂ, ಅತ್ಯುತ್ತಮವೂ ತೇಜೋಯುತವೂ ಆದ ಲೋಕಸ್ಥನಾದ ಆದಿತ್ಯನಿಗೂ ಇರುವ ಸಂಬಂಧವನ್ನು ತಿಳಿಸುತ್ತವೆ.

ಆ ಭರತಂ ಶಿಕ್ಷತಂ ವಜ್ರಬಾಹೂ ಅಸ್ಮಾँ ಇಂದ್ರಾಗ್ನೀ ಅವತಂ ಶಚೀಭಿಃ ।
ಇಮೇ ನು ತೇ ರಶ್ಮಯಃ ಸೂರ್ಯಸ್ಯ ಯೇಭಿಃ ಸಪಿತ್ವಂ ಪಿತರೋ ನ ಆಸನ್ ॥
(ಋ. ಸಂ. ೧-೧೦೯-೭)

ಉಚ್ಚಾ ದಿವಿ ದಕ್ಷಿಣಾವಂತೋ ಅಸ್ಥುರ್ಯೇ ಅಶ್ವದಾಃ ಸಹ ತೇ ಸೂರ್ಯೇಣ ।
ಹಿರಣ್ಯದಾ ಅಮೃತತ್ವಂ ಭಜಂತೇ ವಾಸೋದಾಃ ಸೋಮ ಪ್ರತಿರಂತ ಆಯುಃ ॥
(೧೦-೧೦೭-೨)

ಸಹಸ್ರಣೀಥಾಃ ಕವಯೋ ಯೇ ಗೋಪಾಯಂತಿ ಸೂರ್ಯಂ ।
ಋಷೀನ್ ತಪಸ್ವತೋ ಯಮ ತಪೋಜಾँ ಅಪಿ ಗಚ್ಛತಾತ್ ॥
(೧೦-೧೫೪-೫)

ಯಾವ ಆದಿತ್ಯರಶ್ಮಿಗಳೊಡನೆ ಉತ್ತಮವಾದ ಕರ್ಮಕರ್ತರಾದ ನಮ್ಮ ಪಿತೃಗಳು ಐಕ್ಯವನ್ನು ಹೊಂದಿದರೋ ಮತ್ತು ಆ ರಶ್ಮಿಗಳೊಡನೆ ಬ್ರಹ್ಮಲೋಕವನ್ನು ಸೇರಿದರೋ, ಆ ರಶ್ಮಿಗಳು ನಮ್ಮನ್ನು ಅನುಗ್ರಹಿಸಲಿ. ಯಜ್ಞಕರ್ಮದಲ್ಲಿ ದಕ್ಷಿಣೆಯನ್ನು ಉದಾರವಾಗಿ ದಾನಮಾಡಿದವರು ಉತ್ತಮಲೋಕವನ್ನು ಸೇರಿದ್ದಾರೆ. ಅಶ್ವದಾನವನ್ನು ಮಾಡಿದವರು ಸೂರ್ಯಲೋಕವನ್ನು ಸೇರಿದ್ದಾರೆ. ಇಂತಹ ಉತ್ತಮವಾದ ಕರ್ಮವನ್ನು ಮಾಡಿದವರು ಆದಿತ್ಯನನ್ನೂ ಸಹ ರಕ್ಷಿಸಲು ಸಮರ್ಥರಾಗಿದ್ದಾರೆ. ಎಲೈ ಯಮನೇ, ಅಂತಹ ಉತ್ತಮವಾದ ಲೋಕಕ್ಕೆ ತಪೋಯುಕ್ತರಾದ ಋಷಿಗಳನ್ನು ಕರೆದುಕೊಂಡು ಹೋಗು ಇತ್ಯಾದಿಯಾಗಿ ಪ್ರಾರ್ಥಿತವಾಗಿದೆ.

ಪೃಥಿವ್ಯಾಃ ಸದಸ್ಥೇ ಅಂಗಿರಸ್ತ್ವತ್ಪೇಚುಸ್ತಾಭಿರೇವೈನಾಮೇತತ್ಪಚತಿ ತಾನಿ ಹ ತಾನಿ ನಕ್ಷತ್ರಾ- ಣ್ಯೇವ ನಕ್ಷತ್ರಾಣಿ ವೈ ಜನಯೋ ಯೇ ಹಿ ಜನಾಃ ಪುಣ್ಯಕೃತಃ ಸ್ವರ್ಗಂ ಲೋಕಂ ಯಂತಿ ತೇಷಾಮೇತಾನಿ ಜ್ಯೋತೀಂಷಿ ನಕ್ಷತ್ರೈರೇವೈನಾಮೇತತ್ಪಚತಿ ॥

(ಶ. ಬ್ರಾ. ೬-೫ ೪-೮)

ಆ ದಿವ್ಯಸ್ತ್ರೀಯರು, ಅಂಗಿರಸ್ಸುಗಳಂತೆಯೇ, ಪೃಥ್ವಿಯ ಉತ್ಸಂಗದಲ್ಲಿ ಪಾಕಮಾಡಿದರು. ಅವರ ಸಹಾಯದಿಂದ ಅವನೂ ಸಹ ಈಗ ಪಾಕಮಾಡುತ್ತಿರುವನು. ಯಾವ ದಿವ್ಯಸ್ತ್ರೀಯರು ಹಿಂದೆ ತಮ್ಮ ಉತ್ತಮವಾದ ಕರ್ಮದಿಂದ ದೇವತೆಗಳನ್ನು ಪೂಜಿಸಿದರೋ ಅವರೇ ಈಗ ನಕ್ಷತ್ರರೂಪದಲ್ಲಿ ಪ್ರಕಾಶಿಸುತ್ತಿದ್ದಾರೆ. ಹಿಂದೆಲ್ಲ ದಿವ್ಯತ್ವವನ್ನು ಪಡೆದು ಅಂತರಿಕ್ಷವನ್ನು ಸೇರಿದ ಪಿತೃಗಳೇ ಈಗ ನಕ್ಷತ್ರರೂಪದಲ್ಲಿ ಪ್ರಕಾಶಿಸುತ್ತಿದ್ದಾರೆ. ಆ ನಕ್ಷತ್ರಗಳೇ ಈ ಯಜಮಾನನಿಗೂ ಸಹಾಯಮಾಡುತ್ತಿವೆಯೆಂದು ಪ್ರಶಂಸಿಸಿವೆ.

ಒಟ್ಟಿನಲ್ಲಿ, ಈ ದಿವ್ಯತ್ವವನ್ನು ಪಡೆದ ಪಿತೃಗಳ ವರ್ಣನೆಯೇ ಅತ್ಯಧಿಕವಾಗಿರುತ್ತದೆ. ಅವರ ಲೋಕವೆಂಬುದನ್ನು ಸ್ಥೂಲವಾದ ದೃಷ್ಟಿಯಿಂದ ಯಮಲೋಕವೆನ್ನಬಹುದು. (ಆದರೆ, ಯಮನಿಗೂ ಆದಿತ್ಯನಿಗೂ ಅನೇಕ ಸನ್ನಿವೇಶಗಳಿಂದ ತಾದಾತ್ಮ್ಯವನ್ನು ತೋರಿಸಿ ಆದಿತ್ಯಲೋಕವೇ ಯಮಲೋಕವೆಂಬುದನ್ನೂ ಸಹ ಹಿಂದೆ ಯಮನ ವಿಷಯವನ್ನು ವಿವರಿಸುವಾಗ ತಿಳಿಸಿದೆ) ಈ ಅವರ (ಕೆಳಗಿನ) ಲೋಕವು ಸಾಧಾರಣವಾದ ಸತ್ಕರ್ಮವನ್ನು ಮಾಡಿದ ಪಿತೃಗಳ ಲೋಕಗಳಾಗಿರುತ್ತವೆ. ಆದರೆ, ಉಳಿದೆರಡು ಲೋಕಗಳೇ ಅಧಿಕವಾಗಿ ಪ್ರಶಂಸಿತಗಳಾಗಿರುತ್ತವೆ. ಅತ್ಯುತ್ತಮವಾದ ಈ ಲೋಕಗಳ ವರ್ಣನವೂ ಪ್ರಶಂಸೆಯೂ ಈ ರೀತಿಯಲ್ಲಿರುತ್ತದೆ.

ಯತ್ರ ಜ್ಯೋತಿರಜಸ್ರಂ ಯಸ್ಮಿಁಲ್ಲೋಕೇ ಸ್ವರ್ಹಿತಂ ।

(ಋ. ಸಂ. ೯-೧೧೩-೭)

ಯತ್ರ ರಾಜಾ ವೈವಸ್ವತೋ ಯತ್ರಾವರೋಧನಂ ದಿವಃ ।
ಯತ್ರಾಮೂರ್ಯಹ್ವತೀರಾಪಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥
ಯತ್ರಾನುಕಾಮಂ ಚರಣಂ ತ್ರಿನಾಕೇ ತ್ರಿದಿವೇ ದಿವಃ ।
ಲೋಕಾ ಯತ್ರ ಜ್ಯೋತಿಷ್ಮಂತಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥
ಯತ್ರ ಕಾಮಾ ನಿಕಾಮಾಶ್ಚ ಯತ್ರ ಬ್ರಧ್ನಸ್ಯ ವಿಷ್ಟಪಂ ।
ಸ್ವಧಾ ಚ ಯತ್ರ ತೃಪ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥
ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।
ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥

(ಋ. ಸಂ. ೮. ೧೧೩ ೮-೧೧)

ಯಾವ ಲೋಕದಲ್ಲಿ ಆದಿತ್ಯನು ಸ್ಥಾಪಿತನಾಗಿ ಅಲ್ಲಿ ದಿವ್ಯ ತೇಜಸ್ಸು ಶಾಶ್ವತವಾಗಿ ಪ್ರಕಾಶಿಸುವುದೋ, ಎಲ್ಲಿ ವಿವಸ್ವಂತನ ಪುತ್ರನಾದ ಯಮನು ಪ್ರಭುವಾಗಿರುವನೋ, ಎಲ್ಲಿ ಆದಿತ್ಯನ ಅಂತರ್ಗೃಹವಿರುವುದೋ, ಎಲ್ಲಿ ನಿತ್ಯವಾದ ಉದಕ ಪ್ರವಾಹಗಳಿರುವುವೋ, ಯಾವ ತೃತೀಯ ಸ್ಥಾನವಾದ ದ್ಯುಲೋಕದಲ್ಲಿ ಆದಿತ್ಯನು ಯಥಾಕಾಮನಾಗಿ ಸಂಚರಿಸುವನೋ, ಎಲ್ಲಿ ನಿತ್ಯವಾದ ಆನಂದವಿರುವುದೋ, ಎಲ್ಲಿ ಶ್ರೇಯಸ್ಸೂ ಕಾಮಸಂತೃಪ್ತಿಯೂ, ನಿತ್ಯವಾದ ಆನಂದವೂ ಇರು

ಪ್ರದೋ, ಅಲ್ಲಿ ನನ್ನನ್ನು ಅಮೃತನನ್ನಾಗಿ ಮಾಡು ಎಂದು ಪ್ರಾರ್ಥಿಸಿದೆ. ಅಂಗಿರಸ್ಸುಗಳು, ಋಭುಗಳು ಇತ್ಯಾದಿ ಗಳಿಗೆ ಆನಂದದಾಯಕವಾದ ಈ ಸ್ಥಾನವು ಅತ್ಯುತ್ತಮವಾದ ಪರಸ್ಥಾನವು. ಇಲ್ಲಿ ವಾಸಮಾಡುತ್ತಿರುವವರನ್ನೇ **ಪರಾಸಃ** ಎಂದು ನಿರ್ದೇಶಿಸಿದೆ. ಇವರು ಪೃಥ್ವಿಯನ್ನು ಆಶ್ರಯಿಸಿರುವ ದೇಹವನ್ನು ಬಿಟ್ಟೋಡನೆಯೇ ದಿವ್ಯಜ್ಯೋತಿಯು ಪಡೆದು ರಥದಲ್ಲಿಯೋ ಅಥವಾ ಪಕ್ಷ (ರೆಕ್ಕೆ) ಗಳ ಸಹಾಯದಿಂದಲೇ ಆ ಲೋಕಕ್ಕೆ ತೆರಳುವರು. (ಅ. ವೇ. ೧೧. ೧. ೩೭) ಒಂದೊಂದು ಸಲ ಪುರುತ್ತುಗಳೂ ಇಂತಹ ಚೇತನಗಳನ್ನು ಒಯ್ಯುವುದುಂಟು. (ಅ. ವೇ. ೧೮. ೩. ೫೧-೬). **ಸಂ ಗಚ್ಛಸ್ವ ಪಿತೃಭಿಃ** (ಋ. ಸಂ. ೧೦-೧೪-೮) ಇತ್ಯಾದಿ ವಾಕ್ಯಗಳು ಪಿತೃಗಳಿಗೆ ರಾಜನಾದ ಯಮ ಲೋಕವೇ ಈ ಮೃತರ ಉದ್ದಿಷ್ಟಸ್ಥಾನವೆಂಬುದನ್ನು ತಿಳಿಸುತ್ತವೆ.

> **ಅನತಿಪ್ರಶ್ನ್ಯಂ ಮಾ ದೇವತಾಮುಕ್ತ್ವಾ ಪ್ರಾಕ್ಷೀಃ ಪುರೇತಿಥ್ಯೈ ಮರಿಷ್ಯಸಿ ನ ತೇऽಸ್ಥೀನಿ ಚನ ಗೃಹಾನ್ ಪ್ರಾಪ್ಸ್ಯಂತೀತಿ**
>
> (ಶ. ಬ್ರಾ. ೧೧. ೬. ೩. ೧೧)

ಇತ್ಯಾದಿ ವಾಕ್ಯಗಳಿಂದ ಮೃತದೇಹವು ದಗ್ಧವಾಗುವುದಕ್ಕೂ ಮೃತಿಹೊಂದಿದ ಪ್ರೇತಗಳು ಯಮನ ದಿವ್ಯಲೋಕಕ್ಕೆ ಹೋಗುವುದಕ್ಕೂ ಸಂಬಂಧವಿರುವುದನ್ನು ತಿಳಿಸುತ್ತವೆ. ಈ ವಿವರಣೆಗಳು ಅತ್ಯುತ್ತಮವಾದ ಸತ್ಕರ್ಮಗಳನ್ನು ಮಾಡಿದ ಚೇತನಗಳಿಗೆ ಮಾತ್ರ ಅನ್ವಯಿಸುವುವು. ಆದರೆ, ಉಳಿದ ಚೇತನಗಳ ಗತಿಯೇನು ? ಅವುಗಳ ಮರಣಾಂತರ ಅವುಗಳ ಸಂಚಾರಮಾರ್ಗಗಳಾವುವು ? ಇತ್ಯಾದಿ ವಿಷಯಗಳನ್ನೂ ಸದ್ಯಃ ಪರಿಶೀಲಿಸಬೇಕಾಗಿರುತ್ತದೆ.

ಮೃತರಾದ ಪ್ರೇತಗಳು ಯಮಲೋಕಕ್ಕೆ ಹೋಗುವಾಗ ಅಲ್ಲಿ ನಾಲ್ಕು ಕಣ್ಣುಳ್ಳವೂ, ದೀರ್ಘವಾದ ನಾಸಿಕೆ ಗಳುಳ್ಳವೂ ಭಯಂಕರವಾದವೂ ಆದ ಸಾರಮೇಯಗಳನ್ನು (ನಾಯಿ) ದಾಟಿಹೋಗಬೇಕಾಗುತ್ತದೆ. ಭಯಂಕರವಾದ ಆ ಸಾರಮೇಯಗಳನ್ನು ದಾಟಿಕೊಂಡು ಶೀಘ್ರವಾಗಿ ಯಮನ ಸಾನ್ನಿಧ್ಯವನ್ನು ಸೇರಬೇಕೆಂದು ಪ್ರೇತನಿಗೆ ಸೂಚಿಸಲಾಗಿದೆ. ಅಲ್ಲದೆ, ಯಮನಲ್ಲಿಗೆ ಹೋಗಿ ಸೇರತಕ್ಕ ಪ್ರೇತಗಳನ್ನು ರಕ್ಷಿಸತಕ್ಕವೂ ಅವೇ ಎಂದು ತಿಳಿಸಲಾಗಿದೆ. **ಯಮಸಂಬಂಧಿನೌ ಶ್ವಾನೌ ಪ್ರೇತಸ್ಯ ಬಾಧಕೌ ತೌ ಪರಿತ್ಯಜ್ಯ ಸಮೀಚೀನೇನ ಮಾರ್ಗೇಣ ಪ್ರೇತಂ ನಯ** ಪ್ರೇತಗಳಿಗೆ ಬಾಧಕವಾದ ಯಮನ ಸಾರಮೇಯಗಳನ್ನು ದಾಟಿಸಿ ಯಮನಲ್ಲಿಗೆ ಕರೆದುಕೊಂಡು ಹೋಗು ಎಂದು ಅಗ್ನಿಯನ್ನು ಪ್ರಾರ್ಥಿಸಿದೆ. (ಋ. ಸಂ. ೧೦-೧೪-೧೦). ಮತ್ತು **ತಾಭ್ಯಾಮೇನಂ ಪರಿ ದೇಹಿ** (೧೦-೧೪-೧೧) ಈ ಪ್ರೇತಗಳ ರಕ್ಷಣಾರ್ಥವಾಗಿ ಇವನ್ನು ಆ ಶ್ವಾನಗಳಲ್ಲಿ ಒಪ್ಪಿಸು ಎಂದು ಯಮನನ್ನು ಪ್ರಾರ್ಥಿಸಿದೆ. ಅಲ್ಲದೇ—**ಉರೂಣಸಾವಸುತೃಪಾ ಉದುಂಬಲೌ ಯಮಸ್ಯ ದೂತೌ ಚರತೋ ಜನಾँ ಅನು** (೧೦-೧೪-೧೨) ಪ್ರಾಣಿಗಳ ರಕ್ತವನ್ನುಹೀರಿ ಕೊಬ್ಬಿರುವ ಆ ಶ್ವಾನಗಳು ಪ್ರಾಣಿಗಳನ್ನೇ ಯಾವಾಗಲೂ ಲಕ್ಷಿಸಿ ಸಂಚರಿಸುವುವು ಎಂಬ ವರ್ಣನವೂ ಸಹ ಅವುಗಳ ಭಯಂಕರಸ್ವರೂಪವನ್ನು ತಿಳಿಸುತ್ತದೆ. ಈ ಎರಡು ಅಂಶಗಳನ್ನು ತಿಳಿಸಿರುವುದರಿಂದ ಸತ್ಕರ್ಮಕಾರರನ್ನು ಅವು ರಕ್ಷಿಸುವುವೆಂದೂ, ಅಸತ್ಕರ್ಮಕಾರರನ್ನು ಹಿಂಸಿಸುವುವೆಂದೂ ತಾತ್ಪರ್ಯವಾಗಬಹುದು. (ಆ ಸಾರಮೇಯಗಳ ನಿಜವಾದ ಸ್ವರೂಪವೇನಿರಬಹುದೆಂಬುದನ್ನು ಹಿಂದೆ ತಿಳಿಸಿದೆ).

ಆದರೆ, ಸತ್ಕರ್ಮಿಗಳಿಗೆ ಪ್ರಾಶಸ್ತ್ಯವೂ ಅಸತ್ಕರ್ಮಿಗಳಿಗೆ ಶಿಕ್ಷೆಯೂ ವಿಹಿತವಾಗಿರುವ ವಿಷಯವನ್ನು ಋಕ್ಸಂಹಿತೆಯಲ್ಲಿ ಎಲ್ಲೂ ನಿಸ್ಪಷ್ಟವಾಗಿ ತಿಳಿಸಿಲ್ಲ.

ಯದ್ವಕ್ಷಿಣೋ ವೇದ್ಯಂತಃ ಸ ಯತ್ಸಾಧು ಕರೋತಿ ತದಂತರ್ವೇದ್ಯಥ ಯದಸಾಧು (ಶ. ಬ್ರಾ. ೧೧-೨-೭-೩೩) ಇತ್ಯಾದಿ ಸ್ಥಳಗಳಲ್ಲಿ ಮಾತ್ರ ಈ ವ್ಯತ್ಯಾಸವು ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ. ಸಾಧುಗಳಿಗೆ ಲಭಿಸತಕ್ಕ ಸದ್ಗತಿ ಯಾವುದು, ಅಲ್ಲಿ ಅವರಿಗೆ ಯಾವ ಸೌಖ್ಯವಿರುತ್ತದೆ ಎಂಬುವುದನ್ನು ಹೇಳಿ ವಿವರಿಸಿದೆ. ಅಸತ್ಕರ್ಮಿಗಳಿಗೆ ಈ ಪದವಿಯಿಲ್ಲ. ಅವರಿಗೆ ಲಭಿಸತಕ್ಕ ಫಲಗಳೇನು ಎಂದರೆ, ನರಕಪ್ರಾಪ್ತಿ. ನರಕದ ಸ್ವರೂಪವನ್ನು ಪುರಾಣಾದಿಗಳಲ್ಲಿ ವರ್ಣಿಸಿರುವಂತೆ ಋಕ್ಸಂಹಿತೆಯಲ್ಲಿ ವಿವರಿಸಿಲ್ಲ. ಆದರೂ ಸಹ ಅವರಿಗೆ ಸದ್ಗತಿಯಿಲ್ಲ ಮತ್ತು ಅಂಧಕಾರರೂಪವಾದ ಅಧೋಲೋಕದಲ್ಲಿ ಅವರನ್ನು ತಳ್ಳತಕ್ಕದ್ದು ಎಂಬ ಸನ್ನಿವೇಶಗಳು ವರ್ಣಿತವಾಗಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಲಾಗುತ್ತದೆ.

**ಅಭ್ರಾತರೋ ನ ಯೋಷಣೋ ವ್ಯಂತಃ ಪತಿರಿಪ್ರೋ ನ ಜನಯೋ ದುರೇವಾಃ ।**
**ಪಾಪಾಸಃ ಸಂತೋ ಅನೃತಾ ಅಸತ್ಯಾ ಇದಂ ಪದಮಜನತಾ ಗಭೀರಂ ॥**
(ಋ. ಸಂ. ೪-೫-೫)

ಎಂಬಲ್ಲಿ ಪಾಪಿಷ್ಠರಿಗೆ ಲಭಿಸತಕ್ಕ ಲೋಕವನ್ನು ಗಭೀರವಾದ ಅಂಧಕಾರಲೋಕವೆಂದು ತಿಳಿಸಿದೆ. ಅದರ ಜೊತೆಯಲ್ಲಿ ಒದಗತಕ್ಕ ದುಃಖವೂ ವರ್ಣಿತವಾಗಿದೆ. ಅನೃತಾತ್ಮರೂ, ಅಸತ್ಯವಂತರೂ ಇತರ ವಿಧವಾದ ಪಾಪವನ್ನು ಆಚರಿಸಿದವರೂ ಆದ ಜನರಿಗೆ ಅತ್ಯಂತ ದುಃಖವು ಸಂಭವಿಸಲಿ. ರಕ್ಷಕರಿಲ್ಲದ ಅನಾಥೆಯಾದ ಸ್ತ್ರೀಯಂತೆಯೂ, ಪತಿಯಿಂದ ದ್ವೇಷಿಸಲ್ಪಟ್ಟ ಹೆಂಗಸಿನಂತೆಯೂ ಸಹ ಪಾಪಾತ್ಮರಾದ ಈ ಚೇತನಗಳು ದಿಕ್ಕಿಲ್ಲದೆ ಈ ಅಂಧಕಾರದಲ್ಲಿ ಅಲೆಯಲಿ.

**ಇಂದ್ರಾಸೋಮಾ ದುಷ್ಕೃತೋ ವವ್ರೇ ಅಂತರನಾರಂಭಣೇ ತಮಸಿ ಪ್ರ ವಿಧ್ಯತಂ ।**
**ಯಥಾ ನಾತಃ ಪುನರೇಕಶ್ಚನೋದಯತ್ತದ್ವಾಮಸ್ತು ಸಹಸೇ ಮನ್ಯುಮಚ್ಛವಃ ॥**
(ಋ. ಸಂ. ೭. ೧೦೪. ೩)

ಎಲೈ ಇಂದ್ರ ಮತ್ತು ಸೋಮ ದೇವತೆಗಳೇ, ದುಷ್ಟಜೀವನವನ್ನು ನಡೆಸಿದ ದುಷ್ಟರಾದ ರಾಕ್ಷಸರನ್ನು ತಳವಿಲ್ಲದ ಅಂಧಕಾರಲೋಕಕ್ಕೆ ತಳ್ಳಿರಿ. ಅವರಲ್ಲಿ ಒಬ್ಬರೂ ಮೇಲಕ್ಕೇಳದವರಾಗಲಿ, ಇತ್ಯಾದಿ ಪ್ರಾರ್ಥನೆಗಳಲ್ಲಿ ನರಕದ ಭಾವವಿದ್ದರೂ ಸಹ ಮೃತರಾದ ಪ್ರೇತಗಳಿಗೆ ಇದು ನಿಷ್ಕೃಷ್ಟವಾದ ಸ್ಥಾನವೆಂಬುದು ತಿಳಿದು ಬಂದಿಲ್ಲ.

ಋಕ್ಸಂಹಿತಾವಾಕ್ಯಗಳಲ್ಲಿ ವರ್ಣಿತವಾಗಿರುವಂತೆ, ಪಾಪಿಗಳಾರೆಂದರೆ, ಯಜ್ಞಕರ್ಮಗಳನ್ನು ಯಾರು ಆಚರಿಸುವುದಿಲ್ಲವೋ ಅವರೆಲ್ಲರೂ ಪಾಪಿಷ್ಠರು.

**ಅದೇವಯುಃ**—ವಿಧ್ಯುಕ್ತವಾಗಿರುವಂತೆ ದೇವಪೂಜಾದಿಗಳನ್ನು ಮಾಡದಿರುವವರು.

**ಬ್ರಹ್ಮದ್ವಿಷಃ**—ಸ್ತುತಿಗಳನ್ನೂ ಸ್ತುತಿಕರ್ತರನ್ನೂ ನಿಂದಿಸುವವರು.

**ಅವ್ರತಾಃ**—ಯಾಗಾದಿ ಕರ್ಮರಹಿತರು.

**ಅಸುನ್ವತಃ**—
**ಅಪೃಣತಃ**— } ಸೋಮಾದಿ ಹವಿಸ್ಸುಗಳನ್ನು ಅರ್ಪಿಸದಿರುವವರು
**ಅಶಸಃ**— } ಸ್ತುತಿಗಳನ್ನು ಪಠಿಸದಿರುವವರು

ಇವರೆಲ್ಲರೂ ಪಾಪಿಷ್ಠರೆಂದು ಪರಿಗಣಿತರಾಗಿದ್ದಾರೆ. ಇವರೆಲ್ಲರೂ ಮಾನವರ ಗುಂಪಿಗಾದರೂ ಸೇರಿರಬಹುದು ಅಥವಾ ಅಸುರಾದಿಗಳ ಗುಂಪಿಗಾದರೂ ಸೇರಿರಬಹುದು ಇವರಿಗೆಲ್ಲರಿಗೂ ಅನೇಕ

ವಿಧವಾದ ಶಿಕ್ಷೆಗಳನ್ನು ವಿಧಿಸಿದೆ. ಎಲೈ ಅಗ್ನಿಯೇ, ಕರ್ಮರಹಿತರನ್ನು ನೀನು ಅನುಗ್ರಹಿಸಬೇಡ. ಮತ್ತು ಅಂತಹವರನ್ನು ಶಿಕ್ಷಿಸು. ಇತ್ಯಾದಿಯಾಗಿ ಅಗ್ನ್ಯಾದಿ ಸಕಲ ದೇವತೆಗಳನ್ನೂ ಪ್ರಾರ್ಥಿಸಿದೆ. (೧. ೧೫೦. ೩; ೩. ೧೮. ೨; ೧೦. ೩೮. ೩ ಇತ್ಯಾದಿ). ಪುಣ್ಯಕರ್ಮಿಗಳಿಗೆ ಸುಖಸಾಧಕವಾದ ಯಾವ ಸ್ವಾತಂತ್ರ್ಯವು ವರ್ಣಿತವಾಗಿರುವುದೋ, ಪಾಪಿಷ್ಠರಿಗೆ ದುಃಖಸಾಧಕವಾದ ಬಂಧನವೂ ಅದೇ ರೀತಿ ವರ್ಣಿತವಾಗಿರುತ್ತದೆ. **ಪಾಶ, ರಜ್ಜು, ಪ್ರಸಿತಿ, ಬಂಧ** ಇತ್ಯಾದಿ ಪದಗಳು ಇಂತಹ ಬಂಧನವನ್ನು ನಿರ್ದೇಶಿಸುತ್ತವೆ. ಸುಖವೂ ಮತ್ತು ಸ್ವಾತಂತ್ರ್ಯವೂ ಹೇಗೆ ಸ್ವರ್ಗಾದಿಲೋಕಗಳಲ್ಲಿ ಸಾಧ್ಯವೋ ಅದರಂತೆ, ಈ ಬಂಧನವು ಇದಕ್ಕೆ ಅನುಗುಣವಾದ ಲೋಕದಲ್ಲಿ ಅನುಭವಿಸಲ್ಪಡಬೇಕು. **ವವ್ರ, ಗಾಧ, ತಮಃ** ಇತ್ಯಾದಿಪದಗಳು ಈ ಲೋಕದ ಸ್ವರೂಪವನ್ನು ಸೂಚಿಸುತ್ತವೆ. **ವವ್ರ, ಗಭೀರ**, ಎಂಬ ಪದಗಳ ಪ್ರಯೋಗಗಳನ್ನೂ ಅವುಗಳ ತಾತ್ಪರ್ಯಗಳನ್ನೂ ಮೇಲೆ ಉದಾಹೃತವಾಗಿರುವ ಮಂತ್ರಗಳಲ್ಲಿ ತಿಳಿಸಿದೆ. (ಋ.ಸಂ. ೪. ೫. ೫; ೭. ೧೦೪. ೩). ಕೇವಲ ಅಂಧಕಾರಮಯವಾದ್ದುಲೋಕವೆಂದು ಮಾತ್ರ ಇವುಗಳಿಂದ ಸೂಚಿತವಾಗುತ್ತದೆ. ಸ್ವರ್ಗಲೋಕಕ್ಕೆ ವ್ಯತಿರಿಕ್ತವಾದುದು **ನರಕ** ಲೋಕವೆಂದು ಅಥರ್ವವೇದದಲ್ಲಿ ಮಾತ್ರ ನಿಷ್ಕೃಷ್ಟವಾಗಿ ಹೇಳಿರುತ್ತದೆ. (ಅ. ವೇ. ೧೨. ೪. ೩೬). ಈ ನರಕಲೋಕದ ವರ್ಣನವು ಋಕ್ಸಂಹಿತಾವಾಕ್ಯದಲ್ಲಿಯೂ ಸಹ ವಿಶದವಾಗಿರುತ್ತವೆ.

**ವಿ ನ ಇಂದ್ರ ಮೃಧೋ ಜಹಿ ನೀಚಾ ಯಚ್ಛ ಪೃತನ್ಯತಃ ।**
**ಯೋ ಅಸ್ಮಾँ ಅಭಿದಾಸತ್ಯಧರಂ ಗಮಯಾ ತಮಃ ॥**

(೧೦. ೧೫೨. ೪)

ಎಲೈ ಇಂದ್ರನೇ, ನಮ್ಮ ಹಿಂಸಕರನ್ನು ನಾಶಪಡಿಸು. ನಮ್ಮೊಂದಿಗೆ ಯುದ್ಧಮಾಡಲಿಚ್ಛಿಸುವವರನ್ನು ಅಧೋಮುಖವಾಗಿ ತಳ್ಳು. ಯಾವ ಶತ್ರುವು ನಮ್ಮನ್ನು ಅತ್ಯಧಿಕವಾಗಿ ಹಿಂಸಿಸುವನೋ ಅವನನ್ನು ಅತ್ಯಂತ ಗಾಢವಾದ ಅಂಧಕಾರ ಕೂಪಕ್ಕೆ ತಳ್ಳು ಇತ್ಯಾದಿಯಾಗಿ ಇರುತ್ತದೆ. ಆದರೆ ನರಕಸಂಬಂಧವಾದ ಅಗ್ನಿಯ ಭಯಂಕರವಾದ, ವರ್ಣನೆವಾಗಲಿ, ಇತರ ಹಿಂಸೆಗಳ ವಿವವರಣವಾಗಲಿ ಇಲ್ಲ.

ಕೆಲವು ಪಾಶ್ಚಾತ್ಯಪಂಡಿತರು ಈ ಅಂಶವನ್ನು ವಿವರಿಸುತ್ತ **ವೀಚೀ** ಎಂಬ ಪದವು ನರಕಪರ್ಯಾಯವಾಗಿರುತ್ತವೆಂದು ತಿಳಿಸುತ್ತಾರೆ.

**ಬೃಹನ್ಮಿತ್ರಸ್ಯ ವರುಣಸ್ಯ ಧಾಮ ಕದು ಬ್ರವ ಆಹನೋ ವೀಚ್ಯಾ ನೄನ್ ।**

(೧೦-೧೦.೬)

ಎಂಬಲ್ಲಿ **ವೀಚ್ಯಾ** ಎಂಬುದಕ್ಕೆ ಸಾಯಣರೂ ಸಹ **ನರಕೇಣ** ಎಂದರ್ಥವನ್ನೇ ಮಾಡಿರುತ್ತಾರೆ. ನರಕದ ಚಿತ್ರಹಿಂಸೆಗಳನ್ನು ಶತಪಥ ಬ್ರಾಹ್ಮಣಲ್ಲಿ ವಿಶದವಾಗಿ ತಿಳಿಸಿದೆ.

ಭೃಗುವು ತನ್ನ ಪಿತೃವಾದ ವರುಣನ ನಿರ್ದೇಶದ ಪ್ರಕಾರವಾಗಿ ಕರ್ಮಯುಕ್ತವಾದ ಅನುಭವಗಳನ್ನು ಹೊಂದುವ ಪ್ರೇತಜೀತನಗಳನ್ನು ನೋಡುತ್ತ ನಾಲ್ಕು ದಿಕ್ಕುಗಳಲ್ಲೂ ಸಂಚರಿಸುವ ಕಾಲದಲ್ಲಿ ಅತೀವ ಬೀಭತ್ಸವಾದ ದರ್ಶನಗಳನ್ನೆಲ್ಲಾ ನೋಡುತ್ತಾನೆ. ಪುರುಷರು ಪುರುಷರನ್ನೇ ಕತ್ತರಿಸುವುದು. ಒಬ್ಬರನ್ನೊಬ್ಬರು ಕಿತ್ತುತಿನ್ನುವುದು ಇತ್ಯಾದಿಯಾದ ದೃಶ್ಯಗಳು ವರ್ಣಿತವಾಗಿವೆ. ಇವೆಲ್ಲವೂ ನರಕಯಾತನೆಗಳು. ಜೈಮಿನೀಯಬ್ರಾಹ್ಮಣದಲ್ಲಿ

ಮೂರು ವಿಧವಾದ ಸ್ವರ್ಗಗಳೂ, ಮೂರು ವಿಧವಾದ ನರಕಗಳೂ ವಿವೃತವಾಗಿವೆ. (ಜೈ. ಬ್ರಾ. ೧-೪೨-೪೩-೪೪). ಸತ್ಕರ್ಮಕ್ಕೆ ಒಳ್ಳೆಯ ಫಲವೂ, ಅಸತ್ಕರ್ಮಕ್ಕೆ ಕೆಟ್ಟ ಅನುಭವವೂ ಸ್ವರ್ಗ ಮತ್ತು ನರಕಗಳಲ್ಲಿ ಸಿದ್ಧವೆಂದು ಶತಪಥ ಬ್ರಾಹ್ಮಣವು ವಿವರಿಸುತ್ತದೆ. (ಶ. ಬ್ರಾ. ೬-೩-೨-೩೭ ಮತ್ತು ೧೦-೬-೩-೧ ಇತ್ಯಾದಿ).

ಸ್ವರ್ಗಾದಿಲೋಕಗಳನ್ನು ಸೇರಲು ಕೇವಲ ಪುರುಷನ ಕರ್ಮವೇ ಸಾಧಕವಲ್ಲ- ಮೃತದೇಹದ ಸಂಸ್ಕಾರವೂ ಸಹ ಈ ಸಾಧನಗಳಲ್ಲೊಂದಾಗಿರುತ್ತದೆ.

**ಸ ಏವಂವಿದಾ ದಹ್ಯಮಾನಃ ಸಹೈವ ಧೂಮೇನ ಸ್ವರ್ಗಲೋಕಮೇತೀತಿ ವಿಜ್ಞಾಯತೇ ।**

(ಆಶ್ವಲಾಯನಗೃಹ್ಯಸೂತ್ರ ೪-೪-೭)

ವಿಧ್ಯುಕ್ತವಾಗಿ ದಗ್ಧನಾದರೆ ಮಾತ್ರ ಆ ದೇಹಾಂತರ್ಗತನಾದ ಪುರುಷನು ಸ್ವರ್ಗಕ್ಕೆ ಹೋಗುತ್ತಾನೆ ಎಂದಿರುತ್ತದೆ. ಆದರೆ ಋಕ್ಸಂಹಿತೆಯಲ್ಲಿ ಈ ವಿಧವಾದ ನಿಯಮವು ಯಾವುದೂ ನಿರ್ದಿಷ್ಟವಾಗಿಲ್ಲ, ಅಗ್ನಿದಗ್ಧರಾಗಲಿ, ಅನಗ್ನಿದಗ್ಧರಾಗಲಿ ಅವರೆಲ್ಲರೂ ಸಹ ಸ್ವರ್ಗದಲ್ಲಿ ಕುಳಿತು ಸ್ವಧೆಯಿಂದ ತೃಪ್ತಿಯನ್ನು ಹೊಂದುತ್ತಾರೆ, ಎಂದು ವರ್ಣಿಸಿರುತ್ತದೆ. (ಋ. ಸಂ. ೧೦-೧೫-೧೪). ಮೃತನ ದೇಹಕ್ಕೆ ಪೃಥ್ವಿಯೇ ಆಶ್ರಯನೆಂಬ ಅಭಿಪ್ರಾಯವೂ ಸಹ ಅನೇಕ ಕಡೆಗಳಲ್ಲಿ ಉಕ್ತವಾಗಿರುತ್ತದೆ,

**ಪಿತೃಣಾಗ್ಂ ಸದನಮಸೀತಿ ಬರ್ಹಿರವ ಸ್ತೃಣಾತಿ ಪಿತೃದೇವತ್ಯಾ ೨ ಗ್ಂ ಹ್ಯೇತದ್ಯನ್ನಿಖಾತಂ**

(ತೈ- ಸಂ. ೬-೩-೪-೨)

**ಶುಂಧಂತಾಂ ಲೋಕಾಃ ಪಿತೃಷದನಾ ಇತಿ ಪಿತೃದೇವತ್ಯೋ ವೈ ಕೂಪಃ ಖಾತಸ್ತಮೇವೈತನ್ಮೇಧ್ಯಂ ಕರೋತಿ ॥**

(ಶ. ಬ್ರಾ. ೩-೬-೧-೧೩)

ಯಜ್ಞವೇದಿಯ ಸಮೀಪದಲ್ಲಿ ಕರ್ಮಸಾಧಕವಾಗಿ ಅಗೆದಿರುವ ಗುಳಿಯು ಅತಿಶ್ರೇಷ್ಠವಾದುದು. ಈ ಗುಳಿಯು ಪಿತೃಗಳ ವಾಸಸ್ಥಾನವಾಗಿರುತ್ತದೆ ಇತ್ಯಾದಿಯಾಗಿ ಅನೇಕ ಕಡೆಗಳಲ್ಲಿ ವರ್ಣಿತವಾಗಿರುತ್ತದೆ. ಪ್ರೇತಗಳಿಗೆ ಅರ್ಪಿತವಾಗುವ ಪಿಂಡಾದಿಗಳನ್ನು ಸ್ವರ್ಗಕ್ಕೆ ಒಯ್ಯಲು ಅಗ್ನಿಯಲ್ಲಿ ಅರ್ಪಿಸುವುದಿಲ್ಲ. ಅನೇಕ ಸಂದರ್ಭಗಳಲ್ಲಿ ಭೂಮಿಯನ್ನು ಅಗೆದು ಅವನ್ನು ಗುಳಿಯೊಳಕ್ಕೆ ಹಾಕುತ್ತಾರೆ. ಆದರೆ, ಶ್ರಾದ್ಧಕಾಲದಲ್ಲಿ ಅರ್ಪಿಸುವ ಪಿಂಡಗಳಿಗೂ ಮೃತಿಯನ್ನು ಹೊಂದಿದ ಕೂಡಲೇ ಅರ್ಪಿಸುವ ಪಿಂಡಗಳಿಗೂ ವ್ಯತ್ಯಾಸವಿರುತ್ತದೆ. ಪುರುಷನು ಮೃತಿಯನ್ನು ಹೊಂದಿದ ಕೂಡಲೇ ಸ್ವರ್ಗಕ್ಕೆ ಹೋಗಿ ಪಿತೃಲೋಕವನ್ನು ಸೇರುವುದಿಲ್ಲ. ಮೃತಿಯನ್ನು ಹೊಂದಿದ ಒಂದು ವರ್ಷದವರೆಗೆ ಮಾಡತಕ್ಕ ಶ್ರಾದ್ಧವೂ ಶ್ರಾದ್ಧಸಂಕಲ್ಪವೂ ಬೇರೆಯಾಗಿರುತ್ತದೆ. ಪಿತೃಪಿತಾಮಹಪ್ರಪಿತಾಮಹಾದಿಗಳಿಗೆ ಅರ್ಪಿತವಾಗುವ ಪಿಂಡಗಳಿಗೂ ಇದಕ್ಕೂ ವ್ಯತ್ಯಾಸವಿರುತ್ತದೆ. ಒಂದು ವರ್ಷದವರೆಗೆ ಮೃತನ ಪ್ರೇತವು ಪೃಥ್ವಿಯ ಸಮೀಪದಲ್ಲಿಯೇ ಇರುವುದೆಂಬ ಒಂದು ನಂಬಿಕೆಯಿರುತ್ತದೆ. ಆದರೆ, ಋಕ್ಸಂಹಿತೆಯಲ್ಲಿ ಈ ವ್ಯತ್ಯಾಸವನ್ನು ತಿಳಿಸಿಲ್ಲ- ಮೃತನಾದೊಡನೆಯೇ ಪುರುಷನು ಪೂರ್ವಪಿತೃಗಳೊಡನೆ ಖಂಡಿತ ಸೇರಿಕೊಳ್ಳುತ್ತಾನೆ. ಒಂದು ವೇಳೆ ಪಿತೃವಿಗೂ ಪ್ರೇತದ ಸ್ಥಿತಿಗೂ ವ್ಯತ್ಯಾಸವಿದ್ದರೂ ಸಹ, ಮೃತನು ಭೂತ (ಪಿಶಾಚಿ) ರೂಪದಲ್ಲಿ ತನ್ನ ಕಾಮಪೂರ್ತಿಗಾಗಿ ಪೃಥ್ವಿಯಲ್ಲಿ ಬಂದಿರುವನು ಎಂಬುದಕ್ಕೆ ಆಧಾರವಿಲ್ಲ, ಆದರೆ, ಶ್ರಾದ್ಧಾದಿಸ್ವೀಕಾರಕ್ಕಾಗಿ ಪಿತೃಗಳು ಪೃಥ್ವಿಗೆ ಬರುವರು ಎಂದು ಮಾತ್ರ ವರ್ಣಿತವಾಗಿದೆ.

ಇದಂ ಪಿತೃಭ್ಯೋ ನಮೋ ಅಸ್ತ್ವದ್ಯ ಯೇ ಪೂರ್ವಾಸೋ ಯ ಉಪರಾಸ ಈಯುಃ ।
ಯೇ ಪಾರ್ಥಿವೇ ರಜಸ್ಯಾ ನಿಷತ್ತಾ ಯೇ ವಾ ನೂನಂ ಸುವೃಜನಾಸು ವಿಕ್ಷು ॥

(ಋ. ಸಂ. ೧೦. ೧೫. ೨)

ಪಿತೃಲೋಕಕ್ಕೆ ಹೋಗಿ ಸೇರಿರುವ ಪಿತೃಗಳಿಗೆ ನಮ್ಮ ಪೂಜೆಯು ಅರ್ಪಿತವಾಗಲಿ. ಅವರು ಜನ್ಮತಃ ನಮಗಿಂತಲೂ ದೊಡ್ಡವರಾಗಿದ್ದರೂ ಸರಿ ಅಥವಾ ನಮಗಿಂತಲೂ ಚಿಕ್ಕವರಾಗಿದ್ದರೂ ಸರಿ, ಮೃತರಾದನಂತರ ಪಿತೃಲೋಕಕ್ಕೆ ಸೇರಿದ ಮೇಲೆ ನಮಗೆಲ್ಲ ಪೂಜ್ಯರು. ಅಂತಹ ಪಿತೃಗಳಿಗೂ, ಮತ್ತು ಪಾರ್ಥಿವಲೋಕದಲ್ಲಿ ನಮ್ಮ ಶ್ರಾದ್ಧಕಾಲದಲ್ಲಿ ಬಂದಿರ ತಕ್ಕ ಪಿತೃಗಳಿಗೂ ನಮ್ಮ ಪೂಜೆಯು ಅರ್ಪಿತವಾಗಲಿ ಎಂದು ಪೃಥ್ವಿಯಲ್ಲಿ ಬಂದಿರುವ ಪಿತೃಗಳನ್ನು ನಿರ್ದೇಶಿಸಿದೆ. ಅದಲ್ಲದೇ, ಕೆಲವು ಪಾಪಕರ್ಮವನ್ನಾಚರಿಸಿದರೆ, ಒಂದು ನಿರ್ದಿಷ್ಟಕಾಲದವರೆಗೆ ಪಿತೃಲೋಕಪ್ರಾಪ್ತಿಯೂ ಸಹ ಇರುವುದಿಲ್ಲ. ಉದಾಹರಣೆಗೆ.

ಇತಿ ಯೋಽಪಗುರಾತೈ ಶತೇನ ಯಾತಯಾದ್ಯೋ ನಿಹನತ್ಸಹಸ್ರೇಣ ಯಾತಯಾದ್ಯೋ ಲೋಹಿತಂ ಕರವದ್ಯಾವತಃ ಪ್ರಸ್ಕದ್ಯ ಪಾಗ್ಂ ಸೂನ್ತ್ಸಂಗೃಹ್ಣಾತ್ತಾವತಸ್ಸಂವತ್ಸರಾನ್ ಪಿತೃ ಲೋಕಂ ನ ಪ್ರಜಾನಾದಿತಿ ॥

(ತೈ. ಸಂ. ೨. ೬. ೧೦. ೨)

ಯಾರು ಪೂಜ್ಯರನ್ನು ಹೊಡೆದು ಹಿಂಸಿಸಿ ಕೆಡಹುವರೋ ಅಂತಹವರು ಮೃತಿಯನ್ನು ಹೊಂದಿದರೆ ಅವರಿಗೆ ಕೂಡಲೆ-ಪಿತೃಲೋಕಪ್ರಾಪ್ತಿಯಿಲ್ಲ. ಕೆಳಕ್ಕೆ ಚೆಲ್ಲಿದ ರಕ್ತಕಣಗಳು ಎಷ್ಟು ಸಂಖ್ಯೆಯಲ್ಲಿ ಮರುಳುಕಣಗಳನ್ನು ಒದ್ದೆಗೊಳಿ ಸುವುವೋ ಅಷ್ಟು ವರ್ಷಗಳು ಆ ಮೃತರ ಚೇತನಗಳು ಪಿತೃಲೋಕವನ್ನು ಸೇರಲಾಗುವುದಿಲ್ಲ- ಇವು ಪಾರ್ಥಿವಲೋಕ ದಲ್ಲೇ ಅಲೆದಾಡಬೇಕಾಗುತ್ತದೆ ಆದರೆ, ಪುರಾಣಾದಿಗಳಲ್ಲಿ ವರ್ಣಿತವಾಗುವಂತೆ ಇವುಗಳು ಪಿಶಾಚಿಗಳೆಂದೆನ್ನಿಸಿ ಕೊಳ್ಳಲಾರವು. ಪೈಶಾಚ ಶಬ್ದವು ವೈದಿಕವಾಕ್ಯಗಳಲ್ಲಿದ್ದರೂ ಸಹ ಅದು ರಾಕ್ಷಸಾದಿಗಳ ಗುಂಪಿಗೆ ಸೇರಿದ ದುಷ್ಟ ಶಕ್ತಿಯೆಂದರಿಯಬೇಕು.

## 3. ಪುನರುತ್ಪತ್ತಿ ಮತ್ತು ಜನ್ಮಾಂತರ

ಮೃತನಾದ ಪುರುಷನು ಪುನಃ ಪಾರ್ಥಿವದೇಹವನ್ನು ಧರಿಸಿ ಪೃಥ್ವಿಯಲ್ಲಿ ಹುಟ್ಟುವನು ಎಂಬುದಕ್ಕೆ ಋಕ್ಸಂಹಿತೆಯಲ್ಲಿ ಆಧಾರವಿಲ್ಲ ಎಂದು ಕೆಲವು ವಿದ್ವಾಂಸರುಗಳ ಅಭಿಪ್ರಾಯವಾಗಿದೆ ಪುನರುತ್ಪತ್ತಿಯೆಂಬುದು ಸ್ವತಃ ಸಿದ್ಧವಾದುದು ಎಂಬುದನ್ನು ಸೂಚಿಸುವ ವಾಕ್ಯಗಳೂ ಇವೆ ಎಂದು ಮತ್ತೆ ಕೆಲವರ ವಾದ. ಪುರುಷನ ಕರ್ಮಾನುಸಾರವಾಗಿ ಸ್ವರ್ಗ ವನ್ನೋ ಅಥವಾ ನರಕವನ್ನೋ ಅವನ ಚೇತನವು ಸೇರಬೇಕು ಎಂಬ ನಿರ್ದೇಶಗಳಿರುವುದರ ಜೊತೆಗೆ, ಅವನವನ ಕರ್ಮಾನುಸಾರವಾಗಿ ಪೃಥ್ವಿಯಲ್ಲಿ ಪುನಃ ಅವನ ಜನ್ಮವು ವಿಹಿತವಾಗಿರುವ ವಾಕ್ಯಗಳು ಸಂಹಿತೆಗಳಲ್ಲಿವೆಯೋ ಎಂದು ಪ್ರಕೃತದಲ್ಲಿ ಪರಿಶೀಲಿಸಬೇಕಾದ ವಿಷಯವಾಗಿರುತ್ತದೆ.

ಸಂ ಗಚ್ಛಸ್ವ ಪಿತೃಭಿಃ ಸಂ ಯಮೇನೇಷ್ಟಾಪೂರ್ತೇನ ಪರಮೇ ವ್ಯೋಮನ್ ।
ಹಿತ್ವಾಯಾವದ್ಯಂ ಪುನರಸ್ತಮೇಹಿ ಸಂಗಚ್ಛಸ್ವ ತನ್ವಾ ಸುವರ್ಚಾಃ ॥

(ಋ. ಸಂ. ೧೦-೧೪-೮)

ಎಂಬಲ್ಲಿ ಪ್ರೇತವನ್ನು ಸಂಬೋಧಿಸಿದೆ. ಅದು ಪಿತೃಗಳೊಡನೆ ಸೇರಿ, ಅತ್ಯುತ್ತಮವಾದ ಲೋಕದಲ್ಲಿ ತನ್ನ ಕರ್ಮಾನುರೋಧವಾದ ಫಲವನ್ನನುಭವಿಸಿ ಅದಕ್ಕೆ ತಕ್ಕ ಶರೀರವನ್ನು ಸೇರಿಕೊಳ್ಳಬೇಕೆಂದು ತಿಳಿಸಿದೆ. ಇಲ್ಲಿ ತನ್ವಾ ಎಂಬುದಕ್ಕೆ ಅರ್ಥವೇನು ? ದಿವ್ಯಶರೀರನೆಂದೇ, ಅಥವಾ ಪುನಃ ಪಾರ್ಥಿವಶರೀರನೆಂದೇ ಎಂಬುದರ ವಿಷಯದಲ್ಲಿ ಚರ್ಚೆಯಿರುತ್ತದೆ. ಇಹ ಎನ್ನುವುದಕ್ಕೆ **ಆಗಚ್ಛ** ಎಂದು ಸಾಯಣರು ಅರ್ಥಮಾಡಿದ್ದಾರೆ. ಪುನಃ ಈ ಲೋಕಕ್ಕೆ ಬಾ ಎಂದು ಯಾರೂ ಕರೆಯಲಾರರು. ಆದುದರಿಂದ ಈ ವಾಕ್ಯದ ಆಧಾರದ ಮೇಲೆ ಪಾರ್ಥಿವಲೋಕದಲ್ಲಿ ಪುನರುತ್ಪತ್ತಿಯ ವಿಷಯದಲ್ಲಿ ನಿಸ್ಪಷ್ಟವಾದ ಅಭಿಪ್ರಾಯವನ್ನು ತಿಳಿಸಲಾಗುವುದಿಲ್ಲ. ಮತ್ತು,

**ಸೂರ್ಯಂ ಚಕ್ಷುರ್ಗಚ್ಛತು ವಾತಮಾತ್ಮಾ ದ್ಯಾಂ ಚ ಗಚ್ಛ ಪೃಥಿವೀಂ ಚ ಧರ್ಮಣಾ ।**
**ಅಪೋ ವಾ ಗಚ್ಛ ಯದಿ ತತ್ರ ತೇ ಹಿತಮೋಷಧೀಷು ಪ್ರತಿ ತಿಷ್ಠಾ ಶರೀರೈಃ ।**
(ಋ. ಸಂ. ೧೦-೧೬-೩)

ಎಲೈ ಪ್ರೇತವೇ, ನಿನ್ನ ಚಕ್ಷುಸ್ಸು ಸೂರ್ಯನಲ್ಲಿ ಸೇರಲಿ. ಪ್ರಾಣವು ವಾಯುವನ್ನು ಸೇರಲಿ. ನೀನು ನಿನ್ನ ಕರ್ಮಫಲಾನುಸಾರವಾಗಿ ದ್ಯುಲೋಕವನ್ನಾದರೂ ಸೇರು, ಪೃಥ್ವಿಯನ್ನಾದರೂ ಸೇರು ಅಥವಾ ಅಂತರಿಕ್ಷವನ್ನಾದರೂ ಸೇರು. ನೀನು ಓಷಧಿರೂಪವಾದ ಅವಯವಗಳೊಂದಿಗೆ ಕೂಡಿಕೊಂಡಿರು ಇತ್ಯಾದಿ ವಾಕ್ಯಗಳು ಪುನಃ ಪಾರ್ಥಿವಲೋಕದ ಜನ್ಮವನ್ನು ತಿಳಿಸುತ್ತವೆ. ಆದರೆ ಪುನರಾವೃತ್ತಿ, ಪುನರ್ಜನ್ಮ, ಇತ್ಯಾದ್ಯಭಿಪ್ರಾಯಗಳನ್ನು ನಿಸ್ಪಷ್ಟವಾಗಿ ತಿಳಿಸಿಲ್ಲ. ಈ ಚರ್ಚೆಯೂ ಈ ಸಂದರ್ಭದಲ್ಲಿ ಅಷ್ಟು ಪ್ರಕೃತವಲ್ಲ. ಆನುಷಂಗಿಕವಾಗಿ ಪ್ರಾಪ್ತವಾದ ಈ ವಿಷಯವನ್ನು ಸ್ವಲ್ಪ ಮಟ್ಟಿಗೆ ಮಾತ್ರ ಸೂಚಿಸಿದೆ. ಮುಂದೆ ಈ ಸಂದರ್ಭವು ಒದಗಿದರೆ, ಈ ವಿಷಯವನ್ನು ವಿಮರ್ಶಿಸಲಾಗುತ್ತದೆ.

## 4. ಪ್ರೇತಸಂಸ್ಕಾರ

ಪುರುಷನು ಮೃತನಾದನಂತರ ದೇಹವನ್ನು ಸುಡುವುದು ಅಥವಾ ಹೂಳುವುದು ಇವೆರಡರಲ್ಲಿ ಒಂದು ಸಂಸ್ಕಾರವನ್ನಾಚರಿಸಬೇಕು. **ಅಗ್ನಿದಗ್ಧಾಃ ಅನಗ್ನಿದಗ್ಧಾಃ** ಇತ್ಯಾದಿ ವಿವರಣೆಗಳಿಂದ (ಋ. ಸಂ. ೧೦-೧೫-೧೪) ಈ ಎರಡು ಕ್ರಮವೂ ಆಚರಣೆಯಲ್ಲಿದ್ದಿತೆಂದು ಕೆಲವರ ಮತ. ಆದರೆ, ಅನಗ್ನಿದಗ್ಧಾಃ ಎಂಬಿಷ್ಟು ಮಾತ್ರಕ್ಕೆ ಈ ಪದ್ಧತಿಯು ನಿಯತವಾಗಿ ಜಾರಿಯಲ್ಲಿದ್ದಿತೆಂಬುದನ್ನು ಹೇಳಲಾಗುವುದಿಲ್ಲ. ಸಾಯಣರು ಈ ಪದಕ್ಕೆ ಶ್ಮಶಾನಕರ್ಮರಹಿತಾಃ ಎಂದರ್ಥ ಮಾಡಿದ್ದಾರೆ. ಎಲ್ಲಾದರೂ ಅನಾಹುತವು ಸಂಭವಿಸಿ ಯಾವ ಸಂಸ್ಕಾರಕ್ಕೂ ಅವಕಾಶವಿಲ್ಲವೇ ಇರತಕ್ಕ ಪ್ರೇತನಿಗೆ ಶ್ಮಶಾನಸಂಸ್ಕಾರವು ಇರುವುದಿಲ್ಲ. ಆದುದರಿಂದಲೇ ಈ ಪದ್ಧತಿಯೂ ವಾಡಿಕೆಯಲ್ಲಿದ್ದಿತು ಎಂದು ಈ ಆಧಾರಮಾತ್ರದಿಂದ ಹೇಳಲಾಗುವುದಿಲ್ಲ. ದಹನಕ್ರಿಯೆಯಂತೆಯೇ, ಭೂಮಿಯಲ್ಲಿ ಹೂಳುವ ಪದ್ಧತಿಯೂ ರೂಢಿಯಲ್ಲಿದ್ದಿತೇ ಎಂಬುದಕ್ಕೆ ಸಂಹಿತಾವಾಕ್ಯಗಳಲ್ಲಿ ಬೇರೆ ಯಾವುದಾದರೂ ಆಧಾರವಿದೆಯೇ ಎಂಬುದನ್ನು ಪರಿಶೀಲಿಸಬೇಕು.

**ಉಪ ಸರ್ಪ ಮಾತರಂ ಭೂಮಿಮೇತಾಮುರುವ್ಯಚಸಂ ಪೃಥಿವೀಂ ಸುಶೇವಾಂ ।**
**ಊರ್ಣಮ್ರದಾ ಯುವತಿರ್ದಕ್ಷಿಣಾವತ ಏಷಾ ತ್ವಾ ಪಾತು ನಿರ್ಋತೇರುಪಸ್ಥಾತ್ ॥**
(ಋ. ಸಂ. ೧೦-೧೮-೧೦)

**ಉತ್ತೇ ಸ್ತಭ್ನಾಮಿ ಪೃಥಿವೀಂ ತ್ವತ್ಪರೀಮಂ ಲೋಗಂ ನಿದಧನ್ಮೋ ಅಹಂ ರಿಷಂ ।**
**ಏತಾಂ ಸ್ಥೂಣಾಂ ಪಿತರೋ ಧಾರಯಂತು ತೇಽತ್ರಾ ಯಮಃ ಸಾದನಾ ತೇ ಮಿನೋತು ॥**
(ಋ. ಸಂ. ೧೦-೧೮-೧೩)

ಎಲೈ ಮೃತದೇಹನೇ, ವಿಸ್ತೃತವಾದ ಈ ಪೃಥ್ವಿಯನ್ನು ಪ್ರವೇಶಿಸು. ಈ ಪೃಥ್ವಿಯು ಸುಖದಾಯಕಳಾಗಿದ್ದಾಳೆ. ಉಣ್ಣೆಯಂತೆ ಮೃದುವಾದ ಆಶ್ರಯವನ್ನೀಯುತ್ತಾಳೆ. ಉತ್ತಮವಾದ ಯಜ್ಞಕರ್ತನಿಗೆ ನಿಋತಿಯಿಂದ ರಕ್ಷಣೆಯನ್ನು ನೀಡುತ್ತಾಳೆ. ಆದುದರಿಂದ ಭೀತಿರಹಿತನಾಗಿ ಇದನ್ನು ಪ್ರವೇಶಿಸು.

ಎಲೈ ಮೃತದೇಹನೇ, ನಿನ್ನ ಸುತ್ತಲೂ ಮಣ್ಣಿನ ರಾಶಿಯನ್ನು ತಳ್ಳುತ್ತೇನೆ. ನಿನಗೆ ಯಾವ ಹಿಂಸೆಯೂ ಆಗದಿರಲಿ. ನನ್ನನ್ನೂ ಸಹ ಯಾವ ಶಕ್ತಿಯೂ ಹಿಂಸಿಸದಿರಲಿ. ಪಿತೃಗಳು ನಿನ್ನ ಧಾರಕರಾಗಿರಲಿ. ಯಮನು ನಿನಗೆ ಉತ್ತಮವಾದ ವಸತಿಯನ್ನು ಕಲ್ಪಿಸಲಿ. ಇತ್ಯಾದಿಯಾಗಿ ಪೃಥ್ವಿಯಲ್ಲಿ ನಿಕ್ಷೇಪದಂತೆ ಇಡುವ ಸನ್ನಿವೇಶಗಳು ವಿಶದವಾಗಿ ವರ್ಣಿತವಾಗಿವೆ.

**ಮಾತಾ ಪುತ್ರಂ ಯಥಾ ಸಿಚಾಭ್ಯೇನಂ ಭೂಮ ಊರ್ಣುಹಿ ।**

(ಋ. ಸಂ ೧೦-೧೮-೧೧)

ಮಾತೆಯು ತನ್ನ ಶಿಶುವನ್ನು ಉತ್ತಮವಾದ ಹೊದ್ದಿಕೆಯಿಂದ ಹೊದ್ದಿಸುವಂತೆ ಈ ಭೂಮಾತೆಯು ಮೃತದೇಹಕ್ಕೆ ಹೊದ್ದಿಸಿ ರಕ್ಷಣೆಯನ್ನು ನೀಡುತ್ತದೆ ಎಂದು ಮೃತದೇಹಕ್ಕೆ ಇರುವ ಸುರಕ್ಷತೆಯನ್ನು ಪ್ರಶಂಸಿಸಿವೆ.

ಮೃತದೇಹವನ್ನು ದಹಿಸುವುದಾಗಲಿ ಅಥವಾ ಹೂಳುವುದಾಗಲಿ, ತತ್ಪೂರ್ವದಲ್ಲಿ ಮಾಡಬೇಕಾದ ಸಂಸ್ಕಾರಗಳೂ ಅನೇಕವಿರುತ್ತವೆ. ಮರಣಕ್ಕೆ ಮೊದಲು ಯಜಮಾನರು ಆಹಿತಾಗ್ನಿಯನ್ನು ಆರಾಧಿಸುತ್ತಿದ್ದರೆ ಆ ಮೃತದೇಹವನ್ನು ಆ ಅಗ್ನಿಯ ಸಮೀಪದಲ್ಲೇ ಇರಿಸಿ ಅದನ್ನು ಗೋಮಯದಿಂದ ಶುದ್ಧಿಮಾಡಿ ದರ್ಭಾಸನಗಳಿಂದ ಹೊದ್ದಿಸತಕ್ಕದ್ದು. ಇತ್ಯಾದಿಯಾಗಿ ಮುಂದಿನ ಗೃಹ್ಯಸೂತ್ರಾದಿಗಳಲ್ಲಿ ಯಾವ ರೀತಿಯಾದ ವಿಧಗಳಿರುವುದೋ ಹಿಂದಿನ ಸಂಪ್ರದಾಯದಲ್ಲೂ ಅದೇ ರೀತಿ ವಿಧ್ಯುಕ್ತವಾದ ರೀತಿಯಲ್ಲಿ ಅದೇ ಸಂಸ್ಕಾರಗಳು ಆಚರಣೆಯಲ್ಲಿದ್ದವು ಎಂಬುದಕ್ಕೆ ಅನೇಕ ಆಧಾರಗಳಿವೆ. (ಅವುಗಳ ವಿವರಣೆಯು ಸದ್ಯಃ ಅಪ್ರಕೃತ) **ಅಪೇತ ವೀತ ವಿ ಚ ಸರ್ಪತಾತಃ** ಇತ್ಯಾದಿ ಮಂತ್ರಗಳನ್ನು ಪಠಿಸುತ್ತ ಮೃತದೇಹದ ದಹನವು ಶ್ಮಶಾನಭೂಮಿಯವರೆಗೆ ತತ್ಸಂಬಂಧಿಗಳಿಂದ ಮಾಡಲ್ಪಡಬೇಕು. ಆದರೆ, ಮೃತದೇಹವನ್ನು ಹೊರುತ್ತಿದ್ದರೇ ಅಥವಾ ರಥಾದಿಗಳಲ್ಲಿ ಒಯ್ಯುತ್ತಿದ್ದರೇ ಎಂಬುದನ್ನು ನಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲ. ಶ್ಮಶಾನಕ್ಕೆ ಹೋದನಂತರ ಅಗ್ನಿಚಿತಿಯಲ್ಲಿ ಅವನ ದೇಹವನ್ನಿರಿಸತಕ್ಕದ್ದು. ಅವನು ಜೀವಿಸಿದ್ದಾಗ ಅಗ್ನಿತ್ರಯವನ್ನು ಆರಾಧಿಸುತ್ತಿದ್ದರೆ, ಶ್ಮಶಾನದಲ್ಲಿಯೂ ಸಹ ಗೃಹದ (ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯ ಎಂಬ) ಅಗ್ನಿಗಳ ಭಾಗಗಳಿಂದ ಪ್ರಜ್ವಲಿತವಾದ ಅಗ್ನಿಗಳ ಮಧ್ಯದಲ್ಲಿ ಚಿತಿಯಿರತಕ್ಕದ್ದು. ಶಾಸ್ತ್ರಕ್ಕಾಗಿ ಅವನ ಪಕ್ಕದಲ್ಲಿಯೇ ಅವನ ಪತ್ನಿಯನ್ನು ಮಲಗಿಸಿ ನಂತರ ಅವಳನ್ನು ಅಲ್ಲಿಂದ ಏಳುವಂತೆ ಸೂಚಿಸತಕ್ಕದ್ದು.

**ಉದೀರ್ಷ್ವ ನಾರ್ಯಭಿ ಜೀವಲೋಕಂ ಗತಾಸುಮೇತಮುಪ ಶೇಷ ಏಹಿ ।**
**ಹಸ್ತಗ್ರಾಭಸ್ಯ ದಿಧಿಷೋಸ್ತವೇದಂ ಪತ್ಯುರ್ಜನಿತ್ವಮಭಿ ಸಂ ಬಭೂಥ ॥**

(ಋ. ಸಂ. ೧೦-೧೮-೮)

ಎಲೈ ಮೃತನ ಪತ್ನಿಯಾದ ನಾರಿಯೇ, ನಿನ್ನ ಪಾಣಿಗ್ರಹಣವನ್ನು ಮಾಡಿದ ಈ ಪತಿಯ ಸಾನ್ನಿಧ್ಯಶಯ್ಯೆಯನ್ನು ಸೇರಿ ಅನುಮರಣವನ್ನು ನಿಶ್ಚಯಿಸಿದ್ದೀಯೆ. ಆದರೆ ಇಲ್ಲಿಂದ ಎದ್ದು ಬಂದು ಜೀವಿಸಿರುವ ನಿನ್ನ ಪುತ್ರಾದಿಗಳ ಬಳಿಗೆ ಹೋಗಿ ಸೇರು ಎಂದು ನಿರ್ದಿಷ್ಟಳಾಗುತ್ತಾಳೆ. ಅನಂತರ ಅಗ್ನಿಚಯನವು, ಇತ್ಯಾದಿಯಾದ ಸಂಪ್ರದಾಯಗಳಿರುತ್ತವೆ

ದಹನಕರ್ಮಕ್ಕಾಗಿ ಚಿತಿಯನ್ನು ಏರ್ಪಡಿಸುವಾಗಲೂ ಸಹ ಖನನಕರ್ಮವು ನೆರವೇರುತ್ತಿದ್ದಿತೆಂಬುದಕ್ಕೆ ಆಧಾರಗಳಿವೆ. ಹೇಗೆಂದರೆ ;—

**ಅಥೈತಾಂ ದಿಶಮಗ್ನೀನ್ ನಯಂತಿ । (ಯಸ್ಯಾಂ ದಿಶಿ ಭೂಮಿಭಾಗಃ ಖಾನಿತಃ ತಾಂ ದಿಶಮಗ್ನೀನ್ ನಯಂತಿ)**

(ಆ. ಗೃ. ಸೂ. ೪-೨-೧)

ಯಾವ ಭಾಗದಲ್ಲಿ ಅಗ್ನಿಚಿತಿಯನ್ನು ನಿರ್ಮಿಸಿದೆಯೋ ಆ ಭಾಗಕ್ಕೆ ಅಗ್ನಿಯನ್ನು ಕೊಂಡೊಯ್ಯುವುದು ಎಂದಿರುತ್ತದೆ. ಆ ಅಗ್ನಿಚಯನದಲ್ಲಿ ಬರ್ಹಿಯನ್ನು ಹರಡಿ ಅದಕ್ಕೆ ಉತ್ತರದಲ್ಲಿ ಪತ್ನಿಯನ್ನು ಕುಳ್ಳಿರಿಸಬೇಕು ಎಂದಿರುತ್ತದೆ.

**ಉತ್ತರತಃ ಪತ್ನೀಂ (ಸಂವೇಶಯಂತಿ)** (ಆ. ಗೃ. ಸೂ. ೪.೨-೧೩) ಮೇಲೆ ಹೇಳಿದಂತೆ ಆ ಪತ್ನಿಗೆ ನಿರ್ದೇಶವನ್ನು ಕೊಟ್ಟನಂತರ ಆಯಾ ವರ್ಣಕ್ಕನುಸಾರವಾದ ಕ್ರಿಯೆಗಳಿಂದ ಕೂಡಿ ಅಗ್ನಿಯನ್ನು ಅರ್ಪಿಸತಕ್ಕದ್ದು ಎಂದಿರುತ್ತದೆ. ಉಳಿದ ಕರ್ಮಗಳ ವಿವರಣವು ಸದ್ಯಃ ಅಪ್ರಕೃತವಾಗಿರುತ್ತದೆ. ಆದರೆ, ವೈದಿಕಸಂಸ್ಕೃತಿಯನ್ನು ಪ್ರತಿಬಿಂಬಿಸುವ ಕೆಲವು ಸಂಪ್ರದಾಯಗಳನ್ನು ಮಾತ್ರ ಇಲ್ಲಿ ಪರಿಶೀಲಿಸಬಹುದು. ಈ ಕರ್ಮಕಾಲದಲ್ಲಿ ಪಠಿಸತಕ್ಕ ಮಂತ್ರಗಳಿಂದ ಪ್ರೇತಸಂಸ್ಕಾರ ಕಾಲದಲ್ಲಿ ಮೃತಿಹೊಂದಿದ ಪ್ರೇತದ ರಕ್ಷಣೆಯು ಅತ್ಯವಶ್ಯವಾಗಿ ಅಗ್ನಿಗೆ ಒಪ್ಪಿಸತಕ್ಕದ್ದು. ಅಗ್ನಿಯು ಈ ಪ್ರೇತವನ್ನು ಹಿಂಸಿಸದೇ ಅದರ ನಿರ್ದಿಷ್ಟಸ್ಥಾನಕ್ಕೆ ಅದನ್ನು ಒಯ್ಯತಕ್ಕದ್ದು ಎಂದು ಅಗ್ನಿಯನ್ನು ಪ್ರಾರ್ಥಿಸಿದೆ. ಆ ಪ್ರಾರ್ಥನೆಯ ಕ್ರಮವು ಈ ರೀತಿಯಿರುತ್ತದೆ.

**ಮೈನಮಗ್ನೇ ವಿ ದಹೋ ಮಾಭಿ ಶೋಚೋ ಮಾಸ್ಯ ತ್ವಚಂ ಚಿಕ್ಷಿಪೋ ಮಾ ಶರೀರಂ ।**
**ಯದಾ ಶೃತಂ ಕೃಣವೋ ಜಾತವೇದೋಽಥೇಮೇನಂ ಪ್ರ ಹಿಣುತಾತ್ಪಿತೃಭ್ಯಃ ॥**

(ಋ. ಸಂ. ೧೦-೧೬-೧)

ಎಲೈ ಅಗ್ನಿಯೇ, ಇವನನ್ನು ಸಂಪೂರ್ಣವಾಗಿ ದಹಿಸಬೇಡ. ಇವನನ್ನು ಹಿಂಸಿಸಬೇಡ. ಇವನ ದೇಹವು ಚದುರಿ ಹೋಗುವಂತೆ ಮಾಡಬೇಡ. ಇವನ ದೇಹವನ್ನು ಪೂರ್ಣವಾಗಿ ದಹಿಸಿದ ಮೇಲೆ ಇವನನ್ನು ಪಿತೃಗಳಲ್ಲಿಗೆ ಒಯ್ಯಬೇಕು. ಪೂರ್ಣವಾಗಿ ಪಕ್ವವಾದನಂತರ ಈ ಪ್ರೇತವು ದೇವತೆಗಳ ಸಂಕಲ್ಪಾನುಸಾರವಾಗಿ ಪಿತೃಲೋಕವನ್ನು ಸೇರುತ್ತದೆ. ಇದರ ಚಕ್ಷುಸ್ಸು ಸೂರ್ಯನನ್ನು ಸೇರಿಕೊಳ್ಳಲಿ. ಆತ್ಮನು ವಾಯುವನ್ನು ಸೇರಲಿ. ಎಲೈ ಪ್ರೇತವೇ, ನಿನ್ನ ಕರ್ಮಾನುಸಾರವಾಗಿ ನೀನು ದ್ಯುಲೋಕವನ್ನಾಗಲಿ ಅಥವಾ ಪೃಥ್ವಿಯನ್ನಾಗಲಿ ಸೇರು. ಅಥವಾ ಉದಕದಲ್ಲಾಗಲಿ ಅಥವಾ ಓಷಧ್ಯಾದಿಗಳಲ್ಲಾಗಲಿ ವಾಸಮಾಡು. ಎಲೈ ಅಗ್ನಿಯೇ, ದಗ್ಧವಾಗದೇ ಉಳಿಯುವ ದೇಹದ ಭಾಗಗಳನ್ನೆಲ್ಲ ದಹಿಸು. ನಿನ್ನ ತೇಜಸ್ಸು ಆ ಭಾಗಗಳನ್ನು ಪೂರ್ಣವಾಗಿ ದಹನಮಾಡಲಿ.

**ಇಮಮಗ್ನೇ ಚಮಸಂ ಮಾ ವಿ ಜಿಹ್ವರಃ ಪ್ರಿಯೋ ದೇವಾನಾಮುತ ಸೋಮ್ಯಾನಾಂ ।**
**ಏಷ ಯಶ್ಚಮಸೋ ದೇವಪಾನಸ್ತಸ್ಮಿನ್ದೇವಾ ಅಮೃತಾ ಮಾದಯಂತೇ ॥**

(ಋ. ಸಂ. ೧೦-೧೬-೮)

ಎಲೈ ಅಗ್ನಿಯೇ, ಈ ಸೋಮಪ್ರಿಯರಾದ ಪಿತೃಗಳನ್ನೂ, ದೇವತೆಗಳನ್ನೂ ಉದ್ದೇಶಿಸಿ ಇಲ್ಲಿ ಅರ್ಪಿಸಿರುವ ಸೋಮಪೂರ್ಣವಾದ ಚಮಸಪಾತ್ರೆಯನ್ನು ಅಲುಗಾಡಿಸಬೇಡ. ಇದು ದೇವತೆಗಳ ಪಾನಕ್ಕೆ ಯೋಗ್ಯವಾದ ಪಾತ್ರೆಯು. ಇದರ ಪಾನದಿಂದ ಅಮರ್ತ್ಯರಾದ ದೇವತೆಗಳು ಸಂತೋಷವನ್ನು ಹೊಂದುತ್ತಾರೆ. ಇತ್ಯಾದಿಯಾಗಿ ಅಗ್ನಿಚಯನದ ಕಾಲದಲ್ಲಿ ಪ್ರೇತಹಿತಾರ್ಥವಾದ ಅನೇಕ ಪ್ರಾರ್ಥನೆಗಳು ಇರುತ್ತವೆ. ಕೊನೆಯದಾಗಿ ;—

**ಅಸ್ಮಾತ್ತ್ವಮಧಿ ಜಾತೋಽಸಿ ತ್ವದಯಂ ಜಾಯತಾಂ ಪುನಃ । ಅಸೌ ಸ್ವರ್ಗಾಯ ಲೋಕಾಯ ಸ್ವಾಹಾ ।**

(ಶ. ಬ್ರಾ. ೧೨-೫-೨-೧೫)

ಎಲೈ ಅಗ್ನಿಯೇ, ಇವನಿಂದ ನೀನು (ಯಜ್ಞಾಗ್ನಿರೂಪದಲ್ಲಿ) ಉತ್ಪನ್ನನಾದೆ. ಅಂತಹ ನಿನ್ನಿಂದ ಇವನು ಉತ್ತಮವಾದ ದಿವ್ಯಲೋಕದ ಜನ್ಮವನ್ನು ಹೊಂದಲಿ ಎಂಬ ಚರಮಪ್ರಾರ್ಥನೆಯಿರುತ್ತದೆ.

ಅಗ್ನಿಚಯನವಾದನಂತರ ಮೃತರ ಸಂಬಂಧಿಗಳು ಹಿಂತಿರುಗಿನೋಡದೆ ಆ ಸ್ಥಾನದಿಂದ ನಿವೃತ್ತರಾಗುತ್ತಾರೆ. (**ಇತ್ಯನಪೇಕ್ಷಮೇತ್ಯಾಪ ಉಪಸ್ಪೃಶಂತಿ**) (ಶ. ಬ್ರಾ. ೧೨-೫-೨-೧೫). ಸ್ನಾನಾದಿಗಳನ್ನು ಮಾಡಿ ಉಳಿದ ಕರ್ಮಗಳನ್ನು ನೆರವೇರಿಸುತ್ತಾರೆ. (ಆ ವಿವರಣವೂ ಸದ್ಯಃ ಅಪ್ರಕೃತ). ಇಲ್ಲಿ ಇನ್ನೊಂದಂಶವು ಗಮನಾರ್ಹವಾದುದು. ಮೃತನು ಪ್ರೇತರೂಪದಲ್ಲಿ ಹತ್ತು ದಿನಗಳು ಮೃತನ ಸಂಬಂಧಿಗಳ ಸಮೀಪದಲ್ಲಿಯೇ ಅಲೆದಾಡುವುದು ಎಂಬ ಶ್ರದ್ಧೆಯು ವೈದಿಕಕಾಲದಿಂದಲೂ ಅನುಸ್ಯೂತವಾಗಿ ಬೆಳೆದು ಬಂದಿದೆಯೆಂಬುದಕ್ಕೆ ಅನೇಕ ಆಧಾರಗಳಿರುತ್ತವೆ. ಅಸ್ಥಿಸಂಚಯನವೂ ಉಳಿದ ಕರ್ಮಗಳೂ ನೆರವೇರಿದನಂತರವೇ ಶುದ್ಧಿ. ಅಲ್ಲಿಯವರೆಗೆ ಶುದ್ಧಿಯಿಲ್ಲ.

ಮೃತನ ಜ್ಞಾಪಕಾರ್ಥವಾಗಿ ನಿರ್ಮಿತವಾಗತಕ್ಕ ಸ್ಮಾರಕವೂ ಆ ಸ್ಮಾರಕದಲ್ಲಿ ನೆರವೇರಬೇಕಾದ ಕ್ರಿಯೆಗಳೂ ಸಹ ಮೃತನ ಆತ್ಮಕ್ಕೆ ತೃಪ್ತಿಯನ್ನುಂಟುಮಾಡತಕ್ಕವು ಎಂಬ ಶ್ರದ್ಧೆಯೂ ಸಹ ವೈದಿಕಸಂಪ್ರದಾಯದಲ್ಲಿ ಕಾಣುತ್ತದೆ.

**ಅಥಾಸ್ಮೈ ಕಲ್ಯಾಣಂ ಕುರ್ವಂತಿ । ಅಥಾಸ್ಮೈ ಶ್ಮಶಾನಂ ಕುರ್ವಂತಿ । ಗೃಹಾನ್ ವಾ ಪ್ರಜ್ಞಾನಂ ವಾ ಯೋ ವೈ ಕಶ್ಚ ಮ್ರಿಯತೇ ಸ ಶವಸ್ತಸ್ಮಾ ಏತದನ್ನಂ ಕರೋತಿ...... .... ......॥**

(ಶ. ಬ್ರಾ. ೧೩-೮-೧-೧-).

ನಂತರ, ಮೃತನ ಬಂಧುಗಳು, ಮೃತನಾದ ಪ್ರೇತಕ್ಕೆ ಸದ್ಗತಿಯುಂಟಾಗಬೇಕಾದ ಪ್ರಯತ್ನಗಳನ್ನು ಮಾಡುತ್ತಾರೆ. ಅವನಿಗೆ ಒಂದು ಸ್ಮಾರಕವನ್ನು ನಿರ್ಮಿಸುತ್ತಾರೆ. ಮೃತನಿಗೆ ಅನ್ನವನ್ನು ಅರ್ಪಿಸುವ ಸ್ಥಾನವೇ ಇದು. ಶವಕ್ಕೆ ಅನ್ನವನ್ನು ಅರ್ಪಿಸುವ ಸ್ಥಾನವಾದ್ದರಿಂದ ಈ ಸ್ಥಾನಕ್ಕೆ ಶ್ಮಶಾನವೆಂದೂ ಹೆಸರು. ಅಥವಾ **ಶ್ಮಶ**ವೆಂಬುದು ಪಿತೃಪರ್ಯಾಯವಾಗಿಯೂ ಇರುತ್ತದೆ. ತದರ್ಥವಾಗಿ ನಿರ್ಮಿತವಾದ ಅನ್ನವು ಅರ್ಪಿತವಾಗುವುದರಿಂದಲೂ ಸಹ ಶ್ಮಶಾನವೆಂಬ ಹೆಸರು ಎಂದು ತಿಳಿಯುತ್ತದೆ. ನೃತ್ಯಕ್ರಿಯೆ, ವೀಣಾದಿ ವಾದ್ಯವಾದನ ಇತ್ಯಾದಿ ಕ್ರಿಯೆಗಳು ನೆರವೇರುತ್ತವೆ.

ಪೃಥ್ವಿಯಲ್ಲಿ ಜೀವಿಸುವ ಪುರುಷನಿಗೆ ಯಾವ ಯಾವ ವಸ್ತುಗಳು ಪ್ರಿಯಕಾರಕಗಳೋ ಅವೆಲ್ಲವೂ ಮೃತನಿಗೂ ಪ್ರಿಯಕಾರಕಗಳೆಂಬ ಶ್ರದ್ಧೆಯೂ ಅನಾದಿಯಾಗಿರುತ್ತದೆ. ಆದುದರಿಂದಲೇ ವಸ್ತ್ರ, ಭೂಷಣ, ಫಲ ಇತ್ಯಾದ್ಯನೇಕವಾದ ವಸ್ತುಗಳು ಪ್ರೇತತೃಪ್ತ್ಯರ್ಥವಾಗಿ ಅರ್ಪಿತವಾಗುತ್ತವೆ.

ಮೃತರೆಲ್ಲರಿಗೂ ಆಚರಿಸುವ ಸಾಧಾರಣಕ್ರಿಯೆಗಳ ಜೊತೆಗೆ ಉತ್ತಮವಾದ ಯಜ್ಞಕರ್ತರ ವಿಷಯದಲ್ಲಿ ಇನ್ನೂ ಅತ್ಯಧಿಕವಾದ ಕೆಲವು ವಿಶೇಷಕ್ರಿಯೆಗಳ ಆಚರಣಗಳೂ ವಿಹಿತವಾಗಿವೆ. ಅಗ್ನಿಹೋತ್ರವನ್ನಾಚರಿಸಿದವನೂ, ಬ್ರಹ್ಮಜ್ಞಾನಿಯೂ (ಬ್ರಹ್ಮಮೇಧವನ್ನಾಚರಿಸಿದವನೂ) ವಿಶೇಷಕ್ರಿಯೆಗಳಿಗೆ ಅರ್ಹರಾಗುತ್ತಾರೆ. ಗರ್ಭಿಣೀಸ್ತ್ರೀಯರು ಮೃತರಾದರೆ ಅವರಿಗೂ ವಿಶೇಷಕ್ರಿಯೆಯು ವಿಹಿತವಾಗಿರುತ್ತದೆ. ಈಗಿನ ಸಂಪ್ರದಾಯದಲ್ಲಿರುವಂತೆ ಸನ್ಯಾಸಿಯ

ತಲೆಯನ್ನು ನಾಳಿಕೇರಫಲದಿಂದ ತೂತುಮಾಡಿ ಆ ಬ್ರಹ್ಮರಂಧ್ರದಿಂದ ಅವನ ಚೇತಸ್ಸು ಹೊರಹೊರಡುವಂತೆ ಮಾಡುವ ಕ್ರಮ ವೈದಿಕಸಂಪ್ರದಾಯದಲ್ಲಿದ್ದಂತೆ ಕಂಡುಬರುವುದಿಲ್ಲ.

ಪ್ರೇತತೃಪ್ತಿಗಾಗಿ ಐಹಿಕವಾದ ಯಾವ ಕರ್ಮವನ್ನಾಚರಿಸಿದರೂ ನಷ್ಟ, ಪ್ರೇತದ ಕರ್ಮಾನುಸಾರವಾಗಿಯೇ ಅವರ ಸುಖದುಃಖಾನುಭವಗಳು ಸಿದ್ಧವಾಗಿವೆ. ಈ ಅಂಶವು ಪಿತೃಯಾನ ಮತ್ತು ದೇವಯಾನ ಎಂಬ ಮೃತನ ಚೇತನವು ಸಂಚರಿಸುವ ಮಾರ್ಗವಿಶೇಷಗಳಿಂದ ಸ್ಪಷ್ಟವಾಗಿ ತಿಳಿಯುತ್ತದೆ.

ಜೀವಾತ್ಮನ ಕರ್ಮಾನುರೋಧವಾದ ಗತಿಯು ಎರಡು ವಿಧವಾಗಿರುತ್ತದೆ. ಉತ್ತಮವಾದ ಕರ್ಮವನ್ನು ಆಚರಿಸಿ ಸ್ವರ್ಗಾದಿಲೋಕವನ್ನು ಪಡೆಯುವಾಗ ಆ ಜೀವನು ಹೋಗುವ ಮಾರ್ಗಕ್ಕೆ **ದೇವಯಾನ**ವೆಂದೂ, ಉತ್ತಮವಾದ ಕರ್ಮವನ್ನಾಚರಿಸದೆ ಸ್ವಾರ್ಥಾದಿವ್ಯಾಪಾರಗಳಲ್ಲಿ ಉದ್ಯುಕ್ತನಾದವನು ಹೋಗತಕ್ಕ ಮಾರ್ಗಕ್ಕೆ **ಪಿತೃಯಾನ**ವೆಂದೂ ಕರೆದಿದೆ. ಋಕ್ಸಂಹಿತೆಯಲ್ಲಿಯೂ ನಹ ದೇವಯಾನವೆಂಬ ಪದವು ಪ್ರಸಿದ್ಧವಾಗಿದೆ. ಉದಾಹರಣೆಗೆ—

**ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ ।**
**ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಂ ರೀರಿಷೋ ಮೋತ ವೀರಾನ್ ।**

(ಋ. ಸಂ. ೧೦-೧೮-೧)

ಇತ್ಯಾದಿಋಕ್ಕುಗಳಲ್ಲಿ ದೇವಯಾನವು ಮೃತ್ಯುರಹಿತವಾದ ಮಾರ್ಗವೆಂದು ಹೇಳಿದೆ. ಈ ಮಾರ್ಗದಲ್ಲಿ ಸವಿತೃವು ಸುಕೃತಿಗಳನ್ನು ಮರಣರಹಿತವಾದ ಪುಣ್ಯಲೋಕಕ್ಕೆ ಕರೆದುಕೊಂಡು ಹೋಗುವನು ಎಂದು ಪ್ರಸಿದ್ಧವಾಗಿದೆ.

**ಯೇ ತೇ ಪಂಥಾಃ ಸವಿತಃ ಪೂರ್ವ್ಯಾಸೋಽರೇಣವಃ ಸುಕೃತಾ ಅಂತರಿಕ್ಷೇ**
**ತೇಭಿರ್ನೋ ಅದ್ಯ ಪಥಿಭಿಃ ಸುಗೇಭೀ ರಕ್ಷಾ ಚ ನೋ ಅಧಿ ಚ ಬ್ರೂಹಿ ದೇವ ।**

(ಋ. ಸಂ. ೧-೩೫-೧೧)

**ಯತ್ರಾಸತೇ ಸುಕೃತೋ ಯತ್ರ ತೇ ಯಯುಸ್ತತ್ರ ತ್ವಾ ದೇವಃ ಸವಿತಾ ದಧಾತು**

(ಋ. ಸಂ. ೧೦-೧೭-೪)

ಇತ್ಯಾದಿಋಕ್ಕುಗಳಲ್ಲಿ ಸವಿತೃವು ಸತ್ಪಥದಲ್ಲಿ ಸುಕೃತಿಗಳನ್ನು ಕರೆದುಕೊಂಡುಹೋಗುವ ದೇವನಾದುದರಿಂದ ಯಜ್ಞಕರ್ತರಾದ ಸುಕೃತಿಗಳನ್ನು ಅವೇ ರುದ್ಧವಾದುದೂ, ರಜೋರಹಿತವಾದುದೂ, ಮೃತ್ಯುರಹಿತವಾದುದೂ ಆದ ಮಾರ್ಗದಲ್ಲಿ ಕರೆದುಕೊಂಡು ಹೋಗಬೇಕೆಂದು ಪ್ರಾರ್ಥಿತನಾಗಿದ್ದಾನೆ. ಈ ಮಾರ್ಗವನ್ನು ಉಪನಿಷತ್ತುಗಳಲ್ಲಿ ಅರ್ಚಿರಾದಿಮಾರ್ಗವೆಂದು ಹೇಳಿದೆ. ಮರಣಾನಂತರ ಈ ಮಾರ್ಗದಲ್ಲಿ ಬ್ರಹ್ಮಲೋಕವನ್ನು ಸೇರಿದ ಸುಕೃತಿಗಳಿಗೆ ಪುನರಾವರ್ತಿಯಿಲ್ಲವೆಂದು ಈ ಮಾರ್ಗವನ್ನು ವರ್ಣಿಸಿದೆ,

**ತತ್ಪುರುಷೋಽಮಾನವಃ ಸ ಏನಾನ್ಬ್ರಹ್ಮ ಗಮಯತ್ಯೇಷ ದೇವಪಥೋ ಬ್ರಹ್ಮಪಥ ಏತೇನ ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತಂತೇ ನಾವರ್ತಂತೇ ।**

(ಛಾ. ಉ. ೪-೧೫-೫)

ವಿದ್ಯುದ್ರೂಪವ ಪುರುಷನು (ಅಮಾನವನು) ಈ ಸುಕೃತಿಯನ್ನು ಬ್ರಹ್ಮಲೋಕಕ್ಕೆ ಒಯ್ಯುತ್ತಾನೆ. ಇದೇ ಬ್ರಹ್ಮಲೋಕದ ಮಾರ್ಗವು. ಈ ಮಾರ್ಗದಿಂದ ಬ್ರಹ್ಮಲೋಕಕ್ಕೆ ಸೇರಿದವರು ಹಿಂತಿರುಗುವುದಿಲ್ಲ. ಇದು ಖಂಡಿತ, ಎಂದು

ಳಿದೆ. ಇದೇ ಅಭಿಪ್ರಾಯವನ್ನು ಇದೇ ರೀತಿಯಲ್ಲಿ ಮುಂಡಕೋಪನಿಷತ್ತಿನಲ್ಲಿಯೂ ವರ್ಣಿಸುತ್ತಾ ಪ್ರಕೃತವಾದ ಕ್ಕಿನಲ್ಲಿ ಹೇಳಿರುವಂತೆಯೇ ತಿಳಿಸಿದೆ. ಅದರಲ್ಲಿ.

**ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ ।**

(ಮು. ಉ. ೧.೧೧)

ಎಂಬ ಸೂರ್ಯದ್ವಾರವನ್ನು ವರ್ಣಿಸುವ ವಾಕ್ಯಗಳಲ್ಲಿ ಉಕ್ತವಾಗಿರುವುದು. ದೇವಯಾನದಿಂದ ಬ್ರಹ್ಮಲೋಕವನ್ನು ಸೇರುವವರಿಗೆ ಪುನರಾಗಮನವಿಲ್ಲ. ಆದರೆ, ಧೂಮಮಾರ್ಗದಿಂದ (ಪಿತೃಯಾನ) ಚಂದ್ರಲೋಕವನ್ನು ಸೇರುವವರೂ ಸಹ ಸುಕೃತಿಗಳಾದರೂ ಅವರು ಅಲ್ಲಿ ತಮ್ಮ ಸತ್ಕರ್ಮಗಳನ್ನನುಭವಿಸಿ ಅನಂತರ ಅದರ ಅಂತ್ಯವಾದ ಮೇಲೆ ಪುನಃ ಪೃಥ್ವಿಗೆ ಬರುತ್ತಾರೆ. ದೇವಯಾನ ಮತ್ತು ಪಿತೃಯಾಣಗಳ ವರ್ಣನೆಗಳಲ್ಲಿ ಅನೇಕ ವ್ಯತ್ಯಸ್ತವಾದ ಅಭಿಪ್ರಾಯಗಳಿವೆ. ಪ್ರಕೃತದಲ್ಲಿ ಅವು ಅಷ್ಟು ಅವಶ್ಯಕವಲ್ಲ. ಪ್ರಕೃತವಾದ ಋಕ್ಕಿನಲ್ಲಿ ದೇಹದೊಡನೆ ಸೇರಿ ತನ್ನ ಸಂಸ್ಕಾರಾನುಗುಣವಾದ ಕರ್ಮಗಳನ್ನು ಮಾಡುವವನಿಗೆ ಎರಡು ವಿಧವಾದ ಸಂಚಾರಗಳಿವೆಯೆಂದು ತಿಳಿಸಿದೆ. ಅದನ್ನು ಬೃಹದಾರಣ್ಯಕದಲ್ಲಿ,

**..... .... ...... ವೇತ್ಥೋ ದೇವಯಾನಸ್ಯ ವಾ ಪಥಃ ಪ್ರತಿಪದಂ ಪಿತೃಯಾಣಸ್ಯ ವಾ ಯತ್ಕೃತ್ವಾ ದೇವಯಾನಂ ವಾ ಪಂಥಾನಂ ಪ್ರತಿಪದ್ಯಂತೇ ಪಿತೃಯಾಣಂ ವಾಪಿ ಋಷೇರ್ವಚಃ ಶ್ರುತಂ ದ್ವೇ ಸೃತೀ ಅಶೃಣವಂ ಪಿತೄಣಾಮಹಂ ದೇವಾನಾಮುತ ಮರ್ತ್ಯಾನಾಂ ತಾಭ್ಯಾಮಿದಂ ವಿಶ್ವಮೇಜತ್ಸಮೇತಿ ಯದಂತರಾ ಪಿತರಂ ಮಾತರಂ ಚ ಇತಿ ॥**

(ಬ್ರ. ಉ. ೬-೨-೨)

ದೇವತೆಗಳ ಲೋಕಕ್ಕೆ ಕರೆದುಕೊಂಡುಹೋಗುವ ಮಾರ್ಗವು ನಿನಗೆ ಗೊತ್ತೆ ಅಥವಾ ಪಿತೃಗಳ ಲೋಕಕ್ಕೆ ಕರೆದುಕೊಂಡುಹೋಗುವ ಮಾರ್ಗವನ್ನು ನೀನು ಅರಿತಿರುವೆಯಾ ಎಂದು ಪ್ರವಾಹಣ ಜೈಬಲಿಯು ಶ್ವೇತಕೇತುವನ್ನು ಕೇಳಿದಾಗ ಅವನು ಇಲ್ಲವೆಂದನು. ಆಗ ಜೈಬಲಿಯು " ಪಿತೃಲೋಕಕ್ಕೆ ಒಯ್ಯುವ ಮಾರ್ಗವೊಂದಿದೆ ; ದೇವಲೋಕಕ್ಕೆ ಒಯ್ಯುವ ಮಾರ್ಗವೊಂದಿದೆ. ಇವೆರಡೂ ಮರ್ತ್ಯರು ಮರಣಾನಂತರ ಸಂಚರಿಸತಕ್ಕ ಮಾರ್ಗಗಳು. ದ್ಯಾವಾಪೃಥಿವಿಗಳ ಅನಂತರದಲ್ಲಿರತಕ್ಕ ಈ ಮಾರ್ಗಗಳಲ್ಲಿ ಜಂಗಮಾತ್ಮಕವಾದ ಸಕಲ ಭೂತಗಳೂ ಸಂಚರಿಸುತ್ತವೆ " ಎಂದು ಋಷಿವಾಕ್ಯವನ್ನು ಉಪದೇಶಿಸಿದನು.

## 5. ಪಿತೃಶ್ರಾದ್ಧ

ಯಜ್ಞಾಚರಣೆಯಿಂದ ದೇವತೆಗಳಿಗೆ ಹವಿಸ್ಸನ್ನರ್ಪಿಸಿ ಅವರಿಗೆ ಸಂತೃಪ್ತಿಯನ್ನುಂಟುಮಾಡಿ ಅವರಿಂದ ಅನುಗ್ರಹವನ್ನು ಪಡೆಯಲು ಪ್ರಯತ್ನಿಸುವಂತೆ, ಶ್ರಾದ್ಧಾದಿಗಳನ್ನಾಚರಿಸಿ, ಪಿತೃಗಳಿಗೆ ಪಿಂಡಾದಿಗಳನ್ನರ್ಪಿಸಿ ಅವರು ತೃಪ್ತರಾದಾಗ ಅವರಿಂದ ಅನುಗ್ರಹವನ್ನು ಸಂಪಾದಿಸುವುದು ಪಿತೃಪೂಜೆಯ ಉದ್ದೇಶಗಳೊಲ್ಲೊಂದಾಗಿರುತ್ತದೆ. ಐಹಿಕವಾದ ಸಂಪತ್ತುಗಳನ್ನು ಪಡೆಯಲು ದೇವತೆಗಳನ್ನು ಸಹಾಯಕ್ಕೆ ಕರೆಯುವಂತೆಯೇ, ಪಿತೃಗಳನ್ನೂ ಕರೆಯಲಾಗುತ್ತದೆ.

**ಸ್ವಾದುಷಂಸದಃ ಪಿತರೋ ವಯೋಧಾಃ ಕೃಚ್ಛ್ರೇಶ್ರಿತಃ ಶಕ್ತೀವಂತೋ ಗಭೀರಾಃ ।**
**ಚಿತ್ರಸೇನಾ ಇಷುಬಲಾ ಅಮೃಧ್ರಾಃ ಸತೋವೀರಾ ಉರವೋ ವ್ರಾತಸಾಹಾಃ ॥**

(ಋ. ಸಂ ೬. ೭೫. ೯)

**ಬ್ರಾಹ್ಮಣಾಸಃ ಪಿತರಃ ಸೋಮ್ಯಾಸಃ ಶಿವೇ ನೋ ದ್ಯಾವಾಪೃಥಿವೀ ಅನೇಹಸಾ ।**

(ಋ. ಸಂ. ೬. ೭೫. ೧೦)

ಎಂಬಲ್ಲಿ ಪಿತೃಗಳ ಅಸಾಧಾರಣವಾದ ಶಕ್ತಿಯೂ ಔದಾರ್ಯವೂ ತಿಳಿಸಲ್ಪಟ್ಟಿವೆ. ಪಾಲಕರಾದ ಪಿತೃಗಳು ಶತ್ರುಗಳನ್ನು ನಾಶಮಾಡಿ ಶತ್ರುಗಳ ಅನ್ನವನ್ನು ತಮ್ಮ ಪುತ್ರಾದಿಗಳಿಗೆ ಹಂಚುವವರಾಗಿದ್ದಾರೆ. ಶತ್ರುನಾಶಕ್ಕಾಗಿ ಸ್ಥಿರಸಂಕಲ್ಪವುಳ್ಳವರೂ ತೀಕ್ಷ್ಣವಾದ ಆಯುಧಗಳನ್ನು ಹೊಂದಿರುವವರೂ ಶತ್ರುನಾಶಕರೂ ಆದ ಪಿತೃಗಳು ನಮಗೆ ರಕ್ಷಕರಾಗಿರಲಿ. ನಮಗೆ ಮಂಗಳವನ್ನುಂಟುಮಾಡಲಿ ಎಂದು ಪ್ರಾರ್ಥಿಸಿವೆ. ಆದರೆ, ಇಂತಹ ಪ್ರಾರ್ಥನೆಗೆ ಪೂರ್ವಭಾವಿಯಾಗಿ ಅವರಿಗೆ ಪಿಂಡಾದಿಗಳನ್ನರ್ಪಿಸಿ ಅವರನ್ನು ತೃಪ್ತಿಗೊಳಿಸಬೇಕು. ಇಂತಹ ಸಂತೃಪ್ತಿಯು ಒಂದೊಂದು ಸಂದರ್ಭದಲ್ಲಿ ಒಂದೊಂದು ವಿಧವಾಗಿ ಒದಗುತ್ತದೆ. ಮರಣದಿನಗಳಲ್ಲಿ ಆಚರಿಸತಕ್ಕ ಶ್ರಾದ್ಧಾದಿಗಳು, ಪರ್ವಕಾಲಗಳಲ್ಲಿ ಅರ್ಪಿಸುವ ತರ್ಪಣಾದಿಗಳು, ಉಳಿದ ವಿಶೇಷ ದಿವಸಗಳಲ್ಲಿ ಅರ್ಪಿತವಾಗುವ ಪೂಜೆಗಳು, ಇವೇ ಅಲ್ಲದೇ, ವಿವಾಹಾದಿ ಕಲ್ಯಾಣ ದಿವಸಗಳಲ್ಲೂ ಸಹ ಪಿತೃಪೂಜೆಯು ನಿಯತವಾಗಿ ನೆರವೇರಲೇಬೇಕಾಗುತ್ತದೆ. ಆದರೆ, ಕೆಲವು ಸನ್ನಿವೇಶಗಳಲ್ಲಿ ಅಂಗಿರಸ್ಸೇ ಮುಂತಾದ ಪೂರ್ವಪಿತೃಗಳೊಡನೆ ಪಿತೃಪಿತಾಮಹಪ್ರಪಿತಾಮಹರಿಗೆ ಆಹ್ವಾನವಿರುತ್ತದೆ. ಕಲ್ಯಾಣಕಾಲಗಳಲ್ಲಿ ಆಹ್ವಾನವನ್ನೀಯುವಾಗ ಪಿತೃಗಳನ್ನು **ನಾಂದೀಮುಖವುಳ್ಳ**ರೆಂದು ಸಂಬೋಧಿಸಲಾಗುತ್ತದೆ. ಸಂತೋಷದಿಂದ ಕೂಡಿದ ಮುಖವುಳ್ಳವರೆಂದರ್ಥ. ಹೀಗೆ, **ಪಾರ್ವಣಶ್ರಾದ್ಧ, ನಾಂದೀ** ಶ್ರಾದ್ಧ(ವೃದ್ಧಿಶ್ರಾದ್ಧ), **ಪೂರ್ತ** ಶ್ರಾದ್ಧ ಇತ್ಯಾದಿಯಾದ ಅನೇಕ ಕರ್ಮಗಳಿಂದ ಪಿತೃಗಳ ಸಂತೃಪ್ತಿಯು ಸಂಭವಿಸುತ್ತದೆಯೆಂಬ ಶ್ರದ್ಧೆಯು ವೈದಿಕಕಾಲದಿಂದಲೂ ಇರುತ್ತದೆ. ಆದರೆ, ಕೆಲವು ಕರ್ಮಗಳು ಸಂಹಿತಾದಿಗಳಲ್ಲಿಯೇ ನಿರ್ದಿಷ್ಟವಾಗಿವೆ. ಇನ್ನು ಕೆಲವು ಅವುಗಳಲ್ಲಿ ಕೇವಲ ಸೂಚಿತವಾಗಿ, ಶ್ರೌತಸೂತ್ರಾದಿಗಳಲ್ಲಿ ಸ್ಪಷ್ಟವಾಗಿ ವಿವರಿಸಲ್ಪಟ್ಟಿವೆ. ಅವುಗಳಲ್ಲಿ ಅತಿ ಮುಖ್ಯವಾದ ಕೆಲವು ಕರ್ಮಗಳನ್ನು ಮಾತ್ರ ಇಲ್ಲಿ ವಿವರಿಸಿ ಉಳಿದವನ್ನು ಸೂಕ್ಷ್ಮವಾಗಿ ತಿಳಿಸಲಾಗುತ್ತದೆ.

ಕೆಲವು ಮುಖ್ಯವಾದ ಶ್ರಾದ್ಧಗಳೂ **ಯಜ್ಞ**ಗಳೆಂದೇ ಪ್ರಸಿದ್ಧವಾಗಿವೆ. ಅವುಗಳಲ್ಲಿ **ಪಿಂಡಪಿತೃಯಜ್ಞ** ಮತ್ತು **ಮಹಾಪಿತೃಯಜ್ಞ** ಎಂಬಿವು ಅತಿ ಮುಖ್ಯವಾದವು. **ಪಿಂಡಪಿತೃಯಜ್ಞ**ದ ಪ್ರಭಾವವನ್ನು ವಿವರಿಸುತ್ತ ಶತಪಥ ಬ್ರಾಹ್ಮಣದಲ್ಲಿ ಒಂದು ಐತಿಹಾಸಿಕ ಸನ್ನಿವೇಶವು ಈ ರೀತಿ ವರ್ಣಿತವಾಗಿದೆ.

**ಪ್ರಜಾಪತಿಂ ವೈ ಭೂತಾನ್ಯುಪಾಸೀದನ್ । ಪ್ರಜಾ ವೈ ಭೂತಾನಿ ವಿ ನೋ ಧೇಹಿ ಯಥಾ ಜೀವಾಮೇತಿ ತತೋ ದೇವಾ ಯಜ್ಞೋಪವೀತಿನೋ ಭೂತ್ವಾ ದಕ್ಷಿಣಂ ಜಾನ್ವಾಚ್ಯೋಪಾಸೀದಂಸ್ತಾನಬ್ರವೀದ್ಯಜ್ಞೋ ವೋಽನ್ನಮಮೃತತ್ವಂ ವ ಊರ್ಗ್ವಃ ಸೂರ್ಯೋ ವೋ ಜ್ಯೋತಿರಿತಿ ॥**

(ಶ. ಬ್ರಾ. ೨. ೪. ೨. ೧)

ಒಂದು ಸಲ ಪ್ರಜಾಪತಿಯಿಂದ ಸೃಷ್ಟವಾದ ಸಕಲ ಭೂತಗಳೂ ಪ್ರಜಾಪತಿಯನ್ನು ಸಮೀಪಿಸಿ "ಎಲೈ ತಂದೆಯೇ, ನಾವು ಜೀವಿಸುವ ಕ್ರಮವನ್ನು ತಿಳಿಸಿ ಕೊಡು" ಎಂದು ಪ್ರಾರ್ಥಿಸಿದವು. ಅಲ್ಲಿ ದೇವತೆಗಳು, ಪಿತೃಗಳು, ಮಾನವರು, ಉಳಿದ ಪ್ರಾಣಿಗಳು ಇವೆಲ್ಲವೂ ಇದ್ದವು. ಅವುಗಳಲ್ಲಿ ದೇವತೆಗಳು ಪ್ರಥಮತಃ ಯಜ್ಞೋಪವೀತವನ್ನು ಧರಿಸಿಕೊಂಡು ತಮ್ಮ ಬಲಗಡೆಯ ಮೊಣಕಾಲನ್ನು ನೆಲಕ್ಕೆ ಊರಿದವರಾಗಿ ಪ್ರಜಾಪತಿಯನ್ನು ಸಮೀಪಿಸಿದರು. ಆಗ ಪ್ರಜಾಪತಿಯು ದೇವತೆಗಳನ್ನುದ್ದೇಶಿಸಿ "ಯಜ್ಞವೇ ನಿಮಗೆ ಅನ್ನವು, ಅಮೃತತ್ವವೇ ನಿಮ್ಮ ರಸವು. ಸೂರ್ಯನೇ ನಿಮ್ಮ ತೇಜಸ್ಸು" ಎಂದು ತಿಳಿಸಿದನು.

**ಅಘ್ನೈಸಂ ಪಿತರಃ । ಪ್ರಾಚೀನಾವೀತಿನಃ ಸವ್ಯಂ ಜಾನ್ವಾಚ್ಯೋಪಾಸೀದಂಸ್ತಾನಬ್ರವೀನ್ಮಾಸಿ-**
**ಮಾಸಿ ವೋಽಶನಗ್ ಸ್ವಧಾ ವೋ ಮನೋಜವೋವಶ್ಚಂದ್ರಮಾ ವೋ ಜ್ಯೋತಿರಿತಿ ॥**

(ಶ. ಬ್ರಾ. ೨. ೪. ೨. ೨)

ಆಗ ಪಿತೃಗಳು ಪ್ರಾಚೀನಾವೀತಿಯನ್ನು ಧರಿಸಿ (ಬಲಭುಜದ ಮೇಲೆ ಯಜ್ಞೋಪವೀತವನ್ನು ಧರಿಸಿದವರಾಗಿ) ತಮ್ಮ ಎಡಗಡೆಯ ಮೊಣಕಾಲನ್ನು ನೆಲದಮೇಲೂರಿಕೊಂಡು ಪ್ರಜಾಪತಿಯನ್ನು ಸಮೀಪಿಸಿದರು. ಆಗ ಪ್ರಜಾಪತಿಯು ಅವರನ್ನು ಸಂಬೋಧಿಸಿ ನಿಮಗೆ ಪ್ರತಿಮಾಸವೂ ಅನ್ನವು ಲಭಿಸಲಿ ನಿಮಗೆ ಅರ್ಪಿತವಾಗುವ **ಸ್ವಧಾ**ಸಂಜ್ಞಕವಾದ ಅನ್ನವೇ ನಿಮ್ಮ ಮನೋವೇಗದ ಮೂಲವಾಗಿರಲಿ. ಚಂದ್ರನೇ ನಿಮಗೆ ಜ್ಯೋತಿಯು ಎಂದು ಅನುಗ್ರಹಿಸಿ ಕಳುಹಿಸಿದನು. (ನಂತರ ಮಾನವಾದಿಗಳಿಗೂ ಸಹ ಅವರವರ ಸ್ವರೂಪಕ್ಕನುಗುಣವಾಗಿ ತಿಳಿಸಿ ಕಳುಹಿದನು).

ಹೀಗೆ ಪ್ರಜಾಪತಿಯಿಂದ ನಿರ್ದಿಷ್ಟವಾದಂತೆ, ಪಿತೃಗಳಿಗೆ ಪ್ರತಿಮಾಸದಲ್ಲೂ ಪರ್ವಕಾಲದಲ್ಲಿ **ಸ್ವಧಾ**ರೂಪದಲ್ಲಿ ಅನ್ನವನ್ನು ಅರ್ಪಿಸಲು ನೆರವೇರಿಸುವ ಕರ್ಮಕ್ಕೆ **ಪಿಂಡಪಿತೃಯಜ್ಞ**ವೆಂದು ಹೆಸರು. ಈ ಯಜ್ಞವು ದಕ್ಷಿಣಾಗ್ನಿಯಲ್ಲಿ ನೆರವೇರತಕ್ಕದ್ದು. ಯಜ್ಞೋಪವೀತದ ಕ್ರಮವು ಪ್ರಾಚೀನಾವೀತಿಯಲ್ಲಿರಬೇಕು. ಪ್ರತಿಯೊಂದು ಕಾರ್ಯವನ್ನು ಅಪ್ರದಕ್ಷಿಣಕ್ರಮದಲ್ಲಿ ನೆರವೇರಿಸಬೇಕು. ಪಿತೃಗಳೊಡನೆ ಸೋಮನೂ ಮತ್ತು ಕವ್ಯವಾಹನನಾದ ಅಗ್ನಿಯೂ ಉದ್ದಿಷ್ಟರಾಗುತ್ತಾರೆ. (ಉಳಿದ ಕಾರ್ಯಕಲಾಪಗಳ ವಿವರಣವು ಅಪ್ರಕೃತ). ಈ ಕರ್ಮದಲ್ಲಿ ಅರ್ಪಿತವಾಗುವ **ಸ್ವಧಾ** ರೂಪವಾದ ಹವಿಸ್ಸು ಪಿತೃಗಳಿಗೆ ಅತ್ಯಂತ ಶ್ರೇಷ್ಠವಾದ ತೃಪ್ತಿಯನ್ನು ಕೊಡುವುದೆಂದು ಶ್ರದ್ಧೆಯಿರುತ್ತದೆ. ಇದರಂತೆಯೇ, **ಮಹಾಪಿತೃಯಜ್ಞವೂ** ಅತ್ಯಂತ ಶ್ರೇಷ್ಠವೂ ಪ್ರಭಾವಶಾಲಿಯೂ ಆದದ್ದು ಎಂದು ಅದರ ಮಹತ್ತ್ವವನ್ನು ಅನೇಕ ಕಡೆಗಳಲ್ಲಿ ಸ್ತುತಿಸಿದೆ. ಶತಪಥ ಬ್ರಾಹ್ಮಣದಲ್ಲಿ ಇದರ ಪ್ರಭಾವವನ್ನು ಈ ರೀತಿ ಪ್ರಶಂಸಿಸಿದೆ.

**ಮಹಾಹವಿಷಾ ಹ ವೈ ದೇವಾ ವೃತ್ರಂ ಜಘ್ನುಃ । ತೇ ನೋ ಏವ ವ್ಯಜಯಂತ ಯೇಯಮೇಷಾಂ ವಿಜಿತಿಸ್ತಾಮಥ ಯಾನೇವೈಷಾಂ ತಸ್ಮಿನ್ತ್ಸಂಗ್ರಾಮೇ ಅಘ್ನಂಸ್ತಾನ್ಪಿತೃಯಜ್ಞೇನ ಸಮೈರಯಂತ ಪಿತರೋ ವೈ ತ ಆಸಂಸ್ತಸ್ಮಾತ್ಪಿತೃಯಜ್ಞೋ ನಾಮ ।**

(ಶ. ಬ್ರಾ. ೨. ೬. ೧. ೧)

ಮಹಾಹವಿಸ್ಸಿನಿಂದ ದೇವತೆಗಳು ವೃತ್ರಾಸುರನನ್ನು ನಾಶಮಾಡಿದರು. ಈ ಹವಿಷ್ಪ್ರದಾನದಿಂದಲೇ, ಅವರು ತಮ್ಮ ಈಗಿನ ಪ್ರಭಾವಯುತವಾದ ಸ್ಥಾನವನ್ನು ಆಕ್ರಮಿಸಿದ್ದಾರೆ. ಅನಂತರ ಪಿತೃಯಜ್ಞವನ್ನಾಚರಿಸಿ ಯುದ್ಧದಲ್ಲಿ ಮೃತರಾಗಿದ್ದವರನ್ನೆಲ್ಲಾ ಪುನಃ ಬದುಕುವಂತೆ ಮಾಡಿದರು. ಅಲ್ಲಿ ಪುನಃ ಬದುಕಿದವರೇ ಪಿತೃಗಳು. ಆದುದರಿಂದಲೇ ಈ ಯಜ್ಞಕ್ಕೆ **ಮಹಾಪಿತೃಯಜ್ಞ** ಎಂಬ ಹೆಸರು ಪ್ರಸಿದ್ಧವಾಗಿದೆ.

**ತದ್ವಸಂತೋ ಗ್ರೀಷ್ಮೋ ವರ್ಷಾಃ । ಏತೇ ತೇ ಯೇ ವ್ಯಜಯಂತ ಶರದ್ಧೇಮಂತಃ ಶಿಶಿರಸ್ತ ಉ ತೇ ಯಾನ್ಪುನಃ ಸಮೈರಯಂತ ॥**

(ಶ. ಬ್ರಾ. ೨. ೬. ೧. ೨)

ವಸಂತ, ಗ್ರೀಷ್ಮ ಮತ್ತು ವರ್ಷರ್ತುಗಳು ವೃತ್ರಾಸುರನನ್ನು ನಾಶಮಾಡಿದ ಋತುಗಳು. ಶರತ್, ಹೇಮಂತ ಮತ್ತು ಶಿಶಿರ ಋತುಗಳು ಮೃತರಾದವರನ್ನು ಪುನಃ ಬದುಕಿಸಿದ ಋತುಗಳು.

ಅಥ ಯದೇಷ ಏತೇನ ಯಜತೇ । ತನ್ನಾಹ ನ್ವೇವೈತಸ್ಯ ತಥಾ ಕಂಚನ ಘ್ನಂತೀತಿ ದೇವಾ ಅಕುರ್ವನ್ನಿತಿ ನ್ವೇವೈಷ ಏತತ್ಕರೋತಿ ಯಮು ಚೈವೈಭ್ಯೋ ದೇವಾ ಭಾಗಮಕಲ್ಪಯಂ-ಸ್ತಮು ಚೈವೈಭ್ಯ ಏಷ ಯದ್ಭಾಗಂ ಕರೋತಿ ಯಾನು ಚೈವ ದೇವಾಃ ಸಮ್ಮೈರಯಂತ ತಾನು ಚೈವೈತದವತಿ ಸ್ವಾನು ಚೈವೈತತ್ಪಿತೄನ್ ಶ್ರೇಯಾಗ್ಂ ಸ ಲೋಕಮುಪೋನ್ನಯತಿ ಯದು ಚೈವಾಸ್ಯಾತ್ರಾತ್ಮನೋಽಚರಣೇನ ಹನ್ಯತೇ ವಾ ಮಿಾಯತೇ ವಾ ತದು ಚೈವಾಸ್ಯೈತೇನ ಪುನರಾಪ್ಯಾಯತೇ ತಸ್ಮಾದ್ವಾ ಏಷ ಏತೇನ ಯಜತೇ ॥

(ಶ. ಬ್ರಾ. ೨. ೬. ೧. ೩.)

ಈ ಪಿತೃಯಜ್ಞವನ್ನಾಚರಿಸಲು ಎರಡು ಉದ್ದೇಶಗಳಿರುತ್ತವೆ. ಮೊದಲನೆಯದಾಗಿ, ಈ ಯಜ್ಞಾಚರಣೆಯಿಂದ ಅಸುರರು ಯಜಮಾನನಿಗೆ ಸೇರಿದ ಯಾವ ಜನರನ್ನೂ ಹಿಂಸಿಸಲಾಗುವುದಿಲ್ಲ ಮತ್ತು ಎರಡನೆಯದಾಗಿ, ದೇವತೆಗಳೂ ಸಹ ಈ ಯಜ್ಞವನ್ನಾಚರಿಸಿ ಪಿತೃಗಳನ್ನು ಪೂಜಿಸಿದ್ದಾರೆ- ಮತ್ತು ಈ ಯಜ್ಞವನ್ನಾಚರಿಸಿ ದೇವತೆಗಳು ಪಿತೃಗಳಿಗೆ ಯಾವ ಭಾಗವನ್ನು ನಿರ್ದೇಶಿಸಿ ಅರ್ಪಿಸಿದರೋ, ಅದೇ ಭಾಗವನ್ನು ಯಜಮಾನನೂ ಅರ್ಪಿಸಬೇಕು. ಹೀಗೆ ಮಾಡುವುದರಿಂದ ದೇವತೆಗಳಿಂದ ಪುನಃ ಬದುಕಿಸಲ್ಪಟ್ಟ ಪಿತೃಗಳಿಗೆ ತೃಪ್ತಿಯನ್ನುಂಟು ಮಾಡುವುದೇ ಅಲ್ಲದೇ, ಅವರಿಗೆ ಇನ್ನೂ ಉತ್ತಮವಾದ ಗತಿಯನ್ನು ಕಲ್ಪಿಸಿದಂತಾಗುತ್ತದೆ, ಮತ್ತು ತನ್ನ ಇತರ ಕರ್ಮಗಳಲ್ಲಿ ಯಾವ ನ್ಯೂನತೆಯಿದ್ದರೂ ಸಹ, ಈ ಕರ್ಮಾಚರಣೆಯಿಂದ ಅದು ಸರಿಹೋಗುತ್ತದೆ. ಈ ಎಲ್ಲಾ ಕಾರಣಗಳಿಂದಲೂ ಈ ಪಿತೃಯಜ್ಞವನ್ನು ಆಚರಿಸಬೇಕು.

ಸ ಪಿತೃಭ್ಯಃ ಸೋಮವದ್ಭ್ಯಃ । ಷಟ್ಕಪಾಲಂ ಪುರೋಡಾಶಂ ನಿರ್ವಪತಿ ಸೋಮಾಯ ವಾ ಪಿತೃಮತೇ ಷಡ್ವಾ ಋತವ ಋತವಃ ಪಿತರಸ್ತಸ್ಮಾತ್ ಷಟ್ಕಪಾಲೋ ಭವತಿ ॥

ಶ. ಬ್ರಾ. ೨-೬-೧-೪)

ಈ ಕರ್ಮಕಾಲದಲ್ಲಿ, ಸೋಮವಂತರಾದ ಪಿತೃಗಳಿಗೆ ಷಟ್ಕಪಾಲಯುತವಾದ ಪುರೋದಾಶವನ್ನು ಅರ್ಪಿಸುತ್ತಾನೆ. (ಪಿತೃಗಳೊಡಗೂಡಿದ ಸೋಮನನ್ನುದ್ದೇಶಿಸಿ ಎಂದಾಗಬಹುದು, ಅಥವಾ ಸೋಮಯುಕ್ತರಾದ ಪಿತೃಗಳನ್ನುದ್ದೇಶಿಸಿ ಎಂದೂ ಇರಬಹುದು). ಷಟ್ಕಪಾಲವೆಂಬ ಸಂಖ್ಯಾನಿರ್ದೇಶವೇತಕ್ಕೆಂದರೆ, ಪಿತೃಗಳೇ ಋತುರೂಪರಾಗಿರುತ್ತಾರೆ. ಋತುಗಳ ಸಂಖ್ಯೆಗಳು ಆರು. ಅದುದರಿಂದಲೇ ಈ ಸಂಖ್ಯಾನಿರ್ದೇಶ.

ಅಥ ಪಿತೃಭ್ಯೋ ಬರ್ಹಿಷದ್ಭ್ಯಃ । ಅನ್ವಾಹಾರ್ಯಪಚನೇ ಧಾನಾಃ ಕುರ್ವಂತಿ ತೇತೋಽರ್ಧಾಃ ಪಿಗ್ಂಷಂತ್ಯರ್ಧಾ ಇತ್ಯೇವ ಧಾನಾ ಅಪಿಷ್ಟಾ ಭವಂತಿ ತಾ ಧಾನಾಃ ಪಿತೃಭ್ಯೋ ಬರ್ಹಿಷದ್ಭ್ಯಃ ॥

(ಶ. ಬ್ರಾ. ೨-೬-೧.೫)

ಅನಂತರ ಅನ್ವಾಹಾರ್ಯ ಸಂಜ್ಞಕವಾದ ದಕ್ಷಿಣಾಗ್ನಿಯಲ್ಲಿ ಯವಧಾನ್ಯಗಳನ್ನು ವಿಧಿವತ್ತಾಗಿ ಹುರಿಯತಕ್ಕದ್ದು. ಇವುಗಳಲ್ಲಿ ಅರ್ಧಭಾಗವನ್ನು ಹಿಟ್ಟನ್ನಾಗಿ ಮಾಡಿ ಉಳಿದದ್ದನ್ನು ಹಾಗೆಯೇ ಇರಿಸುವುದು. ಇದು ಬರ್ಹಿಷದರಾದ ಪಿತೃಗಳಿಗೆ ಅರ್ಪಿಸುವ ಹವಿಸ್ಸು.

**ಅಥ ಪಿತೃಭ್ಯೋಽಗ್ನಿಷ್ವಾತ್ತೇಭ್ಯಃ । ನಿದಾನ್ಯಾಯೈ ದುಗ್ಧೇ ಸಕೃದುಪಮಥಿತ ಏಕಶಲಾಕಯಾ ಮಂಥೋ ಭವತಿ ಸಕೃದು ಹ್ಯೇವ ಪರಾಂಚಃ ಪಿತರಸ್ತಸ್ಮಾತ್ಸಕೃದುಪಮಥಿತೋ ಭವತ್ಯೇತಾನಿ ಹವೀಗ್ಂಷಿ ಭವಂತಿ ॥**

(ಶ. ಬ್ರಾ. ೨. ೬. ೧. ೬)

ಅನಂತರ ಕರುವನ್ನು ಆದರದಿಂದ ನೆಕ್ಕುತಕ್ಕ ಗೋವಿನಿಂದ ಕರೆದ ಕ್ಷೀರದಲ್ಲಿ ಮಿಶ್ರಿತವಾದುದೂ ಗೋಧಿಹಿಟ್ಟಿನಿಂದ ನಿರ್ಮಿತವಾದುದೂ ಆದ ಹವಿಸ್ಸನ್ನು ಅಗ್ನಿಷ್ವಾತ್ತಸಂಜ್ಞಕರಾದ ಪಿತೃಗಳಿಗೆ ಅರ್ಪಿಸತಕ್ಕದ್ದು. ಇತ್ಯಾದಿಯಾಗಿ ಮಹಾಪಿತೃಯಜ್ಞಕಾಲದಲ್ಲಿ ಅರ್ಪಿತವಾಗುವ ಹವಿಸ್ಸುಗಳ ವಿಧಾನವನ್ನು ತಿಳಿಸಿದೆ. ಈ ಪಿತೃಗಳನ್ನು **ಸೋಮವಂತಃ, ಬರ್ಹಿಷದಃ** ಮತ್ತು **ಅಗ್ನಿಷ್ವಾತ್ತಾಃ** ಎಂದು ವಿಭಾಗಿಸಿದೆ. ಈ ವಿಭಾಗಕ್ರಮವನ್ನು ಮೇಲೆ, ತದ್ಯೇ **ಸೋಮೇನೇಜಾನಾಃ** (ಶ. ಬ್ರಾ. ೨-೬-೧-೭) ಎಂಬ ವಾಕ್ಯವನ್ನುದಾಹರಿಸಿ ತಿಳಿಸಿದೆ. ಈ ಮಹಾಪಿತೃಯಜ್ಞದ ಪ್ರಭಾವವನ್ನು ತಿಳಿಸುವಾಗ ಇಲ್ಲಿ ಪೂಜಿತರಾಗುವ ಪಿತೃಗಳ ಪ್ರಭಾವವನ್ನೂ ಅತಿಶಯವಾಗಿ ವರ್ಣಿಸಿದೆ. ಹೀಗೆ ಪಿತೃಶ್ರಾದ್ಧಗಳು ಅನೇಕ ರೀತಿಯಲ್ಲಿ ವಿಹಿತವಾಗಿವೆ. ಒಟ್ಟಿನಲ್ಲಿ, ವಿಧ್ಯುಕ್ತವಾದ ಈ ಶ್ರಾದ್ಧಾದಿಗಳ ಆಚರಣೆಯಿಂದ ಪಿತೃಗಳಿಗೆ ಸಂತೃಪ್ತಿಯಾಗಿ ಅದರಿಂದ ಜೀವಂತರಾಗಿರುವವರಿಗೆ ಒಳ್ಳೆಯದಾಗುವುದು ಎಂಬ ಶ್ರದ್ಧೆಯಿರುತ್ತದೆ. ಶ್ರದ್ಧೆಯಿಂದ ಮಾಡುವುದರಿಂದಲೇ ಈ ಕರ್ಮಕ್ಕೆ ಶ್ರಾದ್ಧವೆಂಬ ಹೆಸರು ಪ್ರಸಿದ್ಧವಾಗಿದೆ.

ದೇವತಾಸ್ವರೂಪವನ್ನು ಹೊಂದಿರುವ ಪಿತೃಗಳನ್ನು ಪ್ರಶಂಸಿಸುವ ಕೆಲವು ವಾಕ್ಯಗಳನ್ನು ಮಾತ್ರ ಉದಾಹರಿಸಿ ಈ ಪ್ರಕರಣವನ್ನು ಸದ್ಯಃ ಸಮಾಪ್ತಿಗೊಳಿಸಲಾಗುತ್ತದೆ

**ಅಂಗಿರೋಭಿರಾ ಗಹಿ ಯಜ್ಞಿಯೇಭಿರ್ಯಮ ವೈರೂಪೈರಿಹ ಮಾದಯಸ್ವ ।**
**ವಿವಸ್ವಂತಂ ಹುವೇ ಯಃ ಪಿತಾ ತೇಽಸ್ಮಿನ್ ಯಜ್ಞೇ ಬರ್ಹಿಷ್ಯಾ ನಿಷದ್ಯ ॥**

(ಋ ಸಂ. ೧೦-೧೪-೫)

ಎಲೈ ಯಮರಾಜನೇ, ನಾನಾರೂಪಗಳನ್ನು ಧರಿಸಿದವರೂ, ಶ್ರೇಷ್ಠವಾದ ಪೂಜೆಗೆ ಯೋಗ್ಯರಾದವರೂ ಅಂಗಿರಾಸಂಜ್ಞಕರೂ ಆದ ಪಿತೃಗಳೊಡನೆ ನಮ್ಮ ಈ ಪಿತೃಯಜ್ಞಕ್ಕೆ ದಯಮಾಡು. ನಿನ್ನ ಪಿತೃವಾದ ವಿವಸ್ವಂತನನ್ನೂ ಈ ಯಜ್ಞಕ್ಕೆ ದಯಮಾಡಬೇಕೆಂದು ಪ್ರಾರ್ಥಿಸುತ್ತೇನೆ.

**ಮಾತಲೀ ಕವ್ಯೈರ್ಯಮೋ ಅಂಗಿರೋಭಿರ್ಬೃಹಸ್ಪತಿರ್ಋಕ್ವಭಿರ್ವಾವೃಧಾನಃ ।**
**ಯಾಂಶ್ಚ ದೇವಾ ವಾವೃಧುರ್ಯೇ ಚ ದೇವಾನ್ತ್ಸ್ವಾಹಾನ್ಯೇ ಸ್ವಧಯಾನ್ಯೇ ಮದಂತಿ ॥**

(ಋ. ಸಂ. ೧೦-೧೪-೩)

ಮಾತಲಿಯುಕ್ತನಾದ ಇಂದ್ರನು ಕವ್ಯಭಾಗಿಗಳಾದ ಪಿತೃಗಳೊಂದಿಗೆ ಪುಷ್ಟಿಯನ್ನು ಹೊಂದಲಿ. ಯಮನು ಅಂಗಿರಸ್ಸುಗಳೊಂದಿಗೆ ಪುಷ್ಟಿಯನ್ನು ಹೊಂದಲಿ. ಬೃಹಸ್ಪತಿಯು ಋಕ್ವರೊಂದಿಗೆ ಪುಷ್ಟಿಯನ್ನು ಹೊಂದಲಿ. **ಯಾವ** ಇಂದ್ರಾದಿಗಳನ್ನು ಪಿತೃಗಳು ಪುಷ್ಟರಾಗುವಂತೆ ಮಾಡುವರೋ ಆ ಇಂದ್ರಾದಿದೇವತೆಗಳು **ಸ್ವಾಹಾಕಾರಪೂರ್ವಕವಾಗಿ** ಅರ್ಪಿಸಿದ ಹವಿಸ್ಸುಗಳಿಂದ ತೃಪ್ತರಾಗುತ್ತಾರೆ. ಯಾವ ಪಿತೃಗಳನ್ನು ಇಂದ್ರಾದಿದೇವತೆಗಳು **ಪುಷ್ಟಿಗೊಳಿಸುವರೋ,** ಆ ಪಿತೃಗಳು **ಸ್ವಧಾ**ರೂಪವಾದ ಹವಿಸ್ಸುಗಳಿಂದ ತೃಪ್ತಿಯನ್ನು ಹೊಂದುತ್ತಾರೆ.

ಅಗ್ನಿಷ್ವಾತ್ತಾಃ ಪಿತರ ಏಹ ಗಚ್ಛತ ಸದಃಸದಃ ಸದತ ಸುಪ್ರಣೀತಯಃ ।
ಅತ್ತಾ ಹವೀಂಷಿ ಪ್ರಯತಾನಿ ಬರ್ಹಿಷ್ಯಥಾ ರಯಿಂ ಸರ್ವವೀರಂ ದಧಾತನ
(ಋ. ಸಂ. ೧೦-೧೫-೧೧)

ಅಗ್ನಿಷ್ವಾತ್ತಸಂಜ್ಞಕರಾದ ಎಲೈ ಪಿತೃಗಳೇ, ನಮ್ಮ ಈ ಪಿತೃಯಜ್ಞಕ್ಕೆ ದಯಮಾಡಿರಿ. ನಿಮ್ಮ ನಿಮ್ಮ ಕ್ಲಪ್ತವಾದ ಸ್ಥಾನದಲ್ಲಿ ಕುಳಿತುಕೊಳ್ಳಿರಿ. ದರ್ಭಾಸನದಲ್ಲಿ ಅರ್ಪಿತವಾದ ಹವಿಸ್ಸುಗಳನ್ನು ಸೇವಿಸಿರಿ. ನಮಗೆ ಸಕಲ ಸಂಪತ್ತುಗಳನ್ನೂ ಒದಗಿಸಿ ನಮಗೆ ಶ್ರೇಯಸ್ಸನ್ನುಂಟುಮಾಡಿರಿ.

ಆಚ್ಯಾ ಜಾನು ದಕ್ಷಿಣತೋ ನಿಷದ್ಯೇಮಂ ಯಜ್ಞಮಭಿ ಗೃಣೀತ ವಿಶ್ವೇ ।
ಮಾ ಹಿಂಸಿಷ್ಟ ಪಿತರಃ ಕೇನ ಚಿನ್ನೋ ಯದ್ವ ಆಗಃ ಪುರುಷತಾ ಕರಾಮ ॥
(ಋ. ಸಂ. ೧೦-೧೫-೬)

ಎಲೈ ಪಿತೃಗಳೇ, ಬಲಭಾಗದಲ್ಲಿ ನಿಮ್ಮ ಎಡಮೊಣಕಾಲುಗಳನ್ನು ಕೆಳಕ್ಕೆಮಾಡಿ ಕುಳಿತುಕೊಳ್ಳಿರಿ. ನಮ್ಮ ಈ ಯಜ್ಞವನ್ನು ಸೇವಿಸಿರಿ. ನಮಗೆ ಯಾವ ವಿಧವಾದ ಹಿಂಸೆಯನ್ನೂ ಮಾಡಬೇಡಿರಿ. ಮಾನವರಿಗೆ ಸಹಜವಾದ ಅಜ್ಞಾನದಿಂದಲೂ ಅಶಕ್ತಿಯಿಂದಲೂ ನಾವು ಯಾವುದಾದರೂ ಪಾಪಕರ್ಮವನ್ನಾಚರಿಸಿದ್ದರೆ ಅದನ್ನು ನಾಶಮಾಡಿ ನಮ್ಮನ್ನು ಕ್ಷಮಿಸಿರಿ. ನಮಗೆ ಸಕಲಶ್ರೇಯಸ್ಸೂ ಉಂಟಾಗುವಂತೆ ಅನುಗ್ರಹಿಸಿರಿ ಇತ್ಯಾದಿಯಾಗಿ ದಿವ್ಯತ್ವವನ್ನು ಪಡೆದ ಪಿತೃಗಳನ್ನು ಪ್ರಶಂಸಿಸಿ ಪ್ರಾರ್ಥಿಸಿದೆ.

### ಪಿತೃಗಳ ವಿಷಯದಲ್ಲಿ ಋಕ್ಕುಗಳಲ್ಲಿರುವ ಕೆಲವು ವಿವರಣೆಗಳು

ಮೃತರಾದವರಲ್ಲಿ ಪುಣ್ಯಶಾಲಿಗಳು ಮೂರನೆಯ ಸ್ವರ್ಗದಲ್ಲಿ ವಾಸಿಸುತ್ತಾರೆ; ಇವರಿಗೇ ಪಿತೃಗಳೆಂದು ಹೆಸರು. ಪುರಾತನವಾದ ಮಾರ್ಗಗಳನ್ನು ಅನುಸರಿಸಿದ, ಮೂಲಪುರುಷರೇ ಇವರು (೧೦-೧೫-೮, ೧೦); ಮೃತರಾದವರು, ಈ ಋಷಿಗಳು ಪರ್ಯಟಿಸಿದ ದಾರಿಯನ್ನೇ ಅನುಸರಿಸಿ, ಅವರ ಸಮೀಪಕ್ಕೇ ಹೋಗುತ್ತಾರೆ (೧೦-೧೪-೨, ೭, ೧೫). ವಿಷ್ಣುವಿನ ಮೂರನೆಯ ಪಾದಕ್ಕೆ ಸಂಬಂಧಿಸಿದ್ದಾರೆ. (೧೦-೧೫-೩ ; ೧-೧೫೪-ಅನ್ನು ಹೋಲಿಸಿ). ಎರಡು ಸೂಕ್ತಗಳು ಪಿತೃದೇವತಾಕವಾದವು. (೧೦-೧೫ ; ೧೦-೧೬).

ಪಿತೃಗಳಲ್ಲಿ, ನವಗ್ವರು, ವಿರೂಪರು, ಅಂಗಿರಸರು, ಅಥರ್ವರು, ಭೃಗುಗಳು ಮತ್ತು ವಸಿಷ್ಠರೆಂಬ (೧೦-೧೪-೪ ರಿಂದ ೬ ; ೧೦-೧೫-೮) ಗಣಗಳಿವೆ ; ಇವುಗಳಲ್ಲಿ ಕಡೆಯ ನಾಲ್ಕು ಹೆಸರುಗಳು, ಅಥರ್ವವೇದ ಮತ್ತು ಋಗ್ವೇದದ ಎರಡನೆಯ ಮತ್ತು ಏಳನೆಯ ಮಂಡಲಗಳ ಋಷಿಗಳ ಹೆಸರುಗಳೇ ಆಗಿವೆ. ಇವರಲ್ಲಿ ಅಂಗಿರಸರಿಗೂ ಯಮನಿಗೂ ವಿಶೇಷ ಸಂಬಂಧವಿದೆ (೧೦-೧೪-೩,೫) ಪಿತೃಗಳಲ್ಲಿ ಅವರಾಃ (ಕೆಳ ದರ್ಜೆಯವರು), ಪರಾಃ (ಉತ್ತಮ ದರ್ಜೆಯವರು) ಮತ್ತು ಮಧ್ಯಮಾಃ (ಮಧ್ಯ ದರ್ಜೆಯವರು) ಎಂತಲೂ ವಿಭಾಗಗಳಿವೆ; ಇವರೆಲ್ಲರೂ ಅವರ ವಂಶಜರಿಂದ ಜ್ಞಾತರಲ್ಲದಿದ್ದರೂ, ಅಗ್ನಿಗೆ ಇವರೆಲ್ಲರ ಪರಿಚಯವೂ ಇದೆ (೧೦-೧೫-೧, ೨, ೧೩). ಉಷಸ್ಸುಗಳು, ನದಿಗಳು, ಪರ್ವತಗಳು, ಭೂಮ್ಯಾಕಾಶಗಳು, ಪೂಷಣ ಮತ್ತು ಋಭುಗಳು, ಇವರುಗಳ ಜೊತೆಯಲ್ಲಿ ಪಿತೃಗಳ ಅನುಗ್ರಹವೂ ಪ್ರಾರ್ಥಿತವಾಗಿದೆ (೬-೫೨-೪ ; ೬-೭೫-೧೦ ; ೭-೩೫-೧೨ ೧-೧೦೬-೩). ಅವರ ಕಟಾಕ್ಷವನ್ನು ಬೇಡುವ (೧೦-೧೪-೬) ಅವರ ವಂಶಜರಿಗೆ, ಸಂಪತ್ತು, ಸಂತಾನ ಮತ್ತು ದೀರ್ಘಾಯುಸ್ಸುಗಳನ್ನು ಕೊಡಬೇಕೆಂದು ಪ್ರಾರ್ಥನೆ (೧೦-೧೫-೭, ೧೧; ಅ. ವೇ. ೧೮-೩-೧೪ ; ೧೮-೪-೬೨). ತಮ್ಮ ವಂಶೀ

ಕರಿಗೆ ಸಹಾಯಮಾಡಬೇಕೆಂದು ಪಿತೃಗಳನ್ನು ಪ್ರಾರ್ಥಿಸಿವೆ (೭-೩೩-೧ ; ೧೦-೧೫-೮ ನ್ನು ಹೋಲಿಸಿ) ; ತುರ್ವಶ ಯದು ಮತ್ತು ಉಗ್ರದೇವ ಎಂಬುವರು ಒಂಟಿಯಾಗಿಯೂ ಸ್ತುತರಾಗಿದ್ದಾರೆ (೧-೩೬-೧೮).

ಪಿತೃಗಳೂ ಅಮರರು (ಅ. ವೇ. ೬-೪೧-೩) ; ದೇವತೆಗಳೆಂತಲೂ ಕರೆಯಲ್ಪಟ್ಟಿದ್ದಾರೆ (೧೦-೫೬-೪). ಅಂಗಿರಸರು ಮತ್ತು ಕೆಲವು ಗಣಗಳಲ್ಲಿ, ದೇವತ್ವದ ಜೊತೆಗೆ ಋತ್ವಿಜತ್ವವೂ ಸೇರಿದೆ. ಸೃಷ್ಟಿಕಾರ್ಯಗಳು ಕೆಲವು ಪಿತೃಗಳಿಗೂ ಉಕ್ತವಾಗಿವೆ ; ಆಕಾಶವನ್ನು ನಕ್ಷತ್ರರಂಜಿತವನ್ನಾಗಿ ಮಾಡಿದವರು ಅವರೇ ; ಹಗಲು ಹೊತ್ತಿನಲ್ಲಿ ಬೆಳಕೂ, ರಾತ್ರಿ ಕತ್ತಲೂ, ಅವರಿಂದಲೇ ಆಯಿತು (೧೦-೬೮-೧೧) ; ಅಡಗಿಕೊಂಡಿದ್ದ ಬೆಳಕನ್ನು ಕಂಡು ಹಿಡಿದು, ಉಷಸ್ಸನ್ನು ಉಂಟುಮಾಡಿದರು (೭-೭೬-೪ ; ೧೦-೧೦೭-೧'ನ್ನು ಹೋಲಿಸಿ) ; ಮತ್ತು ಸೋಮನೊಡನೆ ಸೇರಿಕೊಂಡು, ಭೂಮ್ಯಾಕಾಶಗಳನ್ನು ವಿಸ್ತರಿಸಿದರು. (೮-೪೮-೧೩). ದೇವತೆಗಳಿಗೆ ಹೋಮದ್ರವ್ಯವನ್ನು ವಹಿಸುವ ಅಗ್ನಿಗೂ (ಹವ್ಯವಾಹ) ಮತ್ತು ಶವವನ್ನು ದಹಿಸುವ ಅಗ್ನಿಗೂ (ಕ್ರವ್ಯಾದ) ವ್ಯತ್ಯಾಸವಿರುವಂತೆ (೧೦-೧೬-೯), ದೇವಮಾರ್ಗ ಪಿತೃಮಾರ್ಗಗಳಿಗೂ ವ್ಯತ್ಯಾಸವಿದೆ (೧೦-೨-೭ ; ೧೦-೧೮-೧ ; ೧೦-೮೮-೧೫ ನ್ನು ಹೋಲಿಸಿ). ಅದೇ ರೀತಿ, ಸ್ವರ್ಗಲೋಕಕ್ಕೂ ಪಿತೃಲೋಕಕ್ಕೂ ಭೇದವು ಉಕ್ತವಾಗಿದೆ ; ದೇವಲೋಕದ ದ್ವಾರವು ಈಶಾನ್ಯ ದಿಕ್ಕಿನಲ್ಲಿಯೂ (ಶ. ಬ್ರಾ. ೬-೬-೨-೯), ಪಿತೃಲೋಕ ದ್ವಾರವು ಆಗ್ನೇಯದಲ್ಲಿಯೂ (ಶ. ಬ್ರಾ. ೧೩-೮-೧-೫) ಇವೆಯೆಂದು ಉಕ್ತವಾಗಿದೆ. ಪಿತೃಗಳೂ ಮನುಷ್ಯರೂ ಬೇರೆ ಬೇರೆ ವರ್ಗದವರು ಮತ್ತು ಸೃಷ್ಟಿಯೂ ಬೇರೆ ಬೇರೆ (ತೈ. ಬ್ರಾ. ೨-೩-೮-೨). ಪಿತೃಗಳು ಭೂಮಿ, ಅಂತರಿಕ್ಷ ಮತ್ತು ಸ್ವರ್ಗವಾಸಿಗಳು (ಅ. ವೇ. ೧೮-೨-೪೯ ; ಋ. ವೇ. ೧೦-೧೫೨ನ್ನು ಹೋಲಿಸಿ).

ಪುರಾತನ ಪಿತೃಗಳೇ ಒಂದು ಸಲ ಸೋಮಾಹುತಿಯನ್ನು ಅರ್ಪಿಸಿದರು (೧೦-೧೫-೮). ಅವರು ಯಮನೊಡನೆ ಸಂತೋಷದಿಂದ ಕಾಲಕಳೆಯುತ್ತಾರೆ (೧೦-೧೪-೧ ; ೧೦-೧೩೫-೧ ಮತ್ತು ಅ. ವೇ. ೧೮-೪-೧೦ ಗಳನ್ನು ಹೋಲಿಸಿ) ಮತ್ತು ದೇವತೆಗಳೊಡನೆ ಭೋಜನ ಮಾಡುತ್ತಾರೆ (೭-೭೬-೪). ದೇವತೆಗಳಿಗೆ ಸಮಾನರಾಗಿ ಜೀವಿಸುತ್ತಾ, ಒಂದೊಂದು ಸಲ ದೇವತೆಗಳಿಗೆ ಯೋಗ್ಯವಾದ ಪೂಜೆಗಳನ್ನೂ ಪಡೆಯುತ್ತಾರೆ. ಇಂದ್ರ ಮತ್ತು ದೇವತೆಗಳಿಗೆ ಯೋಗ್ಯವಾದ ಪೂಜೆಗಳನ್ನೂ ಪಡೆಯುತ್ತಾರೆ. ಇಂದ್ರ ಮತ್ತು ದೇವತೆಗಳ ರಥದಲ್ಲಿಯೇ ಅವರೂ ಬರುತ್ತಾರೆ (೧೦-೧೫-೧೦). ಅವರಿಗೂ ಸೋಮರಸದಲ್ಲಿ ಅಭಿಲಾಷೆ (೧೦-೧೫-೫, ೬) ; ದರ್ಭಾಸನದಲ್ಲಿ ದಕ್ಷಿಣಾಭಿಮುಖವಾಗಿ ಕುಳಿತು, ಸುತವಾದ ಪಾನೀಯವನ್ನು ಪಾನಮಾಡುತ್ತಾರೆ (೧೦-೧೫-೫, ೬). ತಮಗೋಸ್ಕರ ಸಿದ್ಧವಾದ ಸೋಮರಸವನ್ನು ಪಾನಮಾಡಲು ಆತುರರಾಗಿದ್ದಾರೆ : ಯಮ ಅವನ ತಂದೆ ವಿವಸ್ವತ ಮತ್ತು ಅಗ್ನಿಗಳೊಡನೆ ಬಂದು ಅವರೊಡನೆಯೇ, ಹುತವಾದವುಗಳನ್ನು ಸ್ವೀಕರಿಸಬೇಕೆಂದು ಅವರಿಗೆ ಆಹ್ವಾನವಿದೆ (೧೦-೧೫-೮ ರಿಂದ ೧೧ ; ೧೦-೧೪-೪, ೫). ಸಾವಿರಗಟ್ಟಲೆ ಬಂದು, ದರ್ಭಾಸನದಲ್ಲಿ ಕ್ರಮವಾಗಿ ಕುಳಿತು ಕೊಳ್ಳುತ್ತಾರೆ. (೧೦.೧೫.೧೦, ೧೧). ಪಿತೃಗಳು ಯಾಗಶಾಲೆಗೆ ಬಂದಾಗ, ಕೆಲವು ಪಿಶಾಚಿಗಳೂ, ಅವರ ಸ್ನೇಹಿತರ ರೂಪದಲ್ಲಿ, ಅವರೊಡನೆ ಬೆರೆಯುವುದುಂಟು. (ಅ.ವೇ. ೧೮-೨-೨೮).

ದೇವತೆಗಳಿಗೆ ಆಹಾರವು ಅರ್ಪಿತವಾಗುವಾಗ 'ಸ್ವಾಹಾ' ಎಂತಲೂ, ಪಿತೃಗಳಿಗೆ ಕೊಡುವಾಗ 'ಸ್ವಧಾ' ಎಂತಲೂ (೧೦-೧೪-೩) ಹೇಳುತ್ತಾರೆ : ಎಲ್ಲಾ ಕರ್ಮಗಳಲ್ಲಿಯೂ ದೇವ ಮತ್ತು ಪಿತೃಭಾಗಗಳಿಗೆ ಈ ವ್ಯತ್ಯಾಸ ವಿದ್ದೇ ಇರಬೇಕು (ಶ. ಬ್ರಾ. ४-४-೨-೭). ಅವರಿಗೂ ಪೂಜೆಯುಂಟು ; ಅನುಯಾಯಿಗಳ ಪ್ರಾರ್ಥನೆಯನ್ನು ಲಾಲಿಸಿ, ಅವರ ಪಕ್ಷವನ್ನು ವಹಿಸಬೇಕು, ಸ್ವಾಭಾವಿಕವಾಗಿ ನಡೆದುಹೋಗುವ ಪ್ರಮಾದಗಳನ್ನು ಮನ್ನಿಸಬೇಕು ಇತ್ಯಾದಿ ಪ್ರಾರ್ಥನೆಗಳಿವೆ (೧೦-೧೫-೨, ೫, ೬ ; ೩-೫೫-೨ನ್ನು ಹೋಲಿಸಿ).

॥ ಸಾಯಣಭಾಷ್ಯಂ ॥

ಪರೇಯಿವಾಂಸಮಿತಿ ಷೋಡಶರ್ಚಂ ಚತುರ್ದಶಂ ಸೂಕ್ತಂ ವಿವಸ್ವತಃ ಪುತ್ರಸ್ಯ ಯಮಸ್ಯಾರ್ಷಂ ಅಂಗಿರಸೋ ನಃ ಪಿತರೋ ನವಗ್ವಾ ಇತಿ ಷಷ್ಠ್ಯಾ ಅಂಗಿರಃಪಿತ್ರಥರ್ವಭೃಗುಲಕ್ಷಣಾ ಲಿಂಗೋಕ್ತಾ ದೇವತಾಃ । ಪ್ರೇಹೀತ್ಯಾದ್ಯಾಸ್ತಿಸ್ರೋ ಲಿಂಗೋಕ್ತದೇವತಾಕಾಃ ಪಿತೃದೇವತಾಕಾ ವಾ । ಅತಿ ದ್ರವ ಸಾರಮೇಯಾವಿತ್ಯಾದಿಕಸ್ತೃಚಃ ಸರಮಾಪುತ್ರೌ ಯೌ ಶ್ವಾನೌ ಪರಲೋಕಮಾರ್ಗಮಭಿತಃ ಸ್ಥಿತೌ ತದ್ದೇವತಾಕಃ । ಶಿಷ್ಟಾ ಯಮದೇವತ್ಯಾಃ । ಯಮಾಯ ಸೋಮಮಿತಿ ತ್ರಯೋದಶ್ಯಾದ್ಯಾ ಅನುಷ್ಟುಭಃ । ಯಮಾಯ ಮಧುಮತ್ತಮಮಿತ್ಯೇಷಾ ಬೃಹತೀ । ಆದಿತೋ ದ್ವಾದಶ ತ್ರಿಷ್ಟುಭಃ । ತಥಾ ಚಾನುಕ್ರಾಂತಂ ಪರೇಯಿವಾಂಸಂ ಷೋಳಶ ಯಮೋ ಯಾಮಂ ಷಷ್ಠೀ ಲಿಂಗೋಕ್ತದೇವತಾ ಪರಾಶ್ಚ ತಿಸ್ರಃ ಪಿತ್ರ್ಯಾ ವಾ ತೃಚಃ ಶ್ವಭ್ಯಾಂ ಪರಾ ಅನುಷ್ಟುಭೋ ಬೃಹತ್ಯುಪಾಂತ್ಯೇತಿ ॥ ಗತಃ ಸೂಕ್ತವಿನಿಯೋಗಃ ॥ ಮಹಾಪಿತೃಯಜ್ಞೇ ಯಮಯಾಗಾಖ್ಯಾ ಯಾಜ್ಯಾ । ಸೂತ್ರಿತಂ ಚ । ಇಮಂ ಯಮ ಪ್ರಸ್ತರಮಾ ಹಿ ಸೀದೇತಿ ದ್ವೇ ಪರೇಯಿವಾಂಸಂ ಪ್ರವತೋ ಮಹೀರನು ಆ-೨-೧೯ । ಇತಿ ॥

ಅನುವಾದವು—ಪರೇಯಿವಾಂಸಂ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಹದಿನಾರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಿವಸ್ವಂತನ ಪುತ್ರನಾದ ಯಮನು ಋಷಿಯು; **ಅಂಗಿರಸೋ ನಃ** ಎಂಬ ಆರನೆಯ ಋಕ್ಕಿಗೆ ಅಂಗಿರಃಪಿತ್ರಥರ್ವಭೃಗು ಎಂದು ಋಕ್ಕಿನಲ್ಲಿ ಹೇಳಿರುವ ಪಿತೃಗಳೇ ದೇವತೆಯು; **ಪ್ರೇಹಿ** ಎಂದು ಮೊದಲಾಗುವ ೭-೯ ಮೂರು ಋಕ್ಕುಗಳಿಗೆ ಋಕ್ಕಿನಲ್ಲಿ ಹೇಳಿರುವವರೇ ದೇವತೆಯು ಅಥವಾ ಪಿತೃಗಳೇ ದೇವತೆಯು; **ಅತಿ ದ್ರವ ಸಾರಮೇಯೌ** ಎಂಬ ೧೦-೧೨ ಋಕ್ಕುಗಳಿಗೆ ಪರಲೋಕ ಮಾರ್ಗದಲ್ಲಿರುವ ಸರಮಾ ಎಂಬ ದೇವಶುನಿಯ ಪುತ್ರರಾದ ಸಾರಮೇಯೌ ಎಂಬ ಎರಡು ನಾಯಿಗಳೇ ದೇವತೆಯು; ಉಳಿದ ಋಕ್ಕುಗಳು ಯಮದೇವತಾಕವು. **ಯಮಾಯ ಸೋಮಂ** ಎಂಬ ಋಕ್ಕಿನಿಂದ ಮುಂದಿನ ನಾಲ್ಕು ಋಕ್ಕುಗಳು (೧೩-೧೬ ಋಕ್ಕುಗಳು) ಅನುಷ್ಟುಪ್ ಛಂದಸ್ಕವು; **ಯಮಾಯ ಮಧುಮತ್ತಮಂ** ಎಂಬ ೧೫ ನೆಯ ಋಕ್ಕು ಬೃಹತೀಛಂದಸ್ಕವು. ಈ ಸೂಕ್ತದ ಮೊದಲಿನ ಹನ್ನೆರಡು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಪರೇಯಿವಾಂಸಂ ಷೋಳಶ ಯಮೋ ಯಾಮಂ ಷಷ್ಠೀ ಲಿಂಗೋಕ್ತದೇವತಾ ಪರಾಶ್ಚ ತಿಸ್ರಃ ಪಿತ್ರ್ಯಾ ವಾ ತೃಚಃ ಶ್ವಭ್ಯಾಂ ಪರಾ ಅನುಷ್ಟುಭೋ ಬೃಹತ್ಯುಪಾಂತ್ಯಾ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಿದೆ. ಮಹಾಪಿತೃಯಜ್ಞವೆಂಬ ಕರ್ಮದ ಯಮಯಾಗದಲ್ಲಿ ಸೂಕ್ತದ ಮೊದಲನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಇಮಂ ಯಮ ಪ್ರಸ್ತರಮಾ ಹಿ ಸೀದೇತಿ ದ್ವೇ ಪರೇಯಿವಾಂಸಂ ಪ್ರವತೋ ಮಹೀರನು** ಎಂಬ ಸೂತ್ರದಿಂದ (ಆ. ೨-೧೯) ವಿವೃತವಾಗಿರುವುದು.

## ಸೂಕ್ತ—೧೪

ಮಂಡಲ—೧೦ । ಅನುವಾಕ—೧ । ಸೂಕ್ತ—೧೪ ।

ಅಷ್ಟಕ—೭ । ಅಧ್ಯಾಯ—೬ । ವರ್ಗ—೧೪, ೧೫, ೧೬ ।

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೬ ।

ಋಷಿಃ—ಯಮಃ ।

ದೇವತಾ—೧-೫, ೧೩-೧೬. ಯಮಃ । ೬. ಲಿಂಗೋಕ್ತದೇವತಾಃ । ೭-೯. ಲಿಂಗೋಕ್ತದೇವತಾಃ ಪಿತರೋ ವಾ । ೧೦-೧೨. ಶ್ವಾನೌ ॥

ಛಂದಃ—೧-೧೨. ತ್ರಿಷ್ಟುಪ್ । ೧೩, ೧೪, ೧೬. ಅನುಷ್ಟುಪ್ । ೧೫. ಬೃಹತೀ ॥

॥ ಸಂಹಿತಾಪಾಠಃ ॥

ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಮನುಪಸ್ಪಶಾನಂ ।
ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯ ॥ ೧ ॥

॥ ಪದಪಾಠಃ ॥

ಪರೇಯಿಽವಾಂಸಂ । ಪ್ರಽವತಃ । ಮಹೀಃ । ಅನು । ಬಹುಽಭ್ಯಃ । ಪಂಥಾಂ । ಅನುಽಪಸ್ಪಶಾನಂ ।
ವೈವಸ್ವತಂ । ಸಂಽಗಮನಂ । ಜನಾನಾಂ । ಯಮಂ । ರಾಜಾನಂ । ಹವಿಷಾ । ದುವಸ್ಯ ॥ ೧ ॥

॥ ಸಾಯಣಭಾಷ್ಯಂ ॥

ಹೇ ಮದೀಯಾಂತರಾತ್ಮನ್ ಯಜಮಾನ ವಾ ತ್ವಂ ರಾಜಾನಂ ಪಿತೄಣಾಂ ಸ್ವಾಮಿನಂ ಯಮಂ ಹವಿಷಾ ಪುರೋಡಾಶಾದಿನಾ ದುವಸ್ಯ । ಪರಿಚರ । ಕೀದೃಶಂ । ಪ್ರವತಃ ಪ್ರಕೃಷ್ಟಕರ್ಮವತೋ ಭೂಲೋಕವರ್ತಿಭೋಗಸಾಧನಂ ಪುಣ್ಯಮನುಷ್ಠಿತವತಃ ಪುರುಷಾನ್ಮಹೀಸ್ತತ್ತದ್ಭೋಗೋಚಿತಭೂಪ್ರದೇಶವಿಶೇಷಾನನು ಪರೇಯಿವಾಂಸಂ ಕ್ರಮೇಣ ಮರಣಾದೂರ್ಧ್ವಂ ಪ್ರಾಪಿತವಂತಂ ತಥಾ ಬಹುಭ್ಯಃ ಸ್ವರ್ಗಾರ್ಥಿಭ್ಯಃ ಪುಣ್ಯಕೃದ್ಭ್ಯಃ ಪುಣ್ಯಕೃತಾರ್ಥೇ ಪಂಥಾಂ ಸ್ವರ್ಗಸ್ಯೋಚಿತಂ ಮಾರ್ಗಮನುಪಸ್ಪಶಾನಮಬಾಧಮಾನಂ । ಪಾಪಿನ ಏವ ಪುರುಷಾನ್ ಸ್ವರ್ಗಮಾರ್ಗಬಾಧೇನ ನರಕಂ ಪ್ರಾಪಯತಿ ನ ತು ಪುಣ್ಯಕೃತ ಇತ್ಯರ್ಥಃ । ವೈವಸ್ವತಂ ವಿವಸ್ವತಃ ಸೂರ್ಯಸ್ಯ ಪುತ್ರಂ ಜನಾನಾಂ ಪಾಪಿನಾಂ ಸಂಗಮನಂ ಗಂತವ್ಯಸ್ಥಾನರೂಪಂ ॥

॥ ಪ್ರತಿಪದಾರ್ಥ ॥

(ಎಲೈ ಯಜಮಾನನೇ), **ಪ್ರವತಃ**—ಉತ್ಕೃಷ್ಟವಾದ ಕರ್ಮಗಳನ್ನಾಚರಿಸಿದ ಪುರುಷರನ್ನು । **ಮಹೀಃ ಅನು**—ಆಯಾ ಉತ್ತಮಪ್ರದೇಶಗಳಿಗೆ । **ಪರೇಯಿವಾಂಸಂ**—ಮರಣಾನಂತರ ಕರೆದೊಯ್ಯುವವನೂ । **ಬಹುಭ್ಯಃ**—ಅನೇಕ ಪುಣ್ಯಕರ್ಮಿಗಳಿಗೆ । **ಪಂಥಾಂ**—ಸ್ವರ್ಗಾದಿಮಾರ್ಗಗಳನ್ನು । **ಅನುಪಸ್ಪಶಾನಂ**—ಹಿಂಸೆಯಿಲ್ಲದೇ ಉಂಟುಮಾಡತಕ್ಕವನೂ । **ವೈವಸ್ವತಂ**—ವಿವಸ್ವಂತನ ಪುತ್ರನೂ । **ಜನಾನಾಂ**—ಪಾಪಿಗಳಿಗೆ । **ಸಂಗಮನಂ**—ಅವರಿಗೆ ಯೋಗ್ಯವಾದ ಸ್ಥಾನಕ್ಕೆ ಸೇರಿಸುವವನೂ । **ರಾಜಾನಂ**—ಪಿತೃಗಳಿಗೆ ಪ್ರಭುವೂ ಆದ । **ಯಮಂ**—ಯಮನನ್ನು । **ಹವಿಷಾ**—ಹವಿಸ್ಸುಗಳಿಂದ । **ದುವಸ್ಯ**—ಉಪಚರಿಸು.

॥ ಭಾವಾರ್ಥ ॥

ಎಲೈ ಯಜಮಾನನೇ, ಉತ್ಕೃಷ್ಟವಾದ ಕರ್ಮಗಳನ್ನಾಚರಿಸಿದ ಪುರುಷರನ್ನು ಆಯಾ ಉತ್ತಮಪ್ರದೇಶಗಳಿಗೆ ಮರಣಾನಂತರ ಕರೆದೊಯ್ಯುವವನೂ, ಅನೇಕ ಪುಣ್ಯಕರ್ಮಿಗಳಿಗೆ ಸ್ವರ್ಗಾದಿಮಾರ್ಗಗಳನ್ನು ಹಿಂಸೆಯಿಲ್ಲದೇ ಉಂಟು

ಮಾಡತಕ್ಕವನೂ, ವಿವಸ್ವಂತನ ಪುತ್ರನೂ, ಪಾಪಿಗಳನ್ನು ಅವರಿಗೆ ಯೋಗ್ಯವಾದ ಸ್ಥಾನಕ್ಕೆ ಸೇರಿಸುವವನೂ, ಪಿತೃಗಳಿಗೆ ಪ್ರಭುವೂ ಆದ ಯಮನನ್ನು ಹವಿಸ್ಸುಗಳಿಂದ ಉಪಚರಿಸು.

## English Translation

Worship with oblations Yama, king (of the Pitris), son of Vivaswat, the aggregation of mankind, who conducts those who are virtuous over the earth, and opens to many the path (of heaven).

॥ ವಿಶೇಷವಿಷಯಗಳು ॥

**ಯಮಂ**—ಯಮನು ಯಾರು, ಅವನ ಕರ್ತವ್ಯವೇನು ಎಂಬ ವಿಷಯವನ್ನು ನಾವು ಈ ಸೂಕ್ತದ ಪೀಠಿಕೆಯಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ. ಯಾಸ್ಕರು ಯಮಶಬ್ದದ ಅರ್ಥವನ್ನು ವಿವರಿಸುತ್ತಾ—

**ಯಮಃ । ಯಮೋ ಯಚ್ಛತೀತಿ ಸತಃ । ತಸ್ಯೈಷಾ ಭವತಿ ।**

(ನಿ. ೧೦-೨೦)

ನಿಯಮಿಸು, ಹತೋಟಿಯಲ್ಲಿಡು ಎಂಬರ್ಥವುಳ್ಳ ಯಮ್ ಧಾತುವಿನಿಂದ ಯಮಶಬ್ದವು ನಿಷ್ಪನ್ನವಾಗಿದೆ. ಯಮನು ಪಿತೃಲೋಕಕ್ಕೆ ಪಾಲಕನಾಗಿ ತನಗೆ ಸೇರಿದ ಪಿತ್ರಾದಿಗಳನ್ನು ನಿಯಮಿಸಿ ಅಂಕೆಯಲ್ಲಿಟ್ಟುಕೊಳ್ಳುವವನು. ಆದ್ದರಿಂದ ಇವನಿಗೆ ಯಮನೆಂದು ಹೆಸರು ಎಂದು ನಿರ್ವಚನವನ್ನು ಹೇಳಿದ್ದಾರೆ. ಆದರೆ ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು, ಯಮಶಬ್ದಕ್ಕೆ ಬೇರೆ ಅರ್ಥವನ್ನು ಮಾಡಿದ್ದಾರೆ—**ಯಮಃ । ಯಚ್ಛತಿ ಉಪರಮಯತಿ ಜೀವಿತಾತ್ ಸರ್ವಂ ಭೂತಗ್ರಾಮಮಿತಿ ಯಮಃ ।** ಭೂಮಿಯ ಮೇಲಿರುವ ಸರ್ವಪ್ರಾಣಿಗಳ ಜೀವಿತವನ್ನು ಕೊನೆಗಾಣಿಸುವವನಾದ್ದರಿಂದ ಎಂದರೆ ಅವರಿಗೆ ಮರಣವನ್ನುಂಟುಮಾಡುವವನಾದ್ದರಿಂದ ಇವನಿಗೆ ಯಮನೆಂದು ಹೆಸರು ಎಂದು ಅರ್ಥವಿವರಣೆಮಾಡಿದ್ದಾರೆ. ಈ ಯಮಶಬ್ದವಿರುವ ಋಕ್ಕನ್ನು ಉದಾಹರಣೆಗಾಗಿ ಕೊಡುವುದಕ್ಕಾಗಿ ಯಾಸ್ಕರು ಪ್ರಕೃತ ಋಕ್ಕನ್ನೇ ಆರಿಸಿಕೊಂಡು ಅದಕ್ಕೆ ನಿರ್ವಚನವನ್ನು ಹೇಳಿದ್ದಾರೆ—

**ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಮನುಪಸ್ಪಶಾನಂ ।**
**ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯ ॥**

**ಪರೇಯಿವಾಂಸಂ ಪರ್ಯಾಗತವಂತಂ ಪ್ರವತ ಉದ್ವತೋ ನಿವತ ಇತಿ । ಅವತಿರ್ಗತಿಕರ್ಮಾ । ಬಹುಭ್ಯಃ ಪಂಥಾನಮನುಪಸ್ಪಾಶಯಮಾನಂ ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯೇತಿ । ದುವಸ್ಯತೀ ರಾಧ್ನೋತಿಕರ್ಮಾ ॥**

(ನಿ. ೧೦-೨೦)

ಈ ಋಕ್ಕಿನಲ್ಲಿ ಋಷಿಯು ಯಜಮಾನನನ್ನು ಅಥವಾ ತನ್ನ ಅಂತರಾತ್ಮನನ್ನು ಉದ್ದೇಶಿಸಿ ಈ ರೀತಿ ಹೇಳುವನು—ಎಲೈ ಯಜಮಾನನೇ, ಯಮನನ್ನುದ್ದೇಶಿಸಿ ಹವಿಸ್ಸನ್ನರ್ಪಿಸಿ ಪರಿಚರಿಸು. ಈ ಯಮನು ಸುತ್ತಲೂ ಬರುವನು ಎಂದರೆ ಪ್ರಾಣಿಗಳು ಎಲ್ಲೇ ಇರಲಿ ಅಲ್ಲಿಗೆಲ್ಲಾ ಮರಣಕಾಲದಲ್ಲಿ ಬಂದೇ ಬರುವನು. ಮತ್ತು ಈ ಋಕ್ಕಿನಲ್ಲಿ **ಪ್ರವತಃ** ಎಂಬ

ಶಬ್ದವು ಮಾತ್ರ ಇರುವುದರಿಂದ ಇದಕ್ಕೆ ಸಂಬಂಧಿಸಿದಂತೆ **ಉದ್ವತಃ ನಿವತಃ** ಎಂಬ ಎರಡು ಶಬ್ದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಪ್ರವತಃ ಎಂದರೆ ಮನುಷ್ಯರು, ಉದ್ವತಃ ಎಂದರೆ ದೇವತೆಗಳು, ನಿವತಃ ಎಂದರೆ ತಿರ್ಯಗ್ಜಂತುಗಳು. ಈ ದೇವಮನುಷ್ಯ ತಿರ್ಯಗ್ಜಂತುಗಳನ್ನು ಅವರವರ ಕರ್ಮಾನುಸಾರವಾಗಿ ಅವರು ಹೊಂದಲು ಯೋಗ್ಯವಾದ ಸ್ಥಾನಗಳನ್ನು (ಲೋಕಗಳನ್ನು) ಸೇರಿಸುವುದಕ್ಕಾಗಿ ಮರಣಾನಂತರ ಅವರ ಪ್ರೇತಶರೀರಗಳನ್ನು ಕೊಂಡೊಯ್ಯುವನು. **ಅನುಪಸ್ಪಶಾನಂ** ಎಂದರೆ ಈ ಪ್ರಾಣಿಗಳು ಇಂತಹ ಕರ್ಮವನ್ನಾಚರಿಸಿರುವುದರಿಂದ ಇವರಿಗೆ ತಕ್ಕ ಫಲವನ್ನು ಕೊಡುವುದಕ್ಕಾಗಿ ಅವರಿಗೆ ನಾನಾವಿಧ ರೋಗಾದಿಗಳ ಮೂಲಕ ಮರಣವನ್ನುಂಟುಮಾಡಿ ಮೃತರಾದ ಮೇಲೆ ಅವರ ಪ್ರೇತಶರೀರಗಳನ್ನು ಪಾಶದಿಂದ ಬಿಗಿದು ಪುಣ್ಯ ಮಾಡಿದರೆ ಸ್ವರ್ಗಾದಿ ಉತ್ತಮ ಲೋಕಗಳಿಗೂ, ಪಾಪ ಮಾಡಿದ್ದರೆ ನರಕಾದಿ ಸ್ಥಾನಗಳಿಗೂ ನಾನಾವಿಧ ಮಾರ್ಗಗಳಿಂದ ಒಯ್ಯುವನು ಎಂದರ್ಥವು. **ಸಂಗಮನಂ ಜನಾನಾಂ** ಎಂದರೆ ಜನರ ವಿಷಯದಲ್ಲಿ ಪಕ್ಷಪಾತಮಾಡದೆ ಅವರ ಕರ್ಮಾನುಗುಣವಾಗಿ ಅವರಿಗೆ ಫಲವನ್ನು ಕೊಡುವವನು. ಇಂತಹ **ಯಮಂ ರಾಜಾನಂ** ಪಿತೃಗಳ ರಾಜನಾದ ಯಮನನ್ನು ಹವಿರಾದಿಗಳಿಂದ ಉಪಚರಿಸಿ ಸೇವಿಸು ಎಂದು ನಿರ್ವಚನದ ಸಾರಾಂಶ.

**ಅಗ್ನಿರಪಿ ಯಮ ಉಚ್ಯತೇ । ತಮೇತಾ ಋಚೋಽನುಪ್ರವದಂತಿ ।** (ನಿ. ೧೦-೨೦)

ಕೆಲವು ಸಂದರ್ಭಗಳಲ್ಲಿ ಅಗ್ನಿಯನ್ನು ಯಮನೆಂದು ಕರೆಯುವ ರೂಢಿ ಇದೆ. ಈ ವಿಷಯದಲ್ಲಿ ಈ ಕೆಳಗಿನ ಋಕ್ಕುಗಳು ಈ ಅಭಿಪ್ರಾಯವನ್ನು ಸ್ಪಷ್ಟಪಡಿಸುವವು ಎಂದು ಹೇಳಿ ಉದಾಹರಣೆಗಾಗಿ ಸೇನೇವ ಸೃಷ್ಟಾ ಎಂಬ ಋ. ಸಂ. ೧-೬೬-೭ ಮತ್ತು ೮ ನೇ ಋಕ್ಕುಗಳನ್ನು ಕೊಟ್ಟು ಅವುಗಳಿಗೂ ನಿರ್ವಚನವನ್ನು ಹೇಳಿದಾರೆ.

**ಪರೇಯಿವಾಂಸಂ**—ಈ ಶಬ್ದಕ್ಕೆ ಯಾಸ್ಕರು ಮಾಡಿರುವ ಅರ್ಥವಿವರಣೆಗೂ ಭಾಷ್ಯಕಾರರು ಮಾಡಿರುವ ಅರ್ಥವಿವರಣೆಗೂ ಬಹಳ ವ್ಯತ್ಯಾಸವಿದೆ. ಯಾಸ್ಕರು ಮಾಡಿರುವ ಅರ್ಥವನ್ನು ಈ ಋಕ್ಕಿನ ನಿರುಕ್ತದಲ್ಲಿ ವಿವರಿಸಲಾಗಿದೆ. ಅಲ್ಲಿ **ಪರೇಯಿವಾಂಸಂ** ಎಂದರೆ **ಪರ್ಯಾಪ್ತವಂತಂ**—ಸುತ್ತಲೂ ಎಂದರೆ ಎಲ್ಲಿದ್ದರೆ ಅಲ್ಲಿಂದ ಕರೆದುಕೊಂಡು ಹೋಗಿ ತಲುಪಿಸುವ ಎಂಬರ್ಥವು ನಿವೃತವಾಗಿದೆ. ಆದರೆ ಭಾಷ್ಯಕಾರರು—ಕ್ರಮೇಣ **ಮರಣಾದೂರ್ಧ್ವಂ ಪ್ರಾಪಿತವಂತಂ** ಎಂದರೆ, ಮರಣಾನಂತರ ಮೃತಶರೀರದಿಂದ ಹೊರಟುಬರುವ ಪ್ರೇತವನ್ನು ಪರಲೋಕಕ್ಕೆ ಒಯ್ಯುವ ಎಂದು ಅರ್ಥ ವಿವರಣೆಮಾಡಿದಾರೆ.

ಇಲ್ಲಿ ಒಂದು ಸಂಶಯವು ತಲೆದೋರುವುದು. ಒಬ್ಬ ಪುರುಷನು ಮೃತನಾದ ಮೇಲೆ ಅವನನ್ನು ಪರಲೋಕಕ್ಕೆ ಕರೆದುಕೊಂಡು ಹೋಗುವುದೆಂದರೇನು ? ಶರೀರವೇ ನಾಶವಾದಾಗ ಕರೆದುಕೊಂಡುಹೋಗುವುದು ಯಾರನ್ನು ಎಂಬ ಪ್ರಶ್ನೆ ಏಳುವುದು. ಅದಕ್ಕೆ ಸಮಾಧಾನವೇನೆಂದರೆ–ಪುರುಷನು ಅಥವಾ ಪ್ರಾಣಿಯು ಮೃತವಾದ ಮೇಲೆ ಅವನ ಶರೀರ ಕ್ರಿಯೆಗಳೆಲ್ಲಾ ನಿಂತುಹೋಗಿ ಶರೀರವು ನಿಶ್ಚೇಷ್ಟಿತವಾಗುವುದು. ಅದು ಕ್ರಮೇಣ ಪಂಚಭೂತಗಳಾದ ಪೃಥಿವ್ಯಾದಿಗಳಲ್ಲಿ ಸೇರಿಹೋಗುವುದು. ಎಂದರೆ ಪಂಚಭೂತಗಳ ಸಂಯೋಗದಿಂದಲೇ ಉಂಟಾದ ಶರೀವು ಕೊನೆಗೆ ಪಂಚಭೂತಗಳಲ್ಲಿಯೇ ಸೇರಿಹೋಗಿ ಅಂತರ್ಗತವಾಗುವುದು. ಪಂಚಭೂತಗಳೆಂದರೆ ಪೃಥಿವೀ, ಅಪ್ಪು, ತೇಜಃ, ವಾಯು, ಆಕಾಶ ಇವುಗಳಿಗೆ ಕ್ರಮವಾಗಿ ಘಟ್ಟಿ ಪದಾರ್ಥ, ದ್ರವರೂಪವಾದ ವಸ್ತು, ಶಾಖ, ಗಾಳಿ, ಅವಕಾಶ ಎಂಬರ್ಥಗಳನ್ನು ಇಲ್ಲಿ ಹೊಂದಿಸಿಕೊಳ್ಳಬೇಕು. ಈ ಐದು ವಿಧವಾದ ವಸ್ತುಗಳು ದೇಹದಲ್ಲಿರುವುದು ಎಲ್ಲರಿಗೂ ತಿಳಿದೇ ಇದೆ. ಚರ್ಮ, ಮಾಂಸ, ಮೂಳೆ, ಉಗುರು ಮೊದಲಾದ ಘಟ್ಟಿ ಪದಾರ್ಥಗಳು ಪೃಥಿವಿಯ ಅಂಶಗಳು. ಮರಣಾನಂತರ ಅವು ಮಣ್ಣಿ

ನಲ್ಲಿಯೇ ಸೇರಿ ಮಣ್ಣೇ ಆಗುವುವು. ರಕ್ತ, ಜೊಲ್ಲು ಮೊದಲಾದ ದ್ರವರೂಪವಲ್ಲಿರುವ ವಸ್ತುಗಳು ಅಪ್ಪಿನ (ಉದಕದ) ಅಂಶಗಳು. ಅವುಗಳು ಜಲದಲ್ಲಿ ಲೀನವಾಗುವವು. ಶರೀರದಲ್ಲಿ ಮರಣಕಾಲದವರೆಗೂ ಇರುವ ಶಾಖವು (ಅಗ್ನಿಯು) ತೇಜಸ್ಸಿನಲ್ಲಿ ಅಥವಾ ಅಗ್ನಿಯಲ್ಲಿ ಸೇರಿಹೋಗುವುದು. ಆದ್ದರಿಂದ ಮೃತ ಶರೀರದಲ್ಲಿ ಶಾಖವಿರುವುದಿಲ್ಲ. ತಣ್ಣಗಿರುವುದು. ಮರಣಾನಂತರ ಉಚ್ಛ್ವಾಸ ನಿಶ್ವಾಸರೂಪವಾದ ವಾಯುಸಂಚಲನೆಯು ನಿಂತುಹೋಗಿ ಪ್ರಾಣಾದಿಪಂಚ ವಾಯುಗಳು ವಾಯುತತ್ತ್ವದಲ್ಲಿ ಎಂದರೆ ಬಾಹ್ಯವಾಯುವಿನಲ್ಲಿ ಸೇರಿಹೋಗುವವು. ಉಸಿರಾಡುವುದು ನಿಂತುಹೋಗಿರುವುದೇ ಮರಣಕ್ಕೆ ಮುಖ್ಯ ಚಿಹ್ನೆಯೆಂದು ಅನುಭವವೇದ್ಯವಾಗಿದೆ. ಇನ್ನು ಆಕಾಶ ಅಥವಾ ಅವಕಾಶವು ಕಣ್ಣಿಗೆ ಕಾಣುವ ವಸ್ತುವಲ್ಲವಾದ್ದರಿಂದ ಅದು ಬಾಹ್ಯಾಕಾಶದಲ್ಲಿ ಲೀನವಾಗುವುದು ಯಾರಿಗೂ ಗೋಚರವಾಗುವುದಿಲ್ಲ. ಈ ರೀತಿ ಮೃತ ಶರೀರದ ಭಾಗಗಳೆಲ್ಲಾ ಆಯಾ ತತ್ತ್ವಗಳಲ್ಲಿ ಸೇರಿಹೋದ ಮೇಲೆ ಏನೂ ಉಳಿಯುವುದಿಲ್ಲವೇ ಎಂದರೆ, ಉಳಿಯುತ್ತದೆ. ಪ್ರಾಣಿಯು ಅಥವಾ ಪುರುಷನು ಜೀವಿಸುತ್ತಿದ್ದ ಕಾಲದಲ್ಲಿ ಅವನ ಕ್ರಿಯಾ ವ್ಯಾಪಾರಗಳನ್ನು ಪ್ರೇರಿಸುತ್ತಾ ಚಕ್ಷುರಾದಿಜ್ಞಾನೇಂದ್ರಿಯಗಳ ವ್ಯಾಪಾರಾದಿಗಳನ್ನು ಗಮನಿಸುತ್ತಾ ಇದ್ದ ಚೇತನಾತ್ಮಕವಾದ ವಸ್ತುವೊಂದಿದ್ದಿತು. ವಸ್ತು ಎಂದರೆ ಇಲ್ಲಿ ಇಂದ್ರಿಯಗೋಚರವಾದ ಪಾರ್ಥಿವವಸ್ತುವಲ್ಲ. ಪಾರ್ಥಿವವಸ್ತುಗಳಿಗಿಂತ ಅತಿಸೂಕ್ಷ್ಮವಾಗಿ ಶರೀರವು ನಾಶವಾದರೂ ತಾನು ಮಾತ್ರ ನಾಶವಾಗದೇ ಇರುವುದು. ಇದನ್ನು ಆತ್ಮನೆಂದು ಕರೆಯುವರು, ಈ ಆತ್ಮನಿಗೆ ಪಾರ್ಥಿವಶರೀರನಾಶಾನಂತರ ಸೂಕ್ಷ್ಮವಾದ ಬೇರೊಂದು ಶರೀರವು ಪ್ರಾಪ್ತವಾಗುವುದು. ಪ್ರಾರಂಭ ದೆಸೆಯಲ್ಲಿ ಇದನ್ನು ಪ್ರೇತಶರೀರವೆಂದು ಕರೆಯುವರು. ಇದು ಅತಿಸೂಕ್ಷ್ಮವಾಗಿರುವುದರಿಂದ ಇದನ್ನು ಬಾಹ್ಯಚಕ್ಷುಸ್ಸಿನಿಂದ ನೋಡಲಾಗುವುದಿಲ್ಲ. ಈ ಸೂಕ್ಷ್ಮ ಶರೀರದಲ್ಲಿ ಕರ್ಮೇಂದ್ರಿಯಗಳಿಲ್ಲದಿದ್ದರೂ ಜ್ಞಾನೇಂದ್ರಿಯ ಅಂಶಗಳಿರುವವು. ಎಂದರೆ ಸುಖದುಃಖಾದಿಗಳ ಅನುಭವವಾಗುವುದು. ಭೂಮಿಯ ಮೇಲೆ ಜೀವಿಸಿದ್ದ ಕಾಲದಲ್ಲಿ ತಾನು ಅನುಭವಿಸಿದ ಸುಖದುಃಖಗಳ ಮತ್ತು ಬಂಧುಬಾಂಧವರ ವಿಷಯವಾದ ಪ್ರೀತಿದ್ವೇಷಗಳ ವಾಸನೆಯು (ವಾಸನೆಯೆಂದರೆ–ಸೂಕ್ಷ್ಮಾಂಶವು) ಈ ಶರೀರಕ್ಕೆ ಇದ್ದೇ ಇರುವುದು. ಆತ್ಮನು ಕೆಲವು ಕಾಲದವರೆಗೆ ಎಂದರೆ ಮೃತಶರೀರಕ್ಕೆ ಮಾಡುವ ಅಪರ ಕರ್ಮಾದಿಗಳು ಸಮಾಪ್ತಿಯಾಗುವವರೆಗೆ ಈ ಪ್ರೇತಶರೀರದಲ್ಲಿದ್ದು ಅನಂತರ ತನ್ನ ಕರ್ಮಾನುಸಾರವಾಗಿ ಬೇರೆ ಲೋಕಕ್ಕೆ ಹೋಗುವನು. ಆಗ ಈ ಪ್ರೇತಶರೀರಕ್ಕಿಂತಲೂ ಇನ್ನೂ ಸೂಕ್ಷ್ಮವಾದ ಶರೀರವು ಪ್ರಾಪ್ತಿಯಾಗುವುದು. ಆಯಾ ಲೋಕಗಳು ಯಾವರೀತಿ ಇರುವವೋ, ಅವರಲ್ಲಿ ವಾಸಿಸುವ ಪ್ರಾಣಿಗಳೂ ಅದೇ ವಿಧವಾದ ವಸ್ತುವಿನಿಂದ ನಿರ್ಮಿತವಾದ ಶರೀರವುಳ್ಳವುಗಳಾಗಿರುವವು. ಪೃಥಿವಿಯಲ್ಲಿರುವಾಗ ಪೃಥಿವೀ ಸಂಬಂಧವಾದ ಸ್ಥೂಲವಸ್ತುವಿನಿಂದಾದ ಶರೀರಗಳೇ ಪ್ರಾಣಿಗಳಿರುವವು. ಸ್ವರ್ಗನರಕಾದಿಗಳಲ್ಲಿಯೂ ಹಾಗೆಯೇ. ಸ್ವರ್ಗಲೋಕವು ಅತಿಸೂಕ್ಷ್ಮವಸ್ತು ನಿರ್ಮಿತವಾಗಿರುವುದರಿಂದ ಅಲ್ಲಿ ವಾಸಿಸುವ ದೇವಮನುಷ್ಯಾದಿಗಳಿಗೂ ಅತಿ ಸೂಕ್ಷ್ಮವಾದ ಶರೀರಾದಿಗಳಿರುವವು. ಭೂಮಿಯ ಮೇಲಿರುವ ಜನರು ಸ್ಥೂಲವಸ್ತುಗಳನ್ನು ಮಾತ್ರ ತಮ್ಮ ಕಣ್ಣುಗಳಿಂದ ನೋಡಬಲ್ಲವರಾದ್ದರಿಂದ ಸೂಕ್ಷ್ಮರೂಪದಿಂದಿರುವ ದೇವಲೋಕವನ್ನಾಗಲಿ, ದೇವತೆಗಳನ್ನಾಗಲಿ ನೋಡಲು ಸಾಧ್ಯವಿಲ್ಲ. ದೇವಲೋಕವು ಎಲ್ಲಿರುವುದು ಎಂದರೆ— **ಅಂತರ್ಹಿತೋ ಹಿ ದೇವಲೋಕೋ ಮನುಷ್ಯಲೋಕಾತ್** (ತೈ. ಸಂ. ೬.೧.೧.೬) ಎಂಬ ಶ್ರುತಿವಾಕ್ಯದಲ್ಲಿ ಹೇಳಿರುವಂತೆ ಈ ಮನುಷ್ಯಲೋಕದೊಡನೆಯೇ ಓತಪ್ರೋತವಾಗಿ ಎಂದರೆ ಪರಸ್ಪರ ಅಂತರ್ಗತವಾಗಿರುವುದು. ಸ್ವರ್ಗದ ಕೆಲವು ಭಾಗವು ನಮ್ಮ ಸುತ್ತಮುತ್ತಲಿರುವ ವಾತಾವರಣದಲ್ಲಿದ್ದರೂ ನಾವು ಅದನ್ನು ನೋಡಿ ತಿಳಿಯಲಾಗುವುದಿಲ್ಲ. ಸೂಕ್ಷ್ಮರೂಪದಲ್ಲಿರುವ ವಿದ್ಯುತ್ಪ್ರವಾಹವು ತಂತಿಗಳಲ್ಲಿ ಪ್ರವಹಿಸುತ್ತಿದ್ದರೂ ಅದನ್ನು ನೋಡಲಾಗುವುದಿಲ್ಲವಷ್ಟೆ. ಅದರಂತೆ ನಮ್ಮ ಈ ಸ್ಥೂಲಶರೀರದ ಅವಯವಗಳಿಂದ ಸೂಕ್ಷ್ಮರೂಪದಿಂದಿರುವ ಸ್ವರ್ಗವನ್ನೂ ಸ್ವರ್ಗ

ವಾಸಿಗಳನ್ನೂ ನೋಡಲಾರೆವು. ಆದರೆ ಸ್ವರ್ಗವಾಸಿಗಳು ಇಷ್ಟಬಂದರೆ ನಮ್ಮನ್ನು ನೋಡಬಲ್ಲರು. ಪ್ರಕೃತಸೂಕ್ತ ದಲ್ಲಿಯೂ ಮುಂದಿನ ಕೆಲವು ಸೂಕ್ತಗಳಲ್ಲಿಯೂ ಮೃತನಾದ ಪುರುಷನನ್ನುದ್ದೇಶಿಸಿ ಹೇಳುವ ವಾಕ್ಯಗಳು ಮರಣಾನಂತರ ಪ್ರಾಪ್ತವಾಗುವ ಪ್ರೇತಶರೀರದಲ್ಲಿರುವ ಜೀವನನ್ನುದ್ದೇಶಿಸಿ ಹೇಳಿರುವುದೆಂದು ತಿಳಿಯಬೇಕು.

**ಪ್ರವತಃ—ಪ್ರಕೃಷ್ಟಕರ್ಮವತೋ ಭೂಲೋಕವರ್ತಿಭೋಗಸಾಧನಂ ಪುಣ್ಯಮನುಷ್ಠಿತವತಃ ಪುರುಷಾನ್** । ಉತ್ತಮವಾದ ಯಜ್ಞಾದಿಕರ್ಮಗಳನ್ನು ಮಾಡಿ ಭೂಲೋಕದಲ್ಲಿ ಅನುಭವಿಸುವ ಭೋಗಗಳಿಗೆ ಸಾಧನಭೂತವಾದ ಪುಣ್ಯವನ್ನು ಗಳಿಸಿಕೊಂಡಿರುವ ಪುರುಷರನ್ನು ಎಂದು ಭಾಷ್ಯಕಾರರು ಅರ್ಥವಿವರಣೆ ಮಾಡಿದ್ದಾರೆ. ಎಂದರೆ ಪುಣ್ಯಪ್ರದವಾದ ಸತ್ಕರ್ಮಗಳನ್ನು **ಮಾಡಿ** ಮರಣಾನಂತರ ಆ ಸತ್ಕರ್ಮಗಳ ಫಲರೂಪವಾದ ಸ್ವರ್ಗಾದಿ ಗಳನ್ನು ಬಯಸುತ್ತಿರುವ ಪುರುಷರನ್ನು ಎಂದರ್ಥವು. ಯಾಸ್ಕರು ಈ ವಿಷಯದಲ್ಲಿ ಇನ್ನೂ ಮುಂದೆ ಹೋಗಿ **ಪ್ರವತಃ ಉದ್ವತಃ ನಿವತಃ** ಮನುಷ್ಯರು, ದೇವತೆಗಳು, ತಿರ್ಯಗ್ಜಂತುಗಳು ಎಂದು ಅರ್ಥವಿವರಣೆಮಾಡಿದ್ದಾರೆ. ಮನುಷ್ಯರಲ್ಲಿ ಎರಡುವಿಧ- ಸತ್ಕರ್ಮಾಚರಣೆಮಾಡಿದವರು, ಪಾಪಮಾಡಿದವರು ಎಂದು. ಇವರುಗಳಿಗೆ ಪ್ರಾಪ್ತವಾಗುವ ಲೋಕವೂ ಬೇರೆ ಬೇರೆಯಾಗಿರುವುದು.

**ಬಹುಭ್ಯಃ ಪಂಥಾಂ ಅನುಪಸ್ಪಶಾನಂ**—ಮೇಲೆ ಹೇಳಿದಂತೆ ಪರಲೋಕಗಳಿಗೆ ಹೋಗುವ ಮಾರ್ಗಗಳೂ ಬಹುವಾಗಿರುವುವು. ಎಂದರೆ ಸ್ವರ್ಗಾದಿಗಳಿಗೆ ಹೋಗುವ ಮಾರ್ಗವೇ ಬೇರೆ, ದುಷ್ಟರು ಅನುಭವಿಸುವ ಶಿಕ್ಷೆಗೆ ಅರ್ಹ ವಾಗಿರುವ ಲೋಕಗಳ ಮಾರ್ಗವೇ ಬೇರೆ. ಇತ್ಯಾದಿ ಅವರವರ ಕರ್ಮಾನುಸಾರವಾದ ಲೋಕಗಳಿಗೆ ಇರುವ ಅನೇಕ ಮಾರ್ಗಗಳಿಂದ ಜೀವರುಗಳನ್ನು ಆಯಾಲೋಕಗಳಿಗೆ ಒಯ್ಯುವವನು ಎಂದರ್ಥವು.

**ವೈವಸ್ವತಂ**—ವಿವಸ್ವಂತನ ಪುತ್ರನಿಗೆ ವೈವಸ್ವತನೆಂದು ಹೆಸರು. ವಿವಸ್ವಂತನು ದೇವಮಾತೆಯಾದ ಅದಿತಿಯ ಪುತ್ರನು ಈ ವಿಷಯದಲ್ಲಿ—

**ಅಷ್ಟೌ ಪುತ್ರಾಸೋ ಅದಿತೇಃ । .... .... ತಾನನುಕ್ರಮಿಷ್ಯಾಮಃ । ಮಿತ್ರಶ್ಚ ವರುಣಶ್ಚ । ಧಾತಾ ಚಾರ್ಯಮಾ ಚ । ಅಂಶಶ್ಚ ಭಗಶ್ಚ । ಇಂದ್ರಶ್ಚ ವಿವಸ್ವಾಗ್‌ಶ್ಚೇತ್ಯೇತೇ ॥**

(ತೈ. ಆ. ೧-೧೩-೩)

ಎಂದು ತೈತ್ತಿರೀಯಾರಣ್ಯಕದಲ್ಲಿ ಹೇಳಿರುವಂತೆ ಅದಿತಿಗೆ ಎಂಟು ಮಂದಿ ಪುತ್ರರು. ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂಬುವರೇ ಆ ಎಂಟು ಮಂದಿ ಪುತ್ರರು ಎಂದು ಹೇಳಿದೆ. ಇಲ್ಲಿ ಎಂಟನೆ ಯವನಾದ ವಿವಸ್ವಾನ್ ಎಂಬುವನೂ ಇಂದ್ರನೂ ಇಬ್ಬರೂ ಅವಳೀಮಕ್ಕಳು.

ಈ ವಿವಸ್ವಂತನ ಪುತ್ರನೇ ಯಮನು. ಇವನನ್ನು ರಾಜನೆಂದು ಕರೆಯುವ ರೂಢಿ ಇದೆ. ಪಿತೃಲೋಕಕ್ಕೆ ಯಮನು ಪ್ರಭುವಾದದ್ದರಿಂದಲೂ ವರುಣನೂ ಅಲ್ಲಿಯೇ ಇರುವನೆಂದು ವಿವರಣೆ ಇರುವುದರಿಂದಲೂ ಯಮನನ್ನೂ ವರುಣನನ್ನೂ ರಾಜರೆಂದು ಕರೆಯುವುದು ಬಳಕೆಯಲ್ಲಿದೆ.

**ಸಂಗಮನಂ ಜನಾನಾಂ** ಮೃತರಾದ ಜೀವರುಗಳನ್ನು ತನ್ನ ಲೋಕಕ್ಕೆ ಕೊಂಡೊಯ್ದು ಅವರನ್ನು ಅಲ್ಲಿ ಒಂದೆಡೆ ಸೇರಿಸಿ ಇರುವವನಾದ್ದರಿಂದ ಜನರನ್ನು ಒಂದೆಡೆ ಒಟ್ಟಿಗೆಸೇರಿಸಿಡುವವನೆಂಬ ಅರ್ಥವುಳ್ಳ **ಸಂಗಮನಂ ಜನಾನಾಂ**

ಎಂಬ ಶಬ್ದಗಳಿಂದ ಯಮನನ್ನು ವರ್ಣಿಸಲಾಗಿದೆ. **ಸಂಗಮನಂ** ಎಂದರೆ **ಗಂತವ್ಯಸ್ಥಾನಂ**-ಜೀವರು ಹೋಗಿ ಸೇರಬೇಕಾದ ಪ್ರದೇಶ. ಇದು ಸ್ವರ್ಗವಾದರೂ ಆಗಬಹುದು ನರಕವಾದರೂ ಆಗಬಹುದು. ಪುಣ್ಯವಂತರ ವಿಷಯದಲ್ಲಿ ಸ್ವರ್ಗವೂ ಪಾಪಿಷ್ಠರ ವಿಷಯದಲ್ಲಿ ನರಕವೂ ಎಂದು ತಿಳಿಯಬೇಕು.

॥ ಸಂಹಿತಾಪಾಠಃ ॥

**ಯಮೋ ನೋ ಗಾತುಂ ಪ್ರಥಮೋ ವಿವೇದ ನೈಷಾ ಗವ್ಯೂತಿರಪಭರ್ತವಾ**
**ಉ ।**
**ಯತ್ರಾ ನಃ ಪೂರ್ವೇ ಪಿತರಃ ಪರೇಯುರೇನಾ ಜಜ್ಞಾನಾಃ ಪಥ್ಯಾ೩ ಅನು**
**ಸ್ವಾಃ ॥ ೨ ॥**

॥ ಪದಪಾಠಃ ॥

ಯಮಃ । ನಃ । ಗಾತುಂ । ಪ್ರಥಮಃ । ವಿವೇದ । ನ । ಏಷಾ । ಗವ್ಯೂತಿಃ । ಅಪಽಭರ್ತವೈ । ಊಂ ಇತಿ ।
ಯತ್ರ । ನಃ । ಪೂರ್ವೇ । ಪಿತರಃ । ಪರಾಽಈಯುಃ । ಏನಾ । ಜಜ್ಞಾನಾಃ । ಪಥ್ಯಾಃ । ಅನು । ಸ್ವಾಃ ॥

॥ ಸಾಯಣಭಾಷ್ಯಂ ॥

**ಪ್ರಥಮಃ ಸರ್ವೇಷಾಂ ಮುಖ್ಯೋ ಯಮೋ ನೋಽಸ್ಮಾಕಂ ಪ್ರಜಾನಾಂ ಗಾತುಂ ಶುಭಾಶುಭನಿಮಿತ್ತಂ ವಿವೇದ । ಜಾನಾತಿ । ಏಷಾ ಗವ್ಯೂತಿರ್ನಾಪಭರ್ತವಾ ಉ । ಅತಿಶಯಜ್ಞಾನೇನೋಪಗಾದ್ಯಮಸ್ಯ ನ ಕೇನಚಿದಪಹರ್ತುಮಪನೇತುಂ ಶಕ್ಯತ ಇತ್ಯರ್ಥಃ । ಯತ್ರ ಯಸ್ಮಿನ್ಮಾರ್ಗೇ ನೋಽಸ್ಮಾಕಂ ಪೂರ್ವೇ ಪಿತರಃ ಪರೇಯುಃ ಏನಾನೇನ ಮಾರ್ಗೇಣ ಗಚ್ಛಂತೋ ಜಜ್ಞಾನಾ ಜಾತಾಃ ಸರ್ವೇ ಸ್ವಾಃ ಸ್ವಭೂತಾಃ ಪಥ್ಯಾಃ ಸ್ವಕರ್ಮಮಾರ್ಗಭೂತಾ ಗತೀರನು ಗಚ್ಛಂತಿ ॥**

॥ ಪ್ರತಿಪದಾರ್ಥ ॥

**ಪ್ರಥಮಃ**—ಸಕಲರಿಗೂ ಮುಖ್ಯನಾದ । **ಯಮಃ**—ಯಮನು । **ನಃ**—ನಮ್ಮ । **ಗಾತುಂ**—ಸಂಚಾರ ಮಾರ್ಗವನ್ನು । **ವಿವೇದ**—ಅರಿತಿದ್ದಾನೆ. **ಏಷಾ ಗವ್ಯೂತಿಃ**—ಫಲವತ್ತಾದ ಈ ಮಾರ್ಗವು । **ನ ಅಪಭರ್ತವೈ**—ಇತರರಿಂದ ಅಪಹರಿಸಲ್ಪಡತಕ್ಕದ್ದಲ್ಲ । **ಯತ್ರ**—ಯಾವ ಕರ್ಮಾನುಸಾರಿಯಾದ ಮಾರ್ಗದಲ್ಲಿ । **ನಃ**—ನಮ್ಮ । **ಪೂರ್ವೇ ಪಿತರಃ**—ಹಿಂದಿನ ಪಿತೃಗಳೆಲ್ಲರೂ । **ಪರೇಯುಃ**—ಮರಣಾನಂತರ ಹೋದರೋ । **ಏನಾ**—ಅಂತಹ ಮಾರ್ಗಗಳಲ್ಲಿಯೇ । **ಜಜ್ಞಾನಃ**—ಉತ್ಪನ್ನರಾದ ಸಕಲರೂ । **ಸ್ವಾಃ**—ತಮ್ಮ ತಮ್ಮ ವೈಯಕ್ತಿಕವಾದ । **ಪಥ್ಯಾಃ**—ಕರ್ಮಫಲವಾದ ಮಾರ್ಗಗಳನ್ನು । **ಅನು**—ಅನುಸರಿಸಿ ಹೋಗುತ್ತಾರೆ.

। ಭಾವಾರ್ಥ ।

ಸಕಲರಿಗೂ ಮುಖ್ಯನಾದ ಯಮನು ನಮ್ಮ ಸಂಚಾರಮಾರ್ಗಗಳನ್ನು ಅರಿತಿದ್ದಾನೆ. ಈ ಫಲವತ್ತಾದ ಮಾರ್ಗವು ಇತರರಿಂದ ಅಪಹರಿಸಲ್ಪಡತಕ್ಕದ್ದಲ್ಲ. ಯಾವ ಕರ್ಮಕ್ಕನುಗುಣವಾದ ಮಾರ್ಗಗಳಲ್ಲಿ ನಮ್ಮ ಹಿಂದಿನ ಪಿತೃಗಳೆಲ್ಲರೂ ಮರಣಾನಂತರ ಹೋದರೋ, ಅಂತಹ ಮಾರ್ಗಗಳಲ್ಲಿಯೇ, ಉತ್ಪನ್ನರಾದ ಸಕಲರೂ ತಮ್ಮ ತಮ್ಮ ವೈಯಕ್ತಿಕವಾದ ಕರ್ಮಫಲಗಳನ್ನು ಅನುಸರಿಸಿ ಹೋಗುತ್ತಾರೆ.

English Translation

Yama, the chief (of all), knows our well-being: this pasture no one can take from us. By the road by which our forefathers have gone, all who are born (proceed) along the paths they have made for themselves.

ವಿಶೇಷವಿಷಯಗಳು ॥

**ಯಮಃ ನಃ ಗಾತುಂ ಪ್ರಥಮಃ ವಿವೇದ**—ಈ ವಾಕ್ಯದಲ್ಲಿರುವ ಪ್ರಥಮಃ ಎಂಬ ಶಬ್ದಕ್ಕೆ ಭಾಷ್ಯಕಾರರು ಯಾಸ್ಕರ ವಿವರಣೆಯನ್ನನುಸರಿಸಿ **ಪ್ರಥಮಃ** ಎಂದರೆ ಮುಖ್ಯವಾದವನು ಎಂದರ್ಥಮಾಡಿದಾರೆ. ಆದರೆ ಪಾಶ್ಚಾತ್ಯಪಂಡಿತರಾದ Muir ಮೊದಲಾದ ಪಂಡಿತರು ಪ್ರಥಮಃ ಎಂಬ ಶಬ್ದವನ್ನು ಅವ್ಯಯವೆಂದು ಭಾವಿಸಿ ಪಿತೃ ಲೋಕಕ್ಕೆ ಹೋಗುವ ದಾರಿಯನ್ನು ಮೊದಲು ಕಂಡುಹಿಡಿದವನು ಯಮನೆಂದು ಅರ್ಥಮಾಡಿದಾರೆ. Yama was the first who found for us the way. This home is not to be taken from us. Those who are now born (follow) by their own paths to the place whither our ancient fathers departed. ಎಂದು ಹೇಳಿದಾನೆ.

**ಏಷಾ ಗವ್ಯೂತಿಃ ಅಪಭರ್ತವೈ ಉ—ಅತಿಶಯಜ್ಞಾನಯೋಗಾತ್ ಯಮಸ್ಯ ನ ಕೇನಚಿದಪಹರ್ತುಂ ಶಕ್ಯತ ಇತ್ಯರ್ಥಃ ।** ಈ ವಾಕ್ಯದಲ್ಲಿರುವ **ಗವ್ಯೂತಿಃ** ಎಂಬ ಶಬ್ದಕ್ಕೆ ಭಾಷ್ಯಕಾರರು ಅರ್ಥವಿವರಣೆ ಮಾಡಿರುವುದಿಲ್ಲ. ಗವ್ಯೂತಿ ಎಂಬ ಶಬ್ದಕ್ಕೆ ಇತರ ಸ್ಥಳಗಳಲ್ಲಿ **ಅತಿವಿಸ್ತೃತಂ ಮಾರ್ಗಂ** ಎಂದು ಅರ್ಥಮಾಡಿದಾರೆ. ಇಲ್ಲಿ ಆ ಅರ್ಥವನ್ನು ಬೇಕಾದರೂ ಹೇಳಬಹುದು ಅಥವಾ ಯಮನ ಪ್ರಭುತ್ವಕ್ಕೆ ಒಳಪಟ್ಟಿರುವ ಉತ್ತಮವಾದ ಸ್ಥಾನವನ್ನು ಎಂದು ಬೇಕಾದರೂ ಅರ್ಥಮಾಡಬಹುದು.

। ಸಂಹಿತಾಪಾಠಃ ।

ಮಾತಲೀ ಕವ್ಯೈರ್ಯಮೋ ಅಂಗಿರೋಭಿರ್ಬೃಹಸ್ಪತಿರ್ಋಕ್ವಭಿರ್ವಾವೃಧಾನಃ ।

ಯಾಂಶ್ಚ ದೇವಾ ವಾವೃಧುರ್ಯೇ ಚ ದೇವಾನ್ತ್ಸ್ವಾಹಾನ್ಯೇ ಸ್ವಧಯಾನ್ಯೇ ಮದಂತಿ ॥ ३ ॥

॥ ಪದಪಾಠಃ ॥

ಮಾತಲೀ । ಕವ್ಯೈಃ । ಯಮಃ । ಅಂಗಿರಃಽಭಿಃ । ಬೃಹಸ್ಪತಿಃ । ಋಕ್ವಽಭಿಃ । ವವೃಧಾನಃ ।

ಯಾನ್ । ಚ । ದೇವಾಃ । ವವೃಧುಃ । ಯೇ । ಚ । ದೇವಾನ್ । ಸ್ವಾಹಾ । ಅನ್ಯೇ । ಸ್ವಧಯಾ । ಅನ್ಯೇ । ಮದಂತಿ ॥ ೩

॥ ಸಾಯಣಭಾಷ್ಯಂ ॥

ಅಗ್ನಿಮಾರುತೇ ಮಾತಲೀ ಕವ್ಯೈರಿತ್ಯೇಷಾ ಧಾಯ್ಯಾ । ಸೂತ್ರಿತಂ ಚ । ಇಮಂ ಯಮ ಪ್ರಸ್ತರಮಾ ಹಿ ಸೀದ ಮಾತಲೀ ಕವ್ಯೈರ್ಯಮೋ ಅಂಗಿರೋಭಿರುದೀರತಾಮವರ ಉತ್ಪರಾಸಃ । ಆ. ೫-೨೦ । ಇತಿ.

ಮಾತಲೀ । ಮಾತಲಿರಿಂದ್ರಸ್ಯ ಸಾರಥಿಃ । ತದ್ವಾನಿಂದ್ರೋ ಮಾತಲೀ । ಸ ಕವ್ಯೈಃ ಕವ್ಯಭಾಗ್ಭಿಃ ಪಿತೃಭಿಃ ಸಹ ವವೃಧಾನೋ ವರ್ಧಮಾನೋ ಭವತಿ । ಯಮಶ್ಚಾಂಗಿರೋಭಿಃ ಪಿತೃವಿಶೇಷೈಃ ಸಹ ವರ್ಧಮಾನೋ ಭವತಿ ।........। ತತ್ರ ದೇವಾ ಇಂದ್ರಾದಯೋ ಯಾಂಶ್ಚ ಕವ್ಯಭಾಗಾದೀನ್ಪಿತೄನ್ವವೃಧುಃ ವರ್ಧಯಂತಿ ಯೇ ಚ ಕವ್ಯಭಾಗಾದಯಃ ಪಿತರೋ ದೇವಾನಿಂದ್ರಾದೀನ್ವರ್ಧಯಂತಿ ತೇಷಾಂ ಮಧ್ಯೇಽನ್ಯ ಇಂದ್ರಾದಯಃ ಸ್ವಾಹಾ ಮದಂತಿ । ಸ್ವಾಹಾಕಾರೇಣ ತೃಪ್ಯಂತಿ । ಅನ್ಯೇ ಪಿತರಃ ಸ್ವಧಯಾ ಸ್ವಧಾಕಾರೇಣ ತೃಪ್ಯಂತಿ ॥

॥ ಪ್ರತಿಪದಾರ್ಥ ॥

**ಮಾತಲೀ**—ಇಂದ್ರನು । **ಕವ್ಯೈಃ**—ಕವ್ಯಗಳಿಗೆ ಭಾಗಿಗಳಾದ ಪಿತೃಗಳೊಡನೆ । **ವವೃಧಾನಃ**—ಪುಷ್ಟಿಯನ್ನು ಹೊಂದುತ್ತಾನೆ । **ಯಮಃ**—ಯಮನು । **ಅಂಗಿರೋಭಿಃ**—ಅಂಗಿರಸ್ಸುಗಳೊಂದಿಗೆ ವೃದ್ಧಿಯನ್ನು ಹೊಂದುತ್ತಾನೆ । **ಬೃಹಸ್ಪತಿಃ**—ಬೃಹಸ್ಪತಿಯು । **ಋಕ್ವಭಿಃ**—ಸ್ತುತಿಕರ್ತರೊಂದಿಗೆ ಪುಷ್ಟಿಗೊಳ್ಳುತ್ತಾನೆ । **ದೇವಾಃ**—ಇಂದ್ರಾದಿದೇವತೆಗಳು । **ಯಾಂಶ್ಚ**—ಯಾವ ಪಿತೃಗಳನ್ನು । **ವವೃಧುಃ**—ಬೆಳಸುವರೋ । **ಯೇ ಚ**—ಯಾವ ಪಿತೃಗಳು । **ದೇವಾನ್**—ಇಂದ್ರಾದಿದೇವತೆಗಳನ್ನು ಬೆಳೆಸುವರೋ ಅವರಲ್ಲಿ । **ಅನ್ಯೇ**—ಒಂದು ಗುಂಪಾದ ದೇವತೆಗಳು । **ಸ್ವಾಹಾ**—'ಸ್ವಾಹಾ' ಪೂರ್ವಕವಾಗಿ ಅರ್ಪಿತವಾಗುವ ಹವಿಸ್ಸನ್ನು ಸೇವಿಸಿ । **ಮದಂತಿ**-ಹರ್ಷವನ್ನು ಹೊಂದುತ್ತಾರೆ । **ಅನ್ಯೇ**—ಇನ್ನೊಂದು ಗುಂಪಾದ ಪಿತೃಗಳು । **ಸ್ವಧಯಾ**—ಸ್ವಧಾರೂಪದಲ್ಲಿ ಅರ್ಪಿಸಿದ ಕವ್ಯಗಳಿಂದ ಹರ್ಷಗೊಳ್ಳುತ್ತಾರೆ.

॥ ಭಾವಾರ್ಥ ॥

ಇಂದ್ರನು ಕವ್ಯಗಳಿಗೆ ಭಾಗಿಗಳಾದ ಪಿತೃಗಳೊಡನೆಯೂ- ಯಮನು ಅಂಗಿರಸ್ಸುಗಳೊಡನೆಯೂ, ಬೃಹಸ್ಪತಿಯು ಸ್ತುತಿಕರ್ತರೊಡನೆಯೂ ಕೂಡಿ ಪುಷ್ಟಿಯನ್ನು ಹೊಂದುತ್ತಾರೆ. ಇಂದ್ರಾದಿದೇವತೆಗಳು ಯಾವ ಪಿತೃಗಳನ್ನು ಬೆಳೆಸುವರೋ ಯಾವ ಪಿತೃಗಳು ಇಂದ್ರಾದಿದೇವತೆಗಳ ವೃದ್ಧಿಗೆ ಕಾರಣರೋ ಇವರುಗಳ ನಡುವೆ, ಒಂದು ಗುಂಪಾದ ದೇವತೆಗಳು "ಸ್ವಹಾ" ಪೂರ್ವಕವಾಗಿ ಅರ್ಪಿಸುವ ಹವಿಸ್ಸನ್ನು ಸೇವಿಸಿ ಹರ್ಷವನ್ನು ಹೊಂದುತ್ತಾರೆ. ಇನ್ನೊಂದು ಗುಂಪಾದ ಪಿತೃಗಳು ಸ್ವಧಾರೂಪದಲ್ಲಿ ಅರ್ಪಿಸಿದ ಕಾರ್ಯಗಳಿಂದ ಹರ್ಷಗೊಳ್ಳುತ್ತಾರೆ.

## English Translation

Matalin prospers with the Kavyas; Yama with the Angirasas; Brihaspati with the Rikwans; they whom the gods augment, and they who augment the gods, these rejoice in Swaha, those in the Swadha.

॥ ವಿಶೇಷವಿಷಯಗಳು ॥

ಅಗ್ನಿಮಾರುತಶಸ್ತ್ರಮಂತ್ರಗಳಲ್ಲಿ **ಮಾತಲೀ ಕವ್ಯೈಃ** ಎಂಬ ಈ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಪಠಿಸ ಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಇಮಂ ಯಮ ಪ್ರಸ್ತರಮಾ ಹಿ ಸೀದ ಮಾತಲೀ ಕವ್ಯೈರ್ಯಮೋ ಅಂಗಿರೋಭಿರುದೀರತಾಮವರ** ಉತ್ತರಾಸಃ ಎಂಬ ಸೂತ್ರದಿಂದ (ಆ. ೫-೨೦) ವಿವೃತವಾಗಿರುವುದು.

**ಮಾತಲೀ**—ಮಾತಲಿಃ ಎಂಬವನು ಇಂದ್ರನ ಸಾರಥಿಯೆಂದು ಪ್ರಸಿದ್ಧವು. **ಮಾತಲೀ** ಎಂದರೆ ಮಾತಲಿ ಎಂಬ ಸಾರಥಿಯುಳ್ಳ ಇಂದ್ರನು ಎಂದರ್ಥವು.

**ಕವ್ಯೈಃ**—ಕವ್ಯವೆಂದರೆ ಪಿತೃಗಳಿಗೆ ಅರ್ಪಿಸುವ ಅನ್ನವು. ದೇವತೆಗಳಿಗೆ ಅರ್ಪಿಸುವ ಅನ್ನಕ್ಕೆ ಹವಿಃ ಹವ್ಯವೆಂದು ಹೆಸರು.

ಈ ಋಕ್ಕಿನಲ್ಲಿ ದೇವತೆಗಳು ಪಿತೃಗಳನ್ನೂ, ಪಿತೃಗಳು ದೇವತೆಗಳನ್ನೂ ವೃದ್ಧಿಪಡಿಸುವರು ಎಂದು ಹೇಳಿದಾರೆ. ಮತ್ತು ಮೂರುವಿಧ ಪಿತೃಗಳನ್ನು ಇಲ್ಲಿ ನಿರ್ದೇಶಿಸಲಾಗಿದೆ. **ಕವ್ಯೈಃ** ಕವ್ಯಭಾಗ್ಭಿಃ-ಕವ್ಯಕ್ಕೆ ಅರ್ಹರಾದ ಅಥವಾ ಕವ್ಯವನ್ನು ಭುಜಿಸುವ ಪಿತೃಗಳು ಇಂದ್ರನೊಡಗೂಡಿ ವೃದ್ಧಿಯನ್ನು ಪಡೆಯುತ್ತಾರೆ. ಅಂಗಿರಸ್ಸುಗಳೆಂಬ ಪಿತೃಗಳು ಯಮನೊಡನೆ ವೃದ್ಧಿಯನ್ನು ಹೊಂದುತ್ತಾರೆ. ಋಕ್ವಗಳೆಂಬ (ಸ್ತೋತೃಗಳೆಂಬ) ಪಿತೃಗಳು ಬೃಹಸ್ಪತಿಯೊಡನೆ ಸೇರಿ ವರ್ಧಿತರಾಗುತ್ತಾರೆ ಎಂದು ಮೂರು ವಿಧ ಪಿತೃಗಳನ್ನು ನಿರ್ದೇಶಿಸಿ ಅನಂತರ ದೇವತೆಗಳಿಗೂ ಪಿತೃಗಳಿಗೂ ಹವ್ಯಕವ್ಯಗಳನ್ನು ಹೇಗೆ ಅರ್ಪಿಸಬೇಕೆಂಬ ವಿಧಿಯನ್ನು ಋಷಿಯು ತಿಳಿಸಿದಾನೆ—

**ಸ್ವಾಹಾ ದೇವೇಭ್ಯಃ ಸ್ವಧಾ ಪಿತೃಭ್ಯ ಇತ್ಯಾಹ**

ಎಂಬ ಶ್ರುತಿವಾಕ್ಯದಂತೆ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವಾಗ ಸ್ವಾಹಾಕಾರಪೂರ್ವಕವಾಗಿಯೂ ಪಿತೃಗಳಿಗೆ ಕವ್ಯವನ್ನರ್ಪಿಸುವಾಗ ಸ್ವಧಾಶಬ್ದಪೂರ್ವವಾಗಿಯೂ ಅರ್ಪಿಸಿದಲ್ಲಿ ಅವರುಗಳು ಸಂತೋಷಪಡುತ್ತಾರೆ ಎಂದು ಋಷಿಯು ತಿಳಿಸಿದಾನೆ.

॥ ಸಂಹಿತಾಪಾಠಃ ॥

**ಇಮಂ ಯಮ ಪ್ರಸ್ತರಮಾ ಹಿ ಸೀದಾಂಗಿರೋಭಿಃ ಪಿತೃಭಿಃ ಸಂವಿದಾನಃ ।**

**ಆ ತ್ವಾ ಮಂತ್ರಾಃ ಕವಿಶಸ್ತಾ ವಹಂತ್ವೇನಾ ರಾಜನ್ಹವಿಷಾ ಮಾದಯಸ್ವ ॥೪॥**

। ಪದಪಾಠಃ ।

ಇಮಂ । ಯಮ । ಪ್ರಽಸ್ತರಂ । ಆ । ಹಿ । ಸೀದ । ಅಂಗಿರಃಽಭಿಃ । ಪಿತೃಽಭಿಃ । ಸಂಽವಿದಾನಃ ।

ಆ । ತ್ವಾ । ಮಂತ್ರಾಃ । ಕವಿಽಶಸ್ತಾಃ । ವಹಂತು । ಏನಾ । ರಾಜನ್ । ಹವಿಷಾ । ಮಾದಯಸ್ವ ॥ ೪ ॥

। ಸಾಯಣಭಾಷ್ಯಂ ।

ಮಹಾಪಿತೃಯಜ್ಞೇ ಯಮಸ್ಯೇಮಂ ಯಮೇತ್ಯಾದಿಕೇ ದ್ವೇ ಅನುವಾಕ್ಯೇ । ಇಮಂ ಯಮ ಪ್ರಸ್ತರಮಾ ಹಿ ಸಿದೇತಿ ದ್ವೇ । ಆ. ೨-೧೯ । ಇತಿ ಹಿ ಸೂತ್ರಿತಂ ॥ ಸೈಷಾಗ್ನಿಮಾರುತೇಽಪಿ ಧಾಯ್ಯಾ । ಸೂತ್ರಂ ಪೂರ್ವಮೇವೋದಾಹೃತಂ ॥

ಹೇ ಯಮ ಅಂಗಿರೋಭಿರೇತನ್ನಾಮಕೈಃ ಪಿತೃಭಿಃ ಸಂವಿದಾನ ಏಕಮತ್ಯಂ ಗತಸ್ತ್ವಮಿಮಂ ಪ್ರಸ್ತರಂ ವಿಸ್ತೀರ್ಣಂ ಯಜ್ಞವಿಶೇಷಮಾ ಸೀದ । ಆಗತ್ಯೋಪವಿಶ ಹಿ ಯಸ್ಮಾದೇವಂ ತಸ್ಮಾತ್ಕವಿಶಸ್ತಾ ವಿದ್ವದ್ಭಿರೃತ್ವಿಗ್ಭಿಃ ಪ್ರಯುಕ್ತಾ ಮಂತ್ರಾಸ್ತ್ವಾ ತ್ವಾಮಾ ವಹಂತು । ಹೇ ರಾಜನ್ ಏನೈತೇನ ಹವಿಷಾ ತುಷ್ಟೋ ಮಾದಯಸ್ವ । ಯಜಮಾನಂ ಹರ್ಷಯ ॥

। ಪ್ರತಿಪದಾರ್ಥ ।

**ಯಮ**—ಎಲೈ ಯಮದೇವನೇ । **ಅಂಗಿರೋಭಿಃ**—ಅಂಗಿರಾಸಂಜ್ಞಕರಾದ । **ಪಿತೃಭಿಃ**—ಪಿತೃಗಳೊಡನೆ । **ಸಂವಿದಾನಃ**—ಕೂಡಿಕೊಂಡವನಾಗಿ । **ಪ್ರಸ್ತರಂ ಇಮಂ**—ವಿಸ್ತೃತವಾಗಿ ಹರಡಿದ ಈ ಯಜ್ಞಾಸನದಲ್ಲಿ । **ಆ ಸೀದ**—ಕುಳಿತುಕೊ । **ಹಿ**—ಆದುದರಿಂದ । **ಕವಿಶಸ್ತಾಃ**—ಕವಿಗಳಿಂದ ಪಠಿತಗಳಾದ । **ಮಂತ್ರಾಃ**—ಸ್ತುತಿಮಂತ್ರಗಳು । **ತ್ವಾ**—ನಿನ್ನನ್ನು । **ಆ ವಹಂತು**—ಇಲ್ಲಿಗೆ ಕರೆತರಲಿ । **ರಾಜನ್**—ಪ್ರಭುವಾದ ಯಮನೇ । **ಏನಾ ಹವಿಷಾ**—ಈ ಹವಿಸ್ಸುಗಳಿಂದ ತುಷ್ಟನಾಗಿ । **ಮಾದಯಸ್ವ**—ಯಜಮಾನನನ್ನೂ ಹರ್ಷಗೊಳಿಸು.

। ಭಾವಾರ್ಥ ।

ಎಲೈ ಯಮದೇವನೇ, ಅಂಗಿರಾಸಂಜ್ಞಕರಾದ ಪಿತೃಗಳೊಡನೆ ಕೂಡಿದವನಾಗಿ ವಿಸ್ತೃತವಾಗಿ ಹರಡಿದ ಈ ಆಸನದಲ್ಲಿ ಕುಳಿತುಕೊ. ಕವಿಗಳಿಂದ ಪಠಿತವಾದ ಸ್ತುತಿಮಂತ್ರಗಳು ನಿನ್ನನ್ನು ಇಲ್ಲಿಗೆ ಕರೆತರಲಿ. ಪ್ರಭುವಾದ ಎಲೈ ಯಮನೇ, ಈ ಹವಿಸ್ಸುಗಳಿಂದ ತುಷ್ಟನಾಗಿ ಯಜಮಾನನನ್ನೂ ಹರ್ಷಗೊಳಿಸು.

## English Translation

Yama, who are associated with the Angirasa Pitris, sit down at this Sacrifice; may the prayers recited by the priests bring you hither; be exhilarated, Sovereign (Yama), by this oblation.

|| ವಿಶೇಷವಿಷಯಗಳು ||

ಮಹಾಪಿತೃಯಜ್ಞದಲ್ಲಿ ಯಮನನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ಇಮಂ ಯಮ** ಎಂಬ ಈ ಋಕ್ಕನ್ನೂ ಇದರ ಮುಂದಿನ ಋಕ್ಕನ್ನೂ ಅನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಇಮಂ ಯಮ ಪ್ರಸ್ತರಮಾ ಹಿ ಸೀದೇತಿ ದ್ವೇ** ಎಂಬ ಸೂತ್ರದಿಂದ (ಆ. ೨-೧೯) ವಿಸ್ತೃತವಾಗಿರುವುದು. ಈ ಮಂತ್ರವು ಆಗ್ನಿಮಾರುತಶಸ್ತ್ರಮಂತ್ರಗಳಲ್ಲಿಯೂ ಧಾಯ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಸೂತ್ರವಾಕ್ಯವನ್ನು ಹಿಂದೆಯೇ ಹೇಳಲಾಗಿದೆ.

**ಪ್ರಸ್ತರಂ-ವಿಸ್ತೀರ್ಣಂ ಯಜ್ಞವಿಶೇಷಂ ।** ವಿಸ್ತಾರವಾಗಿ ನಡೆಯುತ್ತಿರುವ ಈ ಯಜ್ಞಕ್ಕೆ ಬಂದು ಕುಳಿತುಕೋ ಅಥವಾ ಈ ಯಜ್ಞದಲ್ಲಿ ಆಸನಾರ್ಥವಾಗಿ ಹರಡಿರುವ ಬರ್ಹಿ: ಎಂಬ ದರ್ಭೆಗಳ ಮೇಲೆ ಬಂದು ಕುಳಿತುಕೋ ಎಂದರ್ಥವು.

ಎಲೈ ಯಮನೇ, ಈಗ ನಿನ್ನನ್ನುದ್ದೇಶಿಸಿ ನಡೆಯುತ್ತಿರುವ ಈ ಯಜ್ಞದಲ್ಲಿ ಋತ್ವಿಕ್ಕುಗಳು ಮಂತ್ರಗಳನ್ನು ಪಠಿಸುತ್ತಾ ನಿನ್ನನ್ನು ಆಹ್ವಾನಮಾಡುತ್ತಿರುವರು. ಅವರ ಆಹ್ವಾನವನ್ನು ಕೇಳಿ ಅಂಗಿರಸ್ಸುಗಳೊಡನೆಯೂ, ಪಿತೃಗಳೊಡನೆಯೂ ಈ ನಮ್ಮ ಯಜ್ಞಕ್ಕೆ ದಯಮಾಡಿ ಇಲ್ಲಿ ಸಿದ್ಧಪಡಿಸಿರುವ ದರ್ಭಾಸನದ ಮೇಲೆ ಕುಳಿತುಕೊಂಡು ನಾವು ಅರ್ಪಿಸುವ ಹವಿಸ್ಸಿನಿಂದ ಸಂತುಷ್ಟನಾಗಿ ಯಜಮಾನನನ್ನೂ ಹರ್ಷಗೊಳಿಸು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಅಂಗಿರೋಭಿರಾ ಗಹಿ ಯಜ್ಞಿಯೇಭಿರ್ಯಮ ವೈರೂಪೈರಿಹ ಮಾದಯಸ್ವ ।

ವಿವಸ್ವಂತಂ ಹುವೇ ಯಃ ಪಿತಾ ತೇಽಸ್ಮಿನ್ಯಜ್ಞೇ ಬರ್ಹಿಷ್ಯಾ ನಿಷದ್ಯ ॥ ೫ ॥

॥ ಪದಪಾಠಃ ॥

ಅಂಗಿರಃಽಭಿಃ । ಆ । ಗಹಿ । ಯಜ್ಞಿಯೇಭಿಃ । ಯಮ । ವೈರೂಪೈಃ । ಇಹ । ಮಾದಯಸ್ವ ।

ವಿವಸ್ವಂತಂ । ಹುವೇ । ಯಃ । ಪಿತಾ । ತೇ । ಅಸ್ಮಿನ್ । ಯಜ್ಞೇ । ಬರ್ಹಿಷಿ । ಆ । ನಿಽಸದ್ಯ ॥ ೫

॥ ಸಾಯಣಭಾಷ್ಯಂ ॥

**ಹೇ ಯಮ ವೈರೂಪೈರ್ವಿವಿಧರೂಪಯುಕ್ತೈರ್ವಿರೂಪಸಾಮಪ್ರಿಯೈರ್ವಾ ಯಜ್ಞಿಯೇಭಿರ್ಯಜ್ಞಯೋಗ್ಯೈರಂಗಿರೋಭಿಃ ಸಹಾ ಗಹಿ । ಆಗಚ್ಛ । ಆಗತ್ಯ ಚೇಹಾಸ್ಮಿನ್ಯಜ್ಞೇ ಮಾದಯಸ್ವ । ಯಜಮಾನಂ ಹರ್ಷಯ । ಯೋ ವಿವಸ್ವಾಂಸ್ತೇ ತವ ಪಿತಾಸ್ತಿ ಅಸ್ಮಿನ್ಯಜ್ಞೇ ತಂ ವಿವಸ್ವಂತಂ ಹುವೇ । ಆಹ್ವಯಾಮಿ । ಸ ಚಾಸ್ತೀರ್ಣೇ ಬರ್ಹಿಷ್ಯಾ ನಿಷದ್ಯೋಪವಿಶ್ಯ ಯಜಮಾನಂ ಹರ್ಷಯತು ॥**

ಪ್ರತಿಪದಾರ್ಥ ||

ಯಮ—ಎಲೈ ಯಮದೇವನೇ | ವೈರೂಪೈಃ—ಅನೇಕ ರೂಪಗಳುಳ್ಳವರೂ | ಯಜ್ಞಿಯೇಭಿಃ—ಪೂಜಾರ್ಹರೂ ಆದ | ಅಂಗಿರೋಭಿಃ—ಅಂಗಿರಸ್ಸುಗಳೊಡಗೂಡಿ ಆ ಗಹಿ—ದಯಮಾಡು | ಇಹ—ಈ ಯಜ್ಞದಲ್ಲಿ | ಮಾದಯಸ್ವ—ಯಜಮಾನನನ್ನು ಹರ್ಷಗೊಳಿಸು | ಯಃ—ಯಾವ ವಿವಸ್ವಂತನು | ತೇ—ನಿನಗೆ | ಪಿತಾ—ತಂದೆಯಾಗಿದ್ದಾನೆಯೋ | ವಿವಸ್ವಂತಂ—ಆ ವಿವಸ್ವಂತನನ್ನು | ಅಸ್ಮಿನ್ ಯಜ್ಞೇ—ಈ ಯಜ್ಞದಲ್ಲಿ | ಹುವೇ—ಕರೆಯುತ್ತೇನೆ | ಬರ್ಹಿಷಿ—ದರ್ಭಾಸನದ ಮೇಲೆ | ಆ ನಿಷದ್ಯ—ಕುಳಿತು ಅವನೂ ಯಜಮಾನನನ್ನು ಹರ್ಷಗೊಳಿಸಲಿ.

| ಭಾವಾರ್ಥ |

ಎಲೈ ಯಮದೇವನೇ, ಅನೇಕ ರೂಪಗಳುಳ್ಳವರೂ, ಪೂಜಾರ್ಹರೂ ಆದ ಅಂಗಿರಸ್ಸುಗಳೊಡಗೂಡಿ ದಯಮಾಡು. ಈ ಯಜ್ಞದಲ್ಲಿ ಯಜಮಾನನನ್ನು ಹರ್ಷಗೊಳಿಸು. ಯಾವ ವಿವಸ್ವಂತನು ನಿನಗೆ ಪಿತೃವಾಗಿದ್ದಾನೆಯೋ. ಆ ವಿವಸ್ವಂತನನ್ನು ಈ ಯಜ್ಞದಲ್ಲಿ ಕರೆಯುತ್ತೇನೆ. ದರ್ಭಾಸನದ ಮೇಲೆ ಅವನೂ ಕುಳಿತು ಯಜಮಾನನನ್ನು ಹರ್ಷಗೊಳಿಸಲಿ.

English Translation

Come hither, Yama, with the venerable multiform Angirasas, and be exhilarated; I summon Yivaswat, who is your father, to this sacrifice; may he seated on the sacred grass (delight the sacrificer).

ವಿಶೇಷವಿಷಯಗಳು ||

ಈ ಋಕ್ಕಿನಲ್ಲಿಯೂ ಯಮನು ಅಂಗಿರಸ್ಸುಗಳೊಡನೆಯೂ ಇತರ ವಿವಿಧಾಕಾರವುಳ್ಳ ಪಿತೃಗಳೊಡನೆಯೂ ಈ ಯಜ್ಞಕ್ಕೆ ಬರಬೇಕೆಂದು ಪ್ರಾರ್ಥಿಸಲಾಗಿದೆ. ಮತ್ತು ಯಮನ ತಂದೆಯಾದ ವಿವಸ್ವಂತನನ್ನು ಆಹ್ವಾನಿಸಲಾಗಿದೆ. **ವೈರೂಪೈಃ** ಎಂಬ ಶಬ್ದಕ್ಕೆ **ವಿವಿಧರೂಪಯುಕ್ತೈರ್ವೈರೂಪಸಾಮಪ್ರಿಯೈರ್ವಾ** ಎಂದು ಭಾಷ್ಯಕಾರರು **ಅರ್ಥಮಾಡಿದಾರೆ** ಎಂದರೆ ವಿಧವಿಧವಾದ ರೂಪವುಳ್ಳ ಪಿತೃಗಳು ಅಥವಾ **ವೈರೂಪಗ್ಂ ಸಾಮ ಭವತಿ** ಎಂಬ ಶ್ರುತಿವಾಕ್ಯದಂತೆ ವೈರೂಪವೆಂಬ ಸಾಮಮಂತ್ರವಿಶೇಷದ ಗಾನವನ್ನು ಕೇಳುವುದರಲ್ಲಿ ಪ್ರೀತಿಯುಕ್ತರಾದ ಪಿತೃಗಳು ಎಂದರ್ಥವು.

| ಸಂಹಿತಾಪಾಠಃ |

ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ |
ತೇಷಾಂ ವಯಂ ಸುಮತೌ ಯಜ್ಞಿಯಾನಾಮಪಿ ಭದ್ರೇ ಸೌಮನಸೇ
ಸ್ಯಾಮ || ೬ ||

ಪದಪಾಠಃ

ಅಂಗಿರಸಃ । ನಃ । ಪಿತರಃ । ನವಽಗ್ವಾಃ । ಅಥರ್ವಾಣಃ । ಭೃಗವಃ । ಸೋಮ್ಯಾಸಃ ।
ತೇಷಾಂ । ವಯಂ । ಸುಽಮತೌ । ಯಜ್ಞಿಯಾನಾಂ । ಅಪಿ । ಭದ್ರೇ । ಸೌಮನಸೇ । ಸ್ಯಾಮ ॥ ೬ ॥

॥ ಸಾಯಣಭಾಷ್ಯಂ ॥

ಅಂಗಿರಸೋಽಂಗಿರೋನಾಮಕಾ ಅಥರ್ವಾಣೋಽಥರ್ವನಾಮಕಾ ಭೃಗವೋ ಭೃಗುನಾಮಕಾಶ್ಚ ನೋಽಸ್ಮಾಕಂ ಪಿತರೋ ನವಗ್ವಾ ಅಭಿನವಗಮನಯುಕ್ತಾಃ । ಯದ್ವಾ । ನೂತನಪ್ರೀತಿಜನಕಾ ಇತ್ಯರ್ಥಃ । ತೇ ಚ ಸೋಮ್ಯಾಸಃ ಸೋಮಮರ್ಹಂತೀತಿ ಸೋಮ್ಯಾಃ । ಯಜ್ಞಿಯಾನಾಂ ಯಜ್ಞಾರ್ಹಾಣಾಂ ತೇಷಾಂ ಸುಮತಾವನುಗ್ರಹಯುಕ್ತಾಯಾಂ ಬುದ್ಧೌ ವಯಂ ಸ್ಯಾಮ । ಸರ್ವದಾ ತಿಷ್ಠೇಮ । ಅಪಿ ಚ ಸೌಮನಸೇ ಭದ್ರೇ ಸೌಮನಸಸ್ಯ ಕಾರಣೇ ಕಲ್ಯಾಣೇ ಫಲೇ ಸ್ಯಾಮ । ಸರ್ವದಾ ತಿಷ್ಠೇಮ ॥

॥ ಪ್ರತಿಪದಾರ್ಥ ॥

**ಅಂಗಿರಸಃ**—ಅಂಗಿರಸ್ಸುಗಳೂ । **ಅಥರ್ವಾಣಃ**—ಅಥರ್ವಸಂಜ್ಞಕರಾದ ಋಷಿಗಳೂ । **ಭೃಗವಃ**—ಭೃಗುಗಳೂ । **ನವಗ್ವಾಃ**—ನೂತನವಾದ ಚೈತನ್ಯದಾಯಕರಾದ । **ನಃ**—ನಮ್ಮ । **ಪಿತರಃ**—ಪಿತೃಗಳೂ । **ಸೋಮ್ಯಾಸಃ**—ಸೋಮಾರ್ಪಣೆಗೆ ಅರ್ಹರಾಗಿದ್ದಾರೆ । **ಯಜ್ಞಿಯಾನಾಂ**—ಪೂಜಾರ್ಹರಾದ । **ತೇಷಾಂ**—ಅವರ । **ಸುಮತೌ**—ಅನುಗ್ರಹಬುದ್ಧಿಯಲ್ಲಿ । **ವಯಂ**—ನಾವು । **ಸ್ಯಾಮ**—ಇರುವಂತಾಗಲಿ । **ಅಪಿ**—ಮತ್ತು । **ಭದ್ರೇ**—ಕಲ್ಯಾಣಕಾರಕವಾದ । **ಸೌಮನಸೇ**—ಪ್ರೀತಿಗೆ ಪಾತ್ರರಾಗಿಯೂ ಇರುವಂತಾಗಲಿ.

॥ ಭಾವಾರ್ಥ ॥

ಅಂಗಿರಸ್ಸುಗಳೂ, ಅಥರ್ವಸಂಜ್ಞಕರಾದ ಋಷಿಗಳೂ, ಭೃಗುಗಳೂ ನೂತನವಾದ ಚೈತನ್ಯದಾಯಕರಾದ ನಮ್ಮ ಪಿತೃಗಳೂ ಸೋಮಾರ್ಪಣೆಗೆ ಅರ್ಹರಾಗಿದ್ದಾರೆ. ಪೂಜಾರ್ಹರಾದ ಅವರ ಕಲ್ಯಾಣಾತ್ಮಕವಾದ ಅನುಗ್ರಹಕ್ಕೂ ಪ್ರೀತಿಗೂ ನಾವು ಪಾತ್ರರಾಗೋಣ.

## English Translation

The Angirasas, the Atharvas, the Bhrigus, who are entitled to the Soma, are our recent progenitors; may we ever have a place in the favour of these venerable (pitris); may we be ever held in their auspicious regard.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ ಅಂಗಿರಸಃ, ಪಿತರಃ, ಅಥರ್ವಾಣಃ, ಭೃಗವಃ ಎಂಬ ಶಬ್ದಗಳನ್ನು ವಿವರಿಸುವಾಗ ಯಾಸ್ಕರು ಪ್ರಕೃತಋಕ್ಕಿಗೆ ನಿರ್ವಚನವನ್ನು ಹೇಳಿದಾರೆ. ಮೇಲೆಹೇಳಿದ ಅಂಗಿರಸಃ ಮೊದಲಾದವರು ಪಿತೃದೇವತೆಗಳು.

ಅವರು ಮಾಧ್ಯಮಿಕರಾದ ಎಂದರೆ ಮಧ್ಯಮಸ್ಥಾನದಲ್ಲಿರುವ ಪಿತೃಗಳು, ಅವರುಗಳಿಗೆ ಯಮನು ರಾಜನು. ಆದ್ದರಿಂದ **ಮಾಧ್ಯಮಿಕೋ ಯಮ ಇತ್ಯಾಹುಃ । ತಸ್ಮಾನ್ಮಾಧ್ಯಮಿಕಾನ್ ಪಿತೄನ್ಮನ್ಯಂತೇ** (ನಿ. ೧೧-೧೯) । ಯಮನೂ ಮಧ್ಯಮಸ್ಥಾನದೇವತೆಯು ಎಂದು ಹೇಳಿದಾರೆ.

**ಅಂಗಿರಸಃ— ಅಂಗಾರೇಷ್ವಂಗಿರಾಃ । ಅಂಗಾರಾ ಅಂಗನಾಃ (ಅಂಚನಾಃ)** ನಿ. ೩-೧೭ । ಅಂಗಿರಸ ರೆಂಬುವರು ಬಹಳ ಪ್ರಸಿದ್ಧರಾದ ಋಷಿಗಳು. ಪೂರ್ವದಲ್ಲಿ ಪ್ರಜಾಪತಿಯು ತನ್ನ ಪುತ್ರಿಯ ಸಂಗವನ್ನು ಮಾಡಿ ಅದರಿಂದ ಸ್ಖಲಿತವಾದ ರೇತಸ್ಸು ಭೂಮಿಯಮೇಲೆ ಬಿದ್ದು ಸರೋವರ ರೂಪದಲ್ಲಿ ನಿಂತಿತು. ಅದನ್ನು ದೇವತೆಗಳು ಇಂಗಿಸಬೇಕೆಂದು ಪ್ರಯತ್ನಿಸಿ ಅದರ ಸುತ್ತಲೂ ವೈಶ್ವಾನರಾಗ್ನಿಯನ್ನು ಸ್ಥಾಪಿಸಿದರು. ಆಗ ಆ ವೀರ್ಯವು ಅಗ್ನಿಯ ಶಾಖದಿಂದ ಪ್ರಜ್ವಲಿತವಾಗಿ ಉರಿಯುತ್ತಿರುವಾಗ ಅದರಿಂದ ಮೊದಲು ಆದಿತ್ಯನೂ, ಅಲ್ಲಿದ್ದ ಕೆಂಡಗಳಿಂದ ಅಂಗಿರಾ ಋಷಿಗಳೂ ಉತ್ಪನ್ನರಾದರೆಂದು ಐತರೇಯ ಬ್ರಾಹ್ಮಣದಲ್ಲಿ ಹೇಳಿರುವುದನ್ನು ನಾವು ಹಿಂದೆಯೇ ವಿವರಿಸಿದೇವೆ. ಈ ಅಂಗಿರಾಋಷಿಗಳು ಬಹಳ ಪ್ರಸಿದ್ಧರಾದ ಪಿತೃಗಳೆಂದು ಹೇಳುವ ರೂಢಿ ಇದೆ. ಅಂಗಾರಾಃ ಎಂದರೆ ಕೆಂಡಗಳು. ಇವುಗಳು ಆರಿಹೋದನಂತರ ಕಪ್ಪಾಗಿ ಮುಟ್ಟಿದರೆ ಕೈಯೆಲ್ಲಾ ಮಸಿಯಾಗುವುದು (ಅಂಚನಾಃ) ಆದ್ದರಿಂದ ಅಂಗಾರಾಃ ಎಂಬ ಹೆಸರು.

**ಪಿತರಃ— ಪಿತಾ ಪಾತಾ ವಾ ಪಾಲಯಿತಾ ವಾ** (ನಿ. ೪-೨೧) ಪಿತೃಶಬ್ದಕ್ಕೆ ಸಂರಕ್ಷಿಸುವವರು ಅಥವಾ ಕಾಪಾಡುವವರು ಎಂದರ್ಥವಿರುವುದು. ಪಿತೃಗಳು ಯಾರು ಇವರ ವಿಷಯವೇನು ಎಂಬುದನ್ನು ಈ ಸೂಕ್ತದ ಪೀಠಿಕೆಯಲ್ಲಿ ನಾವು ವಿಸ್ತಾರವಾಗಿ ವಿವರಿಸಿದೇವೆ.

**ಅಥರ್ವಾಣಃ**— ಥರ್ವ್‌ಧಾತುವಿಗೆ ಚಲಿಸು ಎಂದರ್ಥವಿರುವುದು. **(ಥರ್ವತಿಃ ಚರತಿಕರ್ಮಾ)** ಅದರಿಂದ ನಿಷ್ಪನ್ನವಾದ ಥರ್ವಣಃ ಎಂಬ ಶಬ್ದಕ್ಕೆ ಚಲಿಸುವವರು ಎಂದರ್ಥವು. ಅಥರ್ವಾಣಃ ಎಂಬ ಶಬ್ದವು ಅದರ ಪ್ರತಿಷೇಧಾರ್ಥವನ್ನು ತಿಳಿಸುವುದು ಎಂದರೆ ಚಲಿಸದೆ ಸ್ಥಿರವಾಗಿ ಇರುವವರು ಸ್ಥಿರಪ್ರಕೃತಿಯುಳ್ಳವರು ಎಂದರ್ಥವು.

**ಭೃಗವಃ— ಅರ್ಚಿಷಿ ಭೃಗುಃ ಸಂಬಭೂವ । ಭೃಗರ್ಭೃಜ್ಯಮಾನೋ ನ ದೇಹೇ** (ನಿ. ೩-೧೭) ಮೇಲೆ ಹೇಳಿದಂತೆ ಪ್ರಜಾಪತಿಯ ವೀರ್ಯವನ್ನು ವೈಶ್ವಾನರಾಗ್ನಿಯಿಂದ ತಪ್ತಮಾಡುವಾಗ ಜ್ವಾಲೆಯಿಂದ ಭೃಗು ಋಷಿಯು ಉತ್ಪನ್ನನಾದನು ಎಂದು ಐತರೇಯ ಬ್ರಾಹ್ಮಣದಲ್ಲಿ ಹೇಳಿದೆ. ಜ್ವಾಲೆಯಂತೆ ಪ್ರಕಾಶಮಾನನಾದ್ದರಿಂದ ಭೃಗು ಎಂಬ ಹೆಸರಾಯಿತು. ಈ ಋಷಿಯ ವಂಶಸ್ಥರಿಗೆ ಭೃಗವಃ ಎಂದು ಹೆಸರು. ಇವರು ಪ್ರಸಿದ್ಧರಾದ ಪಿತೃಗಣಗಳು. ಇನ್ನು ಪ್ರಕೃತಋಕ್ಕಿನ ನಿರ್ವಚನವನ್ನು ವಿವರಿಸೋಣ—

**ಅಂಗಿರಸೋ ನಃ ಪಿತರೋ ನವಗತಯೋ ನವನೀತಗತಯೋ ವಾಥರ್ವಾಣೋ ಭೃಗವಃ ಸೋಮ್ಯಾಃ ಸೋಮಸಂಪಾದಿನಸ್ತೇಷಾಂ ವಯಂ ಸುಮತೌ ಕಲ್ಯಾಣ್ಯಾಂ ಮತೌ ಯಜ್ಞಿಯಾನಾಮಪಿ ಚೈಷಾಂ ಭದ್ರೇ ಭಂದನೀಯೇ ಭಾಜನವತಿ ವಾ ಕಲ್ಯಾಣೇ ಮನಸಿ ಸ್ಯಾಮೇತಿ ॥**

(ನಿ. ೧೧-೧೯)

ಇಲ್ಲಿ ಅಂಗಿರಸಃ, ಪಿತರಃ, ಭೃಗವಃ, ಅಥರ್ವಾಣಃ ಎಂಬ ಪಿತೃದೇವತೆಗಳ ವಿಷಯವನ್ನು ಮೇಲೆ ವಿವರಿಸಿದೇವೆ. ಇನ್ನು ನವಗ್ವಾಃ ಎಂದರೆ ನವಗತಯೋ ನವನೀತಗತಯೋ ವಾ ನವಗ್ವಾಃ ಎಂದರೆ ಹೊಸಗತಿಯುಳ್ಳವರು ಎಂದರೆ

...ತಿಮಾಸದಲ್ಲಿ ಅಥವಾ ಪ್ರತಿ ಸಂವತ್ಸರದಲ್ಲಿ ಆಚರಿಸಲ್ಪಡುವ ಪಿತೃಯಜ್ಞಾದಿಗಳಲ್ಲಿ (ಶ್ರಾದ್ಧಾದಿಗಳಲ್ಲಿ) ಕವ್ಯಸ್ವೀಕಾರಾರ್ಥವಾಗಿ ಬರುವವರು ಅಥವಾ ನವನೀತ ಎಂದರೆ ಬೆಣ್ಣೆಯ ಮೇಲೆ ಅತ್ಯಾಸೆಯಿಂದ ಬರುವವರು ಎಂದು ನವಗ್ವಾಃ ಎಂಬ ಶಬ್ದಕ್ಕೆ ಯಾಸ್ಕರು ಅರ್ಥನಿರ್ವಚನಮಾಡಿದ್ದಾರೆ. ಸೋಮ್ಯಾಃ-ಸೋಮಸಂಪಾದಿನಃ । ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಸೋಮಲತೆಗಳನ್ನು ಜಜ್ಜಿ ಹಿಂಡಿ ಸೋಮರಸವನ್ನು ಸಿದ್ಧಪಡಿಸುವವರು. ಇವರು ಯಜ್ಞಮಾಡುತ್ತಿದ್ದ ಕಾಲದಲ್ಲಿ ಈರೀತಿ ಸೋಮರಸವನ್ನು ಸಿದ್ಧಪಡಿಸಿ ದೇವತೆಗಳಿಗೆ ಅರ್ಪಿಸಿ ಅದರಿಂದ ಉತ್ತಮಸ್ಥಾನವನ್ನು ಪಡೆದದ್ದರಿಂದ ಇವರಿಗೆ ಸೋಮ್ಯಾಸಃ ಎಂಬ ಹೆಸರು ಬಂದಿತು. ಮೇಲೆ ಹೇಳಿದ ಪೂಜಾರ್ಹರಾದ (ಅಥವಾ ಯಜ್ಞಾರ್ಹರಾದ) ಪಿತೃಗಳ ಉತ್ತಮವೂ ಪ್ರಶಸ್ತವೂ ಕಲ್ಯಾಣಾತ್ಮಕವೂ ಆದ ಅನುಗ್ರಹಾತ್ಮಕವಾದ ಬುದ್ಧಿಯಲ್ಲಿ ನಾವು ಇರುವಂತಾಗಲಿ ಎಂದರೆ ಅವರ ಉತ್ತಮವಾದ ಅನುಗ್ರಹಕ್ಕೆ ನಾವು ಪಾತ್ರರಾಗೋಣ ಎಂದು ನಿರುಕ್ತವಚನದ ಮುಖ್ಯಾಭಿಪ್ರಾಯವು.

**ಮಾಧ್ಯಮಿಕೋ ದೇವಗಣ ಇತಿ ನೈರುಕ್ತಾಃ । ಪಿತರ ಇತ್ಯಾಖ್ಯಾನಂ ॥** (ನಿ. ೧೧-೨೦)

ಮೇಲೆ ಹೇಳಿದ ಅಂಗಿರಸರೇ ಮೊದಲಾದವರು ಮಧ್ಯಮ (ಅಂತರಿಕ್ಷ) ಸ್ಥಾನೀಯರಾದ ದೇವಗಣಕ್ಕೆ ಸೇರಿದವರು ಎಂದು ನಿರುಕ್ತಕಾರರು ಹೇಳಿರುವರು. ಇವರುಗಳೆಲ್ಲರೂ ಹಿಂದೆ ಋಷಿಗಳಾಗಿದ್ದು ತಮ್ಮ ಉತ್ತಮ ಕರ್ಮಗಳಿಂದ ಉತ್ತಮಸ್ಥಾನವನ್ನು ಪಡೆದಿರುವುದರಿಂದ ಇವರೆಲ್ಲರನ್ನೂ ಪಿತೃಗಳೆಂದು ಕರೆಯಬೇಕೆಂದು ಮತ್ತೆ ಕೆಲವರ ಅಭಿಪ್ರಾಯವು.

॥ ಸಂಹಿತಾಪಾಠಃ ॥

**ಪ್ರೇಹಿ ಪ್ರೇಹಿ ಪಥಿಭಿಃ ಪೂರ್ವ್ಯೇಭಿರ್ಯತ್ರಾ ನಃ ಪೂರ್ವೇ ಪಿತರಃ ಪರೇಯುಃ ।**

**ಉಭಾ ರಾಜಾನಾ ಸ್ವಧಯಾ ಮದಂತಾ ಯಮಂ ಪಶ್ಯಾಸಿ ವರುಣಂ ಚ ದೇವಂ ॥ ೭ ॥**

॥ ಪದಪಾಠಃ ॥

ಪ್ರ । ಇಹಿ । ಪ್ರ । ಇಹಿ । ಪಥಿಽಭಿಃ । ಪೂರ್ವ್ಯೇಭಿಃ । ಯತ್ರ । ನಃ । ಪೂರ್ವೇ । ಪಿತರಃ । ಪರಾಽಈಯುಃ ।

ಉಭಾ । ರಾಜಾನಾ । ಸ್ವಧಯಾ । ಮದಂತಾ । ಯಮಂ । ಪಶ್ಯಾಸಿ । ವರುಣಂ । ಚ । ದೇವಂ ॥ ೭ ॥

॥ ಸಾಯಣಭಾಷ್ಯಂ ॥

**ಸತ್ರಮಧ್ಯೇ ದೀಕ್ಷಿತಸ್ಯ ಮರಣೇ ಪ್ರೇಹೀತ್ಯಾದ್ಯಾಃ ಪಂಚರ್ಚಸ್ತೃತೀಯಾವರ್ಜಿತಾ ಹೋತ್ರಾ ಶಂಸನೀಯಾಃ । ಸೂತ್ರಿತಂ ಚ । ಪ್ರೇಹಿ ಪ್ರೇಹಿ ಪಥಿಭಿಃ ಪೂರ್ವ್ಯೇಭಿರಿತಿ ಪಂಚಾನಾಂ ತೃತೀಯಾಮುದ್ಧರೇತ್ । ಆ. ೬-೧೦ । ಇತಿ ॥**

**ಯತ್ರ ಯಸ್ಮಿನ್ಸ್ಥಾನೇ ನೋಽಸ್ಮಾಕಂ ಪೂರ್ವೇ ಪುರಾತನಾಃ ಪಿತರಃ ಪಿತಾಮಹಾದಯಃ ಪರೇಯುಃ ಪೂರ್ವ್ಯೇಭಿಃ ಪೂರ್ವಸ್ಮಿನ್ಕಾಲೇ ಭವೈಃ । ಅನಾದಿಕಾಲಪ್ರವೃತ್ತೈರಿತ್ಯರ್ಥಃ । ಪಥಿ-**

ಭಿರ್ವಾರ್ಗೈರ್ಹೇ ಮತ್ಪಿತಃ ತತ್ಸ್ಥಾನಂ ಪ್ರೇಹಿ । ಪ್ರಗಚ್ಛ । ಶೀಘ್ರಂ ಗಚ್ಛ । ಗತ್ವಾ ಚ ಸ್ವಧಯಾ-ಮೃತಾನ್ನೇನ ಮದಂತಾ ತೃಪ್ಯಂತಾ ರಾಜಾನಾ ರಾಜಾನಾವುಭೌ ಯಮಂ ದೇವಂ ದ್ಯೋತಮಾನಂ ವರುಣಂ ಚ ಪಶ್ಯಾಸಿ । ಪಶ್ಯ

। ಪ.ತಿಪದಾರ್ಥ ।

(ಎಲೈ ಪಿತೃವೇ) ಯತ್ರ—ಯಾವ ಮಾರ್ಗದಲ್ಲಿ । ನಃ—ನಮ್ಮ । ಪೂರ್ವೇ—ಪುರಾತನರಾದ ಪಿತರಃ—ಪಿತಾಮಹಾದಿಗಳು । ಪರೇಯುಃ—ಮರಣಾನಂತರ ಹೋದರೋ । ಪೂರ್ವ್ಯೇಭಿಃ—ಅನಾದಿಗಳಾದ । ಪಥಿಭಿಃ—ಅದೇ ಮಾರ್ಗಗಳಿಂದ । ಪ್ರೇಹಿ—ಪ್ರಯಾಣಮಾಡು । ಸ್ವಧಯಾ—ಅಮೃತಾನ್ನದಿಂದ । ಮದಂತಾ—ತೃಪ್ತಿಯನ್ನು ಹೊಂದಿರುವವರೂ । ರಾಜಾನಾ—ಪ್ರಭುಗಳೂ ಆದ । ಯಮಂ—ಯಮನನ್ನೂ । ದೇವಂ—ಪ್ರಕಾಶಮಾನನಾದ । ವರುಣಂ ಚ—ವರುಣನನ್ನೂ । ಉಭಾ—ಈ ಇಬ್ಬರನ್ನೂ । ಪಶ್ಯಾಸಿ—ಅಲ್ಲಿ ನೋಡುವೆ.

। ಭಾವಾರ್ಥ ।

ಎಲೈ ಪಿತೃವೇ, ಯಾವ ಮಾರ್ಗದಲ್ಲಿ ನಮ್ಮ ಪುರಾತನರಾದ ಪಿತಾಮಹಾದಿಗಳು ಮರಣಾನಂತರ ಹೋದರೋ, ಅನಾದಿಯಾದ ಅದೇ ಮಾರ್ಗಗಳಿಂದ ಪ್ರಯಾಣಮಾಡು. ಅಮೃತಾನ್ನದಿಂದ ತೃಪ್ತಿಯನ್ನು ಹೊಂದಿರುವವರೂ, ಪ್ರಭುಗಳೂ ಆದ ಯಮನನ್ನೂ, ಪ್ರಕಾಶಮಾನನಾದ ವರುಣನನ್ನೂ ಅಲ್ಲಿ ನೋಡುವೆ.

## English Translation

Depart, depart, by the former paths by which our forefathers have departed; there should you behold the two monarchs Yama and the divine Varuna rejoicing in the Swadha.

। ವಿಶೇಷವಿಷಯಗಳು ।

ಸತ್ರವೆಂಬ ದೀರ್ಘಕಾಲ ಮಾಡುವ ಯಾಗದಲ್ಲಿ ಯಾಗ ಸಮಾಪ್ತಿಯಾಗುವುದಕ್ಕೆ ಮೊದಲೇ ಯಜ್ಞದೀಕ್ಷಿತನಾದ ಯಜಮಾನನು ಮೃತನಾದಲ್ಲಿ ಪ್ರೇಹಿ ಎಂದು ಮೊದಲಾಗುವ ಮುಂದಿನ ಐದು ಋಕ್ಕುಗಳನ್ನು (೭-೧೧)-ಮೂರನೇ (ಇದೇ) ಋಕ್ಕನ್ನು ಬಹ್ವೃ-ಹೋತೃವು ಪಠಿಸಬೇಕು. ಈ ವಿಷಯದಲ್ಲಿ ಆಶ್ವಲಾಯನ ಶ್ರೌತಸೂತ್ರದ-ಪ್ರೇಹಿ ಪ್ರೇಹಿ ಪಥಿಭಿಃ ಪೂರ್ವ್ಯೇಭಿರಿತಿ ಪಂಚಾನಾಂ ತೃತೀಯಾಮುದ್ಧರೇತ್ ಎಂಬ ಸೂತ್ರವು (ಆ. ೬-೧೦) ನಿರ್ದಿಷ್ಟವಾಗಿರುವುದು.

ಈ ಸೂಕ್ತದ ಋಷಿಯು ಮೃತನಾದ ತನ್ನ ತಂದೆಯ ಶರೀರವು (ಅಗ್ನಿಯಲ್ಲಿ ದಹಿಸುತ್ತಿರುವಾಗ) ಪಾರ್ಥಿವ ಶರೀರವನ್ನು ತ್ಯಜಿಸಿ ಪ್ರೇತರೂಪದಿಂದಿರುವ ಅವನನ್ನು ಸಂಬೋಧಿಸಿ ಈ ಋಕ್ಕನ್ನೂ ಮುಂದಿನ ಋಕ್ಕುಗಳನ್ನೂ ಪಠಿಸಿರುವನೆಂದು ತಿಳಿಯಬೇಕು. ಆದ್ದರಿಂದಲೇ ಪ್ರೇತಶರೀರವನ್ನು ಸಂಬೋಧಿಸಿ, ಎಲೈ ಪಿತೃವೇ, ನಮ್ಮ ಹಿರಿಯರೂ, ನಮ್ಮ ವಂಶದಲ್ಲಿ ಪ್ರಸಿದ್ಧರಾಗಿ ಮೃತರಾದವರೂ ಯಾವ ಮಾರ್ಗದಲ್ಲಿ ಪಿತೃಲೋಕಕ್ಕೆ ಹೋಗಿ ಸೇರಿದರೋ ಅಂತಹ ಪುರಾತನವಾದ ಮಾರ್ಗದಲ್ಲಿಯೇ ಪ್ರಯಾಣಮಾಡು ಎಂದು ಪ್ರಾರ್ಥಿಸಿರುವನು. ಪುರಾತನಮಾರ್ಗವೆಂದರೆ ಅನಾದಿ ಕಾಲ

ದಿಂದಲೂ ಇದುವರೆಗೂ ಮೃತರಾದ ಮತ್ತು ಅಸಂಖ್ಯಾತರಾದ ಪ್ರೇತಶರೀರಸ್ಥರಾದವರು ಹಿಂದೆ ಹೋಗಿ ಪಿತೃಲೋಕ ವನ್ನು ತಲುಪಿದ ಮಾರ್ಗನೆಂಬಭಿಪ್ರಾಯವು. ಇಂತಹ ಮಾರ್ಗದಲ್ಲಿ ಹೋದರೆ ಪಿತೃಲೋಕಕ್ಕೆ ಹೋಗಿ ಅಲ್ಲಿ ಆ ಲೋಕಕ್ಕೆ ಪ್ರಭುಗಳಾದ ಯಮ ಮತ್ತು ವರುಣರನ್ನು ನೋಡುವೆ ಎಂದು ಋಷಿಯು ಹೇಳಿರುವನು. ಪಿತೃಲೋಕದಲ್ಲಿ ಯಮನಂತೆಯೆ ವರುಣನೂ ಅಲ್ಲಿಯೇ ಇರುವನು ಎಂಬ ನಂಬಿಕೆಯು ಹಿಂದಿನ ಋಷಿಗಳಿಗಿದ್ದಿತು ಎಂದು ತಿಳಿಯಬೇಕು.

॥ ಸಂಹಿತಾಪಾಠಃ ॥

## ಸಂ ಗಚ್ಛಸ್ವ ಪಿತೃಭಿಃ ಸಂ ಯಮೇನೇಷ್ಟಾಪೂರ್ತೇನ ಪರಮೇ ವ್ಯೋಮನ್।
## ಹಿತ್ವಾಯಾವದ್ಯಂ ಪುನರಸ್ತಮೇಹಿ ಸಂಗಚ್ಛಸ್ವ ತನ್ವಾ ಸುವರ್ಚಾಃ ॥ ೮ ॥

॥ ಪದಪಾಠಃ ॥

ಸಂ ಗಚ್ಛಸ್ವ । ಪಿತೃಽಭಿಃ । ಸಂ । ಯಮೇನ । ಇಷ್ಟಾಪೂರ್ತೇನ । ಪರಮೇ । ವಿಽಓಮನ್ ।
ಹಿತ್ವಾಯ । ಅವದ್ಯಂ । ಪುನಃ । ಅಸ್ತಂ । ಆ । ಇಹಿ । ಸಂ । ಗಚ್ಛಸ್ವ । ತನ್ವಾ । ಸುಽವರ್ಚಾಃ । ೮ ॥

॥ ಸಾಯಣಭಾಷ್ಯಂ ॥

ಹೇ ಮದೀಯ ಪಿತಃ ತತಸ್ತ್ವಂ ಪರಮ ಉತ್ಕೃಷ್ಟೇ ವ್ಯೋಮನ್ವ್ಯೋಮನಿ ಸ್ವರ್ಗಾಖ್ಯೇ ಸ್ಥಾನೇ ಸ್ವಭೂತೈಃ ಪಿತೃಭಿಃ ಸಹ ಸಂ ಗಚ್ಛಸ್ವ । ಇಷ್ಟಾಪೂರ್ತೇನ ಶ್ರೌತಸ್ಮಾರ್ತದಾನಫಲೇನ ಸಂ ಗಚ್ಛಸ್ವ । ತತ ಇಷ್ಟಾಪೂರ್ತೇನ ಸಹಾಗಮ್ಯಾವದ್ಯಂ ಪಾಪಂ ಹಿತ್ವಾ ಪರಿತ್ಯಜ್ಯಾಸ್ತಂ ಮ್ರಿಯಮಾಣಾಖ್ಯಂ ಗೃಹಮೇಹಿ । ಆಗಚ್ಛ । ತತಃ ಸುವರ್ಚಾಃ । ತೃತೀಯಾರ್ಥೇ ಪ್ರಥಮಾ । ಸುವರ್ಚಸಾ ಶೋಭನದೀಪ್ತಿಯುಕ್ತೇನ ತನ್ವಾ ಸ್ವಶರೀರೇಣ ಸಂ ಗಚ್ಛಸ್ವ ॥

॥ ಪ್ರತಿಪದಾರ್ಥ ॥

(ಎಲೈ ಪಿತೃವೇ) **ಪರಮೇ**—ಅತ್ಯುತ್ಕೃಷ್ಟವಾದ । **ವ್ಯೋಮನ್**—ಸ್ವರ್ಗಸ್ಥಾನದಲ್ಲಿ । **ಪಿತೃಭಿಃ**—ಪಿತೃಗಳೊಡನೆ । **ಸಂ ಗಚ್ಛಸ್ವ**—ಸೇರಿಕೊ । **ಇಷ್ಟಾಪೂರ್ತೇನ**—ನಿನ್ನ ಕಾಮಪೂರಕವಾದ ಫಲಗಳೊಡನೆ ಕೂಡಿರುವ । **ಯಮೇನ**—ಯಮನೊಡನೆ । **ಸಂ**—ಸೇರಿಕೊ । **ಅವದ್ಯಂ**—ಪಾಪಕ್ಕೆ ಮೂಲವಾದ ದೇಹವನ್ನು । **ಹಿತ್ವಾಯ**—ತ್ಯಜಿಸಿ । **ಅಸ್ತಂ**—ಉತ್ತಮವಾದ ಗೃಹಕ್ಕೆ । **ಪುನಃ**—ತಿರುಗಿಯೂ । **ಏಹಿ**—ಬಂದು ಸೇರು । **ಸುವರ್ಚಾಃ**—ಉತ್ತಮವಾದ ಕಾಂತಿಯುಳ್ಳ । **ತನ್ವಾ**—ದೇಹದೊಡನೆ । **ಸಂ ಗಚ್ಛಸ್ವ**—ಸೇರಿಕೊ.

॥ ಭಾವಾರ್ಥ ॥

ಎಲೈ ಪಿತೃವೇ, ಅತ್ಯುತ್ಕೃಷ್ಟವಾದ ಸ್ವರ್ಗಸ್ಥಾನದಲ್ಲಿ ಪಿತೃಗಳೊಡನೆ ಸೇರಿಕೊ. ನಿನ್ನ ಕಾಮವನ್ನು ತೃಪ್ತಿಗೊಳಿಸುವ ಯಮನೊಡನೆ ಸೇರು. ಪಾಪಕ್ಕೆ ಮೂಲವಾದ ದೇಹವನ್ನು ತ್ಯಜಿಸಿ ಉತ್ತಮವಾದ ಗೃಹಕ್ಕೆ ಪುನಃ ಬಂದು ಸೇರು. ಉತ್ತಮವಾದ ಕಾಂತಿಯುಳ್ಳ ದೇಹದೊಡನೆ ಸೇರಿಕೊ.

English Translation

Be united with the Pitris, with Yama, and with the fulfilment of your wishes in the highest heaven; discarding iniquity, return to your abode. and unite yourself to a luminous body.

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕಿನಲ್ಲಿ ಹೇಳಿದಂತೆ ತನ್ನ ಪಿತೃವು (ಅಥವಾ ಪ್ರೇತಶರೀರದಲ್ಲಿರುವ ಪಿತೃವು) ಪುರಾತನವಾದ ಮಾರ್ಗದಿಂದ ಪಿತೃಲೋಕಕ್ಕೆ ಹೋದಬಳಿಕ ಏನು ಮಾಡಬೇಕು ಎಂಬ ವಿಷಯವನ್ನು ಋಷಿಯು ಈ ಋಕ್ಕಿನಲ್ಲಿ ಹೇಳಿದಾನೆ.

ಎಲೈ ಪಿತೃವೇ, ನೀನು ಪಿತೃಲೋಕಕ್ಕೆ (ಇದನ್ನು ಸ್ವರ್ಗವೆಂದು ಹೇಳಬಹುದು) ಹೋದಬಳಿಕ ಅಲ್ಲಿ ಹಿಂದಿನ ಎಂದರೆ ಪೂರ್ವಕಾಲದಲ್ಲಿ ಮೃತರಾದ ನಮ್ಮ ಹಿರಿಯರಾದ ಪಿತೃಗಳಿರುವರು. ನೀನು ಅವರ ಜತೆಗೆ ಸೇರಿಕೋ, ಮತ್ತು ಯಮನನ್ನು ಸಂಧಿಸು. ಬಳಿಕ ಆ ದಿವ್ಯವಾದ ಲೋಕದಲ್ಲಿ ನಿನಗೆ ಬೇಕಾದ ಇಷ್ಟಾರ್ಥಗಳನ್ನು ಅನುಭವಿಸು. ಎಂದರೆ ನೀನು ಭೂಮಿಯ ಮೇಲೆ ಜೀವಿಸಿದ್ದಾಗ ನೀನು ನೆರವೇರಿಸಿದ ಯಜ್ಞಾದಿಸತ್ಕರ್ಮಗಳಿಗೆ ಯಾವ ಫಲವು ಲಭಿಸಬೇಕಾಗಿದೆಯೋ ಆ ಫಲಗಳನ್ನು ಈಗ ಈ ದಿವ್ಯಲೋಕದಲ್ಲಿ ಅನುಭವಿಸು. ಇಲ್ಲಿ ಇಷ್ಟಾಪೂರ್ತೇನ ಎಂಬ ಇಷ್ಟ+ಅಪೂರ್ತೇನ ಎಂದು ಪದವಿಭಾಗಮಾಡಿದರೆ ಇದುವರೆಗೆ ನೀನು ಅಪೇಕ್ಷಿಸಿದ್ದರೂ ಇನ್ನೂ ಪೂರ್ತಿಯಾಗದಿರುವ ಶಬ್ದಕ್ಕೆ ಇಷ್ಟಗಳು ಎಂದರ್ಥವಾಗುವುದು. ಅಂತಹ ಇಷ್ಟಗಳನ್ನು ಭೂಮಿಯಲ್ಲಿ ಜೀವಿಸಿದ್ದಾಗ ಅನುಭವಿಸಲು ಸಾಧ್ಯವಿಲ್ಲದ್ದರಿಂದ ಈಗ ಈ ದಿವ್ಯಲೋಕದಲ್ಲಿ ಅವುಗಳನ್ನು ಅನುಭವಿಸು ಎಂದು ಋಷಿಯು ಹೇಳಿದಾನೆ. ಮತ್ತು ಈ ದಿವ್ಯಲೋಕಕ್ಕೆ ಬಂದಮೇಲೆ ನೀನು ಇದುವರೆಗೆ ಮಾಡಿರಬಹುದಾದ ಪಾಪಕರ್ಮಗಳನ್ನು ಮತ್ತು ಅವುಗಳ ಫಲರೂಪಕವಾದ ದುಃಖವನ್ನು ತ್ಯಜಿಸಿ ಈ ದಿವ್ಯಲೋಕದಲ್ಲಿ ಸುಖವಾಗಿರಲು ಉತ್ತಮವಾದ ಜ್ಯೋತೀರೂಪವಾದ ಎಂದರೆ ಪ್ರಕಾಶಮಾನವಾದ ದೇಹವನ್ನು ಪಡೆದು ಉತ್ತಮ ಗೃಹದಲ್ಲಿ ವಾಸಿಸು ಎಂದು ಪ್ರಾರ್ಥನೆಯನ್ನು ವ್ಯಕ್ತಪಡಿಸಿರುವನು.

। ಸಂಹಿತಾಪಾಠಃ ।

ಅಪೇತ ವೀತ ವಿ ಚ ಸರ್ಪತಾತೋಽಸ್ಮಾ ಏತಂ ಪಿತರೋ ಲೋಕಮಕ್ರನ್ ।
ಅಹೋಭಿರದ್ಭಿರಕ್ತುಭಿರ್ವ್ಯಕ್ತಂ ಯಮೋ ದದಾತ್ಯವಸಾನಮಸ್ಮೈ ॥ ೯ ॥

। ಪದಪಾಠಃ ।

ಅಪ । ಇತ । ವಿ । ಇತ । ವಿ । ಚ । ಸರ್ಪತ । ಅತಃ । ಅಸ್ಮೈ । ಏತಂ । ಪಿತರಃ । ಲೋಕಂ । ಅಕ್ರನ್ ।
ಅಹಃಽಭಿಃ । ಅತ್ಽಭಿಃ । ಅಕ್ತುಽಭಿಃ । ವಿಽಅಕ್ತಂ । ಯಮಃ । ದದಾತಿ । ಅವಽಸಾನಂ । ಅಸ್ಮೈ ॥ ೯ ॥

। ಸಾಯಣಭಾಷ್ಯಂ ।

ಪೈತೃಮೇಧಿಕೇ ಕರ್ಮಣಿ ಶ್ಮಶಾನಾಯತನಂ ಪ್ರೋಕ್ಷತ್ಯಪೇತ ವೀತೇತಿ । ಸೂತ್ರಿತಂ ಚ । ಗರ್ತೋದಕೇನ ಶಮೀಶಾಖಯಾ ತ್ರಿಃ ಪ್ರಸವ್ಯಮಾಯತನಂ ಪರಿವ್ರಜನ್ ಪ್ರೋಕ್ಷತ್ಯಪೇತ ವೀತ ವಿ ಚ ಸರ್ಪತಾತಃ । ಆ. ಗೃ. ೪-೨-೧೦ । ಇತಿ ॥

ಶ್ಮಶಾನೇ ಪೂರ್ವಂ ಸ್ಥಿತಾ ಹೇ ಪಿಶಾಚಾದಯಃ ಅತೋಽಸ್ಮಾದ್ಮೃತಯಜಮಾನದಹನಸ್ಥಾನಾದಪೇತ । ಅಪಗಚ್ಛತ । ವೀತ । ವಿಶೇಷೇಣ ಗಚ್ಛತ । ವಿ ಸರ್ಪತ ಚ । ಇದಂ ಸ್ಥಾನಂ ಪರಿತ್ಯಜ್ಯ ನಾನಾಭಾವೇನ ದೂರತರಂ ದೇಶಂ ಗಚ್ಛತೇತ್ಯರ್ಥಃ । ಪಿತರೋಽಸ್ಮೈ ಮೃತಯಜಮಾನಸ್ಯಾರ್ಥಾಯೈತಂ ಲೋಕಮಿದಂ ದಹನಸ್ಥಾನಮಕ್ರನ್ । ಯಮಸ್ಯಾಜ್ಞಯಾಸ್ಮೈಕುರ್ವನ್ । ಯಮೋಽಸ್ಯಹೋಭಿರ್ದಿವಸೈರದ್ಭಿರಭ್ಯುಕ್ಷಣೋದಕೈರಕ್ತುಭೀ ರಾತ್ರಿಭಿರ್ವ್ಯಕ್ತಂ ಸಂಗತಂ । ಶುದ್ಧಿನಿಮಿತ್ತೈಃ ಕಾಲೋದಕಾದಿಭಿಃ ಶೋಧಿತಮಿತ್ಯರ್ಥಃ । ಅವಸಾನಂ ದಹನಸ್ಥಾನಮಸ್ಮೈ ಮೃತಯಜಮಾನಸ್ಯಾರ್ಥಾಯ ದದಾತಿ । ದತ್ತವಾನ್ ॥

। ಪ್ರತಿಪದಾರ್ಥ ।

(ಎಲೈ ಪಿಶಾಚಾದಿಗಳೇ) **ಅತಃ**—ಈ ದಹನಪ್ರದೇಶದಿಂದ । **ಅಪೇತ**—ದೂರ ಸರಿಯಿರಿ । **ವೀತ**—ಬಹಳ ದೂರಕ್ಕೆ ಹೊರಟುಹೋಗಿರಿ । **ವಿ ಸರ್ಪತ ಚ**—ನಾನಾ ದಿಕ್ಕುಗಳಿಗೆ ಚದುರಿಹೋಗಿರಿ । **ಅಸ್ಮೈ**—ಈ ಮೃತನಿಗೆ । **ಪಿತರಃ**—ಪಿತೃಗಳು । **ಏತಂ ಲೋಕಂ**—ಈ ಸ್ಥಾನವನ್ನು । **ಅಕ್ರನ್**—ಸಿದ್ಧಪಡಿಸಿದ್ದಾರೆ । **ಯಮಃ**—ಯಮನೂ ಸಹ । **ಅಹೋಭಿಃ**—ಅಹಸ್ಸುಗಳೊಡನೆಯೂ । **ಅದ್ಭಿಃ**—ಉದಕಗಳೊಡನೆಯೂ । **ಅಕ್ತುಭಿಃ**—ರಾತ್ರಿಗಳೊಡನೆಯೂ । **ವ್ಯಕ್ತಂ**—ಸೇರಿಕೊಂಡಿರುವ । **ಅವಸಾನಂ**—ದಹನಸ್ಥಾನವನ್ನು । **ಅಸ್ಮೈ**—ಈ ಯಜಮಾನನಿಗೆ । **ದದಾತಿ**—ನಿಯತಮಾಡಿದ್ದಾನೆ.

। ಭಾವಾರ್ಥ ।

ಎಲೈ ಪಿಶಾಚಾದಿಗಳೇ, ಈ ದಹನಪ್ರದೇಶದಿಂದ ದೂರ ಸರಿಯಿರಿ. ಬಹಳ ದೂರದೇಶಕ್ಕೆ ಹೊರಟುಹೋಗಿರಿ. ನಾನಾ ದಿಕ್ಕುಗಳಿಗೆ ಚದುರಿಹೋಗಿರಿ. ಮೃತನಿಗೆ ಪಿತೃಗಳು ಈ ಸ್ಥಾನವನ್ನು ಸಿದ್ಧಪಡಿಸಿದ್ದಾರೆ ಯಮನೂ ಸಹ ಅಹಸ್ಸುಗಳೊಡನೆಯೂ, ಉದಕಗಳೊಡನೆಯೂ, ರಾತ್ರಿಗಳೊಡನೆಯೂ ಸೇರಿಕೊಂಡಿರುವ ಈ ದಹನಸ್ಥಾನವನ್ನು (ಮೃತನಿಗೆ) ಯಜಮಾನನಿಗೆ ಕೊಟ್ಟಿದ್ದಾನೆ.

## English Translation

Depart from hence, begone, go far off, (evil spirits); the Pitris have assigned this place to him, Yama has given him a place of cremation consecrated by days, streams and nights.

। ವಿಶೇಷವಿಷಯಗಳು ।

ಪಿತೃಕರ್ಮಾಂಗಭೂತವಾದ ಎಂದರೆ ಅಪರಕರ್ಮಗಳಲ್ಲಿ ಅಪೇತ ವೀತ ಎಂಬ ಈ ಋಕ್ಕನ್ನು ಪಠಿಸಿ ಶ್ಮಶಾನದಲ್ಲಿ ನಿರ್ದಿಷ್ಟವಾದ ಪ್ರದೇಶವನ್ನು ನೀರಿನಿಂದ ಪ್ರೋಕ್ಷಣಮಾಡಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ-

**ಗರ್ತೋದಕೇನ ಶಮೀಶಾಖಯಾ ತ್ರಿಃಪ್ರಸವ್ಯಮಾಯತನಂ ಪರಿವ್ರಜನ್ ಪ್ರೋಕ್ಷತ್ಯಪೇತ ವೀತ ವಿ ಚ ಸರ್ಪತಾತಃ** ಎಂಬ ಸೂತ್ರದಿಂದ (ಆ. ಗೃ. ೪-೬-೧೦) ವಿವೃತವಾಗಿರುವುದು.

ಶ್ಮಶಾನದಲ್ಲಿ ಮೃತಶರೀರವನ್ನು ದಹನಮಾಡುವ ಸ್ಥಳದಲ್ಲಿ ಇರಬಹುದಾದ ಪಿಶಾಚಾದಿಗಳನ್ನು ಆ ಸ್ಥಳಬಿಟ್ಟು ದೂರಸರಿದು ಹೋಗಬೇಕೆಂದು ಋಷಿಯು ಈ ಋಕ್ಕಿನಲ್ಲಿ ಹೇಳಿದ್ದಾನೆ.

**ಯಮೋ ದದಾತ್ಯವಸಾನಮಸ್ಮೈ**—ಯಮನೇ ಈ ದಹನಸ್ಥಾನವನ್ನು ಮೃತನಾದ ಈ ಪುರುಷನಿಗೋಸ್ಕರ ಕೊಟ್ಟಿದ್ದಾನೆ, ಎಂದರೆ ಕಲ್ಪಿಸಿದಾನೆ. ಪುರುಷನು ಮೃತನಾದನಂತರ ಅವನು ತನ್ನ ಲೋಕವಾದ ಪಿತೃಲೋಕಕ್ಕೆ ಬಂದೇ ಬರಬೇಕಾಗಿರುವುದರಿಂದ ಈ ವಿಷಯದಲ್ಲಿ ಯಮನು ಆಸಕ್ತಿಯನ್ನು ವಹಿಸಿ ತನ್ನ ಲೋಕಕ್ಕೆ ಬರಲಿರುವ ಪುರುಷನ ಮೃತಶರೀರವು ದಹನಮಾಡಲ್ಪಡುವ ಸ್ಥಾನವನ್ನು (ಶ್ಮಶಾನದಲ್ಲಿ) ಮೊದಲೇ ನಿಶ್ಚಯಿಸಿ ಕಲ್ಪಿಸಿರುವನು. ಆದ್ದರಿಂದ ಎಲೈ ಪಿಶಾಚಾದಿಗಳೇ, ನೀವು ಈ ಸ್ಥಾನವನ್ನು ಬಿಟ್ಟು ತೊಲಗಿಹೋಗಿ. ಈ ಪ್ರದೇಶವು ಮೃತನ ಸಂಸ್ಕಾರ ಕರ್ಮಕ್ಕಾಗಿ ಉದಕಾದಿಗಳಿಂದ ಶುದ್ಧಿಗೊಳಿಸಲ್ಪಟ್ಟಿದೆ. ಆದ್ದರಿಂದ ಈ ಪ್ರದೇಶವನ್ನು ಬಿಟ್ಟು ದೂರ ಸರಿದು ಹೋಗಿ ಎಂದು ಋಷಿಯು ವರ್ಣಿಸಿರುವನು. ಇಲ್ಲಿ ಅವಸಾನವೆಂದರೆ ದಹನಸ್ಥಾನ (Last resting place) ಮೃತದೇಹವನ್ನು ಅಗ್ನಿಯಿಂದ ದಹಿಸುವ ಸ್ಥಾನ. ಶ್ಮಶಾನದಲ್ಲಿ ಒಂದು ಸ್ಥಳವನ್ನು ನಿರ್ದೇಶಿಸಿ ಅದನ್ನು ಉದಕಪ್ರೋಕ್ಷಣಾದಿಗಳಿಂದ ಶುದ್ಧಿಗೊಳಿಸಿ ಅಲ್ಲಿ ದಹನಕ್ರಿಯೆಯು ನಡೆಯುವುದು. ಅದನ್ನೇ ಇಲ್ಲಿ **ಅವಸಾನಂ** ಎಂಬ ಶಬ್ದದಿಂದ ವರ್ಣಿಸಿದೆ.

॥ ಸಂಹಿತಾಪಾಠಃ ॥

**ಅತಿ ದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶಬಲೌ ಸಾಧುನಾ ಪಥಾ ।**
**ಅಥಾ ಪಿತೄನ್ತ್ಸುವಿದತ್ರಾಁ ಉಪೇಹಿ ಯಮೇನ ಯೇ ಸಧಮಾದಂ ಮದಂತಿ ॥ ೧೦ ॥**

॥ ಪದಪಾಠಃ ॥

**ಅತಿ । ದ್ರವ । ಸಾರಮೇಯೌ । ಶ್ವಾನೌ । ಚತುಃऽಅಕ್ಷೌ । ಶಬಲೌ । ಸಾಧುನಾ । ಪಥಾ ।**

**ಅಥ । ಪಿತೄನ್ । ಸುऽವಿದತ್ರಾನ್ । ಉಪ । ಇಹಿ । ಯಮೇನ । ಯೇ । ಸಧऽಮಾದಂ । ಮದಂತಿ ॥೧೦॥**

॥ ಸಾಯಣಭಾಷ್ಯಂ ॥

ಅನುಸ್ತರಣ್ಯಾ ವೃಕ್ಕೌ ಪಾರ್ಶ್ವಯೋರಾಮ್ರಫಲಾಕೃತೀ । **ತಾವುದ್ಧೃತ್ಯ ಪ್ರೇತಸ್ಯ ಹಸ್ತಯೋರ್ನಿದಧಾತ್ಯತಿ ದ್ರವ ಸಾರಮೇಯಾವಿತಿ ದ್ವಾಭ್ಯಾಂ । ಸೂತ್ರಿತಂ ಚ । ವೃಕ್ಕಾವುದ್ಧೃತ್ಯ ಪಾಣ್ಯೋರಾದಧ್ಯಾದತಿ ದ್ರವ ಸಾರಮೇಯೌ ಶ್ವಾನೌ । ಆ. ಗೃ. ೪-೩-೨೦ । ಇತಿ ॥**

**ಹೇ ಅಗ್ನೇ ಸಾಧುನಾ ಪಥಾ ಸಮೀಚೀನೇನ ಮಾರ್ಗೇಣ ಶ್ವಾನಾವಭಿಅತಿ ದ್ರವ । ಅತಿಕ್ರಮ್ಯ ಗಚ್ಛ । ಯಮಸಂಬಂಧಿನೌ ಯೌ ಶ್ವಾನೌ ಪ್ರೇತಸ್ಯ ಬಾಧಕೌ ತೌ ಪರಿತ್ಯಜ್ಯ ಸಮೀಚೀನೇನ ಮಾರ್ಗೇಣ ಪ್ರೇತಂ ನಯೇತ್ಯರ್ಥಃ । ಕೀದೃಶೌ ಶ್ವಾನೌ । ಸಾರಮೇಯೌ । ಸರಮಾ ನಾಮ ಕಾಚಿತ್ಪ್ರಸಿದ್ಧಾ ದೇವ-ಶುನೀ ತಸ್ಯಾಃ ಪುತ್ರೌ ಚತುರಕ್ಷೌ ಉಪರಿಭಾಗೇ ಪುನರಪ್ಯಕ್ಷಿದ್ವಯಂ ಯಯೋಸ್ತಾದೃಶೌ । ಅಥ ಶೋಭನಮಾರ್ಗೇಣ ಗಮನಾನಂತರಂ ಯೇ ಪಿತರೋ ಯಮೇನ ಸಧಮಾದಂ ಸಹರ್ಷಂ ಮದಂತಿ ಪ್ರಾಪ್ನುವಂತಿ ತಾನ್ಸುವಿದತ್ರಾನ್ ಸುಷ್ಠ್ವಭಿಜ್ಞಾನ್ಪಿತ್ನ್ಯಾನುಪೇಹಿ । ಉಪಗಚ್ಛ ।**

॥ ಪ್ರತಿಪದಾರ್ಥ ॥

(ಎಲೈ ಪ್ರೇತನೇ) **ಸಾಧುನಾ ಪಥಾ**—ಅತ್ಯುತ್ತಮವಾದ ಮಾರ್ಗವನ್ನನುಸರಿಸಿ । **ಸಾರಮೇಯೌ**—ಸರಮೆಯಲ್ಲಿ ಉತ್ಪನ್ನವಾದವೂ । **ಶಬಲೌ**—ವರ್ಣವೈವಿಧ್ಯವುಳ್ಳವೂ । **ಚತುರಕ್ಷೌ**—ನಾಲ್ಕು ಕಣ್ಣುಗಳುಳ್ಳವೂ ಆದ । **ಶ್ವಾನೌ**—ಯಮದೂತರನ್ನು (ಶ್ವಾನಗಳನ್ನು) । **ಅತಿ ದ್ರವ**—ತಪ್ಪಿಸಿಕೊಂಡು ದಾಟಿಹೋಗು । **ಅಥ**—ಅನಂತರ । **ಯೇ**—ಯಾವ ಪಿತೃಗಳು । **ಯಮೇನ**—ಯಮನೊಡನೆ । **ಸಧಮಾದಂ**—ಒಟ್ಟಿಗೆ ಕೂಡಿಕೊಂಡು । **ಮದಂತಿ**—ಹರ್ಷವನ್ನು ಹೊಂದುತ್ತಾರೋ । **ಸುವಿದತ್ರಾನ್**—ಉತ್ತಮವಾದ ಜ್ಞಾನಿಗಳಾದ । **ಪಿತ್ರ್ಯಾನ್**—ಆ ಪಿತೃಗಳೊಡನೆ । **ಉಪೇಹಿ**—ಸೇರಿಕೊ.

॥ ಭಾವಾರ್ಥ ॥

ಎಲೈ ಪ್ರೇತನೇ, ಉತ್ತಮವಾದ ಮಾರ್ಗವನ್ನನುಸರಿಸು. ಸರಮೆಯಲ್ಲಿ ಉತ್ಪನ್ನವಾದವೂ, ವರ್ಣವೈವಿಧ್ಯವುಳ್ಳವೂ, ನಾಲ್ಕು ಕಣ್ಣುಗಳುಳ್ಳವೂ ಆದ ಈ ಎರಡು ನಾಯಿಗಳನ್ನು ತಪ್ಪಿಸಿಕೊಂಡು ದಾಟಿಹೋಗು. ಅನಂತರ ಯಾವ ಪಿತೃಗಳು ಯಮನೊಡನೆ ಒಟ್ಟಿಗೆ ಕೂಡಿಕೊಂಡು ಹರ್ಷವನ್ನು ಹೊಂದುತ್ತಾರೆಯೋ, ಉತ್ತಮವಾದ ಜ್ಞಾನಿಗಳಾದ ಆ ಪಿತೃಗಳೊಡನೆ ಸೇರಿಕೊ.

## English Translation

Pass by a secure path beyond the two spotted four-eyed dogs, the progeny of Sarama, and join the wise Pitris who rejoice joyfully with Yama.

॥ ವಿಶೇಷವಿಷಯಗಳು ॥

ಅಪರಕರ್ಮದಲ್ಲಿ ಶವದ ಕೈಗಳಲ್ಲಿ ಮಾವಿನಕಾಯಿನ ಪ್ರಮಾಣದ ಎರಡು ಹಿಟ್ಟಿನ ಪಿಂಡಗಳನ್ನು ಇಟ್ಟು **ಅತಿದ್ರವ ಸಾರಮೇಯೌ** ಎಂದು ಮೊದಲಾಗುವ ಎರಡು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಗೃಹ್ಯ ಸೂತ್ರದ—**ವೃಕ್ಕಾವುದ್ಧೃತ್ಯ ಪಾಣ್ಯೋರಾದಧ್ಯಾದತಿ ದ್ರವ ಸಾರಮೇಯೌ ಶ್ವಾನೌ** ಎಂಬ ಸೂತ್ರದಿಂದ (ಆ. ಗೃ. ೪-೩-೨೦) ವಿವೃತವಾಗಿರುವುದು.

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಸರಮಾ ಎಂಬ ದೇವಶುನಿಯ ಮರಿಗಳಾದ ಸಾರಮೇಯ ಗಳೆಂಬ ಎರಡು ನಾಯಿಗಳ ವಿಷಯವನ್ನು ಪ್ರಸ್ತಾಪಿಸಲಾಗಿದೆ. ಸರಮಾ ಎಂಬ ದೇವಶುನಿಯು ಇಂದ್ರನ ಬಳಿಯಿದ್ದು ಪಣಿಗಳಿಂದ ಅಪಹೃತವಾದ ಗೋವುಗಳನ್ನು ಹುಡುಕುವ ವಿಷಯದಲ್ಲಿ ಅದು ದೇವತೆಗಳಿಗೆ ತುಂಬಾ ಸಹಾಯಮಾಡಿ

ರುವ ವಿಷಯವು ಈ ಮಂಡಲದ ೧೦೮ನೆಯ ಸೂಕ್ತದಲ್ಲಿ ವರ್ಣಿಸಲಾಗಿದೆ. ಆ ಸರಮೆಯು ಇಂದ್ರನ ಆಜ್ಞಾನುಸಾರವಾಗಿ ಗೋವುಗಳನ್ನು ಹುಡುಕುವುದಕ್ಕಾಗಿ ಹೊರಟು ಬಹುದೂರ ಪ್ರಯಾಣಮಾಡಿ ರಸಾ ಎಂಬ ಆಳವಾದ ಮತ್ತು ಬಹಳ ನೀರುಳ್ಳ ನದಿಯನ್ನು ದಾಟಿ ಪಣಿಗಳಿರುವ ಪ್ರದೇಶಕ್ಕೆ ಹೋಗಿ ಅಲ್ಲಿ ಅವರೊಡನೆ ಸಂಭಾಷಣೆ ನಡೆಸಿ ಅವರಿಗೆ ಇಂದ್ರನ ಮತ್ತು ದೇವತೆಗಳ ಶಕ್ತಿಯನ್ನು ವಿವರಿಸಿ ಗೋವುಗಳನ್ನು ಹಿಂದಕ್ಕೆ ಕೊಡಬೇಕೆಂದು ತಿಳಿಸಿದರೂ ಅವರು ಅದಕ್ಕೊಪ್ಪದಿರಲು ಅಲ್ಲಿಂದ ಹಿಂತಿರುಗಿ ಇಂದ್ರನಿಗೆ ನಡೆದ ಸಮಸ್ತವಿಷಯವನ್ನು ತಿಳಿಸಿ ಸಹಾಯಮಾಡಿದ ವಿಷಯವು ಆ ಸೂಕ್ತದಲ್ಲಿ ಉಕ್ತವಾಗಿದೆ. ಈ ಸರಮೆಯ ಮರಿಗಳಾದ ಸಾರಮೇಯೌ ಎಂಬ ಎರಡು ನಾಯಿಗಳು ಯಮನಬಳಿ ಅವನ ಸಂರಕ್ಷಕರಾಗಿದ್ದುಕೊಂಡು ಪಿತೃಲೋಕಕ್ಕೆ ಬರುವ ಜನರನ್ನು ಶಿಕ್ಷಿಸುತ್ತಿದ್ದವೆಂದೂ ಆದರೆ ಸತ್ಕರ್ಮಮಾಡಿದವರ ತಂಟೆಗೆ ಹೋಗುತ್ತಿರಲಿಲ್ಲವೆಂದೂ ಹೇಳಿದೆ. ಆದರೂ ಮೃತಶರೀರವನ್ನು ಬಿಟ್ಟು ಹೊರಟ ಪ್ರೇತವು ಪಿತೃಲೋಕಕ್ಕೆ ಹೋಗುವಾಗ ಈ ನಾಯಿಗಳು ತೊಂದರೆಕೊಡಬಹುದೆಂದು ಋಷಿಯು ಎಚ್ಚರಿಸಿರುವುದಲ್ಲದೆ, ೧೨ನೆಯ ಋಕ್ಕಿನಲ್ಲಿ ಅಗ್ನಿಯನ್ನು ಪ್ರಾರ್ಥಿಸುತ್ತಾ ಈ ನಾಯಿಗಳಿರುವ ಪ್ರದೇಶವನ್ನು ಬಿಟ್ಟು ಬೇರೆ ಮಾರ್ಗದಲ್ಲಿ ಬಳಸಿಕೊಂಡು ಪ್ರೇತವನ್ನು ಕರೆದುಕೊಂಡು ಹೋಗಬೇಕೆಂದು ಋಷಿಯು ವರ್ಣಿಸಿದಾನೆ.

ಪ್ರಕೃತ ಈ ಸೂಕ್ತದ ೧೦-೧೨ ನೆಯ ಋಕ್ಕುಗಳಲ್ಲಿ ವರ್ಣಿಸಿರುವ ವಿಷಯಗಳ ಆಧಾರದ ಮೇಲೆ–ಈ ಎರಡು ನಾಯಿಗಳು ಯಮನಬಳಿ ಇದ್ದು ಅವನ ಗೃಹಾದಿಗಳನ್ನು ರಕ್ಷಿಸುವುವು. ಇವುಗಳಿಗೆ ಪ್ರತಿಯೊಂದಕ್ಕೂ ನಾಲ್ಕು ಕಣ್ಣುಗಳಿರುವುವು. ಉಗ್ರವಾದ ಮೂತಿ ಇರುವುದು. ಇವು ಯಾವಾಗಲೂ ಎಚ್ಚರವಾಗಿದ್ದು ಪಿತೃಗಳು ಸಂಚರಿಸುವ ಮಾರ್ಗವನ್ನು ಕಾಯುತ್ತಿರುವವು. ಇವು ಯಮನ ದೂತರೆಂದು ಪ್ರಸಿದ್ಧಿಯನ್ನು ಪಡೆದಿರುವವು ಎಂಬ ವಿಷಯಗಳು ವ್ಯಕ್ತಪಡುವವು.

॥ ಸಂಹಿತಾಪಾಠಃ ॥

ಯೌ ತೇ ಶ್ವಾನೌ ಯಮ ರಕ್ಷಿತಾರೌ ಚತುರಕ್ಷೌ ಪಥಿರಕ್ಷೀ ನೃಚಕ್ಷಸೌ ।
ತಾಭ್ಯಾಮೇನಂ ಪರಿ ದೇಹಿ ರಾಜನ್ತ್ಸ್ವಸ್ತಿ ಚಾಸ್ಮಾ ಅನಮೀವಂ ಚ ಧೇಹಿ ॥ ೧೧ ॥

॥ ಪದಪಾಠಃ ॥

ಯೌ । ತೇ । ಶ್ವಾನೌ । ಯಮ । ರಕ್ಷಿತಾರೌ । ಚತುಃಽಅಕ್ಷೌ । ಪಥಿರಕ್ಷೀ ಇತಿ ಪಥಿಽರಕ್ಷೀ । ನೃಽಚಕ್ಷಸೌ ।
ತಾಭ್ಯಾಂ । ಏನಂ । ಪರಿ । ದೇಹಿ । ರಾಜನ್ । ಸ್ವಸ್ತಿ । ಚ । ಅಸ್ಮೈ । ಅನಮೀವಂ । ಚ । ಧೇಹಿ ॥ ೧೧ ॥

॥ ಸಾಯಣಭಾಷ್ಯಂ ॥

**ಹೇ ರಾಜನ್ ಹೇ ಯಮ ತೇ ತ್ವದೀಯೌ ಯೌ ಶ್ವಾನೌ ವಿದ್ಯೇತೇ ತಾಭ್ಯಾಂ ಹೇ ರಾಜನ್ ಯಮ ಏನಂ ಪ್ರೇತಂ ಪರಿ ದೇಹಿ । ರಕ್ಷಾರ್ಥಂ ಪ್ರಯಚ್ಛ । ಕೀದೃಶೌ ಶ್ವಾನೌ । ರಕ್ಷಿತಾರೌ ಯಮ–**

ಗೃಹಸ್ಯ ರಕ್ಷಕೌ ಚತುರಕ್ಷಾವಕ್ಷಿಚತುಷ್ಟಯಯುಕ್ತೌ ಪಥಿರಕ್ಷೀ ಮಾರ್ಗಸ್ಯ ರಕ್ಷಕೌ ನೃಚಕ್ಷಸೌ ಮನುಷ್ಯೈಃ ಖ್ಯಾಪ್ಯಮಾನೌ । ಶ್ರುತಿಸ್ಮೃತಿಪುರಾಣಾಭಿಜ್ಞಾಃ ಪುರುಷಾಸ್ತೌ ಪ್ರಖ್ಯಾಪಯಂತಿ । ತಾಭ್ಯಾಂ ಶ್ವಭ್ಯಾಂ ದತ್ತ್ವಾಸ್ಮೈ ಪ್ರೇತಾಯ ಸ್ವಸ್ತಿ ಚ ಕ್ಷೇಮಮನುಷ್ಯನಮೀವಂ ಚ ರೋಗಭಾವಮಪಿ ಧೇಹಿ । ಸಂಪಾದಯ ॥

॥ ಪ್ರತಿಪದಾರ್ಥ ॥

**ರಾಜನ್**—ಪ್ರಭುವಾದ । **ಯಮ**—ಎಲೈ ಯಮದೇವನೇ । **ರಕ್ಷಿತಾರೌ**—ನಿನ್ನ ಗೃಹವನ್ನು ರಕ್ಷಿಸ ಬಲ್ಲವೂ । **ಚತುರಕ್ಷೌ**—ನಾಲ್ಕು ಕಣ್ಣುಗಳುಳ್ಳವೂ । **ಪಥಿರಕ್ಷೀ**—ಮಾರ್ಗಗಳನ್ನು ರಕ್ಷಿಸುವವೂ । **ನೃಚಕ್ಷಸೌ**—ಪುರುಷರಿಂದ ಪ್ರಶಂಸಿಸಲ್ಪಡುವುವೂ ಆದ । **ಯೌ ತೇ ಶ್ವಾನೌ**—ಯಾವ ನಿನ್ನ ಶ್ವಾನಗಳಿವೆಯೋ । **ತಾಭ್ಯಾಂ**—ಅವುಗಳೊಡನೆ (ಅವುಗಳಿಗೆ)। **ಏನಂ**—ಈ ಪ್ರೇತವನ್ನು । **ಪರಿ ದೇಹಿ**—ರಕ್ಷಣಾರ್ಥವಾಗಿ ಅರ್ಪಿಸು । **ಅಸ್ಮೈ**—ಈ ಪ್ರೇತಕ್ಕೆ । **ಸ್ವಸ್ತಿ ಚ**—ಕಲ್ಯಾಣವನ್ನೂ । **ಅನಮೀವಂ ಚ**—ರೋಗರಾಹಿತ್ಯವನ್ನೂ । **ಧೇಹಿ**—ಉಂಟುಮಾಡು ।

॥ ಭಾವಾರ್ಥ ॥

ಪ್ರಭುವಾದ ಎಲೈ ಯಮನೇ, ನಿನ್ನ ಗೃಹವನ್ನು ರಕ್ಷಿಸಬಲ್ಲವೂ, ನಾಲ್ಕು ಕಣ್ಣುಗಳುಳ್ಳವೂ, ಮಾರ್ಗಗಳನ್ನು ರಕ್ಷಿಸುವವೂ, ಪುರುಷರಿಂದ ಪ್ರಶಂಸಿಸಲ್ಪಡುವುವೂ ಆದ ಯಾವ ನಿನ್ನ ಶ್ವಾನಗಳಿವೆಯೋ ಅವುಗಳಿಗೆ ಈ ಪ್ರೇತವನ್ನು ರಕ್ಷಣಾರ್ಥವಾಗಿ ಅರ್ಪಿಸು. (ಈ ಪ್ರೇತವು ಅವುಗಳಿಂದ ರಕ್ಷಿಸಲ್ಪಡಲಿ). ಈ ಪ್ರೇತಕ್ಕೆ ಕಲ್ಯಾಣವನ್ನೂ ರೋಗ ರಾಹಿತ್ಯವನ್ನೂ ಉಂಟುಮಾಡು.

## English Translation

Entrust him, O king, to your two dogs, which are your protectors, Yama, the four-eyed guardians of the road, renowned by men, and grant him prosperity and health.

॥ ವಿಶೇಷವಿಷಯಗಳು ॥

**ರಕ್ಷಿತಾರೌ**—ಈ ಶಬ್ದವು **ಶ್ವಾನೌ** ಎಂಬ ಶಬ್ದಕ್ಕೆ ವಿಶೇಷಣಪದವಾಗಿದೆ. ಈ ನಾಯಿಗಳು ಯಮನ ಮನೆಯನ್ನು ಕಾಯುತ್ತಿರುವುವು. ಅಥವಾ ಪಿತೃಲೋಕಕ್ಕೆ ಹೊಸದಾಗಿ ಬರುವ ಪಿತೃಗಳನ್ನು ರಕ್ಷಿಸುವುವು ಎಂದು ಬೇಕಾದರೂ ಅರ್ಥಮಾಡಬಹುದು.

**ಚತುರಕ್ಷೌ—ಅಕ್ಷಿಚತುಷ್ಟಯಯುಕ್ತೌ** । ಸಾಧಾರಣವಾದ ನಾಯಿಗಳಿಗೆ ಎರಡು ಕಣ್ಣುಗಳು ಮಾತ್ರವಿರುವುವು. ಆದರೆ ಈ ನಾಯಿಗಳಿಗೆ ನಾಲ್ಕು ಕಣ್ಣುಗಳಿರುವುವು ಎಂದರೆ ಒಂದೊಂದು ಪಾರ್ಶ್ವದಲ್ಲಿ ಎರಡೆರಡರಂತೆ ಒಟ್ಟು ನಾಲ್ಕು ಕಣ್ಣುಗಳಿರುವುವು. ಈ ನಾಲ್ಕು ಕಣ್ಣುಗಳು ಮಾರ್ಗವನ್ನೂ, ಗೃಹವನ್ನೂ ಜಾಗರೂಕತೆಯಿಂದ ಕಾಯುವುದಕ್ಕೆ ಸಹಾಯಕವಾಗಿರುವವು.

**ಪಥಿರಕ್ಷೀ—ಮಾರ್ಗಸ್ಯ ರಕ್ಷಕೌ** । ಇವು ಯಮನ ಗೃಹವನ್ನಲ್ಲದೆ ಪಿತೃಗಳು ಭೂಲೋಕದಿಂದ ಯಮನ ಬಳಿಗೆ ಬರುವ ಮಾರ್ಗವನ್ನೂ ಕಾಯುತ್ತಿರುವುವು. ಎಂದರೆ ಸತ್ಕರ್ಮಾನುಷ್ಠಾನಪರರಾಗಿದ್ದು ಮೃತರಾದ ಪ್ರೇತಗಳ

ತಂಟೆಗೆ ಹೋಗದೆ ಪಾಪಮಾಡಿದವರನ್ನು ಮಾತ್ರ ಶಿಕ್ಷಿಸುವ ಕಾರ್ಯದಲ್ಲಿ ಉದ್ಯುಕ್ತವಾಗಿರುವವು ಎಂದಭಿಪ್ರಾಯವು. ಆದ್ದರಿಂದ ಈ ನಾಯಿಗಳ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದಿರಬೇಕು ಎಂದು ಋಷಿಯು ಪ್ರೇತವನ್ನು ಎಚ್ಚರಿಸಿ ದ್ದಾನೆ ಮತ್ತು ಇವುಗಳ ಕಣ್ಣಿಗೆ ಬೀಳದಂತೆ ಸುತ್ತಿದ ದಾರಿಮಾರ್ಗದಿಂದ ಪ್ರೇತವನ್ನು ಯಮನಬಳಿಗೆ ಕರೆದುಕೊಂಡು ಹೋಗಬೇಕೆಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

**ನೃಚಕ್ಷಸೌ—ಮನುಷ್ಯೈಃಖ್ಯಾಪ್ಯಮಾನೌ । ಶ್ರುತಿಸ್ಮೃತಿಪುರಾಣಾಭಿಜ್ಞಾಃ ಪುರುಷಾಸ್ತೌ ಪ್ರಖ್ಯಾಪಯಂತಿ ।** ಮನುಷ್ಯರಿಂದ ಪ್ರಶಂಸಿಸಲ್ಪಟ್ಟಿರುವವು. ಎಂದರೆ ಶ್ರುತಿಸ್ಮೃತಿಪುರಾಣಾದಿಗಳನ್ನು ತಿಳಿದಿರುವ ಸಜ್ಜನರು ಈ ನಾಯಿಗಳ ಸತ್ಕೃತ್ಯಕಾರ್ಯವನ್ನು ಬಹಳವಾಗಿ ಹೊಗಳುತ್ತಿರುವರು. ಏಕೆಂದರೆ ಇವು ಸಜ್ಜನರ ತಂಟೆಗೆ ಹೋಗದೆ ಪಾಪಿಷ್ಠರನ್ನು ಮಾತ್ರ ಹಿಂಸಿಸುವವು ಎಂದು ಇವುಗಳ ಯುಕ್ತಾಯುಕ್ತವಿವೇಚನೆಯನ್ನು ಮುಕ್ತಕಂಠದಿಂದ ಹೊಗಳುತ್ತಾರೆ.

ಈ ಋಕ್ಕಿನ ಉತ್ತರಾರ್ಧದಲ್ಲಿ–ಯಮನಬಳಿಗೆ ಬರುವ ಪ್ರೇತಶರೀರಕ್ಕೆ ರೋಗಗಳ ಬಾಧೆಯಿಲ್ಲದಂತೆ ಚೆನ್ನಾಗಿ ಕಾಪಾಡಬೇಕೆಂದು ಯಮನನ್ನು ಪ್ರಾರ್ಥಿಸಲಾಗಿದೆ.

। ಸಂಹಿತಾಪಾಠಃ ।

ಉರೂಣಸಾವಸುತೃಪಾ ಉದುಂಬಲೌ ಯಮಸ್ಯ ದೂತೌ ಚರತೋ ಜನಾँ
ಅನು ।
ತಾವಸ್ಮಭ್ಯಂ ದೃಶಯೇ ಸೂರ್ಯಾಯ ಪುನರ್ದಾತಾಮಸುಮದ್ಯೇಹ
ಭದ್ರಂ ॥ ೧೨ ॥

॥ ಪದಪಾಠಃ ॥

ಉರುಽನಸೌ । ಅಸುಽತೃಪೌ । ಉದುಂಬಲೌ । ಯಮಸ್ಯ । ದೂತೌ । ಚರತಃ । ಜನಾನ್ । ಅನು ।
ತೌ । ಅಸ್ಮಭ್ಯಂ । ದೃಶಯೇ । ಸೂರ್ಯಾಯ । ಪುನಃ । ದಾತಾಂ । ಅಸುಂ । ಅದ್ಯ । ಇಹ । ಭದ್ರಂ ॥ ೧೨ ॥

। ಸಾಯಣಭಾಷ್ಯಂ ।

**ಯಮಸ್ಯ ಸಂಬಂಧಿನೌ ದೂತೌ ಶ್ವಾನೌ ಜನಾँ ಅನು ಪ್ರಾಣಿನೋ ಲಕ್ಷೀಕೃತ್ಯ ಸರ್ವತ್ರ ಚರತಃ । ಕೀದೃಶೌ । ಉರುಣಸೌ ದೀರ್ಘನಾಸಿಕಾಯುಕ್ತೌ ಅಸುತೃಪೌ ಪರಕೀಯಾನ್ಪ್ರಾಣಾನ್ ಸ್ವೀಕೃತ್ಯ ತೈಸ್ತೃಪ್ಯಂತೌ ಉದುಂಬಲಾವುರುಬಲೌ ವಿಸ್ತೀರ್ಣಬಲೌ । ತಾವುಭೌ ದೂತೌ ಸೂರ್ಯಾಯ ದೃಶಯೇ ಸೂರ್ಯಸ್ಯ ದರ್ಶನಾರ್ಥಮದ್ಯ ದಿನ ಇಹ ಕರ್ಮಣಿ ಭದ್ರಮಮುಂ ಸಮೀಚೀನಂ ಪ್ರಾಣಂ ಪುನರಸ್ಮಭ್ಯಂ ದಾತಾಂ । ಅದತ್ತಾಂ ।**

॥ ಪ್ರತಿಪದಾರ್ಥ ॥

**ಉರೂಣಸೌ**—ದೀರ್ಘವಾದ ನಾಸಿಕವುಳ್ಳವೂ । **ಅಸುತೃಪೌ**—ಇತರರ ಪ್ರಾಣಗಳನ್ನು ಹೀರಿ ತೃಪ್ತಿಯನ್ನು ಪಡೆಯತಕ್ಕವೂ । **ಉದುಂಬಲೌ**—ಅತ್ಯಧಿಕವಾದ ಶಕ್ತಿಯುಳ್ಳವೂ । **ಯಮಸ್ಯ**—ಯಮನಿಗೆ । **ದೂತೌ**—ದೂತರೂ ಆದ ಈ ನಾಯಿಗಳು । **ಜನಾನ್ ಅನು**—ಪ್ರಾಣಿಗಳನ್ನು ಅರಸುತ್ತ । **ಚರತಃ**—ಸಂಚರಿಸುತ್ತವೆ । **ತೌ**—ಆ ಶ್ವಾನಗಳೆರಡೂ । **ಸೂರ್ಯಾಯ**—ಸೂರ್ಯನ । **ದೃಶಯೇ**—ದರ್ಶನಾರ್ಥವಾಗಿ । **ಅದ್ಯ**—ಇಂದು । **ಇಹ**—ಈ ಯಾಗಕರ್ಮದಲ್ಲಿ । **ಭದ್ರಂ**—ಮಂಗಳಕರವಾದ । **ಅಸುಂ**—ಪ್ರಾಣವನ್ನು । **ಪುನಃ**—ತಿರುಗಿಯೂ । **ಅಸ್ಮಭ್ಯಂ**—ನಮಗೆ । **ದಾತಾಂ**—ಕೊಡಲಿ.

॥ ಭಾವಾರ್ಥ ॥

ಉದ್ದವಾದ ಮೂತಿಯುಳ್ಳವೂ, ಇತರರ ಪ್ರಾಣಗಳನ್ನು ಹೀರಿ ತೃಪ್ತಿಯನ್ನು ಪಡೆಯತಕ್ಕವೂ, ಅತ್ಯಧಿಕವಾದ ಶಕ್ತಿಯುಳ್ಳವೂ, ಯಮನಿಗೆ ದೂತರೂ ಆದ ಸಾರಮೇಯಗಳು ಪ್ರಾಣಿಗಳನ್ನು ಅರಸುತ್ತ ಸಂಚರಿಸುತ್ತವೆ. ಆ ಶ್ವಾನಗಳೆರಡೂ ಸೂರ್ಯನ ದರ್ಶನಾರ್ಥವಾಗಿ ಇಂದು ಈ ಯಾಗ ಕರ್ಮದಲ್ಲಿ ಮಂಗಳಕರವಾದ ಪ್ರಾಣವನ್ನು ಪುನಃ ನಮಗೆ ಕೊಡಲಿ.

English Translation

The messengers of Yama, broad-nosed, and of exceeding strength, and satiating themselves with the life (of mortals), hunt mankind ; may they allow us this day a prosperous existence here, that we may look upon the sun.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಯಮನ ನಾಯಿಗಳು ಜನರ ಮಧ್ಯೆ ಸಂಚರಿಸುತ್ತಿರುವವೆಂದು ಹೇಳಲಾಗಿದೆ. ಎಂದರೆ ಮರಣೋನ್ಮುಖರಾದ ಪ್ರಾಣಿಗಳನ್ನು ಯಮನಬಳಿಗೆ ಒಯ್ಯುವುದಕ್ಕಾಗಿ ಹುಡುಕುತ್ತಿರುತ್ತವೆ. ಅಥರ್ವವೇದದಲ್ಲಿಯೂ ಅನೇಕಕಡೆ ಈ ನಾಯಿಗಳ ವರ್ಣನೆ ಇದೆ. ಕೆಲವುಕಡೆ ಈ ನಾಯಿಗಳು ಎರಡೆಂದೂ ಇನ್ನು ಕೆಲವುಕಡೆ ಅನೇಕವೆಂದೂ ಇವುಗಳು ಪ್ರಾಣಿಗಳು ಮೃತರಾದನಂತರ ಅವರ ಪ್ರೇತಗಳನ್ನು ಯಮನಬಳಿಗೆ ಕೊಂಡೊಯ್ಯುವ ದೂತರೆಂದೂ ಹೇಳಲಾಗಿದೆ

**ತಾವಸ್ಮಭ್ಯಂ**.... .... .... ...... **ಭದ್ರಂ**—ಎಂಬ ಈ ಋಕ್ಕಿನ ಉತ್ತರಾರ್ಧದಲ್ಲಿ-ಜನರ ಮಧ್ಯದಲ್ಲಿ ಸಂಚರಿಸುತ್ತಾ ಅವರ ಪ್ರಾಣಗಳನ್ನು ಕೊಂಡೊಯ್ಯುವ ಯಮನ ನಾಯಿಗಳು ನಮ್ಮ ತಂಟೆಗೆ ಬರದೆ ಎಂದರೆ ನಮ್ಮನ್ನು ಯಮನಬಳಿಗೆ ಕೊಂಡೊಯ್ಯದೆ ಇನ್ನು ಕೆಲವು ಕಾಲ ಈ ಭೂಮಿಯಮೇಲೆ ಸೂರ್ಯನನ್ನು ನೋಡುತ್ತಾ ಜೀವಿಸಿರುವಂತೆಯೂ ನಮಗೆ ಮಂಗಳವನ್ನುಂಟುಮಾಡುವಂತೆಯೂ ಇರಬೇಕೆಂದು ಪ್ರಾರ್ಥಿಸಲಾಗಿದೆ.

॥ ಸಂಹಿತಾಪಾಠಃ ॥

**ಯಮಾಯ ಸೋಮಂ ಸುನುತ ಯಮಾಯ ಜುಹುತಾ ಹವಿಃ ।**
**ಯಮಂ ಹ ಯಜ್ಞೋ ಗಚ್ಛತ್ಯಗ್ನಿದೂತೋ ಅರಂಕೃತಃ ॥ ೧೩ ॥**

॥ ಪದಪಾಠಃ ॥

ಯಮಾಯ । ಸೋಮಂ । ಸುನುತ । ಯಮಾಯ । ಜುಹುತ । ಹವಿಃ ।
ಯಮಂ । ಹ । ಯಜ್ಞಃ । ಗಚ್ಛತಿ । ಅಗ್ನಿಽದೂತಃ । ಅರಂಽಕೃತಃ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜಃ ಯಮಾಯ ಯಮದೇವತಾರ್ಥಂ ಸೋಮಂ ಸುನುತ । ಲತಾತ್ಮಕಂ ಸೋಮಮಭಿಷುಣುತ । ತಥಾ ಯಮಾರ್ಥಂ ಹವಿರ್ಜುಹುತ । ಅಗ್ನಿರ್ದೂತೋ ಯಸ್ಮಿನ್ಯಜ್ಞೇ ಸೋಽಯಮಗ್ನಿದೂತಃ । ಅಗ್ನೇರ್ದೂತತ್ವಮನ್ಯತ್ರಾಮ್ನಾತಂ । ಅಗ್ನಿರ್ದೇವಾನಾಂ ದೂತ ಆಸೀತ್ । ತೈ. ಸಂ. ೨-೫-೮-೫ । ಇತಿ । ಅರಂಕೃತೋ ಬಹುಭಿರ್ದ್ರವ್ಯೈರಲಂಕಾರರೂಪೈರ್ಯುಕ್ತಃ ತಾದೃಶೋ ಯಜ್ಞೋ ಯಮಂ ಹ ಯಮಮೇವ ಗಚ್ಛತಿ

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) **ಯಮಾಯ**— ಯಮನನ್ನುದ್ದೇಶಿಸಿ । **ಸೋಮಂ**— ಸೋಮವನ್ನು । **ಸುನುತ**— ಹಿಂಡಿರಿ । **ಯಮಾಯ**— ಯಮನನ್ನುದ್ದೇಶಿಸಿ । **ಹವಿಃ**— ಹವಿಸ್ಸನ್ನು । **ಜುಹುತ**— ಅರ್ಪಿಸಿರಿ । **ಅಗ್ನಿದೂತಃ**— ಅಗ್ನಿಯನ್ನೇ ದೂತನನ್ನಾಗಿ ಉಳ್ಳದ್ದೂ । **ಅರಂಕೃತಃ**— ಅನೇಕ ದ್ರವ್ಯಗಳಿಂದ ಅಲಂಕೃತವಾದುದೂ ಆದ । **ಯಜ್ಞಃ**— ಈ ಯಜ್ಞವು । **ಯಮಂ ಹ**— ಯಮನನ್ನೇ । **ಗಚ್ಛತಿ**— ಸಮಾಪಿಸುತ್ತದೆ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಯಮನನ್ನುದ್ದೇಶಿಸಿ ಸೋಮವನ್ನು ಹಿಂಡಿರಿ. ಯಮನನ್ನುದ್ದೇಶಿಸಿ ಹವಿಸ್ಸನ್ನು ಅರ್ಪಿಸಿರಿ. ಅಗ್ನಿಯನ್ನೇ ದೂತನನ್ನಾಗಿ ಉಳ್ಳದ್ದೂ, ಅನೇಕ ದ್ರವ್ಯಗಳಿಂದ ಅಲಂಕೃತವಾದುದೂ, ಆದ ಈ ಯಜ್ಞವು ಯಮನನ್ನು ಸಮಾಪಿಸುತ್ತದೆ.

## English Translation

Pour out the Soma for Yama; to Yama offer the oblation, the decorated sacrifice of which Agni is the messenger proceeds to Yama.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಎರಡು ಋಕ್ಕುಗಳಲ್ಲಿಯೂ ಯಮನನ್ನುದ್ದೇಶಿಸಿ ಅಗ್ನಿಯಲ್ಲಿ ಹವಿಸ್ಸನ್ನು ಅರ್ಪಿಸಬೇಕೆಂದು ಋತ್ವಿಗ್ಜನರನ್ನು ಋಷಿಯು ಪ್ರಾರ್ಥಿಸಿದಾನೆ. ಯಮನಾಗಲಿ, ಇತರ ದೇವತೆಗಳಾಗಲಿ ಯಜ್ಞಭೂಮಿಗೆ ಪ್ರತ್ಯಕ್ಷವಾಗಿ ಬಂದು ಆಹುತಿಯನ್ನು ಸ್ವೀಕರಿಸುವವರಲ್ಲವಾದ್ದರಿಂದ, ಅವರಿಗೆ ಅರ್ಪಿಸುವ ಹವಿರಾದಿಗಳನ್ನು ಸಂಸ್ಕೃತಾಗ್ನಿಯಲ್ಲಿಯೇ ಹೋಮಮಾಡಬೇಕಾಗಿರುವುದು. ಈ ಋಕ್ಕಿನಲ್ಲಿರುವ ಅರಂಕೃತಃ— ಅಲಂಕೃತಃ ಸಂಸ್ಕಾರ

ಮಾಡಿ ಅಲಂಕೃತವಾದ ಅಗ್ನಿಯು ಯಮನನ್ನುದ್ದೇಶಿಸಿ ತನ್ನಲ್ಲಿ ಅರ್ಪಿಸಿದ ಆಹುತಿಗಳನ್ನು ದೂತಭಾವದಿಂದ ಯಮನಲ್ಲಿಗೆ ಕೊಂಡೊಯ್ದು ಅವನಿಗೆ ಸೇರುವಂತೆ ಮಾಡಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

ಸಂಹಿತಾಪಾಠಃ ।

ಯಮಾಯ ಘೃತವದ್ಧವಿರ್ಜುಹೋತ ಪ್ರ ಚ ತಿಷ್ಠತ ।
ಸ ನೋ ದೇವೇಷ್ವಾ ಯಮದ್ದೀರ್ಘಮಾಯುಃ ಪ್ರ ಜೀವಸೇ ॥ ೧೪ ॥

॥ ಪದಪಾಠಃ ॥

ಯಮಾಯ । ಘೃತऽವತ್ । ಹವಿಃ । ಜುಹೋತ । ಪ್ರ । ಚ । ತಿಷ್ಠತ ।
ಸಃ । ನಃ । ದೇವೇಷು । ಆ । ಯಮತ್ । ದೀರ್ಘಂ । ಆಯುಃ । ಪ್ರ । ಜೀವಸೇ ॥ ೧೪ ॥

। ಸಾಯಣಭಾಷ್ಯಂ ।

ಹೇ ಋತ್ವಿಜಃ ಯೂಯಂ ಯಮಾಯ ಘೃತವದಾಜ್ಯೇನ ಸಂಯುಕ್ತಂ ಹವಿಃ ಪುರೋಡಾಶಾದಿಕಂ ಜುಹೋತ । ಪ್ರ ಚ ತಿಷ್ಠತ । ಯಮಂ ಯೂಯಮುಪತಿಷ್ಠಧ್ವಂ ಚ । ದೇವೇಷು ಮಧ್ಯೇ ಸ ಯಮೋ ದೇವಃ ಪ್ರ ಜೀವಸೇ ಪ್ರಕೃಷ್ಟಜೀವನಾರ್ಥಂ ನೋऽಸ್ಮಾಕಂ ದೀರ್ಘಮಾಯುರಾ ಯಮತ್ । ಪ್ರಯಚ್ಛತು ।

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) **ಯಮಾಯ**—ಯಮನನ್ನುದ್ದೇಶಿಸಿ । **ಘೃತವತ್**—ಆಜ್ಯೋಪೇತವಾದ **ಹವಿಃ**—ಹವಿಸ್ಸನ್ನು । **ಜುಹೋತ**—ಅರ್ಪಿಸಿರಿ । **ಪ್ರ ತಿಷ್ಠತ ಚ**—ಅವನನ್ನು ಸಮೀಪಿಸಿ ಪ್ರಾರ್ಥಿಸಿರಿ । **ದೇವೇಷು**—ದೇವತೆಗಳ ನಡುವೆ । **ಸಃ**—ಪ್ರಸಿದ್ಧನಾದ ಯಮನು । **ಪ್ರ ಜೀವಸೇ**—ಉತ್ತಮವಾದ ಜೀವನಕ್ಕಾಗಿ । **ನಃ**—ನಮಗೆ । **ದೀರ್ಘಮಾಯುಃ**—ದೀರ್ಘಾಯುಸ್ಸನ್ನು । **ಆ ಯಮತ್**—ಕೊಡಲಿ ।

। ಭಾವಾರ್ಥ ।

ಎಲೈ ಋತ್ವಿಕ್ಕುಗಳೇ. ಯಮನನ್ನುದ್ದೇಶಿಸಿ ಆಜ್ಯೋಪೇತವಾದ ಹವಿಸ್ಸನ್ನು ಅರ್ಪಿಸಿರಿ. ಅವನನ್ನು ಸಮೀಪಿಸಿ ಪ್ರಾರ್ಥಿಸಿರಿ. ದೇವತೆಗಳ ನಡುವೆ ಪ್ರಸಿದ್ಧನಾದ ಯಮನು ಉತ್ತಮವಾದ ಜೀವನಕ್ಕಾಗಿ ನಮಗೆ ದೀರ್ಘಾಯುಸ್ಸನ್ನು ಕೊಡಲಿ.

## English Translation

Offer the oblation of clarified butter to Yama, and stand nigh (to the altar); It is he who among the gods gives us a long life to live

॥ ವಿಶೇಷವಿಷಯಗಳು ॥

ಎಲೈ ಋತ್ವಿಕ್ಕುಗಳೇ ನೀವು ಯಮನನ್ನುದ್ದೇಶಿಸಿ ಅಗ್ನಿಯಲ್ಲಿ ಆಜ್ಯ(ತುಪ್ಪ)ಮಿಶ್ರಿತವಾದ ಹವಿಸ್ಸನ್ನು ಮಂತ್ರಪೂರ್ವಕವಾಗಿ ಅರ್ಪಿಸಿರಿ. ಅದರಿಂದ ತೃಪ್ತಿಗೊಂಡ ದೇವತೆಗಳ ಮಧ್ಯದಲ್ಲಿರುವ ಯಮನು ನಾವು ಬಹುಕಾಲ ಜೀವಿಸಿರುವಂತೆ ದೀರ್ಘವಾದ ಆಯುಸ್ಸನ್ನು ಕೊಟ್ಟು ನಮ್ಮನ್ನು ಅನುಗ್ರಹಿಸಲಿ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

**ಯಮಾಯ ಮಧುಮತ್ತಮಂ ರಾಜ್ಞೇ ಹವ್ಯಂ ಜುಹೋತನ ।**
**ಇದಂ ನಮ ಋಷಿಭಿಃ ಪೂರ್ವಜೇಭ್ಯಃ ಪೂರ್ವೇಭ್ಯಃ ಪಥಿಕೃದ್ಭ್ಯಃ ॥ ೧೫ ॥**

॥ ಪದಪಾಠಃ ॥

ಯಮಾಯ । ಮಧುಮತ್ಽತಮಂ । ರಾಜ್ಞೇ । ಹವ್ಯಂ । ಜುಹೋತನ ।
ಇದಂ । ನಮಃ । ಋಷಿಽಭ್ಯಃ । ಪೂರ್ವಽಜೇಭ್ಯಃ । ಪೂರ್ವೇಭ್ಯಃ । ಪಥಿಕೃತ್ಽಭ್ಯಃ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜಃ ಯಮಾಯ ರಾಜ್ಞೇ ಮಧುಮತ್ತಮಮತಿಶಯೇನ ಮಧುರಂ ಹವ್ಯಂ ಪುರೋಡಾಶಾದಿಕಂ ಹವಿರ್ಜುಹೋತನ । ಜುಹುತ । ಪೂರ್ವಜೇಭ್ಯಃ ಸೃಷ್ಟ್ಯಾದಾವುತ್ಪನ್ನೇಭ್ಯಃ ಅತ ಏವ ಪೂರ್ವೇಭ್ಯೋಽಸ್ಮತ್ತಃ ಪೂರ್ವಭಾವಿಭ್ಯಃ ಪಥಿಕೃದ್ಭ್ಯಃ ಶೋಭನಮಾರ್ಗಕಾರಿಭ್ಯ ಋಷಿಭ್ಯ ಇದಂ ಪ್ರತ್ಯಕ್ಷಂ ಯಥಾ ಭವತಿ ತಥಾ ನಮೋಽಸ್ತು ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) **ರಾಜ್ಞೇ**—ಪ್ರಭುವಾದ । **ಯಮಾಯ**— ಯಮನನ್ನುದ್ದೇಶಿಸಿ । **ಮಧುಮತ್ತಮಂ**—ಅತ್ಯಂತ ಮಧುರವಾದ । **ಹವ್ಯಂ**—ಹವಿಸ್ಸನ್ನು । **ಜುಹೋತನ**—ಅರ್ಪಿಸಿರಿ । **ಪೂರ್ವಜೇಭ್ಯಃ**—ಹಿಂದೆ ಉತ್ಪನ್ನರಾದವರೂ । **ಪೂರ್ವೇಭ್ಯಃ**—ಪ್ರಾಚೀನರೂ । **ಪಥಿಕೃದ್ಭ್ಯಃ**—ಮಾರ್ಗದರ್ಶಕರೂ ಆದ । **ಋಷಿಭ್ಯಃ**—ಋಷಿಗಳಿಗೆ । **ಇದಂ ನಮಃ**—ನನ್ನ ಈ ನಮಸ್ಕಾರಗಳು ।

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಪ್ರಭುವಾದ ಯಮನನ್ನುದ್ದೇಶಿಸಿ ಅತ್ಯಂತ ಮಧುರವಾದ ಹವಿಸ್ಸನ್ನು ಅರ್ಪಿಸಿರಿ. ಹಿಂದೆ ಉತ್ಪನ್ನರಾದವರೂ, ಪ್ರಾಚೀನರೂ, ಮಾರ್ಗದರ್ಶಕರೂ ಆದ ಋಷಿಗಳಿಗೆ ನನ್ನ ಈ ನಮಸ್ಕಾರಗಳು.

## English Translation

Offer to the royal Yama this most sweet oblation; (let) this our adoration (be addressed) to the ancient sages, the first followers of (virtuous) paths.

॥ ವಿಶೇಷವಿಷಯಗಳು ॥

ಯಮನನ್ನುದ್ದೇಶಿಸಿ ಅಗ್ನಿಯಲ್ಲಿ ಹವಿಸ್ಸನ್ನು ಆಹುತಿದ್ವಾರಾ ಅರ್ಪಿಸಬೇಕೆಂದು ಋತ್ವಿಗ್ಜನರನ್ನು ಋಷಿಯು ಪ್ರಾರ್ಥಿಸಿರುವುದಲ್ಲದೆ ಈ ಋಕ್ಕಿನ ಉತ್ತರಾರ್ಧದಲ್ಲಿ-ಹಿಂದೆ ಈ ಭೂಮಿಯಮೇಲೆ ಜೀವಿಸಿದ್ದು ಮೃತರಾಗಿ ಈಗ ಯಮನ ಬಳಿ ಪಿತೃಲೋಕದಲ್ಲಿ ವಾಸಿಸುತ್ತಿರುವ ಋಷಿಗಳಿಗೂ, ಮೃತರಾದ ನಮ್ಮ ಹಿರಿಯರಿಗೂ, ಯಮಲೋಕಕ್ಕೆ ಹೋಗುವ ದಾರಿಯನ್ನು ಸ್ಪಷ್ಟಪಡಿಸಿರುವ ಇತರ ಪಿತೃಗಳಿಗೂ ಇಗೋ ನಮಸ್ಕರಿಸುವೆನು ಎಂದು ಋಷಿಯು ತನ್ನ ಪಿತೃಗಳನ್ನು ವಂದಿಸಿರುವನು.

॥ ಸಂಹಿತಾಪಾಠಃ ॥

ತ್ರಿಕದ್ರುಕೇಭಿಃ ಪತತಿ ಷಳುರ್ವೀರೇಕಮಿದ್ಬೃಹತ್ ।
ತ್ರಿಷ್ಟುಬ್ಗಾಯತ್ರೀ ಛಂದಾಂಸಿ ಸರ್ವಾ ತಾ ಯಮ ಆಹಿತಾ ॥ ೧೬ ॥

॥ ಪದಪಾಠಃ ॥

ತ್ರಿಽಕದ್ರುಕೇಭಿಃ । ಪತತಿ । ಷಟ್ । ಉರ್ವೀಃ । ಏಕಂ । ಇತ್ । ಬೃಹತ್ ।
ತ್ರಿಽಸ್ತುಪ್ । ಗಾಯತ್ರೀ । ಛಂದಾಂಸಿ । ಸರ್ವಾ । ತಾ । ಯಮೇ । ಆಽಹಿತಾ ॥ ೧೬ ॥

॥ ಸಾಯಣಭಾಷ್ಯಂ ॥

ತ್ರಿಕದ್ರುಕೇಭಿಃ । ದ್ವಿತೀಯಾರ್ಥೇ ತೃತೀಯೈಷಾ । ತ್ರಿಕದ್ರುಕಾನ್ । ಜ್ಯೋತಿರ್ಗೌರಾಯುರಿತಿ ತ್ರಯೋ ಯಾಗವಿಶೇಷಾಸ್ತ್ರಿಕದ್ರುಕಾ ಉಚ್ಯಂತೇ । ತಾನ್ಪ್ರತ್ಯಂಗಭಾವಾಯ ಸಂರಕ್ಷಣಾರ್ಥಂ ಚ ಪತತಿ । ಯಮಸ್ತಾನ್ ಪ್ರಾಪ್ನೋತಿ । ಷಟ್ಸಂಖ್ಯಾಕಾ ಉರ್ವೀರ್ಭೂಮೀಃ ಕೃತಾಕೃತಪ್ರತ್ಯವೇಕ್ಷಣಾಯ ಪ್ರಾಪ್ನೋತಿ । ತಾಶ್ಚೋರ್ವ್ಯಃ ಶಾಖಾಂತರಮಂತ್ರೇ ಸಮಾಮ್ನಾತಾಃ । ಷಣ್ಮೋರ್ವೀರಂಹಸಸ್ಪಾಂತು ದ್ಯೌಶ್ಚ ಪೃಥಿವೀ ಚಾಪಶ್ಚೌಷಧಯಶ್ಚೋರ್ಕ್ಚ ಸೂನೃತಾ ಚೇತಿ । ಏಕಮಿದೇಕಮೇವ ಬೃಹದ್ಮಹಜ್ಜಗದ್ಯಮಶ್ಚ ಪ್ರತಿಪಾಲನೀಯಃ ಪ್ರಾಪ್ನೋತಿ । ಕಿಂಚ ಯಾನಿ ತ್ರಿಷ್ಟುಬ್ಗಾಯತ್ರ್ಯಾದೀನಿ ಛಂದಾಂಸಿ ಸಂತಿ ಸರ್ವಾಣಿ ತಾನಿ ಛಂದಾಂಸಿ ಯಮ ಆಹಿತಾನಿ । ಋತ್ವಿಗ್ಭಿಃ ಸ್ತುತಿತ್ವೇನಾವಸ್ಥಿತಾನಿ ॥

॥ ಪ್ರತಿಪದಾರ್ಥ ॥

ತ್ರಿಕದ್ರುಕೇಭಿಃ—ಜ್ಯೋತಿಃ ಗೌಃ, ಆಯುಃ ಎಂಬ ಮೂರು ಯಾಗಗಳನ್ನೂ । ಪತತಿ—ಯಮನು ಪಡೆಯುತ್ತಾನೆ । ಷಟ್ ಉರ್ವೀಃ—ವಿಸ್ತೃತವಾದ ಆರು ಪೃಥ್ವಿಯನ್ನೂ ಆಕ್ರಮಿಸುತ್ತಾನೆ । ಬೃಹತ್—ಮಹ

ದ್ರೂಪವುಳ್ಳ ಏಕಮಿತ್—ಜಗತ್ತನ್ನೆಲ್ಲ ವ್ಯಾಪಿಸುತ್ತಾನೆ। ತ್ರಿಷ್ಟುಪ್—ತ್ರಿಷ್ಟುಪ್ ಸಂಜ್ಞಕವೂ। ಗಾಯತ್ರೀ—ಗಾಯತ್ರ್ಯಾದಿ ಸಂಜ್ಞಕವೂ ಆದ। **ಛಂದಾಂಸಿ**—ಯಾವ ಸಪ್ತಚ್ಛಂದಸ್ಸುಗಳು ಪ್ರಸಿದ್ಧವಾಗಿವೆಯೋ। **ಸರ್ವಾ ತಾ**—ಅವುಗಳೆಲ್ಲವೂ। **ಯಮೇ**—ಯಮನಲ್ಲಿ। **ಆಹಿತಾ**—ಸ್ಥಾಪಿತವಾಗಿವೆ।

॥ ಭಾವಾರ್ಥ ॥

ಜ್ಯೋತಿಃ ಗೌಃ, ಆಯುಃ ಎಂಬ ಮೂರು ಯಾಗಗಳಲ್ಲೂ ಯಮನು ಭಾಗಿಯಾಗುತ್ತಾನೆ. ವಿಸ್ತೃತವಾದ ಆರು ಪೃಥ್ವಿಗಳನ್ನೂ ಆಕ್ರಮಿಸುತ್ತಾನೆ. ಮಹದ್ರೂಪವುಳ್ಳ ಜಗತ್ತನ್ನೆಲ್ಲಾ ವ್ಯಾಪಿಸುತ್ತಾನೆ. ತ್ರಿಷ್ಟುಪ್; ಗಾಯತ್ರೀ ಮುಂತಾದ ಯಾವ ಸಪ್ತಚ್ಛಂದಸ್ಸುಗಳು ಪ್ರಸಿದ್ಧವಾಗಿವೆಯೋ ಅವೆಲ್ಲವೂ ಯಮನಲ್ಲಿ ಸ್ಥಾಪಿತವಾಗಿವೆ

## English Translation

(Yama) acquires the three Trikadruka srcrifices; the six earths, the one great (moving world); the Trishtubh, Gayatri, all the sacred metres converge in Yama.

॥ ವಿಶೇಷವಿಷಯಗಳು ॥

**ಷಳ್ ಉರ್ವೀಃ**—ಆರು ವಿಧ ಭೂಮಿಗಳನ್ನು ಎಂದರೆ **ಷಣ್ಮೋರ್ವೀರಂಹಸಸ್ಪಾಂತು ದ್ಯೌಶ್ಚ ಪೃಥಿವೀ ಚಾಪಶ್ಚೌಷಧಯಶ್ಚೋರ್ಕ್ ಚ ಸೂನೃತಾ ಚ** । ಎಂದರೆ ಯಮನು **ಜ್ಯೋತಿಃ ಗೌಃ ಆಯುಃ** ಎಂಬ ಅಗ್ನಿಷ್ಟೋಮದ ಮೂರು ದಿನಗಳಲ್ಲಿ ನಡೆಯುವ ಕರ್ಮಗಳಲ್ಲಿ ಬಂದು ಭಾಗವಹಿಸುವುದಲ್ಲದೆ, ಆರು ವಿಧ ಭೂಮಿ ಎಂದರೆ ಅಂತರಿಕ್ಷ, ಭೂಮಿ, ಉದಕ, ಓಷಧಿವನಸ್ಪತಿಗಳು, ಊರ್ಕ್, ಸೂನೃತ ಎಂಬ ಪ್ರದೇಶಗಳಲ್ಲಿರಬಹುದಾದ ಸಮಸ್ತ ಪ್ರಾಣಿಗಳು ಮಾಡುವ ಚಲನವಲನಗಳನ್ನು ಎಂದರೆ ಸುಕೃತದುಷ್ಕೃತಗಳನ್ನು ವೀಕ್ಷಿಸುವಸಲುವಾಗಿ ಅಲ್ಲಿಗೆಲ್ಲಾ ಬರುತ್ತಾನೆ ಎಂಬ ವಿವರಣೆಯು ಇಲ್ಲಿ ಉಕ್ತವಾಗಿದೆ. ಎಂದರೆ ಯಮನು ಬರದಿರುವ ಸ್ಥಳವಿಲ್ಲ, ಎಲ್ಲಾ ಕಡೆಗೂ ಬಂದು ಪ್ರಾಣಿಗಳ ಕರ್ಮಾದಿಗಳನ್ನು ಯಾವಾಗಲೂ ನೋಡುತ್ತಿರುತ್ತಾನೆ. ಇಂತಹ ಯಮನನ್ನು ಋತ್ವಿಗ್ಜನರು ತ್ರಿಷ್ಟುಪ್, ಗಾಯತ್ರೀ, ಮೊದಲಾದ ಅನೇಕ (ಸಮಸ್ತ) ಛಂದಸ್ಸಿನ ಮಂತ್ರಗಳಿಂದಲೂ ಸ್ತುತಿಸುತ್ತಾರೆ ಎಂದು ಋಷಿಯು ಯಮನನ್ನು ಪ್ರಶಂಸೆಮಾಡಿರುವನು.

ಬೃಹದ್ದೇವತೆಯೆಂಬ ಗ್ರಂಥದಲ್ಲಿ ಈ ಸೂಕ್ತದ ವಿಷಯವಾಗಿ ಹೇಳಿರುವುದನ್ನು ಇಲ್ಲಿ ಕೊಟ್ಟಿದೆ—

**ಪರೇಯಿವಾಂಸಮಿತ್ಯತ್ರ ಸ್ತೂಯತೇ ಮಧ್ಯಮೋ ಯಮಃ ।**
**ಅಥರ್ವಾಣೋಽಥ ಭೃಗವೋಽಙ್ಗಿರಸಃ ಪಿತರಃ ಸಹ ।**
**ಷಷ್ಠ್ಯಾಂ ದೇವಗಣಾಸ್ತತ್ರ ಸಂಸ್ತೂಯಂತೇ ದ್ವ್ಯಭಕ್ತಯಃ ।**
**ಪಿತೃಭಿಶ್ಚಾಂಗಿರೋಭಿಶ್ಚ ಸಂಸ್ತುತೋ ದೃಶ್ಯತೇ ಯಮಃ ।**
**ಮಂತ್ರೇಷು ಬಹುಶಃ ಪಾದೇ ವಿವಸ್ವಂತಂ ಪಿತಾ ಹಿ ಸಃ ।**
**ಸಂಸ್ಕಾರ್ಯಪ್ರೇತಸಂಯುಕ್ತೈಃ ಪಿತೃಭಿಃ ಸ್ತೂಯತೇ ಯಮಃ ।**
**ಪ್ರೇಹಿ ಪ್ರೇಹೀತಿ ತಿಸೃಷು ಪ್ರೇತಾಶಿಷ ಉದಾಹೃತಾಃ ।**

**ಪಿತೄಣಾಂ ಹಿ ಪತಿರ್ದೇವೋ ಯಮಸ್ತಸ್ಮಾತ್ಸ ಸೂಕ್ತಭಾಕ್ ।**
**ಅತಿ ದ್ರವ ತೃಚೇ ಶ್ವಾನೌ ಪರಂ ಪಿತ್ರ್ಯಮುದೀರತಾಂ ।**

(ಬೃ. ದೇ. ೭-೧೫ ರಿಂದ ೧೫)

ಮೇಲಿನ ಶ್ಲೋಕಗಳಲ್ಲಿ ಹೇಳಿರುವ ವಿವರಣೆಗಳನ್ನು ನಾವು ಈ ಸೂಕ್ತದ ಪೀಠಿಕೆಯಲ್ಲಿಯೂ ಋಕ್ಕುಗಳ ವಿಶೇಷ ವಿಷಯ ಗಳಲ್ಲಿಯೂ ವಿವರಿಸಿರುವುದರಿಂದ ಇಲ್ಲಿ ಪುನಃ ಅವುಗಳ ವಿವರಣೆಯು ಅವಶ್ಯಕವಿಲ್ಲ. ಅಪರಕರ್ಮಗಳಲ್ಲಿ ಮಾಡುವ ಪ್ರೇತಸಂಸ್ಕಾರಾದಿಗಳಲ್ಲಿ ಈ ಋಕ್ಕುಗಳ ವಿನಿಯೋಗವಿರುವುದು.



## ಹದಿನೈದನೆಯ ಸೂಕ್ತವು.

### ಪೀಠಿಕೆ

ಉದೀರತಾಂ ಎಂಬ ಈ ಸೂಕ್ತದ ಋಕ್ಕುಗಳನ್ನೂ ಮತ್ತು ಇದರ ಮುಂದಿನ ಸೂಕ್ತವಾದ **ಮೈನಮಗ್ನೇ** ಎಂಬ ಸೂಕ್ತದ ಋಕ್ಕುಗಳನ್ನೂ ಶ್ಮಶಾನದಲ್ಲಿ ಮಾಡುವ ಅಪರಕರ್ಮಗಳಲ್ಲಿ ಉಪಯೋಗಿಸುವರು ಎಂದು ಬೃಹದ್ದೇವತೆ ಯಲ್ಲಿ ಹೇಳಿದೆ—

ಪರಂ ಪಿತ್ರ್ಯಮುದೀರತಾಂ ।
**ಉತ್ತರೇಣ ತು ಸೂಕ್ತೇನ ಸ್ಮಶಾನೇ ಕರ್ಮ ಶಂಸತಿ ।**
**ಪಿತೃದೇವಾಸುರಾಣಾಂ ಚ ಅಭವನ್ನಗ್ನಯಸ್ತ್ರಯಃ ।**
**ಹವ್ಯಕವ್ಯವಹೌ ಚೋಭೌ ಸಹರಕ್ಷಾಶ್ಚ ನಾಮ ಯಃ ।**
**ತತ್ರ ಮೈನಮಿತಿ ತ್ವೇತತ್ಕವ್ಯವಾಹನಸಂಸ್ತುತಿಃ ।**
**ಇತರಾಣಿ ತು ದೈವ್ಯಸ್ಯ ಸ್ತುತಿರ್ನಾಸ್ತ್ಯಾಸುರಸ್ಯ ಚ ।**

(ಬೃ. ದೇ. ೭, ೧೫-೧೬)

**ಉದೀರತಾಂ** (೧೫ ನೆಯ ಸೂಕ್ತ) ಮತ್ತು **ಮೈನಮಗ್ನೇ** (೧೬ ನೆಯ ಸೂಕ್ತ) ಗಳಲ್ಲಿರುವ ಋಕ್ಕುಗಳು ಶ್ಮಶಾನ ದಲ್ಲಿ ನೆರವೇರಿಸುವ ಅಪರಕರ್ಮಗಳನ್ನು ವಿವರಿಸುವವು. ಈ ಅಪರಕರ್ಮದಲ್ಲಿ ಉಪಯೋಗಿಸುವ ಅಗ್ನಿಗೆ ಕವ್ಯವಾಹ ಎಂದು ಹೆಸರು ಕರ್ಮಗಳನ್ನನುಸರಿಸಿ ಆಯಾ ಕರ್ಮಗಳಲ್ಲಿ ಉಪಯೋಗಿಸುವ ಅಗ್ನಿಗಳು ಮೂರು ಎಂದು ಇಲ್ಲಿ ಹೇಳಿದೆ. ಯಜ್ಞಯಾಗಾದಿಗಳಲ್ಲಿ ದೇವತೆಗಳಿಗೆ ಹವಿಸ್ಸನ್ನು ಒಯ್ಯುವ ಅಗ್ನಿಗೆ ಹವ್ಯವಾಹನನೆಂದೂ, ಪಿತೃಕರ್ಮ ಗಳಲ್ಲಿ ಪಿತೃಗಳಿಗೆ ಕವ್ಯವನ್ನು ವಹಿಸುವ ಅಗ್ನಿಗೆ ಕವ್ಯವಾಹನನೆಂದೂ ರಾಕ್ಷಸಾದಿಗಳಿಂದ ಯಜ್ಞಕರ್ಮವನ್ನು ಕಾಪಾ ಡುವ ಅಗ್ನಿಗೆ ಸಹರಕ್ಷಾಃ ಎಂದೂ ಅಗ್ನಿಯಲ್ಲಿ ಮೂರು ಪ್ರಭೇದಗಳಿರುವವು. ಪ್ರಕೃತ ಸೂಕ್ತಗಳಲ್ಲಿ ಅಪರಕರ್ಮದ ವಿವರಣೆ ಇರುವುದರಿಂದ ಕವ್ಯವಾಹನನೆಂಬ ಅಗ್ನಿಯ ಸ್ತುತಿಯೇ ವಿಶೇಷವಾಗಿದೆ. ಇದಲ್ಲದೆ ಮೈನಮಗ್ನೇ ಎಂಬ ಸೂಕ್ತದಲ್ಲಿ ಕವ್ಯವಾಹನಾಗ್ನಿಯ ಸ್ತುತಿಯೂ ಇತರ ದೇವತೆಗಳ ಸ್ತುತಿಯೂ ಇರುವುದು. ಕೆಲವುಕಡೆ ಅಗ್ನಿಯನ್ನು ಕ್ರವ್ಯಾದ ಎಂಬ ಶಬ್ದದಿಂದ ಸ್ತುತಿಸಲಾಗಿರುವುದು. ಕ್ರವ್ಯ ಎಂದರೆ ಮಾಂಸವು, ಕ್ರವ್ಯಾದ ಎಂದರೆ ಮಾಂಸವನ್ನು

ಭಕ್ಷಿಸುವವನು ಎಂದರ್ಥವು. ಅಗ್ನಿಯು ಮಾಂಸವನ್ನು ಭಕ್ಷಿಸುವನೇ ಎಂದರೆ, ಮೃತಶರೀರವನ್ನು ಅಗ್ನಿ-ವುದರಿಂದ ಅಗ್ನಿಯು ಅದನ್ನು ದಹಿಸುವನು. ಅದ್ದರಿಂದ ಮೈನಮಗ್ನೇ (ಋ. ಸಂ. ೧೦-೧೬-೧) ಶೃತಂ ಯದಾ (೧೦-೧೬-೨) ಕ್ರವ್ಯಾದಮಗ್ನಿಂ (೧೦-೧೬-೯) ಯೋ ಅಗ್ನಿಃ ಕ್ರವ್ಯವಾಹನಃ (೧೦-೧೬-೧೧) ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯನ್ನು ಕ್ರವ್ಯಾದನೆಂಬ ವಿಶೇಷಣದಿಂದ ಸ್ತುತಿಸಲಾಗಿದೆ

**ಅಂತ್ಯಕ್ರಿಯೆ**—ವೇದಗಳಲ್ಲಿ ಸಾವಿಗೆ ಸಂಬಂಧಿಸಿದ ವಾಕ್ಯಗಳೇ ಕಡಿಮೆ. ಅಪರೂಪವಾಗಿ ಪ್ರಸಕ್ತವಾದರೂ ಮರಣವು ಶತ್ರುಗಳಿಗೆ ಉಂಟಾಗಲೆಂದೂ, ತನಗೆ ದೀರ್ಘಾಯುಸ್ಸು ಇರಲೆಂದೂ ಬೇಡುವುದಕ್ಕೆ ಮಾತ್ರ. ಶವಸಂಸ್ಕಾರಕಾಲದಲ್ಲಿ ಮಾತ್ರ ಆಮುಷ್ಮಿಕದ ಯೋಚನೆ ಬರುತ್ತದೆ. ಶವಗಳನ್ನು ಸುಡುವುದು ಮತ್ತು ಹೂಳುವುದು, ಎರಡೂ ರೂಢಿಯಲ್ಲಿದ್ದುವು. ೧೦-೧೬ರಲ್ಲಿ, ದಹನಸಂಸ್ಕಾರವೂ, ಮತ್ತೊಂದರಲ್ಲಿ (೧೦-೧೮-೧೦ರಿಂದ ೧೩) ಹೂಳುವುದೂ ಉಕ್ತವಾಗಿದೆ. 'ಮಣ್ಣಿನ ಮನೆಯೂ ಒಂದು ಕಡೆ ಉಕ್ತವಾಗಿದೆ. (೭-೮೯-೧). ಅಗ್ನಿಯಲ್ಲಿ ದಗ್ಧರಾದ ಪಿತೃಗಳು ಮತ್ತು ದಗ್ಧರಾಗದೇ ಇದ್ದವರು, ಎರಡು ತರಹವೂ ಕಂಡು ಬರುತ್ತದೆ (೧೦-೧೫-೧೪, ಅ. ವೇ. ೧೮-೨-೩೪). ಮೃತರು ಊರ್ಧ್ವಲೋಕಕ್ಕೆ ಹೋಗಲು ದಹನವೇ ಸರಿಯಾದ ಮಾರ್ಗ. ಕರ್ಮಗಳನ್ನು ವಿವರಿಸುವ ಗ್ರಂಥಗಳಲ್ಲಿ, ದಗ್ಧರಾದವರ ಭಸ್ಮ ಮತ್ತು ಅಸ್ಥಿ, ಶಿಶುಗಳು ಮತ್ತು ಸನ್ಯಾಸಿಗಳನ್ನು ಮಾತ್ರ ಹೂಳಬೇಕೆಂದು ವಿಧಿಯಿದೆ (ಆ. ಗೃ. ಸೂ. ೪-೧ನ್ನು ನೋಡಿ).

ಅಂತ್ಯಕ್ರಿಯೆಯೊಡನೆಯೇ, ಆಮುಷ್ಮಿಕಜೀವನದ ಇತಿಹಾಸವು ಸಂಬಂಧಿಸಿದೆ. ಅಗ್ನಿಯು ಮೃತದೇಹವನ್ನು ಬೇರೆ ಲೋಕಕ್ಕೆ, ಪಿತೃಗಳ ಮತ್ತು ದೇವತೆಗಳ ಸಮೀಪಕ್ಕೆ ತೆಗೆದುಕೊಂಡು ಹೋಗುತ್ತಾನೆ (೧೦-೧೬-೧ರಿಂದ ೪; ೧೦-೧೭-೩). ಮರ್ತ್ಯನನ್ನು ಅತಿಶ್ರೇಷ್ಠವಾದ ಅಮೃತತ್ವದಲ್ಲಿ ಇಡುತ್ತಾನೆ (೧-೩೧-೭). ಪುರಾತನರೂ, ಆದಿಯಲ್ಲಿ ಜನಿಸಿದವರೂ ಆದ ಋಷಿಗಳು ಹೋಗಿರುವ, ಅತ್ಯುನ್ನತವಾದ ಸೂರ್ಯನ ಸ್ಥಾನಕ್ಕೆ, ಅತ್ಯಂತ ಎತ್ತರದಲ್ಲಿರುವ ಸ್ವರ್ಗಕ್ಕೆ, ಅಥವಾ ಸತ್ಪುರುಷರ ಲೋಕಕ್ಕೆ, ದೇವಲೋಕದ ಪಕ್ಷಿಯಾದ ಅಗ್ನಿಯ ಮೂಲಕ, ಮನುಷ್ಯರು ಹೋಗುತ್ತಾರೆ (ವಾ. ಸಂ. ೧೮-೫೧, ೫೨), ಗಾರ್ಹಪತ್ಯಾಗ್ನಿಯು ಮೃತರನ್ನು ಸತ್ಪುರುಷರ ಲೋಕಕ್ಕೆ ಒಯ್ಯುತ್ತಾನೆ (ಅ. ವೇ. ೧-೧೨೦-೧) ಅಗ್ನಿಯು ಮೊದಲು ಮೃತನ ದೇಹವನ್ನು ದಹಿಸಿ ಅನಂತರ ಸಜ್ಜೀವಿಗಳ ಲೋಕದಲ್ಲಿ ಇಡುತ್ತಾನೆ (ಅ. ವೇ. ೧೮-೩-೭೧). ಶವಗಳನ್ನು ದಹಿಸುವ ಅಗ್ನಿಯು (ಕ್ರವ್ಯಾದ) ದೇವತೆಗಳಿಗೆ ಆಹುತಿಯನ್ನು ವಹಿಸುವ ಅಗ್ನಿಗಿಂತಲೂ ಭಿನ್ನನು (೧೦-೧೬-೯). ತನ್ನ ಭಾಗವಾದ ಅಜವನ್ನು ದಹಿಸಿ, ದೇಹವನ್ನು ಕಾಪಾಡಬೇಕೆಂದು ಅಗ್ನಿಗೆ ಪ್ರಾರ್ಥನೆ (೧೦-೧೬-೪). ಕರ್ಮಮಾಡುವಾಗ ಶವವನ್ನು ಕೃಷ್ಣವರ್ಣದ ಅಜದ ಚರ್ಮದ ಮೇಲಿಡುತ್ತಾರೆ ಮತ್ತು ಬಲಿಕೊಡುವ ಸಂದರ್ಭದಲ್ಲಿ ಮೃಗ ಅಥವಾ ಅಜವನ್ನು ಬಲಿಕೊಡುತ್ತಾರೆ. ದೇಹಕ್ಕೆ ಯಾವುದಾದರೂ ಪಕ್ಷಿ, ಮೃಗ, ಇರುವೆ, ಅಥವಾ ಹಾವಿನಿಂದ ಆಗಿರಬಹುದಾದ ಗಾಯಗಳನ್ನು ಗುಣಪಡಿಸಬೇಕೆಂದು ಅಗ್ನಿ ಮತ್ತು ಸೋಮರಿಗೆ ಕರ್ಮಕಾಲದಲ್ಲಿ ಪ್ರಾರ್ಥನೆ ಸಲ್ಲಿಸುತ್ತಾರೆ (೧೦-೧೬-೬).

ಮೃತಾತ್ಮನು ಧೂಮದೊಡನೆ ಸ್ವರ್ಗಲೋಕಕ್ಕೆ ಹೋಗುತ್ತಾನೆಂದು ನಂಬಿಕೆ (ಆ. ಗೃ. ಸೂ. ೪-೪-೭). ಅದು ಬಹಳ ದೂರದ ದಾರಿ; ಅಲ್ಲಿ ಪೂಷಣನು ರಕ್ಷಕನು ಮತ್ತು ಸವಿತೃವು ದಾರಿ ತೋರಿಸು

ಪವನು (೧೦-೧೬-೪). ಮೃತವಾದ ಅಜವು ಪಿತೃಗಳ ಸಮೀಪಕ್ಕೆ ಮುಂಚೆ ಹೋಗಿ, ಮೃತಾತ್ಮನ ಆಗಮನವನ್ನು ತಿಳಿಸುತ್ತದೆ; ಹೀಗೆ ಹೋಗುವಾಗ, ಮಾರ್ಗದಲ್ಲಿ ಕಗ್ಗತ್ತಲೆಯನ್ನು ಹಾದು, ಅನಂತರ, ಪಿತೃಗಳ ಸ್ಥಾನವಾದ ಸ್ವರ್ಗದ ಮೂರನೆಯ ಅಂತಸ್ತನ್ನು ಸೇರಬೇಕು (ಅ. ವೇ. ೯-೫-೧, ೩; ೮-೧-೮ನ್ನು ಹೋಲಿಸು)

ಆಮುಷ್ಮಿಕಜೀವನಕ್ಕೆ ಉಪಯೋಗವಾಗಲೆಂದು, ಮೃತಜೀವನಿಗೆ, ಆಭರಣಗಳು ಮತ್ತು ವಸ್ತ್ರಗಳನ್ನು ಒಪ್ಪಿಸುತ್ತಾರೆ; ಈ ಪದ್ಧತಿಯು ಈಗಲೂ ರೂಢಿಯಲ್ಲಿದೆ (೧೮-೪-೩೧). ಅವನ ಪತ್ನಿ ಮತ್ತು ಆಯುಧಗಳನ್ನೂ ಶವದೊಡನೆ ದಹಿಸುತ್ತಿದ್ದರೆಂಬುದಕ್ಕೆ ಅಲ್ಲಲ್ಲಿ ಚಿಹ್ನೆಗಳಿವೆ (೧೦-೧೮-೮, ೯). ಶವಕ್ಕೆ ಒಂದು ಹೊರೆ ಕಟ್ಟಿಗೆಯನ್ನು ಕಟ್ಟುತ್ತಿದ್ದರು. ಮೃತನ ಪ್ರೇತವು ಹಿಂದಕ್ಕೆ ಬರುವುದಕ್ಕೆ ದಾರಿ ತಿಳಿಯದಿರಲೆಂಬುದೇ ಇದರ ಉದ್ದೇಶ (ಅ. ವೇ. ೫-೧೯-೧೨; ಋ. ವೇ. ೧೦-೧೮-೨ ಮತ್ತು ೧೯-೯೭-೧೬ಗಳನ್ನು ಹೋಲಿಸಿ).

ಆತ್ಮ—ಅಗ್ನಿ ಅಥವಾ ಸಮಾಧಿಗಳು ದೇಹವನ್ನು ಮಾತ್ರ ಅಳಿಸುತ್ತವೆ; ಆದರೆ ಮೃತನ ವ್ಯಕ್ತಿತ್ವವನ್ನು ಅಳಿಸಲಾರವು. ಅಜ್ಞಾನಾವಸ್ಥೆಯಲ್ಲಿಯೂ ಜೀವವನ್ನು ದೇಹದಿಂದ ಬೇರ್ಪಡಿಸಬಹುದು ಮತ್ತು ದೇಹ ನಷ್ಟವಾದ ಮೇಲೂ ಜೀವವಿರುತ್ತದೆ ಎಂತಲೇ ನಂಬಿಕೆ. ೧೦-೫೮ನೆಯ ಸೂಕ್ತ ಪೂರ್ತಿಯಾಗಿ, ಸತ್ತವನಂತೆ ಬಿದ್ದಿರುವವನ ಜೀವವನ್ನು ಹಿಂದಕ್ಕೆ ಬಾರೆಂದು ಕರೆದಿದೆ. ಋಗ್ವೇದದಲ್ಲಿ ಜೀವನಿಗೆ ದೇಹಾಂತರ ಪ್ರಾಪ್ತಿಯುಂಟೆಂಬ ನಂಬಿಕೆಗೆ ಆಧಾರವಿದ್ದಂತೆ ತೋರುವುದಿಲ್ಲ; ಆದರೆ ಬ್ರಾಹ್ಮಣದಲ್ಲಿ ಯಾಗವನ್ನು ವಿಹಿತರೀತಿಯಲ್ಲಿ ಮಾಡದೇ ಇದ್ದವನು, ಮೃತನಾಗಿ ಪುನಃ ಜನ್ಮವೆತ್ತಿ ಮರಣಾಧೀನನಾಗುತ್ತಾನೆ ಎಂದು ಹೇಳಿದೆ (ಶ. ಬ್ರಾ. ೧೦-೪-೩-೧೦). ಪ್ರಾಣ, ಆತ್ಮಾ, ಅಸು (ದೇಹಶಕ್ತಿ, ೧-೧೧೩-೧೬; ೧-೧೪೦-೮), ಮನಸ್ಸು ಯೋಚನೆ ಮತ್ತು ಭಾವನೆಗಳಿಗೆ ಆಶ್ರಯ ಮತ್ತು ಹೃದಯದಲ್ಲಿರುವುದು; (೮-೮೯-೫), ಇವುಗಳೆಲ್ಲವೂ ಜೀವವಾಚಕಗಳು. ಅನೇಕ ವಾಕ್ಯಗಳು ಅಥರ್ವವೇದದಲ್ಲಿ ವಿಶೇಷವಾಗಿ—ಅಸು ಅಥವಾ ಮನಸ್ಸು ಇದ್ದರೆ ಬದುಕು, ಇಲ್ಲದಿದ್ದರೆ ಸಾವು ಎಂದು ಹೇಳುತ್ತವೆ. ಅಸುನೀತಿ ಅಥವಾ ಅಸುನೀತ ಎಂಬುದು, ಮೃತರ ಜೀವಗಳನ್ನು ಈ ಲೋಕದಿಂದ ಊರ್ಧ್ವಲೋಕಕ್ಕೆ ಕರೆದುಕೊಂಡು ಹೋಗುವ ದಾರಿಗೆ ಹೆಸರು (೧೦-೧೫-೪; ೧೦-೧೬-೨). ಅಂತ್ಯಕ್ರಿಯೆಯಲ್ಲಿ ಪ್ರಯೋಗಿಸುವ ಮಂತ್ರಗಳಲ್ಲಿ ಅಸು ಅಥವಾ ಮನಸ್ ಎಂಬ ಶಬ್ದಗಳನ್ನು ಉಪಯೋಗಿಸುತ್ತಿಲ್ಲ; ಪಿತೃ, ಮಾತೃ, ಮೊದಲಾದುವುಗಳನ್ನೇ ಉಪಯೋಗಿಸುತ್ತಾರೆ. ಆದುದರಿಂದ ಆತ್ಮವೆಂಬುದು ನೆರಳಿನಂತಲ್ಲ; ಅದಕ್ಕೂ ವ್ಯಕ್ತಿತ್ವವಿದೆ. ಮನುಷ್ಯರು ದೇಹವನ್ನು ತ್ಯಜಿಸಿದ ಮೇಲೆಯೇ; ಅವರಿಗೆ ಅಮರತ್ವಪ್ರಾಪ್ತಿ (ಶ. ಬ್ರಾ. ೧೦-೪-೩-೯) ಯಾದರೂ, ಸ್ವರ್ಗಾದಿ ಲೋಕಗಳೂ ಪ್ರಾಕೃತವೇ ಆದುದರಿಂದ, ಶವಕ್ಕೂ ಮುಖ್ಯಸ್ಥಾನವಿದೆ. ಬೇರೆ ಲೋಕಗಳ ಅಸ್ತಿತ್ವದಲ್ಲಿ ದೇಹಕ್ಕೂ ಭಾಗವಿದೆ (೧೦-೧೬-೫, ಅ. ವೇ. ೮-೨-೨೬). ದೋಷಗಳು ಯಾವುವೂ ಇಲ್ಲದ (ಅ. ವೇ. ೬-೧೨೦-೩) ದೇಹವನ್ನು ಸಾಧಾರಣವಾದ ಪಾರ್ಥಿವ ದೇಹವೆನ್ನುವುದು ಸಾಧುವಲ್ಲ, ಅಗ್ನಿಯ ಪ್ರಭಾವದಿಂದ ಪರಿಪೂತವಾದ (೧೦-೧೬-೬ನ್ನು ಹೋಲಿಸಿ) ದೇಹ ಅಥವಾ ಈಚಿನ ವೇದಾಂತಿಗಳ 'ಸೂಕ್ಷ್ಮದೇಹ' ವೆನ್ನಬಹುದು. ದಹನವಾದ ಮೇಲೆ ಶೇಖರಿಸಬೇಕಾದ ಅಗ್ನಿಯು ನಾಶವಾದರೆ, ಅದೇ ಕಠಿಣವಾದ ಶಿಕ್ಷೆಯೆಂದು ಹೇಳಿದೆ (ಶ. ಬ್ರಾ. ೧೧-೬-೩-೧೧; ೧೪-೬-೯-೨೮); ಇದರಿಂದ ಶವದ ಸ್ಥಾನವು ಎಷ್ಟು ಮಹತ್ತರವಾದುದೆಂದು ತಿಳಿಯಬಹುದು. ೧೦-೧೬-೩ರಲ್ಲಿ, ಮೃತನ ನೇತ್ರವನ್ನು ಸೂರ್ಯನ ಸಮೀಪಕ್ಕೂ, ಶ್ವಾಸವನ್ನು ವಾಯುವಿನ ಹತ್ತಿರಕ್ಕೂ ಹೋಗೆಂದು ಹೇಳಿದೆ. ಅಗ್ನಿಯು ಮೃತನನ್ನು

ಪರಲೋಕಕ್ಕೆ ಕರೆದುಕೊಂಡು ಹೋಗುತ್ತಾನೆ ಎಂದ ಮೇಲೆ, ಒಂದೊಂದು ಅಂಗವು ಒಂದೊಂದು ಕಡೆ ಹೋಗುತ್ತದೆ ಎಂಬುದು ಸೂಕ್ತವಾಗಿ ಕಾಣುವುದಿಲ್ಲ. ಪ್ರಾಯಶಃ ವಿರಾಟ್ಪುರುಷನ ವರ್ಣನೆಗನುಸಾರವಾಗಿ ಈ ರೀತಿ ಹೇಳಿರಬಹುದು. ಅದೇ ವಾಕ್ಯದಲ್ಲಿ (೧೦.೧೬.೩ ; ೧೦-೫೮-೭ರಲ್ಲಿಯೂ ಇದೆ), ಮೃತನ ಜೀವವು ನೀರು ಅಥವಾ ಸಸ್ಯಗಳನ್ನು ಪ್ರವೇಶಿಸುತ್ತದೆ ಎಂದಿದೆ ; ಪ್ರಾಯಶಃ ಇದು ದೇಹಾಂತರ ಪ್ರವೇಶದ ಪ್ರಾರಂಭವಿರಬಹುದು.

ಪಿತೃಗಳು ಅನುಸರಿಸಿದ ಮಾರ್ಗದಲ್ಲೇ ಮುಂದುವರಿಯುತ್ತಾ (೧೦-೧೪-೭), ಮೃತರ ಜೀವವು ನಿತ್ಯ ತೇಜಸ್ಸಿನ ಲೋಕಕ್ಕೆ ಹೋಗುತ್ತದೆ (೯-೧೧೩-೭) ; ಆಗ ದೇವತೆಗಳಿಗೆ ಸಮವಾದ ಕಾಂತಿವಿಶಿಷ್ಟನಾಗಿ (ಅ. ವೇ. ೧೧-೧-೩೭) ರಥದಲ್ಲಿ ಅಥವಾ ರೆಕ್ಕೆಗಳ ಮೇಲೆ (ಅ. ವೇ. ೪.೩೪.೪) ಅಥವಾ ಭೂತಗಳನ್ನು ಕೊಲ್ಲುವಾಗ ಅಗ್ನಿಯು ಉಪಯೋಗಿಸುವ ರೆಕ್ಕೆಗಳ ಮೇಲೆ (ವಾ. ಸ. ೧೮-೫೨) ಹೋಗುತ್ತಾನೆ. ಮರುತದಿಂದ ಮೇಲಕ್ಕೆ ತೇಲಿಸಲ್ಪಟ್ಟು, ಹಿತವಾದ ವಾಯುವನ್ನು ಸೇವಿಸುತ್ತಾ ಮತ್ತು ಮಳೆ ಹನಿಗಳಿಂದ ತಂಪುಮಾಡಲ್ಪಟ್ಟು, ಜೀವನು ತನ್ನ ಪುರಾತನ ರೂಪವನ್ನು ಪುನಃ ಪಡೆಯುತ್ತಾನೆ (ಅ. ವೇ. ೧೮-೨-೨೧ರಿಂದ ೨೬) ಮತ್ತು ವೈಭವ ವಿಶಿಷ್ಟನಾಗಿ, ಯಮನ ಜೊತೆಯಲ್ಲಿ, ಪಿತೃಗಳು ಸಂತೋಷದಿಂದ ಕಾಲ ಕಳೆಯುತ್ತಿರುವ ಅತ್ಯುನ್ನತವಾದ ಸ್ವರ್ಗವನ್ನು ಸೇರುತ್ತಾನೆ (೧೦-೧೪-೮, ೧೦ ; ೧೦-೧೫೪-೪, ೫). ಈ ರೀತಿ ಸ್ವರ್ಗಪ್ರಾಪ್ತಿಗೆ ಮನೆಗೆ ವಾಪಸ್ಸು ಬರುವುದು ಎಂದು ಹೇಳಿದೆ (ಅಸ್ತಂ ; ೧೦-೧೪-೮). ಯಮನು ಈತನನ್ನು ಸ್ವಕೀಯನೆಂದು ತಿಳಿದು (ಅ. ವೇ. ೧೮-೨-೩೭),ಅವನಿಗೂ ಒಂದು ವಿಶ್ರಾಂತಿ ಸ್ಥಾನವನ್ನು ಕೊಡುತ್ತಾನೆ (೧೯-೧೪-೯).

ಶತಪಥಬ್ರಾಹ್ಮಣದ ಪ್ರಕಾರ, ಮೃತರು ಈ ಲೋಕವನ್ನು ಬಿಟ್ಟು ಹೊರಟು, ಎರಡು ಬೆಂಕಿಗಳ ಮಧ್ಯೆ ಹಾದುಹೋಗುತ್ತಾರೆ ; ಆ ಬೆಂಕಿಗಳು ಕೆಟ್ಟ ಜೀವವನ್ನು ಸುಡುತ್ತವೆ ; ಉತ್ತಮರನ್ನು ಮಾತ್ರ ಮುಂದಕ್ಕೆ ಹೋಗಲು ಬಿಡುತ್ತವೆ. ಹೀಗೆ ಮುಂದೆ ಹೊರಟ ಉತ್ತಮ ಜೀವಗಳು ಪಿತೃಗಳ ಸಮೀಪಕ್ಕೆ ಹೋಗುವ ದಾರಿಯನ್ನೋ ಅಥವಾ ಸೂರ್ಯನ ಹತ್ತಿರ ಹೋಗುವ ದಾರಿಯನ್ನೋ ಹಿಡಿದು ಮುಂದೆ ಸಾಗುತ್ತಾರೆ (ಶ. ಬ್ರಾ. ೧-೯-೩-೨ ; ಇತ್ಯಾದಿ). ಉಪನಿಷತ್ತುಗಳಲ್ಲಿ ಬ್ರಹ್ಮಜ್ಞಾನ ಪಡೆದಿರುವವರಿಗೆ ಎರಡು ದಾರಿಗಳು ಉಕ್ತವಾಗಿವೆ. ಒಂದು ( **ಪರಿಪೂರ್ಣ ಜ್ಞಾನಿಗಳಿಗೆ)** ‘ ಬ್ರಹ್ಮ ’ನಲ್ಲಿಗೆ ಹೋಗುವುದು- ಎರಡನೆಯದು ಸ್ವರ್ಗದ ದಾರಿ. ತಮ್ಮ ಪುಣ್ಯಕರ್ಮಗಳ ಫಲ ಮುಗಿದೊಡನೆಯೇ, ಈ ಸ್ವರ್ಗಲೋಕದಿಂದ ಬಂದು, ಪುನಃ ಭೂಮಿಯಲ್ಲಿ ಜನಿಸುತ್ತಾರೆ. ‘ ಆತ್ಮ ’ದ ಪರಿಚಯವೇ ಇಲ್ಲದವರು ದುರ್ದೇವತೆಗಳ ಅಥವಾ ಭೂತಪ್ರೇತಗಳ ಲೋಕಕ್ಕೆ ಹೋಗುತ್ತಾರೆ ಅಥವಾ ದುಷ್ಟರಾಗಿ, ಭೂಮಿಯಲ್ಲಿ ಪುನಃ ಜನ್ಮವೆತ್ತುತ್ತಾರೆ.

॥ ಸಾಯಣಭಾಷ್ಯಂ ॥

**ಉದೀರತಾಮಿತಿ ಚತುರ್ದಶರ್ಚಂ ಪಂಚದಶಂ ಸೂಕ್ತಂ । ಅತ್ರಾನುಕ್ರಮ್ಯತೇ । ಉದೀರತಾಂ ಷಳೂನಾ ಶಂಖಃ ಪಿತ್ರ್ಯಂ ಜಗತ್ಯೇಕಾದಶೀ । ಯಾಮಾಯನಾಃ ಪರೇ ಪಂಚೇತಿ ವಚನಾದ್ಯಮಪುತ್ರಃ ಶಂಖಾಖ್ಯ ಋಷಿಃ । ಅಗ್ನಿಷ್ವಾತ್ತಾ ಇತ್ಯೇಷಾ ಜಗತೀ ಶಿಷ್ಟಾಸ್ತ್ರಿಷ್ಟುಭಃ । ಪಿತರೋ ದೇವತಾ ॥ ಗತಃ ಸೂಕ್ತವಿನಿಯೋಗಃ ॥ ಅಷ್ಟಕಾಯಾಮುದೀರತಾಮವರ ಇತ್ಯಾದ್ಯಾ ಅಷ್ಟಾವೃಚೋ ಹೋಮಾರ್ಥಾಃ ॥ ಸೂತ್ರಿತಂ ಚ । ಉದೀರತಾಮವರ ಉತ್ಪರಾಸ ಇತ್ಯಷ್ಟಾಭಿರ್ಹುತ್ವಾ । ಆ. ಗೃ. ೨ ೪-೬ । ಇತಿ ॥**

**ಮಹಾಪಿತೃಯಜ್ಞೇ ಪಿತರಃ ಸೋಮವಂತ ಇತ್ಯಸ್ಯಾನುವಾಕ್ಯೋದೀರತಾಮಿತ್ಯೇಷಾ । ಸೂತ್ರಿತಂ ಚ । ಪಿತರೋಽಗ್ನಿಷ್ವಾತ್ತಾ** ಯಮ ಉದೀರತಾಮವರ ಉತ್ಪರಾಸಃ । ಆ. ೨-೧೯ । **ಇತಿ ॥ ಆಗ್ನಿಮಾರುತೇಽಸ್ಯೇಷಾ ಧಾಯ್ಯಾ । ಸೂತ್ರಿತಂ ಚ । ಮಾತಲೀ ಕವ್ಯೈರ್ಯಮೋ ಅಂಗಿರೋಭಿರುದೀರತಾಮವರ** ಉತ್ಪರಾಸಃ । ಆ. ೫-೨೦ । **ಇತಿ ॥**

ಅನುವಾದವು—**ಉದೀರತಾಂ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಉದೀರತಾಂ ಷಳೂನಾ ಶಂಖಃ ಪಿತ್ರ್ಯಂ ಜಗತ್ಯೇಕಾದಶೀ** ಎಂದು ಹೇಳಿರುವುದು. **ಯಾಮಾಯನಃ ಪರೇ ಪಂಚ** ಎಂದು ಅನುಕ್ರಮಣಿಕೆಯಲ್ಲಿ ಹೇಳಿರುವುದರಿಂದ (ಮುಂದಿನ ಐದು ಸೂಕ್ತಗಳಿಗೆ ಯಮನ ಪುತ್ರನು ಋಷಿಯು) ಈ ಸೂಕ್ತಕ್ಕೆ ಯಮನ ಪುತ್ರನಾದ ಶಂಖ ಎಂಬುವನು ಋಷಿಯು. ಅಗ್ನಿಷ್ವಾತ್ತಾಃ ಎಂಬ ೧೧ನೆಯ ಋಕ್ಕು ಜಗತೀ ಛಂದಸ್ಸವು. ಉಳಿದ ಋಕ್ಕುಗಳು ತ್ರಿಷ್ಟುಪ್ ಛಂದಸ್ಸವು; ಪಿತೃಗಳು ದೇವತೆಯು; ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಅಷ್ಟಕಾ ಎಂಬ ಕರ್ಮದಲ್ಲಿ **ಉದೀರತಾಮವರೇ** ಎಂದು ಮೊದಲಾಗುವ ಈ ಸೂಕ್ತದ ಮೊದಲಿನ ಎಂಟು ಋಕ್ಕುಗಳನ್ನು ಹೋಮಾರ್ಥವಾಗಿ ಉಪಯೋಗಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ-**ಉದೀರತಾಮವರ ಉತ್ಪರಾಸ ಇತ್ಯಷ್ಟಾಭಿರ್ಹುತ್ವಾ** ಎಂಬ ಸೂತ್ರದಿಂದ (ಆ. ಗೃ. ೨-೪-೬) ವಿವೃತವಾಗಿರುವುದು. ಮಹಾಪಿತೃಯಜ್ಞದಲ್ಲಿ **ಪಿತರಃ ಸೋಮವಂತಃ** ಎಂಬ ವಿಶೇಷ ಪಿತೃಗಣವನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ಉದೀರತಾಂ** ಎಂಬ ಮೊದಲನೆಯ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಪಿತರೋಗ್ನಿಷ್ವಾತ್ತಾ ಯಮ ಉದೀರತಾಮವರ ಉತ್ಪರಾಸಃ** ಎಂಬ ಸೂತ್ರದಿಂದ (ಆ. ೨-೧೯) ವಿವೃತವಾಗಿರುವುದು ಮತ್ತು ಆಗ್ನಿಮಾರುತಶಸ್ತ್ರಮಂತ್ರಗಳಲ್ಲಿ ಉದೀರತಾಂ ಎಂಬ ಈ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಮಾತಲೀ ಕವ್ಯೈರ್ಯಮೋ ಅಂಗಿರೋಭಿರುದೀರತಾಮವರ ಉತ್ಪರಾಸಃ** ಎಂಬ ಸೂತ್ರದಿಂದ (ಆ. ೫-೨೦) ವಿವೃತವಾಗಿರುವುದು.

## ಸೂಕ್ತ—೧೫

**ಮಂಡಲ**—೧೦ ॥ **ಅನುವಾಕ**—೧॥ **ಸೂಕ್ತ**—೧೫ ॥
**ಅಷ್ಟಕ**—೭ ॥ **ಅಧ್ಯಾಯ**—೬ ॥ **ವರ್ಗ**—೧೭, ೧೮, ೧೯ ॥
**ಸೂಕ್ತದಲ್ಲಿರುವ ಋಕ್ಸಂಖ್ಯೆ**—೧೪ ॥
**ಋಷಿಃ**—ಶಂಖೋ ಯಾಮಾಯನಃ ॥
**ದೇವತಾ**—ಪಿತರಃ ॥
**ಛಂದಃ**—೧-೧೦. ೧೨-೧೪, ತ್ರಿಷ್ಟುಪ್ । ೧೧. ಜಗತೀ ॥

॥ ಸಂಹಿತಾಪಾಠಃ ॥

ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ ।
ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು ॥ ೧ ॥

॥ ಪದಪಾಠಃ ॥

ಉತ್ । ಈರತಾಂ । ಅವರೇ । ಉತ್ । ಪರಾಸಃ । ಉತ್ । ಮಧ್ಯಮಾಃ । ಪಿತರಃ । ಸೋಮ್ಯಾಸಃ ।
ಅಸುಂ । ಯೇ । ಈಯುಃ । ಅವೃಕಾಃ । ಋತಽಜ್ಞಾಃ । ತೇ । ನಃ । ಅವಂತು । ಪಿತರಃ । ಹವೇಷು ॥

॥ ಸಾಯಣಭಾಷ್ಯಂ ॥

ತ್ರಿವಿಧಾಃ ಪಿತರ ಉತ್ತಮಾ ಮಧ್ಯಮಾ ಅಧಮಾಶ್ಚೇತಿ । ಯಥಾವಿಧಂ ಶ್ರೌತಂ ಕರ್ಮಾನುಷ್ಠಾಯ ಪಿತೃತ್ವಂ ಪ್ರಾಪ್ತಾ ಉತ್ತಮಾಃ । ಸ್ಮಾರ್ತಕರ್ಮಮಾತ್ರಪರಾ ಮಧ್ಯಮಾಃ । ಅತ್ರಾಪಿ ಕೈಶ್ಚಿತ್ಸಂಸ್ಕಾರೈರ್ವಿಕಲಾ ಅಧಮಾಃ । ಏತದೇವಾಭಿಪ್ರೇತ್ಯ ಯೇ ಅಗ್ನಿದಗ್ಧಾ ಯೇ ಅನಗ್ನಿದಗ್ಧಾ ಇತ್ಯಾದಿಮಂತ್ರ ಆಮ್ನಾತಃ । ತೇಷ್ವವರೇ ನಿಕೃಷ್ಟಾ ಉದೀರತಾಂ । ಉತ್ತಮಂ ಹವಿಃ ಪ್ರಾಪ್ನುವಂತು । ಪರಾಸ ಉತ್ತಮಾಃ ಪಿತರ ಉದೀರತಾಂ । ಮಧ್ಯಮಾಃ ಪಿತರಶ್ಚೋದೀರತಾಂ । ತೇ ಸರ್ವೇಽಪ್ಯಸ್ಮದ್ವಿಷಯೇ ಸೋಮ್ಯಾಸಃ ಸೋಮ್ಯಾ ಅನುಗ್ರಹಪರಾಃ ಸಂತು । ಯೇ ಪಿತರೋಽವೃಕಾ ವೃಕವದರಣ್ಯಶ್ವವದಸ್ಮಾಸು ಹಿಂಸಾಮಕುರ್ವಂತ ಋತಜ್ಞಾ ಅಸ್ಮದನುಷ್ಠಿತಂ ಯಜ್ಞಂ ಜಾನಂತೋಽಸುಮಸ್ಮತ್ಪ್ರಾಣಮೀಯುಃ ರಕ್ಷಿತುಂ ಪ್ರಾಪ್ತಾಃ ತೇ ಪಿತರೋ ಹವೇಷ್ವಸ್ಮದೀಯೇಷ್ವಾಹ್ವಾನೇಷು ನೋಽಸ್ಮಾನವಂತು ರಕ್ಷಂತು ॥

॥ ಪ್ರತಿಪದಾರ್ಥ ॥

**ಅವರೇ**—ಕೆಳಗಿನ ಪ್ರದೇಶದಲ್ಲಿರುವ ಪಿತೃಗಳು । **ಉದೀರತಾಂ**—ನಮ್ಮ ಹವಿಸ್ಸನ್ನು ಪಡೆಯಲಿ । **ಪರಾಸಃ**—ಉತ್ತಮ ಲೋಕದಲ್ಲಿರುವವರೂ । **ಉತ್**—ನಮ್ಮ ಹವಿಸ್ಸನ್ನು ಪಡೆಯಲಿ । **ಮಧ್ಯಮಾಃ**—ಮಧ್ಯಮ ಲೋಕದಲ್ಲಿರುವ । **ಪಿತರಃ ಉತ್**—ಪಿತೃಗಳೂ ಸ್ವೀಕರಿಸಲಿ । **ಸೋಮ್ಯಾಸಃ**—ಅವರೆಲ್ಲರೂ ನಮ್ಮಲ್ಲಿ ಅನುಗ್ರಹ ಬುದ್ಧಿಯುಳ್ಳವರಾಗಿರಲಿ । **ಯೇ ಪಿತರಃ**—ಯಾವ ಪಿತೃಗಳು । **ಅವೃಕಾಃ**—ತೋಳಗಳಂತೆ ಕ್ರೂರಿಗಳಲ್ಲದವರಾಗಿಯೂ । **ಋತಜ್ಞಾಃ**—ನಮ್ಮ ಯಜ್ಞಕರ್ಮಗಳನ್ನು ತಿಳಿದವರಾಗಿಯೂ । **ಅಸುಂ**—ನಮ್ಮ ಪ್ರಾಣವನ್ನು । **ಈಯುಃ**—ರಕ್ಷಿಸಲು ಬಂದಿರುವರೋ । **ತೇ**—ಅವರು । **ನಃ**—ನಮ್ಮನ್ನೂ । **ಹವೇಷು**—ನಮ್ಮ ಆಹ್ವಾನಕಾಲಗಳಲ್ಲಿ । **ಅವಂತು**—ರಕ್ಷಿಸಲಿ.

॥ ಭಾವಾರ್ಥ ॥

ಕೆಳಗಿನ ಲೋಕದಲ್ಲಿರುವ ಪಿತೃಗಳೂ, ಉತ್ತಮಲೋಕದಲ್ಲಿರುವವರೂ, ಮಧ್ಯಮಲೋಕದಲ್ಲಿರುವವರೂ ನಮ್ಮ ಹವಿಸ್ಸುಗಳನ್ನು ಸ್ವೀಕರಿಸಲಿ ಅವರೆಲ್ಲರೂ ನಮ್ಮಲ್ಲಿ ಅನುಗ್ರಹಬುದ್ಧಿಯುಳ್ಳವರಾಗಿರಲಿ. ತೋಳಗಳಂತೆ ಕ್ರೂರಿಗಳಲ್ಲದವರೂ, ನಮ್ಮ ಯಜ್ಞಕರ್ಮಗಳನ್ನರಿತವರೂ, ನಮ್ಮ ಪ್ರಾಣವನ್ನು ರಕ್ಷಿಸಲು ಬಂದಿರುವವರೂ ಆದ ಆ ಪಿತೃಗಳು ನಮ್ಮ ಆಹ್ವಾನಕಾಲದಲ್ಲಿ ನಮ್ಮನ್ನು ರಕ್ಷಿಸಲಿ.

## English Translation

Let the lower, the upper, the intermediate Pitris, rise up, accepting the Soma libation : may those progenitors who, unlike wolves, acknowle-

dging our offerings, have come to preserve our lives, protect us upon our invocations.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ಉದೀರತಾಮವರ ಉದೀರತಾಂ ಪರ ಉದೀರತಾಂ ಮಧ್ಯಮಾಃ ಪಿತರಃ ಸೋಮ್ಯಾಃ ಸೋಮ-ಸಂಪಾದಿನಸ್ತೇಽಸುಂ ಪ್ರಾಣಮನ್ವೀಯುರವೃಕಾ ಅನಮಿತ್ರಾಃ ಸತ್ಯಜ್ಞಾ ವಾ ಯಜ್ಞಜ್ಞಾ ವಾ ತೇ ನ ಆಗಚ್ಛಂತು ಪಿತರೋ ಹ್ವಾನೇಷು ॥**

(ನಿ. ೧೧-೧೮)

**ಅವರೇ** ಕೆಳಭಾಗದಲ್ಲಿ ಎಂದರೆ ಪೃಥ್ವಿಯಲ್ಲಿ ಅಥವಾ ಪಿತೃಲೋಕದ ಕೆಳಭಾಗದಲ್ಲಿರುವ ಪಿತೃಗಳೂ ಪರಾಸಃ ದ್ಯುಲೋಕವಾಸಿಗಳಾದ ಪಿತೃಗಳೂ, **ಮಧ್ಯಮಾಃ**—ಮಧ್ಯಮಸ್ಥಾನರಾದ ಅಂತರಿಕ್ಷದಲ್ಲಿ ವಾಸಿಸುವ ಪಿತೃಗಳೂ **ಸೋಮ್ಯಾಸಃ**—ಹಿಂದೆ ಯಜ್ಞದಲ್ಲಿ ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಸೋಮವನ್ನು ಸಿದ್ಧಪಡಿಸಿ ಅರ್ಪಿಸಿದವರೂ, ಯಾರು । ನಮ್ಮ ಪ್ರಾಣಗಳನ್ನು ರಕ್ಷಿಸಲು ಬಂದಿರುವರೋ ಅವರೂ, ಯಾರಿಗೂ ಯಾವವಿಧವಾದ ಹಿಂಸೆಯನ್ನು ಮಾಡದಿರುವವರೂ, ಶತ್ರುಗಳಲ್ಲದವರೂ ಎಂದರೆ ಕೇಡನ್ನು ಬಯಸದಿರುವವರೂ ಸತ್ಯ ಅಥವಾ ಯಜ್ಞಸ್ವರೂಪವನ್ನು ತಿಳಿದವರೂ ಆದ ಯಾವ ಯಾವ ಪಿತೃಗಳಿರುವರೋ ಅವರೆಲ್ಲರೂ ಈಗ ನಾವು ಮಾಡುತ್ತಿರುವ ಆಹ್ವಾನದಲ್ಲಿ ಎಂದರೆ ಆಹ್ವಾನದಿಂದ ನಮ್ಮಲ್ಲಿಗೆ ಬಂದು ನಮ್ಮನ್ನು ರಕ್ಷಿಸಲಿ.

**ಅವೃಕಾಃ** ಎಂಬ ಶಬ್ದಕ್ಕೆ—**ವೃಕಃ** ಎಂದರೆ ತೋಳವು. ತೋಳದ ಸ್ವಭಾವವು ಹಿಂಸೆಯನ್ನು ಮಾಡುವುದೇ ಆಗಿದೆ. ಈ ಶಬ್ದವನ್ನು ಮನುಷ್ಯರ ಪರವಾಗಿ ಉಪಯೋಗಿಸಿದಾಗ ಹಿಂಸೆಮಾಡುವವರು, ದುಷ್ಟರು ಎಂದರ್ಥವಾಗುವುದು. **ಅವೃಕಾಃ** ಎಂದರೆ ವೃಕರಲ್ಲದವರು, ಯಾರಿಗೂ ಹಿಂಸೆಯನ್ನು ಮಾಡದಿರುವವರು, ಸಜ್ಜನರು ಎಂದಭಿಪ್ರಾಯವು.

**ಅನಮಿತ್ರಾಃ**—ಮಿತ್ರನೆಂದರೆ, ಸ್ನೇಹಿತ, ಹಿತಕಾರಿ ಎಂದು. **ಅಮಿತ್ರ** ಎಂದರೆ ಮಿತ್ರನಲ್ಲದವನು, ಶತ್ರುವು ; **ಅನಮಿತ್ರ** ಎಂದರೆ ಶತ್ರುವಲ್ಲದವನು ಎಂದರೆ ಸ್ನೇಹಿತನು, ಹಿತಕಾರಿಯು ಎಂದೇ ಅರ್ಥವು ಆದ್ದರಿಂದ ಮಿತ್ರಶಬ್ದಕ್ಕೂ ಅನಮಿತ್ರ ಶಬ್ದಕ್ಕೂ ಒಂದೇ ಅರ್ಥವಿರುವುದು. ಈ ಶಬ್ದದಲ್ಲಿ ಎರಡಾವರ್ತಿ ನಿಷೇಧಾರ್ಥಸೂಚಕ ಉಪಸರ್ಗಗಳಿರುವುದರಿಂದ (Two negetives make one affirmative) ಶಬ್ದವು ಪೂರ್ವದ ಅರ್ಥವನ್ನೇ ಸೂಚಿಸುವುದು.

ಭಾಷ್ಯಕಾರರು ಪಿತೃಗಳಲ್ಲಿ ಮೂರು ವಿಧವೆಂದು ಹೇಳಿರುವರು—**ಉತ್ತಮಾ ಮಧ್ಯಮಾ ಅಧಮಾಶ್ಚೇತಿ ।** ಹೇಗೆಂದರೆ—

**ಉತ್ತಮಾಃ—ಯಥಾವಿಧಿಂ ಶ್ರೌತಂ ಕರ್ಮಾನುಷ್ಠಾಯ ಪಿತೃತ್ವಂ** ಪ್ರಾಪ್ತಾ ಉತ್ತಮಾಃ। ಉತ್ತಮ ಕರ್ಮಗಳಾದ ಯಜ್ಞಯಾಗಾದಿಗಳನ್ನೂ ಯಥಾವಿಧಿಯಾಗಿ ಮಾಡಿ ಆ ಸತ್ಕರ್ಮಾನುಷ್ಠಾನದ ಫಲವಾಗಿ ಪಿತೃಸ್ಥಾನವನ್ನು ಪಡೆದವರು ಪಿತೃಗಳಲ್ಲಿ ಉತ್ತಮರೆಂದು ಪ್ರಸಿದ್ಧಿಯನ್ನು ಪಡೆದಿದ್ದಾರೆ.

**ಮಧ್ಯಮಾಃ—ಸ್ಮಾರ್ತಕರ್ಮಪರಾ ಮಧ್ಯಮಾಃ ।** ಸ್ಮೃತಿಪುರಾಣಾದಿಗಳಲ್ಲಿ ಹೇಳಿರುವಂತೆ ದೇವತೆಗಳನ್ನು ಆರಾಧಿಸಿ ಆ ಪುಣ್ಯದಿಂದ ಪಿತೃತ್ವವನ್ನು ಪಡೆದ ಪಿತೃಗಳು ಮಧ್ಯಮರು.

**ಅಥಮಾಃ**— **ಅತ್ರಾಪಿ ಕೈಶ್ಚಿತ್ಸಂಸ್ಕಾರೈರ್ವಿಕಲಾ ಅಥಮಾಃ ।** ಮೇಲೆ ಹೇಳಿದ ಕರ್ಮಾದಿಗಳಲ್ಲಿ ಲೋಪದೋಷಗಳುಂಟಾಗಿ ಕರ್ಮವನ್ನು ಸಾಂಗವಾಗಿ ನೆರವೇರಿಸಲಸಮರ್ಥರಾದವರು ಪಿತೃಗಳಲ್ಲಿ ಅಧಮರೆನಿಸುವರು ಎಂದು ಉತ್ತಮ ಮಧ್ಯಮಾಧಮರೆಂಬ ಮೂರುವಿಧ ಪಿತೃಗಳ ಸ್ವರೂಪವನ್ನೂ ಅವರ ಸ್ಥಾನಮಾನಗಳನ್ನೂ ತಿಳಿಸಿದಾರೆ. ಇದನ್ನನುಸರಿಸಿಯೇ **ಯೇ ಅಗ್ನಿದಗ್ಧಾಃ** ಎಂಬ ಮಂತ್ರವೂ ಇರುವುದು. ಎಂದರೆ ಅಗ್ನಿಯಲ್ಲಿ ಯಾರ ಮೃತಶರೀರವು ಮಂತ್ರಪೂರ್ವಕವಾದ ಸಂಸ್ಕಾರಾದಿಗಳಿಂದ ದಹಿಸಲ್ಪಡುವುದೋ ಅವರು ಪಿತೃಗಳಲ್ಲಿ ಉತ್ತಮ ಸ್ಥಾನವನ್ನು ಗಳಿಸುವರು. ಇವರಿಗೆ ಅಗ್ನಿದಗ್ಧರೆಂದು ಹೆಸರು. ಹಾಗಿಲ್ಲದೆ, ಅಗ್ನಿಸಂಸ್ಕಾರಾದಿಗಳಿಲ್ಲದೆ ನೀರಿನಲ್ಲಿ ಮುಳುಗಿಹೋಗುವುದು, ಅಪರಕರ್ಮವನ್ನು ಮಾಡಲು ಕರ್ತೃವಿಲ್ಲದಿರುವುದು, ಅಥವಾ ಯಥಾವಿಧಿಯಾಗಿ ಕರ್ಮದಿಂದ ಸಂಸ್ಕೃತರಾಗದಿರುವವರು ಇವರೆಲ್ಲಾ ಅನಗ್ನಿದಗ್ಧರೆಂದು ಹೇಳಲ್ಪಡುವರು. ಇವರು ಪಿತೃಗಳಲ್ಲಿ ಮಧ್ಯಮಸ್ಥಾನವನ್ನೋ ಅಥವಾ ಅಧಮಸ್ಥಾನವನ್ನೋ ಪಡೆಯುವರು. ಈ ವಿಧವಾದ ಪಿತೃಗಳೆಲ್ಲರೂ, ಸೋಮಸಂಪಾದಿಗಳೂ, ಹಿಂಸಾರಹಿತರೂ, ಪ್ರಾಣವನ್ನು ರಕ್ಷಿಸುವವರೂ, ಯಜ್ಞಾನುಷ್ಠಾನಕರ್ಮಗಳನ್ನು ತಿಳಿದವರೂ ಆದ ಯಾವ ಯಾವ ಪಿತೃಗಳಿರುವರೋ ಅವರೆಲ್ಲರೂ ನಮ್ಮ ಆಹ್ವಾನವನ್ನು ಮನ್ನಿಸಿ ನಮ್ಮನ್ನು ರಕ್ಷಿಸಲಿ ಎಂಬಭಿಪ್ರಾಯವು ಈ ಋಕ್ಕಿನಲ್ಲಿ ಉಕ್ತವಾಗಿದೆ.

॥ ಸಂಹಿತಾಪಾಠಃ ॥

**ಇದಂ ಪಿತೃಭ್ಯೋ ನಮೋ ಅಸ್ತ್ವದ್ಯ ಯೇ ಪೂರ್ವಾಸೋ ಯ ಉಪರಾಸ ಈಯುಃ ।**
**ಯೇ ಪಾರ್ಥಿವೇ ರಜಸ್ಯಾ ನಿಷತ್ತಾ ಯೇ ವಾ ನೂನಂ ಸುವೃಜನಾಸು ವಿಕ್ಷು ॥ ೨ ॥**

॥ ಪದಪಾಠಃ ॥

**ಇದಂ । ಪಿತೃಽಭ್ಯಃ । ನಮಃ । ಅಸ್ತು । ಅದ್ಯ । ಯೇ । ಪೂರ್ವಾಸಃ । ಯೇ । ಉಪರಾಸಃ । ಈಯುಃ ।**
**ಯೇ । ಪಾರ್ಥಿವೇ । ರಜಸಿ । ಆ । ನಿಽಸತ್ತಾಃ । ಯೇ । ವಾ । ನೂನಂ । ಸುಽವೃಜನಾಸು । ವಿಕ್ಷು ॥ ೨ ॥**

॥ ಸಾಯಣಭಾಷ್ಯಂ ॥

**ಮಹಾಪಿತೃಯಜ್ಞೇ ಪಿತರೋ ಬರ್ಹಿಷದ ಇತ್ಯಸ್ಯೇದಂ ಪಿತೃಭ್ಯ ಇತಿ ದ್ವಿತೀಯಾನುವಾಕ್ಯಾ । ಸೂತ್ರಂ ತು ಪೂರ್ವಮೇವೋದಾಹೃತಂ । ಆ. ೨-೧೯ ॥ ಇದಂ ಪಿತೃಭ್ಯ ಇತ್ಯೇಷಾ ಧಾಯ್ಯಾ । ಸೂತ್ರಿತಂ ಚ । ಅಹಂ ಪಿತೄನ್ತ್ಸುವಿದತ್ರಾಁ ಅವಿತ್ಸೀದಂ ಪಿತೃಭ್ಯೋ ನಮೋ ಅಸ್ತ್ವದ್ಯ ಸ್ವಾದುಷ್ಕಿಲಾಯಮಿತಿ ಚತಸ್ರಃ । ಆ. ೫-೨೦ । ಇತಿ ॥**

**ಪೂರ್ವಾಸೋ ಯಜಮಾನೋತ್ಪತ್ತೇಃ ಪೂರ್ವಮುತ್ಪನ್ನಾ ಜ್ಯೇಷ್ಠಭ್ರಾತೃಪಿತಾಮಹಾದಯೋ ಯ ಈಯುಃ ಪಿತೃಲೋಕಂ ಪ್ರಾಪ್ತಾಃ । ಯೇ ಚಾನ್ಯ ಉಪರಾಸೋ ಯಜಮಾನಜನ್ಮನ ಉಪರ್ಯುರ್–**

ತ್ವನ್ನಾಃ ಕನಿಷ್ಠಭ್ರಾತೃಸ್ವಪುತ್ರಾದಯಃ ಈಯುಃ ಪಿತೃಲೋಕಂ ಪ್ರಾಪ್ತಾಃ । ಯೇಽಪ್ಯನ್ಯೇ ಪಾರ್ಥಿವೇ ಪೃಥಿವೀಸಂಬಂಧಿನಿ ರಜಸಿ ರಜೋಗುಣಕಾರ್ಯೇಽಸ್ಮಿನ್ಕರ್ಮಣ್ಯಾ ನಿಷತ್ತಾ ಹವಿಃ ಸ್ವೀಕರ್ತುಮಾಗತ್ಯೋಪವಿಷ್ಟಾಃ । ಯೇ ವಾ ಕೇಚಿದನ್ಯೇ ಬಂಧುವರ್ಗರೂಪಾಃ ಪಿತರೋ ವಿಕ್ಷು ಬಂಧುರೂಪಾಸು ಪ್ರಜಾಸ್ವಾ ನಿಷತ್ತಾಃ ಶ್ರಾದ್ಧಾದಿಸ್ವೀಕಾರಾಯಾಗತ್ಯೋಪವಿಷ್ಟಾಃ । ಕೀದೃಶೀಷು ವಿಕ್ಷು । ಸುವೃಜನಾಸು । ವೃಜ್ಯತೇ ಪರಿತ್ಯಜ್ಯತೇ ದಾರಿದ್ರ್ಯಮನೇನೇತಿವೃಜನಂ ಧನಂ । ಶೋಭನಂ ವೃಜನಂ ಯಾಸಾಂ ತಾಃ ಸುವೃಜನಾಃ । ತಾದೃಶೀಷು । ಧನಸಮೃದ್ಧ್ಯಾ ಶ್ರಾದ್ಧಾದಿಕರ್ಮಪರಾಸ್ವಿತ್ಯರ್ಥಃ । ಸರ್ವೇಭ್ಯ ಉಕ್ತೇಭ್ಯಃ ಪಿತೃಭ್ಯೋಽದ್ಯಾಸ್ಮಿನ್ಕರ್ಮಣೀದಂ ನಮೋಽಸ್ತು । ಅಯಮಾಹುತಿಪ್ರದಾನಪೂರ್ವಕೋ ನಮಸ್ಕಾರೋ ಭವತು ॥

॥ ಪ್ರತಿಪದಾರ್ಥ ॥

**ಪೂರ್ವಾಸಃ**—ನಮಗಿಂತಲೂ ಹಿರಿಯರಾದ ಪಿತೃಪಿತಾಮಹಾದಿಗಳಲ್ಲಿ । **ಯೇ**—ಯಾರು । **ಈಯುಃ**—ಪಿತೃಲೋಕವನ್ನು ಸೇರಿರುವರೋ । **ಉಪರಾಸಃ**—ನಮಗಿಂತ ಕಿರಿಯವರಲ್ಲಿ । **ಯೇ**—ಯಾರು ಮೃತಿಯನ್ನು ಹೊಂದಿರುವರೋ । **ಯೇ**—ಯಾರು । **ಪಾರ್ಥಿವೇ ರಜಸಿ**—ಪಾರ್ಥಿವಲೋಕದಲ್ಲಿ (ಹವಿಸ್ಸಿಗಾಗಿ ಬಂದು) । **ಆ ನಿಷತ್ತಾಃ**—ಕುಳಿತಿರುವರೋ । **ಯೇ ವಾ**—ಉಳಿದ ಯಾವ ಪಿತೃಗಳು । **ಸುವೃಜನಾಸು**—ಉತ್ತಮವಾದ ಧನವಂತರಾದ । **ವಿಕ್ಷು**—ಪ್ರಜೆಗಳ ನಡುವೆ ಕುಳಿತಿರುವರೋ ಅಂತಹ । **ಪಿತೃಭ್ಯಃ**—ಸಕಲ ಪಿತೃಗಳಿಗೂ । **ಅದ್ಯ**—ಈ ಯಾಗಕಾಲದಲ್ಲಿ । **ಇದಂ ನಮಃ**—ಈ ನಮಸ್ಕಾರವು । **ಅಸ್ತು**—ಇರಲಿ.

॥ ಭಾವಾರ್ಥ ॥

ನಮಗಿಂತಲೂ ಹಿರಿಯರಾದ ಪಿತೃಪಿತಾಮಹಾದಿಗಳಲ್ಲಿ ಯಾರು ಪಿತೃಲೋಕವನ್ನು ಸೇರಿರುವರೋ, ನಮಗಿಂತ ಕಿರಿಯವರಲ್ಲಿ ಯಾರು ಮೃತಿಯನ್ನು ಹೊಂದಿರುವರೋ, ಯಾರು ಪಾರ್ಥಿವಲೋಕದಲ್ಲಿ ಹವಿಸ್ಸಿಗಾಗಿ ಬಂದು ಕುಳಿತಿರುವರೋ, ಉಳಿದ ಯಾವ ಪಿತೃಗಳು ಉತ್ತಮರಾದ ಧನವಂತರ ನಡುವೆ ಕುಳಿತಿರುವರೋ ಅಂತಹ ಸಕಲ ಪಿತೃಗಳನ್ನೂ ಈ ಯಾಗಕಾಲದಲ್ಲಿ ನಮಸ್ಕರಿಸುತ್ತೇನೆ.

## English Translation

Let this our adoration be to-day addressed to those Pitris our predecessors, to those our successors, who have departed (to the world of the manes); to those who are seated in the terrestrial sphere, to those who are present among opulent people.

॥ ವಿಶೇಷವಿಷಯಗಳು ॥

ಮಹಾಪಿತೃಯಜ್ಞವೆಂಬ ಇಷ್ಟಿಯಲ್ಲಿ **ಪಿತರೋ ಬರ್ಹಿಷದಃ** ಎಂಬ ಗುಂಪಿನ ಪಿತೃಗಳನ್ನುದ್ದೇಶಿಸಿ ಹೋಮ ಮಾಡುವಾಗ **ಇದಂ ಪಿತೃಭ್ಯಃ** ಎಂಬ ಈ ಋಕ್ಕನ್ನು ಎರಡನೆಯ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿ ಹೇಳಿರುವುದನ್ನು ಹಿಂದೆಯೇ ಉದಾಹರಿಸಲಾಗಿದೆ (ಆ. ೨-೧೯) ಆಗ್ನಿಮಾರುತಶಸ್ತ್ರಮಂತ್ರಗಳಲ್ಲಿಯೂ **ಇದಂ ಪಿತೃಭ್ಯಃ** ಎಂಬ ಈ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಹಂ ಪಿತೄನ್ತ್ಸುವಿದತ್ರಾँ ಅವಿತ್ಸೀದಂ ಪಿತೃಭ್ಯೋ ನಮೋ ಅಸ್ತ್ವದ್ಯ ಸ್ವಾದುಷ್ಕಿಲಾಯಮಿತಿ ಚತಸ್ರಃ** ಎಂಬ ಸೂತ್ರದಿಂದ (ಆ. ೫-೨೦) ವಿಶ್ವೃತವಾಗಿರುವುದು.

ಈ ಋಕ್ಕಿನಲ್ಲಿ ಋಷಿಯು ಕೆಲವು ಪಿತೃಗಳ ಬೇರೆ ಬೇರೆ ಸ್ವರೂಪಗಳನ್ನು ವಿವರಿಸಿದ್ದಾನೆ—

**ಪೂರ್ವಾಸಃ ಯಜಮಾನೋತ್ಪತ್ತೇಃ ಪೂರ್ವಮುತ್ಪನ್ನಾ ಜ್ಯೇಷ್ಠಭ್ರಾತೃಪಿತಾಮಹಾದಯಃ ।** ಯಜಮಾನನು (ಅಥವ ಋಷಿಯು) ಹುಟ್ಟುವುದಕ್ಕಿಂತ ಮೊದಲೇ ಉತ್ಪನ್ನರಾಗಿದ್ದ ಎಂದರೆ ವಯಸ್ಸಿನಲ್ಲಿ ತನಗಿಂತ ಹಿರಿಯರಾದ ಜ್ಯೇಷ್ಠಸಹೋದರರು, ತಂದೆಯ ತಂದೆ ಮೊದಲಾದವರು ಮೃತರಾಗಿದ್ದು ಪಿತೃಸ್ಥಾನದಲ್ಲಿರುವವರು, ಎಂದರೆ ತನಗಿಂತ ಮೊದಲೇ ಉತ್ಪನ್ನರಾದವರು.

**ಉಪರಾಸಃ—ಯಜಮಾನಜನ್ಮನ ಉಪರಿ ಉತ್ಪನ್ನಾಃ ಕನಿಷ್ಠಭ್ರಾತೃಸ್ವಪುತ್ರಾದಯಃ ।** ವಯಸ್ಸಿನಲ್ಲಿ ತನಗಿಂತ ಕಿರಿಯರಾದ ತಮ್ಮಂದಿರು, ಮಕ್ಕಳು ಮುಂತಾದವರು ಕಾರಣಾಂತರದಿಂದ ತನಗೆ ಮೊದಲೇ ಮೃತರಾಗಿ ಪಿತೃಲೋಕದಲ್ಲಿರುವವರು.

**ಪಾರ್ಥಿವೇ ರಜಸಿ ಆ ನಿಷತ್ತಾಃ**—ಪೃಥಿವೀಸಂಬಂಧವಾದ ಈ ಭೂಲೋಕದಲ್ಲಿ ಈಗ ನಡೆಯುತ್ತಿರುವ ಪಿತೃಯಜ್ಞದಲ್ಲಿ ಹವಿಸ್ಸ್ವೀಕಾರಾರ್ಥವಾಗಿ ಇಲ್ಲಿಗೆ ಬಂದು ಕುಳಿತಿರುವವರು.

**ಯೇ ವಾ ನೂನಂ ಸುವೃಜನಾಸು ವಿಕ್ಷು**—ನೇರವಾಗಿ ನಮ್ಮ ವಂಶಕ್ಕೇ ಸೇರದಿದ್ದರೂ ನಮ್ಮ ಬಂಧುವರ್ಗಕ್ಕೆ ಸೇರಿ ಶ್ರಾದ್ಧಾದಿಗಳಲ್ಲಿ ಹವಿಸ್ಸ್ವೀಕಾರಾರ್ಥವಾಗಿ ಬಂದು ಕುಳಿತಿರುವ ಇನ್ನು ಕೆಲವು ಪಿತೃಗಳು. ಈ ರೀತಿ ಹೇಳಿದ ವಿಧವಿಧವಾದ ಪಿತೃಗಳನ್ನು ನಮಸ್ಕರಿಸುವೆನು ಎಂದು ಋಷಿಯು ವರ್ಣಿಸಿದ್ದಾನೆ.

। ಸಂಹಿತಾಪಾಠಃ ।

ಆಹಂ ಪಿತೄನ್ತ್ಸುವಿದತ್ರಾ ಅವಿತ್ಸಿ ನಪಾತಂ ಚ ವಿಕ್ರಮಣಂ ಚ ವಿಷ್ಣೋಃ ।
ಬರ್ಹಿಷದೋ ಯೇ ಸ್ವಧಯಾ ಸುತಸ್ಯ ಭಜಂತ ಪಿತ್ವಸ್ತ ಇಹಾಗಮಿಷ್ಠಾಃ ॥

। ಪದಪಾಠಃ ।

ಆ । ಅಹಂ । ಪಿತೄನ್ । ಸುಽವಿದತ್ರಾನ್ । ಅವಿತ್ಸಿ । ನಪಾತಂ । ಚ । ವಿಽಕ್ರಮಣಂ । ಚ । ವಿಷ್ಣೋಃ ।
ಬರ್ಹಿಽಸದಃ । ಯೇ । ಸ್ವಧಯಾ । ಸುತಸ್ಯ । ಭಜಂತ । ಪಿತ್ವಃ । ತೇ । ಇಹ । ಆಽಗಮಿಷ್ಠಾಃ ॥ ೩ ॥

। ಸಾಯಣಭಾಷ್ಯಂ ।

ಅಹಂ ಯಜಮಾನಃ ಸುವಿದತ್ರಾನ್ ಮದೀಯಾಂ ಭಕ್ತಿಂ ಸುಷ್ಠು ಜಾನತಃ ಪಿತೄನಾವಿತ್ಸಿ । ಆಭಿಮುಖ್ಯೇನ ಲಬ್ಧವಾನಸ್ಮಿ । ವಿಷ್ಣೋರ್ವ್ಯಾಪಿನೋ ಯಜ್ಞಸ್ಯ ನಪಾತಂ ಚ ವಿನಾಶಾಭಾವಂ ಚ ವಿಕ್ರಮಣಂ ಚ ವಿಶೇಷೇಣ ಪ್ರವೃತ್ತಿಂ ಚ ಲಬ್ಧವಾನಸ್ಮಿ । ಯೇ ಪಿತರೋ ಬರ್ಹಿಷದೋ ಬರ್ಹಿಷಿ ಸೀದಂತಿ ತ ಇಹಾಸ್ಮಿನ್ಕರ್ಮಣ್ಯಾಗಮಿಷ್ಠಾಃ । ಅತಿಶಯೇನಾಗತಾಃ । ಆದರಪೂರ್ವಂ ಸಮಾಗತ್ಯ ಸ್ವಧಯಾ

ಪುರೋಡಾಶಾದ್ಯನ್ನೇನ ಸಹ ಸುತಸ್ಯಾಭಿಷುತಸ್ಯ ಸೋಮಲಕ್ಷಣಸ್ಯ ಪಿತ್ವಃ ಪಿತರೋಽನ್ನಸ್ಯ ಭಾಗಂ ಭಜಂತ । ಸೇವಂತೇ । ಉಪಯುಂಜತೇ ॥

॥ ಪ್ರತಿಪದಾರ್ಥ ॥

**ಅಹಂ**—ಯಜಮಾನನಾದ ನಾನು । **ಸುವಿದತ್ರಾನ್**—ನನ್ನ ಭಕ್ತಿಯನ್ನು ಅತಿಶಯವಾಗಿ ತಿಳಿದ । **ಪಿತೄನ್**—ಪಿತೃಗಳನ್ನು । **ಆ ಅವಿತ್ಸಿ**—ನನ್ನೆದುರಿಗೆ ಬರಮಾಡಿಕೊಂಡಿದ್ದೇನೆ । **ವಿಷ್ಣೋಃ**—ವ್ಯಾಪಕವಾದ ಯಜ್ಞದ । **ನಪಾತಂ**—ನಾಶರಾಹಿತ್ಯವನ್ನೂ । **ವಿಕ್ರಮಣಂ ಚ**—ಕ್ರಮವಾಗಿ ವಿಸ್ತೃತವಾಗುವಿಕೆಯನ್ನೂ ಹೊಂದಿದ್ದೇನೆ । **ಯೇ**—ಯಾವ ಪಿತೃಗಳು । **ಬರ್ಹಿಷದಃ**—ದರ್ಭಾಸನಗಳ ಮೇಲೆ ಕುಳಿತಿರುವರೋ । **ತೇ**—ಅವರು । **ಇಹ**—ನಮ್ಮ ಯಾಗಕರ್ಮದಲ್ಲಿ । **ಆಗಮಿಷ್ಠಾಃ**—ಬಂದಿದ್ದಾರೆ । **ಸ್ವಧಯಾ**—ಸ್ವಧಾಸಂಜ್ಞಕವಾದ ಅನ್ನದೊಡನೆ । **ಸುತಸ್ಯ**—ಹಿಂಡಲ್ಪಟ್ಟ । **ಪಿತ್ವಃ**—ಸೋಮರೂಪವಾದ ಅನ್ನವನ್ನು । **ಭಜಂತ**—ಸೇವಿಸುತ್ತಾರೆ.

॥ ಭಾವಾರ್ಥ ॥

ಯಜಮಾನನಾದ ನಾನು ನನ್ನ ಭಕ್ತಿಯನ್ನು ಅತಿಶಯವಾಗಿ ತಿಳಿದ ಪಿತೃಗಳನ್ನು ನನ್ನೆದುರಿಗೆ ಬರಮಾಡಿಕೊಂಡಿದ್ದೇನೆ ವ್ಯಾಪಕವಾದ ಯಜ್ಞದ ನಶರಾಹಿತ್ಯವನ್ನೂ ಕ್ರಮವಾಗಿ ವಿಸ್ತೃತವಾಗುವಿಕೆಯನ್ನೂ ಹೊಂದಿದ್ದೇನೆ. ಯಾವ ಪಿತೃಗಳು ದರ್ಭಾಸನವನ್ನಾಶ್ರಯಿಸಿರುವರೋ ಅವರು ನಮ್ಮ ಯಾಗಕ್ಕೆ ಬಂದಿದ್ದಾರೆ. ಸ್ವಧಾಸಂಜ್ಞಕವಾದ ಅನ್ನದೊಡನೆ ಹಿಂಡಲ್ಪಟ್ಟ ಸೋಮವನ್ನು ಸೇವಿಸುತ್ತಾರೆ-

English Translation

I have brought to my presence the Pitris who are well cognizant (of my worship), the infallibility, and progressive advance of the sacrifice; (the Pitris) who sit on the sacred grass frequently coming hither worship the food of the effused (Soma) with the sacrificial cake.

॥ ಸಂಹಿತಾಪಾಠಃ ॥

ಬರ್ಹಿಷದಃ ಪಿತರ ಊತ್ಯ೧ ರ್ವಾಗಿಮಾ ವೋ ಹವ್ಯಾ ಚಕ್ರಮಾ ಜುಷಧ್ವಂ ।

ತ ಆ ಗತಾವಸಾ ಶಂತಮೇನಾಥಾ ನಃ ಶಂ ಯೋರರಪೋ ದಧಾತ ॥ ೪ ॥

॥ ಪದಪಾಠಃ ॥

ಬರ್ಹಿಽಸದಃ । ಪಿತರಃ । ಊತೀ । ಅರ್ವಾಕ್ । ಇಮಾ । ವಃ । ಹವ್ಯಾ । ಚಕ್ರಮ । ಜುಷಧ್ವಂ ।

ತೇ । ಆ । ಗತ । ಅವಸಾ । ಶಂಽತಮೇನ । ಅಥ । ನಃ । ಶಂ । ಯೋಃ । ಅರಪಃ । ದಧಾತ ॥ ೪

॥ ಸಾಯಣಭಾಷ್ಯಂ ॥

ಹೇ ಬರ್ಹಿಷದಃ । ಯಜ್ಞೇ ಸೀದಂತೀತಿ ಬರ್ಹಿಷದಃ । ಅತ್ರಾಪಿ ಯೇ ವೈ ಯಜ್ವಾನಸ್ತೇ ಪಿತರೋ ಬರ್ಹಿಷದ ಇತ್ಯತ್ರ ಶ್ರುತತ್ವಾದ್ಯಾಗಂ ಕೃತ್ವಾ ಪ್ರೇತ್ಯ ಪಿತೃಲೋಕಂ ಪ್ರಾಪ್ತಾ ಬರ್ಹಿಷದಃ । ತಾದೃಶಾ ಹೇ ಪಿತರಃ ಅರ್ವಾಗರ್ವಾಚೀನಾನಸ್ಮಾಕಮೂತೀ ರಕ್ಷಾ ಭವದ್ಭಿಃ ಕರ್ತವ್ಯೇತಿ ಶೇಷಃ । ವೋ ಯುಷ್ಮದರ್ಥಮಿಮಾ ಹವ್ಯೈತಾನಿ ಹವೀಂಷಿ ಚಕೃಮ । ಅತಸ್ತಾನಿ ಜುಷಧ್ವಂ । ತೇ ಹವಿರ್ಜುಷ್ಟವಂತೋ ಯೂಯಂ ಶಂತಮೇನ ಸುಖತಮೇನಾವಸಾ ರಕ್ಷಣೇನ ನಿಮಿತ್ತಭೂತೇನಾ ಗತ । ಅಭಿಮುಖ್ಯೇನಾಸ್ಮಾನ್ಪ್ರಾಪ್ನುತ । ಅಥಾನಂತರಂ ನೋಽಸ್ಮಭ್ಯಂ ಶಂ ಸುಖಂ ಯೋರ್ದುಃಖವಿಯೋಗಮರಪಃ ಪಾಪರಹಿತಂ ಚ ದಧಾತ । ಪತ್ತ ॥

॥ ಪ್ರತಿಪದಾರ್ಥ ॥

**ಬರ್ಹಿಷದಃ**—ಯಜ್ಞದಲ್ಲಿ ಕುಳಿತಿರುವ । **ಪಿತರಃ**—ಎಲೈ ಪಿತೃಗಳೇ । **ಅರ್ವಾಕ್**—ನಿಮಗಭಿಮುಖವಾಗಿ ಕುಳಿತಿರುವ ನಮಗೆ । **ಊತೀ**—ನಿಮ್ಮ ರಕ್ಷಣೆಯು ಅವಶ್ಯವಾಗಿದೆ । **ವಃ**—ನಿಮ್ಮನ್ನುದ್ದೇಶಿಸಿ । **ಇಮಾ ಹವ್ಯಾ**—ಈ ಹವಿಸ್ಸುಗಳನ್ನು । **ಚಕೃಮ**—ನಿರ್ಮಿಸಿದ್ದೇವೆ । **ಜುಷಧ್ವಂ**—ಅದನ್ನು ಸೇವಿಸಿರಿ । **ತೇ**—ಹವಿಸ್ಸನ್ನು ಸೇವಿಸಿದ ನೀವು । **ಶಂತಮೇನ** । ಅತ್ಯಂತ ಸುಖಕಾರಕವಾದ । **ಅವಸಾ**—ರಕ್ಷಣೆಯೊಂದಿಗೆ । **ಆ ಗತ**—ನಮಗಭಿಮುಖವಾಗಿ ಬನ್ನಿರಿ । **ಅಥ**—ಅನಂತರ । **ನಃ**—ನಮಗೆ । **ಶಂ**—ಸುಖವನ್ನೂ । **ಯೋಃ**—ದುಃಖರಾಹಿತ್ಯವನ್ನೂ **ಅರಪಃ**—ಪಾಪರಾಹಿತ್ಯವನ್ನೂ । **ದಧಾತ**—ಉಂಟುಮಾಡಿರಿ.

॥ ಭಾವಾರ್ಥ ॥

ಯಜ್ಞದಲ್ಲಿ ಕುಳಿತಿರುವ ಎಲೈ ಪಿತೃಗಳೇ, ನಿಮಗಭಿಮುಖವಾಗಿ ಕುಳಿತಿರುವ ನಮಗೆ ನಿಮ್ಮ ರಕ್ಷಣೆಯು ಅತ್ಯವಶ್ಯವಾಗಿದೆ. ನಿಮ್ಮನ್ನುದ್ದೇಶಿಸಿ ಈ ಹವಿಸ್ಸುಗಳನ್ನು ನಿರ್ಮಿಸಿದ್ದೇವೆ. ಅವನ್ನು ಸೇವಿಸಿರಿ. ಹವಿಸ್ಸನ್ನು ಸೇವಿಸಿದ ನೀವು ಅತ್ಯಂತ ಸುಖಕಾರಕವಾದ ರಕ್ಷಣೆಯೊಂದಿಗೆ ನಮಗಭಿಮುಖವಾಗಿ ಬನ್ನಿರಿ. ಅನಂತರ ನಮಗೆ ಸುಖವನ್ನೂ ದುಃಖರಾಹಿತ್ಯಗಳನ್ನೂ ಪಾಪರಾಹಿತ್ಯವನ್ನೂ ಉಂಟುಮಾಡಿರಿ.

## English Translation

Pitris, Barhishads, protect (us who are) in your presence; we have made these oblations for you, accept them: come with your most felicitous protection, and bestow upon us health and happiness, and pardon from sin.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ ಶಂ ಯೋಃ ಎಂಬ ಶಬ್ದಗಳಿಗೆ ಯಾಸ್ಕರು ನಿರ್ವಚನವನ್ನು ಹೇಳಿ ಅರ್ಥ ವಿವರಣೆಮಾಡಿದಾರೆ—

**ಶಂಯೋಃ । (ಶಂಯುಃ ಸುಖಂಯುಃ) ಅಥಾ ನಃ ಶಂಯೋರರಪೋ ದಧಾತ । ರಪೋ ರಿಪ್ರಮಿತಿ ಪಾಪನಾಮನೀ ಭವತಃ । ಶಮನಂ ಚ ರೋಗಾಣಾಂ ಯಾವನಂ ಚ ಭಯಾನಾಂ ॥**

(ನಿ ೪-೨೧)

**ಶಂಯುಃ**—ಎಂದರೆ, ಶಾಂತಿ ಅಥವಾ ಸುಖವನ್ನು ಅಪೇಕ್ಷಿಸುವುದು. ನನಗೆ ಪಾಪರಹಿತವಾದ ಸುಖ ಶಾಂತಿಗಳನ್ನು ಅನುಗ್ರಹಿಸು ಎಂದು ಉದಾಹರಣವಾಕ್ಯದ ಅರ್ಥವು. ರಪಃ ರಿಪ್ರಂ ಎಂಬ ಎರಡು ಶಬ್ದಗಳೂ ಪಾಪವೆಂಬ ಅರ್ಥವನ್ನು ಸೂಚಿಸುವ ಪರ್ಯಾಯಪದಗಳು. ರೋಗಾದಿಗಳಿಂದ ಶಮನವನ್ನು ಎಂದರೆ ಬಿಡುಗಡೆಯನ್ನು ಭಯದಿಂದ ಪರಿಹಾರವನ್ನೂ ಕಲ್ಪಿಸು ಎಂದಭಿಪ್ರಾಯವು.

**ಬರ್ಹಿಷದ ಪಿತರಃ**—ಈ ವಿಧವಾದ ಪಿತೃಗಳು ಯಾರು ಎಂಬುವುದನ್ನು ಭಾಷ್ಯಕಾರರು ಈ ರೀತಿ ವಿವರಿಸಿದಾರೆ—**ಬರ್ಹಿಷದಃ ಯಜ್ಞೇ ಸೀದಂತೀತಿ ಬರ್ಹಿಷದಃ । ಅತ್ರಾಪಿ-ಯೇ ವೈ ಯಜ್ವಾನಸ್ತೇ ಪಿತರೋ ಬರ್ಹಿಷದಃ** (ತೈ. ಬ್ರಾ. ೧.೬.೯) **ಇತ್ಯತ್ರ ಶ್ರುತತ್ವಾದ್ಯಾಗಂ ಕೃತ್ವಾ ಪ್ರೇತ್ಯ ಪಿತೃಲೋಕಂ ಪ್ರಾಪ್ತಾ ಬರ್ಹಿಷದಃ । ಬರ್ಹಿಷದಃ** ಎಂಬ ಶಬ್ದಕ್ಕೆ-ಯಜ್ಞದಲ್ಲಿ ಆಸನಾರ್ಥವಾಗಿ ಹರಡಿರುವ ಬರ್ಹಿಃ ಎಂಬ ದರ್ಭೆಗಳ ಮೇಲೆ ಬಂದು ಕುಳಿತಿರುವವರು ಎಂದರ್ಥವು. ಆಹ್ವಾನಿತರಾದ ದೇವತೆಗಳು ಬಂದು ಕೂಡುವುದಕ್ಕಾಗಿಯೂ ಈ ವಿಧವಾದ ದರ್ಭಾಸನವನ್ನು ಯಜ್ಞಗಳಲ್ಲಿ ಸಿದ್ಧಪಡಿಸುವರು. ಪ್ರಕೃತ ಋಕ್ಕಿನಲ್ಲಿ ಹೇಳಿರುವ ಪಿತೃಗಳೆಂದರೆ-ಹಿಂದೆ ಯಜ್ಞಯಾಗಾದಿಗಳನ್ನು ವಿಧ್ಯುಕ್ತವಾಗಿ ಮಾಡಿ ಮೃತರಾದ ಮೇಲೆ ಪಿತೃಲೋಕಕ್ಕೆ ಹೋದವರಿಗೆ ಬರ್ಹಿಷದಃ ಎಂದು ಹೆಸರು ಎಂದು ಭಾಷ್ಯಕಾರರು ಈ ಶಬ್ದಕ್ಕೆ ಅರ್ಥವಿವರಣೆಮಾಡಿದಾರೆ.

॥ ಸಂಹಿತಾಪಾಠಃ ॥

ಉಪಹೂತಾಃ ಪಿತರಃ ಸೋಮ್ಯಾಸೋ ಬರ್ಹಿಷ್ಯೇಷು ನಿಧಿಷು ಪ್ರಿಯೇಷು ।
ತ ಆ ಗಮಂತು ತ ಇಹ ಶ್ರುವಂತ್ವಧಿ ಬ್ರುವಂತು ತೇಽವಂತ್ವಸ್ಮಾನ್ ॥ ೫ ॥

॥ ಪದಪಾಠಃ ॥

ಉಪಽಹೂತಾಃ । ಪಿತರಃ । ಸೋಮ್ಯಾಸಃ । ಬರ್ಹಿಷ್ಯೇಷು । ನಿಽಧಿಷು । ಪ್ರಿಯೇಷು ।
ತೇ । ಆ । ಗಮಂತು । ತೇ । ಇಹ । ಶ್ರುವಂತು । ಅಧಿ । ಬ್ರುವಂತು । ತೇ । ಅವಂತು । ಅಸ್ಮಾನ್ ॥೫॥

॥ ಸಾಯಣಭಾಷ್ಯಂ ॥

ಮಹಾಪಿತೃಯಜ್ಞೇ ಪಿತರಃ ಸೋಮವಂತ ಇತ್ಯಸ್ಯ ಯಾಜ್ಯೋಪಹೂತಾಃ ಪಿತರ ಇತ್ಯೇಷಾ । ಸೂತ್ರಿತಂ ಚ । ಉಪಹೂತಾಃ ಪಿತರಃ ಸೋಮ್ಯಾಸಸ್ತ್ವಂ ಸೋಮ ಪ್ರ ಚಿಕಿತೋ ಮನೀಷಾ । ಆ. ೨-೧೯ । ಇತಿ ॥

ಸೋಮ್ಯಾಸಃ ಸೋಮ್ಯಾ ಅಸ್ಮದನುಗ್ರಹಪರಾಃ ಸೋಮಸಂಪಾದಿನೋ ವಾ ಪಿತರೋ ಬರ್ಹಿಷ್ಯೇಷು ಯಾಗಾರ್ಹೇಷು ಪ್ರಿಯೇಷು ತೃಪ್ತಿಕರೇಷು ನಿಧಿಷು ನಿಧಿಸದೃಶೇಷು ಹವಿಃಷು ನಿಮಿತ್ತಭೂತೇಷು ಸತ್ಸೂಪಹೂತಾ ಅಸ್ಮಾಭಿರಾಹೂತಾಸ್ತೇ ಪಿತರ ಆ ಗಮಂತು । ಆಗಚ್ಛಂತು । ಆಗತ್ಯ ಚೇಹಾಸ್ಮಿ-

ನ್ಕರ್ಮಣ್ಯಸ್ಮಾಭಿಃ ಪ್ರಯುಕ್ತಾಃ ಸ್ತುತೀಃ ಶ್ರುವಂತು । ಶೃಣ್ವಂತು । ಶ್ರುತ್ವಾ ಚಾಧಿ ಬ್ರುವಂತು ಸಾಧುರಯಂ ಯಜಮಾನ ಇತ್ಯಾದರೇಣ ಕಥಯಂತು । ತೇ ತಾದೃಶಾಃ ಪಿತರೋಽಸ್ಮಾನವಂತು । ರಕ್ಷಂತು ।

॥ ಪ್ರತಿಪದಾರ್ಥ ॥

(ಯಾರು) **(ಯೇ) ಸೋಮ್ಯಾಸಃ**—ನಮ್ಮಲ್ಲಿ ಅನುಗ್ರಹ ಬುದ್ಧಿಯುಳ್ಳವರೋ । **ತೇ ಪಿತರಃ**—ಆ ಪಿತೃಗಳು । **ಬರ್ಹಿಷ್ಯೇಷು**—ಯಾಗಾರ್ಹವಾದವೂ । **ಪ್ರಿಯೇಷು**—ಪ್ರೀತಿಕಾರಕವಾದವೂ ಆದ । **ನಿಧಿಷು**—ಹವಿಸ್ಸುಗಳ ನಿಮಿತ್ತವಾಗಿ । **ಉಪಹೂತಾಃ**—ಕರೆಯಲ್ಪಟ್ಟವರಾಗಿ । **ಆ ಗಮಂತು**—ದಯಮಾಡಲಿ । **ಇಹ**—ನಮ್ಮ ಕರ್ಮಗಳಲ್ಲಿ । **ಶ್ರುವಂತು**—ನಮ್ಮ ಸ್ತುತಿಗಳನ್ನು ಕೇಳಲಿ । **ಅಧಿ ಬ್ರುವಂತು**—ನಮ್ಮ ಪ್ರಶಂಸೆಯನ್ನು ಮಾಡಲಿ । **ತೇ**—ಅವರು । **ಅಸ್ಮಾನ್**—ನಮ್ಮನ್ನು । **ಅವಂತು**—ರಕ್ಷಿಸಲಿ ।

॥ ಭಾವಾರ್ಥ ॥

ಯಾಗಾರ್ಹವೂ, ಪ್ರೀತಿಕಾರಕವೂ ಆದ ಹವಿಸ್ಸುಗಳನ್ನು ಸ್ವೀಕರಿಸಲು ನಾವು ಯಾವ ಪಿತೃಗಳನ್ನು ಕರೆಯುತ್ತೇವೆಯೋ ಅಂತಹ ಪಿತೃಗಳು ನಮ್ಮಲ್ಲಿ ಅನುಗ್ರಹ ಬುದ್ಧಿಯನ್ನು ತೋರಿಸುತ್ತಾ ಬರಲಿ. ಈ ಕರ್ಮಕಾಲಗಳಲ್ಲಿ ಪಠಿತವಾಗುವ ನಮ್ಮ ಸ್ತುತಿಗಳನ್ನು ಕೇಳಲಿ. ನಮ್ಮ ವಿಷಯದಲ್ಲಿ ಪ್ರಶಂಸಾವಾಕ್ಯಗಳನ್ನು ಹೇಳಲಿ. ಅವರು ನಮ್ಮನ್ನು ರಕ್ಷಿಸಲಿ.

English Translation

May the Pitris who are entitled to the Soma come, when invoked by us, to the agreeable treasures connected with the sacred grass; let them here listen (to our praises). let them protect us.

॥ ವಿಶೇಷವಿಷಯಗಳು ॥

ಮಹಾಪಿತೃಯಜ್ಞದಲ್ಲಿ **ಪಿತರಃ ಸೋಮವಂತಃ** ಎಂಬ ಗಣದ ಪಿತೃದೇವತೆಗಳನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ಉಪಹೂತಾಃ ಪಿತರಃ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ-**ಉಪಹೂತಾಃ ಪಿತರಃ ಸೋಮ್ಯಾಸಸ್ತ್ವಂ ಸೋಮ ಪ್ರ ಚಿಕಿತೋ ಮನೀಷಾ** ಎಂಬ ಸೂತ್ರದಿಂದ (ಆ. ೨-೧೯) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಆಚ್ಯಾ ಜಾನು ದಕ್ಷಿಣತೋ ನಿಷದ್ಯೇಮಂ ಯಜ್ಞಮಭಿ ಗೃಣೀತ ವಿಶ್ವೇ ।**

**ಮಾ ಹಿಂಸಿಷ್ಟ ಪಿತರಃ ಕೇನ ಚಿನ್ನೋ ಯದ್ವ ಆಗಃ ಪುರುಷತಾ ಕರಾಮ ॥**

॥ ಪದಪಾಠಃ ॥

ಆऽಅಚ್ಯ । ಜಾನು । ದಕ್ಷಿಣತಃ । ನಿऽಸದ್ಯ । ಇಮಂ । ಯಜ್ಞಂ । ಅಭಿ । ಗೃಣೀತ । ವಿಶ್ವೇ ।

ಮಾ । ಹಿಂಸಿಷ್ಟ । ಪಿತರಃ । ಕೇನ । ಚಿತ್ । ನಃ । ಯತ್ । ವಃ । ಆಗಃ । ಪುರುಷತಾ । ಕರಾಮ ॥ ೬

॥ ಸಾಯಣಭಾಷ್ಯಂ ॥

ಪಿತೄಣಾಮಯಂ ಸ್ವಾಭಾವಿಕೋ ಧರ್ಮಃ ಅಥೈನಂ ಪಿತರಃ ಪ್ರಾಚೀನಾವೀತಿನಃ ಸವ್ಯಂ ಜಾನ್ವಾಚ್ಯ । ಶತ-೨-೪-೨-೨ । ಇತಿ ವಚನಾತ್ । ಹೇ ಪಿತರಃ ವಿಶ್ವೇ ಸರ್ವೇ ಯೂಯಂ ಜಾನ್ವಾಚ್ಯ ಭೂಮೌ ನಿಪಾತ್ಯ ದಕ್ಷಿಣತೋ ದಕ್ಷಿಣಪಾರ್ಶ್ವೇ ನಿಷದ್ಯೋಪವಿಶ್ಯೇಮಮಸ್ಮದೀಯಂ ಯಜ್ಞಮಭಿ ಗೃಣೀತ । ಅಭಿಷ್ಟುತ । ವಿಶಿಷ್ಟತೃಪ್ತಿಯೋಗಾತ್ಪರಯಾ ಪ್ರೀತ್ಯಾ ಸಗುಣೋऽಯಂ ಯಜ್ಞ ಇತಿ ಪ್ರಶಂಸತೇತ್ಯರ್ಥಃ । ಅಪಿ ಚ ವೋ ಯುಷ್ಮಾಕಂ ಯತ್ಕಿಂಚಿತ್ಕರ್ಮವೈಗುಣ್ಯಜನಿತಮಾಗೋऽಪರಾಧಂ ಪುರುಷತಾ ಮನುಷ್ಯತ್ವೇನ ಹೇತುನಾ ಕರಾಮ ವಯಂ ಕೃತವಂತಃ ಹೇ ಪಿತರಃ ತೇನ ಕೇನ ಚಿದಪ್ಯಪರಾಧೇನ ನೋऽಸ್ಮಾನ್ಮಾ ಹಿಂಸಿಷ್ಟ ॥

॥ ಪ್ರತಿಪದಾರ್ಥ ॥

**ಪಿತರಃ**—ಎಲೈ ಪಿತೃಗಳೇ । **ವಿಶ್ವೇ**—ನೀವೆಲ್ಲರೂ । **ಜಾನು ಆಚ್ಯ**—ಮೊಳಕಾಲನ್ನೂರಿ ಕುಳಿತು । **ದಕ್ಷಿಣತಃ**—ದಕ್ಷಿಣಪಾರ್ಶ್ವದಲ್ಲಿ । **ನಿಷದ್ಯ**—ಕುಳಿತು । **ಇಮಂ ಯಜ್ಞಂ**—ನಮ್ಮ ಈ ಯಾಗವನ್ನು । **ಅಭಿ ಗೃಣೀತ**—ಪ್ರಶಂಸಿಸಿರಿ । **ವಃ**—ನಿಮ್ಮ ವಿಷಯದಲ್ಲಿ । **ಯತ್ ಆಗಃ**—ಯಾವುದೇ ಆದ ಪಾಪವನ್ನು । **ಪುರುಷತಾ**—ಮಾನವನಿಗೆ ಸಹಜವಾದ ಅಜ್ಞಾನದಿಂದ । **ಕರಾಮ**—ನಾವು ಮಾಡಿದ್ದೇ ಆದರೆ । **ಕೇನ ಚಿತ್**—ಆ ಯಾವ ವಿಧವಾದ ಪಾಪಕ್ಕಾಗಿಯೂ । **ನಃ**—ನಮ್ಮನ್ನು । **ಮಾ ಹಿಂಸಿಷ್ಟ**—ಹಿಂಸಿಸಬೇಡಿರಿ ।

॥ ಭಾವಾರ್ಥ ॥

ಎಲೈ ಪಿತೃಗಳೇ, ನೀವೆಲ್ಲರೂ ಮೊಳಕಾಲನ್ನೂರಿ ದಕ್ಷಿಣ ಪಾರ್ಶ್ವದಲ್ಲಿ ಕುಳಿತು ನಮ್ಮ ಈ ಯಾಗವನ್ನು ಪ್ರಶಂಸಿಸಿರಿ. ನಿಮ್ಮ ವಿಷಯದಲ್ಲಿ ಯಾವುದೇ ಆದ ಪಾಪವನ್ನಾಗಲಿ, ಮಾನವನಿಗೆ ಸಹಜವಾದ ಅಜ್ಞಾನದಿಂದ ನಾವು ಮಾಡಿದ್ದೇ ಆದರೆ, ಆ ಯಾವ ವಿಧವಾದ ಪಾಪಕ್ಕಾಗಿಯೂ ನಮ್ಮನ್ನು ಹಿಂಸಿಸಬೇಡಿರಿ.

English Translation

Having sat down on the right side with bended knee, you all accept this sacrifice. Harm us not, Pitris, for any offence which through human (infirmity) we may have committed towards you.

॥ ವಿಶೇಷವಿಷಯಗಳು ॥

**ಆಚ್ಯ ಜಾನು ದಕ್ಷಿಣತಃ ನಿಷದ್ಯ**—ಪಿತೃಣಾಮಯಂ ಸ್ವಾಭಾವಿಕೋ ಧರ್ಮಃ । ಅಥೈನಂ ಪಿತರಃ ಪ್ರಾಚೀನಾವೀತಿನಃ ಸವ್ಯಂ ಜಾನ್ವಾಚ್ಯ (ಶ.ಬ್ರಾ.೨-೪-೨-೨) ಇತಿ ವಚನಾತ್ । ಪಿತೃಗಳನ್ನು ಸಂಬೋ

ಧಿಸಿ ಋಷಿಯು ಈ ರೀತಿ ಹೇಳಿರುವನು—ಎಲೈ ಪಿತೃಗಳೇ, ನೀವು ನಿಮ್ಮ ಬಲಭಾಗದ ಮೊಣಕಾಲನ್ನೂರಿ ಯಜ್ಞೋಪವೀತವನ್ನು ಎಡಕ್ಕೆ ಹಾಕಿಕೊಂಡು ಈ ಯಜ್ಞವೇದಿಕೆಯಲ್ಲಿ ದಕ್ಷಿಣದಿಕ್ಕಿನಲ್ಲಿ ಸಿದ್ಧಪಡಿಸಿರುವ ಆಸನದಲ್ಲಿ ಬಂದು ಕುಳಿತುಕೊಳ್ಳಿ ಎಂದು. ಮೊಳಕಾಲನ್ನು ಊರಿ ದಕ್ಷಿಣಾಭಿಮುಖವಾಗಿ ಕುಳಿತುಕೊಳ್ಳುವುದು ಪಿತೃಗಳಿಗೆ ಉಕ್ತವಾಗಿರುವ ಸ್ವಾಭಾವಿಕ ಧರ್ಮವೆಂದು ಭಾಷ್ಯಕಾರರು ಹೇಳಿ ಇದನ್ನು ಸಮರ್ಥಿಸುವುದಕ್ಕಾಗಿ ಶತಪಥ ಬ್ರಾಹ್ಮಣದ ವಾಕ್ಯವನ್ನು ಉದಾಹರಣೆಯಾಗಿ ಕೊಟ್ಟಿರುವರು.

॥ ಸಂಹಿತಾಪಾಠಃ ॥

ಆಸೀನಾಸೋ ಅರುಣೀನಾಮುಪಸ್ಥೇ ರಯಿಂ ಧತ್ತ ದಾಶುಷೇ ಮರ್ತ್ಯಾಯ ।
ಪುತ್ರೇಭ್ಯಃ ಪಿತರಸ್ತಸ್ಯ ವಸ್ವಃ ಪ್ರ ಯಚ್ಛತ ತ ಇಹೋರ್ಜಂ ದಧಾತ ॥೭॥

॥ ಪದಪಾಠಃ ॥

ಆಸೀನಾಸಃ । ಅರುಣೀನಾಂ । ಉಪsಸ್ಥೇ । ರಯಿಂ । ಧತ್ತ । ದಾಶುಷೇ । ಮರ್ತ್ಯಾಯ ।

ಪುತ್ರೇಭ್ಯಃ । ಪಿತರಃ । ತಸ್ಯ । ವಸ್ವಃ । ಪ್ರ । ಯಚ್ಛತ । ತೇ । ಇಹ । ಊರ್ಜಂ । ದಧಾತ ॥ ೭ ॥

॥ ಸಾಯಣಭಾಷ್ಯಂ ॥

ಅರುಣೀನಾಮಾರೋಚಮಾನಾನಾಂ ಜ್ವಾಲಾನಾಂ ವಾ ದೇವತಾನಾಂ ವೋಪಸ್ಥೇ ಸಮೀಪಸ್ಥಾನೇ ವೇದ್ಯಾಖ್ಯ ಆಸೀನಾಸ ಉಪವಿಷ್ಟಾಃ ಪಿತರಃ ಯೂಯಂ ದಾಶುಷೇ ಹವಿರ್ದತ್ತವತೇ ಮರ್ತ್ಯಾಯ ಮನುಷ್ಯಾಯ ಯಜಮಾನಾಯ ರಯಿಂ ಧನಂ ಧತ್ತ । ದತ್ತ । ಹೇ ಪಿತರಃ ಯೂಯಂ ತಸ್ಯ ಯಜಮಾನಸ್ಯ ಪುತ್ರೇಭ್ಯೋ ವಸ್ವೋ ವಸು ಧನಂ ಪ್ರ ಯಚ್ಛತ । ತೇ ತಾದೃಶಾ ಯೂಯಮಿಹಾಸ್ಮಿನ್ನಸ್ಮದೀಯೇ ಕರ್ಮಣ್ಯೂರ್ಜಂ ಧನಂ ದಧಾತ । ನಿಧತ್ತ ॥

॥ ಪ್ರತಿಪದಾರ್ಥ ॥

**ಪಿತರಃ**—ಎಲೈ ಪಿತೃಗಳೇ । **ಅರುಣೀನಾಂ**—ಆಕರ್ಷಕವಾದ ಜ್ವಾಲೆಗಳ । **ಉಪಸ್ಥೇ**—ಸಮೀಪದಲ್ಲಿ । **ಆಸೀನಾಸಃ**—ಕುಳಿತಿರುವ ನೀವು । **ದಾಶುಷೇ**—ಹವಿಸ್ಸನ್ನು ಅರ್ಪಿಸಿದ । **ಮರ್ತ್ಯಾಯ**—ಯಜಮಾನನಿಗೆ । **ರಯಿಂ**—ಧನವನ್ನು । **ಧತ್ತ**—ಕೊಡಿರಿ । **ತಸ್ಯ**—ಆ ಯಜಮಾನನ । **ಪುತ್ರೇಭ್ಯಃ**—ಪುತ್ರರಿಗೆ । **ವಸ್ವಃ**—ಧನವನ್ನು । **ಪ್ರ ಯಚ್ಛತ**—ಕೊಡಿರಿ । **ತೇ**—ಪ್ರಸಿದ್ಧರಾದ ನೀವು । **ಇಹ**—ನಮ್ಮ ಈ ಯಾಗಕರ್ಮದಲ್ಲಿ । **ಊರ್ಜಂ**—ಧನವನ್ನು । **ದಧಾತ**—ಸ್ಥಾಪಿಸಿರಿ ।

॥ ಭಾವಾರ್ಥ ॥

ಎಲೈ ಪಿತೃಗಳೇ, ಆಕರ್ಷಕವಾದ ಜ್ವಾಲೆಗಳ ಸಮೀಪದಲ್ಲಿ ಕುಳಿತಿರುವ ನೀವು ಹವಿಸ್ಸನ್ನು ಅರ್ಪಿಸಿದ ಯಜಮಾನನಿಗೆ ಧನವನ್ನು ಕೊಡಿರಿ. ಆ ಯಜಮಾನನ ಪುತ್ರನಿಗೆ ಧನವನ್ನು ಒದಗಿಸಿರಿ. ಪ್ರಸಿದ್ಧರಾದ ನೀವು ನಮ್ಮ ಈ ಯಾಗಕರ್ಮದಲ್ಲಿ ಧನವನ್ನು ಸ್ಥಾಪಿಸಿರಿ.

## English Translation

Seated in the proximity of the radiant (flames of the altar), bestow riches on the mortal donor (of the oblation); give wealth, Pitris, to his sons; you are present, grant us vigour.

॥ ಸಂಹಿತಾಪಾಠಃ ॥

ಯೇ ನಃ ಪೂರ್ವೇ ಪಿತರಃ ಸೋಮ್ಯಾಸೋಽನೂಹಿರೇ ಸೋಮಪೀಥಂ
ವಸಿಷ್ಠಾಃ ।
ತೇಭಿರ್ಯಮಃ ಸಂರರಾಣೋ ಹವೀಂಷ್ಯುಶನ್ನುಶದ್ಭಿಃ ಪ್ರತಿಕಾಮಮತ್ತು ॥

॥ ಪದಪಾಠಃ ॥

ಯೇ । ನಃ । ಪೂರ್ವೇ । ಪಿತರಃ । ಸೋಮ್ಯಾಸಃ । ಅನುಽಊಹಿರೇ । ಸೋಮಽಪೀಥಂ । ವಸಿಷ್ಠಾಃ ।
ತೇಭಿಃ । ಯಮಃ । ಸಂಽರರಾಣಃ । ಹವೀಂಷಿ । ಉಶನ್ । ಉಶತ್ಽಭಿಃ । ಪ್ರತಿಽಕಾಮಂ । ಅತ್ತು ॥೮॥

ಸಾಯಣಭಾಷ್ಯಂ ॥

ಸೋಮ್ಯಾಸಃ ಸೋಮಸಂಪಾದಿನೋ ವಸಿಷ್ಠಾ ವಸ್ತೃತಮಾಃ ಕೃತಾಚ್ಛಾದನಾ ಧನವತ್ತಮಾ ವಾ ನೋಽಸ್ಮಾಕಂ ಯೇ ಪೂರ್ವೇ ಪಿತರಃ ಸೋಮಪೀಥಂ ಸೋಮಪಾನಮನೂಹಿರೇ ಆನುಪೂರ್ವ್ಯೇಣ ದೇವೇಭ್ಯಶ್ಚ ಪಿತೃಭ್ಯಶ್ಚ ಪ್ರಾಪ್ನುವಂತಃ । ದತ್ತವಂತ ಇತ್ಯರ್ಥಃ । ಉಶನ್ ಪಿತೃಭಿಃ ಸಹ ಸಂಭೋಗಂ ಕಾಮಯಮಾನೋ ಯಮಃ ಪಿತೃಪತಿರುಶದ್ಭಿರ್ಯಮೇನ ಸಹ ಸಂಭೋಗಂ ಕಾಮಯಮಾನ-ಸ್ತೇಭಿಸ್ತೈರಸ್ಮದೀಯೈಃ ಪಿತೃಭಿಃ ಸಹ ರರಾಣೋ ರಮಮಾಣೋ ಹವೀಂಷ್ಯಸ್ಮಾಭಿರ್ದತ್ತಾನಿ ಪ್ರತಿಕಾಮಂ ಕಾಮಂ ಕಾಮಂ ಪ್ರತ್ಯತ್ತು । ಯಾನಿ ಯಾನಿ ಹವೀಂಷಿ ಕಾಮಯತೇ ತಾನಿ ತಾನಿ ಭಕ್ಷಯತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

ನಃ—ನಮ್ಮ (ತಮ್ಮ) ಸೋಮ್ಯಾಸಃ—ಸೋಮವನ್ನು ಯಥಾವಿಧಿಯಾಗಿ ಅರ್ಪಿಸಿದವರೂ । ವಸಿಷ್ಠಾಃ—ಅತ್ಯಂತ ಶ್ರೇಷ್ಠರೂ । ಪೂರ್ವೇ—ಪೂರ್ವಜರೂ ಆದ । ಯೇ ಪಿತರಃ— ಯಾವ ಪಿತೃಗಳು । ಸೋಮಪೀಥಂ—ಸೋಮಪಾನವನ್ನು । ಅನೂಹಿರೇ—ದೇವತೆಗಳಿಗೆ ಮಾಡಿಸಿದರೋ । ತೇಭಿಃ—ಅಂತಹವರೂ । ಉಶದ್ಭಿಃ—(ಯಮನೊಡನೆ ಸಂಬಂಧವನ್ನು) ಇಚ್ಛಿಸಿದವರೂ ಆದ ಪಿತೃಗಳೊಡನೆ। ರರಾಣಃ—ಹರ್ಷವನ್ನು ಹೊಂದುವವನೂ।

ಉಶನ್—ನಮ್ಮ ಹವಿಸ್ಸುಗಳನ್ನು ಅಪೇಕ್ಷಿಸುವವನೂ ಆದ । **ಯಮಃ**—ಯಮನು । **ಹವೀಂಷಿ**—ನಮ್ಮಿಂದ ಅರ್ಪಿತವಾದ ಹವಿಸ್ಸುಗಳನ್ನು । **ಪ್ರತಿಕಾಮಂ**—ಯಥೇಚ್ಛವಾಗಿ । **ಅತ್ತು**—ಸ್ವೀಕರಿಸಲಿ ।

॥ ಭಾವಾರ್ಥ ॥

ತಮ್ಮ ಸೋಮವನ್ನು ಯಥಾವಿಧಿಯಾಗಿ ಅರ್ಪಿಸಿದವರೂ ಅತ್ಯಂತ ಶ್ರೇಷ್ಠರೂ ಪೂರ್ವಜರೂ ಆದ ಯಾವ ಪಿತೃಗಳು ಸೋಮಪಾನವನ್ನು ದೇವತೆಗಳಿಗೆ ಮಾಡಿಸಿದರೋ ಅಂತಹವರೂ ಯಮನೊಡನೆ ಸಂಬಂಧವನ್ನು ಇಚ್ಛಿಸಿದವರೂ ಆದ ಪಿತೃಗಳೊಡನೆ ಹರ್ಷವನ್ನು ಹೊಂದುವವನೂ, ನಮ್ಮ ಹವಿಸ್ಸುಗಳನ್ನು ಅಪೇಕ್ಷಿಸುವವನೂ ಆದ ಯಮನು ನಮ್ಮಿಂದ ಅರ್ಪಿತವಾದ ಹವಿಸ್ಸುಗಳನ್ನು ಯಥೇಚ್ಛವಾಗಿ ಸ್ವೀಕರಿಸಲಿ.

English Translation

May yama, being propitiated, desirous (of the offering), partake at pleasure of the oblations along with those our ancient progenitors the Saumyas, the possessors of great wealth, who also desire it, and who conveyed the Soma beverage (to the gods and to the Pitris) in order.

॥ ಸಂಹಿತಾಪಾಠಃ ॥

ಯೇ ತಾತೃಷುರ್ದೇವತ್ರಾ ಜೇಹಮಾನಾ ಹೋತ್ರಾವಿದಃ ಸ್ತೋಮತಷ್ಟಾಸೋ ಅರ್ಕೈಃ ।
ಆಗ್ನೇ ಯಾಹಿ ಸುವಿದತ್ರೇಭಿರರ್ವಾಙ್ ಸತ್ಯೈಃ ಕವ್ಯೈಃ ಪಿತೃಭಿರ್ಘರ್ಮಸದ್ಭಿಃ ॥ ೯ ॥

॥ ಪದಪಾಠಃ ॥

ಯೇ । ತತೃಷುಃ । ದೇವऽತ್ರಾ । ಜೇಹಮಾನಾಃ । ಹೋತ್ರಾऽವಿದಃ । ಸ್ತೋಮऽತಷ್ಟಾಸಃ । ಅರ್ಕೈಃ ।
ಆ । ಅಗ್ನೇ । ಯಾಹಿ । ಸುऽವಿದತ್ರೇಭಿಃ । ಅರ್ವಾಙ್ । ಸತ್ಯೈಃ । ಕವ್ಯೈಃ । ಪಿತೃऽಭಿಃ । ಘರ್ಮಸತ್ऽಭಿಃ ॥ ೯ ॥

॥ ಸಾಯಣಭಾಷ್ಯಂ ॥

ಮಹಾಪಿತೃಯಜ್ಞೇಽಗ್ನೇಃ ಕವ್ಯವಾಹನಸ್ಯ ಯೇ ತಾತೃಷುರಿತ್ಯೇಷಾ ಪ್ರಥಮಾನುವಾಕ್ಯಾ । ಸೂತ್ರಿತಂ ಚ । ಯೇ ತಾತೃಷುರ್ದೇವತ್ರಾ ಜೇಹಮಾನಾಸ್ತ್ವದಗ್ನೇ ಕಾವ್ಯಾ ತ್ವನ್ಮನೀಷಾಃ । ಆ. ೨.೧೯। ಇತಿ ॥

**ದೇವತ್ರಾ ದೇವಾಞ್ಛೀಹಮಾನಾಃ ಕ್ರಮೇಣ ಗಚ್ಛಂತಃ । ಕ್ರಮೇಣ ದೇವತ್ವಂ ಪ್ರಾಪ್ತಾ ಇತ್ಯರ್ಥಃ । ಹೋತ್ರಾವಿದೋ ಯಜ್ಞಾನ್ಸಮ್ಯಕ್ಕರ್ತುಂ ವೇದಿತಾರೋಽರ್ಕೈರರ್ಚನೀಯೈಃ ಸ್ತೋತ್ರೈಃ ಸ್ತೋಮತಷ್ಟಾಸಃ ಸ್ತೋಮಾನಾಂ ಚ ಸಮ್ಯಕ್ಕರ್ತಾರೋ ಯೇ ಪಿತರಸ್ತಾತೃಷುಃ ತೃಷ್ಯಂತಿ ಹೇ ಅಗ್ನೇ ತ್ವಂ ತೈಃ ಪಿತೃಭಿರರ್ವಾಙಸ್ಮದಭಿಮುಖ ಆ ಯಾಹಿ । ಆಗಚ್ಛ । ಕೀದೃಶೈಃ । ಸುವಿದತ್ರೇಭಿಃ ಸುವಿದತ್ರೈಃ ಸತ್ಯೈರವಿಸಂವಾದಿಭಿಃ ಕವ್ಯೈಃ । ಕವ್ಯಂ ನಾಮ ಪಿತೃದೇವತ್ಯಂ ಹವಿಃ । ತತ್ಸಂಬಂಧಿಭಿಃ । ಯದ್ವಾ । ಕವ್ಯೈಃ ಕವಿಭಿರ್ಮೇಧಾವಿಭಿಃ ॥ ಸ್ವಾರ್ಥಿಕೋ ಯತ್ ॥ ಘರ್ಮಸದ್ಭಿರ್ಯಜ್ಞಸಾದಿಭಿಃ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ದೇವತ್ರಾ**—ದೇವತ್ವವನ್ನು । **ಜೇಹಮಾನಾಃ**—ಯಥಾಕ್ರಮವಾಗಿ ಹೊಂದಿದವರೂ । **ಹೋತ್ರಾವಿದಃ**—ಯಾಗಕ್ರಮವನ್ನು ಅರಿತವರೂ । **ಅರ್ಕೈಃ**—ಸ್ತುತಿಗಳಿಂದ । **ಸ್ತೋಮತಷ್ಟಾಸಃ**—ಸ್ತೋಮಗಳನ್ನು ಪರಿಷ್ಕರಿಸುವವರೂ ಆದ । **ಯೇ**—ಯಾವ ಪಿತೃಗಳು । **ತಾತೃಷುಃ**—ದೇವಸಂಬಂಧವನ್ನು ಇಚ್ಛಿಸುವರೋ ಅಂತಹ । **ಘರ್ಮಸದ್ಭಿಃ**—ಯಜ್ಞಕಾರಕರೂ । **ಸುವಿದತ್ರೇಭಿಃ**—ಉತ್ತಮಜ್ಞಾನವುಳ್ಳವರೂ । **ಸತ್ಯೈಃ**—ಸತ್ಯಾತ್ಮಕರೂ । **ಕವ್ಯೈಃ**—ಮೇಧಾವಿಗಳೂ ಆದ । **ಪಿತೃಭಿಃ**—ಪಿತೃಗಳೊಡನೆ । **ಅರ್ವಾಙ್**—ನಮಗಭಿಮುಖವಾಗಿ । **ಆ ಯಾಹಿ**—ದಯಮಾಡು ।

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಥಾಕ್ರಮವಾಗಿ ದೇವತ್ವವನ್ನು ಹೊಂದಿದವರೂ, ಯಾಗಕ್ರಮವನ್ನು ಅರಿತವರೂ, ಸ್ತುತಿಗಳಿಂದ ಸ್ತೋಮಗಳನ್ನು ಪರಿಷ್ಕರಿಸುವವರೂ ಆದ ಯಾವ ಪಿತೃಗಳು ದೇವಸಂಬಂಧವನ್ನು ಇಚ್ಛಿಸುವರೋ ಅಂತಹ ಯಜ್ಞಕಾರಕರೂ, ಉತ್ತಮಜ್ಞಾನವುಳ್ಳವರೂ, ಸತ್ಯಾತ್ಮಕರೂ, ಮೇಧಾವಿಗಳೂ ಆದ ಪಿತೃಗಳೊಡನೆ ನಮಗಭಿಮುಖವಾಗಿ ದಯಮಾಡು.

## English Translation

Come, Agni, to our presence with the Pitris, who are possessed of knowledge, who having attained a seat amongst the gods, thirst (for the Soma), skilled in sacrifices, reciters of praises with hymns, truth-speaking, seers, frequenters of sacrifices.

॥ ವಿಶೇಷವಿಷಯಗಳು ॥

ಮಹಾಪಿತೃಯಜ್ಞದಲ್ಲಿ ಕವ್ಯವಾಹನಾಗ್ನಿಯನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ಯೇ ತಾತೃಷುಃ** ಎಂಬ ಋಕ್ಕನ್ನು ಮೊದಲನೆಯ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಯೇ ತಾತೃಷುರ್ದೇವತ್ರಾ ಜೇಹಮಾನಾಸ್ತ್ವದಗ್ನೇ ಕಾವ್ಯಾ ತ್ವನ್ನನೀಷಾಃ** ಎಂಬ ಸೂತ್ರದಿಂದ (ಆ. ೨-೧೯) ವಿಧಿತವಾಗಿರುವುದು.

ಸುವಿದತ್ರೇಭಿಃ—ಈ ಶಬ್ದಕ್ಕೆ ಯಾಸ್ಕರು ಸುವಿದತ್ರಃ ಕಲ್ಯಾಣವಿದ್ಯಃ ಅಗ್ನೇಯಾಹಿ ಸುವಿದತ್ರೇಭಿರರ್ವಾಙ್ ಇತ್ಯಪಿ ನಿಗಮೋ ಭವತಿ ಎಂದು ನಿರ್ವಚನವನ್ನು ಹೇಳಿದ್ದಾರೆ. ಸುವಿದತ್ರಃ ಎಂದರೆ ಉಪಕಾರಬುದ್ಧಿ ಅಥವಾ ಉದಾರಬುದ್ಧಿ, ಔದಾರ್ಯ ಎಂದರ್ಥವು. ಈ ನಿಗಮದಲ್ಲಿ ಸೂಚಿತವಾದ ಶ್ರುತಿವಾಕ್ಯವೇ ಉದಾಹರಣೆಯು.

॥ ಸಂಹಿತಾಪಾಠಃ ॥

ಯೇ ಸತ್ಯಾಸೋ ಹವಿರದೋ ಹವಿಷ್ಪಾ ಇಂದ್ರೇಣ ದೇವೈಃ ಸರಥಂ ದಧಾನಾಃ ।

ಅಗ್ನೇ ಯಾಹಿ ಸಹಸ್ರಂ ದೇವವಂದ್ಯೈಃ ಪರೈಃ ಪೂರ್ವೈಃ ಪಿತೃಭಿರ್ಘರ್ಮಸದ್ಭಿಃ ॥ ೧೦ ॥

॥ ಪದಪಾಠಃ ॥

ಯೇ । ಸತ್ಯಾಸಃ । ಹವಿಃಽಅದಃ । ಹವಿಃಽಪಾಃ । ಇಂದ್ರೇಣ । ದೇವೈಃ । ಸಽರಥಂ । ದಧಾನಾಃ ।

ಆ । ಅಗ್ನೇ । ಯಾಹಿ । ಸಹಸ್ರಂ । ದೇವಽವಂದ್ಯೈಃ । ಪರೈಃ । ಪೂರ್ವೈಃ । ಪಿತೃಽಭಿಃ । ಘರ್ಮಸತ್ಽಭಿಃ ॥

॥ ಸಾಯಣಭಾಷ್ಯಂ ॥

ಸತ್ಯಾಸಃ ಸತ್ಯಾ ಯೇ ಪಿತರೋ ಹವಿರದೋ ಭಕ್ಷಣಯೋಗ್ಯಸ್ಯ ಹವಿಷೋಽತ್ತಾರೋ ಭಕ್ಷಯಿತಾರೋ ಹವಿಷ್ಪಾಃ ಪಾನಯೋಗ್ಯಸ್ಯ ಹವಿಷಃ ಪಾತಾರ ಇಂದ್ರೇಣ ದೇವೈಃ ಸರಥಂ ಸಮಾನಮೇಕಂ ತುಲ್ಯಂ ವಾ ರಥಂ ದಧಾನಾಃ ॥ ಲಡರ್ಥೇ ಶಾನಚ್ ॥ ಗಮನಾಯ ಸದಾ ಧಾರಯಂತಿ ಹೇ ಅಗ್ನೇ ತೈಃ ಪಿತೃಭಿಃ ಸಹಾ ಯಾಹಿ । ಆಗಚ್ಛ । ಕೀದೃಶಃ । ಸಹಸ್ರಂ । ತೃತೀಯಾರ್ಥೇ ಪ್ರಥಮಾ । ಸಹಸ್ರೇಣ । ಬಹುಭಿರಿತ್ಯರ್ಥಃ । ದೇವವಂದ್ಯೈರ್ದೇವಸಂಬಂಧಿಭಿಃ ಸ್ತೋತ್ರೈರ್ಯುಕ್ತೈಃ । ಪರೈಃ ಪರಕಾಲೀನೈಃ ಪೂರ್ವೈಃ ಪೂರ್ವಕಾಲೀನೈರ್ಘರ್ಮಸದ್ಭಿರ್ಯಜ್ಞಸಾದಿಭಿರ್ಮಹಾವೀರಸಾದಿಭಿರಾದಿತ್ಯಸಾದಿಭಿರ್ವಾ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ ಸತ್ಯಾಸಃ—ಸತ್ಯಾತ್ಮಕರಾದ । ಯೇ—ಯಾವ ಪಿತೃಗಳು । ಹವಿರದಃ—ಹವಿಸ್ಸನ್ನು ಭಕ್ಷಿಸುವವರಾಗಿಯೂ । ಹವಿಷ್ಪಾಃ—ಸೋಮಾದಿ ಹವಿಸ್ಸುಗಳನ್ನು ಪಾನಮಾಡುವವರಾಗಿಯೂ । ಇಂದ್ರೇಣ—ಇಂದ್ರಾದಿಯಾದ । ದೇವೈಃ—ದೇವತೆಗಳೊಡನೆ । ಸರಥಂ—ಸಮಾನತ್ವವನ್ನು । ದಧಾನಾಃ—ಹೊಂದಿದವರಾಗಿಯೂ ಇರುವರೋ ಅಂತಹ । ಸಹಸ್ರಂ—ಸಹಸ್ರಸಂಖ್ಯಾಕರೂ । ದೇವವಂದ್ಯೈಃ—ದೇವತೆಗಳೊಡನೆ ಕೂಡಿದವರೂ । ಪರೈಃ—ಪರಕಾಲಕ್ಕೆ ಸೇರಿದವರೂ । ಪೂರ್ವೈಃ—ಹಿಂದಿನ ಕಾಲಕ್ಕೆ ಸೇರಿದವರೂ । ಘರ್ಮಸದ್ಭಿಃ—ಯಜ್ಞಕಾರಕರೂ ಆದ । ಪಿತೃಭಿಃ—ಪಿತೃಗಳೊಡನೆ । ಆ ಯಾಹಿ—ದಯಮಾಡು ।

॥ ಭಾವಾರ್ಥ ॥

ಎಲೈ ಅಗ್ನಿಯೇ, ಸತ್ಯಾತ್ಮಕರಾದ ಯಾವ ಪಿತೃಗಳು ಹವಿಸ್ಸನ್ನು ಭಕ್ಷಿಸುವವರಾಗಿಯೂ, ಸೋಮಾದಿ ಹವಿಸ್ಸುಗಳನ್ನು ಪಾನಮಾಡುವವರಾಗಿಯೂ, ಇಂದ್ರಾದಿದೇವತೆಗಳೊಡನೆ ಸಮಾನತ್ವವನ್ನು ಹೊಂದಿದವರಾಗಿಯೂ ಇರುವರೋ ಅಂತಹ ಸಹಸ್ರ ಸಂಖ್ಯಾಕರೂ ದೇವತೆಗಳೊಡನೆ ಕೂಡಿದವರೂ, ಪರ ಮತ್ತು ಅಪರಕಾಲಕ್ಕೆ ಸೇರಿದವರೂ, ಯಜ್ಞಕಾರಕರೂ ಆದ ಪಿತೃಗಳೊಡನೆ ದಯಮಾಡು.

English Translation

Come, Agni, with thousands of Pitris, of both past and future (time), frequenters of sacrifices, eulogists of the gods ; those who are true, who feed on oblations, and drink oblations, possessing equality with Indra and the gods.

। ಸಂಹಿತಾಪಾಠಃ ।

ಅಗ್ನಿಷ್ವಾತ್ತಾಃ ಪಿತರ ಏಹ ಗಚ್ಛತ ಸದಃಸದಃ ಸದತ ಸುಪ್ರಣೀತಯಃ ।
ಅತ್ತಾ ಹವೀಂಷಿ ಪ್ರಯತಾನಿ ಬರ್ಹಿಷ್ಯಥಾ ರಯಿಂ ಸರ್ವವೀರಂ ದಧಾತನ ॥ ೧೧ ॥

। ಪದಪಾಠಃ ।

ಅಗ್ನಿಽಸ್ವಾತ್ತಾಃ । ಪಿತರಃ । ಆ । ಇಹ । ಗಚ್ಛತ । ಸದಃಽಸದಃ । ಸದತ । ಸುಽಪ್ರನೀತಯಃ ।
ಅತ್ತ । ಹವೀಂಷಿ । ಪ್ರಽಯತಾನಿ । ಬರ್ಹಿಷಿ । ಅಥ । ರಯಿಂ । ಸರ್ವಽವೀರಂ । ದಧಾತನ ॥ ೧೧ ॥

। ಸಾಯಣಭಾಷ್ಯಂ ।

ಮಹಾಪಿತೃಯಜ್ಞೇ ಪಿತರೋಽಗ್ನಿಷ್ವಾತ್ತಾ ಇತ್ಯಸ್ಯಾಗ್ನಿಷ್ವಾತ್ತಾಃ ಪಿತರ ಇತ್ಯೇಷಾ ಪ್ರಥಮಾನುವಾಕ್ಯಾ । ಸೂತ್ರಿತಂ ಚ । ಅಗ್ನಿಷ್ವಾತ್ತಾಃ ಪಿತರ ಏಹ ಗಚ್ಛತ ಯೇ ಚೇಹ ಪಿತರೋ ಯೇ ಚ ನೇಹ । ೨.೭-೧೯ । ಇತಿ ॥

ಅಗ್ನಿಷ್ವಾತ್ತಾ ಅಗ್ನಿನಾ ಸ್ವಾದಿತಾ ಏತನ್ನಾಮಕಾ ಪಿತರಃ ಯೂಯಮಿಹಾಸ್ಮಿನ್ಪಿತೃಕರ್ಮಣ್ಯಾಗಚ್ಛತ । ಆಗತ್ಯ ಚ ಹೇ ಸುಪ್ರಣೀತಯೋಽಭಿಪೂಜಿತಪ್ರಣಯನಾಃ ಯೂಯಂ ಸದಃ ಸದಸ್ತತ್ತತ್ಸ್ಥಾನಂ ಸದತ । ಸೀದತ । ತತ್ರ ತತ್ರ ಸ್ಥಾನೇ ಯಥೇಷ್ಟಮುಪವಿಶತೇತ್ಯರ್ಥಃ । ಉಪವಿಶ್ಯ ಚ ಬರ್ಹಿಷ್ಯಾಸಾದಿತಾನಿ ಪ್ರಯತಾನಿ ಸ್ರುಚಿ ಹವೀಂಷ್ಯತ್ತ । ಭಕ್ಷಯತ । ಅಥಾನಂತರಂ ಸರ್ವವೀರಂ ಸರ್ವೈರ್ವೀರೈಃ ಪುತ್ರಪೌತ್ರೈರುಪೇತಂ ರಯಿಂ ಧನಂ ದಧಾತನ । ಅಸ್ಮಭ್ಯಂ ದತ್ತ ॥

॥ ಪ್ರತಿಪದಾರ್ಥ ॥

**ಅಗ್ನಿಷ್ವಾತ್ತಾಃ**—ಅಗ್ನಿಷ್ವಾತ್ತ ಸಂಜ್ಞಕರಾದ | **ಪಿತರಃ**—ಎಲೈ ಪಿತೃಗಳೇ | **ಇಹ**—ನಮ್ಮ ಈ ಯಾಗ ಕರ್ಮಕ್ಕೆ | **ಆ ಗಚ್ಛತ**—ಬನ್ನಿರಿ | **ಸುಪ್ರಣೀತಯಃ**—ಉತ್ತಮವಾದ ಮಾರ್ಗದರ್ಶಕರಾದ ನೀವು | **ಸದಃ ಸದಃ**—ಆಯಾಸ್ಥಾನಗಳಲ್ಲಿ | **ಸದತ**—ಕುಳಿತುಕೊಳ್ಳಿರಿ | **ಬರ್ಹಿಷಿ**—ದರ್ಭಾಸನಗಳ ಮೇಲೆ | **ಪ್ರಯತಾನಿ**—ಇಡಲ್ಪಟ್ಟಿರುವ | **ಹವೀಂಷಿ**—ಹವಿಸ್ಸುಗಳನ್ನು | **ಅತ್ತ**—ಭಕ್ಷಿಸಿರಿ | **ಅಥ**-ಅನಂತರ | **ಸರ್ವವೀರಂ**-ಪುತ್ರಪೌತ್ರಾದಿಗಳಿಂದ ಕೂಡಿದ | **ರಯಿಂ**—ಧನವನ್ನು | **ದಧಾತನ**—ನಮಗೆ ಕೊಡಿರಿ |

॥ ಭಾವಾರ್ಥ ॥

ಅಗ್ನಿಷ್ವಾತ್ತಸಂಜ್ಞಕರಾದ ಎಲೈ ಪಿತೃಗಳೇ, ನಮ್ಮ ಈ ಯಾಗಕರ್ಮಕ್ಕೆ ಬನ್ನಿರಿ. ಉತ್ತಮವಾದ ಮಾರ್ಗದರ್ಶಕರಾದ ನೀವು ಆಯಾ ಸ್ಥಾನಗಳಲ್ಲಿ ಕುಳಿತುಕೊಳ್ಳಿರಿ. ದರ್ಭಾಸನಗಳ ಮೇಲೆ ಇಟ್ಟಿರುವ ಶುದ್ಧವಾದ ಹವಿಸ್ಸುಗಳನ್ನು ಭಕ್ಷಿಸಿರಿ. ಅನಂತರ ಪುತ್ರಪೌತ್ರಾದಿಗಳಿಂದ ಕೂಡಿದ ಧನವನ್ನು ನಮಗೆ ಕೊಡಿರಿ.

## English Translation

Agnishwatta Pitris, come to this solemnity; sit down, directors in the right way, in your appropriate places: eat the oblations spread on the sacred grass and grant us riches and male posterity.

॥ ವಿಶೇಷವಿಷಯಗಳು ॥

ಮಹಾಪಿತೃಯಜ್ಞದಲ್ಲಿ ಪಿತರೋಽಗ್ನಿಷ್ವಾತ್ತಾಃ ಎಂಬ ಪಿತೃಗಳನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ಅಗ್ನಿಷ್ವಾತ್ತಾಃ** ಪಿತರಃ ಎಂಬ ಈ ಋಕ್ಕನ್ನು ಮೊದಲನೇ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಅಗ್ನಿಷ್ವಾತ್ತಾಃ** ಪಿತರ ಏಹ ಗಚ್ಛತ ಯೇ ಚೇಹ ಪಿತರೋ ಯೇ ಚ ನೇಹ ಎಂಬ ಸೂತ್ರದಿಂದ (ಆ. ೨-೧೯) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ತ್ವಮಗ್ನ ಈಳಿತೋ ಜಾತವೇದೋಽವಾಡ್ಢವ್ಯಾನಿ ಸುರಭೀಣಿ ಕೃತ್ವೀ |**
**ಪ್ರಾದಾಃ ಪಿತೃಭ್ಯಃ ಸ್ವಧಯಾ ತೇ ಅಕ್ಷನ್ನದ್ಧಿ ತ್ವಂ ದೇವ ಪ್ರಯತಾ ಹವೀಂಷಿ ॥ ೧೨ ॥**

॥ ಪದಪಾಠಃ ॥

ತ್ವಂ | ಅಗ್ನೇ | ಈಳಿತಃ | ಜಾತಽವೇದಃ | ಅವಾಟ್ | ಹವ್ಯಾನಿ | ಸುರಭೀಣಿ | ಕೃತ್ವೀ ।
ಪ್ರ | ಅದಾಃ | ಪಿತೃಽಭ್ಯಃ | ಸ್ವಧಯಾ | ತೇ | ಅಕ್ಷನ್ | ಅದ್ಧಿ | ತ್ವಂ | ದೇವ | ಪ್ರಽಯತಾ | ಹವೀಂಷಿ ॥

॥ ಸಾಯಣಭಾಷ್ಯಂ ॥

ಮಹಾಪಿತೃಯಜ್ಞೇ ವಷಟ್ಕಾರಕ್ರಿಯಾಯಾಂ ತ್ವಮಗ್ನ ಈಳಿತ ಇತ್ಯೇಷಾಸ್ವಿಷ್ಟಕೃತೋ ಯಾಜ್ಯಾ । ಸೂತ್ರಿತಂ ಚ । ಯೋಽಗ್ನಿಃ ಕವ್ಯವಾಹನಸ್ತ್ವಮಗ್ನ ಈಳಿತೋ ಜಾತವೇದ ಇತಿ ಸಂಯಾಜ್ಯೇ । ಆ-೨-೧೯ । ಇತಿ ॥

ಹೇ ಜಾತವೇದಃ । ಜಾತಂ ಸರ್ವಂ ಜಗದ್ವೇತ್ತೀತಿ ಜಾತವೇದಾಃ । ತಥಾವಿಧ ಹೇ ಅಗ್ನೇ ಈಳಿತೋಽಸ್ಮಾಭಿಃ ಸ್ತುತಸ್ತ್ವಂ ಹವ್ಯಾನ್ಯಸ್ಮದೀಯಾನಿ ಹವೀಂಷಿ ಸುರಭೀಣಿ ಸುಗಂಧೀನಿ ಕೃತ್ವೀ ಕೃತ್ವಾವಾಟ್ । ವಹನಂ ಕೃತವಾನಸಿ । ಕೃತ್ವಾ ಚ ಪಿತೃಭ್ಯಃ ಪ್ರಾದಾಃ । ತೇ ಚ ಪಿತರಃ ಸ್ವಧಯಾ ಸ್ವಧಾಕಾರೇಣ ದತ್ತಂ ಹವಿರಕ್ಷನ್ । ಅದಂತು । ಹೇ ದೇವ ತ್ವಮಪಿ ಪ್ರಯತಾ । ಪ್ರಯತ್ನಸಂಪಾದಿತಾನಿ ಹವೀಂಷ್ಯದ್ಧಿ । ಭಕ್ಷಯ ॥

॥ ಪ್ರತಿಪದಾರ್ಥ ॥

**ಜಾತವೇದಃ**—ಜಾತವೇದೋರೂಪಿಯಾದ । **ಅಗ್ನೇ**—ಎಲೈ ಅಗ್ನಿಯೇ । **ಈಳಿತಃ**—ನಮ್ಮಿಂದ ಸ್ತುತನಾದ । **ತ್ವಂ**—ನೀನು । **ಹವ್ಯಾನಿ**—ನಮ್ಮ ಹವಿಸ್ಸುಗಳನ್ನು । **ಸುರಭೀಣಿ**—ಸುಗಂಧಯುಕ್ತವನ್ನಾಗಿ । **ಕೃತ್ವೀ**—ಮಾಡಿ । **ಅವಾಟ್**—ವಹಿಸಿದ್ದೀಯೆ । **ಪಿತೃಭ್ಯಃ**—ಪಿತೃಗಳಿಗೆ । **ಪ್ರಾದಾಃ**—ಅರ್ಪಿಸಿದ್ದೀಯೆ । **ತೇ**—ಆ ಪಿತೃಗಳು । **ಸ್ವಧಯಾ**—ಸ್ವಧಾಪೂರ್ವಕವಾಗಿ ಅರ್ಪಿಸಿದ ಹವಿಸ್ಸುಗಳನ್ನು । **ಅಕ್ಷನ್**—ಭಕ್ಷಿಸಲಿ । **ದೇವ**—ಎಲೈ ಅಗ್ನಿಯೇ । **ತ್ವಂ**—ನೀನೂ । **ಪ್ರಯತಾ**—ಉತ್ತಮವಾಗಿ ಸಂಪಾದಿಸಿದ । **ಹವೀಂಷಿ**—ಹವಿಸ್ಸುಗಳನ್ನು **ಅದ್ಧಿ**—ಭಕ್ಷಿಸು

॥ ಭಾವಾರ್ಥ ॥

ಜಾತವೇದೋರೂಪಿಯಾದ ಎಲೈ ಅಗ್ನಿಯೇ, ನಮ್ಮಿಂದ ಸ್ತುತನಾದ ನೀನು ನಮ್ಮ ಹವಿಸ್ಸುಗಳನ್ನು ಸುಗಂಧಯುಕ್ತವನ್ನಾಗಿ ಮಾಡಿ ಪಿತೃಗಳಿಗಾಗಿ ವಹಿಸಿದ್ದೀಯೆ. ಅವರಿಗೆ ಅರ್ಪಿಸಿದ್ದೀಯೆ. ಆ ಪಿತೃಗಳು ಸ್ವಧಾಪೂರ್ವಕವಾಗಿ ಅರ್ಪಿಸಿದ ಹವಿಸ್ಸುಗಳನ್ನು ಭಕ್ಷಿಸಲಿ. ಎಲೈ ಅಗ್ನಿಯೇ, ನೀನೂ ಉತ್ತಮವಾಗಿ ಸಂಪಾದಿಸಿದ ಹವಿಸ್ಸುಗಳನ್ನು ಭಕ್ಷಿಸು.

## English Translation

Agni Jatavedas, who are glorified (by us), having made our oblations fragrant, you have borne them off, and have presented them to the Pitris: may they partake of them with the Swadha; and you also, divine Agni feed upon the offered oblations.

॥ ವಿಶೇಷವಿಷಯಗಳು ॥

ಮಹಾಪಿತೃಯಜ್ಞದಲ್ಲಿ ವಷಟ್ಕಾರಕ್ರಿಯಾಹೋಮದಲ್ಲಿ **ತ್ವಮಗ್ನ** ಈಳಿತಃ ಎಂಬ ಈ ಋಕ್ಕನ್ನು ಸ್ವಿಷ್ಟಕೃದ್ಧೋಮದ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ-ಶ್ರೌತಸೂತ್ರದ- **ಯೋಽಗ್ನಿಃ ಕವ್ಯವಾಹನಸ್ತ್ವಮಗ್ನ ಈಳಿತೋ ಜಾತವೇದ ಇತಿ ಸಂಯಾಜ್ಯೇ** ಎಂಬ ಸೂತ್ರದಿಂದ (ಆ. ೨-೧೯) ವಿಸ್ಪೃತವಾಗಿರುವುದು.

॥ ಸಂಹಿತಾಪಾಠಃ ॥

ಯೇ ಚೇಹ ಪಿತರೋ ಯೇ ಚ ನೇಹ ಯಾಂಶ್ಚ ವಿದ್ಮ ಯಾँ ಉ ಚ ನ ಪ್ರವಿದ್ಮ ।

ತ್ವಂ ವೇತ್ಥ ಯತಿ ತೇ ಜಾತವೇದಃ ಸ್ವಧಾಭಿರ್ಯಜ್ಞಂ ಸುಕೃತಂ ಜುಷಸ್ವ ॥

॥ ಪದಪಾಠಃ ॥

ಯೇ । ಚ । ಇಹ । ಪಿತರಃ । ಯೇ । ಚ । ನ । ಇಹ । ಯಾನ್ । ಚ । ವಿದ್ಮ । ಯಾನ್ । ಊಂ ಇತಿ । ಚ । ನ । ಪ್ರऽವಿದ್ಮ ।

ತ್ವಂ । ವೇತ್ಥ । ಯತಿ । ತೇ । ಜಾತऽವೇದಃ । ಸ್ವಧಾಭಿಃ । ಯಜ್ಞಂ । ಸುऽಕೃತಂ । ಜುಷಸ್ವ ॥ ೧೩ ॥

॥ ಸಾಯಣಭಾಷ್ಯಂ ॥

ಮಹಾಪಿತೃಯಜ್ಞೇ ಯೇ ಚೇಹೇತಿ ದ್ವಿತೀಯಾನುವಾಕ್ಯಾ । ಸೂತ್ರಮುಕ್ತಂ ॥

ಯೇ ಚ ಪಿತರ ಇಹಾಸ್ಮತ್ಸಮೀಪೇ ವರ್ತಂತೇ ಯೇ ಚೇಹ ನ ಸಂತಿ । ಯಾಂಶ್ಚ ಪಿತೄನ್ವಿದ್ಮ ಸಂನಿಕೃಷ್ಟತ್ವಾಜ್ಜಾನೀಮಃ ಯಾँ ಉ ಚ ನಾಪಿ ಚ ನ ಪ್ರವಿದ್ಮ ವಿಪ್ರಕೃಷ್ಟತ್ವಾದ್ವಯಂ ನ ವಿಜಾನೀಮಃ । ಯತಿ ತೇ ಯಾವಂತಸ್ತೇ ಭವಂತಿ ತಾನ್ಸರ್ವಾನ್ಯಥೋಕ್ತಾನ್ ಹೇ ಜಾತವೇದ ಉತ್ಪನ್ನಸರ್ವವಸ್ತು-ವಿಷಯಜ್ಞಾನಾಗ್ನೇ ತ್ವಂ ವೇತ್ಥ । ಜಾನಾಸಿ । ಸ್ವಧಾಭಿರ್ಹವಿರ್ಲಕ್ಷಣೈರನ್ನೈಃ ಸುಕೃತಂ ಸಾಧು ಕೃತಂ ಯಜ್ಞಂ ಜುಷಸ್ವ । ಪ್ರೀತ್ಯಾ ಗೃಹಾಣ ॥

॥ ಪ್ರತಿಪದಾರ್ಥ ॥

**ಜಾತವೇದಃ**—ಜಾತವೇದೋರೂಪಿಯಾದ ಎಲೈ ಅಗ್ನಿಯೇ । **ಯೇ ಚ ಪಿತರಃ**—ಯಾವ ಪಿತೃಗಳು । **ಇಹ**—ನಮ್ಮ ಸಮೀಪದಲ್ಲಿರುವರೋ । **ಯೇ ಚ**—ಯಾರು । **ಇಹ**—ನಮ್ಮ ಸಮೀಪದಲ್ಲಿ । **ನ**—ಇರುವುದಿಲ್ಲವೋ । **ಯಾಂಶ್ಚ**—ಯಾವ ಪಿತೃಗಳನ್ನು । **ವಿದ್ಮ**—ನಾವು ಅರಿಯುವೆವೋ । **ಯಾ ಉ ಚ**—ಯಾರನ್ನು । **ನ ಪ್ರವಿದ್ಮ**—ನಾವು ಚೆನ್ನಾಗಿ ಅರಿತಿಲ್ಲವೋ ಅವರನ್ನೂ । **ಯತಿ ತೇ**—ಅವರ ಪೂರ್ಣವಾದ ಸಂಖ್ಯೆಯನ್ನೂ । **ತ್ವಂ**—ನೀನು । **ವೇತ್ಥ**—ಅರಿತಿದ್ದೀಯೆ । **ಸ್ವಧಾಭಿಃ**—ಸ್ವಧಾರೂಪವಾದ ಹವಿಸ್ಸುಗಳಿಂದ । **ಸುಕೃತಂ**—ಸುಸಂಸ್ಕೃತವಾದ । **ಯಜ್ಞಂ**—ಯಜ್ಞವನ್ನು । **ಜುಷಸ್ವ**—ಸೇವಿಸು ।

॥ ಭಾವಾರ್ಥ ॥

ಜಾತವೇದೋರೂಪಿಯಾದ ಎಲೈ ಅಗ್ನಿಯೇ, ಯಾವ ಪಿತೃಗಳು ನಮ್ಮ ಸಮೀಪದಲ್ಲಿರುವರೋ, ಯಾರು ನಮ್ಮ ಸಮೀಪದಲ್ಲಿರುವುದಿಲ್ಲವೋ, ಯಾವ ಪಿತೃಗಳನ್ನು ನಾವು ಅರಿಯುವೆವೋ, ಯಾರನ್ನು ನಾವು ಚೆನ್ನಾಗಿ ಅರಿ

ತಿಳಿಲ್ಲವೋ ಅವರನ್ನೂ, ಅವರ ಪೂರ್ಣವಾದ ಸಂಖ್ಯೆಯನ್ನೂ ನೀನು ಅರಿತಿದ್ದೀಯೆ. ಸ್ವಧಾರೂಪವಾದ ಹವಿಸ್ಸುಗಳಿಂದ ಸುಸಂಸ್ಕೃತವಾದ ಯಜ್ಞವನ್ನು ಸೇವಿಸು.

## English Translation

You know, Jatavedas, those Pitris, how many they may be, who are not in this world, those who are not in this world, those whom we know, and those whom we do not fully know: enjoy this pious sacrifice offered together with Swadhas.

॥ ವಿಶೇಷವಿಷಯಗಳು ॥

ಮಹಾಪಿತೃಯಜ್ಞದಲ್ಲಿ **ಯೇ ಚೇಹ** ಎಂಬ ಈ ಋಕ್ಕನ್ನು ಎರಡನೆಯ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದಲ್ಲಿ ಹೇಳಿರುವುದನ್ನು ಹಿಂದೆಯೇ ತಿಳಿಸಲಾಗಿದೆ.

॥ ಸಂಹಿತಾಪಾಠಃ ॥

ಯೇ ಅಗ್ನಿದಗ್ಧಾ ಯೇ ಅನಗ್ನಿದಗ್ಧಾ ಮಧ್ಯೇ ದಿವಃ ಸ್ವಧಯಾ ಮಾದ-
ಯಂತೇ ।
ತೇಭಿಃ ಸ್ವರಾಳಸುನೀತಿಮೇತಾಂ ಯಥಾವಶಂ ತನ್ವಂ ಕಲ್ಪಯಸ್ವ ॥ ೧೪ ॥

॥ ಪದಪಾಠಃ ॥

ಯೇ । ಅಗ್ನಿಽದಗ್ಧಾಃ । ಯೇ । ಅನಗ್ನಿಽದಗ್ಧಾಃ । ಮಧ್ಯೇ । ದಿವಃ । ಸ್ವಧಯಾ । ಮಾದಯಂತೇ ।
ತೇಭಿಃ । ಸ್ವಽರಾಟ್ । ಅಸುಽನೀತಿಂ । ಏತಾಂ । ಯಥಾಽವಶಂ । ತನ್ವಂ । ಕಲ್ಪಯಸ್ವ ॥ ೧೪ ॥

। ಸಾಯಣಭಾಷ್ಯಂ ।

ಪೂರ್ವೋಕ್ತ ಏವ ಯಾಗೇ ಯೇ ಅಗ್ನಿದಗ್ಧಾ ಇತ್ಯೇಷಾ ಯಾಜ್ಯಾ । ಸೂತ್ರಿತಂ ಚ । ಯೇ ಅಗ್ನಿದಗ್ಧಾ ಯೇ ಅನಗ್ನಿದಗ್ಧಾ ಇಮಂ ಯಮ ಪ್ರಸ್ತರಮಾ ಹಿ ಸೀದೇತಿ ದ್ವೇ । ಆ-೨-೧೯ । ಇತಿ ॥

ಯೇ ಪಿತರೋಽಗ್ನಿದಗ್ಧಾ ಅಗ್ನಿನಾ ಭಸ್ಮೀಕೃತಾಃ । ಶ್ಮಶಾನಂ ಪ್ರಾಪ್ತಾ ಇತ್ಯರ್ಥಃ । ಯೇ ಚ ಪಿತರೋಽನಗ್ನಿದಗ್ಧಾಃ ಶ್ಮಶಾನಕರ್ಮ ನ ಪ್ರಾಪ್ತಾ ಮಧ್ಯೇ ದಿವೋ ದ್ಯುಲೋಕಸ್ಯ ಮಧ್ಯೇ ಸ್ವಧಯಾ ಹವಿರ್ಲಕ್ಷಣೇನಾನ್ನೇನ ಮಾದಯಂತೇ ತೃಪ್ಯಂತಿ ಹೇ ಅಗ್ನೇ ಸ್ವರಾಟ್ ಸ್ವಕರ್ಮೋಪಭೋಗೇನ ದೀಪ್ಯ-ಮಾನಸ್ತೇಭಿಸ್ತೈಃ ಪಿತೃಭಿಃ ಸಹಿತಃ ಸನ್ನಸುನೀತಿಂ ಪ್ರಾಣಾನಾಂ ವಿಷಯೇಷು ನೇತಾರಮಸ್ಮತ್ಪಿತ್ರಂತರಾ-

ತ್ಮಾನಮೇತಾಂ ತನ್ವಮೇತದ್ದೇವತಾಶರೀರಂ ಯಥಾವಶಂ ಯಥಾಕಾಮಂ ಕಲ್ಪಯಸ್ವ ಸಮರ್ಥಯಸ್ವ। ಗ್ರಾಸಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಯೇ**—ಯಾವ ಪಿತೃಗಳು । **ಅಗ್ನಿದಗ್ಧಾಃ**—ಅಗ್ನಿಯಿಂದ ದಹಿಸಲ್ಪಟ್ಟವರಾಗಿಯೂ । **ಯೇ**—ಯಾರು । **ಅನಗ್ನಿದಗ್ಧಾಃ**—ಅಗ್ನಿಯಿಂದ ದಹಿಸಲ್ಪಡದೆಯೂ । **ಮಧ್ಯೇ ದಿವಃ**—ದ್ಯುಲೋಕದ ಮಧ್ಯದಲ್ಲಿರುವರೋ । **ಸ್ವಧಯಾ**—ಅವರೆಲ್ಲರೂ ಸ್ವಧಾರೂಪವಾದ ಹವಿಸ್ಸಿನೊಡನೆ । **ಮಾದಯಂತೇ**—ತೃಪ್ತಿಯನ್ನು ಹೊಂದಲಿ । **ತೇಭಿಃ**—ಅವರೊಡನೆ ಕೂಡಿ । **ಸ್ವರಾಟ್**—ಸ್ವಯಂ ಪ್ರಕಾಶಕನಾದ ನೀನು । **ಅಸುನೀತಿಂ**—ಪಿತೃಪ್ರಾಣರೂಪವಾದ (ಅದನ್ನೊಳಗೊಂಡ) । **ಏತಾಂ ತನ್ವಂ**—ದೇವತಾ ಶರೀರವನ್ನು । **ಯಥಾವಶಂ**—ನಿನ್ನ ಸಂಕಲ್ಪದಂತೆ । **ಕಲ್ಪಯಸ್ವ**—ನಿರ್ಮಿಸು ।

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ಪಿತೃಗಳು ಅಗ್ನಿಯಿಂದ ದಹಿಸಲ್ಪಟ್ಟವರಾಗಿಯೂ, ಯಾರು ಅಗ್ನಿಯಿಂದ ದಹಿಸಲ್ಪಡದೆಯೂ ದ್ಯುಲೋಕದ ಮಧ್ಯದಲ್ಲಿರುವರೋ ಅವರೆಲ್ಲರೂ ಸ್ವಧಾರೂಪದ ಹವಿಸ್ಸಿನೊಡನೆ ತೃಪ್ತಿಯನ್ನು ಹೊಂದಲಿ. ಅವರೊಡನೆ ಕೂಡಿ ಸ್ವಯಂಪ್ರಕಾಶಕನಾದ ನೀನು ಪಿತೃಪ್ರಾಣವನ್ನೊಳಗೊಂಡ ದೇವತಾ ಶರೀರವನ್ನು ನಿನ್ನ ಸಂಕಲ್ಪದಂತೆ ನಿರ್ಮಿಸು.

## English Translation

May those who are Agnidagdhas, and those who are not, be satisfied with Swadha in the midst of heaven; and you, supreme Lord, associated with them, construct at your pleasure that body that is endowed with breath.

॥ ವಿಶೇಷವಿಷಯಗಳು ॥

ಹಿಂದೆ ಹೇಳಿದ ಮಹಾಪಿತೃಯಜ್ಞವೆಂಬ ಯಾಗದಲ್ಲಿ **ಯೇ ಅಗ್ನಿದಗ್ಧಾಃ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ **ಯೇ ಅಗ್ನಿದಗ್ಧಾ ಯೇ ಅನಗ್ನಿದಗ್ಧಾ ಇಮಂ ಯಮ ಪ್ರಸ್ತರಮಾ ಹಿ ಸೀದೇತಿ ದ್ವೇ** ಎಂಬ ಸೂತ್ರದಿಂದ (ಆ. ೨-೧೯) ವಿವೃತವಾಗಿರುವುದು.

**ಅಗ್ನಿದಗ್ಧಾಃ, ಅನಗ್ನಿದಗ್ಧಾಃ**-ಮೃತರಾದಮೇಲೆ ಅವರ ಕರ್ಮಮಾಡುವಾಗ ಯಾರ ಮೃತ ಶರೀರಗಳನ್ನು ಅಗ್ನಿಯಲ್ಲಿ ಸುಟ್ಟು ವಿಧ್ಯುಕ್ತವಾದ ಮಂತ್ರಗಳಿಂದ ಸಂಸ್ಕರಿಸಲ್ಪಟ್ಟವರಿಗೆ ಅಗ್ನಿದಗ್ಧಾಃ ಪಿತರಃ-ಅಗ್ನಿದಗ್ಧರಾದ ಪಿತೃಗಳು ಎಂದು ಹೆಸರು. ಹಾಗಿಲ್ಲದೆ ಮೃತರಾದವರಿಗೆ ಅಗ್ನಿಸಂಸ್ಕಾರಮಾಡಲು ಕರ್ತರಾರೂ ಇಲ್ಲದೆ ಅಥವಾ ನೀರಿನಲ್ಲಿ ಮುಳುಗಿ ಸಾಯುವುದೇ ಮೊದಲಾದ ಕಾರಣಗಳಿಂದಲೂ ಇತರ ವಿಧವಾದ ಅಪಮೃತ್ಯುವಿನಿಂದಲೂ ಮೃತರಾಗಿ ಅಗ್ನಿಸಂಸ್ಕಾರಕರ್ಮವು ಸಾಧ್ಯವಿಲ್ಲದೆ ತಮ್ಮ ಸುಕೃತದಿಂದಲೇ ಪಿತೃಲೋಕಕ್ಕೆ ಹೋಗಿ ಅಲ್ಲಿರುವವರಿಗೆ ಅನಗ್ನಿದಗ್ಧಾಃ ಪಿತರಃ ಅಗ್ನಿದಗ್ಧರಲ್ಲದ ಪಿತೃಗಳೆಂದೂ ಹೆಸರು.

# ಹದಿನಾರನೆಯ ಸೂಕ್ತವು.

ಈ ಸೂಕ್ತದಲ್ಲಿಯೂ ಮುಂದಿನ ಸೂಕ್ತದಲ್ಲಿಯೂ ಪಿತೃದೇವತೆಗಳ ಸಂಬಂಧವಾದ ಮತ್ತು ಅಪರಕರ್ಮದಲ್ಲಿ ನೆರವೇರಿಸುವ ಕ್ರಿಯೆಗಳಲ್ಲಿ ಉಪಯೋಗಿಸುವ ಮಂತ್ರಗಳಿರುವುವು. ಪಿತೃದೇವತೆಗಳ ವಿಷಯವನ್ನು ನಾವು ಹಿಂದಿನ ಸೂಕ್ತಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ಆದರೂ ಋಗ್ವೇದದಲ್ಲಿಯೂ ಇತರ ವೇದಗಳಲ್ಲಿಯೂ ಕಂಡುಬರುವ ಸ್ವರ್ಗ ಮತ್ತು ನರಕಗಳ ಸ್ವರೂಪವನ್ನು ಸೂಕ್ಷ್ಮವಾಗಿ ವಿವರಿಸುವುದು ಅವಶ್ಯಕವು.

**ಸ್ವರ್ಗ** :—ಪಿತೃಗಳೂ ಮತ್ತು ಯಮನು ವಾಸಿಸುವ ಸ್ಥಾನವು ನಿತ್ಯವಾದ ತೇಜಸ್ಸಿಗೆ ನೆಲೆಯಾದ ಆಕಾಶದ ಮಧ್ಯದಲ್ಲಿ (೧೦-೧೫-೧೪), ಅತ್ಯಂತ ಎತ್ತರವಾದ ಸ್ವರ್ಗದಲ್ಲಿ (೧೦-೧೪-೮), ಮೂರನೆಯ ಸ್ವರ್ಗದಲ್ಲಿ, ಆಕಾಶದ ಅತ್ಯಂತ ಗಹನವಾದ ಪ್ರದೇಶಗಳಲ್ಲಿ, (೯-೧೧೩-೭ ರಿಂದ ೯) ಇದೆ. ಅಥರ್ವವೇದದಲ್ಲಿಯೂ ಇದೇ ರೀತಿ, ಉತ್ಕೃಷ್ಟವಾದ (ಅ. ವೇ. ೧೧-೪-೧೧) ಮತ್ತು ತೇಜಃಪುಂಜವಾದ ಲೋಕ (೪-೩೪-೨). ಆಕಾಶದ ತುದಿ (ಅ.ವೇ. ೧೮-೨-೪೭) ಮೂರನೆಯ ಆಕಾಶ (ಅ. ವೇ. ೯-೫-೧,೮ ; ೧೮-೪-೩) ಮತ್ತು ಮೂರನೆಯ ಸ್ವರ್ಗ (ಅ. ವೇ. ೧೮-೨-೪೮) ಇವುಗಳೇ ಪಿತೃಲೋಕಗಳ ಮತ್ತು ಯಮನ ಸ್ಥಾನವೆಂದು ಹೇಳಿದೆ. ಮೈತ್ರಾಯಿಣೀ ಸಂಹಿತೆಯಲ್ಲಿ (ಮೈ. ಸಂ. ೧-೧೦-೧೮ ; ೨-೩-೯) ಪಿತೃಲೋಕವೇ ಮೂರನೆಯ ಲೋಕ. ಪಿತೃಲೋಕವು ಸೂರ್ಯಮಂಡಲದ ಅತ್ಯಂತ ಎತ್ತರವಾದ ಪ್ರದೇಶ (೯-೧೧೩-೯). ಪಿತೃಗಳು ಸೂರ್ಯನೊಡನೆ ಸೇರಿಹೋಗಿದ್ದಾರೆ ಅಥವಾ ಸೂರ್ಯನನ್ನು ರಕ್ಷಿಸುತ್ತಾರೆ. (೧೦-೧೦೭-೨ ; ೧೦-೧೫೪-೫) ಅಥವಾ ಸೂರ್ಯರಶ್ಮಿಗಳೊಡನೆ ಸೇರಿದ್ದಾರೆ (೧-೧೦೯-೭ ; ಶ. ಬ್ರಾ. ೧-೯-೩-೧೦ ನ್ನು ಹೋಲಿಸಿ) ಮತ್ತು ಸೂರ್ಯನು ಅವರಿಗೋಸ್ಕರಲೇ ಪ್ರಕಾಶಿಸುತ್ತಾನೆ (೫-೧೨೫-೬), ವಿಷ್ಣುವಿನ ಪಾದಕ್ಕೂ ಇವರಿಗೂ ಸಂಬಂಧವಿದೆ (೧೦-೧೫-೩) ಮತ್ತು ಧರ್ಮಿಷ್ಠರಾದವರು ಆ ಪ್ರಿಯವಾದ ವಾಸಸ್ಥಳದಲ್ಲಿ ವಿಷ್ಣುವಿನ ಮೂರನೆಯ ಹೆಜ್ಜೆಯಲ್ಲಿ ಆನಂದಿಸುತ್ತಾರೆ (೧-೧೫೪-೫) ಎಂದಿದೆ. ದೇವತೆಗಳು ಆನಂದಿಸುವ ಪ್ರದೇಶಕ್ಕೆ ಮೂರು ಹೆಜ್ಜೆಗಳನ್ನು ವಿಷ್ಣುವು ಇಟ್ಟುಕೊಂಡು ಹೋದಂತೆ, ಸತ್ಪುರುಷರು ಆಹುತಿಯನ್ನು ಕೊಡುವ ಸ್ಥಳಕ್ಕೆ, ಸೂರ್ಯನೂ ಉಷಸ್ಸನ್ನು ಹಿಂಬಾಲಿಸಿಕೊಂಡು, ಹೋಗುತ್ತಾನೆ.

ಸ್ವರ್ಗಲೋಕಕ್ಕೆ ಹೋಗುತ್ತಿರುವ ಸತ್ಪುರುಷರ ತೇಜಸ್ಸುಗಳೇ ನಕ್ಷತ್ರಗಳು (ತೈ. ಸಂ. ೫-೪-೧-೩ ; ಶ. ಬ್ರಾ. ೬-೫-೪-೮) ಮತ್ತು ಪುರಾತನರಾದ ಏಳು ಜನ ಋಷಿಗಳು ನಕ್ಷತ್ರ ಮಂಡಲಕ್ಕೆ ಏರಿಸಲ್ಪಟ್ಟರು (ತೈ. ಆ. ೧-೧೧-೧-೨).

ಋಗ್ವೇದದಲ್ಲಿ ಒಂದು ವೃಕ್ಷದ ಪ್ರಸ್ತಾಪವಿದೆ. ಇದರ ಸಮೀಪದಲ್ಲಿ ಯಮನು ದೇವತೆಗಳೊಡನೆ ಕುಳಿತು ಪಾನಮಾಡುತ್ತಾನೆ (೧೦-೧೩೫-೧) ಅಥರ್ವವೇದದಲ್ಲಿ (ಅ. ವೇ. ೫-೪-೩), ಇದು ಒಂದು ಅತ್ತಿಯ ಮರವೆಂದು ಹೇಳಿದೆ.

ಪರಲೋಕಜೀವನದ ಪ್ರಸ್ತಾಪವು ವಿಶೇಷವಾಗಿ ಒಂಭತ್ತು ಮತ್ತು ಹತ್ತನೆಯ ಮಂಡಲಗಳಲ್ಲಿ ಹೆಚ್ಚಾಗಿಯೂ, ಮೊದಲನೆಯದರಲ್ಲಿ ಸಾಧಾರಣವಾಗಿಯೂ ಇವೆ. ಕಠಿಣ ತಪಸ್ಸನ್ನಾಚರಿಸುವವರಿಗೆ ಅವರ ತಪಸ್ಸಿನ

ಫಲವು ಸ್ವರ್ಗ. ಮತ್ತು ಯುದ್ಧದಲ್ಲಿ ಮೃತರಾದವರಿಗೂ ಇದೇ ಫಲ (೧೦-೧೫೪-೨ ರಿಂದ ೫) ಆದರೆ ಇವರೆಲ್ಲರಿಗಿಂತಲೂ ಹೆಚ್ಚಾಗಿ, ಉದಾರವಾಗಿ ಸೋಮದ್ರವ್ಯಗಳನ್ನರ್ಪಿಸುವವರಿಗೆ ಈ ಸ್ವರ್ಗವು ಫಲರೂಪವಾಗಿದೆ (೧೦-೧೫೪-೩ ; ೧-೧೨೫-೫, ೧೦-೧೦೭-೨). ಈ ಯಾಗಾದಿ ಕರ್ತವ್ಯಗಳಿಗೆ ದೊರಕುವ ಫಲಗಳ ವಿಷಯವನ್ನು ಅಥರ್ವವೇದದಲ್ಲಿ ಬಹಳ ಹೆಚ್ಚಾಗಿ ಹೇಳಿದೆ.

ಮೃತರಾದವರು ಸ್ವರ್ಗದಲ್ಲಿ, ಬಹಳ ಆಹ್ಲಾದಕರವಾದ ಜೀವನವನ್ನು ಅನುಭವಿಸುತ್ತಾರೆ (೧೦-೧೪-೮; ೧೦-೧೫-೧೪; ೧೦-೧೬-೨, ೫) ; ಇಲ್ಲಿ ಎಲ್ಲಾ ಇಷ್ಟಾರ್ಥಗಳೂ ಕೈಗೂಡುತ್ತವೆ. (೯-೧೧೩-೯, ೧೧): ದೇವತೆಗಳ ಮಧ್ಯದಲ್ಲಿ (೧೦-೧೪-೧೪), ಅದರಲ್ಲಿಯೂ ಯಮ ಮತ್ತು ವರುಣರ ಸನ್ನಿಧಿಯಲ್ಲಿ ಈರೀತಿ ಜೀವನ (೧೦-೧೪-೭). ವಾರ್ಧಕ್ಯವೆಂಬ ಮಾತೇ ಇಲ್ಲ (೧೦-೨೭-೨೧). ಸುಂದರವಾದ ದೇಹವಿಶಿಷ್ಟರಾಗಿ, ದೇವತೆಗಳಿಗೆ ಪ್ರಿಯರೂ, ಇಷ್ಟರೂ ಆಗುತ್ತಾರೆ. (೧೦-೧೪-೮, ೧೦-೧೬-೫, ೧೦-೫೬-೧). ಅಲ್ಲಿ ತಂದೆ, ತಾಯಿ, ಮಕ್ಕಳು ಮೊದಲಾದವರನ್ನು ನೋಡುತ್ತಾರೆ (ಅ. ವೇ. ೬-೧೨೦-೩) ಮತ್ತು ಪತ್ನೀಪುತ್ರಾದಿಗಳೊಡನೆ ಪುನಃ ಮಿಲಿತರಾಗುತ್ತಾರೆ (ಅ. ವೇ. ೧೨-೩-೧೭). ಜೀವನದಲ್ಲಿ ಲೋಪದೋಷಗಳ ಲವಲೇಶವೂ ಇಲ್ಲ, ಅದರಂತೆ ಶಾರೀರಕ ಕಷ್ಟಗಳೂ ಇಲ್ಲ (೧೦-೧೪-೮, ಅ. ವೇ. ೬-೧೨೦-೩). ರೋಗರುಜಿನಗಳೆಲ್ಲಾ ಭೂಮಿಯಲ್ಲೇ ಉಳಿದುಕೊಳ್ಳುತ್ತವೆ, ಕೈಕಾಲುಗಳು, ಸೊಟ್ಟ ಅಥವಾ ಕುಂಟು, ಇಂತಹ ದೋಷಗಳೇನೂ ಇಲ್ಲ (ಅ. ವೇ. ೩-೨೮-೫) ಆ ಲೋಕದಲ್ಲಿ ಸಂಪೂರ್ಣವಾದ ದೇಹದಿಂದ ಕೂಡಿರುತ್ತಾರೆ ಎಂದು ಅಥರ್ವವೇದ ಮತ್ತು ಶತಪಥ ಬ್ರಾಹ್ಮಣಗಳಲ್ಲಿ ಹೇಳಿದೆ.

ಮೃತರು ಸ್ವರ್ಗದಲ್ಲಿ ಸುಖವಾಗಿರುತ್ತಾರೆ, ಆನಂದಿಸುತ್ತಾರೆ (ಮದಂತಿ, ಮಾದಯಂತೇ, ೧೦-೧೪-೧೦, ೧೦-೧೫-೧೪, ಇತ್ಯಾದಿ). ಸ್ವರ್ಗಜೀವನದ ಸೌಖ್ಯವು ಬಹಳ ವಿಶದವಾಗಿ ೯-೧೧೩-೭ ರಿಂದ ೧೧ ರಲ್ಲಿ ಕೊಟ್ಟಿದೆ. ಅಲ್ಲಿ ಬೆಳಕು ಸತತವಾಗಿರುತ್ತದೆ, ನೀರು ವೇಗವಾಗಿ ಹರಿಯುತ್ತದೆ, ಪ್ರವಾಹಕ್ಕೆ ಅಡ್ಡಿಯೇ ಇಲ್ಲ (ತೈ. ಬ್ರಾ. ೩-೧೨-೨-೯ ನ್ನು ಹೋಲಿಸಿ). ಅಲ್ಲಿ ಸ್ವಧಾರೂಪವಾದ (ಪಿತೃಗಳಿಗೆ ಅರ್ಪಿತವಾಗುವ ಆಹಾರ) ಆಹಾರವೂ, ತೃಪ್ತಿಯೂ ಉಂಟು, ಸಂತೋಷ, ಆನಂದ, ಇಷ್ಟಾರ್ಥಸಿದ್ಧಿ ಮೊದಲಾದುವುಗಳೆಲ್ಲವೂ ಇವೆ. ಅಸ್ಪಷ್ಟವಾಗಿ ಆನಂದ, ಸಂತೋಷ ಎಂದು ಹೇಳಿರುವುದನ್ನು ಮುಂದೆ ವಿಷಯಸುಖವೆಂದು ವಿವರಿಸಿದೆ (ತೈ. ಬ್ರಾ. ೭-೫-೬-೬, ಶ. ಬ್ರಾ. ೨-೪-೪-೪, ಶ. ಬ್ರಾ. ೧೦-೪-೪-೪ ನ್ನು ಹೋಲಿಸಿ). ಅಥರ್ವವೇದದಲ್ಲಿ ವಿಷಯಸುಖವು ಯಥೇಚ್ಛವಾಗಿ ಸಿಗುತ್ತದೆ ಎಂದು ಹೇಳಿದೆ (ಅ. ವೇ. ೪-೩೪-೨). ಭೂಮಿಯಲ್ಲಿ ಅನುಭವಿಸುವ ಅತ್ಯಂತ ಹೆಚ್ಚು ಸುಖಕ್ಕೆ ನೂರರಷ್ಟು ಹೆಚ್ಚು ಸುಖವು ಅಲ್ಲಿ ಅನುಭವಿಸಲ್ಪಡುತ್ತವೆ (ಶ. ಬ್ರಾ ೧೪-೭-೧-೩೨, ೩೩). ಪುಣ್ಯಶಾಲಿಗಳಿರುವ ಆ ಲೋಕದಲ್ಲಿ, ವೇಣುನಾದವೂ ಮತ್ತು ಗಾನವೂ ಕೇಳಿಬರುತ್ತವೆ (೧೦-೧೩೫-೭), ಅವರಿಗೋಸ್ಕರ ಸೋಮರಸ, ಘೃತ ಮತ್ತು ಜೇನುತುಪ್ಪಗಳು ಪ್ರವಹಿಸುತ್ತವೆ (ಅ. ವೇ. ೪-೩೪-೫-೬ ಶ. ಬ್ರಾ. ೧೧-೫-೬-೪). ಸ್ವಚ್ಛವೂ ನಾನಾ ವರ್ಣವೂ ಇಷ್ಟಾರ್ಥಪ್ರದಗಳೂ ಆದ ಗೋವುಗಳು ಸರ್ವದಾ ಸಿದ್ಧವಾಗಿರುತ್ತವೆ (ಕಾಮದುಘಾಃ ಅ. ವೇ. ೪-೩೪-೮). ಅಲ್ಲಿ ಬಡವರು ಶ್ರೀಮಂತರು, ದೊಡ್ಡವರು ಚಿಕ್ಕವರು ಎಂಬ ಭೇದವಿಲ್ಲ (ಅ. ವೇ. ೩-೨೯-೩). ಸಂಹಿತೆ ಮತ್ತು ಬ್ರಾಹ್ಮಣಗಳಲ್ಲಿ ವರ್ಣಿತವಾಗಿರುವ ಈ ಸ್ವರ್ಗಸುಖವು, ಉಪನಿಷತ್ತುಗಳಲ್ಲಿ, ಅಶಾಶ್ವತವೆಂದೂ ಉತ್ತಮವಲ್ಲವೆಂದೂ, ಅಮೃತದ ತತ್ತ್ವವನ್ನು ತಿಳಿದವರಿಗ ಮಾತ್ರ, ಬ್ರಹ್ಮೈಕ್ಯವೂ, ತಜ್ಜನ್ಯವಾದ ಶಾಶ್ವತ ಸುಖವೂ ದೊರಕುತ್ತವೆ ಎಂತಲೂ ಉಕ್ತವಾಗಿದೆ. ಆದುದರಿಂದ ಸತ್ಕರ್ಮ ಮಾಡಿದವರು ಮರಣಾನಂತರ, ಸ್ವರ್ಗಲೋಕದಲ್ಲಿ, ಸುಖಲೋಲುಪರಾಗಿ, ಸೋಮಾರಿಗಳಂತೆ ಕಾಲಕಳೆಯುತ್ತಾರೆ ಎಂದು ಭಾವನೆ.

ಸ್ವರ್ಗವು ಈ ಲೋಕಕ್ಕಿಂತಲೂ ಹೆಚ್ಚು ವೈಭವವಿಶಿಷ್ಟವಾದುದು ಮತ್ತು ವೈಷಯಿಕಸುಖಪೂರ್ಣವಾದುದು. ಅದು ಸತ್ಕರ್ಮಿಗಳ ಲೋಕ (೧೦-೧೬-೪,) ಇಲ್ಲಿ ಕರ್ಮಜ್ಞಾನವುಳ್ಳವರು ಆನಂದದಿಂದ ಕಾಲಕಳೆಯುತ್ತಾರೆ. ತಾವು ಮಾಡಿದ ಹೋಮಗಳ ಮತ್ತು ಮಾಡಿದ ದಾನಗಳ ಫಲವನ್ನನುಭವಿಸುತ್ತಾರೆ, ಆದರಲ್ಲಿಯೂ ಋತ್ವಿಜರು ಮೊದಲಾದವರಿಗೆ, ಎಷ್ಟು ಹೆಚ್ಚಾಗಿ ದಾನಮಾಡಿದರೆ, ಸುಖವೂ ಅಷ್ಟು ಹೆಚ್ಚುತ್ತದೆ (೧೦-೧೫೪-೩). ವಿಹಿತವಾದ ರೀತಿಯಲ್ಲಿ ಯಜ್ಞಕರ್ಮಾನುಷ್ಠಾನ ಮಾಡಿದವರು, ಆದಿತ್ಯ ಮತ್ತು ಅಗ್ನಿಲೋಕಗಳು ಮಾತ್ರವಲ್ಲದೆ, ವಾಯು, ಇಂದ್ರ, ವರುಣ ಬೃಹಸ್ಪತಿ, ಪ್ರಜಾಪತಿ, ಮತ್ತು ಬ್ರಹ್ಮಾ ಇವರುಗಳ ಲೋಕಗಳೊಡನೆ ಐಕ್ಯವನ್ನು ಪಡೆಯುತ್ತಾರೆ (ಶ. ಬ್ರಾ. ೨-೬-೪-೮, ೧೧-೪-೪-೨೧, ೧೧-೬-೨-೩, ೩, ತೈ. ಬ್ರಾ. ೩-೧೦-೧೧-೬). ಒಬ್ಬ ಋಷಿಯು ತನ್ನ ಜ್ಞಾನದ ಬಲದಿಂದ ಬಂಗಾರದ ಹಂಸರೂಪವನ್ನು ತಾಳಿ, ಸ್ವರ್ಗಲೋಕಕ್ಕೆ ಹೋಗಿ, ಸೂರ್ಯನೊಡನೆ ಐಕ್ಯವನ್ನು ಪಡೆದನೆಂದು (ತೈ. ಬ್ರಾ. ೩-೧೦-೯-೧೧) ಹೇಳಿದೆ. ತೈತ್ತಿರೀಯ ಸಂಹಿತೆಯಲ್ಲಿ—ಕೆಲವು ಕರ್ಮಗಳನ್ನು ಮಾಡಿದರೆ, ಮನುಷ್ಯನು ಈ ಭೌತಿಕ ದೇಹವಿಶಿಷ್ಟನಾಗಿಯೇ ಸ್ವರ್ಗವನ್ನು ಪಡೆಯಬಹುದೆಂಬ ಅಭಿಪ್ರಾಯವಿದೆ (ತೈ. ಬ್ರಾ. ೬-೬-೯-೨).

ವೇದವನ್ನು ವಿಹಿತವಾದ ವಿಧಾನದಲ್ಲಿ ಅಭ್ಯಾಸಮಾಡಿದವರು ಜನನ ಮರಣಗಳ ಭಯರಹಿತರಾಗಿ, ಬ್ರಹ್ಮನೊಡನೆ ಸಮತ್ವವನ್ನು ಪಡೆಯಬಹುದು. (ಶ. ಬ್ರಾ. ೧೦-೫-೬-೯). ಯಾವುದೋ ಒಂದು ರಹಸ್ಯ ವಿಷಯವನ್ನು ತಿಳಿದುದರ ಫಲವಾಗಿ, ಮನುಷ್ಯನು ಪುನಃ ಜನಿಸುತ್ತಾನೆ. (ಶ. ಬ್ರಾ. ೧-೫-೩-೧೪) ಇವುಗಳಲ್ಲಿ ಪಾಪಫಲ ಮತ್ತು ದೇಹಾಂತರ ಪ್ರಾಪ್ತಿ ವಾದಗಳ ಪ್ರಾರಂಭವನ್ನು ಕಾಣಬಹುದು. ಛಾಂದೋಗ್ಯ, ಬೃಹದಾರಣ್ಯಕ, ಕಠ ಮೊದಲಾದ ಉಪನಿಷತ್ತುಗಳಲ್ಲಿ ಮತ್ತು ಸೂತ್ರಗಳಲ್ಲಿ ಇವುಗಳು ಸಂಪೂರ್ಣವಾಗಿ ಪ್ರತಿಪಾದಿತವಾಗಿವೆ. ಕಠೋಪನಿಷತ್ತಿನಲ್ಲಿ ನಚಿಕೇತನೆಂಬುವನ ಕಥೆಯಿದೆ, ಅದರಲ್ಲಿ ಮುಖ್ಯಭಾಗವು ನಚಿಕೇತ ಮತ್ತು ಯಮ ಇವರ ಸಂವಾದ. ಸ್ವರ್ಗ ಮತ್ತು ಮುಕ್ತಿಗಳಿಗೆ ಅರ್ಹತೆಯಿಲ್ಲದವರು ಪುನಃ ಮರಣಾಧೀನರಾಗಿ ಸಂಸಾರ ಚಕ್ರಕ್ಕೆ ಸಿಕ್ಕಿ, ದೇಹಧಾರಿಗಳಾಗಿ ಇಲ್ಲವೆ, ಜಡ ಪದಾರ್ಥವಾಗಿ ಭೂಮಿಯಲ್ಲಿ ಜನಿಸುತ್ತಾರೆ; ಆತ್ಮಸಂಯಮನ ಶಕ್ತಿಯುಳ್ಳವನು ವಿಷ್ಣುವಿನ ಲೋಕವನ್ನು ಸಾಧಿಸಬಲ್ಲನು; ಮುಕ್ತಿಯನ್ನು ಸಾಧಿಸಲು ಅಸಮರ್ಥರಾದವರಿಗೆ ನರಕವಿದೆ, ಎಂದು ಯಮನು ನಚಿಕೇತನಿಗೆ ಉಪದೇಶ ಮಾಡಿದ್ದಾನೆ.

## ನರಕ

ಸತ್ಪುರುಷರಿಗೆ ಆಮುಷ್ಮಿಕದಲ್ಲಿ ಸ್ವರ್ಗಾದಿ ಫಲವು ಲಭಿಸುತ್ತದೆ ಎಂದ ಮೇಲೆ, ಪಾಪಿಷ್ಠರಿಗೆ ಶಿಕ್ಷೆಗಳನ್ನು ...ಧಿಸದಿದ್ದರೂ, ಅವರಿಗೆ ಪ್ರತ್ಯೇಕ ಸ್ಥಳವಿರಲೇಬೇಕು. ಅಥರ್ವವೇದ ಮತ್ತು ಕಠೋಪನಿಷತ್ತುಗಳಲ್ಲಿ ಇಂತಹವರು ...ರಕದಲ್ಲಿ ತಮ್ಮ ಪಾಪಕರ್ಮಗಳ ಫಲವನ್ನನುಭವಿಸುತ್ತಾರೆ ಎಂದು ಸ್ಪಷ್ಟವಾಗಿ ಹೇಳಿದೆ. ಸ್ವರ್ಗಲೋಕಕ್ಕೆ ...ತಿಯಾಗಿ (ಅ. ವೇ. ೧೨-೪-೩೬) ಹೆಣ್ಣು ಪಿಶಾಚಗಳು ಮೊದಲಾದುವು ವಾಸಿಸುವ ನರಕಲೋಕ (ಅಧೋಲೋಕ) ...ದೆ (ಅ. ವೇ. ೭-೧೪-೩ : ೫-೧೯-೩); ಈ ಲೋಕದಲ್ಲೇ ಕೊಲೆಪಾತಕನು ಶಿಕ್ಷೆಯನ್ನನುಭವಿಸುವುದು (ವಾ. ಸಂ. ...೦-೫). ಅತ್ಯಂತ ತಗ್ಗಾದ ಪ್ರದೇಶದಲ್ಲಿ ತಮಸ್ಸು (ಅ. ವೇ. ೮-೮-೨೪; ಇತ್ಯಾದಿ), ಅಂಧಕಾರಾವೃತವಾದ ...ಮಸ್ಸು (ಅ. ವೇ. ೫-೩೦-೧೧), ಅಂಧಂತಮಸ್ಸು (ಅ. ವೇ. ೧೮-೩-೩) ಇತ್ಯಾದಿಯಾಗಿ ಈ ಲೋಕವು ವರ್ಣಿತ ...ಗಿದೆ, ನರಕದ ದುಃಖಗಳು ಅ. ವೇ. ೫-೧೯ರಲ್ಲಿಯೂ, ಇನ್ನೂ ಹೆಚ್ಚು ವಿಶದವಾಗಿ ಶ. ಬ್ರಾ. ೧೧-೬-೧ರಲ್ಲಿಯೂ ...ರ್ಣಿತವಾಗಿದೆ. ಅದೇ ಬ್ರಾಹ್ಮಣದಲ್ಲಿ ಹೀಗೆ ಹೇಳಿದೆ; ಪ್ರತಿಯೊಬ್ಬನ ಮರಣಾನಂತರ ಪುನಃ ಜನಿಸುತ್ತಾನೆ;

ಅವನ ಕರ್ಮಗಳನ್ನು ತಕ್ಕಡಿಯಲ್ಲಿ ತೂಕ ಮಾಡುತ್ತಾರೆ; ಸತ್ಕರ್ಮ ದುಷ್ಕರ್ಮಾನುಸಾರವಾಗಿ ಸುಖದುಃಖಗಳನ್ನು ಅನುಭವಿಸುತ್ತಾನೆ (ಶ. ಬ್ರಾ. ೧೧-೬-೧-೬ ; ೧೨-೯-೧-೧ನ್ನು ನೋಡಿರಿ). ಆದರೆ, ಋಗ್ವೇದದಲ್ಲಿಯೂ, ಇಂತಹದೊಂದು ದುಃಖಾನುಭವಪ್ರದೇಶವಿದೆಯೆಂಬುದಕ್ಕೆ ಆಧಾರವಿಲ್ಲವೇ ಇಲ್ಲ. (ಇದಂ ಗಭೀರಂ ಪದಂ) ' ಈ ಆಳವಾದ ಸ್ಥಾನವು ಪಾಪಿಷ್ಠರು, ಅನೃತವಾದಿಗಳು ಮತ್ತು ಅಸತ್ಯವಂತರಿಗೋಸ್ಕರ ಸೃಜಿಸಲ್ಪಟ್ಟಿದೆ (೪-೫-೫). ಪಾಪಿಷ್ಠರನ್ನು ಪಾತಾಳ ಲೋಕಕ್ಕೆ, ಅಗಾಧವಾದ ತಮಸ್ಸಿಗೆ, ಅವರಲ್ಲಿ ಒಬ್ಬರೂ ಮೇಲಕ್ಕೆ ಏಳದಂತೆ ಎಸೆಯಬೇಕೆಂದು ಇಂದ್ರಾಸೋಮರು ಪ್ರಾರ್ಥಿತರಾಗಿದಾರೆ (೭-೧೦೪-೩) : ಗೂಬೆಯಂತೆ, ಯಾರಿಗೂ ಕಾಣಿಸದ ರೀತಿಯಲ್ಲಿ ಸಂಚರಿಸುವ ರಾಕ್ಷಸಿಯೂ ತಮಸ್ಸಿನಲ್ಲಿ ಬೀಳಲಿ (೭-೧೦೪-೧೭); ದ್ವೇಷಿ ಮತ್ತು ದರೋಡೆಕೋರರೂ ಮೂರು ಪೃಥಿವಿಗಳಿಗೂ ಕೆಳಭಾಗದಲ್ಲಿ ಬೀಳಲಿ (೭-೧೦೪-೧೧). ಈ ವಾಕ್ಯಗಳು; ಭೂಮಿಗೆ ಕೆಳಭಾಗದಲ್ಲಿ ಒಂದು ಅಂಧಕಾರಾವೃತವಾದ ಪ್ರದೇಶವಿದೆಯೆಂದು ಮಾತ್ರ ತಿಳಿಸುತ್ತವೆ. ಭೂಲೋಕದ ಸುಖವೇ ಮುಖ್ಯ ಉದ್ದೇಶವೇ ಹೊರತು, ಮರಣಾನಂತರ ಸುಖದುಃಖಗಳು ಅಷ್ಟಾಗಿ ಮುಖ್ಯವಲ್ಲ. ಬ್ರಾಹ್ಮಣಗಳಲ್ಲಿ, ಸತ್ಕರ್ಮಮಾಡಿದವರೂ ಮತ್ತು ದುಷ್ಕರ್ಮ ಮಾಡಿದವರೂ ಪುನಃ ಮತ್ತೊಂದು ಲೋಕದಲ್ಲಿ ಜನಿಸಿ, ತಮ್ಮ ತಮ್ಮ ಕರ್ಮಗಳ ಫಲಗಳನ್ನು ಅನುಭವಿಸುತ್ತಾರೆ (ಶ. ಬ್ರಾ. ೬-೨-೨-೨೭ ; ೧೦-೬-೩-೧) ಎಂದು ಹೇಳಿದೆಯೇ ಹೊರತು, ಈ ಬಹುಮಾನ ಅಥವಾ ಶಿಕ್ಷೆಗಳ ಕಾಲಾವಧಿಯನ್ನು ಸೂಚಿಸಿಲ್ಲ. ಯಜ್ಞಾಂಗ ಕರ್ಮಗಳ ವಿಧಾನವನ್ನು ಸರಿಯಾಗಿ ತಿಳಿದು, ಆಚರಿಸದೇ ಇರುವವರು ಭೂಲೋಕದಲ್ಲಿ, ತಮಗೆ ನಿಯತವಾದ ಕಾಲಕ್ಕಿಂತ ಮುಂಚೆಯೇ ಬೇರೆ ಲೋಕಕ್ಕೆ ತೆರಳುತ್ತಾರೆ (ಶ. ಬ್ರಾ. ೧೧-೨-೭-೩೩) ಎಂಬುದೂ ಒಂದು ನಂಬಿಕೆ.

ಮರಣಾನಂತರ, ಪ್ರತಿಯೊಬ್ಬನೂ ತನ್ನ ತನ್ನ ಕರ್ಮಾನುಸಾರವಾಗಿ ಒಳ್ಳೆಯವನು ಅಥವಾ ಕೆಟ್ಟವನೆಂಬ ತೀರ್ಪಿಗೆ ಒಳಗಾಗುತ್ತಾನೆ ಎಂಬ ನಂಬಿಕೆಗೆ ವೇದಗಳಲ್ಲಿ ಆಧಾರವಿಲ್ಲವೆನ್ನಬಹುದು. ಮೇಲೆ ಉದಹರಿಸಿರುವ ಒಂದೆರಡು ವಾಕ್ಯಗಳು ಸ್ಪಷ್ಟವಾಗಿಲ್ಲ. ತೈತ್ತಿರೀಯಾರಣ್ಯಕದಲ್ಲಿ (ತೈ. ಆ. ೬-೫-೧೩), ಯಮನು ಸನ್ಮಾರ್ಗಗಾಮಿಗಳನ್ನೂ, ಅಸನ್ಮಾರ್ಗಗಾಮಿಗಳನ್ನೂ ವಿಂಗಡಿಸುತ್ತಾನೆ ಎಂದು ಹೇಳಿದೆಯೇ ಹೊರತು, ಅವನೇ ಈ ನಿರ್ಣಯ ಮಾಡುವುದಕ್ಕೆ ಪರಮಾಧಿಕಾರವುಳ್ಳವನೆಂದು ಹೇಳಿಲ್ಲ.

॥ ಸಾಯಣಭಾಷ್ಯಂ ॥

**ಮೈನಮಿತಿ ಚತುರ್ದಶರ್ಚಂ ಷೋಡಶಂ ಸೂಕ್ತಂ । ಯಮಪುತ್ರಸ್ಯ ದಮನಸ್ಯಾರ್ಷಂ । ಆದಿತೋ ದಶ ತ್ರಿಷ್ಟುಭಃ ತತಶ್ಚತಸ್ರೋಽನುಷ್ಟುಭಃ । ಅಗ್ನಿರ್ದೇವತಾ । ತಥಾ ಚಾನುಕ್ರಾಂತಂ । ಮೈನಂ ದಮನ ಆಗ್ನೇಯಂ ಚತುರನುಷ್ಟುಬಂತಮಿತಿ ॥ ದೀಕ್ಷಿತಮರಣ ಆದ್ಯಾಃ ಷಡೃಚಃ ಶಂಸನೀಯಾಃ । ಸೂತ್ರಿತಂ ಚ । ಮೈನಮಗ್ನೇ ವಿ ದಹೋ ಮಾಭಿ ಶೋಚ ಇತಿ ಷಟ್ ಪೂಷಾ ತ್ವೇತಶ್ಚ್ಯಾವಯತು ಪ್ರ ವಿದ್ವಾನ್ । ಆ. ೬-೧೦ । ಇತಿ ॥ ದಹ್ಯಮಾನಸ್ಯ ಪ್ರೇತಸ್ಯೋಪಸ್ಥಾನೇಽಪ್ಯೇತಾಃ ಶಂಸನೀಯಾಃ ॥**

ಅನುವಾದವು—**ಮೈನಂ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಯಮಪುತ್ರನಾದ ದಮನನೆಂಬುವನು ಋಷಿಯು. ಈ

ಸೂಕ್ತದ ಮೊದಲಿನ ಹತ್ತು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅಲ್ಲಿಂದ ಮುಂದಿನ ನಾಲ್ಕು ಋಕ್ಕುಗಳು ಅನುಷ್ಟುಪ್‌ಛಂದಸ್ಕವು; ಅಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ—**ಮೈನಂ ದಮನ ಆಗ್ನೇಯಂ ಚತುರನುಷ್ಟುಬಂತಂ** ಎಂದು ಹೇಳಿರುವುದು. ಯಜ್ಞಮಾಡುತ್ತಿರುವ ಯಜಮಾನನು ಯಜ್ಞದೀಕ್ಷೆಯನ್ನು ಕೈಗೊಂಡು ಯಜ್ಞಪರಿಸಮಾಪ್ತಿಯಾಗುವುದಕ್ಕೆ ಮುಂಚೆಯೇ ಮೃತನಾದಲ್ಲಿ ಆಗ ಈ ಸೂಕ್ತದ ಮೊದಲ ಆರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಮೈನಮಗ್ನೇ ವಿ ದಹೋ ಮಾಭಿ ಶೋಚ ಇತಿ ಷಟ್ ಪೂಷಾ ತ್ವೇತಶ್ಚ್ಯಾವಯತು ಪ್ರ ವಿದ್ವಾನ್** ಎಂಬ ಸೂತ್ರದಿಂದ (ಆ. ೬-೧೦) ವಿವೃತವಾಗಿರುವುದು. ಪ್ರೇತಸಂಸ್ಕಾರದಲ್ಲಿ ಮೃತಶರೀರವು ದಹಿಸಲ್ಪಡುತ್ತಿರುವಾಗ ಈ ಆರು ಋಕ್ಕುಗಳನ್ನು ಪಠಿಸಿ ಅಗ್ನಿಯನ್ನು ಉಪಸ್ಥಾನಮಾಡಬೇಕು ಎಂದು ಹೇಳಿದೆ.

## ಸೂಕ್ತ—೧೬

**ಮಂಡಲ—೧೦ ॥ ಅನುವಾಕ—೧॥ ಸೂಕ್ತ—೧೬ ॥**
**ಅಷ್ಟಕ—೭ ॥ ಅಧ್ಯಾಯ ೬ ॥ ವರ್ಗ—೨೦, ೨೧, ೨೨ ॥**
**ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ॥**
**ಋಷಿಃ—ದಮನೋ ಯಾಮಾಯನಃ ॥**
**ದೇವತಾ—ಅಗ್ನಿಃ ।**
**ಛಂದಃ—೧-೧೦. ತ್ರಿಷ್ಟುಪ್ । ೧೧-೧೪, ಅನುಷ್ಟುಪ್ ॥**

। ಸಂಹಿತಾಪಾಠಃ ।

ಮೈನಮಗ್ನೇ ವಿ ದಹೋ ಮಾಭಿ ಶೋಚೋ ಮಾಸ್ಯ ತ್ವಚಂ ಚಿಕ್ಷಿಪೋ ಮಾ ಶರೀರಂ ।
ಯದಾ ಶೃತಂ ಕೃಣವೋ ಜಾತವೇದೋಽಥೇಮೇನಂ ಪ್ರ ಹಿಣುತಾತ್ಪಿತೃಭ್ಯಃ ॥ ೧ ॥

। ಪದಪಾಠಃ ॥

ಮಾ । ಏನಂ । ಅಗ್ನೇ । ವಿ । ದಹಃ । ಮಾ । ಅಭಿ । ಶೋಚಃ । ಮಾ । ಅಸ್ಯ । ತ್ವಚಂ । ಚಿಕ್ಷಿಪಃ । ಮಾ । ಶರೀರಂ ।
ಯದಾ । ಶೃತಂ । ಕೃಣವಃ । ಜಾತಽವೇದಃ । ಅಥ । ಈಂ । ಏನಂ । ಪ್ರ । ಹಿಣುತಾತ್ । ಪಿತೃಽಭ್ಯಃ ॥

। ಸಾಯಣಭಾಷ್ಯಂ ।

ಹೇ ಅಗ್ನೇ ಏನಂ ಪ್ರೇತಂ ಮಾ ವಿ ದಹಃ । ವಿಶೇಷೇಣ ದಗ್ಧಂ ಭಸ್ಮೀಭೂತಂ ಮಾ ಕುರು । ಮಾಭಿ ಶೋಚಃ । ಅಭಿತಃ ಶೋಕೇನ ಸಂತಾಪೇನ ಯುಕ್ತಂ ಮಾ ಕುರು । ಅಸ್ಯ ತ್ವಚಂ ಮಾ ಚಿಕ್ಷಿಪಃ ।

ಇತಸ್ತತೋ ವಿಕ್ಷಿಪ್ತಂ ಮಾ ಕುರು । ಶರೀರಮಪಿ ವಿಕ್ಷಿಪ್ತಂ ಮಾ ಕುರು ಹೇ ಜಾತವೇದೋಽಗ್ನೇ ಯದಾ ತ್ವಂ ಶೃತಂ ಪಕ್ವಂ ಸುದಗ್ಧಂ ಕೃಣವಃ ಕರಿಷ್ಯಸಿ ಅಥ ತದಾನೀಮೀಮೇನಂ ಪ್ರೇತಂ ಪಿತೃಭ್ಯಃ ಪ್ರ ಹಿಣುತಾತ್ । ಪಿತೃಸಮೀಪೇ ಪ್ರೇರಯ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಏನಂ—ಈ ಪ್ರೇತವನ್ನು । ಮಾ ವಿ ದಹಃ—ಪೂರ್ಣವಾಗಿ ಸುಡಬೇಡ । ಅಸ್ಯ—ಈ ಪ್ರೇತದ । ತ್ವಚಂ—ಚರ್ಮವನ್ನು । ಮಾ ಚಿಕ್ಷಿಪಃ—ಚದುರಿಸಬೇಡ । ಶರೀರಂ—ಶರೀರವನ್ನೂ । ಮಾ—ಚದುರಿಸಬೇಡ । ಜಾತವೇದಃ—ಎಲೈ ಅಗ್ನಿಯೇ । ಯದಾ—ಯಾವಾಗ । ಶೃತಂ—ಪಕ್ವವಾಗುವಂತೆ । ಕೃಣವಃ—ಮಾಡುವೆಯೋ । ಅಥ—ಆ ಒಡನೆಯೇ । ಈಂ—ಈ ಪ್ರೇತವನ್ನು । ಪಿತೃಭ್ಯಃ—ಪಿತೃಗಳಿಗೆ ಪ್ರಹಿಣುತಾತ್—ಕಳುಹಿಸಿ ಕೊಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಈ ಪ್ರೇತವನ್ನು ಪೂರ್ಣವಾಗಿ ಸುಡಬೇಡ. ಬಹುವಾಗಿ ಹಿಂಸಿಸಲೂ ಬೇಡ. ಈ ಪ್ರೇತದ ಚರ್ಮವನ್ನಾಗಲಿ ಶರೀರವನ್ನಾಗಲಿ ಚದುರಿಸಬೇಡ. ಎಲೈ ಅಗ್ನಿಯೇ, ಯಾವಾಗ ಇದನ್ನು ನೀನು ಪಕ್ವವಾಗುವಂತೆ ಮಾಡುವೆಯೋ ಆ ಒಡನೆಯೇ ಪಿತೃಲೋಕಕ್ಕೆ ಕಳುಹಿಸಿಕೊಡು.

## English Translation

Agni, consume him not entirely; afflict him not; scatter not (here and there) his skin nor his body; when Jatavedas, you have rendered him mature. then send him to the Pitris

॥ ವಿಶೇಷವಿಷಯಗಳು ॥

ಆ ಎಂಬ ನಿಪಾತಕ್ಕೆ (ಅವ್ಯಯಪದಕ್ಕೆ) ಸಮುಚ್ಚಯಾರ್ಥವೂ (ಚ—ಮತ್ತು ಎಂಬ) ಇರುವುದೆಂದು ಹೇಳಿ ಅದರ ಸಮರ್ಥನೆಗಾಗಿ ಈ ಋಕ್ಕಿನ—ದೇವೇಭ್ಯಶ್ಚ ಪಿತೃಭ್ಯ ಆ ಎಂಬ ವಾಕ್ಯವನ್ನೇ (ಉದಾಹರಣೆಯಾಗಿ ತಿಳಿ ಸಿರುವರು. ಈ ವಾಕ್ಯದಲ್ಲಿರುವ ಆ ಎಂಬ ಶಬ್ದಕ್ಕೆ ಚ (ಮತ್ತು) ಎಂಬರ್ಥವಿರುವುದು.

॥ ಸಂಹಿತಾಪಾಠಃ ॥

ಶೃತಂ ಯದಾ ಕರಸಿ ಜಾತವೇದೋಽಥೇಮೇನಂ ಪರಿ ದತ್ತಾತ್ಪಿತೃಭ್ಯಃ ।
ಯದಾ ಗಚ್ಛಾತ್ಯಸುನೀತಿಮೇತಾಮಥಾ ದೇವಾನಾಂ ವಶನೀರ್ಭವಾತಿ ॥೨॥

॥ ಪದಪಾಠಃ ॥

ಶೃತಂ । ಯದಾ । ಕರಸಿ । ಜಾತऽವೇದಃ । ಅಥ । ಈಂ । ಏನಂ । ಪರಿ । ದತ್ತಾತ್ । ಪಿತೃऽಭ್ಯಃ ।
ಯದಾ । ಗಚ್ಛಾತಿ । ಅಸುऽನೀತಿಂ । ಏತಾಂ । ಅಥ । ದೇವಾನಾಂ । ವಶऽನೀಃ । ಭವಾತಿ ॥ ೨ ॥

ಸಾಯಣಭಾಷ್ಯಂ ॥

**ಹೇ ಜಾತವೇದಃ ಯದಾ ಪ್ರೇತಶರೀರಂ ಶೃತಂ ಪಕ್ವಂ ಕರಸಿ ಕರಿಷ್ಯಸಿ ಅಥೇಂ ತದಾನೀ- ಮೇವೈನಂ ಪ್ರೇತಂ ಪಿತೃಭ್ಯಃ ಪರಿ ದತ್ತಾತ್ । ಪ್ರಯಚ್ಛ । ಯದಾಯಂ ಪ್ರೇತ ಏತಾಮಗ್ನಿನಾ ಕೃತಾಮಸುನೀತಿಂ ಪ್ರಾಣಸ್ಯ ನಯನಂ ಪ್ರಾಣಪ್ರೇರಣಂ ಗಚ್ಛಾತಿ ಪ್ರಾಪ್ನೋತಿ ಅಥ ತದಾನೀಮೇವ ದೇವಾನಾಂ ವಶನೀರ್ದೇವಾನಾಂ ವಶಂ ಪ್ರಾಪಿತೋ ಭವತಿ ॥**

॥ ಪ್ರತಿಪದಾರ್ಥ ॥

**ಜಾತವೇದಃ**—ಎಲೈ ಅಗ್ನಿಯೇ । **ಯದಾ**—ಯಾವಾಗ । **ಶೃತಂ ಕರಸಿ**—ಈ ಶರೀರವನ್ನು ಪಕ್ವವಾಗು ವಂತೆ ಮಾಡುವೆಯೋ । **ಅಥ ಈಂ**—ಆ ಒಡನೆಯೇ । **ಏನಂ**—ಇದನ್ನು (ಈ ಪ್ರೇತವನ್ನು) । **ಪಿತೃಭ್ಯಃ**-ಪಿತೃಗಳ ಪರಕ್ಕೆ । **ಪರಿ ದತ್ತಾತ್**—ಕಳುಹಿಸಿ ಕೊಡು । **ಯದಾ**—ಯಾವಾಗ । **ಏತಾಂ ಅಸುನೀತಿಂ**—ದೇಹರಹಿತವಾದ ಪಿತೃತ್ವವನ್ನು । **ಗಚ್ಛಾತಿ**—ಹೊಂದುವುದೋ । **ಅಥ**—ಆ ಒಡನೆಯೇ । **ದೇವಾನಾಂ**—ದೇವತೆಗಳಿಗೆ । **ವಶನೀಃ**— ಅಧೀನವಾಗಿ । **ಭವಾತಿ**—ಆಗುತ್ತದೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವಾಗ ನೀನು ಈ ಪ್ರೇತವನ್ನು ಪಕ್ವವಾಗುವಂತೆ ಮಾಡುವೆಯೋ, ಆಗ ಇದನ್ನು ಪಿತೃಗಳ ಸಮೀಪಕ್ಕೆ ಕಳುಹಿಸಿಕೊಡು. ಇದು ದೇಹರಹಿತವಾದ ಪಿತೃತ್ವವನ್ನು ಹೊಂದಿದೊಡನೆಯೇ, ದೇವತೆಗಳಿಗೆ ಅಧೀನವಾಗುತ್ತದೆ.

## English Translation

When you have rendered him mature, then give him up, Jatavedas, to the Pitris; when he proceeds to that world of spirits, then he becomes subject to the will of the gods.

॥ ಸಂಹಿತಾಪಾಠಃ ॥

ಸೂರ್ಯಂ ಚಕ್ಷುರ್ಗಚ್ಛತು ವಾತಮಾತ್ಮಾ ದ್ಯಾಂ ಚ ಗಚ್ಛ ಪೃಥಿವೀಂ ಚ ಧರ್ಮಣಾ ।
ಅಪೋ ವಾ ಗಚ್ಛ ಯದಿ ತತ್ರ ತೇ ಹಿತಮೋಷಧೀಷು ಪ್ರತಿ ತಿಷ್ಠಾ ಶರೀರೈಃ ॥ ೩ ॥

॥ ಪದಪಾಠಃ ॥

ಸೂರ್ಯಂ । ಚಕ್ಷುಃ । ಗಚ್ಛತು । ವಾತಂ । ಆತ್ಮಾ । ದ್ಯಾಂ । ಚ । ಗಚ್ಛ । ಪೃಥಿವೀಂ । ಚ । ಧರ್ಮಣಾ ।

ಅಪಃ । ವಾ । ಗಚ್ಛ । ಯದಿ । ತತ್ರ । ತೇ । ಹಿತಂ । ಓಷಧೀಷು । ಪ್ರತಿ । ತಿಷ್ಠ । ಶರೀರೈಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಪ್ರೇತ ತೇ ತ್ವದೀಯಂ ಚಕ್ಷುರಿಂದ್ರಿಯಂ ಸೂರ್ಯಂ ಗಚ್ಛತು ಪ್ರಾಪ್ನೋತು । ಆತ್ಮಾ ಪ್ರಾಣೋ ವಾತಂ ಬಾಹ್ಯಂ ವಾಯುಂ ಗಚ್ಛತು । ಅಪಿ ಚ ತ್ವಮಪಿ ಧರ್ಮಣಾ ಸುಕೃತೇನ ತತ್ಫಲಂ ಭೋಕ್ತುಂ ದ್ಯಾಂ ಚ । ಅತ್ರ ಚಶಬ್ದೋ ವಿಕಲ್ಪಾರ್ಥೇ । ದ್ಯುಲೋಕಂ ವಾ ಪೃಥಿವೀಂ ಚ ಪೃಥಿವೀಂ ವಾ ಗಚ್ಛ । ಪ್ರಾಪ್ನುಹಿ । ಅಪೋ ವಾಂತರಿಕ್ಷಲೋಕಂ ಗಚ್ಛ । ಪ್ರಾಪ್ನುಹಿ । ತತ್ರಾಂತರಿಕ್ಷೇ ಹಿತಂ ಸ್ಥಾಪಿತಂ ತೇ ತವ ಕರ್ಮಫಲಮೋಷಧೀಷು ಶರೀರೈಃ ಶರೀರಾವಯವೈಃ ಪ್ರತಿ ತಿಷ್ಠ ।

॥ ಪ್ರತಿಪದಾರ್ಥ ॥

(ಎಲೈ ಪ್ರೇತವೇ) **ಚಕ್ಷುಃ**—ನಿನ್ನ ಚಕ್ಷುರಿಂದ್ರಿಯವು **ಸೂರ್ಯಂ**—ಸೂರ್ಯನಲ್ಲಿಗೆ । **ಗಚ್ಛತು**—ಹೋಗಿ ಸೇರಲಿ । **ಆತ್ಮಾ**—ನಿನ್ನ ಪ್ರಾಣವು **ವಾತಂ**—ವಾಯುವನ್ನು ಸೇರಲಿ । **ಧರ್ಮಣಾ**—ನಿನ್ನ ಕರ್ಮಕ್ಕನುಸಾರವಾಗಿ । **ದ್ಯಾಂ ಚ**—ದ್ಯುಲೋಕಕ್ಕಾಗಲಿ । **ಪೃಥಿವೀಂ ಚ**—ಪೃಥಿವೀಲೋಕಕ್ಕಾಗಲಿ । **ಗಚ್ಛ**—ಹೋಗಿ ಸೇರು । **ಯದಿ**—ಒಂದು ವೇಳೆ । **ತತ್ರ**—ಅಲ್ಲಿ । **ತೇ**—ನಿನಗೆ । **ಹಿತಂ**—ಅನುಕೂಲವಾದರೆ । **ಅಪೋ ವಾ**—ಅಂತರಿಕ್ಷಲೋಕಕ್ಕಾಗಲಿ । **ಗಚ್ಛ**—ಹೋಗಿ ಸೇರು । **ಶರೀರೈಃ**—ನಿನ್ನ ದೇಹಾವಯವಗಳಿಂದ । **ಓಷಧೀಷು**—ಓಷಧಿಗಳಲ್ಲಿ । **ಪ್ರತಿ ತಿಷ್ಠ**—ಸ್ಥಾಪಿತನಾಗು.

॥ ಭಾವಾರ್ಥ ॥

ಎಲೈ ಪ್ರೇತವೇ, ನಿನ್ನ ಚಕ್ಷುರಿಂದ್ರಿಯವು ಸೂರ್ಯನಲ್ಲಿಗೆ ಹೋಗಿ ಸೇರಲಿ. ನಿನ್ನ ಪ್ರಾಣವು ವಾಯುವನ್ನು ಸೇರಲಿ. ನಿನ್ನ ಕರ್ಮಕ್ಕನುಸಾರವಾಗಿ ದ್ಯುಲೋಕಕ್ಕಾಗಲಿ, ಪೃಥಿವೀಲೋಕಕ್ಕಾಗಲಿ ಹೋಗಿ ಸೇರಲಿ. ಒಂದು ವೇಳೆ ನಿನಗೆ ಅನುಕೂಲವಾದರೆ, ಅಂತರಿಕ್ಷದಲ್ಲಿ ಸ್ಥಾಪಿತನಾಗು, ನಿನ್ನ ದೇಹಾವಯವಗಳು ಓಷಧಿಗಳಲ್ಲಿ ಸ್ಥಾಪಿತವಾಗಲಿ.

## English Translation

Let the eye repair to the sun; the breath to the wind; go you to the heaven or to the earth, according to your merit; or go to the waters if it suits you (to be) there, or abide with your members in the plants.

॥ ಸಂಹಿತಾಪಾಠಃ ॥

ಅಜೋ ಭಾಗಸ್ತಪಸಾ ತಂ ತಪಸ್ವ ತಂ ತೇ ಶೋಚಿಸ್ತಪತು ತಂ ತೇ ಅರ್ಚಿಃ ।

ಯಾಸ್ತೇ ಶಿವಾಸ್ತನ್ವೋ ಜಾತವೇದಸ್ತಾಭಿರ್ವಹೈನಂ ಸುಕೃತಾಮು ಲೋಕಂ ॥

॥ ಪದಪಾಠಃ ॥

ಅಜಃ । ಭಾಗಃ । ತಪಸಾ । ತಂ । ತಪಸ್ವ । ತಂ । ತೇ । ಶೋಚಿಃ । ತಪತು । ತಂ । ತೇ । ಅರ್ಚಿಃ ।

ಯಾಃ । ತೇ । ಶಿವಾಃ । ತನ್ವಃ । ಜಾತऽವೇದಃ । ತಾಭಿಃ । ವಹ । ಏನಂ । ಸುऽಕೃತಾಂ । ಊಂ ಇತಿ ।
ಲೋಕಂ ॥ ೪ ॥

॥ ಸಾಯಣಭಾಷ್ಯಂ ॥

ಅಜೋ ಜನನರಹಿತಃ ಶರೀರೇಂದ್ರಿಯಾದಿಭಾಗವ್ಯತಿರಿಕ್ತೋऽಂತರಪುರುಷಲಕ್ಷಣೋ ಯೋ ಭಾಗೋऽಸ್ತಿ ಹೇ ಅಗ್ನೇ ತೇ ತ್ವದೀಯೇನ ತಪಸಾ ತಾಪನೇನ ತಂ ತಾದೃಶಂ ಭಾಗಂ ತಪಸ್ವ । ತಪ್ತಂ ಕುರು । ತಥಾ ತೇ ತವ ಶೋಚಿಃ ಶೋಕಹೇತುರ್ಜ್ವಾಲಾವಿಶೇಷಸ್ತಂ ಭಾಗಂ ತಪತು । ಸಂಸ್ಕರೋತು । ಅಪಿ ಚ ತೇ ತವಾರ್ಚಿರ್ಭಾಸಕೋ ಜ್ವಾಲಾವಿಶೇಷಸ್ತಂ ಭಾಗಂ ತಪತು । ಸಂಸ್ಕರೋತು । ತಪಃಶೋಚಿ-ರರ್ಚಿಃಶಬ್ದಾನಾಂ ಸಂತಾಪತಾರತಮ್ಯೇನ ಭೇದಃ । ಹೇ ಜಾತವೇದಃ ತೇ ತವ ಯಾಸ್ತನ್ವೋ ಮೂರ್ತಯಃ ಶಿವಾಃ ಸುಖಹೇತವೋ ನ ತು ತಾಪಪ್ರದಾಃ ತಾಭಿರೇನಂ ತನೂಭಿಃ ಪ್ರೇತಂ ಸುಕೃತಾಂ ಶೋಭನಕರ್ಮ-ಕಾರಿಣಾಂ ಲೋಕಂ ಸ್ಥಾನಂ ವಹ । ಪ್ರಾಪಯ । ಉಶಬ್ದಃ ಪೂರಣಃ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) ಅಜಃ—ಉತ್ಪನ್ನವಾಗದೇ ಇರತಕ್ಕ । ಭಾಗಃ—ಯಾವ ಭಾಗವಿರುವುದೋ । ತಂ—ಆ ಭಾಗವನ್ನು । ತಪಸಾ—ನಿನ್ನ ಜ್ವಾಲೆಯಿಂದ । ತಪಸ್ವ—ದಹಿಸು । ತೇ—ನಿನ್ನ । ಶೋಚಿಃ—ಜ್ವಾಲಾ ವಿಶೇಷವು । ತಂ—ಆ ಭಾಗವನ್ನು । ತಪತು—ಸಂಸ್ಕರಿಸಲಿ । ತೇ—ನಿನ್ನ । ಅರ್ಚಿಃ—ಪ್ರಭಾಯುತವಾದ ಜ್ವಾಲೆಯು ಸಂಸ್ಕರಿಸಲಿ । ಜಾತವೇದಃ—ಎಲೈ ಅಗ್ನಿಯೇ । ತೇ—ನಿನ್ನ । ಯಾಃ ತನ್ವಃ—ಯಾವ ಶರೀರಭಾಗವು । ಶಿವಾಃ—ಮಂಗಳಕರವಾಗಿರುವುವೋ । ತಾಭಿಃ—ಅವುಗಳಿಂದ । ಏನಂ—ಈ ಪ್ರೇತವನ್ನು । ಸುಕೃತಾಂ—ಸುಕೃತಿಗಳ । ಲೋಕಂ—ಸ್ಥಾನಕ್ಕೆ । ವಹ—ವಹಿಸು ।

॥ ಭಾವಾರ್ಥ ॥

ಎಲೈ ಅಗ್ನಿಯೇ, ಉತ್ಪನ್ನವಾಗದೇ ಇರತಕ್ಕ ಯಾವ ಭಾಗವಿರುವುದೋ ಆ ಭಾಗವನ್ನು ನಿನ್ನ ಜ್ವಾಲೆಯಿಂದ ದಹಿಸು. ನಿನ್ನ ಶೋಚಿಯೂ ಅರ್ಚಿಯೂ (ಜ್ವಾಲಾ ವಿಶೇಷಗಳು) ಆ ಭಾಗವನ್ನು ಸಂಸ್ಕರಿಸಲಿ. ಎಲೈ ಅಗ್ನಿಯೇ, ನಿನ್ನ ಯಾವ ಶರೀರಭಾಗವು ಮಂಗಳಕರವಾಗಿರುವುದೋ ಅವುಗಳಿಂದ ಈ ಪ್ರೇತವನ್ನು ಸುಕೃತಿಗಳ ಸ್ಥಾನಕ್ಕೆ ವಹಿಸು.

## English Translation

The unborn portion ; burn that, Agni, with your heat ; let your flame, your splendour, consume it ; with those glorious members which you have given him, Jatavedas, bear him to the world (of the virtuous).

॥ ಸಂಹಿತಾಪಾಠಃ ॥

ಅವ ಸೃಜ ಪುನರಗ್ನೇ ಪಿತೃಭ್ಯೋ ಯಸ್ತ ಆಹುತಶ್ಚರತಿ ಸ್ವಧಾಭಿಃ ।
ಆಯುರ್ವಸಾನ ಉಪ ವೇತು ಶೇಷಃ ಸಂ ಗಚ್ಛತಾಂ ತನ್ವಾ ಜಾತವೇದಃ ॥

॥ ಪದಪಾಠಃ ॥

ಅವ । ಸೃಜ । ಪುನಃ । ಅಗ್ನೇ । ಪಿತೃಽಭ್ಯಃ । ಯಃ । ತೇ । ಆಽಹುತಃ । ಚರತಿ । ಸ್ವಧಾಭಿಃ ।
ಆಯುಃ । ವಸಾನಃ । ಉಪ । ವೇತು । ಶೇಷಃ । ಸಂ । ಗಚ್ಛತಾಂ । ತನ್ವಾ । ಜಾತಽವೇದಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯ ಪ್ರೇತಃ ಪುಮಾನಾಹುತಸ್ತ್ವಯಿ ಮಂತ್ರೇಣ ಸಮರ್ಪಿತಃ ಸನ್ ಸ್ವಧಾಭಿಃ ಸ್ವಧಾಕಾರಸಮರ್ಪಿತೈರುದಕಾದಿಭಿಃ ಸಹ ಚರತಿ ತಂ ಪ್ರೇತಂ ಪಿತೃಭ್ಯಃ ಪಿತೃಪ್ರಾಪ್ತ್ಯರ್ಥಂ ಪುನರವ ಸೃಜ । ಭೂಯಃ ಪ್ರೇರಯ । ಅಯಂ ಪ್ರೇತ ಆಯುರ್ಜೀವನಂ ವಸಾನ ಆಚ್ಛಾದಯನ್ । ಆಯುಷಾ ಯುಕ್ತ ಇತ್ಯರ್ಥಃ । ಶೇಷಃ ಶಿಷ್ಯಮಾಣಮಸ್ಥಿಲಕ್ಷಣಂ ಯಾಜನೀಯಂ ಶರೀರಮುಪ ವೇತು । ಉಪಗಚ್ಛತು । ಹೇ ಜಾತವೇದಃ ತವ ಪ್ರಸಾದಾತ್ತನ್ವಾ ಶರೀರೇಣ ಸಂ ಗಚ್ಛತಾಂ । ಸಂಗತೋ ಭವತು ॥

॥ ಪ್ರತಿಪದಾರ್ಥ ॥

**ಜಾತವೇದಃ**—ಜಾತಪ್ರಜ್ಞನಾದ । **ಅಗ್ನೇ**—ಎಲೈ ಅಗ್ನಿಯೇ । **ಯಃ**—ಯಾವ ಪ್ರೇತವು । **ತೇ**—ನಿನ್ನ । **ಆಹುತಃ**—ಚಿತೆಯಲ್ಲಿ ಅರ್ಪಿತವಾಗಿ । **ಸ್ವಧಾಭಿಃ**—ಸ್ವಧಾರೂಪವಾದ ಉದಕಾದಿಗಳೊಡನೆ । **ಚರತಿ**—ಸಂಚರಿಸುವುದೋ ಆ ಪ್ರೇತವನ್ನು । **ಪಿತೃಭ್ಯಃ**—ಪಿತೃಗಳ ಸಮೀಪಕ್ಕೆ । **ಪುನಃ**—ತಿರುಗಿಯೂ । **ಅವ ಸೃಜ**—ಕಳುಹಿಕೊಡು । **ಆಯುಃ**—ಪಿತೃಲೋಕದ ಆಯುಸ್ಸನ್ನು । **ವಸಾನಃ**—ಹೊಂದಿ । **ಶೇಷಃ**—ದಗ್ಧವಾದನಂತರ ಉಳಿದ ಭಾಗವು । **ಉಪವೇತು**—ಪಿತೃಲೋಕವನ್ನು ಸಮೀಪಿಸಲಿ । **ತನ್ವಾ**—ಆ ದೇಹದೊಡನೆ । **ಸಂ ಗಚ್ಛತಾಂ**—ಸೇರಿಕೊಳ್ಳಲಿ.

॥ ಭಾವಾರ್ಥ ॥

ಜಾತವೇದೋರೂಪಿಯಾದ ಎಲೈ ಅಗ್ನಿಯೇ, ಯಾವ ಪ್ರೇತವು ನಿನ್ನ ಚಿತೆಯಲ್ಲಿ ಅರ್ಪಿತವಾಗಿ ಸ್ವಧಾರೂಪವಾದ ಉದಕಾದಿಗಳೊಡನೆ ಸಂಚರಿಸುವುದೋ, ಆ ಪ್ರೇತವನ್ನು ಪಿತೃಗಳ ಸಮೀಪಕ್ಕೆ ತಿರುಗಿಯೂ ಕಳುಹಿಸಿಕೊಡು. ಅದು ಪಿತೃಲೋಕದ ಜೀವನವನ್ನು ಹೊಂದಿ, ದಗ್ಧಾವಶೇಷರೂಪಿಯಾಗಿ ಪಿತೃಲೋಕವನ್ನು ಸಮೀಪಿಸಲಿ. ಆ ದೇಹದೊಡನೆ ಸೇರಿಕೊಳ್ಳಲಿ

## English Translation

Dismiss again to the Pitris, Agni him who, offered on you, comes with the Swadhas: putting on (celestial) life, let the remains (of bodily life) depart: let him, Jatavedas, be associated with a body.

ಸಂಹಿತಾಪಾಠಃ ॥

ಯತ್ತೇ ಕೃಷ್ಣಃ ಶಕುನ ಆತುತೋದ ಪಿಪೀಲಃ ಸರ್ಪ ಉತ ವಾ ಶ್ವಾಪದಃ।
ಅಗ್ನಿಷ್ಟದ್ವಿಶ್ವಾದಗದಂ ಕೃಣೋತು ಸೋಮಶ್ಚ ಯೋ ಬ್ರಾಹ್ಮಣಾಁ ಆವಿ-
ವೇಶ ॥ ೬ ॥

॥ ಪದಪಾಠಃ ॥

ಯತ್ । ತೇ । ಕೃಷ್ಣಃ । ಶಕುನಃ । ಆऽತುತೋದ । ಪಿಪೀಲಃ । ಸರ್ಪಃ । ಉತ । ವಾ । ಶ್ವಾಪದಃ ।
ಅಗ್ನಿಃ । ತತ್ । ವಿಶ್ವऽಅತ್ । ಅಗದಂ । ಕೃಣೋತು । ಸೋಮಃ । ಚ । ಯಃ । ಬ್ರಾಹ್ಮಣಾನ್ । ಆऽ-
ವಿವೇಶ ॥ ೬ ॥

॥ ಸಾಯಣಭಾಷ್ಯಂ

ಹೇ ಮೃತಶರೀರ ತೇ ತವ ಸಂಬಂಧಿ ಯದಂಗಂ ಕೃಷ್ಣಃ ಶಕುನಃ ಕಾಕಾಖ್ಯ ಆತುತೋದ । ಆಜುಷದರ್ಥೇ। ಈಷತ್ತುನ್ನವಾನ್ । ತಥಾ ಪಿಪೀಲಃ ಪಿಪೀಲಿಕಾ ವಾ ಸರ್ಪೋ ವೋತ ವಾಪಿ ವಾ ಶ್ವಾಪದಶ್ಚ ಶೃಗಾಲಾದಿಃ । ಏತೇಷಾಮನ್ಯತಮೋ ಯದಿ ತುನ್ನವಾನಿತ್ಯರ್ಥಃ। ವಿಶ್ವಾತ್ ಸರ್ವಸ್ಯಾತ್ತಾಗ್ನಿಸ್ತತ್ತಾದೃಶಮಂಗಮಗದಂ ಕೃಣೋತು । ದೋಷರಹಿತಂ ಕರೋತು । ಸಂಸ್ಕರೋತ್ವಿತ್ಯರ್ಥಃ । ತಥಾ ಸೋಮಶ್ಚ ದೇವತಾರೂಪ ಓಷಧಿರೂಪೋ ವಾ ಸಂಸ್ಕರೋತು । ಯಃ ಸೋಮೋ ಬ್ರಾಹ್ಮಣಾನೃತ್ವಿಗಾದೀನಾವಿವೇಶ ಪ್ರವಿಷ್ಟವಾನ್ ॥

। ಪ್ರತಿಪದಾರ್ಥ ।

(ಎಲೈ ಮೃತಶರೀರವೇ) ತೇ—ನಿನ್ನ । ಯತ್—ಯಾವ ಅಂಗವನ್ನು । ಕೃಷ್ಣಃ—ಕೃಷ್ಣವರ್ಣವುಳ್ಳ । ಶಕುನಃ—ಕಾಗೆಯಾಗಲಿ । ಆತುತೋದ—ಹಿಂಸಿಸುವುದೋ, ಅಥವಾ । ಪಿಪೀಲಃ—ಇರುವೆಯಾಗಲಿ । ಸರ್ಪಃ—ಸರ್ಪವಾಗಲಿ । ಉತ ವಾ—ಅಥವಾ । ಶ್ವಾಪದಃ—ನಾಯಿನರಿಗಳಾಗಲಿ ಹಿಂಸಿಸುವುದೋ । ತಂ—ಭಾಗವನ್ನೆಲ್ಲ । ವಿಶ್ವಾತ್—ಸಕಲವನ್ನೂ ದಹಿಸತಕ್ಕ । ಅಗ್ನಿಃ—ಅಗ್ನಿಯು । ಅಗದಂ—ದೋಷರಹಿತ ನ್ನಾಗಿ । ಕೃಣೋತು—ಮಾಡಲಿ । ಯಃ—ಯಾವ ಸೋಮವು । ಬ್ರಾಹ್ಮಣಾನ್—ಋತ್ವಿಗಾದಿಗಳನ್ನು । ವಿವೇಶ—ಪ್ರವೇಶಿಸುವುದೋ । ಸೋಮಶ್ಚ—ಆ ಸೋಮವೂ ಈ ಭಾಗವನ್ನು ಸಂಸ್ಕರಿಸಲಿ.

। ಭಾವಾರ್ಥ ।

ಎಲೈ ಮೃತಶರೀರವೇ, ನಿನ್ನ ಯಾವ ಅಂಗವನ್ನು ಕೃಷ್ಣವರ್ಣವುಳ್ಳ ಕಾಗೆಯಾಗಲಿ, ಇರುವೆಯಾಗಲಿ, ವಾ ನಾಯಿನರಿಗಳಾಗಲಿ ಕಚ್ಚಿ ಹಿಂಸಿಸುವುದೋ ಆ ಭಾಗವನ್ನು ಸಕಲವನ್ನೂ ದಹಿಸತಕ್ಕ ಅಗ್ನಿಯು ದೋಷರಹಿತವಾಗಿ ಮಾಡಲಿ. ಋತ್ವಿಗಾದಿಗಳ ದೇಹವನ್ನು ಪ್ರವೇಶಿಸತಕ್ಕ ಸೋಮನೂ ಆ ಭಾಗವನ್ನು ಸಂಸ್ಕರಿಸಲಿ.

## English Translation

Should the black crow, the ant, the snake, the wild beast, harm (a limb) of you, may Agni the all-devourer, and the Soma that has pervaded, the Brahmans, make it whole.

॥ ಸಂಹಿತಾಪಾಠಃ ॥

**ಅಗ್ನೇರ್ವರ್ಮ ಪರಿ ಗೋಭಿರ್ವ್ಯಯಸ್ವ ಸಂ ಪ್ರೋರ್ಣುಷ್ವ ಪೀವಸಾ ಮೇದಸಾ ಚ ।**
**ನೇತ್ತ್ವಾ ಧೃಷ್ಣುರ್ಹರಸಾ ಜರ್ಹೃಷಾಣೋ ದಧೃಗ್ವಿಧಕ್ಷ್ಯನ್ಪರ್ಯಂಖಯಾತೇ ॥ ೭ ॥**

॥ ಪದಪಾಠಃ ॥

ಅಗ್ನೇಃ । ವರ್ಮ । ಪರಿ । ಗೋಭಿಃ । ವ್ಯಯಸ್ವ । ಸಂ । ಪ್ರ । ಊರ್ಣುಷ್ವ । ಪೀವಸಾ । ಮೇದಸಾ । ಚ ।

ನ । ಇತ್ । ತ್ವಾ । ಧೃಷ್ಣುಃ । ಹರಸಾ । ಜರ್ಹೃಷಾಣಃ । ದಧೃಕ್ । ವಿಽಧಕ್ಷ್ಯನ್ । ಪರಿಽಅಂಖಯಾತೇ ॥

॥ ಸಾಯಣಭಾಷ್ಯಂ ॥

ಅನುಸ್ತರಣ್ಯಾ ವಪಯಾ ಪ್ರೇತಸ್ಯ ಮುಖಮಗ್ನೇರ್ವರ್ಮೇತ್ಯನಯಾ ಪ್ರೋರ್ಣುಯಾತ್ । ಸೂತ್ರಿತಂ ಚ । ಅನುಸ್ತರಣ್ಯಾ ವಪಾಮುತ್ಖಿದ್ಯ ಶಿರೋಮುಖಂ ಪ್ರಚ್ಛಾದಯೇದಗ್ನೇರ್ವರ್ಮ ಪರಿ ಗೋಭಿರ್ವ್ಯಯಸ್ವೇತಿ । ಆ-ಗೃ. ೪-೩-೧೯ । ಇತಿ ।

ಹೇ ಪ್ರೇತ ಅಗ್ನೇಃ ಸ್ವಭೂತಂ ವರ್ಮ ಜ್ವಾಲಾಲಕ್ಷಣಂ ಕವಚಂ ಗೋಭಿರನುಸ್ತರಣೀಗೋಚರ್ಮಣಾ ಪರಿ ವ್ಯಯಸ್ವ । ಪರಿತಃ ಸಂವೃಣು । ಕಿಂಚ ಪೀವಸಾ ಸ್ಥೂಲೇನ ಮೇದಸಾ ಮಾಂಸೇನ ಸಮ್ಯಕ್ ಪ್ರೋರ್ಣುಷ್ವ ಆಚ್ಛಾದಯ । ಏವಂ ಕೃತೇ ಸತಿ ಹರಸಾ ತೇಜಸಾ ಧೃಷ್ಣುರ್ಧರ್ಷಣಶೀಲೋ ಜರ್ಹೃಷಾಣೋಽತ್ಯರ್ಥಂ ಹೃಷ್ಯನ್ ದಧೃಗ್ಧೃಷ್ಟಃ ಪ್ರಗಲ್ಭಃ ॥ ಋತ್ವಿಗಿತ್ಯಾದಿನಾ ದಧೃಕ್ಶಬ್ದೋ ನಿಪಾತಿತಃ ॥ ವಿಧಕ್ಷ್ಯನ್ ವಿವಿಧಂ ಭಸ್ಮೀಕರಿಷ್ಯನ್ ಏವಂಭೂತೋಽಗ್ನಿಸ್ತ್ವಾ ತ್ವಾಂ ನೇತ್ಪರ್ಯಂಖಯಾತೇ ನೈವ ಸರ್ವತೋ ವಿಸ್ತಾರಯತಿ ॥ ಅಖೇರ್ಗತ್ಯರ್ಥಾಲ್ಲೇಟ್ಯಡಾಗಮಃ ॥

॥ ಪ್ರತಿಪದಾರ್ಥ ॥

(ಎಲೈ ಪ್ರೇತನೇ) ಅಗ್ನೇಃ—ಅಗ್ನಿಯ । **ವರ್ಮ**—ಜ್ವಾಲಾರೂಪವಾದ ಕವಚವನ್ನು । **ಗೋಭಿಃ**—ಗೋಚರ್ಮದಿಂದ । **ಪರಿವ್ಯಯಸ್ವ**—ಆವೃತನಾಗುವಂತೆ ಮಾಡು । **ಪೀವಸಾ**—ಸ್ಥೂಲವಾದ । **ಮೇದಸಾ ಚ**—

ಮೇದಸ್ಸಿನಿಂದಲೂ । **ಸಂ ಪ್ರೋರ್ಣುಷ್ವ**— ಸುತ್ತುವರಿಯುಂತೆ ಮಾಡು (ಆಗ) । **ಹರಸಾ**— ತೇಜಸ್ಸಿನಿಂದ । **ಧೃಷ್ಣುಃ**— ಶತ್ರುಧರ್ಷಕನೂ । **ಜರ್ಹೃಷಾಣಃ**— ಅಧಿಕವಾದ ಸಂತೋಷವುಳ್ಳವನೂ । **ದಧೃಕ್**— ಪ್ರಗಲ್ಭನೂ । **ವಿಧಕ್ಷ್ಯನ್**— ನಾನಾವಿಧವಾಗಿ ದಹಿಸತಕ್ಕವನೂ ಆದ ಅಗ್ನಿಯು । **ತ್ವಾ**— ನಿನ್ನನ್ನು । **ನ ಇತ್ ಪರ್ಯಂಖಯಾತೇ**— ಸುತ್ತುವರಿದು ಹಿಂಸಿಸುವುದಿಲ್ಲ.

॥ ಭಾವಾರ್ಥ ॥

ಎಲೈ ಪ್ರೇತವೇ, ಅಗ್ನಿಯ ಜ್ವಾಲಾರೂಪವಾದ ಕವಚವನ್ನು ಗೋಚರ್ಮದಿಂದ ಆವೃತವಾಗುವಂತೆ ಮಾಡು. ಸ್ಥೂಲವಾದ ಮೇದಸ್ಸಿನಿಂದಲೂ ಸುತ್ತುವರಿಯುವಂತೆ ಮಾಡು. ಆಗ ತೇಜಸ್ಸಿನಿಂದ ಶತ್ರುಧರ್ಷಕನೂ, ಅಧಿಕವಾದ ಸಂತೋಷವುಳ್ಳವನೂ, ಪ್ರಗಲ್ಭನೂ, ನಾನಾವಿಧವಾಗಿ ದಹಿಸತಕ್ಕವನೂ ಆದ ಅಗ್ನಿಯು ನಿನ್ನನ್ನು ಸುತ್ತುವರಿದು ಹಿಂಸಿಸುವುದಿಲ್ಲ.

English Translation

Enclose the mail of Agni with the (hide of the) cow ; cover it with the fat and marrow : then will not (Agni), bold, exulting in his fierce heat, proud, embrace you roundabout to consume you (to ashes).

॥ ವಿಶೇಷವಿಷಯಗಳು ॥

ಪ್ರೇತಸಂಸ್ಕಾರಮಾಡುವಕಾಲದಲ್ಲಿ **ಅಗ್ನೇರ್ವರ್ಮ** ಎಂಬ ಈ ಋಕ್ಕನ್ನು ಪಠಿಸುತ್ತಾ ಮೃತಶರೀರದ ಮುಖವನ್ನು ಅನುಸ್ತರಣಿಯಿಂದ ಆಚ್ಛಾದನೆಮಾಡಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ– **ಅನುಸ್ತರಣ್ಯಾ ವಪಾಮುತ್ಖಿದ್ಯ ಶಿರೋಮುಖಂ ಪ್ರಚ್ಛಾದಯೇದಗ್ನೇರ್ವರ್ಮ ಪರಿ ಗೋಭಿರ್ವ್ಯಯಸ್ವ** ಎಂಬ ಸೂತ್ರದಿಂದ (ಆ. ಗೃ. ೪-೩-೧೯) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಇಮಮಗ್ನೇ ಚಮಸಂ ಮಾ ವಿ ಜಿಹ್ವರಃ ಪ್ರಿಯೋ ದೇವಾನಾಮುತ ಸೋಮ್ಯಾನಾಂ ।
ಏಷ ಯಶ್ಚಮಸೋ ದೇವಪಾನಸ್ತಸ್ಮಿನ್ದೇವಾ ಅಮೃತಾ ಮಾದಯಂತೇ ॥ ೮ ॥

॥ ಪದಪಾಠಃ ॥

ಇಮಂ । ಅಗ್ನೇ । ಚಮಸಂ । ಮಾ । ವಿ । ಜಿಹ್ವರಃ । ಪ್ರಿಯಃ । ದೇವಾನಾಂ । ಉತ । ಸೋಮ್ಯಾನಾಂ ।
ಏಷಃ । ಯಃ । ಚಮಸಃ । ದೇವಽಪಾನಃ । ತಸ್ಮಿನ್ । ದೇವಾಃ । ಅಮೃತಾಃ । ಮಾದಯಂತೇ ॥ ೮ ॥

॥ ಸಾಯಣಭಾಷ್ಯಂ ॥

ಇಮಮಗ್ನೇ ಚಮಸಮಿತ್ಯನಯಾ ಪ್ರಣೀತಾಪ್ರಣಯನಮನುಮಂತ್ರಯತೇ । ಸೂತ್ರಿತಂ ಚ । ಇಮಮಗ್ನೇ ಚಮಸಂ ಮಾ ವಿ ಜಿಹ್ವರ ಇತಿ ಪ್ರಣೀತಾಪ್ರಣಯನಮನುಮಂತ್ರಯತೇ । ಆ. ಗೃ. ೪-೩-೨೪ । ಇತಿ ॥

ಹೇ ಅಗ್ನೇ ಇಮಂ ಚಮಸಂ ಪ್ರಣೀತಾಪ್ರಣಯನಂ ಮಾ ವಿ ಜಿಹ್ವರಃ । ಮಾ ವಿಚಾಲೀಃ । ಯಶ್ಚಮಸೋ ದೇವಾನಾಮಿಂದ್ರಾದೀನಾಂ ಪ್ರಿಯ ಉತಾಪಿ ಚ ಸೋಮ್ಯಾನಾಂ ಸೋಮಾರ್ಹಾಣಾಂ ಪಿತೄಣಾಂ ಪ್ರಿಯಃ । ಕಿಂಚ ಯ ಏಷ ಚಮಸೋ ದೇವಪಾನಃ । ದೇವಾಃ ಪಿಬಂತ್ಯಸ್ಮಿನ್ನಿತಿ ದೇವಪಾನ-ಸ್ಥಾನಿಯೋ ಭವತಿ ತಸ್ಮಿಂಶ್ಚಮಸೇಽಮೃತಾ ಮರಣವರ್ಜಿತಾ ದೇವಾಃ ಪಿತರಶ್ಚ ಮಾದಯಂತೇ । ಹನ್ಯೈಶ್ಚ ಹೃಷ್ಟಾ ಭವಂತಿ ।

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । **ಇಮಂ ಚಮಸಂ**—ಈ ಹವಿಸ್ಸಿನ ಪಾತ್ರೆಯನ್ನು । **ಮಾ ವಿ ಜಿಹ್ವರಃ**—ಅಲುಗಿಸಬೇಡ (ಚಲಿಸುವಂತೆ ಮಾಡಬೇಡ) (ಈ ಪಾತ್ರೆಯು) । **ದೇವಾನಾಂ**—ದೇವತೆಗಳಿಗೆ । **ಪ್ರಿಯಃ**—ಪ್ರೀತಿಪಾತ್ರವಾದುದು । **ಉತ**—ಮತ್ತು । **ಸೋಮ್ಯಾನಾಂ**—ಸೋಮಾರ್ಹರಾದ ಪಿತೃಗಳಿಗೂ ಪ್ರಿಯವಾದುದು । **ಯಃ ಏಷಃ ಚಮಸಃ**—ಯಾವ ಈ ಚಮಸಪಾತ್ರೆಯು । **ದೇವಪಾನಃ**—ದೇವತೆಗಳಿಗೆ ಪಾನಸಾಧನವಾಗಿರುವುದೋ । **ತಸ್ಮಿನ್**—ಅದೇ ಪಾತ್ರೆಯಲ್ಲಿ । **ಅಮೃತಾಃ**—ಮರಣರಹಿತರಾದ । **ದೇವಾಃ**—ದೇವತೆಗಳು । **ಮಾದಯಂತೇ**—ಹರ್ಷವನ್ನು ಹೊಂದುತ್ತಾರೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಈ ಹವಿಸ್ಸಿನ ಪಾತ್ರೆಯನ್ನು ಚಲಿಸುವಂತೆ ಮಾಡಬೇಡ. ಈ ಪಾತ್ರೆಯು ದೇವತೆಗಳಿಗೆ ಪ್ರೀತಿಪಾತ್ರವಾದುದು. ಮತ್ತು ಸೋಮಾರ್ಹರಾದ ಪಿತೃಗಳಿಗೆ ಪ್ರಿಯವಾದುದು. ಯಾವ ಈ ಚಮಸಪಾತ್ರೆಯು ದೇವತೆಗಳಿಗೆ ಪಾನಸಾಧನವಾಗಿರುವುದೋ ಅದೇ ಪಾತ್ರೆಯಲ್ಲಿ ಮರಣರಹಿತರಾದ ದೇವತೆಗಳು ಹರ್ಷವನ್ನು ಹೊಂದುತ್ತಾರೆ.

## English Translation

Agni, shake not this ladle, for it is dear to the gods, and to the (Pitris) who are worthy of the Soma: this which is the drining ladle of the gods, in this the immortal gods delight.

॥ ವಿಶೇಷವಿಷಯಗಳು ॥

ಅಪರಕರ್ಮದಲ್ಲಿ ಪ್ರಣೀತಾಪಾತ್ರೆಯನ್ನು ಪ್ರಣಯನಮಾಡುವಾಗ **ಇಮಮಗ್ನೇ ಚಮಸಂ** ಎಂಬ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಇಮಮಗ್ನೇ ಚಮಸಂ ಮಾ ವಿ ಜಿಹ್ವರ ಇತಿ ಪ್ರಣೀತಾಪ್ರಣಯನಮನುಮಂತ್ರಯತೇ** ಎಂಬ ಸೂತ್ರದಿಂದ (ಆ. ಗೃ. ೪-೩-೨೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಕ್ರ॒ವ್ಯಾದ॑ಮ॒ಗ್ನಿಂ ಪ್ರ ಹಿ॑ಣೋಮಿ ದೂ॒ರಂ ಯ॒ಮರಾ॑ಜ್ಞೋ ಗಚ್ಛತು ರಿಪ್ರ-
ವಾ॒ಹಃ ।
ಇ॒ಹೈವಾಯಮಿತ॑ರೋ ಜಾ॒ತವೇ॑ದಾ ದೇ॒ವೇಭ್ಯೋ॑ ಹ॒ವ್ಯಂ ವ॑ಹತು ಪ್ರಜಾ॒-
ನನ್ ॥ ೯ ॥

॥ ಪದಪಾಠಃ ॥

ಕ್ರ॒ವ್ಯ॒ऽಅದ॑ಂ । ಅ॒ಗ್ನಿಂ । ಪ್ರ । ಹಿ॒ನೋ॒ಮಿ॒ । ದೂ॒ರಂ । ಯ॒ಮಽರಾ॑ಜ್ಞಃ । ಗ॒ಚ್ಛ॒ತು॒ । ರಿ॒ಪ್ರ॒ಽವಾ॒ಹಃ ।
ಇ॒ಹ । ಏ॒ವ । ಅ॒ಯಂ । ಇತ॑ರಃ । ಜಾ॒ತಽವೇ॑ದಾಃ । ದೇ॒ವೇಭ್ಯಃ॑ । ಹ॒ವ್ಯಂ । ವ॒ಹ॒ತು॒ । ಪ್ರ॒ಽಜಾ॒ನನ್ ॥೯॥

॥ ಸಾಯಣಭಾಷ್ಯಂ ॥

ಆಹಿತಾಗ್ನಿಮರಣ ಏತದಾದಿಕೇ ದ್ವೇ ಋಚಾವೌಪಾಸನೋದ್ವಾಸನೇ ವಿನಿಯುಕ್ತೇ । ತತ್ರ ಪ್ರಥಮಾಯಾಃ ಪೂರ್ವಾರ್ಧೇನ ದಕ್ಷಿಣಸ್ಯಾಂ ದಿಶಿ ಚತುಷ್ಪಥಾದಾವೌಪಾಸನಾಗ್ನಿಂ ನಿರಸ್ಯತಿ । ಉತ್ತ-ರೇಣ ಶಾಂತಿಕರ್ಮಾರ್ಥಮಾದತ್ತೇ । ಆ. ಗೃ. ೪-೬ । ಕ್ರವ್ಯಾದಂ । ಕ್ರವ್ಯಮಾಮಿಷಂ । ತಸ್ಯಾತ್ತಾರಂ ತೀವ್ರಮಗ್ನಿಂ ದೂರಂ ವಿಪ್ರಕೃಷ್ಟದೇಶೇ ಪ್ರ ಹಿಣೋಮಿ । ಪ್ರಗಮಯಾಮಿ ॥ ಹಿ ಗತೌ ಸ್ವಾದಿಃ ॥ ರಿಪ್ರವಾಹಃ । ರಿಪ್ರಂ ಪಾಪಂ । ತಸ್ಯ ವೋಢಾ ಸೋಽಗ್ನಿರ್ಯಮರಾಜ್ಞೋ ಯಮೋ ರಾಜಾ ಯೇಷಾಂ ತಾನ್ಯಮರಾಜಕಾನನ್ಯಪ್ರದೇಶಾನ್ಗಚ್ಛತು । ಪ್ರಾಪ್ನೋತು । ಅಥ ಶಾಂತಿಕರ್ಮಾರ್ಥಮುಪಾಸನ ಇತರಃ ಕ್ರವ್ಯಾದಾದನ್ಯೋ ಜಾತವೇದಾ ಜಾತಾನಾಂ ವೇದಿತಾ ಜಾತಧನೋ ವಾ ಪ್ರಜಾನನ್ ಸರ್ವೈರ್ವಿಜ್ಞಾ-ಯಮಾನೋಽಗ್ನಿರಿಹೈವ ದೇಶೇ ದೇವೇಭ್ಯೋ ದೇವಾರ್ಥಂ ಹವ್ಯಂ ಹವನಯೋಗ್ಯಂ ಹವಿರ್ವಹತು । ಪ್ರಾಪಯತು ॥

॥ ಪ್ರತಿಪದಾರ್ಥ ॥

ಕ್ರವ್ಯಾದಂ—ಕ್ರವ್ಯ (ಮಾಂಸ) ವನ್ನು ಭಕ್ಷಿಸುವ । **ಅಗ್ನಿಂ**—ಅಗ್ನಿಯನ್ನು । **ದೂರಂ**—ದೂರಕ್ಕೆ । **ಪ್ರ ಹಿಣೋಮಿ**— ಕಳುಹುತ್ತೇನೆ । **ರಿಪ್ರವಾಹಃ**—ಪಾಪನಾಶಕನಾದ ಅಗ್ನಿಯು । **ಯಮರಾಜ್ಞಃ**—ಯಮನ ಪ್ರಭುತ್ವದಲ್ಲಿರುವ ಪ್ರದೇಶಗಳಿಗೆ । **ಗಚ್ಛತು**—ಹೋಗಲಿ । **ಇತರಃ**—ಬೇರೆ ರೂಪವನ್ನು ಹೊಂದಿರುವ । **ಅಯಂ**-**ಜಾತವೇದಾಃ**—ಜಾತವೇದೋ ರೂಪಿಯಾದ ಈ ಅಗ್ನಿಯು । **ಪ್ರಜಾನನ್**—ಎಲ್ಲರಿಗೂ ಗೋಚರನಾಗಿ । **ಇಹೈವ**—ಇದೇ ಪ್ರದೇಶದಲ್ಲಿದ್ದು । **ದೇವೇಭ್ಯಃ**—ದೇವತೆಗಳಿಗೆ । **ಹವ್ಯಂ**—ಹವಿಸ್ಸನ್ನು । **ವಹತು**—ವಹಿಸಲಿ

॥ ಭಾವಾರ್ಥ ॥

ಕ್ರವ್ಯಭಕ್ಷಕನಾದ ಅಗ್ನಿಯನ್ನು ದೂರಕ್ಕೆ ಕಳುಹುತ್ತೇನೆ. ಪಾಪನಾಶಕನಾದ ಅಗ್ನಿಯು ಯಮನ ಪ್ರಭುತ್ವದಲ್ಲಿರುವ ಪ್ರದೇಶಗಳಿಗೆ ಹೋಗಲಿ. ಬೇರೆ ರೂಪವನ್ನು ಹೊಂದಿರುವ ಜಾತವೇದೋರೂಪಿಯಾದ ಅಗ್ನಿಯು ಎಲ್ಲರಿಗೂ ಗೋಚರನಾಗಿ ಇದೇ ಪ್ರದೇಶದಲ್ಲಿದ್ದು ದೇವತೆಗಳಿಗೆ ಹವಿಸ್ಸನ್ನು ವಹಿಸಲಿ.

## English Translation

I send the flesh-devouring Agni to a distance: let him bearing away sin repair to (the realm of) king Yama; but let this other Jatavedas who is known (by all) convey the oblation to the gods.

॥ ಸಂಹಿತಾಪಾಠಃ ॥

**ಯೋ ಅಗ್ನಿಃ ಕ್ರವ್ಯಾತ್ಪ್ರವಿವೇಶ ವೋ ಗೃಹಮಿಮಂ ಪಶ್ಯನ್ನಿತರಂ ಜಾತ-ವೇದಸಂ ।**

**ತಂ ಹರಾಮಿ ಪಿತೃಯಜ್ಞಾಯ ದೇವಂ ಸ ಘರ್ಮಮಿನ್ವಾತ್ಪರಮೇ ಸಧಸ್ಥೇ॥**

॥ ಪದಪಾಠಃ ॥

ಯಃ । ಅಗ್ನಿಃ । ಕ್ರವ್ಯಽಅತ್ । ಪ್ರಽವಿವೇಶ । ವಃ । ಗೃಹಂ । ಇಮಂ । ಪಶ್ಯನ್ । ಇತರಂ । ಜಾತಽ-ವೇದಸಂ ।

ತಂ । ಹರಾಮಿ । ಪಿತೃಽಯಜ್ಞಾಯ । ದೇವಂ । ಸಃ । ಘರ್ಮಂ । ಇನ್ವಾತ್ । ಪರಮೇ । ಸಧಽಸ್ಥೇ ॥೧೦॥

॥ ಸಾಯಣಭಾಷ್ಯಂ ॥

ಯಃ ಕ್ರವ್ಯಾದೋಽಗ್ನಿರ್ದೇವೋ ಯುಷ್ಮಾಕಂ ಗೃಹಿಣಾಂ ಗೃಹಂ ಪ್ರವಿವೇಶ ಪ್ರವಿಷ್ಟವಾನ್ ತಂ ಕ್ರವ್ಯಾದಂ ದೇವಂ ಹರಾಮಿ। ಗೃಹಾದ್ಬಹಿರ್ನಿಷ್ಕ್ರಾಮಯಾಮೀತ್ಯರ್ಥಃ। ಕಿಮರ್ಥಂ। ಪಿತೃಯಜ್ಞಾಯ ತದರ್ಥಂ। ಕಿಂ ಕುರ್ವನ್। ಇಮಮಿತರಂ ತಸ್ಮಾದನ್ಯಂ ಹವ್ಯವಾಹಂ ಜಾತವೇದಸಂ ಪಶ್ಯನ್ ಪರ್ಯಾಲೋಚಯನ್। ತಥಾ ಸತಿ ಕ್ರವ್ಯಾದಾತ್ಪರೋಽಗ್ನಿಃ ಪರಮ ಉತ್ಕೃಷ್ಟೇ ಸಧಸ್ಥೇ ಸಹಸ್ಥಾನೇ ಘರ್ಮಂ ಯಜ್ಞಮಿನ್ವಾತ್। ಪ್ರಾಪ್ನೋತು। ಪಿತೃಭಿರ್ಘರ್ಮಸ್ಯೈಃ ಸಹೇತಿ ಶೇಷಃ।

॥ ಪ್ರತಿಪದಾರ್ಥ ॥

ಕ್ರವ್ಯಾತ್ ಯಃ ಅಗ್ನಿಃ—ಕ್ರವ್ಯಾತ್ಸಂಜ್ಞಕನಾದ ಯಾವ ಅಗ್ನಿಯು । **ವಃ ಗೃಹಂ**—ನಿಮ್ಮ ಗೃಹವನ್ನು। ಪ್ರವಿವೇಶ—ಪ್ರವೇಶಿಸಿರುವನೋ । ತಂ ದೇವಂ—ಆ ಅಗ್ನಿದೇವನನ್ನು। ಪಿತೃಯಜ್ಞಾಯ—ಪಿತೃಗಳ ಪೂಜಾರ್ಥವಾಗಿ । ಇಮಂ ಇತರಂ ಜಾತವೇದಸಂ—ಜಾತವೇದೋರೂಪಿಯಾದ ಈ ಬೇರೆ ಅಗ್ನಿಯನ್ನು । **ಪಶ್ಯನ್**—ವೀಕ್ಷಿಸುತ್ತ । ಹರಾಮಿ—ಗೃಹದಿಂದ ಹೊರಕ್ಕೆ ವಹಿಸುತ್ತೇನೆ । ಸಃ—ಜಾತವೇದೋರೂಪಿಯಾದ ಅಗ್ನಿಯು । ಪರಮೇ—ಉತ್ಕೃಷ್ಟವಾದ । ಸಧಸ್ಥೇ—ಸ್ಥಾನದಲ್ಲಿ । ಘರ್ಮಂ—ಯಜ್ಞವನ್ನು । ಇನ್ವಾತ್—ವ್ಯಾಪಿಸಲಿ.

॥ ಭಾವಾರ್ಥ ॥

ಕ್ರವ್ಯಾತ್ಸಂಜ್ಞಕನಾದ ಯಾವ ಅಗ್ನಿಯು ನಿಮ್ಮ ಗೃಹವನ್ನು ಪ್ರದೇಶಿಸಿರುವನೋ ಆ ಅಗ್ನಿದೇವನನ್ನು ಪಿತೃಗಳ ಪೂಜಾರ್ಥವಾಗಿ ಜಾತವೇದೋರೂಪಿಯಾದ ಬೇರೆ ಅಗ್ನಿಯನ್ನು ವಿಕ್ಷಿಸುತ್ತ ಗೃಹದಿಂದ ಹೊರಕ್ಕೆ ಪಮಿಸುತ್ತೇನೆ. ಜಾತವೇದೋರೂಪಿಯಾದ ಅಗ್ನಿಯು ಉತ್ಕೃಷ್ಟವಾದ ಸ್ಥಾನದಲ್ಲಿ ಯಜ್ಞವನ್ನು ವ್ಯಾಪಿಸಲಿ.

## English Translation

The fleeh-devouring deity Agni, who has entered your dwelling, I turn him out, for the worship of the Pitris, upon beholding this other (Agni) Jatavedas; let him celebrate the sacrifice (to the Pitris) in the most excellent assembly.

॥ ಸಂಹಿತಾಪಾಠಃ ॥

ಯೋ ಅಗ್ನಿಃ ಕವ್ಯವಾಹನಃ ಪಿತೄನ್ಯಕ್ಷದೃತಾವೃಧಃ ।
ಪ್ರೇದು ಹವ್ಯಾನಿ ವೋಚತಿ ದೇವೇಭ್ಯಶ್ಚ ಪಿತೃಭ್ಯ ಆ ॥ ೧೧ ॥

॥ ಪದಪಾಠಃ ॥

ಯಃ । ಅಗ್ನಿಃ । ಕವ್ಯಽವಾಹನಃ । ಪಿತೄನ್ । ಯಕ್ಷತ್ । ಋತಽವೃಧಃ ।
ಪ್ರ । ಇತ್ । ಊಂ ಇತಿ । ಹವ್ಯಾನಿ । ವೋಚತಿ । ದೇವೇಭ್ಯಃ । ಚ । ಪಿತೃಽಭ್ಯಃ । ಆ ॥ ೧೧ ॥

॥ ಸಾಯಣಭಾಷ್ಯಂ ॥

ಮಹಾಪಿತೃಯಜ್ಞೇ ವಷಟ್ಕಾರಕ್ರಿಯಾಯಾಂ ಯೋ ಅಗ್ನಿಃ ಕವ್ಯವಾಹನ ಇತ್ಯೇಷಾ ಸ್ವಿಷ್ಟಕೃತೋ ಯಾಜ್ಯಾ । ಸೂತ್ರಿತಂ ಚ । ಯೋ ಅಗ್ನಿಃ ಕವ್ಯವಾಹನಸ್ತ್ವಮಗ್ನ ಈಳಿತೋ ಜಾತವೇದ ಇತಿ ಸಂಯಾಜ್ಯೇ । ಆ. ೨-೧೯ । ಇತಿ ।

ಕವ್ಯವಾಹನಃ ಕವ್ಯಸ್ಯ ಹವಿಷೋ ವೋಢಾ ಯೋಽಗ್ನಿಃ ಪಿತೄನೃತಾವೃಧ ಋತಸ್ಯ ಯಜ್ಞಸ್ಯೋದಕಸ್ಯ ವಾ ವರ್ಧಯಿತೄನ್ ಸತ್ಯೇನ ವೃದ್ಧಾನ್ವಾ ದೇವಾನ್। ಏತತ್ಪಿತೃವಿಶೇಷಣಂ ವಾಸ್ತು । ತಾನ್ಯಕ್ಷತ್ ಯಜತಿ । ಯಜೇರ್ಲೇಟಿ ಸಿಬಡಾಗಮಃ ॥ ಸೋಽಗ್ನಿರ್ಹವ್ಯಾನಿ ಹವೀಂಷಿ ಪ್ರ ವೋಚತು । ಪಿತೃಯಜ್ಞೇ ಪ್ರಬ್ರವೀತು । ಯುಷ್ಮದರ್ಥಂ ಮಯಾನೀತಾನೀತಿ । ಇದೂ ಪೂರಣಾ । ಕೇಭ್ಯಃ । ದೇವೇಭ್ಯಶ್ಚ ಪಿತೃಭ್ಯಶ್ಚ । ಆಕಾರಃ ಸಮುಚ್ಚಯೇ ॥

॥ ಪ್ರತಿಪದಾರ್ಥ ॥

ಕವ್ಯವಾಹನಃ—ಕವ್ಯಸಂಜ್ಞಕವಾದ ಹವಿಸ್ಸನ್ನು ವಹಿಸುವ । **ಯಃ ಅಗ್ನಿಃ**—ಯಾವ ಅಗ್ನಿಯು । ಪಿತ್ರೂನ್—ಪಿತೃಗಳನ್ನೂ । **ಋತಾವೃಧಃ**—ಸತ್ಯವರ್ಧಕರಾದ ದೇವತೆಗಳನ್ನೂ । **ಯಕ್ಷತ್**—ಪೂಜಿಸುವನೋ ಆ ಅಗ್ನಿಯು । **ದೇವೇಭ್ಯಃ**—ದೇವತೆಗಳಿಗೂ । **ಪಿತೃಭ್ಯಃ ಚ**—ಪಿತೃಗಳಿಗೂ ನಿರ್ದಿಷ್ಟವಾದ । **ಹವ್ಯಾನಿ**—ಹವಿಸ್ಸುಗಳನ್ನು । **ಪ್ರ ವೋಚತಿ**—ಬಿಡಿಸಿ ಹೇಳಿ ತಿಳಿಯಪಡಿಸಲಿ ।

॥ ಭಾವಾರ್ಥ ॥

ಕವ್ಯಸಂಜ್ಞಕವಾದ ಹವಿಸ್ಸನ್ನು ವಹಿಸುವ ಯಾವ ಅಗ್ನಿಯು ಪಿತೃಗಳನ್ನೂ ಸತ್ಯವರ್ಧಕರಾದ ದೇವತೆಗಳನ್ನೂ ಪೂಜಿಸುವನೋ ಆ ಅಗ್ನಿಯು ದೇವತೆಗಳಿಗೂ, ಪಿತೃಗಳಿಗೂ ನಿರ್ದಿಷ್ಟವಾದ ಹವಿಸ್ಸುಗಳನ್ನು ಅರ್ಪಿಸಿ ಅವರವರ ಭಾಗಗಳನ್ನು ತಿಳಿಸಲಿ.

## English Translation

Let Agni the bearer of the Kavya worship the Pitris, who are magnified by truth, let him declare which are the offerings to the gods, which to the Pitris.

॥ ವಿಶೇಷವಿಷಯಗಳು ॥

ಮಹಾಪಿತೃಯಜ್ಞದಲ್ಲಿ ವಷಟ್ಕಾರಸಹಿತವಾಗಿ ಸ್ವಿಷ್ಟಕೃದ್ಧೋಮಮಾಡುವಾಗ **ಯೋ ಅಗ್ನಿಃ ಕವ್ಯವಾಹನಃ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯೋ ಅಗ್ನಿಃ ಕವ್ಯವಾಹನಸ್ತ್ವಮಗ್ನ ಈಳಿತೋ ಜಾತವೇದ ಇತಿ ಸಂಯಾಜ್ಯೇ** ಎಂಬ ಸೂತ್ರದಿಂದ (ಆ. ೨-೧೯) ವಿಸ್ತೃತವಾಗಿರುವುದು.

॥ ಸಂಹಿತಾಪಾಠಃ ॥

ಉಶಂತಸ್ತ್ವಾ ನಿ ಧೀಮಹ್ಯುಶಂತಃ ಸಮಿಧೀಮಹಿ ।
ಉಶನ್ನುಶತ ಆ ವಹ ಪಿತೄನ್ಹವಿಷೇ ಅತ್ತವೇ ॥ ೧೨ ॥

॥ ಪದಪಾಠಃ ॥

ಉಶಂತಃ । ತ್ವಾ । ನಿ । ಧೀಮಹಿ । ಉಶಂತಃ । ಸಂ । ಇಧೀಮಹಿ ।
ಉಶನ್ । ಉಶತಃ । ಆ । ವಹ । ಪಿತೄನ್ । ಹವಿಷೇ । ಅತ್ತವೇ ॥ ೧೨ ॥

॥ ಸಾಯಣಭಾಷ್ಯಂ ॥

ಮಹಾಪಿತೃಯಜ್ಞ ಉಶಂತಸ್ತ್ವೇತ್ಯೇಷಾ ಸಾಮಿಧೇನೀ । ಸೂತ್ರ್ಯತೇ ಹಿ । ಉಶಂತಸ್ತ್ವಾ ನಿ ಧೀಮಹೀತ್ಯೇತಾಂ ತ್ರಿರನವಾನಂ ತಾಃ ಸಾಮಿಧೇನ್ಯಃ । ಆ. ೨-೧೯ । ಇತಿ ।

**ಹೇ ಅಗ್ನೇ ಉಶಂತಃ ಕಾಮಯಮಾನಾ ವಯಂ ತ್ವಾ ತ್ವಾಂ ನಿ ಧೀಮಹಿ । ಕರ್ಮಾರ್ಥಂ ಸ್ಥಾಪಿತವಂತಃ । ಉಶಂತೋ ವಯಂ ಸಮಿಧೀಮಹಿ । ಸಂದೀಪಯಾಮಃ । ತ್ವಮುಪ್ಯುಶನ್ ಕಾಮಯಮಾನೋ ಹವಿರಾದಿಕಮುಶತ ಆಗಂತುಕಾಮಾನ್ಪಿತೄನಸ್ಮಿನ್ಯಜ್ಞ ಆ ವಹ । ಹವಿಷೇಽಸ್ಮಾಭಿಃ ಪ್ರತ್ತಂ ಹವಿರತ್ತವೇಽತ್ತುಂ । ಆದೇಸ್ತುಮರ್ಥೇ ತವೇನ್ಪ್ರತ್ಯಯಃ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನಸಂಜ್ಞಾ ।**

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ!) **ಉಶಂತಃ**—ನಿನ್ನ ಪೂಜೆಯನ್ನು ಅಪೇಕ್ಷಿಸುವ ನಾವು । **ತ್ವಾ**—ನಿನ್ನನ್ನು । **ನಿ ಧೀಮಹಿ**—ಕರ್ಮಾರ್ಥವಾಗಿ ಸ್ಥಾಪಿಸಿದ್ದೇವೆ । **ಉಶಂತಃ**—ನಿನ್ನನ್ನು ಅಪೇಕ್ಷಿಸುವ ನಾವು । **ಸಮಿಧೀಮಹಿ**—ನಿನ್ನನ್ನು ಪ್ರಜ್ವಲಿಸುವಂತೆ ಮಾಡಿದ್ದೇವೆ । **ಉಶನ್**—ನಮ್ಮ ಪೂಜೆಯನ್ನು ಅಪೇಕ್ಷಿಸುವ ನೀನು । **ಉಶತಃ**—ನಮ್ಮ ಹವಿಸ್ಸುಗಳನ್ನು ಇಚ್ಛಿಸುವ । **ಪಿತೄನ್**—ಪಿತೃಗಳನ್ನು । **ಹವಿಷೇ**—ನಮ್ಮ ಹವಿಸ್ಸುಗಳನ್ನು । **ಅತ್ತವೇ**—ಭಕ್ಷಿಸಲು । **ಆ ವಹ**—ಕರೆದುಕೊಂಡು ಬಾ ।

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನ ಪೂಜೆಯನ್ನು ಅಪೇಕ್ಷಿಸುವ ನಾವು ನಿನ್ನನ್ನು ಕರ್ಮಾರ್ಥವಾಗಿ ಸ್ಥಾಪಿಸಿದ್ದೇವೆ. ನಿನ್ನನ್ನು ಅಪೇಕ್ಷಿಸುವ ನಾವು ನಿನ್ನನ್ನು ಪ್ರಜ್ವಲಿಸುವಂತೆ ಮಾಡಿದ್ದೇವೆ. ನಮ್ಮ ಪೂಜೆಯನ್ನು ಅಪೇಕ್ಷಿಸುವ ನೀನು ನಮ್ಮ ಹವಿಸ್ಸುಗಳನ್ನು ಇಚ್ಛಿಸುವ ಪಿತೃಗಳನ್ನು ನಮ್ಮ ಹವಿಸ್ಸುಗಳನ್ನು ಭಕ್ಷಿಸಲು ಕರೆದುಕೊಂಡು ಬಾ.

## English Translation

Longing we set you down; longing we kindle you ; do you longing bring the longing Pitris to eat of the (sacrificial) viands.

॥ ವಿಶೇಷವಿಷಯಗಳು ॥

ಮಹಾಪಿತೃಯಜ್ಞದಲ್ಲಿ **ಉಶಂತಸ್ತ್ವಾ** ಎಂಬ ಈ ಋಕ್ಕನ್ನು ಸಾಮಿಧೇನೀಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಉಶಂತಸ್ತ್ವಾ ನಿ ಧೀಮಹೀತ್ಯೇತಾಂ ತ್ರಿರನವಾನಂ ತಾಃ ಸಾಮಿಧೇನ್ಯಃ** ಎಂಬ ಸೂತ್ರದಿಂದ (ಅ. ೨-೧೯) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಯಂ ತ್ವಮಗ್ನೇ ಸಮದಹಸ್ತಮು ನಿರ್ವಾಪಯಾ ಪುನಃ ॥**

**ಕಿಯಾಂಬ್ವತ್ರ ರೋಹತು ಪಾಕದೂರ್ವಾ ವ್ಯಲ್ಕಶಾ ॥ ೧೩ ॥**

॥ ಪದಪಾಠಃ ॥

ಯಂ । ತ್ವಂ । ಅಗ್ನೇ । ಸಂऽಅದಹಃ । ತಂ । ಊಂ ಇತಿ । ನಿಃ । ವಾಪಯ । ಪುನರಿತಿ ।

ಕಿಯಾಂಬು । ಅತ್ರ । ರೋಹತು । ಪಾಕऽದೂರ್ವಾ । ವಿऽಅಲ್ಕಶಾ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಪಿತೃದಹನಕಾಲೇ ಯಂ ದೇಶಂ ಸಮದಹಃ ಪುರಾ ಸಮ್ಯಗ್ದಗ್ಧವಾನಸಿ ॥ ತಿಙಃ ಚೋದಾತ್ತವತೀತಿ ಸಮೋ ನಿಘಾತಃ ॥ ತಮು ತಮೇವ ಪುನರ್ನಿರ್ವಾಪಯ । ಅತ್ರಾಸ್ಮಿನ್ದೇಶೇ ಕಿಯಾಂಬು ಕಿಯತ್ಪ್ರಮಾಣಮುದಕಂ ಯಸ್ಮಿನ್ ತತ್ಪುಷ್ಕರಿಣ್ಯಾದಿಕಂ ರೋಹತು । ಉತ್ಪದ್ಯತಾಂ । ಕಿಂಚ ವ್ಯಲ್ಕಶಾ ವಿವಿಧಶಾಖಾ ಪಾಕದೂರ್ವಾ ಪರಿಪಕ್ವದೂರ್ವಾ ಚೋತ್ಪದ್ಯತಾಂ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಯಂ**—ಯಾವ ಪ್ರದೇಶವನ್ನು । **ಸಮದಹಃ**—ಪಿತೃದಹನ ಕಾಲದಲ್ಲಿ ದಹಿಸಿದೆಯೋ । **ತಮು**—ಆ ಪ್ರದೇಶವನ್ನು । **ಪುನಃ**—ತಿರುಗಿಯೂ । **ನಿರ್ವಾಪಯ**—ತಣ್ಣಗಾಗು ವಂತೆ ಮಾಡು । **ಅತ್ರ**—ಈ ಪ್ರದೇಶದಲ್ಲಿ । **ಕಿಯಾಂಬು**—ಕಿಂಚಿತ್ಪ್ರಮಾಣದ ನೀರಿನಲ್ಲಿ ಬೆಳೆಯುವ ಪುಷ್ಕರಿಣ್ಯಾದಿ ಗಳು । **ರೋಹತು**—ಬೆಳೆಯಲಿ । **ವ್ಯಲ್ಕಶಾ**—ಅನೇಕ ಶಾಖೆಗಳುಳ್ಳ । **ಪಾಕದೂರ್ವಾ**—ಪಕ್ವವಾದ ದೂರ್ವಾ ಸಸಿಯು (ಹುಲ್ಲುಗರಿಕೆಗಳು) ಬೆಳೆಯಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ಪ್ರದೇಶವನ್ನು ನೀನು ಪಿತೃದಹನಕಾಲದಲ್ಲಿ ದಹಿಸಿದೆಯೋ, ಆ ಪ್ರದೇಶವನ್ನು ತಿರುಗಿಯೂ ತಣ್ಣಗಾಗುವಂತೆ ಮಾಡು. ಈ ಪ್ರದೇಶದಲ್ಲಿ ಕಿಂಚಿತ್ಪ್ರಮಾಣದ ನೀರಿನಲ್ಲಿ ಬೆಳೆಯುವ ಪುಷ್ಕರಿಣ್ಯಾದಿ ಗಳೂ ಅನೇಕ ಶಾಖೆಗಳುಳ್ಳ ದೂರ್ವಾಸಸಿಗಳೂ ಪುಷ್ಕಳವಾಗಿ (ಹುಲ್ಲುಗರಿಕೆಗಳು) ಬೆಳೆಯಲಿ.

## English Translation

Cool again, Agni, the spot which you have burned, there let the water-lily grow, and the ripe Durva with its many stalks.

॥ ಸಂಹಿತಾಪಾಠಃ ॥

ಶೀತಿಕೇ ಶೀತಿಕಾವತಿ ಹ್ಲಾದಿಕೇ ಹ್ಲಾದಿಕಾವತಿ ।

ಮಂಡೂಕ್ಯಾ೩ ಸು ಸಂ ಗಮ ಇಮಂ ಸ್ವ೧ಗ್ನಿಂ ಹರ್ಷಯ ॥ ೧೪ ॥

॥ ಪದಪಾಠಃ ॥

ಶೀತಿಕೇ । ಶೀತಿಕಾऽವತಿ । ಹ್ಲಾದಿಕೇ । ಹ್ಲಾದಿಕಾऽವತಿ ।

ಮಂಡೂಕ್ಯಾ । ಸು । ಸಂ । ಗಮಃ । ಇಮಂ । ಸು । ಅಗ್ನಿಂ । ಹರ್ಷಯ ॥ ೧೪ ॥

॥ ಸಾಯಣಭಾಷ್ಯಂ ॥

ಅಸ್ಥಿಸಂಚಯನೇ ಕ್ಷೀರೋದಕೇನ ಶಮೀಶಾಖಯಾ ತ್ರಿಃ ಪ್ರಸವ್ಯಂ ಶ್ಮಶಾನಾಯತನಂ ಪ್ರೋಕ್ಷತಿ ಶೀತಿಕೇ ಶೀತಿಕಾವತೀತ್ಯನಯಾ । ಸೂತ್ರಿತಂ ಚ । ಕ್ಷೀರೋದಕೇನ ಶಮೀಶಾಖಯಾ ತ್ರಿಃ ಪ್ರಸವ್ಯಂ ಪರಿವ್ರಜನ್ಪ್ರೋಕ್ಷತಿ ಶೀತಿಕೇ ಶೀತಿಕಾವತೀತಿ । ಆ. ಗೃ. ೪-೫-೩ । ಇತಿ ॥

ಹೇ ಶೀತಿಕೇ ಶೈತ್ಯಯುಕ್ತೇ ಹೇ ಶೀತಿಕಾವತಿ । ಶೀತಿಕಾಃ ಶೈತ್ಯಯುಕ್ತಾ ಓಷಧಯಃ । ತಾಭಿಸ್ತದ್ವತಿ ಹೇ ಹ್ಲಾದಿಕ ಆಹ್ಲಾದಯಿತ್ರಿ ಹೇ ಹ್ಲಾದಿಕಾವತ್ಯಾಹ್ಲಾದಕಫಲಯುಕ್ತೈರ್ವೃಕ್ಷೈಸ್ತದ್ವತಿ ಹೇ ಪೃಥಿವಿ ಮಂಡೂಕ್ಯಾ ಮಂಡೂಕಸ್ತ್ರಿಯಾ ವೃಷ್ಟಿಪ್ರಿಯಯಾ ಸು ಸುಷ್ಠು ಸಂ ಗಮಃ। ಸಂಗಚ್ಛಸ್ವ ॥ ಗಮೇರ್ಲುಙಿ ವ್ಯತ್ಯಯೇನ ಪರಸ್ಮೈಪದಂ ॥ ತತ ಇಮಮಗ್ನಿಂ ಸು ಸುಷ್ಠು ಹರ್ಷಯ ॥

॥ ಪ್ರತಿಪದಾರ್ಥ ॥

**ಶೀತಿಕೇ**—ಶೈತ್ಯದಿಂದ ಯುಕ್ತಳೂ । **ಶೀತಿಕಾವತಿ**—ತಣ್ಣಗಿರುವ ಓಷಧಿಗಳಿಂದ ಯುಕ್ತಳೂ । **ಹ್ಲಾದಿಕೇ**—ಸಂತೋಷಕಾರಕಳೂ। **ಹ್ಲಾದಿಕಾವತಿ**—ಆಹ್ಲಾದಕರವಾದ ವೃಕ್ಷಾದಿಗಳಿಂದ ಕೂಡಿದವಳೂ ಆದ ಎಲೈ ಪೃಥ್ವಿಯೇ । **ಮಂಡೂಕ್ಯಾ**—ವೃಷ್ಟಿಯಿಂದ ಬೆಳೆಯುವ ಮಂಡೂಕಗಳಿಂದ । **ಸು**—ಅತಿಶಯವಾಗಿ। **ಸಂ ಗಮಃ**—ಸೇರಿಕೊ । **ಇಮಂ ಅಗ್ನಿಂ**—ಈ ಅಗ್ನಿಯನ್ನು । **ಸು**—ಅತಿಶಯವಾಗಿ । **ಹರ್ಷಯ**—ಸಂತೋಷಗೊಳಿಸು.

॥ ಭಾವಾರ್ಥ ॥

ಶೈತ್ಯಯುಕ್ತಳೂ, ತಣ್ಣಗಿರುವ ಓಷಧಿಗಳಿಂದ ಕೂಡಿದವಳೂ ಸಂತೋಷಕಾರಕಗಳೂ, ಆಹ್ಲಾದಕವಾದ ವೃಕ್ಷಾದಿಗಳಿಂದ ಕೂಡಿದವಳೂ ಆದ ಎಲೈ ಪೃಥ್ವಿಯೇ, ವೃಷ್ಟಿಯಿಂದ ಬೆಳೆಯುವ ಮಂಡೂಕಗಳೊಡನೆ (ಕಪ್ಪೆಗಳೊಡನೆ) ಅತಿಶಯವಾಗಿ ಕೂಡಿಕೊ. ಈ ಅಗ್ನಿಯನ್ನು ಅತಿಶಯವಾಗಿ ಸಂತೋಷಗೊಳಿಸು

## English Translation

(Oh earth), cool and filled with cool (herbs), gladsome and filled with gladsome (trees), be thronged with female frogs and give joy to this Agni.

॥ ವಿಶೇಷವಿಷಯಗಳು ॥

ಅಪರಕರ್ಮಾಂಗಭೂತವಾದ ಅಸ್ಥಿಸಂಚಯನಕರ್ಮದಲ್ಲಿ ಪ್ರೇತಶರೀರವನ್ನು ಸುಟ್ಟಿದ ಶ್ಮಶಾನ ಪ್ರದೇಶವನ್ನು ಶಮೀವೃಕ್ಷದ ಶಾಖೆಯಿಂದ ನೀರನ್ನು ಮತ್ತು ಹಾಲನ್ನದ್ದಿಕೊಂಡು ಮೂರಾವರ್ತಿ ಪ್ರದಕ್ಷಿಣಾಕಾರವಾಗಿ ಪ್ರೋಕ್ಷಿಸು

ವಾಗ ಶೀತಿಕೇ ಶೀತಿಕಾವತಿ ಎಂಬ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಕ್ಷೀರೋದ-ಕೇನ ಶಮೀಶಾಖಯಾ ತ್ರಿಃ ಪ್ರಸವ್ಯಂ ಪರಿವ್ರಜನ್ ಪ್ರೋಕ್ಷತಿ ಶೀತಿಕೇ ಶೀತಿಕಾವತೀತಿ** ಎಂಬ ಸೂತ್ರದಿಂದ (ಆ. ಗೃ. ೪-೫-೩) ವಿವೃತವಾಗಿರುವುದು.

# ಹದಿನೇಳನೆಯ ಸೂಕ್ತವು

## ಪೀಠಿಕೆ.

### ಸರಣ್ಯೂ ಮತ್ತು ವಿವಸ್ವಾನ್

**ಈ** ಸೂಕ್ತದ ಪ್ರಾರಂಭದಲ್ಲಿ ತ್ವಷ್ಟೃಪುತ್ರಿಯಾದ ಸರಣ್ಯೂವು ಯಾರು, ಅವಳು ವಿವಸ್ವಂತನನ್ನು ಮದುವೆಯಾದ ವಿಚಾರ, ಅವರಲ್ಲಿ ಯಮಯಮಿಯರು, ಮನು, ಮತ್ತು ಅಶ್ವಿನೀದೇವತೆಗಳು ಜನಿಸಿದ ವಿಚಾರ ಮೊದಲಾದ ವಿವರಗಳನ್ನು ಈ ಪೀಠಿಕೆಯಲ್ಲಿ ಸೂಕ್ಷ್ಮವಾಗಿ ವಿವರಿಸಲಾಗಿದೆ ಮತ್ತು ಮುಂದೆ ಆಯಾಋಕ್ಕುಗಳಲ್ಲಿ ಈ ವಿಷಯಕ್ಕೆ ಸಂಬಂಧಪಟ್ಟ ಯಾಸ್ಕರ ನಿರುಕ್ತವನ್ನು ಅಲ್ಲಿರುವಂತೆ ವಿವರಿಸಿರುವುದಲ್ಲದೆ ಪೀಠಿಕೆಯ ಕೊನೆಯ ಭಾಗದಲ್ಲಿ ಸರಣ್ಯೂದೇವಿಯ ವಿಷಯವು ಶೌನಕೋಕ್ತವಾದ ಬೃಹದ್ದೇವತಾಗ್ರಂಥದಲ್ಲಿ ಹೇಳಿರುವಂತೆಯೂ ವಿವರಿಸಲಾಗಿದೆ.

ಸರಣ್ಯೂವಿನ ವಿಷಯವನ್ನು ತಿಳಿಸತಕ್ಕ ಈ ಮಂತ್ರಗಳನ್ನು (೧೦-೧೭-೧-೨) ಬ್ರಹ್ಮೋದ್ಯವೆಂದು ಪ್ರಸಿದ್ಧವಾದ ಮಂತ್ರಗಳ ಜೊತೆಯಲ್ಲಿ ಸೇರಿಸಬಹುದು. ಈ ಬ್ರಹ್ಮೋದ್ಯವೆಂಬ ಗುಂಪಿಗೆ ಸೇರಿದ ಮಂತ್ರಗಳು ಸಂಹಿತಾ ಮತ್ತು ಬ್ರಾಹ್ಮಣಾದಿಗಳಲ್ಲಿ ಅನೇಕ ಕಡೆಗಳಲ್ಲಿವೆ. ಉದಾಹರಣೆಗೆ.—(ಋ ಸಂ. ೧-೧೬೪; ಅ. ವೇ. ೯-೯,೧೦; ವಾ.ಸಂ. ೨೩-೯ ರಿಂದ ೧೨; ತೈ. ಸಂ. ೭-೪-೧೮; ಐ.ಬ್ರಾ. ೫-೨೫; ಶ.ಬ್ರಾ. ೧೩. ೨. ೬. ೯ ರಿಂದ ೧೭; ಶ. ೨. ೧೧-೨೧ ಇತ್ಯಾದಿ). ರಚನೆಯಲ್ಲಿ ಒಂದಕ್ಕೊಂದಕ್ಕೆ ಸ್ವಲ್ಪ ವ್ಯತ್ಯಸ್ತವಾಗಿದೆ. ಪ್ರಕೃತದಲ್ಲಿ, **ತ್ವಷ್ಟಾ ದುಹಿತ್ರೇ** ಎಂಬ ಮಂತ್ರವು ಈ ಗುಂಪಿಗೆ ಸೇರಿದೆ ಎಂಬುದಕ್ಕೆ ಏನು ಆಧಾರವೆಂಬುದನ್ನು ಪರಿಶೀಲಿಸಬೇಕು. ಪ್ರಥಮತಃ ಮಂತ್ರದ ರಚನೆಯನ್ನೂ ಅದರ ತಾತ್ಪರ್ಯವನ್ನೂ ಪರಿಶೀಲಿಸಿದರೆ ಅನೇಕ ಅಂಶಗಳಲ್ಲಿ ಅವುಗಳನ್ನು ಗಮನಿಸಬಹುದು.

**ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ ।**
**ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ।**

(ಋ. ಸಂ. ೧೦-೧೭-೧)

ತ್ವಷ್ಟೃವು ತನ್ನ ದುಹಿತೃವಿಗೆ (ಮಗಳಿಗೆ) ವಿವಾಹವನ್ನು ನೆರವೇರಿಸುವ ನಿಮಿತ್ತವಾಗಿ ಸಕಲ ಭುವನವೂ (ಭೂತಜಾತಗಳೂ) ಒಂದಾಗಿ ಸೇರಿದವು. ಆದರೆ, ವಿವಸ್ವಂತನೊಂದಿಗೆ ಆಗತಾನೇ ಪತ್ನೀಸಂಬಂಧವನ್ನು ಬೆಳೆಸಿದ (ಸರಣ್ಯೂವು) ಯಮನ ಮಾತೆಯು ಅದೃಶ್ಯಳಾದಳು.

**ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ ।**
**ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ॥**

(ಋ. ಸಂ. ೧೦-೧೭-೨)

ಸರಣ್ಯೂವು ಮರೆಯಾದನಂತರ ದೇವತೆಗಳು ಮರ್ತ್ಯರಾದ ಮಾನವರಿಗೆ ತಿಳಿಯದಂತೆ ಅಮರ್ತ್ಯಳಾದ ಅವಳನ್ನು ಮರೆಮಾಡಿ, ಅವಳಂತೆಯೇ ಇನ್ನೊಂದು ಸ್ತ್ರೀರೂಪವನ್ನು ನಿರ್ಮಿಸಿ ವಿವಸ್ವಂತನಿಗೆ ಅರ್ಪಿಸಿದರು. ಅವಳು ಅಶ್ವಿನೀ ದೇವತೆಗಳಿಗೆ ಜನ್ಮವನ್ನಿತ್ತಳು. ಅನಂತರ ಸರಣ್ಯೂವೂ ಇಬ್ಬರು ಮಕ್ಕಳನ್ನು (ಯಮ-ಯಮೀ) ಹಡೆದಳು. ಎಂದಿರುತ್ತದೆ. ಈ ವಿವರಣೆಯಲ್ಲಿ ಬ್ರಹ್ಮೋದ್ಯಲಕ್ಷಣವನ್ನು ತೋರಿಸುವ ಅನೇಕ ಅಂಶಗಳಿರುತ್ತವೆ. ಆದರೆ, ಬ್ರಹ್ಮೋದ್ಯವಲ್ಲಿ ಸಾಧಾರಣವಾಗಿ ಪ್ರಶ್ನೆ ಮತ್ತು ಉತ್ತರ (ಯಾವುದಾದರೂ ಒಂದು ಸಮಸ್ಯೆ, ಅದಕ್ಕೆ ಉತ್ತರ) ಇವೆರಡೂ ಒಟ್ಟಿಗಿರಬೇಕಾದುದು ರೂಢಿಯಾಗಿದೆ. ಉದಾಹರಣೆಗೆ, **ಪೃಚ್ಛಾಮಿ ತ್ವಾ** (೧-೧೬೪-೩೪) ಎಂಬ ಪ್ರಶ್ನೆಗೆ, **ಇಯಂ ವೇದಿಃ ಪರೋ ಅಂತಃ ಪೃಥಿವ್ಯಾ** (೧-೧೬೪-೩೫) ಎಂಬ ಉತ್ತರವು ಸಹಜವಾಗಿರುತ್ತದೆ. ಆದರೆ, ಪ್ರಕೃತ ಮಂತ್ರದಲ್ಲಿ ಪ್ರಶ್ನೆಯೇ ಇಲ್ಲವಲ್ಲ ಎಂದರೆ, ಇಲ್ಲಿ ಪ್ರಶ್ನೆಯೂ ಸಹ ಅಸಂದಿಗ್ಧವಾದ ಉತ್ತರದೊಡನೆಯೇ ಒಳಗೊಂಡಿರುತ್ತದೆ ಎಂದು ಹೇಳಬಹುದು. ಈ ಸಂದರ್ಭವು ಒಂದು ಸಮಸ್ಯೆಯ ನಿರೂಪಣ ಎಂಬುದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ಈ ಸಮಸ್ಯೆಯಲ್ಲಿ ಮುಖ್ಯ ವಿಷಯವಾದ ಸರಣ್ಯೂವಿನ ಚಿತ್ರವು ಹೇಗಿರುತ್ತದೆ ಎಂಬುದಕ್ಕೆ ಇಲ್ಲಿ ಅವಳನ್ನು ವರ್ಣಿಸುವ ಏಳು ವಿಶೇಷಣಗಳನ್ನು ಗಮನಿಸಬೇಕಾಗಿರುತ್ತದೆ ಅವು ಯಾವುವೆಂದರೆ.—

೧) **ತ್ವಷ್ಟುಃ ದುಹಿತಾ**—ತ್ವಷ್ಟೃವಿನ ಪುತ್ರಿಯು.

೨) **ಯಮಸ್ಯ ಮಾತಾ**—ಯಮನಿಗೆ (ಮತ್ತು ಯಮಿಗೆ) ಮಾತೆಯು.

೩) **ವಿವಸ್ವತಃ ಪತ್ನೀ**—ವಿವಸ್ವಂತನ ಪತ್ನಿಯು.

೪) **ಅಮೃತಾ**—ಮರಣರಹಿತಳು (ನಾಶವಿಲ್ಲದವಳು).

೫) **ತಸ್ಯಾಃ ಸವರ್ಣಾ**—ಅವಳಿಗೆ ಪ್ರತಿನಿಧಿಯಾದ ಅವಳದೇ ರೂಪವನ್ನು ಹೊಂದಿದವಳು.

೬) **ಅಶ್ವಿನ್ಯೋಃ ಮಾತಾ (?)**—ಅಶ್ವಿನೀದೇವತೆಗಳ ಮಾತೆಯು (?).

೭) **ಅಜಹಾದು ದ್ವಾ ಮಿಥುನಾ**—ಅವಳಿ ಮಕ್ಕಳನ್ನು ತ್ಯಜಿಸಿದವಳು.

ಈ ಸಂದರ್ಭದಲ್ಲಿ ತ್ವಷ್ಟೃವಿನ ದುಹಿತೆ ಯಾರು ? ಯಮನ ಮಾತೆ ಯಾರು ? ಇತ್ಯಾದಿಯಾಗಿ ನಾವು ಪ್ರಶ್ನಿಸಿದರೆ ಎಲ್ಲ ಪ್ರಶ್ನೆಗಳಿಗೂ ಸಹ **ಸರಣ್ಯೂ** ಎಂಬ ಒಂದೇ ಒಂದು ಉತ್ತರವು ಮಾತ್ರ ಬರುತ್ತದೆ. ಈ ಸರಣ್ಯೂವು ಯಾರೆಂದರೆ ಮಾತ್ರ, ಅದು ರಹಸ್ಯ ತತ್ತ್ವವಾಗಿರುತ್ತದೆ. ಆದರೂ ಈ ಗೂಢಾರ್ಥದಲ್ಲಿ ಅತ್ಯತಿಶಯವಾದ ತಾತ್ಪರ್ಯವಿದ್ದೇ ಇರುತ್ತದೆ. ಆದುದರಿಂದಲೇ ಈ ಸನ್ನಿವೇಶವನ್ನು ಪುರಾಣೇತಿಹಾಸಗಳಲ್ಲಿ ಬಹುವಾಗಿ ಪ್ರಸ್ತಾಪಿಸಿ ವರ್ಣಿಸಿರುತ್ತದೆ. ಯಾಸ್ಕರೂ, ಶೌನಕರೂ (ಬೃಹದ್ದೇವತಾ) ಇದರ ಮಹತ್ವವನ್ನು ತೋರಿಸಿ ಈ ಸನ್ನಿವೇಶವನ್ನು ವಿವರಿಸಿದ್ದಾರೆ. ಮೇಲೆ ಉದಾಹರಿಸಿರುವ ಋಕ್ಸಂಹಿತೆಯ ಮಂತ್ರವನ್ನು (೧೦-೧೭-೨) ವಿವರಿಸುತ್ತಾ ಯಾಸ್ಕರು ಈ ರೀತಿ ತಿಳಿಸಿದ್ದಾರೆ—

> **ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ । ಕೃತ್ವೀ ಸವರ್ಣಾಮದದುರ್ವಿವಸ್ವತೇಽಪ್ಯಶ್ವಿನಾವಭರದ್ಯತ್ತದಾಸೀದಜಹಾದ್ವ್ಯ ಮಿಥುನಾ ಸರಣ್ಯೂರ್ಮಧ್ಯಮಂ ಚ ಮಾಧ್ಯಮಿಕಾಂ ಚ ವಾಚಮಿತಿ ನೈರುಕ್ತಾಃ । ಯಮಂ ಚ ಯಮೀಂ ಚೇತ್ಯೈತಿಹಾಸಿಕಾಃ । ತತ್ರೇತಿಹಾಸಮಾಚಕ್ಷತೇ—**

> **ತ್ವಾಷ್ಟ್ರೀ ಸರಣ್ಯೂರ್ವಿವಸ್ವತ ಆದಿತ್ಯಾದ್ಯಮೌ ಮಿಥುನೌ ಜನಯಾಂಚಕಾರ । ಸಾ ಸವರ್ಣಾಮನ್ಯಾಂ ಪ್ರತಿನಿಧಾಯಾಶ್ವಂ ರೂಪಂ ಕೃತ್ವಾ ಪ್ರದುದ್ರಾವ । ಸ ವಿವಸ್ವಾನಾದಿತ್ಯ ಆಶ್ವ-**

**ಮೇವ ರೂಪಂ ಕೃತ್ವಾ ತಾಮನುಸೃತ್ಯ ಸಂಬಭೂವ । ತತೋಽಶ್ವಿನೌ ಜಜ್ಞಾತೇ । ಸವರ್ಣಾಯಾಂ ಮನುಃ । ತದಭಿವಾದಿನ್ಯೇಷರ್ಗ್ಭವತಿ ।**

(ನಿ. ೧೨-೧೦)

ಅಮರ್ತ್ಯಳಾದ ಆ ಸ್ತ್ರೀಯನ್ನು ದೇವತೆಗಳು ಮಾನವರಿಗೆ ಕಾಣದಂತೆ ಮರೆಸಿದರು. ಅವಳಂತೆಯೇ ಇನ್ನೊಂದು ಸ್ತ್ರೀಯನ್ನು ನಿರ್ಮಿಸಿ ವಿವಸ್ವಂತನಿಗೆ ಅರ್ಪಿಸಿದರು. ಸರಣ್ಯುವು ಅಶ್ವಿನೀದೇವತೆಗಳನ್ನು ಹಡೆದು ಆ ಅವಳಿಗಳನ್ನು ಅಲ್ಲಿಯೇ ತ್ಯಜಿಸಿ ಹೊರಟುಹೋದಳು ಎಂದಿರುವಾಗ, **ಯಮ** ಶಬ್ದಕ್ಕೆ ಏನರ್ಥವೆಂಬುದನ್ನು ಸಹ ಚರ್ಚಿಸಿದ್ದಾರೆ. (೧) ಮಧ್ಯಲೋಕದ ಇಂದ್ರ ಮತ್ತು (೨) ಮಾಧ್ಯಮಿಕಾ ವಾಕ್ ಎಂದು ನಿರುಕ್ತಕಾರರೂ, **ಯಮ** ಮತ್ತು **ಯಮೀ** ಎಂದು ಐತಿಹಾಸಿಕಕಾರರೂ ತಿಳಿಸುತ್ತಾರೆಂದು ಎರಡು ಅಭಿಪ್ರಾಯಗಳನ್ನು ಹೇಳಿದೆ. ಈ ವಿಷಯದಲ್ಲಿ ಒಂದು ಇತಿಹಾಸವಿದೆಯೆಂದು ಹೇಳಿ ಅದನ್ನೂ ವಿವರಿಸಿದೆ. ಅದೇನೆಂದರೆ,

ತ್ವಷ್ಟೃಪುತ್ರಿಯೂ, ಆದಿತ್ಯರೂಪನಾದ ವಿವಸ್ವಂತನಿಗೆ ಪತ್ನಿಯೂ ಆದ ಸರಣ್ಯುವು **ಯಮ** ಮತ್ತು **ಯಮೀ** ಎಂಬ ಎರಡು ಅವಳಿಮಕ್ಕಳನ್ನು ಹಡೆದಳು. ಅನಂತರ ಅವಳು ತನಗೆ ಪ್ರತಿನಿಧಿಯಾಗಿ ಇನ್ನೊಬ್ಬಳನು ಆ ಜಾಗದಲ್ಲಿರಿಸಿ ತಾನು ಅಶ್ವರೂಪವನ್ನು ಧರಿಸಿ ಅಲ್ಲಿಂದ ಓಡಿಹೋದಳು. ಆದಿತ್ಯರೂಪನಾದ ವಿವಸ್ವಂತನೂ ಸಹ ಪುರುಷಾಶ್ವರೂಪವನ್ನು ಹೊಂದಿ ಅವಳನ್ನು ಹಿಂಬಾಲಿಸಿ ಅವಳೊಂದಿಗೆ ಸೇರಿಕೊಂಡನು, ಅದರ ಫಲವಾಗಿ ಅಶ್ವಿನೀ ದೇವತೆಗಳು ಉತ್ಪನ್ನರಾದರು. ಸರಣ್ಯುವಿಗೆ ಪ್ರತಿನಿಧಿಯಾಗಿರಿಸಿದ್ದ ಸ್ತ್ರೀಯಲ್ಲಿ ಮನುವು ಉತ್ಪನ್ನನಾದನು. ಅದನ್ನೇ, **ತ್ವಷ್ಟಾ ದುಹಿತ್ರೇ** ಎಂಬ ಮಂತ್ರದಲ್ಲಿ ತಿಳಿಸಿದೆಯೆಂದು ನಿರುಕ್ತಕಾರರು ವಿವರಿಸಿದ್ದಾರೆ. ಇದೇ ವಿಷಯವನ್ನು ಬೃಹದ್ದೇವತಾಕಾರರು ಈ ರೀತಿ ತಿಳಿಸಿದ್ದಾರೆ.

**ಅಭವನ್ಮಿಥುನಂ ತ್ವಷ್ಟುಃ ಸರಣ್ಯುಸ್ತ್ರಿಶಿರಾಃ ಸಹ ।**
**ಸ ವೈ ಸರಣ್ಯುಂ ಪ್ರಾಯಚ್ಛತ್ ಸ್ವಯಮೇವ ವಿವಸ್ವತೇ ॥**

(ಬೃ. ದೇ. ೬. ೧೬೨)

ತ್ವಷ್ಟೃವಿಗೆ ಸರಣ್ಯು ಎಂಬ ಕನ್ಯೆಯೂ ತ್ರಿಶಿರಸ್ಸೆಂಬ ಪುತ್ರನೂ ಇದ್ದರು. ಅವನು ತನ್ನ ದುಹಿತೆಯಾದ ಸರಣ್ಯುವನ್ನು ವಿವಸ್ವಂತನಿಗೆ ವಿವಾಹ ಮಾಡಿಕೊಟ್ಟನು.

**ತತಃ ಸರಣ್ಯ್ವಾಂ ಜಜ್ಞಾತೇ ಯಮಯಮ್ಯೌ ವಿವಸ್ವತಃ ।**
**ತೌ ಚಾಪ್ಯುಭೌ ಯಮಾವೇವ ಜ್ಯಾಯಾಂಸ್ತಾಭ್ಯಾಂ ತು ವೈ ಯಮಃ ॥**

(ಬೃ. ದೇ, ೬. ೧೬೩)

ಅನಂತರ ವಿವಸ್ವಂತನಿಗೆ ಪತ್ನಿಯಾದ ಸರಣ್ಯುವಿನಲ್ಲಿ ಯಮ ಮತ್ತು ಯಮೀ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಇವರಿಬ್ಬರೂ ಒಂದಿಗೆ ಹುಟ್ಟಿದ ಅವಳಿ ಮಕ್ಕಳು ಅವರಿಬ್ಬರಲ್ಲಿ ಯಮನೇ ಮೊದಲನೆಯವನು.

**ಸೃಷ್ಟ್ವಾ ಭರ್ತುಃ ಪರೋಕ್ಷಂ ತು ಸರಣ್ಯುಃ ಸದೃಶೀಂ ಸ್ತ್ರಿಯಂ ।**
**ನಿಕ್ಷಿಪ್ಯ ಮಿಥುನಂ ತಸ್ಯಾಂ ಅಶ್ವಾ ಭೂತ್ವಾಪಚಕ್ರಮೇ ॥**

(ಬೃ. ದೇ. ೭-೧)

ತನ್ನ ಪತಿಯಾದ ವಿವಸ್ವಂತನು ಇಲ್ಲದಿರುವ ವೇಳೆಯಲ್ಲಿ ಸರಣ್ಯೂವು ತನ್ನನ್ನೇ ಹೋಲುವ ಮತ್ತೊಬ್ಬ ಸ್ತ್ರೀಯನ್ನು ನಿರ್ಮಿಸಿ ತನ್ನ ಅವಳಿ ಮಕ್ಕಳನ್ನು ಅವಳ ವಶಕ್ಕೆ ಒಪ್ಪಿಸಿ ತಾನು ಅಶ್ವರೂಪವನ್ನು ಹೊಂದಿ ಆ ಸ್ಥಾನವನ್ನು ಬಿಟ್ಟು ವಿವಸ್ವಂತನಿಗೆ ತಿಳಿಯದಂತೆ ಬೇರೆ ಜಾಗಕ್ಕೆ ಹೋಗಿ ಅದೃಶ್ಯಳಾದಳು.

ಅವಿಜ್ಞಾನಾದ್ವಿವಸ್ವಾಂಸ್ತು ತಸ್ಯಾಮಜನಯನ್ಮನುಂ ।
ರಾಜರ್ಷಿರಭವತ್ಸೋಽಪಿ ವಿವಸ್ವಾನಿವ ತೇಜಸಾ ॥

(ಬೃ. ದೇ. ೭.೨).

ಆದರೆ ವಿವಸ್ವಂತನಿಗೆ ಇದರ ಅರಿವು ಇಲ್ಲದೇ, ಸರಣ್ಯೂವಿಗೆ ಪ್ರತಿನಿಧಿಯಾಗಿದ್ದ ಆ ಸ್ತ್ರೀವ್ಯಕ್ತಿಯೊಂದಿಗೆ ಸೇರಿದನು. ಅದರ ಫಲವಾಗಿ ಮನುವಿನ ಉತ್ಪತ್ತಿಯಾಯಿತು. ಮನುವೂ ಸಹ ತಂದೆಯಂತೆಯೇ ತೇಜಸ್ವಿಯಾಗಿ ದೊಡ್ಡ ರಾಜರ್ಷಿಯಾದನು. ಇವನ ಕೀರ್ತಿಯು ಸಕಲ ಲೋಕಗಳಲ್ಲಿಯೂ ಹರಡಿತು.

ಸ ವಿಜ್ಞಾಯ ತ್ವಪಕ್ರಾಂತಾಂ ಸರಣ್ಯೂಮಶ್ವರೂಪಿಣೀಂ ।
ತ್ವಾಷ್ಟ್ರೀಂ ಪ್ರತಿ ಜಗಾಮಾಶು ವಾಜೀ ಭೂತ್ವಾ ಸಲಕ್ಷಣಃ ॥

(ಬೃ. ದೇ. ೭.೩)

ಕೊನೆಯಲ್ಲಿ, ವಿವಸ್ವಂತನಿಗೆ ನಿಜವಾದ ಅರಿವುಂಟಾಯಿತು. ಸರಣ್ಯೂವು ಅಶ್ವರೂಪದಲ್ಲಿ ಹೊರಟು ಹೋಗಿದ್ದಾಳೆಂದು ತಿಳಿದನಂತರ ತಾನೂ ಸಹ ಪುರುಷಾಶ್ವರೂಪವನ್ನು ಹೊಂದಿ ತ್ವಷ್ಟೃವಿನ ಪುತ್ರಿಯು ಹೋದ ಸ್ಥಳಕ್ಕೆ ಅವಳನ್ನ ಹಿಂಬಾಲಿಸಿ ಹೊರಟು ಅವಳನ್ನು ಸೇರಲು ಪ್ರಯತ್ನಿಸಿದನು.

ಸರಣ್ಯೂಶ್ಚ ವಿವಸ್ವಂತಂ ವಿದಿತ್ವಾ ಹಯರೂಪಿಣಂ ।
ಮೈಥುನಾಯೋಪಚಕ್ರಾಮ ತಾಂ ಚ ತತ್ರಾರುರೋಹ ಸಃ ॥

(ಬೃ. ದೇ. ೭.೪)

ತನ್ನನ್ನು ಹಿಂಬಾಲಿಸಿ ವಿವಸ್ವಂತನೂ ಅಶ್ವರೂಪನಾಗಿ ಬಂದುದನ್ನು ತಿಳಿದ ಸರಣ್ಯೂವು ಅವನೊಂದಿಗೆ ಸಂಭೋಗ ಸುಖವನ್ನಿಚ್ಛಿಸಿದಳು. ಆಗ ವಿವಸ್ವಂತನು ಅವಳ ಇಚ್ಛೆಯನ್ನು ನೆರವೇರಿಸಿದನು.

ತತಸ್ತಯೋಸ್ತು ವೇಗೇನ ಶುಕ್ರಂ ತದಪತದ್ಭುವಿ ।
ಉಪಾಜಿಘ್ರಚ್ಚ ಸಾ ತ್ವಶ್ವಾ ತಚ್ಛುಕ್ರಂ ಗರ್ಭಕಾಮ್ಯಯಾ ॥

(ಬೃ ದೇ ೭.೫)

ಅವರ ಪರಸ್ಪರವಾದ ಉತ್ಸಾಹಕಾಲದಲ್ಲಿ ವಿವಸ್ವಂತನ ಶುಕ್ರವು ಕೆಳಕ್ಕೆ ಬಿದ್ದಿತು. ಆಗ ಸರಣ್ಯೂವು ಗರ್ಭವನ್ನು ಹೊಂದಬೇಕೆಂಬಿಚ್ಛೆಯಿಂದ ಅದನ್ನು ಆಘ್ರಾಣಿಸಿದಳು.

ಆಘ್ರಾತಮಾತ್ರಾಚ್ಛುಕ್ರಾತ್ತು ಕುಮಾರೌ ಸಂಬಭೂವತುಃ ।
ನಾಸತ್ಯಶ್ಚೈವ ದಸ್ರಶ್ಚ ಯೌ ಸ್ತುತಾವಶ್ವಿನಾವಿತಿ ॥

(ಬೃ. ದೇ. ೭-೬)

ಆ ಶುಕ್ರವನ್ನು ಆಘ್ರಾಣಿಸಿದೊಡನೆಯೇ ಅವಳಿಗೆ ಗರ್ಭೋತ್ಪತ್ತಿಯುಂಟಾಗಿ ಅದರಿಂದ ನಾಸತ್ಯ ಮತ್ತು ದಸ್ರ ಎಂಬ ಇಬ್ಬರು ಯುವಕರು ಉತ್ಪನ್ನರಾದರು. ಅನಂತರ ಅವರು **ಅಶ್ವಿನೀದೇವತೆಗಳು** ಎಂಬ ಹೆಸರಿನಿಂದ ಕರೆಯಲ್ಪಟ್ಟು ಇವರ ಮಹಿಮೆಯು ಲೋಕಗಳಲ್ಲೆಲ್ಲಾ ಹರಡಿತು.

**ಇತಿಹಾಸಮಿಮಂ ಯಾಸ್ಕಃ ಸರಣ್ಯೂದೇವತೌ ದ್ವೃಚೌ ।**
**ವಿವಸ್ವತಶ್ಚ ತ್ವಷ್ಟುಶ್ಚ ತ್ವಷ್ಟೇತಿ ಸ ಮನ್ಯತೇ**    (ಬೃ. ದೇ. ೭-೭)

**ಸರಣ್ಯೂ**ದೇವತೆಯನ್ನುದ್ದೇಶಿಸಿ ನಿರ್ಮಿತವಾದ (೧೦-೧೭-೧) ಮತ್ತು (೧೦-೧೭-೨) ಈ ಎರಡು ಮಂತ್ರಗಳನ್ನು ಸಹ ಯಾಸ್ಕರು ವಿವಸ್ವಾನ್ ಮತ್ತು ತ್ವಷ್ಟಾ ಇವರಿಬ್ಬರ ಇತಿಹಾಸವನ್ನು ವಿವರಿಸುವ ಸನ್ನಿವೇಶವೆಂದಭಿಪ್ರಾಯ ಪಟ್ಟಿದ್ದಾರೆ. ಯಾಸ್ಕರ ವಿವರಣೆಯನ್ನು ನೋಡಿ ತಿಳಿಸಿದೆ. (ನಿ. ೧೨-೧೦, ೧೧).

ಪ್ರಕೃತದಲ್ಲಿ, ಈ ಸನ್ನಿವೇಶವನ್ನು ವಿವರಿಸುವ ಋಕ್ಸಂಹಿತಾಮಂತ್ರದಲ್ಲಿ ಬ್ರಹ್ಮೋದ್ಯದ ಲಕ್ಷಣವೇನಿದೆ ಎಂಬುದನ್ನು ಪರಿಶೀಲಿಸಬೇಕು. ಮಾನವನಾದ ವಿವಸ್ವಂತನಿಗೆ ದಿವ್ಯಸ್ತ್ರೀಯಾದ ಸರಣ್ಯುವನ್ನು ವಿವಾಹಾರ್ಥವಾಗಿ ಕೊಟ್ಟಿದುದರಿಂದ ಉಂಟಾಗತಕ್ಕ ವೈಷಮ್ಯವೊಂದು ಕಡೆ ಮತ್ತು ಈ ವೈಷಮ್ಯವನ್ನು ಸರಿಪಡಿಸಲು ನಡೆಯುವ ಪ್ರಯತ್ನವಿನ್ನೊಂದು ಕಡೆ, ಹೀಗೆ ಈ ಪ್ರಕರಣದಲ್ಲಿ ತೋರಿಬರುವ ಸಮಸ್ಯೆ ಮತ್ತು ಇದರ ಪರಿಹಾರಪ್ರಯತ್ನವೇ ಮುಖ್ಯವಾದ ಅಂಶವಾಗಿರುತ್ತದೆ. ವಿವಸ್ವಂತನು ಆದಿತ್ಯರಲ್ಲೊಬ್ಬನಾಗಿರುವ ವಿಷಯವು ವೈದಿಕವಾಕ್ಯಗಳಲ್ಲಿ ಪ್ರಖ್ಯಾತವಾಗಿರುತ್ತದೆ. ಆದರೆ, ಅಮರ್ತ್ಯನಾದ ದೇವತೆಯನ್ನು ಮರ್ತ್ಯನಾದ ಮಾನವನೆನ್ನುವುದು ಹೇಗೆ ಎಂಬ ಸಂಶಯವು ಬರುವುದು ಸಹಜವಾಗಿರುತ್ತದೆ. ಇವನು ಮರ್ತ್ಯನಾದ ಮಾನವನೆಂಬ ನಿರ್ದೇಶವು ವೈದಿಕವಾಕ್ಯಗಳಲ್ಲಿಯೇ ಸ್ಪಷ್ಟವಾಗಿರುತ್ತದೆ.

ಸರಣ್ಯುವಿನ ವಿವಾಹಕಾಲದಲ್ಲಿ ದೇವತೆಗಳು ಮಾತ್ರವಲ್ಲದೇ, ಸಕಲ ಭುವನಗಳ ಪ್ರಜೆಗಳೂ ಬಂದು ಸೇರಿದರು ಎಂಬ ವಿಷಯವನ್ನು **ಇದಂ ವಿಶ್ವಂ ಭುವನಂ ಸಮೇತಿ** (ಋ. ಸಂ. ೧೦-೧೭-೧) ಎಂಬ ವಾಕ್ಯವು ತಿಳಿಸುತ್ತದೆ. **ಪ್ರಾಯಚ್ಛತ್ ಸ್ವಯಮೇವ ವಿವಸ್ವತೇ** (ಬೃ. ದೇ.) ತ್ವಷ್ಟೃವು ತಾನಾಗಿಯೇ ಸರಣ್ಯುವನ್ನು ವಿವಸ್ವಂತನಾಮಕನಾದ ಮಾನವನಿಗೆ ಕೊಟ್ಟನು ಎಂದಿರುತ್ತದೆ. ಸ್ವಯಂವರರೂಪವಾದ ಈ ವಿವಾಹದಲ್ಲಿ ದೇವತೆಗಳೆಲ್ಲರೂ ಬಂದು ನೆರೆದಿದ್ದರೂ ಸಹ ತ್ವಷ್ಟೃವು ಸ್ವಯಂಪ್ರೇರಿತನಾಗಿ ವಿವಸ್ವಂತನಿಗೆ (ಮಾನವನಿಗೆ) ಕೊಟ್ಟನು ಎಂದಿರುವುದು ಸಮಸ್ಯಾತ್ಮಕವಾಗಿಯೇ ಇರುತ್ತದೆ. ಸರಣ್ಯುವೂ ಸಹ ಈ ಸಂಬಂಧದಿಂದ ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದಳು ಎಂಬ ಅಂಶವೂ ಸ್ಪಷ್ಟವಾಗಿ ಪ್ರತಿಪಾದಿತವಾಗಿರುತ್ತದೆ.

ವಿವಸ್ವಂತನು ಮರ್ತ್ಯನೆಂಬುವುದೇ ಈ ಸಮಸ್ಯೆಗೆ ಮೂಲವಿಷಯವಾಗಿರುತ್ತದೆ. ಬೃಹದ್ದೇವತೆಯಲ್ಲಿಯೂ ಮಹಾಭಾರತದಲ್ಲಿಯೂ ಸಹ ಈ ಅಂಶವು ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ.

**ತತೋ ವಿವಸ್ವಾನಾದಿತ್ಯೋಽಜಾಯತ, ತಸ್ಯ ವಾ ಇಯಂ ಪ್ರಜಾ ಯನ್ಮನುಷ್ಯಾಃ ।**
(ತೈ. ಸಂ. ೬-೫-೬-೨)

ಅನಂತರ ಆದಿತ್ಯರಲ್ಲಿ ಒಬ್ಬನಾದ ವಿವಸ್ವಂತನು ಉತ್ಪನ್ನನಾದನು. ಮಾನವರೂಪಿಗಳಾದ ಸಕಲ ಪ್ರಜೆಗಳೂ ಸಹ ಈ ವಿವಸ್ವಂತನಿಂದ ಉತ್ಪನ್ನರಾದವರು ಎಂದು ತೈತ್ತಿರೀಯ ಸಂಹಿತೆಯು ಇದನ್ನು ಸಮರ್ಥಿಸುತ್ತದೆ. ಇಷ್ಟೇ ಅಲ್ಲದೆ, ಇನ್ನೂ ಅನೇಕ ವೈದಿಕವಾಕ್ಯಗಳು ಇವನ ಮರ್ತ್ಯತ್ವವನ್ನು ಸ್ಪಷ್ಟಪಡಿಸುತ್ತವೆ. ಉದಾಹರಣೆಗೆ,—

**ಸಪ್ತಭಿಃ ಪುತ್ರೈರದಿತಿರುಪಪ್ರೈತ್ಪೂರ್ವ್ಯಂ ಯುಗಂ ।**
**ಪ್ರಜಾಯೈ ಮೃತ್ಯವೇ ತ್ವತ್ಪುನರ್ಮಾರ್ತಾಂಡಮಾಭರತ್ ॥**
(ಋ. ಸಂ. ೧೦-೭೨-೯)

ಅದಿತಿಗೆ ಅಷ್ಟಪುತ್ರರು. ಅವರಲ್ಲಿ ಏಳು ಜನರೊಂದಿಗೆ ಹೋಗಿ ದೇವತೆಗಳನ್ನು ಸೇರಿ ತನ್ನ ಹಿಂದಿನ ಸಂತತಿಯೊಡನೆ ಬೆರೆತಳು. ಆದರೆ, ಎಂಟನೆಯವನಾದ **ಮಾರ್ತಾಂಡನನ್ನು** ಮಾತ್ರ ಜನನಮರಣಾದಿರೂಪವಾದ ಸಂಸಾರಪ್ರವಾಹ ನಿಮಿತ್ತವಾಗಿ ಇಲ್ಲಿಯೇ ಇರಿಸಿದಳು ಎಂದಿದೆ. ಈ ಮಾರ್ತಾಂಡನಾರು ಎಂದರೆ;—

> **ಅಷ್ಟೌ ಹ ವೈ ಪುತ್ರಾ ಅದಿತೇಃ । ಯಾಂಸ್ತ್ವೇತದ್ದೇವಾ ಆದಿತ್ಯಾ ಇತ್ಯಾಚಕ್ಷತೇ ಸಪ್ತ ಹೈವ ತೇಽವಿಕೃತಗ್ಂ ಹಾಷ್ಟಮಂ ಜನಯಾಂಚಕಾರ ಮಾರ್ತಾಂಡಗ್ಂ ಸಂದೇಘೋ ಹೈವಾಸ ಯಾವಾನೇವೋರ್ಧ್ವಸ್ತಾವಾಂಸ್ತಿರ್ಯಙ್ ಪುರುಷಸಂಮಿತ ಇತ್ಯು ಹೈತ ಆಹುಃ ॥**
>
> (ಶ. ಬ್ರಾ. ೩-೧-೩-೩)

ಅದಿತಿಗೆ ಎಂಟು ಜನ ಮಕ್ಕಳು. ಆದರೆ ದೇವತಾಸಂಜ್ಞೆಯಿಂದ ಕರೆಯಲ್ಪಡತಕ್ಕ ಅದಿತಿಪುತ್ರರು ಏಳು ಜನ ಮಾತ್ರ. ಎಂಟನೆಯ ಮಾರ್ತಾಂಡನಿಗೆ ಪೂರ್ಣವಾದ ರೂಪವನ್ನು ಕೊಡಲಿಲ್ಲ. ಕೇವಲ ಅದರ ಎತ್ತರಕ್ಕೆ ಸಮಾನವಾದ ಸ್ಥೂಲತೆಯನ್ನು ಹೊಂದಿದ್ದ ಒಂದು ದೇಹದ ಮುದ್ದೆಯಾಗಿದ್ದಿತು. ಅದು ಮಾನವನ ಪರಿಣಾಮಕ್ಕೆ ಸರಿಯಾಗಿದ್ದಿತೆಂದೂ ತಿಳಿದವರು ಹೇಳುತ್ತಾರೆ.

> **ತ ಉ ಹೈತ ಊಚುಃ । ದೇವಾ ಆದಿತ್ಯಾ ಯದಸ್ಮಾನನ್ವಜನಿಮಾ ತದಮುಯೇವ ಭೂದ್ಧಂತೇಮಂ ವಿಕರವಾಮೇತಿ ತಂ ವಿಚಕ್ರುರ್ಯಥಾಯಂ ಪುರುಷೋ ವಿಕೃತಸ್ತಸ್ಯ ಯಾನಿ ಮಾಗ್ಂಸಾನಿ ಸಂಕೃತ್ಯ ಸಂನ್ಯಾಸುಸ್ತತೋ ಹಸ್ತೀ ಸಮಭವತ್ತಸ್ಮಾದುಹುರ್ನ ಹಸ್ತಿನಂ ಪ್ರತಿಗೃಹ್ಣೀಯಾತ್ಪುರುಷಾಜಾನೋ ಹಿ ಹಸ್ತೀತಿ ಯಮು ಹ ತದ್ವಿಚಕ್ರುಃ ಸ ವಿವಸ್ವಾನಾದಿತ್ಯಸ್ತಸ್ಯೇಮಾಃ ಪ್ರಜಾಃ**
>
> (ಶ. ಬ್ರಾ. ೩-೧-೩-೪)

ಆಗ ದೇವತಾರೂಪವಾದ ಏಳು ಜನ ಅದಿತಿಪುತ್ರರೂ ಸೇರಿ " ಈ ಪಿಂಡವು ವ್ಯರ್ಥವಾಗಬಾರದು. ಇದಕ್ಕೆ ಒಂದು ರೂಪವನ್ನು ಕೊಡಬೇಕು '' ಎಂದು ಸಂಕಲ್ಪಿಸಿ ಪುರುಷರೂಪದಲ್ಲಿ ಅದಕ್ಕೆ ಒಂದು ಅಸ್ತಿತ್ವವನ್ನು ನಿರ್ಮಿಸಿದರು. ಆ ಪಿಂಡದಿಂದ ಪುರುಷನನ್ನು ನಿರ್ಮಿಸುವಾಗ ಅವಯವನಿರ್ಮಾಣಕಾಲದಲ್ಲಿ ಕತ್ತರಿಸಿ ಹಾಕಿದ ಮಾಂಸದ ಚೂರುಗಳೇ ಆನೆರೂಪದಿಂದ ಕಾಣಿಸಿಕೊಂಡವು. ಆದುದರಿಂದಲೇ ಆನೆಯನ್ನು ದಾನವಾಗಿ ತೆಗೆದುಕೊಳ್ಳಬಾರದೆಂದು ಹೇಳುತ್ತಾರೆ. ಪುರುಷರೂಪದಿಂದ ಸಂಸ್ಕೃತನಾದವನೇ ವಿವಸ್ವಂತನು. ಯಾರಿಂದ ಈ ಪ್ರಜಾಸಂತತಿಯುಂಟಾಯಿತೋ ಆ ಆದಿತ್ಯನೇ ಈ ವಿವಸ್ವಂತನು, ಎಂದಿರುತ್ತದೆ. ಅಲ್ಲದೇ, ವಿವಸ್ವಂತನ ಮರ್ತ್ಯತ್ವವನ್ನೂ ಮಾನವತ್ವವನ್ನೂ ತೋರಿಸುವ ಆಧಾರಗಳು ಇನ್ನೂ ಅನೇಕವಾಗಿವೆ

> **ಯಾಮಥರ್ವಾ ಮನುಷ್ಪಿತಾ ದಧ್ಯಙ್ ಧಿಯಮತ್ನತ ।**
> **ತಸ್ಮಿನ್ ಬ್ರಹ್ಮಾಣಿ ಪೂರ್ವಥೇಂದ್ರ ಉಕ್ಥಾ ಸಮಗ್ಮತಾರ್ಚನ್ನನು ಸ್ವರಾಜ್ಯಂ ॥**
>
> (ಋ ಸಂ. ೧-೮೦-೧೬)

ಇತ್ಯಾದಿ ಸ್ಥಳಗಳಲ್ಲಿ (ತೈ. ಸಂ. ೩-೧-೯-೪; ಶ. ಬ್ರಾ. ೧-೮-೧-೧ ಇತ್ಯಾದಿ) ಯಾವ ಮನುವನ್ನು ಮಾನವರಿಗೆ ಪಿತೃವೆಂದು ನಿರ್ದೇಶಿಸಿದೆಯೋ ಅದೇ ಮಾನವ ಪಿತೃವಾದ ಮನುವಿಗೆ ವಿವಸ್ವಂತನು ಪಿತೃವೆಂಬುದು ಪ್ರಸಿದ್ಧವಾಗಿದೆ.

**ಯಥಾ ಮನೌ ವಿವಸ್ವತಿ ಸೋಮಂ ಶಕ್ರಾಪಿಬಃ ಸುತಂ ।**
**ಯಥಾ ತ್ರಿತೇ ಛಂದ ಇಂದ್ರ ಜುಜೋಷಸ್ಯಾಯೌ ಮಾದಯಸೇ ಸಚಾ ॥**

(ಋ. ಸಂ. ೮-೫೨-೧)

**ತತೋಽಶ್ವಿನೌ ಜಜ್ಞಾತೇ । ಸವರ್ಣಾಯಾಂ ಮನುಃ ।**

(ನಿರುಕ್ತ. ೧೨-೧೦)

**ಮನುರ್ವೈವಸ್ವತೋ ರಾಜೇತ್ಯಾಹ । ತಸ್ಯ ಮನುಷ್ಯಾ ವಿಶಸ್ತ ಇಮ ಆಸತ ।**

(ಶ. ಬ್ರಾ. ೧೩-೪-೩-೩)

ಇತ್ಯಾದ್ಯನೇಕ ಸ್ಥಳಗಳಲ್ಲಿ ಮನುವನ್ನು ವಿವಸ್ವಂತನ ಪುತ್ರನೆಂದು ಸ್ಪಷ್ಟವಾಗಿ ಕರೆದಿದೆ. **ವಿವಸ್ವತಃ ಸದನೇ** (ಋ. ಸಂ. ೩-೩೪-೭; ) ಇತ್ಯಾದಿ ವರ್ಣನೆಗಳು ವಿವಸ್ವಂತನನ್ನು ಉತ್ತಮವಾದ ಯಜಮಾನನೆಂದೂ ತಿಳಿಸುತ್ತವೆ. (೧-೫೩-೧; ೩-೫೧-೩; ೧೦-೧೨-೭ ಇತ್ಯಾದಿ.)

ಇಂತಹ ಮಾನವನಿಗೆ ವಿವಾಹಿತಳಾದ ಸರಣ್ಯೂವು ಮೊದಲು ಅವನೊಂದಿಗೆ ಸೇರಿದರೂ, ಕ್ರಮವಾಗಿ ಅವಳಿಗೆ ತನ್ನ ಪತಿಯು ದಿವ್ಯತ್ವವನ್ನು ಪೂರ್ಣವಾಗಿ ಹೊಂದಿಲ್ಲವೆಂಬ ಅರಿವುಂಟಾಗಿರಬೇಕು. ಈ ಅಂಶವನ್ನು ಹರಿವಂಶದಲ್ಲಿ ಸ್ಪಷ್ಟವಾಗಿ ತಿಳಿಸಿದೆ. ಹೇಗೆಂದರೆ :—

**ಭರ್ತೃರೂಪೇಣ ನಾತುಷ್ಯದ್ರೂಪಯೌವನಶಾಲಿನೀ ।**

(ಹರಿವಂಶ. ೫೪೭)

ಯೌವನ ಮತ್ತು ಸೌಂದರ್ಯಗಳಿಂದ ಕೂಡಿದ ಸರಣ್ಯೂವು ತನ್ನ ಪತಿಯ ರೂಪದಿಂದ ತೃಪ್ತಿಯನ್ನು ಹೊಂದಲಿಲ್ಲ ಎಂಬುದನ್ನು ಸ್ಪಷ್ಟವಾಗಿ ತಿಳಿಸಿದೆ. ಇಂತಹ ಪತಿಯಿಂದ ಅತೃಪ್ತಿಯನ್ನು ಪಡೆದು ಅವಳು ಅಶ್ವಿರೂಪಕ್ಕೆ ಪರಿವರ್ತಿತಳಾದಳು ಎಂಬುದು ಸ್ಪಷ್ಟವಾಗಿ ಋಕ್ಸಂಹಿತೆಯಲ್ಲಿ ಹೇಳದಿದ್ದರೂ ಸಹ "ಅವಳು ಅಶ್ವಿನೀದೇವತೆಗಳನ್ನು ಹಡೆದಳು" ಎಂಬ ವಾಕ್ಯವು (ಋ. ಸಂ. ೧೦-೧೭-೨) ಈ ವಿಷಯವನ್ನು ತಿಳಿಸುತ್ತದೆ.

ಅಶ್ವರೂಪವನ್ನು ಹೊಂದಿದ ಸರಣ್ಯೂವು ತನ್ನ ಸಹಜಬಂಧುಗಳಿಂದ ದೇವತೆಗಳೊಡನೆ ಸೇರಿಕೊಳ್ಳಲು ಅವರು ಅವಳನ್ನು ಮಾನವನಾದ ವಿವಸ್ವಂತನಿಂದಲೂ ಮತ್ತು ತತ್ಪುತ್ರರೂ ಮಾನವರೂಪರೂ ಆದ ಯಮ ಮತ್ತು ಯಮಿಗಳಿಂದಲೂ ಅವಳನ್ನು ಮರೆಸಿ ಇಟ್ಟರು, ಆದುದರಿಂದಲೇ,

**ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ ।**

(ಋ. ಸಂ. ೧೦-೧೭-೨)

ಮಾನವನಾದ ವಿವಸ್ವಾನ್ ಮತ್ತು ತತ್ಪುತ್ರರಿಂದ ಅವಳನ್ನು ಮರೆಸಿ, ಅವಳಂತೆಯೇ ರೂಪವುಳ್ಳ ಇನ್ನೊಬ್ಬಳನ್ನು ಸೃಷ್ಟಿಸಿ ಅವನಿಗೆ ಕೊಟ್ಟರು ಎಂಬುದು ವಿಶದವಾಗಿದೆ. ಈ **ಸವರ್ಣೆ** ಯಿಂದ ಉತ್ಪನ್ನನಾದ **ಮನುವೇ ಯಮ** ನಿಗೆ ಭ್ರಾತೃವಾದನು ಎಂಬುದನ್ನು ನಿರುಕ್ತ ಮತ್ತು ಬೃಹದ್ದೇವತಾವಾಕ್ಯಗಳಿಂದ ಸ್ಪಷ್ಟಪಡಿಸಿದೆ. ಇದಲ್ಲದೇ **ಮನು** ಮತ್ತು **ಯಮರ** ಭ್ರಾತೃತ್ವವನ್ನು ಪ್ರಶಂಸಿಸುವ ವಾಕ್ಯವು ಋಕ್ಸಂಹಿತೆಯಲ್ಲಿ ಎಲ್ಲೂ ಇಲ್ಲ. ಅಥರ್ವವೇದದಲ್ಲಿ ಮಾತ್ರ ಇದು ಸೂಚಿತವಾಗಿದೆ. ಹೇಗೆಂದರೆ :—

**ತಸ್ಯ (ವಿರಾಜಃ) ಯಮೋ ರಾಜಾ ವತ್ಸ ಆಸೀತ್ । ತಸ್ಯ ಮನುರ್ವೈವಸ್ವತೋ ವತ್ಸ ಆಸೀತ್**
(ಅ. ವೇ. ೮-೧೦-೨೩,೨೪)

ಆ ವಿರಾಟ್‌ಪುರುಷನಿಗೆ ಯಮನು ವತ್ಸರೂಪನಾಗಿದ್ದನು. ವಿವಸ್ವಂತನ ಪುತ್ರನಾದ ಮನುವೂ ವತ್ಸರೂಪನಾಗಿದ್ದನು ಎಂಬ ಈ ವಾಕ್ಯದಿಂದ ಅವರಿಬ್ಬರ ಭ್ರಾತೃತ್ವವು ಸೂಚಿತವಾಗಿದೆ. ಅಲ್ಲದೆ:—

**ಮನುರ್ವೈವಸ್ವತೋ ರಾಜಾ ತಸ್ಯ ಮನುಷ್ಯಾ ವಿಶ್ವ......ಯಮೋ ವೈವಸ್ವತೋ ರಾಜಾ ತಸ್ಯ ಪಿತರೋ ವಿಶಃ ॥**
(ಶ. ಬ್ರಾ. ೧೩-೩-೩-೭-೫)

ವಿವಸ್ವಂತನ ಪುತ್ರನಾದ ಮನುವು ಮಾನವರಿಗೆಲ್ಲ ಪ್ರಭುವು ಮತ್ತು ವಿವಸ್ವಂತನ ಪುತ್ರನಾದ ಯಮನು ಪಿತೃಲೋಕಕ್ಕೆಲ್ಲ ಪ್ರಭುವು ಎಂದು ಇವರ ಭ್ರಾತೃತ್ವವು ಸೂಚಕವಾಗಿದೆ. ವಿವಸ್ವಂತನು ಮಾನವರಿಗೆಲ್ಲ ಮೂಲಪುರುಷನು ಮತ್ತು ಮಾನವತ್ವವನ್ನೂ ಮರ್ತ್ಯತ್ವವನ್ನು ಹೊಂದಿದವನು ಎಂಬುದನ್ನು ತಿಳಿಸುವ ಆಧಾರಗಳೇ ನಮಗೆ ಪ್ರಕೃತದಲ್ಲಿ ಬೇಕಾಗಿರತಕ್ಕವಾಗಿವೆ. ಇದೇ ಅಂಶವನ್ನು ತೈತ್ತಿರೀಯಸಂಹಿತೆಯಲ್ಲಿ ಈ ರೀತಿ ತಿಳಿಸಿದೆ.

**ತತೋ ವಿವಸ್ವಾನಾದಿತ್ಯೋಽಜಾಯತ ತಸ್ಯ ವಾ ಇಯಂ ಪ್ರಜಾಯನ್ಮನುಷ್ಯಾಃ**
(ತೈ. ಸ. ೬-೫-೬-೨)

ಆದಿತ್ಯರೂಪನಾದ ವಿವಸ್ವಂತನಿಗೆ ಮಾನವರೂಪರಾದ ಪ್ರಜೆಗಳಿದ್ದರು ಎಂದಿರುವುದರ ಜೊತೆಗೆ ಆದಿತ್ಯನಿಗೂ ಉಳಿದ ಆದಿತ್ಯರಿಗೂ ಇರುವ ವ್ಯತ್ಯಾಸವನ್ನು ಮೇಲೆ ವಿವರಿಸಿದೆ.

ಅಲ್ಲದೇ, **ಸವರ್ಣಾಮದದುರ್ವಿವಸ್ವತೇ** (ಋ. ಸಂ ೧೦-೧೭-೨) ಎಂಬಲ್ಲಿ **ಸವರ್ಣಾ** ಎಂಬ ಪದಕ್ಕೆ ಅರ್ಥವೇನು ಎಂಬುದೂ ಸಹ ಸಿಷ್ಪಷ್ಟವಾಗಿಲ್ಲ. **ಸವರ್ಣಾ** ಎಂದರೆ, ಅದೃಶ್ಯಳಾದ **ಸರಣ್ಯೂ**ವಿಗೆ ಪ್ರತಿನಿಧಿಯಾಗಿ ಅವಳದೇ ರೂಪವನ್ನು ಹೋಲುವುದರಿಂದ ಅದೇ ವರ್ಣವುಳ್ಳವಳು ಎಂದರ್ಥವೇ ಅಥವಾ, **ಸವರ್ಣಾ** ಎಂಬುದು ಅಂಕಿತ ನಾಮವೇ ಎಂಬುದು ಸಂಶಯಕ್ಕೆ ಅವಕಾಶವನ್ನಿತ್ತಿದೆ. ಮನುವಿಗೆ **ಸಾವರ್ಣಿ** ಮತ್ತು **ಸಾವರ್ಣ್ಯ** ಎಂಬ ಎರಡು ವಿಶೇಷಣಗಳಿಂದಲೂ ನಿರ್ದೇಶವಿರುತ್ತದೆ. ಈ ವಿಶೇಷಣಗಳ ಸರಿಯಾದ ಅರ್ಥವನ್ನು ತಿಳಿಯಬೇಕಾದರೆ ಈ ಪ್ರಯೋಗಗಳಿರುವ ಸನ್ನಿವೇಶಗಳನ್ನು ಪರಿಶೀಲಿಸಬೇಕು.

**ನ ತಮಶ್ನೋತಿ ಕಶ್ಚನ ದಿವ ಇವ ಸಾನ್ವಾರಭಂ ।**
**ಸಾವರ್ಣ್ಯಸ್ಯ ದಕ್ಷಿಣಾ ವಿ ಸಿಂಧುರಿವ ಪಪ್ರಥೇ ॥**
(ಋ. ಸಂ. ೧೦-೬೨-೯)

**ಸಾವರ್ಣ್ಯ**ನೆಂದು ಪ್ರಸಿದ್ಧನಾದ ಮನುವಿನ ದಾನವು ಅತ್ಯತಿಶಯವಾದುದು. ಅದನ್ನು ಮೀರಿಸಲು ಯಾರಿಂದಲೂ ಸಾಧ್ಯವಿಲ್ಲ. ಅವನ ದಾನವು ನದೀಪ್ರವಾಹದಂತೆ ವಿಸ್ತೃತವಾಗಿ ಹರಡಿ ಪ್ರಸರಿಸುತ್ತದೆ.

**ಸಹಸ್ರದಾ ಗ್ರಾಮಣೀರ್ಮಾ ರಿಷನ್ಮನುಃ ಸೂರ್ಯೇಣಾಸ್ಯ ಯತಮಾನೈತು ದಕ್ಷಿಣಾ ।**
**ಸಾವರ್ಣೇರ್ದೇವಾಃ ಪ್ರ ತಿರನ್ತ್ವಾಯುರ್ಯಸ್ಮಿನ್ನಶ್ರಾಂತಾ ಅಸನಾಮ ವಾಜಂ ॥**
(ಋ. ಸಂ. ೧೦-೬೨-೧೧)

ಸಹಸ್ರಾರು ಗೋವುಗಳ ದಾತನೂ, ಜನಪದದ ಪ್ರಭುವೂ ಆದ ಮನುವು ಯಾರಿಂದಲೂ ಹಿಂಸಿತನಾಗದಿರಲಿ, ಅವನ ದಾನವು ಆದಿತ್ಯನ ಪ್ರಭೆಯಂತೆ ವಿಸ್ತೃತವಾಗಿ ಬೆಳೆಯಲಿ. ಈ **ಸಾವರ್ಣಿ**ಯ ಆಯುಸ್ಸನ್ನು ದೇವತೆಗಳು ದೀರ್ಘವಾಗಿ ಬೆಳೆಯುವಂತೆ ಮಾಡಲಿ. ನಾವು ಅವನ ಸತತವಾದ ಶ್ರಮದಿಂದ ಲಬ್ಧವಾಗುವ ಅನ್ನವನ್ನೂ ಉಪಭೋಗಿಸೋಣ, ಎಂದಿರುತ್ತವೆ. ಈ ಸಂದರ್ಭಗಳಲ್ಲಿ **ಸಾವರ್ಣ್ಯ** ಮತ್ತು **ಸಾವರ್ಣಿ** ಎಂದರೆ, **ಸವರ್ಣಾ** ಎಂಬುವಳ ಪುತ್ರನೆಂದು ಭಾಷ್ಯದಲ್ಲಿ ವಿವರಿಸಲ್ಪಟ್ಟಿರುತ್ತದೆ. ಆದರೆ, ಮನುವಿನ ತಂದೆಯಾದ ಸವರ್ಣನೆಂಬ ಪುರುಷನು ಎಲ್ಲೂ ನಿರ್ದಿಷ್ಟನಾಗಿಲ್ಲ. ಮನುವಿಗೆ ಇದು ಮಾತೃನಾಮಕ್ಕೆ ಸಂಬಂಧಿಸಿದ ವಿಶೇಷಣವೇ ಆಗಿರಬೇಕು. ಈ **ಸವರ್ಣಾ** ಎಂಬ ಯಾವ ಯುವತಿಯು ವಿವಸ್ವಂತನಿಗೆ ಕೊಡಲ್ಪಟ್ಟಳೋ ಅವಳೇ ಈ ಮನುವಿನ ತಾಯಿಯೆಂದು ಧಾರಾಳವಾಗಿ ಹೇಳಬಹುದು.

ವಿವಸ್ವಂತನ ಮಾನವತ್ವದಿಂದ ತೃಪ್ತಿಯನ್ನು ಹೊಂದದ ಸರಣ್ಯೂವು ಅದೃಶ್ಯಳಾದ ವಿಷಯವು ಇವನಿಗೆ ತಿಳಿದೊಡನೆಯೇ ಅವಳನ್ನು ಹಿಂಬಾಲಿಸುತ್ತಾನೆ. ಅವಳು ಅಶ್ವರೂಪವನ್ನು ಹೊಂದಿದುದನ್ನರಿತು ತಾನೂ ಸಹ ಪುರುಷಾಶ್ವರೂಪವನ್ನು ಹೊಂದುತ್ತಾನೆ. ಈ ರೂಪದಲ್ಲಿ ಅವಳನ್ನು ಹಿಂಬಾಲಿಸಿ ಅವಳನ್ನು ಸಮಿಾಪಿಸಿದ ಕೂಡಲೇ ಅವಳು ಇವನನ್ನು ಮೋಹಿಸಿ ಇವನೊಡನೆ ಸಂಭೋಗವನ್ನು ಇಚ್ಛಿಸುತ್ತಾಳೆ. ತತ್ಫಲವಾಗಿ ಅಶ್ವಿನೀದೇವತೆಗಳ ಉತ್ಪತ್ತಿಯೆಂಬುದು ವಿಶದವಾಗಿದೆ. ಪ್ರಕೃತದಲ್ಲಿ ಇನ್ನೊಂದು ಮುಖ್ಯವಾದ ಅಂಶವನ್ನು ಪರಿಶೀಲಿಸಬೇಕಾಗಿದೆ. ಅದು ಯಾವುದೆಂದರೆ ;—

**ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ।**

(ಋ. ಸಂ. ೧೦-೧೭-೧)

ಯಮನ ಮಾತೆಯೂ ವಿವಸ್ವಂತನ ಪತ್ನಿಯೂ (ಆದ ಸರಣ್ಯೂವು) ಅದೃಶ್ಯಳಾದಳು ಎಂಬುದಕ್ಕೆ ನಿರುಕ್ತಕಾರರು ಹೇಳಿರುವ ತಾತ್ಪರ್ಯವು ಗಮನಾರ್ಹವಾದುದು.

**ರಾತ್ರಿರಾದಿತ್ಯಸ್ಯಾದಿತ್ಯೋದಯೇಽಂತರ್ಧೀಯತೇ ।**

(ನಿ. ೧೨-೧೧)

ಆದಿತ್ಯನ ಉದಯವಾದೊಡನೆಯೇ ರಾತ್ರಿಯು ಅಂತರ್ಧಾನವಾಗುತ್ತದೆಯೆಂದು ತಾತ್ಪರ್ಯವನ್ನು ಹೇಳಿದ್ದಾರೆ. ಈ ಅಂಶವನ್ನೇ ದುರ್ಗಾಚಾರ್ಯರು ಇನ್ನೂ ಮುಂದಕ್ಕೆ ವಿವರಿಸುತ್ತ.

**ಯಮಸ್ಯ ಮಧ್ಯಮಸ್ಯ ಮಾತಾ ದೇವಧರ್ಮೇಣ । ಅಥವಾ ದ್ಯುಸ್ಥಾನಸ್ಯ ಯ್ಯೈವ ಚಾಯಾ ಸಾ ಮಾತೇತಿ । ರಾತ್ರಿರಾದಿತ್ಯಸ್ಯ .... ..... ಉಷಾ ಜಾಯಾ ಸಾ ಆದಿತ್ಯಸ್ಯೋದಯೇ ಅಂತರ್ಧೀಯತೇ ॥**

(ದುರ್ಗಾಚಾರ್ಯವೃತ್ತಿಃ ೧೨-೧೧)

ದ್ಯುಲೋಕಾಧಿಪತಿಯಾದ ಆದಿತ್ಯನ ಪತ್ನಿಯೇ ಇಲ್ಲಿ ವಿವಕ್ಷಿತಾರ್ಥ. ಈ ಆದಿತ್ಯಪತ್ನಿಯು **ಉಷಾ** ಸಂಜ್ಞಕಳು. ಆದಿತ್ಯನ ಉದಯವಾದೊಡನೆಯೇ **ಉಷಾ**ದೇವಿಯು ಅದೃಶ್ಯಳಾಗುತ್ತಾಳೆ ಎಂದು ತಾತ್ಪರ್ಯವೆಂದು ತಿಳಿಸಿದ್ದಾರೆ. ಆದಿತ್ಯರಲ್ಲೊಬ್ಬನು ವಿವಸ್ವಂತನೆಂದು ಪ್ರಸಿದ್ಧನಾಗಿದ್ದಾನೆಂಬ ವಿಷಯವನ್ನು ಹಿಂದೆ ತಿಳಿಸಿದೆ. ಈ ಆದಿತ್ಯನ ಆವಿರ್ಭಾವವಾದೊಡನೆಯೇ ಚಲಿಸುವುದರಿಂದಲೇ ಉಷಸ್ಸಿಗೂ **ಸರಣ್ಯೂ** ಎಂಬ ನಾಮವಿರಬಹುದು. ಏತಕ್ಕೆಂದರೆ, ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸುತ್ತ.

**ಸರಣ್ಯೂಃ ಸರಣಾತ್ ।**

(ನಿ. ೧೨-೯)

ಚಲಿಸುವ ಸ್ವಭಾವವಿರುವುದರಿಂದ ಈ ಹೆಸರೆಂದು ತಿಳಿಸಿದ್ದಾರೆ; ಈ ನಿರ್ವಚನವನ್ನೂ, ಮೇಲಿನ ದುರ್ಗಾಚಾರ್ಯರ ವಿವರಣೆಯನ್ನೂ ಆಧಾರವಾಗಿ ಇಟ್ಟುಕೊಂಡರೆ ಆಗ ತ್ವಷ್ಟೃವು ಈ **ಉಷೋ** ದೇವಿಯನ್ನು ಉತ್ತಮವಾದ ವರನಿಗೆ ವಿವಾಹಾರ್ಥವಾಗಿ ಕೊಡಲು ಇಚ್ಛಿಸಿದನೆಂದು ತಾತ್ಪರ್ಯವಾಗುತ್ತದೆ. ಈ ರೀತಿ ತಾತ್ಪರ್ಯವನ್ನು ಹೇಳುವುದರಲ್ಲಿ ಯಾವ ಅನೌಚಿತ್ಯವೂ ಕಾಣುವುದಿಲ್ಲ- ಈ ಅಂಶವನ್ನು ತಿಳಿಸುವ ಸನ್ನಿವೇಶಗಳು ವೈದಿಕವಾಕ್ಯಗಳಲ್ಲಿ ಅನೇಕ ಕಡೆ ಪ್ರಸಿದ್ಧವಾಗಿದೆ. ಉದಾಹರಣೆಗೆ.—

**ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್ಸೂರ್ಯಾಂ ।**

(ಐ.ಬ್ರಾ. ೪-೭)

ಪ್ರಜಾಪತಿಯು ತನ್ನ ಪುತ್ರಿಯಾದ ಸೂರ್ಯೆಯನ್ನು ಸೋಮರಾಜನಿಗೆ ವಿವಾಹಾರ್ಥವಾಗಿ ಕೊಟ್ಟನು ಎಂದಿರುತ್ತದೆ. ಆದರೆ, ಈ ಪುತ್ರಿಯು ಯಾರೆಂಬ ವಿಷಯದಲ್ಲಿ ಸಂಶಯವಿರುತ್ತದೆ. ಇಲ್ಲಿ ಉದಾಹೃತವಾಗಿರುವ ವಾಕ್ಯದಲ್ಲಿ **ಸೂರ್ಯಾ** ಎಂದಿದ್ದರೂ ಸಹ, ಇನ್ನು ಕೆಲವೆಡೆಗಳಲ್ಲಿ ಅರ್ಥವ್ಯತ್ಯಾಸಗಳೂ ಇರುತ್ತವೆ. ಉದಾಹರಣೆಗೆ.—

**ಪ್ರಜಾಪತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯದ್ದಿವಮಿತ್ಯನ್ಯ ಆಹುರುಷಸಮಿತ್ಯನ್ಯೇ ತಾಮ್ಯ-
ಶ್ಯೋ ಭೂತ್ವಾ ರೋಹಿತಂ ಭೂತಾಂ ।**

(ಐ. ಬ್ರಾ. ೩-೩೩)

ಪ್ರಜಾಪತಿಯು ತನ್ನ ಪುತ್ರಿಯನ್ನು ತಾನೇ ಮೋಹಿಸಿದನು. ಅವಳು ದ್ಯುಲೋಕಾಧಿದೇವತೆಯೆಂದು ಕೆಲವರೂ, **ಉಷಸ್ಸೆಂದು** ಕೆಲವರೂ ಹೇಳುತ್ತಾರೆ. ಮೃಗೀರೂಪಳಾದ ಅವಳನ್ನು ಪ್ರಜಾಪತಿಯು ಮೃಗರೂಪನಾಗಿ ಹಿಂಬಾಲಿಸಿದನು ಎಂದಿರುತ್ತದೆ. ಇದನ್ನೇ ಋಕ್ಸಂಹಿತೆಯಲ್ಲಿಯೂ ಸಹ ತಿಳಿಸುತ್ತ.

**ಪಿತಾ ಯತ್ಸ್ವಾಂ ದುಹಿತರಮಧಿಷ್ಕನ್ ಕ್ಷ್ಮಯಾ ರೇತಃ ಸಂಜಗ್ಮಾನೋ ನಿ ಷಿಂಚತ್ ।
ಸ್ವಾಧ್ಯೋಽಜನಯನ್ ಬ್ರಹ್ಮ ದೇವಾ ವಾಸ್ತೋಷ್ಪತಿಂ ವ್ರತಪಾಂ ನಿರತಕ್ಷನ್ ॥**

(ಋ. ಸಂ. ೧೦.೬೧-೭)

ಪ್ರಜಾಪತಿಯು ತನ್ನ ದುಹಿತೃವಿನೊಡನೆ ಸಂಭೋಗಿಸಿದಾಗ ದೇವತೆಗಳು ಬ್ರಹ್ಮನನ್ನು ನಿರ್ಮಿಸಿದರು. ಯಜ್ಞಪಾಲಕನನ್ನೂ ನಿರ್ಮಿಸಿದರು ಎಂದಿರುವಾಗಲೂ ಸಹ ಈ ದುಹಿತೃವಾರು ಎಂದರೆ ಉಷಸ್ಸು ಅಥವಾ ದ್ಯುಲೋಕಾಧಿದೇವತೆ ಎಂದರ್ಥಮಾಡಿದ್ದಾರೆ- ಇಲ್ಲಿ ಉದಾಹೃತವಾಗಿರುವ ಸನ್ನಿವೇಶಗಳಲ್ಲಿ ಪ್ರಕೃತವಾದ ಉಷಸ್ಸೆಂದು ನಿರ್ದೇಶಿಸಿದೆಯೋ ಅದೇ ವ್ಯಕ್ತಿಯನ್ನು ಪ್ರಕೃತವಾದ ಸೂಕ್ತದಲ್ಲಿ (೧೦-೧೭) ಸರಣ್ಯೂ ಎಂದು ನಿರ್ದೇಶಿಸಿರಬಹುದು ಎಂಬುದಕ್ಕೆ ನಿರುಕ್ತಾದಿಗಳ ಆಧಾರವನ್ನೂ ತೋರಿಸಿದೆ. ಆದರೆ, ತ್ವಷ್ಟೃವು (ಪ್ರಜಾಪತಿಯು) ಬೇರೊಬ್ಬ ಪುರುಷನಿಗೆ ವಿವಾಹಾರ್ಥವಾಗಿ ಕೊಟ್ಟನು ಎಂಬುದೊಂದೇ ವಿಶೇಷ.

ಒಟ್ಟಿನಲ್ಲಿ, ಪ್ರಜಾಸೃಷ್ಟಿಗೆ ಪೂರ್ವಭಾವಿಯಾದ ಸ್ತ್ರೀಪುಂಶಕ್ತಿಗಳ ಸಂಯೋಗವನ್ನು ತಿಳಿಸುವ ಸನ್ನಿವೇಶಗಳಲ್ಲೆಲ್ಲ ಇಂತಹ ವರ್ಣನೆಗಳಿರುವುದು ಶ್ರುತಿಪ್ರಸಿದ್ಧವಾಗಿದೆ. **ಅಶ್ವ—ಅಶ್ವೀ, ಮೃಗ—ಮೃಗೀ** ಎಂಬ

ರೂಪಾಂತರಗಳೂ ಕೂಡ ಸಾಂಪ್ರದಾಯಿಕವಾದ ಸನ್ನಿವೇಶಗಳಲ್ಲೇ, ವರ್ಣಿತವಾಗಿವೆ. ಸೃಷ್ಟಿ ಸಂಕಲ್ಪವಾದಾಗ ನಡೆಯುವ ಪ್ರಯತ್ನಗಳಲ್ಲಿ ಇಂತಹ ರೂಪಾಂತರಗಳು ಸಹಜವಾಗಿವೆ. ಹೇಗೆಂದರೆ:

**ಸ ವೈ ನೈವ ರೇಮೇ ತಸ್ಮಾದೇಕಾಕೀ ನ ರಮತೇ ಸ ದ್ವಿತೀಯಮೈಚ್ಛತ್ । ಸ ಹೈತಾವಾನಾಸ ಯಥಾ ಸ್ತ್ರೀಪುಮಾಂಸೌ ಸಂಪರಿಷ್ವಕ್ತೌ ಸ ಇಮಮೇವಾತ್ಮಾನಂ ದ್ವೇಧಾಪಾತಯತ್ತತಃ ಪತಿಶ್ಚ ಪತ್ನೀ ಚಾಭವತಾಂ ತಸ್ಮಾದಿದಮರ್ಧಬೃಗಲಮಿವ ಸ್ವ ಇತಿ ಹ ಸ್ಮಾಹ ಯಾಜ್ಞವಲ್ಕ್ಯಸ್ತಸ್ಮಾದಯಮಾಕಾಶಃ ಸ್ತ್ರಿಯಾ ಪೂರ್ಯತ ಏವ ತಾಂ ಸಮಭವತ್ತತೋ ಮನುಷ್ಯಾ ಅಜಾಯಂತ ॥**

(ಬೃ. ಉ. ೧.೪.೩)

ಸೃಷ್ಟಿಗೆ ಪೂರ್ವದಲ್ಲಿ ಬೇರೊಂದು ಜೊತೆಗಾರನಿಲ್ಲದ ಒಂದೇ ತತ್ತ್ವವು ಯಾವ ವಿಧವಾದ ಆನಂದವನ್ನೂ ಹೊಂದಲಾಗಲಿಲ್ಲ. ಆದುದರಿಂದ ಎರಡನೆಯ ತತ್ತ್ವವನ್ನು ಅದು ಅಪೇಕ್ಷಿಸಿತು. ಸ್ತ್ರೀ ಮತ್ತು ಪುಮಾನ್ ಇಬ್ಬರೂ ಸೇರಿ ಆಲಿಂಗನ ಕಾಲದಲ್ಲಿರುವ ಪ್ರಮಾಣದಷ್ಟು ಅದು ಬೆಳೆಯಿತು. ನಂತರ ಅದು ಎರಡು ಭಾಗವಾಗಿ ವಿಭಕ್ತವಾಯಿತು. ಆಗ ಅದು ಪತಿಪತ್ನೀರೂಪದಿಂದ ಕರೆಯಲ್ಪಟ್ಟಿತು. ಆದುದರಿಂದ ಪ್ರತಿವ್ಯಕ್ತಿಯೂ ಸಹ (ದಾಂಪತ್ಯಸಂಬಂಧವಿಲ್ಲದಿದ್ದರೆ) ಅರ್ಧವ್ಯಕ್ತಿಯೆಂದು ಮಾತ್ರ ಕರೆಯಲ್ಪಡುತ್ತದೆ. ಆಕಾಶವು ಸ್ತ್ರೀತತ್ತ್ವದಿಂದ ಕೂಡಿದ್ದು ಅದರೊಂದಿಗೆ ಪುರುಷತತ್ತ್ವವು ಸಂಯೋಗವನ್ನು ಹೊಂದಿರುವುದರಿಂದ ವಿಶ್ವದಲ್ಲಿ ಮಾನವನ ಸಂತತಿಯು ಹುಟ್ಟಿ ಬೆಳೆಯಿತು.

**ಸೋ ಹೇಯಮೀಕ್ಷಾಂಚಕ್ರೇ । ಕಥಂ ನು ಮಾತ್ಮನ ಏವ ಜನಯಿತ್ವಾ ಸಂಭವತಿ ಹಂತ ತಿರೋಽಸಾನೀತಿ ಸಾ ಗೌರಭವತ್ ವೃಷಭ ಇತರಸ್ತಾಂ ಸಮೇವಾಭವತ್ತತೋ ಗಾವೋಽಜಾಯಂತ ವಡವೇತರಾಭವದಶ್ವವೃಷ ಇತರೋ ಗರ್ದಭೀತರಾ ಗರ್ದಭ ಇತರ ಸ್ತಾಂ ಸಮೇವಾಭವತ್ತತ ಏಕಶಫಮಜಾಯತಾಜೇತರಾಭವದ್ಬಸ್ತ ಇತರೋಽವಿರಿತರಾ ಮೇಷ ಇತರಸ್ತಾಂ ಸಮೇವಾಭವತ್ತತೋಽಜಾವಯೋಽಜಾಯಂತೈವಮೇವ ಯದಿದಂ ಕಿಂಚ ಮಿಥುನಮಾ ಪಿಪೀಲಿಕಾಭ್ಯಸ್ತತ್ಸರ್ವಮಸೃಜತ ॥**

(ಬೃ. ಉ. ೧.೪.೪)

ಆಗ ಆ ಸ್ತ್ರೀವ್ಯಕ್ತಿಯು ಈ ಆದಿತತ್ತ್ವದಿಂದಲೇ ನಾನು ಸೃಷ್ಟಳಾಗಿದ್ದೇನೆ, ಇದಕ್ಕೆ ಪುತ್ರೀಪ್ರಾಯವಾಯಿತು. ಹೇಗೆ ತಾನೇ ಇದು ತನಗೆ ಮಗಳಾದ ನನ್ನಲ್ಲಿ ಸಂಭೋಗವನ್ನು ಹೊಂದುತ್ತದೆ ಎಂದು ಅದಕ್ಕೆ ತಿಳಿಯದಂತೆ ಅವಿತುಕೊಂಡಿತು. ಧೇನುರೂಪದಲ್ಲಿ ಪರಿವರ್ತಿತವಾಯಿತು. ಆಗ ಆ ಆದಿತತ್ತ್ವವು ವೃಷಭರೂಪವನ್ನು ಹೊಂದಿ ಅದರೊಂದಿಗೆ ಸಂಭೋಗಿಸಿತು. ತತ್ಫಲವಾಗಿ ಪಶುಗಳ ಉತ್ಪನ್ನವಾಯಿತು. ಅದು ಅಶ್ವಸ್ತ್ರೀರೂಪವನ್ನು ಹೊಂದಿತು. ಆದಿತತ್ತ್ವವು ಪುರುಷಾಶ್ವವಾಯಿತು. ಅದರ ಫಲವಾಗಿ ಗೊರಸುಗಳುಳ್ಳ ಪ್ರಾಣಿಗಳ ಉತ್ಪತ್ತಿಯುಂಟಾಯಿತು. ಅದು ಹೆಣ್ಣು ಆಡಾಯಿತು. ಆದಿತತ್ತ್ವವು ಗಂಡಾಡಾಯಿತು. ಹಾಗೆಯೇ ಹೆಣ್ಣು ಕುರಿ ಮತ್ತು ಗಂಡು ಕುರಿಗಳ ರೂಪವನ್ನೂ ಹೊಂದಿದವು. ಅದರ ಫಲವಾಗಿ ಆಡು, ಮೇಕೆ ಇವುಗಳ ಸಂತತಿಯು ಬೆಳೆಯಿತು. ಈ ರೀತಿಯಾಗಿ ಪ್ರಪಂಚಕ್ಕೆ ಯೋಗ್ಯವಾದ ಸಕಲ ವಿಧವಾದ ಪ್ರಾಣಿಜಾತಗಳನ್ನೂ ಉತ್ಪನ್ನಮಾಡಿದನು ಎಂದಿರುತ್ತದೆ.

ಈ ರೀತಿ, ಸೃಷ್ಟಿಗೆ ಪೂರ್ವಭಾವಿಯಾದ ಈ ಸ್ತ್ರೀಪುರುಷರ ಸಂಬಂಧದಲ್ಲಿ ಪಿತೃಪುತ್ರಿ ಸಂಬಂಧವಿರುವುದರಿಂದ ಈ ಸಂಬಂಧವು ನೀತಿಬಾಹಿರವೆಂದು ಒಂದಲ್ಲ ಒಂದು ವಿಧದಲ್ಲಿ ಈ ನ್ಯೂನತೆಯನ್ನು ತೋರಿಸಲಾಗಿರುತ್ತದೆ.

ಪ್ರಜಾಪತಿಯು ತನ್ನ ಪುತ್ರಿಯಾದ ಉಷಸ್ಸನ್ನು ಮೋಹಿಸಿದಾಗ ದೇವತೆಗಳು ಅಸಮಾಧಾನಪಟ್ಟರೆಂದು ಐತರೇಯ ಬ್ರಾಹ್ಮಣದಲ್ಲಿ ತಿಳಿಸಿದೆ. ಆದಿತತ್ತ್ವವು ತನ್ನಿಂದಲೇ ಸೃಷ್ಟವಾದ ಸ್ತ್ರೀವ್ಯಕ್ತಿಯನ್ನು ಮೋಹಿಸಬಾರದೆಂದು ಬೃಹದಾರಣ್ಯಕದಲ್ಲಿ ತಿಳಿಸಿ ಆದುದರಿಂದಲೇ ಅವನಿಂದ ಅದು ಅಂತರ್ಧಾನವನ್ನು ಹೊಂದಿತು. (ಮರೆಯಾಯಿತು). ಹಾಗೆಯೇ ಪ್ರಕೃತದಲ್ಲಿಯೂ ಸಹ (ಋ. ಸಂ. ೧೦-೧೭-೧, ೨) ಸರಣ್ಯೂವು ವಿವಸ್ವಂತನಲ್ಲಿ ಸಂಬಂಧವನ್ನು ಬೆಳೆಸಲು ಪೂರ್ಣವಾಗಿ ಇಚ್ಛಿಸದೆ ತನ್ನ ಅಸಂತೃಪ್ತಿಯನ್ನು ತೋರಿಸುತ್ತಾಳೆ ಎಂಬ ಸೂಚನೆಯಿರುತ್ತದೆ. ಒಟ್ಟಿನಲ್ಲಿ ಈ ಸಂದರ್ಭದ ಸಾರಾಂಶವನ್ನು ಈ ರೀತಿ ತಿಳಿಸಬಹುದು.

ತ್ವಷ್ಟೃವು ತನ್ನ ದುಹಿತೆಯಾದ ಸರಣ್ಯೂವನ್ನು ವಿವಾಹಾರ್ಥವಾಗಿ ಯಾರಿಗಾದರೂ ಅರ್ಪಿಸಬೇಕೆಂದಿರುವಾಗ ಸಕಲ ಲೋಕವೂ ಅಲ್ಲಿ ಬಂದು ಸೇರಿತು. ಅಷ್ಟರಲ್ಲಿಲ್ಲ ತ್ವಷ್ಟೃವಿಗೆ ವಿವಸ್ವಂತನ ಮೇಲೆ ಪೂರ್ಣವಾದ ಅಭಿಮಾನವು ಹುಟ್ಟಿತು. ಆದರೆ ಅವನು ಮರ್ತ್ಯನಾದ ಮಾನವನು. ಆದುದರಿಂದ ಸರಣ್ಯೂವು ವಿವಾಹವಾದೊಡನೆಯೇ, ಯಮ ಮತ್ತು ಯಮೀ ಎಂಬ ಜಗತ್ಪ್ರಸಿದ್ಧರಾದ ಅವಳಿಮಕ್ಕಳನ್ನು ಹಡೆದು ಅವರನ್ನು ವಿವಸ್ವಂತನಲ್ಲಿ ಬಿಟ್ಟು ಮರೆಯಾದಳು. ನಂತರ ಅವಳು ಅಶ್ವಸ್ತ್ರೀಯಾದಳು. ವಿವಸ್ವಂತನೂ ಅಶ್ವವಾದನು. ತತ್ಫಲವಾಗಿ ಅಶ್ವಿನೀ ದೇವತೆಗಳ ಜನನವಾಯಿತು. ಸರಣ್ಯೂವಿಗೆ ಪ್ರತಿನಿಧಿಯಾಗಿದ್ದ ಸವರ್ಣೆಯಲ್ಲಿ ಮನುವು ಉತ್ಪನ್ನನಾದನು. ವಿವಸ್ವತ್ಪುತ್ರರಾದ ಯಮನೂ ಮತ್ತು ಮನುವೂ ಸಹ ಮಾನವನ ಸಂತತಿಗೆ ಮೂಲಪುರುಷರಾದರು.

ಈ ಸೂಕ್ತದ ವಿಷಯದಲ್ಲಿ ಶೌನಕಮಹರ್ಷಿಯು ಬೃಹದ್ದೇವತಾ ಎಂಬ ಗ್ರಂಥದಲ್ಲಿ ಈ ರೀತಿ ಹೇಳಿದಾರೆ—

**ಅಭವನ್ಮಿಥುನಂ ತ್ವಷ್ಟುಃ ಸರಣ್ಯೂಸ್ತ್ರಿಶಿರಾಃ ಸಹ ।**
**ಸ ವೈ ಸರಣ್ಯೂಂ ಪ್ರಾಯಚ್ಛತ್ಸ್ವಯಮೇವ ವಿವಸ್ವತೇ ॥ ೧೬೨ ॥**
**ತತಃ ಸರಣ್ವ್ಯಾಂ ಜಜ್ಞಾತೇ ಯಮಯಮ್ಯೌ ವಿವಸ್ವತಃ ।**
**ತೌ ಚಾಪ್ಯುಭೌ ಯಮಾವೇವ ಜ್ಯಾಯಾಂಸ್ತಾಭ್ಯಾಂ ತು ವೈ ಯಮಃ ॥ ೧೬೩ ॥**

(ಬೃ. ದೇ. ಅಧ್ಯಾಯ. ೬-೧೬೨, ೧೬೩)

ತ್ವಷ್ಟೃ ಪ್ರಜಾಪತಿಗೆ ಈರ್ವರು ಅವಳೀಮಕ್ಕಳಿದ್ದರು. ಅವರಲ್ಲಿ ಸರಣ್ಯೂ ಎಂಬ ಪುತ್ರಿಯೂ, ತ್ರಿಶಿರಾಃ ಎಂಬ ಪುತ್ರನೂ ಇದ್ದರು. ಸರಣ್ಯೂ ಎಂಬ ತನ್ನ ಪುತ್ರಿಯನ್ನು ಅದಿತಿಯ ಪುತ್ರನಾದ ವಿವಸ್ವಂತನಿಗೆ ಮದುವೆಮಾಡಿಕೊಟ್ಟನು. ಆ ಸರಣ್ಯೂದೇವಿಯಲ್ಲಿ ಇಬ್ಬರು ಅವಳೀಮಕ್ಕಳು ಹುಟ್ಟಿದರು. ಅವರಲ್ಲಿ ಯಮ ಎಂಬುವನು ಜ್ಯೇಷ್ಠನು, ಯಮೀ ಎಂಬುವಳು ಕಿರಿಯವಳು.

**ಸೃಷ್ಟ್ವಾ ಭರ್ತುಃ ಪರೋಕ್ಷಂ ತು ಸರಣ್ಯೂಃ ಸದೃಶೀಂ ಸ್ತ್ರಿಯಂ ।**
**ನಿಕ್ಷಿಪ್ಯ ಮಿಥುನಂ ತಸ್ಯಾಮಶ್ವಾ ಭೂತ್ವಾಪಚಕ್ರಮೇ ॥ ೧ ॥**
**ಅವಿಜ್ಞಾನಾದ್ವಿವಸ್ವಾಂಸ್ತು ತಸ್ಯಾಮಜನಯನ್ಮನುಂ ।**
**ರಾಜರ್ಷಿರಭವತ್ಸೋಽಪಿ ವಿವಸ್ವಾನಿವ ತೇಜಸಾ ॥ ೨ ॥**

ಒಂದು ದಿವಸ ತ್ವಷ್ಟೃವಿನ ಪುತ್ರಿಯಾದ ಸರಣ್ಯೂದೇವಿಯು ತನ್ನ ಪತಿಯಾದ ವಿವಸ್ವಂತನಿಗೆ ತಿಳಿಯದಂತೆ ತನ್ನಂತೆ ರೂಪಲಾವಣ್ಯಗಳಿರುವ ಬೇರೊಬ್ಬ ಸ್ತ್ರೀಯನ್ನು ಸೃಷ್ಟಿಸಿ ಅವಳನ್ನೂ ತನ್ನ ಅವಳೀಮಕ್ಕಳಾದ ಯಮಯಮಿಯರನ್ನೂ

ತನ್ನ ಪತಿಯ ಮನೆಯಲ್ಲಿಯೇ ಇರಿಸಿ ತಾನು ಸ್ವೇಚ್ಛಾವಿಹಾರವಮಾಡುವ ಉದ್ದೇಶ್ಯದಿಂದ ಅಶ್ವರೂಪವನ್ನು ಧರಿಸಿ ಹೊರಟುಹೋದಳು. ಎಲ್ಲಿಯೋ ಹೋಗಿದ್ದು ಮನೆಗೆ ಬಂದ ವಿವಸ್ವಂತನು ತನ್ನ ಮನೆಯಲ್ಲಿ ತನ್ನ ಮಕ್ಕಳಾದ ಯಮ ಯಮಿಯರೊಂದಿಗಿದ್ದ (ಸರಣ್ಯೂ ಸೃಷ್ಟಿಸಿದ) ಸ್ತ್ರೀಯನ್ನು ತನ್ನ ಪತ್ನಿಯೆಂದೇ ತಿಳಿದು ಅವಳೊಡನೆ ರಮಿಸಿದನು. ಅದರಿಂದ ಆ ಸ್ತ್ರೀಯಲ್ಲಿ ಮನುವೆಂಬ ಪರ್ವ ಪುತ್ರನು ಹುಟ್ಟಿದನು ಅವನು ತಂದೆಯಾದ ವಿವಸ್ವಂತನಂತೆ ದಿವ್ಯ ತೇಜಸ್ಸಿನಿಂದ ಬೆಳಗುತ್ತಾ ಪ್ರವರ್ಧಮಾನನಾಗಿ ರಾಜರ್ಷಿಯೆಂದು ಪ್ರಸಿದ್ಧನಾದನು.

**ಸ ವಿಜ್ಞಾಯ ತ್ವಪಕ್ರಾಂತಾಂ ಸರಣ್ಯೂಮಶ್ವರೂಪಿಣೀಂ ।**
**ತ್ವಾಷ್ಟ್ರೀಂ ಪ್ರತಿ ಜಗಮಾಶು ವಾಜೀ ಭೂತ್ವಾ ಸಲಕ್ಷಣಃ ॥ ೩ ॥**
**ಸರಣ್ಯೂಶ್ಚ ವಿವಸ್ವಂತಂ ವಿದಿತ್ವಾ ಹಯರೂಪಿಣಂ ।**
**ಮೈಥುನಾಯೋಪಚಕ್ರಾಮ ತಾಂ ಚ ತತ್ರಾರುರೋಹ ಸಃ ॥ ೪ ॥**

ಬಳಿಕ ತನ್ನ ಮನೆಯಲ್ಲಿದ್ದ ಮತ್ತು ತಾನು ರಮಿಸಿದ ಸ್ತ್ರೀಯು ತನ್ನ ಪತ್ನಿಯಲ್ಲವೆಂದೂ, ತನ್ನ ಪತ್ನಿಯಾದ ತ್ವಷ್ಟೃ ಪುತ್ರಿಯು ಅಶ್ವರೂಪಿಣಿಯಾಗಿ ಎಲ್ಲಿಗೋ ಹೋದಳೆಂದೂ ವಿವಸ್ವಂತನಿಗೆ ತಿಳಿಯಿತು. ಆದ್ದರಿಂದ ವಿವಸ್ವಂತನು ತಾನೂ ಒಂದು ಉತ್ತಮವಾದ ಅಶ್ವರೂಪವನ್ನು ಧರಿಸಿ ಸರಣ್ಯೂವನ್ನು ಹುಡುಕುತ್ತಾ ಅವಳ ಬಳಿಗೆ ಹೋದನು. ಸರಣ್ಯೂವು ಅಶ್ವರೂಪದಿಂದಿದ್ದ ವಿವಸ್ವಂತನನ್ನು ತನ್ನ ಪತಿಯೆಂದೇ ತಿಳಿದು ಅವನೊಡನೆ ಸಂಭೋಗಿಸಲು ಉದ್ಯುಕ್ತಳಾದಳು. ವಿವಸ್ವಂತನೂ ಅವಳೊಡನೆ ಕ್ರೀಡಿಸಿದನು.

**ತತಸ್ತಯೋಸ್ತು ವೇಗೇನ ಶುಕ್ರಂ ತದಪತದ್ಭುವಿ ।**
**ಉಪಾಜಿಘ್ರಚ್ಚ ಸಾ ತ್ವಶ್ವಾ ತಚ್ಛುಕ್ರಂ ಗರ್ಭಕಾಮ್ಯಯಾ ॥ ೫ ॥**
**ಆಘ್ರಾತಮಾತ್ರಾಚ್ಛುಕ್ರಾತ್ತು ಕುಮಾರೌ ಸಂಬಭೂವತುಃ ।**
**ನಾಸತ್ಯಶ್ಚೈವ ದಸ್ರಶ್ಚ ಯೌ ಸ್ತುತಾವಶ್ವಿನಾವಿತಿ ॥ ೬ ॥**

ಅಶ್ವರೂಪಗಳನ್ನು ಧರಿಸಿದ್ದ ಸರಣ್ಯೂ ಮತ್ತು ವಿವಸ್ವಂತರು ಕ್ರೀಡಿಸುತ್ತಿರುವಾಗ ವಿವಸ್ವಂತನ ವೀರ್ಯವು ಸ್ಖಲನವಾಗಿ ಭೂಮಿಯಮೇಲೆ ಬಿದ್ದಿತು. ಅಶ್ವರೂಪಿಣಿಯಾದ ಸರಣ್ಯೂವು ತನಗೆ ಗರ್ಭೋತ್ಪತ್ತಿಯಾಗಬೇಕೆಂಬ ಇಚ್ಛೆಯಿಂದ ಭೂಮಿಯಮೇಲೆ ಬಿದ್ದಿದ್ದ ಆ ವೀರ್ಯವನ್ನು ಮೂಸಿನೋಡಿದಳು. ಮೂಸಿನೋಡಿದ ಮಾತ್ರದಿಂದಲೇ ಅವಳಲ್ಲಿ ಈರ್ವರು ಅವಳಿಮಕ್ಕಳು ಜನಿಸಿದರು. ಅವರಲ್ಲಿ ಒಬ್ಬನು ನಾಸತ್ಯನೆಂದೂ ಇನ್ನೊಬ್ಬನು ದಸ್ರನೆಂದೂ ಪ್ರಸಿದ್ಧರಾಗಿ ಅಶ್ವಿನೀದೇವತೆಗಳೆಂದು ಜನರಿಂದ ಸ್ತುತಿಸಲ್ಪಡುತ್ತಿರುವರು.

**ಇತಿಹಾಸಮಿಮಂ ಯಾಸ್ಕಃ ಸರಣ್ಯೂದೇವತೇ ದ್ವ್ಯೃಚೇ ।**
**ವಿವಸ್ವತಶ್ಚ ತ್ವಷ್ಟುಶ್ಚ ತ್ವಷ್ಟೇತಿ ಸಹ ಮನ್ಯತೇ ॥ ೭ ॥**

ಮೇಲೆ ಹೇಳಿದ ಈ ಇತಿಹಾಸವನ್ನು ಯಾಸ್ಕರು ತಮ್ಮ ನಿರುಕ್ತದಲ್ಲಿ (ನಿ. ೧೨-೧೧) ವಿವರಿಸಿರುವರು. ಅಲ್ಲಿ ತ್ವಷ್ಟಾ ದುಹಿತ್ರೇ ಎಂಬ ಸೂಕ್ತದ (ಋ. ಸಂ. ೧೦-೧೭) ಮೊದಲಿನ ಎರಡು ಋಕ್ಕುಗಳಲ್ಲಿ ವಿವಸ್ವಂತನಿಗೂ, ತ್ವಷ್ಟೃಪುತ್ರಿಯಾದ ಸರಣ್ಯೂದೇವಿಗೂ ಸಂಬಂಧಪಟ್ಟ ವಿಷಯವರ್ಣನೆ ಇದೆ.

**ಪೂಷೇತಿ ಪಾದೌ ಪೌಷ್ಣೌ ದ್ವಾವಾಗ್ನೇಯಾವುತ್ತರೌ ತು ಯೌ ।**
**ಸ್ಯಾತ್ತೃತೀಯೋಽಪಿ ವಾ ಪೌಷ್ಣಂ ತಿಸ್ರಶ್ಚಾನ್ಯಾಃ ಪರಾಸ್ತು ಯಾಃ ॥ ೮ ॥**

ಮೇಲೆ ಹೇಳಿದ ತ್ವಷ್ಟಾ ದುಹಿತ್ರೇ ಎಂಬ ಸೂಕ್ತದ ಮೂರನೆಯ ಋಕ್ಕಿನ ಪೂರ್ವಾರ್ಧದ ಎರಡು ಪಾದಗಳಿಗೆ ಪೂಷನು ದೇವತೆಯು; ಉತ್ತರಾರ್ಧದ ಎರಡು ಪಾದಗಳಿಗೆ ಅಗ್ನಿಯು ದೇವತೆಯು; ಅಥವಾ ಮೂರನೆಯ ಪಾದಕ್ಕೆ ಪೂಷನೇ ದೇವತೆಯಾಗಬಹುದು ಮತ್ತು ಅಲ್ಲಿಂದ ಮುಂದಿನ ಮೂರು ಋಕ್ಕುಗಳಿಗೂ (೪-೬ ಋಕ್ಕುಗಳು) ಪೂಷನೇ ದೇವತೆಯು.

**ಅಪಾಂ ಸ್ತುತಿಸ್ತ್ವೃಗತ್ರ್ಯೃಕಾ ತೃಚಾತ್ಸಾರಸ್ವತಾತ್ಪರಾ ।**
**ಸ್ತುತಃ ಪರೋಕ್ಷಃ ಸೋಮಸ್ತು ದ್ರಪ್ಸ ಇತ್ಯುತ್ತರೇ ತೃಚೇ ॥ ೯ ॥**
**ಅಬ್ದೇವತಾಶೀರ್ವಾದೋ ವಾ ಪಯಸ್ವತ್ಯುತ್ತರಾ ತು ಯಾ ।**

(ಬೃ. ದೇ. ಅಧ್ಯಾ. ೭-೧ ರಿಂದ ೯)

ಅಲ್ಲಿಂದ ಮುಂದಿನ (೭-೯ ಋಕ್ಕುಗಳು) ಸರಸ್ವತೀದೇವತಾಕವಾದ ಮೂರು ಋಕ್ಕುಗಳಾದನಂತರ ೧೦ ನೆಯ ಋಕ್ಕು ಅಬ್ದೇವತಾಪರವಾದುದು. ಅಲ್ಲಿಂದ ಮುಂದಿನ ಮೂರು ಋಕ್ಕುಗಳಲ್ಲಿ (೧೧-೧೩ ಋಕ್ಕುಗಳಲ್ಲಿ) ಅಬ್ದೇವತೆಯ ಸ್ತುತಿಯಿದ್ದರೂ ಪರೋಕ್ಷವಾಗಿ ಸೋಮದೇವತೆಯ ಸ್ತುತಿ ಇರುವುದು. ಹದಿನಾಲ್ಕನೆಯ ಋಕ್ಕಾದ **ಪಯಸ್ವತೀಃ** ಎಂಬ ಕೊನೆಯ ಋಕ್ಕಿನಲ್ಲಿ ಅಬ್ದೇವತಾಶೀರ್ವಾದವು ಉಕ್ತವಾಗಿರುವುದು, ಎಂಬ ವಿವರಣೆ ಇದೆ.

॥ ಸಾಯಣಭಾಷ್ಯಂ ॥

**ದ್ವಿತೀಯೇಽನುವಾಕೇ ತ್ರಯೋದಶ ಸೂಕ್ತಾನಿ। ತತ್ರ ತ್ವಷ್ಟಾ ದುಹಿತ್ರ ಇತ್ಯೇತಚ್ಚತುರ್ದಶರ್ಚಂ ಪ್ರಥಮಂ ಸೂಕ್ತಂ। ಯಮಪುತ್ರೋ ದೇವಶ್ರವಾ ನಾಮರ್ಷಿಃ। ಆದಿತೋ ದ್ವಾದಶ ತ್ರಿಷ್ಟುಭಃ। ತ್ರಯೋದಶೀಚತುರ್ದಶ್ಯಾವನುಷ್ಟುಭೌ। ಯದ್ವಾ ತ್ರಯೋದಶೀ ಪುರಸ್ತಾದ್ಬೃಹತೀ। ಆದಿತೋ ದ್ವಯೋಃ ಸರಣ್ಯೂರ್ದೇವತಾ। ಪೂಷಾ ತ್ವೇತ ಇತ್ಯಾದ್ಯಾಶ್ಚತಸ್ರಃ ಪೂಷದೇವತ್ಯಾಃ। ಸರಸ್ವತೀಂ ದೇವಯಂತ ಇತ್ಯಾದ್ಯಾಸ್ತಿಸ್ರಃ ಸರಸ್ವತೀದೇವತಾಕಾಃ। ಆಪೋ ಅಸ್ಮಾನಿತ್ಯಾದ್ಯಾಃ ಪಂಚರ್ಚೋಽಬ್ದೇವತಾಕಾಃ। ತತ್ರ ದ್ರಪ್ಸಶ್ಚಸ್ಕಂದೇತ್ಯಾದ್ಯಾಸ್ತಿಸ್ರಃ ಸೋಮದೇವತ್ಯಾ ವಾ। ಅಥ ಚಾನುಕ್ರಾಂತಂ। ತ್ವಷ್ಟಾ ದೇವಶ್ರವಾ ದ್ವೇ ಸರಣ್ಯೂದೇವತೇ ಪೌಷ್ಣ್ಯಶ್ಚತಸ್ರಃ ಸಾರಸ್ವತ್ಯಸ್ತಿಸ್ರಃ ಪಂಚಾಪ್ಯೋ ದ್ರಪ್ಸಸ್ತಿಸ್ರಃ ಸೌಮ್ಯೋ ವಾಂತ್ಯೇ ಅನುಷ್ಟುಭಾವುಪಾಂತ್ಯಾ ಪುರಸ್ತಾದ್ಬೃಹತೀ ವೇತಿ। ಗತಃ ಸೂಕ್ತವಿನಿಯೋಗಃ॥ ಅತ್ರೇತಿಹಾಸಮಾಚಕ್ಷತೇ। ತ್ವಷ್ಟೃನಾಮಕಸ್ಯ ದೇವಸ್ಯ ಸರಣ್ಯೂಸ್ತ್ರಿಶಿರಾಶ್ಚೇತಿ ಸ್ತ್ರೀಪುಂಸಾತ್ಮಕಮಪತ್ಯದ್ವಯಮಭೂತ್। ತತಸ್ತ್ವಷ್ಟಾ ಸರಣ್ಯೂನಾಮಿಕಾಂ ಪುತ್ರೀಂ ವಿವಸ್ವತೇ ಪ್ರಾಯಚ್ಛತ್। ತತಸ್ತಸ್ಯಾಂ ವಿವಸ್ವತಃ ಸಕಾಶಾದ್ಯಮಯಮೌ ವಿಜಜ್ಞಾತೇ। ತತಃ ಕದಾಚಿದಾತ್ಮಸದೃಶ್ಯಾ ದೇವಜನಿತಾಯಾಃ ಸ್ತ್ರಿಯಃ ಸಮೀಪೇ ತದಪತ್ಯದ್ವಯಂ ನಿಧಾಯ ಸ್ವಯಮಾಶ್ವಂ ರೂಪಂ ಕೃತ್ವೋತ್ತರಾನ್ಕುರೂನ್ಪ್ರತಿಜಗಾಮ। ಅಥ ವಿವಸ್ವಾನೇತಾಂ ಸ್ತ್ರಿಯಂ ಸರಣ್ಯೂಮಿತಿ ಮತ್ವಾ ತಾಮರಂಸೀತ್। ತಸ್ಯಾಂ ಮನುರ್ನಾಮ ರಾಜರ್ಷಿರಜಾಯತ। ತತೋ ವಿವಸ್ವಾನೇಷಾ ಸರಣ್ಯೂರ್ನ ಭವತೀತಿ ವಿಜ್ಞಾಯ ಸ್ವಯಮಪ್ಯಶ್ವೋ ಭೂತ್ವಾ ತಾಮಶ್ವರೂಪಿಣೀಂ ಪ್ರಾಯಾಸೀತ್। ತತಃ ಸಂಕ್ರೀಡಮಾನಯೋಸ್ತಯೋಃ ಸ್ವಭೂತಂ ರೇತಃ ಪೃಥಿವ್ಯಾಂ ಪಪಾತ। ಅಥ ಸಾ ಗರ್ಭಕಾಮನಯಾ ತತ್ಪತಿತಂ ರೇತ ಆಜಘ್ರೌ। ತತಸ್ತಸ್ಯಾಃ ಸಕಾಶಾನ್ನಾಸತ್ಯೋ ದಸ್ರಶ್ಚೇತ್ಯುಭಾವಶ್ವಿನಾವಜಾಯೇತಾಮಿತಿ॥**

ಅನುವಾದವು—ಹತ್ತನೆಯ ಮಂಡಲದ ಎರಡನೆಯ ಅನುವಾಕದಲ್ಲಿ ಹದಿಮೂರು ಸೂಕ್ತಗಳಿರುವುವು. ಅವುಗಳಲ್ಲಿ **ತ್ವಷ್ಟಾ ದುಹಿತ್ರೇ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಯಮನ ಪುತ್ರನಾದ ದೇವಶ್ರವಾಃ ಎಂಬುವನು ಋಷಿಯು. ಆ ಸೂಕ್ತದ ಮೊದಲಿನ ಹನ್ನೆರಡು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಹದಿಮೂರು, ಹದಿನಾಲ್ಕನೆಯ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಅಥವಾ ಹದಿಮೂರನೆಯ ಋಕ್ಕು ಪುರಸ್ತಾದ್ಬೃಹತೀಛಂದಸ್ಕವು. ಈ ಸೂಕ್ತದ ಮೊದಲಿನ ಎರಡು ಋಕ್ಕುಗಳಿಗೆ ಸರಣ್ಯೂ ಎಂಬ ಸ್ತ್ರೀಯು ದೇವತೆಯು; **ಪೂಷಾ ತ್ವೇತಃ** ಎಂಬ ಋಕ್ಕಿನಿಂದ ಮುಂದಿನ ನಾಲ್ಕು ಋಕ್ಕುಗಳು (೩–೬ ಋಕ್ಕುಗಳ) ಪೂಷದೇವತಾಕವು; **ಸರಸ್ವತೀಂ ದೇವಯಂತಃ** ಎಂದು ಮೊದಲಾಗುವ ಮುಂದಿನ ಮೂರು ಋಕ್ಕುಗಳು (೭–೯ ಋಕ್ಕುಗಳು) ಸರಸ್ವತೀ ದೇವತಾಕವು; **ಆಪೋ ಅಸ್ಮಾನ್** ಎಂದು ಮೊದಲಾಗುವ ಮುಂದಿನ ಐದು ಋಕ್ಕುಗಳು (೧೦–೧೪ ಋಕ್ಕುಗಳು) ಅಬ್ದೇವತಾಕವು. ಅವುಗಳಲ್ಲಿ **ದ್ರಪ್ಸಶ್ಚಸ್ಕಂದ** ಎಂದು ಮೊದಲಾಗುವ ಮೂರು ಋಕ್ಕುಗಳು (೧೧-೧೩) ಋಕ್ಕುಗಳು ಅಬ್ದೇವತಾಕವು ಅಥವಾ ಸೋಮದೇವತಾಕವು. ಅನುಕ್ರಮಣಿಕೆಯಲ್ಲಿ—**ತ್ವಷ್ಟಾ ದೇವಶ್ರವಾ ದ್ವೇ ಸರಣ್ಯೂದೇವತೇ ಪೌಷ್ಣ್ಯಶ್ಚತಸ್ರಃ ಸಾರಸ್ವತ್ಯಸ್ತಿಸ್ರಃ ಪಂಚಾಪ್ಯೋ ದ್ರಪ್ಸಸ್ತಿಸ್ರಃ ಸೌಮ್ಯೋ ವಾಂತ್ಯೇ ಅನುಷ್ಟುಭಾವುಪಾಂತ್ಯಾ ಪುರಸ್ತಾದ್ಬೃಹತೀ ವಾ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಈ ಸೂಕ್ತದ ವಿಷಯದಲ್ಲಿ ಒಂದು ಇತಿಹಾಸವಿರುವುದು—ತ್ವಷ್ಟೃ ಎಂಬ ಹೆಸರಿನ ದೇವನಿಗೆ ಸರಣ್ಯೂ ಎಂಬ ಪುತ್ರಿಯೂ, ತ್ರಿಶಿರಾಃ ಎಂಬ ಮಗನೂ ಅಂತು ಇಬ್ಬರು ಮಕ್ಕಳಿದ್ದರು. ಹೀಗಿರುವಲ್ಲಿ ತ್ವಷ್ಟೃವು ಸರಣ್ಯೂ ಎಂಬ ತನ್ನ ಮಗಳನ್ನು ವಿವಸ್ವಂತನಿಗೆ ಮದುವೆಮಾಡಿಕೊಟ್ಟನು. ಈ ಸರಣ್ಯೂ ಮತ್ತು ವಿವಸ್ವಾನ್ ಎಂಬ ದಂಪತಿಗಳಿಗೆ ಇಬ್ಬರು ಅವಳೀ ಮಕ್ಕಳು ಎಂದರೆ ಯಮ ಎಂಬ ಪುತ್ರನೂ, ಯಮೀ ಎಂಬ ಪುತ್ರಿಯೂ ಹುಟ್ಟಿದರು. ಹೀಗಿರುವಲ್ಲಿ ಒಂದಾನೊಂದು ದಿವಸ ಸರಣ್ಯೂವು ತನ್ನಂತೆಯೇ ಇರುವ ಓರ್ವ ದೇವತಾಸ್ತ್ರೀಯ ಸಮೀಪದಲ್ಲಿ ಈ ಇಬ್ಬರು ಅವಳೀಮಕ್ಕಳನ್ನು ಇರಿಸಿ ತಾನು ಅಶ್ವರೂಪವನ್ನು ಧರಿಸಿ ಉತ್ತರಕುರು ದೇಶಕ್ಕೆ ಹೊರಟುಹೋದಳು. ಆ ಬಳಿಕ ವಿವಸ್ವಂತನು ಆ ದೇವತಾಸ್ತ್ರೀಯನ್ನೇ ತನ್ನ ಪತ್ನಿಯಾದ ಸರಣ್ಯೂದೇವಿಯೆಂದು ತಿಳಿದು ಅವಳಲ್ಲಿ ರಮಿಸಿದನು. ಆಗ ಆ ಸರಣ್ಯೂವಿನಲ್ಲಿ ಮನು ಎಂಬ ಹೆಸರಿನ ರಾಜರ್ಷಿಯು ಹುಟ್ಟಿದನು. ಅನಂತರ ವಿವಸ್ವಂತನಿಗೆ, ಈ ಸ್ತ್ರೀಯು ತನ್ನ ಪತ್ನಿಯಾದ ಸರಣ್ಯೂ ಅಲ್ಲವೆಂದು ತಿಳಿಯಿತು. ಆಗ ವಿವಸ್ವಂತನು ಅಶ್ವರೂಪವನ್ನು ಧರಿಸಿ ತನ್ನಂತೆಯೇ ಅಶ್ವರೂಪಿಣಿಯಾಗಿದ್ದ ಸರಣ್ಯೂವಿನ ಸಮೀಪಕ್ಕೆ ಹೋದನು. ಆಗ ಅಶ್ವರೂಪಿಗಳಾಗಿದ್ದ ಇವರಿಬ್ಬರೂ ರತಿಕ್ರೀಡೆಯಲ್ಲಿ ಆಸಕ್ತರಾಗಿದ್ದಾಗ ವಿವಸ್ವಂತನ ರೇತಸ್ಸು ಭೂಮಿಯಲ್ಲಿ ಬಿದ್ದಿತು. ಆಗ ಅಶ್ವರೂಪಿಣಿಯಾಗಿದ್ದ ಆ ಸ್ತ್ರೀಯು ತನಗೆ ಮಕ್ಕಳಾಗಬೇಕೆಂಬ ಆಸೆಯಿಂದ ಕೆಳಗೆ ಬಿದ್ದಿದ್ದ ಆ ರೇತಸ್ಸನ್ನು ಮೂಸಿನೋಡಿದಳು. ಅದರಿಂದ ಅವಳಲ್ಲಿ ನಾಸತ್ಯ, ದಸ್ರ ಎಂಬ ಇಬ್ಬರು ಅಶ್ವಿನೀದೇವತೆಗಳು ಉತ್ಪನ್ನರಾದರು ಎಂಬ ಕಥೆಯನ್ನು ಈ ಸಂದರ್ಭದಲ್ಲಿ ಭಾಷ್ಯಕಾರರು ಹೇಳಿದಾರೆ.

## ಸೂಕ್ತ—೧೭

ಮಂಡಲ—೧೦ ॥ ಅನುವಾಕ—೨॥ ಸೂಕ್ತ—೧೭ ॥
ಅಷ್ಟಕ—೭ ॥ ಅಧ್ಯಾಯ ೬ ॥ ವರ್ಗ—೨೯, ೩೦, ೩೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ॥
ಋಷಿಃ—ದೇವಶ್ರವಾ ಯಾಮಾಯನಃ ॥
ದೇವತಾ—೧, ೨. ಸರಣ್ಯೂಃ । ೩-೬. ಪೂಷಾ । ೭-೯. ಸರಸ್ವತೀ । ೧೦-೧೪. ಆಪಃ ; ೧೧-೧೩. ಆಪಃ ಸೋಮೋ ವಾ ॥
ಛಂದಃ—೧-೧೨, ತ್ರಿಷ್ಟುಪ್ । ೧೩. ಅನುಷ್ಟುಪ್ಪುರಸ್ತಾದ್ಬೃಹತೀ ವಾ । ೧೪. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ ।
ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ॥ ೧ ॥

॥ ಪದಪಾಠಃ ॥

ತ್ವಷ್ಟಾ । ದುಹಿತ್ರೇ । ವಹತುಂ । ಕೃಣೋತಿ । ಇತಿ । ಇದಂ । ವಿಶ್ವಂ । ಭುವನಂ । ಸಂ । ಏತಿ ।
ಯಮಸ್ಯ । ಮಾತಾ । ಪರಿಽಉಹ್ಯಮಾನಾ । ಮಹಃ । ಜಾಯಾ । ವಿವಸ್ವತಃ । ನನಾಶ ॥ ೧ ॥

॥ ಸಾಯಣಭಾಷ್ಯಂ ॥

ತ್ವಷ್ಟೈತನ್ನಾಮಕೋ ದೇವೋ ದುಹಿತ್ರೇ । ಷಷ್ಠ್ಯರ್ಥೇ ಚತುರ್ಥೀ । ದುಹಿತುಃ ಸರಣ್ಯೂನಾಮಿಕಾಯಾ ವಹತುಂ ವಹನಂ ವಿವಾಹಂ ॥ ವಹಿವಹ್ಯೋಶ್ಚತುಃ । ಉ. ೧-೭೯ । ಇತಿ ವಹೇಶ್ಚತುಪ್ರತ್ಯಯಃ ॥ ತಂ ಕೃಣೋತಿ । ಕರೋತಿ । ಇತ್ಯೇತೇನ ಹೇತುನೇದಂ ವಿಶ್ವಂ ಸರ್ವಂ ಭುವನಂ ಭೂತಜಾತಂ ಸಮೇತಿ । ತಂ ವಿವಾಹಂ ಸಮಾಗಮತ್ । ಪರ್ಯುಹ್ಯಮಾನಾ ವಿವಸ್ವತೋಽದ್ಯೋಢವ್ಯಾ ಯಮಸ್ಯ ಯಮ್ಯಾಶ್ಚ ಮಾತಾ ಮಹೋ ಮಹತೋ ವಿವಸ್ವತೋ ಜಾಯಾ ಭಾರ್ಯಾ ಸರಣ್ಯೂರ್ನನಾಶ। ಉತ್ತರಾಸ್ಕರೂಪ್ಸ್ಪ್ರತಿ ನಷ್ಟಾ । ಅಗಚ್ಛದಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ತ್ವಷ್ಟಾ**—ತ್ವಷ್ಟೃನಾಮಕನಾದ ದೇವನು । **ದುಹಿತ್ರೇ**—ತನ್ನ ಮಗಳಾದ ಸರಣ್ಯೂವಿಗೆ । **ವಹತುಂ**—ವಿವಾಹವನ್ನು । **ಕೃಣೋತಿ**—ನೆರವೇರಿಸುತ್ತಾನೆ । **ಇತಿ**—ಎಂಬ ನಿಮಿತ್ತವಾಗಿ । **ಇದಂ ವಿಶ್ವಂ ಭುವನಂ**—ಈ ಸಕಲಭೂತಜಾತವೂ । **ಸಮೇತಿ**—ಒಂದುಗೂಡುತ್ತವೆ । **ಪರ್ಯುಹ್ಯಮಾನಾ**—ವಿವಸ್ವಂತನಿಂದ ಕೊಡಲ್ಪಡತಕ್ಕವಳೂ । **ಯಮಸ್ಯ**—ಯಮನಿಗೆ । **ಮಾತಾ**—ಮಾತೆಯೂ । **ಮಹಃ**—ಮಹಾತ್ಮನಾದ । **ವಿವಸ್ವತಃ**—ವಿವಸ್ವಂತನ । **ಜಾಯಾ**—ಭಾರ್ಯೆಯೂ ಆದ ಸರಣ್ಯೂವು । **ನನಾಶ**—ಅದೃಶ್ಯಳಾದಳು.

॥ ಭಾವಾರ್ಥ ॥

ತ್ವಷ್ಟೃನಾಮಕನಾದ ದೇವನು ತನ್ನ ಮಗಳಾದ ಸರಣ್ಯೂವಿಗೆ ವಿವಾಹವನ್ನು ನೆರವೇರಿಸುತ್ತಾನೆ ಎಂಬ ಸಮಾಚಾರವನ್ನು ಕೇಳಿ ಸಕಲ ಭೂತಜಾತವೂ ಒಂದುಗೂಡಿದವು. ಆದರೆ, ವಿವಾಹಕ್ಕೆ ಸಿದ್ಧಳಾಗಬೇಕಾದವಳೂ, ಯಮನಿಗೆ ಮಾತೆಯೂ, ಮಹಾತ್ಮನಾದ ವಿವಸ್ವಂತನ ಭಾರ್ಯೆಯೂ ಆದ ಸರಣ್ಯೂವು ಅದೃಶ್ಯಳಾದಳು.

## English Translation

Twashtri celebrates the marriage of his daughter : therefore the whole world is assembled ; but the mother of Yama, the newly-married-wife of the mighty Vivaswat, disappeared.

॥ ವಿಶೇಷವಿಷಯಗಳು ॥

ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದಾರೆ—

**ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ ।**
**ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ॥**

(ಋ. ಸಂ. ೧೦-೧೭-೧)

**ತ್ವಷ್ಟಾ ದುಹಿತುರ್ವಹನಂ ಕರೋತೀತೀದಂ ವಿಶ್ವಂ ಭುವನಂ ಸಮೇತೀಮಾನಿ ಚ ಸರ್ವಾಣಿ ಭೂತಾನ್ಯಭಿಸಮಾಗಚ್ಛಂತಿ ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹತೋ ಜಾಯಾ ವಿವಸ್ವತೋ ನನಾಶ ರಾತ್ರಿರಾದಿತ್ಯಸ್ಯಾದಿತ್ಯೋದಯೇಽನ್ತರ್ಧೀಯತೇ ॥**

(ನಿ. ೧೨-೧೧)

ಈ ಋಕ್ಕಿಗೆ ಯಾಸ್ಕರು ತ್ವಷ್ಟೃಪಕ್ಷದಲ್ಲಿ ಮತ್ತು ಆದಿತ್ಯಪಕ್ಷದಲ್ಲಿ ಎಂದು ಎರಡುವಿಧ ಅರ್ಥವಿವರಣೆಮಾಡಿದಾರೆ. ತ್ವಷ್ಟೃಪಕ್ಷದಲ್ಲಿ—

ಇಲ್ಲಿ ತ್ವಷ್ಟೃವೆಂದರೆ ಸರ್ವವನ್ನೂ ಸೃಷ್ಟಿಮಾಡುವ ವಿಶ್ವಕರ್ಮನು, ಪ್ರಜಾಪತಿಯು ಎಂದು ಹೇಳಿದಾರೆ. ಈ ತ್ವಷ್ಟೃಪ್ರಜಾಪತಿಯು ತನ್ನ ಮಗಳಾದ ಸರಣ್ಯೂದೇವಿಯನ್ನು ವಿವಸ್ವಂತನಿಗೆ ಮದುವೆಮಾಡಿಕೊಡಬೇಕೆಂದು ಪ್ರಯತ್ನಿಸಿದಾಗ ಈ ಜಗತ್ತಿನಲ್ಲಿರುವ ಸಮಸ್ತ ಭೂತಜಾತಗಳೂ (ದೇವತೆಗಳು, ಮನುಷ್ಯರು, ಪ್ರಾಣಿಗಳು ಮೊದಲಾಗಿ ಸರ್ವರೂ ಸಹ) ಆ ವಿವಾಹವನ್ನು ನೋಡುವುದಕ್ಕಾಗಿ ಒಂದುಕಡೆ ಎಂದರೆ ವಿವಾಹಮಂಟಪದಲ್ಲಿ ಸೇರಿದರು. ವಿವಾಹಕಾಲದಲ್ಲಿ ಈರೀತಿ ಬಂಧುಬಾಂಧವರೂ, ಇತರರೂ ಸಂತೋಷಾರ್ಥವಾಗಿ ಒಟ್ಟಿಗೆ ಸೇರುವುದು ಸ್ವಭಾವವೇ ಆಗಿದೆ. ಆಗ ಎಂದರೆ ವಿವಾಹವಾದನಂತರ ಯಮನ ತಾಯಿಯೂ ಮಹನೀಯನಾದ ವಿವಸ್ವಂತನ ಭಾರ್ಯೆಯೂ ಆದ ಸರಣ್ಯೂದೇವಿಯು ಎಲ್ಲಿಯೋ ಅದೃಶ್ಯಳಾದಳು ಎಂದರೆ ತನ್ನ ಸ್ಥಳದಲ್ಲಿ ತನಗೆ ಬದಲಾಗಿ ಓರ್ವ ದೇವತಾ ಸ್ತ್ರೀಯನ್ನು ನಿರ್ಮಿಸಿ ಅಲ್ಲಿಟ್ಟು ತಾನು ಅಶ್ವರೂಪವನ್ನು ಧರಿಸಿ ಹೊರಟುಹೋದಳು ಎಂದಭಿಪ್ರಾಯವು.

ನೈರುಕ್ತಪಕ್ಷ ಅಥವಾ ಆದಿತ್ಯಪಕ್ಷದಲ್ಲಿ—ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು ಈ ಋಕ್ಕಿಗೆ ಆದಿತ್ಯನ ಪರವಾಗಿ ಬರೆದಿರುವ ಭಾಷ್ಯವನ್ನೂ ವಿವರಣೆಯನ್ನೂ ಕೆಳಗೆ ವಿವರಿಸಿದೇವೆ—

**ತ್ವಷ್ಟಾ ಮಧ್ಯಮಃ ತಮೋಭಾಗಸ್ಯ ಉಷಸಃ ದುಹಿತ್ರೇ ದುಹಿತುಃ ದೂರೇ ಹಿತಾಯಾಃ ಪ್ರಕಾಶರೂಪಾಯಾಃ ವಹತುಂ ವಹನಂ ವಿವಸ್ವತಃ ಕರೋತಿ । ಇದಂ ವಿಶ್ವಂ ಭುವನಂ ಸಮೇತಿ । ಪ್ರಭಾತಮಿತಿ ಮತ್ವಾ ಸರ್ವಾಣಿ ಭೂತಾನಿ ಸ್ವಾಸು ಸ್ವಾಸ್ವಿತಿ ಕರ್ತವ್ಯತಾಸು**

**ಅಭಿಸಮಾಗಚ್ಛಂತಿ । ಯಮಸ್ಯ ಮಾತಾ ಪರ್ಯುಹ್ಯಮಾನಾ–ಯಮಸ್ಯ ಮಧ್ಯಮಸ್ಯ ಮಾತಾ ದೇವಧರ್ಮೇಣ ಅಥವಾ ದ್ಯುಸ್ಥಾನಸ್ಯ ಯೈವ ಜಾಯಾ ಸಾ ಮಾತೇತಿ । ಜಾಯತೇಽಸ್ಯಾಂ ಪುತ್ರತ್ವೇನ ಪತಿಃ ಜಾಯಾ ಭಾರ್ಯಾ। ಮಹತೋ ವಿವಸ್ವತಃ ಪ್ರಕಾಶೇನ ಪ್ರೋತ್ಸಾರ್ಯಮಾಣಾ ನನಾಶ ನಶ್ಯತಿ । ಸಂಕ್ಷೇಪತೋ ಭಾಷ್ಯಕಾರೋಽರ್ಥಂ ನಿರಾಹ– ರಾತ್ರಿರಾದಿತ್ಯಸ್ಯ । ಉಷಾ ಜಾಯಾ ಸಾ ಆದಿತ್ಯಸ್ಯೋದಯೇಽನ್ತರ್ಧೀಯತೇ ಇತಿ ॥**

(ನಿ. ಭಾಷ್ಯ.)

ಎಂದರೆ, ಇಲ್ಲಿ ತ್ವಷ್ಟಾ ಎಂದರೆ ಮಧ್ಯಸ್ಥಾನದೇವತೆ, ಸೂರ್ಯ ಅಥವಾ ಆದಿತ್ಯನು **ದುಹಿತ್ರೇ ವಹತುಂ** ಎಂದರೆ ದೂರದಲ್ಲಿರುವ (ಸೂರ್ಯನು) ಪ್ರಕಾಶವನ್ನು ವಹಿಸುವುದಕ್ಕೆ ಅಥವಾ ಸುತ್ತಲೂ ಬೀರುವುದಕ್ಕೆ ; ರಾತ್ರಿಯ ಕೊನೆಯಭಾಗದಲ್ಲಿ ಉಷಃಕಾಲವು ಪ್ರಾರಂಭವಾಗುವಾಗ ಇರುವ ಕತ್ತಲೆಯನ್ನು ಹೋಗಲಾಡಿಸಲು ದೂರದಲ್ಲಿ ಸೂರ್ಯನು ಉದಯಿಸುತ್ತಿರುವುದನ್ನು ಲೋಕದಲ್ಲಿರುವ ಸಮಸ್ತ ಪ್ರಾಣಿಗಳೂ ನೋಡಿ, ಈಗ ಕತ್ತಲೆಯು ನಾಶವಾಗಿ ಪ್ರಾತಃಕಾಲವು ಆಗಿದೆಯೆಂದು ತಿಳಿದು ತಮ್ಮತಮ್ಮ ವ್ಯವಹಾರಗಳಲ್ಲಿ ತೊಡಗುವರು. **ಯಮಸ್ಯ ಮಾತಾ ಪರ್ಯುಹ್ಯಮಾನಾ**—ಯಮ ಅಥವಾ ಮಧ್ಯಮದೇವತೆಯಾದ ಆದಿತ್ಯನ ತಾಯಿಯಾದ ದ್ಯುಲೋಕವು (ಅಂತರಿಕ್ಷವು) ಅಥವಾ **ಆತ್ಮಾ ವೈ ಪುತ್ರನಾಮಾಸಿ** ಎಂಬ ಶ್ರುತಿವಾಕ್ಯದಲ್ಲಿ ಹೇಳಿರುವಂತೆ ತಾನೇ ತನ್ನ ಅಂಶರೂಪ ದಿಂದ ತನ್ನ ಪತ್ನಿಯಲ್ಲಿ ಪುತ್ರನಾಗಿ ಹುಟ್ಟುವುದರಿಂದ ಪತ್ನಿಗೆ ಜಾಯಾ ಎಂಬ ಹೆಸರು. ಆದ್ದರಿಂದ ರಾತ್ರಿಯೇ ಅಥವಾ ಉಷಸ್ಸೇ ಸೂರ್ಯನ ಪತ್ನಿಯು. ಆ ರಾತ್ರಿಯಿಂದ (ರಾತ್ರಿಯು ಕಳೆದನಂತರ) ಸೂರ್ಯನು ಅಂಶರೂಪದಿಂದ ಹುಟ್ಟುವುದರಿಂದ ರಾತ್ರಿಯು ಸೂರ್ಯನಿಗೆ ಪತ್ನಿಯಾಯಿತು ಎಂದರೆ ರಾತ್ರಿಯು ಅಥವಾ ಉಷೋದೇವಿಯು ಸೂರ್ಯನ ಪತ್ನಿಯೆಂದು ಹೇಳಲ್ಪಡುವಳು. **ಜಾಯಾ ವಿವಸ್ವತೋ ನನಾಶ** ಎಂದರೆ **ರಾತ್ರಿರಾದಿತ್ಯಸ್ಯಾದಿತ್ಯೋದಯೇಽನ್ತರ್ಧೀಯತೇ** ಸೂರ್ಯನ ಪತ್ನಿಯಾದ ರಾತ್ರಿ ಅಥವಾ ಉಷಸ್ಸು ಸೂರ್ಯೋದಯಾನಂತರ ನಾಶವಾಗು ವುದು ಎಂದರೆ ಅದೃಶ್ಯವಾಗುವುದು ಎಂದು ಆದಿತ್ಯಪಕ್ಷದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ।
ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ॥ ೨ ॥

॥ ಪದಪಾಠಃ ॥

ಅಪ । ಅಗೂಹನ್ । ಅಮೃತಾಂ । ಮರ್ತ್ಯೇಭ್ಯಃ । ಕೃತ್ವೀ । ಸऽವರ್ಣಾಂ । ಅದದುಃ । ವಿವಸ್ವತೇ ।
ಉತ । ಅಶ್ವಿನೌ । ಅಭರತ್ । ಯತ್ । ತತ್ । ಆಸೀತ್ । ಅಜಹಾತ್ । ಊಂ ಇತಿ । ದ್ವಾ । ಮಿಥುನಾ ।
ಸರಣ್ಯೂಃ ॥ ೨ ॥

॥ ಸಾಯಣಭಾಷ್ಯಂ ॥

ಅಮೃತಾಂ ಮರಣಧರ್ಮರಹಿತಾಮೇತಾಂ ಸರಣ್ಯೂಂ ಮರ್ತ್ಯೇಭ್ಯೋ ಮನುಷ್ಯೇಭ್ಯಸ್ತದುತ್ಪತ್ತ್ಯರ್ಥಮಪಾಗೂಹನ್ । ಅಪಗೂಹಿತವಂತಃ । ಸಂಸ್ಕೃತವಂತಃ । ದೇವಾ ಉಪನೀತವಂತಃ ಇತ್ಯರ್ಥಃ । ಕಿಂಚ ಸವರ್ಣಾಂ ಸರಣ್ಯೂಸದೃಶೀಮನ್ಯಾಂ ಸ್ತ್ರಿಯಂ ಕೃತ್ವೀ ಕೃತ್ವಾ ತಸ್ಮೈ ವಿವಸ್ವತೇ ದೇವಾ ಅದದುಃ । ಪ್ರಾಯಚ್ಛನ್ । ಉತಾಪಿ ಚ ಸಾಶ್ವರೂಪಿಣೀ ಸರಣ್ಯೂಸ್ತದಾಶ್ವಿನಾವಭರತ್ । ಸ್ವೋದರೇ ಗರ್ಭಭೂತೌ ಧಾರಿತವತೀ । ಯದ್ಯದಾ ತಜ್ಜಾಯಾಪತಿಭ್ಯಾಮಶ್ವರೂಪಾತ್ಮನಾ ಸಂಭೋಗಕಾಲೇ ರೇತಃ ಪತಿತಮಾಸೀತ್ ತದಾಶ್ವಿನೌ ಜನಯಾಮಾಸೇತ್ಯರ್ಥಃ । ತಥಾ ಸರಣ್ಯೂಃ ಸರಣವತ್ಯೇತನ್ನಾಮಿಕಾ ದ್ವಾ ಮಿಥುನಾ ದ್ವೌ ಮಿಥುನೌ ಯಮಯಮ್ಯಾವಜಹಾತ್ । ತ್ಯಕ್ತವತೀ । ಜನಿತವತೀತ್ಯರ್ಥಃ । ಯದ್ವಾ । ಸರಣ್ಯೂರೇತನ್ನಾಮಿಕಾ ಮಧ್ಯಮಸ್ಥಾನಾ ದೇವತಾ ಮಧ್ಯಮಮಗ್ನಿಂ ಮಾಧ್ಯಮಿಕಾಂ ವಾಚಂ ಚೋತ್ಪಾದಿತವತೀ॥

॥ ಪ್ರತಿಪದಾರ್ಥ ॥

**ಅಮೃತಾಂ**—ಮರಣಧರ್ಮರಹಿತಳಾದ ಸರಣ್ಯೂವನ್ನು । **ಮರ್ತ್ಯೇಭ್ಯಃ**—ಮಾನವರಿಂದ । **ಅಪಾಗೂಹನ್**—ಮರೆಸಿ । **ಸವರ್ಣಾಂ**—ಅದೇ ರೂಪದ ಬೇರೊಂದು ಸ್ತ್ರೀಯನ್ನು । **ಕೃತ್ವೀ**—ಮಾಡಿ । **ವಿವಸ್ವತೇ**—ವಿವಸ್ವಂತನಿಗೆ । **ಅದದುಃ**—ದೇವತೆಗಳು ಕೊಟ್ಟರು । **ಉತ**—ಮತ್ತು । **ಯತ್**—ಯಾವಾಗ । **ತತ್ ಆಸೀತ್**—ಅಶ್ವರೂಪನಾದ ರೇತಃ ಪತನವಾಯಿತೋ ಆಗ । **ಅಶ್ವಿನೌ**—ಅಶ್ವಿನೀದೇವತೆಗಳನ್ನು । **ಅಭರತ್**—ಆ ಸ್ತ್ರೀಯು ಪಡೆದಳು । **ಸರಣ್ಯೂಃ**—ಸರಣ್ಯೂವು । **ದ್ವಾ ಮಿಥುನಾ**—ಯಮ ಮತ್ತು ಯಮಿಯನ್ನು । **ಅಜಹಾತ್**—ಪ್ರಸವಿಸಿದಳು.

॥ ಭಾವಾರ್ಥ ॥

ಮರಣರಹಿತಳಾದ ಸರಣ್ಯೂವನ್ನು ಮಾನವರಿಂದ ಮರೆಸಿ ಅದೇ ರೂಪದ ಬೇರೊಂದು ಸ್ತ್ರೀಯನ್ನು ಮಾಡಿ ವಿವಸ್ವಂತನಿಗೆ ದೇವತೆಗಳು ಕೊಟ್ಟರು. ಮತ್ತು ಯಾವಾಗ ಅಶ್ವರೂಪದ ರೇತಃ ಪತನವಾಯಿತೋ ಆಗ ಅಶ್ವಿನೀ ದೇವತೆಗಳನ್ನು ಆ ಸ್ತ್ರೀಯು ಪಡೆದಳು. ಸರಣ್ಯೂವು ಯಮ ಮತ್ತು ಯಮಿಯನ್ನು ಪಡೆದಳು.

## English Translation

The Gods concealing the immortal (Saranyu) for the sake of mortals and having formed a woman resembling her, gave her to Vivaswat. She bore the two Ashwins when this had happened, and then Saranyu gave birth to two twins.

॥ ವಿಶೇಷವಿಷಯಗಳು ॥

ಯಾಸ್ಕರು ಸರಣ್ಯೂಶಬ್ದದ ನಿರ್ವಚನವನ್ನು ವಿವರಿಸುವಾಗ ಈ ಋಕ್ಕಿಗೆ ನಿರುಕ್ತವನ್ನು ಹೇಳಿ ಸರಣ್ಯೂ ವಿಷಯವಾದ ಒಂದು ಇತಿಹಾಸವನ್ನು ಹೇಳಿದಾರೆ.

**ಸರಣ್ಯೂಃ । ಸರಣ್ಯೂಃ ಸರಣಾತ್ । ತಸ್ಯೈಷಾ ಭವತಿ । ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ । ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ**

ಮಿಥುನಾ ಸರಣ್ಯೂಃ ॥ (ಋ. ಸಂ. ೧೦-೧೭-೨) । ಅಪ್ಯಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇಽಪ್ಯಶ್ವಿನಾವಭರದ್ಯತ್ತದಾಸೀದಜಹಾದ್ವಾ ಮಿಥುನಾ ಸರಣ್ಯೂರ್ಮಧ್ಯಮಂ ಚ ಮಾಧ್ಯಮಿಕಾಂ ಚ ವಾಚಮಿತಿ ನೈರುಕ್ತಾಃ । ಯಮಂ ಚ ಯಮೀಂ ಚೇತ್ಯೈತಿಹಾಸಿಕಾಃ ॥

ತತ್ರೇತಿಹಾಸಮಾಚಕ್ಷತೇ–ತ್ವಾಷ್ಟ್ರೀ ಸರಣ್ಯೂರ್ವಿವಸ್ವತ ಆದಿತ್ಯಾದ್ಯಮೌ ಮಿಥುನೌ ಜನಯಾಂಚಕಾರ । ಸಾ ಸವರ್ಣಾಮನ್ಯಾಂ ಪ್ರತಿನಿಧಾಯಾಶ್ವಂ ರೂಪಂ ಕೃತ್ವಾ ಪ್ರದುದ್ರಾವ । ಸ ವಿವಸ್ವಾನಾದಿತ್ಯ ಆಶ್ವಮೇವ ರೂಪಂ ಕೃತ್ವಾ ತಾಮನುಸೃತ್ಯ ಸಂಬಭೂವ । ತತೋಽಶ್ವಿನೌ ಜಜ್ಞಾತೇ ಸವರ್ಣಾಯಾಂ ಮನುಃ

(ನಿ. ೧೨-೧೦)

ಚಲಿಸು ಎಂಬರ್ಥವುಳ್ಳ ಸೃ ಧಾತುವಿನಿಂದ ಸರಣ್ಯೂಶಬ್ದವು ನಿಷ್ಪನ್ನವಾಗಿದೆ. ಮುಂದುಮುಂದಕ್ಕೆ ಸರಿಯುವವಳು, ಚಲಿಸುತ್ತಿರುವವಳು ಎಂದು ಈ ಶಬ್ದದ ಅವಯವಾರ್ಥವು. ಈ ಶಬ್ದಪ್ರಯೋಗವಿರುವ **ಅಪಾಗೂಹನ್ನೆಂಬ** ಋಕ್ಕಿನ ನಿರ್ವಚನವು ಈರೀತಿ ಇದೆ—ಮರಣವಿಲ್ಲದ ಎಂದರೆ ನಾಶರಹಿತವಾದ ಆ ಸರಣ್ಯೂದೇವಿಯನ್ನು ಮನುಷ್ಯರ ಕಣ್ಣಿಗೆ ಕಾಣಿಸದಂತೆ ದೇವತೆಗಳು ಮರೆಮಾಡಿ ಅವಿಸಿಟ್ಟರು ಮತ್ತು ಅದೇ ರೂಪ ಮತ್ತು ಆಕಾರವುಳ್ಳ ಬೇರೊಬ್ಬ ಸ್ತ್ರೀಯನ್ನು ನಿರ್ಮಿಸಿ ಆದಿತ್ಯನಿಗೆ ಕೊಟ್ಟರು. ಈ ಕಾಲದಲ್ಲಿ ಎಂದರೆ ಸರಣ್ಯೂದೇವಿಯು ಅದೃಶ್ಯವಾದಾಗ (ಅಶ್ವರೂಪವನ್ನು ಧರಿಸಿ ಬೇರೆ ಪ್ರದೇಶದಲ್ಲಿದ್ದಾಗ ಅಶ್ವರೂಪಿಯಾದ ಆದಿತ್ಯನ (ವಿವಸ್ವಂತನ) ಸಂಭೋಗದ ಫಲವಾಗಿ) ಅಶ್ವಿನೀ ದೇವತೆಗಳನ್ನು ಪಡೆದಳು ಮತ್ತು ಹಿಂದೆ ತಾನು ಪಡೆದಿದ್ದ ಅವಳೀಮಕ್ಕಳಾದ ಯಮಯಮಿಯರನ್ನು ತ್ಯಜಿಸಿದಳು. ಇಲ್ಲಿ **ಮಿಥುನೌ** ಎಂಬ ಶಬ್ದಕ್ಕೆ ಎರಡು ವಿಧ ಅರ್ಥಮಾಡಿದಾರೆ. ಮಧ್ಯಮಸ್ಥಾನ ಎಂದರೆ ಅಂತರಿಕ್ಷಸ್ಥನಾದ ಇಂದ್ರ ಮತ್ತು ಅಂತರಿಕ್ಷಸ್ಥವಾದ ವಾಗ್ದೇವತೆ ಎಂದು ನಿರುಕ್ತಕಾರರ ಮತವು. ಯಮ ಮತ್ತು ಯಮೀ ಎಂದು ಇತಿಹಾಸಕಾರರ ಮತವು.

ಈ ವಿಷಯದಲ್ಲಿ ಒಂದು ಇತಿಹಾಸವಿರುವುದು—ತ್ವಷ್ಟೃಪುತ್ರಿಯಾದ ಸರಣ್ಯೂದೇವಿಯು ಆದಿತ್ಯನಿಂದ (ವಿವಸ್ವಂತನಿಂದ) ಯಮಯಮಿಯರೆಂಬ ಇಬ್ಬರು ಅವಳೀ ಮಕ್ಕಳನ್ನು ಪಡೆದಳು. ಅನಂತರ ಅವಳು ತನ್ನ ಹಾಗೆಯೇ ಇರುವ ಬೇರೊಬ್ಬ ದೇವತಾಸ್ತ್ರೀಯನ್ನು ತನ್ನ ಪ್ರತಿನಿಧಿಯಾಗಿ ಆದಿತ್ಯನ ಸಮೀಪದಲ್ಲಿರಿಸಿ ತಾನು ಅಶ್ವರೂಪದಿಂದ ಓಡಿಹೋದಳು. (ಈ ಸವರ್ಣರೂಪಿಯಾದ ದೇವತಾಸ್ತ್ರೀಯನ್ನು ಛಾಯಾ ಎಂಬ ಹೆಸರಿನಿಂದ ಕರೆಯುವುದು ರೂಢಿಯಾಗಿದೆ. ಮತ್ತು ಈ ಸ್ತ್ರೀಯಲ್ಲಿ ಆದಿತ್ಯನಿಂದ ಮನುವು ಹುಟ್ಟಿದನು. ಅನಂತರ ಆದಿತ್ಯನು ಈ ಸ್ತ್ರೀಯು ತನ್ನ ಪತ್ನಿಯಾದ ಸರಣ್ಯೂ ಅಲ್ಲವೆಂದು ತಿಳಿದು) ಅನಂತರ ತಾನೂ ಅಶ್ವರೂಪವನ್ನು ಧರಿಸಿ ಅಶ್ವರೂಪಿಣಿಯಾದ ಸರಣ್ಯುವನ್ನು ಅನುಸರಿಸಿ ಹೋಗಿ ಅವಳ ಸಮೀಪದಲ್ಲಿಯೇ ಇದ್ದನು. ಆಗ ಇವರಿಬ್ಬರ ಅನ್ಯೋನ್ಯಸಮಾಗಮದ ಫಲವಾಗಿ ಅಶ್ವಿನೀದೇವತೆಗಳು ಉತ್ಪನ್ನರಾದರು ಮತ್ತು ಸವರ್ಣರೂಪದ ಸ್ತ್ರೀಯಲ್ಲಿ ಮನುವು ಹುಟ್ಟಿದನು ಎಂದು ನಿರುಕ್ತವಚನದ ಅಭಿಪ್ರಾಯವು.

॥ ಸಂಹಿತಾಪಾಠಃ ॥

ಪೂಷಾ ತ್ವೇತಶ್ಚ್ಯಾವಯತು ಪ್ರ ವಿದ್ವಾನನಷ್ಟಪಶುರ್ಭುವನಸ್ಯ ಗೋಪಾಃ।
ಸ ತ್ವೈತೇಭ್ಯಃ ಪರಿ ದದತ್ಪಿತೃಭ್ಯೋಽಗ್ನಿರ್ದೇವೇಭ್ಯಃ ಸುವಿದತ್ರಿಯೇಭ್ಯಃ ॥೩॥

॥ ಪದಪಾಠಃ ॥

ಪೂಷಾ । ತ್ವಾ । ಇತಃ । ಚ್ಯವಯತು । ಪ್ರ । ವಿದ್ವಾನ್ । ಅನಷ್ಟಽಪಶುಃ । ಭುವನಸ್ಯ । ಗೋಪಾಃ ।
ಸಃ । ತ್ವಾ । ಏತೇಭ್ಯಃ । ಪರಿ । ದದತ್ । ಪಿತೃಽಭ್ಯಃ । ಅಗ್ನಿಃ । ದೇವೇಭ್ಯಃ । ಸುಽವಿದತ್ರಿಯೇಭ್ಯಃ ॥೩॥

॥ ಸಾಯಣಭಾಷ್ಯಂ ॥

ದೀಕ್ಷಿತಮರಣೇ ಪೂಷಾ ತ್ವೇತ ಇತ್ಯಾದ್ಯಾಶ್ಚತಸ್ರಃ ಶಂಸನೀಯಾಃ । ಸೂತ್ರಿತಂ ಚ । ಪೂಷಾ ತ್ವೇತಶ್ಚ್ಯಾವಯತು ಪ್ರವಿದ್ವಾನಿತಿ ಚತಸ್ರಃ । ಆ. ೬.೧೦ । ಇತಿ ॥

ಪೂಷಾ ಪೋಷಯಿತ್ರೈತನ್ನಾಮಕೋ ದೇವಸ್ತ್ವಾ ತ್ವಾಮಿತೋಽಸ್ಮಾದ್ದೇಶಾಲ್ಲೋಕಾತ್ಪ್ರಚ್ಯಾವಯತು । ಪ್ರಕರ್ಷೇಣೋತ್ತಮಲೋಕಂ ಗಮಯತು । ಕೀದೃಶಃ । ವಿದ್ವಾನಸ್ಮದ್ಭಕ್ತತಾಂ ವಿಜಾನಾನಃ ಅನಷ್ಟಪಶುರವಿನಶ್ವರಪಶುಯುಕ್ತಃ । ಯಸ್ಮಿನ್ಸರ್ವೇ ಪಶವಸ್ತಿಷ್ಠಂತಿ ನ ತು ನಶ್ಯಂತೀತ್ಯರ್ಥಃ । ಭುವನಸ್ಯ ಭೂತಜಾತಸ್ಯ ಗೋಪಾ ಗೋಪಾಯಿತಾ . ಕಿಂಚ ಪ್ರಕ್ರಮಯ್ಯ ಸ ಪೂಷೈತೇಭ್ಯಃ ಪಿತೃಭ್ಯಸ್ತ್ವಾ ತ್ವಾಂ ಪರಿ ದದತ್ । ಪರಿಪ್ರಯಚ್ಛತು । ತಥಾಗ್ನಿಶ್ಚ ಸುವಿದತ್ರಿಯೇಭ್ಯಃ । ಸುವಿದತ್ರಂ ಜ್ಞಾನಂ ಧನಂ ವಾ । ತದರ್ಹಾಃ ಸುವಿದತ್ರಿಯಾಃ ॥ ಛಾಂದಸೋ ಘಪ್ರತ್ಯಯಃ । ಶೋಭನಜ್ಞಾನೇಭ್ಯಃ ಸುಧನೇಭ್ಯೋ ವಾ ದೇವೇಭ್ಯಸ್ತ್ವಾಂ ಪ್ರಯಚ್ಛತು । ತೇಷಾಂ ಲೋಕೇ ಸ್ಥಾಪಯತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

ವಿದ್ವಾನ್—ಸಕಲವನ್ನೂ ತಿಳಿದವನೂ । ಅನಷ್ಟಪಶುಃ—ನಷ್ಟವಾಗದ ಪಶುಗಳುಳ್ಳವನೂ । ಭುವನಸ್ಯ—ಸಕಲಭೂತಜಾತಕ್ಕೂ । ಗೋಪಾಃ—ರಕ್ಷಕನೂ ಆದ । ಪೂಷಾ—ಪೂಷದೇವನು । ತ್ವಾ—ನಿನ್ನನ್ನು ಇತಃ—ಈ ಲೋಕದಿಂದ । ಪ್ರ ಚ್ಯಾವಯತು—ಉತ್ತಮಲೋಕಕ್ಕೆ ಒಯ್ಯಲಿ । ಸಃ—ಅದೇ ಪೂಷದೇವನು ಏತೇಭ್ಯಃ ಪಿತೃಭ್ಯಃ—ಈ ಪಿತೃಗಳಿಗೆ । ತ್ವಾ—ನಿನ್ನನ್ನು । ಪರಿ ದದತ್—ಒಪ್ಪಿಸಲಿ । ಅಗ್ನಿಃ—ಅಗ್ನಿಯು । ಸುವಿದತ್ರಿಯೇಭ್ಯಃ—ಪೂರ್ಣವಾದ ಜ್ಞಾನವುಳ್ಳ (ಅಥವಾ ಧನವುಳ್ಳ) । ದೇವೇಭ್ಯಃ—ದೇವತೆಗಳಿಗೂ ಒಪ್ಪಿಸಲಿ.

॥ ಭಾವಾರ್ಥ ॥

ಸಕಲವನ್ನೂ ತಿಳಿದವನೂ, ನಷ್ಟವಾಗದ ಪಶುಗಳುಳ್ಳವನೂ ಸಕಲಭೂತ ಜಾತಕ್ಕೂ ರಕ್ಷಕನೂ ಆದ ಪೂಷದೇವನು ನಿನ್ನನ್ನು ಈ ಲೋಕದಿಂದ ಉತ್ತಮಲೋಕಕ್ಕೆ ಒಯ್ಯಲಿ. ಅದೇ ಪೂಷದೇವನು ಈ ಪಿತೃಗಳಿಗೆ ನಿನ್ನನ್ನು ಒಪ್ಪಿಸಲಿ. ಅಗ್ನಿಯು ಪೂರ್ಣಜ್ಞಾನವುಳ್ಳ (ಅಥವಾ ಧನವುಳ್ಳ) ದೇವತೆಗಳಿಗೆ ಒಪ್ಪಿಸಲಿ.

## English Translation

May the discriminating Pushan, whose cattle are never lost, the protector of all beings, transfer you hence (to a better world): may he give you to these Pitris: may Agni (give) you to the beneficent gods.

॥ ವಿಶೇಷವಿಷಯಗಳು ॥

ಒಂದೇ ಋಕ್ಕಿನಲ್ಲಿ ಇಬ್ಬರು ದೇವತೆಗಳು ಪ್ರತ್ಯೇಕಪ್ರತ್ಯೇಕವಾಗಿ ಸ್ತುತಿಸಿರುವುದನ್ನು ಉದಾಹರಣೆಯಾಗಿ ಸಮರ್ಥಿಸಲು ಈ ಋಕ್ಕಿನ ನಿರ್ವಚನವನ್ನು ಹೇಳಿದಾರೆ—

ಅಥಾಪ್ಯಾಗ್ನಾಪೌಷ್ಣಂ ಹವಿರ್ನ ತು ಸಂಸ್ತವಃ। ತತ್ರೈತಾಂ ವಿಭಕ್ತಿಸ್ತುತಿಮೃಚಮುದಾಹರಂತಿ। ಪೂಷಾ ತ್ವೇತಶ್ಚ್ಯಾವಯತು ಪ್ರ ವಿದ್ವಾನನಷ್ಟಪಶುರ್ಭುವನಸ್ಯ ಗೋಪಾಃ। ಸ ತ್ವೈತೇಭ್ಯಃ ಪರಿದದತ್ಪಿತೃಭ್ಯೋಽಗ್ನಿರ್ದೇವೇಭ್ಯಃ ಸುವಿದತ್ರಿಯೇಭ್ಯಃ ॥ (ಋ. ಸಂ. ೧೦-೧೭-೩)। ಪೂಷಾ ತ್ವೇತಃ ಪ್ರಚ್ಯಾವಯತು ವಿದ್ವಾನನಷ್ಟಪಶುರ್ಭುವನಸ್ಯ ಗೋಪಾ ಇತ್ಯೇಷ ಹಿ ಸರ್ವೇಷಾಂ ಭೂತಾನಾಂ ಗೋಪಾಯಿತಾದಿತ್ಯಃ ಸ ತ್ವೈತೇಭ್ಯಃ ಪರಿದದತ್ ಪಿತೃಭ್ಯ ಇತಿ ಸಾಂಶಯಿಕ-ಸ್ತೃತೀಯಃ ಪಾದಃ। ಪೂಷಾ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಮಗ್ನಿರುಪರಿಷ್ಟಾತ್ತಸ್ಯ ಪ್ರಕೀರ್ತನೇತ್ಯಪರಂ। ಅಗ್ನಿರ್ದೇವೇಭ್ಯಃ ಸುವಿದತ್ರಿಯೇಭ್ಯಃ। ಸುವಿದತ್ರಂ ಧನಂ ಭವತಿ ವಿಂದತೇರ್ವೈಕೋಪಸರ್ಗಾದ್ದದಾತೇರ್ವಾ ಸ್ಯಾದ್ದ್ವ್ಯುಪಸರ್ಗಾತ್ ॥

(ನಿ. ೭-೯)

ಕೆಲವು ಋಕ್ಕುಗಳಲ್ಲಿ ಇಬ್ಬರು ದೇವತೆಗಳ ಸ್ತುತಿಯಿದ್ದರೂ ಅದು ಸಂಸ್ತವಸ್ತುತಿಯಾಗುವುದಿಲ್ಲ ಎಂದರೆ ಇಬ್ಬರನ್ನು ಒಟ್ಟಿಗೆ ಸ್ತುತಿಸಿದಂತಾಗುವುದಿಲ್ಲ. ಇಬ್ಬರ ಹೆಸರುಗಳಿದ್ದರೂ ಅವರಲ್ಲಿ ಪ್ರತಿಯೊಬ್ಬರ ಸ್ತುತಿಯು ಬೇರೆಬೇರೆಯಾಗಿರುವುದು. ಉದಾಹರಣೆಗೆ ಈ ಪ್ರಕೃತ ಋಕ್ಕಿನಲ್ಲಿ ಪೂಷ ಮತ್ತು ಅಗ್ನಿಯು ಸ್ತುತರಾಗಿದಾರೆ. ಆದರೂ ಇದು ಸಂಸ್ತವ ಸ್ತುತಿಯಲ್ಲ. ಇಬ್ಬರೂ ಬೇರೆಬೇರೆ ಸ್ತುತರಾಗಿದಾರೆ.

ಈ ಪೂಷದೇವನು ಎಲ್ಲವನ್ನೂ ತಿಳಿದವನು. ಆದ್ದರಿಂದಲೇ ಇವನ ಸ್ಮರಣೆ ಅಥವಾ ಜ್ಞಾನದಿಂದ ಪಶುಗಳು ತಪ್ಪಿಸಿಕೊಂಡು ಹೋಗುವುದಿಲ್ಲ. ಕಾರಣಾಂತರದಿಂದ ತಪ್ಪಿಸಿಕೊಂಡು ಹೋದ ಪಶುಗಳು ಪೂಷನ ಮಾರ್ಗಜ್ಞಾನದಿಂದ ಮತ್ತೆ ನಿಶ್ಚಯವಾಗಿ ಲಭಿಸುವುವು. ಆದ್ದರಿಂದ ಪೂಷನಿಗೆ ಅನಷ್ಟಪಶುಃ ಎಂದು ಇಲ್ಲಿ ಹೇಳಿದೆ. ಈ ದೇವನು ಸಕಲ ಜಗತ್ತನ್ನೂ ಸಂರಕ್ಷಿಸುವವನು. ಇಂತಹ ಆದಿತ್ಯರೂಪಿಯಾದ ಪೂಷದೇವನು ಪ್ರೇತಶರೀರಿಯಾದ ನಿನ್ನನ್ನು ಈ ಲೋಕದ ಮಾರ್ಗದಿಂದ ಬೇರ್ಪಡಿಸಿ ಪಿತೃಗಳ ವಶಕ್ಕೆ ಕೊಡಲಿ. ಮತ್ತು ಅಗ್ನಿಯು ಅಲ್ಲಿಂದ ನಿನ್ನನ್ನು ಧನದಾತರಾದ ದೇವತೆಗಳ ವಶಕ್ಕೆ ಒಪ್ಪಿಸಲಿ. ಈ ಋಕ್ಕಿನ ಮೂರನೆಯ ಪಾದದ ಅರ್ಥವಿಷಯದಲ್ಲಿ ಕೆಲವರು ಸಂಶಯವನ್ನು ವ್ಯಕ್ತಪಡಿಸಿರುವರು. ಈ ಪಾದದಲ್ಲಿ ಹೇಳಿರುವ– ಪೂಷದೇವನು ನಿನ್ನನ್ನು (ಪ್ರೇತವನ್ನು) ಪಿತೃಗಳಿಗೆ ಒಪ್ಪಿಸಲಿ ಎಂಬರ್ಥವು ಸಂಶಯಾಸ್ಪದವಾಗಿದೆ. ಏಕೆಂದರೆ ಪೂಷದೇವನು ಪಿತೃಗಳಿಗೆ ಒಪ್ಪಿಸುವನೆಂದು ಇಲ್ಲಿ ಹೇಳಿದೆ. ಅನಂತರ ಅಗ್ನಿಯು ಅವನನ್ನು ದೇವತೆಗಳಿಗೆ ಒಪ್ಪಿಸುವನೆಂದು ಹೇಳಿದೆ. ಈ ಮೂರನೇ ಪಾದಕ್ಕೆ ಪೂಷನು ದೇವತೆಯೆಂದು ಹೇಳಿರುವವಲ್ಲವೆ ಮೂರು ಮತ್ತು ನಾಲ್ಕನೆಯ ಪಾದಗಳೆರಡೂ ಅಗ್ನಿಗೆ ಸಂಬಂಧಪಟ್ಟವು ಎಂದು ಹೇಳಿರುವುದರಿಂದ ಈ ಪ್ರೇತಶರೀರವನ್ನು

ಪಿತೃಗಳಿಗೂ ಮತ್ತು ದೇವತೆಗಳಿಗೂ ಅಗ್ನಿಯೇ ಒಪ್ಪಿಸುವನೆಂಬ ಅರ್ಥವು ಇಲ್ಲಿ ವ್ಯಕ್ತವಾಗಿದೆ ಎಂದು ಮತ್ತೆ ಕೆಲವರ ಅಭಿಪ್ರಾಯವು.

ಈ ಋಕ್ಕಿನಲ್ಲಿರುವ **ಸುವಿದತ್ರಿಯೇಭ್ಯಃ** ಎಂಬ ಶಬ್ದದ ವಿಷಯದಲ್ಲಿ ಸುವಿದತ್ರವೆಂದರೆ ಧನವು. ಈ ಶಬ್ದವು ಸಂಪಾದಿಸು ಎಂಬರ್ಥವುಳ್ಳ (**ಸು** ಎಂಬ ಒಂದೇ ಉಪಸರ್ಗಸಹಿತವಾದ) **ವಿದ್** ಧಾತುವಿನಿಂದಾಗಲಿ, ಅಥವಾ **ಸು** ಮತ್ತು **ವಿ** ಎಂಬ ಎರಡು ಉಪಸರ್ಗಸಹಿತವಾದ, ಕೊಡು ಎಂಬರ್ಥವುಳ್ಳ **ದಾ** ಎಂಬ ಧಾತುವಿನಿಂದಾಗಲೀ ನಿಷ್ಪನ್ನವಾಗಬಹುದು ಎಂದು ನಿರ್ವಚನಾಭಿಪ್ರಾಯವು.

ಯಜ್ಞದಲ್ಲಿ ಯಜ್ಞದೀಕ್ಷೆಯನ್ನು ವಹಿಸಿರುವ ಯಜಮಾನನು ಮೃತನಾದಲ್ಲಿ **ಪೂಷಾ ತ್ವೇತಃ** ಎಂದು ಮೊದಲಾಗುವ ನಾಲ್ಕು ಋಕ್ಕುಗಳನ್ನು (ಈ ಸೂಕ್ತದ ೩-೬ ಋಕ್ಕುಗಳನ್ನು) ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ- **ಪೂಷಾ ತ್ವೇತಶ್ಚ್ಯಾವಯತು ಪ್ರ ವಿದ್ವಾನಿತಿ ಚತಸ್ರಃ** ಎಂಬ ಸೂತ್ರದಿಂದ (ಆ. ೬-೧೦) ವಿದಿತವಾಗಿರುವುದು.

॥ ಸಂಹಿತಾಪಾಠಃ ॥

ಆಯುರ್ವಿಶ್ವಾಯುಃ ಪರಿ ಪಾಸತಿ ತ್ವಾ ಪೂಷಾ ತ್ವಾ ಪಾತು ಪ್ರಪಥೇ ಪುರಸ್ತಾತ್ ।
ಯತ್ರಾಸತೇ ಸುಕೃತೋ ಯತ್ರ ತೇ ಯಯುಸ್ತತ್ರ ತ್ವಾ ದೇವಃ ಸವಿತಾ ದಧಾತು ॥ ೪ ॥

॥ ಪದಪಾಠಃ ॥

ಆಯುಃ । ವಿಶ್ವಽಆಯುಃ । ಪರಿ । ಪಾಸತಿ । ತ್ವಾ । ಪೂಷಾ । ತ್ವಾ । ಪಾತು । ಪ್ರಽಪಥೇ । ಪುರಸ್ತಾತ್ । ಯತ್ರ । ಆಸತೇ । ಸುಽಕೃತಃ । ಯತ್ರ । ತೇ । ಯಯುಃ । ತತ್ರ । ತ್ವಾ । ದೇವಃ । ಸವಿತಾ । ದಧಾತು ॥

॥ ಸಾಯಣಭಾಷ್ಯಂ ॥

ವಿಶ್ವಾಯುಃ ಸರ್ವಾನ್ನಃ ಸರ್ವತ್ರ ಗಮನಶೀಲೋ ವಾಯುಃ ॥ ವಕಾರಲೋಪಶ್ಛಾಂದಸಃ ॥ ವಾಯುಃ । ಯದ್ವಾ । ಛಂದಸೀಣ ಇತ್ಯುಣ್‌ಪ್ರತ್ಯಯೋ ವೃದ್ಧಿಶ್ಚ ಕೃತಾಯಾಂ ರೂಪಂ ॥ ಗಂತಾ ವಾಯುಃ । ತ್ವಾ ತ್ವಾಂ ಪರಿ ಪಾಸತಿ । ಪರಿಪಾತು । ಪೂಷಾನುಜ್ಞಯಾ ಪರಿತೋ ರಕ್ಷತು ॥ ಪಾ ರಕ್ಷಣೇ । ಲೇಟಿ ಸಿಪ್ಯಡಾಗಮಃ ॥ ಪ್ರಪಥೇ ಪ್ರಕೃಷ್ಟೇ ಮಾರ್ಗೇ ಸ್ವರ್ಗೇ ಪುರಸ್ತಾತ್ಸರ್ವೇಷಾಂ ಪ್ರಥಮಮೇವ ವರ್ತಮಾನಃ ಪೂಷಾ ಸ್ವಯಮೇವ ತ್ವಾ ತ್ವಾಂ ಪ್ರಮಿತಂ ಯಜಮಾನಂ ಪಾತು । ರಕ್ಷತು । ಸುಕೃತಃ ಪುಣ್ಯಕರ್ಮಾಣೋ ಯತ್ರ ಯಸ್ಮಿನ್ದೇಶ ಆಸತೇ ತಿಷ್ಠಂತಿ ಯತ್ರ ವಾ ತೇ ಸುಕೃತೋ ಯಯುಃ

ಪ್ರಾಪ್ತಾಃ ತತ್ರ ತಸ್ಮಿನ್ಸ್ಥಾನೇ ದೇವೋ ದೀಪ್ಯಮಾನಃ ಸವಿತಾ ಸರ್ವಸ್ಯ ಸ್ವಸ್ವಕರ್ಮಣಿ ಪ್ರೇರಕ ಏತನ್ನಾಮಕೋ ದೇವಸ್ತ್ವಾ ತ್ವಾಂ ದಧಾತು । ನಿದಧಾತು ॥

॥ ಪ್ರತಿಪದಾರ್ಥ ॥

**ವಿಶ್ವಾಯುಃ**—ಸರ್ವವ್ಯಾಪಕನಾದ । **ಆಯುಃ**—ವಾಯುವು । **ತ್ವಾ**—ನಿನ್ನನ್ನು । **ಪರಿ ಪಾಸತಿ**—ರಕ್ಷಿಸಲಿ । **ಪ್ರಪಥೇ**—ಅತ್ಯುತ್ಕೃಷ್ಟವಾದ ಸ್ವರ್ಗದಲ್ಲಿ । **ಪುರಸ್ತಾತ್**—ಎಲ್ಲರಿಗಿಂತಲೂ ಪ್ರಥಮತಃ ಇರುವ । **ಪೂಷಾ**—ಪೂಷದೇವನು । **ತ್ವಾ**—ಯಜಮಾನನಾದ ನಿನ್ನನ್ನು । **ಪಾತು**—ರಕ್ಷಿಸಲಿ । **ಯತ್ರ**—ಯಾವ ಪ್ರದೇಶದಲ್ಲಿ । **ಸುಕೃತಃ**—ಉತ್ತಮವಾದ ಕರ್ಮಕರ್ತರು । **ಆಸತೇ**—ಇರುವರೋ । **ಯತ್ರ**—ಎಲ್ಲಿ । **ತೇ ಸುಕೃತಃ ಯಯುಃ**—ಪುಣ್ಯಮಾಡುವ ಜನರು ಎಲ್ಲಿಗೆ ಹೋಗುವರೋ । **ತತ್ರ**—ಆ ಸ್ಥಾನದಲ್ಲಿ । **ದೇವಃ**—ಪ್ರಕಾಶಮಾನನಾದ । **ಸವಿತಾ**—ಸವಿತೃದೇವನು । **ತ್ವಾ**—ನಿನ್ನನ್ನು । **ದಧಾತು**—ಸ್ಥಾಪಿಸಲಿ.

॥ ಭಾವಾರ್ಥ ॥

ಸರ್ವವ್ಯಾಪಕನಾದ ವಾಯುವು ನಿನ್ನನ್ನು ರಕ್ಷಿಸಲಿ. ಅತ್ಯುತ್ಕೃಷ್ಟವಾದ ಸ್ವರ್ಗದಲ್ಲಿ ಎಲ್ಲರಿಗಿಂತಲೂ ಪ್ರಥಮತಃ ಇರುವ ಪೂಷದೇವನು ಯಜಮಾನನಾದ ನಿನ್ನನ್ನು ರಕ್ಷಿಸಲಿ. ಯಾವ ಪ್ರದೇಶದಲ್ಲಿ ಉತ್ತಮವಾದ ಕರ್ಮಕರ್ತರಿರುವರೋ, ಆ ಉತ್ತಮ ಕರ್ಮಕರ್ತರು ಎಲ್ಲಿಗೆ ಹೋಗುವರೋ ಆ ಸ್ಥಾನದಲ್ಲಿ ಪ್ರಕಾಶಮಾನನಾದ ಸವಿತೃದೇವನು ನಿನ್ನನ್ನು ಸ್ಥಾಪಿಸಲಿ.

English Translation

May the all-pervading, Vayu protect you, may Pushan (preserve) you, (going) first on the excellent path (to heaven) : may the divine Savitri place you, where the virtuous abide, whither they have gone.

॥ ಸಂಹಿತಾಪಾಠಃ ॥

ಪೂಷೇಮಾ ಆಶಾ ಅನು ವೇದ ಸರ್ವಾಃ ಸೋ ಅಸ್ಮಾँ ಅಭಯತಮೇನ ನೇಷತ್ ।
ಸ್ವಸ್ತಿದಾ ಆಘೃಣಿಃ ಸರ್ವವೀರೋಽಪ್ರಯುಚ್ಛನ್ಪುರ ಏತು ಪ್ರಜಾನನ್ ॥೫॥

॥ ಪದಪಾಠಃ ॥

ಪೂಷಾ । ಇಮಾಃ । ಆಶಾಃ । ಅನು । ವೇದ । ಸರ್ವಾಃ । ಸಃ । ಅಸ್ಮಾನ್ । ಅಭಯಽತಮೇನ । ನೇಷತ್ ।
ಸ್ವಸ್ತಿಽದಾಃ । ಆಘೃಣಿಃ । ಸರ್ವಽವೀರಃ । ಅಪ್ರಽಯುಚ್ಛನ್ । ಪುರಃ । ಏತು । ಪ್ರಽಜಾನನ್ ॥ ೫ ॥

॥ ಸಾಯಣಭಾಷ್ಯಂ ॥

ಏಕಾದಶಿನಸ್ಯ ಪೌಷ್ಣಸ್ಯ ಪಶೋರ್ಹವಿಷಃ ಪೂಷೇಮಾ ಇತ್ಯನುವಾಕ್ಯಾ । ಪೂಷೇಮಾ ಆಶಾ ಅನು ವೇದ ಸರ್ವಾಃ ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯತ್ । ಆ. ೩-೭ । ಇತಿ ಹಿ ಸೂತ್ರಿತಂ ॥

ಪೂಷಾ ದೇವ ಇಮಾ ಸರ್ವಾ ಆಶಾಃ ಪ್ರಾಚ್ಯಾದ್ಯಾ ದಿಶೋಽನು ವೇದ । ಆನುಪೂರ್ವ್ಯೇಣ ಜಾನಾತಿ । ಇಮಾಃ ಸುಖೇನ ಗಂತವ್ಯಾ ಅಸುಖೇನೇತಿ ವ್ಯೆವಮನುಕ್ರಮೇಣ ಜಾನಾತೀತ್ಯರ್ಥಃ । ಏವಂ ಸತ್ಯಸ್ಮಾನ್ । ಪ್ರಮಿತೇ ಯಜಮಾನೋ ಬ್ರವೀತಿ ಪುತ್ರಮುಖೇನ ಯಾಜಕಮುಖೇನ ವಾ । ಅಸ್ಮಾನ-ಭಯತಮೇನಾತ್ಯಂತಂ ಭಯರಹಿತೇನ ಮಾರ್ಗೇಣ ನೇಷತ್ । ನಯತು । ಕಥಂ । ಸ್ವಸ್ತಿದಾಃ ಕಲ್ಯಾಣಸ್ಯ ದಾತಾಘೃಣಿರಾಗತದೀಪ್ತಿಯುಕ್ತಃ ಸರ್ವವೀರಃ ಸರ್ವೈರ್ವೀರೈಃ ಕರ್ಮಣಿ ಸಮರ್ಥೈರ್ಋತ್ವಿಗ್ಭಿರುಪೇ-ತೋಽಪ್ರಯುಚ್ಛನ್ನಪ್ರಮಾದ್ಯನ್ ಪ್ರಜಾನನ್ನಸ್ಮಾಕಂ ಫಲಾಫಲೇ ವಿಜಾನಾನಃ ಸನ್ ಪುರ ಏತು । ಅಸ್ಮಾಕಂ ಪುರಸ್ತಾದ್ಗಚ್ಛತು । ಯಥಾಸ್ಮಾಕಂ ಭಯಂ ನ ಭವತಿ ತಥಾ ಗಚ್ಛತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಪೂಷಾ**—ಪೂಷದೇವನು । **ಸರ್ವಾಃ**—ಸಮಸ್ತವಾದ । **ಇಮಾ ಆಶಾಃ**—ಈ ದಿಕ್ಕುಗಳನ್ನೆಲ್ಲ । **ಅನು ವೇದ**—ತಿಳಿದಿದ್ದಾನೆ । **ಸಃ**—ಅವನು । **ಅಸ್ಮಾನ್**—ನಮ್ಮನ್ನು । **ಅಭಯತಮೇನ**—ಕೊಂಚವೂ । ಭಯವಿಲ್ಲದಿರುವ ಮಾರ್ಗದಿಂದ । **ನೇಷತ್**—ಕರೆದೊಯ್ಯಲಿ । **ಸ್ವಸ್ತಿದಾಃ**—ಕಲ್ಯಾಣಪ್ರದನೂ । **ಆಘೃಣಿಃ**—ಅತ್ಯಂತ ಪ್ರಭಾಯುತನೂ । **ಸರ್ವವೀರಃ**—ಸಕಲವಾದ ಋತ್ವಿಕ್ಕುಗಳಿಂದ ಕೂಡಿದವನೂ ಆಗಿ । **ಅಪ್ರಯು-ಚ್ಛನ್**—ಕೊಂಚವೂ ಅಜಾಗರೂಕನಾಗಿರದೆಯೂ । **ಪ್ರಜಾನನ್**—ನಮ್ಮ ಒಳ್ಳೆಯದನ್ನು ಅರಿತವನಾಗಿಯೂ ಆಗಿ । **ಪುರಃ**—ನಮ್ಮ ಮುಂದೆ । **ಏತು**—ಸಂಚರಿಸಲಿ.

॥ ಭಾವಾರ್ಥ ॥

ಪೂಷದೇವನು ಸಕಲವಾದ ಈ ದಿಕ್ಕುಗಳನ್ನೆಲ್ಲ ಅರಿತಿದ್ದಾನೆ. ಅವನು ನಮ್ಮನ್ನು ಕೊಂಚವೂ ಭಯವಿಲ್ಲದಿರುವ ಮಾರ್ಗದಲ್ಲಿ ಕರೆದೊಯ್ಯಲಿ. ಕಲ್ಯಾಣ ಪ್ರದನೂ, ಅತ್ಯಂತ ಪ್ರಭಾಯುತನೂ, ಸಕಲವಾದ ಋತ್ವಿಕ್ಕುಗಳಿಂದ ಕೂಡಿದವನೂ ಆಗಿ ಕೊಂಚವೂ ಅಜಾಗರೂಕನಾಗಿರದೆಯೂ, ನಮ್ಮ ಕಲ್ಯಾಣವನ್ನು ಅರಿತವನಾಗಿಯೂ ಆಗಿ ನಮ್ಮ ಮುಂದೆ ಸಂಚರಿಸಲಿ.

English Translation

Pushan knows all these regions severally; let him conduct us by (the path) that is most free from peril: let him precede us, who is the giver of prosperity, endowed with radiance, accompanied by all pious men, ever vigilant, and knowing our (deserts).

॥ ವಿಶೇಷವಿಷಯಗಳು ॥

ಏಕಾದಶಿನ್ ಎಂಬ ಪೂಷನನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ ಹವಿಸ್ಸನ್ನು ಹೋಮಮಾಡುವಾಗ. ಪೂಷೇಮಾ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—

ಪೂಷೇಮಾ ಆಶಾ ಅನು ವೇದ ಸರ್ವಾಃ ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯತ್ ಎಂಬ ಸೂತ್ರದಿಂದ (ಆ ೩-೭) ವಿಸೃತವಾತರುವುದು.

॥ ಸಂಹಿತಾಪಾಠಃ ॥

ಪ್ರಪಥೇ ಪಥಾಮಜನಿಷ್ಟ ಪೂಷಾ ಪ್ರಪಥೇ ದಿವಃ ಪ್ರಪಥೇ ಪೃಥಿವ್ಯಾಃ ।
ಉಭೇ ಅಭಿ ಪ್ರಿಯತಮೇ ಸಧಸ್ಥೇ ಆ ಚ ಪರಾ ಚ ಚರತಿ ಪ್ರಜಾನನ್ ॥೬॥

॥ ಪದಪಾಠಃ ॥

ಪ್ರऽಪಥೇ । ಪಥಾಂ ಅಜನಿಷ್ಟ । ಪೂಷಾ । ಪ್ರऽಪಥೇ । ದಿವಃ । ಪ್ರऽಪಥೇ । ಪೃಥಿವ್ಯಾಃ ।
ಉಭೇ ಇತಿ । ಅಭಿ । ಪ್ರಿಯತಮೇ ಇತಿ ಪ್ರಿಯऽತಮೇ । ಸಧಸ್ಥೇ ಇತಿ ಸಧऽಸ್ಥೇ । ಆ । ಚ । ಪರಾ ।
ಚ । ಚರತಿ । ಪ್ರऽಜಾನನ್ ॥ ೬ ॥

॥ ಸಾಯಣಭಾಷ್ಯಂ ॥

ಏಕಾದಶಿನಸ್ಯ ಪೌಷ್ಣಸ್ಯ ಪಶೋಃ ಪುರೋಡಾಶಸ್ಯ ಪ್ರಪಥೇ ಪಥಾಮಿತಿ ಯಾಜ್ಯಾ । ಸೂತ್ರಿತಂ ಚ । ಪ್ರಪಥೇ ಪಥಾಮಜನಿಷ್ಟ ಪೂಷಾ ಪಥಸ್ಪಥಃ ಪರಿಪತಿಂ ವಚಸ್ಯಾ । ಆ. ೩-೭ । ಇತಿ ॥

ಪಥಾಮಂತರಿಕ್ಷಗಮನಹೇತುಭೂತಾನಾಂ ಮಾರ್ಗಾಣಾಂ ಮಧ್ಯೇ ಪ್ರಪಥೇ ಯಃ ಪ್ರಕೃಷ್ಟಃ ಪಂಥಾಸ್ತಿ ತತ್ರ ಪೂಷಾಜನಿಷ್ಟ । ಪ್ರಾದುರಭೂತ್ । ಪುಣ್ಯಕರ್ಮಣಾಂ ಸುಗತಿಪ್ರಾಪಣಾರ್ಥಮವಸ್ಥಿತ ಇತಿ ಭಾವಃ । ತಥಾ ದಿವೋ ದ್ಯುಲೋಕಸ್ಯ ಚ ಮಾರ್ಗಾಣಾಂ ಮಧ್ಯೇ ಪ್ರಪಥೇ ಪ್ರಕೃಷ್ಟೇ ಮಾರ್ಗೇ ಜಾತಃ । ತಥಾ ಪೃಥಿವ್ಯಾಃ ಪ್ರಪಥೇ ಪ್ರಕೃಷ್ಟೇ ಮಾರ್ಗೇ ಮನುಷ್ಯಾಣಾಂ ತತ್ತತ್ಕರ್ಮಣಿ ಪ್ರವರ್ತನಾರ್ಥಂ ಪ್ರಾದುರ್ಭೂತ ಇತ್ಯರ್ಥಃ । ಸೋಽಯಂ ಪೂಷಾ ಪ್ರಿಯತಮೇ ಸರ್ವಸ್ಯೇಷ್ಟತಮೇ ಸಧಸ್ಥೇ ಸರ್ವೇಷಾಂ ಸಹಾವಸ್ಥಾನಭೂತೇ ಉಭೇ ದ್ಯಾವಾಪೃಥಿವ್ಯಾವಭಿಲಕ್ಷ್ಯ ಚರತಿ । ಅಭಿಮುಖ್ಯೇನ ಚರತಿ । ಸುಕೃತಿನಾಂ ಸುಕೃತಫಲಪ್ರದರ್ಶನಾಯಾನುಕೂಲಂ ಚರತೀತ್ಯರ್ಥಃ । ತಥಾ ಪರಾ ಚರತಿ । ದುಷ್ಕರ್ಮಣಾಂ ಪ್ರತಿಕೂಲಂ ಗಚ್ಛತಿ । ಕಿಂ ಕುರ್ವನ್ । ಪ್ರಜಾನನ್ ಅನೇನೇದಂ ಕರ್ಮ ಕೃತಮಸ್ಯ ಕರ್ಮಣ ಇದಂ ಫಲಮಿತ್ಯವಿಶೇಷೇಣ ಜಾನಾನಃ ॥

॥ ಪ್ರತಿಪದಾರ್ಥ ॥

ಪಥಾಂ—ಮಾರ್ಗಗಳಲ್ಲಿನ । ಪ್ರಪಥೇ—ಅತ್ಯುತ್ಕೃಷ್ಟವಾದ ಮಾರ್ಗದಲ್ಲಿ । ಪೂಷಾ—ಪೂಷದೇವನು । ಅಜನಿಷ್ಟ—ಉತ್ಪನ್ನನಾಗಿದ್ದಾನೆ । ದಿವಃ—ದ್ಯುಲೋಕದ । ಪ್ರಪಥೇ—ಅತ್ಯುತ್ಕೃಷ್ಟವಾದ ಮಾರ್ಗದಲ್ಲಿಯೂ ಉತ್ಪನ್ನನಾಗಿದ್ದಾನೆ । ಪೃಥಿವ್ಯಾಃ—ಪೃಥ್ವಿಯ । ಪ್ರಪಥೇ—ಉತ್ಕೃಷ್ಟವಾದ ಮಾರ್ಗದಲ್ಲಿಯೂ ಉತ್ಪನ್ನನಾಗಿದ್ದಾನೆ (ಅವೇ ಪೂಷನು) । ಪ್ರಿಯತಮೇ—ಎಲ್ಲರಿಗೂ ಪ್ರಿಯವಾದುದೂ । ಸಧಸ್ಥೇ—ಸಕಲರಿಗೂ ಸಮಾನಸ್ಥಾನವಾದುದೂ ಆದ । ಉಭೇ—ದ್ಯಾವಾಪೃಥಿವಿಗಳೆರಡರ ನಡುವೆ । ಆ ಚರತಿ—ಸಂಚರಿಸುತ್ತಾನೆ । ಪ್ರಜಾನನ್—ಕರ್ಮವಂತರ ಐತಿಸ್ಯಗಳನ್ನರಿತು । ಪರಾ (ಚರತಿ)—ಕರ್ಮಭ್ರಷ್ಟರಿಗೆ ಪ್ರತಿಮುಖನಾಗಿ ಸಂಚರಿಸುತ್ತಾನೆ.

॥ ಭಾವಾರ್ಥ ॥

ಪೂಷದೇವನು ಮಾರ್ಗಗಳಲ್ಲೆಲ್ಲ ಅತ್ಯುತ್ಕೃಷ್ಟವಾದ ಮಾರ್ಗದಲ್ಲಿ ಉತ್ಪನ್ನನಾಗಿದ್ದಾನೆ. ದ್ಯುಲೋಕದ ಅತ್ಯುತ್ಕೃಷ್ಟವಾದ ಮಾರ್ಗದಲ್ಲಿಯೂ ಪೃಥ್ವಿಯ ಉತ್ಕೃಷ್ಟವಾದ ಮಾರ್ಗದಲ್ಲಿಯೂ ಉತ್ಪನ್ನನಾಗಿದ್ದಾನೆ. ಅದೇ ಪೂಷನು ಎಲ್ಲರಿಗೂ ಪ್ರಿಯವಾದುದೂ, ಸಕಲರಿಗೂ ಸಮಾನಸ್ಥಾನವಾದುದೂ ಆದ ದ್ಯಾವಾಪೃಥಿವಿಗಳೆರಡರ ನಡುವೆ ಸಂಚರಿಸುತ್ತಾನೆ. ಮೃತರಾದವರಲ್ಲಿ ಕರ್ಮವಂತರ ಮತ್ತು ಕರ್ಮಭ್ರಷ್ಟರ ವ್ಯತ್ಯಾಸಗಳನ್ನರಿತು ಕರ್ಮಭ್ರಷ್ಟರಿಗೆ ಪ್ರತಿಮುಖನಾಗಿಯೂ ಕರ್ಮವಂತರಿಗೆ ಅಭಿಮುಖನಾಗಿಯೂ ಸಂಚರಿಸುತ್ತಾನೆ.

English Translation

Pushan has been born on the best path of paths, on the best path of heaven, on the best path of earth, he goes forward and backward over both (worlds), the assemblies longed for by all, discriminating (the merits of the dead)

॥ ವಿಶೇಷವಿಷಯಗಳು ॥

ಏಕಾದಶಿನ್ ಎಂಬ ಪೌಷ್ಣಸಂಬಂಧವಾದ ಪಶುಹೋಮದಲ್ಲಿ ಪುರೋಡಾಶವನ್ನು ಹೋಮಮಾಡುವಾಗ **ಪ್ರಪಥೇ ಪಥಾಂ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಪ್ರಪಥೇ ಪಥಾಮಜನಿಷ್ಟ ಪೂಷಾ ಪಥಸ್ಪಥಃ ಪರಿಪತಿಂ ವಚಸ್ಯಾ** ಎಂಬ ಸೂತ್ರದಿಂದ (ಆ. ೩-೭) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಸರಸ್ವತೀಂ ದೇವಯಂತೋ ಹವಂತೇ ಸರಸ್ವತೀಮಧ್ವರೇ ತಾಯಮಾನೇ ।**
**ಸರಸ್ವತೀಂ ಸುಕೃತೋ ಅಹ್ವಯಂತ ಸರಸ್ವತೀ ದಾಶುಷೇ ವಾರ್ಯಂ**
**ದಾತ್ ॥ ೭ ॥**

॥ ಪದಪಾಠಃ ॥

**ಸರಸ್ವತೀಂ । ದೇವऽಯಂತಃ । ಹವಂತೇ । ಸರಸ್ವತೀಂ । ಅಧ್ವರೇ । ತಾಯಮಾನೇ ।**
**ಸರಸ್ವತೀಂ । ಸುऽಕೃತಃ । ಅಹ್ವಯಂತ । ಸರಸ್ವತೀ । ದಾಶುಷೇ । ವಾರ್ಯಂ । ದಾತ್ ॥ ೭ ॥**

॥ ಸಾಯಣಭಾಷ್ಯಂ ॥

**ವ್ಯೂಳ್ಹಸ್ಯ ದಶರಾತ್ರಸ್ಯ ತೃತೀಯೇ ಛಂದೋಮೇ ಪ್ರಉಗಶಸ್ತ್ರೇ ಸಾರಸ್ವತತೃಚಸ್ಯ ಸರಸ್ವತೀಂ ದೇವಯಂತ ಇತ್ಯೇಷಾದ್ಯಾ । ಸೂತ್ರ್ಯತೇ ಹಿ । ಪ್ರ ಬ್ರಹ್ಮಾಣೋ ಅಂಗಿರಸೋ ನಕ್ಷಂತ ಸರಸ್ವತೀಂ ದೇವಯಂತೋ ಹವಂತೇ । ಆ. ೮-೧೧ । ಇತಿ ।**

**ದೇವಯಂತೋ ದೇವಾನ್ಯಷ್ಟುಂ ಸ್ತೋತುಂ ಚ ಕಾಮಯಮಾನಾ ಯಜಮಾನಾಃ ಸರಸ್ವತೀಮೇತನ್ನಾಮಿಕಾಂ ಮಧ್ಯಮಸ್ಥಾನದೇವತಾಂ ಹವಂತೇ । ಕರ್ಮಾವಯವತ್ವಾಯಾಹ್ವಯಂತಿ । ತಥಾ ತಾಯಮಾನೇ ಸ್ತುತಿಭಿರ್ಹವಿರ್ಭಿಶ್ಚ ವಿಸ್ತೀರ್ಯಮಾಣೇಽಧ್ವರೇ ಯಜ್ಞೇ ಸರಸ್ವತೀಂ ಯಜಂತೀತಿ ಶೇಷಃ । ಸುಕೃತಃ ಪುಣ್ಯಕರ್ಮಾಣಃ ಸರಸ್ವತೀಮಹ್ವಯಂತ । ಫಲಪ್ರದಾನಾಯ ಹ್ವಯಂತೇ । ಯತ ಏವಮತಃ ಕಾರಣಾತ್ಸರಸ್ವತೀ ದೇವೀ ದಾಶುಷೇ ಹವೀಂಷಿ ದತ್ತವತೇ ಯಜಮಾನಾಯ ವಾರ್ಯಂ ವರಣೀಯಂ ಕರ್ಮಫಲಂ ದಾತ್ । ಪ್ರಯಚ್ಛತು ॥**

। ಪ್ರತಿಪದಾರ್ಥ ।

**ದೇವಯಂತಃ**—ದೇವತೆಗಳನ್ನಪೇಕ್ಷಿಸುವವರು । **ಸರಸ್ವತೀಂ**—ಸರಸ್ವತೀದೇವಿಯನ್ನು । **ಹವಂತೇ**—ಪ್ರಾರ್ಥಿಸಿ ಕರೆಯುತ್ತಾರೆ । **ತಾಯಮಾನೇ**—ವಿಸ್ತೃತವಾಗಿ ನೆರವೇರುವ । **ಅಧ್ವರೇ**—ಯಜ್ಞದಲ್ಲಿ । **ಸರಸ್ವತೀಂ**—ಸರಸ್ವತಿಯನ್ನು ಪೂಜಿಸುತ್ತಾರೆ । **ಸುಕೃತಃ**—ಉತ್ತಮವಾದ ಕರ್ಮವಂತರು । **ಸರಸ್ವತೀಂ**—ಸರಸ್ವತಿಯನ್ನು । **ಅಹ್ವಯಂತ** — ಫಲಪ್ರಾಪ್ತಿಗಾಗಿ ಕರೆಯುತ್ತಾರೆ । **ಸರಸ್ವತೀ** — ಸರಸ್ವತೀದೇವಿಯು । **ದಾಶುಷೇ**—ಹವಿಸ್ಸನ್ನು ಅರ್ಪಿಸಿದ ಯಜಮಾನನಿಗೆ । **ವಾರ್ಯಂ**—ಅಪೇಕ್ಷಿತವಾದ ಫಲವನ್ನು । **ದಾತ್**—ಕೊಡಲಿ.

। ಭಾವಾರ್ಥ ।

ದೇವತೆಗಳನ್ನಪೇಕ್ಷಿಸುವವರು ಸರಸ್ವತೀದೇವಿಯನ್ನು ಪ್ರಾರ್ಥಿಸಿ ಕರೆಯುತ್ತಾರೆ. ವಿಸ್ತೃತವಾಗಿ ನೆರವೇರುವ ಯಜ್ಞದಲ್ಲಿ ಸರಸ್ವತಿಯನ್ನು ಪೂಜಿಸುತ್ತಾರೆ. ಉತ್ತಮವಾದ ಕರ್ಮವಂತರು ಸರಸ್ವತಿಯನ್ನು ಫಲಪ್ರಾಪ್ತಿಗಾಗಿ ಕರೆಯುತ್ತಾರೆ. ಸರಸ್ವತೀದೇವಿಯು ಹವಿಸ್ಸನ್ನು ಅರ್ಪಿಸಿದ ಯಜಮಾನನಿಗೆ ಅಪೇಕ್ಷಿತವಾದ ಫಲವನ್ನು ಕೊಡಲಿ.

## English Translation

The devout invoke Saraswati; they worship Saraswati at the strewn sacrifice; the virtuous call upon Saraswati: may Saraswati bestow blessings upon the donor (of the oblation).

॥ ವಿಶೇಷವಿಷಯಗಳು ॥

ವ್ಯೂಳ್ಹವೆಂಬ ದಶರಾತ್ರಯಾಗದ ತೃತೀಯಛಂಧೋಮದಲ್ಲಿ ಪ್ರಉಗಶಸ್ತ್ರಮಂತ್ರಗಳನ್ನು ಪಠಿಸುವಾಗ **ಸರಸ್ವತೀಂ ದೇವಯಂತಃ** ಎಂಬ ಸರಸ್ವತೀದೇವತಾಕವಾದ ೭-೯ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರ ಬ್ರಹ್ಮಾಣೋ ಅಂಗಿರಸೋ ನಕ್ಷಂತ ಸರಸ್ವತೀಂ ದೇವಯಂತೋ ಹವಂತೇ** ಎಂಬ ಸೂತ್ರದಿಂದ (ಆ. ೮-೧೧) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಸರಸ್ವತಿ ಯಾ ಸರಥಂ ಯಯಾಥ ಸ್ವಧಾಭಿರ್ದೇವಿ ಪಿತೃಭಿರ್ಮದಂತೀ ।

ಆಸದ್ಯಾಸ್ಮಿನ್ಬರ್ಹಿಷಿ ಮಾದಯಸ್ವಾನಮೀವಾ ಇಷ ಆ ಧೇಹ್ಯಸ್ಮೇ ॥ ೮ ॥

॥ ಪದಪಾಠಃ ॥

ಸರಸ್ವತಿ । ಯಾ । ಸऽರಥಂ । ಯಯಾಥ । ಸ್ವಧಾಭಿಃ । ದೇವಿ । ಪಿತೃऽಭಿಃ । ಮದಂತೀ ।

ಆऽಸದ್ಯ । ಅಸ್ಮಿನ್ । ಬರ್ಹಿಷಿ । ಮಾದಯಸ್ವ । ಅನಮೀವಾಃ । ಇಷಃ । ಆ । ಧೇಹಿ । ಅಸ್ಮೇ ಇತಿ ॥೮॥

॥ ಸಾಯಣಭಾಷ್ಯಂ ॥

**ಹೇ ಸರಸ್ವತಿ ಹೇ ದೇವಿ ಯಾ ತ್ವಂ ಸರಥಂ ಪಿತೃಭಿಃ ಸಹ ಸಮಾನೇನ ರಥೇನ ಯುಕ್ತಂ ಯಥಾ ಭವತಿ ತಥಾ ಯಯಾಥ । ಅಸ್ಮದೀಯಂ ಯಜ್ಞಂ ಪ್ರಾಪ್ತಾಸಿ । ಕಿಂ ಕುರ್ವತೀ । ಪಿತೃಭಿಃ ಸಹ ಸ್ವಧಾಭಿರ್ಹವಿರ್ಲಕ್ಷಣೈರನ್ನೈರ್ಮದಂತೀ ಮಾದ್ಯಂತೀ ಯಜ್ಞಂ ಗಚ್ಛಸೀತಿ ಸಂಬಂಧಃ । ಸಾ ತ್ವಂ ಬರ್ಹಿಷ್ಯಸ್ಮಿನ್ವೇದಿಸ್ತರಣೇ ಯಜ್ಞೆ ಆಸದ್ಯೋಪವಿಶ್ಯ ಮಾದಯಸ್ವ । ಹವಿರ್ಭಿಸ್ತೃಪ್ತಾ ಭವ । ಆತ್ಮಾನಂ ತರ್ಪಯ ವಾ । ತತಸ್ತೃಪ್ತಾ ಸತೀ ತ್ವಮನಮೀವಾಃ । ಅಮೀವಾ ರೋಗಃ ತದ್ವರ್ಜಿತಾನ್ಯಾರೋಗ್ಯಜನನಾನೀಷೋಽನ್ನಾನ್ಯಸ್ಮೇ ಅಸ್ಮಭ್ಯಮಾ ಧೇಹಿ । ಪರ್ಯಾಪ್ತಂ ಪ್ರಯಚ್ಛ ॥**

॥ ಪ್ರತಿಪದಾರ್ಥ ॥

**ದೇವಿ** ದೇವತಾತ್ಮಳಾದ । **ಸರಸ್ವತಿ**—ಎಲೈ ಸರಸ್ವತಿಯೇ । **ಯಾ**—ಯಾವ ನೀನು । **ಪಿತೃಭಿಃ**—ಪಿತೃಗಳೊಡನೆ ಕುಳಿತು । **ಸ್ವಧಾಭಿಃ**—ಸ್ವಧಾರೂಪವಾದ ಹವಿಸ್ಸುಗಳಿಂದ । **ಮದಂತೀ**—ಹರ್ಷವನ್ನು ಹೊಂದುತ್ತ । **ಸರಥಂ**—ಅವರೊಡನೆ ಒಂದೇ ರಥದಲ್ಲಿ ಕುಳಿತು । **ಯಯಾಥ**—ಹೋಗುವೆಯೋ ಅಂತಹ ನೀನು । **ಅಸ್ಮಿನ್-ಬರ್ಹಿಷಿ**—ಈ ದರ್ಭಾಸನದಲ್ಲಿ । **ಆಸದ್ಯ**—ಕುಳಿತು । **ಮಾದಯಸ್ವ**—ತೃಪ್ತಿಯನ್ನು ಹೊಂದು । **ಅನಮೀವಾಃ**—ರೋಗಾದಿರಹಿತವಾದ । **ಇಷಃ**—ಅನ್ನಗಳನ್ನು । **ಅಸ್ಮೇ**—ನಮಗೆ । **ಆ ಧೇಹಿ**—ಕೊಡು.

॥ ಭಾವಾರ್ಥ ॥

ದೇವತಾತ್ಮಳಾದ ಎಲೈ ಸರಸ್ವತಿಯೇ, ಯಾವ ನೀನು ಪಿತೃಗಳೊಡನೆ ಕುಳಿತು ಸ್ವಧಾರೂಪವಾದ ಹವಿಸ್ಸುಗಳಿಂದ ಹರ್ಷವನ್ನು ಹೊಂದುತ್ತ ಅವರೊಡನೆ ಒಂದೇ ರಥದಲ್ಲಿ ಕುಳಿತು ಹೋಗುವೆಯೋ ಅಂತಹ ನೀನು ಈ ದರ್ಭಾಸನದಲ್ಲಿ ಕುಳಿತು ತೃಪ್ತಿಯನ್ನು ಹೊಂದು. ರೋಗಾದಿರಹಿತವಾದ ಅನ್ನಗಳನ್ನು ನಮಗೆ ಕೊಡು.

## English Translation

Divine Saraswati, who rides in the same chariot with the Pitris, and is delighted (along with them) by the (sacrifieial) viands, seated on the sacred grass be gratified (by our offering), and grant us wholesome food.

॥ ಸಂಹಿತಾಪಾಠಃ ॥

ಸರಸ್ವತೀಂ ಯಾಂ ಪಿತರೋ ಹವಂತೇ ದಕ್ಷಿಣಾ ಯಜ್ಞಮಭಿನಕ್ಷಮಾಣಾಃ।
ಸಹಸ್ರಾರ್ಘಮಿಳೋ ಅತ್ರ ಭಾಗಂ ರಾಯಸ್ಪೋಷಂ ಯಜಮಾನೇಷು
ಧೇಹಿ ॥ ೯ ॥

॥ ಪದಪಾಠಃ ॥

ಸರಸ್ವತೀಂ । ಯಾಂ । ಪಿತರಃ । ಹವಂತೇ । ದಕ್ಷಿಣಾ । ಯಜ್ಞಂ । ಅಭಿऽನಕ್ಷಮಾಣಾಃ ।
ಸಹಸ್ರऽಅರ್ಘಂ । ಇಳಃ । ಅತ್ರ । ಭಾಗಂ । ರಾಯಃ । ಪೋಷಂ । ಯಜಮಾನೇಷು । ಧೇಹಿ ॥ ೯ ॥

॥ ಸಾಯಣಭಾಷ್ಯಂ ॥

-ಯಾಂ ತ್ವಾಂ ಸರಸ್ವತೀಂ ಪಿತರೋ ಹವಂತೇ ಆಹ್ವಯಂತಿ । ಕೀದೃಶಾಃ । ದಕ್ಷಿಣಾ ॥ ದಕ್ಷಿಣಾದಾಜಿತ್ಯಾಚ್‌ಪ್ರತ್ಯಯಃ । ಪಾ. ೫-೩-೩೬ ॥ ದಕ್ಷಿಣತ ಆಗತ್ಯ ಯಜ್ಞಮಭಿನಕ್ಷಮಾಣಾ ಅಭಿತೋ ಗಚ್ಛಂತೋ ವ್ಯಾಪ್ನುವಂತಃ । ಅತ್ರಾಸ್ಮಿನ್ಯಜ್ಞೇ ಸಹಸ್ರಾರ್ಘಂ ಬಹುಭಿಃ ಪೂಜನೀಯಮುಪಯೋಜ್ಯಮಿಳೋಽನ್ನಸ್ಯ ಭಾಗಂ ರಾಯೋ ಧನಸ್ಯ ಪೋಷಂ ಪುಷ್ಟಿಂ ಚ ಯಜಮಾನೇಷು ತ್ವಂ ಧೇಹಿ । ಸ್ಥಾಪಯ ॥

॥ ಪ್ರತಿಪದಾರ್ಥ ॥

**ದಕ್ಷಿಣಾ**—ಪ್ರದಕ್ಷಿಣಾಕಾರವಾಗಿ । **ಯಜ್ಞಂ**—ಯಜ್ಞವನ್ನು । **ಅಭಿನಕ್ಷಮಾಣಾಃ**—ಸುತ್ತುತ್ತ ಇರುವ । **ಪಿತರಃ**—ಪಿತೃಗಳು । **ಯಾಂ ಸರಸ್ವತೀಂ**—ಯಾವ ಸರಸ್ವತಿಯನ್ನು । **ಹವಂತೇ**—ಕರೆಯುವರೋ ಆ ಸರಸ್ವತಿಯು । **ಅತ್ರ**—ಈ ಯಜ್ಞದಲ್ಲಿ । **ಸಹಸ್ರಾರ್ಘಂ**—ಅನೇಕರ ಸ್ತುತಿಗೂ ತೃಪ್ತಿಗೂ ಸಾಕಾಗುವ **ಇಳಃ**—ಅನ್ನದ । **ಭಾಗಂ**—ಭಾಗವನ್ನೂ । **ರಾಯಃ**—ಧನವನ್ನೂ । **ಪೋಷಂ**—ಪುಷ್ಟಿಯನ್ನೂ । **ಯಜಮಾನೇಷು**—ಯಜಮಾನರಲ್ಲಿ । **ಧೇಹಿ**—ಸ್ಥಾಪಿಸಲಿ.

॥ ಭಾವಾರ್ಥ ॥

ಪ್ರದಕ್ಷಿಣಪೂರ್ವಕವಾಗಿ ಯಜ್ಞವನ್ನು ಸುತ್ತುತ್ತ ಇರುವ ಪಿತೃಗಳು ಯಾವ ಸರಸ್ವತಿಯನ್ನು ಕರೆಯುವರೋ ಆ ಸರಸ್ವತಿಯು ಈ ಯಜ್ಞದಲ್ಲಿ ಅನೇಕರ ಸ್ತುತಿಗೂ ತೃಪ್ತಿಗೂ ಸಾಕಾಗುವ ಅನ್ನದ ಭಾಗವನ್ನೂ ಧನವನ್ನೂ ಪುಷ್ಟಿಯನ್ನೂ ಯಜಮಾನರಲ್ಲಿ ಸ್ಥಾಪಿಸಲಿ. (ಕೊಡಲಿ)

English Translation

Saraswati, whom the Pitris invoke when circumambulating the sacrifice on the right, bestow upon the worshippers at this sacrifice a portion of food fit for thousands, and increase of riches.

॥ ಸಂಹಿತಾಪಾಠಃ ॥

ಆಪೋ ಅಸ್ಮಾನ್ಮಾತರಃ ಶುಂಧಯಂತು ಘೃತೇನ ನೋ ಘೃತಪ್ವಃ ಪುನಂತು ।
ವಿಶ್ವಂ ಹಿ ರಿಪ್ರಂ ಪ್ರವಹಂತಿ ದೇವೀರುದಿದಾಭ್ಯಃ ಶುಚಿರಾ ಪೂತ ಏಮಿ ॥

॥ ಪದಪಾಠಃ ॥

ಆಪಃ । ಅಸ್ಮಾನ್ । ಮಾತರಃ । ಶುಂಧಯಂತು । ಘೃತೇನ । ನಃ । ಘೃತऽಪ್ವಃ । ಪುನಂತು ।
ವಿಶ್ವಂ । ಹಿ । ರಿಪ್ರಂ । ಪ್ರऽವಹಂತಿ । ದೇವೀಃ । ಉತ್ । ಇತ್ । ಆಭ್ಯಃ । ಶುಚಿಃ । ಆ । ಪೂತಃ ।
ಏಮಿ ॥ ೧೦ ॥

॥ ಸಾಯಣಭಾಷ್ಯಂ ॥

ಅವಭೃಥಸ್ನಾನ ಆಪೋ ಅಸ್ಮಾನಿತ್ಯೇಷಾ । ಸೂತ್ರಿತಂ ಚ । ತತ ಆಚಮ್ಯಾಪ್ಲವಂತ ಆಪೋ ಅಸ್ಮಾನ್ಮಾತರಃ ಶುಂಧಯಂತು । ಆ. ೬-೧೩ । ಇತಿ ॥ ದಶಮೇಽಹನಿ ವಪಾಮಾರ್ಜನೇಽಪ್ಯೇಷಾ । ಸೂತ್ರಿತಂ ಚ । ಇದಮಾಪಃ ಪ್ರ ವಹತೇತ್ಯೇತಸ್ಯಾಃ ಸ್ಥಾನ ಆಪೋ ಅಸ್ಮಾನ್ಮಾತರಃ ಶುಂಧಯಂತು ಆ. ೮-೧೨ । ಇತಿ ॥

ಮಾತರೋ ಜಗತೋ ಮಾತೃಸ್ಥಾನೀಯಾ ಆಪೋಽಸ್ಮಾಞ್ಛುಂಧಯಂತು । ಪ್ರೋಕ್ಷಣೇನ ಶೋಧಯಂತು । ತಥಾ ಘೃತಪ್ವಃ । ಘೃತಮುದಕಂ । ತೇನಾಸ್ಮಾನ್ಪುನಂತೀತಿ । ತಾಸ್ತಥೋಕ್ತಾ ಆಪಃ । ಯದ್ವಾ । ಘೃತಪ್ವಃ । ಘೃತಂ ಗವ್ಯಂ । ತೇನ ಪುನಂತಿ । ತಥಾ ಬ್ರಾಹ್ಮಣಂ । ಘೃತೇನ ನೋ ಘೃತಪ್ವಃ ಪುನಂತೀತಿ ತದ್ವೈ ಸುಪೂತಂ ಯದ್ಘೃತೇನ ಪೂಯತ ಇತಿ । ತಾ ಆಪೋ ಘೃತೇನ ಪ್ರತ್ಯಕ್ಷೇಣೋದಕೇನ ನೋಽಸ್ಮಾನ್ಪುನಂತು । ಹಿ ಯಸ್ಮಾದ್ದೇವೀರ್ದೇವ್ಯೋ ದೇವನಶೀಲಾ ಆಪೋ ವಿಶ್ವಂ ಸರ್ವಂ ರಿಪ್ರಂ ಪಾಪಂ ಪ್ರವಹಂತಿ ಪುರುಷಸಕಾಶಾತ್ಪ್ರಗಮಯಂತಿ । ಅಪನಯಂತೀತಿ ಯಾವತ್ । ಅನಂತರಮಾಭ್ಯೋಽದ್ಭ್ಯ ಆ ಪೂತ ಅಭಿಮುಖ್ಯೇನ ಶುದ್ಧಃ ಸನ್ ಸ್ತೋತಾಹಮುದೇಮಿ । ಉದ್ಗಚ್ಛಾಮಿ । ಊರ್ಧ್ವಂ ಸ್ವರ್ಗಂ ಗಚ್ಛಾಮೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಮಾತರಃ**—ಮಾತೃರೂಪಿಗಳಾದ । **ಆಪಃ**—ಉದಕಗಳು । **ಅಸ್ಮಾನ್**—ನಮ್ಮನ್ನು । **ಶುಂಧಯಂತು**—ಶುದ್ಧಿಗೊಳಿಸಲಿ । **ಘೃತಪ್ವಃ**—ಶುದ್ಧಿಗೊಳಿಸುವ ಉದಕಗಳು । **ಘೃತೇನ**—ತಮ್ಮ ಪ್ರವಾಹದಿಂದ ।

**ನಃ**—ನಮ್ಮನ್ನು | **ಪುನಂತು**—ಶುದ್ಧಿಗೊಳಿಸಲಿ | **ಹಿ**—ಏತಕ್ಕೆಂದರೆ | **ದೇವೀಃ**—ದೇವತಾತ್ಮರಾದ ಉದಕಗಳು | **ವಿಶ್ವಂ ಹಿ**—ಸಕಲವಾದ | **ರಿಪ್ರಂ**—ಪಾಪವನ್ನೂ | **ಪ್ರವಹಂತಿ**—ಕೊಚ್ಚಿ ನಾಶಪಡಿಸುತ್ತದೆ | **ಆಭ್ಯಃ**—ಈ ಉದಕಗಳಿಂದ | **ಆ ಪೂತಃ ಶುಚಿಃ**—ಶುದ್ಧಿಯನ್ನು ಹೊಂದಿದ ನಾನು | **ಉದೇಮಿ**—ಸ್ವರ್ಗಕ್ಕೆ ಹತ್ತಿಹೋಗುತ್ತೇನೆ.

॥ ಭಾವಾರ್ಥ ॥

ಮಾತೃರೂಪಿಗಳಾದ ಉದಕಗಳು ನಮ್ಮನ್ನು ಶುದ್ಧಿಗೊಳಿಸಲಿ. ಶುದ್ಧಿಗೊಳಿಸುವ ಉದಕಗಳು ತಮ್ಮ ಪ್ರವಾಹದಿಂದ ನಮ್ಮನ್ನು ಪವಿತ್ರರನ್ನಾಗಿ ಮಾಡಲಿ. ದೇವತಾತ್ಮಗಳಾದ ಉದಕಗಳು ನಮ್ಮ ಸಕಲ ಪಾಪವನ್ನು ಕೊಚ್ಚಿ ನಾಶಪಡಿಸುತ್ತವೆ. ಈ ಉದಕಗಳಿಂದ ಶುದ್ಧಿಯನ್ನು ಹೊಂದಿದ ನಾನು ಸ್ವರ್ಗಕ್ಕೆ ಹತ್ತಿಹೋಗುತ್ತೇನೆ.

## English Translation

May the maternal waters purify us; may the shedders of water purify us with the effusion; for the divine (waters) bear away all sin; I come away from them purified (to heaven).

॥ ವಿಶೇಷವಿಷಯಗಳು ॥

ಅವಭೃತಸ್ನಾನದಲ್ಲಿ **ಆಪೋ ಅಸ್ಮಾನ್** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ–**ತತ ಆಚಮ್ಯಾಪ್ಲವಂತ ಆಪೋ ಅಸ್ಮಾನ್ ಮಾತರಃ ಶುಂಧಯಂತು** ಎಂಬ ಸೂತ್ರದಿಂದ (ಆ. ೬–೧೩) ವಿವೃತವಾಗಿರುವುದು. ಮತ್ತು ಹತ್ತನೆಯ ದಿವಸ ವಪಾಮಾರ್ಜನಕಾಲದಲ್ಲಿಯೂ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಇದಮಾಪಃ ಪ್ರ ವಹತೇತ್ಯೇತಸ್ಯಾ ಸ್ಥಾನ **ಆಪೋ ಅಸ್ಮಾನ್ಮಾತರಃ ಶುಂಧಯಂತು** ಎಂಬ ಸೂತ್ರದಿಂದ (ಆ. ೮–೧೨) ವಿವೃತವಾಗಿರುವುದು.

**ಮಾತರಃ ಆಪಃ**—ಇಲ್ಲಿ ಆಪಃ-ಉದಕಗಳನ್ನು ಅಥವಾ ಉದಕಾಭಿಮಾನಿದೇವತೆಗಳನ್ನು **ಮಾತರಃ** ಎಂಬ ಶಬ್ದದಿಂದ ವರ್ಣಿಸಲಾಗಿದೆ. ಏಕೆಂದರೆ ತಾಯಿಯರು ತಮ್ಮ ಮಕ್ಕಳನ್ನು ಸ್ತನ್ಯಾದಿಗಳಿಂದ ಪೋಷಿಸಿ ಬೆಳೆಸುವಂತೆ ಈ ಉದಕಗಳು ಸಸ್ಯಾದಿಗಳಿಂದ ಬೆಳೆಸಿ ಅವುಗಳಿಂದ ಲಬ್ಧವಾಗುವ ಆಹಾರಾದಿಗಳಿಂದ ನಮ್ಮನ್ನು (ಸಮಸ್ತ ಪ್ರಾಣಿಗಳನ್ನು) ಪೋಷಿಸುತ್ತಿರುವುವು. ಆದ್ದರಿಂದ ಮಾತೃಗಳಂತೆ ಪೋಷಿಸುವ ಸ್ವಭಾವವುಳ್ಳ ಉದಕಗಳನ್ನು **ಮಾತರಃ** ಎಂದು ಗೌರವಸೂಚಕವಾದ ಶಬ್ದದಿಂದ ಕರೆಯುವುದು ಸಹಜವಾಗಿದೆ.

**ಶುಂಧಯಂತು—ಪ್ರೋಕ್ಷಣೇನ ಶೋಧಯಂತು** | ಉದಕಗಳು ಪ್ರೋಕ್ಷಣಾದಿಗಳಿಂದ ನಮ್ಮನ್ನು ಶುದ್ಧಿಮಾಡಲಿ ಎಂಬ ಆಶ್ವಾಸನೆಯು ಇಲ್ಲಿ ಉಕ್ತವಾಗಿದೆ. ನೀರು ಅಥವಾ ಉದಕಗಳು ಎಲ್ಲವನ್ನು ಶುದ್ಧಿಮಾಡುವವು ಎಂಬ ವಿಷಯವು ಅನುಭವವೇದ್ಯವೇ ಆಗಿದೆ. ಸ್ನಾನಾದಿಗಳಿಂದ ನಮ್ಮ ಶರೀರವನ್ನೂ, ಒಗೆಯುವುದರಿಂದ ನಮ್ಮ ವಸ್ತ್ರಾದಿಗಳನ್ನೂ, ಸಂಮಾರ್ಜನಾದಿಗಳಿಂದ ಗೃಹಾದಿಗಳನ್ನೂ, ತೊಳೆಯುವುದರಿಂದ ಪಾತ್ರಾದಿಗಳನ್ನೂ ನಾವು ಶುದ್ಧಿಮಾಡುತ್ತೇವೆ. ಎಂದರೆ ಯಾವುದನ್ನು ಶುದ್ಧಿಮಾಡಬೇಕಾದರೂ ನೀರು ಬೇಕೇಬೇಕು. ಈ ವಿಧವಾದ ಬಾಹ್ಯಶುದ್ಧಿಯಲ್ಲದೆ ಶರೀರದ ಒಳಭಾಗದಲ್ಲಿಯೂ ಆಚಮನಾದಿಗಳಿಂದ ಅಂತಃಶುದ್ಧಿಯಾಗುವುದೆಂದು—**ಆಪೋಽ–ಸ್ಯಾತ್ಮಂತರತ ಏವ ಮೇಧ್ಯೋ ಭವತಿ** ಎಂಬ ತೈತ್ತಿರೀಯಶ್ರುತಿವಾಕ್ಯವು (ತೈ. ಸಂ. ೬.೧.೧.೩) ಸಾರುತ್ತಿದೆ.

**ಘೃತಪ್ವಃ**—ಈ ಶಬ್ದಕ್ಕೆ ಎರಡು ವಿಧ ಅರ್ಥವನ್ನು ಹೇಳಬಹುದು. **ಘೃತಮುದಕಂ ತೇನಾನ್ಯಾನ್ ಪುನಂತೀತಿ । ತಾಸ್ತಥೋಕ್ತಾ ಆಪಃ ।** ಘೃತವೆಂದರೆ ಉದಕವು (ನಿ. ೧-೧೨) ಈ ಉದಕದಿಂದ ಇತರರನ್ನು ಅಥವಾ ಇತರ ವಸ್ತುಗಳನ್ನು ಶುದ್ಧಿಮಾಡುತ್ತಾರಾದ್ದರಿಂದ ಶುದ್ಧಿಕಾರಕವಾದ ಉದಕಗಳು ಎಂದು ಒಂದು ವಿಧವಾದ ಅರ್ಥವು. **ಯದ್ವಾ । ಘೃತಂ ಗವ್ಯಂ । ತೇನ ಪುನಂತಿ** ತಥಾ ಬ್ರಾಹ್ಮಣಂ-**ಘೃತೇನ ನೋ ಘೃತಪ್ವಃ ಪುನಂತೀತಿ ತದ್ವೈ ಸುಪೂತಂ ಯದ್ಘೃತೇನ ಪೂಯತೇ** (ಶ. ಬ್ರಾ. ೩-೧-೨-೧೧) ಅಥವಾ ಘೃತವೆಂದರೆ ಗೋವಿಕಾರವಾದ ತುಪ್ಪವು ಅಥವಾ ಆಜ್ಯವು. ಇದನ್ನು ಸವರುವುದರಿಂದ ಶುದ್ಧಿಮಾಡುತ್ತಾರೆಂದು ಹೇಳಿದೆ. ಈ ವಿಷಯದಲ್ಲಿ ಯಾವ ವಸ್ತುವನ್ನು ಘೃತದಿಂದ (ಸವರುವುದು ಅಥವಾ ಮಿಶ್ರಣಮಾಡುವುದರಿಂದ) ಪೂಜಿಸುವರೋ ಅದು ಶುದ್ಧವೆಂದು ಪರಿಗಣಿಸಲ್ಪಡುವುದು ಎಂಬರ್ಥವುಳ್ಳ ಶತಪಥಬ್ರಾಹ್ಮಣವಾಕ್ಯವನ್ನು ಭಾಷ್ಯಕಾರರು ಉದಾಹರಿಸಿದಾರೆ.

**ವಿಶ್ವಂ ಹಿ ರಿಪ್ರಂ ಪ್ರವಹಂತಿ ದೇವೀಃ**—ರಿಪ್ರವೆಂದರೆ ಪಾಪವು. ನಮ್ಮ ಸಮಸ್ತ ಪಾಪವನ್ನೂ ಉದಕಗಳು ಕೊಚ್ಚಿಕೊಂಡುಹೋಗಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ. ಈ ವಿಷಯದಲ್ಲಿ **ಇದಮಾಪಃ ಪ್ರವಹತ ಯತ್ಕಿಂಚ ದುರಿತಂ ಮಯಿ** (ಋ. ಸಂ. ೧೦-೯-೮) ಎಂಬ ಶ್ರುತಿವಾಕ್ಯದ ಸಮರ್ಥನೆಯೂ ಇರುವುದು.

। ಸಂಹಿತಾಪಾಠಃ ।

ದ್ರಪ್ಸಶ್ಚಸ್ಕಂದ ಪ್ರಥಮಾँ ಅನು ದ್ಯೂನಿಮಂ ಚ ಯೋನಿಮನು ಯಶ್ಚ ಪೂರ್ವಃ ।
ಸಮಾನಂ ಯೋನಿಮನು ಸಂಚರಂತಂ ದ್ರಪ್ಸಂ ಜುಹೋಮ್ಯನು ಸಪ್ತ ಹೋತ್ರಾಃ ॥ ೧೧ ॥

॥ ಪದಪಾಠಃ ॥

ದ್ರಪ್ಸಃ । ಚಸ್ಕಂದ । ಪ್ರಥಮಾನ್ । ಅನು । ದ್ಯೂನ್ । ಇಮಂ । ಚ । ಯೋನಿಂ । ಅನು । ಯಃ । ಚ । ಪೂರ್ವಃ ।
ಸಮಾನಂ । ಯೋನಿಂ । ಅನು । ಸಂऽಚರಂತಂ । ದ್ರಪ್ಸಂ । ಜುಹೋಮಿ । ಅನು । ಸಪ್ತ । ಹೋತ್ರಾಃ ॥

। ಸಾಯಣಭಾಷ್ಯಂ ।

**ಸುತ್ಯೇಽಹನಿ ದ್ರಪ್ಸಶ್ಚಸ್ಕಂದೇತ್ಯಾದಿಕೇ ದ್ವೇ ವಿಪ್ರುಡ್ಹೋಮಾರ್ಥೇ । ಸೂತ್ರಿತಂ ಚ । ದ್ರಪ್ಸಶ್ಚಸ್ಕಂದೇತಿ ದ್ವಾಭ್ಯಾಂ ವಿಪ್ರುಡ್ಹೋಮೌ ಹುತ್ವಾ । ಆ. ೫-೨ । ಇತಿ । ಸ್ಕನ್ನಹವಿರಭಿಮರ್ಶನೇಽಪಿ ದ್ರಪ್ಸ**

ಇತ್ಯೇಷಾ । ಆಹುತಿರ್ಬಹಿಷ್ಪರಿಧಿ ಯದಿ ಸ್ಕಂದೇತ್ ತದಾನೀಮಾಗ್ನೀಧ್ರೋಽನಯಾ ಜುಹುಯಾತ್ । ಸ್ಕನ್ನಮಭಿಮೃಶೇದಿತಿ ಪ್ರಕೃತ್ಯ ಸೂತ್ರಿತಂ । ದ್ರಪ್ಸಶ್ಚಸ್ಕಂದೇತ್ಯಾಹುತಿಶ್ಚೇದ್ಬಹಿಷ್ಪರಿಧ್ಯಾಗ್ನೀಧ್ರ ಏನಾಂ ಜುಹುಯಾತ್ । ಆ. ೩-೧೩ । ಇತಿ ॥

ದ್ರಪ್ಸೋಽಭಿಷೂಯಮಾಣಸ್ಯ ಸೋಮಸ್ಯ ರಸಃ ಪ್ರಥಮಾನ್ ಪೂರ್ವಭಾವಿನಃ ಪಾರ್ಥಿವಾಽ-ಲ್ಲೋಕಾನ್ ದ್ಯೂನ್ ದೀಪ್ಯಮಾನಾನ್ದ್ಯುಲೋಕಾಂಶ್ಚಾನು ಲಕ್ಷೀಕೃತ್ಯ ಚಸ್ಕಂದ । ಸ್ಕನ್ನವಾನ್ । ಗತವಾನ್। ತದೇವಾಹ । ಇಮಂ ಪರಿದೃಶ್ಯಮಾನಂ ಯೋನಿಂ ಸ್ಥಾನಭೂತಂ ಲೋಕಂ ಚ ಯಶ್ಚಾಸ್ಮಾ-ತ್ಪೂರ್ವೋಽಸ್ತಿ ತಮನುಗತವಾನ್ । ಸಮಾನಂ ಸಾಧಾರಣಂ ಯೋನಿಂ ದ್ಯಾವಾಪೃಥಿವೀಲಕ್ಷಣಂ ಸ್ಥಾನಮನು ಸಂಚರಂತಂ ಸಮ್ಯಗ್ಗಚ್ಛಂತಂ ದ್ರಪ್ಸಂ ಸೋಮರಸಂ ವಿಪ್ರುಡ್ಲಕ್ಷಣಂ ಸಪ್ತ ಹೋತ್ರಾಃ ಸಪ್ತಸಂಖ್ಯಾಕಾಃ ವಿಪ್ರುಡ್ಢೋಮಸ್ಯ ಕರ್ತಾರೋ ಹೋತೃಪ್ರಭೃತಯೋ ವಯಮನ್ವಾನುಪೂರ್ವ್ಯೇಣ ಜುಹೋಮಿ । ಜುಹುಮಃ । ಯದ್ವಾ । ಹೋತ್ರಾಃ ಸಪ್ತಹೋತೃಭಿಃ ಕ್ರಿಯಮಾಣಾ ಯಾಗಕ್ರಿಯಾ ಹೋತ್ರಾಃ । ತಾ ಅನು ಪಶ್ಚಾದಧ್ವರ್ಯುರಹಂ ಜುಹೋಮಿ । ಯದ್ವಾ । ದ್ರುತಗಾಮಿತ್ವಾದ್ದ್ರಪ್ಸ ಆದಿತ್ಯ ಉಚ್ಯತೇ । ಸ ಆದಿತ್ಯಃ ಪೃಥಿವೀಂ ಚ ದಿವಂ ಚ ಗಚ್ಛತಿ ಸಮಾನಂ ಯೋನಿಮಂತರಿಕ್ಷಂ ಲಕ್ಷೀಕೃತ್ಯ । ಸಮ್ಯಕ್ಚರಂತಂ ತಂ ದ್ರಪ್ಸಮಾದಿತ್ಯಮುದ್ದಿಶ್ಯ ಸಪ್ತ ಹೋತ್ರಾಃ ಸಪ್ತಸಂಖ್ಯಾಕಾಃ ದಿಶಃ । ಯಸ್ಯಾಂ ದಿಶಿ ಸೂರ್ಯೋ ವರ್ತತೇ ತದ್ವ್ಯತಿರಿಕ್ತಾಃ ಸಪ್ತಸಂಖ್ಯಾಕಾ ದಿಶಃ। ಅನು ಪಶ್ಚಾಜ್ಜುಹೋಮಿ। ಯತ್ರ ಯತ್ರ ವರ್ತತೇ ತಾಂ ತಾಂ ದಿಶಂ ದ್ರಪ್ಸತ್ವೇನ ಪ್ರಯಚ್ಛಾಮಿ । ಪ್ರತಿಷ್ಠಾಪಯಾಮೀತ್ಯರ್ಥಃ । ಅತ್ರ ವಾಜಸನೇಯಕಂ । ಅಸೌ ವಾ ಆದಿತ್ಯೋ ದ್ರಪ್ಸಃ ಸ ದಿವಂ ಚ ಪೃಥಿವೀಂ ಚ ಸ್ಕಂದತೀಮಂ ಚ ಯೋನಿಮನು ಯಶ್ಚ ಪೂರ್ವ ಇತೀಮಂ ಚ ಲೋಕಮಮುಂ ಚೇತ್ಯೇತತ್ ಸಮಾನಂ ಯೋನಿಮನು ಸಂಚರಂತಮಿತಿ ಸಮಾನಂ ಹ್ಯೇಷ ಏತಂ ಯೋನಿಮನು ಸಂಚರತಿ ದ್ರಪ್ಸಂ ಜುಹೋಮ್ಯನು ಸಪ್ತ ಹೋತ್ರಾ ಇತ್ಯಸೌ ವಾ ಆದಿತ್ಯೋ ದ್ರಪ್ಸೋ ದಿಶಃ ಸಪ್ತ ಹೋತ್ರಾ ಅಮುಂ ತದಾದಿತ್ಯಂ ದಿಕ್ಷು ಪ್ರತಿಷ್ಠಾಪಯತಿ । ಶತ. ೭-೪-೧-೨೦ । ಇತಿ ॥

॥ ಪ್ರತಿಪದಾರ್ಥ ॥

**ದ್ರಪ್ಸಃ**—ಹಿಂಡಿರುವ ಸೋಮರಸವು । **ಪ್ರಥಮಾನ್**—ಪ್ರಥಮಪ್ರದೇಶವಾದ ಪಾರ್ಥಿವಲೋಕಗಳನ್ನೂ । **ದ್ಯೂನ್ ಅನು**—ದ್ಯುಲೋಕಗಳನ್ನೂ ಲಕ್ಷಿಸಿ । **ಚಸ್ಕಂದ**—ಪ್ರವಹಿಸುತ್ತವೆ । **ಇಮಂ ಯೋನಿಂ**—ಇಲ್ಲಿ ಗೋಚರವಾಗುವ ಲೋಕಕ್ಕೂ (ಮತ್ತು) । **ಯಃ**—ಯಾವುದು । **ಪೂರ್ವಃ**-ಹಿಂದಿನಿಂದ ಇರುವುದೋ । **ತಂ ಅನು**—ಅದನ್ನು ಲಕ್ಷಿಸಿ ಪ್ರವಹಿಸುತ್ತದೆ । **ಸಮಾನಂ**—ಸರ್ವ ಸಾಧಾರಣವಾದ । **ಯೋನಿಂ ಅನು ಸಂಚರಂತಂ**—ಲೋಕಗಳಲ್ಲೆಲ್ಲಾ ಪ್ರವಹಿಸುವ । **ದ್ರಪ್ಸಂ**—ಸೋಮರಸವನ್ನು । **ಸಪ್ತ ಹೋತ್ರಾಃ**—ಸಪ್ತ ಹೋತೃಗಳಾದ ನಾವು । **ಅನು ಜುಹೋಮಿ**—ಆಹುತಿರೂಪದಲ್ಲಿ ಅರ್ಪಿಸುತ್ತೇವೆ.

॥ ಭಾವಾರ್ಥ ॥

ಹಿಂಡಿರುವ ಸೋಮರಸವು ಅನಾದಿಕಾಲದಿಂದ ಇರುವ ದ್ಯಾವಾಪೃಥಿವಿಗಳಲ್ಲೆಲ್ಲ ಪ್ರವಹಿಸುತ್ತವೆ. ನಮಗೆ ಗೋಚರವಾಗುವುದೂ, ಮತ್ತು ಹಿಂದಿನಿಂದ ಇರತಕ್ಕದ್ದೂ ಆದ ಲೋಕಗಳಲ್ಲೆಲ್ಲ ಪ್ರವಹಿಸುತ್ತದೆ. ಸಕಲ ಲೋಕಗಳಲ್ಲೂ ಪ್ರವಹಿಸುವ ಸೋಮರಸವನ್ನು ಸಪ್ತಹೋತೃಗಳಾದ ನಾವು ಆಹುತಿರೂಪದಲ್ಲಿ ಅರ್ಪಿಸುತ್ತೇವೆ.

## English Translation

The juice of the Soma has risen to the earthly and heavenly (worlds), both this visible world. and that which (existed) before (it): I offer that juice flowing through the common region (of heaven and earth) after the sacrifices (offered by the) seven (officiating priests).

॥ ವಿಶೇಷವಿಷಯಗಳು ॥

ಯಜ್ಞದಲ್ಲಿ ಸೋಮರಸವನ್ನು ಹಿಂಡುವ ದಿವಸ ದ್ರಪ್ಸಶ್ಚಸ್ಕಂದ ಎಂಬ ಈ ಋಕ್ಕನ್ನೂ ಇದರ ಮುಂದಿನ ಋಕ್ಕನ್ನೂ ವಿಪ್ರುಡ್ಢೋಮಾರ್ಥವಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ದ್ರಪ್ಸಶ್ಚಸ್ಕಂದೇತಿ ದ್ವಾಭ್ಯಾಂ ವಿಪ್ರುಡ್ಢೋಮೌ ಹುತ್ವಾ** ಎಂಬ ಸೂತ್ರದಿಂದ (ಆ. ೫-೨) ವಿವೃತವಾಗಿರುವುದು. ಸ್ಕನ್ನಹವಿರಭಿಮರ್ಶನದಲ್ಲಿಯೂ ಸಹ **ದ್ರಪ್ಸಃ** ಎಂಬ ಈ ಋಕ್ಕನ್ನು ಪಠಿಸಬೇಕು. ಅಗ್ನಿಯ ನಾಲ್ಕು ಕಡೆಯೂ ಇಟ್ಟಿರುವ ಪರಿಧಿಗಳ ಹೊರಕ್ಕೆ ಆಹುತಿಯ ಹವಿಸ್ಸು ಚೆಲ್ಲಿಹೋಗಿದ್ದಲ್ಲಿ ಆಗ ಆಗ್ನೀಧ್ರನೆಂಬ ಋತ್ವಿಜನು ಈ ಋಕ್ಕಿನಿಂದ ಆಹುತಿಯನ್ನು ಅರ್ಪಿಸಿ ಚೆಲ್ಲಿಹೋದ ಹವಿಸ್ಸನ್ನು ಅಭಿಮರ್ಶನ (ಮುಟ್ಟುವುದು) ಮಾಡಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ದ್ರಪ್ಸಶ್ಚಸ್ಕಂದೇತ್ಯಾಹುತಿಶ್ಚೇದ್ಬಹಿಷ್ಪರಿಧ್ಯಾಗ್ನೀಧ್ರ ಏನಾಂ ಜುಹುಯಾತ್** ಎಂಬ ಸೂತ್ರದಿಂದ (ಆ. ೩-೧೩) ವಿವೃತವಾಗಿರುವುದು.

**ದ್ರಪ್ಸಃ**—ಈ ಶಬ್ದಕ್ಕೆ ಎರಡುವಿಧವಾದ ಅರ್ಥವಿರುವುದು. **ಅಭಿಷೂಯಮಾಣಸ್ಯ ಸೋಮಸ್ಯ ರಸಃ**. ಸೋಮಲತೆಗಳನ್ನು ಕಲ್ಲಿನಿಂದ ಜಜ್ಜಿ ಹಿಂಡಿ ತೆಗೆದಿರುವ ರಸಕ್ಕೆ **ದ್ರಪ್ಸಃ** ಎಂದು ಹೆಸರು. ಅಥವಾ **ದ್ರಪ್ಸಃ ದ್ರುತಗಾಮಿತ್ವಾದ್ದ್ರಪ್ಸ ಉಚ್ಯತೇ** । ಶೀಘ್ರವಾಗಿ ಸಂಚರಿಸುವ ಸ್ವಭಾವವುಳ್ಳವನಾದ್ದರಿಂದ **ದ್ರಪ್ಸಃ** ಎಂದರೆ ಆದಿತ್ಯನೆಂದೂ ಅರ್ಥವು.

ಈ ಋಕ್ಕಿಗೆ ಆದಿತ್ಯಪರವಾಗಿಯೂ ಅರ್ಥಮಾಡಬಹುದೆಂದು ಭಾಷ್ಯಕಾರರು ಹೇಳಿ ವಾಜಸನೇಯ (ಶುಕ್ಲ-**ಯಜುರ್ವೇದ**) ಬ್ರಾಹ್ಮಣವಾಕ್ಯವನ್ನೂ ಉದಾಹರಿಸಿದಾರೆ—

> **ಅಸೌ ವಾ ಆದಿತ್ಯೋ ದ್ರಪ್ಸಃ ಸ ದಿವಂ ಚಂ ಪೃಥಿವೀಂ ಚ ಸ್ಕಂದತೀಮಂ ಚ ಯೋನಿಮನು ಯಶ್ಚ ಪೂರ್ವ ಇತೀಮಂ ಚ ಲೋಕಮಮುಂ ಚೇತ್ಯೇತತ್ಸಮಾನಂ ಯೋನಿಮನು ಸಂಚರಂತಮಿತಿ ಸಮಾನಂ ಹ್ಯೇಷ ಏತಂ ಯೋನಿಮನು ಸಂಚರತಿ ದ್ರಪ್ಸಂ ಜುಹೋಮ್ಯನು ಸಪ್ತ ಹೋತ್ರಾ ಇತ್ಯಸೌ ವಾ ಆದಿತ್ಯೋ ದ್ರಪ್ಸೋ ದಿಶಃ ಸಪ್ತ ಹೋತ್ರಾ ಅಮುಂ ತದಾದಿತ್ಯಂ ದಿಕ್ಷು ಪ್ರತಿಷ್ಠಾಪಯತಿ ।**

(ಶ. ಬ್ರಾ. ೭-೪-೧-೨೦)

**ಯಶ್ಚ ದ್ರಪ್ಸಃ**—ಶೀಘ್ರಗಾಮಿಯಾದ ಯಾವ ಆದಿತ್ಯನು । **ಪೂರ್ವಃ**—ಪೂರ್ವಾಭಿಮುಖವಾಗಿ ಉದಯಿಸಿ । **ಪ್ರಥಮಾನ್**—ಪೃಥಿವಿಯನ್ನೂ । **ದ್ಯಾಮ್ ಇಮಂ**—ದ್ಯುಲೋಕವನ್ನೂ । **ಚಸ್ಕಂದ**—ಉದ್ದೇಶಿಸಿ ಹೋಗುವನೋ ಅಂತಹ । **ಸಮಾನಂ ಯೋನಿಂ**—ಸಮಾನಸ್ಥಾನವಾದ ಅಂತರಿಕ್ಷದಲ್ಲಿ । **ಅನು ಸಂಚರಂತಂ**—

ಸಂಚರಿಸುತ್ತಿರುವ । ದ್ರಪ್ಸಂ—ಆದಿತ್ಯನನ್ನುದ್ದೇಶಿಸಿಯೂ । ಅನು—ಅನಂತರ । ಸಪ್ತ ಹೋತ್ರಾಃ—ಅಷ್ಟ ದಿಕ್ಕುಗಳಲ್ಲಿ ಸೂರ್ಯನಿರುವ ದಿಕ್ಕನ್ನು ಬಿಟ್ಟು ಉಳಿದ ಏಳು ದಿಕ್ಕುಗಳನ್ನೂ ಉದ್ದೇಶಿಸಿ । ಜುಹೋಮಿ—ಹವಿಸ್ಸ ನ್ನರ್ಪಿಸುತ್ತೇನೆ (ಎಂದರೆ ಆದಿತ್ಯನನ್ನು ಅಲ್ಲಿ ಸ್ಥಾಪಿಸುತ್ತೇನೆ).

ಈ ಅರ್ಥವನ್ನೇ ಮೇಲೆ ಉದಾಹರಿಸಿರುವ ಶತಪಥಬ್ರಾಹ್ಮಣವಾಕ್ಯದಲ್ಲಿ ವಿವರಿಸಲಾಗಿದೆ.

॥ ಸಂಹಿತಾಪಾಠಃ ॥

ಯಸ್ತೇ ದ್ರಪ್ಸಃ ಸ್ಕಂದತಿ ಯಸ್ತೇ ಅಂಶುರ್ಬಾಹುಚ್ಯುತೋ ಧಿಷಣಾಯಾ ಉಪಸ್ಥಾತ್ ।

ಅಧ್ವರ್ಯೋರ್ವಾ ಪರಿ ವಾ ಯಃ ಪವಿತ್ರಾತ್ತಂ ತೇ ಜುಹೋಮಿ ಮನಸಾ ವಷಟ್ಕೃತಂ ॥ ೧೨ ॥

॥ ಪದಪಾಠಃ ॥

ಯಃ । ತೇ । ದ್ರಪ್ಸಃ । ಸ್ಕಂದತಿ । ಯಃ । ತೇ । ಅಂಶುಃ । ಬಾಹುಽಚ್ಯುತಃ । ಧಿಷಣಾಯಾಃ । ಉಪಽಸ್ಥಾತ್ ।

ಅಧ್ವರ್ಯೋಃ । ವಾ । ಪರಿ । ವಾ । ಯಃ । ಪವಿತ್ರಾತ್ । ತಂ । ತೇ । ಜುಹೋಮಿ । ಮನಸಾ । ವಷಟ್ಽಕೃತಂ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಸೋಮ ತೇ ತ್ವದೀಯೋ ಯೋ ದ್ರಪ್ಸೋ ರಸಃ ಸ್ಕಂದತಿ ಅಧಿಷವಣಚರ್ಮಣೋಽನ್ಯತ್ರ ಗಚ್ಛತಿ ! ಯಶ್ಚ ತೇ ತ್ವದೀಯೋಽಂಶೂ ರಸಾದಿತರಃ ಸನ್ ಸ್ಕಂದತಿ । ಬಾಹುಚ್ಯುತೋಽಧ್ವರ್ಯೋರ್ಬಾಹುಭ್ಯಾಂ ಪ್ರಚ್ಯುತಃ ಸನ್ ಸ್ಕಂದತಿ । ಯದ್ವಾ । ಬಾಹುವತ್ಸಾಧನಭೂತಾ ಗ್ರಾವಾಣಃ । ತೈಃ ಪ್ರಚ್ಯುತೋಽಭಿಷುತಃ ಸನ್ ಧಿಷಣಾಯಾಃ । ಧಿಷಣೇತ್ಯಧಿಷವಣಫಲಕನಾಮ । ಪ್ರತ್ಯೇಕವಿವಕ್ಷಯೈಕವಚನಂ । ಅಧಿಷವಣಫಲಕಯೋರುಪಸ್ಥಾತ್ಪ್ರದೇಶಾದನ್ಯತ್ರ ಗಚ್ಛತಿ । ತಥಾಧ್ವರ್ಯೋರ್ವಾಭಿಷುಣ್ವತೋಽಧ್ವರ್ಯೋರ್ಹಸ್ತಾತ್ಸ್ಕಂದತಿ । ವಾಪಿ ವಾ ಪವಿತ್ರಾದ್ದಶಾಪವಿತ್ರಾತ್ಪರಿಸ್ಕಂದತಿ । ತಂ ಸರ್ವಂ ದ್ರಪ್ಸಂ ತೇ ತ್ವದೀಯಂ ರಸಂ ಮನಸಾಂತಃಕರಣೇನ ಸ್ತೋತ್ರೇಣ ವಾ ಸಹ ವಷಟ್ಕೃತಂ ವಷಟ್ಕಾರೇಣ ಸ್ವಾಹಾಕಾರೇಣ ಕೃತಂ ಜುಹೋಮಿ । ಅಗ್ನೌ ಪ್ರಕ್ಷಿಪಾಮಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮನೇ) ತೇ—ನಿನ್ನ । ಯಃ ದ್ರಪ್ಸಃ—ಯಾವ ರಸವು । ಸ್ಕಂದತಿ—ಅಧಿಷವಣಚರ್ಮ ದಿಂದ ಹೊರಟು ಪ್ರವಹಿಸುವುದೋ । ತೇ—ನಿನ್ನ । ಯಃ ಅಂಶುಃ—ಯಾವ ಲತಾದಿರೂಪದ ವಸ್ತುವು ।

**ಬಾಹುಚ್ಯುತಃ**—ಅಧ್ವರ್ಯುವಿನ ಬಾಹುವಿನಿಂದ ಹೊರಕ್ಕೆ ಹೊರಡುವುದೋ । **ಧಿಷಣಾಯಾಃ**—ಹಿಂಡುವ ಹಲಗೆಗಳಿಂದ ಹೊರಕ್ಕೆ । **ಉಪಸ್ಥಾತ್**—ಹೊರಹೊರಡುವುದೋ । **ಅಧ್ವರ್ಯೋರ್ವಾ**—ಅಧ್ವರ್ಯುವಿನಿಂದ ಅರ್ಪಿತವಾಗುವುದೋ । **ವಾ**—ಅಥವಾ । **ಪವಿತ್ರಾತ್**—ದಶಾಪವಿತ್ರದಿಂದ ಹೊರಹೊರಟು । **ಪರಿ**—ಸ್ರವಿಸುವುದೋ । **ತಂ**—ಅಂತಹ । **ತೇ**—ನಿನ್ನ ರಸವನ್ನು । **ಮನಸಾ**—ಸ್ತುತಿಪೂರ್ವಕವಾಗಿಯೂ । **ವಷಟ್ಕೃತಂ**—ವಷಟ್ಕಾರಪೂರ್ವಕವಾಗಿಯೂ । **ಜುಹೋಮಿ**—ಆಹುತಿರೂಪದಲ್ಲಿ ಅರ್ಪಿಸುತ್ತೇನೆ.

॥ ಭಾವಾರ್ಥ ॥

ಎಲೈ ಸೋಮನೇ, ನಿನ್ನ ಯಾವ ರಸವು ಅಧಿಷವಣಚರ್ಮದಿಂದ ಹೊರಟು ಪ್ರವಹಿಸುವುದೋ, ನಿನ ಯಾವ ಲತಾದಿರೂಪದ ವಸ್ತುವು ಅಧ್ವರ್ಯುವಿನ ಬಾಹುವಿನಿಂದ ಹೊರಕ್ಕೆ ಹೊರಡುವುದೋ ಹಿಂಡುವ ಹಲಗೆಗಳಿಂದ ಹೊರಕ್ಕೆ ಹೊರಡುವುದೋ, ಅಧ್ವರ್ಯುವಿನಿಂದ ಅರ್ಪಿತವಾಗುವುದೋ ಅಥವಾ ದಶಾಪವಿತ್ರದಿಂದ ಹೊರಹೊರಟು ಸ್ರವಿಸುವುದೋ ಅಂತಹ ನಿನ್ನ ರಸವನ್ನು ಸ್ತುತಿಪೂರ್ವಕವಾಗಿಯೂ, ವಷಟ್ಕಾರಪೂರ್ವಕವಾಗಿಯೂ ಆಹುತಿರೂಪದಲ್ಲಿ ಅರ್ಪಿಸುತ್ತೇನೆ.

English Translation

Your juice, (Soma), which escapes (from the hide), your filaments which let fall from the hands (of the priest escape) from the vicinity of the planks (of the press), or (from the hand) of the Adhwaryu, or from the filter ; I offer it all with my mind (to Agni) with the word vashat.

॥ ವಿಶೇಷವಿಷಯಗಳು ॥

ಇಲ್ಲಿ ವಷಟ್ಕಾರವೆಂದರೇನು ? ಇದನ್ನು ಏತಕ್ಕಾಗಿ ಪಠಿಸಬೇಕು ? ಇದರ ಸ್ವರೂಪ ಮತ್ತು ಸಂಕೇತಗಳೇನು ಇತ್ಯಾದಿ ವಿಷಯಗಳನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುವುದು ಆವಶ್ಯಕವಾಗಿದೆ. ಯಜ್ಞಾದಿಗಳಲ್ಲಿ ನಾನಾ ದೇವತೆಗಳಿಗೆ ಹವಿಸ್ಸನ್ನರ್ಪಿಸಬೇಕಾದರೆ—ಆ ದೇವತೆಗಳು ನಮಗೆ ಪ್ರತ್ಯಕ್ಷವಾಗಿ ಕಾಣಿಸುವುದಿಲ್ಲವಾದ್ದರಿಂದ—ಆಯಾ ದೇವತೆಗಳನ್ನುದ್ದೇಶಿಸಿ ಆ ದೇವತಾಕವಾದ ಮಂತ್ರಗಳನ್ನು ಪಠಿಸಿ ಅಗ್ನಿಯಲ್ಲಿ ಹೋಮಮಾಡುವರು. ಆರೀತಿ ಹೋಮ ಮಾಡುವಾಗ ಮಂತ್ರದ ಕೊನೆಯಲ್ಲಿ **ಸ್ವಾಹಾ** ಅಥವಾ **ವೌಷಟ್** ಎಂಬ ಶಬ್ದವನ್ನು ಸೇರಿಸಿ ಪಠಿಸುತ್ತಾ ಹೋಮ ಮಾಡುವರು. ಹೋಮಮಾಡುವುದಕ್ಕೆ ಪೂರ್ವಭಾವಿಯಾಗಿ ಕೆಲವು ನಿಯಮಗಳನ್ನನುಸರಿಸಬೇಕಾಗಿರುವುದು. ಹವಿಸ್ಸನ್ನರ್ಪಿಸಬೇಕಾಗಿರುವ ದೇವತೆಯನ್ನು ಮೊದಲು ದೇವತಾಕವಾದ ಸ್ತೋತ್ರಾದಿಗಳಿಂದ ಗುಣವರ್ಣನೆ ಮಾಡುವ ಮಂತ್ರಗಳನ್ನು ಪಠಿಸುವರು. ಈ ಗುಣವರ್ಣನೆ ಮಾಡುವ ಮಂತ್ರಗಳಿಗೆ ಶಸ್ತ್ರಮಂತ್ರ ಮತ್ತು ನಿವಿತ್ ಮಂತ್ರಗಳೆಂದು ಹೆಸರು. ನಿವಿನ್ಮಂತ್ರದಲ್ಲಿ ಆ ದೇವತೆಯ ವಿಶೇಷ ಗುಣವರ್ಣನೆ ಇರುವುದರಿಂದ ನಿವಿನ್ಮಂತ್ರವನ್ನು ಶಸ್ತ್ರಮಂತ್ರಗಳ ಮಧ್ಯದಲ್ಲಿ ಸೇರಿಸಿ ಪಠಿಸುವರು. ಈರೀತಿ ಉದ್ದಿಷ್ಟಗುಣವರ್ಣನೆಯಾದ ನಂತರ ಮತ್ತೊಂದು ಮಂತ್ರದಿಂದ ದೇವತೆಯನ್ನು ಯಜ್ಞಭೂಮಿಗೆ ಬರಬೇಕೆಂದು ಹೋತೃವೆಂಬ ಋತ್ವಿಜನು ಆಹ್ವಾನಮಾಡುವನು. ಈ ಆಹ್ವಾನಮಂತ್ರಕ್ಕೆ **ಅನುವಾಕ್ಯಾ** ಅಥವಾ **ಪುರೋನುವಾಕ್ಯಾ** ಮಂತ್ರವೆಂದು ಹೆಸರು. ಅನಂತರ ದೇವತೆಯು ಆಹ್ವಾನವನ್ನು ಮನ್ನಿಸಿ ಯಜ್ಞಭೂಮಿಗೆ ಬಂದು **ಬರ್ಹಿಃ** ಎಂಬ ದರ್ಭಾಸನದ ಮೇಲೆ ಕುಳಿತುಕೊಂಡಿರುವನೆಂದು

ಭಾವಿಸಿ ಮತ್ತೊಂದು ಮಂತ್ರದಿಂದ ಅಧ್ವರ್ಯುವೆಂಬ ಋತ್ವಿಜನು ಹವಿಸ್ಸನ್ನು ಅಗ್ನಿಯಲ್ಲಿ ಹೋಮಮಾಡುವನು. ಹೋಮಮಾಡುವಾಗ ಈ ಮಂತ್ರಕ್ಕೆ **ಯಾಜ್ಯಾ** ಎಂದು ಹೆಸರು. ಈ ಯಾಜ್ಯಾಮಂತ್ರದ ಕೊನೆಯಲ್ಲಿಯೇ ಸ್ವಾಹಾ ಅಥವಾ ವೌಷಟ್ ಎಂಬ ಶಬ್ದವನ್ನು ಸೇರಿಸಿ ಹೋಮಮಾಡುವರು. ಇದನ್ನು ಸ್ಪಷ್ಟಪಡಿಸುವುದಕ್ಕಾಗಿ ಒಂದು ಉದಾಹರಣೆಯನ್ನು ಕೊಡುವೆವು. ಪ್ರಕೃತ ವಿಷ್ಣುವನ್ನೇ ಉದ್ದೇಶಿಸಿ ಹೋಮಮಾಡಬೇಕಾದ ಸಂದರ್ಭದಲ್ಲಿ ವಿಷ್ಣು ದೇವತಾಕವಾದ **ನೂ ಮರ್ತೋದಯತೇ** (೭ನೇ ಮಂಡಲದ ನೂರನೇ ಸೂಕ್ತ) ಎಂಬ ಸೂಕ್ತವನ್ನು ಅಚ್ಛಾವಾಕ ನೆಂಬ ಋತ್ವಿಜನು ಶಸ್ತ್ರಮಂತ್ರಗಳಿಗಾಗಿ ಪಠಿಸುವನು. ಈ ಮಂತ್ರಗಳ ಮಧ್ಯದಲ್ಲಿ ವಿಷ್ಣುವಿನ ಗುಣಗಾನವನ್ನು ಮಾಡುವ ಕೆಲವು ಮಂತ್ರಗಳನ್ನು ಎಂದರೆ **ಪ್ರ ತತ್ತೇ ಅದ್ಯ** ಎಂದು ಮೊದಲಾಗುವ (ಋ. ಸಂ. ೭-೧೦೦-೫ ರಿಂದ ೭-೧೦೦-೭ ರ ವರೆಗಿನ) ಮೂರು ಋಕ್ಕುಗಳನ್ನು ನಿವಿನ್ಮಂತ್ರಗಳನ್ನಾಗಿ ಸೇರಿಸಿ ಪಠಿಸುವನು. ಅನಂತರ ವಿಷ್ಣುವನ್ನು ಆಹ್ವಾನಮಾಡುವುದಕ್ಕಾಗಿ—

**ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ ।**
**ಉದಸ್ತಭ್ನಾ ನಾಕಮೃಷ್ವಂ ಬೃಹಂತಂ ದಾಧರ್ಥ ಪ್ರಾಚೀಂ ಕಕುಭಂ ಪೃಥಿವ್ಯಾಃ ॥**
(ಋ. ಸಂ. ೭-೯೯-೨)

ಎಂಬ ಋಕ್ಕನ್ನು ಪಶುಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಿ ವಿಷ್ಣುದೇವತೆಯನ್ನು ಹೋತೃವು ಆಹ್ವಾನ ಮಾಡುವನು. ಅನಂತರ,

**ತ್ರಿರ್ದೇವಃ ಪೃಥಿವೀಮೇಷ ಏತಾಂ ವಿ ಚಕ್ರಮೇ ಶತರ್ಚಸಂ ಮಹಿತ್ವಾ ।**
**ಪ್ರ ವಿಷ್ಣುರಸ್ತು ತವಸಸ್ತವೀಯಾನ್ತ್ವೇಷಂ ಹ್ಯಸ್ಯ ಸ್ಥವಿರಸ್ಯ ನಾಮ ॥**
(ಋ. ಸಂ. ೭-೧೦೦-೩)

ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸುವನು. ಈ ಮಂತ್ರದ ಕೊನೆಯಲ್ಲಿ ಇರುವ **ಸ್ಥವಿರಸ್ಯ ನಾಮ** ಎಂಬ ಶಬ್ದಗಳನಂತರ **ವೌಷಟ್** ಎಂಬ ಶಬ್ದವನ್ನು ಸೇರಿಸಿ **ಸ್ಥವಿರಸ್ಯ ನಾಮ ವೌಷಟ್** ಎಂದು ಪಠಿಸುತ್ತಾ ಪಶುವಿನ ವಪಾ ಎಂಬ ಅವಯವವನ್ನು ಅಗ್ನಿಯಲ್ಲಿ ಹೋಮಮಾಡುವನು. ಪ್ರತಿದೇವತೆಯನ್ನೂ ಉದ್ದೇಶಿಸಿ ಹೋಮಮಾಡು ವಾಗಲೂ ಈ ಕ್ರಮವನ್ನನುಸರಿಸಬೇಕು. ಆದರೆ ಪ್ರತಿದೇವತೆಗೂ ಮಂತ್ರಗಳು ಬೇರೆಬೇರೆ. ಇದಲ್ಲದೆ ಹೋಮ ದ್ರವ್ಯವು ಆಜ್ಯ, ಹವಿಸ್ಸು, ಪುರೋಡಾಶ, ವಪಾ ಇತ್ಯಾದಿ ಅನೇಕವಿಧವಾಗಿರುವುದು. ಇದಕ್ಕನುಸಾರವಾಗಿ ಮಂತ್ರಗಳೂ ಬೇರೆಬೇರೆಯಾಗಿರುವವು. ಮೇಲೆ ಕೊಟ್ಟಿರುವ ಉದಾಹರಣೆಯಲ್ಲಿರುವ ಮಂತ್ರಗಳು ವಪಾಹೋಮಕ್ಕೆ ಮಾತ್ರ ಸಂಬಂಧಪಟ್ಟಿರುವ ಮಂತ್ರಗಳಾಗಿವೆ. ಇದರಂತೆ ಪುರೋಡಾಶಹೋಮಕ್ಕೂ ಹವಿಸ್ಸಿನ ಹೋಮಕ್ಕೂ ಪ್ರತ್ಯೇಕ ಮಂತ್ರ ಗಳಿರುವವು. ಮತ್ತು ಬೇರೆ ಬೇರೆ ಯಜ್ಞಗಳಲ್ಲಿಯೂ ಬೇರೆ ಬೇರೆ ಮಂತ್ರಗಳನ್ನು ಉಪಯೋಗಿಸಬೇಕಾಗಿರುವುದು.

ಇನ್ನು ವಷಟ್ಕಾರದ ಸ್ವರೂಪ ಮತ್ತು ಸಂಕೇತವೇನು ? ಇದನ್ನು ಮಂತ್ರದ ಕೊನೆಯಲ್ಲಿ ಏತಕ್ಕಾಗಿ ಉಪಯೋಗಿಸಬೇಕು ಎಂಬ ವಿಷಯವನ್ನು ಪರಿಶೀಲಿಸಬೇಕಾಗಿರುವುದು. ಈ ವಿಷಯದಲ್ಲಿ ಐತರೇಯಬ್ರಾಹ್ಮಣದಲ್ಲಿ ಹೇಳಿರುವ ವಿಸ್ತಾರವಾದ ವಿವರಣೆಯನ್ನೇ ಇಲ್ಲಿ ವಿವರಿಸಲಾಗಿದೆ —

**ದೇವಪಾತ್ರಂ ವಾ ಏತದ್ಯದ್ವಷಟ್ಕಾರೋ ವಷಟ್ಕಾರೇತಿ ದೇವಪಾತ್ರೇಣೈವ ತದ್ದೇವತಾಸ್ತ- ರ್ಪಯತಿ ॥**
(ಐ. ಬ್ರಾ. ೧೧-೫)

ಈಗ ವಷಟ್ಕಾರ ಮತ್ತು ಅನುವಷಟ್ಕಾರಗಳ ಸ್ವರೂಪವನ್ನು ವಿವರಿಸಲಾಗುವುದು. ಹೋಮಮಾಡುವಾಗ ಮಂತ್ರಾಂತ್ಯದಲ್ಲಿ ವೌಷಟ್ ಎಂದು ಪಠಿಸುವ ಶಬ್ದಕ್ಕೆ ವಷಟ್ಕಾರನೆಂದು ಹೆಸರು. ದೇವತೆಗಳಿಗೆ ಹವಿಸ್ಸನ್ನು ಭಕ್ಷಣಾರ್ಥವಾಗಿ ಅರ್ಪಿಸುವಾಗ ಲೋಕವ್ಯವಹಾರದಲ್ಲಿ ರೂಢಿಯಾಗಿರುವಂತೆ ಒಂದು ಪಾತ್ರೆ ಅಥವಾ ತಟ್ಟೆಯಲ್ಲಿ ಇಟ್ಟು ಅರ್ಪಿಸಬೇಕಷ್ಟೆ. ಪಾತ್ರೆಯಲ್ಲಿಟ್ಟು ಅರ್ಪಿಸುವುದರಿಂದ ಅದನ್ನು ಭಕ್ಷಿಸಲು ಅನುಕೂಲವಾಗುವುದು. ಯಜ್ಞದಲ್ಲಿ ದೇವತೆಗಳು ಹವಿಸ್ಸನ್ನು ಭಕ್ಷಿಸುವಾಗ ಅವರು ಅಪ್ರತ್ಯಕ್ಷವಾಗಿರುವುದರಿಂದ ಹವಿಸ್ಸನ್ನು ಅಗ್ನಿಯಲ್ಲಿ ಹೋಮಮಾಡುವುದರ ಮೂಲಕ ದೇವತೆಗಳಿಗೆ ಹವಿಸ್ಸು ಅರ್ಪಿತವಾಗುವುದು ಎಂದರೆ ತನ್ನಲ್ಲಿ ದೇವತೆಗಳನ್ನು ಪ್ರೇರಿಸಿ ಹೋಮಮಾಡಿದ ಹವಿಸ್ಸನ್ನು ಅಗ್ನಿಯು ದೇವತೆಗಳಿಗೆ ತಲುಪಿಸುವನು. ಹೋಮಮಾಡುವಾಗ ಹವಿಸ್ಸನ್ನಿಡುವ ಪಾತ್ರೆಯನ್ನು ದೇವತೆಗಳ ಮುಂದೆ ಇಡುವುದು ಹೇಗೆ? ಇದು ಸಾಧ್ಯವಿಲ್ಲ. ಆದ್ದರಿಂದ ಪಾತ್ರೆಗೆ ಬದಲಾಗಿ ಮಂತ್ರವನ್ನೇ ಪಠಿಸಿ ಅದನ್ನೇ ಪಾತ್ರೆಯೆಂದು ಭಾವಿಸಲಾಗಿರುವುದು. ವೌಷಟ್ ಎಂಬ ಮಂತ್ರವೇ ಈ ಪಾತ್ರೆಯು. ಮಂತ್ರಾಂತ್ಯದಲ್ಲಿ ವೌಷಟ್ ಎಂದು ಉಚ್ಚರಿಸಿದರೆ ಮಂತ್ರಪೂರ್ವಕವಾಗಿ ಅರ್ಪಿಸುವ ಹವಿಸ್ಸನ್ನು ಭಕ್ಷಿಸಲು ಅನುಕೂಲವಾಗುವಂತೆ ಪಾತ್ರೆಯಲ್ಲಿಟ್ಟು ಅರ್ಪಿಸಿದಂತಾಗುವುದು. ಆದ್ದರಿಂದ ವೌಷಟ್ ಎಂಬ ಶಬ್ದವು ದೇವತೆಗಳಿಗೆ ಪಾನ ಸಾಧನವಾದ ಪಾತ್ರೆಯು. ಈ ಕಾರಣಕ್ಕಾಗಿ ಎಂದರೆ ದೇವತೆಗಳಿಗೆ ಪಾತ್ರೆಯಲ್ಲಿಟ್ಟು ಹವಿಸ್ಸನ್ನು ಅರ್ಪಿಸಿ ತೃಪ್ತಿಪಡಿಸುವುದಕ್ಕಾಗಿಯೇ ಹೋತೃವು ಮಂತ್ರಾಂತ್ಯದಲ್ಲಿ ವೌಷಟ್ ಎಂಬ ಶಬ್ದವನ್ನು ಸೇರಿಸಿ ಪಠಿಸಿ ಹೋಮಮಾಡುವನು. ಇದೇ ವಷಟ್ಕಾರದ ಶಬ್ದಾರ್ಥವು. ಇನ್ನು ಅನುವಷಟ್ಕಾರದ ಅರ್ಥವನ್ನು ವಿವರಿಸುವರು—

**ಅನುವಷಟ್ಕರೋತಿ ತದ್ಯಥಾಽದೋಽಶ್ವಾನ್ವಾ ಗಾ ವಾ ಪುನರಭ್ಯಾಕಾರಂ ತರ್ಪಯಂತ್ಯೇವ-**
**ಮೇವೈತದ್ದೇವತಾಃ ಪುನರಭ್ಯಾಕಾರಂ ತರ್ಪಯಂತಿ ಯದನುವಷಟ್ಕರೋತಿ..........॥**

(ಐ. ಬ್ರಾ. ೧೧-೫)

ಲೋಕವ್ಯವಹಾರದಲ್ಲಿ ಜನರು ಅಶ್ವಗಳಿಗೂ, ಗೋವುಗಳಿಗೂ ಇತರ ಪ್ರಾಣಿಗಳಿಗೂ ಹುಲ್ಲು ಮೊದಲಾದ ಆಹಾರವನ್ನು ಅವುಗಳ ಮುಂದಿಟ್ಟು ತಿನ್ನುವಂತೆ ಪ್ರಿಯಶಬ್ದಗಳಿಂದ ಲಾಲಿಸುವಂತೆ ದೇವತೆಗಳಿಗೆ ಅಗ್ನಿಯ ಮೂಲಕವೇ ಹವಿಸ್ಸನ್ನು ಅರ್ಪಿಸಬೇಕಾಗಿರುವುದರಿಂದ—

**ಅಗ್ನೇ ವೀಹಿ ಪುರೋಳಾಶಮಾಹುತಂ ತಿರೋಅಹ್ನ್ಯಂ ।**
**ಸಹಸಃ ಸೂನುರಸ್ಯಧ್ವರೇ ಹಿತಃ ॥**

(ಋ. ಸಂ. ೩-೨೮-೩)

ಅಥವಾ—

**ಅಗ್ನೇ ವೀಹಿ ಹವಿಷಾ ಯಕ್ಷಿ ದೇವಾನ್ತ್ಸ್ವಧ್ವರಾ ಕೃಣುಹಿ ಜಾತವೇದಃ ।**

(ಋ. ಸಂ. ೩-೧೭.೩)

ಎಂಬ ಋಕ್ಕನ್ನು ಪಠಿಸಬೇಕು; ಎಲೈ ಅಗ್ನಿಯೇ, ಈ ಹವಿಸ್ಸನ್ನು ಅಥವಾ ಪುರೋಳಾಶವನ್ನು ಭಕ್ಷಿಸು ಅಥವಾ ಈ ಸೋಮರಸವನ್ನು ಪಾನಮಾಡು. ನಿನ್ನಲ್ಲಿ ಹೋಮಮೂಲಕವಾಗಿ ಅರ್ಪಿಸುವ ಈ ಹವಿಸ್ಸನ್ನು ದೇವತೆಗಳಿಗೆ ತಲುಪಿಸು ಎಂಬರ್ಥವಿರುವ ಈ ಋಕ್ಕನ್ನು ದೇವತೆಗಳ ಪ್ರೀತ್ಯರ್ಥವಾಗಿ ಪಠಿಸಬೇಕು. ಇದಕ್ಕೆ ಅನುವಷಟ್ಕಾರವೆಂದು ಹೆಸರು.

ವಜ್ರೋ ವಾ ಏಷ ಯದ್ವಷಟ್ಕಾರೋ ಯಂ ದ್ವಿಷ್ಯಾತ್ತಂ ಧ್ಯಾಯೇದ್ವಷಟ್ಕರಿಷ್ಯಂಸ್ತಸ್ಮಿನ್ನೇವ ತಂ ವಜ್ರಮಾಸ್ಥಾಪಯತಿ ।

(ಐ. ಬ್ರಾ. ೧೧-೬)

ವಷಟ್ಕಾರವು ವಜ್ರಾಯುಧದಂತಿರುವ ಒಂದು ಪ್ರಬಲವಾದ ಆಯುಧವು. ಯಜ್ಞಮಾಡುವ ಯಜಮಾನನಿಗೆ ಶತ್ರು ವಿದ್ದು ಅವನನ್ನು ನಾಶಮಾಡಬೇಕೆಂಬ ಮನಸ್ಸಿದ್ದರೆ ಈ ವಷಟ್ಕಾರದಿಂದ ಆಹುತಿಯನ್ನರ್ಪಿಸುವಾಗ ಆ ಶತ್ರುವು ನಾಶ ವಾಗಲಿ ಎಂದು ಮನಸ್ಸಿನಲ್ಲಿ ಧ್ಯಾನಿಸುತ್ತಾ ಹೋಮಮಾಡಿದರೆ ವಷಟ್ಕಾರವು ಆ ಶತ್ರುವನ್ನು ವಜ್ರಾಯುಧದ ಪ್ರಹಾರ ದಂತೆ ಅವನನ್ನು ಪ್ರಹರಿಸಿ ಸಂಹರಿಸುವುದು.

ಷಳಿತಿ ವಷಟ್ಕರೋತಿ ಷಡ್ವಾ ಋತವಃ ಋತೂನೇವ ತತ್ಕಲ್ಪಯತ್ಯೃತೂನ್ಪ್ರತಿಷ್ಠಾಪಯತ್ಯೃತೂನ್ವೈ ಪ್ರತಿತಿಷ್ಠತ ಇದಂ ಸರ್ವಮನು ಪ್ರತಿತಿಷ್ಠತಿ ಯದಿತಂ ಕಿಂಚ ॥

ವೌಷಟ್ ಎಂಬ ಶಬ್ದದಲ್ಲಿ ಷಟ್ ಎಂಬ ಪದವಿರುವುದಷ್ಟೆ. ಇಲ್ಲಿ ಷಟ್ ಎಂದರೆ ಆರು ಋತುಗಳು ಎಂದರ್ಥವು. ಒಂದು ವರ್ಷದಲ್ಲಿ ಆರು ಋತುಗಳಿರುವವು. ಆದ್ದರಿಂದ ವಷಟ್ಕಾರದಿಂದ ಹವಿಸ್ಸನ್ನರ್ಪಿಸಿದರೆ ಅವನು ಆರು ಋತು ಗಳನ್ನು ತೃಪ್ತಿಪಡಿಸಿದಂತಾಗುವುದು. ಇಷ್ಟೇ ಅಲ್ಲ, ಎಲ್ಲವನ್ನೂ ತೃಪ್ತಿಪಡಿಸಿದಂತಾಗುವುದರಿಂದ ಅವನು ಸಮಸ್ತ ಕಾರ್ಯಗಳಲ್ಲಿಯೂ ಜಯಶೀಲನಾಗುವನು. ಈ ವಿಷಯವನ್ನೇ ಮುಂದಿನ ವಾಕ್ಯದಲ್ಲಿ ವಿಸ್ತಾರವಾಗಿ ವಿವರಿಸುವರು.

ಪ್ರತಿತಿಷ್ಠತಿ ಯ ಏವಂ ವೇದ ತದು ಹ ಸ್ಮಾಹ ಹಿರಣ್ಯದನ್ಬೈದ ಏತಾನಿ ವಾ ಏತೇನ ಷಟ್ ಪ್ರತಿಷ್ಠಾಪಯತಿ ದ್ಯೌರಂತರಿಕ್ಷೇ ಪ್ರತಿಷ್ಠಿತಾನ್ತರಿಕ್ಷಂ ಪೃಥಿವ್ಯಾಂ ಪೃಥಿವ್ಯಪ್ಸ್ವಾಪಃ ಸತ್ಯೇ ಸತ್ಯಂ ಬ್ರಹ್ಮಣಿ ಬ್ರಹ್ಮ ತಪಸೀತ್ಯೇತಾ ಏವ ತತ್ಪ್ರತಿಷ್ಠಾಃ ಪ್ರತಿತಿಷ್ಠಂತೀರಿದಂ ಸರ್ವಮನು ಪ್ರತಿತಿಷ್ಠತಿ ಯದಿದಂ ಕಿಂಚ ಪ್ರತಿತಿಷ್ಠತಿ ಯ ಏವಂ ವೇದ........॥

(ಐ. ಬ್ರಾ. ೧೧-೬)

ಸುವರ್ಣಮಯವಾದ ದಂತಪಂಕ್ತಿಗಳುಳ್ಳ ಬಿದಋಷಿಯ ಪುತ್ರನು ಈ ವಿಷಯದಲ್ಲಿ ಈ ರೀತಿ ಹೇಳಿರುವನು—ಸ್ವರ್ಗ ಲೋಕವೇ ಮೊದಲಾದ ಬ್ರಹ್ಮದವರೆಗಿನ ಆರು ಸ್ಥಾನಗಳನ್ನು ವಷಟ್ಕಾರದಿಂದ ಹೋತೃವು ಪ್ರತಿಷ್ಠಿಸಿದಂತಾಗುವುದು. ಎಂದರೆ, ಸ್ವರ್ಗದ ಕೆಳಭಾಗದಲ್ಲಿ ಅಂತರಿಕ್ಷವಿರುವುದರಿಂದ ಅಂತರಿಕ್ಷದ ಮೇಲೆ ಸ್ವರ್ಗವಿದ್ದಂತಾಯಿತು. ಹಾಗೆಯೇ ಅಂತರಿಕ್ಷವು ಪೃಥಿವಿಯ ಮೇಲೆಯೂ, ಪೃಥಿವಿಯು ಕೆಳಭಾಗದಲ್ಲಿರುವ ನೀರಿನ ಮೇಲೆಯೂ, ನೀರು ಸತ್ಯದಮೇಲೆಯೂ ಪ್ರತಿಷ್ಠಿತವಾಗಿವೆ. ಜನರು ಸತ್ಯವಾದಿಗಳಾಗಿದ್ದಲ್ಲಿ ಕಾಲಕಾಲಕ್ಕೆ ಮಳೆಯಾಗುವುದು ಸಂಭವವು. ಆದ್ದರಿಂದ ಸತ್ಯದಲ್ಲಿ ನೀರು ಪ್ರತಿಷ್ಠಿತವಾಗಿವೆ ಎಂದು ಹೇಳಿದೆ. ಆ ಸತ್ಯವು ಬ್ರಹ್ಮನಲ್ಲಿ (ವೇದದಲ್ಲಿ)ಯೂ ಬ್ರಹ್ಮವು ವಷಟ್ಕಾರ ಮಂತ್ರರೂಪವಾದ ತಪಸ್ಸಿನಲ್ಲಿಯೂ ಪ್ರತಿಷ್ಠಿತವಾಗಿವೆ. ಆದ್ದರಿಂದ ವಷಟ್ಕಾರದಲ್ಲಿ ಸಮಸ್ತ ಜಗತ್ತೂ ನೆಲೆಸಿರು ವುದೆಂದು ತಿಳಿಯಬೇಕು. ಈ ವಿಷಯವನ್ನು ಯಾವ ಪುರುಷನು ತಿಳಿದಿರುವನೋ ಅವನು ಸರ್ವವನ್ನೂ ಜಯಿಸಿ ದಂತಾಗುವುದು.

ವಷಟ್ಕಾರಗಳಲ್ಲಿ ಮೂರು ಪ್ರಭೇದಗಳಿರುವವು, ಅವುಗಳ ಸ್ವರೂಪವನ್ನು ವಿವರಿಸುವರು —

ತ್ರಯೋ ವೈ ವಷಟ್ಕಾರಾ ವಜ್ರೋ ಧಾಮಚ್ಛದ್ರಿಕ್ತಃ ।

(ಐ. ಬ್ರಾ. ೧೧-೭)

ವಷಟ್ಕಾರಗಳಲ್ಲಿ ವಜ್ರ, ಧಾಮಚ್ಛತ್, ರಿಕ್ತ ಎಂದು ಮೂರು ವಿಧವು.

**ಸ ಯಮೇವೋಚ್ಚೈರ್ಬಲಿ ವಷಟ್ಕರೋತಿ ಸ ವಜ್ರಃ । ತಂ ತಂ ಪ್ರಹರತಿ ದ್ವಿಷತೇ ಭ್ರಾತೃವ್ಯಾಯ ವಧಂ ಯೋಽಸ್ಯ ಸ್ತೃತ್ಯಸ್ತಸ್ಮೈ ಸ್ತರ್ತವೇ ತಸ್ಮಾತ್ಸ ಭ್ರಾತೃವ್ಯವತಾ ವಷಟ್ಕೃತ್ಯಃ ॥**

ಈ ವಷಟ್ಕಾರವನ್ನು ಹೋತೃವು ಘಟ್ಟಿಯಾದ ಧ್ವನಿಯಲ್ಲಿ ಉಚ್ಚರಿಸುವುದರಿಂದ ಇದಕ್ಕೆ ವಜ್ರವೆಂಬ ಹೆಸರು ಬಂದಿರುವುದು. ಯಜ್ಞಮಾಡುವ ಯಜಮಾನನು ಯಾವಾಗ ತನಗೆ ಶತ್ರುಗಳಾದವರನ್ನು ಸಂಹಾರಮಾಡಬೇಕೆಂದು ಅಪೇಕ್ಷಿಸುವನೋ ಆಗ ಈ ವಷಟ್ಕಾರವನ್ನು ಪ್ರಯೋಗಿಸುವುದರಿಂದ ಅದು ವಜ್ರಾಯುಧರೂಪದಿಂದ ಯಜಮಾನನ ಶತ್ರುವನ್ನು ಪ್ರಹರಿಸಿ ನಾಶಮಾಡುವುದು. ಆದುದರಿಂದ ಶತ್ರುನಾಶವನ್ನು ಅಪೇಕ್ಷಿಸುವ ಯಜಮಾನನು ವಜ್ರರೂಪವಾದ ಈ ವಷಟ್ಕಾರವನ್ನು ಉಪಯೋಗಿಸಬೇಕು.

**ಅಥ ಯಃ ಸಮಃ ಸಂತತೋಽನಿರ್ಹಾಣರ್ಚಃ ಸ ಧಾಮಚ್ಛತ್ । ತಂ ತಂ ಪ್ರಜಾಶ್ಚ ಪಶವಶ್ಚಾನೂಪತಿಷ್ಠಂತೇ ತಸ್ಮಾತ್ಸ ಪ್ರಜಾಕಾಮೇನ ಪಶುಕಾಮೇನ ವಷಟ್ಕೃತ್ಯಃ ॥**

ಇಲ್ಲಿ ವಷಟ್ಕಾರವನ್ನು ಉಚ್ಚರಿಸುವ ವಿಧಾನದಲ್ಲಿ ವಿವರಣೆಯು ಅವಶ್ಯಕವು. ಯಾಜ್ಯಾಮಂತ್ರದ ಕೊನೆಯಲ್ಲಿ ವೌಷಟ್ ಎಂಬ ಶಬ್ದವನ್ನು ಸೇರಿಸಿ ಪಠಿಸಬೇಕೆಂದು ಹಿಂದೆಯೇ ತಿಳಿಸಲಾಗಿದೆಯಷ್ಟೆ. ಈ ಸಂದರ್ಭದಲ್ಲಿ ವೌಷಟ್ ಎಂಬ ವಷಟ್ಕಾರವನ್ನು ಉಚ್ಚರಿಸುವುದರಲ್ಲಿ ವಜ್ರ, ಧಾಮಚ್ಛತ್, ರಿಕ್ತ ಎಂಬ ವಷಟ್ಕಾರದ ಮೂರು ಪ್ರಭೇದಗಳಿಗನುಸಾರವಾಗಿ ಮೂರು ವಿಧವಾಗಿ ಉಚ್ಚರಿಸಬೇಕಾಗಿರುವುದು. ವಜ್ರವೆಂಬ ವಷಟ್ಕಾರವನ್ನು ಉಪಯೋಗಿಸುವಾಗ ಯಾಜ್ಯಾಮಂತ್ರವನ್ನು ಸಾಧಾರಣ ಧ್ವನಿಯಿಂದ ಉಚ್ಚರಿಸುತ್ತಾ ಕೊನೆಯಲ್ಲಿ ವೌಷಟ್ ಎಂಬುದನ್ನು ಘಟ್ಟಿಯಾದ ಧ್ವನಿಯಲ್ಲಿ ಉಚ್ಚರಿಸಬೇಕು ಮತ್ತು ಯಾಜ್ಯಾಮಂತ್ರದ ಕೊನೆಯಲ್ಲಿ ಅಕ್ಷರಕ್ಕೆ ಓಂಕಾರವನ್ನು ಸೇರಿಸಿ ಎಂದರೆ ಕೊನೆಯ ಅಕ್ಷರವನ್ನು ಓಂಕಾರಸ್ವರೂಪದಿಂದ ಕೂಡಿರುವಂತೆ ಉಚ್ಚರಿಸಿ ಅನಂತರ ವೌಷಟ್ ಎಂಬುದನ್ನು ಘಟ್ಟಿಯಾದ ಧ್ವನಿಯಿಂದ ಉಚ್ಚರಿಸಬೇಕು. ಹಿಂದೆ ಉದಾಹರಣೆಯಾಗಿ ಕೊಟ್ಟಿರುವ—

**ತ್ರಿರ್ದೇವಃ ಪೃಥಿವೀಮೇಷ ಏತಾಂ ವಿ ಚಕ್ರಮೇ ಶತರ್ಚಸಂ ಮಹಿತ್ವಾ ।**
**ಪ್ರ ವಿಷ್ಣುರಸ್ತು ತವಸಸ್ತವೀಯಾನ್ತ್ವೇಷಂ ಹ್ಯಸ್ಯ ಸ್ಥವಿರಸ್ಯ ನಾಮ ॥**

ಎಂಬ ಋಕ್ಕಿನಲ್ಲಿ ಕೊನೆಯ ಭಾಗವು **ಸ್ಥವಿರಸ್ಯ ನಾಮ** ಎಂದಿರುವುದು. ಇದಕ್ಕೆ ಓಂಕಾರವನ್ನು ಸೇರಿಸಿದರೆ **ಸ್ಥವಿರಸ್ಯ ನಾಮೋಂ** ಎಂದಾಗುವುದು. ಈ ರೀತಿ ಈ ಋಕ್ಕನ್ನು **ಸ್ಥವಿರಸ್ಯ ನಾಮೋಂ** ಎಂದು ಸಮಧ್ವನಿಯಿಂದ ಉಚ್ಚರಿಸಿ ಅನಂತರ ವೌಷಟ್ ಎಂಬ ಶಬ್ದವನ್ನು ಘಟ್ಟಿಯಾದ ಧ್ವನಿಯಿಂದ ಉಚ್ಚರಿಸಬೇಕು. ಈ ಕ್ರಮವು ವಜ್ರವೆಂಬ ವಷಟ್ಕಾರವನ್ನು ಉಚ್ಚರಿಸುವ ವಿಧಾನವು. ಈಗ ಧಾಮಚ್ಛತ್ ಎಂಬ ವಷಟ್ಕಾರವನ್ನು ಉಚ್ಚರಿಸಬೇಕಾದರೆ ಯಾಜ್ಯಾಮಂತ್ರವನ್ನು ಯಾವ ವ್ಯತ್ಯಾಸವೂ ಇಲ್ಲದಂತೆ ಎಂದರೆ **ಸ್ಥವಿರಸ್ಯ ನಾಮ** ಎಂದು ಮಾತ್ರ ಉಚ್ಚರಿಸಿ (ಕೊನೆಯಲ್ಲಿ ಓಂಕಾರವಿಲ್ಲದೆ) ಅನಂತರ ವೌಷಟ್ ಎಂಬ ಶಬ್ದವನ್ನು ಪಠಿಸಬೇಕು. ಇದು ಧಾಮಚ್ಛತ್ ಎಂಬ ವಷಟ್ಕಾರವನ್ನು ಉಚ್ಚರಿಸುವ ಕ್ರಮವು. ಪ್ರಜೆಗಳನ್ನೂ, ಪಶುಗಳನ್ನೂ ಅಪೇಕ್ಷಿಸುವ ಯಜಮಾನನು ಈ ವಿಧವಾದ ಧಾಮಚ್ಛತ್ ಎಂಬ ವಷಟ್ಕಾರವಿಧಾನದಿಂದ ಹೋಮಮಾಡಬೇಕು.

**ಅಥ ಯೋನ್ನೈವ ಷಳೆವರಾಧ್ನೋತಿ ಸ ರಿಕ್ತಃ । ರಿಣಕ್ತ್ಯಾತ್ಮಾನಂ ರಿಣಕ್ತಿ ಯಜಮಾನಂ ಪಾಪೀ- ಯಾನ್ವಷಟ್ಕರ್ತಾ ಭವತಿ ಪಾಪೀಯಾನ್ಯಸ್ಮೈ ವಷಟ್ಕರೋತಿ ತಸ್ಮಾತ್ತಸ್ಯಾಶಾಂ ನೇಯಾತ್॥**

ವೌಷಟ್ ಶಬ್ದವನ್ನು ಉಚ್ಚರಿಸುವಾಗ ಷಟ್ ಎಂಬ ಪದವನ್ನು ಮೆಲ್ಲಗೆ ಅಲ್ಪಧ್ವನಿಯಿಂದ ಉಚ್ಚರಿಸದರೆ ಆ ವಷಟ್ಕಾರವು ರಿಕ್ತವೆನಿಸುವುದು. ರಿಕ್ತವೆಂದರೆ ಇಲ್ಲದಿರುವುದು ಎಂದರ್ಥವು. ಆದ್ದರಿಂದ ಈ ರಿಕ್ತವಷಟ್ಕಾರದಿಂದ ಹೋಮ ಮಾಡಿದರೆ ಯಜ್ಞಮಾಡುವ ಯಜಮಾನನಿಗೆ ಏನೂ ಇಲ್ಲದ ರಿಕ್ತದೆಶೆಯುಂಟಾಗುವುದಲ್ಲದೆ ಪಾಪವು ಸಂಭವಿಸುವುದು. ಹೋಮವನ್ನು ಮಾಡಿಸುವ ಋತ್ವಿಜನೂ ಪಾಪಿಷ್ಠನೇ ಆಗುವನು. ಆದ್ದರಿಂದ ಶ್ರೇಯಸ್ಸನ್ನು ಬಯಸುವ ಯಜಮಾನನಾಗಲಿ, ಋತ್ವಿಜನಾಗಲಿ ಈ ರಿಕ್ತವಷಟ್ಕಾರವನ್ನು ಯಾವಾಗಲೂ ಉಪಯೋಗಿಸಬಾರದು.

**ಕಿಂ ಸ ಯಜಮಾನಸ್ಯ ಪಾಪಭದ್ರಮಾದ್ರಿಯೇತೇತಿ ಹ ಸ್ಮಾಹ ಯೋಽಸ್ಯ ಹೋತಾ ಸ್ಯಾದಿತ್ಯೃತ್ವಿಗ್ಘ್ಯೇನಂ ಯಥಾ ಕಾಮಯೇತ ತಥಾ ಕುರ್ಯಾತ್ । ಯಂ ಕಾಮಯೇತ ಯಥೈವಾನೀಜಾನೋಽಭೂತ್ತಥೈವೇಜಾನಃ ಸ್ಯಾದಿತಿ ಯಥೈವಾಸ್ಯ ಋಚಂ ಬ್ರೂಯಾತ್ತಥೈವಾಸ್ಯ ವಷಟ್ಕುರ್ಯಾತ್ಸದೃಶಮೇವೈನಂ ತತ್ಕರೋತಿ ॥**

ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವ ಹೋತೃವೆಂಬ ಋತ್ವಿಜನು ಯಜ್ಞಮಾಡುವ ಯಜಮಾನನಿಗೆ ಶುಭವನ್ನಾಗಲಿ ಅಶುಭವನ್ನಾಗಲಿ ಮಾಡಬೇಕೆಂದು ಇಷ್ಟಪಟ್ಟರೆ ಅದರಂತೆ ಮಾಡಬಹುದು. ಹೋತೃವು ಯಾವರೀತಿ ಇಷ್ಟಪಟ್ಟರೆ ಆರೀತಿ ಮಾಡಬಹುದು. ಹೇಗೆಂದರೆ ಯಜಮಾನನಿಗೆ ಯಜ್ಞಮಾಡಿದ್ದಕ್ಕೆ ಸರಿಯಾದ ಫಲವು ಲಭಿಸಬಾರದೆಂದು ಹೋತೃವಿಗೆ ಇಷ್ಟವಿದ್ದರೆ ಆಗ ಹೋತೃವು ಯಾಜ್ಯಾಮಂತ್ರವನ್ನು ಸಾಧಾರಣರೀತಿಯಲ್ಲಿ ಉಚ್ಚರಿಸಿ ವಷಟ್ಕಾರವನ್ನು ಘಟ್ಟಿಯಾಗಿ ಉಚ್ಚರಿಸುವುದಕ್ಕೆ ಬದಲಾಗಿ ಯಾಜ್ಯಾ ಮತ್ತು ವಷಟ್ಕಾರಮಂತ್ರಗಳನ್ನು ಸಮನಾದ ಒಂದೇ ಧ್ವನಿಯಿಂದ ಉಚ್ಚರಿಸಿದರೆ ಯಜಮಾನನಿಗೆ ಯಜ್ಞಮಾಡಿದ ಫಲವು ಲಭಿಸುವುದಿಲ್ಲ.

**ಯಂ ಕಾಮಯೇತ ಪಾಪೀಯಾನ್ಸ್ಯಾದಿತ್ಯುಚ್ಚೈಸ್ತರಾಮಸ್ಯ ಋಚಮುಕ್ತ್ವಾ ಶನೈಸ್ತರಾಂ ವಷಟ್ಕುರ್ಯಾತ್ಪಾಪೀಯಾಂಸಮೇವೈನಂ ತತ್ಕರೋತಿ**

ಯಜಮಾನನಿಗೆ ಯಜ್ಞಫಲವು ಲಭಿಸದೆ ಪಾಪವು ಮಾತ್ರ ಸಂಭವಿಸಬೇಕೆಂದು ಹೋತೃವಿನ ಇಷ್ಟವಾದರೆ ಆಗ ಅವನು ಯಾಜ್ಯಾಮಂತ್ರದ ಋಕ್ಕನ್ನು ಘಟ್ಟಿಯಾದ ಧ್ವನಿಯಲ್ಲಿಯೂ ವಷಟ್ಕಾರವನ್ನು ಮೆತ್ತನೆಯ ಧ್ವನಿಯಲ್ಲಿಯೂ ಪಠಿಸಬೇಕು. ಹೀಗೆ ಮಾಡಿದರೆ ಯಜಮಾನನಿಗೆ ಪಾಪವು ಸಂಭವಿಸುವುದು.

**ಯಂ ಕಾಮಯೇತ ಶ್ರೇಯಾನ್ಸ್ಯಾದಿತಿ ಶನೈಸ್ತರಾಮಸ್ಯ ಋಚಮುಕ್ತ್ವೋಚ್ಚೈಸ್ತರಾಂ ವಷಟ್ಕುರ್ಯಾಚ್ಛ್ರಿಯ ಏವೈನಂ ತಚ್ಛ್ರಿಯಮಾದಧಾತಿ ।**

ಹಾಗಲ್ಲದೆ ಯಜಮಾನನಿಗೆ ಶ್ರೇಯಸ್ಸುಂಟಾಗಬೇಕೆಂದು ಹೋತೃವು ಬಯಸಿದಲ್ಲಿ ಆಗ ಯಾಜ್ಯಾಮಂತ್ರವನ್ನು ಮೆತ್ತನೆಯ ಧ್ವನಿಯಲ್ಲಿಯೂ ವಷಟ್ಕಾರವನ್ನು ಘಟ್ಟಿಯಾದಧ್ವನಿಯಲ್ಲಿಯೂ ಉಚ್ಚರಿಸಬೇಕು. ಹೀಗೆ ಮಾಡಿದರೆ ಯಜಮಾನನಿಗೆ ಶ್ರೇಯಸ್ಸುಂಟಾಗುವುದು.

**ಸಂತತಮೃಚಾ ವಷಟ್ಕೃತ್ಯಂ ಸಂತತ್ಯೈ । ಸಂಧೀಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

**(ಐ. ಬ್ರಾ. ೧೧-೭)**

ಯಾಜ್ಯಾಮಂತ್ರವನ್ನೂ ವಷಟ್ಕಾರವನ್ನೂ ಉಚ್ಚರಿಸುವಾಗ ಮುಖ್ಯವಾದ ಒಂದು ವಿಷಯವನ್ನು ಗಮನಿಸಬೇಕು. ಯಾಜ್ಯಾಮಂತ್ರವನ್ನು ಕೊನೆಯವರೆಗೂ ಉಚ್ಚರಿಸಿ ಅನಂತರ ಸ್ವಲ್ಪವಿರಾಮವಾದಮೇಲೆ ವಷಟ್ಕಾರವನ್ನು ಉಚ್ಚರಿಸ ಕೂಡದು. ವಷಟ್ಕಾರವನ್ನು ಯಾಜ್ಯಾಮಂತ್ರದ ಒಂದು (ಕೊನೆಯ) ಭಾಗವೆಂದೇ ಭಾವಿಸಿ ಋಕ್ಕಿನ ಪ್ರಾರಂಭದಿಂದ ವೌಷಟ್ ಎನ್ನುವವರೆಗೂ ಮಧ್ಯೆ ಎಲ್ಲಿಯೂ ಸ್ವಲ್ಪವೂ ನಿಲ್ಲಿಸದೆ ಸಂತತಧಾರಾಕಾರವಾಗಿ ಉಚ್ಚರಿಸಬೇಕು. ಈ ವಿಷಯವನ್ನು ತಿಳಿದಿರುವವನು ಪ್ರಜೆಗಳನ್ನೂ ಪಶುಸಂಪತ್ತನ್ನೂ ಪಡೆದು ಸುಖಿಸುವನು.

ಹೋತೃವು ವಷಟ್ಕಾರವನ್ನು ಪಠಿಸುವಾಗ ಅನುಸರಿಸಬೇಕಾದ ಕೆಲವು ನಿಯಮಗಳಿರುವವು. ಅವುಗಳನ್ನು ತಪ್ಪದೆ ಪಾಲಿಸಬೇಕು. ಇಲ್ಲವಿದ್ದರೆ ಹರಿತವಾದ ಆಯುಧಪ್ರಯೋಗದಿಂದ ಅಪಾಯವು ಸಂಭವಿಸುವಂತೆ ವಷಟ್ಕಾರ ಪ್ರಯೋಗದಿಂದ ಅನಿಷ್ಟವು ಸಂಭವಿಸುವುದು—

**ಯಸ್ಯೈ ದೇವತಾಯೈ ಹವಿರ್ಗೃಹೀತಂ ಸ್ಯಾತ್ತಾಂ ಧ್ಯಾಯೇದ್ವಷಟ್ಕರಿಷ್ಯನ್ಸಾಕ್ಷಾದೇವ ತದ್ದೇವತಾಂ ಪ್ರೀಣಾತಿ ಪ್ರತ್ಯಕ್ಷಾದ್ದೇವತಾಂ ಯಜತಿ ।**

(ಐ. ಬ್ರಾ. ೧೧.೮)

ಹೋತೃವು ಯಾವ ದೇವತೆಯನ್ನುದ್ದೇಶಿಸಿ ವಷಟ್ಕಾರದಿಂದ ಹೋಮಮಾಡುವನೋ ಆ ದೇವತೆಯನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಮಂತ್ರೋಚ್ಚಾರಣೆಮಾಡಿ ವಷಟ್ಕಾರದಿಂದ ಹೋಮಮಾಡಬೇಕು. ಹೀಗೆ ಮಾಡಿದರೆ ದೇವತೆಯನ್ನು ಪ್ರತ್ಯಕ್ಷವಾಗುವಂತೆ ಸಾಕ್ಷಾತ್ಕರಿಸಿ ತೃಪ್ತಿಪಡಿಸಿದಂತಾಗುವುದು. ದೇವತೆಗಳನ್ನು ಪ್ರತ್ಯಕ್ಷವಾಗಿ ನೋಡುವುದನ್ನು ಎಂದರೆ ಸಾಕ್ಷಾತ್ಕರಿಸುವುದು ಸಾಧ್ಯವೇ ಎಂದರೆ, ಪ್ರತ್ಯಕ್ಷವಾಗಿ ಕಣ್ಣುಗಳಿಂದ ನೋಡುವುದು ಸಾಧ್ಯವಿಲ್ಲ. ಆದರೆ ಮನಸ್ಸಿನಲ್ಲಿ ಧ್ಯಾನಿಸುವುದರಿಂದ ಆ ದೇವತೆಯು ತನ್ನ ಎದುರಿಗೆ ಪ್ರತ್ಯಕ್ಷವಾಗಿರುವಂತೆ ಮನಸ್ಸಿನಲ್ಲಿ ಭಾವಿಸಬಹುದು. ಇದನ್ನೇ ಪ್ರತ್ಯಕ್ಷವೆಂದು ಹೇಳಬಹುದು.

**ವಜ್ರೋ ವೈ ವಷಟ್ಕಾರಃ ಸ ಏಷ ಪ್ರಹೃತೋಽಶಾಂತೋ ದೀದಾಯ ತಸ್ಯ ಹೈತಸ್ಯ ನ ಸರ್ವ ಇವ ಶಾಂತಿಂ ವೇದ ನ ಪ್ರತಿಷ್ಠಾಂ ತಸ್ಮಾದ್ಧಾಪ್ಯೇತರ್ಹಿ ಭೂಯಾನಿವ ಮೃತ್ಯುಸ್ತಸ್ಯ ಹೈಷೈವ ಶಾಂತಿರೇಷಾ ಪ್ರತಿಷ್ಠಾ ವಾಗಿತ್ಯೇವ ತಸ್ಮಾದ್ವಷಟ್ಕೃತ್ಯ ವಾಗಿತ್ಯನುಮಂತ್ರಯೇತ ಸ ಏನಂ ಶಾಂತೋ ನ ಹಿನಸ್ತಿ ॥**

ವಷಟ್ಕಾರವು ವಜ್ರಾಯುಧದಂತೆ ತೀಕ್ಷ್ಣವಾದುದೆಂದೂ ಅದನ್ನು ಸರಿಯಾಗಿ ಉಪಯೋಗಿಸದಿದ್ದರೆ ಹಾನಿಯು ತಟ್ಟುವುದೆಂದೂ ಹಿಂದೆಯೇ ಹೇಳಿದೆಯಷ್ಟೆ. ಇದರ ಉಪಯೋಗವನ್ನು ಎಲ್ಲರೂ ತಿಳಿದಿರುವುದಿಲ್ಲ. ಇದರ ಕ್ರಮವನ್ನು ತಿಳಿಯದೇ ಮನಸ್ವಿಯಾಗಿ ಉಪಯೋಗಿಸುವುದರಿಂದ ಯುದ್ಧಗಳಲ್ಲಿ ಅನೇಕರು ಮೃತ್ಯುವಶರಾಗುವಂತೆ ಇಲ್ಲಿಯೂ ವಷಟ್ಕಾರಮಂತ್ರದ ಅಪಪ್ರಯೋಗದಿಂದ ಅನೇಕರಿಗೆ ಹಾನಿಯು ತಟ್ಟಬಹುದು. ಆದುದರಿಂದ ಇದರ ಶಾಂತ್ಯರ್ಥವಾಗಿ **ವಾಗೋಜಃ** ಎಂಬ ಮಂತ್ರವನ್ನು ಪಠಿಸಬೇಕು. ಈ ಮಂತ್ರವನ್ನು ಉಚ್ಚರಿಸುವುದರಿಂದ ವಷಟ್ಕಾರದ ಅಪಪ್ರಯೋಗದಿಂದುಂಟಾಗಬಹುದಾದ ಅನಿಷ್ಟವು ಪರಿಹಾರವಾಗುವುದು. ಅನಿಷ್ಟಪರಿಹಾರಕ್ಕೆ ಇದಲ್ಲದೆ ಬೇರೆ ಉಪಾಯವಿಲ್ಲ. ಆದ್ದರಿಂದ ಯಜ್ಞಮಾಡುವಕಾಲದಲ್ಲಿ ಪ್ರತಿಯೊಂದುಸಲ ವಷಟ್ಕಾರಾನಂತರದಲ್ಲಿಯೂ **ವಾಗೋಜಃ** ಎಂಬ ಮಂತ್ರವನ್ನು ಉಚ್ಚರಿಸಬೇಕು. ಹೀಗೆ ಮಾಡುತ್ತಿದ್ದರೆ ವಜ್ರರೂಪವಾದ ವಷಟ್ಕಾರದಿಂದ ಯಾವ ಕೆಡಕೂ ಆಗುವುದಿಲ್ಲ. ಈ ರೀತಿ ಹೇಳುವುದು ಕೆಲವರ ಮತವು. ಇನ್ನು ಕೆಲವರು ಬೇರೆ ವಿಧವಾಗಿ ಹೇಳುವರು.

**ವಷಟ್ಕಾರ ಮಾ ಮಾಂ ಪ್ರಮೃಕ್ಷೋ ಮಾಹಂ ತ್ವಾಂ ಪ್ರಮೃಕ್ಷಂ ಬೃಹತಾ ಮನ ಉಪಹ್ವಯೇ ವ್ಯಾನೇನ ಶರೀರಂ ಪ್ರತಿಷ್ಠಾಸಿ ಪ್ರತಿಷ್ಠಾಂ ಗಚ್ಛ ಪ್ರತಿಷ್ಠಾಂ ಮಾ ಗಮಯೇತಿ ವಷಟ್ಕಾರ-ಮನುಮಂತ್ರಯೇತ ॥**

ಯಜ್ಞಮಾಡುವ ಯಜಮಾನನು ಅನುಮಂತ್ರಣ (ಶಾಂತಿ)ವನ್ನು ಕುರಿತು ಈ ರೀತಿ ಹೇಳಬೇಕು—ಎಲೈ ವಷಟ್ಕಾರನೇ, ನೀನು ಯಜ್ಞಮಾಡುತ್ತಿರುವ ನನ್ನನ್ನು ಆಚೆಗೆ ತಳ್ಳಿ ನಾಶಮಾಡಬೇಡ, ನಾನೂ ನಿನ್ನನ್ನು ನೂಕುವುದಿಲ್ಲ. ನಾನು ಈ ಮಹಾಯಜ್ಞಕರ್ಮದಿಂದ ನಿನ್ನ ಮನಸ್ಸನ್ನು ಒಲಿಸಿಕೊಳ್ಳುತ್ತೇನೆ. ವ್ಯಾನಾದಿವಾಯುಗಳಿಂದ ನಿನ್ನ ಶರೀರವನ್ನು ವ್ಯಾಪಿಸಿ ನಿನ್ನೊಡನೆ ಸಹಕರಿಸುತ್ತೇನೆ. ನೀನು ಸಮಸ್ತ ಪ್ರಾಣಿಸಮೂಹಕ್ಕೂ ಆಶ್ರಯಭೂತನಾಗಿರುವೆ. ಆದ್ದರಿಂದ ನೀನು ನಿನ್ನ ಶ್ರೇಷ್ಠವಾದ ಸ್ವಸ್ಥಾನಕ್ಕೆ ತೆರಳು. ನಾನೂ ಸಹ ನನ್ನ ಸ್ವಸ್ಥಾನಕ್ಕೆ ಹೋಗುವಂತೆ ಅನುಗ್ರಹಿಸು ಎಂದು ಯಜಮಾನನು ಪ್ರಾರ್ಥಿಸಬೇಕು.

**ತದು ಹ ಸ್ಮಾಹ ದೀರ್ಘಮೇತತ್ಸದಪ್ರಭ್ಯೋಜಃ ಸಹ ಓಜಃ । ಇತ್ಯೇವ ವಷಟ್ಕಾರಮನುಮಂತ್ರಯೇತ । ಓಜಶ್ಚ ಹ ವೈ ಸಹಶ್ಚ ವಷಟ್ಕಾರಸ್ಯ ಪ್ರಿಯತಮೇ ತನ್ವೌ ಪ್ರಿಯೇಣೈವೈನಂ ತದ್ಧಾಮ್ನಾ ಸಮರ್ಧಯತಿ ಪ್ರಿಯೇಣ ಧಾಮ್ನಾ ಸಮೃಧ್ಯತೇ ಯ ಏವಂ ವೇದ ॥**

ಬ್ರಹ್ಮವಾದಿಗಳಾದ ಕೆಲವರು, ಈ ಮಂತ್ರವು ಬಹುದೀರ್ಘವಾಗಿರುವುದು. ಆದ್ದರಿಂದ ಇದನ್ನು ಪಠಿಸುವುದು ತುಂಬಾ ಶ್ರಮವು, ಅದಲ್ಲದೆ ಇದು ವಜ್ರರೂಪವಾದ ವಷಟ್ಕಾರವನ್ನು ಶಮನಗೊಳಿಸುವುದೋ ಇಲ್ಲವೋ ? ಆದ್ದರಿಂದ ಚಿಕ್ಕದಾಗಿಯೂ ವಷಟ್ಕಾರವನ್ನು ಶಮನಗೊಳಿಸುವುದೂ ಆದ ಓಜಃ ಸಹ ಓಜ; ಎಂಬ ಮಂತ್ರವನ್ನು ಪಠಿಸಬಹುದು. ಈ ಮಂತ್ರದಲ್ಲಿ ಮೂರು ಶಬ್ದಗಳು ಮಾತ್ರ ಇರುವವು, ಓಜಃ ಎಂದರೆ ಸಾಮರ್ಥ್ಯವು ಸಹಃ ಎಂದರೆ ಬಲವು ಇವೆರಡೂ ವಷಟ್ಕಾರದ ಪ್ರಿಯಶರೀರಗಳೆಂದು ಹೇಳಲ್ಪಡುವವು. ಹೀಗೆ ವಷಟ್ಕಾರಕ್ಕೆ ಪ್ರೀತಿ ಪಾತ್ರವಾದ ಶರೀರಗಳನ್ನು ಉಚ್ಚರಿಸುವುದರಿಂದ ವಷಟ್ಕಾರಕ್ಕೆ ಮಂತ್ರನ್ಯೂನತೆ ಮೊದಲಾದವುಗಳಿಂದ ಸಂಭವಿಸುವ ಕೋಪಾದಿಗಳು ಶಮನವಾಗಿ ಯಜಮಾನನಿಗೆ ಹಿತವನ್ನುಂಟುಮಾಡುವುದು. ಮಂತ್ರದಲ್ಲಿರುವ ಮೂರನೇ ಪದವಾದ ಓಜಃ ಎಂಬ ಶಬ್ದವು ಆದರಾರ್ಥವಾಗಿ ಪುನಃಪ್ರಯುಕ್ತವಾಗಿದೆ. ಇದಕ್ಕೆ ಪ್ರತ್ಯೇಕ ಅರ್ಥವೇನೂ ಇರುವುದಿಲ್ಲ, ಈ ವಿಷಯವನ್ನು ಯಾವ ಪುರುಷನು ಅರಿತಿರುವನೋ ಅವನಿಗೆ ವಷಟ್ಕಾರವು ಸಮೃದ್ಧಿಯನ್ನುಂಟುಮಾಡುವುದು.

**ವಾಕ್ಚ ವೈ ಪ್ರಾಣಾಪಾನೌ ಚ ವಷಟ್ಕಾರಸ್ತ ಏತೇ ವಷಟ್ಕೃತೇ ವಷಟ್ಕೃತೇ ವ್ಯುತ್ಕ್ರಾಮಂತಿ ತಾನನುಮಂತ್ರಯೇತ ವಾಗೋಜಃ ಸಹ ಓಜೋ ಮಯಿ ಪ್ರಾಣಾಪಾನಾವಿತ್ಯಾತ್ಮನ್ಯೇವ ತದ್ಧೋತಾ ವಾಚಂ ಚ ಪ್ರಾಣಾಪಾನೌ ಚ ಪ್ರತಿಷ್ಠಾಪಯತಿ ಸರ್ವಾಯುಃ ಸರ್ವಾಯುತ್ವಾಯ ಸರ್ವಮಾಯುರೇತಿ ಯ ಏವಂ ವೇದ ॥**

(ಐ. ಬ್ರಾ ೧೧-೮)

ವಾಕ್ಕು, ಪ್ರಾಣ (ಉಚ್ಛ್ವಾಸ), ಅಪಾನ (ನಿಃಶ್ವಾಸ) ಎಂಬಿವೇ ವಷಟ್ಕಾರದ ಸ್ವರೂಪವು. ಹೋತೃವು ಮಂತ್ರಾಂತ್ಯದಲ್ಲಿ ವಷಟ್ಕಾರವನ್ನು ಉಚ್ಚರಿಸಿದಾಗಲೆಲ್ಲಾ ಈ ವಾಕ್ಕು ಪ್ರಾಣ ಅಪಾನಗಳು ಹೋತೃವಿನ ಶರೀರದಿಂದ ಹೊರಕ್ಕೆ ಹೊರಟುಹೋಗುವವು. ಹಾಗೆ ಆಗದಿರುವುದಕ್ಕಾಗಿಯೇ ಇವುಗಳನ್ನು ಅನುಮಂತ್ರಣದಲ್ಲಿ ಸೇರಿಸಬೇಕು. **ವಾಗೋಜಃ ಸಹ ಓಜೋ ಮಯಿ ಪ್ರಾಣಾಪಾನೌ** ಎಂಬುದೇ ಆ ಅನುಮಂತ್ರಣವು. ಇದರ ಅರ್ಥವು—ಸಾಮರ್ಥ್ಯ

ಮತ್ತು ಬಲಗಳೆಂಬ ಎರಡು ಪ್ರಿಯಶರೀರಾತ್ಮಕವಾದ ಎಲೈ ವಷಟ್ಕಾರವೇ, ನಿನ್ನ ಅನುಗ್ರಹದಿಂದ ಸಾಮರ್ಥ್ಯ ಮತ್ತು ಬಲಗಳು ನನ್ನಲ್ಲಿ ನೆಲಸಿರಲಿ. ಮತ್ತು ವಾಕ್, ಪ್ರಾಣ, ಅಪಾನಗಳೂ ಸಹ ನನ್ನ ಶರೀರದಿಂದ ಹೊರಟು ಹೋಗದೆ ನನ್ನಲ್ಲಿ ಸ್ಥಿರವಾಗಿರಲಿ ಎಂಬ ಅರ್ಥವುಳ್ಳ ಈ ಮಂತ್ರವನ್ನು ಪಠಿಸುವುದರಿಂದ ಹೋತೃವು ವಾಕ್ಪ್ರಾಣಾಪಾನ ಗಳನ್ನು ಹೊರಕ್ಕೆ ಹೋಗದಂತೆ ತಡೆದು ತನ್ನಲ್ಲಿ ಶ್ಲಿಷ್ಟಿಸಿರಲು ಸಮರ್ಥನಾಗುವನು. ಮತ್ತು ಈ ಕಾರಣದಿಂದ ತನಗೆ ನಿರ್ದಿಷ್ಟವಾದ (ನೂರುವರ್ಷಗಳವರೆಗೆ) ಪೂರ್ಣಾಯುಸ್ಸನ್ನು ಪಡೆಯುವನು. ಈ ವಿಷಯವನ್ನು ಅರಿತಿರುವ ಪುರು ಷನೂ ಸಹ ಪೂರ್ಣಾಯುಸ್ಸನ್ನು ಪಡೆದು ಸುಖಿಸುವನು.

॥ ಸಂಹಿತಾಪಾಠಃ ॥

ಯಸ್ತೇ ದ್ರಪ್ಸಃ ಸ್ಕನ್ನೋ ಯಸ್ತೇ ಅಂಶುರವಶ್ಚ ಯಃ ಪರಃ ಸ್ರುಚಾ ॥
ಅಯಂ ದೇವೋ ಬೃಹಸ್ಪತಿಃ ಸಂ ತಂ ಸಿಂಚತು ರಾಧಸೇ ॥ ೧೩ ॥

॥ ಪದಪಾಠಃ ॥

ಯಃ । ತೇ । ದ್ರಪ್ಸಃ । ಸ್ಕನ್ನಃ । ಯಃ । ತೇ । ಅಂಶುಃ । ಅವಃ । ಚ । ಯಃ । ಪರಃ । ಸ್ರುಚಾ ।

ಅಯಂ । ದೇವಃ । ಬೃಹಸ್ಪತಿಃ । ಸಂ । ತಂ । ಸಿಂಚತು । ರಾಧಸೇ । ೧೩ ॥

॥ ಸಾಯಣಭಾಷ್ಯಂ ॥

ಹೇ ಸೋಮ ತೇ ತ್ವದೀಯೋ ಯೋ ದ್ರಪ್ಸೋ ರಸೋಽಸ್ಮತ್ರ ಸ್ಕನ್ನೋ ಗತೋ ಯಶ್ಚ ತ್ವದೀಯಸ್ತವ ಕಾರಣಭೂತೋಽಂಶುರ್ಲತಾಖಂಡೋ ರಥಾದಿತರೋ ಭವತಿ ಸ್ರುಚಾ ಪಾತ್ರವಿಶೇಷೇಣ ಗೃಹೀತಃ ಸೋಮೋಽವೋಽವಸ್ತಾತ್ಸ್ಕಂದತೇ ಪರಃ ಪರಸ್ತಾದ್ವ್ಯಾತಿರಿಕ್ತೋ ಭವತಿ ತಮಿಮಂ ಸೋಮಮಯಂ ಬೃಹಸ್ಪತಿರೀತನ್ನಾಮಕೋ ದೇವಃ ಸಂ ಸಿಂಚತು । ಸಮ್ಯಕ್ ಪ್ರಕ್ಷಾರಯತು । ಕಿಮರ್ಥಂ । ರಾಧಸೇಽಸ್ಮಾಕಂ ಧನಾರ್ಥಂ । ಸ್ಕನ್ನೇ ಹಿ ಸೋಮೇ ಪ್ರಜಾಪಶ್ವಾದಿಕಮಪಸ್ಕನ್ನಂ ಭವತಿ ಖಲು ॥

॥ ಪ್ರತಿಪದಾರ್ಥ ॥

(ಎಲೈ ಸೋಮವೇ) ತೇ—ನಿನ್ನ । ಯಃ ದ್ರಪ್ಸಃ—ಯಾವ ರಸವು । ಸ್ಕನ್ನಃ—ಸ್ರವಿಸುವುದೋ । ಯಃ ತೇ ಅಂಶುಃ—ಯಾವ ಲತೆಯು । ಸ್ರುಚಾ—ಸುಕ್ಪಾತ್ರೆಯಿಂದ ಹಿಡಿಯಲ್ಪಟ್ಟು । ಅವಃ—ಕೆಳಭಾಗಕ್ಕೂ । ಯಃ ಪರಃ ಚ—ಇತರ ಭಾಗಗಳಿಗೂ ಚೆಲ್ಲಿಹೋಗುವುದೋ । ತಂ— ಅಂತಹ ರಸಪೂರ್ಣವಾದ ಸೋಮವನ್ನು । ದೇವಃ ಅಯಂ ಬೃಹಸ್ಪತಿಃ—ಈ ಬೃಹಸ್ಪತಿದೇವನು । ರಾಧಸೇ—ನಮಗೆ ಧನಲಾಭಾರ್ಥವಾಗಿ । ಸಂ ಸಿಂಚತು—ಸುತ್ತಲೂ ಸೇಕಿಸಲಿ.

॥ ಭಾವಾರ್ಥ ॥

ಎಲೈ ಸೋಮನೇ, ನಿನ್ನ ಯಾವ ರಸವು ಸ್ರವಿಸುವುದೋ ಯಾವ ಲತೆಯು ಸ್ರುಕ್ಪಾತ್ರೆಯಿಂದ ಹಿಡಿಯಲ್ಪಟ್ಟು ಕೆಳಭಾಗಕ್ಕೂ ಇತರ ಭಾಗಗಳಿಗೂ ಚೆಲ್ಲಿಹೋಗುವುದೋ ಅಂತಹ ರಸಪೂರ್ಣವಾದ ಸೋಮವನ್ನು ಈ ಬೃಹಸ್ಪತಿದೇವನು ನಮಗೆ ಧನಲಾಭಾರ್ಥವಾಗಿ ಸುತ್ತಲೂ ಸೇಕಿಸಲಿ. (ಅರ್ಪಿಸಲಿ)

## English Translation

Your juice and your filaments, (Soma), which escape, and which fall from the ladle on this side or on that; may this divine Brihaspati sprinkle it for our enrichment.

॥ ಸಂಹಿತಾಪಾಠಃ ॥

ಪಯಸ್ವತೀರೋಷಧಯಃ ಪಯಸ್ವನ್ಮಾಮಕಂ ವಚಃ ।
ಅಪಾಂ ಪಯಸ್ವದಿತ್ಪಯಸ್ತೇನ ಮಾ ಸಹ ಶುಂಧತ ॥ ೧೪ ॥

॥ ಪದಪಾಠಃ ॥

ಪಯಸ್ವತೀಃ । ಓಷಧಯಃ । ಪಯಸ್ವತ್ । ಮಾಮಕಂ । ವಚಃ ।
ಅಪಾಂ । ಪಯಸ್ವತ್ । ಇತ್ । ಪಯಃ । ತೇನ । ಮಾ । ಸಹ । ಶುಂಧತ ॥ ೧೪ ॥

॥ ಸಾಯಣಭಾಷ್ಯಂ ॥

ಇಯಂ ಪ್ರತ್ಯಕ್ಷಕೃತಾ । ಹೇ ಆಪಃ ಓಷಧಯಃ ಪಯಸ್ವತೀಃ ಪಯಸ್ವತ್ಯೋ ವೃಷ್ಟಿಲಕ್ಷಣೇನೋದಕೇನ ಸಾರವತ್ಯೋ ಭವಂತಿ । ಮಾಮಕಂ ಮದೀಯಂ ವಚೋ ವಚನಂ ವೃಷ್ಟಿಪ್ರಾರ್ಥನವಚನಂ ಪಯಸ್ವತ್ಸಾರವದ್ಭವತಿ । ಕಿಂ ಬಹುನಾ । ಯಚ್ಚೇಹ ಕಿಂಚಿದಪಾಮುದಕಾನಾಂ ಪಯಃ ಕ್ಷೀರವತ್ಸಾರಭೂತಂ ಯದಸ್ತಿ ತತ್ಸರ್ವಂ ಪಯಸ್ವತ್ಸಾರವದೇವ । ತೇನೋದಕಸಾರೇಣ ಸಹ ಮಾ ಮಾಂ ಶುಂಧತ । ಯೂಯಂ ಶೋಧಯತ । ಆಪೋ ಅದ್ಯಾನ್ವಚಾರಿಷಂ ರಸೇನ ಸಮಗಸ್ಮಹಿ । ಋ. ೧-೨೩-೨೩ । ಇತಿ ನಿಗಮಾಂತರಂ ॥

॥ ಪ್ರತಿಪದಾರ್ಥ ॥

(ಎಲೈ ಅಬ್ದೇವತೆಗಳೇ) **ಓಷಧಯಃ**—ಓಷಧಿಗಳು । **ಪಯಸ್ವತೀಃ**—ಉದಕಗಳಿಂದ ಸಾರವುಳ್ಳವಾಗಿ ಆಗುತ್ತವೆ । **ಮಾಮಕಂ**—ನನ್ನ । **ವಚಃ**—ವೃಷ್ಟ್ಯರ್ಥವಾದ ಪ್ರಾರ್ಥನೆಯು । **ಪಯಸ್ವತ್**—ಸಾರವುಳ್ಳದ್ದಾಗಿ ಆಗುತ್ತದೆ । **ಅಪಾಂ**—ಉದಕಗಳ । **ಪಯಃ ಪಯಸ್ವತ್**—ರಸವೆಲ್ಲವೂ ಸಾರವುಳ್ಳದ್ದಾಗುತ್ತದೆ । **ತೇನ ಸಹ**—ಆ ಉದಕರಸದಿಂದ । **ಮಾ**—ನನ್ನನ್ನು । **ಶುಂಧತ**—ಶುದ್ಧನನ್ನಾಗಿ ಮಾಡಿರಿ.

। ಭಾವಾರ್ಥ ।

ಎಲೈ ಅಪ್ದೇವತೆಗಳೇ, ಓಷಧಿಗಳು ಉದಕಗಳಿಂದ ಸಾರವತ್ತಾಗಿ ಆಗುತ್ತವೆ. ನನ್ನ ವೃಷ್ಟ್ಯರ್ಥವಾದ ಪ್ರಾರ್ಥನೆಯು ಸಾರವತ್ತಾಗಿ ಆಗುತ್ತದೆ. ಉದಕಗಳ ರಸಗಳೆಲ್ಲವೂ ಸಾರಭರಿತವಾಗಿವೆ. ಆ ಉದಕರಸದಿಂದ ನನ್ನನ್ನು ಶುದ್ಧನನ್ನಾಗಿ ಮಾಡಿರಿ.

English Translation

(Waters)! the plants flourish by means of water, my prayer is effectual through water; the essence of water is vigorous through water; purify me with it

## ಹದಿನೆಂಟನೆಯ ಸೂಕ್ತವು.

### ಪೀಠಿಕೆ

ಈ ಸೂಕ್ತದಲ್ಲಿ ಮೃತ್ಯುದೇವತೆಯ ಸ್ತುತಿಯೂ ಪಿತೃಕರ್ಮಗಳಲ್ಲಿ ಉಪಯೋಗಿಸಲ್ಪಡುವ ಮಂತ್ರಗಳೂ ಉಕ್ತವಾಗಿವೆ. ಶೌನಕೋಕ್ತವಾದ ಬೃಹದ್ದೇವತಾಗ್ರಂಥದಲ್ಲಿ ಈ ಸೂಕ್ತದ ವಿಷಯವಾಗಿ ಹೀಗೆ ಹೇಳಿದೆ—

**ಚತಸ್ರಸ್ತಾ ಸ್ತುತಿರ್ಮೃತ್ಯೋರಂತ್ಯೇ ಕ್ಲೃಪ್ತಾಶ್ಚ ಕರ್ಮಣಿ । ೧೦ ॥**

**ಮೃತಶಿಷ್ಟೇಭ್ಯ ಆಶಾಸ್ತೇ ಇಮೇ ಜ್ಯೋಗ್ಜೀವನಂ ಪುನಃ ।**
**ಇಮಂ ಜೀವೇಭ್ಯ ಆಶಾಸ್ತೇ ತೇಭ್ಯಃ ಪರಿಧಿಕರ್ಮಣಿ । ೧೧ ॥**

ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳು ಮೃತ್ಯುದೇವತೆಯನ್ನು ಸ್ತುತಿಸುವವು. ಈ ಮಂತ್ರಗಳು ಅಪರಕರ್ಮಗಳಲ್ಲಿ ಉಪಯೋಗಿಸಲ್ಪಡುವವು. **ಇಮೇ ಜೀವಾ** ಎಂಬ ಮೂರನೆಯ ಋಕ್ಕಿನಲ್ಲಿ ಮೃತರಾದವರ ಸಂಸಾರಕ್ಕೆ ಸೇರಿದವರ ಮತ್ತು ಇನ್ನೂ ಜೀವಂತರಾಗಿರುವವರ ವಿಷಯದಲ್ಲಿ ದೀರ್ಘಕಾಲ ಬದುಕಲೆಂಬ ಆಶಾಸನೆಯು ಉಕ್ತವಾಗಿದೆ. **ಇಮಂ ಜೀವೇಭ್ಯಃ** ಎಂಬ ನಾಲ್ಕನೆಯ ಋಕ್ಕನ್ನು-ಮೃತ್ಯುವಿನಿಂದ ಪಾರಾಗುವುದಕ್ಕಾಗಿ ಜೀವಂತರಾಗಿರುವವರ ಸುತ್ತಲೂ ಕಲ್ಲನ್ನು ಸ್ಥಾಪಿಸುವ ಕರ್ಮದಲ್ಲಿ ಪ್ರಯೋಗಿಸಲ್ಪಡುವುದು.

**ಯಥಾ ಧಾತ್ರ್ಯುತ್ತರಾ ತ್ವಾಷ್ಟ್ರೀ ತತೋ ಯಾನ್ಯಾ ಇಮಾಸ್ತ್ರಿತಿ ।**
**ಸ್ತ್ರೀಣಾಮಾಶಿಷಮಾಶಾಸ್ತೇ ತಯೈವಾಂಜನಕರ್ಮಣಿ । ೧೨ ॥**

**ಯಥಾಹಾನಿ, ಆರೋಹತ, ಇಮಾ ನಾರೀಃ** ಎಂಬ ಈ ಸೂಕ್ತದ ೫, ೬, ೭ನೇ ಋಕ್ಕುಗಳನ್ನು ಮೃತರ ಸಂಸಾರಕ್ಕೆ ಸೇರಿದ ಸ್ತ್ರೀಯರು ಘೃತ ಅಥವಾ ಅಂಜನದಿಂದ (ಕಪ್ಪು) ತಮ್ಮ ನೇತ್ರಗಳನ್ನು ಸವರಿಕೊಳ್ಳುವಾಗ ಪಠಿಸಬೇಕು ಮತ್ತು ಈ ಋಕ್ಕುಗಳಲ್ಲಿ ಆ ಸ್ತ್ರೀಯರಿಗೆ ದೀರ್ಘಾಯುಷ್ಯಲಭಿಸಲೆಂದು ಆಶ್ವಾಸನೆಯು ಇಲ್ಲಿ ಉಕ್ತವಾಗಿದೆ ಈ ಋಕ್ಕುಗಳಲ್ಲಿ ೫ನೆಯ ಋಕ್ಕಿಗೆ ಧಾತೃವೂ ೬ನೆಯ ಋಕ್ಕಿಗೆ ತ್ವಷ್ಟೃವೂ ದೇವತೆಗಳು.

**ಉದೀರ್ಷ್ವನಾರೀತ್ಯನಯಾ ಮೃತಂ ಪತ್ನ್ಯನುರೋಹತಿ ।
ಭ್ರಾತಾ ಕನೀಯಾನ್ಪ್ರೇತಸ್ಯ ನಿಗದ್ಯ ಪ್ರತಿಷೇಧತಿ ॥ ೧೩ ॥**

**ಕುರ್ಯಾದೇತತ್ಕರ್ಮ ಹೋತಾ ದೇವರೋ ನ ಭವೇದ್ಯದಿ ।
ಪ್ರೇತಾನುಗಮನಂ ನ ಸ್ಯಾದಿತಿ ಬ್ರಾಹ್ಮಣಶಾಸನಾತ್ ॥ ೧೪ ॥**

**ವರ್ಣಾನಾಮಿತರೇಷಾಂ ಚ ಸ್ತ್ರೀಧರ್ಮೋಽಯಂ ಭವೇನ್ನ ವಾ ॥**

ಉದೀರ್ಷ್ವನಾರಿ ಎಂಬ ಋಕ್ಕನ್ನು ಪಠಿಸುತ್ತಾ ಮೃತನ ಪತ್ನಿಯು ಚಿತೆಯನ್ನೇರಿ ತನ್ನ ಪತಿಯೊಡನೆ ಸಹಗಮನ ಮಾಡಲು ಉದ್ಯುಕ್ತಳಾಗುವಳು. ಆಗ ಪತಿಯ ತಮ್ಮನೂ ಪತ್ನಿಯ ಮೈದನನೂ ಆದವನು ಆ ಸ್ತ್ರೀಯನ್ನು ಸಹಗಮನ ಮಾಡಬೇಡವೆಂದು ತಡೆಯುವನು. ಮೃತನಿಗೆ ತಮ್ಮನಿಲ್ಲದಿದ್ದರೆ ಆ ಕೆಲಸವನ್ನು ಪುರೋಹಿತನೇ ಮಾಡುವನು. ಪ್ರೇತಶರೀರದ ಜತೆಯಲ್ಲಿ ಸಹಗಮನವನ್ನು ಮಾಡಬಾರದೆಂದು ಬ್ರಾಹ್ಮಣರ ಆಜ್ಞೆ ಇರುವುದು. ಬ್ರಾಹ್ಮಣರಿಗೂ ಇತರ ವರ್ಣದವರಿಗೂ ಮೃತರಾದವರ ಸ್ತ್ರೀಯರ ವಿಷಯದಲ್ಲಿ ಈ ಧರ್ಮವನ್ನೇ ಬೇಕಾದರೆ ಅನುಸರಿಸಬಹುದು. ಇಲ್ಲದಿದ್ದರೆ ಬಿಟ್ಟುಬಿಡಬಹುದು.

**ಶಾಂತ್ಯರ್ಥಂ ಧನುರಾದಾನೇ ಪ್ರೇತಸ್ಯರ್ಚಂ ಧನುರ್ಜಪೇತ್ ।
ಯಸ್ಮಾದೇತಾಃ ಪ್ರಯುಜ್ಯಂತೇ ಶ್ಮಶಾನೇ ಚಾಂತ್ಯಕರ್ಮಣಿ ॥ ೧೫ ॥**

**ತಸ್ಮಾದ್ಧದೇತ್ತ್ಯೃಚಸ್ಯಾಸ್ಯ ದೇವತಾಂ ಮೃತ್ಯುಮೇವ ತು ।**

ಮೃತನಾದ ಪುರುಷನು ಕ್ಷತ್ರಿಯನಾಗಿದ್ದಲ್ಲಿ ಶಾಂತ್ಯರ್ಥವಾಗಿಯೂ, ಅವನು ಉಪಯೋಗಿಸುತ್ತಿದ್ದ ಧನುಸ್ಸನ್ನು ಮೃತಶರೀರದ ಬಳಿ ಇಡುವುದಕ್ಕಾಗಿ ಕೈಗೆ ತೆಗೆದುಕೊಳ್ಳುವಾಗ **ಧನುರ್ಹಸ್ತಾತ್** ಎಂಬ ಈ ಋಕ್ಕನ್ನು ಪಠಿಸಬೇಕು. ಶ್ಮಶಾನದಲ್ಲಿ ಅಪರಕರ್ಮಗಳನ್ನು ಮಾಡುವಾಗ ಈ ಋಕ್ಕನ್ನೂ ಮುಂದಿನ ಋಕ್ಕುಗಳನ್ನೂ ಪಠಿಸುವುದರಿಂದ ಈ ಋಕ್ಕುಗಳಿಗೆ ಮೃತ್ಯುವೇ ದೇವತೆಯೆಂದು ಹೇಳಲ್ಪಡುವುದು.

**ಮಂತ್ರೇಷು ಹ್ಯನಿರುಕ್ತೇಷು ದೇವತಾಂ ಕರ್ಮತೋ ವದೇತ್ ॥ ೧೬ ॥
ಮಂತ್ರತಃ ಕರ್ಮತಶ್ಚೈವ ಪ್ರಜಾಪತಿರಸಂಭವೇ ।**

ಈ ಸೂಕ್ತದ ಮಂತ್ರಗಳಲ್ಲಿ ವಿನಿಯೋಗವನ್ನು ಅಥವಾ ದೇವತೆಯಾರೆಂಬುದನ್ನು ಹೇಳವೇ ಇರುವ ಸಂಧರ್ಭದಲ್ಲಿ, ಮಾಡುವ ಕರ್ಮಾನುಸಾರವಾಗಿ ಆಯಾ ಮಂತ್ರಗಳ ದೇವತೆಯನ್ನೂ ವಿನಿಯೋಗವನ್ನೂ ಹೇಳಬೇಕು. ಯಾವುದೂ ಸ್ಪಷ್ಟವಾಗಿಲ್ಲದಿರುವ ಸಂದರ್ಭದಲ್ಲಿ ಮಂತ್ರದ ಅರ್ಥಕ್ಕೂ ಮಾಡುವ ಕರ್ಮಕ್ಕೂ ಅನುಸಾರವಾಗಿ ಆ ಮಂತ್ರಗಳಿಗೆ ಪ್ರಜಾಪತಿಯು ದೇವತೆಯೆಂದು ಹೇಳಬಹುದು.

**ಪರಾಶ್ಚತಸ್ರೋ ಯಾಸ್ತ್ವತ್ರ ಉಪ ಸರ್ಪೇತಿ ಪಾರ್ಥಿವೀ ॥ ೧೭ ॥
ತಾಸಾಂ ಪ್ರಯೋಗಃ ಪ್ರೇತಸ್ಯ ಅಸ್ಥಿಸಂಚಯಕರ್ಮಣಿ ॥**

ಮುಂದಿನ ನಾಲ್ಕು ಋಕ್ಕುಗಳು ಎಂದರೆ **ಉಪ ಸರ್ಪ** ಎಂಬ ಋಕ್ಕಿನಿಂದ ಮುಂದಿನ ನಾಲ್ಕು ಋಕ್ಕುಗಳು (೧೦-೧೩) ಅಪರಕರ್ಮಾಂಗಭೂತವಾದ ಅಸ್ಥಿಸಂಚಯನ (ಮೃತಶರೀರವು ದಹನವಾದಮೇಲೆ ಅದರ ಅಸ್ಥಿ ಎಂದರೆ ಮೂಳೆಗಳನ್ನು

ನಪ್ಯಾದಿಗಳಲ್ಲಿ ಹಾಕುವುದಕ್ಕಾಗಿ ಒಂದೆಡೆ ಸಂಗ್ರಹಿಸುವ ಕರ್ಮಕ್ಕೆ ಅಸ್ಥಿಸಂಚಯನವೆಂದು ಹೆಸರು)ವೆಂಬ ಕರ್ಮದಲ್ಲಿ ಪ್ರಯೋಗಿಸಲ್ಪಡುವವು.

> ಪ್ರತೀಚೀನೇ ಯಥಾಹಾನಿ ಅಪಶ್ಯತ್ಯೇತರಾಣಿ ತು ॥ ೧೮ ॥
> ಅಹಸ್ಸು ಪಿತರೋ ದಧುರಿತ್ಯಾಶಾಸ್ತೇಽಸ್ತ್ರ್ಯಯಾಶಿಷಃ ।
> ಅಹಃಸ್ವಾಗಾಮಿಷು ಚ ಮಾಂ ಪ್ರಯುತಂ ಸಮಜೀವಯನ್ ॥ ೧೯ ॥
>
> (ಬೃ. ದೇ. ೭-೧೦ ೨೦ವ ೧೯)

ಪ್ರತೀಚೀನೇ ಎಂಬ ಕೊನೆಯ ಋಕ್ಕಿನಲ್ಲಿ ಪಿತೃದೇವತೆಗಳು ಕರ್ಮಕರ್ತನಿಗೆ ಕರ್ಮವಾಡುವ ದಿವಸಗಳಲ್ಲಿಯೂ ಆಯುರ್ವೃದ್ಧಿಯಾಗಲೆಂಬ ಆಶೀರ್ವಾದವನ್ನು ಮಾಡಿರುವ ವಿಷಯವು ಉಕ್ತವಾಗಿದೆ,

ಶೌನಕೋಕ್ತವಾದ ಋಗ್ವಿಧಾನವೆಂಬ ಗ್ರಂಥದಲ್ಲಿ ಈ ಸೂಕ್ತದ ವಿಷಯವಾಗಿ ಈರೀತಿ ಹೇಳಿರುವುದು—

> ಮೃತ್ಯುಮೇವ ಪ್ರಪದ್ಯೇತ ಪರಂ ಮೃತ್ಯೋ ಜಪನ್ ದ್ವಿಜಃ ।
> ನಕ್ತಭೋಜೀ ಮಿತಾಹಾರಃ ಪರಿಸಂವತ್ಸರಂ ಸದಾ ॥ ೪೦ ॥
> ನೈನಂ ಪುರಾಯುಷೋ ಮೃತ್ಯುರ್ನಯತೇ ಸಸುತಪ್ರಜಂ ।

ದ್ವಿಜನಾದವನು ಪರಂ ಮೃತ್ಯೋ ಎಂಬ ಈ ಸೂಕ್ತವನ್ನು ಜಪಿಸಿದಲ್ಲಿ ಅವನಿಗೆ ಮೃತ್ಯುದೇವತೆಯು ಒಲಿದು ಪ್ರಸನ್ನವಾಗುವುದು. ಹೀಗೆ ಜಪಮಾಡುವ ಕಾಲದಲ್ಲಿ ಹಗಲು ಉಪವಾಸವಿದ್ದು ಜಪಮಾಡುತ್ತಾ ರಾತ್ರಿಕಾಲದಲ್ಲಿ ಮಾತ್ರ ಮಿತವಾದ ಆಹಾರವನ್ನು ಭುಂಜಿಸಬೇಕು. ಈ ರೀತಿ ಒಂದು ಸಂವತ್ಸರದವರೆಗೆ ಜಪಮಾಡಿದರೆ ಆ ಮೃತ್ಯುದೇವತೆಯು ಅವನ ನಿಯಮಿತವಾದ ಆಯುಸ್ಸು ಪೂರ್ತಿಯಾಗುವುದಕ್ಕೆ ಮುಂಚೆ ಅವನನ್ನೂ ಅವನ ಪುತ್ರಾದಿಜನರನ್ನೂ ಕೊಂಡೊಯ್ಯುವುದಿಲ್ಲ

> ಫಲಾಹಾರೋ ಜಯೇನ್ಮೃತ್ಯುಂ ತ್ರಿಭಿರ್ವರ್ಷೈರ್ಮಿತಾಶನಃ ।
> ಷಷ್ಠೇ ಕಾಲೇ ತು ಭುಂಜೀತ ಫಲಂ ಮೂಲಮಥಾಪಿ ವಾ ॥

ಈ ಮೃತ್ಯುದೇವತೆಯನ್ನುದ್ದೇಶಿಸಿ ಜಪಮಾಡುವ ಕಾಲದಲ್ಲಿ ಕೆಲವು ನಿಯಮಗಳನ್ನನುಸರಿಸಬೇಕು. ಪ್ರತಿದಿನವೂ ಹಗಲು ಉಪವಾಸವಿದ್ದು ಆರನೆಯ ಯಾಮದಲ್ಲಿ ಎಂದರೆ ಸೂರ್ಯಾಸ್ತಮಾನಾನಂತರ ಎರಡನೇ ಯಾಮದಲ್ಲಿ ಕಂದಮೂಲ ಫಲಾದಿಗಳನ್ನು ಮಾತ್ರ ಭುಜಿಸಬೇಕು. ಈರೀತಿ ಮಿತಾಹಾರಕ್ರಮದಿಂದ ಮೂರು ವರ್ಷಗಳವರೆಗೆ ಜಪಮಾಡುವ ಪುರುಷನಿಗೆ ಮೃತ್ಯುವಿನ ಭಯವಿರುವುದಿಲ್ಲ.

> ಸ್ಥಾನಾಸನಾಭ್ಯಾಂ ವಿಹರೇದುದಕೇ ಶಿಶಿರೇ ವಸೇತ್ ॥ ೪೨ ॥
> ಗ್ರೀಷ್ಮೇ ಪಂಚತಪಾಸ್ತು ಸ್ಯಾದ್ವರ್ಷಾಸ್ವಭ್ರಾವಕಾಶಕಃ ।
> ಏವಂ ಗಯುಕ್ತೋ ಜಯೇನ್ಮೃತ್ಯುಂ ರೋಗೇಭ್ಯಶ್ಚ ಪ್ರಮುಚ್ಯತೇ ॥ ೪೩ ॥

ಜಪಮಾಡುವ ಕಾಲದಲ್ಲಿ ಶಿಶಿರರ್ತುವಿನಲ್ಲಿ ಎಂದರೆ ಚಳಿಗಾಲದಲ್ಲಿ ನೀರಿನ ಮಧ್ಯದಲ್ಲಿ ನಿಂತು ಜಪಮಾಡಬೇಕು. ಬೇಸಿಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ಜಪಮಾಡಬೇಕು. ಮಳೆಗಾಲದಲ್ಲಿ ಮನೆಯ ಹೊರಗಡೆ ನಿಂತು

ಮಳೆಯಲ್ಲಿ ನೆನೆಯುತ್ತಾ ಜಪಮಾಡಬೇಕು. ಈ ರೀತಿ ಜಪಮಾಡುವ ಪುರುಷನು ಮೃತ್ಯುಭಯವನ್ನು ಪರಿಹಾರ ಮಾಡಿಕೊಂಡು ರೋಗರಹಿತನಾಗಿ ಜೀವಿಸುವನು.

**ಭ್ರಾತುರ್ಭಾರ್ಯಾಮಪುತ್ರಸ್ಯ ಸಂತಾನಾರ್ಥಂ ಮೃತೇ ಪತೌ ।**
**ದೇವರೋನ್ವಾರುರುಕ್ಷಂತೀಮುದೀರ್ಷ್ವೇತಿ ನಿವರ್ತಯೇತ್ ॥ ೪೪ ॥**

**ಋತುಕಾಲೇ ತು ಸಂಪ್ರಾಪ್ತೇ ಘೃತಾಭ್ಯಕ್ತೋಽಥ ವಾಗ್ಯತಃ ।**
**ಏಕಮುತ್ಪಾದಯೇತ್ಪುತ್ರಂ ನ ದ್ವಿತೀಯಂ ಕಥಂಚನ ॥ ೪೫ ॥**

(ಋಗ್ವಿಧಾನ ಅಧ್ಯಾಯ ೩)

ಜ್ಯೇಷ್ಠಸಹೋದರನು ಸಂತಾನರಹಿತನಾಗಿ ಮೃತನಾದಾಗ ಅವನ ಪತ್ನಿಯು ಮೃತಶರೀರದ ಜತೆಯಲ್ಲಿ ಚಿತೆಯಮೇಲೆ ಸಹಗಮನಮಾಡಲುದ್ಯುಕ್ತಳಾಗಿದ್ದರೆ ಆ ಸಂದರ್ಭದಲ್ಲಿ ಮೃತನ ತಮ್ಮನು ತನ್ನ ಅತ್ತಿಗೆಯಾದ ಅಣ್ಣನ ಪತ್ನಿಯನ್ನು ಸಹಗಮನಮಾಡಬೇಡವೆಂದು ತಡೆದು ಮನೆಗೆ ಹಿಂದಕ್ಕೆ ಕರೆತರಬೇಕು. ಬಳಿಕ ಆ ಸ್ತ್ರೀಯು ಋತುಸ್ನಾನಮಾಡಿದ ಮೇಲೆ ಘೃತಾಭ್ಯಕ್ತಾದಿಗಳಿಂದ ಶುದ್ಧನಾಗಿ ಆ ಸ್ತ್ರೀಯಲ್ಲಿ ಸಂಭೋಗಿಸಿ ಒಬ್ಬ ಪುತ್ರನನ್ನು ಮಾತ್ರ ಉತ್ಪತ್ತಿಮಾಡಬೇಕು. ಇನ್ನೊಬ್ಬ ಪುತ್ರನಾಗಬೇಕೆಂದು ಮುಂದೆ ಎಂತಹ ಸಂದರ್ಭದಲ್ಲಿಯೂ ಆ ಸ್ತ್ರೀಯಸಂಗವನ್ನು ಮತ್ತೆ ಮಾಡಬಾರದು.

ಈ ಸೂಕ್ತಕ್ಕೆ ದೇವತೆಯಾದ ಮೃತ್ಯುವಿನ ವಿಷಯದಲ್ಲಿ ಶತಪಥಬ್ರಾಹ್ಮಣದಲ್ಲಿ ಒಂದು ಇತಿಹಾಸವಿದೆ. ಪೂರ್ವದಲ್ಲಿ ದೇವತೆಗಳೂ ಮನುಷ್ಯರೂ ಯಜ್ಞಯಾಗಾದಿಗಳನ್ನು ಮಾಡಿ ಅದರ ಫಲವಾಗಿ ಸ್ವರ್ಗಾದಿಲೋಕಗಳಿಗೆ ಸಶರೀರವಾಗಿಯೇ ಹೋಗುತ್ತಿದ್ದರು. ಹೀಗಿರುವಾಗ—

**ಸ ಮೃತ್ಯುರ್ದೇವಾನಬ್ರವೀತ್ । ಅಥೈವ ಸರ್ವೇ ಮನುಷ್ಯಾ ಅಮೃತಾ ಭವಿಷ್ಯಂತ್ಯಥ ಕೋ ಮಹ್ಯಂ ಭಾಗೋ ಭವಿಷ್ಯತೀತಿ । ತೇ ಹೋಚುರ್ನಾತೋಽಪರಃ ಕಶ್ಚನ ಸಹ ಶರೀರೇಣಾ— ಮೃತೋಽಸದ್ಯದೈವ ತ್ವಮೇತಂ ಭಾಗಂ ಹರಾಸೈ । ಅಥ ವ್ಯಾವೃತ್ಯ ಶರೀರೇಣಾಮೃತೋಽ— ಸದ್ವಿದ್ಯಯಾ ವಾ ಕರ್ಮಣಾ ವೇತಿ । ಯದ್ವೈ ತದಬ್ರುವನ್ ವಿದ್ಯಯಾ ವಾ ಕರ್ಮಣಾ ವೇತಿ । ಏಷ ಹೈವ ಸಾ ವಿದ್ಯಾ ಯದಗ್ನಿರೇತದು ಹೈವ ತತ್ಕರ್ಮ ಯದಗ್ನಿಃ । ತೇ ಯೇ ಏವಮೇತದ್ವಿದುರ್ಯೇವೈತತ್ಕರ್ಮ ಕುರ್ವತೇ ಮೃತ್ವಾ ಪುನಸ್ಸಂಭವಂತಿ । ತೇ ತೇ ಸಂಭವಂತ ಏವ ಅಮೃತತ್ವಮಭಿಸಂಭವಂತಿ । ಅಥ ಯೇ ಏವಂ ನ ವಿದುರ್ಯೇ ವೈತತ್ಕರ್ಮ ನ ಕುರ್ವತೇ ಮೃತ್ವಾ ಪುನಸ್ಸಂಭವಂತಿ ತೇ ಏತಸ್ಯೈವಾನ್ನಂ ಪುನಃಪುನರ್ಭವಂತಿ ॥**

(ಶ. ಬ್ರಾ. ೧೦-೪-೩-೯, ೧೦)

ಒಂದಾನೊಂದು ಕಾಲದಲ್ಲಿ ಮೃತ್ಯುವು ದೇವತೆಗಳನ್ನು ಕುರಿತು ಇಂತೆಂದಿತು—ಎಲೈ ದೇವತೆಗಳೇ, ನೀವು ಯಜ್ಞಾದಿ ಸತ್ಕರ್ಮಾಚರಣೆಯನ್ನು ಮಾಡಿ ಮರಣರಾಹಿತ್ಯ (ಅಮೃತತ್ವಮರಣವಿಲ್ಲದೆ ಯಾವಾಗಲೂ ಜೀವಿಸಿರುವುದು) ವನ್ನು ಪಡೆದಿದ್ದೀರಿ. ಇದರಂತೆಯೇ ಮನುಷ್ಯರೆಲ್ಲರೂ ಯಜ್ಞಾದಿಗಳನ್ನು ಮಾಡಿ ಅಮೃತತ್ವವನ್ನು (ಸ್ವರ್ಗದಲ್ಲಿ ಶಾಶ್ವತಸುಖವನ್ನು) ಪಡೆಯುವರು. ಆಗ ನನ್ನ ಕೆಲಸವೇನು ? ನಾನು ಏನು ಮಾಡಬೇಕು? ಯಾರೂ ಸಾಯುವುದೇ ಇಲ್ಲವಲ್ಲಾ

ಎನ್ನಲು, ಅವಕ್ಕೆ ದೇವತೆಗಳು—ಒಳ್ಳೇದು, ಹಾಗಾದರೆ ಇನ್ನು ಮೇಲೆ ಮನುಷ್ಯರು ಉತ್ತಮಕಾರ್ಯಗಳನ್ನು ಮಾಡಿ ಅಮೃತತ್ವ ಅಥವಾ ಸ್ವರ್ಗಸುಖಕ್ಕೆ ಅರ್ಹರಾಗಿದ್ದರೂ ಅವರು ತಮ್ಮ ಶರೀರಸಹಿತವಾಗಿ ಸ್ವರ್ಗಕ್ಕೆ ಹೋಗದಂತಾಗಲಿ. ನೀನು ಅವರ ಶರೀರವನ್ನು ಆಕ್ರಮಿಸು. ಅದರಿಂದ ಅವರು ಮೃತ್ಯುವಶರಾಗಿ ಪ್ರಾಣವನ್ನೂ ತಮ್ಮ ದೇಹವನ್ನೂ ಇಲ್ಲಿಯೇ ಬಿಟ್ಟು ಬೇರೆ ಶರೀರದಿಂದ ಸ್ವರ್ಗಕ್ಕೆ ಹೋಗುವಂತಾಗಲಿ ಎಂದರು. ಆದ್ದರಿಂದ ಅಲ್ಲಿಂದ ಮುಂದಕ್ಕೆ ಜ್ಞಾನವನ್ನು ಪಡೆದಾಗಲಿ, ಸತ್ಕರ್ಮಾಚರಣೆಯಿಂದಾಗಲಿ ಅಮೃತತ್ವಕ್ಕೆ ಅರ್ಹತೆಯನ್ನು ಪಡೆದ ಮನುಷ್ಯರು ಶರೀರವನ್ನು ಇಲ್ಲಿಯೇ ತ್ಯಜಿಸಿ ಮೃತರಾದನಂತರವೇ ಅಮೃತತ್ವವನ್ನು (ಸ್ವರ್ಗದ ಶಾಶ್ವತಸುಖ) ಪಡೆಯುತ್ತಾರೆ. ಇಲ್ಲಿ ವಿದ್ಯಯಾ **ಕರ್ಮಣಾ** ವಾ ಎಂದರೆ ಅಗ್ನಿಸಂಬಂಧವಾದ ಜ್ಞಾನ ಅಥವಾ ಕರ್ಮವೆಂದರ್ಥವು. ಇದನ್ನು ತಿಳಿದು ಕರ್ಮವನ್ನು ಮಾಡಿದವರು ಮೃತರಾದನಂತರ ಅಮೃತತ್ವವನ್ನು ಪಡೆಯುವರು. ಇವನ್ನು ತಿಳಿಯದವರು ಎಷ್ಟೇ ಕರ್ಮಮಾಡಲಿ ಅವರು ಮರಣಾನಂತರ ಪುನಃಪುನಃ ಜನ್ಮಗಳನ್ನು ಎತ್ತುತ್ತಾ ಪ್ರತಿಜನ್ಮದಲ್ಲಿಯೂ ಮರಣಕ್ಕೆ ವಶರಾಗುವರು ಎಂದು ಹೇಳಿದೆ.

ಐತರೇಯ ಬ್ರಾಹ್ಮಣದಲ್ಲಿ ಒಂದು ವಿಚಿತ್ರವಾದ ಸನ್ನಿವೇಶವು ಉಕ್ತವಾಗಿದೆ—

**ಸ ವಾ ಏಷ ನ ಕದಾಚನಾಸ್ತಮೇತಿ ನೋದೇತಿ । ತಂ ಯದಸ್ತಮೇತೀತಿ ಮನ್ಯಂತೇಽಹ್ನ ಏವ ತದಂತಮಿತ್ವಾಥಾತ್ಮಾನಂ ವಿಪರ್ಯಸ್ಯತೇ ರಾತ್ರೀಮೇವಾಸ್ತಾತ್ಕುರುತೇಽಹಃ ಪರಸ್ತಾತ್ । ಅಥ ಯದೇನಂ ಪ್ರಾತರುದೇತೀತಿ ಮನ್ಯಂತೇ ರಾತ್ರೇರೇವ ತದಂತಮಿತ್ವಾಥಾತ್ಮಾನಂ ವಿಪ-ರ್ಯಸ್ಯತೇಽಹರೇವಾವಸ್ತಾತ್ಕುರುತೇ ರಾತ್ರಿಂ ಪರಸ್ತಾತ್ । ಸ ವಾ ಏಷ ನ ಕದಾಚನ ನಿಮ್ರೋಚತಿ । ನ ಹ ವೈ ಕದಾಚನ ನಿಮ್ರೋಚತ್ಯೇತಸ್ಯ ಹ ಸಾಯುಜ್ಯಂ ಸರೂಪತಾಂ ಸಲೋಕತಾಮಶ್ನುತೇ ಯ ಏವಂ ವೇದ ಯ ಏವಂ ವೇದ ॥**

(ಐ. ಬ್ರಾ. ೧೪-೪೪)

ಸೂರ್ಯನು ಉದಯಿಸುವನು ಮತ್ತು ಅಸ್ತಮಾನನಾಗುವನು ಎಂದು ನಾವು ಲೋಕವ್ಯವಹಾರದಲ್ಲಿ ಹೇಳುತ್ತೇವಷ್ಟೆ. ಆದರೆ ಸೂರ್ಯನು ಇದ್ದಲ್ಲಿಯೇ ಇರುವನು, ಉದಯಿಸುವುದೂ ಇಲ್ಲ, ಮುಳುಗುವುದೂ ಇಲ್ಲ. ಸೂರ್ಯನು ಮುಳುಗುತ್ತಾನೆಂದು ಜನರು ಯೋಚಿಸುವಾಗ ವಾಸ್ತವವಾಗಿ ಸೂರ್ಯನು ಮುಳುಗುವುದಿಲ್ಲ. ದಿವಸಾಂತ್ಯದಲ್ಲಿ ಸೂರ್ಯನ ಎರಡು ಕಡೆಗಳಲ್ಲಿಯೂ ಇರುವ ಪ್ರದೇಶಗಳಿಗೆ ರಾತ್ರಿಯೂ, ಹಗಲೂ ಏಕಕಾಲದಲ್ಲಿ ಉಂಟಾಗುವವು. ಎಂದರೆ ಸೂರ್ಯನ ಎದುರುಭಾಗದಲ್ಲಿ ಹಗಲಾಗಿರುವಾಗ ಇನ್ನೊಂದು ಭಾಗದಲ್ಲಿ ರಾತ್ರಿಯಾಗಿರುವುದು.

ಹಾಗೆಯೇ ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸುತ್ತಾನೆಂದು ಹೇಳುವಾಗ ಅದೂ ವಾಸ್ತವಸಂಗತಿಯಲ್ಲ. ಎಂದರೆ ಸೂರ್ಯನ ಒಂದು ಭಾಗದಲ್ಲಿ ಕತ್ತಲಾಗಿರುವ ಎಂದರೆ ರಾತ್ರಿಯಾಗಿರುವ ಕಾಲದಲ್ಲಿಯೇ ಮತ್ತೊಂದು ಭಾಗದಲ್ಲಿ ಹಗಲಾಗುವುದು. ಆಗಲೂ ಸೂರ್ಯನ ಎರಡು ಪಾರ್ಶ್ವಗಳಲ್ಲಿ ಒಂದು ಪಾರ್ಶ್ವದಲ್ಲಿ ರಾತ್ರಿಯೂ ಮತ್ತೊಂದು ಪಾರ್ಶ್ವದಲ್ಲಿ ಹಗಲೂ ಏಕಕಾಲದಲ್ಲಿ ಗೋಚರವಾಗುವುದು. ಅಲ್ಲದೆ ಹಿಂದೆ ರಾತ್ರಿಯಾಗಿದ್ದ ಪ್ರದೇಶದಲ್ಲಿ ಈಗ ಹಗಲೂ, ಹಗಲಾಗಿದ್ದ ಪ್ರದೇಶದಲ್ಲಿ ರಾತ್ರಿಯೂ ಉಂಟಾಗುವುದು. ಇದು ಪರಿವರ್ತನಕ್ರಮದಿಂದ ಗೋಚರವಾಗುವುದೇ ಹೊರತು ಸೂರ್ಯನು ಯಾವಾಗಲೂ ಅಸ್ತಂಗತನಾಗುವುದಿಲ್ಲ ಎಂದರೆ ಮುಳುಗುವುದೇ ಇಲ್ಲ. ನಾವು ಮುಳುಗಿದಾನೆ ಎಂದು ತಿಳಿಯುವಾಗ ಅವನು ಇನ್ನೊಂದು ಪ್ರದೇಶದಲ್ಲಿ ಹಗಲನ್ನುಂಟುಮಾಡಿ ಅಲ್ಲಿ ಪ್ರಕಾಶಿಸುತ್ತಲೇ ಇರು

ತ್ತಾನೆ. ಈ ವಿಧವಾದ ಸೂರ್ಯನ ಗತಿಯನ್ನು ತಿಳಿದಿರುವ ಪುರುಷನು ಸೂರ್ಯಲೋಕವನ್ನು ಸೇರಿ ಸೂರ್ಯ ಸಾಯುಜ್ಯವನ್ನು ಪಡೆಯುವನು ಎಂದರೆ ಪ್ರಕಾಶಾತ್ಮಕವಾದ ದಿವ್ಯಶರೀರವನ್ನು ಪಡೆದು ಸೂರ್ಯರೂಪನಾದ ಭಗವಂತ ನಲ್ಲಿ ಅಂತರ್ಗತನಾಗಿ ಅಮೃತತ್ವವನ್ನು ಪಡೆಯುವನು. ಅವನಿಗೆ ಜರಾಮರಣಾದಿಗಳೂ ಪುನರ್ಜನ್ಮವೂ, ದುಃಖವೂ ಇರುವುದಿಲ್ಲ. ಯಾವಾಗಲೂ ಶಾಶ್ವತವಾದ ಆನಂದದಲ್ಲಿ ಮಗ್ನನಾಗಿರುವನು. ಎಂದು ಮರಣಾನಂತರ ಜೀವನ ಉತ್ತಮ ಸ್ಥಿತಿಯ ವರ್ಣನೆಯು ಉಕ್ತವಾಗಿದೆ.

ಮರಣಾನಂತರ ಪ್ರಾಪ್ತವಾಗುವ ಗತಿಯ ವಿಚಾರವಾಗಿ ಗೌತಮಗೋತ್ರದ ಓರ್ವ ಋಷಿಯ ಪುತ್ರನಾದ ನಚಿಕೇತನಿಗೂ ಮೃತ್ಯುದೇವತೆಗೂ ನಡೆದ ಸಂಭಾಷಣೆಯೂ ತತ್ತ್ವವಿಮರ್ಶೆಯೂ ತೈತ್ತಿರೀಯಬ್ರಾಹ್ಮಣದ ೩-೧೧-೮ ನೇ ಅನುವಾಕದಲ್ಲಿ ಸೂಕ್ಷ್ಮವಾಗಿ ತಿಳಿಸಿದೆ. ಅದನ್ನೇ ವಿಸ್ತಾರವಾಗಿಯೂ ವಿಮರ್ಶಾತ್ಮಕವಾಗಿಯೂ ಕಠೋಪ ನಿಷತ್ತಿನಲ್ಲಿ ವರ್ಣಿಸಲಾಗಿದೆ. ಆ ಕಠೋಪನಿಷತ್ತಿನಲ್ಲೆಲ್ಲಾ ಅವರ ಸಂವಾದವೇ ವಿಸ್ತಾರವಾಗಿರುವುದರಿಂದ ಇಲ್ಲಿ ಅದರ ಸಾರಾಂಶವನ್ನು ಮಾತ್ರ ತಿಳಿಸುತ್ತೇವೆ.

**ಕಠೋಪನಿಷತ್ತಿನ ಸೂಕ್ಷ್ಮವಿವರಣೆಯು**

ಪೂರ್ವದಲ್ಲಿ ಒಬ್ಬ ಋಷಿಯಿದ್ದನು. ಅವನಿಗೆ ನಚಿಕೇತನೆಂಬ ಒಬ್ಬ ಪುತ್ರನಿದ್ದನು. ಅವನು ಇನ್ನೂ ಬಾಲಕನು. ಆ ಸಮಯದಲ್ಲಿ ಋಷಿಯು ವಿಶ್ವಜಿತ್ ಎಂಬ ಯಜ್ಞವನ್ನು ಮಾಡಲುದ್ಯುಕ್ತನಾದನು. ಆ ಯಜ್ಞದಲ್ಲಿ ಯಜ್ಞಕರ್ತನು ತನಗಿರುವ ಸಕಲಸಂಪತ್ತನ್ನೂ ಬ್ರಾಹ್ಮಣರಿಗೆ ದಾನಮಾಡಬೇಕೆಂಬುದೇ ವಿಧಿಯು. ಅದರಂತೆ ಸ್ವರ್ಗಾರ್ಥಿಕನಾದ ಆ ಋಷಿಯು ಯಜ್ಞದಲ್ಲಿ ದಾನಮಾಡಲು ತನ್ನಲ್ಲಿ ಬೆಲೆಬಾಳುವ ಯಾವ ವಸ್ತುವೂ ಇಲ್ಲದಿದ್ದರಿಂದ ತನ್ನಲ್ಲಿ ಉಳಿದಿದ್ದ ಹಾಲನ್ನು ಕೊಡಲು ಸಾಮರ್ಥ್ಯವಿಲ್ಲದ ಮುದಿಯಾದ ಮತ್ತು ಬಡಕಲಾದ ಕೆಲವು ಕುಂಟ ಹಸು ಗಳನ್ನು ದಾನಮಾಡಿದನು. ಇದನ್ನೆಲ್ಲಾ ನೋಡುತ್ತಿದ್ದ ಆ ಋಷಿಯ ಮಗನಾದ ನಚಿಕೇತನೆಂಬ ಬಾಲಕನು ಮನಸ್ಸಿನಲ್ಲಿ ಇಂತು ಯೋಚಿಸಿದನು- ನನ್ನ ತಂದೆಯು ಉತ್ತಮಲೋಕಪ್ರಾಪ್ತಿಗಾಗಿ ಈ ಶ್ರೇಷ್ಠವಾದ ಯಾಗವನ್ನು ಮಾಡಿ ಕಲ್ಪೋಕ್ತಪ್ರಕಾರವಾಗಿ ದಾನಾದಿಗಳನ್ನು ಕೊಟ್ಟಿರುವನು. ಆದರೆ ದಾನಕೊಡುವಾಗ ಉತ್ತಮವಸ್ತುಗಳನ್ನೇ ದಾನಕೊಡಬೇಕು. ಆ ದಾನವಸ್ತುಗಳು ಅವುಗಳನ್ನು ಸ್ವೀಕರಿಸಿದವರಿಗೆ ಸುಖಸಾಧನವಾಗಿರಬೇಕು. ಅದರಿಂದ ಅವರಿಗೆ ಉಪಯೋಗವಾಗಬೇಕು. ಉಪಯುಕ್ತವಸ್ತುಗಳನ್ನು ದಾನಮಾಡುವುದರಿಂದಲೇ ಶ್ರೇಯಸ್ಸುಂಟಾಗುವುದು. ಆದರೆ ನಮ್ಮ ತಂದೆಯು ದಾನವಾಗಿ ಕೊಟ್ಟಿರುವ ಬಡಕಲಾದ, ಹಾಲನ್ನು ಕೊಡಲು ಸಾಮರ್ಥ್ಯವಿಲ್ಲದ ಮುದಿಯಾದ ಈ ಗೋವುಗಳಿಂದ ದಾನಸ್ವೀಕಾರಮಾಡಿದ ಬ್ರಾಹ್ಮಣರಿಗೆ ಏನು ಪ್ರಯೋಜನವಾದಂತಾಯಿತು ? ಈ ರೀತಿಯಾದ ದಾನದಿಂದ ಪುಣ್ಯವು ಲಭಿಸಲಾರದು ಹೀಗೆಂದು ಆಲೋಚಿಸಿ, ತನ್ನ ತಂದೆಯನ್ನು ಕುರಿತು ಇಂತೆಂದನು—ಎಲೈ ತಂದೆಯೇ, ಈ ಯಜ್ಞದಲ್ಲಿ ನೀನು ನಿನ್ನ ಸರ್ವಸ್ವವನ್ನೂ ದಾನಮಾಡಿರುವುದಿಲ್ಲ. ಯಜ್ಞದ ಫಲವು ಪೂರ್ಣವಾಗಿ ಲಭಿಸಬೇಕಾದರೆ ನಿನ್ನಲ್ಲಿರುವ ಸಮಸ್ತವನ್ನೂ ದಾನಮಾಡಲೇಬೇಕು. ನಿನ್ನಲ್ಲಿ ಇನ್ನೂ ದಾನಮಾಡದಿರುವ ವಸ್ತುವು ಒಂದು ಮಾತ್ರವಿರುವುದು. ಅದು ಯಾವುದೆಂದರೆ-ನಿನಗೆ ಸೇರಿದವನೂ, ನಿನಗೆ ಪುತ್ರನೂ ಆದ ನಾನೇ ಆ ವಸ್ತುವು. ನನ್ನನ್ನು ಯಾರಿಗೆ ಕೊಡುವೆ ? ಎಂದನು. ತಂದೆಯು ಆ ಮಾತನ್ನು ಬಾಲಭಾಷೆಯೆಂದು ತಿಳಿದು ಅದಕ್ಕೆ ಉತ್ತರ ಕೊಡುವ ಹವ್ಯಾಸಕ್ಕೆ ಹೋಗಲಿಲ್ಲ. ಆದರೆ ನಚಿಕೇತನು ಪುನಃ ಅದೇ ಪ್ರಶ್ನೆಯನ್ನು ಕೇಳಿದನು. ಆಗಲೂ ತಂದೆಯು ಏನನ್ನೂ ಹೇಳಲಿಲ್ಲ. ಮೂರನೇಸಲ ನಚಿಕೇತನು ಅದೇ ಪ್ರಶ್ನೆಯನ್ನು ಬಲವಂತವಾಗಿ ಕೇಳಲು ತಂದೆಗೆ ಕೋಪ ಬಂದು ಕೋಪದ ಭರದಲ್ಲಿ—ನಿನ್ನನ್ನು ಮೃತ್ಯುವಿಗೆ (ಮೃತ್ಯುದೇವತೆಯಾದ ಯಮನಿಗೆ) ಕೊಡುವೆನು ಎಂದನು. ಅದರಿಂದ ಸಮಾಧಾನಗೊಂಡು ನಚಿಕೇತನು ತಂದೆಯ ಮಾತನ್ನು ನಡೆಸಬೇಕೆಂದು ನಿಶ್ಚಯಿಸಿ ಮೃತ್ಯುವಿನ ಬಳಿಗೆ

ಹೋಗಲು ಸಿದ್ಧನಾದನು. ಆದರೆ ತಂದೆಯು ಸಿಟ್ಟಿನಲ್ಲಿ ತಾನಾಡಿದ ಮಾತಿಗೆ ಪಶ್ಚಾತ್ತಾಪಪಟ್ಟು ಪುತ್ರನ ನಿಶ್ಚಯವನ್ನು ತಪ್ಪಿಸಲು ಸಮಾಧಾನೋಕ್ತಿಯಿಂದ ಪ್ರಯತ್ನಿಸಿದರೂ ನಚಿಕೇತನು ಪಿತೃವಿನ ಮಾತನ್ನು ಭಂಗಪಡಿಸಲು ಇಷ್ಟಪಡಲಿಲ್ಲ. ಆಗ ಒಂದು ಅಶರೀರವಾಣಿಯು ಕೇಳಿಸಿತು—ಎಲೈ ಬಾಲಕನೇ, ನೀನು ಮೃತ್ಯುವಿನ ಮನೆಗೆ ಹೋಗು. ಅವನು ಮನೆಯಲ್ಲಿರುವ ಕಾಲವನ್ನು ತಿಳಿದುಕೋ. ನಿನ್ನ ಇಷ್ಟಾರ್ಥವು ಕೈಗೂಡುವುದು ಎನ್ನಲು, ಆ ಮಾತಿನಿಂದ ನಚಿಕೇತನು ಧೈರ್ಯವನ್ನು ತಾಳಿ ಮೃತ್ಯುವಿನ ಮನೆಗೆ ಹೋದನು. ಆದರೆ ಆಗ ಮೃತ್ಯುವು ಮನೆಯಲ್ಲಿರಲಿಲ್ಲ. ಅವನು ಮನೆಗೆ ಬರುವುದು ಮೂರು ದಿವಸವಾಯಿತು. ಅಲ್ಲಿಯವರೆಗೂ ಮೂರುದಿವಸಗಳವರೆಗೆ ಅಲ್ಲಿ ಉಪವಾಸದಿಂದಲೇ ಇದ್ದು ಮೃತ್ಯುವು ಬರುವುದನ್ನೇ ಎದುರುನೋಡುತ್ತಿದ್ದನು. ಅವನು ಬಂದ ನಂತರ ತನ್ನ ಮನೆಯಲ್ಲಿ ಮೂರುದಿವಸದಿಂದ ಉಪವಾಸದಿಂದಿದ್ದು ತನ್ನ ಆಗಮನವನ್ನೇ ಎದುರುನೋಡುತ್ತಿದ್ದ ಬಾಲಬ್ರಹ್ಮಚಾರಿಯಾದ ನಚಿಕೇತನನ್ನು ನೋಡಿ ಮೃತ್ಯುವು ಪಶ್ಚಾತ್ತಾಪದಿಂದ,—ಎಲೈ ಬಾಲಕನೇ, ನಿನಗೆ ನಮಸ್ಕಾರವು. ನೀನು ನನ್ನ ಮನೆಯಲ್ಲಿ ಮೂರುದಿವಸಗಳಿಂದ ಉಪವಾಸವಾಗಿದ್ದೆಯೆಂದು ತಿಳಿಯಿತು. ಅತಿಥಿಯು ಉಪವಾಸವಿದ್ದರೆ ಶ್ರೇಯಸ್ಸುಂಟಾಗುವುದಿಲ್ಲ. ಆದ್ದರಿಂದ ನೀನು ಉಪವಾಸದಿಂದಿದ್ದ ಮೂರುದಿನಗಳಿಗಾಗಿ ನಿನಗೆ ಬೇಕಾದ ಮೂರು ವರಗಳನ್ನು ಬೇಡಿಕೋ, ಅವುಗಳನ್ನು ಕೊಡುವೆನು ಎಂದನು. ಅದಕ್ಕೆ ಆ ಬಾಲಕನು ಇಂತು ವರವನ್ನು ಬೇಡಿದನು. ನನ್ನ ತಂದೆಯ ಕೋಪವು ಶಾಂತವಾಗಬೇಕು. ನಾನು ನಿನ್ನ ಬಳಿಯಿಂದ ಹಿಂತಿರುಗಿ ಹೋದಮೇಲೆ ತಂದೆಯು ನನ್ನ ಗುರ್ತು ಹಿಡಿದು ನನ್ನನ್ನು ಪ್ರೀತಿಯಿಂದ ಆದರಿಸಬೇಕು. ತಂದೆಯ ಚಿಂತೆಯು ನಾಶವಾಗಿ ಅವನು ಶಾಂತಚಿತ್ತನಾಗಿರಬೇಕು. ಇದೇ ನಾನು ಕೇಳುವ ಮೊದಲನೆಯವರವು ಎಂದನು. ಯಮನು (ಮೃತ್ಯುವು) ಹಾಗೆಯೇ ಆಗಲೆಂದು ವರವನ್ನು ಕೊಟ್ಟು ನಿನ್ನ ಎರಡನೇವರವು ಯಾವುದು, ಅದನ್ನು ಕೇಳಿಕೋ ಎಂದನು.

ಅನಂತರ ನಚಿಕೇತನು ಸ್ವರ್ಗಸಾಧನವಾದ ಅಗ್ನಿಯನ್ನು ಉಪಾಸನೆಮಾಡುವ ಕ್ರಮವನ್ನೂ ಜ್ಞಾನವನ್ನೂ ಕರುಣಿಸಬೇಕೆಂದು ಬೇಡಲು, ಯಮನು ಅವನ ತೀಕ್ಷ್ಣಬುದ್ಧಿಗೆ ಮೆಚ್ಚಿ ಅದರಂತೆ ವರವನ್ನು ಕೊಟ್ಟು, ಈ ಯಾಗಾರ್ಹವಾದ ಅಗ್ನಿಯು ನಿನ್ನ ಹೆಸರಿನಿಂದಲೇ (ನಾಚಿಕೇತವಹ್ನಿ) ಪ್ರಸಿದ್ಧವಾಗಲೆಂದೂ ವರವನ್ನು ಅನುಗ್ರಹಿಸಿದನು.

ಬಳಿಕ ನಚಿಕೇತನು ತನ್ನ ಮೂರನೆಯವರವನ್ನು ಕುರಿತು ಈರೀತಿ ಕೇಳಿದನು—ಮನುಷ್ಯರು ಮರಣಹೊಂದಿದ ಮೇಲೆ ಅವನ ಆತ್ಮವು ಇರುವುದೆಂದು ಕೆಲವರೂ, ಇರುವುದಿಲ್ಲವೆಂದು ಕೆಲವರೂ ಅನ್ನುವರು. ಈ ವಿಷಯದಲ್ಲಿ ನಿಶ್ಚಯವಾದ ವಿಷಯವನ್ನು ತಿಳಿಸಲು ನೀನೊಬ್ಬನೇ ಸಮರ್ಥನು. ನಿನ್ನಿಂದ ಈ ವಿಷಯವಾಗಿ ನಿಶ್ಚಯಜ್ಞಾನವನ್ನು ತಿಳಿದುಕೊಳ್ಳಬೇಕೆಂದು ಬಯಸುವೆನು. ಅದನ್ನು ನನಗೆ ವಿಶದವಾಗಿ ತಿಳಿಸು. ಇದೇ ನಾನು ಕೇಳುವ ಮೂರನೆಯ ವರವು ಎಂದನು. ಅದನ್ನು ಕೇಳಿ—

ಯಮ—ಎಲೈ ಬಾಲಕನೇ, ಪೂರ್ವದಲ್ಲಿ ದೇವತೆಗಳು ಸಹ ಈ ವಿಷಯದಲ್ಲಿ ಬೇಕಾದಷ್ಟು ಚರ್ಚೆಮಾಡಿರುವರು. ಇದನ್ನು ಸುಲಭವಾಗಿ ತಿಳಿದುಕೊಳ್ಳಲು ಸಾಧ್ಯವಿಲ್ಲ. ಇದು ಅತ್ಯಂತ ಸೂಕ್ಷ್ಮವಾದ ವಿಚಾರವು. ಎಲೈ ನಚಿಕೇತನೇ, ನೀನು ಹಟವನ್ನು ಹಿಡಿಯಬೇಡ, ನನ್ನನ್ನು ನಿರ್ಬಂಧಿಸಬೇಡ, ಬೇರೊಂದು ವರವನ್ನು ಕೇಳು ಕೊಡುವೆನು.

**ನಚಿಕೇತ**—ನಾನು ಕೇಳುವ ವಿಷಯವು ದೇವತೆಗಳಿಗೂ ತಿಳಿಯದೆಂದೂ ಅವರೂ ಬಹಳವಾಗಿ ಚರ್ಚೆಮಾಡಿರುವರೆಂದೂ ನೀನೇ ಹೇಳಿರುವೆ. ಈ ವಿಷಯವು ನಿನ್ನನ್ನು ಬಿಟ್ಟರೆ ಇತರರಿಗೆ ಯಾರಿಗೂ ಗೊತ್ತಿರುವುದಿಲ್ಲ.

ಅದನ್ನು ವಿವರಿಸಲು ನೀನು ಮಾತ್ರ ಸಮರ್ಥನು. ಇದಕ್ಕಿಂತ ಉತ್ತಮವಾದ ವರವು ಬೇರೊಂದಿಲ್ಲ. ದಯವಿಟ್ಟು ಇದನ್ನು ನನಗೆ ಅನುಗ್ರಹಿಸಬೇಕು.

**ಯಮ**—ಎಲೈ ಬಾಲಕನೇ, ನೂರು ವರ್ಷಗಳವರೆಗೆ ಜೀವಿಸಿರುವ ಪುತ್ರಪೌತ್ರಾದಿಗಳನ್ನು ಕೇಳು, ಆನೆ ಕುದುರೆಗಳನ್ನೂ ಗೋವು ಮೊದಲಾದ ಪಶುಸಂಪತ್ತನ್ನೂ, ಸುವರ್ಣವನ್ನೂ, ವಿಸ್ತಾರವಾದ ಹೊಲಗದ್ದೆಗಳನ್ನೂ ಬೇಕೆಂದು ಕೇಳು. ನಿನಗೆ ಎಷ್ಟು ವರ್ಷಬೇಕಾದರೂ ಆಯುಸ್ಸನ್ನು ಕೊಡುವೆನು. ಯಾವುದನ್ನು ಬೇಕಾದರೂ ಕೊಡುವೆನು. ಸಕಲಸಂಪತ್ತನ್ನೂ ಬೇಡು. ಭೂಲೋಕದಲ್ಲಿ ಅಲಭ್ಯವಾದ ಯಾವಯಾವ ಇಷ್ಟಾರ್ಥಗಳಿರುವವೋ ಅವನ್ನೆಲ್ಲಾ ಕೇಳು. ರಥಗಳು, ಮನೋಹರರಾದ ಸುಂದರ ಸ್ತ್ರೀಯರು ಮೊದಲಾದ ಇಷ್ಟಾರ್ಥಗಳೆಲ್ಲವನ್ನೂ ಕೊಡುವೆನು. ಆದರೆ ಮರಣದ ವಿಷಯದಲ್ಲಿ ಮಾತ್ರ ಪ್ರಶ್ನೆಯನ್ನು ಕೇಳಬೇಡ.

**ನಚಿಕೇತ**—ಎಲೈ ಯಮನೇ, ನೀನು ಕೊಡಬೇಕೆಂದಿರುವ ವಸ್ತುಗಳೆಲ್ಲಾ ಕ್ಷಣಿಕವು, ನಶ್ವರವಾದುವು. ಹಾಗೇಕೆ ? ನಮ್ಮ ಜೀವಿತವೂ ಕೂಡ ಸ್ವಲ್ಪಕಾಲ ಮಾತ್ರವಿರುವುದು. ಮರಣಾನಂತರ ನೀನು ಕೊಡುವ ವಸ್ತುವಾಹನಾದಿಗಳಿಂದ ಏನು ಪ್ರಯೋಜನ ? ಎಲ್ಲವೂ ಮತ್ತೆ ನಿನ್ನದೇ ಆಗುವವು. ಎಷ್ಟೇ ಸಂಪತ್ತಿದ್ದರೂ ಅದರಿಂದ ಮನುಷ್ಯನಿಗೆ ತೃಪ್ತಿಯಾಗುವುದಿಲ್ಲ. ನಿನ್ನ ಅನುಗ್ರಹವಿರುವವರೆಗೂ ನನ್ನ ಆಯುಷ್ಯಕ್ಕೆ ಯಾವ ತೊಂದರೆಯೂ ಇಲ್ಲ. ಜರಾಮರಣರಹಿತರಾದ ದೇವತೆಗಳಿರುವ ಲೋಕಕ್ಕೆ ಬಂದು ಮನುಷ್ಯನಾದವನು ಕ್ಷಣಿಕ ಸುಖಗಳನ್ನು ಬೇಡಬಹುದೇ ? ಎಲೈ ಮೃತ್ಯುದೇವನೇ, ಯಾವ ತತ್ತ್ವದ ವಿಷಯದಲ್ಲಿ ಬಹಳವಾದ ಚರ್ಚೆ ನಡೆದಿರುವುದೋ, ಯಾವುದು ಪರಲೋಕದಲ್ಲಿ ಮಹತ್ತ್ವವುಳ್ಳದ್ದೋ ಯಾವುದು ಗೂಢವಾಗಿರುವುದೋ ಅಂತಹ ಈ ವರವನ್ನು ಬಿಟ್ಟು ನಾನು ಬೇರೆ ಯಾವ ವರವನ್ನೂ ಅಪೇಕ್ಷಿಸುವವನಲ್ಲ. ।

ಯಮ—ಎಲೈ ಬಾಲಕನೇ, ನೀನು ಇಷ್ಟು ಕೇಳಿದಮೇಲೆ ಹೇಳುವೆನು ಕೇಳು. ಲೋಕದಲ್ಲಿ ಶ್ರೇಯಸ್ಸು, ಪ್ರೇಯಸ್ಸು ಎಂದು ಎರಡು ವಿಧ ಮಾರ್ಗಗಳಿರುವವು. ಇವೆರಡೂ ಬೇರೆಬೇರೆ. ಇವೆರಡರ ಫಲಗಳೂ ಬೇರೆಬೇರೆ. ಪ್ರೇಯಸ್ಸಿನಲ್ಲಿ (ಎಂದರೆ ಐಹಿಕಸುಖಗಳಲ್ಲಿ) ಪ್ರೇರಿತನಾದ ಮನುಷ್ಯನು ಕರ್ಮದಲ್ಲಿ ಪ್ರವೃತ್ತನಾಗುವನು. ಅವನ ಪುರುಷಾರ್ಥವು ನಾಶಹೊಂದುವುದು. ಆದರೆ ಶ್ರೇಯಸ್ಸಿನ ಮಾರ್ಗವನ್ನು ಅನುಸರಿಸುವವನಿಗೆ ಸಮಸ್ತ ಕಲ್ಯಾಣಗಳೂ ಉಂಟಾಗುವವು. ಆದ್ದರಿಂದ ಪ್ರೇಯಸ್ಸು, ಶ್ರೇಯಸ್ಸು ಈ ಎರಡರಲ್ಲಿ ಶ್ರೇಯಸ್ಸೇ ಶ್ರೇಷ್ಠವೆಂದರಿತು ಬುದ್ಧಿವಂತನಾದ ಪುರುಷನು ಶ್ರೇಯಸ್ಸನ್ನೇ ಅಪೇಕ್ಷಿಸುವನು. ಮೂಢನಾದವನು ಇಹಲೋಕದ ವಿಷಯಗಳಿಗೆ ಮನಸೋತು ಪ್ರೇಯಸ್ಸನ್ನು ಬಯಸುವನು. ಎಲೈ ನಾಚಿಕೇತನೇ, ನೀನು ಅನೇಕ ಪ್ರಿಯವಸ್ತುಗಳನ್ನೂ ಇಹಲೋಕದ ಸುಖಗಳನ್ನೂ ವಿಚಾರಪೂರ್ವಕವಾಗಿ ತ್ಯಜಿಸಿರುವೆ. ಅನೇಕ ಜನರು ಧನಧಾನ್ಯಸಮೃದ್ಧವಾದ ಪ್ರೇಯಸ್ಸಿನ ಮಾರ್ಗವನ್ನೇ ಬಯಸುತ್ತಿದ್ದರೂ ನೀನು ಮಾತ್ರ ಅದನ್ನು ಇಚ್ಛಿಸಲಿಲ್ಲ. ಲೋಕದಲ್ಲಿ ಅವಿದ್ಯೆ, ವಿದ್ಯೆ ಎಂಬಿವು ತೀರಾ ಭಿನ್ನವಾದುವು. ನೀನು ವಿದ್ಯೆಯನ್ನೇ ಅಪೇಕ್ಷಿಸುವವನು. ಏಕೆಂದರೆ, ಕಾಮನೆಗಳಿಗೂ ವಿಷಯಸುಖಕ್ಕೂ ಇಹಲೋಕದ ಸುಖಸಂತೋಷಗಳಿಗೂ ನೀನು ಮೋಹಗೊಳ್ಳಲಿಲ್ಲ. ಅವಿದ್ಯೆ ಅಥವಾ ಅಜ್ಞಾನದಿಂದ ಆವೃತರಾದವರು ತಾವೇ ಅತ್ಯಂತ ಬುದ್ಧಿವಂತರೆಂದು ಭಾವಿಸಿ ಕುರುಡನನ್ನು ಅನುಸರಿಸಿ ಹೋಗುವ ಮತ್ತೊಬ್ಬ ಕುರುಡನಂತೆ ಅಡ್ಡದಾರಿಗೆ ಒಯ್ಯಲ್ಪಡುವರು. ಐಶ್ವರ್ಯಾದಿಗಳ ಮೋಹಕ್ಕೆ ಮನಸೋತು ಬಾಲಕರಂತೆ ಬುದ್ಧಿಹೀನನಾದ ಪುರುಷನಿಗೆ ಯುಕ್ತಾಯುಕ್ತ ವಿವೇಚನೆ ಇರುವುದಿಲ್ಲ. ನಮಗೆ ಕಾಣುತ್ತಿರುವ ಈ ಪ್ರಪಂಚವಲ್ಲದೆ, ಬೇರೆ ಪರಲೋಕವು ಇಲ್ಲವೇ ಇಲ್ಲ

ನೆಂದು ಅವನು ತಿಳಿಯುವನು. ಆದರಿಂದ ಅವನು ಪುನಃ ಪುನಃ ಜನ್ಮವೆತ್ತಿ ಆಯಾ ಜನ್ಮಗಳಲ್ಲಿ ನನಗೆ (ಮೃತ್ಯುವಿಗೆ) ವಶನಾಗುವನು. ಯಾವ ಜ್ಞಾನವು ಎಂದರೆ, ಆತ್ಮಜ್ಞಾನವು ಸರ್ವಶ್ರೇಷ್ಠವೆನಿಸುವುದೋ ಅಂತಹ ಆತ್ಮಜ್ಞಾನವನ್ನು (ಬ್ರಹ್ಮಜ್ಞಾನ) ಕೇಳಿ ತಿಳಿದುಕೊಳ್ಳುವ ಸುಸಂಧಿಯು ಅನೇಕರಿಗೆ ದೊರೆಯಲಾರದು. ಅಂತಹ ಜ್ಞಾನವನ್ನು ಉಪದೇಶಿಸುವ ಗುರುವೂ ಸಿಕ್ಕುವುದು ದುರ್ಲಭವು. ಗುರುವು ಲಭಿಸಿದರೂ ಅದರಲ್ಲಿ ಆಸಕ್ತಿ ಹುಟ್ಟಿ ಆತ್ಮಜ್ಞಾನವನ್ನು ತಿಳಿದುಕೊಳ್ಳಬೇಕೆಂಬ ಬಯಕೆ ಹುಟ್ಟುವುದು ತೀರಾ ಆಶ್ಚರ್ಯವೆಂದೇ ಹೇಳಬೇಕು. ಈ ಆತ್ಮಜ್ಞಾನದ ವಿಷಯದಲ್ಲಿ ನಾನಾ ಬಗೆಯ ಭಿನ್ನಾಭಿಪ್ರಾಯಗಳಿರುವುದರಿಂದ ಸಾಮಾನ್ಯ ಮನುಷ್ಯನು ಇದನ್ನು ಹೇಳಿದರೆ ಅದು ಚೆನ್ನಾಗಿ ತಿಳಿಯುವುದಿಲ್ಲ. ಸರಿಯಾದ ಯೋಗ್ಯತೆಯುಳ್ಳ ಆತ್ಮಜ್ಞಾನಿಯೇ ಇದನ್ನು ಉಪದೇಶಿಸಬೇಕು. ಇಂತಹ ಗುರುವಿನಿಂದ ಉಪದಿಷ್ಟನಾದ ಶಿಷ್ಯನಿಗೆ ತಿಳಿಯದಿರುವುದೊಂದೂ ಇರುವುದಿಲ್ಲ. ಅವನು ಎಲ್ಲವನ್ನೂ ತಿಳಿದು ಸರ್ವಜ್ಞನೇ ಆಗುವನು. ಈ ಆತ್ಮಜ್ಞಾನವು ಕೇವಲ ತರ್ಕ ಅಥವಾ ಊಹೆಯಿಂದ ತಿಳಿದುಕೊಳ್ಳಲು ಸಾಧ್ಯವಿಲ್ಲ, ಜ್ಞಾನಿಯಾದ ಗುರುವಿನಿಂದಲೇ ತಿಳಿಯಲ್ಪಡಬೇಕು. ಎಲೈ ನಚಿಕೇತನೇ, ನಿನ್ನಂತೆ ಸತ್ಯಾನ್ವೇಷಿಯೂ, ಆತ್ಮಜ್ಞಾನವಿಷಯದಲ್ಲಿ ಪ್ರಶ್ನೆಮಾಡಿ ಅದನ್ನು ತಿಳಿದುಕೊಳ್ಳಬೇಕೆಂಬ ಆಸಕ್ತಿಯೂ ಇರುವವನು ಬೇರೊಬ್ಬನಿಲ್ಲ, ಐಶ್ವರ್ಯಾದಿಗಳು ಅನಿತ್ಯವು. ಅನಿತ್ಯವಸ್ತುಗಳ ಸಹಾಯದಿಂದ ನಿತ್ಯವಸ್ತುವಾದ ಬ್ರಹ್ಮಜ್ಞಾನವು ಪ್ರಾಪ್ತವಾಗಲಾರದು. ಎಲೈ ನಾಚಿಕೇತನೇ, ನೀನು ಇತರ ಐಹಿಕವಾದ ಐಶ್ವರ್ಯಾದಿಗಳನ್ನು ತುಚ್ಛೀಕರಿಸಿ, ಸಮಸ್ತ ಇಷ್ಟಾರ್ಥಪ್ರದವೂ, ಪೂರ್ಣಸುಖಕ್ಕೆ ನೆಲೆಯೂ, ಅತ್ಯಂತ ವಿಸ್ತಾರವೂ ಆದ ಪರಮಪದವನ್ನು ಮಾತ್ರ ಬಯಸಿ ಇತರ ಸುಖಗಳನ್ನು ತ್ಯಜಿಸಿರುವೆ. ವಿವೇಕಿಯಾದ ಪುರುಷನು, ಸಾಕ್ಷಾತ್ಕರಿಸಲು ಕಷ್ಟಸಾಧ್ಯವಾದುದೂ ಹೃದಯವೆಂಬ ಗೂಢವಾದ ಗುಹೆಯಲ್ಲಿ ಸ್ಥಿತವಾದುದೂ ಶಾಶ್ವತವೂ, ತೇಜಸ್ಸಿನಿಂದ ಬೆಳಗುತ್ತಿರುವುದೂ ಆದ ಆತ್ಮನನ್ನು ಯೋಗದಿಂದ ಲಬ್ಧನಾಗುವ ಜ್ಞಾನದಿಂದ ಸಾಕ್ಷಾತ್ಕರಿಸಿ, ಹರ್ಷಶೋಕಗಳನ್ನು ದಾಟುವನು. ಇದನ್ನು ಕೇಳಿ ತಿಳಿದುಕೊಂಡ ಮನುಷ್ಯನು ಆತ್ಮನನ್ನು ಸಾಕ್ಷಾತ್ಕರಿಸಿ ಅದರಿಂದ ಲಭ್ಯವಾಗುವ ಆನಂದಕ್ಕೆ ನೆಲೆಯಾದ ಸ್ಥಾನವೇ ತನಗೆ ಲಭಿಸಿತೆಂದು ಆನಂದವನ್ನು ಅನುಭವಿಸುತ್ತಿರುವನು. ಇಂತಹ ಆನಂದಸ್ಥಾನದ ಬಾಗಿಲು ನಚಿಕೇತನಾದ ನಿನಗೆ ತೆರೆದಿರುವುದೆಂದು ತಿಳಿಯುವೆನು.

**ನಚಿಕೇತ**—ಯಾವುದು (ಯಾವ ವಸ್ತುವು) ಧರ್ಮ, ಮತ್ತು ಅಧರ್ಮಗಳಿಂದ ಭಿನ್ನವೂ, ಕಾರ್ಯಕಾರಣಗಳಿಂದ ಬೇರೆಯಾದುದೂ, ಭೂತಭವಿಷ್ಯತ್ತುಗಳಿಂದಲೂ ಬೇರೆಯಾದುದೂ ಇರುವುದೆಂದು ನೀನು ತಿಳಿದಿರುವೆಯೋ ಅದನ್ನು ನನಗೆ ವಿಶದವಾಗಿ ಹೇಳು.

**ಯಮ**—ಸಕಲವೇದಗಳು ಯಾವ ಪರಮಪದವನ್ನು ಹೊಗಳುವವೋ ಯಾವ ಪರಮಪದದ ಪ್ರಾಪ್ತಿಗಾಗಿ ಅನೇಕರಾಳಿಗಳು ಬ್ರಹ್ಮಚರ್ಯವನ್ನು ಪಾಲಿಸುತ್ತಾ ಕಠಿಣತಪಸ್ಸನ್ನು ಮಾಡುವರೋ ಅಂತಹ ಪರಮಗತಿಯ ವಿಷಯವನ್ನು ನಾನು ಸಂಕ್ಷೇಪವಾಗಿ ಹೇಳುವೆನು. ಅದೇ ಓಂ ಎಂಬ ಪ್ರಣವವು. ಇದೇ ಅಕ್ಷರಬ್ರಹ್ಮವು. ಇದೇ ಅಕ್ಷರವು ಎಂದರೆ ನಾಶರಹಿತವಾದುದು. ಈ ಅಕ್ಷರದ ಜ್ಞಾನವನ್ನು ಪಡೆದವನು ಯಾವ ಪರಮಪದವನ್ನು ಇಚ್ಛಿಸುವನೋ ಅದನ್ನು ಪಡೆಯುವನು. ಇದೇ ಎಲ್ಲಕ್ಕೂ ಶ್ರೇಷ್ಠವಾದ ಸಾಧನವು. ಈ ಸಾಧನವನ್ನರಿತವನು ಬ್ರಹ್ಮಲೋಕದಲ್ಲಿಯೂ ಗೌರವಿಸಲ್ಪಡುವನು. ಜ್ಞಾನಮಯನಾದ ಆತ್ಮನಿಗೆ ಜನ್ಮಮೃತ್ಯುಗಳಿಲ್ಲ. ಆ ಆತ್ಮವು ಇನ್ನೊಂದು ವಸ್ತುವಿನಿಂದ ಉತ್ಪನ್ನವಾದುದಲ್ಲ. ಅದು ಉತ್ಪನ್ನವಾದುದೇ ಅಲ್ಲ. ಅದು ಅಜವು (ಉತ್ಪನ್ನರಹಿತವಾದುದು), ನಿತ್ಯವು, ಶಾಶ್ವತವು, ಸನಾತನವು. ಆದುದರಿಂದ ಶರೀರವು ಮೃತವಾದರೂ ಶರೀರದಲ್ಲಿ ನೆಲೆಸಿರುವ ಆತ್ಮಕ್ಕೆ ನಾಶವಿಲ್ಲ. ನಾನು ಕೊಲ್ಲು

ವೆನು, ನಾನು ಕೊಲ್ಲಲ್ಪಡುವೆನು ಎಂದು ಹೇಳುವ ಪುರುಷರು ಅಜ್ಞಾನಿಗಳಲ್ಲದೆ ಮತ್ತೇನೂ ಅಲ್ಲ. ಏಕೆಂದರೆ ಆತ್ಮನು ಕೊಲ್ಲುವುದೂ ಇಲ್ಲ, ಕೊಲ್ಲಲ್ಪಡುವುದೂ ಇಲ್ಲ. ಪ್ರಾಣಿಗಳ ಹೃದಯವೆಂಬ ಗುಹೆಯಲ್ಲಿರುವ ಆತ್ಮವಸ್ತುವು ಅಣುವಿಗಿಂತಲೂ ಅಣುವಾಗಿರುವುದು ಎಂದರೆ ಅತ್ಯಂತ ಸೂಕ್ಷ್ಮವಾಗಿರುವುದು. ಇದು ಎಲ್ಲೆಲ್ಲಿಯೂ ವ್ಯಾಪಿಸಿರುವುದರಿಂದ ಮಹತ್ತಾದ (ದೊಡ್ಡದಾದ) ವಸ್ತುವಿಗಿಂತಲೂ ಮಹತ್ತಾದುದು ಕಾಮರಹಿತನಾದವನಿಗೆ ಮಾತ್ರ ಆತ್ಮನ ದರ್ಶನವಾಗುವುದು. ಶೋಕರಹಿತನಾದವನು ಪರಮಾತ್ಮನ ಅನುಗ್ರಹದಿಂದ ಆತ್ಮನ ಮಹಿಮೆಯನ್ನು ತಿಳಿದುಕೊಳ್ಳುವನು. ಒಂದೇ ಸ್ಥಳದಲ್ಲಿ ಕುಳಿತಿದ್ದರೂ ಆತ್ಮನು ದೂರಹೋಗಬಲ್ಲದು. ಮಲಗಿದ್ದರೂ ಸರ್ವತ್ರ ಸಂಚರಿಸಬಲ್ಲದು. ಇಂತಹ ಗುಣವಿಶಿಷ್ಟನೂ ಆನಂದಯುಕ್ತನೂ ದುಃಖರಹಿತನೂ ಆದ ಆತ್ಮನನ್ನು ನನ್ನ ಹೊರತು ಯಾರು ಬಲ್ಲರು ? ಶರೀರಗಳಲ್ಲಿದ್ದರೂ ಅಶರೀರನಾಗಿಯೂ (ಎಂದರೆ ಶರೀರಕ್ಕೆ ಸಂಬಂಧಪಟ್ಟ ಸುಖದುಃಖಾದಿಗಳಲ್ಲಿ ಭಾಗಿಯಾಗದಿರುವ) ಅನಿತ್ಯಗಳಲ್ಲಿ ನಿತ್ಯನಾಗಿಯೂ, ಇರುವ ಸರ್ವವ್ಯಾಪಿಯಾದ ಮತ್ತು ಶ್ರೇಷ್ಠನಾದ ಈ ಆತ್ಮನನ್ನು ಸಾಕ್ಷಾತ್ಕಾರಮಾಡಿಕೊಂಡ ವಿವೇಕಿಯಾದ ಪುರುಷನು ಶೋಕರಹಿತನಾಗುವನು ಎಂದರೆ ಅವನಿಗೆ ದುಃಖವೆಂಬುದೇ ಇಲ್ಲವು. ಈ ಆತ್ಮಜ್ಞಾನವನ್ನು ಪಡೆಯಬೇಕಾದರೆ ಇದು ಪ್ರವಚನದಿಂದ (ಶಾಸ್ತ್ರಾದಿಗಳನ್ನು ಓದಿ ಅಧ್ಯಯನಮಾಡುವುದರಿಂದ) ಲಭಿಸುವುದಿಲ್ಲ. ಬುದ್ಧಿಯಿಂದಲಾಗಲಿ, ಇತರರು ಹೇಳಿದ್ದನ್ನು ಕೇಳುವುದರಿಂದಲಾಗಲಿ ಲಭಿಸುವುದಿಲ್ಲ. ಆತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂದು ಯಾವನು ಬಯಸುವನೋ ಯಾವನಿಗೆ ಆತ್ಮನು ಅನುಗ್ರಹಮಾಡುವನೋ ಎಂದರೆ ಯಾವ ಪುರುಷನಿಗೆ ಆತ್ಮನು ಪ್ರಸನ್ನನಾಗುವನೋ ಅವನಿಗೆ ಮಾತ್ರ ಈ ಆತ್ಮನು ಲಭ್ಯನು. ಆತ್ಮನು ತನ್ನ ನಿಜಸ್ವರೂಪವನ್ನು ಅವನಿಗೆ ಪ್ರಕಟಮಾಡಿ ತೋರಿಸುವನು. ಯಾವ ಪುರುಷನು ದುಷ್ಟಕರ್ಮಗಳನ್ನು ಬಿಟ್ಟಿರುವುದಿಲ್ಲವೋ, ಯಾವನು ಅಶಾಂತನೋ ಯಾವನು ಏಕಾಗ್ರಚಿತ್ತವಿಲ್ಲದವನೋ, ಯಾವನ ಮನಸ್ಸಿನಲ್ಲಿ ಶಾಂತಿಯು ನೆಲೆಸಿರುವುದಿಲ್ಲವೋ ಅವನಿಗೆ ಎಷ್ಟೇ ಜ್ಞಾನವಿದ್ದರೂ ಆತ್ಮಸಾಕ್ಷಾತ್ಕಾರವಾಗಲಾರದು. ಬ್ರಾಹ್ಮಣ, ಕ್ಷತ್ರಿಯ ಮೊದಲಾದ ಸಮಸ್ತವರ್ಗದ ಜನರೂ ಅಷ್ಟೇಕೆ ? ಮೃತ್ಯುವೂ ಸಹ ಯಾವ ಆತ್ಮನ ಆಹಾರವೋ (ಎಂದರೆ ಅಧೀನವೋ) ಅಂತಹ ಆತ್ಮನು ಎಲ್ಲಿರುವನೆಂಬುದನ್ನು ಸುಲಭವಾಗಿ ತಿಳಿದುಕೊಳ್ಳಲು ಸಾಧ್ಯವೇ ?

ಯಮನು ತನ್ನ ವಿವರಣೆಯನ್ನು ಮುಂದುವರೆಸುತ್ತಾ ಇಂತೆಂದನು—ಪುರುಷನ ಹೃದಯಾಂತರಾಳವೆಂಬ ಗುಹೆಯಲ್ಲಿ ನೆಲೆಸಿದ್ದು ಕರ್ಮಫಲಗಳನ್ನನುಭವಿಸುತ್ತ ಜೀವಾತ್ಮ ಪರಮಾತ್ಮಗಳೆಂಬ ಎರಡು ಆತ್ಮಗಳು ಛಾಯಾತಪಗಳಂತೆ ಎಂದರೆ ಬೆಳಕು ಮತ್ತು ಅದರ ನೆರಳಿನಂತೆ ಒಂದರ ಪಕ್ಕದಲ್ಲಿಯೇ ಮತ್ತೊಂದು ಸದಾ ಇರುವುದೆಂದು ಬ್ರಹ್ಮಜ್ಞಾನಿಗಳು ಹೇಳುವರು ಯಜ್ಞಾದಿಕರ್ಮಗಳನ್ನು ಮಾಡಿ ಬ್ರಹ್ಮೋಪಾಸನೆಮಾಡುವ ಸದ್ಭಕ್ತರಿಗೆ ಸಂಸಾರಸಾಗರವನ್ನು ದಾಟಿಸುವ ಸೇತುವೆಯಂತಿರುವ ನಚಿಕೇತನೆಂಬ ಅಗ್ನಿಯನ್ನೂ, ಸಂಸಾರಸಾಗರವನ್ನು ದಾಟಬೇಕೆಂದು ಬಯಸುವವರಿಗೆ ಅಭಯವನ್ನುಂಟುಮಾಡಿ ಅದನ್ನು ದಾಟಿಸುವ ಪರಬ್ರಹ್ಮನನ್ನೂ ನಾವು ಬಲ್ಲೆವು. ಈ ಶರೀರವೇ ಒಂದು ರಥ. ಆತ್ಮನು ಅದರಲ್ಲಿ ಕುಳಿತಿರುವ ರಥಿಕನು. ಬುದ್ಧಿಯೇ ಸಾರಥಿಯು. ಅಶ್ವಗಳನ್ನು ಹತೋಟಿಯಲ್ಲಿಡುವ ಕಡಿವಾಣವೇ ಮನಸ್ಸು ; ಇಂದ್ರಿಯಗಳೇ ಕುದುರೆಗಳು. ಇಂದ್ರಿಯಗಳಿಗೆ ಸಂಬಂಧಪಡುವ ವಿಷಯಸುಖಗಳೇ ಮಾರ್ಗವು. ಇಂದ್ರಿಯ ಮತ್ತು ಮನಸ್ಸುಗಳಿಂದ ಯುಕ್ತನಾದ ಆತ್ಮನು ಸುಖದುಃಖಗಳನ್ನು ಅನುಭವಿಸುವವನೆಂದು ವಿವೇಕಿಗಳು ಹೇಳುವರು. ಮನಸ್ಸು ಯಾವಾಗಲೂ ಚಂಚಲಸ್ವಭಾವವುಳ್ಳದ್ದಾದುದರಿಂದ ಶುದ್ಧಜ್ಞಾನವಿಲ್ಲದವನ ಇಂದ್ರಿಯಗಳು, ದುಷ್ಟಕುದುರೆಗಳು ಸಾರಥಿಯ ವಶವರ್ತಿಯಾಗದಿರುವಂತೆ, ಸ್ವೇಚ್ಛಾಚಾರಿಗಳಾಗಿ ಅವನ ವಶದಲ್ಲಿರುವುದಿಲ್ಲ. ಎಂದರೆ ದುಷ್ಟಕುದುರೆಗಳು ಹೇಗೆ ಸಾರಥಿಯ ವಶವಾಗಿರುವುದಿಲ್ಲವೋ ಹಾಗೆಯೇ ಶುದ್ಧಜ್ಞಾನವಿಲ್ಲದವನ

ಇಂದ್ರಿಯಗಳು (ಮನಸ್ಸು, ಕಣ್ಣು, ಕಿವಿ ಮೊದಲಾದವು) ಅವನ ವಶದಲ್ಲಿರುವುದಿಲ್ಲ. ಆದರೆ ವಿಜ್ಞಾನವಂತನಾಗಿರುವ ಪುರುಷನ ಇಂದ್ರಿಯಗಳು ಒಳ್ಳೇ ಪಳಗಿದ ಕುದುರೆಗಳು ಸಾರಥಿಯ ವಶದಲ್ಲಿರುವಂತೆ ಅವನ ವಶದಲ್ಲಿಯೇ ಇರುವವು. ಯಾವ ಪುರುಷನು ವಿಜ್ಞಾನರಹಿತನೋ ಯಾವನು ಚಂಚಲಚಿತ್ತವುಳ್ಳವನೋ ಯಾವನು ಸದಾ ಅಶುಚಿಯಾಗಿರುವನೋ ಅವನಿಗೆ ಪರಮಪದವು ದೊರೆಯಲಾರದು. ಅವನಿಗೆ ಜನನಮರಣರೂಪವಾದ ಸಂಸಾರದ ತೊಡಕು ಇದ್ದೇ ಇರುವುದು ಎಂದರೆ ಅವನು ಹುಟ್ಟುತ್ತಲೂ ಸಾಯುತ್ತಲೂ ಪುನಃ ಬೇರೊಂದು ಜನ್ಮದಲ್ಲಿ ಹುಟ್ಟುತ್ತಲೂ ಇರುವನು. ಆದರೆ ವಿಜ್ಞಾನವಂತನೂ, ಸ್ಥಿರಚಿತ್ತನೂ ಶುಚಿರ್ಭೂತನೂ ಆದ ಪುರುಷನಿಗೆ ಮಾತ್ರ ಪರಮಪದವು (ಮುಕ್ತಿಯು) ದೊರಕುವುದು. ಅವನು ಆ ಪರಮಪದದಿಂದ ಮತ್ತೆ ಹೊರಟು ಬರುವುದಿಲ್ಲ. ಅವನಿಗೆ ಮತ್ತೆ ಹುಟ್ಟುಸಾವುಗಳೇ ಇಲ್ಲ. ಯಾವ ಮನುಷ್ಯನು ವಿಜ್ಞಾನವನ್ನೇ ತನ್ನ ಸಾರಥಿಯನ್ನಾಗಿ ಮಾಡಿಕೊಂಡು ತನ್ನ ಮನಸ್ಸನ್ನು ಸಂಯಮದಲ್ಲಿಟ್ಟುಕೊಳ್ಳುವನೋ ಅವನು ಸಂಸಾರಸಾಗರವನ್ನು ದಾಟಿ ಸರ್ವವ್ಯಾಪಿಯಾದ ಪರಮಪದವನ್ನು ಸೇರುವನು. ಆ ಶ್ರೇಷ್ಠವಾದ ಸ್ಥಾನವೇ ಮುಕ್ತಿಯು) ವಿಷ್ಣುವಿನ ಪರಮಪದವೆಂದು ಹೇಳಲ್ಪಡುವುದು.

ಇಂದ್ರಿಯಗಳಾಚೆಗೆ ಎಂದರೆ ಇಂದ್ರಿಯಗಳಿಗಿಂತ ಸೂಕ್ಷ್ಮವಾಗಿರುವ ವಸ್ತುಗಳು ಅಥವಾ ತನ್ಮಾತ್ರೆಗಳು ಪಂಚಭೂತಗಳ ಸೂಕ್ಷ್ಮಸ್ವರೂಪಗಳಾಗಿರುವವು (ತನ್ಮಾತ್ರವೆಂದರೆ ಸೂಕ್ಷ್ಮರೂಪ). ಪಂಚಭೂತಗಳ ತನ್ಮಾತ್ರೆಗಳನ್ನು ದಾಟಿದರೆ ಮನಸ್ಸು, ಮನಸ್ಸಿನ ಆಚೆಗೆ ಬುದ್ಧಿ, ಅದರಾಚೆಗೆ ಮಹದಾತ್ಮ, ಅದರಾಚೆಗೆ ಶ್ರೇಷ್ಠವಾದ ಅವ್ಯಕ್ತ, ಅದರಾಚೆಗೆ ಶ್ರೇಷ್ಠವಾದ ಪುರುಷ (ಪರಬ್ರಹ್ಮ) ಇರುವುದು. ಈ ಪುರುಷನಿಗಿಂತ ಶ್ರೇಷ್ಠವಸ್ತುವು ಯಾವುದೂ ಇಲ್ಲ. ಅದೇ ಕಟ್ಟಕಡೆಯ ಅತ್ಯಂತ ಶ್ರೇಷ್ಠವಾದ ಸ್ಥಾನವು (ಗತಿಯು)

ಈ ಶ್ರೇಷ್ಠನಾದ ಪರಮಪುರುಷನೇ ಸಮಸ್ತ ಭೂತಗಳ ಎಂದರೆ ಪ್ರಾಣಿಗಳ ಶರೀರಗಳಲ್ಲಿ ಗೂಢವಾಗಿ ನೆಲೆಸಿರುವ ಆತ್ಮನು. ಅವನನ್ನು ನೋಡುವುದಕ್ಕೆ ಬಾಹ್ಯಚಕ್ಷುಸ್ಸಿನಿಂದ ಸಾಧ್ಯವಿಲ್ಲ. ಅವನನ್ನು ಯಾರೂ ನೋಡಲಾರರು. ಆದರೆ ಯೋಗಿಗಳೂ, ತಪಸ್ವಿಗಳೂ ಅದವರ ಸೂಕ್ಷ್ಮಬುದ್ಧಿಗೆ ಗೋಚರನಾಗುವನು. ಎಂದರೆ ಅತ್ಯಂತ ಸೂಕ್ಷ್ಮವಸ್ತುಗಳನ್ನು ಸಾಕ್ಷಾತ್ಕರಿಸಬಲ್ಲ ತಪಸ್ವಿಗಳ ಅಂತರ್ಮುಖವಾದ ತೀಕ್ಷ್ಣಬುದ್ಧಿಗೆ ಮಾತ್ರ ಗೋಚರನಾಗುವನು. ಬುದ್ಧಿವಂತನಾದ ಪುರುಷನು ತನ್ನ ವಾಕ್ಶಕ್ತಿಯನ್ನು ಅದಕ್ಕಿಂತ ಸೂಕ್ಷ್ಮೇಂದ್ರಿಯವಾದ ಮನಸ್ಸಿನಲ್ಲಿ ಲೀನಮಾಡಬೇಕು. ಅನಂತರ ಮನಸ್ಸನ್ನು ಮನಸ್ಸಿಗಿಂತ ಇನ್ನೂ ಸೂಕ್ಷ್ಮವಾದ ಜ್ಞಾನಮಯ ಅಥವಾ ಚೇತನಮಯ ಆತ್ಮನಲ್ಲಿ ಲೀನಮಾಡಬೇಕು. ಬಳಿಕ ಚೇತನಮಯ ಆತ್ಮನನ್ನು ಮಹದಾತ್ಮನಲ್ಲಿಯೂ, ಮಹದಾತ್ಮನನ್ನು ಶಾಂತಾತ್ಮನಲ್ಲಿಯೂ ಲೀನಮಾಡಬೇಕು. ಆದ್ದರಿಂದ ಎಲೈ ಜನಗಳೇ ಏಳಿರಿ. ಎದ್ದು ಕಾರ್ಯೋನ್ಮುಖರಾಗಿರಿ. ನಿಮಗಿಂತಲೂ ಶ್ರೇಷ್ಠರಾದ ಜ್ಞಾನಿಗಳ ಬಳಿಗೆ ಹೋಗಿ ಬ್ರಹ್ಮಜ್ಞಾನವನ್ನು ಕೇಳಿ ತಿಳಿದುಕೊಳ್ಳಿರಿ. ಈ ಬ್ರಹ್ಮಜ್ಞಾನವನ್ನು ಕಲಿಯುವುದಕ್ಕಾಗಿ ಪ್ರಯತ್ನಿಸುವುದು ಎಷ್ಟು ಕಷ್ಟವೆಂದರೆ—ಹರಿತವಾದ ಕತ್ತಿಯ ಅಲುಗಿನ ಮೇಲೆ ನಡೆಯುವುದು ಎಷ್ಟು ಕಷ್ಟವೋ ಈ ಮಾರ್ಗವೂ ಅಷ್ಟೇ ಕಷ್ಟಸಾಧ್ಯವೆಂದು ತತ್ತ್ವಜ್ಞಾನವೇತ್ತರಾದ ಕವಿಗಳು ಹೇಳುವರು. ಈ ಆತ್ಮವು ಶಬ್ದರಹಿತವು, ಸ್ಪರ್ಶರಹಿತವು, ಅವ್ಯಯವು, ರೂಪರಹಿತವು ಎಂದರೆ ಅದನ್ನು ಧ್ವನಿಮೂಲಕ ಕೇಳಿ ತಿಳಿಯಲಾಗುವುದಿಲ್ಲ. ಅದನ್ನು ಮುಟ್ಟಲೂ ಸಾಧ್ಯವಿಲ್ಲ. ಕಣ್ಣಿನಿಂದ ನೋಡಲೂ ಸಾಧ್ಯವಿಲ್ಲ. ಅದು ಯಾವಾಗಲೂ ನಾಶವಿಲ್ಲದೆ ಇರುವುದು. ಮತ್ತು ಅದು ರಸರಹಿತವು ಎಂದರೆ, ಬಾಯಿನಿಂದ ರುಚಿನೋಡಿ ತಿಳಿಯುವುದಕ್ಕಾಗುವುದಿಲ್ಲ. ಗಂಧರಹಿತವು ಎಂದರೆ ಮೂಸಿನೋಡಿ ಅದರ ಸ್ವರೂಪವನು ತಿಳಿಯುವುದೂ ಸಾಧ್ಯವಿಲ್ಲ. ಅದು ಅನಾದಿಯು, ಅನಂತವು.

ಎಂದರೆ ಅದಕ್ಕೆ ದೇಶಕಾಲಗಳ ಪರಿಮಿತಿಯೇ ಇಲ್ಲ. ಯಾವಾಗಲೂ ಇರುವುದರಿಂದ ಅನಾದಿಯು, ಎಲ್ಲೆಲ್ಲಿಯೂ ವ್ಯಾಪಿಸಿರುವುದರಿಂದ ಅನಂತವು. ಮಹತ್ತತ್ತ್ವದಿಂದಾಚೆಗೆ ಎಂದರೆ ಅದಕ್ಕಿಂತಲೂ ಸೂಕ್ಷ್ಮವಾಗಿ ಅದರ ಉತ್ಪತ್ತಿಗೂ ಕಾರಣವಾಗಿರುವ ಸತ್ಯಸ್ವರೂಪವಾದ ಆತ್ಮತತ್ತ್ವವನ್ನು ತಿಳಿದವನು ಮೃತ್ಯುಮುಖದಿಂದ ಪಾರಾಗುವನು ಎಂದರೆ ಅವನಿಗೆ ಮೃತ್ಯುಭಯವಿಲ್ಲ ಎಂದನು. ಮೃತ್ಯುದೇವನು ಅಥವಾ ಯಮನು ನಚಿಕೇತನಿಗೆ ಹೇಳಿದ ಈ ಉಪಾಖ್ಯಾನವನ್ನು ಹೇಳುವವನೂ, ಕೇಳುವವನೂ (ಶ್ರವಣಮಾಡುವವನೂ) ಬ್ರಹ್ಮಲೋಕದಲ್ಲಿ ಗೌರವಿಸಲ್ಪಟ್ಟು ಪೂಜ್ಯನಾಗುತ್ತಾನೆ. ಮತ್ತು ಪರಮರಹಸ್ಯವಾದ ಉಪಾಖ್ಯಾನವನ್ನು ಬ್ರಾಹ್ಮಣರ ಸಭೆಯಲ್ಲಾಗಲೀ, ಶ್ರಾದ್ಧಕಾಲದಲ್ಲಾಗಲೀ ಯಾವ ಪುರುಷನು ಇತರರಿಗೆ ಶ್ರವಣಮಾಡಿಸುವನೋ ಆ ಪುರುಷನು ಮಾಡುವ ಕರ್ಮವು ಅನಂತಾನಂತಫಲಪ್ರದವಾಗುವುದು.

ಮೃತ್ಯುದೇವನಾದ ಯಮನು ನಚಿಕೇತನೊಡನೆ ಸಂಭಾಷಣೆಯನ್ನು ಮುಂದುವರಿಸುತ್ತಾ ಮತ್ತಿಂತೆಂದನು—

**ಯಮ**—ಸ್ವಯಂಭುವಾದ ಪರಮಾತ್ಮನು ತನ್ನ ಶಕ್ತಿಗಳನ್ನು ಬಹಿರ್ಮುಖವಾಗಿ ಹರಿಯಬಿಟ್ಟನು. ಆದ್ದರಿಂದ ಇಂದ್ರಿಯಗಳು ಬಾಹ್ಯವಸ್ತುವನ್ನು ಮಾತ್ರ ನೋಡಬಲ್ಲವು. ಅತ್ಯಂತಸೂಕ್ಷ್ಮರೂಪದ ಅಂತರಾತ್ಮನು ಅವುಗಳಿಗೆ ಗೋಚರವಾಗುವುದಿಲ್ಲ. ವಿವೇಕಿಯಾದ ಪುರುಷನು ಅಮೃತತತ್ವವನ್ನು (ಮರಣರಾಹಿತ್ಯವನ್ನು ಎಂದರೆ ಮುಕ್ತಿಪದವಿಯನ್ನು) ಬಯಸಿದಲ್ಲಿ ಅವನು ಅಂತರ್ಮುಖನಾಗಿ (ತಪಸ್ಸಿನಿಂದಲೂ ಧ್ಯಾನದಿಂದಲೂ ಮಾತ್ರ) ಅಂತರಾತ್ಮನನ್ನು ಸಾಕ್ಷಾತ್ಕರಿಸುವನು. ಬಾಲಕರಂತೆ ಮಂದಬುದ್ಧಿಯುಳ್ಳವರು ಬಾಹ್ಯಸುಖಗಳಿಗೆ ಆಸೆಬಿದ್ದು ವಿಸ್ತೃತವಾದ ಮರಣಪಾಶದಲ್ಲಿ ಸಿಕ್ಕಿಬೀಳುವರು. ಎಂದರೆ ಮುಕ್ತಿಯನ್ನು ಪಡೆಯಲು ಸಾಧ್ಯವಿಲ್ಲದೆ ಜನ್ಮಮರಣರೂಪವಾದ ಸಂಸಾರಸಾಗರದಲ್ಲಿ ಸಿಕ್ಕಿ ದುಃಖಿಸುತ್ತಿರುವರು. ಆದರೆ ಬುದ್ಧಿವಂತರು (ಆತ್ಮಜ್ಞಾನಾಪೇಕ್ಷಿಗಳು) ಅಮೃತಪದವಿಯ ಸುಖವನ್ನರಿತು ಅದನ್ನು ಪಡೆಯುವುದಕ್ಕಾಗಿ ಈ ಲೋಕದ ಅನಿತ್ಯ ವಸ್ತುಗಳಿಗೆ ಆಶೆಪಡುವುದಿಲ್ಲ. ಈ ಅನಿತ್ಯ ವಸ್ತುಗಳನ್ನು ಪಡೆಯುವುದರಿದ ನಿತ್ಯವಸ್ತುವು ದೊರೆಯುವುದೆಂದು ಭಾವಿಸುವುದಿಲ್ಲ. ರೂಪ, ರಸ, ಗಂಧ, ಶಬ್ದ, ಸ್ಪರ್ಶವೆಂಬ ಐದು ವಿಧವಾದ ವಿಷಯಸುಖಗಳಿಂದಲೂ ಮೈಥುನ (ಸ್ತ್ರೀಸಂಭೋಗ) ದಿಂದಲೂ ಉಂಟಾಗುವ ಸುಖದ ಜ್ಞಾನವು ಈ ಆತ್ಮನಿಂದಲೇ ಆಗುವುದು. ಯಾವುದರಿಂದ ಈ ಸುಖದ ತಿಳುವಳಿಕೆಯುಂಟಾಗುವುದೋ ಅದೇ ಆತ್ಮವು. ಇನ್ನು ಉಳಿದದ್ದೇನು ? ಆತ್ಮವೊಂದೇ. ಸ್ವಪ್ನಸ್ಥಿತಿಯಲ್ಲಿಯೂ, ಜಾಗೃದವಸ್ಥೆಯಲ್ಲಿಯೂ ಆಗುವ ವ್ಯಾಪಾರಗಳು ಯಾವುದರ ಬಲದಿಂದ ತಿಳಿಯುತ್ತವೆಯೋ ಅಂತಹ ಶ್ರೇಷ್ಠವೂ ಸರ್ವವ್ಯಾಪಿಯೂ ಆದ ಆತ್ಮನನ್ನು ಸಾಕ್ಷಾತ್ಕರಿಸಿಕೊಂಡಮೇಲೆ ವಿವೇಕಿಯಾದವನು ಯಾವವಿಧವಾದ ಶೋಕಕ್ಕೂ ಆಸ್ಪದವೀಯುವುದಿಲ್ಲ. ಅವನಿಗೆ ದುಃಖಶೋಕಗಳೇ ಇಲ್ಲ. ದೇಹಸಂಬಂಧಿಯಾದ ಜೀವನ ಸಮೀಪದಲ್ಲಿದ್ದು ಫಲವನ್ನನುಭೋಗಿಸುವ ಮತ್ತು ಭೂತಭವಿಷ್ಯಗಳ ಗೊಡೆಯನಾದ ಆತ್ಮನನ್ನು ತಿಳಿದವನು ಭಯರಹಿತನಾಗುವನು. ಅವನಿಗೆ ಯಾವವಿಧವಾದ ಭಯವೂ, ಆತಂಕವೂ ಇಲ್ಲದೆ ನಿಶ್ಚಿಂತನಾಗಿರುವನು. ಯಾವುದು ತಪಸ್ಸಿಗಿಂತ ಪೂರ್ವದಲ್ಲಿ ಎಂದರೆ ಅನಾದಿಕಾಲದಿಂದ ಇದ್ದಿತೋ ಯಾವುದು ಉದಕ ಮುಂತಾದ ತತ್ತ್ವಗಳ ಸೃಷ್ಟಿಗಿಂತಲೂ ಪೂರ್ವದಲ್ಲಿ ಇದ್ದಿತೋ ಯಾವುದು ಹೃದಯದ ಗುಹೆಯಲ್ಲಿ (ಯಾರಿಗೂ ಕಾಣಿಸದಂತೆ) ಪ್ರವೇಶಿಸಿ ಪಂಚಭೂತಗಳೊಡನೆ (ಎಂದರೆ ಶರೀರದ ನಾನಾ ಅವಯವಗಳೊಡನೆ ಸಂಪರ್ಕದಿಂದ) ಇರುವುದನ್ನು ಜ್ಞಾನಿಗಳು ನೋಡಿ ತಿಳಿಯುವರೋ ಅದೇ ಈ ಆತ್ಮವು. ಸಕಲದೇವತಾತ್ಮಳಾದ ಅದಿತಿದೇವಿಯು ಯಾರಿಂದ (ಯಾವ ಆತ್ಮದಿಂದ) ಉತ್ಪನ್ನಳಾದಳೋ, ಯಾವುದು ಪ್ರಾಣಿಗಳ ಶರೀರದಲ್ಲಿ ಪಂಚಭೂತಗಳೊಡನೆ ಸಂಪರ್ಕದಿಂದ ಗೂಢವಾಗಿ ನೆಲಸಿರುವುದೋ ಅದೇ ಈ ಆತ್ಮವು. ಮತ್ತು ಸ್ತ್ರೀಯರ ಗರ್ಭದಲ್ಲಿರುವಂತೆ

ಗೋಪ್ಯನಾಗಿ ಎರಡು ಅರಣಿಗಳ ಮಧ್ಯದಲ್ಲಿರುವವನೂ, ಯಜ್ಞಾದಿಗಳಲ್ಲಿ ಯಜಮಾನರು ಅರ್ಪಿಸುವ ಹವಿರಾದಿಗಳನ್ನು ದೇವತೆಗಳ ಬಳಿಗೆ ಒಯ್ಯುವವನೂ, ಪ್ರತಿದಿನವೂ ಬಹಳ ಎಚ್ಚರಿಕೆಯಿಂದ ಪೂಜ್ಯನಾದವನೂ ಆದ ಯಾವ ಅಗ್ನಿಯಿರುವನೋ ಅವನೇ ಈ ಆತ್ಮನು. ಆತ್ಮನಿಂದಲೇ ಸೂರ್ಯನು ಉದಯಿಸುವನು. (ಉತ್ಪನ್ನನಾಗುವನು) ಸೂರ್ಯನು ಅಸ್ತನಾಗುವುದೂ ಆತ್ಮನಲ್ಲಿಯೇ. ಸಕಲದೇವತೆಗಳೂ ಆತ್ಮನಲ್ಲಿಯೇ ಜನಿಸಿ ಅಲ್ಲಿಯೇ ಲೀನರಾಗುವರು. ಇಂತಹ ಸರ್ವಶಕ್ತಿಸಾಮರ್ಥ್ಯವಿರುವುದೇ ಆತ್ಮವು. ಇಲ್ಲಿರುವಂತೆ ಅಲ್ಲಿಯೂ, ಅಲ್ಲಿರುವಂತೆ ಇಲ್ಲಿಯೂ ಇರುವುದು. ಆತ್ಮನಲ್ಲಿ ನಾನಾಭೇದಗಳಿರುವುದೆಂದು ತಿಳಿಯುವವನೂ, ನಾನೇ ಬೇರೆ, ಆತ್ಮನೇ ಬೇರೆ ಎಂಬ ಅಜ್ಞಾನದಿಂದ ಮೋಹಿತನಾದವನೂ ಪುನಃಪುನಃ ಜನ್ಮಮರಣಗಳಿಗೆ ಸಿಲುಕುವನು. ನಾನಾತ್ವವಿರುದೆಂದು ತಿಳಿಯುವುದು ಬರೀ ಮನಸ್ಸಿನ ಭ್ರಾಂತಿಯು. ಇಲ್ಲಿ (ಆತ್ಮನಲ್ಲಿ) ಯಾವ ನಾನಾತ್ವವೂ ಇಲ್ಲ. ನಾನಾತ್ವವಿರುವುದೆಂದು ಬಗೆಯುವವನು ಪುನಃಪುನಃ ಮರಣಕ್ಕೆ ಒಳಗಾಗುವನು. ಇಲ್ಲಿ ನಾನಾತ್ವವೆಂದರೇನೆಂಬುದನ್ನು ವಿವರಿಸುವುದವಶ್ಯಕವು. ಪ್ರಪಂಚದಲ್ಲಿ ಅನೇಕವೂ ನಾನಾವಿಧವೂ ಆದ ಜೀವರಾಶಿಗಳಿರುವವು. ಅವುಗಳಲ್ಲೆಲ್ಲಾ ಒಬ್ಬನೇ ಆದ ಆತ್ಮನು ಅಂತರಾತ್ಮನಾಗಿ ಎಂದರೆ ಹೃದಯದಲ್ಲಿ ಗೂಢವಾಗಿ ನೆಲೆಸಿರುವನು. ಆದ್ದರಿಂದ ಈ ವಿಧವಾದ ಜೀವರಾಶಿಗಳೂ ಅವುಗಳಲ್ಲಿರುವ ಆತ್ಮನೂ ಬೇರೆಬೇರೆ, ಈ ಪ್ರಾಣಿಯಲ್ಲಿರುವ ಆತ್ಮವು ಬೇರೆ, ಇನ್ನೊಂದು ಪ್ರಾಣಿಯಲ್ಲಿರುವ ಆತ್ಮನೇ ಬೇರೆ ಎಂದು ನಾನಾತ್ವವನ್ನು ಆರೋಪಿಸುವವನು ಮರಣಕ್ಕೆ ಪದೇಪದೇ ಈಡಾಗುವನು. ಅನೇಕ ಜೀವರಾಶಿಗಳಿದ್ದರೂ ಅವುಗಳಲ್ಲೆಲ್ಲಾ ನೆಲೆಸಿರುವ ಆತ್ಮನು ಒಬ್ಬನೇ ಆಗಿರುವನು, ಬೇರೆಬೇರೆಯಲ್ಲ. ಹೀಗೆ ಅನೇಕ ಪ್ರಾಣಿಗಳ ಶರೀರದಲ್ಲಿ ಏಕಕಾಲದಲ್ಲಿ ನೆಲಸಿರುವುದು ಆತ್ಮನ ವೈಶಿಷ್ಟ್ಯವು ಮತ್ತು ಅವನ ಮಹತ್ತ್ವವು. ಇದನ್ನು ತಿಳಿಯದೆ ನಾನಾ ಪ್ರಾಣಿಗಳ ಶರೀರದಲ್ಲಿರುವ ಆತ್ಮವು ಬೇರೆಬೇರೆ ಎಂದು ತಿಳಿಯುವುದು ಮೂಢತನವು. ಮನುಷ್ಯನ ಅಂತಃಕರಣದಲ್ಲಿ ಎಂದರೆ ಹೃದಯ ಮಧ್ಯದಲ್ಲಿ ನೆಲೆಸಿರುವ ಆತ್ಮನನ್ನು ಪುರುಷನೆಂದು ಹೇಳುವರು. ಈ ಪುರುಷನು ಅಂಗುಷ್ಠ ಎಂದರೆ ಒಂದು ಹೆಬ್ಬೆರಳಿನ ಗಾತ್ರ ಪ್ರಮಾಣದಲ್ಲಿರುವನು. ಎಂದರೆ ಆತ್ಮನು ಸರ್ವವ್ಯಾಪಿಯಾಗಿದ್ದರೂ, ಸಕಲ ವಿಶ್ವವನ್ನು ವ್ಯಾಪಿಸಿದ್ದರೂ ಪ್ರಾಣಿಗಳ ಹೃದಯದಲ್ಲಿ ಮಾತ್ರ ಹೆಬ್ಬೆಟ್ಟಿನ ಗಾತ್ರದ ಸಣ್ಣ ಆಕಾರದಷ್ಟೇ ಇರುವನು. ಹೀಗಿದ್ದರೂ ಈ ಪುರುಷನು (ಆತ್ಮನು) ಭೂತಭವಿಷ್ಯತ್ಕಾಲಗಳಿಗೆಲ್ಲಾ ಒಡೆಯನು, ನಿಯಾಮಕನು. ಇದನ್ನು ತಿಳಿದವನು ನಿರ್ಭಯನಾಗಿರುವನು. ಈ ಅಂಗುಷ್ಠಪರಿಮಿತಿಯುಳ್ಳ ಪುರುಷನು ಧೂಮರಹಿತವಾದ (ಹೊಗೆಯಿಲ್ಲದ) ಅಗ್ನಿಯಂತೆ ಸ್ವಚ್ಛವಾಗಿ ಬೆಳಗುತ್ತಿರುವನು. ಭೂತಭವಿಷತ್ಕಾಲಗಳಿಗೆಲ್ಲಾ ಅವನೇ ಒಡೆಯನು. ಇವತ್ತಿರುವವನೂ ಅವನೇ. ನಾಳೆ ಇರುವವನೂ ಅವನೇ. ಅವನು ನಿತ್ಯನು. ಪರ್ವತದ ಶಿಖರಗಳ ಮೇಲೆ ಬೀಳುವ ಮಳೆಯು ಸುತ್ತಮುತ್ತಲಿರುವ ಪ್ರದೇಶಗಳಲ್ಲಿ ಬೇರೆ ಬೇರೆ ಪ್ರವಾಹರೂಪದಿಂದ ಹರಿಯುವುವು. ಬೇರೆಬೇರೆಯಾಗಿ ಹರಿಯುವ ಪ್ರವಾಹಗಳು ಒಂದೇ ವೃಷ್ಟಿಯಿಂದ ಬಿದ್ದವೆಂಬುದನ್ನು ತಿಳಿಯದೆ ಪ್ರವಾಹಗಳು ಬೇರೆಬೇರೆ ಎಂದು ತಿಳಿಯುವ ಅವಿವೇಕಿಯು, ಪ್ರಾಣಿಗಳ ನಾನಾ ಶರೀರಗಳೂ ಅವುಗಳಲ್ಲಿರುವ ಆತ್ಮವೂ ಬೇರೆಬೇರೆಯೆಂದು ತಿಳಿಯುವನು. ಆದ್ದರಿಂದ ಅವನು ನಾನಾ ಪ್ರಾಣಿಗಳಲ್ಲಿ ನಾನಾ ಜನ್ಮಗಳನ್ನು ಎತ್ತುವನು. ಆದ್ದರಿಂದ ಆತ್ಮನಲ್ಲಿ ಭಿನ್ನತ್ವವಿರುವುದೆಂದು ಭಾವಿಸಬಾರದು. ಎಲೈ ಗೌತಮನೇ (ಗೋತಮ ವಂಶದಲ್ಲಿ ಹುಟ್ಟಿದ ನಚಿಕೇತನೇ) ಶುದ್ಧೋದಕದಲ್ಲಿ ಬೇರೆ ಶುದ್ಧವಾದ ಉದಕವನ್ನು ಬೆರೆಸಿದರೆ ಅವೆರಡೂ ಒಂದಾಗಿ ಯಾವ ವ್ಯತ್ಯಾಸವೂ ಇಲ್ಲದಂತೆ ಏಕರೂಪವಾಗಿ ಆಗಿರುವುದೋ ಅದರಂತೆ ಬ್ರಹ್ಮಜ್ಞಾನಿಯಾದವನ ಆತ್ಮವು ಅದೇ ರೂಪದ ಎಂದರೆ ಬ್ರಹ್ಮರೂಪವಾದ ಆತ್ಮನಲ್ಲಿ ಒಂದಾಗಿ ಸೇರಿಹೋಗುವುದು. ಎಂದರೆ ಬ್ರಹ್ಮಜ್ಞಾನಿಯಾದವನು ಆತ್ಮನಲ್ಲಿ (ಬ್ರಹ್ಮನಲ್ಲಿ) ಐಕ್ಯನಾಗುವನು.

**ಯಮ**—ಯಮನು ಮತ್ತಿಂತೆಂದನು—ಈ ಶರೀರವನ್ನು ಒಂದು ಪಟ್ಟಣವೆನ್ನುವರು. ಇದಕ್ಕೆ ಹನ್ನೊಂದು ದ್ವಾರಗಳಿರುವುವು. ಶಿರಸ್ಸು, (ಬ್ರಹ್ಮರಂಧ್ರ) ನಾಭಿ, ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ನಾಸಿಕಾದ್ವಾರಗಳು, ಮುಖ, ಎರಡು ಅಧೋರಂಧ್ರಗಳು ಎಂದರೆ ಜಲಮಲದ್ವಾರಗಳು ಒಟ್ಟು ಹನ್ನೊಂದು ದ್ವಾರಗಳಿರುವವು. ಇಂತಹ ಶರೀರವೆಂಬ ಪಟ್ಟಣದಲ್ಲಿ ಉತ್ಪತ್ತಿನಾಶರಹಿತನಾದ ಶುದ್ಧಚೈತನ್ಯಾತ್ಮನು ನೆಲಸಿರುವನು. ಇಂತಹ ಆತ್ಮನನ್ನು ಧ್ಯಾನಮಾಡುವವನು ಶೋಕರಹಿತನಾಗುವನು. ಅವನು ಜೀವನ್ಮುಕ್ತನಾಗಿ ಮರಣಾನಂತರ ಪರಮಪದವೆಂಬ ಮುಕ್ತಿಯನ್ನು ಪಡೆಯುವನು. ಹಂಸವತೀ ಋಕ್ಕೆಂದು ಪ್ರಸಿದ್ಧವಾದ **ಹಂಸಃ ಶುಚಿಷತ್** ಎಂಬ ಮಂತ್ರವೊಂದಿರುವುದು. ಈ ಮಂತ್ರಕ್ಕೆ ಸೂರ್ಯನು ದೇವತೆಯಾಗಿದ್ದರೂ ಇಲ್ಲಿ ಆದಿತ್ಯರೂಪದಿಂದ ಜಗತ್ತನ್ನು ಬೆಳಗುತ್ತಿರುವ ಆತ್ಮನೇ ಸೂರ್ಯನು ಎಂದು ಹೇಳಿ ಅದರ ಅರ್ಥವನ್ನು ಇಲ್ಲಿ ವಿವರಿಸಲಾಗಿದೆ. ಈ ಆತ್ಮವು (ಆದಿತ್ಯರೂಪದಿಂದ ಇರುವ ಆತ್ಮವು) ಆಕಾಶದಲ್ಲಿ ಸೂರ್ಯರೂಪದಿಂದಲೂ, ಅಂತರಿಕ್ಷದಲ್ಲಿ ವಾಯುರೂಪದಿಂದಲೂ, ಯಜ್ಞವೇದಿಯಲ್ಲಿ ಅಗ್ನಿರೂಪದಿಂದಲೂ, ಯಜಮಾನನ ಮನೆಯಲ್ಲಿ ಪೂಜ್ಯನಾದ ಅತಿಥಿರೂಪದಿಂದಲೂ ವಾಸಿಸುತ್ತಿರುವುದು. ಅದು ಎಂದರೆ ಆ ಆತ್ಮವು ಮನುಷ್ಯರಲ್ಲಿಯೂ ಶ್ರೇಷ್ಠರಾದವರಲ್ಲಿಯೂ, ಸತ್ಯದಲ್ಲಿಯೂ, ಆಕಾಶದಲ್ಲಿಯೂ ವ್ಯಾಪಿಸಿರುವುದು. ನೀರಿನಲ್ಲಿ ಹುಟ್ಟುವ ಜಲಚರಗಳೂ, ಭೂಮಿಯಲ್ಲಿ ಬೆಳೆಯುವ ಸಸ್ಯಾದಿಗಳೂ, ಪ್ರಾಣಿವರ್ಗವೂ, ಯಜ್ಞಾಂಗಕರ್ಮಗಳೂ, ಪರ್ವತಾದಿಗಳಲ್ಲಿ ಉದ್ಭವಿಸುವ ನದಿಯೇ ಮೊದಲಾದುವುಗಳೂ ಪ್ರಪಂಚದಲ್ಲಿ ಇನ್ನೂ ಯಾವ ಯಾವ ವಸ್ತುಗಳಿವೆಯೋ ಅವೆಲ್ಲವೂ ಈ ಆತ್ಮವೇ ಆಗಿರುವುದು ಎಂದರೆ ಆತ್ಮಸ್ವರೂಪವೇ (ಆತ್ಮನ ಅಂಶವೇ) ಆಗಿರುವುದು. ಇದು ಸತ್ಯಸ್ವರೂಪವುಳ್ಳದೂ ಅತ್ಯಂತ ವಿಸ್ತೃತವಾದುದೂ ಆಗಿರುವುದು. ಅದು ಶರೀರದಲ್ಲಿರುವ ಪ್ರಾಣವಾಯುವನ್ನು ಮೇಲಕ್ಕೆತ್ತುವುದು. ಅಪಾನವಾಯುವನ್ನು ಕೆಳಕ್ಕೆ ಒತ್ತುವುದು. ಶರೀರಮಧ್ಯದಲ್ಲಿ ಕುಳಿತಿರುವ ಇಂತಹ ಆತ್ಮನನ್ನು ಪೂಜ್ಯನೆಂದು ಎಲ್ಲಾ ದೇವತೆಗಳೂ ಉಪಾಸಿಸುವರು. ದೇಹವನ್ನು ಬಿಟ್ಟು ಹೊರಟುಹೋಗುವ (ಎಂದರೆ ಮೃತನಾಗುವ) ದೇಹಿಯು (ಪ್ರಾಣಿಯು) ಈ ಶರೀರವನ್ನು ಬಿಟ್ಟು ಹೊರಟುಹೋದಮೇಲೆ ಇಲ್ಲಿ ಏನು ಉಳಿಯುವುದು ? ಏನೂ ಇಲ್ಲ. ಎಂದರೆ ಮನುಷ್ಯನು ಮೃತನಾಗಿ ಮೃತಶರೀರವನ್ನು ಬಿಟ್ಟು ಹೊರಟುಹೋದಮೇಲೆ ಆ ಮೃತಶರೀರದಲ್ಲಿ ಆತ್ಮನು ವಾಸಿಸುವುದಿಲ್ಲ. ಮನಷ್ಯರು ಜೀವಿಸುತ್ತಿರುವುದು ಪ್ರಾಣವಾಯುವಿನ ಶಕ್ತಿಯಿಂದಲೂ ಅಲ್ಲ, ಅಪಾನವಾಯುವಿನ ಬಲದಿಂದಲೂ ಅಲ್ಲ. ಇವೆರಡೂ ಯಾವ ಆತ್ಮನ ಆಶ್ರಯದಿಂದಿರುವವೋ ಆ ಆತ್ಮನ ಬಲದಿಂದಲೇ ಜನರು ಬದುಕಿರುವರು. ಎಂದರೆ ಆತ್ಮನು ಶರೀರದಲ್ಲಿರುವವರೆಗೆ ಮಾತ್ರ ಮನುಷ್ಯನು ಜೀವಿಸಿರುವನೆಂದು ಹೇಳುವರು. ಆತ್ಮನು ಶರೀರವನ್ನು ತ್ಯಜಿಸಿ ಹೊರಟುಹೋದಮೇಲೆ ಆ ಮೃತಶರೀರದಲ್ಲಿ ಪ್ರಾಣಾಪಾನವಾಯುಗಳೂ, ಚೈತನ್ಯವೂ, ಇರುವುದಿಲ್ಲ. ಅಲ್ಲಿ ಜಡಶರೀರವೊಂದೇ ಉಳಿದಿರುವುದು.

ಎಲೈ ಗೌತಮನೇ, ನಿನಗೆ ಈ ಸನಾತನವಾದ ಬ್ರಹ್ಮದ ರಹಸ್ಯವನ್ನು ಹೇಳುವೆನು, ಕೇಳು. ಮರಣಾನಂತರ ಆತ್ಮನು ಯಾವಸ್ಥಿತಿಯಲ್ಲಿರುವನೆಂಬುದನ್ನೂ ಹೇಳುವೆನು, ಕೇಳು. ವಿವೇಕಿಯಾದ ಪುರುಷನು ಬ್ರಹ್ಮಜ್ಞಾನವನ್ನು ಪಡೆಯುವುದರಿಂದಲೇ ಈ ಸಂಸಾರದಿಂದ ಬಿಡುಗಡೆಯನ್ನು ಹೊಂದಿ ಮರಣಾನಂತರ ಶ್ರೇಷ್ಠವಾದ ಪರಮಪದವನ್ನು ಸೇರುವನು. ಅಲ್ಲಿಂದ ಮುಂದಕ್ಕೆ ಅವನಿಗೆ ಪುನರ್ಜನ್ಮಗಳೂ ಮರಣಗಳೂ ಇರುವುದಿಲ್ಲ. ಯಾವಾಗಲೂ ಶಾಶ್ವತವಾದ ಮತ್ತು ಆನಂದಮಯವಾದ ಪರಬ್ರಹ್ಮದಲ್ಲಿ ಐಕ್ಯನಾಗಿ ಸುಖದಿಂದಿರುವನು. ಆದರೆ, ಬ್ರಹ್ಮಜ್ಞಾನವಿಲ್ಲದ ಮೂಢನು ಮರಣಾನಂತರ ಪುನಃ ಜನ್ಮವನ್ನೂ ಪುನಃ ಮರಣವನ್ನೂ ಹೊಂದುತ್ತಾ ಸಂಸಾರಸಾಗರದಲ್ಲಿ ತೊಳಲುತ್ತಲಿರುವನು. ಮನುಷ್ಯರೇ ಮೊದಲಾದ ಪ್ರಾಣಿಗಳು ತಮ್ಮತಮ್ಮ ಕರ್ಮಗಳಿಗೂ, ಜ್ಞಾನಗಳಿಗೂ ಅನುಗುಣವಾಗಿ

ಎಂದರೆ ತಾವು ಈ ಜನ್ಮದಲ್ಲಿ ಮಾಡಿದ ಸುಕೃತದುಷ್ಕೃತಗಳ ಫಲರೂಪವಾಗಿ ಪ್ರಾಣಿಗಳೇ ಮೊದಲಾದ ನಾನಾ ಯೋನಿಗಳಲ್ಲಿ ಎಂದರೆ ಶರೀರಗಳಲ್ಲಿ ಜನ್ಮವನ್ನು ಹೊಂದುವವು. ಕೆಲವರು ಜಡರೂಪವನ್ನು ಹೊಂದುವರು. ಪ್ರಾಣಿಗಳು ನಿದ್ರೆಯಲ್ಲಿರುವಾಗಲೂ ಅವರ ಶರೀರಾಂತರ್ಗತನಾದ ಆತ್ಮನು ಯಾವಾಗಲೂ ಎಚ್ಚರವಾಗಿಯೇ ಇದ್ದು ಅವರವರ ಕಾಮಗಳಿಗೆ ಅನುರೂಪವಾಗಿ ರೂಪಗಳನ್ನು (ಶರೀರಾಂತರಗಳನ್ನು) ನಿರ್ಮಿಸುತ್ತಿರುವನು. ಇವನೇ ಪವಿತ್ರನೂ, ಶುದ್ಧನೂ, ನಿತ್ಯನೂ, ಆದ ಬ್ರಹ್ಮನು. ಸಮಸ್ತ ಲೋಕಗಳೂ ಈ ಆತ್ಮನ (ಅಥವಾ ಬ್ರಹ್ಮನ) ಆಶ್ರಯ ದಿಂದಲೇ ಇರುವವು. ಯಾರೂ ಅದರಾಚೆಗೆ ಹೋಗಲಾರರು. ಎಂದರೆ ಬ್ರಹ್ಮವನ್ನು ಬಿಟ್ಟು ಬೇರೆ ವಸ್ತುವೇ ಇರು ವುದಿಲ್ಲ. ಹಾಗಾದರೆ ಲೋಕವ್ಯವಹಾರದಲ್ಲಿ ಕೆಲವು ಪ್ರಾಣಿಗಳು ದೊಡ್ಡದಾಗಿಯೂ ಕೆಲವು ಚಿಕ್ಕದಾಗಿಯೂ, ಒಂದೊಂದು ಪ್ರಾಣಿಯ ಶರೀರವು ಒಂದೊಂದು ವಿಧವಾಗಿಯೂ ಇರುವುವಷ್ಟೆ. ಇವುಗಳಲ್ಲೆಲ್ಲಾ ಇರುವ ಆತ್ಮವೂ ನಾನಾವಿಧವಾಗಿ ಇರುವುದೇ ? ಹಾಗಿದ್ದರೆ ಆತ್ಮನಿಗೆ ನಾನಾತ್ವವನ್ನೂ ಭಿನ್ನತ್ವವನ್ನೂ ಹೇಳಿದಂತಾಗಲಿಲ್ಲವೇ ? ಎಂದರೆ, ಹಾಗಲ್ಲ. ಎಲ್ಲಾ ಪ್ರಾಣಿಗಳ ಶರೀರಗಳಲ್ಲಿರುವ ಆತ್ಮನೆಲ್ಲಾ ಒಂದೇ. ಅದು ಸಂದರ್ಭಾನುಸಾರವಾಗಿ, ಪ್ರಾಣಿಗಳ ಶರೀರಗಳಿಗನುಸಾರವಾಗಿ ಚಿಕ್ಕದಾಗಿಯೂ ದೊಡ್ಡದಾಗಿಯೂ ನಾನಾವಿಧವಾಗಿಯೂ ಇರುವ ಶರೀರಗಳಲ್ಲಿ ನೆಲಸಿದ್ದು ಆ ಪ್ರಾಣಿಗಳು ಮಾಡುವ ಕರ್ಮಾದಿಗಳಿಗೆ ಸಾಕ್ಷಿಭೂತವಾಗಿರುವುದು. ಒಂದು ಗೃಹದಲ್ಲಿ ಪ್ರವೇಶಿಸಿದ ಅಗ್ನಿಯು ಆಯಾ ವಸ್ತುಗಳಿಗನುರೂಪವಾದ (ಅಗ್ನಿಯು ಹೊತ್ತಿದಾಗ) ರೂಪಗಳನ್ನು ಧರಿಸುವಂತೆ ಸರ್ವಭೂತಗಳ ಅಂತರದಲ್ಲಿರುವ ಒಬ್ಬನೇ ಆತ್ಮನು ನಾನಾ ರೂಪಗಳನ್ನು ಧರಿಸಿ ವಸ್ತುಗಳ ಒಳಗೂ ಹೊರಗೂ ವ್ಯಾಪಿಸಿರುವನು. ಹಾಗೆಯೇ ಒಂದೇ ಆದ ವಾಯುವು ನಾನಾ ವಸ್ತುಗಳಲ್ಲಿ ಸೇರಿ ಆಯಾ ವಸ್ತುಗಳಿಗನುರೂಪವಾದ ರೂಪಗಳನ್ನು ಧರಿಸುವಂತೆ ಸರ್ವ ಭೂತಾಂತರಾತ್ಮನಾದ ಒಬ್ಬನೇ ಆತ್ಮನು ನಾನಾ ರೂಪಗಳನ್ನು ಧರಿಸಿ ಎಲ್ಲಾ ವಸ್ತುಗಳ ಒಳಗೂ ಹೊರಗೂ ವ್ಯಾಪಿಸಿರುವನು. ಮತ್ತು ಸಮುದ್ರದ ನೀರನ್ನು ನಾನಾ ಪಾತ್ರೆಗಳಲ್ಲಿ ತುಂಬಿಟ್ಟರೆ ಆ ನೀರು ಆಯಾ ಪಾತ್ರೆಗಳ ಆಕಾರ, ರೂಪ ಇವುಗಳಿಗನುಸಾರವಾಗಿ ನಾನಾ ರೂಪಗಳನ್ನು ಧರಿಸುವುದಷ್ಟೆ. ಅದರಂತೆ ಒಬ್ಬನೇ ಆದ ಆತ್ಮನು ನಾನಾವಿಧಪ್ರಾಣಿಗಳ ಶರೀರಗಳಲ್ಲಿ ಅವುಗಳ ಆಕಾರ, ರೂಪಗಳಿಗನುಸಾರವಾಗಿ ಒಳಗೂ ಹೊರಗೂ ವ್ಯಾಪಿಸಿರುವನು. ಹೀಗೆ ಪ್ರಾಣಿಗಳಲ್ಲಿರುವ ಆತ್ಮನಿಗೆ ಸುಖದುಃಖಗಳಿಲ್ಲವೇ ಎಂದರೆ, ಇಲ್ಲ. ಪ್ರಾಣಿಗಳ ಶರೀರಾದ್ಯವಯವಗಳಿಗೆ ಮಾತ್ರ ಸುಖದುಃಖಾದಿಗಳುಂಟು. ಅವುಗಳಲ್ಲಿ ಚೈತನ್ಯರೂಪದಿಂದಿರುವ ಆತ್ಮನಿಗೆ ಯಾವುದೂ ಇಲ್ಲ. ಅವನು ನಿರ್ಲಿಪ್ತನಾಗಿರುವನು. ಹೇಗೆಂದರೆ, ಸಮಸ್ತಲೋಕಗಳ ಕಣ್ಣಿನಂತಿರುವ ಸೂರ್ಯನು ಎಲ್ಲಾ ಕಡೆಯಲ್ಲಿಯೂ ಎಲ್ಲಾ ವಸ್ತುಗಳ ಮೇಲೆಯೂ ತನ್ನ ರಶ್ಮಿಗಳನ್ನು ಬೀರಿ ಪ್ರಕಾಶಿಸುತ್ತಿದ್ದರೂ ಆಯಾ ವಸ್ತುಗಳ ಸಂಪರ್ಕವು ಎಂದರೆ ಅವುಗಳ ಸುಖದುಃಖಾದಿಗಳು ಸೂರ್ಯನಿಗಿಲ್ಲದಿರುವಂತೆ, ಸರ್ವಭೂತಗಳಲ್ಲಿ ನೆಲಸಿರುವ ಒಬ್ಬನೇ ಆದ ಆತ್ಮನಿಗೆ ಆಯಾ ಭೂತಗಳ ಅಥವಾ ಪ್ರಾಣಿಗಳ ಸುಖದುಃಖಾದಿಗಳ ಸಂಪರ್ಕವಿರುವುದಿಲ್ಲ. ಲೋಕದ ದುಃಖದಿಂದ ಅವನು ನಿರ್ಲಿಪ್ತ ನಾಗಿರುವನು. ಅವನು ಲೋಕಬಾಹ್ಯನು. ಒಂದೇ ರೂಪವನ್ನು ನಾನಾರೂಪವಾಗಿ ಪ್ರಕಟಮಾಡುವ ಸರ್ವ ಭೂತಾಂತರಾತ್ಮನಾದ ಸರ್ವರಿಗೂ ಸ್ವಾಮಿಯಾದ ಆ ಆತ್ಮನನ್ನು (ಪರಮಾತ್ಮನನ್ನು) ಯಾವ ಬುದ್ಧಿವಂತರು ತಮ್ಮ ದೇಹಮಧ್ಯದಲ್ಲಿರುವ ಆತ್ಮನಲ್ಲಿ ನೋಡುವರೋ, ಎಂದರೆ ಸರ್ವಾಂತರ್ಯಾಮಿಯಾದ ಪರಮಾತ್ಮನೂ, ತನ್ನ ದೇಹದಲ್ಲಿ ಚೈತನ್ಯಸ್ವರೂಪದಿಂದ ನೆಲಸಿರುವ ಆತ್ಮನೂ ಒಬ್ಬನೇ ಎಂದು ಯಾರು ತಿಳಿಯುವರೋ ಅವರಿಗೆ ಅಕ್ಷಯವಾದ ಸುಖವು ದೊರೆಯುವುದು. ಇತರರಿಗೆ ಆ ಸುಖವು ದೊರೆಯಲಾರದು. ಇತರ ವಸ್ತುಗಳೆಲ್ಲವೂ ಅನಿತ್ಯವು ಎಂದರೆ ಅಶಾಶ್ವತವು, ಕೆಲವು ಕಾಲವಿದ್ದು ನಾಶವನ್ನು ಹೊಂದುವವು. ಆದರೆ ಆತ್ಮನು ಹಾಗಲ್ಲ, ಅವನು ನಿತ್ಯನು. ಅವನಿಗೆ ಯಾವಾಗಲೂ

ನಾಶವೇ ಇಲ್ಲ. ಆದ್ದರಿಂದ ಅನಿತ್ಯ ವಸ್ತುಗಳಲ್ಲಿ ನಿತ್ಯನೂ, ಸರ್ವಚೇತನಗಳಲ್ಲಿದ್ದರೂ ಒಬ್ಬನೇ ಆದ ಚೈತನ್ಯನೂ, ಸಮಸ್ತಜನರ ಕಾಮನೆಗಳನ್ನು ಎಂದರೆ ಆಶೋತ್ತರಗಳನ್ನು ಪೂರೈಸುವವನೂ ಆದ ಪರಮಾತ್ಮನು ತಮ್ಮ ಆತ್ಮನಲ್ಲಿಯೇ ಇರುವನೆಂದು ಯಾವ ಬುದ್ಧಿವಂತರು ಅರಿಯುವರೋ ಅವರು ನಾಶರಹಿತವಾದ ಶಾಶ್ವತಸುಖವನ್ನನುಭವಿಸುವರು. ಇತರರಿಗೆ ಆ ಶಾಶ್ವತಸುಖವಿಲ್ಲ- ಅನಿರ್ದೇಶ್ಯವಾದ ಎಂದರೆ ವರ್ಣಿಸಲಸಾಧ್ಯವಾದ ಪರಮಸುಖವು ಇದೇ ಎಂದು ಜನರು ತಿಳಿಯುವರು. ಆದನ್ನು ನಾನು ತಿಳಿದುಕೊಳ್ಳುವ ಬಗೆ ಹೇಗೆ ? ಅದು ಅನುಭವಕ್ಕೆ ಬರುವುದೋ ಇಲ್ಲವೋ ಯಾರು ಬಲ್ಲರು ? ಎಂದರೆ ಆ ಪರಮಪದವೆಂಬ ಶ್ರೇಷ್ಠಸ್ಥಾನದಲ್ಲಿ (ಮುಕ್ತಿಯಲ್ಲಿ ಅಥವಾ ನಿರ್ವಿಕಾರವಾದ ಆತ್ಮನಲ್ಲಿ) ಈ ಲೋಕದಲ್ಲಿರುವಂತೆ ಸೂರ್ಯನು ಪ್ರಕಾಶಿಸುವುದಿಲ್ಲ. ಚಂದ್ರ, ನಕ್ಷತ್ರಾದಿಗಳ ಪ್ರಕಾಶವೂ ಅಲ್ಲಿರುವುದಿಲ್ಲ, ವಿದ್ಯುತ್ತು ಎಂದರೆ ಮಿಂಚಿನ ಪ್ರಕಾಶವೂ ಇರುವುದಿಲ್ಲ. ಅಂದಮೇಲೆ ಅಗ್ನಿಯ ಪಾಡೇನು ? ಅಲ್ಲಿ ಅಗ್ನಿಯೂ ಇರುವುದಿಲ್ಲ. ಹಾಗಾದಲ್ಲಿ ಆ ಪರಮಪದದಲ್ಲಿ ಯಾವಾಗಲೂ ಗಾಢಾಂಧಕಾರವು ಆವರಿಸಿರುವುದೇ ? ಎಂದರೆ, ಹಾಗಲ್ಲ. ಆ ಆತ್ಮವು ಸ್ವಯಂಪ್ರಕಾಶಿಸುವ ಸ್ವಭಾವವುಳ್ಳದ್ದು. ಅಷ್ಟೇ ಅಲ್ಲ, ಅದು ಪ್ರಕಾಶಿಸಿದ ಮೇಲೆ ಅದರ ಪ್ರಕಾಶದಿಂದ ಎಲ್ಲವೂ ಪ್ರಕಾಶಿಸುವುದು. ಅದರ ಬೆಳಕಿನಿಂದ ಎಲ್ಲವೂ ಬೆಳಗುವುದು.

ಪರಮಪದದ ವರ್ಣನೆಯನ್ನು ಬೇರೆ ವಿಧದಿಂದ ವರ್ಣಿಸಲಾಗುವುದು ಇದು ಎಂದರೆ ಜನನಮರಣ ಪ್ರವಾಹರೂಪವಾದ ಸಂಸಾರವೆಂಬುದೇ ಸನಾತನವಾದ ಅಶ್ವತ್ಥವೃಕ್ಷವು (ಅಶ್ವತ್ಥವೃಕ್ಷದಂತಿರುವುದು) ಇದರ ಬೇರುಗಳು ಮೇಲೆ ಎಂದರೆ ಊರ್ಧ್ವಮುಖವಾಗಿ ಹರಡಿರುವವು. ಕೊಂಬೆಗಳು ಕೆಳಗೆ ಎಂದರೆ ಅಧೋಮುಖವಾಗಿ ಬೆಳೆದಿರುವವು. ಆ ವೃಕ್ಷದ ಮೂಲವೇ (ಕಾರಣಭೂತವಾದುದೇ) ಶುದ್ಧವಸ್ತುವು, ಬ್ರಹ್ಮವು. ಎಂದರೆ ಶುದ್ಧವಸ್ತುವಾದ ಬ್ರಹ್ಮದಿಂದಲೇ ಈ ಸಂಸಾರವೂ ಬಾಹ್ಯಪ್ರಪಂಚವೂ ಆವಿರ್ಭವಿಸಿರುವುದು ಎಂದಭಿಪ್ರಾಯವು. ಈ ಶುದ್ಧಬ್ರಹ್ಮವನ್ನುಅಮೃತವೆನ್ನುವರು (ಅಮೃತವೆಂದರೆ ನಾಶವಿಲ್ಲದ್ದು). ಸರ್ವಲೋಕಗಳೂ ಅದರ ಆಶ್ರಯದಿಂದಲೇ ಇರುವವು. ಅದರ ಆಚೆಗೆ ಯಾರೂ ಹೋಗಲಾರರು. ಈ ಬ್ರಹ್ಮವನ್ನು ಬಿಟ್ಟು ಬೇರೆ ವಸ್ತುವಿದ್ದರೆ ತಾನೇ ಅದನ್ನತಿಕ್ರಮಿಸಿ ಹೋಗುವ ಪ್ರಶ್ನೆ ಏಳುವುದು ? ಅದೇ ಅಂತಿಮಸ್ಥಾನವಾದ್ದರಿಂದ ಅದರ ಮುಂದಕ್ಕೆ ಅಥವಾ ಆಚೆಗೆ ಇನ್ನೇನೂ ಇಲ್ಲ.

ನಮ್ಮ ದೃಷ್ಟಿಗೆ ಗೋಚರವಾಗುವ ಈ ಸಕಲವಿಶ್ವವೂ ಪ್ರಾಣದಲ್ಲಿಯೇ ಎಂದರೆ ಪ್ರಾಣದಲ್ಲಿ ಚೈತನ್ಯರೂಪವೂ, ಸರ್ವವ್ಯಾಪಿಯೂ ಆದ ಬ್ರಹ್ಮದಲ್ಲಿಯೇ ಚಲಿಸುವುದು. ಎಂದರೆ ಈ ವಿಶ್ವದ ಉತ್ಪತ್ತಿಯೂ, ಲಯವೂ ಬ್ರಹ್ಮದಲ್ಲಿಯೇ ಆಗುವುದು. ವಿಶ್ವಕ್ಕೆ ಕಾರಣಭೂತವಾದ ಈ ಬ್ರಹ್ಮವು ಬಹಳ ದೊಡ್ಡದಾಗಿರುವುದು ಎಂದರೆ ಆದ್ಯಂತಗಳಿಲ್ಲದೆ ಅನಂತವಾಗಿರುವುದು ಈ ಅನಂತಸ್ವರೂಪವನ್ನು ಯೋಚಿಸುತ್ತಾ ಹೋದರೆ, ಅಬ್ಬಾ ! ಇದು ಎಷ್ಟು ದೊಡ್ಡದು ? ಈ ವಿಶ್ವವೂ ಇದರಲ್ಲಿರುವ ಪ್ರಾಣಿಗಳೂ ಎಷ್ಟು ಅಲ್ಪವು ಎಂಬ ಭಾವನೆಯು ಮೂಡಿ ಮನಸ್ಸಿಗೆ ಒಂದುವಿಧ ಭಯವನ್ನುಂಟುಮಾಡುವುದು. ಕೈಯಿಂದ ವಜ್ರಾಯುಧವನ್ನು ಹಿಡಿದು ಅದನ್ನು ಮೇಲಕ್ಕೆತ್ತಿ ಹೊಡೆಯುವುದಕ್ಕೆ ಬಂದರೆ ಎಷ್ಟು ಭಯವಾಗುವುದೋ, ಈ ಅನಂತವಾದ ಬ್ರಹ್ಮದ ನಿಲುವನ್ನು ಯೋಚಿಸುವುದೂ ಅಷ್ಟೇ ಭಯಂಕರವಾದುದು. ಇದು ಮನುಷ್ಯನ ಬುದ್ಧಿಗೆ ನಿಲುಕುವುದಿಲ್ಲ. ಏಕೆಂದರೆ ಮನುಷ್ಯನ ಬುದ್ಧಿಗೆ ಒಂದು ಪರಿಮಿತಿಯುಂಟು. ಆದರೂ ಯೋಗಾದಿಸಾಧನೆಗಳಿಂದ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡ ತಪಸ್ವಿಗಳೂ ಜ್ಞಾನಿಗಳೂ ಇದನ್ನು ತಿಳಿದು ಅಮೃತರಾಗುವರು. ವಿಶ್ವದ ಉತ್ಪತ್ತಿಸ್ಥಿತಿಲಯಗಳಿಗೆ ಕಾರಣಭೂತವಾದ ಈ ಪರಮಾತ್ಮ ಅಥವಾ ಬ್ರಹ್ಮದ ಭಯದಿಂದಲೇ (ಆಜ್ಞೆಯಿಂದಲೇ) ಅಗ್ನಿಯು ಸುಡುವುದು ಎಂದರೆ ಅಗ್ನಿಗೆ ಸುಡುವ ಶಕ್ತಿ ಇರುವುದು, ಸೂರ್ಯನು

ಬೆಳಗುವನು, ಇಂದ್ರನೂ, ವಾಯುವೂ, ಐದನೆಯವನಾದ ಯಮ ಅಥವಾ ಮೃತ್ಯುವೂ ಇವನ (ಬ್ರಹ್ಮದ) ಭಯದಿಂದಲೇ ತಮ್ಮ ತಮ್ಮ ಕರ್ತವ್ಯಗಳನ್ನು ಮಾಡುವರು.

ಈ ಶರೀರವು ಪತನವಾಗುವುದಕ್ಕೆ (ಮೃತವಾಗುವುದಕ್ಕೆ) ಮೊದಲೇ ಆತ್ಮಜ್ಞಾನವಾದರೆ ಒಳ್ಳೆಯದು. ಇಲ್ಲದಿದ್ದರೆ ಸೃಷ್ಟಿಯಲ್ಲಿರುವ ಬೇರೆಬೇರೆ ಲೋಕಗಳಲ್ಲಿ ಜೀವನು ಜನ್ಮವೆತ್ತಬೇಕಾಗುವುದು. ಕನ್ನಡಿಯಲ್ಲಿ ತನ್ನ ಪ್ರತಿಬಿಂಬವು ಕಾಣಿಸುವಂತೆ ತನ್ನ ಆತ್ಮನಲ್ಲಿ ಸ್ಪಷ್ಟವಾಗಿ ಬ್ರಹ್ಮನದರ್ಶನವಾಗುವುದು. ಎಂದರೆ ಆತ್ಮಜ್ಞಾನಿಯಾದವನಿಗೆ ಬ್ರಹ್ಮಸಾಕ್ಷಾತ್ಕಾರವು ಕನ್ನಡಿಯಲ್ಲಿ ಮುಖವು ಕಾಣಿಸುವಂತೆ ಸ್ಪಷ್ಟವಾಗಿ ಕಾಣಿಸುವುದು. ಸ್ವಪ್ನದಲ್ಲಿ ಅಸ್ಪಷ್ಟವಾಗಿ ಕಾಣುವಂತೆ ಪಿತೃಲೋಕದಲ್ಲಿ ಅಸ್ಪಷ್ಟವಾಗಿ ಕಾಣಿಸುವುದು. ನೀರಿನಲ್ಲಿ ಪ್ರತಿಬಿಂಬವು ಅಸ್ಪಷ್ಟವಾಗಿ ಕಾಣಿಸುವಂತೆ ಗಂಧರ್ವಲೋಕದಲ್ಲಿಯೂ ಅಸ್ಪಷ್ಟವಾಗಿ ಕಾಣಿಸುವುದು. ಆದರೆ ಬೆಳಕು, (ಬಿಸಿಲು) ನೆರಳು ಸ್ಪಷ್ಟವಾಗಿ ಕಾಣಿಸುವಂತೆ ಬ್ರಹ್ಮಲೋಕದಲ್ಲಿ ಸ್ಪಷ್ಟವಾಗಿ ಬ್ರಹ್ಮದರ್ಶನವಾಗುವುದು.

ಬೇರೆಬೇರೆ ತನ್ಮಾತ್ರೆಗಳಿಂದ ಹುಟ್ಟುವ ಇಂದ್ರಿಯಗಳ ಭಿನ್ನಭಾವಗಳನ್ನೂ ಅವುಗಳ ಉತ್ಪತ್ತಿವಿನಾಶಗಳನ್ನೂ ಅರಿತುಕೊಳ್ಳುವ ಬುದ್ಧಿವಂತನು ಶೋಕರಹಿತನಾಗುವನು. ಎಂದರೆ ಪೃಥಿವ್ಯಾದಿಪಂಚಭೂತಗಳ ತನ್ಮಾತ್ರೆಗಳಿಂದ (ತನ್ಮಾತ್ರೆಯೆಂದರೆ ಸೂಕ್ಷ್ಮರೂಪ) ಉತ್ಪತ್ತಿಯಾದ ಚಕ್ಷುರಾದೀಂದ್ರಿಯಗಳು ತಮಗೆ ಉತ್ಪತ್ತಿಸ್ಥಾನವಾದ ಪಂಚಭೂತಗಳಲ್ಲಿಯೇ ಅಂತ್ಯದಲ್ಲಿ ಲಯ ಅಥವಾ ನಾಶವಾಗುವುವು. ಈ ಪಂಚಭೂತಗಳೂ ಇವುಗಳಿಂದ ಹುಟ್ಟುವ ಇಂದ್ರಿಯಾದಿಗಳೂ ಕೆಲವು ಕಾಲವಿದ್ದು ನಾಶವನ್ನೈದುವುವು. ಆದರೆ ಆತ್ಮವಸ್ತುವಿಗೆ ಯಾವಾಗಲೂ ನಾಶವಿರುವುದಿಲ್ಲ ಎಂದು ತಿಳಿಯುವ ಪ್ರಜ್ಞನಿಗೆ ದುಃಖವೇ ಇರುವುದಿಲ್ಲ.

ಇಂದ್ರಿಯಗಳಿಗಿಂತಲೂ ಮನಸ್ಸು ಶ್ರೇಷ್ಠವಾದುದು ಅಥವಾ ಸೂಕ್ಷ್ಮವಾದುದು. ಮನಸ್ಸಿಗಿಂತಲೂ ಶುದ್ಧಬುದ್ಧಿಯು ಹೆಚ್ಚಿನದು. ಬುದ್ಧಿಗಿಂತಲೂ ಶ್ರೇಷ್ಠವೂ ಸೂಕ್ಷ್ಮವೂ ಆದ ಮಹತ್ತತ್ತ್ವವಿರುವುದು. ಅದರಾಚೆಗೆ ಎಂದರೆ ಅದಕ್ಕಿಂತಲೂ ಸೂಕ್ಷ್ಮವಾದ ಅವ್ಯಕ್ತವಿರುವುದು. ಅವ್ಯಕ್ತಕ್ಕಿಂತಲೂ ಪುರುಷನು (ಚಿತ್ ಅಥವಾ ಚೈತನ್ಯ) ಶ್ರೇಷ್ಠನು. ಇವನೇ ಆತ್ಮನು. ಇವನು ಸರ್ವವ್ಯಾಪಕನು. ಸರ್ವಲಕ್ಷಣರಹಿತನು, ಸರ್ವಸಂಸಾರಧರ್ಮವರ್ಜಿತನು, ನಿರ್ಲಿಪ್ತನು. ಇಂತಹ ಆತ್ಮನನ್ನರಿತು ಪ್ರಾಣಿಯು ಮುಕ್ತನಾಗುವನು, ಅಮೃತತ್ವವನ್ನು ಪಡೆಯುವನು. ಈ ಆತ್ಮನ ಸ್ವರೂಪವು ದೃಷ್ಟಿಗೆ (ಬಾಹ್ಯದೃಷ್ಟಿಗೆ) ಗೋಚರವಾಗುವುದಿಲ್ಲ. ಯಾರೂ ಅವನನ್ನು ಕಣ್ಣಿನಿಂದ ನೋಡಲು ಸಾಧ್ಯವಿಲ್ಲ. ಮನಸ್ಸಂಯಮವಿರುವ ಯೋಗಿಯ ಅಥವಾ ತಪಸ್ವಿಯ ಅಂತಃಕರಣದಲ್ಲಿ ಧ್ಯಾನದಿಂದ ಮಾತ್ರ ಅವನು ಗೋಚರನಾಗುವನು. ಈ ವಿಷಯವನ್ನು ತಿಳಿದವರೂ ಅಮೃತರಾಗುವರು.

ಯಾವನ ಪಂಚಜ್ಞಾನೇಂದ್ರಿಯಗಳೂ ಮನಸ್ಸೂ ಸ್ಥಿರವಾಗಿ ಬುದ್ಧಿಯು ನಿಶ್ಚಲವಾಗಿರುವುದೋ ಅವನಿಗೆ ಎಂದರೆ ವಿಷಯಾದಿ ಸುಖಗಳಲ್ಲಿ ತನ್ನ ಚಿತ್ತವೃತ್ತಿಗಳನ್ನು ಹೋಗಗೊಡಿಸದೆ ಮನಸ್ಥೈರ್ಯವನ್ನು ಪಡೆದಿರುವನೋ ಅಂತಹ ಪುರುಷನಿಗೆ ಪರಮಸ್ಥಿತಿಯು ಪ್ರಾಪ್ತವಾಯಿತೆನ್ನುವರು. ಈ ಸ್ಥಿರವಾದ ಇಂದ್ರಿಯಧಾರಣೆಯೇ ಯೋಗವೆಂದು ಹೇಳುವರು. ಯೋಗಿಯಾದವನು ಬಹಳ ಎಚ್ಚರಿಕೆಯಿಂದಿರಬೇಕು. ಏಕೆಂದರೆ ಯೋಗಸ್ಥಿತಿಗೂ ಅನೇಕ ಪ್ರಮಾದಗಳು ಅಥವಾ ವಿಘ್ನಗಳಿರುವವು. ಅಪ್ರಮತ್ತನಾದವನಿಗೆ ಎಂದರೆ ಆಲಸ್ಯದಿಂದಿರುವವನಿಗೆ ಯೋಗವು ಸಿದ್ಧಿಸುವುದಿಲ್ಲ. ಆತ್ಮಜ್ಞಾನವು ವಾಕ್ಶಕ್ತಿಯಿಂದಾಗಲಿ (ಸಂಭಾಷಣಾದಿಗಳಿಂದ) ಮನಸ್ಸಿನಿಂದ ಯೋಚಿಸುವುದರಿಂದಾಗಲಿ, ಕಣ್ಣು

ಗಳಿಂದ ನೋಡುವುದರಿಂದಾಗಲಿ, ಪ್ರಾಪ್ತವಾಗುವಂತಹುದಲ್ಲ ಅದು (ಆತ್ಮವು) ಇದ್ದೇ ಇದೆ ಎಂಬ ದೃಢವಾದ ನಂಬಿಕೆಯುಳ್ಳವನಿಗೆ ಎಂದರೆ ಆಸ್ತಿಕ್ಯಬುದ್ಧಿಯುಳ್ಳವನಿಗೆ ಅಥವಾ ಶ್ರದ್ಧಾವಂತನಿಗೆ ಮಾತ್ರ ಲಭಿಸುವುದು. ಕಾರ್ಯಕಾರಣಗಳ ಸತ್ಯಜ್ಞಾನದಿಂದ ಅದನ್ನು ದೊರಕಿಸಿಕೊಳ್ಳಬೇಕು. ಅದು (ಆತ್ಮವು) ಇರುವುದೆಂಬ ಭಾವನೆಯು ಹುಟ್ಟಿತೆಂದರೆ ಸತ್ಯಜ್ಞಾನವು (ಬ್ರಹ್ಮಜ್ಞಾನವು) ಪ್ರಕಟವಾಗುವುದು ಎಂದರೆ ಮನಸ್ಸಿನಲ್ಲಿ ಆವಿರ್ಭವಿಸುವುದು. ಮನುಷ್ಯನ ಅಂತಃಕರಣದಲ್ಲಿರುವ ಎಲ್ಲ ಕಾಮನೆಗಳು ಎಂದರೆ ಸುಖಾದಿಗಳಲ್ಲಿ ಇಚ್ಛೆಯು ಅಳಿದುಹೋದರೆ ಅವನು ಅಮೃತನಾಗುವನು ಎಂದರೆ ಜೀವನ್ಮುಕ್ತನಾಗಿ ಬ್ರಹ್ಮಾನಂದವನ್ನು ಇಲ್ಲಿಯೇ ಅನುಭವಿಸುವನು. ಅಂತಃಕರಣದಲ್ಲಿ (ಮನಸ್ಸಿನಲ್ಲಿ) ಮನೆ ಮಾಡಿಕೊಂಡಿರುವ ಮಿಥ್ಯಾಬಂಧನಗಳು ನಷ್ಟವಾದವೆಂದರೆ ಆಗ ಮರ್ತ್ಯನಾದ ಮನುಷ್ಯನು ಅಮೃತನಾಗುವನು. ಎಂದರೆ ಶಾಶ್ವತವಾದ ಪರಮಪದವೆಂಬ ಮುಕ್ತಿಯನ್ನು ಪಡೆಯುವನು.

ಮನುಷ್ಯನ ಹೃದಯದಲ್ಲಿ ದೃಢವಾಗಿ ನೆಲೆಸಿರುವ ಅಜ್ಞಾನವೆಂಬ ಬಂಧನಗಳು ನಾಶವಾದೊಡನೆಯೇ ಮರ್ತ್ಯನಾಗಿದ್ದ ಮನುಷ್ಯನು ಅಮೃತನಾಗುವನು. ಹೃದಯದಲ್ಲಿ ನೂರ ಒಂದು ನಾಡಿಗಳಿರುವವು. ಅವುಗಳಲ್ಲಿ ಸುಷುಮ್ನಾ ಎಂಬ ಒಂದು ನಾಡಿಯು ಶಿರಸ್ಸಿನ ತುದಿಯಲ್ಲಿ ಬ್ರಹ್ಮರಂಧ್ರದವರೆಗೂ ಹೋಗಿರುವುದು. ಆ ನಾಡಿಯಲ್ಲಿ ಪ್ರಾಣವಾಯುವನ್ನು ಚಲಿಸುವಂತೆ ಮಾಡಿ ಬ್ರಹ್ಮರಂಧ್ರದ ಮೂಲಕ ಪ್ರಾಣವು ಹೊರಟುಹೋದರೆ ಆ ಮನುಷ್ಯನು ಅಮೃತತ್ವವನ್ನು ಪಡೆಯುವನು. ಇತರ ನಾಡಿಗಳ ಮೂಲಕ ಪ್ರಾಣವು ಹೋದರೆ ಅವನಿಗೆ ಮುಂದೆ ನಾನಾವಿಧ ಜನ್ಮಗಳು ಪ್ರಾಪ್ತವಾಗುವವು.

ಅಂಗುಷ್ಠಪರಿಮಾಣವುಳ್ಳ ಪುರುಷನು ಎಂದರೆ ಅಂತರಾತ್ಮನು ಯಾವಾಗಲೂ ಜನರ ಹೃದಯದಲ್ಲಿ ವಾಸಿಸುತ್ತಿರುವನು. ಆ ಅಂತರಾತ್ಮನನ್ನು ನೋಡಬೇಕಾದರೆ, ಸಿಪ್ಪೆಯನ್ನು ಸುಲಿದು ಒಳಗಿರುವ ವಸ್ತುವನ್ನು ತೆಗೆಯುವಂತೆ ಧೈರ್ಯದಿಂದ ಎಂದರೆ ಆತ್ಮಜ್ಞಾನದಿಂದ ಬೇರ್ಪಡಿಸಬೇಕು. ಅದೇ ದಿವ್ಯತೇಜಸ್ಸಿನಿಂದ ಬೆಳಗುತ್ತಿರುವ ಅಮೃತವಸ್ತುವು.

ಮೃತ್ಯುವು ಅಥವಾ ಯಮನು ಉಪದೇಶಿಸಿದ ಈ ಬ್ರಹ್ಮವಿದ್ಯೆಯನ್ನರಿತುಕೊಂಡು, ಅವನು ಕಲಿಸಿದ ಸಂಪೂರ್ಣ ಯೋಗವಿಧಾನವನ್ನು ತಿಳಿದುಕೊಂಡು ನಚಿಕೇತನು ಬ್ರಹ್ಮಪದವನ್ನು ಪಡೆದನು. ಅವನು ಪಾಪರಹಿತನೂ ಅಮೃತನೂ ಆದನು. ಇದರಲ್ಲಿ ಹೇಳಿರುವ ಈ ಆಧ್ಯಾತ್ಮಜ್ಞಾನವನ್ನು ತಿಳಿದುಕೊಳ್ಳುವ ಇತರ ಜನರೂ ಸಹ ನಚಿಕೇತನಂತೆ ಶಾಶ್ವತವಾದ ಮುಕ್ತಿಯನ್ನು ಪಡೆಯುವರು.

ಇಲ್ಲಿಗೆ ಕಠೋಪನಿಷತ್ತಿನ ಸೂಕ್ಷ್ಮವಿವರಣೆ ಸಮಾಪ್ತವು

॥ ಸಾಯಣಭಾಷ್ಯಂ ॥

**ಪರಂ ಮೃತ್ಯೋ ಇತಿ ಚತುರ್ದಶರ್ಚಂ ದ್ವಿತೀಯಂ ಸೂಕ್ತಂ । ಯಮಪುತ್ರಸ್ಯ ಸಂಕುಸುಕಸ್ಯಾರ್ಷಂ । ಏಕಾದಶೀ ಪ್ರಸ್ತಾರಪಂಕ್ತಿಃ । ಆದ್ಯಾ ಜಾಗತಾ ತತೋ ದ್ವೌ ಗಾಯತ್ರೌ । ಪ್ರಸ್ತಾರಪಂಕ್ತಿಃ ಪುರತಃ । ಪಿ ೩-೪೦ । ಇತಿ । ತ್ರಯೋದಶೀ ಜಗತೀ ಚತುರ್ದಶ್ಯನುಷ್ಟುಪ್ । ಶಿಷ್ಟಾಸ್ತ್ರಿಷ್ಟುಭಃ । ತತ್ರಾದೌ ಚತಸ್ರೋ ಮೃತ್ಯುದೇವತ್ಯಾಃ । ಪಂಚಮೀ ಧಾತೃದೇವತಾಕಾ । ಷಷ್ಠೀ ತ್ವಷ್ಟೃದೇವತ್ಯಾ । ಸಪ್ತಮ್ಯಾದ್ಯಾಃ ಶಿಷ್ಟಾಃ ಪಿತೃಮೇಧಾಭಿಧಾಯಿನ್ಯಃ । ಅತಸ್ತದ್ದೇವತಾಕಾಃ । ಅಂತ್ಯಾ ತ್ವನಿರುಕ್ತತ್ವಾ-**

ತ್ಯಾ ಜಾಪತ್ಯಾ ವಾ । ತಥಾ ಚಾನುಕ್ರಾಂತಂ ಪರಂ ಮೃತ್ಯೋ ಸಂಕುಸುಕಶ್ಚತಸ್ರೋ ಮೃತ್ಯುದೇವತಾಃ ಪರಾ ಧಾತ್ರೀ ಪರಾ ತ್ವಾಷ್ಟ್ರೀ ಪರಾಃ ಪಿತೃಮೇಧಾ ಏಕಾದಶೀ ಪ್ರಸ್ತಾರಪಂಕ್ತಿರ್ಜಗತ್ಯುಪಾಂತ್ಯಾಂತ್ಯಾ-ನುಷ್ಟುಪ್ ಪ್ರಾಜಾಪತ್ಯಾ ವಾ ಸಾನಿರುಕ್ತೇತಿ ॥

ಅನುವಾದವು— **ಪರಂ ಮೃತ್ಯೋ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಯಮನ ಪುತ್ರನಾದ ಸಂಕುಸುಕನೆಂಬುವನು ಋಷಿಯು. ಈ ಸೂಕ್ತದ ಹನ್ನೊಂದನೆಯ ಋಕ್ಕು ಪ್ರಸ್ತಾರಪಂಕ್ತಿಚ್ಛಂದಸ್ಕವು; ಮೊದಲಿನ ಎರಡು ಋಕ್ಕುಗಳು ಜಗತೀಛಂದಸ್ಕವು: ಅಲ್ಲಿಂದ ಮುಂದಿನ ಎರಡು ಋಕ್ಕುಗಳು (೩-೪ ಋಕ್ಕುಗಳು) ಗಾಯತ್ರೀಛಂದಸ್ಕವು; ಹದಿಮೂರನೆಯ ಋಕ್ಕು ಜಗತೀಛಂದಸ್ಕವು; ಹದಿನಾಲ್ಕನೆಯ ಋಕ್ಕು ಅನುಷ್ಟುಪ್‌ಛಂದಸ್ಕವು; ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳಿಗೆ ಮೃತ್ಯುವು ದೇವತೆಯು; ಐದನೆಯ ಋಕ್ಕಿಗೆ ಧಾತೃವು ದೇವತೆಯು; ಆರನೆಯ ಋಕ್ಕಿಗೆ ತ್ವಷ್ಟೃವು ದೇವತೆಯು; ಏಳನೆಯ ಋಕ್ಕಿನಿಂದ ಮುಂದಿನ ಋಕ್ಕುಗಳೆಲ್ಲಾ ಪಿತೃಮೇಧಾಭಿಧಾಯಿನೀ ಎಂಬ ಅಪರಕರ್ಮದಲ್ಲಿ ಉಪಯೋಗಿಸುವ ಋಕ್ಕುಗಳು. ಆದ್ದರಿಂದ ಆ ಋಕ್ಕುಗಳಿಗೆ ಪಿತೃಮೊದಲಾದವರೇ ದೇವತೆಯು; ಕೊನೆಯ ಋಕ್ಕಿಗೆ ಯಾವ ದೇವತೆಯೆಂದು ನಿರ್ದೇಶಿಸಿಲ್ಲವಾದ್ದರಿಂದ ಪ್ರಜಾಪತಿಯೇ ದೇವತೆಯಾಗಬಹುದು. ಅನುಕ್ರಮಣಿಕೆಯಲ್ಲಿ— **ಪರಂ ಮೃತ್ಯೋ ಸಂಕುಸುಕಶ್ಚತಸ್ರೋ ಮೃತ್ಯುದೇವತಾಃ ಪರಾ ಧಾತ್ರೀ ಪರಾ ತ್ವಾಷ್ಟ್ರೀ ಪರಾಃ ಪಿತೃಮೇಧಾ ಏಕಾದಶೀ ಪ್ರಸ್ತಾರಪಂಕ್ತಿರ್ಜಗ-ತ್ಯುಪಾಂತ್ಯಾನುಷ್ಟುಪ್ ಪ್ರಾಜಾಪತ್ಯಾ ವಾ ಸಾನಿರುಕ್ತಾ** ಎಂದು ಹೇಳಿರುವುದು.

## ಸೂಕ್ತ—೧೮

ಮಂಡಲ—೧೦ ॥ ಅನುವಾಕ—೨॥ ಸೂಕ್ತ—೧೮ ॥
ಅಷ್ಟಕ—೭ ॥ ಅಧ್ಯಾಯ—೬ ॥ ವರ್ಗ—೨೬, ೨೭, ೨೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ॥
ಋಷಿಃ—ಸಂಕುಸುಕೋ ಯಾಮಾಯನಃ ।
ದೇವತಾ—೧-೪. ಮೃತ್ಯುಃ । ೫. ಧಾತಾ । ೬. ತ್ವಷ್ಟಾ । ೭-೧೩. ಪಿತೃಮೇಧಃ । ೧೪. ಪಿತೃಮೇಧಃ ಪ್ರಜಾಪತಿರ್ವಾ ॥
ಛಂದಃ—೧-೧೦,೧೨. ತ್ರಿಷ್ಟುಪ್ । ೧೧. ಪ್ರಸ್ತಾರಪಂಕ್ತಿಃ । ೧೩. ಜಗತೀ । ೧೪. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾ-ನಾತ್ ।
ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಂ ರೀರಿಷೋ ಮೋತ ವೀರಾನ್ ॥ ೧ ॥

॥ ಪದಪಾಠಃ ॥

ಪರಂ । ಮೃತ್ಯೋ ಇತಿ । ಅನು । ಪರಾ । ಇಹಿ । ಪಂಥಾಂ । ಯಃ । ತೇ । ಸ್ವಃ । ಇತರಃ । ದೇವಽಯಾನಾತ್ ।

ಚಕ್ಷುಷ್ಮತೇ । ಶೃಣ್ವತೇ । ತೇ । ಬ್ರವೀಮಿ । ಮಾ । ನಃ । ಪ್ರಽಜಾಂ । ರೀರಿಷಃ । ಮಾ । ಉತ । ವೀರಾನ್ ॥ ೧ ॥

॥ ಸಾಯಣಭಾಷ್ಯಂ ॥

ಹೇ ಮೃತ್ಯೋ ಸರ್ವೇಷಾಂ ಮಾರಕೈತನ್ನಾಮಕ ದೇವ ಪರಮನ್ಯಂ ಪಂಥಾಂ ಪಂಥಾನಮನ್ವಾನುಪೂರ್ವ್ಯೇಣ ಪರೇಹಿ । ಪರಾಙ್ಮುಖೋ ಗಚ್ಛ । ಯಜಮಾನಾದಿತಿ ಶೇಷಃ । ಕೋಽಸೌ ಪಂಥಾಃ । ತೇ ತವ ಸ್ವಃ ಸ್ವಭೂತಃ ದೇವಯಾನಾತ್ । ದೇವಾ ಅನೇನ ಮಾರ್ಗೇಣ ಗಚ್ಛಂತೀತಿ ದೇವಯಾನೋ ದೇವಮಾರ್ಗಃ । ತಸ್ಮಾದಿತರೋ ಯಃ ಪಂಥಾಸ್ತಂ ಪ್ರಗಚ್ಛ । ನ ಕೇವಲಮತಃ ಪರಾಗಚ್ಛ ಅಪಿ ತು ಚಕ್ಷುಷ್ಮತೇ ದರ್ಶನವತೇ ಶೃಣ್ವತೇ ಸರ್ವಂ । ಅಪ್ರತಿಹತಸರ್ವೇಂದ್ರಿಯವಿಜ್ಞಾನಾಯೇತ್ಯರ್ಥಃ । ತೇ ತುಭ್ಯಂ ಬ್ರವೀಮಿ ಕಥಯಾಮಿ । ನೋಽಸ್ಮಾಕಂ ಪ್ರಜಾಂ ದುಹಿತೃದೌಹಿತ್ರಾತ್ಮಿಕಾಂ ಮಾ ರಿರಿಷಃ । ಮಾ ಹಿಂಸೀಃ ।ಉತಾಪಿ ಚ ವೀರಾನ್ಪುತ್ರಪೌತ್ರಾದೀನ್ಮಾ ಹಿಂಸೀಃ । ತತ್ಪರಾಗಮನೇನ ರಕ್ಷೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಮೃತ್ಯೋ—ಎಲೈ ಮೃತ್ಯುವೇ । ಪರಂ ಪಂಥಾಂ ಅನು— ಬೇರೆ ದಾರಿಯನ್ನು ಹಿಡಿದು । ಪರೇಹಿ—ಪರಾಙ್ಮುಖನಾಗಿ ಹೋಗು । ತೇ—ನಿನ್ನ । ಸ್ವಃ—ಸ್ವಂತವಾದುದೂ । ದೇವಯಾನಾತ್—ದೇವತೆಗಳ ಸಂಚಾರ ಮಾರ್ಗಕ್ಕಿಂತಲೂ । ಇತರಃ—ಬೇರೆಯಾದುದೂ ಆದ । ಯಃ—ಯಾವ ಮಾರ್ಗವಿದೆಯೋ ಅದನ್ನು ಅನುಸರಿಸು. ಚಕ್ಷುಷ್ಮತೇ—ಚಕ್ಷುಸ್ಸುಳ್ಳವನೂ। ಶೃಣ್ವತೇ—ಕಿವಿಯುಳ್ಳವನೂ ಆದ । ತೇ—ನಿನಗೆ । ಬ್ರವೀಮಿ—ಹೇಳುತ್ತೇನೆ. ನಃ—ನಮ್ಮ । ಪ್ರಜಾಂ—ಪುತ್ರಾದಿಗಳನ್ನು । ಮಾ ರಿರಿಷಃ—ಹಿಂಸಿಸಬೇಡ. ಉತ—ಮತ್ತು । ವೀರಾನ್—ವೀರಪುತ್ರಾದಿಗಳನ್ನು । ಮಾ—ಹಿಂಸಿಸಬೇಡ.

॥ ಭಾವಾರ್ಥ ॥

ಎಲೈ ಮೃತ್ಯುವೇ, ಬೇರೆ ದಾರಿಯನ್ನು ಹಿಡಿದು ಪರಾಙ್ಮುಖನಾಗು. ದೇವತೆಗಳ ಮಾರ್ಗಕ್ಕಿಂತಲೂ ಬೇರೆ ಯಾದ ನಿನ್ನ ಸ್ವಂತ ಮಾರ್ಗವನ್ನನುಸರಿಸಿ ಹೋಗು. ಚುಕ್ಷುಸ್ಸುಳ್ಳವನೂ, ಕಿವಿಯುಳ್ಳವನೂ ಆದ ನಿನ್ನನ್ನು ಪ್ರಾರ್ಥಿಸುತ್ತೇನೆ. ನಮ್ಮ ಪುತ್ರಾದಿಗಳನ್ನು ಹಿಂಸಿಸಬೇಡ. ಮತ್ತು ವೀರಪುತ್ರಾದಿಗಳನ್ನು ಹಿಂಸಿಸಬೇಡ.

English Translation

Depart, Mrityu, by a different path: by that which is your own, and distinct from the path of the gods; I speak to you who have eyes, who have ears: do no harm to our offspring, nor to our male progeny.

॥ ನಿರುಕ್ತ ವ್ಯಾಖ್ಯಾನಗಳು ॥

ಮೃತ್ಯುಶಬ್ದದ ಅರ್ಥವಿವರಣೆಮಾಡುತ್ತಾ ಯಾಸ್ಕರು ಈ ರೀತಿ ಹೇಳಿದ್ದಾರೆ—

**ಮೃತ್ಯುಃ । ಮೃತ್ಯುರ್ಮಾರಯತೀತಿ ಸತಃ । ಮೃತಂ ಚ್ಯಾವಯತೀತಿ ವಾ ಶತಬಲಾಕ್ಷೋ ಮೌದ್ಗಲ್ಯಃ ॥ ತಸ್ಯೈಷಾ ಭವತಿ ॥**

(ನಿ. ೧೧-೬)

ಪ್ರಾಣಿಗಳನ್ನು ಕೊಲ್ಲುವವನಾದ್ದರಿಂದ ಇವನಿಗೆ ಮೃತ್ಯುವೆಂದು ಹೆಸರು. ಅಥವಾ ಮೃತನಾದವನನ್ನು ಎಂದರೆ ಆತ್ಮವನ್ನು ಆ ಸ್ಥಳದಿಂದ ಪರಲೋಕಕ್ಕೆ ಸಾಗಿಸುವವನಾದ್ದರಿಂದ ಇವನಿಗೆ ಮೃತ್ಯುವೆಂದು ಹೆಸರು ಎಂದು ಮುದ್ಗಲಪುತ್ರನಾದ ಶತಬಲಾಕ್ಷನೆಂಬ ಋಷಿಯ ಅಭಿಪ್ರಾಯವು. ಈ ಶಬ್ದಯೋಗವಿರುವ ಋಕ್ಕನ್ನು ಇಲ್ಲಿ ಉದಾಹರಿಸಲಾಗಿದೆ—

**ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ ।**
**ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಂ ರೀರಿಷೋ ಮೋತ ವೀರಾನ್ ॥**

**ಪರಂ ಮೃತ್ಯೋ ಧ್ರುವಂ ಮೃತ್ಯೋ ಧ್ರುವಂ ಪರೇಹಿ ಮೃತ್ಯೋ ಕಥಿತಂ ಕೇನ ಮೃತ್ಯೋ ಮೃತಂ ಚ್ಯಾವಯತೇ ಭವತಿ ಮೃತ್ಯೋ ಮದೇರ್ವಾ ಮುದೇರ್ವಾ ॥**

(ನಿ. ೧೧-೭)

ಎಲೈ ಮೃತ್ಯುವೇ, ನೀನು ನಿಶ್ಚಯವಾಗಿಯೂ ಇಲ್ಲಿಂದ ಹೊರಡು, ಎಲೈ ಮೃತ್ಯುವೇ ಹೊರಡು, ಹೊರಡು. ಎಲೈ ಮೃತ್ಯುವೇ, ಯಾವ ಪುರುಷನನ್ನು ಮರಣಕ್ಕೆ ಈಡುಮಾಡಿದೆಯೋ ಆ ಪುರುಷನು ನಿನಗೇ ಸೇರಿದವನು. ಅವನನ್ನು ನೀನು ತೆಗೆದುಕೊಂಡು ನಿನ್ನದೇ ಆದ ಪಿತೃಯಾಣಮಾರ್ಗದಿಂದ ಹೊರಡು. ಇತರರು ದೇವಯಾನಮಾರ್ಗದಿಂದ ಪರಲೋಕಕ್ಕೆ ಹೋಗುವರು. ಎಲೈ ಮೃತ್ಯುದೇವನೇ, ನೋಡುವುದಕ್ಕೆ ನಿನಗೆ ಕಣ್ಣುಗಳಿವೆ, ಕೇಳುವುದಕ್ಕೆ ಕಿವಿಗಳಿವೆ. ಇಂತಹ ನಿನಗೆ ನಾನು ಹೇಳುವುದೇನೆಂದರೆ—ನಮ್ಮ ಸಂತತಿಯವರನ್ನು ಎಂದರೆ ಪುತ್ರಾದಿಗಳನ್ನು ಹಿಂಸಿಸಬೇಡ, ಮತ್ತು ವೀರರಾದ ನಮ್ಮ ಜನರನ್ನೂ ಹಿಂಸಿಸಬೇಡ. ಮೃತುಶಬ್ದವು ಮದ್ ಧಾತುವಿನಿಂದಾಗಲಿ, ಮುದ್ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು ಎಂದು ನಿರ್ವಚನಾಭಿಪ್ರಾಯವು.

ಈ ಋಕ್ಕಿನಲ್ಲಿ ಋಷಿಯು ಮೃತ್ಯುದೇವತೆಯನ್ನು ಸ್ತುತಿಸಿದಾನೆ. ಮೃತ್ಯುವೆಂದರೆ ಸಮಸ್ತಪ್ರಾಣಿಗಳನ್ನೂ ಸಂಹರಿಸುವವನು, ಕೊಲ್ಲುವವನು ಎಂದರ್ಥವು. ಮನುಷ್ಯರಿಗೂ ಇತರ ಪ್ರಾಣಿಗಳಿಗೂ ಅವರಿಗೆ ಕ್ಲಪ್ತವಾದ ಆಯುಃ ಪರಿಮಿತಿಯು ಮುಗಿದೊಡನೆಯೇ ರೋಗರುಜಿನಗಳು, ಅಪಘಾತಗಳು, ಮೊದಲಾದ ನಾನಾ ಕಾರಣಗಳಿಂದ ಅವರು ಮೃತರಾಗುವಂತೆ ಮಾಡುವನು. ಮೃತರಾದವರ ಪ್ರೇತಗಳು ಮೃತ್ಯುಲೋಕವನ್ನು ಹೋಗಿ ಸೇರುವುದಕ್ಕೇ ಪ್ರತ್ಯೇಕವಾದ ಮಾರ್ಗವಿದೆಯೆಂಬ ಅಂಶವನ್ನೂ ಋಷಿಯು ಇಲ್ಲಿ ಸೂಚಿಸಿದಾನೆ. ದೇವತೆಗಳು ಸಂಚಾರಮಾಡುವ ಮಾರ್ಗಕ್ಕೆ ದೇವಯಾನವೆಂದು ಹೆಸರು. ಈ ದೇವಯಾನವಲ್ಲದ ಬೇರೆ ಮಾರ್ಗವೆಂದರೆ ಪಿತೃಯಾಣವು. ಪಿತೃಗಳು ಪರಲೋಕಕ್ಕೆ ಹೋಗುವ ಮಾರ್ಗವು. ಈ ಮಾರ್ಗವು ಮೃತ್ಯು (ಯಮನ) ವಿನ ಸ್ವಂತ ಮಾರ್ಗವೆಂದು ಋಷಿಯು ವರ್ಣಿಸಿದಾನೆ. ಏಕೆಂದರೆ ಈ ಮಾರ್ಗದಿಂದಲೇ ಪಿತೃಗಳೂ, ಮೃತರಾದವರ ಪ್ರೇತಗಳೂ

ಮೃತ್ಯುಲೋಕಕ್ಕೆ ಹೋಗಿ ಸೇರುವುದರಿಂದ ಇದು ಮೃತ್ಯುವಿನ ಸ್ವಂತಮಾರ್ಗವೆಂದು ಋಷಿಯು ಕರೆದಿದಾನೆ. ಇಂತಹ ಮಾರ್ಗದಿಂದಲೇ ನೀನು ಹೊರಡು, ನಮ್ಮನ್ನೂ ನಮಗೆ ಸೇರಿದ ಪುತ್ರ ಪೌತ್ರ ದುಹಿತೃ ದೌಹಿತ್ರಾದಿ ಬಂಧು ವರ್ಗದವರನ್ನೂ ವೀರರಾದ ಭಟರನ್ನೂ ಹಿಂಸಿಸಬೇಡ ಎಂಬ ಪ್ರಾರ್ಥನೆಯೂ ಇಲ್ಲಿ ಉಕ್ತವಾಗಿದೆ. ಈ ಋಕ್ಕಿನಲ್ಲಿ ರುವ **ಚಕ್ಷುಷ್ಮತೇ ಶೃಣ್ವತೇ** ಎಂಬ ಶಬ್ದಗಳಿಗೆ ಭಾಷ್ಯಕಾರರು **ಅಪ್ರತಿಹತಸರ್ವೇಂದ್ರಿಯವಿಜ್ಞಾನಾಯ।** ಈ ಮೃತ್ಯುವಿನ ಕಣ್ಣು, ಕಿವಿ ಮೊದಲಾದ ಸರ್ವೇಂದ್ರಿಯಗಳಿಗೆ ಯಾರಿಂದಲೂ ತಡೆಯಲಾಗದ ಶಕ್ತಿಸಾಮರ್ಥ್ಯಗಳಿರು ವವು ಎಂದರ್ಥವನ್ನು ವಿವರಿಸಿದಾರೆ. ಅದರಲ್ಲಿಯೂ **ಚಕ್ಷುಷ್ಮತೇ ಶೃಣ್ವತೇ** ಎಂಬ ಶಬ್ದಗಳ ಪ್ರಯೋಗವು ಒಂದು ವಿಧವಾದ ಗೂಢಾರ್ಥವನ್ನು ಸೂಚಿಸುವುದಾಗಿದೆ. ಲೋಕದಲ್ಲಿ ಯಾವ ಸ್ಥಳದಲ್ಲಿಯೇ ಆಗಲಿ ಯಾವ ಪ್ರಾಣಿಯು ಮೃತವಾದರೂ ಆ ವಿಷಯವನ್ನು ಮೃತ್ಯುವು ತಕ್ಷಣವೇ ನೋಡುವನು, ತಕ್ಷಣವೇ ಅದನ್ನು ತನ್ನ ಚಾರರ ಮೂಲಕ ಕೇಳಿ ತಿಳಿಯುವನು. ಎಂದರೆ ಮೃತರಾದವರ ವಿಷಯವು ತಕ್ಷಣವೇ ಇವನಿಗೆ ತಿಳಿಯುವುದು ಎಂಬರ್ಥವು ಈ ಶಬ್ದ ಪ್ರಯೋಗದಿಂದ ವಿವೃತವಾಗಿದೆಯೆಂದು ತಿಳಿಯಬೇಕು.

ಸಂಹಿತಾಪಾಠಃ

ಮೃತ್ಯೋಃ ಪದಂ ಯೋಪಯಂತೋ ಯದೈತ ದ್ರಾಘೀಯ ಆಯುಃ
ಪ್ರತರಂ ದಧಾನಾಃ ।
ಆಪ್ಯಾಯಮಾನಾಃ ಪ್ರಜಯಾ ಧನೇನ ಶುದ್ಧಾಃ ಪೂತಾ ಭವತ ಯಜ್ಞಿ-
ಯಾಸಃ ॥ ೨ ॥

॥ ಪದಪಾಠಃ ॥

ಮೃತ್ಯೋಃ । ಪದಂ । ಯೋಪಯಂತಃ । ಯತ್ । ಐತ । ದ್ರಾಘೀಯಃ । ಆಯುಃ । ಪ್ರಽತರಂ ।
ದಧಾನಾಃ ।
ಆಽಪ್ಯಾಯಮಾನಾಃ । ಪ್ರಽಜಯಾ । ಧನೇನ । ಶುದ್ಧಾಃ । ಪೂತಾಃ । ಭವತ । ಯಜ್ಞಿಯಾಸಃ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಮೃತಸ್ಯ ಜ್ಞಾತಯಃ ಮೃತ್ಯೋಃ ಪರಾಗಚ್ಛತಸ್ತಸ್ಯ ಪದಂ ಪದ್ಯತೇಽಸ್ಮಿನ್ನಿತಿ ಪದಂ ಪಿತೃಯಾಣಃ। ತಂ ಯೋಪಯಂತೋ ವಿಮೋಹಯಂತಃ ಪರಿವರ್ಜಯಂತೋ ಯದ್ಯಸ್ಮಾದೈತ ದೇವಗಾನೀಯಪಥಾ ಗತವಂತಃ ತಸ್ಮಾದ್ದ್ರಾಘೀಯೋ ದೀರ್ಘತರಮಾಯುರ್ಜೀವನಂ ಪ್ರತರಂ ಪ್ರಕೃಷ್ಟತರಮುತ್ಕರ್ಷಂ ದಧಾನಾ ಧಾರಯಂತೋ ಭವಥ। ಕಿಂಚ ಹೇ ಯಜ್ಞಿಯಾಸೋ ಯಜ್ಞಾರ್ಹಾ ಯಜ್ಞಸಂಪಾದಿನೋ ಯಜಮಾನಾಃ ಪ್ರಜಯಾ ಪುತ್ರಪೌತ್ರಾದಿಕಯಾ ಧನೇನ ಗವಾಶ್ವಾದಿಕೇನ**

ಚಾಪ್ಯಾಯಮಾನಾಃ ವರ್ಧಮಾನಾಃ ಸಂತಃ ಶುದ್ಧಾ ಜನ್ಮಾಂತರಸಂಚಿತದುರಿತಕ್ಷಯಾಚ್ಛುದ್ಧಾ ಭವತ । ಪೂತಾ ವರ್ತಮಾನಜನ್ಮೋಪಚಿತದುರಿತಕ್ಷಯಾಚ್ಚ ಪೂತಾ ಭವತ ॥

॥ ಪ್ರತಿಪದಾರ್ಥ ॥

(ಎಲೈ ಮೃತನ ಸಂಬಂಧಿಗಳೇ) **ಮೃತ್ಯೋಃ**—ಮೃತ್ಯುವಿನ । **ಪದಂ**—ಸ್ಥಾನವನ್ನು । **ಯೋಪಯಂತಃ**—ಪರಿತ್ಯಜಿಸಿ । **ಯತ್ ಯಸ್ಮಾತ್ ಐತ**—ಯಾವ ದೇವಯಾನಮಾರ್ಗದಿಂದಲೇ ಸಂಚರಿಸುವಿರೋ ಆದರ ಫಲವಾಗಿ । **ದ್ರಾಘೀಯಃ**—ದೀರ್ಘವಾದ । **ಆಯುಃ**—ಆಯುಸ್ಸನ್ನು । **ಪ್ರತರಂ**—ಅತ್ಯುತ್ಕೃಷ್ಟವಾಗಿ । **ದಧಾನಾಃ**—ಹೊಂದಿದವರಾಗುತ್ತೀರಿ । **ಯಜ್ಞಿಯಾಸಃ**—ಎಲೈ ಯಜ್ಞಕರ್ತರಾದ ಯಜಮಾನರೇ । **ಪ್ರಜಯಾ**—ಪ್ರಜೆಗಳಿಂದಲೂ । **ಧನೇನ**—ಧನದಿಂದಲೂ ಕೂಡಿ । **ಆಪ್ಯಾಯಮಾನಾಃ**—ವೃದ್ಧಿಯನ್ನು ಹೊಂದಿದವರಾಗಿಯೂ । **ಶುದ್ಧಾಃ**—ಪಾಪರಹಿತರಾಗಿಯೂ । **ಪೂತಾಃ**—ನಿಷ್ಕಲ್ಮಷರಾಗಿಯೂ । **ಭವತ**—ಆಗುತ್ತೀರಿ.

॥ ಭಾವಾರ್ಥ ॥

ಎಲೈ ಮೃತನ ಸಂಬಂಧಿಗಳೇ, ಮೃತ್ಯುವಿನ ಸ್ಥಾನವನ್ನು ನೀವು ಪರಿತ್ಯಜಿಸಿ ಯಾವ ದೇವಯಾನಮಾರ್ಗದಿಂದಲೇ ಸಂಚರಿಸುವಿರೋ ಆದರ ಫಲವಾಗಿ ದೀರ್ಘವಾದ ಆಯುಸ್ಸನ್ನು ಅತ್ಯುತ್ಕೃಷ್ಟವಾಗಿ ಹೊಂದಿದವರಾಗುತ್ತೀರಿ. ಎಲೈ ಯಜ್ಞಕರ್ತರಾದ ಯಜಮಾನರೇ, ಪ್ರಜೆಗಳಿಂದಲೂ, ಧನದಿಂದಲೂ ಕೂಡಿ ವೃದ್ಧಿಯನ್ನು ಹೊಂದಿದವರಾಗಿಯೂ, ಪಾಪರಹಿತರಾಗಿಯೂ, ನಿಷ್ಕಲ್ಮಷರಾಗಿಯೂ ಆಗುತ್ತೀರಿ.

English Translation

If, avoiding the path of death, you go (on the path of the gods), assuming a longer and better life, (my friends) then may you, (O, sacrificers), diligent in sacrifice, enriched with progeny and affluence, be cleansed and pure.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಋಷಿಯು ಮೃತನಾದವನ ಜ್ಞಾತಿಗಳನ್ನು ಎಂದರೆ ಬಂಧುಬಾಂಧವರನ್ನುದ್ದೇಶಿಸಿ ಹೇಳಿರುವನು. ಈ ಋಕ್ಕಿನಲ್ಲಿಯೂ ಮುಂದಿನ ಕೆಲವು ಋಕ್ಕುಗಳಲ್ಲಿಯೂ ಮೃತನ ವಿಷಯದಲ್ಲಿ ಸಂತಾಪವನ್ನು ವ್ಯಕ್ತಪಡಿಸಿ ಮೃತನು ನಮ್ಮನ್ನು ಬಿಟ್ಟಗಲಿ ಈ ಲೋಕದಿಂದ ಹೊರಟುಹೋದನು. ಇನ್ನೂ ಜೀವಂತರಾಗಿ ಉಳಿದಿರುವ ನಾವು ಮೃತನಂತೆ ಮರಣಕ್ಕೀಡಾಗದೆ ಬಹುಕಾಲ ಜೀವಿಸುತ್ತಿದ್ದು ಪುತ್ರಪೌತ್ರಾದಿಗಳಿಂದಲೂ, ಧನಾದಿಗಳಿಂದಲೂ ವೃದ್ಧಿಯನ್ನೈದಿ ಬಾಳಿಬದುಕೋಣ ಎಂಬಭಿಪ್ರಾಯವನ್ನು ವ್ಯಕ್ತಪಡಿಸಿರುವನು. ಮೃತರಾದವರನ್ನು ನೋಡಿ ದುಃಖಪಡುತ್ತಾ ತಮಗೂ ಎಲ್ಲಿ ಈ ಗತಿಯು ಪ್ರಾಪ್ತವಾಗುವುದೋ ಎಂಬ ಭೀತಿಯಿಂದ ಚಿಂತಿಸುತ್ತಾ, ಇನ್ನೂ ಜೀವಂತರಾಗಿರುವವರೆಲ್ಲರೂ ಮೃತ್ಯುವಶರಾಗದೆ ಬಹುಕಾಲ ಜೀವಿಸುವಂತಾಗಲಿ ಎಂಬ ಪ್ರಾರ್ಥನೆಯು ಈ ಋಕ್ಕಿನಲ್ಲಿಯೂ ಮುಂದಿನ ಮೂರು ಋಕ್ಕುಗಳಲ್ಲಿಯೂ ಉಕ್ತವಾಗಿದೆ

**ಮೃತ್ಯೋಃ ಪದಂ ಯೋಪಯಂತಃ ಯತ್ ಐತ**—ಎಲೈ ಮೃತನ ಜ್ಞಾತಿಗಳೇ, ಮೃತ್ಯುವು ನಿಮ್ಮ ಬಂಧುವನ್ನು ತನ್ನದೇ ಆದ ಪಿತೃಯಾಣಮಾರ್ಗದಿಂದ ತನ್ನ ಲೋಕಕ್ಕೆ ಕೊಂಡೊಯ್ದಿದ್ದಾನೆ. ಆದರೆ, ಜೀವಂತ ರಾಗಿರುವ ನೀವು ಮೃತ್ಯುವಿನ ಮಾರ್ಗವಾದ ಪಿತೃಯಾನದ ಕಡೆಗೆ ಹೋಗಬೇಡಿರಿ. ಆ ಮಾರ್ಗವು ಮೃತರಾದವರಿಗೆ ಮಾತ್ರ ನಿರ್ದಿಷ್ಟವಾಗಿದೆ. ನೀವು ಆ ಮಾರ್ಗವನ್ನು ಬಿಟ್ಟು ದೇವಯಾನಮಾರ್ಗವನ್ನು ಆಶ್ರಯಿಸಿ. ಏಕೆಂದರೆ,

**ದ್ರಾಘೀಯ ಆಯುಃ ಪ್ರತರಂ ದಧಾನಾಃ**—ನೀವು ಬಹುಕಾಲದವರೆಗೆ ಜೀವಿಸಲು ದೀರ್ಘಾಯುಸ್ಸನ್ನು ಪಡೆಯಿರಿ. ದೀರ್ಘಾಯುಗಳಾದ ನಿಮಗೆ ಮೃತರ ಮಾರ್ಗವಾದ ಪಿತೃಯಾನದ ಹವ್ಯಾಸವೇಕೆ ?

**ಯಜ್ಞಿಯಾಸಃ ಪ್ರಜಯಾ ಧನೇನ ಆಪ್ಯಾಯಮಾನಾಃ ಶುದ್ಧಾಃ ಪೂತಾ ಭವತ**—ಎಲೈ ಬಾಂಧವರೇ, ನೀವು ಯಜ್ಞಾದಿಗಳನ್ನು ಮಾಡುತ್ತಾ ಪುತ್ರಪೌತ್ರಾದಿಸಂತತಿಯಿಂದಲೂ, ಧನಾದಿಗಳಿಂದಲೂ ಪ್ರವೃದ್ಧ ಮಾನರಾಗಿ ಹಿಂದಿನ ಜನ್ಮಗಳಲ್ಲಿಯೂ, ಈ ಜನ್ಮದಲ್ಲಿಯೂ ಮಾಡಿರುವ ಸಮಸ್ತದುರಿತ (ಪಾಪ) ಗಳಿಂದ ವಿಮುಕ್ತ ರಾಗಿ, ಶುದ್ಧರೆನಿಸಿ ಬಾಳಿ ಬದುಕಿ ಎಂಬ ಆಶ್ವಾಸನೆಯು ಇಲ್ಲಿ ಉಕ್ತವಾಗಿದೆ.

ಒಬ್ಬ ಬಂಧುವು ಮೃತನಾದ ಮಾತ್ರಕ್ಕೆ ಅವನಿಗೆ ಸಂಬಂಧಪಟ್ಟ ಇತರ ಜ್ಞಾತಿಗಳು ದುಃಖದಿಂದ ಬಹುಕಾಲ ತಪ್ತರಾಗಬೇಕಾಗಿಲ್ಲ. ಮೃತನ ಕರ್ಮಫಲದಿಂದ ಅವನಿಗೆ ಮರಣವು ಸಂಭವಿಸಿತು. ಆದರೆ ಜೀವಂತರಾಗಿರುವ ನೀವು ಸುಮ್ಮನೆ ದುಃಖಪಟ್ಟು ಪ್ರಯೋಜನವೇನು ? ನೀವು ಬಹುಕಾಲ ಜೀವಿಸಿರಲು ಪ್ರಯತ್ನಮಾಡಿರಿ. ನಿಮ್ಮ ಆಯುಃಪ್ರಮಾಣವು ಹೆಚ್ಚಲಿ. ಯಜ್ಞಾದಿಗಳನ್ನು ಮಾಡುತ್ತಾ ಆ ಸತ್ಕರ್ಮಫಲರೂಪವಾಗಿ ನೀವು ಪುತ್ರಪೌತ್ರಾದಿ ಗಳಿಂದಲೂ, ಧನಾದಿಗಳಿಂದಲೂ ದಿನೇದಿನೇ ವೃದ್ಧಿಯನ್ನೈದುತ್ತಾ ನಿಮ್ಮ ಪಾಪಗಳನ್ನು ಕಳೆದುಕೊಂಡು ಸುಖವಾಗಿ ಬಾಳಿ ಬದುಕಿರಿ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ

ಇಮೇ ಜೀವಾ ವಿ ಮೃತೈರಾವವೃತ್ರನ್ನಭೂದ್ಭದ್ರಾ ದೇವಹೂತಿರ್ನೋ ಅದ್ಯ ।
ಪ್ರಾಂಚೋ ಅಗಾಮ ನೃತಯೇ ಹಸಾಯ ದ್ರಾಘೀಯ ಆಯುಃ ಪ್ರತರಂ ದಧಾನಾಃ ॥ ೩ ॥

ಪದಪಾಠಃ ॥

ಇಮೇ । ಜೀವಾಃ । ವಿ । ಮೃತೈಃ । ಆ । ಅವವೃತ್ರನ್ । ಅಭೂತ್ । ಭದ್ರಾ । ದೇವಹೂತಿಃ । ನಃ । ಅದ್ಯ ।
ಪ್ರಾಂಚಃ । ಅಗಾಮ । ನೃತಯೇ । ಹಸಾಯ । ದ್ರಾಘೀಯಃ । ಆಯುಃ । ಪ್ರತರಂ । ದಧಾನಾಃ ॥೩॥

॥ ಸಾಯಣಭಾಷ್ಯಂ ॥

ಪೈತೃಮೇಧಿಕೇ ಕರ್ಮಣ್ಯಮಾತ್ಯಾ ಇಮೇ ಜೀವಾ ವಿ ಮೃತೈರಿತಿ ಸವ್ಯಾವೃತೋ ವ್ರಜಂತಿ । ಸೂತ್ರಿತಂ ಚ । ಇಮೇ ಜೀವಾ ವಿ ಮೃತೈರಿತಿ ಸವ್ಯಾವೃತೋ ವ್ರಜಂತಿ । ಆ. ಗೃ. ೪-೪-೯ । ಇತಿ ॥

ಇಮೇ ಜೀವಾ ಜೀವಂತಃ ಪುರುಷಾ ಮೃತೈಃ ಪಿತ್ರಾದಿಭಿಃ । ತೇಭ್ಯ ಇತ್ಯರ್ಥಃ । ವ್ಯಾವವೃತ್ರನ್ । ವ್ಯಾವೃತ್ತಾ ಭವಂತು । ಏತೇ ನ ಮ್ರಿಯಂತಾಮಿತಿ ಭಾವಃ । ಕಿಂಚಾದ್ಯಾಸ್ಮಿನ್ದಿನೇ ನೋಽಸ್ಮಾಕಮಶಾಚೇ ವಿಸೃಷ್ಟೇ ದೇವಹೂತಿಃ ದೇವಾನಾಮಾಹ್ವಾನಂ ಯತ್ರ ಸ ದೇವಹೂತಿಃ ಪಿತೃಮೇಧಾಖ್ಯೋ ಯಜ್ಞೋ ಭದ್ರಾ ಕಲ್ಯಾಣೋಽಭೂತ್ । ಭವತು । ತತ ಉತ್ತರಂ ವಯಂ ಪ್ರಾಂಚಃ ಪ್ರಾಙ್ಮುಖಾಂಚನಾ ಅಗಾಮ । ಗಚ್ಛೇಮ । ಪ್ರತ್ಯಂಚ ಇತಿ ಭಾವಃ । ನೃತಯೇ ನರ್ತನಾಯ ಕರ್ಮಣಿ ಗಾತ್ರವಿಕ್ಷೇಪಾಯ । ಸ್ವಕರ್ಮಾನುಷ್ಠಾನಾಯೇತಿ ಭಾವಃ । ಹಸಾಯ ಹಸನಾಯ ಪುತ್ರಾದಿಭಿಃ ಸಹ ಕ್ರೀಡನಾಯ । ಕೀದೃಶಾ ವಯಂ । ದ್ರಾಘೀಯ ಆಯುಃ ಪ್ರತರಂ ದಧಾನಾಃ ॥

॥ ಪ್ರತಿಪದಾರ್ಥ ॥

ಇಮೇ ಜೀವಾಃ—ಜೀವಿಸಿರುವ ಈ ಪುರುಷರು । ಮೃತೈಃ—ಮೃತರಾದ ಪಿತ್ರಾದಿಗಳಿಗಿಂತಲೂ । ವಿ ಆ ಅವವೃತ್ರನ್—ಬೇರೆಯಾಗಿ ಜೀವಿಸಲಿ । ಅದ್ಯ—ಈ ದಿನ । ನಃ—ನಮ್ಮ । ದೇವಹೂತಿಃ—ಪಿತೃಮೇಧವೆಂಬ ಯಜ್ಞವು । ಭದ್ರಾ—ಕಲ್ಯಾಣಕರವಾಗಿ । ಅಭೂತ್—ಆಗಲಿ । ಪ್ರಾಞ್ಚಃ—ಪೂರ್ವದಿಕ್ಕಿಗೆ ಅಭಿಮುಖರಾಗಿ । ಅಗಾಮ—ನಾವು ಹೋಗೋಣ । ನೃತಯೇ—ನರ್ತನಕ್ಕಾಗಿಯೂ । ಹಸಾಯ—ನಗುವುದಕ್ಕಾಗಿಯೂ । ದ್ರಾಘೀಯಃ—ಅತಿ ದೀರ್ಘವಾದ । ಆಯುಃ—ಆಯುಸ್ಸನ್ನು । ಪ್ರತರಂ—ಅತ್ಯುತ್ಕೃಷ್ಟವಾಗಿ । ದಧಾನಾಃ—ಹೊಂದಿದವರಾದ ನಾವು ಹೊರಡೋಣ.

॥ ಭಾವಾರ್ಥ ॥

ಜೀವಿಸಿರುವ ಈ ಪುರುಷರು ಮೃತರಾದ ಪಿತ್ರಾದಿಗಳಿಗಿಂತಲೂ ಬೇರೆಯಾಗಿ ಜೀವಿಸಲಿ. ಈ ದಿನ ನಮ್ಮ ಪಿತೃಮೇಧವೆಂಬ ಯಜ್ಞವು ಕಲ್ಯಾಣಕಾರಕವಾಗಿ ಆಗಲಿ. ನಾವು ಪೂರ್ವದಿಕ್ಕಿಗೆ ಅಭಿಮುಖರಾಗಿ ಹೋಗೋಣ. ನಾವು ನರ್ತನಕ್ಕಾಗಿಯೂ ಸಂತೋಷ ಜೀವನಕ್ಕಾಗಿಯೂ ಅತಿ ದೀರ್ಘವಾದ ಆಯುಸ್ಸನ್ನು ಅತ್ಯುತ್ಕೃಷ್ಟವಾಗಿ ಹೊಂದಿದವರಾಗಿ ಇರೋಣ

## English Translation

May those who are living remain separate from the dead : may our invocation of the gods to-day be successful : let us go forward to dancing and laughter, assuming a longer and better life.

॥ ವಿಶೇಷವಿಷಯಗಳು ॥

ಪಿತೃಮೇಧವೆಂಬ ಅಪರಕರ್ಮದಲ್ಲಿ **ಇಮೇ ಜೀವಾ ವಿ ಮೃತೈಃ** ಎಂಬ ಈ ಋಕ್ಕನ್ನು ಪಠಿಸುತ್ತಾ ಬಂಧುಗಳು ಆ ಸ್ಥಳದಿಂದ ಹಿಂತಿರುಗುವರೆಂದು ಆಶ್ವಲಾಯನಗೃಹ್ಯಸೂತ್ರದ **ಇಮೇ ಜೀವಾ ವಿ ಮೃತೈರಿತಿ ಸವ್ಯಾವೃತೋ ವ್ರಜಂತಿ** ಎಂಬ ಸೂತ್ರದಿಂದ (ಆ. ಗೃ. ೪-೪-೯) ವಿವೃತವಾಗಿರುವುದು.

ಈ ಋಕ್ಕಿನಲ್ಲಿಯೂ ಮೃತನನ್ನುದ್ದೇಶಿಸಿ ಅಪರಕರ್ಮವನ್ನು ಮಾಡುತ್ತಿರುವ ಬಂಧುಗಳ ಕರ್ತವ್ಯವನ್ನು ವಿವರಿಸಲಾಗಿದೆ.

**ಇಮೇ ಜೀವಾಃ ಮೃತೈಃ ವಿ ಅವವೃತ್ರನ್**—ಮೃತರಾದ ಪಿತ್ರಾದಿಗಳನ್ನುದ್ದೇಶಿಸಿ ಶ್ಮಶಾನಪ್ರದೇಶದಲ್ಲಿ ಅಂತ್ಯಕ್ರಿಯೆಗಳನ್ನು ಮಾಡಿ ಮುಗಿಸಿರುವುದರಿಂದ ಜೀವಂತರಾಗಿರುವ ಮೃತನ ಬಂಧುಗಳು ಈ ಶ್ಮಶಾನಪ್ರದೇಶವನ್ನು ಬಿಟ್ಟು ಹಿಂತಿರುಗಿ ತಮ್ಮ ಗೃಹಾಭಿಮುಖವಾಗಿ ಬರಲಿ.

**ಅದ್ಯ ನಃ ದೇವಹೂತಿಃ ಭದ್ರಾ ಅಭೂತ್**—ಈ ದಿವಸ ನಾವು ಮಾಡುತ್ತಿರುವ ಅಪರಕರ್ಮವು ಕೊನೆಗೊಂಡಿರುವುದರಿಂದ ನಮಗೆ ಮೃತಾಶೌಚವು ಪರಿಹಾರವಾಗಿರುವುದು. ಆದ್ದರಿಂದ ದೇವತೆಗಳನ್ನೂ ಪಿತೃಗಳನ್ನೂ ಉದ್ದೇಶಿಸಿ ನಾವು ಮಾಡುವ ಪಿತೃಮೇಧವೆಂಬ ಯಜ್ಞದಲ್ಲಿ ನಮಗೆ ಶುಭವುಂಟಾಗಲಿ.

**ಪ್ರಾಂಚೋ ಅಗಾಮ ನೃತಯೇ ಹಸಾಯ**—ಈ ಕರ್ಮವು ಮುಗಿದ ಬಳಿಕ ನಾವು ಮೃತನ ವಿಷಯಕವಾದ ದುಃಖದಿಂದ ಮುಕ್ತರಾಗಿ ಮುಂದೆ ನಮ್ಮ ನಮ್ಮ ಕರ್ಮಾನುಷ್ಠಾನಗಳಲ್ಲಿ ಉದ್ಯುಕ್ತರಾಗುವುದಕ್ಕೂ ಪುತ್ರಾದಿಗಳೊಂದ ಕೂಡಿ ಕ್ರೀಡಾದಿಗಳಿಂದಲೂ, ವಿನೋದದಿಂದಲೂ ಕಾಲಕಳೆಯುವುದಕ್ಕಾಗಿಯೂ ಈ ಶ್ಮಶಾನಪ್ರದೇಶದಿಂದ ಹಿಂತಿರುಗಿ ಪೂರ್ವಾಭಿಮುಖವಾಗಿ ನಮ್ಮ ಗೃಹಾದಿಗಳಿಗೆ ಹೋಗೋಣ.

**ದ್ರಾಘೀಯಃ ಆಯುಃ ಪ್ರತರಂ ದಧಾನಾಃ**—ದೀರ್ಘಾಯುಸ್ಸನ್ನು ಪಡೆದು ಬಹುಕಾಲ ಜೀವಿಸಿರುವುದಕ್ಕಾಗಿ ಈ ಪ್ರದೇಶದಿಂದ ಗೃಹಾಭಿಮುಖವಾಗಿ ಹೋಗೋಣ.

॥ ಸಂಹಿತಾಪಾಠ ॥

**ಇಮಂ ಜೀವೇಭ್ಯಃ ಪರಿಧಿಂ ದಧಾಮಿ ಮೈಷಾಂ ನು ಗಾದಪರೋ ಅರ್ಥಮೇತಂ ।**
**ಶತಂ ಜೀವಂತು ಶರದಃ ಪುರೂಚೀರಂತರ್ಮೃತ್ಯುಂ ದಧತಾಂ ಪರ್ವತೇನ ॥ ೪ ॥**

॥ ಪದಪಾಠಃ ॥

ಇಮಂ । ಜೀವೇಭ್ಯಃ । ಪರಿಽಧಿಂ । ದಧಾಮಿ । ಮಾ । ಏಷಾಂ । ನು । ಗಾತ್ । ಅಪರಃ । ಅರ್ಥಂ । ಏತಂ ।
ಶತಂ । ಜೀವಂತು । ಶರದಃ । ಪುರೂಚೀಃ । ಅಂತಃ । ಮೃತ್ಯುಂ । ದಧತಾಂ । ಪರ್ವತೇನ ॥೪॥

॥ ಸಾಯಣಭಾಷ್ಯಂ ॥

ಅನಯಾ ಜೀವರಕ್ಷಾರ್ಥಂ ಪಾಷಾಣಂ ಪರಿಧಿರೂಪೇಣ ಸ್ಥಾಪಯಂತಿ । ಜೀವೇಭ್ಯೋ ಜೀವದ್ಭ್ಯಃ ಪುತ್ರಪೌತ್ರಾದಿಭ್ಯಸ್ತೇಷಾಂ ರಕ್ಷಣಾರ್ಥಮೇವಂ ಪರಿಧಿಂ ಮೃತ್ಯೋಃ ಪರಿಧಾನಭೂತಂ

**ಪಾಷಾಣಂ ದಧಾಮಿ । ನಿದಧಾಮಿ । ತತ ಏಷಾಂ ಜೀವತಾಂ ಮಧ್ಯೇಽಪರೋಽನ್ಯ ಏತಮಿಮಮರ್ಥಂ ॥ ಅರ್ತೇರಿದಂ ರೂಪಂ ॥ ಗಂತವ್ಯಂ ಮರಣಾಖ್ಯಂ ಮಾರ್ಗಂ ನು ಕ್ಷಿಪ್ರಂ ಮಾ ಗಾತ್ । ಮಾ ಗಚ್ಛತು । ಏತದರ್ಥಂ ಪರಿಧಿಂ ಸ್ಥಾಪಯಾಮೀತಿ ಸಂಬಂಧಃ । ಕಿಂಚ ಪುರೂಚೀರ್ಬಹ್ವಂಚನಾ ಬಹುಗಮನಾಃ ಶತಂ ಶರದ ಏತತ್ಸಂಖ್ಯಾಕಾನ್ಸಂವತ್ಸರಾಂಜೀವಂತು । ಸ್ವಸ್ವಪ್ರಾಣಾನ್ಧಾರಯಂತು । ತಥಾ ಪರ್ವತೇನ ಶಿಲೋಚ್ಚಯೇನ ಮೃತ್ಯುಂ ಸರ್ವೇಷಾಂ ಮಾರಕಮೇತನ್ನಾಮಕಮಂತರ್ದಧತಾಂ । ಅಂತರ್ಹಿತಂ ಕುರ್ವಂತು । ಯಥಾ ನಾಗಚ್ಛತಿ ತಥಾ ಕುರ್ವತಾಮಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಜೀವೇಭ್ಯಃ**—ಜೀವಿಸಿರುವವರ ರಕ್ಷಣೆಗಾಗಿ । **ಇಮಂ ಪರಿಧಿಂ**—ಪಾಷಾಣದ ಈ ವಲಯವನ್ನು । **ದಧಾಮಿ**—ನಾನು ನಿರ್ಮಿಸುತ್ತೇನೆ । **ಏಷಾಂ**—ಈ ಜೀವಂತರಾದ ಪುರುಷರಲ್ಲಿ । **ಅಪರಃ**—ಯಾರೂ ಕೂಡ । **ಏತಂ ಅರ್ಥಂ**—ಈ ಮೃತ್ಯುಮಾರ್ಗವನ್ನು । **ನು**—ಕ್ಷಿಪ್ರವಾಗಿ । **ಮಾ ಗಾತ್**—ಹೊಂದದಿರಲಿ । **ಪುರೂಚೀಃ**—ಅತಿ ದೀರ್ಘವಾದವೂ । **ಶತಂ**—ಶತಸಂಖ್ಯಾಕವಾದವೂ ಆದ । **ಶರದಃ**—ಶರತ್ಕಾಲಗಳವರೆಗೆ । **ಜೀವಂತು** ಜೀವಿಸಲಿ । **ಪರ್ವತೇನ**—ಶಿಲಾ ಸಂಘಗಳಿಂದ । **ಮೃತ್ಯುಂ**—ಮೃತ್ಯುವನ್ನು । **ಅಂತಃ ದಧತಾಂ**—ಮರೆಸಿಡಲಿ.

॥ ಭಾವಾರ್ಥ ॥

ಜೀವಿಸಿರುವವರ ರಕ್ಷಣೆಗಾಗಿ ಪಾಷಾಣದ ಈ ವಲಯವನ್ನು ನಾನು ನಿರ್ಮಿಸುತ್ತೇನೆ. ಈ ಜೀವಂತರಾದ ಪುರುಷರಲ್ಲಿ ಯಾರೂ ಕೂಡ ಈ ಮೃತ್ಯುಮಾರ್ಗವನ್ನು ಹೊಂದದಿರಲಿ. ಅತಿ ದೀರ್ಘವೂ ಶತಸಂಖ್ಯಾತವೂ ಆದ ಶರತ್ಕಾಲಗಳವರೆಗೆ (ನೂರುವರ್ಷಗಳವರೆಗೆ) ಜೀವಿಸಲಿ. ಶಿಲಾಸಂಘಗಳಿಂದ ಮೃತ್ಯುವನ್ನು ಮರೆಸಿಡಲಿ.

## English Translation

I erect this circle (of stones) for (the protection of) the living, that none other of them may approach this path; may they live a hundred years, occupied by many holy works, and keep death hidden by this mound

॥ ವಿಶೇಷವಿಷಯಗಳು ॥

ಜೀವಂತರಾಗಿರುವ ಬಂಧುಬಾಂಧವರನ್ನು ಮೃತ್ಯುವು ಸಮೀಪಿಸದಿರುವುದಕ್ಕಾಗಿ ರಕ್ಷಾಬಂಧನಾರ್ಥವಾಗಿ ಸುತ್ತಲೂ ಸಣ್ಣಸಣ್ಣ ಕಲ್ಲುಗಳನ್ನು ಪರಿಧಿರೂಪದಿಂದ ಇಡುತ್ತಾ ಈ ಋಕ್ಕನ್ನು ಪಠಿಸುವುದು ರೂಢಿಯಾಗಿದೆ. ಲೋಕವ್ಯವಹಾರದಲ್ಲಿ ಒಂದು ಮನೆಯನ್ನಾಗಲಿ, ಗದ್ದೆಹೊಲಗಳನ್ನಾಗಲಿ ದುಷ್ಟಮೃಗಗಳಿಂದಲೂ ಇತರರಿಂದಲೂ ರಕ್ಷಿಸುವುದಕ್ಕಾಗಿ ಸುತ್ತಲೂ ಗೋಡೆಯನ್ನಾಗಲಿ ಬೇಲಿಯನ್ನಾಗಲಿ ಹಾಕುವುದು ರೂಢಿಯಷ್ಟೆ. ಅದರಂತೆ ಮೃತ್ಯುದೇವತೆಯು ಬಂದು ಜೀವಂತರಾಗಿರುವವರಲ್ಲಿ ಮತ್ತೆ ಇತರರನ್ನು ಕೊಂಡೊಯ್ಯದಂತೆ ಮಾಡುವುದಕ್ಕಾಗಿ ಈ ರೀತಿ ಕಲ್ಲುಗಳಿಂದ ಸುತ್ತಲೂ ಆವರಣವನ್ನು ಕಲ್ಪಿಸುವುದು ರೂಢಿಯಲ್ಲಿ ಬಂದಿರಬಹುದೆಂದು ಕಂಡುಬರುತ್ತದೆ. ಮೃತ್ಯುವನ್ನು ಬರದಂತೆ ಈ ರೀತಿ ತಡೆಗಟ್ಟುವುದು ಸಾಧ್ಯವಲ್ಲದಿದ್ದರೂ, ಹಿಂದಿನ ಕಾಲದಲ್ಲಿ ಈ ವಿಧವಾದ ಮೂಢನಂಬಿಕೆಯು ಜನರಲ್ಲಿ ಇದ್ದಂತೆ

ತಿಳಿಯಬರುತ್ತದೆ. ಇಂತಹ ಅನೇಕ ಮುನ್ನೆಚ್ಚರಿಕೆಯ ಕ್ರಮಗಳೂ, ಸಂಪ್ರದಾಯಗಳೂ ಈಗಲೂ ಕೆಲವುದೇಶದ ಕಾಡುಜನರಲ್ಲಿ ಕಂಡುಬರುವುದು. ತಮ್ಮಲ್ಲಿ ಒಬ್ಬನು ಮರಣಕ್ಕೀಡಾದನಂತರ ಉಳಿದ ಜನರಲ್ಲಿ ಯಾರಿಗೂ ಈ ಗತಿಯು ಬಾರದಿರುವಂತೆ ಮುನ್ನೆಚ್ಚರಿಕೆಯ ಈ ಕ್ರಮವನ್ನು ಅನುಸರಿಸುವುದು ಸಹಜವೇ ಆಗಿದೆ.

**ಇಮಂ ಜೀವೇಭ್ಯಃ ಪರಿಧಿಂ ದಧಾಮಿ**—ಜೀವಂತರಾಗಿ ಉಳಿದಿರುವ ನಮ್ಮನ್ನೂ ನಮ್ಮ ಪುತ್ರಪೌತ್ರ ರಾದಿಯಾದ ಸ್ವಜನರನ್ನೂ ಮೃತ್ಯುವು ಸಮೀಪಿಸದಿರುವುದಕ್ಕಾಗಿಯೂ, ಅವರ ರಕ್ಷಣಾರ್ಥವಾಗಿಯೂ ಅವರ ಸುತ್ತಲೂ ಪಾಷಾಣರೂಪವಾದ ಈ ಪರಿಧಿಯನ್ನು ಎಂದರೆ ಸುತ್ತಲೂ ಒಂದು ವಿಧವಾದ ಆವರಣವನ್ನು ಕಲ್ಪಿಸುತ್ತೇನೆ. ಅದಕ್ಕಾಗಿ ಸುತ್ತಲೂ ಕಲ್ಲುಗಳನ್ನು ಇಟ್ಟು ಮೃತ್ಯುವು ಇಲ್ಲಿಗೆ ಬರದಂತೆ ತಡೆಗಟ್ಟುತ್ತೇನೆ.

**ಏಷಾಂ ಅಪರಃ ಏತಂ ಅರ್ಥಂ ನು ಮಾ ಗಾತ್**—ಈಗ ನಮ್ಮಲ್ಲಿ ಒಬ್ಬ ಮನುಷ್ಯನು ಮೃತನಾಗಿರುವುದರಿಂದಲೇ ನಮಗೆ ಅತ್ಯಂತ ದುಃಖವಾಗಿದೆ. ಆದ್ದರಿಂದ ನಮ್ಮಲ್ಲಿ ಇನ್ನೂ ಯಾರಾದರೂ ಒಬ್ಬನು ಶೀಘ್ರವಾಗಿ ಮೃತ್ಯುವಿನ ಮಾರ್ಗವನ್ನು ಅನುಸರಿಸಿ ಹೋಗದಿರಲಿ ಎಂದರೆ ಮರಣಕ್ಕೆ ಈಡಾಗದಿರಲಿ. ಇದಕ್ಕಾಗಿ ಈ ವಿಧವಾದ ರಕ್ಷಣೆಯನ್ನು ನಿರ್ಮಿಸುವೆನು. ಈ ವಾಕ್ಯದಲ್ಲಿರುವ ಅರ್ಥಂ ಎಂಬ ಶಬ್ದಕ್ಕೆ—**ಅರ್ತೇರಿದಂ ರೂಪಂ ಗಂತವ್ಯಂ ಮರಣಾಖ್ಯಂ ಮಾರ್ಗಂ ।** ಹೋಗು ಎಂಬರ್ಥವಿರುವ **ಋ ಗತೌ** ಎಂಬ ಧಾತುವಿನಿಂದ ನಿಷ್ಪನ್ನವಾದ **ಅರ್ಥಂ** ಎಂಬ ಶಬ್ದಕ್ಕೆ ಮಾರ್ಗವು ಎಂದರ್ಥವೆಂದು ಭಾಷ್ಯಕಾರರು ಅರ್ಥವಿವರಣೆಮಾಡಿದಾರೆ.

**ಶತಂ ಜೀವಂತು ಶರದಃ ಪುರೂಚೀಃ**—ಈಗ ಜೀವಂತರಾಗಿ ಉಳಿದಿರುವವರು ಗಟ್ಟಿಮುಟ್ಟಾಗಿ ತಿರುಗಾಡುತ್ತಲಿದ್ದು ನೂರುವರ್ಷಗಳವರೆಗೆ ಬದುಕಲಿ. ಇಲ್ಲಿ ಶರದಃ ಎಂಬ ಶಬ್ದವು ಸಂವತ್ಸರ ಎಂಬರ್ಥವನ್ನು ಸೂಚಿಸುವುದು. ಶರತ್ ಶಬ್ದಕ್ಕೆ ಶರದೃತು ಅಥವಾ ಚಳಿಗಾಲವೆಂಬರ್ಥವು ಸಾಮಾನ್ಯವಾಗಿದ್ದರೂ, ಒಂದು ಸಂವತ್ಸರದಲ್ಲಿ ಶರತ್ಕಾಲವು ಒಂದಾವರ್ತಿಮಾತ್ರ ಬರುವುದರಿಂದ ಒಂದು ಸಂವತ್ಸರ ಪರಿಮಿತಿಯ ಕಾಲವನ್ನು ಸೂಚಿಸುವಾಗ ಶರತ್‌ಶಬ್ದವನ್ನು ಉಪಯೋಗಿಸುವುದು ವೇದಗಳಲ್ಲಿ ರೂಢಿಯಾಗಿದೆ. ಆದ್ದರಿಂದ ಇಲ್ಲಿ **ಶತಂ ಶರದಃ**-ನೂರು ವರ್ಷಗಳು ಎಂದು ಹೇಳಿದೆ. ಒಬ್ಬ ಪುರುಷನ ಜೀವಮಾನದ ಪೂರ್ಣವಾದ ಆಯುಃಪರಿಮಿತಿಯು ನೂರು ವರ್ಷಗಳೆಂದು ಹೇಳಲ್ಪಟ್ಟಿರುವುದರಿಂದ ನೂರುವರ್ಷಗಳವರೆಗೆ ಜೀವಿಸಲಿ ಎಂದು ಹೇಳುವಾಗ ಪುರುಷನು ತನ್ನ ಆಯುಃಪರಿಮಿತಿಯು ಪೂರ್ಣವಾಗುವವರೆಗೂ ಜೀವಿಸಲಿ ಎಂದಭಿಪ್ರಾಯವು,

**ಪರ್ವತೇನ ಮೃತ್ಯುಂ ಅಂತಃ ದಧತಾಂ**—ಪರ್ವತವೆಂದರೆ ಶಿಲೋಚ್ಚಯ, ಕಲ್ಲುಗಳ ಸಮೂಹ. ಅನೇಕ ಕಲ್ಲುಗಳನ್ನು ಉಪಯೋಗಿಸಿ ಮೃತ್ಯುವು ಅಲ್ಲಿಯೇ ಇದ್ದು ಹೊರಗೆ ಬರದಂತೆ ತಡೆಗಟ್ಟುವುದಕ್ಕಾಗಿ ಈ ಪರಿಧಿರೂಪವಾದ ಆವರಣವು ನಿರ್ಮಿತವಾಗಿದೆ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

**ಯಥಾಹಾನ್ಯನುಪೂರ್ವಂ ಭವಂತಿ ಯಥ ಋತವ ಋತುಭಿರ್ಯಂತಿ ಸಾಧು ।**

ಯಥಾ ನ ಪೂರ್ವಮಪರೋ ಜಹಾತ್ಯೇವಾ ಧಾತರಾಯೂಂಷಿ ಕಲ್ಪ-
ಯೈಷಾಂ ॥ ೫ ॥

॥ ಪದಪಾಠಃ ॥

ಯಥಾ । ಅಹಾನಿ । ಅನುऽಪೂರ್ವಂ । ಭವಂತಿ । ಯಥಾ । ಋತವಃ । ಋತುऽಭಿಃ । ಯಂತಿ । ಸಾಧು ।
ಯಥಾ । ನ । ಪೂರ್ವಂ । ಅಪರಃ । ಜಹಾತಿ । ಏವ । ಧಾತಃ । ಆಯೂಂಷಿ । ಕಲ್ಪಯ । ಏಷಾಂ ॥೫॥

॥ ಸಾಯಣಭಾಷ್ಯಂ ॥

ಯಥಾ ಯೇನ ಪ್ರಕಾರೇಣಾಹಾನ್ಯಹೋರಾತ್ರಾತ್ಮಕಾನಿ ದಿನಾನ್ಯನುಪೂರ್ವಂ ಪೂರ್ವಂ-ಪೂರ್ವಮನುಕ್ರಮೇಣ ಭವಂತಿ ಪರಿವರ್ತಂತೇ । ಯಥಾ ಚರ್ತವೋ ವಸಂತಾದಯ ಋತುಭಿಃ ಸಹ ಸಾಧು ಶೋಭನಮವಿಪರ್ಯಾಸೇನ ಯಾಂತಿ ಗಚ್ಛಂತಿ । ಯಥಾ ಚ ಪೂರ್ವಂ ಪೂರ್ವಕಾಲೀನಂ ಪಿತರಮಪರೋಽರ್ವಾಕ್ಕಾಲೀನಃ ಪುತ್ರೋ ನ ಜಹಾತಿ ನ ಪರಿತ್ಯಜತಿ ಪೂರ್ವಮರಣೇನ ॥ ಏವ್ಮೇವಂ ತೇನೈವೋಕ್ತಪ್ರಕಾರೇಣ ಹೇ ಧಾತಃ ಸರ್ವೇಷಾಂ ಧಾರಯಿತರೇತನ್ನಾಮಕ ದೇವ ಏಷಾಮಸ್ಮತ್ಕಾಲೀ-ನಾನಾಂ ಜೀವಾನಾಮಾಯೂಂಷಿ ಜೀವನಾನಿ ಕಲ್ಪಯ । ಸಮರ್ಥಯ । ಕುರ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಧಾತಃ—ಎಲೈ ಸೃಷ್ಟಿಕರ್ತನೇ । ಯಥಾ—ಯಾವ ಪ್ರಕಾರವಾಗಿ । ಅಹಾನಿ—ಅಹೋರಾತ್ರರೂಪವಾದ ದಿವಸಗಳು । ಅನುಪೂರ್ವಂ ಭವಂತಿ—ಒಂದೇ ರೀತಿಯಲ್ಲಿ ಪರಿವರ್ತನವನ್ನು ಹೊಂದುವುವೋ । ಯಥಾ—ಯಾವ ರೀತಿಯಲ್ಲಿ । ಋತವಃ—ವಸಂತಾದಿಋತುಗಳು । ಋತುಭಿಃ—ಇತರ ಋತುಗಳೊಡನೆ । ಸಾಧು—ಉತ್ತಮವಾದ ಪರಿವರ್ತವುಳ್ಳವಾಗಿ । ಯಂತಿ—ಸಂಚರಿಸುವುವೋ । ಯಥಾ—ಯಾವ ರೀತಿ । ಪೂರ್ವಂ—ಹಿಂದಿನ ಕಾಲದ ಪಿತೃವನ್ನು । ಅಪರಃ—ಮುಂದಿನ ಕಾಲದ ಪುತ್ರನು । ನ ಜಹಾತಿ—ಬಿಡದೇ ಅನುವರ್ತಿಸು-ವನೋ । ಏವ—ಅದೇ ರೀತಿಯಲ್ಲಿ । ಏಷಾಂ—ಇಲ್ಲಿ ಜೀವಿಸಿರುವವರ । ಆಯೂಂಷಿ—ಆಯಸ್ಸುಗಳನ್ನು । ಕಲ್ಪಯ ನಿರ್ಮಿಸು.

॥ ಭಾವಾರ್ಥ ॥

ಎಲೈ ಸೃಷ್ಟಿಕರ್ತನೇ, ಯಾವ ಪ್ರಕಾರವಾಗಿ ಅಹೋರಾತ್ರರೂಪವಾದ ದಿವಸಗಳು ಒಂದೇ ರೀತಿಯಲ್ಲಿ ಪರಿವರ್ತನವನ್ನು ಹೊಂದುವುವೋ, ಯಾವ ರೀತಿಯಲ್ಲಿ ವಸಂತಾದಿಋತುಗಳು ಇತರ ಋತುಗಳೊಡನೆ ಉತ್ತಮವಾದ ಪರಿವರ್ತನವುಳ್ಳವಾಗಿ ಸಂಚರಿಸುವುವೋ, ಯಾವ ರೀತಿ ಹಿಂದಿನ ಕಾಲದ ಪಿತೃವನ್ನು ಮುಂದಿನ ಕಾಲದ ಪುತ್ರನು ಬಿಡದೇ ಅನುವರ್ತಿಸುವನೋ ಅದೇ ರೀತಿಯಲ್ಲಿ ಇಲ್ಲಿ ಜೀವಿಸಿರುವವರ ಆಯುಸ್ಸುಗಳನ್ನು ನಿರ್ಮಿಸು.

## English Translation

As days pass along in succession; as seasons are duly followed by seasons; as the successor does not abandon his predecessor, so, Dhatri' support the lives of these (my kinsmen).

॥ ವಿಶೇಷವಿಷಯಗಳು ॥

**ಯಥಾ ಅಹಾನಿ ಅನುಪೂರ್ವಂ ಭವಂತಿ ಯಥಾ ಋತವಃ ಋತುಭಿಃ ಯಂತಿ ಸಾಧು**— ಒಂದು ದಿವಸ ಕಳೆದನಂತರ ಮತ್ತೊಂದು ದಿವಸವು ಬರುವುದು. ಋತುಗಳೂ ಅದರಂತೆಯೇ ಬೇಸಗೆಯು ಕಳೆದ ನಂತರ ಮಳೆಗಾಲವೂ, ಮಳೆಗಾಲವು ಕಳೆದ ನಂತರ ಚಳಿಗಾಲವೂ ಒಂದಾಗುತ್ತಲೊಂದು ಪರಿವರ್ತನಕ್ರಮದಿಂದ ಬರುತ್ತಲಿರುವವು ಎಂದರೆ ಕಾಲವು ಅವಿಚ್ಛಿನ್ನವಾಗಿ, ಸತತವಾಗಿ ನಡೆದು ಬರುತ್ತಿರುವುದು. ನಾವು ಎಷ್ಟೇ ವರ್ಷ ಬದುಕಿದ್ದರೂ ನಮ್ಮ ಜೀವಮಾನ ಕಾಲದಲ್ಲಿ ದಿನಗಳ ಮತ್ತು ಋತುಗಳ ಪರಿವರ್ತನೆಯು ಸಾಗುತ್ತಲೇ ಇರುವುದು. ಇದು ಸ್ವಾಭಾವಿಕವು.

**ಯಥಾ ಪೂರ್ವಂ ಅಪರಃ ನ ಜಹಾತಿ**—ಒಂದು ಸಂಸಾರದ ಜನರಲ್ಲಿ ಹಿರಿಯರಾಗಿರುವವರು ವಯಸ್ಸಿನಲ್ಲಿ ದೊಡ್ಡವರು. ಕಿರಿಯರು ಚಿಕ್ಕವರು. ಬಹಳ ವಯಸ್ಸಾಗಿರುವವರು ಮೃತರಾಗುವುದು ಸ್ವಾಭಾವಿಕವು. ವಯಸ್ಸಿನಲ್ಲಿ ಇನ್ನೂ ಕಿರಿಯರಾದವರು ಬಹುಕಾಲ ಜೀವಿಸಿದ್ದು ಅನಂತರ ಮೃತರಾಗುವರು. ಇದೂ ಸ್ವಾಭಾವಿಕವು. ಹಾಗಲ್ಲದೆ ಹಿರಿಯರಾದವರು ಎಂದರೆ ತಂದೆ ಮುಂತಾದವರು ಇನ್ನೂ ಜೀವಿಸಿರುವಾಗಲೇ ಕಿರಿಯರಾದವರು ಎಂದರೆ ಪುತ್ರಪೌತ್ರಾದಿಗಳು (ಮಕ್ಕಳು ಮೊಮ್ಮಕ್ಕಳು ಮುಂತಾದವರು) ಮೃತರಾಗುವುದು ಸ್ವಾಭಾವಿಕವಲ್ಲ. ಅದು ನಿಯಮಕ್ಕೆ ವಿರುದ್ಧವಾದುದು. ಆದ್ದರಿಂದ ಲೋಕನಿಯಮಕ್ಕೆ ವಿರುದ್ಧವಾಗಿ ತಂದೆತಾಯಿಗಳು ಮೃತರಾಗುವುದಕ್ಕಿಂತ ಮುಂಚೆಯೇ ಪುತ್ರಾದಿಗಳು ಮೃತರಾಗದಿರಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

**ಏವ ಧಾತಃ ಏಷಾಂ ಆಯೂಂಷಿ ಕಲ್ಪಯ**—ಆದ್ದರಿಂದ ಎಲೈ ಧಾತೃವೇ, ಎಂದರೆ ವಿಶ್ವನಿಯಾಮಕನೇ, ಈಗ ಜೀವಂತರಾಗಿರುವವರಲ್ಲಿ ಪುತ್ರಾದಿಗಳು ಪಿತ್ರಾದಿಗಳಿಗಿಂತ ಮುಂಚಿತವಾಗಿ ಮರಣಕ್ಕೀಡಾಗದಂತೆ ಅವರವರ ಆಯುಃಪರಿಮಾಣವನ್ನು ಕಲ್ಪಿಸು. ಲೋಕನಡವಳಿಕೆಗೆ ವಿರುದ್ಧವಾಗಿ ಕಿರಿಯರು ಹಿರಿಯರಿಗಿಂತ ಮುಂಚಿತವಾಗಿ ಮೃತರಾಗದಂತೆ ಜೀವಂತರಾಗಿರುವ ನಮ್ಮೆಲ್ಲರ ಆಯುಸ್ಸನ್ನು ನಮ್ಮ ವಯಸ್ಸಿಗನುಗುಣವಾಗಿ ಕಲ್ಪಿಸು ಎಂದು ಲೋಕನಿಯಾಮಕನಾದ ಧಾತೃವನ್ನು ಋಷಿಯು ಪ್ರಾರ್ಥಿಸಿದಾನೆ.

। ಸಂಹಿತಾಪಾಠಃ ।

**ಆ ರೋಹತಾಯುರ್ಜರಸಂ ವೃಣಾನಾ ಅನುಪೂರ್ವಂ ಯತಮಾನಾ ಯತಿಷ್ಠ ।**
**ಇಹ ತ್ವಷ್ಟಾ ಸುಜನಿಮಾ ಸಜೋಷಾ ದೀರ್ಘಮಾಯುಃ ಕರತಿ ಜೀವಸೇ ವಃ ॥ ೬ ॥**

॥ ಪದಪಾಠಃ ॥

ಆ । ರೋಹತ । ಆಯುಃ । ಜರಸಂ । ವೃಣಾನಾಃ । ಅನುऽಪೂರ್ವಂ । ಯತಮಾನಾಃ । ಯತಿ । ಸ್ಥ ।

ಇಹ । ತ್ವಷ್ಟಾ । ಸುಽಜನಿಮಾ । ಸಽಜೋಷಾಃ । ದೀರ್ಘಂ । ಆಯುಃ । ಕರತಿ । ಜೀವಸೇ । ವಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಮೃತಸ್ಯ ಸ್ವಜನಾಃ ಪುತ್ರಪೌತ್ರಾದಯಃ ಜರಸಂ ಜರಾಂ ವೃಣಾನಾಃ ಸಂಭಜಮಾನಾ ಯೂಯಮಾಯುರ್ಜೀವನಮಾ ರೋಹತ। ಅಧಿತಿಷ್ಠತ । ಅನುಪೂರ್ವಮಾನುಪೂರ್ವ್ಯೇಣ । ಅವ್ಯಯೀಭಾವಃ । ಪೂರ್ವೋ ಜ್ಯೇಷ್ಠಃ । ಜ್ಯೇಷ್ಠಾನುಪೂರ್ವ್ಯಾ ಯತಮಾನಾಃ ಪ್ರಯತ್ನಂ ಕುರ್ವಂತೋ ಯೂಯಂ ಯತಿ ಸ್ಥ ಯತ್ಸಂಖ್ಯಾಕಾ ಭವಥ । ಯಚ್ಛಬ್ದಾಚ್ಛಾಂದಸೋ ಡತಿಃ । ಸುಜನಿಮಾ ಶೋಭನಜನನಸ್ತ್ವಷ್ಟೈತನ್ನಾಮಕೋ ದೇವಃ ಸಜೋಷಾ ಭವದ್ಭಿಃ ಸಂಗತಃ ಸನ್ನಿಹಾಸ್ಮಿನ್ಕರ್ಮಣಿ ಪ್ರವೃತ್ತಾನಾಂ ವೋ ಯುಷ್ಮಾಕಂ ಜೀವಸೇ ಜೀವನಾಯ ದೀರ್ಘಂ ಪ್ರಭೂತಮಾಯುಃ ಕರತಿ । ಕರೋತು ॥

॥ ಪ್ರತಿಪದಾರ್ಥ ॥

(ಎಲೈ ಮೃತನ ಸಂಬಂಧಿಗಳೇ) ಯತಿ ಸ್ಥ—ನೀವು ಎಷ್ಟು ಜನರಿದ್ದರೂ ಸರಿ । ಜರಸಂ—ವಾರ್ಧಕ್ಯವನ್ನು । ವೃಣಾನಾಃ—ಹೊಂದುವವರೆಗೂ । ಆಯುಃ—ಜೀವನವನ್ನು । ಆ ರೋಹತ—ಆಶ್ರಯಿಸಿರಿ । ಅನುಪೂರ್ವಂ—ನಿಮ್ಮ ವಯಸ್ಸಿಗೆ ಅನುಗುಣವಾಗಿ । ಯತಮಾನಾಃ—ಕರ್ಮಪ್ರವರ್ತಕರಾಗಿರಿ । ಸುಜನಿಮಾ—ಉತ್ತಮವಾದ ಜನ್ಮವುಳ್ಳ । ತ್ವಷ್ಟಾ—ತ್ವಷ್ಟೃದೇವನು ಸಜೋಷಾಃ—ನಿಮ್ಮೊಡನೆ ಕೂಡಿಕೊಂಡು । ಇಹ—ಈ ಕರ್ಮದಲ್ಲಿ । ವಃ—ನಿಮ್ಮ । ಜೀವಸೇ—ಜೀವನಕ್ಕಾಗಿ ದೀರ್ಘಂ—ದೀರ್ಘವಾದ । ಆಯುಃ—ಆಯುಸ್ಸನ್ನು । ಕರತಿ—ಉಂಟುಮಾಡಲಿ.

॥ ಭಾವಾರ್ಥ ॥

ಎಲೈ ಮೃತನ ಸಂಬಂಧಿಗಳೇ, ನೀವು ಎಷ್ಟು ಜನರಿದ್ದರೂ ಸಹ ನೀವು ವಾರ್ಧಕ್ಯವನ್ನು ಹೊಂದುವವರೆಗೂ ಜೀವನವನ್ನು ಆಶ್ರಯಿಸಿರಿ. ನಿಮ್ಮ ವಯಸ್ಸಿಗೆ ಅನುಗುಣವಾಗಿ ಕರ್ಮಪ್ರವರ್ತಕರಾಗಿರಿ. ಉತ್ತಮವಾದ ಜನ್ಮವುಳ್ಳ ತ್ವಷ್ಟೃದೇವನು ನಿಮ್ಮೊಡನೆ ಕೂಡಿ ಈ ಕರ್ಮದಲ್ಲಿ ನಿಮ್ಮ ಜೀವನಕ್ಕಾಗಿ ದೀರ್ಘವಾದ ಆಯುಸ್ಸನ್ನು ಉಂಟುಮಾಡಲಿ

## English Translation

(You kinsmen of the dead man), choosing old age, attain length of life, striving one after the other, how many yau may be: may Twashtri, the creator of good races of men, being at one (with you), grant you (busy) at this (sacrifice), a long life

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕಿನ ಉತ್ತರಾರ್ಧದಲ್ಲಿ ಹೇಳಿರುವ ವಿಷಯವನ್ನೇ ಋಷಿಯು ಇಲ್ಲಿಯೂ ಪ್ರಕಾರಾಂತರದಿಂದ ವಿವರಿಸಿ ಪ್ರಾರ್ಥಿಸಿದ್ದಾನೆ. ಎಲೈ ಮೃತನ ಬಂಧು ಬಾಂಧವರೇ, ಸ್ವಜನಗಳೇ ನೀವು,

**ಆ ರೋಹತ ಆಯುಃ ಜರಸಂ ವೃಣಾನಾಃ**—ಇಲ್ಲಿ ಆಯುಃ ಜರಸಂ ಎಂದರೆ ಶರೀರವು ಜೀರ್ಣವಾಗು ವವರೆಗೂ ನಡೆದು ಬರುವ ಆಯುಃಪ್ರಮಾಣವು. ಅಲ್ಲಿಯವರೆಗೂ ನೀವು ನಿಮ್ಮ ಜೀವನವನ್ನು ನಡೆಸಿಕೊಂಡು ಬನ್ನಿ ಎಂದರೆ ಬಹುಕಾಲ ಜೀವಿಸಿರಿ.

**ಅನುಪೂರ್ವಂ ಯತಮಾನಾಃ ಯತಿ ಷ್ಠ**—ಬಹುಕಾಲ ಜೀವಿಸುವುದರಲ್ಲಿ ಒಂದು ಕ್ರಮವಿದೆ. ಈಗ ಜೀವಂತರಾಗಿರುವವರಲ್ಲಿ ಎಂದರೆ ಮೃತನಾದವನ ಸ್ವಜನರಲ್ಲಿ ಅನೇಕರಿರುವರಷ್ಟೆ. ಅವರ ವಯಸ್ಸು ನಾನಾ ವಿಧವಾಗಿರುವುದು. ಕೆಲವರಿಗೆ ಅರವತ್ತು ಎಪ್ಪತ್ತು ವರ್ಷಗಳಾಗಿರಬಹುದು, ಇನ್ನೂ ಕೆಲವರಿಗೆ ನಲವತ್ತು ಐವತ್ತು ವರ್ಷಗಳಾಗಿರಬಹುದು, ಮತ್ತೆ ಕೆಲವರಿಗೆ ಇಪ್ಪತ್ತೂ ಮೂವತ್ತಾಗಿರಬಹುದು. ಇನ್ನೂ ಕೆಲವರು ಕೇವಲ ಬಾಲಕ ರಾಗಿರಬಹುದು. ಈ ರೀತಿ ವಯಸ್ಸಿನಲ್ಲಿ ವ್ಯತ್ಯಾಸವಿರುವುದರಿಂದ ಲೋಕ ನಿಯಮಕ್ಕೆ ಅನುಸಾರವಾಗಿ ಎಲ್ಲರೂ ಬಹುಕಾಲ ಜೀವಿಸಿದರೂ ಅದರಲ್ಲಿ ಮೊದಲು ಹೆಚ್ಚು ವಯಸ್ಸಾದವರು ಮೃತರಾದ ಬಳಿಕ ಅವರಿಗಿಂತ ಕಿರಿಯವರು ತಾವೂ ತಮ್ಮ ಆಯುಃಪರಿಮಿತಿಯಕಾಲ ಜೀವಿಸಿದ್ದು ಅನಂತರ ಮೃತರಾಗಬೇಕು. ಎಂದರೆ ಮೊದಲು ಹಿರಿಯರು ಅನಂತರ ಕಿರಿಯರು ಮೃತರಾಗಬೇಕು. ಈ ಕ್ರಮವನ್ನು ಬಿಟ್ಟು ಇದಕ್ಕೆ ವಿರುದ್ಧವಾಗಿ ಕಿರಿಯರಾದವರು ಹಿರಿಯರಿ ಗಿಂತ ಮುಂಚೆಯೇ ಮೃತರಾಗುವುದು ಅಸ್ವಾಭಾವಿಕವು. ಆ ರೀತಿ ಆಗದಂತೆ ಲೋಕನಿಯಮಕ್ಕನುಸಾರವಾಗಿ ಬದುಕಿರಿ. ಈ ವಿಷಯದಲ್ಲಿ ತ್ವಷ್ಟೃದೇವನು (ಅಥವಾ ತ್ವಷ್ಟೃವೆಂದರೆ ಇಲ್ಲಿ ವಿಶ್ವನಿಯಾಮಕನೆಂದೇ ಭಾವಿಸಬಹುದು) ನಿಮ್ಮೊಂದಿಗೆ ಸಹಕರಿಸಿ ನೀವು ದೀರ್ಘಕಾಲ ಜೀವಿಸುವಂತೆ ನಿಮ್ಮ ಆಯುಃಪರಿಮಿತಿಯನ್ನು ಹೆಚ್ಚಿಸಲಿ ಎಂದು ಋಷಿಯು ಪ್ರಾರ್ಥಿಸಿದ್ದಾನೆ.

॥ ಸಂಹಿತಾಪಾಠಃ ॥

ಇಮಾ ನಾರೀರವಿಧವಾಃ ಸುಪತ್ನೀರಾಂಜನೇನ ಸರ್ಪಿಷಾ ಸಂ ವಿಶಂತು ।
ಅನಶ್ರವೋಽನಮೀವಾಃ ಸುರತ್ನಾ ಆ ರೋಹಂತು ಜನಯೋ ಯೋನಿ-
ಮಗ್ರೇ ॥ ೭ ॥

॥ ಪದಪಾಠಃ ॥

ಇಮಾಃ । ನಾರೀಃ । ಅವಿಧವಾಃ । ಸುಽಪತ್ನೀಃ । ಆಽಅಂಜನೇನ । ಸರ್ಪಿಷಾ । ಸಂ । ವಿಶಂತು ।
ಅನಶ್ರವಃ । ಅನಮೀವಾಃ । ಸುಽರತ್ನಾಃ । ಆ । ರೋಹಂತು । ಜನಯಃ । ಯೋನಿಂ । ಅಗ್ರೇ ॥ ೭ ॥

॥ ಸಾಯಣಭಾಷ್ಯಂ ॥

ಅವಿಧವಾಃ । ಧವಃ ಪತಿಃ । ಅವಿಗತಪತಿಕಾಃ । ಜೀವದ್ಭರ್ತೃಕಾ ಇತ್ಯರ್ಥಃ । ಸುಪತ್ನೀಃ ಶೋಭನಪತಿಕಾ ಇಮಾ ನಾರೀರ್ನಾರ್ಯಃ ಆಂಜನೇನ ಸರ್ವತೋಽಂಜನಸಾಧನೇನ ಸರ್ಪಿಷಾ ಘೃತೇನಾಕ್ತನೇತ್ರಾಃ ಸತ್ಯಃ ಸಂ ವಿಶಂತು । ಸ್ವಗೃಹಾನ್ಪ್ರವಿಶಂತು । ತಥಾನಶ್ರವೋಽಶ್ರುವರ್ಜಿತಾ ಅರುದತ್ಯೋಽನಮೀವಾಃ । ಅಮೀವಾ ರೋಗಃ । ತದ್ವರ್ಜಿತಾಃ ಮಾನಸದುಃಖವರ್ಜಿತಾ ಇತ್ಯರ್ಥಃ । ಸುರತ್ನಾಃ ಶೋಭನಧನಸಹಿತಾ ಜನಯಃ । ಜನಯಂತ್ಯಪತ್ಯಮಿತಿ ಜನಯೋ ಭಾರ್ಯಾಃ । ತಾ ಅಗ್ರೇ ಸರ್ವೇಷಾಂ ಪ್ರಥಮಮತ ಏವ ಯೋನಿಂ ಗೃಹಮಾರೋಹಂತು । ಆಗಚ್ಛಂತು ॥

॥ ಪ್ರತಿಪದಾರ್ಥ ॥

**ಅವಿಧವಾಃ**—ಮಾಂಗಲ್ಯವುಳ್ಳವರೂ । **ಸುಪತ್ನೀಃ**—ಉತ್ತಮವಾದ ಪತಿಗಳುಳ್ಳವರೂ ಆದ । **ಇಮಾಃ ನಾರೀಃ**—ಈ ಸ್ತ್ರೀಯರು । **ಆಂಜನೇನ**—ಅಂಜನಯುಕ್ತವಾದ । **ಸರ್ಪಿಷಾ**—ಕಾಡಿಗೆಗಳಿಂದ ಅಲಂಕರಿಸಿಕೊಂಡು । **ಸಂ ವಿಶಂತು**—ಗೃಹಗಳಿಗೆ ಪ್ರವೇಶಿಸಲಿ । **ಅನಶ್ರವಃ**—ಕಣ್ಣೀರಿಲ್ಲದವರಾಗಿಯೂ । **ಅನಮೀವಾಃ**—ರೋಗ ರಹಿತರಾಗಿಯೂ । **ಸುರತ್ನಾಃ**—ಉತ್ತಮವಾದ ಆಭರಣಗಳುಳ್ಳವರಾಗಿಯೂ ಇರುವ । **ಜನಯಃ**—ಪತ್ನಿಯರು । **ಅಗ್ರೇ**—ಎಲ್ಲರಿಗಿಂತಲೂ ಮೊದಲೇ । **ಯೋನಿಂ**—ಗೃಹವನ್ನು । **ಆ ರೋಹಂತು**—ಪ್ರವೇಶಿಸಲಿ.

॥ ಭಾವಾರ್ಥ ॥

ಮಾಂಗಲ್ಯವುಳ್ಳವರೂ, ಉತ್ತಮವಾದ ಪತಿಗಳುಳ್ಳವರೂ ಆದ ಸ್ತ್ರೀಯರು ಅಂಜನದಿಂದ ಕೂಡಿದ ಕಾಡಿಗೆಗಳಿಂದ ಅಲಂಕರಿಸಿಕೊಂಡು ಗೃಹಗಳಿಗೆ ಪ್ರವೇಶಿಸಲಿ. ಕಣ್ಣೀರಿಲ್ಲದವರಾಗಿಯೂ ರೋಗರಹಿತರಾಗಿಯೂ ಉತ್ತಮವಾದ ಆಭರಣಗಳುಳ್ಳವರಾಗಿಯೂ ಇರುವ ಪತ್ನಿಯರು ಎಲ್ಲರಿಗಿಂತಲೂ ಮೊದಲೇ ಗೃಹವನ್ನು ಪ್ರವೇಶಿಸಲಿ.

## English Translation

Let these women who are not widows, who have good husbands, enter (anointed) with unguent and butter. Let women without tears, without sorrow, and decorated with jewels, first proceed to the house,

॥ ವಿಶೇಷವಿಷಯಗಳು ॥

ಇದುವರೆಗೂ ಮೃತನಾದವನ ಬಂಧು ಮಿತ್ರಾದಿಗಳ ವಿಷಯವನ್ನು ಸಾಮಾನ್ಯವಾಗಿ ತಿಳಿಸಿದ್ದರೂ ಈಗ ಈ ಋಕ್ಕಿನಲ್ಲಿ ಸ್ತ್ರೀಯರ ವಿಷಯವನ್ನು ಪ್ರಸ್ತಾಪಿಸಿ ಅವರು ಯಾವ ರೀತಿ ನಡೆದುಕೊಳ್ಳಬೇಕೆಂಬ ವಿಚಾರವನ್ನೂ ಮುಂದಿನ ಋಕ್ಕಿನಲ್ಲಿ ಮೃತನ ಪತ್ನಿಯ ವಿಚಾರವನ್ನೂ ಋಷಿಯು ಹೇಳಿದಾನೆ.

**ಅವಿಧವಾಃ ಸುಪತ್ನೀಃ ಇಮಾಃ ನಾರೀಃ ಆಂಜನೇನ ಸರ್ಪಿಷಾ ಸಂ ವಿಶಂತು**—ಧವಃ ಎಂದರೆ ಪತಿಯು ; ವಿಧವಾ ಎಂದರೆ ಪತಿಯಿಲ್ಲದಿರುವ ಎಂದರೆ ಪತಿಯು ಮೃತನಾಗಿ ಪತಿಯನ್ನು ಕಳೆದುಕೊಂಡಿರುವ ಸ್ತ್ರೀಯು

ಅವಿಧವಾಃ ಎಂದರೆ ಪತಿಯನ್ನು ಕಳೆದುಕೊಂಡ ಸ್ತ್ರೀಯಲ್ಲದವರು ಎಂದರೆ ಜೀವಿಸಿರುವ ಪುರುಷರ ಪತ್ನಿಯರು ಎಂದರ್ಥ. **ಸುಪತ್ನೀಃ** ಎಂದರೆ ಶೋಭನಪತಿಕಾಃ ಉತ್ತಮರಾದ ಪತಿಗಳನ್ನುಳ್ಳವರು, ಉತ್ತಮಪುರುಷ ಪತ್ನಿಯರು ಆದ್ದರಿಂದ ವಿಧವೆಯರಲ್ಲದವರೂ ಉತ್ತಮಪುರುಷರ ಪತ್ನಿಯರೂ ಆದ ಈ ಸ್ತ್ರೀಯರು ತಮ್ಮ ಸಂಬಂಧಿಯಾದ ಈ ಮೃತನಾದ ಪುರುಷನ ವಿಷಯದಲ್ಲಿ ದುಃಖಿಸುವುದನ್ನು ಬಿಟ್ಟು ಘೃತಾದಿ ಅಂಜನದ್ರವ್ಯ (ಕಾಡಿಗೆ, ಕಪ್ಪು) ಗಳಿಂದ ಅಲಂಕರಿಸಿಕೊಂಡು ತಮ್ಮ ತಮ್ಮ ಗೃಹಗಳನ್ನು ಪ್ರವೇಶಿಸಲಿ. ಎಂದು ಈ ವಾಕ್ಯದ ಅಭಿಪ್ರಾಯವು. ತಮ್ಮ ಸಂಬಂಧಿಯಾದ ಪುರುಷನ (ತಂದೆಯ ಅಥವಾ ಸಹೋದರ ಮುಂತಾದ ಬಂಧುವಿನ) ಮೃತಶರೀರವನ್ನು ಹಿಂಬಾಲಿಸಿ ಶ್ಮಶಾನಭೂಮಿಗೆ ಬಂದು ದುಃಖಿಸುತ್ತಿರುವ ಸ್ತ್ರೀಯರನ್ನು ಉದ್ದೇಶಿಸಿ ಋಷಿಯು ಈ ವಾಕ್ಯವನ್ನೂ, ಈ ಋಕ್ಕಿನ ಉತ್ತರಾರ್ಧದಲ್ಲಿರುವ ವಾಕ್ಯವನ್ನೂ ಹೇಳಿದಾನೆ.

**ಅನಶ್ರವಃ ಅನಮೀವಾಃ ಸುರತ್ನಾಃ ಜನಯಃ ಯೋನಿಂ ಅಗ್ರೇ ಆ ರೋಹಂತು**—ಈ ಸ್ತ್ರೀಯರು ಕಣ್ಣೀರಿಟ್ಟು ಅಳುತ್ತಿರುವುದನ್ನು ನಿಲ್ಲಿಸಿ, ಮನಸ್ಸಿನಲ್ಲಿರುವ ದುಃಖದ ಆವೇಶವನ್ನು ಕಮ್ಮಿಮಾಡಿ, ಎಂದರೆ ಸಾಧ್ಯವಾದ ಮಟ್ಟಿಗೂ ಮನಸ್ಸಿನ ದುಃಖವನ್ನು ತಡೆದುಕೊಂಡು ಬಳಿಕ ಉತ್ತಮವಾದ ಒಡವೆಗಳಿಂದಲಂಕೃತರಾಗಿ ಅವರವರ ಮನೆಯನ್ನು ಪುರುಷರಿಗಿಂತ ಮೊದಲೇ ಪ್ರವೇಶಿಸಲಿ. ಎಂದರೆ ಶ್ಮಶಾನದಿಂದ ಹಿಂತಿರುಗಿ ಬಂದ ಬಂಧು ಬಾಂಧವರಲ್ಲಿ ಮೊದಲು ಸ್ತ್ರೀಯರು ಗೃಹವನ್ನು ಪ್ರವೇಶಿಸಲಿ, ಅನಂತರ ಪುರುಷರು ಪ್ರವೇಶಿಸಲಿ ಎಂದಭಿಪ್ರಾಯವು.

। ಸಂಹಿತಾಪಾಠಃ ।

**ಉದೀರ್ಷ್ವ ನಾರ್ಯಭಿ ಜೀವಲೋಕಂ ಗತಾಸುಮೇತಮುಪ ಶೇಷ ಏಹಿ ।**
**ಹಸ್ತಗ್ರಾಭಸ್ಯ ದಿಧಿಷೋಸ್ತವೇದಂ ಪತ್ಯುರ್ಜನಿತ್ವಮಭಿ ಸಂ ಬಭೂಥ ॥ ೮ ॥**

। ಪದಪಾಠಃ ।

**ಉತ್ । ಈರ್ಷ್ವ । ನಾರಿ । ಅಭಿ । ಜೀವऽಲೋಕಂ । ಗತಽಅಸುಂ । ಏತಂ । ಉಪ । ಶೇಷೇ । ಆ । ಇಹಿ ।**
**ಹಸ್ತಽಗ್ರಾಭಸ್ಯ । ದಿಧಿಷೋಃ । ತವ । ಇದಂ । ಪತ್ಯುಃ । ಜನಿಽತ್ವಂ । ಅಭಿ । ಸಂ । ಬಭೂಥ ॥ ೮ ॥**

। ಸಾಯಣಭಾಷ್ಯಂ ।

**ದೇವರಾದಿಕಃ ಪ್ರೇತಪತ್ನೀಮುದೀರ್ಷ್ವ ನಾರೀತ್ಯನಯಾ ಭರ್ತೃಸಕಾಶಾದುತ್ಥಾಪಯೇತ್ । ಸೂತ್ರಿತಂ ಚ । ತಾಮುತ್ಥಾಪಯೇದ್ದೇವರಃ ಪತಿಸ್ಥಾನೀಯೋಂತೇವಾಸೀ ಜರದ್ದಾಸೋ ವೋದೀರ್ಷ್ವ ನಾರ್ಯಭಿ ಜೀವಲೋಕಂ । ಆ. ಗೃ. ೪-೨-೧೮ । ಇತಿ ॥**

**ಹೇ ನಾರಿ ಮೃತಸ್ಯ ಪತ್ನಿ ಜೀವಲೋಕಂ ಜೀವಾನಾಂ ಪುತ್ರಪೌತ್ರಾದೀನಾಂ ಲೋಕಂ ಸ್ಥಾನಂ ಗೃಹಮಭಿಲಕ್ಷ್ಯೋದೀರ್ಷ್ವ । ಅಸ್ಮಾತ್ಸ್ಥಾನಾದುತ್ತಿಷ್ಠ ॥ ಈರ ಗತೌ ಅದಾದಿಕಃ ॥ ಗತಾ-**

ಸುಮುಪಕ್ರಾಂತಪ್ರಾಣಮೇತಂ ಪತಿಮುಪ ಶೇಷೇ ತಸ್ಯ ಸಮೀಪೇ ಸ್ವಪಿಷಿ । ತಸ್ಮಾತ್ತ್ವಮೇಹಿ । ಆಗಚ್ಛ । ಯಸ್ಮಾತ್ತ್ವಂ ಹಸ್ತಗ್ರಾಭಸ್ಯ ಪಾಣಿಗ್ರಾಹಂ ಕುರ್ವತೋ ದಿಧಿಷೋರ್ಗರ್ಭಸ್ಯ ನಿಧಾತುಸ್ತವಾಸ್ಯ ಪತ್ಯುಃ ಸಂಬಂಧಾದಾಗತಮಿದಂ ಜನಿತ್ವಂ ಜಾಯಾತ್ವಮಭಿಲಕ್ಷ್ಯ ಸಂ ಬಭೂಥ ಸಂ ಭೂತಾಸಿ ಅನುಮರಣನಿಶ್ಚಯಮಕಾರ್ಷೀಃ ತಸ್ಮಾದಾಗಚ್ಛ

। ಪ್ರತಿಪದಾರ್ಥ ।

ನಾರಿ—ಎಲೈ ಮೃತನ ಪತ್ನಿಯೇ । ಜೀವಲೋಕಂ ಅಭಿ—ನಿನ್ನ ಪುತ್ರಪೌತ್ರಾದಿಗಳ ಸ್ಥಾನವಾದ ಗೃಹಕ್ಕೆ । ಉದೀರ್ಷ್ವ—ಇಲ್ಲಿಂದ ಎದ್ದು ಹೊರಡು । ಗತಾಸುಂ—ಕಳೆದುಹೋದ ಜೀವವುಳ್ಳ । ಏತಂ—ಈ ಪತಿಯ ಹತ್ತಿರ । ಉಪ ಶೇಷೇ—ನೀನು ಮಲಗಿರುವೆ । ಏಹಿ—ಮನೆಗೆ ಬಾ । ಹಸ್ತಗ್ರಾಭಸ್ಯ—ನಿನ್ನ ಪಾಣಿಗ್ರಹಣವನ್ನು ಮಾಡಿದವನೂ । ದಧಿಷೋಃ—ಗರ್ಭಕಾರಕನೂ ಆದ । ತವ ಪತ್ಯುಃ—ನಿನ್ನ ಪತಿಯೊಡನೆ । ಇದಂ ಜನಿತ್ವಂ ಅಭಿ—ನಿನ್ನ ಪತ್ನೀತ್ವವನ್ನು ಗೌರವಿಸಿ । ಸಂ ಬಭೂಥ—ಅವನೊಡನೆ ಮರಣವನ್ನು ಹೊಂದಲು ನಿಶ್ಚಯಿಸಿರುವೆ. (ಅದನ್ನು ಬಿಟ್ಟು ಗೃಹಕ್ಕೆ ಬಾ).

। ಭಾವಾರ್ಥ ।

ಎಲೈ ಮೃತನ ಪತ್ನಿಯೇ, ನಿನ್ನ ಪುತ್ರಪೌತ್ರಾದಿಗಳ ಸ್ಥಾನವಾದ ಗೃಹಕ್ಕೆ ಇಲ್ಲಿಂದ ಎದ್ದು ಹೊರಡು. ಕಳೆದುಹೋದ ಜೀವವುಳ್ಳ ಈ ಪತಿಯ ಹತ್ತಿರ ನೀನು ಮಲಗಿರುವೆ. ಮನೆಗೆ ಬಾ. ನಿನ್ನ ಪಾಣಿಗ್ರಹಣವನ್ನು ಮಾಡಿದವನೂ, ಗರ್ಭಕಾರಕನೂ ಆದ ನಿನ್ನ ಪತಿಯೊಡನೆ ನಿನ್ನ ಪತ್ನೀತ್ವವನ್ನು ಗೌರವಿಸಿ ಅವನೊಡನೆ ಮರಣವನ್ನು ಹೊಂದಲು ನೀನು ನಿಶ್ಚಯಿಸಿರುವೆ. ಅದನ್ನು ಬಿಟ್ಟು ಗೃಹಕ್ಕೆ ಬಾ.

## English Translation

Rise, woman, (and go) the world of living beings: come, this man near whom you sleep is lifeless: you have enjoyed this state of being the wife of your husband, the suitor who took you by the hand.

॥ ವಿಶೇಷವಿಷಯಗಳು ॥

ಮೃತನಾದವನ ಪತ್ನಿಯ ಮೈದುನನೇ ಮೊದಲಾದವರು ಮೃತನ ಶರೀರವನ್ನು ಅಪ್ಪಿಕೊಂಡು ಸಹಗಮನ ಮಾಡಲುದ್ಯುಕ್ತಳಾಗಿರುವ ಅವನ ಪತ್ನಿಯನ್ನು **ಉದೀರ್ಷ್ವ ನಾರಿ** ಎಂಬ ಋಕ್ಕಿನಿಂದ ಆ ಮೃತಶರೀರದ ಸಮೀಪದಿಂದ ಬಿಡಿಸಿ (ಎಬ್ಬಿಸಿ) ಕರೆತರಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ತಾಮುತ್ಥಾಪಯೇದ್ದೇವರಃ ಪತಿಸ್ಥಾನೀಯೋಽನ್ತೇವಾಸೀ ಜರದ್ದಾಸೋ ವೋದೀರ್ಷ್ವ ನಾರ್ಯಭಿ ಜೀವಲೋಕಂ** ಎಂಬ ಸೂತ್ರದಿಂದ (ಆ. ಗೃ. ೪-೨-೧೮) ವಿವೃತವಾಗಿರುವುದು.

**ಹೇ ನಾರಿ ಜೀವಲೋಕಂ ಅಭಿ ಉತ್ ಈರ್ಷ್ವ**—ಎಲೈ ಮೃತನಾದವನ ಪತ್ನಿಯೇ, ಶೋಕಿಸಬೇಡ. ಎದ್ದೇಳು. ಮೃತಶರೀರವಲ್ಲೇನಿದೆ ? ಅವನ ಆತ್ಮವು ಆ ಶರೀರವನ್ನು ಬಿಟ್ಟು ಪರಲೋಕಕ್ಕೆ ಹೊರಟುಹೋಗಿದೆ. ಆದ್ದರಿಂದ ಆ ಮೃತ ಕಳೇಬರದ ಸಂಪರ್ಕವನ್ನು ಬಿಟ್ಟು ಇತ್ತ ಬಾ. ಜೀವಂತರಾಗಿರುವ ಬಂಧುಬಾಂಧವರು ವಾಸಿಸು

ತ್ತಿರುವ ಈ ಲೋಕವನ್ನು ಎಂದರೆ ನಿನ್ನ ಮನೆಗೆ ಹೊರಡಲುದ್ಯುಕ್ತಳಾಗು. ಜೀವಂತರಾಗಿರುವವರು, ಜೀವಂತರು ವಾಸಿಸುವ ಈ ಲೋಕದಲ್ಲಿ ತಮ್ಮ ಆಯುಸ್ಸಿರುವವರೆಗೆ ವಾಸಿಸಲು ಪ್ರಯತ್ನಿಸಬೇಕೇ ಹೊರತು ಪರಲೋಕಕ್ಕೆ ಹೊರಟು ಹೋದ ಬಳಿಕ ಇಲ್ಲಿ ಉಳಿದಿರುವ ಜಡಶರೀರದಲ್ಲಿ ಮಮತೆಯನ್ನಿಡುವುದು ಯುಕ್ತವಲ್ಲ. ಆದ್ದರಿಂದ ಈ ನಿನ್ನ ಪತಿಯ ಮೃತಶರೀರವನ್ನು ಅಲ್ಲಿಯೇ ಬಿಟ್ಟು ಎದ್ದು ಬಾ.

**ಗತಾಸುಂ ಏತಂ ಉಪ ಶೇಷೇ, ಏಹಿ**—ಎಲೈ ಸ್ತ್ರೀಯೇ, ನೀನು ಅಪ್ಪಿಕೊಂಡಿರುವ ಈ ನಿನ್ನ ಪತಿಯ ಶರೀರದಲ್ಲಿ ಪ್ರಾಣವಿರುವುದಿಲ್ಲ. ಅದು ಮೃತಕಳೇಬರವು, ಕೇವಲ ಜಡವಸ್ತುವು. ಅದರ ಸಮೀಪದಲ್ಲಿ ಏಕೆ ಮಲಗಿರುವೆ ? ಶರೀರದಿಂದ ಹೊರಟುಹೋದ ಪ್ರಾಣವು ಪುನಃ ಹಿಂದಕ್ಕೆ ಬರುವುದಿಲ್ಲ. ಆದ್ದರಿಂದ ಆ ಶರೀರವನ್ನು ಬಿಟ್ಟು ಎದ್ದು ಬಾ.

ಮೃತನಾದವನ ಪತ್ನಿಯು ತನ್ನ ಪತಿಯ ಕಳೇಬರವನ್ನು ಬಿಟ್ಟಿರಲಾರದೆ ಅದನ್ನಪ್ಪಿಕೊಂಡು ದುಃಖಿಸುತ್ತಾ ಯಾರ ಮಾತನ್ನೂ ಕೇಳದೆ ಆ ಶರೀರದೊಡನೆ ಸಹಗಮನಮಾಡಬೇಕೆಂದು ಉದ್ಯುಕ್ತಳಾಗಿರುವಾಗ ಆ ಸ್ತ್ರೀಯನ್ನು ಆ ಪ್ರಯತ್ನದಿಂದ ತಪ್ಪಿಸಿ ಹಿಂದಕ್ಕೆ ಮನೆಗೆ ಕರೆತರುವುದಕ್ಕಾಗಿ ಆ ಸ್ತ್ರೀಯ ಮೈದುನನು ಎಂದರೆ ಮೃತನಾದವನ ತಮ್ಮನು ಪ್ರಯತ್ನಿಸುವನು. (ಪ್ರಯತ್ನಿಸಬೇಕು) । ಮೃತನಿಗೆ ತಮ್ಮನಿಲ್ಲದಿದ್ದರೆ ಆ ಕಾರ್ಯವನ್ನು ಎಂದರೆ ಮೃತನ ಪತ್ನಿಗೆ ಸಮಾಧಾನವನ್ನು ಮಾಡಿ ಹಿಂದಕ್ಕೆ ಕರೆತರುವ ಕಾರ್ಯವನ್ನು ಪುರೋಹಿತ, ಶಿಷ್ಯ ಅಥವಾ ಬಹಳಕಾಲದಿಂದಲೂ ಮೃತನ ಸೇವೆ ಮಾಡುತ್ತಿದ್ದ ಸೇವಕ ಇವರಲ್ಲಿ ಯಾರಾದರೂ ಆ ಕಾರ್ಯವನ್ನು ಮಾಡಬಹುದು. ಪ್ರಕೃತ ಋಕ್ಕಿನಲ್ಲಿ ಸ್ತ್ರೀಯ ಮೈದುನನು (ಮೃತನ ತಮ್ಮನು) ಅವಳನ್ನು ಉದ್ದೇಶಿಸಿ **ಉದೀರ್ಷ್ವ** ಎಂಬ ವಾಕ್ಯದಿಂದ ಸಂಬೋಧಿಸಿರುವನು.

**ಹಸ್ತಗ್ರಾಭಸ್ಯ ದಿಧಿಷೋಃ ತವ ಪತ್ಯುಃ ಇದಂ ಜನಿತ್ವಂ ಅಭಿ ಸಂ ಬಭೂಥ**—ಎಲೈ ಸ್ತ್ರೀಯೇ, ವಿವಾಹಕಾಲದಲ್ಲಿ ನಿನ್ನ ಪಾಣಿಗ್ರಹಣಮಾಡಿದವನೂ ಪುತ್ರಾರ್ಥವಾಗಿ ನೀನು ಗರ್ಭವನ್ನು ಧರಿಸುವಂತೆ ಮಾಡಲು ಸಮರ್ಥನಾಗಿದ್ದ ಈ ನಿನ್ನ ಪತಿಯ ವಿಷಯದಲ್ಲಿ ಪತ್ನಿಯ ಧರ್ಮವನ್ನನುಸರಿಸಿ ಅವನ ಮೃತಶರೀರದೊಡನೆ ಸಹಗಮನ ಮಾಡಬೇಕೆಂದು ಮನಸ್ಸನ್ನು ಮಾಡಿರುವೆ. ಆದರೆ ಹಾಗೆ ಮಾಡಬೇಡ. ನಿನಗೆ ವಂಶಾಭಿವೃದ್ಧಿಕಾರಕನಾದ ಪುತ್ರನು ಜನಿಸಿಲ್ಲವಾದಕಾರಣ ಅಂತಹ ಪುತ್ರನನ್ನು ದೇವರನಿಂದ (ಮೈದುನನಿಂದ) ಪಡೆದು ನಿನ್ನ ಪತಿಗೆ ಪರಲೋಕದಲ್ಲಿ ಸದ್ಗತಿಯನ್ನುಂಟುಮಾಡುವುದಕ್ಕಾಗಿ ಈ ನಿನ್ನ ಕೃತನಿಶ್ಚಯವನ್ನು ತ್ಯಜಿಸಿ ಪತಿಯ ಶರೀರವನ್ನು ಬಿಟ್ಟು ಎದ್ದು ಬಾ ಎಂದು ದೇವರನು (ಪತ್ನಿಯ ಮೈದುನನು ಎಂದರೆ ಪತಿಯ ತಮ್ಮನು) ಈ ವಾಕ್ಯವನ್ನು ಆ ಸ್ತ್ರೀಯನ್ನುದ್ದೇಶಿಸಿ ಹೇಳಿರುವನು.

ಪೂರ್ವಕಾಲದಲ್ಲಿ ಎಂದರೆ ವೇದಗಳ ಕಾಲದಲ್ಲಿ ಪತಿಯು ಪುತ್ರರಹಿತನಾಗಿ ಮೃತನಾದರೆ ಅವನ ಪತ್ನಿಯು ಪುತ್ರಾರ್ಥವಾಗಿ ದೇವರನಿಂದ ಎಂದರೆ ತನ್ನ ಪತಿಯ ಸಹೋದರ (ಮೈದುನ) ನಿಂದ ಒಬ್ಬ ಪುತ್ರನನ್ನು ಮಾತ್ರ ಪಡೆಯುವ ಪದ್ಧತಿ ಇದ್ದಿತು. ಈ ಕಾರಣಕ್ಕಾಗಿ ಪ್ರಕೃತ ಋಕ್ಕಿನಲ್ಲಿ ಮೃತನ ಪತ್ನಿಯನ್ನು ಸಹಗಮನಮಾಡಬೇಕೆಂದು ಮೈದುನನು ತಡೆದು ಅವಳನ್ನು ಹಿಂದಕ್ಕೆ ಎಂದರೆ ತನ್ನ ಮನೆಗೆ ಕರೆತರುವ ವಿಷಯವು ಉಕ್ತವಾಗಿದೆ. ಮೈದುನನು ತನ್ನ ಅಣ್ಣನ ಪತ್ನಿಯಲ್ಲಿ ಸಂಭೋಗಿಸಬಹುದೇ, ಆ ಪದ್ಧತಿ ಇತ್ತೇ ಎಂಬ ವಿಷಯದಲ್ಲಿ ಯಾವ ಅನುಮಾನಕ್ಕೂ ಕಾರಣ ಇಲ್ಲದಂತೆ ಋಗ್ವೇದದಲ್ಲಿಯೇ ಬೇರೊಂದು ಕಡೆ ಈ ವಿಷಯದ ಪ್ರಸ್ತಾಪವಿದೆ—

**ಕುಹ ಸ್ವಿದ್ದೋಷಾ ಕುಹ ವಸ್ತೋರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋಷತುಃ ।**
**ಕೋ ವಾಂ ಶಯುತ್ರಾ ವಿಧವೇವ ದೇವರಂ ಮರ್ಯಂ ನ ಯೋಷಾ ಕೃಣುತೇ ಸಧಸ್ಥ ಆ ॥**
(ಋ. ಸಂ. ೧೦-೪೦-೨)

ಈ ಋಕ್ಕಿನ ಋಷಿಯಾದ ಘೋಷಾ ಎಂಬ ಸ್ತ್ರೀಯು ಅಶ್ವಿನೀ ದೇವತೆಗಳನ್ನುದ್ದೇಶಿಸಿ ಈ ರೀತಿ ಹೇಳುವಳು— ಎಲೈ ಅಶ್ವಿನೀದೇವತೆಗಳೇ, ನೀವು ರಾತ್ರೆ ಎಲ್ಲಿದ್ದಿರಿ ? ಹಗಲು ಎಲ್ಲಿದ್ದಿರಿ ? ಈ ದಿವಸ ನಿಮ್ಮ ವಿಹಾರವು ಎಲ್ಲಿತ್ತು ? ಯಜ್ಞಮಾಡುವ ಯಾವ ಯಜಮಾನನ ಗೃಹದಲ್ಲಿ ಮಲಗಿದ್ದಿರಿ ? ಮೃತನಾದವನ ಪತ್ನಿಯು ರಾತ್ರಿಕಾಲದಲ್ಲಿ ಸಂಭೋಗಕ್ಕಾಗಿ ತನ್ನ ಮೈದುನನನ್ನು (ಪತಿಯ ತಮ್ಮನನ್ನು) ಆಶ್ರಯಿಸುವಂತೆ ಯಾವ ಯಜಮಾನನ ಗೃಹದಲ್ಲಿ ರಾತ್ರಿಯನ್ನು ಕಳೆದಿರಿ ? ಎಂದು ಅಶ್ವಿನೀದೇವತೆಗಳನ್ನು ವಿಧವಿಧವಾಗಿ ಪ್ರಶ್ನೆಮಾಡಿದಾಳೆ. ಈ ಋಕ್ಕಿನಲ್ಲಿ **ವಿಧವೇವ ದೇವರಂ ಮರ್ಯಂ ನ ಯೋಷಾ ಕೃಣುತೇ ಸಧಸ್ಥ ಆ** ಎಂಬ ವಾಕ್ಯವು ಪ್ರಕೃತ ವಿಷಯವನ್ನು ಸ್ಪಷ್ಟವಾಗಿ ತಿಳಿಸುವುದು. ತನ್ನ ಪತಿಯನ್ನು ಕಳೆದುಕೊಂಡ ವಿಧವೆಯಾದ ಪತ್ನಿಯು ಮನುಷ್ಯಸಂಬಂಧಿಯಾದ (ಮನುಷ್ಯನಾದ) ತನ್ನ ಮೈದುನನ ಜತೆಯಲ್ಲಿ ಒಂದೇ ಹಾಸಿಗೆಯಲ್ಲಿ ಮಲಗಿ ಅಭಿಮುಖ (ಎದುರು)ನನ್ನಾಗಿ ಮಾಡಿ ಉಪಚರಿಸುವಂತೆ ಎಂದು ಈ ವಾಕ್ಯದ ಅರ್ಥವು. ಯಾಸ್ಕರು ಈ ವಿಷಯವಾಗಿ—

**ಕ್ವ ವಸಥಃ । ಕೋ ವಾಂ ಶಯನೇ ವಿಧವೇವ ದೇವರಂ । ದೇವರಃ ಕಸ್ಮಾತ್ । ದ್ವಿತೀಯೋ ವರ ಉಚ್ಯತೇ । ವಿಧವಾ ವಿಧಾತೃಕಾ ಭವತಿ । ವಿಧವನಾದ್ವಾ ।**

(ನಿ. ೩-೧೫)

ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ—ಎಲೈ ಅಶ್ವಿನೀದೇವತೆಗಳೇ, ನೀವು ರಾತ್ರೆ ಎಲ್ಲಿ ಮಲಗಿದ್ದಿರಿ ? ಪತಿಹೀನಳಾದ ವಿಧವೆಯು ತನ್ನ ಮೈದುನನೊಡನೆ ಒಂದೇ ಹಾಸಿಗೆಯಲ್ಲಿ ಮಲಗುವಂತೆ ನೀವು ಬೇರೆ ಎಲ್ಲಿಯಾದರೂ ಮಲಗಿ ರಾತ್ರೆಯನ್ನು ಕಳೆದಿರಾ ? ಇಲ್ಲಿ ದೇವರ ಶಬ್ದಕ್ಕೆ ಎರಡನೆಯ ವರ ಎಂದರ್ಥವು. ಮೃತನಾದ ಪತಿಯೇ ಆ ಸ್ತ್ರೀಗೆ ಮೊದಲನೆಯ ವರನು. ದೇವರ ಎಂದರೆ ಮೈದುನನು ವಿಧವೆಗೆ ಎರಡನೇ ವರನು. ವಿಧವಾ ಎಂಬ **ಶಬ್ದಕ್ಕೆ ತನ್ನನ್ನು ಪೋಷಿಸಿ ಕಾಪಾಡುವ ಪತಿಯನ್ನು** ಕಳೆದುಕೊಂಡ ಸ್ತ್ರೀಯು, ಪತಿಹೀನಳಾದ ಸ್ತ್ರೀಯು ಅಥವಾ **ಪತಿಯು ಮೃತನಾದ ಮೇಲೆ ಇತರರ ಬಳಿಗೆ (ಓಡಿ) ಹೋಗಿ ಅವರನ್ನು ಆಶ್ರಯಿಸುವವಳು** ಎಂದು ದೇವರಶಬ್ದಕ್ಕೂ ವಿಧವಾಶಬ್ದಕ್ಕೂ ಅವಯವಾರ್ಥವನ್ನು ಹೇಳಿದಾರೆ—

ಸ್ಮೃತ್ಯಾದಿಗ್ರಂಥಗಳಲ್ಲಿ ಈರೀತಿ ಹೇಳಿರುವುದು ಕಂಡುಬರುತ್ತದೆ—

**ಯಸ್ಯಾ ಮ್ರಿಯೇತ ಕನ್ಯಾಯಾ ವಾಚಾ ಸತ್ಯೇ ಕೃತೇ ಪತಿಃ ।**
**ಕಾಮನೇನ ವಿಧಾನೇನ ನಿಜೋ ವಿಂದೇತ ದೇವರಃ ॥**

ವಿವಾಹಕಾಲದಲ್ಲಿ ವಾಙ್ನಿಶ್ಚಯಕರ್ಮವು ಮುಗಿದಿದ್ದರೂ ವಿವಾಹಕರ್ಮವು ಪೂರ್ತಿಯಾಗಿ ನೆರವೇರುವುದಕ್ಕೆ **ಮೊದಲೇ** ನಿಶ್ಚಿತನಾಗಿದ್ದ ಪತಿಯು ಮೃತನಾದರೆ ಆ ಪತಿಯ ತಮ್ಮನು ಎಂದರೆ ಮೈದುನನು ಕ್ರಮವಾಗಿ ಆ ಸ್ತ್ರೀಯನ್ನು ಮದುವೆಮಾಡಿಕೊಳ್ಳಬೇಕು ಎಂದು ಹೇಳಿದೆ. ಒಂದುವೇಳೆ ಮೃತನಾದ ಪುರುಷನಿಗೆ ಸಹೋದರನು

ಇಲ್ಲದಿದ್ದ ಪಕ್ಷದಲ್ಲಿ ಅವನ ಸಂಬಂಧದವರಲ್ಲಿ ಅರ್ಹರಾದವರು ಮೃತನ ಪತ್ನಿಯನ್ನು ಪರಿಗ್ರಹಿಸಬೇಕೆಂದು ಹೇಳಿದೆ. ಪರಾಶರಋಷಿಯು—

> ನಷ್ಟೇ ಮೃತೇ ಪ್ರವ್ರಜಿತೇ ಕ್ಲೀಬೇ ಚ ಪತಿತೇಽಪತೌ ।
> ಪಂಚಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ ॥

ಎಂದು ಹೇಳಿದಾರೆ. ಎಂದರೆ, ತಾನು ವಿವಾಹವಮಾಡಿಕೊಂಡ ಪತಿಯು ಮೃತನಾಗುವುದು ಅಥವಾ ಬಹುಕಾಲದವರೆಗೆ ದೇಶಾಂತರಕ್ಕೆ ಹೊರಟುಹೋಗಿ ಬರುವುದು ಅಥವಾ ಬದುಕಿರುವುದೇ ನಿಶ್ಚಯವಿಲ್ಲದಿರುವುದು, ಸಂಭೋಗಕ್ಕೆ ಅನರ್ಹನಾಗಿ ನಪುಂಸಕನಾಗಿರುವುದು, ಪತಿತ, ಎಂದರೆ ಅಸತ್ಕರ್ಮಾದಿಗಳಿಂದ ಜಾತಿಭ್ರಷ್ಟನಾಗಿರುವುದು, ಈ ಸಂದರ್ಭಗಳಲ್ಲಿ ಆ ಸ್ತ್ರೀಯು ಬೇರೊಬ್ಬ ಪತಿಯನ್ನು ವಿವಾಹವಾಗಬಹುದೆಂದು ಹೇಳಿದೆ. ಪತಿಯು ಮೃತನಾದರೆ ಅವನ ತಮ್ಮ ಅಥವಾ ಪತ್ನಿರವ ಸಂಬಂಧಿಯೋರ್ವನು ಆ ಸ್ತ್ರೀಯನ್ನು ಮದುವೆಮಾಡಿಕೊಳ್ಳುವ ಪದ್ಧತಿಯು ಇತರ ಅನೇಕ ದೇಶಗಳ ಕಾಡುಜನರಲ್ಲಿ ಈಗಲೂ ಕಂಡುಬರುತ್ತದೆ.

॥ ಸಂಹಿತಾಪಾಠಃ ॥

ಧನುರ್ಹಸ್ತಾದಾದದಾನೋ ಮೃತಸ್ಯಾಸ್ಮೇ ಕ್ಷತ್ರಾಯ ವರ್ಚಸೇ ಬಲಾಯ ।
ಅತ್ರೈವ ತ್ವಮಿಹ ವಯಂ ಸುವೀರಾ ವಿಶ್ವಾಃ ಸ್ಪೃಧೋ ಅಭಿಮಾತೀರ್ಜಯೇಮ ॥ ೯ ॥

॥ ಪದಪಾಠಃ ॥

ಧನುಃ । ಹಸ್ತಾತ್ । ಆಽದದಾನಃ । ಮೃತಸ್ಯ । ಅಸ್ಮೇ ಇತಿ । ಕ್ಷತ್ರಾಯ । ವರ್ಚಸೇ । ಬಲಾಯ ।
ಅತ್ರ । ಏವ । ತ್ವಂ । ಇಹ । ವಯಂ । ಸುಽವೀರಾಃ । ವಿಶ್ವಾಃ । ಸ್ಪೃಧಃ । ಅಭಿಽಮಾತೀಃ । ಜಯೇಮ ॥

॥ ಸಾಯಣಭಾಷ್ಯಂ ॥

ಕ್ಷತ್ರಿಯಸ್ಯ ಧನುರ್ಹಸ್ತಾದಿತ್ಯನಯಾ ಧನುಃ ಪ್ರಹರೇತ್ । ಸೂತ್ರಿತಂ ಚ । ಧನುರ್ಹಸ್ತಾದಾದದಾನೋ ಮೃತಸ್ಯೇತಿ ಧನುಃ । ಆ. ಗೃ. ೪-೨-೨೦ । ಇತಿ ॥

ಮೃತಸ್ಯ ಕ್ಷತ್ರಿಯಸ್ಯ ಹಸ್ತಾದ್ಧನುರಾದದಾನಃ । ಕಿಮರ್ಥಂ । ಅಸ್ಮೇ ಅಸ್ಮಾಕಂ ಕ್ಷತ್ರಾಯ ಪ್ರಜಾಪಾಲನಸಮರ್ಥಾಯ ಬಲಾಯ ವರ್ಚಸೇ ತೇಜಸೇ ಬಲಾಯ ಸೇನಾಲಕ್ಷಣಾಯ ಚ ಧನುರಾದದಾನೋಽಹಂ ಬ್ರವೀಮೀತಿ ಶೇಷಃ । ಕಿಮಿತಿ । ತ್ವಮತ್ರೈವಾಸ್ಮಿನ್ಸ್ಥಾನ ಏವ ಭವ ವಯಂ ಚೇಹಾಸ್ಮಿಲ್ಲೋಕೇ ಸುವೀರಾಃ ಸುಪುತ್ರಯುಕ್ತಾ ಭವಂತೋ ವಿಶ್ವಾಃ ಸರ್ವಾನಭಿಮಾತೀರಭಿಮನ್ಯಮಾನಾನ್ ಸ್ಪೃಧಃ ಸಂಘರ್ಷಯಿತ್ರೀನ್ಬಾಧಕಾಞ್ಛತ್ರೂಞ್ಜಯೇಮ । ಸಹೇಮಹಿ ॥

॥ ಪ್ರತಿಪದಾರ್ಥ ॥

**ಅಸ್ಮೇ**—ನಮ್ಮ । **ಕ್ಷತ್ರಾಯ** ಬಲಕ್ಕಾಗಿಯೂ । **ವರ್ಚಸೇ**—ತೇಜಸ್ಸಿಗಾಗಿಯೂ । **ಬಲಾಯ**—ವೀರ್ಯಕ್ಕಾಗಿಯೂ । **ಮೃತಸ್ಯ**—ಮೃತನಾದ ಈ ಕ್ಷತ್ರಿಯನ । **ಹಸ್ತಾತ್**—ಕೈಯಿನಿಂದ । **ಧನುಃ**—ಧನುಸ್ಸನ್ನು । **ಆದದಾನಃ**—ತೆಗೆದುಕೊಂಡು (ನಾನು ಹೀಗೆ ಹೇಳುತ್ತೇನೆ) **ತ್ವಂ**—ನೀನು । **ಅತ್ರೈವ**—ಇಲ್ಲಿಯೇ ಇರು । **ವಯಂ**—ನಾವು । **ಇಹ**—ಈ ಲೋಕದಲ್ಲಿ । **ಸುವೀರಾಃ**—ಉತ್ತಮವಾದ ಪುತ್ರಪೌತ್ರಾದಿಗಳಿಂದ ಕೂಡಿ । **ಅಭಿಮಾತೀಃ**—ಎದುರುಬೀಳುವವರೂ । **ಸ್ಪೃಧಃ**—ಹಿಂಸಕರೂ ಆದ । **ವಿಶ್ವಾಃ**—ಸಕಲ ಶತ್ರುಗಳನ್ನೂ । **ಜಯೇಮ**—ಜಯಿಸುತ್ತೇನೆ.

॥ ಭಾವಾರ್ಥ ॥

ಮೃತನಾದ ಈ ಕ್ಷತ್ರಿಯನ ಕೈಯಿನಿಂದ ನಮ್ಮ ಬಲಕ್ಕಾಗಿಯೂ, ತೇಜಸ್ಸಿಗಾಗಿಯೂ, ವೀರ್ಯಕ್ಕಾಗಿಯೂ ಧನುಸ್ಸನ್ನು ತೆಗೆದುಕೊಂಡು ನಾನು ಹೀಗೆ ಹೇಳುತ್ತೇನೆ. ಎಲೈ ಮೃತನೇ, ನೀನು ಇಲ್ಲಿಯೇ ಇರು. ನಾವು ಈ ಲೋಕದಲ್ಲಿ ಉತ್ತಮವಾದ ಪುತ್ರಪೌತ್ರಾದಿಗಳಿಂದ ಕೂಡಿ ನಮಗೆ ಎದುರುಬೀಳುವವರೂ, ಹಿಂಸಕರೂ ಆದ ಸಕಲ ಶತ್ರುಗಳನ್ನೂ ಜಯಿಸುತ್ತೇನೆ.

## English Translation

Taking his bow from the hand of the dead man, for the sake of our vigour, energy and strength, (I say) you are there; may we (who are) here, blessed with male offspring, overcome all the enemies who assail us.

॥ ವಿಶೇಷವಿಷಯಗಳು ॥

ಮೃತನಾದ ಪುರುಷನು ಕ್ಷತ್ರಿಯನಾಗಿದ್ದರೆ ಆಗ ಅವನ ಕೈಯಲ್ಲಿದ್ದ ಧನುಸ್ಸನ್ನು ತೆಗೆದುಕೊಳ್ಳುವಾಗ **ಧನುರ್ಹಸ್ತಾತ್** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಧನುರ್ಹಸ್ತಾದಾದದಾನೋ ಮೃತಸ್ಯೇತಿ ಧನುಃ** ಎಂಬ ಸೂತ್ರದಿಂದ (ಆ. ಗೃ. ೪-೨-೨೦) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಉಪ ಸರ್ಪ ಮಾತರಂ ಭೂಮಿಮೇತಾಮುರುವ್ಯಚಸಂ ಪೃಥಿವೀಂ ಸುಶೇವಾಂ ।**

**ಊರ್ಣಮ್ರದಾ ಯುವತಿರ್ದಕ್ಷಿಣಾವತ ಏಷಾ ತ್ವಾ ಪಾತು ನಿರ್ಋತೇರುಪಸ್ಥಾತ್ ॥ ೧೦ ॥**

॥ ಪದಪಾಠಃ ॥

ಉಪ । ಸರ್ಪ । ಮಾತರಂ । ಭೂಮಿಂ । ಏತಾಂ । ಉರುऽವ್ಯಚಸಂ । ಪೃಥಿವೀಂ । ಸುऽಶೇವಾಂ ।

ಊರ್ಣऽಮ್ರದಾಃ । ಯುವತಿಃ । ದಕ್ಷಿಣಾऽವತೇ । ಏಷಾ । ತ್ವಾ । ಪಾತು । ನಿಃऽಋತೇಃ । ಉಪऽ-

ಸ್ಥಾತ್ ॥ ೧೦

॥ ಸಾಯಣಭಾಷ್ಯಂ ॥

ದೀಕ್ಷಿತಮರಣ ಉಪ ಸರ್ಪ ಮಾತರಮಿತ್ಯಾದ್ಯಾಶ್ಚತಸ್ರಃ ಶಂಸನೀಯಾಃ । ಸೂತ್ರಿತಂ ಚ । ಉಪ ಸರ್ಪ ಮಾತರಂ ಭೂಮಿಮೇತಾಮಿತಿ ಚತಸ್ರಃ ಸೋಮ ಏಕೇಭ್ಯಃ । ಆ. ೬-೧೦ । ಇತಿ ॥ ಉಪ ಸರ್ಪೇತ್ಯನಯಾ ಸಂಚಿತಾನ್ಯಸ್ಥೀನಿ ಗರ್ತೇ ನಿದಧ್ಯುಃ । ಆ. ಗೃ. ೪-೫-೫ ॥

ಮಾತರಂ ಮಾತೃಭೂತಾಂ ಭೂಮಿಮಸ್ಮಾಭಿರ್ಭೂಮೌ ನಿಧೀಯಮಾನಸ್ತ್ವಮುಪ ಸರ್ಪ । ಉಪಗಚ್ಛ । ಅನುಪ್ರವಿಶೇತ್ಯರ್ಥಃ । ಕೀದೃಶೀಂ । ಉರುವ್ಯಚಸಂ ಬಹುವ್ಯಾಪ್ತಿಕಾಂ ಪೃಥಿವೀಂ ವಿಸ್ತೀರ್ಣಾಂ ಸುಶೇವಾಂ ಸುಸುಖಾಂ । ಸರ್ವೇಷಾಂ ಸುಖದಾತ್ರೀಮಿತ್ಯರ್ಥಃ । ತಾಮುಪಗಚ್ಛ । ಯುವತಿರ್ಯೌವನಾನ್ವಿತಾ ಸ್ತ್ರೀರೂಪೇಯಂ ಭೂಮಿರ್ದಕ್ಷಿಣಾವತ ಋತ್ವಿಗ್ಭ್ಯೋ ದೇಯತ್ವೇನ ಧನವತೇ ಯಜಮಾನಾಯೋರ್ಣಮ್ರದಾಃ । ಊರ್ಣೇವೋರ್ಣಾಸ್ತುಕ ಇವ ಮೃದ್ವೀ ಭವತಿ । ಸುಕುಮಾರಾ ಭವತಿ । ನ ಬಾಧಯಿತ್ರೀತ್ಯರ್ಥಃ । ಸೈಷಾ ಪೃಥಿವೀ ನಿರ್ಋತೇರ್ಮೃತ್ಯುದೇವತಾಯಾ ಉಪಸ್ಥಾತ್ಸಮೀಪಸ್ಥಾನಾತ್ತ್ವಾ ತ್ವಾಮಸ್ಥಿರೂಪಂ ಯಜಮಾನಂ ಪಾತು । ರಕ್ಷತು ॥

॥ ಪ್ರತಿಪದಾರ್ಥ ॥

**ಉರುವ್ಯಚಸಂ**—ಸರ್ವವ್ಯಾಪಕವೂ । **ಪೃಥಿವೀಂ**—ವಿಸ್ತೃತವಾಗಿ ಹರಡಿರುವುದೂ । **ಸುಶೇವಾಂ**—ಸುಖಕಾರಕವೂ । **ಮಾತರಂ**—ಮಾತೃರೂಪವೂ ಆದ । **ಏತಾಂ ಭೂಮಿಂ**—ಈ ಭೂಮಿಗೆ । **ಉಪ ಸರ್ಪ**—ಪ್ರವೇಶಿಸು । **ಯುವತಿಃ**—ಸ್ತ್ರೀಸ್ವರೂಪವುಳ್ಳ ಈ ಪೃಥ್ವಿಯು । **ದಕ್ಷಿಣಾವತೇ**—ಉದಾರವಾಗಿ ದಾನಮಾಡಿದ ಯಜಮಾನನಿಗೆ । **ಊರ್ಣಮ್ರದಾಃ**—ಉಣ್ಣೆಯಂತೆ ಮೆತ್ತಗಿರುತ್ತದೆ । **ಏಷಾ**—ಈ ಪೃಥ್ವಿಯು । **ನಿರ್ಋತೇಃ**—ಮೃತ್ಯುದೇವತೆಯ । **ಉಪಸ್ಥಾತ್**—ಸಮೀಪಸ್ಥಾನದಿಂದ । **ತ್ವಾ**—ನಿನ್ನನ್ನು । **ಪಾತು**—ರಕ್ಷಿಸಲಿ.

॥ ಭಾವಾರ್ಥ ॥

ಸರ್ವವ್ಯಾಪಕವೂ, ವಿಸ್ತೃತವಾಗಿ ಹರಡಿರುವುದೂ, ಮಾತೃರೂಪವೂ ಸುಖಕಾರಕವೂ ಆದ ಈ ಭೂಮಿಗೆ ಪ್ರವೇಶಿಸು. ಸ್ತ್ರೀಸ್ವರೂಪವುಳ್ಳ ಈ ಪೃಥ್ವಿಯು ಉದಾರವಾಗಿ ದಾನಮಾಡಿದ ಯಜಮಾನನಿಗೆ ಉಣ್ಣೆಯಂತೆ ಮೆತ್ತಗಿರುತ್ತದೆ. ಈ ಪೃಥ್ವಿಯು ಮೃತ್ಯುದೇವತೆಯ ಸಮೀಪಸ್ಥಾನದಿಂದ ನಿನ್ನನ್ನು ರಕ್ಷಿಸಲಿ.

## English Translation

Go to this your mother-earth, the wide-spread, delightful earth ; this virgin (earth is) as soft as wool, to the liberal (worshipper); may she protect you from the proximity of Nirriti.

॥ ವಿಶೇಷವಿಷಯಗಳು ॥

ಯಜ್ಞದಲ್ಲಿ ಯಜ್ಞದೀಕ್ಷೆಯನ್ನು ಕೈಗೊಂಡಿದ್ದ ಯಜಮಾನನು ಯಜ್ಞಸಮಾಪ್ತಿಯಾಗುವುದಕ್ಕೆ ಮೊದಲೇ ಮೃತನಾದಲ್ಲಿ **ಉಪ ಸರ್ಪ** ಎಂದು ಮೊದಲಾಗುವ ನಾಲ್ಕು ಋಕ್ಕುಗಳನ್ನು (೧೦-೧೩ ಋಕ್ಕುಗಳನ್ನು) ಪಠಿಸ ಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಉಪ ಸರ್ಪ ಭೂಮಿಮೇತಾಮಿತಿ ಚತಸ್ರಃ ಸೋಮ ಏಕೇಭ್ಯಃ** ಎಂಬ ಸೂತ್ರದಿಂದ (ಆ. ೬-೧೦) ವಿವೃತವಾಗಿರುವುದು. ಮತ್ತು ಅಪರಕರ್ಮದಲ್ಲಿ ಶರೀರದ ದಹನಾನಂತರ ಅಸ್ಥಿ ಸಂಚಯನವನ್ನು ಮಾಡಿ ಆ ಅಸ್ಥಿಗಳನ್ನು ಒಂದು ಹಳ್ಳದಲ್ಲಿ (ಅಥವಾ ನದ್ಯಾದಿಜಲಾಶಯಗಳಲ್ಲಿ) ಹಾಕುವಾಗ ಈ ಮಂತ್ರವನ್ನು ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಉಪ ಸರ್ಪ ಇತ್ಯನಯಾ ಸಂಚಿತಾನ್ಯಸ್ಥೀನಿ ಗರ್ತೇ ನಿದಧ್ಯುಃ** ಎಂಬ ಸೂತ್ರದಿಂದ (ಆ. ಗೃ. ೪-೫-೫) ವಿವೃತವಾಗಿರುವುದು.

ಈ ಋಕ್ಕಿನಲ್ಲಿಯೂ ಮುಂದಿನ ಮೂರು ಋಕ್ಕುಗಳಲ್ಲಿಯೂ ಸಾಯಣರು ಮೃತನಾದವನ ಅಸ್ಥಿಗಳನ್ನು ಹೇಳುವಾಗ ಪಠಿಸುವ ಮಂತ್ರಗಳು ಉಕ್ತವಾಗಿವೆಯೆಂದು ಹೇಳಿ ಅದರಂತೆ ಅರ್ಥವಿವರಣೆಮಾಡಿದ್ದಾರೆ. ಋಕ್ಕುಗಳಲ್ಲಿ ಅಸ್ಥಿ ಅಥವಾ ಆ ಅರ್ಥವನ್ನು ಸೂಚಿಸುವ ಯಾವ ಶಬ್ದವೂ ಇಲ್ಲದಿರುವುದರಿಂದ ಅನೇಕ ಪಾಶ್ಚಾತ್ಯಪಂಡಿತರು-ಈ ಋಕ್ಕುಗಳಲ್ಲಿ ಮೃತಶರೀರವನ್ನು ಭೂಮಿಯಲ್ಲಿ ಹೂಳುವ ಕ್ರಮವು ವಿವರಿಸಲ್ಪಟ್ಟಿದೆ. ಆದ್ದರಿಂದ ಆ ಕಾಲದಲ್ಲಿ ಶವವನ್ನು ಅಗ್ನಿಯಲ್ಲಿ ದಹಿಸುವ ಪದ್ಧತಿಯಲ್ಲದೆ ಭೂಮಿಯಲ್ಲಿ ಹೂಳುವುದೂ ರೂಢಿಯಲ್ಲಿತ್ತು ಎಂದು ಅಭಿಪ್ರಾಯ ಪಡುತ್ತಾರೆ. ಈ ಅಭಿಪ್ರಾಯವು ಸರಿಯಲ್ಲವೆಂದು ಹೇಳುವುದಕ್ಕಾಗುವುದಿಲ್ಲ.

॥ ಸಂಹಿತಾಪಾಠಃ ॥

ಉಚ್ಛ್ವಂಚಸ್ವ ಪೃಥಿವಿ ಮಾ ನಿ ಬಾಧಥಾಃ ಸೂಪಾಯನಾಸ್ಮೈ ಭವ ಸೂಪವಂಚನಾ ।
ಮಾತಾ ಪುತ್ರಂ ಯಥಾ ಸಿಚಾಭ್ಯೇನಂ ಭೂಮ ಊರ್ಣುಹಿ ॥ ೧೧ ॥

॥ ಪದಪಾಠಃ ॥

ಉತ್ । ಶ್ವಂಚಸ್ವ । ಪೃಥಿವಿ । ಮಾ । ನಿ । ಬಾಧಥಾಃ । ಸುऽಉಪಾಯನಾ । ಅಸ್ಮೈ । ಭವ । ಸುऽಉಪವಂಚನಾ ।
ಮಾತಾ । ಪುತ್ರಂ । ಯಥಾ । ಸಿಚಾ । ಅಭಿ । ಏನಂ । ಭೂಮೇ । ಊರ್ಣುಹಿ ॥ ೧೧ ॥

॥ ಸಾಯಣಭಾಷ್ಯಂ ॥

**ಉಚ್ಛ್ವಂಚಸ್ವೇತ್ಯೇತಯಾ ಪಾಂಸೂನವಕಿರೇತ್ । ಸೂತ್ರ್ಯತೇ ಹಿ । ಉತ್ತರಯಾ ಪಾಂಸೂನವಕಿರೇತ್ । ಆ. ಗೃ. ೪-೫-೬ । ಇತಿ ॥**

**ಹೇ ಪೃಥಿವಿ ಉಚ್ಛ್ವಂಚಸ್ವ । ಊರ್ಧ್ವಂಗತೋಚ್ಛ್ವಾಸಮೇನಂ ಕುರು । ಅಧಸ್ತಾನ್ಮಾ ಕೃಥಾ ಇತ್ಯರ್ಥಃ । ಕಿಂಚ ಮಾ ನಿ ಬಾಧಥಾಃ । ಮಾ ಸಂಪೀಡಯ । ತಥಾಸ್ಮೈ ಯಜಮಾನಾರ್ಥಂ ಸೂಪಾಯನಾ ಶೋಭನೋಪಗಮನಾ ಸೂಪಚಾರಿಕಾ ಭವೇತ್ಯರ್ಥಃ । ಸೂಪವಂಚನಾ । ಉಪವಂಚನಂ ಪ್ರಲಂಭನಂ ಶೋಭನಪ್ರಲಂಭಾ ಸುಪ್ರತಿಷ್ಠಾ ಭವ । ಅಪಿ ಚ ಮಾತಾ ಪುತ್ರಮಾತ್ಮೀಯಂ ಬಾಲಕಂ ಸಿಚಾ ವಸ್ತ್ರಾಂತೇನ ಯಥಾಚ್ಛಾದಯತಿ ತದ್ವದ್ಧೇ ಭೂಮಿ ಏನಮಸ್ಥಿರೂಪಂ ಯಜಮಾನಂ ತ್ವಮಭ್ಯೂರ್ಣುಹಿ । ಅಭಿಮುಖ್ಯೇನಾಚ್ಛಾದಯ ॥**

॥ ಪ್ರತಿಪದಾರ್ಥ ॥

**ಪೃಥಿವಿ**—ಎಲೈ ಪೃಥ್ವಿಯೇ । **ಉಚ್ಛ್ವಂಚಸ್ವ**—ಇವನನ್ನು ಮೇಲುಸಿರುಬಿಡುವಂತೆ ಮಾಡು । **ಮಾ ನಿ ಬಾಧಥಾಃ**—ಇವನನ್ನು ಹಿಂಸಿಸಬೇಡ । **ಅಸ್ಮೈ**—ಈ ಯಜಮಾನನಿಗೆ । **ಸೂಪಾಯನಾ**—ಶ್ರೇಷ್ಠವಾದ ಸುಖಕಾರಕಳಾಗು । **ಸೂಪವಂಚನಾ ಭವ**—ಉತ್ತಮವಾದ ಆಶ್ರಯದಾತಳಾಗು । **ಮಾತಾ**—ತಾಯಿಯು । **ಪುತ್ರಂ**—ಪುತ್ರನನ್ನು । **ಸಿಚಾ**—ತನ್ನ ಸೆರಗಿನಿಂದ । **ಯಥಾ**—ಯಾವ ರೀತಿ ಹೊದ್ದಿಸುವಳೋ ಹಾಗೆ । **ಭೂಮೇ**—ಎಲೈ ಪೃಥ್ವಿಯೇ । **ಏನಂ**—ಮೃತನಾದ ಈ ಯಜಮಾನನನ್ನು । **ಅಭ್ಯೂರ್ಣುಹಿ**—ಮರೆಮಾಡು.

॥ ಭಾವಾರ್ಥ ॥

ಎಲೈ ಪೃಥ್ವಿಯೇ, ಇವನನ್ನು ಮೇಲುಸಿರು ಬಿಡುವಂತೆ ಮಾಡು. ಇವನನ್ನು ಹಿಂಸಿಸಬೇಡ. ಈ ಯಜಮಾನನಿಗೆ ಶ್ರೇಷ್ಠವಾದ ಸುಖಕಾರಕಳಾಗು. ಉತ್ತಮವಾದ ಆಶ್ರಯದಾತಳಾಗು. ತಾಯಿಯು ಪುತ್ರನನ್ನು ತನ್ನ ಸೀರೆಯ ಸೆರಗಿನಿಂದ ಹೊದ್ದಿಸುವಂತೆ, ಎಲೈ ಭೂಮಿಯೇ, ಮೃತನಾದ ಈ ಯಜಮಾನನನ್ನು ಮರೆಮಾಡು.

## English Translation

Earth, rise up above him ; oppress him not ; he attentive to him (and) comfortable ; cover him up earth, as a mother covers her ehild with the sklrt of her garment.

॥ ವಿಶೇಷವಿಷಯಗಳು ॥

ಮೃತಶರೀರವನ್ನು ಅಥವಾ ಅಸ್ಥಿಕುಂಭವನ್ನು ಭೂಮಿಯಲ್ಲಿ ಹೂಳಿ ಅದರ ಮೇಲೆ ಮಣ್ಣನ್ನು ಹಾಕಿ ಮುಚ್ಚುವಾಗ **ಉಚ್ಛ್ವಂಚಸ್ವ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಉತ್ತರಯಾ ಪಾಂಸೂನವಕಿರೇತ್** ಎಂಬ ಸೂತ್ರದಿಂದ (ಆ. ಗೃ. ೪-೫-೬) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಉಚ್ಛ್ವಂಚಮಾನಾ ಪೃಥಿವೀ ಸು ತಿಷ್ಠತು ಸಹಸ್ರಂ ಮಿತ ಉಪ ಹಿ ಶ್ರಯಂತಾಂ ।
ತೇ ಗೃಹಾಸೋ ಘೃತಶ್ಚುತೋ ಭವಂತು ವಿಶ್ವಾಹಾಸ್ಮೈ ಶರಣಾಃ ಸಂತ್ವತ್ರ ॥

। ಪದಪಾಠಃ ॥

ಉತ್ ऽಶ್ವಂಚಮಾನಾ । ಪೃಥಿವೀ । ಸು । ತಿಷ್ಠತು । ಸಹಸ್ರಂ । ಮಿತಃ । ಉಪ । ಹಿ । ಶ್ರಯಂತಾಂ ।
ತೇ । ಗೃಹಾಸಃ । ಘೃತಶ್ಚುತಃ । ಭವಂತು । ವಿಶ್ವಾಹಾ । ಅಸ್ಮೈ । ಶರಣಾಃ । ಸಂತು । ಅತ್ರ । ೧೨ ॥

। ಸಾಯಣಭಾಷ್ಯಂ ।

ಪಾಂಸುಭಿಃ ಪ್ರಚ್ಛಾದ್ಯೈತಾಂ ಪಠತಿ । ಉಚ್ಛ್ವಂಚಮಾನಾಸ್ಥಿಕುಂಭಮವಷ್ಟಭ್ಯೋರ್ಧ್ವಂ ಗಚ್ಛಂತೀ ಪೃಥಿವೀ ಸು ತಿಷ್ಠತು । ಪ್ರತಿಷ್ಠಿತಾ ಭವತು । ಅಪಿ ಚ ಸಹಸ್ರಂ ಸಹಸ್ರಸಂಖ್ಯಾಕಾ ಮಿತಃ ಪ್ರಕ್ಷಿಪ್ತಾಃ ॥ ಮಿನೋತೇರ್ನಿಷ್ಠಾದಿಕೇ ಕರ್ಮಣಿ ಕ್ವಿಪಿ ತುಗಾಗಮಃ । ತತೋ ಜಸ್ । ಯದ್ವಾ । ಸಹಸ್ರಂ । ತೃತೀಯಾರ್ಥೇ ಪ್ರಥಮಾ । ಮಿತ ಇತಿ ನಿಷ್ಠಾಂತಂ ರೂಪಂ । ವ್ಯತ್ಯಯೇನ ಬಹುವಚನಸ್ಯೈಕವಚನಂ । ಸ್ತೋ ವೃಷಾದಿತ್ವಾದ್ರ್ಹಸ್ವಃ । ಸಹಸ್ರೇಣ ಸಂಮಿತಾ ಬಹುಸಂಖ್ಯಾಕಾಃ । ಪಾರ್ಥಿವಾಃ ಪಾಂಸವ ಉಪ ಶ್ರಯಂತಾಂ ಉಪಸಮುಪಸೇವಂತಾಂ । ತಂ ಸಪರಿವಾರ್ಯ ತಿಷ್ಠಂತ್ವಿತ್ಯರ್ಥಃ । ಹಿರವಧಾರಣೇ । ತಥಾ ತೇ ಪಾಂಸವೋऽಸ್ಮೈ ಗೃಹಾಸೋ ಗೃಹಾ ಭವಂತೋ ಘೃತಶ್ಚುತೋ ಘೃತಸ್ಯೋದಕಸ್ಯ ಸರ್ಪಿಷೋ ವಾ ಕ್ಷಾರಯಿತಾರೋ ಭವಂತು । ಅತ್ರಾಸ್ಮಿಁಲ್ಲೋಕೇ ವಿಶ್ವಾಹಾ ಸರ್ವೇಷ್ವಹಃಸು ಸರ್ವದಾಸ್ಮಾ ಅಸ್ಮೈ ಶರಣಾಃ ಸಂತು । ಆಶ್ರಯಭೂತಾ ಭವಂತು ॥

। ಪ್ರತಿಪದಾರ್ಥ ।

**ಉಚ್ಛ್ವಂಚಮಾನಾ**—ಮೃತನ ಮೇಲೆ ಹರಡಿದ । **ಪೃಥಿವೀ**—ಪೃಥ್ವಿಯು । **ಸು ತಿಷ್ಠತು**—ಭದ್ರವಾದ ಸ್ಥಾನವನ್ನು ಹೊಂದಲಿ । **ಮಿತಃ**—ಅವನ ಮೇಲೆ ಇಡಲ್ಪಟ್ಟ । **ಸಹಸ್ರಂ**—ಸಹಸ್ರಸಂಖ್ಯಾಕವಾದ ರೇಣುಗಳೂ । **ಉಪ ಶ್ರಯಂತಾಂ**—ಅವನನ್ನು ಸುತ್ತುವರೆದಿರಲಿ । **ತೇ**—ಈ ರೇಣುಗಳು । **ಗೃಹಾಸಃ**—ಮೃತನಿಗೆ ಆಶ್ರಯಸ್ಥಾನಗಳಾಗಿಯೂ । **ಘೃತಶ್ಚುತಃ**—ಉದಕಸ್ರಾವಿಗಳಾಗಿಯೂ । **ಭವಂತು**—ಆಗಿರಲಿ । **ಅತ್ರ**—ಈ ಸ್ಥಾನದಲ್ಲಿ । **ವಿಶ್ವಾಹಾ**—ಸಕಲದಿನಗಳಲ್ಲಿಯೂ । **ಅಸ್ಮೈ**—ಈ ಯಜಮಾನನಿಗೆ । **ಶರಣಾಃ ಸಂತು**—ಆಶ್ರಯವನ್ನು ಕಲ್ಪಿಸಲಿ.

। ಭಾವಾರ್ಥ ।

ಮೃತನ ಶರೀರದ ಮೇಲೆ ಹರಡಿದ ಪೃಥ್ವಿಯು ಭದ್ರವಾದ ಸ್ಥಾನವನ್ನು ಹೊಂದಲಿ. ಅವನ ಮೇಲೆ ಇಡಲ್ಪಟ್ಟ ಸಹಸ್ರಾರು ರೇಣುಗಳು ಅವನನ್ನು ಸುತ್ತುವರೆದಿರಲಿ. ಈ ರೇಣುಗಳು ಮೃತನಿಗೆ ಆಶ್ರಯಸ್ಥಾನಗಳಾಗಿಯೂ,

ಉದಕಸ್ರಾವಿಗಳಾಗಿಯೂ ಆಗಿರಲಿ. ಈ ಸ್ಥಾನದಲ್ಲಿ ಸಕಲದಿನಗಳಲ್ಲಿಯೂ ಈ ಯಜಮಾನನಿಗೆ ಆಶ್ರಯವನ್ನು ಕಲ್ಪಿಸಲಿ.

English Translation

May the earth heaped over him lie light: may thousands of particles (of dust) envelope him; may these mansions distil ghee (for him); may they every day be an asylum to him in this world.

॥ ಸಂಹಿತಾಪಾಠಃ ॥

ಉತ್ತೇ ಸ್ತಭ್ನಾಮಿ ಪೃಥಿವೀಂ ತ್ವತ್ಪರೀಮಂ ಲೋಗಂ ನಿದಧನ್ಮೋ ಅಹಂ ರಿಷಂ ।

ಏತಾಂ ಸ್ಥೂಣಾಂ ಪಿತರೋ ಧಾರಯಂತು ತೇಽತ್ರಾ ಯಮಃ ಸಾದನಾ ತೇ ಮಿನೋತು ॥ ೧೩ ॥

॥ ಪದಪಾಠಃ ॥

ಉತ್ । ತೇ । ಸ್ತಭ್ನಾಮಿ । ಪೃಥಿವೀಂ । ತ್ವತ್ । ಪರಿ । ಇಮಂ । ಲೋಗಂ । ನಿಽದಧತ್ । ಮೋ ಇತಿ । ಅಹಂ । ರಿಷಂ ।

ಏತಾಂ । ಸ್ಥೂಣಾಂ । ಪಿತರಃ । ಧಾರಯಂತು । ತೇ । ಅತ್ರ । ಯಮಃ । ಸದನಾ । ತೇ । ಮಿನೋತು ॥

॥ ಸಾಯಣಭಾಷ್ಯಂ ॥

ಉತ್ತೇ ಸ್ತಭ್ನಾಮೀತಿ ಕಪಾಲೇನಾಸ್ಥೀನ್ಯಪಿದಧ್ಯಾತ್ । ಸೂತ್ರಿತಂ ಚ । ಉತ್ತೇ ಸ್ತಭ್ನಾಮೀತಿ ಕಪಾಲೇನಾಪಿಧಾಯ । ಆ. ಗೃ. ೪-೫-೮ । ಇತಿ ॥

ಹೇ ಅಸ್ಥಿಕುಂಭ ತ್ವತ್ಪರಿ । ಪರಿಶಬ್ದಯೋಗೇ ಪಂಚಮೀ । ತವೋಪರಿ ತೇ ತ್ವದೀಯೇನ ಕಪಾಲೇನ ಪೃಥಿವೀಮುತ್ಸ್ತಭ್ನಾಮಿ । ಪ್ರತಿಬಧ್ನಾಮಿ । ಯಥಾ ಪೃಥಿವೀ ತವೋಪರಿ ಮಾ ಗಚ್ಛತಿ ತಥಾಪಿದಧಾಮೀತ್ಯರ್ಥಃ । ಇಮಂ ಲೋಗಂ ಕಪಾಲಲಕ್ಷಣಂ ಲೋಷ್ಟಂ ನಿದಧದುಪರಿ ಸ್ಥಾಪಯನ್ನಹಂ ಮೋ ರಿಷಂ । ಮಾ ಹಿಂಸಿಷಂ । ಕಿಂಚೈತಾಂ ಮಯಾ ನಿಹಿತಾಂ ಸ್ಥೂಣಾಂ ತೇ ತ್ವದೀಯಾಂ ಪೃಥಿವ್ಯಾ ಧಾರಯಿತ್ರೀಂ ಕಪಾಲಲಕ್ಷಣಾಂ ಪಿತರೋ ಧಾರಯಂತು । ನಿಶ್ಚಲಾಂ ಕುರ್ವಂತು । ತತಸ್ತೇ ತ್ವದೀಯೇಽಸ್ಮಿನ್ಸ್ಥಾನೇ ಯಮಃ ಪಿತೃಪತಿಃ ಸದನಾನಿ ಸ್ಥಾನಾನಿ ಮಿನೋತು । ಪರಿಚ್ಛಿನತ್ತು । ಕರೋತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಅಸ್ಥಿಕುಂಭವೇ) **ತ್ವತ್ಪರಿ**—ನಿನ್ನ ಮೇಲೆ । **ತೇ**—ನಿನ್ನ ಕಪಾಲದಿಂದಲೇ । **ಪೃಥಿವೀಂ**—ಮಣ್ಣನ್ನು । **ಉತ್ ಸ್ತಭ್ನಾಮಿ**—ಹರಡುತ್ತೇನೆ । **ಇಮಂ ಲೋಗಂ**—ಈ ಮಣ್ಣಿನ ಹೆಂಟೆಯನ್ನು । **ನಿದಧತ್**—ಇಡುವಾಗ । **ಅಹಂ**—ನಾನು । **ಮೋ ರಿಷಂ**—ನಿನ್ನನ್ನು ಹಿಂಸಿಸದಂತಿರಲಿ । **ಏತಾಂ**—ನನ್ನಿಂದ ನಿಕ್ಷಿಪ್ತವಾದ । **ತೇ**—ನಿನ್ನ । **ಸ್ಥೂಣಾಂ**—ಈ ಸ್ಮಾರಕಸ್ತಂಭವನ್ನು । **ಪಿತರಃ**—ಪಿತೃಗಳು । **ಧಾರಯಂತು**—ಸ್ಥಿರವಾಗಿರುವಂತೆ ಮಾಡಲಿ । **ಯಮಃ**—ಯಮನು **ತೇ**—ನಿನಗೆ । **ಅತ್ರ**—ಇಲ್ಲಿ । **ಸದನಾ**—ವಾಸಸ್ಥಾನವನ್ನು । **ಮಿನೋತು**—ನಿರ್ಮಿಸಲಿ.

॥ ಭಾವಾರ್ಥ ॥

ಎಲೈ ಅಸ್ಥಿಕುಂಭವೇ, ನಿನ್ನ ಮೇಲೆ ಈ ಕಪಾಲದಿಂದ ಮಣ್ಣನ್ನು ತೆಗೆದು ಹರಡುತ್ತೇನೆ. ಈ ಮಣ್ಣಿನ ಹೆಂಟೆಯನ್ನು ಇಡುವಾಗ ನಾನು ನಿನ್ನನ್ನು ಹಿಂಸಿಸದಂತಿರಲಿ. ನನ್ನಿಂದ ನಿಕ್ಷಿಪ್ತವಾದ ನಿನ್ನ ಈ ಸ್ಮಾರಕಸ್ತಂಭವನ್ನು ಪಿತೃಗಳು ಸ್ಥಿರವಾಗಿರುವಂತೆ ಮಾಡಲಿ. ಯಮನು ನಿನಗೆ ಇಲ್ಲಿ ವಾಸಸ್ಥಾನವನ್ನು ನಿರ್ಮಿಸಲಿ.

English Translation

I heap up the earth around you, placing (upon you) this clod of earth: may I not be injured: may the Pitris sustain this your monument; may Yama make you a dwelling here.

॥ ವಿಶೇಷವಿಷಯಗಳು ॥

**ಉತ್ತೇ ಸ್ತಭ್ನಾಮಿ** ಎಂಬ ಈ ಋಕ್ಕನ್ನು ಪಠಿಸುತ್ತಾ ಅಸ್ಥಿಗಳನ್ನು ಭೂಮಿಯಲ್ಲಿ ಹೂಳಿ ಅದರ ಮೇಲೆ ಕಪಾಲದಿಂದ ಮಣ್ಣನ್ನು ಹರಡಿ ಮುಚ್ಚಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಉತ್ತೇ ಸ್ತಭ್ನಾಮೀತಿ ಕಪಾಲೇನಾಪಿಧಾಯ** ಎಂಬ ಸೂತ್ರದಿಂದ (ಆ. ಗೃ. ೪-೫-೮) ವಿಸ್ತೃತವಾಗಿರುವುದು.

॥ ಸಂಹಿತಾಪಾಠಃ ॥

ಪ್ರತೀಚೀನೇ ಮಾಮಹನೀಷ್ವಾಃ ಪರ್ಣಮಿವ ದಧುಃ ॥
ಪ್ರತೀಚೀಂ ಜಗ್ರಭಾ ವಾಚಮಶ್ವಂ ರಶನಯಾ ಯಥಾ ॥ ೧೪ ॥

॥ ಪದಪಾಠಃ ॥

ಪ್ರತೀಚೀನೇ । ಮಾಂ । ಅಹನಿ । ಇಷ್ವಾಃ । ಪರ್ಣಂಽಇವ । ಆ । ದಧುಃ ।
ಪ್ರತೀಚೀಂ । ಜಗ್ರಭ । ವಾಚಂ । ಅಶ್ವಂ । ರಶನಯಾ । ಯಥಾ ॥ ೧೪ ॥

॥ ಸಾಯಣಭಾಷ್ಯಂ ॥

ಅನಯಾ ಪ್ರಜಾಪತಿಃ ಪ್ರಾರ್ಥ್ಯತೇ । ಹೇ ಪ್ರಜಾಪತೇ ಪ್ರತೀಚೀನೇ ಪ್ರತಿಪೂಜ್ಯೇ ಅಹನಿ ತಮಃಸಲಕ್ಷಿತೇ ಸಂವತ್ಸರಾತ್ಮಕೇ ಮಾಂ ಸಂಕುಸುಕವ್ಯೃಷಿಂ ಆ ದಧುಃ ನಿಹಿತವಂತಃ ಸರ್ವೇ ದೇವಾಃ । ಕಿಮಿವ । ಇಷ್ವಾಃ ಬಾಣಸ್ಯ ಪರ್ಣಮಿವ । ಪಕ್ಷಮಿವ ಪಕ್ಷಂ ಯಥಾ ಬಾಣಸ್ಯ ಮೂಲೇ ಸ್ಥಾಪಯಂತೇ ತದ್ವಜ್ಜಗನ್ಮೂಲೇ ತ್ವಯಿ ಮಾಂ ಸ್ಥಾಪಿತವಂತಃ । ಅತೋ ಮದೀಯಾಂ ಪ್ರತೀಚೀಂ ಪ್ರತಿಪೂಜ್ಯಾಂ ಪೂಜ್ಯಾಂ ವಾಚಂ ಸ್ತುತಿರೂಪಾಂ ಜಗ್ರಭ ಗೃಹಾಣ । ಕಥಮಿತ್ಯುಚ್ಯತೇ । ಅಶ್ವಂ ಆಶುಗಾಮಿನಂ ಹಯಂ ರಶನಯಾ ರಜ್ಜ್ವಾ ಯಥಾ ಗೃಹ್ಣಂತಿ ತದ್ವತ್ಕರ್ಣಾಭ್ಯಾಂ ಮತ್ಕೃತಾಂ ಸ್ತುತಿಂ ಗೃಹಾಣೇತ್ಯರ್ಥಃ ॥

। ಪ್ರತಿಪದಾರ್ಥ ।

(ಎಲೈ ಪ್ರಜಾಪತಿಯೇ) **ಪ್ರತೀಚೀನೇ**—ಕೊನೆಯ ಕಾಲವನ್ನು ಹೊಂದಿರುವ । **ಅಹನಿ**—ಈ ಸಂಧ್ಯಾ ಕಾಲದಲ್ಲಿ **ಇಷ್ವಾಃ ಪರ್ಣಂ ಇವ**—ಪಕ್ಷಿಯ ರೆಕ್ಕೆಗಳು ಮುದುರಿ ಹೋಗುವಂತೆ । **ಮಾಂ**—ನನ್ನನ್ನು । **ಆ ದಧುಃ**—ಇಲ್ಲಿ ನಿಕ್ಷೇಪಮಾಡಿಟ್ಟಿದ್ದಾರೆ । **ಯಥಾ**—ಯಾವ ರೀತಿ । **ಅಶ್ವಂ**—ಅಶ್ವವನ್ನು । **ರಶನಯಾ**—ಕಡಿವಾಣದಿಂದ ಹಿಡಿಯುವರೋ ಹಾಗೆ । **ಪ್ರತೀಚೀಂ**—ನನ್ನ ಈ ಸ್ತುತಿಯನ್ನು । **ಜಗ್ರಭ**—ನಿನ್ನ ಕಿವಿಯಿಂದ ಆಲಿಸಿ ಕೇಳು.

॥ ಭಾವಾರ್ಥ ॥

ಎಲೈ ಪ್ರಜಾಪತಿಯೇ, ದಿನದ ಕೊನೆಯ ಕಾಲವಾದ ಈ ಸಂಧ್ಯಾಕಾಲದಲ್ಲಿ ಪಕ್ಷಿಯ ರೆಕ್ಕೆಗಳು ಮುದುರಿ ಕೊಳ್ಳುವಂತೆ ನನ್ನನ್ನು ಇಲ್ಲಿ ನಿಕ್ಷೇಪಮಾಡಿಟ್ಟಿದ್ದಾರೆ. ಯಾವ ರೀತಿ ಅಶ್ವವನ್ನು ಕಡಿವಾಣದಿಂದ ಹಿಡಿಯುವರೋ ಹಾಗೆ ನನ್ನ ಈ ಸ್ತುತಿಯನ್ನು ನಿನ್ನ ಕಿವಿಯಿಂದ ಆಲಿಸಿ ಕೇಳು.

## English Translation

At the decline of the day they have placed me (in the grave) like the feathers of an arrow ; I have restrained my declining voice as (they check) a horse with a bridle.

॥ ವಿಶೇಷವಿಷಯಗಳು ।

ಈ ಋಕ್ಕಿನಲ್ಲಿ ಪ್ರಜಾಪತಿಯನ್ನು ಪ್ರಾರ್ಥಿಸಲಾಗಿದೆ. ಈ ಋಕ್ಕಿಗೆ ಸಾಯಣಭಾಷ್ಯವು ಇಲ್ಲದಿರುವುದರಿಂದ ಪೂನಾನಗರದ ವೈದಿಕಸಂಶೋಧನ ಮಂಡಲಿಯಿಂದ ಪ್ರಕಾಶಿತವಾದ ಭಾಷ್ಯಸಹಿತವಾದ ಋಗ್ವೇದದ ನಾಲ್ಕನೇ ಭಾಗದ 33ನೇ ಪೇಜಿನ ಕೊನೆಯಲ್ಲಿ ಸಂಗ್ರಹಿಸಿ ಮುದ್ರಿತವಾಗಿರುವ ಈ ಋಕ್ಕಿನ ಭಾಷ್ಯವನ್ನು ಇಲ್ಲಿ ಬರೆದಿರುತ್ತೇವೆ ಇದು ಸಾಯಣಭಾಷ್ಯವಲ್ಲ. ಇದನ್ನು ಯಾರು ಬರೆದಿರುವರೆಂದು ಹೇಳುವುದಕ್ಕಾಗುವುದಿಲ್ಲ.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಋಕ್ಸಂಹಿತಾಭಾಷ್ಯೇಽಸಪ್ತಮಾಷ್ಟಕೇ ಷಷ್ಠೋಽಧ್ಯಾಯಃ ಸಮಾಪ್ತಃ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯಲ್ಲಿ ಏಳನೆಯ ಅಷ್ಟಕದಲ್ಲಿ ಆರನೆಯ ಅಧ್ಯಾಯವು ಸಮಾಪ್ತವು.

॥ ಓಂ ತತ್ಸತ್ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥





॥ ಶ್ರೀಃ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥
ಅಷ್ಟಕೇ ಸಪ್ತಮೇ ಷಷ್ಠಂ ವ್ಯಾಖ್ಯಾಯ ಪ್ರತಿಕೋವಿದಃ ।
ಸಾಯಣಾರ್ಯಸ್ತತೋಽಧ್ಯಾಯಂ ಸಪ್ತಮಂ ವ್ಯಾಚಿಕೀರ್ಷತಿ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ



## ಅಥ ಸಪ್ತಮಾಷ್ಟಕೇ ಸಪ್ತಮೋಽಧ್ಯಾಯಃ

### ಏಳನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು.

## ಹತ್ತನೆಯ ಮಂಡಲದಲ್ಲಿ ಹತ್ತೊಂಭತ್ತನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಅಥ ದ್ವಾದಶಾನುವಾಕಾತ್ಮಕಸ್ಯ ದಶಮಮಂಡಲಸ್ಯ ದ್ವಿತೀಯೇಽನುವಾಕೇ ತ್ರಯೋದಶ ಸೂಕ್ತಾನಿ । ತತ್ರ ನಿವರ್ತಧ್ವಮಿತ್ಯಷ್ಟರ್ಚಂ ತೃತೀಯಂ ಸೂಕ್ತಂ । ಅಸ್ಯ ಯಮಪುತ್ರೋ ಮಥಿತಾಖ್ಯ ಋಷಿರ್ವರುಣಪುತ್ರೋ ಭೃಗುರ್ವಾಥವಾ ಭಾರ್ಗವಶ್ಚ್ಯವನಃ । ಷಷ್ಠೀ ಗಾಯತ್ರೀ ಶಿಷ್ಟಾ ಅನುಷ್ಟುಭಃ । ಇದಮಬ್ದೇವತಾಕಂ ಗೋದೇವತಾಕಂ ವಾ । ಅಗ್ನಿಷೋಮಾ ಪುನರ್ವಸೂ ಇತ್ಯರ್ಧರ್ಚೋಽಗ್ನೀಷೋಮದೇವತಾಕಃ । ತಥಾ ಚಾನುಕ್ರಾಂತಂ। ನಿ ವರ್ತಧ್ವಮಷ್ಟೌ ಮಥಿತೋ ಭೃಗುರ್ವಾ ವಾರುಣಿರ್ಭಾರ್ಗವಶ್ಚ್ಯವನೋ ಆಪಂ ಗವ್ಯಂ ವಾನುಷ್ಟುಭಮಗ್ನೀಷೋಮೀಯೋ ದ್ವಿತೀಯೋಽರ್ಧರ್ಚಃ ಷಷ್ಠೀ ಗಾಯತ್ರೀತಿ ॥ ಗತೋ ವಿನಿಯೋಗಃ ॥

ಅನುವಾದವು—ಹನ್ನೆರಡು ಅನುವಾಕಗಳಿರುವ ಈ ಹತ್ತನೆಯ ಮಂಡಲದ ಎರಡನೆಯ ಅನುವಾಕದಲ್ಲಿ ಹದಿಮೂರು ಸೂಕ್ತಗಳಿರುವವು. ಅವುಗಳಲ್ಲಿ ಮೊದಲ ಎರಡು ಸೂಕ್ತಗಳನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈಗ ವಿವರಿಸುವ **ನಿ ವರ್ತಧ್ವಂ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಯಮಪುತ್ರನಾದ ಮಥಿತನೆಂಬುವನು ಋಷಿಯು, ಅಥವಾ ವರುಣಪುತ್ರನಾದ ಭೃಗುಋಷಿಯು ಅಥವಾ ಭೃಗುಪುತ್ರನಾದ ಚ್ಯವನನೂ ಋಷಿಯಾಗಬಹುದು. ಈ ಸೂಕ್ತದ ಆರನೆಯ ಋಕ್ಕು ಗಾಯತ್ರೀಛಂದಸ್ಕವು. ಉಳಿದ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಈ ಸೂಕ್ತಕ್ಕೆ ಅಪ್ಪುಗಳು (ಉದಕಗಳು) ಅಥವಾ ಗೋವುಗಳು ದೇವತೆಯು ; ಅಗ್ನೀಷೋಮಾ ಪುನರ್ವಸೂ ಎಂಬ ಮೊದಲನೇ ಋಕ್ಕಿನ ಉತ್ತರಾರ್ಧಕ್ಕೆ ಅಗ್ನಿ ಮತ್ತು ಸೋಮ ಎಂಬುವರು ದೇವತೆಗಳು. ಅನುಕ್ರಮಣಿಕೆಯಲ್ಲಿ- **ನಿ ವರ್ತಧ್ವಮಷ್ಟೌ ಮಥಿತೋ ಭೃಗುರ್ವಾ ವಾರುಣಿರ್ಭಾರ್ಗವಶ್ಚ್ಯವನೋ ವಾಪಂ ಗವ್ಯಂ ವಾನುಷ್ಟುಭಮಗ್ನೀಷೋಮೀಯೋ ದ್ವಿತೀಯೋಽರ್ಧರ್ಚಃ ಷಷ್ಠೀ ಗಾಯತ್ರೀ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೯

ಮಂಡಲ—೧೦ । ಅನುವಾಕ—೨ । ಸೂಕ್ತ—೧೯ ॥
ಅಷ್ಟಕ—೭ ಅಧ್ಯಾಯ—೭ । ವರ್ಗ—೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
ಋಷಿಃ—ಮಥಿತೋ ಯಾಮಾಯನೋ ಭೃಗುರ್ವಾ ವಾರುಣಿಶ್ಚ್ಯವನೋ ವಾ ಭಾರ್ಗವಃ ।
ದೇವತಾ—೧ರಲ್ಲಿ ಪೂರ್ವಾರ್ಧ, ೨-೮. ಆಪೋ ಗಾವೋ ವಾ । ೧ರಲ್ಲಿ ಉತ್ತರಾರ್ಧ. ಅಗ್ನಿಷೋಮೌ ।
ಛಂದಃ—೧-೫, ೭-೮. ಅನುಷ್ಟುಪ್ । ೬. ಗಾಯತ್ರೀ ।

। ಸಂಹಿತಾಪಾಠಃ ।

**ನಿ ವರ್ತಧ್ವಂ ಮಾನು ಗಾತಾಸ್ಮಾನ್ಸಿಷಕ್ತ ರೇವತೀಃ ।**
**ಅಗ್ನೀಷೋಮಾ ಪುನರ್ವಸೂ ಅಸ್ಮೇ ಧಾರಯತಂ ರಯಿಂ ॥ ೧ ॥**

। ಪದಪಾಠಃ ।

**ನಿ । ವರ್ತಧ್ವಂ । ಮಾ । ಅನು । ಗಾತ । ಅಸ್ಮಾನ್ । ಸಿಸಕ್ತ । ರೇವತೀಃ ।**
**ಅಗ್ನೀಷೋಮಾ । ಪುನರ್ವಸೂ ಇತಿ ಪುನಃಽವಸೂ । ಅಸ್ಮೇ ಇತಿ । ಧಾರಯತಂ । ರಯಿಂ ॥ ೧ ॥**

। ಸಾಯಣಭಾಷ್ಯಂ ।

**ಹೇ ಗಾವೋ ಹೇ ಆಪೋ ವಾ ಯೂಯಂ ನಿ ವರ್ತಧ್ವಂ । ಅಸ್ಮಾನ್ಪ್ರತ್ಯಾಗಚ್ಛತ । ಮಾನು ಗಾತ । ಅಸ್ಮದ್ವ್ಯತಿರಿಕ್ತಂ ಯಜಮಾನಂ ಮಾ ಗಚ್ಛತ । ಆಗತ್ಯ ಚ ಹೇ ರೇವತೀ ರೇವತ್ಯೋ ಧನ-**

ವತ್ಸೋ ಯೂಯಮಸ್ಮಾನ್ನಿಷಕ್ತ । ಸೇಚಯತ । ಅವಗಾಹತ । ಗೋದೋಹನಸ್ನಾನಪಾನಾದಿ-ದ್ವಾರೇಣ ಸೇವಧ್ವಮಿತ್ಯರ್ಥಃ । ಹೇ ಪುನರ್ವಸೂ ಪುನಃಪುನರ್ವಸ್ತ್ರಾರೌ ಸ್ತೋತೄಣಾಂ ಯಷ್ಟೄಣಾ-ಮಾಚ್ಛಾದಯಿತಾರಾವೇತನ್ನಾಮಕೌ ದೇವೌ ಯುವಾಮಸ್ಮೇ ಅಸ್ಮಾಸು ರಯಿಂ ವ್ರೀಹ್ಯಾದಿಲಕ್ಷಣಂ ಧನಂ ಧಾರಯತಂ । ಸ್ಥಾಪಯತಂ ॥

॥ ಪ್ರತಿಪದಾರ್ಥ ॥

(ಎಲೈ ಗೋವುಗಳೇ) **ನಿ ವರ್ತಧ್ವಂ**—ಹಿಂತಿರುಗಿ । **ಮಾನು ಗಾತ**—ಬೇರೆ ಯಜಮಾನನಲ್ಲಿಗೆ ಹೋಗಬೇಡಿ । **ರೇವತೀಃ**—ಸಂಪದ್ಯುಕ್ತರಾದ ನೀವು । **ಅಸ್ಮಾನ್**—ನಮಗೆ । **ಸಿಷಕ್ತ**—ಕ್ಷೀರವನ್ನು ಸುರಿಸಿರಿ । **ಪುನರ್ವಸೂ**—ಪದೇ ಪದೇ ಯಜಮಾನರಿಗೆ ವಸತಿದಾಯಕರಾದ । (ಅಥವಾ ವಸ್ತ್ರಾದಿಗಳಿಂದ ಹೊದಿಸುವವರಾದ) **ಅಗ್ನಿಷೋಮಾ**—ಎಲೈ ಅಗ್ನಿ ಮತ್ತು ಸೋಮದೇವತೆಗಳೇ । **ಅಸ್ಮೇ**—ನಮ್ಮಲ್ಲಿ । **ರಯಿಂ**—ಧನವನ್ನು । **ಧಾರಯತಂ** - ಸ್ಥಾಪಿಸಿರಿ.

॥ ಭಾವಾರ್ಥ ॥

ಎಲೈ ಗೋವುಗಳೇ, ನಮ್ಮಲ್ಲಿಗೆ ಹಿಂತಿರುಗಿರಿ. ಬೇರೆ ಯಜಮಾನನಲ್ಲಿಗೆ ಹೋಗಬೇಡಿರಿ. ಸಂಪದ್ಯುಕ್ತರಾದ ನೀವು ನಮಗೆ ಕ್ಷೀರವನ್ನು ಸುರಿಸಿರಿ. ಪದೇ ಪದೇ ಯಜಮಾನರಿಗೆ ವಸ್ತ್ರಾದಿಗಳನ್ನು ಹೊದ್ದಿಸತಕ್ಕ ಎಲೈ ಅಗ್ನಿ ಮತ್ತು ಸೋಮದೇವತೆಗಳೇ, ನಮ್ಮಲ್ಲಿ ಧನವನ್ನು ಸ್ಥಾಪಿಸಿರಿ.

## English Translation

Come back: go not elsewhere; abounding in wealth, sprinkle us; Agni and Soma, you who clothe (your worshippers) again, bestow upon us riches.

॥ ಸಂಹಿತಾಪಾಠಃ ॥

ಪುನರೇನಾ ನಿ ವರ್ತಯ ಪುನರೇನಾ ನ್ಯಾ ಕುರು ।
ಇಂದ್ರ ಏಣಾ ನಿ ಯಚ್ಛತ್ವಗ್ನಿರೇನಾ ಉಪಾಜತು ॥ ೨ ॥

॥ ಪದಪಾಠಃ ॥

ಪುನಃ । ಏನಾಃ । ನಿ । ವರ್ತಯ । ಪುನಃ । ಏನಾಃ । ನಿ । ಆ । ಕುರು ।
ಇಂದ್ರಃ । ಏನಾಃ । ನಿ । ಯಚ್ಛತು । ಅಗ್ನಿಃ । ಏನಾಃ । ಉಪಽಆಜತು ॥ ೨ ॥

॥ ಸಾಯಣಭಾಷ್ಯಂ ॥

ಅತ್ರ ಮಂತ್ರದ್ರಷ್ಟಾ ಸ್ವಾತ್ಮಾನಂ ಪ್ರತಿಬ್ರೂತೇ । ಹೇ ಮದೀಯಾತ್ಮನ್ ತ್ವಮೇನಾ ಏತಾ ಅನ್ಯತೋಽಭಿಗಂತ್ರೀರ್ಗಾ ಅಪೋ ವಾ ಪುನರ್ನಿವರ್ತಯ । ಪುನಃಪುನರ್ಮದಭಿಮುಖೀಕುರು ।

ತದನಂತರಮೇನಾ ಏತಾಃ ಪುನರ್ಭೂಯೋ ಭೂಯೋ ನ್ಯಾ ಕುರು । ನಿಯತಾ ಆತ್ಮಾಯತ್ತಾಃ ಕುರು । ಕಿಂಚೇಂದ್ರೋಽಪಿ ತವ ಸಹಾಯಭೂತಃ ಸನ್ನೇನಾ ಏತಾ ನಿ ಯಚ್ಛತು । ತ್ವದಾಯತ್ತಾಃ ಕರೋತು । ಅಗ್ನಿಶ್ಚೈನಾ ಏತಾ ಗಾ ಅಪೋ ವೋಽಪಾಜತು । ಉಪಗಮಯತು । ಉಪಕ್ಷಿಪತು ವಾ । ಉಪಯೋಗ್ಯಾಃ ಕರೋತ್ವಿತ್ಯರ್ಥಃ ॥

। ಪ್ರತಿಪದಾರ್ಥ ।

ಏನಾಃ—ಈ ಗೋವುಗಳನ್ನು । ಪುನಃ—ತಿರುಗಿಯೂ । ನಿ ವರ್ತಯ—ಹಿಂತಿರುಗುವಂತೆ ಮಾಡು । ಏನಾಃ—ಇವುಗಳನ್ನು । ಪುನಃ—ತಿರುಗಿಯೂ । ನ್ಯಾ ಕುರು—ಅಧೀನವಾಗಿರುವಂತೆ ಮಾಡು । ಇಂದ್ರಃ—ಇಂದ್ರನು । ಏನಾಃ—ಇವುಗಳನ್ನು । ನಿ ಯಚ್ಛತು—ನಮಗಧೀನವಾಗಿರುವಂತೆ ಮಾಡಲಿ । ಅಗ್ನಿಃ—ಅಗ್ನಿಯೂ ಕೂಡ । ಏನಾಃ—ಇವುಗಳನ್ನು । ಉಪಾಜತು—ನಮಗೆ ಉಪಯೋಗಕಾರಕವಾಗುವಂತೆ ಮಾಡಲಿ.

। ಭಾವಾರ್ಥ ॥

ಈ ಗೋವುಗಳನ್ನು ತಿರುಗಿಯೂ ಹಿಂತಿರುಗುವಂತೆ ಮಾಡು. ಇವುಗಳನ್ನು ತಿರುಗಿಯೂ ಅಧೀನವಾಗುವಂತೆ ಮಾಡು. ಇಂದ್ರನು ಇವುಗಳನ್ನು ನಮಗಧೀನವಾಗಿರುವಂತೆ ಮಾಡಲಿ. ಅಗ್ನಿಯೂ ಕೂಡ ಇವುಗಳನ್ನು ನಮಗೆ ಉಪಯೋಗಕಾರಕವಾಗುವಂತೆ ಮಾಡಲಿ.

English Translation

Bring them back again, render them obedient: may Indra restore them; may Agni bring them nigh.

। ಸಂಹಿತಾಪಾಠಃ ।

ಪುನರೇತಾ ನಿ ವರ್ತಂತಾಮಸ್ಮಿನ್ಪುಷ್ಯಂತು ಗೋಪತೌ ।

ಇಹೈವಾಗ್ನೇ ನಿ ಧಾರಯೇಹ ತಿಷ್ಠತು ಯಾ ರಯಿಃ ॥ ೩ ॥

। ಪದಪಾಠಃ ।

ಪುನಃ । ಏತಾಃ । ನಿ । ವರ್ತಂತಾಂ । ಅಸ್ಮಿನ್ । ಪುಷ್ಯಂತು । ಗೋಽಪತೌ ।

ಇಹ । ಏವ । ಅಗ್ನೇ । ನಿ । ಧಾರಯ । ಇಹ । ತಿಷ್ಠತು । ಯಾ । ರಯಿಃ ॥ ೩ ॥

। ಸಾಯಣಭಾಷ್ಯಂ ।

ಏನಾ ಏತಾ ಉದ್ಧೃತ್ಯೋ ಗಾವ ಅಪೋ ವಾ ಪುನರ್ನಿ ವರ್ತಂತಾಂ । ಭೂಯೋ ಭೂಯೋ ಮಾಂ ಪ್ರತ್ಯಾಗಚ್ಛಂತು । ಅಸ್ಮಿನ್ ಚ ಗೋಪತೌ ಸಾಸ್ನಾದಿಮತೀನಾಂ ಧೇನೂನಾಂ ವೃದ್ಧಿಲಕ್ಷಣಾ-

ಮಹಾಂ ಪಾಲಕೇಽಸ್ಮಿನ್ನೀದೃಶೇ ಮಯಿ ಪುಷ್ಯಂತು । ಆತ್ಮಾಯತ್ತತ್ವೇನ ಸ್ಥಿತ್ವಾ ಪುಷ್ಟಾ ಭವಂತು । ಪುಷ್ಟಾಃ ಸತೀಸ್ತಾ ಹೇ ಅಗ್ನೇ ತ್ವಮಿಹೈವಾಸ್ಮಿನ್ನೇವ ಮಯಿ ನಿ ಧಾರಯ । ನಿಯಮೇನ ಸ್ಥಾಪಯ । ಯಾ ರಯಿರ್ಯದಪಿ ವ್ರೀಹ್ಯಾದಿಕಂ ಧನಮಸ್ತಿ ತದಪಿ ಧನಂ ಗೋಸಹಿತಮಿಹಾಸ್ಮಿನ್ನೇವ ಗೋಪತೌ ಮಯಿ ತಿಷ್ಠತು । ನಿವಸತು ॥

॥ ಪ್ರತಿಪದಾರ್ಥ ॥

**ಏತಾಃ**—ಈ ಗೋವುಗಳು । **ಪುನಃ ನಿ ವರ್ತಂತಾಂ**—ಪುನಃ ನನ್ನಲ್ಲಿಗೆ ಹಿಂತಿರುಗಿ ಬರಲಿ । **ಗೋಪತೌ**—ಗೋವುಗಳಿಗೆ ಪೋಷಕನಾದ । **ಅಸ್ಮಿನ್**—ನನ್ನಲ್ಲಿ । **ಪುಷ್ಯಂತು**—ಬೆಳೆಯಲಿ । **ಅಗ್ನೇ**—ಎಲೈ ಅಗ್ನಿಯೇ । **ಇಹೈವ**—ನನ್ನಲ್ಲಿಯೇ । **ನಿ ಧಾರಯ**—ಆ ಗೋವುಗಳನ್ನು ಶಾಶ್ವತವಾಗಿ ಸ್ಥಾಪಿಸು । **ಯಾ ರಯಿಃ**—ಪ್ರಸಿದ್ಧವಾದ ಯಾವ ಗವಾದಿ ಸಂಪತ್ತಿರುವುದೋ ಅದು । **ಇಹ**—ನನ್ನಲ್ಲಿಯೇ । **ತಿಷ್ಠತು**—ಶಾಶ್ವತವಾಗಿ ನಿಲ್ಲಲಿ.

॥ ಭಾವಾರ್ಥ ॥

ಈ ಗೋವುಗಳು ಪುನಃ ನನ್ನಲ್ಲಿಗೆ ಹಿಂತಿರುಗಿ ಬರಲಿ. ಗೋವುಗಳಿಗೆ ಪೋಷಕನಾದ ನನ್ನಲ್ಲಿ ಬೆಳೆಯಲಿ. ಎಲೈ ಅಗ್ನಿಯೇ, ಆ ಗೋವುಗಳನ್ನು ನನ್ನಲ್ಲಿಯೇ ಶಾಶ್ವತವಾಗಿ ಸ್ಥಾಪಿಸು. ಪ್ರಸಿದ್ಧವಾದ ಯಾವ ಗವಾದಿಸಂಪತ್ತಿರುವುದೋ ಅದು ನನ್ನಲ್ಲಿಯೇ ಶಾಶ್ವತವಾಗಿ ಉಳಿಯಲಿ

## English Translation

May they come back to me and be fostered under this (their) protector: do you, Agni, keep them here; may whatever wealth (there is) remain here,

॥ ಸಂಹಿತಾಪಾಠಃ ॥

ಯನ್ನಿಯಾನಂ ನ್ಯಯನಂ ಸಂಜ್ಞಾನಂ ಯತ್ಪರಾಯಣಂ ।
ಆವರ್ತನಂ ನಿವರ್ತನಂ ಯೋ ಗೋಪಾ ಅಪಿ ತಂ ಹುವೇ ॥ ೪ ॥

॥ ಪದಪಾಠಃ ॥

ಯತ್ । ನಿಽಯಾನಂ । ನಿಽಅಯನಂ । ಸಂಽಜ್ಞಾನಂ । ಯತ್ । ಪರಾಽಅಯನಂ ।
ಆಽವರ್ತನಂ । ನಿಽವರ್ತನಂ । ಯಃ । ಗೋಪಾಃ । ಅಪಿ । ತಂ । ಹುವೇ ॥ ೪ ॥

॥ ಸಾಯಣಭಾಷ್ಯಂ ॥

ನಿಯಾನಂ ॥ ಅಧಿಕರಣೇ ಲ್ಯುಟ್ ॥ ನಿಯಮೇನ ಯತ್ರಾಗಚ್ಛಂತಿ ಗಾವೋಽತ್ರೇತಿ ನಿಯಾನಂ ಗೋಷ್ಠಾಖ್ಯಂ ಸ್ಥಾನಂ । ಯತ್ ಅಸ್ತೀತಿ ಶೇಷಃ । ಯಚ್ಛಬ್ದಯೋಗಾತ್ತಚ್ಛಬ್ದೋಽಧ್ಯಾಹರ್ತವ್ಯಃ ।

ಹುವ ಇತಿ ಕ್ರಿಯಾಪದಂ ಸರ್ವತ್ರಾನುಷಜ್ಯತೇ । ತತ್ಸಾಂ್ಝನಂ ಹುವೇ । ಆಹ್ವಯಾಮಿ । ಆಹ್ವಾನಮಭಿಮುಖೀಕರಣಂ ತೇನ ಚಾತ್ರ ತತ್ಪೂರ್ವಿಕಾ ಪ್ರಾರ್ಥನಾ ಲಕ್ಷ್ಯತೇ । ಗೋಸಹಿತಂ ಗೋಷ್ಠಂ ಪ್ರಾರ್ಥಯ ಇತ್ಯರ್ಥಃ । ನ್ಯಯನಂ ॥ ಭಾವೇ ಲ್ಯುಟ್ ॥ ನಿಯಮೇನ ಗೃಹಂ ಪ್ರತಿ ಪ್ರಾಪ್ತಿಲಕ್ಷಣಂ ಗಮನಂ ಯದಸ್ತಿ ತದಪಿ ಪ್ರಾರ್ಥಯೇ । ನಿವರ್ತನಂ ವನೇ ಚರಿತ್ವಾ ಗೃಹಂ ಪ್ರತಿ ಯದಾಗಮನಮಸ್ತಿ ತದಪಿ ಪ್ರಾರ್ಥಯೇ । ಯೋಽಪಿ ಗೋಪಾ ಗವಾಂ ಪಾಲಕೋಽಸ್ತಿ ತಮಪಿ ಹುವೇ । ಪ್ರಾರ್ಥಯೇ । ಸರ್ವಗುಣೋಪೇತಾ ಗಾಃ ಪ್ರಾರ್ಥಯ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ನಿಯಾನಂ ಯತ್**—ಆ ಗೋವುಗಳ ಸಂಚಾರವು ಯಾವುದಿದೆಯೋ ಅದನ್ನೂ । **ನ್ಯಯನಂ**—ಹಿಂತಿರುಗುವಿಕೆಯನ್ನೂ । **ಸಂಜ್ಞಾನಂ**—ಅವುಗಳು ಇರುವಿಕೆಯ ಜ್ಞಾನವನ್ನೂ । **ಯತ್ ಪರಾಯಣಂ**—ಅವುಗಳು ಪುನಃ ಹಿಂದಕ್ಕೆ (ಮೇಯಲು) ಹೋಗುವಿಕೆಯನ್ನೂ । **ಆವರ್ತನಂ**—ಅಲ್ಲಿ ಸಂಚರಿಸುವುದನ್ನೂ । **ನಿವರ್ತನಂ**—ಅಲ್ಲಿಂದ ಮನೆಗೆ ಹಿಂತಿರುಗಿ ಬರುವಿಕೆಯನ್ನೂ ಪ್ರಾರ್ಥಿಸುತ್ತೇನೆ। **ಯಃ ಗೋಪಾಃ**—ಆ ಗೋವುಗಳ ರಕ್ಷಕನು ಯಾವನುಂಟೋ । **ತಂ ಅಪಿ**—ಅವನನ್ನು । **ಹುವೇ**—ಪ್ರಾರ್ಥಿಸುತ್ತೇನೆ.

॥ ಭಾವಾರ್ಥ ॥

ಮರೆಯಲ್ಲಿರುವಾಗ ಆ ಗೋವುಗಳ ಸಂಚಾರ ಜ್ಞಾನವನ್ನೂ, ಮರೆಯಿಂದ ನಮ್ಮಲ್ಲಿಗೆ ಹಿಂತಿರುಗಿ ಬರುವಿಕೆಯನ್ನೂ, ಅವುಗಳು ಪುನಃ ಹಿಂದಕ್ಕೆ ಮೇಯಲು ಹೋಗುವಿಕೆಯನ್ನೂ, ಅಲ್ಲಿ ಅವುಗಳಲ್ಲಿ ಸಂಚರಿಸುವುದನ್ನೂ, ಅಲ್ಲಿಂದ ಮನೆಗೆ ಹಿಂತಿರುಗಿ ಬರುವಿಕೆಯನ್ನೂ ಪ್ರಾರ್ಥಿಸುತ್ತೇನೆ. ಆ ಗೋವುಗಳ ರಕ್ಷಕನು ಯಾವನುಂಟೋ ಅವನನ್ನೂ ಪ್ರಾರ್ಥಿಸುತ್ತೇನೆ.

English Translation

I invoke the knowledge of the place, of their going of their coming, of their departure, of their wandering, of their returning: (I invoke)·him who is their keeper·

ಸಂಹಿತಾಪಾಠಃ

ಯ ಉದಾನಡ್ವ್ಯಯನಂ ಯ ಉದಾನಟ್ಪರಾಯಣಂ ।
ಆವರ್ತನಂ ನಿವರ್ತನಮಪಿ ಗೋಪಾ ನಿ ವರ್ತತಾಂ ॥ ೫ ॥

॥ ಪದಪಾಠಃ ॥

ಯಃ । ಉತ್ಽಆನಟ್ । ವಿಽಅಯನಂ । ಯಃ । ಉತ್ಽಆನಟ್ । ಪರಾಽಅಯನಂ ।
ಆಽವರ್ತನಂ । ನಿಽವರ್ತನಂ । ಅಪಿ । ಗೋಪಾಃ । ನಿ । ವರ್ತತಾಂ ॥ ೫ ॥

। ಪದಪಾಠಃ ।

ಯೋ ಗೋಪಾ ಗೋಪಾಲೋ ವ್ಯಯನಂ ನಷ್ಟಾನಾಂ ಗವಾಮನ್ವೇಷಣಾರ್ಥಂ ವಿವಿಧಂ ಗಮನಮುದಾನಟ್ ।ವ್ಯಾಪ್ನೋತಿ ಅನುಭವತಿ । ಯಃ ಪರಾಯಣಂ ಪರಾಗಮನಮುದಾನಟ್ ವ್ಯಾಪ್ನೋತಿ । ವನಂ ಪ್ರತಿ ಗವಾಂ ಚರಣಾಯ ಗಮನಮಿತ್ಯರ್ಥಃ । ಯಶ್ಚಾ ವರ್ತನಂ ವನಚಾರಿಣೀಭಿ-ರ್ಗೋಭಿಃ ಸಹ ಪ್ರವರ್ತನಮನುಭವತಿ । ಯೋಽಪಿ ಗೋಪಾ ನಿವರ್ತನಂ ಗೋಭಿಃ ಸಹ ವನಾದ್ಗೃಹಂ ಪ್ರತಿ ನಿರ್ಗಮನಮನುಭವತಿ । ಸೋಽಪಿ ಗೋಪಾಲೋ ನಿ ವರ್ತತಾಂ । ಗೋಭಿಃ ಸಹ ವನಾದ್ಗೃಹಂ ಪ್ರತಿ ಕ್ಷೇಮೇಣಾಗಚ್ಛತು ॥

। ಪ್ರತಿಪದಾರ್ಥ ।

**ಯಃ (ಗೋಪಾಃ)**—ಯಾವ ಗೋಪಾಲಕನು । **ವ್ಯಯನಂ**—ನಷ್ಟವಾದ ಆ ಗೋವುಗಳನ್ನು ಹುಡುಕುತ್ತಾ । **ಉದಾನಟ್**—ಅವುಗಳನ್ನು ಸಮಿಾಪಿಸುವನೋ । **ಯಃ**—ಯಾರು । **ಪರಾಯಣಂ**—ಅವುಗಳು ಸ್ವೇಚ್ಛೆಯಾಗಿ ಸಂಚರಿಸುವುದನ್ನು । **ಉದಾನಟ್**—ಕಂಡುಹಿಡಿದು ಸಮಿಾಪಿಸುವನೋ । **ಆವರ್ತನಂ**—ಅವುಗಳೊಡನೆ ಸಂಚಾರವನ್ನು ಹೊಂದುವನೋ । **ನಿವರ್ತನಂ**—ಅವುಗಳು ಹಿಂತಿರುಗುವಾಗ ಅವುಗಳ ಜೊತೆಯಲ್ಲಿರುವನೋ । **ಅಪಿ ಗೋಪಾಃ**—ಆ ಗೋಪಾಲಕನೂ । **ನಿ ವರ್ತತಾಂ**—ಅವುಗಳೊಡನೆ ಹಿಂತಿರುಗಲಿ.

। ಭಾವಾರ್ಥ ।

ಯಾವ ಗೋರಕ್ಷಕನು ನಷ್ಟವಾದ ಆ ಗೋವುಗಳನ್ನು ಹುಡುಕುತ್ತ ಅವುಗಳನ್ನು ಸಮಿಾಪಿಸುವನೋ, ಯಾರು ಅವುಗಳು ಸ್ವೇಚ್ಛೆಯಾಗಿ ಸಂಚರಿಸುವುದನ್ನು ಕಂಡುಹಿಡಿದು ಸಮಿಾಪಿಸುವನೋ ಮತ್ತು ಅವುಗಳೊಡನೆ ಸಂಚರಿಸುವನೋ, ಯಾರು ಅವುಗಳು ಮನೆಗೆ ಹಿಂತಿರುಗವಾಗಲೂ ಅವುಗಳ ಜೊತೆಯಲ್ಲಿರುವನೋ ಆ ಗೋಪಾಲಕನೂ ಅವುಗಳೊಡನೆ ಹಿಂತಿರುಗಲಿ.

English Translation

May the keeper return (with them); he who reaches them when lost; who reaches them when straying; who reaches them when wandering, and returning.

। ಸಂಹಿತಾಪಾಠ ।

ಆ ನಿವರ್ತ ನಿ ವರ್ತಯ ಪುನರ್ನ ಇಂದ್ರ ಗಾ ದೇಹಿ ।
ಜೀವಾಭಿರ್ಭುನಜಾಮಹೈ ॥ ೬ ॥

। ಪದಪಾಠಃ ।

ಆ । ನಿऽವರ್ತ । ನಿ । ವರ್ತಯ । ಪುನಃ । ನಃ । ಇಂದ್ರ । ಗಾಃ । ದೇಹಿ ।
ಜೀವಾಭಿಃ । ಭುನಜಾಮಹೈ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮಾ ನಿವರ್ತ । ಆನಿವರ್ತಸ್ವ । ಅಸ್ಮದಭಿಮುಖೋ ಭವ । ತತೋಽನ್ಯತೋ ಗಚ್ಛಂತೀರ್ಗಾ ನಿ ವರ್ತಯ । ಅಸ್ಮದಭಿಮುಖೀಃ ಕುರು । ಏವಂ ಕೃತ್ವಾ ಚ ಹೇ ಇಂದ್ರ ತ್ವಂ ಪುನಃ ಪಶ್ಚಾನ್ನೋಽಸ್ಮಭ್ಯಂ ಗಾ ದೇಹಿ । ಪ್ರಯಚ್ಛ । ತ್ವಯಾ ದತ್ತಾಭಿರ್ಜೀವಾಭಿಶ್ಚಿರಂ ಜೀವಂತೀಭಿಃ ಸರ್ವಸ್ಯ ಜೀವಯಿತ್ರೀಭಿರ್ವಾ ಗೋಭಿರ್ಭುನಜಾಮಹೈ । ವಯಂ ಭುಂಜೀಮಹಿ । ಯದ್ವಾ । ಭುಜಿರತ್ರಾಂತರ್ಭಾವಿತಣ್ಯರ್ಥಃ । ದೇವಪಿತ್ರಾನ್ಸಂಭೋಜಯೇಮಹಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಆ ನಿವರ್ತ**—ನಮಗಭಿಮುಖವಾಗಿ ಹಿಂತಿರುಗು । **ನಿ ವರ್ತಯ**—ಗೋವುಗಳನ್ನು । ನಮಗಭಿಮುಖವಾಗುವಂತೆಮಾಡು । **ಪುನಃ**—ತಿರುಗಿಯೂ । **ನಃ**—ನಮಗೆ । **ಗಾಃ**—ಗೋವುಗಳನ್ನು । **ದೇಹಿ**—ಕೊಡು । **ಜೀವಾಭಿಃ**—ಜೀವಿಸಿರುವ ಸಕಲ ಗೋವುಗಳೊಂದಿಗೂ । **ಭುನಜಾಮಹೈ**—ನಾವು ಸೌಖ್ಯವನ್ನನುಭವಿಸುವಂತಾಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಮಗಭಿಮುಖವಾಗಿ ಹಿಂತಿರುಗು. ಗೋವುಗಳನ್ನು ನಮಗಭಿಮುಖವಾಗುವಂತೆ ಮಾಡು. ತಿರುಗಿಯೂ ನಮಗೆ ಗೋವುಗಳನ್ನು ಕೊಡು. ಜೀವಿಸಿರುವ ಸಕಲ ಗೋವುಗಳೊಂದಿಗೂ ನಾವು ಸೌಖ್ಯವನ್ನನುಭವಿಸುವಂತಾಗಲಿ.

English Translation

Indra, come back and bring back (the cattle); give us our cows again, may we rejoice in our cows being alive.

॥ ಸಂಹಿತಾಪಾಠಃ ॥

ಪರಿ ವೋ ವಿಶ್ವತೋ ದಧ ಊರ್ಜಾ ಘೃತೇನ ಪಯಸಾ ।
ಯೇ ದೇವಾಃ ಕೇ ಚ ಯಜ್ಞಿಯಾಸ್ತೇ ರಯ್ಯಾ ಸಂ ಸೃಜಂತು ನಃ ॥ ೭ ॥

॥ ಪದಪಾಠಃ ॥

ಪರಿ । ವಃ । ವಿಶ್ವತಃ । ದಧೇ । ಊರ್ಜಾ । ಘೃತೇನ । ಪಯಸಾ ।
ಯೇ । ದೇವಾಃ । ಕೇ । ಚ । ಯಜ್ಞಿಯಾಃ । ತೇ । ರಯ್ಯಾ । ಸಂ । ಸೃಜಂತು । ನಃ ॥ ೭ ॥

। ಸಾಯಣಭಾಷ್ಯಂ ।

ಹೇ ದೇವಾಃ ವಿಶ್ವತಃ ಸರ್ವತಃ ಸ್ಥಿತಾನ್ವೋ ಯುಷ್ಮಾನೂರ್ಜಾ ಗೋಸಂಬಂಧಿನಾ ದಧಿಲಕ್ಷ-ಣೇನಾನ್ನೇನ ಘೃತೇನಾಜ್ಯೇನ ಪಯಸಾ ಕ್ಷೀರೇಣ ಚ ಪರಿ ದಧೇ । ಸಂಧಾರಯಾಮಿ । ಯುಷ್ಮಭ್ಯಂ ಹವಿರ್ದಾನ್ಯರೇಣ ಪ್ರಯಚ್ಛಾಮಿ । ನ ಕೇವಲಮಾತ್ಮಾನಂ ಪ್ರಷ್ಟಾಮಿತ್ಯರ್ಥಃ । ಏತಜ್ಜ್ಞಾತ್ವಾ ಯೇ ಕೇ ಚ ದೇವಾ ಯಜ್ಞಿಯಾ ಯಜ್ಞಾರ್ಹಾಃ ಸಂತಿ ತೇ ದೇವಾ ನೋಽಸ್ಮಾನ್ರಯ್ಯಾ ಗೋಲಕ್ಷಣೇನ ಧನೇನ ಸಂ ಸೃಜಂತು । ಸಂ ಯೋಜಯಂತು ॥

। ಪ್ರತಿಪದಾರ್ಥ ।

(ಎಲೈ ದೇವತೆಗಳೇ) ವಿಶ್ವತಃ—ಸರ್ವತ್ರ ಇರತಕ್ಕ । ವಃ—ನಿಮ್ಮನ್ನು । ಊರ್ಜಾ—ದಧಿಯಿಂದಲೂ । ಘೃತೇನ—ಆಜ್ಯದಿಂದಲೂ । ಪಯಸಾ—ಕ್ಷೀರದಿಂದಲೂ । ಪರಿ ದಧೇ—ತುಂಬಿಸಿ ನಿಮ್ಮನ್ನು ಪುಷ್ಟರಾಗುವಂತೆ ಮಾಡುತ್ತೇನೆ । ಯೇ ಕೇ ಚ ದೇವಾಃ—ಯಾವ ಯಾವ ದೇವತೆಗಳು । ಯಜ್ಞಿಯಾಃ—ಯಜ್ಞಾರ್ಹರಾಗಿರುವರೋ . ತೇ—ಅವರೆಲ್ಲರೂ । ನಃ—ನಮ್ಮನ್ನು । ರಯ್ಯಾ—ಸಂಪತ್ತಿನೊಡನೆ । ಸಂ ಸೃಜಂತು—ಕೂಡಿಸಿಡಲಿ.

। ಭಾವಾರ್ಥ ।

ಎಲೈ ದೇವತೆಗಳೇ, ಸರ್ವತ್ರ ಸ್ಥಿತರಾಗಿರುವ ನಿಮ್ಮನ್ನು ದಧಿಯಿಂದಲೂ ಆಜ್ಯದಿಂದಲೂ, ಕ್ಷೀರದಿಂದಲೂ ತುಂಬಿಸಿ ನಿಮ್ಮನ್ನು ಪುಷ್ಟರಾಗುವಂತೆ ಮಾಡುತ್ತೇನೆ. ಯಾವ ಯಾವ ದೇವತೆಗಳು ಯಜ್ಞಾರ್ಹರಾಗಿರುವರೋ, ಅವರೆಲ್ಲರೂ ನಮ್ಮನ್ನು ಸಂಪತ್ತಿನೊಡನೆ ಕೂಡಿಸಿಡಲಿ.

English Translation

I nourish you gods, who are everywhere present, with curds, with butter, with milk ; may all those deities who are entitled to worship reward us with riches.

। ಸಂಹಿತಾಪಾಠಃ ।

ಆ ನಿವರ್ತನ ವರ್ತಯ ನಿ ನಿವರ್ತನ ವರ್ತಯ ।

ಭೂಮ್ಯಾಶ್ಚತಸ್ರಃ ಪ್ರದಿಶಸ್ತಾಭ್ಯ ಏನಾ ನಿ ವರ್ತಯ ॥ ೮ ॥

। ಪದಪಾಠಃ ।

ಆ । ನಿऽವರ್ತನ । ವರ್ತಯ । ನಿ । ನಿऽವರ್ತನ । ವರ್ತಯ ।

ಭೂಮ್ಯಾಃ । ಚತಸ್ರಃ । ಪ್ರऽದಿಶಃ । ತಾಭ್ಯಃ । ಏನಾಃ । ನಿ । ವರ್ತಯ ॥ ೮ ॥

॥ ಸಾಯಣಭಾಷ್ಯಂ ॥

ಮಂತ್ರದ್ರಷ್ಟರ್ಷಿಃ ಸ್ವಾತ್ಮಾನಂ ಗಾಶ್ಚ ಸಂಬೋಧ್ಯಾಹ। ಹೇ ಮದೀಯಾತ್ಮನ್ ತ್ವಂ ಗಾ ಆ ವರ್ತಯ । ಆಕಾರೋಽಪ್ಯನೇನಾಪಿ ಸಂಬಧ್ಯತೇ । ಮದಭಿಮುಖೀಃ ಕುರು । ಸ್ತುತ್ಯಾ ಯಾಗೇನ ಚ ತಾಃ ಪ್ರಸಾದ್ಯೋಪನಮಯತೇತ್ಯರ್ಥಃ । ಹೇ ಗಾವಃ ಯೂಯಮಪಿ ಪ್ರಸಾದ್ಯಮಾನಾಃ ಆ ನಿವರ್ತನ । ಆನಿವರ್ತಧ್ವಂ । ಅಭಿಮುಖ್ಯೇನಾಗಚ್ಛತ । ಪುನರಪ್ಯಾಹ । ಹೇ ಮದೀಯಾತ್ಮನ್ ತ್ವಂ ನಿ ವರ್ತಯ । ಗೋಸಂಚರಣಸ್ಥಾನಾದಪಗಚ್ಛಂತೀರ್ಗಾ ಇತೋಽಭಿಗಂತ್ರೀಃ ಕುರು । ಯೂಯಮಪಿ ಹೇ ಗಾವಃ ನಿವರ್ತ್ಯಮಾನಾಃ ಸತ್ಯೋ ನಿವರ್ತನ । ನಿವರ್ತಧ್ವಂ । ಇದಾನೀಂ ಸ್ವಾತ್ಮಾ ಗಾವಶ್ಚರ್ಷಿಂ ಪ್ರತಿ ಬ್ರುವತೇ। ಹೇ ಋಷೇ ಅಹಂ ಕುತೋ ಗಾ ನಿವರ್ತಯಾಮೀತಿ ಕುತೋ ವಯಂ ನಿವರ್ತಯಾಮಹ ಇತ್ಯಾತ್ಮನಾ ಗೋಭಿಶ್ಚ ಪೃಷ್ಟಃ ಸನ್ನಾಹ। ಭೂಮ್ಯಾಃ ಪೃಥಿವ್ಯಾಶ್ಚತಸ್ರಃ ಪ್ರದಿಶಶ್ಚತುಃಸಂಖ್ಯಾಯುಕ್ತಾಃ ಪ್ರಕೃಷ್ಟಾ ಯಾ ದಿಶಃ ಸಂತಿ ತಾಭ್ಯೋ ದಿಗ್ಭ್ಯ ಏನಾ ಗಾ ನಿ ವರ್ತಯ । ಹೇ ಆತ್ಮನ್ ಮದಭಿಮುಖೀಃ ಕುರು । ಹೇ ಗಾವಃ ಯೂಯಮಪಿ ತಾಭ್ಯೋ ದಿಗ್ಭ್ಯೋ ನಿವರ್ತಧ್ವಮಿತಿ ಸಾಮರ್ಥ್ಯಾಲ್ಲಬ್ಧಂ । ಯದ್ವಾ । ಆಬ್ದೈವತಪಕ್ಷೇಽಪಿ ಸೂಕ್ತಾರ್ಥೋ ಯಥಾ ಘಟತೇ ತಥಾ ಯೋಜನಾ ಕರ್ತವ್ಯಾ ॥

॥ ಪ್ರತಿಪದಾರ್ಥ ॥

ಆ ವರ್ತಯ—ಗೋವುಗಳನ್ನು ಹಿಂತಿರುಗುವಂತೆ ಮಾಡು. । **ನಿವರ್ತನ**—ಎಲೈ ಗೋವುಗಳೇ ನೀವು ಹಿಂತಿರುಗಿರಿ । **ನಿವರ್ತಯ**—ಗೃಹಕ್ಕೆ ತಿರುಗಿ ಬರುವಂತೆಮಾಡಿ । **ನಿವರ್ತನ**—ಗೃಹಕ್ಕೆ ಬನ್ನಿರಿ । **ಭೂಮ್ಯಾಃ**—ಪೃಥ್ವಿಗೆ । **ಚತಸ್ರಃ**—ನಾಲ್ಕು । **ಪ್ರದಿಶಃ**—ದಿಕ್ಕುಗಳೂ ಇವೆ । **ತಾಭ್ಯಃ**—ಆ ಎಲ್ಲ ದಿಕ್ಕುಗಳಿಂದಲೂ । **ಏನಾಃ**-ಈ ಗೋವುಗಳನ್ನು । **ನಿವರ್ತಯ**—ಹಿಂತಿರುಗಿಸು.

॥ ಭಾವಾರ್ಥ ॥

ಗೋವುಗಳನ್ನು ಹಿಂತಿರುಗುವಂತೆ ಮಾಡು. ಎಲೈ ಗೋವುಗಳೇ, ನೀವೂ ಹಿಂತಿರುಗಿ ಬನ್ನಿರಿ. ಗೃಹಕ್ಕೆ ಹಿಂತಿರುಗಿ. ಪೃಥ್ವಿಗೆ ನಾಲ್ಕುದಿಕ್ಕುಗಳಿವೆ. ಆ ಎಲ್ಲ ದಿಕ್ಕುಗಳಿಂದಲೂ ಗೋವುಗಳನ್ನು ಹಿಂತಿರುಗಿಸು.

## English Translation

Come back (you cows), bring them back; return (you cows), bring them back; and (you cows) coming back, return; there are four quarters of the earth, bring them back from them,



# ಇಪ್ಪತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಭದ್ರಮಿತಿ ದಶರ್ಚಂ ಚತುರ್ಥಂ ಸೂಕ್ತಂ । ಆದ್ಯೈಕಪದಾ ದಶಾಕ್ಷರಾ ವಿರಾಟ್ । ಅಗ್ನಿಮೀಳೇ ಭುಜಾಮಿತ್ಯೇಷಾನುಷ್ಟುಪ್ ನವಮೀ ವಿರಾಟ್ ದಶಮೀ ತ್ರಿಷ್ಟುಪ್ ಮಧ್ಯೇ ಷಡ್ಗಾಯತ್ರ್ಯಃ । ಇದಮಾದೀನಾಂ ಸಪ್ತಸೂಕ್ತಾನಾಮಿಂದ್ರಪುತ್ರಃ ಪ್ರಜಾಪತಿಪುತ್ರೋ ವಾ ವಿಮದ ಋಷಿರ್ವಸುಕ್ರಪುತ್ರೋ ವಸುಕೃದಾಖ್ಯೋ ವಾ । ಇದಮುತ್ತರಂ ಚಾಗ್ನೇಯಂ । ತಥಾ ಚಾನುಕ್ರಾಂತಂ । ಸಪ್ತೋತ್ತರಾಣ್ಯೈಂದ್ರೋ ವಿಮದಃ ಪ್ರಜಾಪತ್ಯೋ ವಾ ವಾಸುಕೋ ವಸುಕೃದ್ವಾ ಭದ್ರಂ ದಶಾಗ್ನೇಯಂ ತು ಗಾಯತ್ರಮಾದ್ಯೈಕಪದಾ ಪಾದ ಏವ ವಾ ಶಾಂತ್ಯರ್ಥಃ ಪರಾನುಷ್ಟುಬಂತ್ಯೇ ವಿರಾಟ್ತ್ರಿಷ್ಟುಭಾವಿತಿ ॥ ಗತೋ ವಿನಿಯೋಗಃ ॥

ಅನುವಾದವು—ಭದ್ರಂ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತದ ಮೊದಲನೆಯ ಋಕ್ಕು ಹತ್ತು ಅಕ್ಷರದ ಏಕಪದಾ ವಿರಾಟ್ ಎಂಬ ಛಂದಸ್ಸಿನದು. **ಅಗ್ನಿಮೀಳೇ ಭುಜಾಂ** ಎಂಬ ಎರಡನೆಯ ಋಕ್ಕು ಅನುಷ್ಟುಪ್‌ಛಂದಸ್ಕವು; ಉಳಿದ ಆರು ಋಕ್ಕುಗಳು ಗಾಯತ್ರೀಛಂದಸ್ಕವು. ಈ ಸೂಕ್ತದಿಂದ ಮುಂದಿನ ಏಳು ಸೂಕ್ತಗಳಿಗೆ ಇಂದ್ರಪುತ್ರ ಅಥವಾ ಪ್ರಜಾಪತಿಪುತ್ರನಾದ ವಿಮದನೆಂಬುವನು ಅಥವಾ ವಸುಕ್ರಪುತ್ರನಾದ ವಸುಕೃತ್ ಎಂಬುವನು ಋಷಿಯು. ಈ ಸೂಕ್ತಕ್ಕೂ ಇದರ ಮುಂದಿನ ಸೂಕ್ತಕ್ಕೂ ಅಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ—**ಸಪ್ತೋತ್ತರಾಣ್ಯೈಂದ್ರೋ ವಿಮದಃ ಪ್ರಾಜಾಪತ್ಯೋ ವಾ ವಸುಕ್ರೋ ವಸುಕೃದ್ವಾ ಭದ್ರಂ ದಶಾಗ್ನೇಯಂ ತು ಗಾಯತ್ರಮಾದ್ಯೈಕಪದಾ ಪಾದ ಏವ ವಾಶಾಂತ್ಯರ್ಥಃ ಪರಾನುಷ್ಟುಬಂತ್ಯೇ ವಿರಾಟ್ತ್ರಿಷ್ಟುಭೌ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೨೦

**ಮಂಡಲ—೧೦ ॥ ಅನುವಾಕ—೨॥ ಸೂಕ್ತ—೨೦ ॥**
**ಅಷ್ಟಕ—೭ ॥ ಅಧ್ಯಾಯ ೭ ॥ ವರ್ಗ—೩, ೪ ॥**
**ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥**
**ಋಷಿಃ ವಿಮದ ಐಂದ್ರಃ ಪ್ರಾಜಾಪತ್ಯೋ ವಾ ವಸುಕೃದ್ವಾ ವಾಸುಕ್ರಃ ॥**
**ದೇವತಾ—ಅಗ್ನಿಃ ॥**
**ಛಂದಃ—೧ ಏಕಪದಾ (ಪಾದ ಏವ ವಾ ಶಾಂತ್ಯರ್ಥಃ) । ೨. ಅನುಷ್ಟುಪ್ । ೩-೮. ಗಾಯತ್ರೀ । ೯. ವಿರಾಟ್ । ೧೦. ತ್ರಿಷ್ಟುಪ್ ॥**

॥ ಸಂಹಿತಾಪಾಠಃ ॥

**ಭದ್ರಂ ನೋ ಅಪಿ ವಾತಯ ಮನಃ ॥ ೧ ॥**

॥ ಪದಪಾಠಃ ॥

**ಭದ್ರಂ ನಃ ಅಪಿ ವಾತಯ ಮನಃ ॥ ೧ ॥**

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ನೋಽಸ್ಮಾಕಂ ಮನೋ ಭದ್ರಂ ಶುಭಯುಕ್ತಮಪಿ ವಾತಯ । ಅಪಿರತ್ರ ಧಾತ್ವರ್ಥಾನುವಾದೀ । ಆಗಮಯ । ತ್ವತ್ಸಂಬಂಧಿಸ್ತೋತ್ರಕರಣೇ ಪ್ರೇರಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) ಭದ್ರಂ—ಕಲ್ಯಾಣಕಾರಕವಾದ । ಮನಃ—ಮನಸ್ಸನ್ನು ನಃ—ನಮ್ಮ ಕಡೆಗೆ । **ಅಪಿ ವಾತಯ** ತಿರುಗುವಂತೆ ಮಾಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನ ಅನುಗ್ರಹಾತ್ಮಕವೂ ಕಲ್ಯಾಣಕಾರಕವೂ ಆದ ಮನಸ್ಸನ್ನು ನಮ್ಮ ಕಡೆಗೆ ತಿರುಗಿಸಿ ನಮ್ಮನ್ನು ಅನುಗ್ರಹಿಸು.

English Translation

(Agni), manifest towards us a favourable mind.

॥ ಸಂಹಿತಾಪಾಠಃ ॥

ಅಗ್ನಿಮೀಳೇ ಭುಜಾಂ ಯವಿಷ್ಠಂ ಶಾಸಾ ಮಿತ್ರಂ ದುರ್ಧರೀತುಂ ।
ಯಸ್ಯ ಧರ್ಮನ್ತ್ಸ್ವ೧ರೇನೀಃ ಸಪರ್ಯಂತಿ ಮಾತುರೂಧಃ ॥ ೨ ॥

॥ ಪದಪಾಠಃ ॥

ಅಗ್ನಿಂ । ಈಳೇ । ಭುಜಾಂ । ಯವಿಷ್ಠಂ । ಶಾಸಾ । ಮಿತ್ರಂ । ದುಃऽಧರೀತುಂ ।
ಯಸ್ಯ । ಧರ್ಮನ್ । ಸ್ವಃ । ಏನೀಃ । ಸಪರ್ಯಂತಿ । ಮಾತುಃ । ಊಧಃ ॥ ೨ ॥

॥ ಸಾಯಣಭಾಷ್ಯಂ ॥

ಭುಜಾಂ ಹವಿರ್ಭುಜಾಂ ದೇವಾನಾಂ ಮಧ್ಯೇ ಯವಿಷ್ಠಮಹನ್ಯಹನ್ಯಗ್ನಿಹೋತ್ರಾದಿಕರ್ಮಾರ್ಥಂ ಜಾಯಮಾನತ್ವಾದತಿಶಯೇನ ಯುವಾನಂ ಶಾಸಾನುಶಾಸನೇನ ಮಿತ್ರಂ । ಯಸ್ಮಾದಿದಂ ಕರ್ತವ್ಯಮಿದಂ ನ ಕರ್ತವ್ಯಮಿತಿ ಸರ್ವಮನುಶಾಸ್ತಿ ತಸ್ಮಾತ್ಸರ್ವಸ್ಯ ಮಿತ್ರಭೂತಮಿತ್ಯರ್ಥಃ । ದುರ್ಧರೀತುಂ ದುರ್ಧರಣೀಯಂ ಸಂಗ್ರಾಮೇ ಶತ್ರುಭಿರ್ದುರ್ನಿವಾರಣೀಯಂ ಏವಂಭೂತಮಗ್ನಿಮೀಳೇ। ಸ್ತೌಮಿ । ಅಪಿ ಚ ಯಸ್ಯಾಗ್ನೇರ್ಧರ್ಮನ್ಧರ್ಮಣ್ಯಗ್ನಿಹೋತ್ರಾದಿಕೇ ಕರ್ಮಣಿ ಸ್ವರ್ದ್ಯುಲೋಕಮಾದಿತ್ಯಂ ಸರ್ವಂ ದೇವಜಾತಂ ವೈನೀರೇನ್ಯಃ ಪ್ರತಿಗಂತ್ರ್ಯ ಆಹುತಯಃ ಸ್ತುತಯಶ್ಚ ಸಪರ್ಯಂತಿ ಪರಿಚರಂತಿ ಸೇವಂತೇ । ಯದ್ವಾ। ಸ್ವಃ ಸಪರ್ಯಂತೀತ್ಯನಯೋಃ ಸಾಮಾನಾಧಿಕರಣ್ಯಂ। ಅತ್ರ ಸ್ವರಿತ್ಯವ್ಯಯಂ ಸರ್ವಶಬ್ದೋ ನಿಪಾತಃ ।

ಸ್ವಃ ಸರ್ವೇ ದೇವಾ ಏನೀರಾತ್ಮನಃ ಪ್ರತಿಗಂತ್ರೀರಾಹುತೀಃ ಸ್ತುತೀಶ್ಚ ಸಪರ್ಯಂತಿ ಸೇವಂತೇ । ಉಪ-
ಜೀವಂತೀತ್ಯರ್ಥಃ । ತತ್ರ ದೃಷ್ಟಾಂತಃ । ಲುಪ್ತೋಪಮಮೇತತ್। ಮಾತುರ್ಗೋರೂಧಃ ಕ್ಷೀರೋಪಸಂ-
ಹಾರಸ್ಥಾನಂ ಪ್ರತಿ ಯಥಾ ವತ್ಸಾ ಉಪಜೀವಂತಿ ತದ್ವತ್ । ತಮಗ್ನಿಮೀಳ ಇತಿ ಪೂರ್ವೇಣ ಸಂಬಂಧಃ ॥

। ಪ್ರತಿಪದಾರ್ಥ ।

**ಮಾತುಃ**—ತಾಯಿಯಾದ ಗೋವಿನ । **ಊಧಃ**—ಕೆಚ್ಚಲಿನ ಹಾಲನ್ನು ಕರುವು ಕುಡಿದು ಜೀವಿಸುವಂತೆ । **ಯಸ್ಯ**—ಯಾವ ಅಗ್ನಿಯ । **ಧರ್ಮನ್**—ಅಗ್ನಿಹೋತ್ರಾದಿಕರ್ಮಗಳಲ್ಲಿ । **ಸ್ವಃ**—ಸ್ವರ್ಗಾಭಿಮುಖವಾಗಿ । **ಏನೀಃ**—ಹೋಗತಕ್ಕ ಆಹುತಿಗಳನ್ನು । **ಸಪರ್ಯಂತಿ**—ದೇವತೆಗಳು ಸೇವಿಸಿ ಪುಷ್ಟರಾಗುವರೋ ಅಂತಹವನೂ । **ಭುಜಾಂ**—ಹವಿಸ್ಸನ್ನು ಸೇವಿಸುವ ದೇವತೆಗಳಲ್ಲಿ । **ಯವಿಷ್ಠಂ**—ಅತ್ಯಂತ ಯುವಕನೂ । **ಶಾಸಾ**—ಉಪದೇಶದಿಂದ । **ಮಿತ್ರಂ**—ಮಿತ್ರಭೂತನೂ । **ದುರ್ಧರೀತುಂ**—ಸಂಗ್ರಾಮಗಳಲ್ಲಿ ಅಪ್ರತಿಹತನೂ ಆದ । **ಅಗ್ನಿಂ**—ಅಗ್ನಿಯನ್ನು। **ಈಳೇ**—ಸ್ತುತಿಸುತ್ತೇನೆ.

॥ ಭಾವಾರ್ಥ ॥

ತಾಯಿಯಾದ ಗೋವಿನ ಕೆಚ್ಚಲಿನ ಹಾಲನ್ನು ಕರುವು ಆಶ್ರಯಿಸಿ ಕುಡಿಯುವಂತೆ, ಯಾವ ಅಗ್ನಿಯ ಅಗ್ನಿಹೋತ್ರಾದಿಕರ್ಮಗಳಲ್ಲಿ ಸ್ವರ್ಗಾಭಿಮುಖವಾಗಿ ಹೋಗತಕ್ಕ ಆಹುತಿಗಳನ್ನು ದೇವತೆಗಳು ಆಶ್ರಯಿಸಿ ಸೇವಿಸುವರೋ ಅಂತಹವನೂ, ಹವಿಸ್ಸನ್ನು ಸೇವಿಸುವ ದೇವತೆಗಳಲ್ಲಿ ಅತ್ಯಂತ ಯುವಕನೂ, ಉಪದೇಶವನ್ನು ಕೊಡುವುದರಿಂದ ಮಿತ್ರಭೂತನೂ, ಸಂಗ್ರಾಮಗಳಲ್ಲಿ ಅಪ್ರತಿಹತನೂ ಆದ ಅಗ್ನಿಯನ್ನು ಸ್ತುತಿಸುತ್ತೇನೆ.

## English Translation

I glorify Agni, the young of the feeders (on oblations), friendly in counsel, difficult to resist, at whose rite the oblations seek heaven, as (calves) the udder of the mother cow,

। ಸಂಹಿತಾಪಾಠಃ ।

ಯಮಾಸಾ ಕೃಪನೀಳಂ ಭಾಸಾಕೇತುಂ ವರ್ಧಯಂತಿ ।

ಭ್ರಾಜತೇ ಶ್ರೇಣಿದನ್ ॥ ೩ ॥

ಪದಪಾಠಃ ।

ಯಂ । ಆಸಾ । ಕೃಪಽನೀಳಂ । ಭಾಸಾಽಕೇತುಂ । ವರ್ಧಯಂತಿ

ಭ್ರಾಜತೇ । ಶ್ರೇಣಿಽದನ್ ॥ ೩ ॥

೦ ॥

ಸ್ತೋತಾರೋ ಯಮ್ಮಾರಶ್ಯಾಸಾ ಸ್ತುತಿಹವಿರ್ಲಕ್ಷಣೇನೋಪಾಸನೇನ ಯಮಗ್ನಿಂ ವರ್ಧಯಂತಿ। ಕೀದೃಶಂ । ಕೃಪನೀಳಂ ಕರ್ಮಸ್ಥಾನಂ । ಕರ್ಮಾಧಾರಮಿತ್ಯರ್ಥಃ । ಭಾಸಾಕೇತುಂ ಜ್ವಾಲಾಲಕ್ಷಣಜ್ಞಾಪಕಂ ದೀಪ್ತೇಃ ಕರ್ತಾರಂ ವಾ । ಯಚ್ಛಬ್ದಶ್ರುತೇಸ್ತಚ್ಛಬ್ದೋಽಧ್ಯಾಹಾರ್ಯಃ । ಸೋಽಗ್ನಿಃ ಶ್ರೇಣಿದನ್ ಸ್ತೋತೃಭ್ಯೋ ಯಷ್ಟೃಭ್ಯೋಽಭೀಷ್ಟಫಲಸಮೂಹಪ್ರದಃ ಶತ್ರುಭ್ಯೋ ಜ್ವಾಲಾಪಂಕ್ತಿಪ್ರದೋ ವಾ ಏವಂಭೂತಃ ಸನ್ ಭ್ರಾಜತೇ । ಭಾಸತೇ ॥

। ಪ್ರತಿಪದಾರ್ಥ ।

ಕೃಪನೀಳಂ—ಕರ್ಮಕ್ಕೆ ಆಧಾರಭೂತನೂ । ಭಾಸಾಕೇತುಂ—ಜ್ವಾಲಾರೂಪವಾದ ಚಿಹ್ನವುಳ್ಳವನೂ ಆದ । **ಯಂ**—ಯಾವ ಅಗ್ನಿಯನ್ನು । **ಆಸಾ**—ಸ್ತುತ್ಯಾದಿಗಳಿಂದಲೂ ಹವಿಸ್ಸುಗಳಿಂದಲೂ । **ವರ್ಧಯಂತಿ**—ಸ್ತುತಿಕರ್ತರೂ, ಯಷ್ಟೃಗಳೂ ಪುಷ್ಟಿಗೊಳಿಸುವರೋ ಆ ಅಗ್ನಿಯು । **ಶ್ರೇಣಿದನ್**—ಆರಾಧಕರಿಗೆ ಉತ್ತಮವಾದ ಧನವನ್ನು ಕೊಡುತ್ತ । **ಭ್ರಾಜತೇ**—ಪ್ರಕಾಶಿಸುತ್ತಾನೆ.

॥ ಭಾವಾರ್ಥ ॥

ಕರ್ಮಕ್ಕೆಲ್ಲ ಆಧಾರಭೂತನೂ, ಜ್ವಾಲಾರೂಪವಾದ ಚಿಹ್ನವುಳ್ಳವನೂ ಆದ ಯಾವ ಅಗ್ನಿಯನ್ನು ಸ್ತುತ್ಯಾದಿಗಳಿಂದಲೂ ಹವಿಸ್ಸುಗಳಿಂದಲೂ ಸ್ತುತಿಕರ್ತರೂ, ಯಷ್ಟೃಗಳೂ ಪುಷ್ಟಿಗೊಳಿಸುವರೋ, ಆ ಅಗ್ನಿಯು ಆರಾಧಕರಿಗೆ ಉತ್ತಮವಾದ ಧನವನ್ನು ಕೊಡುತ್ತ ಪ್ರಕಾಶಿಸುತ್ತಾನೆ.

## English Translation

He whom (the worshippers) magnify with their mouth, the sustainer of pious works ; whose banner is the light, he shines, bestowing upon them all their desires.

॥ ಸಂಹಿತಾಪಾಠಃ ॥

ಅರ್ಯೋ ವಿಶಾಂ ಗಾತುರೇತಿ ಪ್ರ ಯದಾನಡ್ದಿವೋ ಅಂತಾನ್ ।
ಕವಿರಭ್ರಂ ದೀದ್ಯಾನಃ ॥ ೪ ॥

॥ ಪದಪಾಠಃ ॥

ಅರ್ಯಃ । ವಿಶಾಂ । ಗಾತುಃ । ಏತಿ । ಪ್ರ । ಯತ್ । ಆನಟ್ । ದಿವಃ । ಅಂತಾನ್ ।
ಕವಿಃ । ಅಭ್ರಂ । ದೀದ್ಯಾನಃ । ೪ ॥

॥ ಸಾಯಣಭಾಷ್ಯಂ ॥

ವಿಶಾಂ ಯಜಮಾನಮನುಷ್ಯಾಣಾಮರ್ಯೋ ಗಂತವ್ಯೋ ಗಾತುರ್ಗಮನಶೀಲೋಽಗ್ನಿರ್ದೀದ್ಯಾನೋ ದೀಪ್ಯಮಾನೋ ಯದ್ಯದೈತಿ ಊರ್ಧ್ವಂ ಗಚ್ಛತಿ ತದಾ ದಿವೋ ದ್ಯುಲೋಕಸ್ಯಾಂತಾನ್ಪರ್ಯಂತಾನ್ಕವಿರ್ಮೇಧಾವೀ ಸೋಽಗ್ನಿಃ ಪ್ರಾಣಟ್ । ಪ್ರಕರ್ಷೇಣ ವ್ಯಾಪ್ನೋತಿ । ಅಭ್ರಂ ಮೇಘೋಪಲಕ್ಷಿತಮಂತರಿಕ್ಷಂ ಚ ವ್ಯಾಪ್ನೋತಿ ।

॥ ಪ್ರತಿಪದಾರ್ಥ ॥

ವಿಶಾಂ—ಯಜಮಾನಾದಿಗಳಿಗೆ । **ಅರ್ಯಃ**—ಸ್ವಾಮಿಯೂ । **ಗಾತುಃ**—ಸಂಚಾರಶೀಲನೂ ಆದ ಅಗ್ನಿಯು **ದೀದ್ಯಾನಃ**—ಪ್ರಕಾಶಿಸುತ್ತ । **ಯತ್**—ಯಾವಾಗ । **ಏತಿ**—ಊರ್ಧ್ವಮುಖನಾಗಿ ಹೋಗುವನೋ ಆಗ । **ಕವಿಃ**—ಮೇಧಾವಿಯಾದ ಅಗ್ನಿಯು । **ದಿವಃ**—ದ್ಯುಲೋಕದ । **ಅಂತಾನ್**—ಕೊನೆಯ ಭಾಗಗಳನ್ನೂ । **ಪ್ರ ಆನಟ್**—ಪೂರ್ಣವಾಗಿ ವ್ಯಾಪಿಸುತ್ತಾನೆ । **ಅಭ್ರಂ**—ಅಂತರಿಕ್ಷವನ್ನೂ ವ್ಯಾಪಿಸುತ್ತಾನೆ.

॥ ಭಾವಾರ್ಥ ॥

ಯಜಮಾನಾದಿಗಳಿಗೆ ಸ್ವಾಮಿಯೂ, ಸಂಚಾರಶೀಲನೂ ಆದ ಅಗ್ನಿಯು ಪ್ರಕಾಶಿಸುತ್ತ ಯಾವಾಗ ಊರ್ಧ್ವಮುಖವಾಗಿ ಹೋಗುವನೋ ಆಗ ಮೇಧಾವಿಯಾದ ಅಗ್ನಿಯು ದ್ಯುಲೋಕದ ಕೊನೆಯ ಭಾಗಗಳನ್ನೂ ಅಂತರಿಕ್ಷವನ್ನೂ ಪೂರ್ಣವಾಗಿ ವ್ಯಾಪಿಸುತ್ತಾನೆ.

## English Translation

The refuge of the people, the mover, who when he moves, penetrates to the ends of the sky ; the sage illumining the firmament.

॥ ಸಂಹಿತಾಪಾಠಃ ॥

ಜುಷದ್ಧವ್ಯಾ ಮಾನುಷಸ್ಯೋರ್ಧ್ವಸ್ತಸ್ಥಾವೃಭ್ವಾ ಯಜ್ಞೇ ।

ಮಿನ್ವನ್ತ್ಸದ್ಮ ಪುರ ಏತಿ ॥ ೫ ॥

॥ ಪದಪಾಠಃ ॥

ಜುಷತ್ । ಹವ್ಯಾ । ಮಾನುಷಸ್ಯ । ಊರ್ಧ್ವಃ । ತಸ್ಥೌ । ಋಭ್ವಾ । ಯಜ್ಞೇ ।

ಮಿನ್ವನ್ । ಸದ್ಮ । ಪುರಃ । ಏತಿ ॥ ೫ ॥

॥ ಸಾಯಣಭಾಷ್ಯಂ ॥

ಮಾನುಷಸ್ಯ ಯಜಮಾನಸ್ಯ ಯಜ್ಞೇ ಯಜನೀಯೇ ಯಾಗೇ ಹವ್ಯಾ ಹವ್ಯಾನಿ ಹವೀಂಷಿ ಜುಷತ್ಸೇವಮಾನೋಽಗ್ನಿರ್ಋಭ್ವೋರುಭೂತೋ ಬಹುಜ್ವಾಲೋಪೇತ ಊರ್ಧ್ವಸ್ತಸ್ಥೌ ! ಉತ್ತಿಷ್ಠತಿ। ಊರ್ಧ್ವಂ ಜ್ವಲತೀತ್ಯರ್ಥಃ। ಅಪಿ ಚಾಯಮಗ್ನಿಃ ಪ್ರಾಗ್ವಂಶಾದಾರಭ್ಯ ಸದ್ಮ ಸದನಂ ಸೌಮಿಕೀಂ ವೇದಿಂ ಮಿನ್ವನ್ ಪರಿಚ್ಛಿಂದನ್ ಪುರಃ ಪುರಸ್ತಾದುತ್ತರವೇದಿಶಾಲಾಮುಖೀಯಾತ್ಪ್ರಣೀಯಮಾನಃ ಸನ್ನೇತಿ। ಗಚ್ಛತಿ

ಪ್ರತಿಪದಾರ್ಥ ॥

ಮಾನುಷಸ್ಯ—ಯಜಮಾನನ । ಯಜ್ಞೇ—ಯಾಗದಲ್ಲಿ । ಹವ್ಯಾ—ಹವಿಸ್ಸುಗಳನ್ನು । ಜುಷತ್—ಸೇವಿಸತಕ್ಕ ಅಗ್ನಿಯು । ಋಭ್ವಾ—ಅತ್ಯಧಿಕವಾದ ಜ್ವಾಲೆಯಿಂದ ಕೂಡಿ । ಊರ್ಧ್ವಃ—ಊರ್ಧ್ವಾಭಿಮುಖವಾಗಿ । ತಸ್ಥೌ—ನಿಂತಿದ್ದಾನೆ । ಸದ್ಮ—ಯಜ್ಞಸ್ಥಾನವನ್ನು । ಮಿನ್ವನ್—ಅಳೆಯುತ್ತ । ಪುರಃ—ಮುಂಭಾಗದಲ್ಲಿ । ಏತಿ—ಸಂಚರಿಸುತ್ತಾನೆ.

॥ ಭಾವಾರ್ಥ ॥

ಯಜಮಾನನ ಯಾಗದಲ್ಲಿ ಹವಿಸ್ಸುಗಳನ್ನು ಸೇವಿಸತಕ್ಕ ಅಗ್ನಿಯು ಅತ್ಯಧಿಕವಾದ ಜ್ವಾಲೆಯಿಂದ ಕೂಡಿ ಊರ್ಧ್ವಾಭಿಮುಖನಾಗಿ ನಿಂತಿದ್ದಾನೆ. ಯಜ್ಞಸ್ಥಾನವನ್ನು ಅಳೆಯುತ್ತ ಮುಂಭಾಗದಲ್ಲಿ ಸಂಚರಿಸುತ್ತಾನೆ.

## English Translation

Accepting the oblations (offered) at the sacrifice of the worshipper, he blazes up, with a mighty flame; fixing his abode, he advances.

॥ ಸಂಹಿತಾಪಾಠಃ ॥

ಸ ಹಿ ಕ್ಷೇಮೋ ಹವಿರ್ಯಜ್ಞಃ ಶ್ರುಷ್ಟೀದಸ್ಯ ಗಾತುರೇತಿ ।
ಅಗ್ನಿಂ ದೇವಾ ವಾಶೀಮಂತಂ ॥ ೬ ॥

॥ ಪದಪಾಠಃ ॥

ಸಃ । ಹಿ । ಕ್ಷೇಮಃ । ಹವಿಃ । ಯಜ್ಞಃ । ಶ್ರುಷ್ಟೀ । ಇತ್ । ಅಸ್ಯ । ಗಾತುಃ । ಏತಿ ।
ಅಗ್ನಿಂ । ದೇವಾಃ । ವಾಶೀಽಮಂತಂ ॥ ೬ ॥

॥ ಸಾಯಣಭಾಷ್ಯಂ ॥

ಯ ಉಕ್ತಗುಣವಿಶಿಷ್ಟೋಽಗ್ನಿಃ । ಹೀತ್ಯೇತದವಧಾರಣೇ । ಸ ಏವಾಗ್ನಿಃ ಕ್ಷೇಮಃ ಕುಶಲಹೇತುಃ । ಸರ್ವಸ್ಯ ಪರಿಪಾಲನಹೇತುರಿತ್ಯರ್ಥಃ । ಹವಿಃ ಪುರೋಡಾಶಾದಿಕಂ ಚ ಸ ಏವ ಹವಿಷಸ್ತನ್ನಿಮಿತ್ತತ್ವಾತ್ । ಯಜ್ಞೋ ಯಾಗೋಽಪಿ ಸ ಏವ ತಸ್ಯಾಪಿ ತದ್ಧೇತುತ್ವಾತ್ । ಕಿಂಚ ಶ್ರುಷ್ಟೀತ್ ಕ್ಷಿಪ್ರಮೇವಾಸ್ಯಾಗ್ನೇರ್ಗಾತುರ್ಗಮನಶೀಲೋಽಧಿಷ್ಠಾತ್ರಾತ್ಮೈತಿ । ದೇವಾನಾಮಾಹ್ವಾನಾರ್ಥಂ ಗಚ್ಛತಿ । ಗತ್ವಾ ಚ ಪ್ರತ್ಯಾಗಚ್ಛಂತಂ ವಾಶೀಮಂತಂ ಸ್ತುತಿಲಕ್ಷಣಯಾ ವಾಚೋಪೇತಮಗ್ನಿಂ ಪ್ರತಿ ದೇವಾ ಅಪಿ ಗಚ್ಛಂತೀತಿ ಶೇಷಃ ॥

॥ ಪ್ರತಿಪದಾರ್ಥ ॥

**ಸಃ**—ಪ್ರಸಿದ್ಧನಾದ । **ಕ್ಷೇಮಃ**—ಮಂಗಳಕಾರಕನು । **ಹವಿಃ**—ಪುರೋಡಾಶಾದಿರೂಪವಾದ ಹವಿಸ್ಸು । **ಯಜ್ಞಃ**—ಅವನೇ ಯಜ್ಞರೂಪನು । **ಶ್ರುಷ್ಟೀತ್**—ಕ್ಷಿಪ್ರವಾಗಿಯೇ । **ಅಸ್ಯ**—ಈ ಅಗ್ನಿಯ । **ಗಾತುಃ**—ಸಂಚಾರಾತ್ಮಕವಾದ ಶಕ್ತಿಯು । **ಏತಿ**—ದೇವತೆಗಳಲ್ಲಿಗೆ ಹೋಗುತ್ತದೆ । **ವಾಶೀಮಂತಂ**—ಸ್ತುತಿಯುಕ್ತನಾದ । **ಅಗ್ನಿಂ**—ಅಗ್ನಿಯನ್ನೇ । **ದೇವಾಃ**—ದೇವತೆಗಳೂ ಸಮೀಪಿಸುವರು.

॥ ಭಾವಾರ್ಥ ॥

ಪ್ರಸಿದ್ಧನಾದ ಅಗ್ನಿಯು ಮಂಗಳಕಾರಕನು. ಅವನೇ ಯಜ್ಞರೂಪನೂ, ಪುರೋಡಾಶಾದಿರೂಪವಾದ ಹವಿಸ್ಸೂ ಆಗಿರುತ್ತಾನೆ. ಈ ಅಗ್ನಿಯ ಸಂಚಾರಾತ್ಮಕವಾದ ಶಕ್ತಿಯು ದೇವತೆಗಳನ್ನು ಸಮೀಪಿಸುತ್ತದೆ. ದೇವತೆಗಳೂ ಸಹ ಸ್ತುತಿಯುಕ್ತನಾದ ಅಗ್ನಿಯನ್ನೇ ಸಮೀಪಿಸುವರು.

## English Translation

Agni is capable (of protecting all men), he is himself the oblation, and the sacrifice; rapidly indeed does his spirit move. The gods come to Agni, who bears the praises.

॥ ಸಂಹಿತಾಪಾಠಃ ॥

ಯಜ್ಞಾಸಾಹಂ ದುವ ಇಷೇಽಗ್ನಿಂ ಪೂರ್ವಸ್ಯ ಶೇವಸ್ಯ ।
ಅದ್ರೇಃ ಸೂನುಮಾಯುಮಾಹುಃ ॥ ೭ ॥

॥ ಪದಪಾಠಃ ॥

ಯಜ್ಞಽಸಹಂ । ದುವಃ । ಇಷೇ । ಅಗ್ನಿಂ । ಪೂರ್ವಸ್ಯ । ಶೇವಸ್ಯ ।
ಅದ್ರೇಃ । ಸೂನುಂ । ಆಯುಂ । ಆಹುಃ ॥ ೭

॥ ಸಾಯಣಭಾಷ್ಯಂ ॥

ಅತ್ರೈತವಾಕ್ಯತಾಯೈ ಯತ್ತಚ್ಛಬ್ದಾವಧ್ಯಾಹಾರ್ಯೌ । ಅಪರಾರ್ಧರ್ಚಃ ಪೂರ್ವಂ ವ್ಯಾಖ್ಯೇಯಃ । ಆಯುಂ ದೇವಾನಾಮಾಹ್ವಾನಾರ್ಥಂ ದೂತ್ಯೇನ ಗಂತಾರಂ ಯಮಗ್ನಿಮದ್ರೇಃ ಸೂನುಮಶ್ಮನಃ ಪುತ್ರಮಾಹುಃ ತ್ವಮದ್ಭ್ಯಸ್ತ್ವಮಶ್ಮನಸ್ಪರಿ । ಋ. ೨-೧-೧ । ಇತ್ಯೇವಮಾದಯೋ ಮಂತ್ರಾ ವದಂತಿ । ಯಜ್ಞಸಹಂ ಯಾಗಸ್ಯ ವೋಢಾರಂ । ಧಾರಯಿತಾರಮಿತ್ಯರ್ಥಃ । ತಮಗ್ನಿಮಭಿಲಕ್ಷ್ಯ ದುವಃ ಪರಿಚರಣಮಿಷೇ । ಇಚ್ಛಾಮಿ । ಕಿಮರ್ಥಂ । ಪೂರ್ವಸ್ಯ । ಅತ್ರ ಪೂರ್ವಶಬ್ದ ಉತ್ಕೃಷ್ಟವಾಚೀ । ಉತ್ಕೃಷ್ಟಸ್ಯ ಶೇವಸ್ಯ ಸ್ವರ್ಗಾಪವರ್ಗಲಕ್ಷಣಸುಖಸ್ಯ ಪ್ರಾಪ್ತ್ಯರ್ಥಮಿತಿ ಶೇಷಃ ॥

॥ ಪ್ರತಿಪದಾರ್ಥ ॥

ಆಯುಂ—ದೇವತೆಗಳನ್ನು ಸಮೀಪಿಸುವ । ಅಗ್ನಿಂ—ಅಗ್ನಿಯನ್ನು । ಅದ್ರೇಃ ಸೂನುಂ—ಅದ್ರಿ ಪುತ್ರನೆಂದು । ಆಹುಃ—ಮಂತ್ರಗಳು ಪ್ರಶಂಸಿಸುತ್ತವೆ । ಪೂರ್ವಸ್ಯ—ಉತ್ಕೃಷ್ಟವಾದ । ಶೇವಸ್ಯ—ಸುಖಕ್ಕಾಗಿ । ಯಜ್ಞಸಹಂ—ಯಜ್ಞಧಾರಕನಾದ ಅಗ್ನಿಯ । ದುವಃ—ಸೇವೆಯನ್ನು । ಇಷೇ—ನಾನು ಇಚ್ಛಿಸುತ್ತೇನೆ.

॥ ಭಾವಾರ್ಥ ॥

ದೇವತೆಗಳನ್ನು ಸಮೀಪಿಸುವ ಅಗ್ನಿಯನ್ನು ಅದ್ರಿಪುತ್ರನೆಂದು ಮಂತ್ರಗಳು ಪ್ರಶಂಸಿಸುತ್ತವೆ. ಉತ್ಕೃಷ್ಟವಾದ ಸುಖಲಾಭಕ್ಕಾಗಿ ಯಜ್ಞಧಾರಕನಾದ ಅಗ್ನಿಯ ಸೇವೆಯನ್ನು ನಾನು ಇಚ್ಛಿಸುತ್ತೇನೆ.

English Translation

Agni, who goes to (summon the gods), the bearer of the oblations, whom men call the sow of the stone; him I desire to worship (for the sake) of supreme felicity.

॥ ಸಂಹಿತಾಪಾಠಃ ॥

ನರೋ ಯೇ ಕೇ ಚಾಸ್ಮದಾ ವಿಶ್ವೇತ್ತೇ ವಾಮ ಆ ಸ್ಯುಃ ।
ಅಗ್ನಿಂ ಹವಿಷಾ ವರ್ಧಂತಃ ॥ ೮ ॥

॥ ಪದಪಾಠಃ ॥

ನರಃ । ಯೇ । ಕೇ । ಚ । ಅಸ್ಮತ್ । ಆ । ವಿಶ್ವಾ । ಇತ್ । ತೇ । ವಾಮೇ । ಆ । ಸ್ಯುರಿತಿ ಸ್ಯುಃ ।
ಅಗ್ನಿಂ । ಹವಿಷಾ । ವರ್ಧಂತಃ ॥ ೮ ॥

॥ ಸಾಯಣಭಾಷ್ಯಂ ॥

ನರೋ ನೇತಾರೋ ಯೇ ಕೇ ಚ ಯೇ ಕೇಚಿತ್ಪುತ್ರಪೌತ್ರಾದಯೋಽಸ್ಮದಸ್ಮಾಕಂ ಸಂತಿ । ಅಕಾರಃ ಪೂರಕಃ । ತೇ ಪುತ್ರಪೌತ್ರಾದಯೋ ವಾಮೇ ವನನೀಯೇ ಸಂಭಜನೀಯೇ ವಿಶ್ವೇದ್ವಿಶ್ವಸ್ಮಿನ್ನೇವ ಪಶ್ವಾದಿಧನ ಆ ಸ್ಯುಃ । ಆ ಸಮಂತಾದ್ಭವೇಯುಃ । ಉಪವಿಶೇಯುರಿತ್ಯಾಶಾಸ್ಮಹೇ । ಕಿಂ ಕುರ್ವಂತಃ । ಅಗ್ನಿಮಂಗನಾದಿಗುಣವಿಶಿಷ್ಟಂ ದೇವಂ ಹವಿಷಾ ಪುರೋಡಾಶಾದಿಕೇನ ವರ್ಧಂತೋ ವರ್ಧಯಂತಃ ॥

॥ ಪ್ರತಿಪದಾರ್ಥ ॥

**ಅಸ್ಮತ್**—ನಮಗೆ ಸೇರಿದ । **ಯೇ ಕೇ ಚ** ಯಾವ ಯಾವ । **ನರಃ**—ಪುತ್ರಾದಿಗಳು ಇರುವರೋ । **ತೇ**—ಅವರೆಲ್ಲರೂ । **ಅಗ್ನಿಂ**—ಅಗ್ನಿಯನ್ನು । **ಹವಿಷಾ**—ಹವಿಸ್ಸುಗಳಿಂದ । **ವರ್ಧಂತಃ**—ಪುಷ್ಟಿಗೊಳಿಸುತ್ತ । **ವಾಮೇ**—ಉತ್ಕೃಷ್ಟವೂ । **ವಿಶ್ವೇತ್**—ಸಕಲವೂ ಆದ ಸಂಪತ್ತುಗಳೊಡನೆ । **ಆ ಸ್ಯುಃ**—ಕೂಡಿಕೊಂಡಿರಲಿ.

॥ ಭಾವಾರ್ಥ ॥

ನಮಗೆ ಸೇರಿದ ಯಾವ ಪುತ್ರಪೌತ್ರಾದಿಗಳಿರುವರೋ, ಅವರೆಲ್ಲರೂ ಸಹ ಅಗ್ನಿಯನ್ನು ಹವಿಸ್ಸುಗಳಿಂದ ಪುಷ್ಟಿಗೊಳಿಸುತ್ತ ಉತ್ಕೃಷ್ಟವೂ ಸಕಲವೂ ಆದ ಸಂಪತ್ತುಗಳೊಡನೆ ಕೂಡಿಕೊಂಡಿರಲಿ.

English Translation

May all the men who belong to us be (gratified) in all that is desirable, augmenting Agni with oblations.

॥ ಸಂಹಿತಾಪಾಠಃ ॥

**ಕೃಷ್ಣಃ ಶ್ವೇತೋಽರುಷೋ ಯಾಮೋ ಅಸ್ಯ ಬ್ರಧ್ನ ಋಜ್ರ ಉತ**
**ಶೋಣೋ ಯಶಸ್ವಾನ್ ।**
**ಹಿರಣ್ಯರೂಪಂ ಜನಿತಾ ಜಜಾನ ॥ ೯ ॥**

॥ ಪದಪಾಠಃ ॥

ಕೃಷ್ಣಃ । ಶ್ವೇತಃ । ಅರುಷಃ । ಯಾಮಃ । ಅಸ್ಯ । ಬ್ರಧ್ನಃ । ಋಜ್ರಃ । ಉತ । ಶೋಣಃ । ಯಶಸ್ವಾನ್ ।
ಹಿರಣ್ಯಽರೂಪಂ । ಜನಿತಾ । ಜಜಾನ ॥ ೯ ॥

॥ ಸಾಯಣಭಾಷ್ಯಂ ॥

ಅತ್ರ ಯಚ್ಛಬ್ದಮಧ್ಯಾಹೃತ್ಯ ಯೋಜ್ಯಂ । ಯಾಮಃ । ಯಾತಿ ಗಚ್ಛತ್ಯಸ್ಮಿನ್ನಿತಿ ಯಾಮೋ ರಥಃ ಪ್ರಜಾಪತಿನಾ ನಿರ್ಮಿತಃ । ಕೀದೃಶಃ । ಕೃಷ್ಣೋಽಸಿತವರ್ಣಃ ಶ್ವೇತಃ ಸಿತವರ್ಣೋಽರುಽಷ ಆರೋಚಮಾನೋ ಬ್ರಧ್ನೋ ಮಹಾನೃಜ್ರ ಋಜುಗಾಮ್ಯುತಾಪಿ ಚ ಶೋಣೋ ರಕ್ತವರ್ಣೋ ಯಶಸ್ವಾನ್ಕೀರ್ತಿಮಾನ್ । ಯದ್ವಾ । ಯಶ ಇತಿ ಧನನಾಮ । ಹವಿರ್ಲಕ್ಷಣೇನ ಧನೇನ ಯುಕ್ತಃ । ಹಿರಣ್ಯರೂಪಂ ಸುವರ್ಣಸದೃಶಂ ತಂ ರಥಮಸ್ಯಾಗ್ನೇರರ್ಥಾಯ ಜನಿತಾ ಸರ್ವಸ್ಯ ಜಗತೋ ಜನಯಿತಾ ಪ್ರಜಾಪತಿರ್ಜಜಾನ । ಜನಯಾಮಾಸ । ಅಸ್ಮೈ ದತ್ತವಾನಿತ್ಯರ್ಥಃ । ಕಥಮೇಕಸ್ಯೈವ ರಥಸ್ಯ ಕೃಷ್ಣಾದಿನಾನಾರೂಪತ್ವಂ ಸಂಭವತೀತಿ ಚೇತ್ ಅಗ್ನೇಃ ಸಾಮರ್ಥ್ಯಾತಿಶಯೇನ ಸಂಭವತೀತ್ಯರ್ಥಃ । ಯದ್ವಾ । ಹಿರಣ್ಯರೂಪಮಿತಿ ರಥವಾಚಿನಾ ಶಬ್ದೇನ ಸಹ ಸಾಮಾನಾಧಿಕರಣ್ಯಾತ್ಕೃಷ್ಣಾದಿಶಬ್ದಾ ದ್ವಿತೀಯಾಂತತ್ವೇನ ಯೋಜ್ಯಾಃ । ಅತ್ರ ಸರ್ವಗುಣೋಕ್ತರಥವತ್ತಯಾಗ್ನಿಃ ಸ್ತೂಯತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಶಸ್ವಾನ್**—ಅತ್ಯಂತ ಪ್ರಸಿದ್ಧವಾದ । **ಯಾಮಃ**—ಈ ಅಗ್ನಿಯ ರಥವು । **ಕೃಷ್ಣಃ**—ಕೃಷ್ಣವರ್ಣವುಳ್ಳದ್ದೂ । **ಶ್ವೇತಃ**—ಬಿಳೀ ವರ್ಣವುಳ್ಳದ್ದೂ । **ಅರುಷಃ**—ಹೊಂಬಣವುಳ್ಳದ್ದೂ । **ಬ್ರಧ್ನಃ**—ಮಹತ್ತಾದುದೂ । **ಋಜ್ರಃ**—ನೇರವಾದ ಗಮನವುಳ್ಳದ್ದೂ । **ಉತ**—ಮತ್ತು । **ಶೋಣಃ**—ಕೆಂಪು ವರ್ಣವುಳ್ಳದ್ದೂ ಆಗಿರುತ್ತದೆ । **ಅಸ್ಮೈ**—ಈ ಅಗ್ನಿಯ । **ಹಿರಣ್ಯರೂಪಂ**—ಸುವರ್ಣ ರೂಪವಾದ ರಥವನ್ನು । **ಜನಿತಾ**—ಸರ್ವಜನಕನಾದ ಪ್ರಜಾಪತಿಯು । **ಜಜಾನ**—ಉತ್ಪನ್ನಮಾಡಿದನು.

॥ ಭಾವಾರ್ಥ ॥

ಅತ್ಯಂತ ಪ್ರಸಿದ್ಧವಾದ ಈ ಅಗ್ನಿಯ ರಥವು ಕೃಷ್ಣವರ್ಣವುಳ್ಳದ್ದೂ ಶುಭ್ರವರ್ಣವುಳ್ಳದ್ದೂ, ಹೊಂಬಣ್ಣವುಳ್ಳದ್ದೂ ಮಹತ್ತಾದುದೂ, ನೇರವಾದ ಗಮನವುಳ್ಳದ್ದೂ ಮತ್ತು ಕೆಂಪುಬಣ್ಣವುಳ್ಳದ್ದೂ ಆಗಿರುತ್ತದೆ. ಈ ಅಗ್ನಿಯ ಸುವರ್ಣಮಯವಾದ ರಥವನ್ನು ಸರ್ವಜನಕನಾದ ಪ್ರಜಾಪತಿಯು ಉತ್ಪನ್ನಮಾಡಿದನು.

## English Translation

His chariot is black, white red, tawny, dark red, crimson, and glorious; the progenitor of all has given him a chariot of Gold.

ಸಂಹಿತಾಪಾಠಃ ॥

ಏವಾ ತೇ ಅಗ್ನೇ ವಿಮದೋ ಮನೀಷಾಮೂರ್ಜೋ ನಪಾದಮೃತೇಭಿಃ ಸಜೋಷಾಃ ।

ಗಿರ ಆ ವಕ್ಷತ್ಸುಮತೀರಿಯಾನ ಇಷಮೂರ್ಜಂ ಸುಕ್ಷಿತಿಂ ವಿಶ್ವಮಾಭಾಃ ॥

ಪದಪಾಠಃ ।

ಏವ । ತೇ । ಅಗ್ನೇ । ವಿಽಮದಃ । ಮನೀಷಾಂ । ಊರ್ಜಃ । ನಪಾತ್ । ಅಮೃತೇಭಿಃ । ಸಽಜೋಷಾಃ ।
ಗಿರಃ । ಆ । ವಕ್ಷತ್ । ಸುಽಮತೀಃ । ಇಯಾನಃ । ಇಷಂ । ಊರ್ಜಂ । ಸುಽಕ್ಷಿತಿಂ । ವಿಶ್ವಂ । ಆ ।
ಅಭಾರಿತ್ಯಭಾಃ ॥ ೧೧ ॥

॥ ಸಾಯಣಭಾಷ್ಯಂ ॥

ಏವಮುಕ್ತಪ್ರಕಾರೇಣ ಹೇ ಊರ್ಜೋ ನಪಾದೋಷಧಿವನಸ್ಪತಿಪಿತೃಭೂತಸ್ಯಾನ್ನಸ್ಯ ಪೌತ್ರ ಹೇ ಅಗ್ನೇ ಅಮೃತೇಭಿರಮೃತೈರ್ಹವಿರ್ಲಕ್ಷಣೈರನ್ನೈಃ ಸಜೋಷಾಃ ಸಂಗತೋ ವಿಮದೋ ನಾಮರ್ಷಿರ್ಮನೀಷಾಂ ಪ್ರಕೃಷ್ಟಾಂ ಬುದ್ಧಿಂ ಕಾಮಯಮಾನಃ ಸಂಸ್ತೇ ತುಭ್ಯಂ ಗಿರಃ ಸ್ತುತಿಲಕ್ಷಣಾ ವಾಚ ಆ ವಕ್ಷತ್ । ಅಭಿಮುಖ್ಯೇನೋಕ್ತವಾನ್ ॥ ವಕ್ತೇಶ್ಛಂದಸಿ ಲೇಟಿ ರೂಪಂ ॥ ತತಸ್ತ್ವಮೇತಜ್ಜ್ಞಾತ್ವಾ ಸುಮತೀರಿಯಾನಃ ಶೋಭನಲಕ್ಷಣಾ ಬುದ್ಧೀಃ ಸಂಗಮಯನ್ನಿಷಮನ್ನಮೂರ್ಜಂ ಕ್ಷೀರಾದಿಕಂ ರಸಂ ಚ ಸುಕ್ಷಿತಿಂ ಶೋಭನನಿವಾಸಂ । ಯದ್ವಾ । ಕ್ಷಿತಯೋ ಮನುಷ್ಯಾಃ । ಶೋಭನಪುತ್ರಪೌತ್ರಾದಿಕಂ ಯತ್ಕಿಂಚಿದ್ದೇಯಮಸ್ತಿ ತದ್ವಿಶ್ವಂ ಧನಂ ಚಾಭಾಃ । ತಸ್ಮೈ ವಿಮದಾಯಾಹರ । ದೇಹಿ ॥

॥ ಪ್ರತಿಪದಾರ್ಥ ॥

**ಊರ್ಜೋ ನಪಾತ್**—ಅನ್ನಕ್ಕೆ ಪೌತ್ರನಾದ । **ಅಗ್ನೇ**—ಎಲೈ ಅಗ್ನಿಯೇ । **ಅಮೃತೇಭಿಃ**—ಹವಿಸ್ಸಿನ ರೂಪದ ಅನ್ನಗಳೊಡನೆ । **ಸಜೋಷಾಃ**—ಕೂಡಿಕೊಂಡಿರುವ । **ವಿಮದಃ**—ವಿಮದನೆಂಬ ಋಷಿಯು । **ಮನೀಷಾಂ**—ವಿವೇಕವನ್ನಿಚ್ಛಿಸಿ । **ತೇ**—ನಿನ್ನನ್ನುದ್ದೇಶಿಸಿ । **ಗಿರಃ**—ಸ್ತುತಿರೂಪವಾದ ವಾಕ್ಯನ್ನು । **ಆ ವಕ್ಷತ್**—ಪಠಿಸಿ ಅರ್ಪಿಸುತ್ತಾನೆ । **ಸುಮತೀರಿಯಾನಃ**—ಉತ್ತಮವಾದ ಜ್ಞಾನವನ್ನು ಹೊಂದಿಸುವ ನೀನು । **ಇಷಂ**—ಅನ್ನವನ್ನೂ । **ಊರ್ಜಂ**—ಕ್ಷೀರಾದಿಗಳನ್ನೂ । **ಸುಕ್ಷಿತಿಂ**—ಉತ್ತಮವಾದ ನಿವಾಸಗಳನ್ನೂ । **ವಿಶ್ವಂ**—ಸಮಸ್ತವಾದ ಧನವನ್ನೂ । **ಆಭಾಃ**—ಅವನಲ್ಲಿ ಸೇರಿಸು.

॥ ಭಾವಾರ್ಥ ॥

ಅನ್ನಕ್ಕೆ ಪೌತ್ರನಾದ ಎಲೈ ಅಗ್ನಿಯೇ, ಹವಿಸ್ಸಿನ ರೂಪದ ಅನ್ನಗಳೊಡನೆ ಕೂಡಿಕೊಂಡಿರುವ ವಿಮದನೆಂಬ ಋಷಿಯು ವಿವೇಕವನ್ನಿಚ್ಛಿಸಿ ನಿನ್ನನ್ನುದ್ದೇಶಿಸಿ ಸ್ತುತಿರೂಪವಾದ ವಾಕ್ಯನ್ನು ಪಠಿಸಿ ಅರ್ಪಿಸುತ್ತಾನೆ. ಉತ್ತಮವಾದ ಜ್ಞಾನವನ್ನು ಹೊಂದಿಸುವ ನೀನು ಅನ್ನವನ್ನೂ ಕ್ಷೀರಾದಿಗಳನ್ನೂ ಉತ್ತಮವಾದ ನಿವಾಸಗಳನ್ನೂ ಸಕಲ ಧನಗಳನ್ನೂ ಅವನಲ್ಲಿ ಸೇರಿಸು.

## English Translation

Grandson of strength, Agni, who are gratified by the ambrosial (viands), Vimada, (desirous of) wisdom, has recited your praises; do you, approaching with a kind intention, bestow upon us food, strength, and a prosperous abode.

## ಇಪ್ಪತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಅಗ್ನಿಂ ನೇತ್ಯಷ್ಟರ್ಚಂ ಪಂಚಮಂ ಸೂಕ್ತಮಾಸ್ತಾರಪಂಕ್ತಿಚ್ಛಂದಸ್ಕಂ । ಆದ್ಯೌ ಗಾಯತ್ರೌ ಪಾದೌ ತತೋ ದ್ವೌ ಜಾಗತೌ ಸಾಸ್ತಾರಪಂಕ್ತಿಃ । ಋಷಿದೇವತೇ ಪೂರ್ವವತ್ । ತಥಾ ಚಾನುಕ್ರಾಂತಂ । ಅಗ್ನಿಂ ನಾಷ್ಟಾವಾಸ್ತಾರಪಾಂಕ್ತಮಿತಿ ॥ ಪೃಷ್ಠ್ಯಸ್ಯ ಚತುರ್ಥೇಽಹನ್ಯಾಗ್ನಿಂ ನ ಸ್ವವೃಕ್ತಿಭಿರಿತ್ಯಾಜ್ಯಂ । ಆ. ೭-೧೧ । ಇತಿ ॥ ಮಹಾವ್ರತ ಆಗ್ನಿಮಾರುತೇ ಯಾವತೀಷ್ವೃಕ್ಷ್ವಿಳಾಂದಂ ಸಾಮ ಸ್ತುವೀರನ್ ತದಾನೀಮಾದಿತಸ್ತಾವತ್ಯ ಋಚೋಽನುರೂಪಾರ್ಥಾಃ । ಸೂತ್ರಿತಂ ಚ । ಯದೀಳಾಂದಂ ಭೂಯಸೀಷು ಚೇತ್ ಸ್ತುವೀರನ್ನಾಗ್ನಿಂ ನ ಸ್ವವೃಕ್ತಿಭಿರಿತಿ ತಾವತೀರನುರೂಪಃ । ಐ. ಆ. ೫-೩-೨ । ಇತಿ ॥

ಅನುವಾದವು—ಅಗ್ನಿಂ ನ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತದ ಋಷಿದೇವತೆಗಳು ಹಿಂದಿನ ಸೂಕ್ತದಂತೆಯೇ. ಆಸ್ತಾರಪಂಕ್ತಿಚ್ಛಂದಸ್ಕವು. ಒಂದು ಋಕ್ಕಿನಲ್ಲಿ ಮೊದಲಿನ ಎರಡು ಪಾದಗಳು ಗಾಯತ್ರೀಛಂದಸ್ಸಿನಂತೆಯೂ ಉಳಿದ ಎರಡು ಪಾದಗಳು ಜಗತೀಛಂದಸ್ಸಿನಂತೆಯೂ ಇದ್ದರೆ ಆ ಋಕ್ಕು ಆಸ್ತಾರಪಂಕ್ತಿಚ್ಛಂದಸ್ಕವೆನಿರುವುದು. ಅನುಕ್ರಮಣಿಕೆಯಲ್ಲಿ—**ಅಗ್ನಿಂ ನಾಷ್ಟಾವಾಸ್ತಾರಪಾಂಕ್ತಂ** ಎಂದು ಹೇಳಿರುವುದು' ಪೃಷ್ಠ್ಯಯಾಗದ ನಾಲ್ಕನೆಯ ದಿವಸ ಈ ಸೂಕ್ತವನ್ನು ಆಜ್ಯಶಸ್ತ್ರಮಂತ್ರಗಳಿಗಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಗ್ನಿಂ ನ ಸ್ವವೃಕ್ತಿಭಿರಿತ್ಯಾಜ್ಯಂ** ಎಂಬ ಸೂತ್ರದಿಂದ (ಆ. ೭-೧೧) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿ ಆಗ್ನಿಮಾರುತಶಸ್ತ್ರಮಂತ್ರಗಳನ್ನು ಪಠಿಸುವಾಗ ಇಳಾಂದವೆಂಬ ಸಾಮಮಂತ್ರದಿಂದ ಸ್ತುತಿಸಬೇಕು. ಆಗ ಪ್ರಾರಂಭದಲ್ಲಿ ಈ ಸೂಕ್ತದ ಮಂತ್ರಗಳನ್ನು ಅನುರೂಪಮಂತ್ರಗಳನ್ನಾಗಿ ಪಠಿಸಬೇಕೆಂದು ಐತರೇಯಾರಣ್ಯಕದ—**ಯದೀಳಾಂದಂ ಭೂಯಸೀಷು ಚೇತ್ ಸ್ತುವೀರನ್ನಾಗ್ನಿಂ ನ ಸ್ವವೃಕ್ತಿಭಿರಿತಿ ತಾವತೀರನುರೂಪಃ** ಎಂಬ ವಾಕ್ಯದಿಂದ (ಐ. ಆ. ೫-೩-೨) ವಿವೃತವಾಗಿರುವುದು.

### ಸೂಕ್ತ—೨೧

ಮಂಡಲ—೧೦ ॥ ಅನುವಾಕ—೨॥ ಸೂಕ್ತ—೨೧ ॥
ಅಷ್ಟಕ—೭ ॥ ಅಧ್ಯಾಯ—೭ ॥ ವರ್ಗ—೪, ೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
ಋಷಿಃ—ವಿಮದ ಐಂದ್ರಃ ಪ್ರಾಜಾಪತ್ಯೋ ವಾ ವಸುಕೃದ್ವಾ ವಾಸುಕ್ರಃ ॥
ದೇವತಾ—ಅಗ್ನಿಃ ॥
ಛಂದಃ—ಆಸ್ತಾರಪಂಕ್ತಿಃ ॥

॥ ಸಂಹಿತಾಪಾಠಃ ॥

ಅಗ್ನಿಂ ನ ಸ್ವವೃಕ್ತಿಭಿರ್ಹೋತಾರಂ ತ್ವಾ ವೃಣೀಮಹೇ ।
ಯಜ್ಞಾಯ ಸ್ತೀರ್ಣಬರ್ಹಿಷೇ ವಿ ವೋ ಮದೇ ಶೀರಂ ಪಾವಕಶೋಚಿಷಂ
ವಿವಕ್ಷಸೇ ॥ ೧ ॥

॥ ಪದಪಾಠಃ ॥

ಆ । ಅಗ್ನಿಂ । ನ । ಸ್ವವೃಕ್ತಿಽಭಿಃ । ಹೋತಾರಂ । ತ್ವಾ । ವೃಣೀಮಹೇ ।

ಯಜ್ಞಾಯ । ಸ್ತೀರ್ಣಽಬರ್ಹಿಷೇ । ವಿ । ವಃ । ಮದೇ । ಶೀರಂ । ಪಾವಕಽಶೋಚಿಷಂ । ವಿವಕ್ಷಸೇ ॥೧॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವಸ್ತವ ಸ್ವಭೂತೇ ವಿಮದ ಏತದಾಖ್ಯ ಋಷೌ ಮಯೀಯಂ ಸ್ತುತಿಃ ಪ್ರವೃತ್ತಾಸ್ತಿ ನೇತಿ ಸಂಪ್ರತ್ಯರ್ಥಃ । ಅತೋ ವಯಮಿದಾನೀಂ ಸ್ವವೃಕ್ತಿಭಿಃ ಸ್ವಯಂಕೃತಾಭಿರ್ದೋಷವರ್ಜಿತಾಭಿಃ ಸ್ತುತಿಭಿರ್ಹೋತಾರಂ ದೇವಾನಾಮಾಹ್ವಾತಾರಂ ಹೋಮನಿಷ್ಪಾದಕಂ ವಾಗ್ನಿಂ ತ್ವಾ ತ್ವಾಮಾ ವೃಣೀಮಹೇ । ಅಭಿಮುಖ್ಯೇನ ಸಂಭಜಾಮಹೇ । ಕಿಮರ್ಥಂ । ಸ್ತೀರ್ಣಬರ್ಹಿಷೇ ಯಜ್ಞಾಯ ॥ ತಾದರ್ಥ್ಯೇ ಚತುರ್ಥೀ ॥ ಯಜ್ಞಾರ್ಥಂ । ಕೀದೃಶಂ । ಶೀರಮೋಷಧ್ಯಾದಿಷು ಸರ್ವತ್ರಾನುಶಾಯಿನಂ ಪಾವಕಶೋಚಿಷಂ ಶೋಧಕದೀಪ್ತಿಂ । ವಿವಕ್ಷಸೇ । ಮಹನ್ನಾಮೈತತ್ । ಹೇ ಅಗ್ನೇ ತ್ವಮಪಿ ಮಹಾನ್ಭವಸಿ । ಯದ್ವಾ । ವಿಮದೇ ಯಜ್ಞಸ್ಯ ಸಂಬಂಧಿನಃ ಸೋಮಸ್ಯ ಪಾನಜನ್ಯವಿವಿಧಮದಾರ್ಥಂ ತ್ವಾಮಾವೃಣೀಮಹ ಇತಿ ಯೋಜ್ಯಂ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ,) ವಃ—ನಿನಗೆ ಸೇರಿದ । **ವಿಮದೇ**—ವಿಮದಸಂಜ್ಞಕನಾದ ನನ್ನಲ್ಲಿ ಸ್ತುತಿಯು ಸಿದ್ಧವಾಗಿದೆ । **ಹೋತಾರಂ**—ದೇವತೆಗಳನ್ನು ಕರೆಯುವವನೂ । **ಶೀರಂ**—ಓಷಧ್ಯಾದಿಗಳಲ್ಲಿ ಅಡಗಿರುವವನೂ । **ಪಾವಕಶೋಚಿಷಂ**—ಶುದ್ಧಿಗೊಳಿಸುವ ಪ್ರಕಾಶವುಳ್ಳವನೂ ಆದ । **ಅಗ್ನಿಂ ತ್ವಾ**—ನಿನ್ನನ್ನು । **ಸ್ತೀರ್ಣಬರ್ಹಿಷೇ**—ದರ್ಭಾಸನವು ಹರಡಿ ಸಿದ್ಧವಾಗಿರುವ । **ಯಜ್ಞಾಯ**—ಯಜ್ಞ ನಿರ್ವಹಣಕ್ಕಾಗಿ । **ಸುವೃಕ್ತಿಭಿಃ**—ಉತ್ತಮವಾದ ಸ್ತುತಿಗಳಿಂದ । **ಆ ವೃಣೀಮಹೇ**—ಆರಾಧಿಸಿ ಕರೆಯುತ್ತೇವೆ । **ವಿವಕ್ಷಸೇ**—(ಎಲೈ ಅಗ್ನಿಯೇ), ನೀನು ಮಹಾತ್ಮನಾಗಿದ್ದೀಯೆ

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನಗೆ ಸೇರಿದ ವಿಮದಸಂಜ್ಞಕನಾದ ನನ್ನಲ್ಲಿ ಸ್ತುತಿಯು ಸಿದ್ಧವಾಗಿದೆ. ದೇವತೆಗಳನ್ನು ಕರೆಯುವವನೂ, ಓಷಧ್ಯಾದಿಗಳಲ್ಲಿ ಅಡಗಿರುವವನೂ, ಶುದ್ಧಿಗೊಳಿಸುವ ಪ್ರಕಾಶವುಳ್ಳವನೂ ಆದ ನಿನ್ನನ್ನು ದರ್ಭಾಸನವು ಹರಡಿ ಸಿದ್ಧವಾಗಿರುವ ಯಜ್ಞನಿರ್ವಹಣಕ್ಕಾಗಿ ಉತ್ತಮವಾದ ಸ್ತುತಿಗಳಿಂದ ಆರಾಧಿಸಿ ಕರೆಯುತ್ತೇವೆ. ಎಲೈ ಅಗ್ನಿಯೆ, ನೀನು ಮಹಾತ್ಮನಾಗಿದ್ದೀಯೆ.

## English Translation

We invoke you now, Agni, invoker (of the gods), with our voluntary (praises) for the sacrifice, at which the sacred-grass is spread; you, who underlie (all things), who (diffuse) purifying radiance, (we invoke) for your exhilaration; you are mighty.

। ಸಂಹಿತಾಪಾಠಃ ।

ತ್ವಾಮು ತೇ ಸ್ವಾಭುವಃ ಶುಂಭಂತ್ಯಶ್ವರಾಧಸಃ ।
ವೇತಿ ತ್ವಾಮುಪಸೇಚನೀ ವಿ ವೋ ಮದ ಋಜೀತಿರಗ್ನ ಆಹುತಿರ್ವಿವಕ್ಷಸೇ ॥ ೨ ॥

॥ ಪದಪಾಠಃ ॥

ತ್ವಾಂ । ಊಂ ಇತಿ । ತೇ । ಸ್ವಽಆಭುವಃ । ಶುಂಭಂತಿ । ಅಶ್ವಽರಾಧಸಃ ।
ವೇತಿ । ತ್ವಾಂ । ಉಪಽಸೇಚನೀ । ವಿ । ವಃ । ಮದೇ । ಋಜೀತಿಃ । ಅಗ್ನೇ । ಆಽಹುತಿಃ । ವಿವಕ್ಷಸೇ ॥ ೨ ॥

। ಸಾಯಣಭಾಷ್ಯಂ ।

ಸ್ವಾಭುವಃ ಸ್ವಪ್ರಕಾಶೇನ ದೀಪ್ಯಮಾನಾ ಅಶ್ವರಾಧಸೋ ವ್ಯಾಪ್ತಧನಾಸ್ತೇ ಯಜಮಾನಾ ಹೇ ಅಗ್ನೇ ತ್ವಾಮು ತ್ವಾಮೇವ ಶುಂಭಂತಿ । ಶೋಭಯಂತಿ । ಯಜ್ಞೇ ಹವಿರ್ಭಿರ್ದೀಪಯಂತೀತ್ಯರ್ಥಃ । ಕಿಂಚೋಪಸೇಚನೀ ತವೋಪರಿಕ್ಷರಣಶೀಲರ್ಜೀತಿರೃಜುಗಾಮಿನೀ ಹೂಯಮಾನಾಹುತಿರ್ಹೇ ಅಗ್ನೇ ತ್ವಾಂ ವೇತಿ । ಗಚ್ಛತಿ । ಕಿಮರ್ಥಂ । ವಸ್ತವ ಮದೇ ಮದನಿಮಿತ್ತೇ । ತೃಪ್ತ್ಯರ್ಥಮಿತ್ಯರ್ಥಃ । ಕಿಂಚ ತ್ವಮಪಿ ವಿವಕ್ಷಸೇ । ಮಹಾನ್ಭವಸಿ ॥

। ಪ್ರತಿಪದಾರ್ಥ ।

(ಎಲೈ ಅಗ್ನಿಯೇ), ಸ್ವಾಭುವಃ—ಸ್ವಯಂ ಪ್ರಕಾಶಿತವಾದ । ಅಶ್ವರಾಧಸಃ—ವ್ಯಾಪ್ತವಾದ ಧನವುಳ್ಳವರೂ ಆದ । ತೇ—ಯಜಮಾನರು । ತ್ವಾಂ ಉ—ನಿನ್ನನ್ನೇ । ಶುಂಭಂತಿ—ಅಲಂಕರಿಸುತ್ತಾರೆ । ಅಗ್ನೇ—ಎಲೈ ಅಗ್ನಿಯೇ । ಉಪಸೇಚನೀ—ನಿನ್ನ ಮೇಲೆ ಅರ್ಪಿತವಾಗುವುದೂ । ಋಜೀತಿಃ—ನೇರವಾದ ಗಮನವುಳ್ಳದ್ದೂ ಆದ । ಆಹುತಿಃ—ಆಹುತಿಯು । ವಃ—ನಿನ್ನ । ವಿ ಮದೇ—ವಿಶೇಷವಾದ ತೃಪ್ತಿಗಾಗಿ । ತ್ವಾಂ—ನಿನ್ನನ್ನು । ವೇತಿ—ಸಮೀಪಿಸುತ್ತದೆ । ವಿವಕ್ಷಸೇ—ನೀನು ಮಹಾತ್ಮನಾಗಿದ್ದೀಯೆ.

। ಭಾವಾರ್ಥ ।

ಎಲೈ ಅಗ್ನಿಯೇ, ಸ್ವಯಂಪ್ರಕಾಶಿತವಾದ ವ್ಯಾಪ್ತವಾದ ಧನವುಳ್ಳವರೂ ಆದ ಯಜಮಾನರು ನಿನ್ನನ್ನೇ ಅಲಂಕರಿಸುತ್ತಾರೆ. ಎಲೈ ಅಗ್ನಿಯೇ ,ನಿನ್ನ ಮೇಲೆ ಸುರಿಯಲ್ಪಡುವುದೂ, ನೇರವಾದ ಗಮನವುಳ್ಳದ್ದೂ ಆದ ಆಹುತಿಯು ನಿನ್ನ ವಿಶೇಷವಾದ ತೃಪ್ತಿಗಾಗಿ ನಿನ್ನನ್ನು ಸಮೀಪಿಸುತ್ತದೆ. ಎಲೈ ಅಗ್ನಿಯೇ, ನೀನು ಮಹಾತ್ಮನಾಗಿದ್ದೀಯೆ.

English Translation

Self-radiant, opulent in horses, they glorify you; the oblation poured out over (you) proceeds in a straight course, Agni, to you for your exhilaration ; you are mighty.

॥ ಸಂಹಿತಾಪಾಠಃ ॥

ತ್ವೇ ಧರ್ಮಾಣ ಆಸತೇ ಜುಹೂಭಿಃ ಸಿಂಚತೀರಿವ ।

ಕೃಷ್ಣಾ ರೂಪಾಣ್ಯರ್ಜುನಾ ವಿ ವೋ ಮದೇ ವಿಶ್ವಾ ಅಧಿ ಶ್ರಿಯೋ ಧಿಷೇ ವಿವಕ್ಷಸೇ ॥ ೩ ॥

॥ ಪದಪಾಠಃ ॥

ತ್ವೇ ಇತಿ । ಧರ್ಮಾಣಃ । ಆಸತೇ । ಜುಹೂಭಿಃ । ಸಿಂಚತೀಃऽಇವ ।

ಕೃಷ್ಣಾ । ರೂಪಾಣಿ । ಅರ್ಜುನಾ । ವಿ । ವಃ । ಮದೇ । ವಿಶ್ವಾಃ । ಅಧಿ । ಶ್ರಿಯಃ । ಧಿಷೇ । ವಿವಕ್ಷಸೇ ॥

॥ ಸಾಯಣಭಾಷ್ಯಂ ॥

ಧರ್ಮಾಣೋ ಯಜ್ಞಸ್ಯ ಧಾರಯಿತಾರ ಋತ್ವಿಜೋ ಜುಹೂಭಿಃ ಸಂಪೂರ್ಣಾಹುತಿಭಿರ್ಹೋಮಪಾತ್ರೈಸ್ತ್ವೇ ತ್ವಾಮೇವಾಸತೇ । ಸೇವಂತೇ । ತತ್ರ ದೃಷ್ಟಾಂತಃ । ಸಿಂಚತೀರಿವ ವೃಷ್ಟಿಲಕ್ಷಣಾಃ ಪೃಥಿವೀಂ ಸಿಂಚಂತ್ಯ ಆಪ ಅಗ್ನಿಂ ಯಥಾ ಸ್ವಪಿತೃತ್ವೇನ ಸೇವಂತೇ ತದ್ವತ್ । ಅಗ್ನೇರಾಪ ಇತಿ ಶ್ರುತೇಸ್ತಸ್ಯಾಪಾಂ ಪಿತೃತ್ವಂ । ಯದ್ವಾ । ಜುಹೂಭಿಃ ಸಿಂಚತೀರಿವ ಸಿಚ್ಯಮಾನಾ ಆಹುತಯ ಇವ ಧರ್ಮಾಣಸ್ತ್ವಯಾ ಧಾರ್ಯಮಾಣಾ ರಶ್ಮಯಸ್ತ್ವೇ ತ್ವಯ್ಯಾಸತೇ । ನಿವಸಂತಿ । ಹೇ ಅಗ್ನೇ ತ್ವಂ ಕೃಷ್ಣಾ ಕೃಷ್ಣವರ್ಣಾನ್ಯರ್ಜುನಾರ್ಜುನಾನಿ ಶ್ವೇತವರ್ಣಾನಿ ಜ್ವಾಲಾಂತರ್ಗತರೂಪಾಣಿ ಚ ವಿಶ್ವಾಃ ಸರ್ವಾಃ ಶ್ರಿಯಃ ಶೋಭಾ ಅಧಿ ಧಿಷೇ । ಅಧಿಕಂ ಯಥಾ ಭವತಿ ತಥಾ ಧಾರಯಸಿ । ಕಿಮರ್ಥಂ । ವೋ ಯುಷ್ಮಾಕಂ ಸರ್ವೇಷಾಂ ದೇವಾನಾಂ ವಿಮದೇ ವಿವಿಧಸೋಮಪಾನಜನ್ಯಮದಾರ್ಥಂ । ಯತ ಏವಮತೋ ವಿವಕ್ಷಸೇ । ತ್ವಂ ಮಹಾನ್ಭವಸಿ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) ಸಿಂಚತೀರಿವ—ವೃಷ್ಟಿಯ ಧಾರೆಗಳು ಪೃಥ್ವಿಯನ್ನು ಸೇಕಿಸುವಂತೆ । **ಧರ್ಮಾಣಃ**—ಯಜ್ಞಧಾರಕರಾದ ಋತ್ವಿಕ್ಕುಗಳು । **ಜುಹೂಭಿಃ**—ತಮ್ಮ ಆಹುತಿಪಾತ್ರೆಗಳಿಂದ । **ತ್ವೇ**—ನಿನ್ನನ್ನೇ । **ಆಸತೇ**—ಸೇವಿಸುತ್ತಾರೆ । **ತ್ವಂ**—ನೀನು । **ವಃ**—ನಿನ್ನ ಮತ್ತು ಇತರ ದೇವತೆಗಳ । **ವಿ ಮದೇ**—ವಿಶೇಷರೀತಿಯ ತೃಪ್ತ್ಯರ್ಥವಾಗಿ । **ಕೃಷ್ಣಾ**—ಕೃಷ್ಣವರ್ಣಾತ್ಮಕವೂ । **ಅರ್ಜುನಾ**—ಶುಭ್ರವರ್ಣಾತ್ಮಕವೂ ಆದ । **ರೂಪಾಣಿ**—ರೂಪಗಳನ್ನೂ । **ವಿಶ್ವಾಃ**—ಸಮಸ್ತವಾದ । **ಶ್ರಿಯಃ**—ಕಾಂತಿಗಳನ್ನೂ । **ಅಧಿ ಧಿಷೇ**—ಹೊಂದಿದ್ದೀಯೆ । **ವಿವಕ್ಷಸೇ**—ನೀನು ಮಹಾತ್ಮನಾಗಿದ್ದೀಯೆ.

। ಭಾವಾರ್ಥ ।

ಎಲೈ ಅಗ್ನಿಯೇ, ವೃಷ್ಟಿಯ ಧಾರೆಗಳು ಪೃಥ್ವಿಯನ್ನು ಸೇವಿಸುವಂತೆ ಯಜ್ಞಧಾರಕರಾದ ಋತ್ವಿಕ್ಕುಗಳು ತಮ್ಮ ಆಹುತಿಪಾತ್ರೆಗಳಿಂದ ನಿನ್ನನ್ನೇ ಸೇವಿಸುತ್ತಾರೆ. ನಿನ್ನ ಮತ್ತು ಇತರ ದೇವತೆಗಳ ವಿವಿಧವಾದ ತೃಪ್ತಿಗಾಗಿ ಕೃಷ್ಣವರ್ಣಾತ್ಮಕವೂ, ಶುಭ್ರವರ್ಣಾತ್ಮಕವೂ ಆದ ರೂಪಗಳನ್ನೂ ಮತ್ತು ಸಮಸ್ತ ಕಾಂತಿಗಳನ್ನೂ ಹೊಂದಿದ್ದೀಯೆ. ನೀನು ಮಹಾತ್ಮನಾಗಿದ್ದೀಯೆ.

English Translation

The establishers (of the rite) worship you with their ladles (filled with the oblation), like (earth) sprinkling (showers); you sustain exceedingly black forms and white and all beauties for your exhilaration; you are mighty.

॥ ಸಂಹಿತಾಪಾಠಃ ॥

ಯಮಗ್ನೇ ಮನ್ಯಸೇ ರಯಿಂ ಸಹಸಾವನ್ನಮರ್ತ್ಯ ।
ತಮಾ ನೋ ವಾಜಸಾತಯೇ ವಿ ವೋ ಮದೇ ಯಜ್ಞೇಷು ಚಿತ್ರಮಾ ಭರಾ
ವಿವಕ್ಷಸೇ ॥ ೪ ॥

। ಪದಪಾಠಃ ।

ಯಂ । ಅಗ್ನೇ । ಮನ್ಯಸೇ । ರಯಿಂ । ಸಹಸಾऽವನ್ । ಅಮರ್ತ್ಯ ।
ತಂ । ಆ । ನಃ । ವಾಜಽಸಾತಯೇ । ವಿ । ವಃ । ಮದೇ । ಯಜ್ಞೇಷು । ಚಿತ್ರಂ । ಆ । ಭರ । ವಿವ-
ಕ್ಷಸೇ ॥ ೪ ॥

। ಸಾಯಣಭಾಷ್ಯಂ ।

ಹೇ ಅಮರ್ತ್ಯಾಮರಣಧರ್ಮನ್ ಸಹಸಾವನ್ಬಲವನ್ ಏವಂಭೂತ ಹೇ ಅಗ್ನೇ ತ್ವಂ ಯಂ ರಯಿಂ ಮನ್ಯಸೇ ಸರ್ವೇಷು ಧನೇಷು ಯದ್ಧನಂ ವರಿಷ್ಠಮಿತಿ ಜಾನಾಸಿ ಚಿತ್ರಂ ಚಾಯನೀಯಂ ತಂ ರಯಿಂ ನೋಽಸ್ಮಾಕಂ ವಾಜಸಾತಯೇಽನ್ನಲಾಭಾಯಾ ಭರ। ಆಹರ । ಪ್ರಯಚ್ಛ । ಕಿಮರ್ಥಂ । ವೋ ಯುಷ್ಮಾಕಂ ಸರ್ವೇಷಾಂ ದೇವಾನಾಂ ಯಜ್ಞೇಷು ವಿಮದೇ ವಿವಿಧಸೋಮಾದಿಹವಿರ್ಜನ್ಯಮದನಿಮಿತ್ತೇ । ಯಾಗೇಷು ನಾನಾಪ್ರಕಾರೈರ್ಹವಿಭಿರ್ಯುಷ್ಮಾಕಂ ತರ್ಪಣಾಯೇತ್ಯರ್ಥಃ । ತ್ವಮಪಿ ವಿವಕ್ಷಸೇ । ಮಹಾನ್ಭವಸಿ ॥

॥ ಪ್ರತಿಪದಾರ್ಥ ॥

**ಅಮರ್ತ್ಯ**—ಮರಣಧರ್ಮರಹಿತನೂ । **ಸಹಸಾವನ್**—ಅತ್ಯಂತ ಶಕ್ತಿಯುತನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ಯಂ ರಯಿಂ**—ಯಾವ ಧನವನ್ನು । **ಮನ್ಯಸೇ**—ಶ್ರೇಷ್ಠವೆಂದು ತಿಳಿದಿದ್ದೀಯೋ । **ಚಿತ್ರಂ**—ಆಕರ್ಷಕವಾದ । **ತಂ**—ಆ ಧನವನ್ನು । **ನಃ**—ನಮ್ಮ । **ವಾಜಸಾತಯೇ**—ಅನ್ನಲಾಭಾರ್ಥವಾಗಿಯೂ । **ವಃ**—ನಿನ್ನ । **ವಿ ಮದೇ**—ವಿವಿಧವಾದ ತೃಪ್ತಿಗಾಗಿಯೂ । **ಯಜ್ಞೇಷು**—ನಮ್ಮ ಯಜ್ಞಗಳಲ್ಲಿ । **ಆ ಭರ**—ತಂದು ತುಂಬಿಡು । **ವಿವಕ್ಷಸೇ**—ನೀನು ಮಹಾತ್ಮನಾಗಿದ್ದೀಯೆ.

॥ ಭಾವಾರ್ಥ ॥

ಮರಣಧರ್ಮರಹಿತನೂ, ಅತ್ಯಂತ ಶಕ್ತಿಯುತನೂ ಆದ ಎಲೈ ಅಗ್ನಿಯೇ, ಯಾವ ಧನವನ್ನು ನೀನು ಶ್ರೇಷ್ಠವೆಂದು ತಿಳಿದಿದ್ದೀಯೋ ಆಕರ್ಷಕವಾದ ಆ ಧನವನ್ನು ನಮ್ಮ ಅನ್ನಲಾಭಾರ್ಥವಾಗಿಯೂ ನಿನ್ನ ವಿವಿಧವಾದ ತೃಪ್ತಿಗಾಗಿಯೂ ನಮ್ಮ ಯಜ್ಞಗಳಲ್ಲಿ ತುಂಬಿಡು. ನೀನು ಮಹಾತ್ಮನಾಗಿದ್ದೀಯೆ.

English Translation

Powerful and immortal Agni, bring to us, for our sustenance, the precious wealth which you think best; (bring it) for your exhilaration at the sacrifices; you are mighty.

॥ ಸಂಹಿತಾಪಾಠಃ ॥

ಅಗ್ನಿರ್ಜಾತೋ ಅಥರ್ವಣಾ ವಿದದ್ವಿಶ್ವಾನಿ ಕಾವ್ಯಾ ।
ಭುವದ್ದೂತೋ ವಿವಸ್ವತೋ ವಿ ವೋ ಮದೇ ಪ್ರಿಯೋ ಯಮಸ್ಯ ಕಾಮ್ಯೋ
ವಿವಕ್ಷಸೇ ॥ ೫ ॥

॥ ಪದಪಾಠಃ ॥

ಅಗ್ನಿಃ । ಜಾತಃ । ಅಥರ್ವಣಾ । ವಿದತ್ । ವಿಶ್ವಾನಿ । ಕಾವ್ಯಾ ।
ಭುವತ್ । ದೂತಃ । ವಿವಸ್ವತಃ । ವಿ । ವಃ । ಮದೇ । ಪ್ರಿಯಃ । ಯಮಸ್ಯ । ಕಾಮ್ಯಃ । ವಿವಕ್ಷಸೇ ॥೫॥

॥ ಸಾಯಣಭಾಷ್ಯಂ ॥

ಅಥರ್ವಣ್ಯೇತನ್ನಾಮ್ನರ್ಷಿಣಾ ಜಾತೋ ಜನಿತೋಽಗ್ನಿಃ । ಕಥಂ ಅವಗಮ್ಯತೇ । ತ್ವಾಮಗ್ನೇ ಪುಷ್ಕರಾದಧ್ಯಥರ್ವಾ ನಿರಮಂಥತ । ಋ. ೬-೧೬-೧೩ ] ಇತಿ ಮಂತ್ರಾಂತರಾತ್ । ವಿಶ್ವಾನಿ ಸಮಸ್ತಾನಿ

ಕಾವ್ಯಾ ಕಾವ್ಯಾನಿ ಸ್ತೋತ್ರಕರ್ಮಾಣಿ ವಿದತ್ । ವೇತ್ತಿ । ವಿವಸ್ವತೋ ಯಜಮಾನಸ್ಯ ದೂತೋ ದೇವಾನಾಮಾಹ್ವಾನಾರ್ಥಂ ಭುವತ್ । ಭವತಿ । ಕಿಂಚ ಯಮಸ್ಯ ಸಂಯಂತುರ್ಯಜಮಾನಸ್ಯ ಪ್ರಿಯ ಇಷ್ಟಃ ಸನ್ ಕಾಮ್ಯಃ ಕಮನೀಯಃ ಪ್ರಾರ್ಥನೀಯೋ ಭವತೀತ್ಯರ್ಥಃ । ಶಿಷ್ಟಂ ಸ್ಪಷ್ಟಂ ॥

॥ ಪ್ರತಿಪದಾರ್ಥ ॥

**ಅಥರ್ವಣಾ**—ಅಥರ್ವಋಷಿಯಿಂದ । **ಜಾತಃ**—ಪ್ರಜ್ವಲಿತನಾದ । **ಅಗ್ನಿಃ**—ಅಗ್ನಿಯು । **ವಿಶ್ವಾನಿ**—ಸಮಸ್ತವಾದ । **ಕಾವ್ಯಾ**—ಸ್ತುತಿಕರ್ಮಗಳನ್ನೂ । **ವಿದತ್**—ತಿಳಿಯುತ್ತಾನೆ । **ವಿವಸ್ವತಃ**—ಯಜಮಾನನಿಗೋಸ್ಕರ । **ದೂತಃ**—ದೇವದೂತನಾಗಿ । **ಭುವತ್**—ಆಗಿದ್ದಾನೆ । **ಯಮಸ್ಯ**—ಯಜಮಾನನಿಗೆ । **ಪ್ರಿಯಃ**—ಪ್ರೀತಿಪಾತ್ರನಾಗಿಯೂ । **ಕಾಮ್ಯಃ**—ಪ್ರಾರ್ಥಿತನಾಗಿಯೂ ಇದ್ದಾನೆ (ಎಲೈ ಅಗ್ನಿಯೇ) । **ವಃ**—ನಿನ್ನ ಮತ್ತು ಇತರ ದೇವತೆಗಳ । **ವಿ ಮದೇ**—ವಿಶೇಷವಾದ ಸಂತೃಪ್ತಿಗಾಗಿ । **ವಿವಕ್ಷಸೇ**—ನೀನು ಮಹತ್ತ್ವದಿಂದ ಪ್ರಕಾಶಿಸುತ್ತೀಯೆ.

॥ ಭಾವಾರ್ಥ ॥

ಅಥರ್ವ ಋಷಿಯಿಂದ ಪ್ರಜ್ವಲಿತನಾದ ಅಗ್ನಿಯು ಸಮಸ್ತವಾದ ಸ್ತುತಿಕರ್ಮಗಳನ್ನೂ ತಿಳಿಯುತ್ತಾನೆ. ಯಜಮಾನನಿಗೋಸ್ಕರ ದೇವದೂತನಾಗಿದ್ದಾನೆ. ಯಜಮಾನನಿಗೆ ಪ್ರೀತಿಪಾತ್ರನಾಗಿಯೂ ಪ್ರಾರ್ಥಿತನಾಗಿಯೂ ಇದ್ದಾನೆ. ಎಲೈ ಅಗ್ನಿಯೇ, ನಿನ್ನ ಮತ್ತು ಇತರ ದೇವತೆಗಳ ವಿಶೇಷವಾದ ಸಂತೃಪ್ತಿಗಾಗಿ ನೀನು ನಿನ್ನ ಮಹತ್ತ್ವದಿಂದ ಪ್ರಕಾಶಿಸುತ್ತೀಯೆ.

English Translation

Agni, generated by Atharvan, is cognizant of all praises ; he is the messenger of Vivaswat, the beloved friend of Yama, for your exhilaration; you are mighty.

॥ ಸಂಹಿತಾಪಾಠಃ ॥

ತ್ವಾಂ ಯಜ್ಞೇಷ್ವೀಳತೇಽಗ್ನೇ ಪ್ರಯತ್ಯಧ್ವರೇ ।

ತ್ವಂ ವಸೂನಿ ಕಾಮ್ಯಾ ವಿ ವೋ ಮದೇ ವಿಶ್ವಾ ದಧಾಸಿ ದಾಶುಷೇ ವಿವಕ್ಷಸೇ ॥ ೬ ॥

॥ ಪದಪಾಠ ॥

ತ್ವಾಂ । ಯಜ್ಞೇಷು । ಈಳತೇ । ಅಗ್ನೇ । ಪ್ರಽಯತಿ । ಅಧ್ವರೇ ।

ತ್ವಂ । ವಸೂನಿ । ಕಾಮ್ಯಾ । ವಿ । ವಃ । ಮದೇ । ವಿಶ್ವಾ । ದಧಾಸಿ । ದಾಶುಷೇ । ವಿವಕ್ಷಸೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಾಂ ಪ್ರಯತಿ ಪ್ರಕರ್ಷೇಣ ಗಚ್ಛತಿ ಪ್ರವರ್ತಮಾನೇಽಧ್ವರೇ ಯಾಗೇ ಯಜ್ಞೇಷು ಯಜನೀಯೇಷು ಹವಿಃಷ್ವಾಸನ್ನೇಷು ಸತ್ಸ್ವೀಳತೇ । ಋತ್ವಿಗ್ಯಜಮಾನಾಃ ಸ್ತುವಂತಿ । ಅಪಿ ಚ ಹೇ ಅಗ್ನೇ ತ್ವಂ ವಿಶ್ವಾ ವಿಶ್ವಾನಿ ಕಾಮ್ಯಾ ಕಾಮ್ಯಾನಿ ಕಮನೀಯಾನಿ ವಸೂನಿ ಧನಾನಿ ದಾಶುಷೇ ಹವಿರ್ದತ್ತವತೇ ಯಜಮಾನಾಯ ವಿಮದೇ ಸೋಮಾದಿಹವಿರ್ಜನ್ಯತೃಪ್ತೌ ಸತ್ಯಾಂ ದಧಾಸಿ । ಪ್ರಯಚ್ಛಸಿ । ಅತಃ ಕಾರಣಾದ್ವಿವಕ್ಷಸೇ । ತ್ವಂ ಮಹಾನ್ಭವಸಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಾಂ**—ನಿನ್ನನ್ನು । **ಪ್ರಯತಿ**—ಉತ್ತಮವಾಗಿ ನೆರವೇರುವ । **ಅಧ್ವರೇ**—ಯಾಗದಲ್ಲಿ । **ಯಜ್ಞೇಷು**—ಪೂಜ್ಯವಾದ ಹವಿಸ್ಸುಗಳನ್ನು ಅರ್ಪಿಸುವಾಗ । **ಈಳತೇ**—ಋತ್ವಿಗಾದಿಗಳು ಸ್ತುತಿಸುತ್ತಾರೆ । **ತ್ವಂ**—ನೀನು । **ವಃ**—ನಿನ್ನ ಮತ್ತು ದೇವತೆಗಳ । **ವಿ ಮದೇ**—ಅತಿಶಯವಾದ ಸಂತೋಷಕಾಲದಲ್ಲಿ । **ದಾಶುಷೇ**—ಯಜಮಾನನಿಗೆ । **ಕಾಮ್ಯಾ**—ಅಪೇಕ್ಷಿತವಾದ । **ವಿಶ್ವಾ ವಸೂನಿ**—ಸಕಲ ಧನಗಳನ್ನೂ । **ದಧಾಸಿ**—ಕೊಡುತ್ತೀಯೆ । **ವಿವಕ್ಷಸೇ**—ನೀನು ಮಹಾತ್ಮನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಉತ್ತಮವಾಗಿ ನೆರವೇರುವ ಈ ಯಾಗದಲ್ಲಿ ಪೂಜ್ಯವಾದ ಹವಿಸ್ಸುಗಳನ್ನು ಅರ್ಪಿಸುವಾಗ ನಿನ್ನನ್ನು ಋತ್ವಿಗಾದಿಗಳು ಸ್ತುತಿಸುತ್ತಾರೆ. ನೀನು ಮತ್ತು ಇತರ ದೇವತೆಗಳು ಸಂತೃಪ್ತಿಯನ್ನು ಹೊಂದಿದಾಗ ನೀನು ಯಜಮಾನನಿಗೆ ಅಪೇಕ್ಷಿತವಾದ ಸಕಲ ಧನಗಳನ್ನೂ ಕೊಡುತ್ತೀಯೆ. ನೀನು ಮಹಾತ್ಮನಾಗಿದ್ದೀಯೆ.

English Translation

The (worshipper) glorifies you, Agni, at sacrifices, when the solemnity is being celebrated; you grant in your exhilaration all desirable treasures to the donor (of the oblation); you are mighty.

॥ ಸಂಹಿತಾಪಾಠಃ ॥

**ತ್ವಾಂ ಯಜ್ಞೇಷ್ವೃತ್ವಿಜಂ ಚಾರುಮಗ್ನೇ ನಿ ಷೇದಿರೇ ।**

**ಘೃತಪ್ರತೀಕಂ ಮನುಷೋ ವಿ ವೋ ಮದೇ ಶುಕ್ರಂ ಚೇತಿಷ್ಠಮಕ್ಷಭಿರ್ವಿ-**

**ವಕ್ಷಸೇ ॥ ೨ ॥**

॥ ಪದಪಾಠಃ ॥

ತ್ವಾಂ । ಯಜ್ಞೇಷು । ಋತ್ವಿಜಂ । ಚಾರುಂ । ಅಗ್ನೇ । ನಿ । ಸೇದಿರೇ ।

ಘೃತऽಪ್ರತೀಕಂ । ಮನುಷಃ । ವಿ । ವಃ । ಮದೇ । ಶುಕ್ರಂ । ಚೇತಿಷ್ಠಂ । ಅಕ್ಷऽಭಿಃ । ವಿವಕ್ಷಸೇ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಾಂ ಮನುಷ್ಯಾ ಯಜಮಾನಾ ಯಜ್ಞೇಷು ಯಾಗೇಷು ನಿ ಷೇದಿರೇ । ನಿಯಮೇನ ಸ್ಥಾಪಯಂತಿ । ಕೀದೃಶಂ । ಋತ್ವಿಜಂ ಹೋತೃನಾಮಕಂ ಚಾರುಂ ರಮಣೀಯಂ ಘೃತಪ್ರತೀಕಮಾಜ್ಯಾಹುತಿಪೂರ್ಣಮುಖಂ ಶುಕ್ರಂ ಜ್ವಲಂತಮಕ್ಷಭಿರ್ವ್ಯಾಪ್ತೈಸ್ತೇಜೋಭಿಶ್ಚೇತಿಷ್ಠಮತಿಶಯೇನ ಜ್ಞಾತಾರಂ । ಕಿಮರ್ಥಂ । ವಿ ವೋ ಮದೇ ತವ ಸೋಮಾದಿಹವಿರ್ಜನ್ಯವಿವಿಧತೃಪ್ತ್ಯರ್ಥಂ । ಯಸ್ಮಾದೇವಂ ತಸ್ಮಾದ್ವಿವಕ್ಷಸೇ । ಮಹಾನ್ಭವಸಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಋತ್ವಿಜಂ**—ಹೋತೃರೂಪನೂ । **ಚಾರುಂ**—ಆಕರ್ಷಕನೂ । **ಘೃತಪ್ರತೀಕಂ**—ಆಜ್ಯಪೂರ್ಣವಾದ ಮುಖವುಳ್ಳವನೂ । **ಶುಕ್ರಂ**—ಪ್ರಕಾಶಮಾನನೂ । **ಅಕ್ಷಭಿಃ**—ಪೂರ್ಣವಾದ ತೇಜಸ್ಸುಗಳಿಂದ । **ಚೇತಿಷ್ಠಂ**—ಅತಿಶಯವಾದ ಚೈತನ್ಯವುಳ್ಳವನೂ ಆದ । **ತ್ವಾಂ**—ನಿನ್ನನ್ನು । **ಯಜ್ಞೇಷು**—ಯಜ್ಞಗಳಲ್ಲಿ । **ವಃ**—ನಿನ್ನ ಮತ್ತು ಇತರ ದೇವತೆಗಳ । **ವಿ ಮದೇ**—ಅತಿಶಯವಾದ ಸಂತೃಪ್ತಿಗಾಗಿ । **ಮನುಷಃ**—ಯಜಮಾನರು । **ನಿಷೇದಿರೇ**—ಸ್ಥಾಪಿಸುತ್ತಾರೆ । **ವಿವಕ್ಷಸೇ**—ನೀನು ಮಹಾತ್ಮನಾಗಿದ್ದೀಯೆ

॥ ಭಾವಾರ್ಥ ॥

ಎಲೈ ಅಗ್ನಿಯೇ, ಹೋತೃರೂಪನೂ, ಆಕರ್ಷಕವಾದ ರೂಪವುಳ್ಳವನೂ ಆಜ್ಯಪೂರ್ಣವಾದ ಮುಖವುಳ್ಳವನೂ, ಪ್ರಕಾಶಮಾನನೂ, ಪೂಜ್ಯವಾದ ತೇಜಸ್ಸುಗಳಿಂದ ಕೂಡಿದ ಚೈತನ್ಯವುಳ್ಳವನನೂ ಆದ ನಿನ್ನನ್ನು ಯಜ್ಞಗಳಲ್ಲಿ ನಿನ್ನ ಮತ್ತು ಇತರ ದೇವತೆಗಳ ಅತಿಶಯವಾದ ಸಂತೃಪ್ತಿಗಾಗಿ ಯಜಮಾನರು ಸ್ಥಾಪಿಸುತ್ತಾರೆ. ನೀನು ಮಹಾತ್ಮನಾಗಿದ್ದೀಯೆ.

## English Translation

The men establish you, Agni, at sacrifices, the ministrant priest, graceful, whose face shines with butter, radiant, most intelligent with your eyes, for your exhilaration ; (hence) you are mighty.

॥ ಸಂಹಿತಾಪಾಠಃ ॥

ಅಗ್ನೇ ಶುಕ್ರೇಣ ಶೋಚಿಷೋರು ಪ್ರಥಯಸೇ ಬೃಹತ್

ಅಭಿಕ್ರಂದನ್ವೃಷಾಯಸೇ ವಿ ವೋ ಮದೇ ಗರ್ಭಂ ದಧಾಸಿ ಜಾಮಿಷು

ವಿವಕ್ಷಸೇ ॥ ೮ ॥

॥ ಪದಪಾಠಃ ॥

ಅಗ್ನೇ । ಶುಕ್ರೇಣ । ಶೋಚಿಷಾ । ಉರು । ಪ್ರಥಯಸೇ । ಬೃಹತ್

ಅಭಿಽಕ್ರಂದನ್ । ವೃಷಽಯಸೇ । ವಿ । ವಃ । ಮದೇ । ಗರ್ಭಂ । ದಧಾಸಿ । ಜಾಮಿಷು । ವಿವಕ್ಷಸೇ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಬೃಹನ್ಮಹಾಂಸ್ತ್ವಂ ಶುಕ್ರೇಣ ದೀಪ್ತೇನ ಶೋಚಿಷಾ ತೇಜಸೋರು ಪ್ರಥಯಸೇ । ವಿಸ್ತೀರ್ಣಂ ಯಥಾ ಭವತಿ ತಥಾ ಪ್ರಖ್ಯಾತೋ ಭವಸಿ । ಕಿಂಚಾಭಿಕ್ರಂದನ್ನಾಭಿಮುಖ್ಯೇನ ಯುದ್ಧಾರ್ಥಂ ಶತ್ರೂನಾಹ್ವಯನ್ ವೃಷಾಯಸೇ । ವೃಷ ಇವಾಚರಸಿ। ಯುದ್ಧಕಾಲೇ ದರ್ಪಿತವೃಷ ಇವ ರೋರುವದ್ಭವಸೀತ್ಯರ್ಥಃ । ತ್ವಂ ಮಾಧ್ಯಮಿಕಃ ಸಞ್ಜಾಮಿಷು ಭಗಿನೀಭೂತಾಸ್ವೋಷಧೀಷು ಗರ್ಭಂ ಬೀಜಲಕ್ಷಣಂ ದಧಾಸಿ। ವೃಷ್ಟಿದ್ವಾರೇಣ ಧಾರಯಸಿ । ಏಕಸ್ಮಾತ್ಪ್ರಜಾಪತೇಃ ಸಕಾಶಾದುದ್ಭೂತತ್ವಾದಗ್ನ್ಯೋಷಧ್ಯೋರ್ಜಾಮಿತ್ವಮುಚ್ಯತೇ । ಕಸ್ಮಿನ್ಸತಿ । ವಿ ವೋ ಮದೇ ತವ ವಿವಿಧಸೋಮಾದಿಹವಿರ್ಜನ್ಯಮದೇ ಸಂಜಾತೇ ಸತಿ । ಯಸ್ಮಾದೇವಂ ಕೃತವಾನಸಿ ತಸ್ಮಾತ್ತ್ವಂ ವಿವಕ್ಷಸೇ । ಮಹಾನ್ಭವಸಿ ॥ ವಿವಕ್ಷಸ ಇತಿ ಮಹನ್ನಾಮ ವಕ್ತೇರ್ವಾ ವಹತೇರ್ವಾ ಸನಂತಸ್ಯ ರೂಪಮಿತಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಬೃಹತ್**—ಮಹತ್ಸ್ವರೂಪವುಳ್ಳ ನೀನು । **ಶುಕ್ರೇಣ**—ಪ್ರಕಾಶಮಾನವಾದ । **ಶೋಚಿಷಾ**—ತೇಜಸ್ಸಿನಿಂದ । **ಉರು**-ಅತ್ಯಧಿಕವಾಗಿ । **ಪ್ರಥಯಸೇ**-ಪ್ರಖ್ಯಾತನಾಗಿದ್ದೀಯೆ । **ಅಭಿಕ್ರಂದನ್**—ಶಬ್ದಮಾಡುತ್ತ । **ವೃಷಾಯಸೇ**—ವೃಷಭದಂತೆ ಮುನ್ನುಗ್ಗುತ್ತೀಯೆ । **ವಃ**—ನಿನ್ನ । **ವಿ ಮದೇ**—ಅಧಿಕವಾದ ಹರ್ಷಕಾಲದಲ್ಲಿ । **ಜಾಮಿಷು**—ನಿನಗೆ ಬಂಧುಭೂತವಾದ ಓಷಧಿಗಳಲ್ಲಿ । **ಗರ್ಭಂ**— ಬೀಜರೂಪವಾದ ಗರ್ಭವನ್ನು। **ದಧಾಸಿ**—ಸ್ಥಾಪಿಸುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಮಹತ್ಸ್ವರೂಪವುಳ್ಳ ನೀನು ಪ್ರಕಾಶಮಾನವಾದ ನಿನ್ನ ತೇಜಸ್ಸಿನಿಂದ ಅತ್ಯಧಿಕವಾಗಿ ಪ್ರಖ್ಯಾತನಾಗಿದ್ದೀಯೆ. ನೀನು ವೃಷಭದಂತೆ ಶಬ್ದಮಾಡುತ್ತ ಮುನ್ನುಗ್ಗುತ್ತೀಯೆ. ನಿನಗೆ ಅಧಿಕವಾಗಿ ಹರ್ಷವುಂಟಾದಾಗ ನಿನಗೆ ಬಂಧುಭೂತಗಳಾದ ಓಷಧಿಗಳಲ್ಲಿ ಬೀಜರೂಪವಾದ ಗರ್ಭವನ್ನು ಸ್ಥಾಪಿಸುತ್ತೀಯೆ. ನೀನು ಮಹಾತ್ಮನಾಗಿದ್ದೀಯೆ.

English Translation

Agni, you, the mighty one, are known far and wide by your radiant lustre; bellowing, you rush like a bull, you impregnate the sister (plants) in your exhilaration; you are mighty.

# ಇಪ್ಪತ್ತೆರಡನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಕುಹೇತಿ ಪಂಚದಶರ್ಚಂ ಷಷ್ಠಂ ಸೂಕ್ತಮೈಂದ್ರಂ । ಪಂಚದಶೀ ತ್ರಿಷ್ಟುಪ್ ಪಂಚಮೀ-ಸಪ್ತಮೀನವಮ್ಯಸ್ತಿಸ್ರೋಽನುಷ್ಟುಭಃ ಶಿಷ್ಟಾಃ ಪುರಸ್ತಾದ್ಬೃಹತ್ಯಃ । ಆದ್ಯದ್ವಾದಶಕತ್ರ್ಯಷ್ಟಕವತೀ ಪುರಸ್ತಾದ್ಬೃಹತೀ। ಪೂರ್ವವದೃಷಿಃ। ತಥಾ ಚಾನುಕ್ರಾಂತಂ। ಕುಹ ಪಂಚೋನಾ ಪುರಸ್ತಾದ್ಬಾರ್ಹತಂ ತ್ರಿಷ್ಟುಬಂತಂ ತ್ವಂ ತ್ಯಾ ಚಿದಾ ನಸ್ತ್ವಂ ನೋಽನುಷ್ಟುಭ ಇತಿ॥ ಚತುರ್ಥೇಽಹನಿ ನಿಷ್ಕೇವಲ್ಯ ಏತತ್ಸೂಕ್ತಂ। ಸೂತ್ರಿತಂ ಚ। ಕುಹ ಶ್ರುತ ಇಂದ್ರೋ ಯುಧ್ಮಸ್ಯ ತ ಇತಿ ನಿಷ್ಕೇವಲ್ಯಂ। ಆ. ೭-೧೧। ಇತಿ॥**

ಅನುವಾದವು—ಕುಹ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತೆಗಳು ಹಿಂದಿನಸೂಕ್ತದಂತೆಯೇ. ಈ ಸೂಕ್ತದ ಹದಿನೈದನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು; ಐದು, ಏಳು, ಒಂಭತ್ತನೆಯ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಪುರಸ್ತಾದ್ಬೃಹತೀಛಂದಸ್ಕವು. ಒಂದು ಋಕ್ಕಿನಲ್ಲಿ ನಾಲ್ಕು ಪಾದಗಳಿದ್ದು ಮೊದಲನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳೂ ಉಳಿದ ಮೂರು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಇದ್ದರೆ, ಆ ಋಕ್ಕು ಪುರಸ್ತಾ-ದ್ಬೃಹತೀಛಂದಸ್ಕವೆನಿಸುವುದು. ಅನುಕ್ರಮಣಿಕೆಯಲ್ಲಿ—**ಕುಹ ಪಂಚೋನಾ ಪುರಸ್ತಾದ್ಬಾರ್ಹತಂ ತ್ರಿಷ್ಟುಬಂ-ತಂ ತ್ವಂ ತ್ಯಾ ಚಿದಾ ನಸ್ತ್ವಂ ನೋಽನುಷ್ಟುಭಃ** ಎಂದು ಹೇಳಿರುವುದು. ಯಾಗದ ನಾಲ್ಕನೆಯ ದಿವಸ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಕುಹ ಶ್ರುತ ಇಂದ್ರೋ ಯುಧ್ಮಸ್ಯ ತೆ ಇತಿ ನಿಷ್ಕೇವಲ್ಯಂ** ಎಂಬ ಸೂತ್ರದಿಂದ (ಆ. ೭-೧೧) ವಿವೃತವಾಗಿರುವುದು.

## ಸೂಕ್ತ—೨೨

ಮಂಡಲ—೧೦। ಅನುವಾಕ—೨। ಸೂಕ್ತ—೨೨॥
ಅಷ್ಟಕ—೭ ಅಧ್ಯಾಯ ೭। ವರ್ಗ—೬, ೭, ೮॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫॥
ಋಷಿಃ—ವಿಮದ ಐಂದ್ರಃ ಪ್ರಾಜಾಪತ್ಯೋ ವಾ ವಸುಕೃದ್ವಾ ವಾಸುಕ್ರಃ।
ದೇವತಾ—ಇಂದ್ರಃ।
ಛಂದಃ—೧, ४, ೬, ೮, ೧೦-೧४. ಪುರಸ್ತಾದ್ಬೃಹತೀ। ೫, ೭, ೯. ಅನುಷ್ಟುಪ್। ೧೫. ತ್ರಿಷ್ಟುಪ್।

॥ ಸಂಹಿತಾಪಾಠಃ ॥

ಕುಹ ಶ್ರುತ ಇಂದ್ರಃ ಕಸ್ಮಿನ್ನದ್ಯ ಜನೇ ಮಿತ್ರೋ ನ ಶ್ರೂಯತೇ।
ಋಷೀಣಾಂ ವಾ ಯಃ ಕ್ಷಯೇ ಗುಹಾ ವಾ ಚರ್ಕೃಷೇ ಗಿರಾ॥ ೧॥

॥ ಪದಪಾಠಃ ॥

ಕುಹ । ಶ್ರುತಃ ಇಂದ್ರಃ । ಕಸ್ಮಿನ್ । ಅದ್ಯ । ಜನೇ । ಮಿತ್ರಃ । ನ । ಶ್ರೂಯತೇ ।

ಋಷೀಣಾಂ । ವಾ । ಯಃ । ಕ್ಷಯೇ । ಗುಹಾ । ವಾ । ಚರ್ಕೃಷೇ । ಗಿರಾ ॥ ೧ ॥

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ದಿನ ಇಂದ್ರಃ ಕುಹ ಕುತ್ರ ಸ್ಥಾನೇ ಶ್ರುತೋ ವಿಶ್ರುತಃ ಪ್ರಖ್ಯಾತಃ । ಕಸ್ಮಿಞ್ಜನೇ ಯಜಮಾನ ಇಜ್ಯತ್ವೇನ ಸ್ತುತ್ಯತ್ವೇನಾವಸ್ಥಿತಃ ಶ್ರೂಯತೇ । ಪ್ರಖ್ಯಾಯತೇ । ತತ್ರ ದೃಷ್ಟಾಂತಃ ಮಿತ್ರೋ ನ ಸೂರ್ಯ ಇವ ಸಖೇವ ವಾ ತದ್ವತ್ । ಯಂ ಇಂದ್ರ ಋಷೀಣಾಂ ಭೃಗ್ವಾದೀನಾಂ ಕ್ಷಯೇ ನಿವಾಸ ಆಶ್ರಮೇ ಗುಹಾ ವಾ ಗುಹಾಯಾಮರಣ್ಯೇ ವಾ ಗಿರಾ ಸ್ತುತಿಲಕ್ಷಣಯಾ ವಾಚಾ ಚರ್ಕೃಷೇ ಅತ್ಯರ್ಥಮಾಕೃಷ್ಯತೇ । ಅತ್ಯರ್ಥಂ ಸ್ತೂಯತ ಇತ್ಯರ್ಥಃ । ಸ ಇಂದ್ರಃ ಕುಹ ಶ್ರುತ ಇತಿ ಪೂರ್ವೇಣ ಸಂಬಂಧಃ ।

॥ ಪ್ರತಿಪದಾರ್ಥ ॥

ಯಃ—ಯಾವ ಇಂದ್ರನು । ಋಷೀಣಾಂ—ಋಷಿಗಳ । ಕ್ಷಯೇ ವಾ—ನಿವಾಸಸ್ಥಾನಗಳಲ್ಲಿಯಾಗಲಿ । ವಾ—ಅಥವಾ । ಗುಹಾ-ರಹಸ್ಯ ಪ್ರದೇಶಗಳಲ್ಲಿಯಾಗಲಿ । ಗಿರಾ-ಸ್ತುತಿರೂಪವಾದ ವಾಕ್ಕಿನಿಂದ । ಚರ್ಕೃಷೇ—ಆಕರ್ಷಿಸಲ್ಪಡುವನೋ ಅಂತಹ । ಇಂದ್ರಃ—ಇಂದ್ರನು । ಅದ್ಯ—ಈ ಯಾಗ ದಿನದಲ್ಲಿ । ಕುಹ—ಯಾವ ಸ್ಥಾನದಲ್ಲಿ । ಶ್ರುತಃ—ಪ್ರಖ್ಯಾತನಾಗಿದ್ದಾನೆ ? । ಮಿತ್ರೋ ನ—ಪ್ರೀತಿಪಾತ್ರನಾದ ಮಿತ್ರನಂತೆ । ಕಸ್ಮಿನ್ ಜನೇ—ಯಾವ ಜನರ ನಡುವೆ । ಶ್ರೂಯತೇ—ಪ್ರಸಿದ್ಧನಾಗಿ ಕೇಳಿಬರುತ್ತಾನೆ.

॥ ಭಾವಾರ್ಥ ॥

ಯಾವ ಇಂದ್ರನು ಋಷಿಗಳ ನಿವಾಸಸ್ಥಾನದಲ್ಲಿಯಾಗಲಿ, ಅಥವಾ ರಹಸ್ಯ ಪ್ರದೇಶದಲ್ಲಿಯಾಗಲಿ ಸ್ತುತಿರೂಪವಾದ ವಾಕ್ಕಿನಿಂದ ಆಕರ್ಷಿಸಲ್ಪಡುವನೋ ಅಂತಹ ಇಂದ್ರನು ಈ ಯಾಗದಿನದಲ್ಲಿ ಯಾವ ಸ್ಥಾನದಲ್ಲಿ ಪ್ರಖ್ಯಾತನಾಗಿದ್ದಾನೆ ? ಪ್ರೀತಿಪಾತ್ರನಾದ ಮಿತ್ರನಂತೆ ಯಾವ ಜನರ ನಡುವೆ ಪ್ರಸಿದ್ಧನಾಗಿ ಕೇಳಿಬರುತ್ತಾನೆ ?

## English Translation

In what place to-day is Indra renowned ? In what nation is he famed like Mitra ? (Indra), who is worshipped with sacred praise at the dwelling of the rishis, or in secret.

॥ ಸಂಹಿತಾಪಾಠಃ ॥

ಇಹ ಶ್ರುತ ಇಂದ್ರೋ ಅಸ್ಮೇ ಅದ್ಯ ಸ್ತವೇ ವಜ್ರ್ಯೃಚೀಷಮಃ ।

ಮಿತ್ರೋ ನ ಯೋ ಜನೇಷ್ವಾ ಯಶಶ್ಚಕ್ರೇ ಅಸಾಮ್ಯಾ ॥ ೨ ॥

॥ ಪದಪಾಠಃ ॥

ಇಹ । ಶ್ರುತಃ । ಇಂದ್ರಃ । ಅಸ್ಮೇ ಇತಿ । ಅದ್ಯ । ಸ್ತವೇ । ವಜ್ರೀ । ಋಚೀಷಮಃ ।

ಮಿತ್ರಃ । ನ । ಯಃ । ಜನೇಷು । ಆ । ಯಶಃ । ಚಕ್ರೇ । ಅಸಾಮಿ । ಆ ॥ ೨ ॥

॥ ಸಾಯಣಭಾಷ್ಯಂ ॥

ಇಹಾಸ್ಮಿನ್ಯಜ್ಞೆ ಇಂದ್ರಃ ಶ್ರುತಃ ಪ್ರಖ್ಯಾತಃ । ಅದ್ಯಾಸ್ಮಿನ್ದಿವಸೆ ಅಸ್ಮೇ ಅಸ್ಮಾಭಿಃ ಸ್ತವೇ । ಸ್ತೂಯತೇ । ಕೀದೃಶಃ । ವಜ್ರೀ ವಜ್ರವಾನ್ ಋಚೀಷಮಃ । ಯದ್ದ್ಯಾವ ಇಂದ್ರ ತೇ ಶತಂ ಶತಂ ಭೂಮಿರುತ ಸ್ಯುಃ ನ ತ್ವಾ ವಜ್ರಿನ್ । ಋ. ೮-೭೦-೫ । ಇತ್ಯಾದಿಕಯಾ ಸ್ತುತ್ಯಾ ಸಮಾನಗುಣ ಇತ್ಯರ್ಥಃ । ಯ ಇಂದ್ರೋ ಮಿತ್ರೋ ನ ಸೂರ್ಯ ಇವ ಸ್ನಿಗ್ಧ ಇವ ವಾ ಜನೇಷು ಸ್ತೋತೃಜನೇಷು ಯಶೋಽನ್ನಂ ಕೀರ್ತಿಂ ವಾ ಚಕ್ರೇ ಕರೋತಿ । ಕೀದೃಶಂ । ಅಸಾಮ್ಯಸಾಧಾರಣಂ । ಸ ಇಂದ್ರೋಽಸ್ಮಾಭಿಃ ಸ್ತೂಯತ ಇತಿ ಪೂರ್ವೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

ವಜ್ರೀ—ವಜ್ರಾಯುಧಧಾರಿಯೂ । ಋಚೀಷಮಃ—ಸ್ತುತಿಗೆ ಅರ್ಹನೂ ಆದ । ಯಃ—ಯಾವ ಇಂದ್ರನು । ಮಿತ್ರೋ ನ—ಮಿತ್ರನಂತೆ । ಜನೇಷು—ಸ್ತುತಿಕರ್ತರಲ್ಲಿ । ಅಸಾಮಿ—ಅಸಾಧಾರಣವಾದ । ಯಶಃ—ಅನ್ನವನ್ನು । ಆ ಚಕ್ರೇ—ಒದಗಿಸುವನೋ ಅಂತಹ । ಇಂದ್ರಃ—ಇಂದ್ರನು । ಇಹ—ಇಲ್ಲಿ । ಶ್ರುತಃ—ಪ್ರಸಿದ್ಧನಾಗಿ । ಅದ್ಯ—ಈ ಯಾಗದಿನದಲ್ಲಿ । ಅಸ್ಮೇ—ನಮ್ಮಿಂದ । ಸ್ತವೇ—ಪ್ರಶಂಸಿಸಲ್ಪಡುತ್ತಾನೆ.

॥ ಭಾವಾರ್ಥ ॥

ವಜ್ರಾಯುಧಧಾರಿಯೂ, ಸ್ತುತಿಗೆ ಅರ್ಹನೂ ಆದ ಯಾವ ಇಂದ್ರನು ಮಿತ್ರನಂತೆ ಸ್ತುತಿಕರ್ತರಲ್ಲಿ ಅಸಾಧಾರಣವಾದ ಅನ್ನವನ್ನು ಒದಗಿಸುವನೋ ಅಂತಹ ಇಂದ್ರನು ಇಲ್ಲಿ ಪ್ರಸಿದ್ಧನಾಗಿ ಈ ಯಾಗದಿನದಲ್ಲಿ ನಮ್ಮಿಂದ ಪ್ರಶಂಸಿಸಲ್ಪಡುತ್ತಾನೆ.

English Translation

Here is Indra renowned ; to-day he is praised by us, the wielder of the thunderbolt, the deserving of praise ; he who, like Mitra, bestows upon men unequalled abundance.

॥ ಸಂಹಿತಾಪಾಠಃ ॥

ಮಹೋ ಯಸ್ಪತಿಃ ಶವಸೋ ಅಸಾಮ್ಯಾ ಮಹೋ ನೃಮ್ಣಸ್ಯ ತೂತುಜಿಃ ।

ಭರ್ತಾ ವಜ್ರಸ್ಯ ಧೃಷ್ಣೋಃ ಪಿತಾ ಪುತ್ರಮಿವ ಪ್ರಿಯಂ ॥ ೩ ॥

॥ ಪದಪಾಠಃ ॥

ಮಹಃ । ಯಃ । ಪತಿಃ । ಶವಸಃ । ಅಸಾಮಿ । ಆ । ಮಹಃ । ನೃಮ್ಣಸ್ಯ । ತೂತುಜಿಃ ।

ಭರ್ತಾ । ವಜ್ರಸ್ಯ । ಧೃಷ್ಣೋಃ । ಪಿತಾ । ಪುತ್ರಂಽಇವ । ಪ್ರಿಯಂ ॥ ೩ ॥

॥ ಸಾಯಣಭಾಷ್ಯಂ ॥

ಯ ಇಂದ್ರೋ ಮಹೋ ಮಹತಃ ಶವಸೋ ಬಲಸ್ಯ ಪತಿರೀಶ್ವರೋಽಸಾಮ್ಯಾ । ಆಙ್ಮರ್ಯಾದಾಯಾಂ । ಆ ಸಮಾಪ್ತೇಃ । ಅನಂತಗುಣ ಇತ್ಯರ್ಥಃ । ಮಹೋ ಮಹತೋ ನೃಮ್ಣಸ್ಯ ಧನಸ್ಯ ಚ ತೂತುಜಿಃ ಸ್ತೋತೃಭ್ಯಃ ಪ್ರೇರಕಃ । ಕಿಂಚ ಧೃಷ್ಣೋಃ ಶತ್ರೂಣಾಂ ಧರ್ಷಕಸ್ಯ ವಜ್ರಸ್ಯ ಸ್ವಕೀಯಸ್ಯಾಯುಧಸ್ಯ ಭರ್ತಾ ಯ ಇಂದ್ರೋ ಧಾರಯಿತಾ । ಸ ಇಂದ್ರೋಽಸ್ಮಾನ್ಪಾತ್ವಿತಿ ಶೇಷಃ । ತತ್ರ ದೃಷ್ಟಾಂತಃ । ಪಿತಾ ಪುತ್ರಮಿವ ಪ್ರಿಯಂ ಯಥಾ ಪಿತೇಪ್ಸಿತಂ ಸುತಂ ಪಾತಿ ತದ್ವತ್ ॥

॥ ಪ್ರತಿಪದಾರ್ಥ ॥

ಯಃ—ಯಾವ ಇಂದ್ರನು । ಮಹಃ—ಮಹತ್ತಾದ । ಶವಸಃ—ಶಕ್ತಿಗೆ । ಪತಿಃ—ಒಡೆಯನಾಗಿಯೂ । ಅಸಾಮ್ಯಾ—ಅಸಾಧಾರಣವಾದ ಗುಣಗಳುಳ್ಳವನಾಗಿಯೂ । ಮಹಃ—ಮಹತ್ತಾದ । ನೃಮ್ಣಸ್ಯ—ಧನಕ್ಕೆ । ತೂತುಜಿಃ—(ಯಜಮಾನರಿಗೆ ಸೇರುವಂತೆ) ಪ್ರೇರಕನೂ । ಧೃಷ್ಣೋಃ—ಶತ್ರುಧರ್ಷಕವಾದ । ವಜ್ರಸ್ಯ—ವಜ್ರಾಯುಧಕ್ಕೆ । ಭರ್ತಾ—ಒಡೆಯನೋ ಆ ಇಂದ್ರನು । ಪಿತಾ—ತಂದೆಯು । ಪ್ರಿಯಂ—ಪ್ರೀತಿಪಾತ್ರನಾದ । ಪುತ್ರಂ ಇವ—ಮಗನನ್ನು ಸಂರಕ್ಷಿಸುವಂತೆ ನಮ್ಮನ್ನು ರಕ್ಷಿಸಲಿ.

॥ ಭಾವಾರ್ಥ ॥

ಯಾವ ಇಂದ್ರನು ಮಹತ್ತಾದ ಶಕ್ತಿಗೆ ಒಡೆಯನಾಗಿಯೂ, ಯಜಮಾನನಿಗೆ ಅಧಿಕವಾದ ಧನವನ್ನು ಒದಗಿಸುವವನಾಗಿಯೂ ಶತ್ರುಧರ್ಷಕವಾದ ವಜ್ರಾಯುಧಕ್ಕೆ ಒಡೆಯನಾಗಿಯೂ ಇರುವನೋ ಅವನು, ಪ್ರೀತಿಪಾತ್ರನಾದ ಪುತ್ರನನ್ನು ತಂದೆಯು ಸಂರಕ್ಷಿಸುವಂತೆ ನಮ್ಮನ್ನು ಸಂರಕ್ಷಿಸಲಿ.

## English Translation

(May Indra protect us) who is the lord of great strength, of unequalled (power), the distributor of great wealth, the cherisher of the dreadful thunderbolt, as a father (cherishes) a dear son.

ಸಂಹಿತಾಪಾಠಃ

ಯುಜಾನೋ ಅಶ್ವಾ ವಾತಸ್ಯ ಧುನೀ ದೇವೋ ದೇವಸ್ಯ ವಜ್ರಿವಃ ।

ಸ್ಯಂತಾ ಪಥಾ ವಿರುಕ್ಮತಾ ಸೃಜಾನಃ ಸ್ತೋಷ್ಯಧ್ವನಃ ॥ ೪ ॥

॥ ಪದಪಾಠಃ ॥

ಯುಜಾನಃ । ಅಶ್ವಾ । ವಾತಸ್ಯ । ಧುನೀ ಇತಿ । ದೇವಃ । ದೇವಸ್ಯ । ವಜ್ರಿವಃ ।

ಸ್ಯಂತಾ । ಪಥಾ । ವಿರುಕ್ಮತಾ । ಸೃಜಾನಃ । ಸ್ತೋಷಿ । ಅಧ್ವನಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ವಜ್ರಿವೋ ವಜ್ರವನ್ನಿಂದ್ರ ॥ ಏಕೋ ಮತ್ವರ್ಥೀಯೋಽನುವಾದಕಃ ॥ ದೇವೋ ದ್ಯೋತಮಾನಸ್ತ್ವಂ ದೇವಸ್ಯ ದ್ಯೋತಮಾನಸ್ಯ ವಾತಸ್ಯ ವಾಯೋರ್ಧುನೀ ಪ್ರೇರಕೌ । ವಾಯೋರಪಿ ಶೀಘ್ರಗಾಮಿನಾವಿತ್ಯರ್ಥಃ । ಅಶ್ವಾಶ್ವೌ ತ್ವದೀಯೌ ಹರಿನಾಮಕೌ ಯುಜಾನಃ ಸ್ವರಥೇ ಸಂಯೋಜಯನ್ । ಕೀದೃಶೌ । ವಿರುಕ್ಮತಾ ವಿರೋಚನವತಾ ಪಥಾ ಮಾರ್ಗೇಣ ಸ್ಯಂತಾ ಸ್ಯಂತೌ ಗಚ್ಛಂತೌ । ಅಧ್ವನೋ ಯುದ್ಧೇ ಗಮನಮಾರ್ಗಾನ್ಸೃಜಾನ ಉತ್ಪಾದಯನ್ ಸ್ತೋಷಿ । ಸತತಂ ಸ್ತೂಯಸೇ ॥

॥ ಪ್ರತಿಪದಾರ್ಥ ॥

ವಜ್ರಿವಃ—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । ದೇವಃ—ಪ್ರಕಾಶಮಾನನಾದ ನೀನು । ದೇವಸ್ಯ—ದೇವತಾತ್ಮನಾದ । ವಾತಸ್ಯ—ವಾಯುವಿಗಿಂತಲೂ । ಧುನೀ—ವೇಗಗಾಮಿಗಳೂ । ವಿರುಕ್ಮತಾ—ಪ್ರಕಾಶಮಾನವಾದ । ಪಥಾ—ಮಾರ್ಗದಿಂದ । ಸ್ಯಂತಾ—ಸಂಚರಿಸುವುವೂ ಆದ । ಅಶ್ವಾ—ಅಶ್ವಗಳನ್ನು । ಯುಜಾನಃ—ರಥಕ್ಕೆ ಸೇರಿಸಿಕೊಂಡು । ಅಧ್ವನಃ—ಯುದ್ಧಮಾರ್ಗಗಳನ್ನು । ಸೃಜಾನಃ—ನಿರ್ಮಿಸುತ್ತ । ಸ್ತೋಷಿ—ಪ್ರಶಂಸಿಸಲ್ಪಡುತ್ತೀಯೆ.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಪ್ರಕಾಶಮಾನನಾದ ನೀನು ದೇವತಾತ್ಮನಾದ ವಾಯುವಿಗಿಂತಲೂ ವೇಗಗಾಮಿಗಳೂ ಪ್ರಕಾಶಮಾನವಾದ ಮಾರ್ಗದಿಂದ ಸಂಚರಿಸುವುವೂ ಆದ ಅಶ್ವಗಳನ್ನು ರಥಕ್ಕೆ ಸೇರಿಸಿಕೊಂಡು ಯುದ್ಧಮಾರ್ಗಗಳನ್ನು ನಿರ್ಮಿಸುತ್ತ ಪ್ರಶಂಸಿಸಲ್ಪಡುತ್ತೀಯೆ.

## English Translation

Thunderer, you who are divine, yoking your horses which are swifter than the divine wind, and gliding along the resplendent road, you, opening out the way (to battle), are glorified.

॥ ಸಂಹಿತಾಪಾಠಃ ॥

ತ್ವಂ ತ್ಯಾ ಚಿದ್ವಾತಸ್ಯಾಶ್ವಾಗಾ ಋಜ್ರಾ ತ್ಮನಾ ವಹಧ್ಯೈ ।

ಯಯೋರ್ದೇವೋ ನ ಮರ್ತ್ಯೋ ಯಂತಾ ನಕಿರ್ವಿದಾಯ್ಯಃ ॥ ೫ ॥

॥ ಪದಪಾಠಃ ॥

ತ್ವಂ । ತ್ಯಾ । ಚಿತ್ । ವಾತಸ್ಯ । ಅಶ್ವಾ । ಆ । ಅಗಾಃ । ಋಜ್ರಾ । ತ್ಮನಾ । ವಹಧ್ಯೈ ।

ಯಯೋಃ । ದೇವಃ । ನ । ಮರ್ತ್ಯಃ । ಯಂತಾ । ನಕಿಃ । ವಿದಾಯ್ಯಃ ॥ ೫ ॥

॥ ಸಾಯಣಭಾಷ್ಯಂ ॥

ಯಚ್ಛಬ್ದಸಂಬಂಧಾದುತ್ತರೋಽರ್ಧರ್ಚಃ ಪೂರ್ವಂ ವ್ಯಾಖ್ಯಾಯತೇ । ಯಯೋಸ್ತ್ವದೀಯಯೋರ್ಯಂತಾ ನಿಯಂತಾ ನಿವಾರಯಿತಾ ದೇವೋ ನ ದೇವಾನಾಂ ಮಧ್ಯೇ ಕಶ್ಚಿದಪಿ ದೇವೋ ನಾಸ್ತಿ ಮರ್ತ್ಯೋ ಮನುಷ್ಯಾಣಾಂ ಮಧ್ಯೇ ಕಶ್ಚಿದಪಿ ನಾಸ್ತಿ ನಕಿರ್ನ ಕಶ್ಚಿದಪಿ ವಿದಾಯ್ಯೋ ವೇತ್ತಾ । ಜವಸ್ಯ ಬಲಸ್ಯೇತಿ ವಾ ಶೇಷಃ । ಹೇ ಇಂದ್ರ ತ್ವಂ ವಾತಸ್ಯ ವಾಯೋರ್ಬಲೇನ ಜವೇನ ಚ ಯುಕ್ತಾವೃಜ್ರಾ ಋಜುಗಾಮಿನೌ ತ್ಯಾ ಚಿತ್ತಾವಪ್ಯಶ್ವಾ ತ್ವದೀಯಾವಶ್ವೌ ತ್ಮನಾತ್ಮನೈವ । ಸಾರಥಿನಿರಪೇಕ್ಷೇಣೇತ್ಯರ್ಥಃ । ವಹಧ್ಯೈ ವಹನಾರ್ಥಂ । ಅಭಿಪ್ರೇತದೇಶಪ್ರಾಪಣಾಯೇತ್ಯರ್ಥಃ । ಆಗಾಃ । ಆಭಿಮುಖ್ಯೇನ ಗಚ್ಛಸಿ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಯಯೋಃ**—ಯಾವ ನಿನ್ನ ಅಶ್ವಗಳನ್ನು । **ಯಂತಾ**—ತಡೆಯುವವನು । **ದೇವೋ ನ**—ದೇವತೆಗಳಲ್ಲಿ ಯಾರೂ ಇಲ್ಲವೋ । **ಮರ್ತ್ಯಃ**—ಮಾನವರಲ್ಲಿ । **ನಕಿಃ**—ಯಾರೂ ಇಲ್ಲವೋ ಅಂತಹವೂ । **ವಾತಸ್ಯ**—ವಾಯುವೇಗದಿಂದ ಕೂಡಿದವೂ । **ಋಜ್ರಾ**—ನೇರವಾಗಿ ನಡೆಯುವುವೂ । **ತ್ಯಾ ಚಿತ್**—ಪ್ರಸಿದ್ಧವಾದವೂ ಆದ । **ಅಶ್ವಾ**—ನಿನ್ನ ಅಶ್ವಗಳನ್ನು । **ತ್ಮನಾ**—ಸಾರಥಿರಹಿತವಾಗಿಯೇ । **ವಹಧ್ಯೈ**—ನಿನ್ನನ್ನು ವಹಿಸಲು । **ವಿದಾಯ್ಯಃ**—ಪ್ರಾಜ್ಞನಾದ । **ತ್ವಂ**—ನೀನು । **ಆಗಾಃ**—ಅವುಗಳಿಗಭಿಮುಖನಾಗಿ ಬರುತ್ತೀಯೆ

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ನಿನ್ನ ಅಶ್ವಗಳ ವೇಗವನ್ನು ದೇವತೆಗಳಲ್ಲಾಗಲಿ ಅಥವಾ ಮಾನವರಲ್ಲಾಗಲಿ ಯಾರೂ ತಡೆಯಲು ಸಾಧ್ಯವಿಲ್ಲವೋ ಅಂತಹವೂ, ವಾಯುಬಲದಿಂದ ಕೂಡಿದವೂ, ನೇರವಾಗಿ ನಡೆಯುವುವೂ ಪ್ರಸಿದ್ಧವಾದವೂ ಆದ ನಿನ್ನ ಅಶ್ವಗಳನ್ನು ಸಾರಥಿರಹಿತವಾಗಿ ತಾವೇ ನಿನ್ನನ್ನು ವಹಿಸಲು ಪ್ರಾಜ್ಞನಾದ ನೀನು ಅವುಗಳಿಗಭಿಮುಖನಾಗಿ ಬರುತ್ತೀಯೆ.

## English Translation

You have come to these two horses (which have the speed) of the wind, straight-going, for them to draw you of themselves, whom no deity, no mortal is able to restrain ; whose fleetness no one comprehends.

॥ ಸಂಹಿತಾಪಾಠಃ ॥

ಅಧ ಗ್ಮಂತೋಶನಾ ಪೃಚ್ಛತೇ ವಾಂ ಕದರ್ಥಾ ನ ಆ ಗೃಹಂ ।

ಆ ಜಗ್ಮಥುಃ ಪರಾಕಾದ್ದಿವಶ್ಚ ಗ್ಮಶ್ಚ ಮರ್ತ್ಯಂ ॥ ೬ ॥

॥ ಪದಪಾಠಃ ॥

ಅಧ । ಗ್ಮಂತಾ । ಉಶನಾ । ಪೃಚ್ಛತೇ । ವಾಂ । ಕತ್ಽಅರ್ಥಾ । ನಃ । ಆ । ಗೃಹಂ ।

ಆ । ಜಗ್ಮಥುಃ । ಪರಾಕಾತ್ । ದಿವಃ । ಚ । ಗ್ಮಃ । ಚ । ಮರ್ತ್ಯಂ ॥ ೬ ॥

॥ ಸಾಯಣಭಾಷ್ಯಂ ॥

ಅಧಾಥ ಯಜ್ಞಸಮಾಪ್ತ್ಯನಂತರಮುಶನಾ ಭಾರ್ಗವ ಋಷಿರ್ಹೇ ಇಂದ್ರಾಗ್ನೀ ಗ್ಮಂತಾ ಸ್ವಸ್ಥಾನಂ ಪ್ರತಿ ಗಚ್ಛಂತೌ ವಾಂ ಯುವಾಂ ಪೃಚ್ಛತೇ । ಪೃಚ್ಛತಿ ಸ್ಮ । ಯದ್ವಾ । ಉಶನೇತಿ ವಿಭಕ್ತಿವ್ಯತ್ಯಯಃ । ಉಶನಸಮಿಂದ್ರಸ್ಯ ಸಖಿಭೂತಂ ಭಾರ್ಗವಮಿಂದ್ರಂ ಚ ಯುವಾಂ ಸರ್ವೋ ಯಜಮಾನಃ ಪೃಚ್ಛತಿ । ಕಿಂ ಪೃಷ್ಟವಾನಿತಿ ಉಚ್ಯತೇ । ಯುವಾಂ ಕದಾರ್ಥಾ ಕದರ್ಥೌ ಕಿಂಪ್ರಯೋಜನವಂತೌ ಸಂತೌ ನೋಽಸ್ಮದೀಯಂ । ಆಕಾರಃ ಪ್ರತೀತ್ಯಸ್ಯಾರ್ಥೇ । ಗೃಹಂ ಪ್ರತಿ ಪರಾಕಾತ್ । ದೂರನಾಮೈತತ್ । ದೂರಾದಾ ಜಗ್ಮಥುಃ । ಆಗತವಂತೌ ಸ್ಥಃ । ತದೇವೋಕ್ತಂ । ದಿವಶ್ಚ ದ್ಯುಲೋಕಾಚ್ಚ ಗ್ಮಶ್ಚ ಭೂಲೋಕಾಚ್ಚ ಮರ್ತ್ಯಂ ಮನುಷ್ಯಂ ಮಾಂ ಪ್ರತ್ಯಾಗತವಂತೌ । ಯುವಯೋಃ ಕೃತಾರ್ಥತ್ವಾದತ್ರಾಗಮನಮಸ್ಮದನುಗ್ರಹಾರ್ಥಮೇವ ನ ಸ್ವಾರ್ಥಮಿತಿ ಬ್ರುವನ್ನನುವ್ರಜತೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾಗ್ನಿಗಳೇ ನೀವಿಬ್ಬರೂ) ಕದರ್ಥಾ—ಯಾವ ಪ್ರಯೋಜನವುಳ್ಳವರಾಗಿ । ನಃ—ನಮ್ಮ । ಗೃಹಂ—ಮನೆಗೆ । ಪರಾಕಾತ್—ಬಹುದೂರದೇಶದಿಂದ । ಆ ಜಗ್ಮಥುಃ—ಬಂದಿದ್ದೀರಿ । ದಿವಃ—ದ್ಯುಲೋಕದಿಂದಲೂ । ಗ್ಮಃ ಚ—ಪೃಥ್ವಿಯಿಂದಲೂ । ಮರ್ತ್ಯಂ—ಮಾನವನಾದ ನನ್ನಲ್ಲಿಗೆ । ಆ (ಜಗ್ಮಥುಃ)—ಯಾವ ಉದ್ದಿಶ್ಯದಿಂದ ಬಂದಿದ್ದೀರಿ ಎಂಬುದಾಗಿ । ಗ್ಮಂತಾ—ತನ್ನಲ್ಲಿಗೆ ಹೋಗುತ್ತಿದ್ದ । ವಾಂ—ನಿಮ್ಮನ್ನು । ಅದ್ಯ—ಇಂದು । ಉಶನಾ—ಭೃಗುಪುತ್ರನಾದ ಉಶನಸ್ಸೆಂಬುವನು । ಪೃಚ್ಛತೇ—ಕೇಳುತ್ತಾನೆ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಯಾವ ಪ್ರಯೋಜನವನ್ನು ನಿರೀಕ್ಷಿಸಿ ನೀವಿಬ್ಬರೂ ನಮ್ಮ ಮನೆಗೆ ಬಂದಿದ್ದೀರಿ? ಅತ್ಯಂತ ದೂರದೇಶವಾದ ದ್ಯುಲೋಕದಿಂದಲೂ, ಪೃಥ್ವಿಯಿಂದಲೂ ಸಹ ಮಾನವನಾದ ನನ್ನಲ್ಲಿಗೆ ಯಾವ ಉದ್ದಿಶ್ಯದಿಂದ ಬಂದಿದ್ದೀರಿ ಎಂಬುದಾಗಿ ತನ್ನಲ್ಲಿಗೆ ಹೋಗುತ್ತಿದ್ದ ನಿಮ್ಮನ್ನು ಭೃಗುಪುತ್ರನಾದ ಉಶನಸ್ಸೆಂಬುವನು ಕೇಳುತ್ತಾನೆ.

## English Translation

Ushanas inquires of you two as you pass, "(Why) have you come to (our dwelling) from a distance; from heaven and earth to a mortal?"

॥ ಸಂಹಿತಾಪಾಠಃ ॥

ಆ ನ ಇಂದ್ರ ಪೃಕ್ಷಸೇಽಸ್ಮಾಕಂ ಬ್ರಹ್ಮೋದ್ಯತಂ ।
ತತ್ತ್ವಾ ಯಾಚಾಮಹೇಽವಃ ಶುಷ್ಣಂ ಯದ್ಧನ್ನಮಾನುಷಂ ॥ ೭ ॥

॥ ಪದಪಾಠಃ ॥

ಆ । ನಃ । ಇಂದ್ರ । ಪೃಕ್ಷಸೇ । ಅಸ್ಮಾಕಂ । ಬ್ರಹ್ಮ । ಉತ್ಽಯತಂ ।
ತತ್ । ತ್ವಾ । ಯಾಚಾಮಹೇ । ಅವಃ । ಶುಷ್ಣಂ । ಯತ್ । ಹನ್ । ಅಮಾನುಷಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ । ನ ಇತಿ ತೃತೀಯಾರ್ಥೇ ಷಷ್ಠೀ । ನೋಽಸ್ಮಾಭಿರುದ್ಯತಮುತ್ಕ್ಷಿಪ್ತಂ । ದತ್ತಮಿತ್ಯರ್ಥಃ । ಅಸ್ಮಾಕಮಸ್ಮದೀಯಂ ಬ್ರಹ್ಮ ಹವಿರ್ಲಕ್ಷಣಮನ್ನಂ । ಆಙ್ಮರ್ಯಾದಾಯಾಂ । ಆ ತೃಪ್ತೇರಿತ್ಯರ್ಥಃ । ಪೃಕ್ಷಸೇ । ಆತ್ಮನಾ ಸಂಪರ್ಚಯ । ಪೃಚೀ ಸಂಪರ್ಕ ಇತಿ ಧಾತೋ ರೂಪಂ । ಆಭಕ್ಷಯೇತ್ಯರ್ಥಃ । ಕಿಂಚ ವಯಮಪಿ ತ್ವೈವಂಭೂತಂ ತ್ವಾಂ ತತ್ ಯದುತ್ಕೃಷ್ಟಮಸ್ತೀತಿ ಶೇಷಃ । ತತ್ತಾದೃಶಮನ್ನಮವಸ್ತದ್ರಕ್ಷಣಂ ಚ ಯಾಚಾಮಹೇ । ಪ್ರಾರ್ಥಯಾಮಹೇ । ತಥಾ ಯಚ್ಛುಷ್ಣಂ ಬಲಂ ಚಾಮಾನುಷಂ ಮನುಷ್ಯಾದನ್ಯಂ ರಾಕ್ಷಸಾದಿಕಂ ಹನ್ ಹಂತಿ ತದುತ್ಕೃಷ್ಟಂ ಬಲಂ ಚ ಯಾಚಾಮಹೇ । ಯದ್ವಾ । ಹೇ ಇಂದ್ರ ತ್ವಂ ಶುಷ್ಣಮೇತನ್ನಾಮಾನಮಮಾನುಷಂ ಮನುಷ್ಯವ್ಯತಿರಿಕ್ತಮಸುರಂ ಹನ್ । ಹತವಾನಸಿ । ಹತ್ವಾ ಚ ಯದ್ಯೇನ ರಕ್ಷಣೇನ ತ್ರೈಲೋಕ್ಯಂ ಪಾಲಿತವಾನಸಿ ತದವಃ ಪಾಲನಮಸ್ಮಾಕಮಪಿ ಭವೇದಿತಿ ತ್ವಾಂ ಯಾಚಾಮಹ ಇತಿ ವಾಕ್ಯಾರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ನಃ—ನಮ್ಮಿಂದ । ಉದ್ಯತಂ—ಅರ್ಪಿತವಾದ । ಅಸ್ಮಾಕಂ—ನಮ್ಮ । ಬ್ರಹ್ಮ—ಹವಿಸ್ಸನ್ನು । ಆ ಪೃಕ್ಷಸೇ—ತೃಪ್ತಿಯಾಗುವವರೆಗೂ ಸ್ವೀಕರಿಸು । ಯತ್—ಯಾವ । ಶುಷ್ಣಂ—ನಿನ್ನ ಬಲವು । ಅಮಾನುಷಂ—ಮಾನವತ್ವವೇ ಇಲ್ಲದ ರಾಕ್ಷಸಾದಿಗಳನ್ನು । ಹನ್—ಕೊಲ್ಲಬಲ್ಲದೋ । ತತ್—ಅಂತಹ । ಅವಃ—ಶಕ್ತಿಯುತವಾದ ರಕ್ಷಣವನ್ನು । ತ್ವಾ—ನಿನ್ನಿಂದ । ಯಾಚಾಮಹೇ—ನಾವು ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮಿಂದ ಅರ್ಪಿತವಾದ ಈ ಹವಿಸ್ಸನ್ನು ನಿನಗೆ ತೃಪ್ತಿಯಾಗುವವರೆಗೂ ಸ್ವೀಕರಿಸು. ಯಾವ ನಿನ್ನ ಬಲವು ಮಾನವತ್ವವೇ ಇಲ್ಲದ ಅಸುರರನ್ನು ಕೊಲ್ಲಬಲ್ಲುದೋ, ಅಂತಹ ಶಕ್ತಿಯುತವಾದ ರಕ್ಷಣವನ್ನು ನಿನ್ನಿಂದ ನಾವು ಪ್ರಾರ್ಥಿಸುತ್ತೇವೆ.

English Translation

Aaccpt, Indra, the oblation upraised by us; we solicit of you that protection by which you did slay the non-human Shushna.

॥ ಸಂಹಿತಾಪಾಠಃ ॥

ಅಕರ್ಮಾ ದಸ್ಯುರಭಿ ನೋ ಅಮಂತುರನ್ಯವ್ರತೋ ಅಮಾನುಷಃ ।
ತ್ವಂ ತಸ್ಯಾಮಿತ್ರಹನ್ವಧರ್ದಾಸಸ್ಯ ದಂಭಯ ॥ ೮ ॥

॥ ಪದಪಾಠಃ ॥

ಅಕರ್ಮಾ । ದಸ್ಯುಃ । ಅಭಿ । ನಃ । ಅಮಂತುಃ । ಅನ್ಯಽವ್ರತಃ । ಅಮಾನುಷಃ ।
ತ್ವಂ । ತಸ್ಯ । ಅಮಿತ್ರಽಹನ್ । ವಧಃ । ದಾಸಸ್ಯ । ದಂಭಯ ॥ ೮ ॥

॥ ಸಾಯಣಭಾಷ್ಯಂ ॥

ಅಕರ್ಮಾವಿದ್ಯಮಾನಯಾಗಾದಿಕರ್ಮಾ ದಸ್ಯುರುಪಕ್ಷಪಯಿತಾಭ್ಯಾಭಿಮುಖ್ಯೇನ ಸ್ವರೂಪತೋ ನೋಽಸ್ಮಾನಮಂತುರಜ್ಞಾತಾ । ಯದ್ವಾ । ಅತ್ರಾವೇತ್ಯುಪಸರ್ಗಸ್ಯ ವಕಾರಲೋಪೋ ದ್ರಷ್ಟವ್ಯಃ । ಅವಮಂತುರವಮಂತಾಭಿಭವಿತಾ । ಅನ್ಯವ್ರತಃ ಶ್ರುತಿಸ್ಮೃತಿವ್ಯತಿರಿಕ್ತಕರ್ಮಾಮಾನುಷೋ ಮನುಷ್ಯಸಂವ್ಯವಹಾರಾದ್ಬಾಹ್ಯಃ । ಅಸುರಪ್ರಕೃತಿರಿತ್ಯರ್ಥಃ । ಯ ಏವಂಭೂತೋಽಸ್ತಿ ಹೇ ಅಮಿತ್ರಹಞ್ಛತ್ರೂಣಾಂ ಹಂತರಿಂದ್ರ ತ್ವಂ ದಾಸಸ್ಯೋಪಕ್ಷಪಯಿತವ್ಯಸ್ಯ ವಧರ್ಹಂತಾ ಸನ್ ದಂಭಯ । ತಂ ಶತ್ರುಂ ಹಿಂಧಿ ॥

॥ ಪ್ರತಿಪದಾರ್ಥ ॥

**ಅಮಿತ್ರಹನ್**—ಶತ್ರುನಾಶಕನಾದ ಎಲೈ ಇಂದ್ರನೇ । **ತ್ವಂ**—ನೀನು । **ಅಕರ್ಮಾ**—ಕರ್ಮರಹಿತನಾಗಿಯೂ । **ದಸ್ಯುಃ**—ನಾಶಕನಾಗಿಯೂ । **ಅಭಿ**—ಪೂರ್ಣವಾಗಿ । **ನಃ**—ನಮ್ಮನ್ನು । **ಅಮಂತುಃ**—ತಿಳಿಯದೇ ಇರುವವನೂ । **ಅನ್ಯವ್ರತಃ**—ದೇವಪೂಜಕವಲ್ಲದ ಕರ್ಮವುಳ್ಳವನೂ । **ಅಮಾನುಷಃ**—ರಾಕ್ಷಸ ಸ್ವರೂಪವುಳ್ಳವನೂ ಆದ । **ತಸ್ಯ**—ಯಾವ ಅಸುರನಿರುವನೋ ಅಂತಹ । **ದಾಸಸ್ಯ**—ನಾಶಕನಾದ ಶತ್ರುವಿನ । **ವಧಃ**—ನಾಶಕನಾಗಿ । **ದಂಭಯ**—ಅವನನ್ನು ಸಂಹರಿಸು.

॥ ಭಾವಾರ್ಥ ॥

ಶತ್ರುನಾಶಕನಾದ ಎಲೈ ಇಂದ್ರನೇ, ನೀನು ಕರ್ಮರಹಿತನಾಗಿಯೂ, ನಾಶಕನಾಗಿಯೂ, ಪೂರ್ಣವಾಗಿ ನಮ್ಮನ್ನು ತಿಳಿಯದಿರುವವನಾಗಿಯೂ, ದೇವಪೂಜಕವಲ್ಲದ ಕರ್ಮವುಳ್ಳವನಾಗಿಯೂ, ರಾಕ್ಷಸಸ್ವರೂಪವುಳ್ಳವನಾಗಿಯೂ ಆದ ಯಾವ ಅಸುರನಿರುವನೋ ಅಂತಹ ಅಸುರನಿಗೆ ಹಂತಕನಾಗಿ ಅವನನ್ನು ಸಂಹರಿಸು.

English Translation

The Dasyu practising no religious rites, not knowing us thoroughly following other observances, obeying no human laws, baffle, destroyer of enemies, the wapon of that slave.

॥ ಸಂಹಿತಾಪಾಠ ॥

ತ್ವಂ ನ ಇಂದ್ರ ಶೂರ ಶೂರೈರುತ ತ್ವೋತಾಸೋ ಬರ್ಹಣಾ ।
ಪುರುತ್ರಾ ತೇ ವಿ ಪೂರ್ತಯೋ ನವಂತ ಕ್ಷೋಣಯೋ ಯಥಾ ॥ ೯ ॥

॥ ಪದಪಾಠ ॥

ತ್ವಂ । ನಃ । ಇಂದ್ರ । ಶೂರ । ಶೂರೈಃ । ಉತ । ತ್ವಾऽಊತಾಸಃ । ಬರ್ಹಣಾ ।
ಪುರುऽತ್ರಾ । ತೇ । ವಿ । ಪೂರ್ತಯಃ । ನವಂತ । ಕ್ಷೋಣಯಃ । ಯಥಾ ॥ ೯ ॥

॥ ಸಾಯಣಭಾಷ್ಯಂ ॥

**ಹೇ ಶೂರ ವಿಕ್ರಾಂತೇಂದ್ರ ತ್ವಂ ಶೂರೈರ್ಭಟೈರ್ಮರುದ್ಭಿಃ ಸಹಿತಃ ಸನ್ನೋऽಸ್ಮಾನ್ ಪಾಹೀತಿ ಶೇಷಃ । ಉತಾಪಿ ಚ ತ್ವೋತಾಸಸ್ತ್ವಯಾ ರಕ್ಷಿತಾ ವಯಂ ಬರ್ಹಣಾ ಪರಿಬರ್ಹಣಾಯಾಂ ಶತ್ರೂಣಾಂ ಹಿಂಸಾಯಾಂ ಸಮರ್ಥಾ ಭವೇಮ । ಕಿಂಚ ತೇ ತ್ವದೀಯಾಃ ಪೂರ್ತಯಃ ಕಾಮಾನಾಂ ಪೂರಣಾನೀಪ್ಸಿತಾರ್ಥಪ್ರದಾನಾನಿ ಪುರುತ್ರಾ ಬಹೂನ್ಸ್ತೋತೄನ್ವಿ ನವಂತ । ವಿವಿಧಂ ವ್ಯಾಪ್ನುವಂತಿ । ಕ್ಷೋಣಯಃ । ಮನುಷ್ಯನಾಮೈತತ್ । ಮನುಷ್ಯಾಃ ಸ್ವಕೀಯಂ ಸ್ವಾಮಿನಂ ಸೇವಾರ್ಥಂ ಯಥಾ ವ್ಯಾಪ್ನುವಂತಿ ತದ್ವತ್ ॥**

॥ ಪ್ರತಿಪದಾರ್ಥ ॥

ಶೂರ—ಪರಾಕ್ರಮಶಾಲಿಯಾದ । ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಶೂರೈಃ—ವೀರರಾದ ಮರುತ್ತುಗಳೊಳಗೂಡಿ । ನಃ—ನಮ್ಮನ್ನು ರಕ್ಷಿಸು । ಉತ—ಮತ್ತು । ತ್ವೋತಾಸಃ—ನಿನ್ನಿಂದ ರಕ್ಷಿತರಾದ ನಾವು । ಬರ್ಹಣಾ—ಶತ್ರುನಾಶಕವಾದ ಶಕ್ತಿಯನ್ನು ಎಮಗೀಯುವಂತಾಗಲಿ । ಕ್ಷೋಣಯಃ—ಮಾನವರು । ಯಥಾ—

ಸೇವೆಗಾಗಿ ತಮ್ಮ ಸ್ವಾಮಿಗಳಲ್ಲಿಗೆ ಹೋಗಿ ಸೇರುವಂತೆ । **ತೇ**—ನಿನ್ನಿಂದ ದತ್ತವೂ । **ಪೂರ್ತಯಃ**—ಇಷ್ಟಾರ್ಥಗಳನ್ನು ತುಂಬಿಸುವುವೂ ಆದ ದಾನಗಳು । **ಪುರುತ್ರಾ**—ಅನೇಕ ಸ್ತುತಿಕರ್ತರಲ್ಲಿ । **ವಿ ನವಂತ**—ಹೋಗಿ ಸೇರುತ್ತವೆ.

॥ ಭಾವಾರ್ಥ ॥

ಪರಾಕ್ರಮಶಾಲಿಯಾದ ಎಲೈ ಇಂದ್ರನೇ, ನೀನು ವೀರರಾದ ಮರುತ್ತುಗಳೊಡಗೂಡಿ ನಮ್ಮನ್ನು ರಕ್ಷಿಸು. ಮತ್ತು ನಿನ್ನಿಂದ ರಕ್ಷಿತರಾದ ನಾವು ಶತ್ರುನಾಶಕವಾದ ಶಕ್ತಿಯನ್ನು ಎದುರಿಸುವಂತಾಗಲಿ. ಮಾನವರು ಸೇವೆಗಾಗಿ ತಮ್ಮ ಸ್ವಾಮಿಗಳಲ್ಲಿಗೆ ಹೋಗಿ ಸೇರುವಂತೆ ನಿನ್ನಿಂದ ದತ್ತವೂ, ಇಷ್ಟಾರ್ಥಗಳನ್ನು ತುಂಬಿಸುವುವೂ ಆದ ದಾನಗಳು ಅನೇಕ ಸ್ತುತಿಕರ್ತರಲ್ಲಿ ಹೋಗಿ ಸೇರುತ್ತವೆ.

English Translation

Hero, Indra, with the hero (Maruts defend) us; that protected by you (we may be able) to overcome (our enemies): your blessings are diffused among many (praisers), as men (repair to their lord)

॥ ಸಂಹಿತಾಪಾಠಃ ॥

ತ್ವಂ ತಾನ್ವೃತ್ರಹತ್ಯೇ ಚೋದಯೋ ನ್ನ್ಕಾರ್ಪಾಣೇ ಶೂರ ವಜ್ರಿವಃ ।
ಗುಹಾ ಯದೀ ಕವೀನಾಂ ವಿಶಾಂ ನಕ್ಷತ್ರಶವಸಾಂ ॥ ೧೦ ॥

॥ ಪದಪಾಠಃ ॥

ತ್ವಂ । ತಾನ್ । ವೃತ್ರಽಹತ್ಯೇ । ಚೋದಯಃ । ನೄನ್ । ಕಾರ್ಪಾಣೇ । ಶೂರ । ವಜ್ರಿಽವಃ ।
ಗುಹಾ । ಯದಿ । ಕವೀನಾಂ । ವಿಶಾಂ । ನಕ್ಷತ್ರಽಶವಸಾಂ ।೧೦।

॥ ಸಾಯಣಭಾಷ್ಯಂ ॥

ಹೇ ವಜ್ರಿವೋ ವಜ್ರಧರ ಶೂರೇಂದ್ರ ತ್ವಂ ಕಾರ್ಪಾಣೇ । ಅಸಿಃ ಕೃಪಾಣಃ । ತೇನ ಸಾಧ್ಯಂ ಯುದ್ಧಂ ಕಾರ್ಪಾಣಂ । ತಸ್ಮಿನ್ವೃತ್ರಹತ್ಯೇ ಶತ್ರುಹನನಾರ್ಥಂ ನೄನ್ನರಾಂಸ್ತಾನ್ಪ್ರಸಿದ್ಧಾನ್ಮರುದ್ಗಣಾಂಶ್ಚೋದಯಃ । ಚೋದಯಸಿ । ಪ್ರೇರಯಸಿ । ಯದಿ ಯದಾ ತ್ವಂ ಕವೀನಾಂ ಮೇಧಾವಿನಾಂ ನಕ್ಷತ್ರಶವಸಾಂ ದೇವಾನ್ಪ್ರತಿಗಚ್ಛತ್ಸ್ತೋತ್ರಬಲಾನಾಂ ವಿಶಾಂ ಸ್ತೋತೃಜನಾನಾಂ ಸಂಬಂಧೀನಿ ಗುಹಾ ಗೂಢಾನಿ ಗುಪ್ತೈಃ ಸಂವೃತಾನಿ ಸ್ತೋತ್ರಾಣಿ ಶೃಣೋಷೀತಿ ಶೇಷಃ । ತದಾ ಪ್ರೇರಯಸೀತಿ ಪೂರ್ವೇಣಾನ್ವಯಃ ।

॥ ಪ್ರತಿಪದಾರ್ಥ ॥

**ವಜ್ರಿವಃ**—ವಜ್ರಾಯುಧಧಾರಿಯೂ | **ಶೂರ**—ಪರಾಕ್ರಮಿಯೂ ಆದ ಎಲೈ ಇಂದ್ರನೇ | **ಯದಿ**—ಯಾವಾಗ | **ಕವೀನಾಂ**—ಮೇಧಾವಿಗಳೂ | **ನಕ್ಷತ್ರಶವಸಾಂ**—ದೇವತೆಗಳನ್ನು ಸೇರುವ ಯೋಗ್ಯತೆಯುಳ್ಳವರೂ ಆದ | **ವಿಶಾಂ**—ಸ್ತುತಿಕರ್ತರ | **ಗುಹಾ**-ಗೂಢಾರ್ಥಸಹಿತವಾದ ಸ್ತುತಿಗಳನ್ನು ಕೇಳುವೆಯೋ ಆಗ | **ತ್ವಂ**—ನೀನು | **ಕಾರ್ಪಾಣೇ**—ಯುದ್ಧದಲ್ಲಿ | **ವೃತ್ರಹತ್ಯೇ**—ವೃತ್ರನಾಶಕ್ಕಾಗಿ | **ನೄನ್**—ನೇತೃಗಳಾದ | **ತಾನ್**—ಮರುತ್ತುಗಳನ್ನು | **ಚೋದಯಃ**—ಪ್ರೇರಿಸುತ್ತೀಯೆ.

॥ ಭಾವಾರ್ಥ ॥

ವಜ್ರಾಯುಧಧಾರಿಯೂ, ದೇವತೆಗಳನ್ನು ಸೇರುವ ಯೋಗ್ಯತೆಯುಳ್ಳವರೂ ಆದ ಸ್ತುತಿಕರ್ತರ ಗೂಢಾರ್ಥಸಹಿತವಾದ ಸ್ತುತಿಗಳನ್ನು ನೀನು ಕೇಳುವೆಯೋ, ಆಗ ಯುದ್ಧದಲ್ಲಿ ವೃತ್ರನಾಶಕ್ಕಾಗಿ ನೇತೃಗಳಾದ ಮರುತ್ತುಗಳನ್ನು ಪ್ರೇರಿಸುತ್ತೀಯೆ.

English Translation

Hero, Indra, wielder of the thunderbolt, you have animated those chiefs (the Maruts) to the slaughter of Vritra in battle, when (you hear) the mystical (praises), of the sages, the worshippers praising the might of the constellations.

॥ ಸಂಹಿತಾಪಾಠಃ ॥

ಮಕ್ಷೂ ತಾ ತ ಇಂದ್ರ ದಾನಾಪ್ನಸ ಆಕ್ಷಾಣೇ ಶೂರ ವಜ್ರಿವಃ ।

ಯದ್ಧ ಶುಷ್ಣಸ್ಯ ದಂಭಯೋ ಜಾತಂ ವಿಶ್ವಂ ಸಯಾವಭಿಃ ॥ ೧೧ ॥

॥ ಪದಪಾಠಃ ॥

ಮಕ್ಷು । ತಾ । ತೇ । ಇಂದ್ರ । ದಾನऽಅಪ್ನಸಃ । ಆಕ್ಷಾಣೇ । ಶೂರ । ವಜ್ರಿऽವಃ ।

ಯತ್ । ಹ । ಶುಷ್ಣಸ್ಯ । ದಂಭಯಃ । ಜಾತಂ । ವಿಶ್ವಂ । ಸಯಾವऽಭಿಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಶೂರ ವಿಕ್ರಾಂತ ವಜ್ರಿವೋ ವಜ್ರೋಪೇತೇಂದ್ರ ದಾನಾಪ್ನಸೋ ದಾನಕರ್ಮಣಃ । ಸ್ತೋತೃಭ್ಯಃ ಸತತಮಭೀಷ್ಟಫಲಪ್ರದಸ್ಯೇತ್ಯರ್ಥಃ । ತೇ ತವ ಸ್ವಭೂತಾನಿ ಮಕ್ಷು ಕ್ಷಿಪ್ರಾಣ್ಯವಿಲಂಬಿತಾನಿ । ಕ್ಷಿಪ್ರಕಾರಣಯುಕ್ತಾನೀತ್ಯರ್ಥಃ । ಆಕ್ಷಾಣೇ ಯೋದ್ಧೃಭಿರ್ವ್ಯಾಪ್ಯಮಾನೇ ತ್ವಯ್ಯವಸ್ಥಿತಾನಿ ತಾ ತಾನಿ ಕರ್ಮಾಣಿ ಸ್ತೋತಾರಃ ಸ್ತುವಂತೀತಿ ಶೇಷಃ । ಸಯಾವಭಿಃ ಸಹಯಾತೃಭಿರ್ಮರುದ್ಭಿಃ ಸಹಿತಸ್ತ್ವಂ

**ಶುಷ್ಣಸ್ಯಾಸುರಸ್ಯ ವಿಶ್ವಂ ಜಾತಂ ಸರ್ವಮಪತ್ಯಜಾತಂ ದಂಭಯಃ । ಅದಂಭಯಃ । ಹಿಂಸಿತವಾನಸಿ । ಯದ್ವಾ । ಏವಮಾದೀನಿ ಯಾನಿ ಖಲು ಕರ್ಮಾಣಿ ಸಂತಿ ತಾನಿ ಸ್ತುವಂತೀತಿ ಪೂರ್ವೇಣ ಸಂಬಂಧಃ ॥**

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಿಯೂ । **ವಜ್ರಿವಃ**—ವಜ್ರಾಯುಧಧಾರಿಯೂ ಆದ । ಇಂದ್ರ—ಎಲೈ ಇಂದ್ರನೇ । **ಸಯಾವಭಿಃ**—ನಿನ್ನೊಡಗೂಡಿರುವ ಮರುತ್ತುಗಳೊಡನೆ ಸೇರಿ । **ಶುಷ್ಣಸ್ಯ**—ಶುಷ್ಣಾಸುರನ । **ವಿಶ್ವಂ ಜಾತಂ**—ಸಕಲ ಪುತ್ರರನ್ನೂ । **ಯತ್ ಹ**—ಯಾವಾಗ । **ದಂಭಯಃ**—ಕೊಂದೆಯೋ ಆಗ । **ದಾನಾಪ್ನಸಃ**—ದಾನ ಕರ್ಮವುಳ್ಳ । **ತೇ**—ನಿನ್ನ । **ಮಕ್ಷೂ**—ಬೇಗ ಕೆಲಸ ಮಾಡತಕ್ಕವೂ । **ಅಕ್ಷಾಣೇ**—ನಿನ್ನಲ್ಲಿ ತುಂಬಿರುವುವೂ ಆದ । **ತಾ**—ಪ್ರಸಿದ್ಧವಾದ ಕರ್ಮಗಳನ್ನು ಸ್ತುತಿಸುತ್ತಾರೆ.

॥ ಭಾವಾರ್ಥ ॥

ಪರಾಕ್ರಮಿಯೂ, ವಜ್ರಾಯುಧಧಾರಿಯೂ ಆದ ಎಲೈ ಇಂದ್ರನೇ, ನಿನ್ನೊಡಗೂಡಿರುವ ಮರುತ್ತುಗಳೊಡನೆ ಸೇರಿ ನೀನು ಯಾವಾಗ ಶುಷ್ಣಾಸುರನ ಸಕಲ ಪುತ್ರರನ್ನೂ ಕೊಂದೆಯೋ ಆಗ ದಾನಕರ್ಮವುಳ್ಳವೂ ಬೇಗ ಕೆಲಸ ಮಾಡತಕ್ಕವೂ ನಿನ್ನಲ್ಲಿ ತುಂಬಿರುವುವೂ ಆದ ಪ್ರಸಿದ್ಧವಾದ ಕರ್ಮಗಳನ್ನು ಸ್ತುತಿಕರ್ತರು ಪ್ರಶಂಸಿಸುತ್ತಾರೆ.

English Translation

Hero, Indra, (your worshippers glorify) those prompt exploits performed by you in battle, (by you who are) ever bountiful, when with your associate (Maruts) you destroyed the whole race of Shushna.

ಸಂಹಿತಾಪಾಠಃ ॥

ಮಾಕುಧ್ರ್ಯಗಿಂದ್ರ ಶೂರ ವಸ್ವೀರಸ್ಮೇ ಭೂವನ್ನಭಿಷ್ಟಯಃ ।
ವಯಂವಯಂ ತ ಆಸಾಂ ಸುಮ್ನೇ ಸ್ಯಾಮ ವಜ್ರಿವಃ ॥ ೧೨ ॥

॥ ಪದಪಾಠಃ ॥

ಮಾ । ಅಕುಧ್ರ್ಯಕ್ । ಇಂದ್ರ । ಶೂರ । ವಸ್ವೀಃ । ಅಸ್ಮೇ ಇತಿ । ಭೂವನ್ । ಅಭಿಷ್ಟಯಃ ।
ವಯಂಽವಯಂ । ತೇ । ಆಸಾಂ । ಸುಮ್ನೇ । ಸ್ಯಾಮ । ವಜ್ರಿಽವಃ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಶೂರ ವಿಕ್ರಾಂತೇಂದ್ರ ಅಸ್ಮೇ ಅಸ್ಮಾಕಂ ಸ್ವಭೂತಾ ವಸ್ವೀರ್ಮಹತ್ಯೋಽಭಿಷ್ಟಯ ಅಭಿಮುಖ್ಯೇಷ್ಟಯ ಇಜ್ಯಾಃ । ಯದ್ವಾ । ಅಭಿಮುಖ್ಯೇಚ್ಛಾ ಅಭೀಪ್ಸಿತಪ್ರಾರ್ಥನಾಃ । ಕುಧ್ರ್ಯಕ್

ಕುತ್ಸಿತಾಃ ನಿಷ್ಫಲಾ ಇತ್ಯರ್ಥಃ । ಮಾ ಭೂವನ್ । ಕಿಂತರ್ಹಿ ಹೇ ವಜ್ರಿವೋ ವಜ್ರಿನ್ನಿಂದ್ರ ತೇ ತವ ಪ್ರಸಾದಾದ್ವಯಂವಯಮೃತ್ವಿಗ್ಯಜಮಾನಾಃ । ದ್ವಿರ್ವಚನಮುತಿತ್ವರಾಪ್ರದರ್ಶನಾರ್ಥಂ । ಆಸಾಮಿಷ್ಟಾನಾಮಿಚ್ಛಾನಾಂ ವಾ ಸಂಬಂಧಿನಿ ಸುಮ್ನೇ ಸುಖೇಽವಸ್ಥಿತಾಃ ಸ್ಯಾಮ । ಭವೇಮ । ವಯಂ ಸುಭಿಷ್ಟಿಜನ್ಯೇನ ದೃಷ್ಟಾದೃಷ್ಟಸುಖೇನ ಯುಕ್ತಾಃ ಶೀಘ್ರಂ ಭವೇಮೇತ್ಯಾಶಾಸ್ಮಹ ಇತ್ಯರ್ಥಃ ॥

। ಪ್ರತಿಪದಾರ್ಥ ।

ಶೂರ— ಪರಾಕ್ರಮಿಯಾದ । ಇಂದ್ರ—ಎಲೈ ಇಂದ್ರನೇ । ಅಸ್ಮೇ—ನಮ್ಮ । ಪಸ್ವೀಃ—ಮಹತ್ಸ್ವರೂಪವುಳ್ಳವೂ । ಅಭಿಷ್ಟಯಃ—ಇಷ್ಟಾರ್ಥಗಳನ್ನು ಯಾಚಿಸುವುವೂ ಆದ ಪ್ರಾರ್ಥನೆಗಳು । ಅಕುಧ್ರ್ಯಕ್—ಪ್ರಯೋಜನ ರಹಿತವಾಗಿ । ಮಾ ಭೂವನ್—ಆಗದಿರಲಿ । ವಜ್ರಿವಃ—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । ತೇ—ನಿನ್ನ ಅನುಗ್ರಹದಿಂದ । ವಯಂವಯಂ—ಋತ್ವಿಗ್ಯಜಮಾನರೂಪರಾದ ನಾವೆಲ್ಲರೂ । ಆಸಾಂ—ಈ ಇಷ್ಟಾರ್ಥಗಳಿಗೆ ಗುರಿಯಾದ । ಸುಮ್ನೇ—ಸುಖದಲ್ಲಿ । ಸ್ಯಾಮ—ಇರುವಂತಾಗಲಿ ।

। ಭಾವಾರ್ಥ ।

ಪರಾಕ್ರಮಿಯಾದ ಎಲೈ ಇಂದ್ರನೇ, ನಮ್ಮ ಮಹತ್ಸ್ವರೂಪವುಳ್ಳವೂ, ಇಷ್ಟಾರ್ಥಗಳನ್ನು ಯಾಚಿಸುವವೂ ಆದ ಪ್ರಾರ್ಥನೆಗಳು ಪ್ರಯೋಜನರಹಿತವಾಗಿ ಆಗದಿರಲಿ. ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ನಿನ್ನ ಅನುಗ್ರಹದಿಂದ ಋತ್ವಿಗ್ಯಜಮಾನರೂಪರಾದ ನಾವೆಲ್ಲರೂ ಈ ಇಷ್ಟಾರ್ಥಗಳಿಗೆ ಗುರಿಯಾದ (ಲಕ್ಷ್ಯವಾದ) ಸುಖದಲ್ಲಿ ಇರುವಂತಾಗಲಿ.

## English Translation

Hero, Indra, let not our manifold sacrifices be unavailing, but may we all, thunderer, (through) your (favour) continue in the fruition of these (our desires).

॥ ಸಂಹಿತಾಪಾಠಃ ॥

ಅಸ್ಮೇ ತಾ ತ ಇಂದ್ರ ಸಂತು ಸತ್ಯಾಹಿಂಸಂತೀರುಪಸ್ಪೃಶಃ ।
ವಿದ್ಯಾಮ ಯಾಸಾಂ ಭುಜೋ ಧೇನೂನಾಂ ನ ವಜ್ರಿವಃ ॥ ೧೩ ॥

। ಪದಪಾಠಃ ।

ಅಸ್ಮೇ ಇತಿ । ತಾ । ತೇ । ಇಂದ್ರ । ಸಂತು । ಸತ್ಯಾ । ಅಹಿಂಸಂತೀಃ । ಉಪಸ್ಪೃಶಃ ।
ವಿದ್ಯಾಮ । ಯಾಸಾಂ । ಭುಜಃ । ಧೇನೂನಾಂ । ನ । ವಜ್ರಿವಃ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಅಸ್ಮೇ ಅಸ್ಮಾಕಂ ಸ್ವಭೂತಾಃ ॥ ತಾ ಸತ್ಯೇತ್ಯುಭಯತ್ರ ಪ್ರಥಮಾಬಹುವಚನಸ್ಯ ಛಾಂದಸ ಆಕಾರಃ ಸತಿ ನಿರ್ದೇಶಸ್ಯಾವಿಶೇಷಣತ್ವಾತ್ ॥ ತಾ ತಾಸ್ತಾದೃಶ್ಯ ಉಪಸ್ಪೃಶಃ । ತ್ವಾಮುಪಗಮ್ಯ ಸ್ಪೃಶಂತೀತ್ಯುಪಸ್ಪೃಶಃ ಸ್ತುತಯಃ । ತೇ ತವ ಪ್ರಸಾದಾತ್ಸತ್ಯಾ ಸತ್ಯಾಃ ಸಂತು । ಯಥಾರ್ಥಾ ಭವಂತು । ತವ ಸದ್ಗುಣಗ್ರಾಹಿಣ್ಯ ಇತ್ಯರ್ಥಃ । ಅಪಿ ಚಾಹಿಂಸಂತೀಸ್ತ್ವಾಮಹಿಂಸತ್ಯಶ್ಚ ಭವಂತು । ಸತ್ಸ್ತುತಿತ್ವಾದನುದ್ವೇಜಯಂತ್ಯಶ್ಚ ಭವಂತ್ವಿತ್ಯರ್ಥಃ । ಹೇ ವಜ್ರಿವ ಇಂದ್ರ ಯಾಸಾಂ ಸ್ತುತೀನಾಂ ಸಂಬಂಧಿನೋ ಭುಜೋ ದೃಷ್ಟಾದೃಷ್ಟಾನ್ಭೋಗಾನ್ವಿದ್ಯಾಮ ವಯಂ ಲಭೇಮಹಿ । ತತ್ರ ದೃಷ್ಟಾಂತಃ । ಧೇನೂನಾಂ ನ ಗವಾಂ ಕ್ಷೀರಾದಿಭೋಗಾನ್ಯಥಾ ಗೋಸ್ವಾಮೀ ಲಭತೇ ತದ್ವತ್ । ತಾಃ ಸತ್ಯಾ ಭವಂತ್ವಿತಿ ಪೂರ್ವೇಣಾನ್ವಯಃ ॥

॥ ಪ್ರತಿಪದಾರ್ಥ ॥

**ವಜ್ರಿವಃ**—ವಜ್ರಾಯುಧಧಾರಿಯಾದ । **ಇಂದ್ರ**—ಎಲೈ ಇಂದ್ರನೇ । **ಧೇನೂನಾಂ ನ**—ಧೇನುಗಳ ಕ್ಷೀರವನ್ನು ಗೋಪಾಲಕನೂ ಅನುಭವಿಸುವಂತೆ । **ಯಾಸಾಂ**—ಯಾವ ಸ್ತುತಿಗಳ ಫಲವಾದ । **ಭುಜಃ**—ಸುಖಾನುಭವಗಳನ್ನು । **ವಿದ್ಯಾಮ**—ನಾವು ಹೊಂದುವೆವೋ ಅಂತಹವೂ । **ಅಸ್ಮೇ**—ನಮ್ಮಿಂದ ಅರ್ಪಿತವೂ । **ಅಹಿಂಸಂತೀಃ**—ನಿನಗೆ ತೊಂದರೆಯನ್ನು ಕೊಡದಿರುವುವೂ । **ತಾ**—ಪ್ರಸಿದ್ಧವೂ । **ಉಪಸ್ಪೃಶಃ**—ನಿನ್ನನ್ನು ಸೇರುವುವೂ ಆದ ಸ್ತುತಿಗಳು । **ತೇ**—ನಿನ್ನ ಅನುಗ್ರಹದಿಂದ । **ಸತ್ಯಾ**—ಸತ್ಯಾತ್ಮಕಗಳಾಗಿ । **ಸಂತು**—ಆಗಿರಲಿ.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಧೇನುಗಳ ಕ್ಷೀರವನ್ನು ಗೋಪಾಲಕನು ಅನುಭವಿಸುವಂತೆ ಯಾವ ಸ್ತುತಿಗಳ ಫಲವಾದ ಸುಖಾನುಭವಗಳನ್ನು ನಾವು ಹೊಂದುವೆವೋ ಅಂತಹವೂ ನಮ್ಮಿಂದ ಅರ್ಪಿತವಾದವೂ ನಿನಗೆ ತೊಂದರೆಯನ್ನು ಕೊಡದಿರುವುವೂ ಪ್ರಸಿದ್ಧವೂ, ನಿನ್ನನ್ನು ಸೇರುವುವೂ ಆದ ಸ್ತುತಿಗಳು ನಿನ್ನ ಅನುಗ್ರಹದಿಂದ ಸತ್ಯಾತ್ಮಕವಾದ ಫಲವುಳ್ಳವಾಗಿರಲಿ.

## English Translation

Mey these our (praises) reaching you, Indra, be successful, doing no detriment (to you), so that, thunderer, we may obtain the benefits derivable from them, as (a cowherd enjoys those) from the milk cows.

॥ ಸಂಹಿತಾಪಾಠಃ ॥

ಅಹಸ್ತಾ ಯದಪದೀ ವರ್ಧತ ಕ್ಷಾಃ ಶಚೀಭಿರ್ವೇದ್ಯಾನಾಂ ।

ಶುಷ್ಣಂ ಪರಿ ಪ್ರದಕ್ಷಿಣಿದ್ವಿಶ್ವಾಯವೇ ನಿ ಶಿಶ್ನಥಃ ॥ ೧೪ ॥

॥ ಪದಪಾಠಃ ॥

ಅಹಸ್ತಾ । ಯತ್ । ಅಪದೀ । ವರ್ಧತ । ಕ್ಷಾಃ । ಶಚೀಭಿಃ । ವೇದ್ಯಾನಾಂ ।
ಶುಷ್ಣಂ । ಪರಿ । ಪ್ರದಕ್ಷಿಣಿತ್ । ವಿಶ್ವಽಆಯವೇ । ನಿ । ಶಿಶ್ನಥಃ ॥ ೧೪ ॥

। ಸಾಯಣಭಾಷ್ಯಂ ।

ಹೇ ಇಂದ್ರ ಯದ್ಯದಾ ಕ್ಷಾ ಭೂಮಿರಹಸ್ತಾ ಪಾಣಿರಹಿತಾಪದೀ ಚರಣವರ್ಜಿತಾ ಚ। ಅನುಸುಷ್ಯ-ಕರ್ಮಕೇತ್ಯರ್ಥಃ । ವೇದ್ಯಾನಾಂ ಸ್ತೋತ್ರಯೋಗ್ಯಾನಾಂ ತ್ವತ್ಪ್ರಭೃತೀನಾಂ ದೇವಾನಾಂ ಸಂಬಂಧಿಭಿಃ ಶಚೀಭಿಃ ಕರ್ಮಭಿರ್ವರ್ಧತ ಅವರ್ಧತ। ಧನಧಾನ್ಯಾದಿಭಿಃ ಸಮೃದ್ಧೇತ್ಯರ್ಥಃ । ತದಾ ತ್ವಂ ಪರಿ ಪ್ರದಕ್ಷಿಣಿದೇವಂಭೂತಾಂ ಪೃಥಿವೀಂ ಪರಿವೇಷ್ಟ್ಯ ಪ್ರದಕ್ಷಿಣಂ ಯಥಾ ಭವತಿ ತಥಾ ಸ್ಥಿತಂ ಶುಷ್ಣಮಸುರಂ ವಿಶ್ವಾಯವೇ । ತಾದರ್ಥ್ಯೇ ಚತುರ್ಥೀ । ಸರ್ವತ್ರಾಪ್ರತಿಹತಗಾಮಿನ ಏತದಾಖ್ಯಸ್ಯಾರ್ವಶೇಯ-ರಾಜ್ಞೋಽರ್ಥಾಯ ನಿ ಶಿಶ್ನಥಃ। ನಿತರಾಂ ತಾಡಿತವಾನಸಿ । ಯದ್ವಾ । ಯದಾ ಶುಷ್ಣಸ್ಯಾಚ್ಛಾದನಾರ್ಥಂ ಹಸ್ತಪಾದವರ್ಜಿತಾ ಕಾಚಿತ್ಪೃಥಿವೀ ವೇದಿತವ್ಯಾನಾಮಸುರಾಣಾಂ ಮಾಯಾರೂಪೈಃ ಕರ್ಮಭಿಃ ಶುಷ್ಣಮ-ಸುರಂ ಪರಿವೇಷ್ಟ್ಯ ಪ್ರದಕ್ಷಿಣಂ ಯಥಾ ಭವತಿ ತಥಾವಸ್ಥಿತಾವರ್ಧತ ತದಾನೀಂ ತಾಂ ಮಾಯೋತ್ಪಾ-ದಿತಾಂ ಪೃಥಿವೀಂ ವಿಶ್ವಾಯವೇ ಸರ್ವವ್ಯಾಪಕಸ್ಯ ಮರುದ್ಗಣಸ್ಯ ಪ್ರವೇಶನಾರ್ಥಂ ನಿ ಶಿಶ್ನಥಃ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) **ಯತ್**—ಯಾವಾಗ । **ಕ್ಷಾಃ**—ಭೂಮಿಯು । **ಅಹಸ್ತಾ**—ಹಸ್ತರಹಿತವಾಗಿಯೂ । **ಅಪದೀ**—ಪಾದರಹಿತವಾಗಿಯೂ । **ವೇದ್ಯಾನಾಂ**—ದೇವತೆಗಳ । **ಶಚೀಭಿಃ**—ಕರ್ಮಗಳಿಂದ । **ವರ್ಧತ**—ವೃದ್ಧಿಯನ್ನು ಹೊಂದಿತೋ ಆಗ । **ತ್ವಂ**—ನೀನು । **ಪರಿ ಪ್ರದಕ್ಷಿಣಿತ್**—ಈ ಪೃಥ್ವಿಯನ್ನು ಸುತ್ತಲೂ ಸುತ್ತುವರೆದಿದ್ದ । **ಶುಷ್ಣಂ**—ಶುಷ್ಣಾಸುರನನ್ನು । **ವಿಶ್ವಾಯವೇ**—ವಿಶ್ವಾಯುವೆಂಬ ರಾಜನಿಗಾಗಿ । **ನಿ ಶಿಶ್ನಥಃ**—ನಾಶಮಾಡಿದೆ.

। ಭಾವಾರ್ಥ ।

ಎಲೈ ಇಂದ್ರನೇ, ಯಾವಾಗ ಭೂಮಿಯು ಹಸ್ತರಹಿತವಾಗಿಯೂ, ಪಾದರಹಿತವಾಗಿಯೂ, ಇದ್ದರೂ ದೇವತೆಗಳ ಕರ್ಮದಿಂದ ವೃದ್ಧಿಯನ್ನು ಹೊಂದಿತೋ ಆಗ ನೀನು ಈ ಪೃಥ್ವಿಯನ್ನು ಸುತ್ತಲೂ ಸುತ್ತುವರೆದಿದ್ದ ಅಸುರನನ್ನು ವಿಶ್ವಾಯುವೆಂಬ ರಾಜನಿಗೆ ಹಿತವನ್ನುಂಟುಮಾಡಲು ನಾಶಮಾಡಿದೆ.

## English Translatian

When the earth which has neither hands nor feet flourished through the acts of (devotion paid to) the adorable (deities), then did you smite down Shushna, circumambulating it on the right, for the sake of Vishvayu.

॥ ಸಂಹಿತಾಪಾಠಃ ॥

ಪಿಬಾಪಿಬೇದಿಂದ್ರ ಶೂರ ಸೋಮಂ ಮಾ ರಿಷಣ್ಯೋ ವಸವಾನಃ ವಸುಃ ಸನ್ ।
ಉತ ತ್ರಾಯಸ್ವ ಗೃಣತೋ ಮಘೋನೋ ಮಹಶ್ಚ ರಾಯೋ ರೇವತಸ್ಕೃಧೀ ನಃ ॥ ೧೫ ॥

॥ ಪದಪಾಠಃ ॥

ಪಿಬಽಪಿಬ । ಇತ್ । ಇಂದ್ರ । ಶೂರ । ಸೋಮಂ । ಮಾ । ರಿಷಣ್ಯಃ । ವಸವಾನಃ । ವಸುಃ । ಸನ್ ।

ಉತ । ತ್ರಾಯಸ್ವ । ಗೃಣತಃ । ಮಘೋನಃ । ಮಹಃ । ಚ । ರಾಯಃ । ರೇವತಃ । ಕೃಧಿ । ನಃ ॥ ೧೫ ॥

॥ ಸಾಯಣಭಾಷ್ಯಂ ॥

ಪಿಬಪಿಬೇತಿ ವೀಪ್ಸಾತಿತ್ವರಾಪ್ರದರ್ಶನಾರ್ಥಂ । ಹೇ ಶೂರ ವೀರೇಂದ್ರ ತ್ವಮಭಿಷುತಂ ಸೋಮಂ ಶೀಘ್ರಂ ಪಿಬ । ಯಾಗಕಾಲಾತಿಪಾತೋ ಯಾವನ್ನ ಭವತಿ ತಾವಚ್ಛೀಘ್ರಂ ಸೋಮಂ ಪಿಬೇತ್ಯರ್ಥಃ । ಇದಿತಿ ಪೂರಣಃ । ಹೇ ವಸವಾನ ವಸೂನಾಂ ಧನಾನಾಮಾನೇತಃ ತ್ವಂ ವಸುಃ ಪ್ರಶಸ್ತಃ ಸನ್ಮಾ ರಿಷಣ್ಯಃ । ಯಾಗಕಾಲಾತಿಕ್ರಮಜಾತೇನ ದೋಷೇಣಾಸ್ಮಾನ್ಮಾ ಹಿಂಸೀಃ । ಪ್ರಶಸ್ತಸ್ಯ ತೇವ ಕರ್ಮವೈಗುಣ್ಯಕರಣೇನ ಹಿಂಸಿತುಮಯುಕ್ತಮಿತ್ಯರ್ಥಃ । ಉತಾಪಿ ಚ ಹೇ ಇಂದ್ರ ತ್ವಂ ಗೃಣತಸ್ತ್ವಾಂ ಸ್ತುವತಃ ಸ್ತೋತೄನ್ಮಘೋನೋ ಹವಿರ್ಲಕ್ಷಣಧನವತೋ ಯಜಮಾನಾಂಶ್ಚ ತ್ರಾಯಸ್ವ । ಪ್ರಮಾದಜನಿತಕರ್ಮವೈಗುಣ್ಯದೋಷಾತ್ಪಾಲಯಸ್ವ । ಕಿಂಚ । ಮಹಶ್ಚ ರಾಯ ಇತ್ಯುಭಯತ್ರ ತೃತೀಯಾರ್ಥೇ ಷಷ್ಠೀ । ಮಹೋ ಮಹತಾ ರಾಯೋ ಧನೇನ ಚ ನೋಽಸ್ಮಾನ್ರೇವತಃ ಕೃಧಿ । ಧನವತಃ ಕುರು ॥

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಿಯಾದ । **ಇಂದ್ರ**—ಎಲೈ ಇಂದ್ರನೇ । **ಸೋಮಂ**—ಸೋಮವನ್ನು । **ಪಿಬಪಿಬ**—ಶೀಘ್ರವಾಗಿ ಪಾನಮಾಡು । **ವಸವಾನ**—ಧನಪ್ರಾಪಕನಾದ ನೀನು । **ವಸುಃ ಸನ್**—ಅತ್ಯಂತ ಪ್ರಶಸ್ಯನಾಗಿ । **ಮಾ ರಿಷಣ್ಯಃ**—ನಮ್ಮನ್ನು ಹಿಂಸಿಸಬೇಡ । **ಉತ**—ಮತ್ತು । **ಗೃಣತಃ**—ನಿನ್ನ ಸ್ತುತಿಕರ್ತರನ್ನೂ । **ಮಘೋನಃ**—ಹವಿರ್ದಾತರಾದ ಯಜಮಾನರನ್ನೂ । **ತ್ರಾಯಸ್ವ**—ರಕ್ಷಿಸು । **ಮಹಃ**—ಮಹತ್ತಾದ । **ರಾಯಃ**—ಧನದಿಂದ । **ನಃ**—ನಮ್ಮನ್ನು । **ರೇವತಃ**—ಧನಯುಕ್ತರನ್ನಾಗಿ । **ಕೃಧಿ**—ಮಾಡು.

॥ ಭಾವಾರ್ಥ ॥

ಪರಾಕ್ರಮಿಯಾದ ಎಲೈ ಇಂದ್ರನೇ, ಸೋಮವನ್ನು ಶೀಘ್ರವಾಗಿ ಪಾನಮಾಡು. ಧನಪ್ರಾಪಕನಾದ ನೀನು ಅತ್ಯಂತ ಪ್ರಶಸ್ಯನಾಗಿದ್ದು, ನಮ್ಮನ್ನು ಹಿಂಸಿಸಬೇಡ. ನಿನ್ನ ಸ್ತುತಿಕರ್ತರನ್ನೂ ಹವಿರ್ದಾತರಾದ ಯಜಮಾನರನ್ನೂ ರಕ್ಷಿಸು. ಮಹತ್ತಾದ ಧನದಿಂದ ನಮ್ಮನ್ನು ಧನಯುಕ್ತರನ್ನಾಗಿ ಮಾಡು.

English Translation

Drink, hero Indra, drink the Soma; being excellent, harm (us) not, possessor of opulence; preserve those who praise you, and are offluent (in offerings), and render us rich with great riches.

## ಇಪ್ಪತ್ತಮೂರನೆಯ ಸೂಕ್ತವು.

। ಸಾಯಣಭಾಷ್ಯಂ ।

**ಯಜಾಮಹ ಇತಿ ಸಪ್ತರ್ಚಂ ಸಪ್ತಮಂ ಸೂಕ್ತಂ । ಪ್ರಥಮಾಸಪ್ತಮ್ಯೌ ತ್ರಿಷ್ಟುಭೌ । ಪಂಚಮ್ಯ-ಭಿಸಾರಿಣೀ । ದ್ವಿರ್ದಶಕದ್ವಿರ್ದ್ವಾದಶಕವತೀತ್ಯಭಿಸಾರಿಣೀತ್ಯುಚ್ಯತೇ । ಶಿಷ್ಟಾಶ್ಚತಸ್ರೋ ಜಗತ್ಯಃ । ಪೂರ್ವವದೃಷಿದೇವತೇ । ತಥಾ ಚಾನುಕ್ರಾಂತಂ । ಯಜಾಮಹೇ ಸಪ್ತಾದ್ಯಾಂತ್ಯೇ ತ್ರಿಷ್ಟುಭೌ ಪಂಚಮ್ಯ-ಭಿಸಾರಿಣೀತಿ ॥ ಚತುರ್ಥೇಽಹನಿ ಮಾಧ್ಯಂದಿನಸವನೇ ತೃತೀಯಾಪಂಚಮ್ಯೋರಾವರ್ತನೇನ ತ್ರೀಂಸ್ತೃ-ಚಾನ್ ಹೋತ್ರಕಾ ಏಕೈಕಂ ತೃಚಮಾವಪೇರನ್ । ಸೂತ್ರಿತಂ ಚ । ಯಜಾಮಹ ಇಂದ್ರಂ ವಜ್ರದಕ್ಷಿಣ-ಮಿತಿ ದ್ವಿತೀಯಾನೇವಮೇವ । ಆ-೭-೧೧ । ಇತಿ ॥**

ಅನುವಾದವು—**ಯಜಾಮಹೇ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತದ ಋಷಿದೇವತೆಗಳು ಹಿಂದಿನ ಸೂಕ್ತದಂತೆಯೇ. ಈ ಸೂಕ್ತದ ಮೊದಲನೆಯ ಮತ್ತು ಏಳನೆಯ ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು; ಐದನೆಯ ಋಕ್ಕು ಅಭಿಸಾರಿಣೀ ಎಂಬ ಛಂದಸ್ಸಿನದು. ಒಂದು ಋಕ್ಕಿನಲ್ಲಿ ನಾಲ್ಕು ಪಾದಗಳಿದ್ದು ಅವುಗಳಲ್ಲಿ ಎರಡು ಪಾದಗಳಲ್ಲಿ ಹತ್ತು ಹತ್ತು ಅಕ್ಷರಗಳೂ ಇನ್ನೆರಡು ಪಾದಗಳಲ್ಲಿ ಹನ್ನೆರಡು ಹನ್ನೆರಡು ಅಕ್ಷರಗಳೂ ಇದ್ದರೆ ಆ ಋಕ್ಕು ಅಭಿಸಾರಿಣೀ ಛಂದಸ್ಕವೆನಿಸುವುದು. ಉಳಿದ ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ **ಯಜಾಮಹೇ ಸಪ್ತಾ-ದ್ಯಾಂತ್ಯೇ ತ್ರಿಷ್ಟುಭೌ ಪಂಚಮ್ಯಭಿಸಾರಿಣೀ** ಎಂದು ಹೇಳಿರುವುದು. ಯಾಗದ ನಾಲ್ಕನೆಯ ದಿವಸ **ಮಾಧ್ಯಂದಿನಸವನಕಾಲದಲ್ಲಿ ಈ ಸೂಕ್ತದ ಮೂರು ಮತ್ತು ಐದನೆಯ ಋಕ್ಕುಗಳ ಆವರ್ತನದಿಂದ ಮೂರು ಋಕು ಗಳನ್ನು ಹೊಂದಿಸಿ ಅವುಗಳನ್ನು ಹೋತೃವರ್ಗದ ಋತ್ವಿಕ್ಕುಗಳು ಆವಾಪಾರ್ಥವಾಗಿ ಪಠಿಸಬೇಕೆಂದು** ಆಶ್ವಲಾಯನ ಶ್ರೌತಸೂತ್ರದ-**ಯಜಾಮಹ ಇಂದ್ರಂ ವಜ್ರದಕ್ಷಿಣಮಿತಿ ದ್ವಿತೀಯಾನೇವಮೇವ** ಎಂಬ ಸೂತ್ರದಿಂದ (ಆ. ೭ ೧೧) ವಿವೀತವಾಗಿರುವುದು.

### ಸೂಕ್ತ—೨೩

ಮಂಡಲ—೧೦ । ಅನುವಾಕ—೨ । ಸೂಕ್ತ—೨೩ ।
ಅಷ್ಟಕ—೭ ಅಧ್ಯಾಯ ೭ । ವರ್ಗ—೯ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ।
ಋಷಿಃ—ವಿಮದ ಐಂದ್ರಃ ಪ್ರಾಜಾಪತ್ಯೋ ವಾ ವಸುಕೃದ್ವಾ ವಾಸುಕ್ರಃ ।
ದೇವತಾ—ಇಂದ್ರಃ ।
ಛಂದಃ—೧, ೭. ತ್ರಿಷ್ಟುಪ್ । ೨-೪, ೬. ಜಗತೀ । ೫. ಅಭಿಸಾರಿಣೀ ।

॥ ಸಂಹಿತಾಪಾಠಃ ॥

ಯಜಾಮಹ ಇಂದ್ರಂ ವಜ್ರದಕ್ಷಿಣಂ ಹರೀಣಾಂ ರಥ್ಯಂ೧ ವಿವ್ರತಾನಾಂ ।
ಪ್ರ ಶ್ಮಶ್ರು ದೋಧುವದೂರ್ಧ್ವಥಾ ಭೂದ್ವಿ ಸೇನಾಭಿರ್ದಯಮಾನೋ ವಿ ರಾಧಸಾ ॥ ೧ ॥

॥ ಪದಪಾಠಃ ॥

ಯಜಾಮಹೇ । ಇಂದ್ರಂ । ವಜ್ರಽದಕ್ಷಿಣಂ । ಹರೀಣಾಂ । ರಥ್ಯಂ । ವಿಽವ್ರತಾನಾಂ ।
ಪ್ರ । ಶ್ಮಶ್ರು । ದೋಧುವತ್ । ಊರ್ಧ್ವಽಥಾ । ಭೂತ್ । ವಿ । ಸೇನಾಭಿಃ । ದಯಮಾನಃ । ವಿ । ರಾಧಸಾ ॥ ೧ ॥

॥ ಸಾಯಣಭಾಷ್ಯಂ ॥

ವಯಮಿಂದ್ರಂ ಯಜಾಮಹೇ । ಸೋಮಲಕ್ಷಣೈರ್ಹವಿರ್ಭಿಃ ಪೂಜಯಾಮಃ । ಕೀದೃಶಂ । ವಜ್ರದಕ್ಷಿಣಂ ಶತ್ರುವಧಾಯ ಸತತಂ ವಜ್ರೋ ದಕ್ಷಿಣೇ ಹಸ್ತೇ ಯಸ್ಯ ತಂ ವಿವ್ರತಾನಾಂ ರಥವಹನಾದಿವಿವಿಧಕರ್ಮಣಾಂ ಹರೀಣಾಮೇತತ್ಸಂಜ್ಞಕಾನಾಮಶ್ವಾನಾಂ ರಥ್ಯಮಾನೇತಾರಂ । ಸ ಇಂದ್ರಃ ಸೋಮಪಾನಾನಂತರಂ ಶ್ಮಶ್ರು ಸ್ವಕೀಯಾನಿ ಶ್ಮಶ್ರೂಣಿ ದೋಧುವತ್ ಪುನಃಪುನರ್ಧುನ್ವಾನಃ ಸನ್ನೂರ್ಧ್ವಥೋರ್ಧ್ವಂ ಪ್ರ ಭೂತ್ । ಪ್ರಾದುರಭೂತ್ । ಕಿಂಚ ಸೇನಾಭಿರ್ಮರುದಾದಿಸ್ವಕೀಯೈಃ ಸೈನ್ಯೈರ್ವಿ ದಯಮಾನೋ ವಿವಿಧಂ ಶತ್ರೂನ್ಹಿಂಸನ್ರಾಧಸಾ । ದ್ವಿತೀಯಾರ್ಥೇ ತೃತೀಯಾ । ರಾಧೋ ಧನಂ । ವೀತ್ಯುಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ । ವಿವಿಧಂ ಸ್ತೋತೃಭ್ಯೋ ದದಾತಿ ॥

॥ ಪ್ರತಿಪದಾರ್ಥ ॥

ವಜ್ರದಕ್ಷಿಣಂ—ಬಲಗೈಯಿನಲ್ಲಿ ವಜ್ರಾಯುಧವನ್ನು ಹಿಡಿದಿರುವವನೂ । ವಿವ್ರತಾನಾಂ-ಅನೇಕ ಕರ್ಮಗಳಿಗೆ ಸಮರ್ಥಗಳಾದ । ಹರೀಣಾಂ—ಅಶ್ವಗಳಿಗೆ । ರಥ್ಯಂ—ನೇತೃವೂ ಆದ । ಇಂದ್ರಂ—ಇಂದ್ರನನ್ನು । ಯಜಾಮಹೇ—ಪೂಜಿಸುತ್ತೇವೆ । (ಅದೇ ಇಂದ್ರನು) ಶ್ಮಶ್ರು—ತನ್ನ ಮುಖದ ಕೂದಲುಗಳನ್ನು । ದೋಧುವತ್—ಪದೇಪದೇ ಅಲ್ಲಾಡಿಸುತ್ತ । ಊರ್ಧ್ವಥಾ—ಊರ್ಧ್ವಾಭಿಮುಖವಾಗಿ । ಪ್ರ ಭೂತ್—ಹತ್ತಿ ಹೋಗಿದ್ದಾನೆ । ಸೇನಾಭಿಃ—ಮರುದಾದಿ ಸೇನೆಗಳಿಂದ । ವಿ ದಯಮಾನಃ—ಶತ್ರುಗಳನ್ನು ಅನೇಕ ವಿಧವಾಗಿ ಹಿಂಸಿಸುತ್ತ । ರಾಧಸಾ—ಸಂಪತ್ತಿನಿಂದ ತನ್ನ ಆರಾಧಕರನ್ನು ತೃಪ್ತಿಗೊಳಿಸುತ್ತಾನೆ.

॥ ಭಾವಾರ್ಥ ॥

ಬಲಗೈಯಿನಲ್ಲಿ ವಜ್ರಾಯುಧವನ್ನು ಹಿಡಿದಿರುವವನೂ, ಅನೇಕ ಕರ್ಮಗಳಿಗೆ ಸಮರ್ಥಗಳಾದ ಅಶ್ವಗಳಿಗೆ ನೇತೃವೂ ಆದ ಇಂದ್ರನನ್ನು ಪೂಜಿಸುತ್ತೇವೆ. ಅದೇ ಇಂದ್ರನು ತನ್ನ ಮುಖದ ಕೂದಲುಗಳನ್ನು ಪದೇಪದೇ ಅಲ್ಲಾಡಿಸುತ್ತ

ಊರ್ಧ್ವಾಭಿಮುಖವಾಗಿ ಹತ್ತಿಹೋಗಿದ್ದಾನೆ. ಮರುದಾದಿಸೇನೆಗಳಿಂದ ಶತ್ರುಗಳನ್ನು ಅನೇಕ ವಿಧವಾಗಿ ಹಿಂಸಿಸುತ್ತ ಸಂಪತ್ತಿನಿಂದ ತನ್ನ ಆರಾಧಕರನ್ನು ತೃಪ್ತಿಗೊಳಿಸುತ್ತಾನೆ.

## English Translation

We worship Indra, bearing in his right hand the thunderbolt, the driver of the bay horses which have many functions: shaking his beard, he mounts on high, destroying (his enemies) by his armies he gives wealth (to his worshippers).

॥ ಸಂಹಿತಾಪಾಠಃ ॥

ಹರೀ ನ್ವಸ್ಯ ಯಾ ವನೇ ವಿದೇ ವಸ್ವಿಂದ್ರೋ ಮಘೈರ್ಮಘವಾ ವೃತ್ರಹಾ ಭುವತ್ ।
ಋಭುರ್ವಾಜ ಋಭುಕ್ಷಾಃ ಪತ್ಯತೇ ಶವೋಽವ ಕ್ಷ್ಣೌಮಿ ದಾಸಸ್ಯ ನಾಮ ಚಿತ್ ॥ ೨ ॥

॥ ಪದಪಾಠಃ ॥

ಹರೀ ಇತಿ । ನು । ಅಸ್ಯ । ಯಾ । ವನೇ । ವಿದೇ । ವಸು । ಇಂದ್ರಃ । ಮಘೈಃ । ಮಘಽವಾ । ವೃತ್ರಽಹಾ । ಭುವತ್ ।
ಋಭುಃ । ವಾಜಃ । ಋಭುಕ್ಷಾಃ । ಪತ್ಯತೇ । ಶವಃ । ಅವ । ಕ್ಷ್ಣೌಮಿ । ದಾಸಸ್ಯ । ನಾಮ । ಚಿತ್ ॥ ೨ ॥

॥ ಸಾಯಣಭಾಷ್ಯಂ ॥

ಅಸ್ಯೇಂದ್ರಸ್ಯ ಸಂಬಂಧಿನೌ ಯಾ ಯೌ ಹರೀ ಅಶ್ವೌ ವನೇ । ವನ್ಯಂತೇ ಸಂಭಜ್ಯಂತೇಽಸ್ಮಿನ್ದೇವಾ ಇತಿ ವನಂ ಯಜ್ಞೋಽರಣ್ಯಂ ವಾ । ತಸ್ಮಿನ್ನಸ್ಯೃಜೀಷಲಕ್ಷಣಂ ಧನಂ ಯವಸಲಕ್ಷಣಂ ವಾ ನು ಕ್ಷಿಪ್ರಂ ವಿದೇ ವಿಂದೇತೇ ಲಭೇತೇ । ಯದ್ವಾ । ಯೌ ಹರೀ ಅಸ್ಯೇಂದ್ರಸ್ಯ ವನೇ ಸಂಭಜನಾರ್ಥಂ ವಸು ವಸುನೋ ಲಾಭಾಯ ಕ್ಷಿಪ್ರಂ ಭವತ ಇತಿ ಶೇಷಃ । ತಾಭ್ಯಾಂ ಹರಿಭ್ಯಾಂ ಮಘೈರ್ಧನೈರ್ಮಘವಾನ್ಧನವಾನಿಂದ್ರೋ ವೃತ್ರಹಾ ವೃತ್ರಾಖ್ಯಸ್ಯಾಸುರಸ್ಯ ಮೇಘಸ್ಯ ವಾ ಹಂತಾ ಭುವತ್ । ಭವತಿ । ಅಪಿಚರ್ಭುರ್ದೀಪ್ತೋ ವಾಜೋ ಬಲವಾನೃಭುಕ್ಷಾ ಮಹಾನಿಂದ್ರಃ ಶವಃ ಶವಸೋ ಬಲಸ್ಯ ಧನಸ್ಯ ವಾ ಪತ್ಯತೇ । ಈಷ್ಟೇ । ಯದ್ವಾ । ಶತ್ರೂಣಾಂ ಬಲಂ ಪ್ರತಿ ಪತ್ಯತೇ । ಪ್ರತಿಪದ್ಯತೇ । ಗಚ್ಛತಿ । ಅಹಮಪಿ ತಸ್ಯ ಪ್ರಸಾದಾದ್ದಾಸಸ್ಯೋಪಕ್ಷಪಯಿತುರನ್ಯಸ್ಯ ಶತ್ರೋರ್ನಾಮ ಚಿತ್ । ನಮ್ಯತೇಽನೇನೇತಿ ನಾಮ ಶಿರಃ । ತದಪ್ಯವ ಕ್ಷ್ಣೌಮಿ । ಅವಹನ್ಮಿ । ಕಿಮುತಾನ್ಯದಂಗಂ । ಅಥವಾ । ನಾಮಧೇಯಮಪಿ ನಾಶಯಾಮಿ ಕಿಮುತ ಶತ್ರುಂ ॥

॥ ಪ್ರತಿಪದಾರ್ಥ ॥

**ಅಸ್ಯ**—ತನ್ನ । **ಯಾ ಹರೀ**—ಯಾವ ಅಶ್ವಗಳು । **ವನೇ**—ಯಜ್ಞದಲ್ಲಿ । **ವಸು**—ಧನವನ್ನು । **ನು**—ಕ್ಷಿಪ್ರವಾಗಿ । **ವಿದೇ**—ಒದಗಿಸುವುವೋ ಆ ಅಶ್ವಗಳೊಡಗೂಡಿದವನೂ । **ಮಘೈಃ**—ಸಂಪತ್ತುಗಳಿಂದ । **ಮಘವಾ**—ಧನವಂತನೂ ಆದ । **ಇಂದ್ರಃ**—ಇಂದ್ರನು । **ವೃತ್ರಹಾ**—ಶತ್ರುಹಂತಕನಾಗಿ । **ಭುವತ್**—ಆಗುತ್ತಾನೆ । **ಋಭುಃ**—ಕಾಂತಿಯುತನೂ । **ವಾಜಃ**—ಶಕ್ತಿಯುತನೂ । **ಋಭುಕ್ಷಾಃ**—ಮಹಾತ್ಮನೂ ಆದ ಇಂದ್ರನು । **ಶವಃ**—ಬಲಕ್ಕೆ । **ಪತ್ಯತೇ**—ಸ್ವಾಮಿಯಾಗಿದ್ದಾನೆ । **ದಾಸಸ್ಯ**—ಹಿಂಸಕನಾದ ಶತ್ರುವಿನ । **ನಾಮ ಚಿತ್**—ಶಿರಸ್ಸನ್ನು । **ಅವ ಕ್ಷ್ಣೌಮಿ**—(ಇಂದ್ರನ ಸಹಾಯದಿಂದ) ಕತ್ತರಿಸುತ್ತೇನೆ.

॥ ಪದಪಾಠಃ ॥

ಯಾವ ಅಶ್ವಗಳು ಯಜ್ಞದಲ್ಲಿ ಧನವನ್ನು ಕ್ಷಿಪ್ರವಾಗಿ ಒದಗಿಸುವುವೋ ಆ ಅಶ್ವಗಳೊಡಗೂಡಿದವನೂ ಸಂಪತ್ತುಗಳಿಂದ ಧನವಂತನೂ ಆದ ಇಂದ್ರನು ಶತ್ರುಹಂತಕನಾಗಿ ಆಗುತ್ತಾನೆ. ಕಾಂತಿಯುತನೂ ಶಕ್ತಿಯುತನೂ ಮಹಾತ್ಮನೂ ಆದ ಇಂದ್ರನು ಬಲಕ್ಕೆ ಸ್ವಾಮಿಯಾಗಿದ್ದಾನೆ. ಹಿಂಸಕನಾದ ಶತ್ರುವಿನ ಶಿರಸ್ಸನ್ನು ಇಂದ್ರನ ಸಹಾಯದಿಂದ ಕತ್ತರಿಸುತ್ತೇನೆ.

## English Translation

With his two bay horses which bestow riches at the sacrifice, Indra, wealthy with wealth, is the slayer of Vritra; the brilliant, powerful, mighty Indra is the lord of strength; (through him) I cut off the head of the Dasa.

॥ ಸಂಹಿತಾಪಾಠಃ ॥

ಯದಾ ವಜ್ರಂ ಹಿರಣ್ಯಮಿದಥಾ ರಥಂ ಹರೀ ಯಮಸ್ಯ ವಹತೋ ವಿ ಸೂರಿಭಿಃ ।
ಆ ತಿಷ್ಠತಿ ಮಘವಾ ಸನಶ್ರುತ ಇಂದ್ರೋ ವಾಜಸ್ಯ ದೀರ್ಘಶ್ರವಸಸ್ಪತಿಃ ॥೩॥

॥ ಪದಪಾಠಃ ॥

ಯದಾ । ವಜ್ರಂ । ಹಿರಣ್ಯಂ । ಇತ್ । ಅಥ । ರಥಂ । ಹರೀ ಇತಿ । ಯಂ । ಅಸ್ಯ । ವಹತಃ । ವಿ । ಸೂರಿಽಭಿಃ ।
ಆ । ತಿಷ್ಠತಿ । ಮಘಽವಾ । ಸನಽಶ್ರುತಃ । ಇಂದ್ರಃ । ವಾಜಸ್ಯ । ದೀರ್ಘಽಶ್ರವಸಃ । ಪತಿಃ ॥ ೩ ॥

॥ ಸಾಯಣಭಾಷ್ಯಂ ॥

ಯದೇಂದ್ರೋ ಹಿರಣ್ಯಂ ಹಿತರಮಣೀಯಂ ವಜ್ರಂ ಸ್ವಕೀಯಮಾಯುಧಂ ಶತ್ರುಹನನಾಯ ಗೃಹ್ಣಾತೀತಿ ಶೇಷಃ । ಇದಿತಿ ಪೂರಣಃ । ಅಥ ತದಾನೀಮಸ್ಯೇಂದ್ರಸ್ಯ ಹರೀ ಅಶ್ವೌ ಯಂ ರಥಂ ವಹತಃ ಗಂತೃಪ್ರದೇಶಂ ವಿಶೇಷೇಣ ಪ್ರಾಪಯತಃ ಮಘವಾ ಧನವಾನಿಂದ್ರಃ ಸೂರಿಭಿಃ ಸ್ತೋತೃಭಿಃ ಕುತ್ಸಾದಿಭಿಃ ಸಹ ತಂ ರಥಮಾ ತಿಷ್ಠತಿ । ಆರೋಹತಿ । ಕೀದೃಶಃ । ಸನಶ್ರುತಶ್ಚಿರಪ್ರಖ್ಯಾತಃ । ಜಗತಿ ಸ್ವಭಾವತ ಏವ ವಿಖ್ಯಾತ ಇತ್ಯರ್ಥಃ । ದೀರ್ಘಶ್ರವಸೋ ಬಹುಕೀರ್ತೇರ್ವಾಜಸ್ಯಾನ್ನಸ್ಯ ಪತಿಃ ಸ್ವಾಮೀ । ಏವಂಭೂತ ಇಂದ್ರಸ್ತಂ ರಥಮಾರೋಹತೀತ್ಯರ್ಥಃ ।

॥ ಪ್ರತಿಪದಾರ್ಥ ॥

**ಯದಾ**—ಯಾವಾಗ । **ಹಿರಣ್ಯಂ**—ಸುವರ್ಣಮಯವಾದ । **ವಜ್ರಂ**—ವಜ್ರಾಯುಧವನ್ನು (ಇಂದ್ರನು ಹಿಡಿಯುವನೋ) **ಅಥ**—ಆ ಒಡನೆಯೇ **ಅಸ್ಯ**—ಈ ಇಂದ್ರನ । **ಹರೀ**—ಅಶ್ವಗಳು । **ಯಂ ರಥಂ**—ಯಾವ ರಥವನ್ನು । **ವಹತಃ**—ವಹಿಸುವುವೋ ಅದೇ ರಥವನ್ನು । **ಮಘವಾ**—ಧನವಂತನೂ । **ಸನಶ್ರುತಃ**—ಬಹುಕಾಲದಿಂದಲೂ ಪ್ರಖ್ಯಾತನೂ । **ದೀರ್ಘಶ್ರವಸಃ**—ಬಹಳ ಕೀರ್ತಿಹೊಂದಿದ । **ವಾಜಸ್ಯ**—ಅನ್ನಕ್ಕೆ । **ಪತಿಃ**—ಸ್ವಾಮಿಯೂ ಆದ । **ಇಂದ್ರಃ**—ಇಂದ್ರನು । **ಸೂರಿಭಿಃ**—ತನ್ನ ಸ್ತೋತೃಗಳೊಡನೆ । **ಆ ತಿಷ್ಠತಿ**—ಹತ್ತುತ್ತಾನೆ.

॥ ಭಾವಾರ್ಥ ॥

ಸುವರ್ಣಮಯವಾದ ವಜ್ರಾಯುಧವನ್ನು ಇಂದ್ರನು ಹಿಡಿದೊಡನೆಯೇ ಅವನ ಅಶ್ವಗಳು ಅವನ ರಥವನ್ನು ವಹಿಸುವುವು. ಅದೇ ರಥವನ್ನು ಬಹುಕಾಲದಿಂದಲೂ ಪ್ರಖ್ಯಾತನೂ, ಬಹಳ ಕೀರ್ತಿಯುತವಾದ ಅನ್ನಕ್ಕೆ ಸ್ವಾಮಿಯೂ ಆದ ಇಂದ್ರನು ತನ್ನ ಸ್ತೋತೃಗಳೊಡನೆ ರಥವನ್ನು ಹತ್ತುತ್ತಾನೆ.

English Translation

When he grasps his golden thunderbolt, then the opulent Indra ascends with his praisers, the chariot which his two bay horses draw, (Indra) the lord of long celebrated and widely renowned food.

॥ ಸಂಹಿತಾಪಾಠಃ ॥

ಸೋ ಚಿನ್ನು ವೃಷ್ಟಿರ್ಯೂಥ್ಯಾ ಸ್ವಾ ಸಚಾಁ ಇಂದ್ರಃ ಶ್ಮಶ್ರೂಣಿ ಹರಿತಾಭಿ ಪ್ರುಷ್ಣುತೇ ।

ಅವ ವೇತಿ ಸುಕ್ಷಯಂ ಸುತೇ ಮಧೂದಿದ್ಧೂನೋತಿ ವಾತೋ ಯಥಾ ವನಂ ॥ ೪ ॥

॥ ಪದಪಾಠಃ ॥

**ಸೋ ಇತಿ । ಚಿತ್ । ನು । ವೃಷ್ಟಿಃ । ಯೂಥ್ಯಾ । ಸ್ವಾ । ಸಚಾ । ಇಂದ್ರಃ । ಶ್ಮಶ್ರೂಣಿ । ಹರಿತಾ । ಅಭಿ । ಪ್ರುಷ್ಣುತೇ ।**

**ಅವ । ವೇತಿ । ಸುऽಕ್ಷಯಂ । ಸುತೇ । ಮಧು । ಉತ್ । ಇತ್ । ಧೂನೋತಿ । ವಾತಃ । ಯಥಾ । ವನಂ ॥ ೪ ॥**

॥ ಸಾಯಣಭಾಷ್ಯಂ ॥

**ತಚ್ಛಬ್ದಶ್ರುತೇರ್ಯಚ್ಛಬ್ದೋऽಧ್ಯಾಹರ್ತವ್ಯಃ । ಯಾ ಮಹತೀ ವೃಷ್ಟಿರಸ್ತಿ ಸೋ ಸಾ ವೃಷ್ಟಿರ್ನು ಕ್ಷಿಪ್ರಂ । ಚಿದಿತ್ಯುಪಮಾರ್ಥೇ । ಯಥಾ ಸರ್ವಂ ಸಿಂಚತಿ ತಥೇಂದ್ರಃ ಸ್ವಾ ಸ್ವಾನಿ ಯೂಥ್ಯಾ ಯೂಥಾನಿ ಮರುದಾದಿಗಣಲಕ್ಷಣಾನಿ ಸಚಾ ಸಹ ಸ್ವಾನಿ ಶ್ಮಶ್ರೂಣಿ ಚ ಹರಿತಾ ಹರಿದ್ವರ್ಣೇನ ಸೋಮೇನಾಭಿ ಪ್ರುಷ್ಣುತೇ ॥ ಪ್ರುಷ ಪ್ಲುಷ ಸ್ನೇಹನಸೇಚನಪೂರಣೇಷ್ವಿತಿ ಧಾತುಃ ॥ ಅಭಿಮುಖ್ಯೇನ ಸ್ಥಿತ್ವಾ ಕ್ಷಿಪ್ರಂ ಸಿಂಚತಿ । ಸೋಮಂ ಪಾಯಯತಿ ಪಿಬತಿ ಚೇತ್ಯರ್ಥಃ । ಅಪಿ ಚ ಸುಕ್ಷಯಂ ಶೋಭನಂ ಯಜ್ಞಗೃಹಮವ ವೇತಿ । ಅಭಿಗಚ್ಛತಿ । ಗತ್ವಾ ಚ ಸುತೇ ಸೋಮೇऽಭಿಷುತೇ ಸತಿ ಮಧು ಮಧುರರಸೋಪೇತಂ ಸೋಮಂ ಪೀತ್ವಾ । ಮತ್ತಃ ಸನ್ನಿತಿ ಶೇಷಃ । ಉದಿದ್ಧೂನೋತಿ । ಸ್ವಶರೀರಮುತ್ಕಂಪಯತಿ । ತತ್ರ ದೃಷ್ಟಾಂತಃ । ವಾತೋ ವಾಯುರ್ಯಥಾ ವನಂ ವೃಕ್ಷಸಮೂಹಮುತ್ಕಂಪಯತಿ ತದ್ವತ್ ॥**

॥ ಪ್ರತಿಪದಾರ್ಥ ॥

**ಸೋ**—ಪ್ರಸಿದ್ಧವಾದ । **ವೃಷ್ಟಿಃ**—ವೃಷ್ಟಿಯು । **ನು ಚಿತ್**—ಕ್ಷಿಪ್ರವಾಗಿ ಎಲ್ಲಾ ಪ್ರದೇಶಗಳನ್ನೂ ತೊಯ್ಯಿಸುವಂತೆ । **ಇಂದ್ರಃ**—ಇಂದ್ರನು । **ಸ್ವಾ**—ತನ್ನ । **ಯೂಥ್ಯಾ ಸಚಾ**—ಮರುದ್ಗಣಗಳೊಡನೆ । **ಶ್ಮಶ್ರೂಣಿ**—ತನ್ನ ಮುಖದ ಕೂದಲುಗಳನ್ನು । **ಹರಿತಾ**—ಪಚ್ಚೆವರ್ಣವುಳ್ಳ ಸೋಮದಿಂದ । **ಅಭಿ ಪ್ರುಷ್ಣುತೇ**—ಒದ್ದೆಮಾಡಿಕೊಳ್ಳುತ್ತಾನೆ । **ಸು ಕ್ಷಯಂ**—ಉತ್ತಮವಾದ ಯಜ್ಞಗೃಹವನ್ನು । **ಅವ ವೇತಿ**—ಪ್ರವೇಶಿಸುತ್ತಾನೆ । **ವಾತಃ**—ವಾಯುವು । **ಯಥಾ**—ಯಾವ ರೀತಿ । **ವನಂ**—ವನವನ್ನು ಕಂಪಿಸುವಂತೆ ಮಾಡುವುದೋ ಹಾಗೆ । **ಸುತೇ**—ಸೋಮವು ಹಿಂಡಿಲ್ಪಟ್ಟಾಗ । **ಮಧು**—ಮಧುರವಾದ ಸೋಮವನ್ನು ಪಾನಮಾಡಿ । **ಉದಿದ್ಧೂನೋತಿ**—ಇಂದ್ರನು ಕಂಪಿಸುತ್ತಾನೆ.

॥ ಭಾವಾರ್ಥ ॥

ಪ್ರಸಿದ್ಧವಾದ ವೃಷ್ಟಿಯು ಕ್ಷಿಪ್ರವಾಗಿ ಎಲ್ಲ ಪ್ರದೇಶಗಳನ್ನೂ ತೊಯ್ಯಿಸುವಂತೆ ಇಂದ್ರನು ತನ್ನ ಮರುದ್ಗಣಗಳೊಡನೆ ತನ್ನ ಮುಖದ ಕೂದಲುಗಳನ್ನು ಪಚ್ಚೆ ವರ್ಣವುಳ್ಳ ಸೋಮದಿಂದ ಒದ್ದೆಮಾಡಿಕೊಳ್ಳುತ್ತಾನೆ. ಉತ್ತಮವಾದ ಯಜ್ಞಗೃಹಕ್ಕೆ ಪ್ರವೇಶಿಸುತ್ತಾನೆ. ವಾಯುವು ಯಾವ ರೀತಿ ವನವನ್ನು ಕಂಪಿಸುವಂತೆ ಮಾಡುವುದೋ ಹಾಗೆ ಸೋಮವು ಹಿಂಡಲ್ಪಟ್ಟಾಗ ಮಧುರವಾದ ಸೋಮವನ್ನು ಪಾನಮಾಡಿ ಇಂದ್ರನು ತನ್ನ ಮೆಚ್ಚಿಗೆಯನ್ನು ಶಿರಃಕಂಪನದಿಂದ ವ್ಯಕ್ತಪಡಿಸುತ್ತಾನೆ.

## English Translation

As the rain (bedews all), so. Indra, accompanied by his troops (of the Maruts), sprinkles their beards, with the green (Soma-juice): he repairs to the pleasant chamber (of sacrifice); (the Soma) being effused, the sweet beverage agitates (his frame), as the breeze (shakes) the forest.

॥ ಸಂಹಿತಾಪಾಠಃ ॥

ಯೋ ವಾಚಾ ವಿವಾಚೋ ಮೃಧ್ರವಾಚಃ ಪುರೂ ಸಹಸ್ರಾಶಿವಾ ಜಘಾನ
ತತ್ತದಿದಸ್ಯ ಪೌಂಸ್ಯಂ ಗೃಣೀಮಸಿ ಪಿತೇವ ಯಸ್ತವಿಷೀಂ ವಾವೃಧೇ ಶವಃ ॥

॥ ಪದಪಾಠಃ ॥

ಯಃ । ವಾಚಾ । ವಿऽವಾಚಃ । ಮೃಧ್ರऽವಾಚಃ । ಪುರು । ಸಹಸ್ರಾ । ಅಶಿವಾ । ಜಘಾನ
ತತ್ऽತತ್ । ಇತ್ । ಅಸ್ಯ । ಪೌಂಸ್ಯಂ । ಗೃಣೀಮಸಿ । ಪಿತಾऽಇವ । ಯಃ । ತವಿಷೀಂ । ವವೃಧೇ
ಶವಃ ॥ ೫ ॥

ಸಾಯಣಭಾಷ್ಯಂ

ಯ ಇಂದ್ರೋ ವಾಚಾ ವಾಙ್ಮಾತ್ರೇಣೈವ ವಿವಾಚೋ ವಿವಿಧವಾಚಃ ಸ್ವಶತ್ರೂನ್ ಮೃಧ್ರವಾಚೋ ಹಿಂಸಿತವಾಚಃ । ಕೃತ್ವೇತಿ ಶೇಷಃ । ಪುರು ಪುರೂಣಿ ಬಹೂನ್ಯಶಿವಾಶಿವಾನ್ಯಸುಖಕರಾಣಿ ದುಃಖಕರಾಣೀತ್ಯರ್ಥಃ । ಸಹಸ್ರಾ ಶತ್ರೂಣಾಂ ಸಹಸ್ರಾಣಿ ಜಘಾನ ಹಂತಿ । ಅಪಿ ಚ ಯಶ್ಚೇಂದ್ರಃ ಪಿತೇವ ಯಥಾ ಪಿತಾ ಪುತ್ರಸ್ಯ ತವಿಷೀಂ ಬಲಮನ್ನಪ್ರದಾನೈರ್ವವೃಧೇ ವರ್ಧಯತಿ ತಥಾ ವೃಷ್ಟಿದ್ವಾರೇಣ ಸರ್ವಸ್ಯ ಜಗತಃ ಶವೋ ಬಲಂ ವವೃಧೇ ವರ್ಧಯತಿ ಅಸ್ಯೇಂದ್ರಸ್ಯ ತತ್ತದಿತ್ತತ್ತದೇವ ಪೌಂಸ್ಯಂ ಬಲಂ ಗೃಣೀಮಸಿ । ವಯಂ ಸ್ತುಮಃ । ಇಂದ್ರೋ ಯೇನ ಯೇನ ಬಲೇನ ಶತ್ರೂನ್ಹಂತಿ ತಸ್ಯ ತತ್ತದ್ಬಲಂ ವಯಂ ಸ್ತುಮ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಯಃ—ಯಾವ ಇಂದ್ರನು । ವಾಚಾ—ತನ್ನ ವಾಕ್ಕಿನಿಂದಲೇ । ವಿವಾಚಃ—ಅನೇಕ ವಿಧವಾಗಿ ಶಬ್ದಮಾಡತಕ್ಕ ಶತ್ರುಗಳನ್ನು । ಮೃಧ್ರವಾಚಃ—ಶಬ್ದರಹಿತರನ್ನಾಗಿ ಮಾಡಿ । ಪುರು—ಅನೇಕ ಸಂಖ್ಯೆಯುಳ್ಳವರೂ । ಅಶಿವಾ—ಅಮಂಗಳಕರರೂ ಆದ । ಸಹಸ್ರಾ—ಸಹಸ್ರಾರು ಶತ್ರುಗಳನ್ನು । ಜಘಾನ—ಕೊಂದಿರುವನೋ

(ಮತ್ತು) **ಪಿತಾ**—ತಂದೆಯು । **ತವಿಷೀಂ ಇವ**—ಪುತ್ರನ ಶಕ್ತಿಯನ್ನು ವೃದ್ಧಿಪಡಿಸುವಂತೆ । **ಯಃ**—ಯಾವ ಇಂದ್ರನು । **ಶವಃ**—ಜಗತ್ತಿನ ಶಕ್ತಿಯನ್ನು । **ವವೃಧೇ**—ಬೆಳೆಸುವನೋ । **ಅಸ್ಯ**—ಅದೇ ಇಂದ್ರನ । **ತತ್ತ್ವದಿತ್**—ಅದೇ ಪ್ರಸಿದ್ಧವಾದ । **ಪೌಂಸ್ಯಂ**—ಬಲವನ್ನು । **ಗೃಣೀಮಸಿ**—ಸ್ತುತಿಸುತ್ತೇವೆ.

। ಭಾವಾರ್ಥ ।

ಯಾವ ಇಂದ್ರನು ತನ್ನ ವಾಕ್ಛಬ್ದದಿಂದಲೇ ಅನೇಕ ವಿಧವಾಗಿ ಶಬ್ದಮಾಡತಕ್ಕ ಶತ್ರುಗಳನ್ನು ಶಬ್ದರಹಿತರನ್ನಾಗಿ ಮಾಡಿ ಅನೇಕ ಸಂಖ್ಯೆಯುಳ್ಳವರೂ, ಅಮಂಗಳಕರರೂ ಆದ ಸಹಸ್ರಾರು ಶತ್ರುಗಳನ್ನು ಕೊಂದಿರುವನೋ ಮತ್ತು ತಂದೆಯು ಪುತ್ರನ ಶಕ್ತಿಯನ್ನು ವೃದ್ಧಿಪಡಿಸುವಂತೆ ಯಾವ ಇಂದ್ರನು ಜಗತ್ತಿನ ಶಕ್ತಿಯನ್ನು ಬೆಳೆಸುವನೋ ಅದೇ ಇಂದ್ರನ ಪ್ರಸಿದ್ಧವಾದ ಬಲವನ್ನು ಸ್ತುತಿಸುತ್ತೇವೆ.

English Translation

We praise his manhood, who, having by his voice alone made the many-tongued speechless, has slain many thousand enemies, who supports tha strength (of the world) as a father the strength (of his son).

। ಸಂಹಿತಾಪಾಠಃ ।

ಸ್ತೋಮಂ ತ ಇಂದ್ರ ವಿಮದಾ ಅಜೀಜನನ್ನಪೂರ್ವ್ಯಂ ಪುರುತಮಂ ಸುದಾ-
ನವೇ ।
ವಿದ್ಮಾ ಹ್ಯಸ್ಯ ಭೋಜನಮಿನಸ್ಯ ಯದಾ ಪಶುಂ ನ ಗೋಪಾಃ ಕರಾ-
ಮಹೇ ॥ ೬ ॥

। ಪದಪಾಠಃ ।

ಸ್ತೋಮಂ । ತೇ । ಇಂದ್ರ । ವಿಽಮದಾಃ । ಅಜೀಜನನ್ । ಅಪೂರ್ವ್ಯಂ । ಪುರುಽತಮಂ । ಸುಽದಾನವೇ ।
ವಿದ್ಮ । ಹಿ । ಅಸ್ಯ । ಭೋಜನಂ । ಇನಸ್ಯ । ಯತ್ । ಆ । ಪಶುಂ । ನ । ಗೋಪಾಃ । ಕರಾಮಹೇ ॥೬॥

। ಸಾಯಣಭಾಷ್ಯಂ ।

ಹೇ ಇಂದ್ರ ತೇ ತುಭ್ಯಂ ಸುದಾನವೇ ಶೋಭನದಾನಸ್ಯಾರ್ಥಾಯ ವಿಮದಾ ವಿಮದನಾಮಾನೋ ವಯಂ ಸ್ತೋಮಂ ಸ್ತೋತ್ರವಿಶೇಷಮಜೀಜನನ್ । ಜನಿತವಂತಃ । ಕೃತವಂತ ಇತ್ಯರ್ಥಃ ॥ ಅತ್ರ ಪೂರ್ವೋತ್ತರಯೋರೇಕವಾಕ್ಯಯೋಃ ಪುರುಷವ್ಯತ್ಯಯಃ ॥ ಕೀದೃಶಂ । ಅಪೂರ್ವ್ಯಮಪೂರ್ವಮನ್ಯೈಃ

ಪೂರ್ವಮಕೃತಂ । ಉತ್ಕೃಷ್ಟಮಿತ್ಯರ್ಥಃ । ಪುರುತಮಂ ಬಹುತಮಂ । ನಾನಾಪ್ರಕಾರೋಪೇತಮಿತ್ಯರ್ಥಃ । ಹಿ ಯಸ್ಮಾತ್ಕಾರಣಾದ್ಧೇ ಇಂದ್ರ ಇನಸ್ಯೇಶ್ವರಸ್ಯಾಸ್ಯೇದೃಶಸ್ಯ ತವ ಯದ್ಭೋಜನಂ ಧನಮಸ್ತೀತಿ ವಿದ್ಮ ವಯಂ ಜಾನೀಮಃ ತಸ್ಮಾತ್ಕಾರಣಾತ್ತ್ವದೀಯಂ ತದ್ಧನಮಾ ಕರಾಮಹೇ । ವಯಮಸ್ಮದಭಿಮುಖಂ ಕುರ್ಮಹೇ । ತತ್ರ ದೃಷ್ಟಾಂತಃ । ಪಶುಂ ನ ಗೋಪಾ ಯಥಾ ಗೋಪಾಲೋ ಧೇನುಮಾಹ್ವಯನ್ ಸ್ವಸ್ಯಾಭಿಮುಖೀಂ ಕರೋತಿ ತದ್ವತ್ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ವಿಮದಾಃ—ವಿಮದಸಂಜ್ಞಕರಾದ ನಾವು । ಅಪೂರ್ವ್ಯಂ—ನೂತನವಾದುದೂ । ಪುರುತಮಂ—ಅತ್ಯಧಿಕವಾದುದೂ ಆದ । ಸ್ತೋಮಂ—ಸ್ತೋತ್ರವನ್ನು । ತೇ—ನಿನ್ನನ್ನುದ್ದೇಶಿಸಿ । ಸುದಾನವೇ—ಉತ್ತಮವಾದ ದಾನಾರ್ಥವಾಗಿ । ಅಜೀಜನನ್—ಉತ್ಪನ್ನಮಾಡಿದ್ದೇವೆ । ಹಿ—ಯಾವ ಕಾರಣದಿಂದ । ಇನಸ್ಯ—ಪ್ರಭುವಾದ । ಅಸ್ಯ—ನಿನ್ನ । ಯತ್ ಭೋಜನಂ—ಯಾವ ಧನವನ್ನು । ವಿದ್ಮ—ನಾವು ಅರಿತಿದ್ದೇವೆಯೋ ಅದುದರಿಂದಲೇ । ಗೋಪಾಃ—ಗೋಪಾಲಕರು । ಪಶುಂ ನ—ಧೇನುವನ್ನು ಕರೆಯುವಂತೆ । ಆ ಕರಾಮಹೇ—ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇವೆ.

। ಭಾವಾರ್ಥ ।

ಎಲೈ ಇಂದ್ರನೇ, ವಿಮದಸಂಜ್ಞಕರಾದ ನಾವು ನೂತನವಾದುದೂ ಅತ್ಯಧಿಕವಾದುದೂ ಆದ ಸ್ತೋತ್ರವನ್ನು ನಿನ್ನನ್ನುದ್ದೇಶಿಸಿ ಉತ್ತಮವಾದ ದಾನಾರ್ಥವಾಗಿ ನಿರ್ಮಿಸಿದ್ದೇವೆ. ಯಾವ ಕಾರಣದಿಂದ ಪ್ರಭುವಾದ ನಿನ್ನ ಯಾವ ಧನವನ್ನು ಅರಿತಿದ್ದೇವೆಯೋ ಅದುದರಿಂದಲೇ, ಗೋಪಾಲಕರು ಧೇನುವನ್ನು ಕರೆಯುವಂತೆ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇವೆ.

## English Translation

We, Vimadas, have generated this your unprecedented, and most varied praise, Indra· to obtain your bounty ; as we know what the opulence of that lord is, (therefore) we call it (before us), as a cowherd (calls) his cattle·

। ಸಂಹಿತಾಪಾಠಃ ।

ಮಾಕಿರ್ನ ಏನಾ ಸಖ್ಯಾ ವಿ ಯೌಷುಸ್ತವ ಚೇಂದ್ರ ವಿಮದಸ್ಯ ಚ ಋಷೇಃ ।
ವಿದ್ಮಾ ಹಿ ತೇ ಪ್ರಮತಿಂ ದೇವ ಜಾಮಿವದಸ್ಮೇ ತೇ ಸಂತು ಸಖ್ಯಾ ಶಿವಾನಿ ॥ ೭ ॥

॥ ಪದಪಾಠಃ ॥

ಮಾಕಿಃ । ನಃ । ಏನಾ । ಸಖ್ಯಾ । ವಿ । ಯೌಷುಃ । ತವ । ಚ । ಇಂದ್ರ । ವಿಽಮದಸ್ಯ । ಚ । ಋಷೇಃ

ವಿದ್ಮ । ಹಿ । ತೇ । ಪ್ರಽಮತಿಂ । ದೇವ । ಜಾಮಿಽವತ್ । ಅಸ್ಮೇ ಇತಿ । ತೇ । ಸಂತು । ಸಖ್ಯಾ ।

ಶಿವಾನಿ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತವ ಚ ವಿಮದಸ್ಯರ್ಷೇರ್ಮಮ ಚ ನಃ ॥ ಅಸ್ಮದೋ ದ್ವಯೋಶ್ಚ । ಪಾ. ೧-೨-೫೯ । ಇತಿ ದ್ವಯೋರ್ಬಹುವಚನಂ ॥ ಆವಯೋರೇನೈನಾನಿ ಸಖ್ಯಾ ಸಖ್ಯಾನಿ ಸ್ತುತ್ಯಸ್ತೋತೃತ್ವೇಜ್ಯಯಷ್ಟೃತ್ವ-ಲಕ್ಷಣಾನಿ ಸಖಿಕರ್ಮಾಣಿ ಮಾಕಿರ್ವಿ ಯೌಷುಃ । ಕ್ವಚಿದಪಿ ನ ವಿಶ್ಲಥಯೇಯುಃ । ಅಪಿ ಚ ಹಿ ಯಸ್ಮಾ-ತ್ಕಾರಣಾದ್ಧೇ ದೇವ ದ್ಯೋತಮಾನೇಂದ್ರ ತೇ ತವ ಪ್ರಮತಿಮನುಗ್ರಾಹಿಕಾಂ ಬುದ್ಧಿಂ ವಿದ್ಮ ವಯಂ ಜಾನೀಮಃ । ತತ್ರ ದೃಷ್ಟಾಂತಃ । ಜಾಮಿವದ್ಯಥಾ ಭ್ರಾತಾ ಸ್ವಭಗಿನ್ಯಾಂ ಸ್ನೇಹಯುಕ್ತಾಂ ಮತಿಂ ಜಾನಾತಿ ತದ್ವತ್ । ತಸ್ಮಾತ್ಕಾರಣಾದಸ್ಮೇ ಅಸ್ಮಾಕಂ ತೇ ತವ ಚ ಸಖ್ಯಾ ಸಖ್ಯಾನಿ ಶಿವಾನಿ ಸಂತು । ಮಂಗಲಾನಿ ಭವಂತು । ಅನಪಾಯಾನೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತವ ಚ—ನಿನಗೂ । ವಿಮದಸ್ಯ ಋಷೇಃ—ವಿಮದಸಂಜ್ಞಕನಾದ ನನಗೂ । ನಃ—ನಮ್ಮಿಬ್ಬರಿಗೂ ಇರುವ । ಏನಾ—ಪ್ರಸಿದ್ಧವಾದ । ಸಖ್ಯಾ—ಸಖಿತ್ವವು । ಮಾಕಿಃ ವಿ ಯೋಷುಃ—ಬೇರೆಯಾಗದಿರಲಿ । ಹಿ—ಏತಕ್ಕೆಂದರೆ । ದೇವ—ಪ್ರಕಾಶಮಾನನಾದ ಎಲೈ ಇಂದ್ರನೇ । ಜಾಮಿವತ್—ಅಕ್ಕರ ಮನಸ್ಸನ್ನು ಅರಿಯುವಂತೆ । ತೇ—ನಿನ್ನ । ಪ್ರಮತಿಂ—ಉತ್ಕೃಷ್ಟವಾದ ಬುದ್ಧಿಯನ್ನು । ವಿದ್ಮ— ನಾವು ಅರಿತಿದ್ದೇವೆ । ಅಸ್ಮೇ—ನಮಗೆ । ತೇ—ನಿನ್ನೊಡನಿರುವ । ಸಖ್ಯಾ—ಮಿತ್ರತ್ವವು । ಶಿವಾನಿ—ಮಂಗಳಕರಗಳಾಗಿ । ಸಂತು—ಆಗಿರಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗೂ ವಿಮದಸಂಜ್ಞಕನಾದ ನನಗೂ ಇರುವ ಪ್ರಸಿದ್ಧವಾದ ಸ್ನೇಹಕ್ಕೆ ಚ್ಯುತಿಬರದಿರಲಿ. ಪ್ರಕಾಶಮಾನನಾದ ಎಲೈ ಇಂದ್ರನೇ, ಅಕ್ಕರ ಮನಸ್ಸರಿಯುವಂತೆ ನಿನ್ನ ಉತ್ಕೃಷ್ಟವಾದ ಬುದ್ಧಿಯನ್ನು ನಾವು ಅರಿತಿದ್ದೇವೆ. ನಿನ್ನೊಡನೆ ನಮಗಿರುವ ಮಿತ್ರತ್ವವು ಮಂಗಳಕರವಾಗಿ ಆಗಿರಲಿ.

English Translation

Never may these friendships of you, Indra, and of the Rishi Vimada be disunited: for we know your attachment, divine (Indra), to be like that of a sister (to a brother) so may the friendship between us and you prosper.

# ಇಪ್ಪತ್ತನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಇಂದ್ರ ಸೋಮಮಿತಿ ಷಡೃಚಮಷ್ಟಮಂ ಸೂಕ್ತಂ । ಚತುರ್ಥ್ಯಾದ್ಯಾಸ್ತಿಸ್ರೋಽನುಷ್ಟುಭೋಽಶ್ವಿದೇವತ್ಯಾಃ । ಆದಿತಸ್ತಿಸ್ರ ಐಂದ್ರ್ಯ ಆಸ್ತಾರಪಂಕ್ತಿಚ್ಛಂದಸ್ಕಾಃ । ಆದಿತೋ ದ್ವೌ ಗಾಯತ್ರೌ ತತೋ ದ್ವೌ ಜಾಗತಾ ಸಾಸ್ತಾರಪಂಕ್ತಿಃ । ಋಷಿಃ ಪೂರ್ವವತ್ । ತಥಾ ಚಾನುಕ್ರಾಂತಂ । ಇಂದ್ರ ಸೋಮಂ ಷಳಾಸ್ತಾರಪಾಂಕ್ತಂ ತ್ವಾಶ್ವಿನ್ಯೋಽಂತ್ಯಾಸ್ತಿಸ್ರೋಽನುಷ್ಟುಭ ಇತಿ ॥ ಗತೋ ವಿನಿಯೋಗಃ ॥

ಅನುವಾದವು—**ಇಂದ್ರ ಸೋಮಂ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹಿಂದಿನ ಸೂಕ್ತದಂತೆಯೇ ಋಷಿಯು ; ನಾಲ್ಕನೆಯ ಋಕ್ಕಿನಿಂದ ಮುಂದಿನ ಮೂರು ಋಕ್ಕುಗಳು ಅನುಷ್ಟುಪ್ ಛಂದಸ್ಕವು ಮತ್ತು ಅಶ್ವಿನೀ ದೇವತಾಕವು ; ಮೊದಲಿನ ಮೂರು ಋಕ್ಕುಗಳು ಇಂದ್ರದೇವತಾಕವು ಮತ್ತು ಆಸ್ತಾರಪಂಕ್ತಿಚ್ಛಂದಸ್ಕವು ; ಒಂದು ಋಕ್ಕಿನಲ್ಲಿ ನಾಲ್ಕು ಪಾದಗಳಿದ್ದು ಅವುಗಳಲ್ಲಿ ಎರಡು ಪಾದಗಳಿಗೆ ಗಾಯತ್ರೀಛಂದಸ್ಸಿಗಿರುವಂತೆಯೂ, ಉಳಿದ ಎರಡು ಪಾದಗಳಿಗೆ ಜಗತೀಛಂದಸ್ಸಿಗಿರುವಂತೆಯೂ ಅಕ್ಷರಸಂಖ್ಯೆಯಿದ್ದರೆ ಆ ಋಕ್ಕು ಆಸ್ತಾರಪಂಕ್ತಿಚ್ಛಂದಸ್ಸೆನಿಸುವುದು. ಅನುಕ್ರಮಣಿಕೆಯಲ್ಲಿ—**ಇಂದ್ರ ಸೋಮಂ ಷಳಾಸ್ತಾರಪಾಂಕ್ತಂ ತ್ವಾಶ್ವಿನ್ಯೋಽನ್ತ್ಯಾಸ್ತಿಸ್ರೋಽನುಷ್ಟುಭಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೨೪

ಮಂಡಲ—೧೦ ॥ ಅನುವಾಕ—೨ ॥ ಸೂಕ್ತ—೨೪ ॥
ಅಷ್ಟಕ—೭ ॥ ಅಧ್ಯಾಯ—೭ ॥ ವರ್ಗ—೧೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ವಿಮದ ಐಂದ್ರಃ ಪ್ರಾಜಾಪತ್ಯೋ ವಾ ವಸುಕೃದ್ವಾ ವಾಸುಕ್ರಃ ॥
ದೇವತಾ—೧-೩. ಇಂದ್ರಃ । ೪-೬. ಅಶ್ವಿನೌ
ಛಂದಃ—೧-೩. ಆಸ್ತಾರಪಂಕ್ತಿಃ । ೪-೬. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಇಂದ್ರ ಸೋಮಮಿಮಂ ಪಿಬ ಮಧುಮಂತಂ ಚಮೂ ಸುತಂ ।
ಅಸ್ಮೇ ರಯಿಂ ನಿ ಧಾರಯ ವಿ ವೋ ಮದೇ ಸಹಸ್ರಿಣಂ ಪುರೂವಸೋ
ವಿವಕ್ಷಸೇ ॥ ೧ ॥

॥ ಪದಪಾಠಃ ॥

ಇಂದ್ರ । ಸೋಮಂ । ಇಮಂ । ಪಿಬ । ಮಧುಽಮಂತಂ । ಚಮೂ ಇತಿ । ಸುತಂ ।

ಅಸ್ಮೇ ಇತಿ । ರಯಿಂ । ನಿ । ಧಾರಯ । ವಿ । ವಃ । ಮದೇ । ಸಹಸ್ರಿಣಂ । ಪುರುವಸೋ ಇತಿ

ಪುರುಽವಸೋ । ವಿವಕ್ಷಸೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮಿಮಮೀದೃಶಂ ಸೋಮಂ ಪಿಬ । ಕೀದೃಶಂ । ಮಧುಮಂತಂ ಮಧುರರಸೋಪೇತಂ ಚಮೂ ಚಮ್ವೋರಧಿಷವಣಫಲಕಯೋಃ ಸುತಮಭಿಷುತಂ। ತದನಂತರಂ ಪುರುವಸೋ ಬಹುಧನ ಹೇ ಇಂದ್ರ ವಸ್ತ್ವ ವಿಮದೇ ವಿಶೇಷೇಣ ಸೋಮಜನ್ಯಮದೇ ಸತ್ಯಸ್ಮೇ ಅಸ್ಮಾಸು ರಯಿಂ ಧನಂ ನಿಧಾರಯ । ನಿತರಾಂ ಸ್ಥಾಪಯ । ಕೀದೃಶಂ । ಸಹಸ್ರಿಣಂ ಸಹಸ್ರಸಂಖ್ಯಾಯುಕ್ತಂ । ಪ್ರಭೂತಮಿತ್ಯರ್ಥಃ । ತ್ವಯಾ ದತ್ತೇನ ಧನೇನ ಯಸ್ಮಾದ್ವಯಂ ಪುನರಪಿ ತ್ವದರ್ಥಂ ಯಾಗಂ ಕುರ್ಮಃ ತಸ್ಮಾದಸ್ಮಾಸು ಧನಂ ವಿಧೇಹೀತ್ಯರ್ಥಃ । ಅತಃ ಕಾರಣಾದ್ವಿವಕ್ಷಸೇ । ಮಹನ್ನಾಮೈತತ್ । ತ್ವಂ ಮಹಾನ್ಭವಸಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಇಮಂ—ಇಲ್ಲಿ ಅರ್ಪಿತವಾದುದೂ । ಮಧುಮಂತಂ—ಮಧುರವಾದ ರಸವುಳ್ಳದ್ದೂ । ಚಮೂ—ಹಲಗೆಗಳಿಂದ । ಸುತಂ—ಹಿಂಡಿರುವುದೂ ಆದ । ಸೋಮಂ—ಸೋಮವನ್ನು । ಪಿಬ—ಪಾನಮಾಡು । ಪುರುವಸೋ—ಅತ್ಯಧಿಕವಾದ ಧನವುಳ್ಳ ಎಲೈ ಇಂದ್ರನೇ । ವಃ—ನಿನಗೆ । ವಿ ಮದೇ—ಅತ್ಯಧಿಕವಾದ ಹರ್ಷವುಂಟಾದಾಗ । ಅಸ್ಮೇ-ನಮ್ಮಲ್ಲಿ । ಸಹಸ್ರಿಣಂ-ಸಹಸ್ರವಾದ । ರಯಿಂ-ಧನವನ್ನು । ನಿ ಧಾರಯ-ಸ್ಥಾಪಿಸಿಡು । ವಿವಕ್ಷಸೇ—ನೀನು ಮಹಾತ್ಮನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮಿಂದ ಅರ್ಪಿತವಾದುದೂ, ಮಧುರವಾದ ರಸವುಳ್ಳದ್ದೂ, ಹಲಗೆಗಳಿಂದ ಹಿಂಡಿರುವುದೂ ಆದ ಸೋಮವನ್ನು ಪಾನಮಾಡು. ಅತ್ಯಧಿಕವಾದ ಧನವುಳ್ಳ ಎಲೈ ಇಂದ್ರನೇ, ನಿನಗೆ ಅತ್ಯಧಿಕವಾದ ಹರ್ಷವುಂಟಾದಾಗ ನಮ್ಮಲ್ಲಿ ಧನವನ್ನು ಸ್ಥಾಪಿಸಿಡು. ನೀನು ಮಹಾತ್ಮನಾಗಿದ್ದೀಯೆ.

## English Translation

Drink, Indra, this most sweet Soma, expressed by the planks (of the Soma-press), then bestow upon us riches in your exhilaration; thousandfold (riches), lord of infinite wealth; you are mighty.

। ಸಂಹಿತಾಪಾಠಃ ।

ತ್ವಾಂ ಯಜ್ಞೇಭಿರುಕ್ಥೈರುಪ ಹವ್ಯೇಭಿರೀಮಹೇ ।

ಶಚೀಪತೇ ಶಚೀನಾಂ ವಿ ವ್ರೋ ಮದೇ ಶ್ರೇಷ್ಠಂ ನೋ ಧೇಹಿ ವಾರ್ಯಂ

ವಿವಕ್ಷಸೇ ॥ ೨ ॥

। ಪದಪಾಠಃ ।

ತ್ವಾಂ । ಯಜ್ಞೇಭಿಃ । ಉಕ್ಥೈಃ । ಉಪ । ಹವ್ಯೇಭಿಃ । ಈಮಹೇ ।

ಶಚೀऽಪತೇ । ಶಚೀನಾಂ । ವಿ । ವಃ । ಮದೇ । ಶ್ರೇಷ್ಠಂ । ನಃ । ಧೇಹಿ । ವಾರ್ಯಂ । ವಿವಕ್ಷಸೇ ॥ ೨ ॥

। ಸಾಯಣಭಾಷ್ಯಂ ।

ಹೇ ಇಂದ್ರ ವಯಂ ಯಜ್ಞೇಭಿರ್ಯಜ್ಞೈಃ ಸೋಮಯಾಗಾದಿಭಿರುಕ್ಥೈಃ ಶಸ್ತ್ರಲಕ್ಷಣೈಃ ಸ್ತೋತ್ರೈರ್ಹವ್ಯೇಭಿರ್ಹವ್ಯೈಃ ಪುರೋಡಾಶಾದಿಭಿಶ್ಚ । ಉಪೇತ್ಯುಪಸರ್ಗಶ್ರುತೇರ್ಯೋಗ್ಯಪದಾಧ್ಯಾಹಾರಃ । ತ್ವಾಮುಪೇತ್ಯೇಮಹೇ । ಅಭಿಲಷಿತಂ ಧನಂ ಯಾಚಾಮಹೇ । ಅತೋ ಹೇ ಶಚೀಪತೇ ಕರ್ಮಣಾಂ ಪಾಲಯಿತಃ । ತ್ವಂ ಕೇಷಾಂಚಿತ್ಕರ್ಮಣಾಂ ಪಾಲಕೋ ನ ಭವಸೀತಿ ನ ಕಿಂತು ಶಚೀನಾಂ ಸರ್ವೇಷಾಂ ಕರ್ಮಣಾಂ ಪಾಲಕೋ ಭವಸೀತ್ಯರ್ಥಃ । ಏವಂ ಯಾಚಿತಸ್ತ್ವಂ ನೋಽಸ್ಮಭ್ಯಂ ವಾರ್ಯಂ ವರಣೀಯಂ ಶ್ರೇಷ್ಠಂ ಪ್ರಶಸ್ತತಮಂ ಪಶ್ವಾದಿಧನಂ ಧೇಹಿ । ದೇಹಿ । ಶಿಷ್ಟಂ ಸ್ಪಷ್ಟಂ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) **ಯಜ್ಞೇಭಿಃ**-ಯಾಗಾದಿಗಳಿಂದಲೂ । **ಉಕ್ಥೈಃ**-ಶಸ್ತ್ರಮಂತ್ರಗಳಿಂದಲೂ । **ಹವ್ಯೇಭಿಃ**-ಹವಿಸ್ಸುಗಳಿಂದಲೂ । **ತ್ವಾಂ ಉಪ**—ನಿನ್ನನ್ನು ಪೂಜಿಸಿ । **ಈಮಹೇ**—ಇಷ್ಟಾರ್ಥಗಳನ್ನು ಯಾಚಿಸುತ್ತೇವೆ. **ಶಚೀಪತೇ**—ಕರ್ಮಪಾಲಕನಾದ ಎಲೈ ಇಂದ್ರನೇ । **ಶಚೀನಾಂ**-ಸಕಲ ಕರ್ಮಗಳಿಗೂ ನೀನು ಪ್ರಭುವಾಗಿದ್ದೀಯೆ । **ವಃ**—ನಿನಗೆ । **ವಿ ಮದೇ**—ಅತ್ಯಧಿಕವಾದ ಹರ್ಷವುಂಟಾದಾಗ । **ನಃ**—ನಮ್ಮಲ್ಲಿ । **ಶ್ರೇಷ್ಠಂ**-ಉತ್ತಮವಾದುದೂ । **ವಾರ್ಯಂ**—ಅಪೇಕ್ಷಿತವಾದುದೂ ಆದ ಧನವನ್ನು । **ಧೇಹಿ**-ಸ್ಥಾಪಿಸು । **ವಿವಕ್ಷಸೇ**—ನೀನು ಮಹಾತ್ಮನಾಗಿದ್ದೀಯೆ.

। ಭಾವಾರ್ಥ ।

ಎಲೈ ಇಂದ್ರನೇ, ಯಾಗಾದಿಗಳಿಂದಲೂ, ಶಸ್ತ್ರಮಂತ್ರಗಳಿಂದಲೂ ಹವಿಸ್ಸುಗಳಿಂದಲೂ ನಿನ್ನನ್ನು ಪೂಜಿಸಿ ಇಷ್ಟಾರ್ಥಗಳನ್ನು ಯಾಚಿಸುತ್ತೇವೆ. ಕರ್ಮಪಾಲಕನಾದ ಎಲೈ ಇಂದ್ರನೇ, ಸಕಲಕರ್ಮಗಳಿಗೂ ನೀನು ಪ್ರಭುವಾಗಿದ್ದೀಯೆ. ನಿನಗೆ ಅತ್ಯಧಿಕವಾದ ಹರ್ಷವುಂಟಾದಾಗ ನಮ್ಮಲ್ಲಿ ಉತ್ತಮವಾದುದೂ ಅಪೇಕ್ಷಿತವಾದುದೂ ಆದ ಧನವನ್ನು ಸ್ಥಾಪಿಸು. ನೀನು ಮಹಾತ್ಮನಾಗಿದ್ದೀಯೆ.

## English Translation

We solicit you with sacrifices, with prayers, with oblations; lord of all pious acts, grant us in your exhilaration, excellent and desirable (affluence); you are mighty,

॥ ಸಂಹಿತಾಪಾಠಃ ॥

ಯಸ್ಪತಿರ್ವಾರ್ಯಾಣಾಮಸಿ ರಧ್ರಸ್ಯ ಚೋದಿತಾ ॥

ಇಂದ್ರ ಸ್ತೋತೄಣಾಮವಿತಾ ವಿ ವೋ ಮದೇ ದ್ವಿಷೋ ನಃ ಪಾಹ್ಯಂಹಸೋ

ವಿವಕ್ಷಸೇ ॥ ೩ ॥

॥ ಪದಪಾಠಃ ॥

ಯಃ । ಪತಿಃ । ವಾರ್ಯಾಣಾಂ । ಅಸಿ । ರಧ್ರಸ್ಯ । ಚೋದಿತಾ ॥

ಇಂದ್ರ । ಸ್ತೋತೄಣಾಂ । ಅವಿತಾ । ವಿ । ವಃ । ಮದೇ । ದ್ವಿಷಃ । ನಃ । ಪಾಹಿ । ಅಂಹಸಃ । ವಿವಕ್ಷಸೇ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯಸ್ತ್ವಂ ವಾರ್ಯಾಣಾಂ ವರಣೀಯಾನಾಂ ಧನಾನಾಂ ಪತಿರಸಿ ಸ್ವಾಮೀ ಭವಸಿ । ರಧ್ರಸ್ಯ ರಾಧಕಸ್ಯ ಸ್ತೋತುಶ್ಚ ಚೋದಿತಾ ಧನದಾನೇನ ಕರ್ಮಸು ನಿಯೋಕ್ತಾ ಚ ಭವಸಿ । ಕಿಂ ಚ ಹೇ ಇಂದ್ರ ಯಸ್ತ್ವಂ ಸ್ತೋತೄಣಾಮವಿತಾ ರಕ್ಷಕೋಽಸಿ । ಸ ತ್ವಂ ವಿ ವೋ ಮದೇ ತವ ವಿವಿಧೇ ಸೋಮಜನ್ಯಮದೇ ಸತಿ ದ್ವಿಷೋ ದ್ವೇಷ್ಟುಃ ಸಕಾಶಾನ್ನೋಽಸ್ಮಾನ್ಪಾಹಿ । ರಕ್ಷ । ಅಂಹಸಃ ಪಾಪಾಚ್ಚ ರಕ್ಷ । ಕಸ್ಮಾದೇವಮುಚ್ಯಸೇ । ಯಸ್ಮಾತ್ತ್ವಂ ವಿವಕ್ಷಸೇ ಮಹಾನ್ಭವಸಿ ।

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ! ಯಃ—ಯಾವ ನೀನು । ವಾರ್ಯಾಣಾಂ—ಅಪೇಕ್ಷಿತವಾದ ಸಕಲ ಧನಗಳಿಗೂ । ಪತಿಃ—ಒಡೆಯನಾಗಿ । ಅಸಿ—ಆಗಿದ್ದೀಯೋ । ರಧ್ರಸ್ಯ—ಸ್ತುತಿಕರ್ತನಿಗೆ । ಚೋದಿತಾ-ಪ್ರೇರಕನಾಗಿದ್ದೀಯೋ । ಸ್ತೋತೄಣಾಂ—ಸ್ತುತಿಕರ್ತರಿಗೆ । ಅವಿತಾ—ರಕ್ಷಕನಾಗಿದ್ದೀಯೋ ಅಂತಹ ನೀನು । ವಃ—ನಿನ್ನ । ವಿ ಮದೇ—ಅತಿಶಯವಾದ ಹರ್ಷಕಾಲದಲ್ಲಿ । ನಃ—ನಮ್ಮನ್ನು । ದ್ವಿಷಃ—ಶತ್ರುಗಳಿಂದ । ಪಾಹಿ—ರಕ್ಷಿಸು । ಅಂಹಸಃ—ಪಾಪದಿಂದಲೂ ರಕ್ಷಿಸು । ವಿವಕ್ಷಸೇ—ನೀನು ಮಹಾತ್ಮನಾಗಿದ್ದೀಯೆ.

। ಭಾವಾರ್ಥ ।

ಎಲೈ ಇಂದ್ರನೇ. ಯಾವ ನೀನು ಅಪೇಕ್ಷಿತವಾದ ಸಕಲ ಧನಗಳಿಗೂ ಒಡೆಯನಾಗಿದ್ದೀಯೋ, ಸ್ತುತಿಕರ್ತನಿಗೆ ಪ್ರೇರಕನಾಗಿದ್ದೀಯೋ ಮತ್ತು ಅವನಿಗೆ ರಕ್ಷಕನಾಗಿದ್ದೀಯೋ ಅಂತಹ ನೀನು ನಿನ್ನ ಅತಿಶಯವಾದ ಹರ್ಷಕಾಲದಲ್ಲಿ ನಮ್ಮನ್ನು ಶತ್ರುಗಳಿಂದ ರಕ್ಷಿಸು. ಪಾಪದಿಂದಲೂ ರಕ್ಷಿಸು. ನೀನು ಮಹಾತ್ಮನಾಗಿದ್ದೀಯೆ.

English Translation

Indra, who are the lord of desirable (riches), the encourager of the worshipper, the protector of the eulogists, defend us, in your exhilaration from adversaries; (guard us) from sin, you are mighty.

॥ ಸಂಹಿತಾಪಾಠಃ ॥

ಯುವಂ ಶಕ್ರಾ ಮಾಯಾವಿನಾ ಸಮೀಚೀ ನಿರಮಂಥತಂ ॥
ವಿಮದೇನ ಯದೀಳಿತಾ ನಾಸತ್ಯಾ ನಿರಮಂಥತಂ ॥ ೪ ॥

। ಪದಪಾಠಃ ।

ಯುವಂ । ಶಕ್ರಾ । ಮಾಯಾಽವಿನಾ । ಸಮೀಚೀ ಇತಿ ಸಂಽಈಚೀ । ನಿಃ । ಅಮಂಥತಂ ॥
ವಿಽಮದೇನ । ಯತ್ । ಈಳಿತಾ । ನಾಸತ್ಯಾ । ನಿಃಽಅಮಂಥತಂ ॥ ೪ ॥

। ಸಾಯಣಭಾಷ್ಯಂ ।

ಹೇ ಶಕ್ರಾ ಶಕ್ತೌ ಶತ್ರುವಧಾದಿಕರ್ಮಸು ಸಮರ್ಥೌ ಹೇ ಅಶ್ವಿನೌ ಮಾಯಾವಿನಾ ಮಾಯಾವಿನೌ ಪ್ರಜ್ಞಾವಂತೌ ಶತ್ರುವಂಚನಕುಶಲೌ ವಾ ಯುವಂ ಯುವಾಂ ಸಮೀಚೀ ಪರಸ್ಪರಂ ಸಂಗತೌ ನಿರಮಂಥತಂ । ಅಗ್ನಿಂ ನಿರಮಥ್ನೀತಂ । ಅಶ್ವಿನಾವಧ್ವರ್ಯೂ । ಐ. ಬ್ರಾ. ೧-೧೮ । ಇತಿ ಬ್ರಾಹ್ಮಣೋಕ್ತತ್ವಾದಗ್ನಿಮಂಥನಮಶ್ವಿನೋರುಪಪನ್ನಮಿತಿ । ಕದಾಶ್ವಿನೌ ನಿರ್ಮಥಿತವಂತೌ ಉಚ್ಯತೇ । ಯದ್ಯದಾ ನಾಸತ್ಯಾ ನಾಸತ್ಯೌ ಯುವಾಂ ವಿಮದೇನ ಮಯೋಳಿತೌ ಸ್ತುತೌ ನಿರಮಂಥತಂ ನಿರಮಥ್ನೀತಂ ತದಾನೀಂ ಯುವಾಂ ಪರಸ್ಪರಂ ಸಂಗತೌ ನಿರ್ಮಥಿತವಂತೌ ಸ್ಥ ಇತ್ಯರ್ಥಃ ॥

। ಪ್ರತಿಪದಾರ್ಥ ।

ಶಕ್ರಾ—ಸಮರ್ಥರಾದ ಎಲೈ ಅಶ್ವಿನೀ ದೇವತೆಗಳೇ । ಮಾಯಾವಿನಾ—ಪ್ರಜ್ಞಾವಂತರಾದ । ಯುವಂ—ನೀವು । ಸಮೀಚೀ—ಒಂದುಗೂಡಿದವರಾಗಿ । ನಿರಮಂಥತಂ—ಅಗ್ನಿಯನ್ನು ಕಡೆದು ಪ್ರಜ್ವಲಿಸುವಂತೆ ಮಾಡಿ

ದ್ದೀರಿ | **ನಾಸತ್ಯಾ**— ಸತ್ಯಾತ್ಮಕರಾದ ಎಲೈ ಅಶ್ವಿನೀ ದೇವತೆಗಳೇ | **ಯತ್**— ಯಾವಾಗ | **ವಿಮದೇನ**— ವಿಮದ ಸಂಜ್ಞಕನಾದ ನನ್ನಿಂದ | **ಈಳಿತಾ**— ಸ್ತುತರಾದಿರೋ ಆಗ | **ನಿರಮಂಥತಂ**— ಅಗ್ನಿಯನ್ನು ಕಡೆದಿದ್ದೀರಿ.

॥ ಭಾವಾರ್ಥ ॥

ಸಮರ್ಥರಾದ ಎಲೈ ಅಶ್ವಿನೀದೇವತೆಗಳೇ, ಪ್ರಜ್ಞಾವಂತರಾದ ನೀವು ಒಂದುಗೂಡಿದವರಾಗಿ ಅಗ್ನಿಯನ್ನು ಕಡೆದಿದ್ದೀರಿ. ಸತ್ಯಾತ್ಮಕರಾದ ಎಲೈ ಅಶ್ವಿನೀದೇವತೆಗಳೇ, ವಿಮದಸಂಜ್ಞಕನಾದ ನನ್ನಿಂದ ಯಾವಾಗ ಸ್ತುತರಾದಿರೋ ಆಗ ನೀವು ಅಗ್ನಿಯನ್ನು ಕಡೆದು ಪ್ರಜ್ವಲಿತನಾಗುವಂತೆ ಮಾಡಿದ್ದೀರಿ.

English Translation

Powerful and sagacious (Aswins) mutually associated, you have churned forth (the fire): when you, Nasatyas, glorified by Vimada, have churned it forth.

॥ ಸಂಹಿತಾಪಾಠಃ ॥

ವಿಶ್ವೇ ದೇವಾ ಅಕೃಪಂತ ಸಮೀಚ್ಯೋರ್ನಿಷ್ಪತಂತ್ಯೋಃ ॥
ನಾಸತ್ಯಾವಬ್ರುವನ್ದೇವಾಃ ಪುನರಾ ವಹತಾದಿತಿ ॥ ೫ ॥

॥ ಪದಪಾಠಃ ॥

ವಿಶ್ವೇ । ದೇವಾಃ । ಅಕೃಪಂತ । ಸಂऽಈಚ್ಯೋಃ । ನಿಃऽಪತಂತ್ಯೋಃ ॥
ನಾಸತ್ಯೌ । ಅಬ್ರುವನ್ । ದೇವಾಃ । ಪುನಃ । ಆ । ವಹತಾತ್ । ಇತಿ ॥ ೫

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಭ್ಯಾಮಗ್ನಿಮಂಥನಕಾಲೇ ಪ್ರೇರ್ಯಮಾಣಯೋಃ ಸಮೀಚ್ಯೋಃ ಪರಸ್ಪರೇಣ ಸಂಯುಕ್ತಯೋರರಣ್ಯೋರ್ನಿಷ್ಪತಂತ್ಯೋರ್ವಿಸ್ಫುಲಿಂಗಾನ್ನಿರ್ಗಮಯಂತ್ಯೋಃ ಸತ್ಯೋರ್ವಿಶ್ವೇ ಸರ್ವ ಇಂದ್ರಾದಯೋ ದೇವಾ ಅಕೃಪಂತ । ಯುವಾಮಸ್ತುವನ್ । ಕಿಂಚ । ದೇವಾ ನಾಸತ್ಯಾವಶ್ವಿನೌ ಯುವಾಮಬ್ರುವನ್ । ಅವೋಚನ್ । ಕಿಮಿತಿ । ಪುನರಾ ವಹತಾದಿತಿ । ಪುನಃಪುನರೀದೃಶಾನಿ ಜಗತ್ಸ್ಥಿತಿಹೇತುಭೂತಾನಿ ಕರ್ಮಾಣಿ ಯುವಾಮಾಭಿಮುಖ್ಯೇನ ಸ್ಥಿತ್ವಾವಹತಂ । ಯದ್ವಾ । ಯುವಾಭ್ಯಾಮುತ್ಪಾದ್ಯಮಾನಃ ಪುನಶ್ಚಾಯಮಗ್ನಿರಸ್ಮದೀಯಾನಿ ಹವೀಂಷ್ಯಾವಹತ್ವಿತಿ ದೇವಾ ನಾಸತ್ಯಾವಬ್ರುವನ್ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಸಮಿಚಾನಾ**—ಒಂದು ಗೂಡಿರುವವರೂ । **ನಿಷ್ಪತಂತಾ**—ಅಗ್ನಿ ಕಣಗಳನ್ನು ಹೊರಡಿಸುವವರೂ ಆದ ನಿಮ್ಮನ್ನು । **ವಿಶ್ವೇ ದೇವಾಃ**—ಇಂದ್ರಾದಿ ಸಕಲ ದೇವತೆಗಳೂ । **ಅಕೃಪಂತ**—ಸ್ತುತಿಸಿದ್ದಾರೆ । **ಪುನಃ**—ತಿರುಗಿಯೂ **ಆ ವಹತಾತ್**—ಯಜ್ಞಕರ್ಮವನ್ನು ನಿರ್ವಹಿಸಿರಿ । **ಇತಿ**—ಎಂಬುದಾಗಿ । **ದೇವಾಃ**—ದೇವತೆಗಳು । **ನಾಸತ್ಯಾ**—ಸತ್ಯಾತ್ಮಕರಾದ ನಿಮ್ಮನ್ನು । **ಅಬ್ರುವನ್**—ಹೇಳಿದ್ದಾರೆ (ಪ್ರಾರ್ಥಿಸಿದ್ದಾರೆ)

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಒಂದುಗೂಡಿರುವವರೂ, ಅಗ್ನಿಕಣಗಳನ್ನು ಹೊರಡಿಸಿ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವವರೂ ಆದ ನಿಮ್ಮನ್ನು ಇಂದ್ರಾದಿಸಕಲದೇವತೆಗಳೂ ಸ್ತುತಿಸಿದ್ದಾರೆ. "ತಿರುಗಿಯೂ ಜಗತ್ಸ್ಥಿತಿಗೆ ಸಾಧಕವಾದ ಯಜ್ಞಕರ್ಮವನ್ನು ನಿರ್ವಹಿಸಿರಿ" ಎಂದು ದೇವತೆಗಳು ಸತ್ಯಾತ್ಮಕರಾದ ನಿಮ್ಮನ್ನು ಪ್ರಾರ್ಥಿಸಿದ್ದಾರೆ.

English Translation

All the gods praised you as you were mutually associated, and caused (the sparks) to fly up: the gods have said to the two Nasatyas, "let the fire again bear (us oblations)".

॥ ಸಂಹಿತಾಪಾಠಃ ॥

ಮಧುಮನ್ಮೇ ಪರಾಯಣಂ ಮಧುಮತ್ಪುನರಾಯನಂ ।
ತಾ ನೋ ದೇವಾ ದೇವತಯಾ ಯುವಂ ಮಧುಮತಸ್ಕೃತಂ ॥ ೬ ॥

॥ ಪದಪಾಠಃ ॥

ಮಧುಽಮತ್ । ಮೇ । ಪರಾಽಅಯನಂ । ಮಧುಽಮತ್ । ಪುನಃ । ಆಽಅಯನಂ ।
ತಾ । ನಃ । ದೇವಾ । ದೇವತಯಾ । ಯುವಂ । ಮಧುಽಮತಃ । ಕೃತಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾ ಮೇ ಮದೀಯಂ ಪರಾಯಣಂ ಗೃಹಾತ್ಪರಾಗಮನಂ ಮಧುಮತ್ । ಅತ್ರ ರಸವಿಶೇಷವಾಚಿನಾ ಮಧುಶಬ್ದೇನ ತದ್ವತಾ ಪ್ರೀತಿರ್ಲಕ್ಷ್ಯತೇ । ಯುವಯೋಃ ಪ್ರಸಾದಾತ್ಪ್ರೀತಿಯುಕ್ತಂ ಭವತ್ವಿತಿ ಶೇಷಃ । ಪುನರಾಯನಂ ಗೃಹಂ ಪ್ರತ್ಯಾಗಮನಂ ಮಧುಮತ್ ಪ್ರೀತಿಯುಕ್ತಂ ಭವತು । ಅಪಿ

ಚ ಹೇ ದೇವಾ ದೇವೌ ದ್ಯೋತಮಾನೌ ತಾ ತೌ ಯುವಂ ಯುವಾಂ ನೋಽಸ್ಮಾನ್ಮಧುಮತಃ ಪ್ರೀತಿಯುಕ್ತಾನ್ಕೃತಂ । ಕುರುತಂ । ಕೇನೇತಿ ಉಚ್ಯತೇ । ದೇವತಯಾ ದೇವತ್ವೇನ । ಅಣಿಮಾದಿದೇವತ್ವೈಶ್ವರ್ಯಯೋಗೇನೇತ್ಯರ್ಥಃ ॥

। ಪ್ರತಿಪದಾರ್ಥ ।

(ಎಲೈ ಅಶ್ವಿನೀದೇವತೆಗಳೇ) **ಮೇ**—ನನ್ನ । **ಪರಾಯಣಂ**—ಗೃಹದಿಂದ ಹೊರಕ್ಕೆ ಹೋಗುವಿಕೆಯು । **ಮಧುಮತ್**—ಹಿತಕರವಾಗಿರಲಿ । **ಪುನಃ**—ತಿರುಗಿಯೂ । **ಆಯನಂ**—ಗೃಹಕ್ಕೆ ಹಿಂತಿರುಗಿ ಬರುವುದು । **ಮಧುಮತ್**—ಹಿತವನ್ನುಂಟುಮಾಡಲಿ । **ದೇವಾ**—ದೇವತಾತ್ಮರಾದ ಎಲೈ ಅಶ್ವಿನೀದೇವತೆಗಳೇ । **ತಾ**—ಪ್ರಸಿದ್ಧರಾದ । **ಯುವಂ**—ನೀವಿಬ್ಬರೂ । **ದೇವತಯಾ**—ನಿಮ್ಮ ದಿವ್ಯಶಕ್ತಿಯಿಂದ । **ನಃ**—ನಮ್ಮನ್ನು । **ಮಧುಮತಃ**—ಮಾಧುರ್ಯದಿಂದ ಕೂಡಿದವರನ್ನಾಗಿ । **ಕೃತಂ**—ಮಾಡಿರಿ.

। ಭಾವಾರ್ಥ ।

ಎಲೈ ಅಶ್ವಿನೀದೇವತೆಗಳೇ, ಗೃಹದಿಂದ ಹೊರಕ್ಕೆ ಹೋಗುವಿಕೆಯೂ ಹೊರಗಿನಿಂದ ಹಿಂತಿರುಗಿ ಮನೆಗೆ ಬರುವಿಕೆಯೂ ನನಗೆ ಮಧುರವಾದ ಅನುಭವವನ್ನು ಉಂಟುಮಾಡಲಿ. ದೇವತಾತ್ಮರಾದ ಎಲೈ ಅಶ್ವಿನೀದೇವತೆಗಳೇ, ಪ್ರಸಿದ್ಧರಾದ ನೀವಿಬ್ಬರೂ ನಿಮ್ಮ ದಿವ್ಯಶಕ್ತಿಯಿಂದ ನಮ್ಮನ್ನು ಮಾಧುರ್ಯದಿಂದ ಕೂಡಿದವರನ್ನಾಗಿ ಮಾಡಿರಿ.

English Translation

May my going forth be pleasant, may my coming back be pleasant, you two divine Aswins, render us, through your divine power possessed of pleasure.



## ಇಪ್ಪತ್ತೈದನೆಯ ಸೂಕ್ತವು.

। ಸಾಯಣಭಾಷ್ಯಂ ।

**ಭದ್ರಮಿತ್ಯೇಕಾದಶರ್ಚಂ ನವಮಂ ಸೂಕ್ತಂ । ತುಹ್ಯಾದಿಪರಿಭಾಷಯೇದಮಪ್ಯಾಸ್ತಾರಪಾಂಕ್ತಂ। ಸೋಮದೇವತಾಕಂ । ಋಷಿಶ್ಚಾನ್ಯಸ್ಮಾದಿತಿ ಪರಿಭಾಷಯಾ ಪ್ರಾಜಾಪತ್ಯ ಐಂದ್ರೋ ವಾ ವಿಮದೋ ವಾ ವಾಸುಕ್ರೋ ವಸುಕೃದ್ವರ್ಷಿಃ । ತಥಾ ಚಾನುಕ್ರಾಂತಂ । ಭದ್ರಮೇಕಾದಶ ಸೌಮ್ಯಮಿತಿ । ಗತೋ ವಿನಿಯೋಗಃ ॥**

ಅನುವಾದವು—ಭದ್ರಂ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹಿಂದಿನ ಸೂಕ್ತದಂತೆ ಪ್ರಾಜಾಪತ್ಯ ಐಂದ್ರೋ ವಾ ವಿಮದೋ ವಾ ವಾಸುಕ್ರೋ ವಸುಕೃತ್ ಎಂಬುವನು ಋಷಿಯು. ಸೋಮನು ದೇವತೆಯು; ಆಸ್ತಾರಪಂಕ್ತಿಚ್ಛಂದಸ್ಸವು ಅನುಕ್ರಮಣಿಕೆಯಲ್ಲಿ—ಭದ್ರಮೇಕಾದಶ **ಸೌಮ್ಯಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೨೫

ಮಂಡಲ—೧೦ । ಅನುವಾಕ—೨ । ಸೂಕ್ತ—೨೫ ।
ಅಷ್ಟಕ—೭ । ಅಧ್ಯಾಯ—೭ । ವರ್ಗ ೧೧, ೧೨ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ।
ಋಷಿಃ—ವಿಮದ ಐಂದ್ರಃ ಪ್ರಾಜಾಪತ್ಯೋ ವಾ ವಸುಕೃದ್ವಾ ವಾಸುಕ್ರಃ ।
ದೇವತಾ—ಸೋಮಃ ।
ಛಂದಃ—ಆಸ್ತಾರಪಂಕ್ತಿಃ ।

। ಸಂಹಿತಾಪಾಠ ।

ಭದ್ರಂ ನೋ ಅಪಿ ವಾತಯ ಮನೋ ದಕ್ಷಮುತ ಕ್ರತುಂ ॥
ಅಧಾ ತೇ ಸಖ್ಯೇ ಅಂಧಸೋ ವಿ ವೋ ಮದೇ ರಣನ್ಗಾವೋ ನ ಯವಸೇ
ವಿವಕ್ಷಸೇ ॥ ೧ ॥

। ಪದಪಾಠ ।

ಭದ್ರಂ । ನಃ । ಅಪಿ । ವಾತಯ । ಮನಃ । ದಕ್ಷಂ । ಉತ । ಕ್ರತುಂ ।
ಅಧ । ತೇ । ಸಖ್ಯೇ । ಅಂಧಸಃ । ವಿ । ವಃ । ಮದೇ । ರಣನ್ । ಗಾವಃ । ನ । ಯವಸೇ । ವಿವಕ್ಷಸೇ ।

। ಸಾಯಣಭಾಷ್ಯಂ ।

ಹೇ ಸೋಮ ತ್ವಂ ನೋಽಸ್ಮದೀಯಂ ಮನೋ ಭದ್ರಂ ಕಲ್ಯಾಣಂ ವಾತಯ । ಗಮಯ । ಅಸ್ಮಾಕಂ ಮನಃ ಶುಭಸಂಕಲ್ಪಂ ಕುರ್ವಿತ್ಯರ್ಥಃ । ತಥಾ ದಕ್ಷಮುತ ದಕ್ಷಮಪಿ । ದಕ್ಷ ವೃದ್ಧೌ । ವೃದ್ಧಂ ಸರ್ವವ್ಯಾಪಿನಮಂತರಾತ್ಮಾನಮಪಿ ಭದ್ರಂ ಶುಭಕಾರಿತ್ವಲಕ್ಷಣಂ ಪ್ರಾಪಯ । ಅಸ್ಮಾಕಮಂತರಾತ್ಮಾನಂ ಶುಭಕಾರಿಣಂ ಕುರ್ವಿತ್ಯರ್ಥಃ । ಉತಾಪಿ ಚ ಕ್ರತುಂ ಪ್ರಜ್ಞಾನಂ ಭದ್ರಂ ಶುಭಾಧ್ಯವಸಾಯಲಕ್ಷಣಂ ಪ್ರಾಪಯ । ಶುಭಾಧ್ಯವಸಾಯಿನಂ ಕುರ್ವಿತ್ಯರ್ಥಃ । ಅಧಾಥ ಸ್ತೋತಾರಸ್ತೇ ತವ ಸಖ್ಯೇ ಸ್ತುತ್ಯಸ್ತೋತೃತ್ವೇಜ್ಯಯಷ್ಟೃತ್ವಲಕ್ಷಣೇ ಸಖಿಕರ್ಮಣಿ ರಣನ್ । ರಮಂತಾಂ । ತತ್ರ ದೃಷ್ಟಾಂತಃ । ಗಾವೋ ನ ಯವಸೇ ಯಥಾ ಧೇನವೋ ಘಾಸೇ ರಮಂತೇ ಪ್ರೀತಿಂ ಕುರ್ವಂತಿ ತದ್ವತ್ । ಕಸ್ಮಿನ್ಸತಿ । ಅಂಧಸಃ ಸೋಮಾಖ್ಯಸ್ಯಾನ್ನಸ್ಯ ಸಂಬಂಧಿನಿ ವಸ್ತ್ವೇವ ವಿಮದೇ ವಿವಿಧಸೋಮಜನ್ಯಮದನಿಮಿತ್ತೇ ಸತಿ । ಕಸ್ಮಾದೇವಂ । ಯಸ್ಮಾದ್ವಿವಕ್ಷಸೇ । ಮಹಾನ್ಭವಸಿ ॥

। ಪ್ರತಿಪದಾರ್ಥ ।

(ಎಲೈ ಸೋಮದೇವನೇ) ನಃ—ನಮ್ಮ । ಮನಃ—ಮನಸ್ಸನ್ನೂ । ದಕ್ಷಂ—ಬಲವನ್ನೂ । ಉತ—ಮತ್ತು । ಕ್ರತುಂ—ಕರ್ಮವನ್ನೂ । ಭದ್ರಂ—ಕಲ್ಯಾಣಾತ್ಮಕವಾಗಿರುವಂತೆ । ವಾತಯ—ಪ್ರೇರಿಸು । ಗಾವಃ—

ಧೇನುಗಳು । **ಯವಸೇ ನ**—ಹುಲ್ಲುಗಾವಲಿನಲ್ಲಿ ಹರ್ಷವನ್ನು ಅನುಭವಿಸುವಂತೆ । **ಅಂಧಸಃ**—ಹವಿಸ್ಸಿನ ರೂಪದ ಅನ್ನದಿಂದ । **ವಃ**—ನಿನಗೆ ! ವಿ **ಮದೇ**—ಹರ್ಷವುಂಟಾದಾಗ । **ತೇ**—ನಿನ್ನ ಸ್ತೋತೃಗಳು । **ಸಖ್ಯೇ**—ನಿನ್ನ ಮಿತ್ರತ್ವದಲ್ಲಿ । **ರಣನ್**—ಸಂತೋಷಹೊಂದಲಿ । **ವಿವಕ್ಷಸೇ**—ನೀನು ಅತ್ಯಧಿಕನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನಮ್ಮ ಮನಸ್ಸನ್ನೂ, ಬಲವನ್ನೂ ಮತ್ತು ಕರ್ಮವನ್ನೂ ಕಲ್ಯಾಣಾತ್ಮಕವಾಗಿರುವಂತೆ ಪ್ರೇರಿಸು. ಧೇನುಗಳು ಹುಲ್ಲುಗಾವಲಿನಲ್ಲಿ ಹರ್ಷವನ್ನು ಅನುಭವಿಸುವಂತೆ ಹವಿಸ್ಸಿನಿಂದ ನಿನಗೆ ಹರ್ಷವುಂಟಾದಾಗ ನಿನ್ನ ಸ್ತೋತೃಗಳು ನಿನ್ನ ಮಿತ್ರತ್ವದಲ್ಲಿ ಸಂತೋಷಹೊಂದಲಿ. ನೀನು ಅತ್ಯಧಿಕನಾಗಿದ್ದೀಯೆ.

## English Translation

Sanctify (Soma) our mind, our heart, our intellect; and may (your worshipper) delight in your friendshp, like cattle in fresh pasture, in your exhilaration (produced) by tht (sacrificial) food; for you are mighty.

॥ ಸಂಹಿತಾಪಾಠಃ ॥

ಹೃದಿಸ್ಪೃಶಸ್ತ ಆಸತೇ ವಿಶ್ವೇಷು ಸೋಮ ಧಾಮಸು ।
ಅಧಾ ಕಾಮಾ ಇಮೇ ಮಮ ವಿ ವೋ ಮದೇ ವಿ ತಿಷ್ಠಂತೇ ವಸೂಯವೋ
ವಿವಕ್ಷಸೇ ॥ ೨ ॥

॥ ಪದಪಾಠಃ ॥

ಹೃದಿಽಸ್ಪೃಶಃ । ತೇ । ಆಸತೇ । ವಿಶ್ವೇಷು । ಸೋಮ । ಧಾಮಽಸು ।
ಅಧ । ಕಾಮಾಃ । ಇಮೇ । ಮಮ । ವಿ । ವಃ । ಮದೇ । ವಿ । ತಿಷ್ಠಂತೇ । ವಸುಽಯವಃ । ವಿವಕ್ಷಸೇ ॥

॥ ಸಾಯಣಭಾಷ್ಯಂ ॥

ಹೇ ಸೋಮ ತೇ ತವ ಹೃದಿಸ್ಪೃಶಃ ಸ್ತುತಿಭಿರ್ಹೃದಯಂ ಸ್ಪೃಶಂತ ಋತ್ವಿಜೋ ವಿಶ್ವೇಷು ಧಾಮಸು ಸರ್ವೇಷು ಸ್ಥಾನೇಷ್ವಾಸತೇ । ತ್ವಾಂ ಸ್ತುವಂತಸ್ತಿಷ್ಠಂತಿ । ಅಧಾಥೇದೃಗ್ಭೂತಾಃ ಕಾಮಾ ಅಭಿಲಾಷಾ ವಿ ವೋ ಮದೇ ತವ ಸೋಮಪಾನಜನ್ಯವಿವಿಧಮದನಿಮಿತ್ತೇ ಸತಿ । ಸೋಮಯಾಗಾರ್ಥಮಿತ್ಯರ್ಥಃ । ವಸೂಯವೋ ವಸುಕಾಮಾ ಧನಮಿಚ್ಛಂತೋ ಮಮ। ಹೃದಯಾದಿತಿ ಶೇಷಃ। ವಿ ತಿಷ್ಠಂತೇ । ಉತ್ತಿಷ್ಠಂತಿ । ಕಸ್ಮಾದೇವಂ । ಯಸ್ಮಾದ್ವಿವಕ್ಷಸೇ । ಮಹಾನ್ಭವಸಿ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ತೇ**—ನಿನ್ನ । **ಹೃದಿಸ್ಪೃಶಃ**—ಹೃದಯವನ್ನು ಮುಟ್ಟುವ (ತೃಪ್ತಿಯನ್ನುಂಟುಮಾಡುವ) ಋತ್ವಿಕ್ಕುಗಳು । **ವಿಶ್ವೇಷು**—ಸಮಸ್ತವಾದ । **ಧಾಮಸು**—ಯಜ್ಞಗೃಹಗಳಲ್ಲೂ । **ಆಸತೇ**—ನಿನ್ನನ್ನು ಸ್ತುತಿಸುತ್ತಾ ಇರುತ್ತಾರೆ । **ಅಧ**—ಆ ಕಾಲದಲ್ಲಿ । **ವಃ**—ನಿನಗೆ । **ವಿ ಮದೇ**—ಅತ್ಯಂತ ಹರ್ಷವುಂಟಾದಾಗ । **ವಸೂಯವಃ**—ಧನೇಚ್ಛೆಯುಳ್ಳ । **ಮಮ ಇಮೇ ಕಾಮಾಃ**—ನನ್ನ ಈ ಅಭಿಲಾಷೆಗಳು । **ವಿ ತಿಷ್ಠಂತೇ**—ಎದ್ದು ಕಾಣಿಸಿಕೊಳ್ಳುತ್ತವೆ । **ವಿವಕ್ಷಸೇ**—ನೀನು ಮಹಾತ್ಮನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನಿನಗೆ ತೃಪ್ತಿಕಾರಕರಾದ ಋತ್ವಿಕ್ಕುಗಳು ಪ್ರತಿಯೊಂದು ಯಜ್ಞಗೃಹದಲ್ಲಿಯೂ ನಿನ್ನನ್ನು ಸ್ತುತಿಸುತ್ತಿರುತ್ತಾರೆ. ಆ ಕಾಲದಲ್ಲಿ ನಿನಗೆ ಹರ್ಷವುಂಟಾದಾಗ ಧನೇಚ್ಛೆಯುಳ್ಳ ನನ್ನ ಅಭಿಲಾಷೆಗಳೆಲ್ಲ ಎದ್ದು ಕಾಣಿಸುತ್ತವೆ. ನೀನು ಮಹಾತ್ಮನಾಗಿದ್ದೀಯೆ.

## English Translation

They who seek to touch your heart, Soma, worship you in all places; and these desires for wealth rise from my heart at your exhilaration; for you are mighty.

॥ ಸಂಹಿತಾಪಾಠಃ ॥

ಉತ ವ್ರತಾನಿ ಸೋಮ ತೇ ಪ್ರಾಹಂ ಮಿನಾಮಿ ಪಾಕ್ಯಾ ।

ಅಧಾ ಪಿತೇವ ಸೂನವೇ ವಿ ವೋ ಮದೇ ಮೃಳಾ ನೋ ಅಭಿ ಚಿದ್ವಧಾದ್ವಿ-

ವಕ್ಷಸೇ ॥ ೩ ॥

॥ ಪದಪಾಠಃ ॥

ಉತ । ವ್ರತಾನಿ । ಸೋಮ । ತೇ । ಪ್ರ । ಅಹಂ । ಮಿನಾಮಿ । ಪಾಕ್ಯಾ ।

ಅಧ । ಪಿತಾಽಇವ । ಸೂನವೇ । ವಿ । ವಃ । ಮದೇ । ಮೃಳ । ನಃ । ಅಭಿ । ಚಿತ್ । ವಧಾತ್ ।

ವಿವಕ್ಷಸೇ ॥ ೩ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಸೋಮ ಅಹಂ ತೇ ತುಭ್ಯಂ ವ್ರತಾನಿ ಯಾಗಾದಿಕರ್ಮಾಣಿ ಪಾಕ್ಯಾ ಪರಿಪಕ್ವಯಾ ಸರ್ವಾರ್ಥದರ್ಶಿನ್ಯಾ ಪ್ರಜ್ಞಯಾ । ಯದ್ವಾ । ಪಾಕ್ಯೇತಿ ವ್ರತವಿಶೇಷಣಮೇತತ್ । ಪಾಕ್ಯಾನಿ ಪರಿಪಕ್ವಾನಿ ।

ಪರಿನಿಷ್ಠಿತಾನೀತ್ಯರ್ಥಃ । ಪ್ರ ಮಿನಾಮಿ । ಪ್ರಹಿನಸ್ಮಿ । ಪ್ರಕರ್ಷೇಣ ಕರೋಮೀತ್ಯರ್ಥಃ । ಅಧಾಥ ಯಾಗಾನಂತರಂ ವಿ ವೋ ಮದೇ ತವ ವಿವಿಧೇ ಮದೇ ಸತಿ ನೋಽಸ್ಮಾನ್ಮೃಳ । ಸುಖಯ । ಅಭಿ ಚಿದ್ವಧಾದಾಭಿಮುಖ್ಯೇನ ಸ್ಥಿತ್ವಾ ಶತ್ರ್ವಾದಿವಧಾಚ್ಚಾಸ್ಮಾನ್ಪಾಲಯೇತಿ ಶೇಷಃ । ತತ್ರ ದೃಷ್ಟಾಂತಃ । ಪಿತೇವ ಸೂನವೇ । ಯಥಾ ಪಿತಾ ಪುತ್ರಾರ್ಥಂ ಸುಖಯತಿ ಸರ್ವಸ್ಮಾತ್ಪುತ್ರಮೇವ ಪಾಲಯತಿ ತದ್ವತ್ । ಯಸ್ಮಾತ್ಸುಖ್ಯಮಾನಃ ಪಾಲ್ಯಮಾನಶ್ಚಾಹಂ ಯುಷ್ಮದರ್ಥಂ ಪುನಃಪುನಃ ಸೋಮಯಾಗಂ ಕರೋಮಿ ತಸ್ಮಾನ್ಮಾಂ ಸುಖಯ ಪಾಲಯ ಚೇತ್ಯರ್ಥಃ । ಕಸ್ಮಾದೇವಮುಚ್ಯಸೇ । ಯಸ್ಮಾತ್ತ್ವಂ ವಿವಕ್ಷಸೇ ಮಹಾನ್ಭವಸಿ । ಮಹಾಂತಶ್ಚ ಭಕ್ತಾನ್ಸುಖಯಂತಿ ಪಾಲಯಂತಿ ಚೇತಿ ಯಾವತ್ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಅಹಂ**—ನಾನು । **ತೇ**—ನಿನ್ನನ್ನುದ್ದೇಶಿಸಿ । **ವ್ರತಾನಿ**—ಯಾಗಾದಿಕರ್ಮಗಳನ್ನು । **ಪಾಕ್ಯಾ**—ಪರಿಪಕ್ವವಾದ ಬುದ್ಧಿಯಿಂದ । **ಪ್ರ ಮಿನಾಮಿ**—ಅರ್ಪಿಸುತ್ತೇನೆ । **ಪಿತೇವ** ತಂದೆಯು । **ಸೂನವೇ**—ಮಗನಿಗೆ । ಸುಖವನ್ನುಂಟುಮಾಡುವಂತೆ । **ಅಧ**—ಯಾಗಾನಂತರ । **ವಃ**—ನಿನ್ನ । **ವಿ ಮದೇ**—ಅಧಿಕವಾದ ಹರ್ಷವುಂಟಾದಾಗ । **ನಃ**—ನಮ್ಮನ್ನು । **ಮೃಳ**—ಸುಖಪಡಿಸು । **ಅಭಿ ಚಿದ್ವಧಾತ್**—ಹಿಂಸಕರಾದ ಶತ್ರುಗಳಿಂದ ನಮ್ಮನ್ನು ರಕ್ಷಿಸು । **ವಿವಕ್ಷಸೇ**—ನೀನು ಮಹಾತ್ಮನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನಿನ್ನನ್ನುದ್ದೇಶಿಸಿ ಯಾಗಾದಿಕರ್ಮಗಳನ್ನು ಪರಿಪಕ್ವವಾದ ಬುದ್ಧಿಯಿಂದ ನಿರ್ವಹಿಸಿ ಅರ್ಪಿಸುತ್ತೇನೆ. ತಂದೆಯು ಮಗನಿಗೆ ಸುಖವನ್ನುಂಟುಮಾಡುವಂತೆ, ಯಾಗಾನಂತರ ನಿನಗೆ ಅಧಿಕವಾದ ಹರ್ಷವುಂಟಾದಾಗ ನಮ್ಮನ್ನು ಸುಖಪಡಿಸು. ಹಿಂಸಕರಾದ ಶತ್ರುಗಳಿಂದ ನಮ್ಮನ್ನು ರಕ್ಷಿಸು. ನೀನು ಮಹಾತ್ಮನಾಗಿದ್ದೀಯೆ.

## English Translation

Verily, Soma, I practice all your observances with fullness; and as a father to his son, so do you in your exhilaration make us happy; protect us from being killed (by our enemies); for you are mighty.

॥ ಸಂಹಿತಾಪಾಠಃ ॥

ಸಮು ಪ್ರ ಯಂತಿ ಧೀತಯಃ ಸರ್ಗಾಸೋಽವತಾँ ಇವ ।
ಕ್ರತುಂ ನಃ ಸೋಮ ಜೀವಸೇ ವಿ ವೋ ಮದೇ ಧಾರಯಾ ಚಮಸಾँ ಇವ ವಿವಕ್ಷಸೇ ॥ ೪ ॥

॥ ಪದಪಾಠಃ ॥

ಸಂ । ಊಂ ಇತಿ । ಪ್ರ । ಯಂತಿ । ಧೀತಯಃ । ಸರ್ಗಾಸಃ । ಅವತಾನ್ಽಇವ ।

ಕ್ರತುಂ । ನಃ । ಸೋಮ ಜೀವಸೇ । ವಿ । ವಃ । ಮದೇ । ಧಾರಯ । ಚಮಸಾನ್ಽಇವ ।

ವಿವಕ್ಷಸೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸೋಮ ಧೀತಯೋ ದೇವತಾಗುಣಾನ್ದಧತಿ ಗೃಹ್ಣಂತೀತಿ ಧೀತಯಃ ಸ್ತುತಯೋಽಸ್ಮದೀಯಾಃ ಸಮು ಸಂಭೂಯೈವ ಪ್ರ ಯಂತಿ । ಪ್ರಕೃಷ್ಟಯಾ ಗತ್ಯಾ ತ್ವಾಂ ಗಚ್ಛಂತಿ । ತತ್ರ ದೃಷ್ಟಾಂತಃ । ಸರ್ಗಾಸೋಽವತಾನಿವ । ವಿಸೃಜ್ಯಂತ ಉದಕಪಾನಾರ್ಥಮಿತಿ ಸರ್ಗಾ ಗೋಸಂಘಾಃ ಯಂತ್ರಸ್ಥಾ ಘಟಸಂಘಾ ವಾ । ತೇ ಯಥೋದಕಪಾನಾರ್ಥಮಾದಾನಾರ್ಥಂ ವಾವತಾನ್ । ಕೂಪನಾಮೈತತ್ । ಕೂಪಾನ್ಪ್ರತಿ ಗಚ್ಛಂತಿ ತದ್ವತ್ । ತ್ವಮಪ್ಯೇತಜ್ಜ್ಞಾತ್ವಾ ಕ್ರತುಂ ಯಾಗಾದಿಕಂ ಕರ್ಮ ಪ್ರಜ್ಞಾಂ ವಾ ನೋಽಸ್ಮಾಕಂ ಜೀವಸೇ ಚಿರಂಜೀವನಾಯ ಧಾರಯ । ಮಹತಾದರೇಣ ಸ್ಥಾಪಯ । ತತ್ರ ದೃಷ್ಟಾಂತಃ । ಚಮಸಾನಿವ ಯಥಾ ವಸ್ತವ ವಿಮದೇ ವಿವಿಧಸೋಮಜನ್ಯಮದೇ ಕರ್ತವ್ಯತ್ವೇನ ನಿಮಿತ್ತಭೂತೇ ಸತ್ಯಧ್ವರ್ಯುರ್ಹವಿರ್ಧಾನೇ ಮಹತಾ ಯತ್ನೇನ ಚಮಸಾನ್ಸೋಮಪಾತ್ರಾಣಿ ಸ್ಥಾಪಯತಿ ತದ್ವತ್ । ಕಸ್ಮಾದೇವಮುಚ್ಯಸೇ । ಯಸ್ಮಾತ್ತ್ವಂ ವಿವಕ್ಷಸೇ ಮಹಾನ್ಭವಸಿ । ಯದ್ವಾ । ಧೀತಯಃ । ಅಂಗುಲಿನಾಮೈತತ್ । ಧಯಂತಿ ಪಿಬಂತ್ಯಾಭಿರಿತಿ ಧೀತಯೋಽಂಗುಲಯಃ । ಹೇ ಸೋಮ ತ್ವಾಂ ಸಮು ಪ್ರ ಯಂತಿ । ಸಹೈವ ಪ್ರಕರ್ಷೇಣ ತ್ವಾಂ ಪ್ರಾಪ್ನುವಂತಿ । ಕಿಮಿವ ಅವತಾನಿವ । ಜಲೋದ್ಧರಣಾರ್ಥಂ ವಿಸೃಜ್ಯಂತ ಇತಿ ಸರ್ಗಾ ರಜ್ಜವಃ । ಯಥಾ ಕೂಪಾನ್ಪ್ರತಿ ಗಚ್ಛಂತಿ ತದ್ವತ್ । ತತಸ್ತ್ವಂ ನೋಽಸ್ಮಾಕಂ ಜೀವಸೇ ಚಿರಂಜೀವನಾಯ ಕ್ರತುಂ ಕರ್ಮ ಧಾರಯ । ಯಥಾ ಸಂಪೂರ್ಣಂ ಭವತಿ ತಥಾ ಪೂರಯ । ಕಿಮಿವ । ಯಥಾ ಚಮಸಾನ್ಸ್ವಯಂ ಪೂರಯಸಿ ತದ್ವತ್ .

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಸರ್ಗಾಸಃ**—ಉದಕಕ್ಕಾಗಿ ಬಿಡಲ್ಪಟ್ಟ ಗೋವುಗಳು । **ಅವತಾನಿವ**—ಕೊಳಗಳಲ್ಲಿಗೆ ವೇಗವಾಗಿ ಹೋಗುವಂತೆ । **ಧೀತಯಃ**—ನಮ್ಮ ಸ್ತುತಿಗಳು । **ಸಮು ಪ್ರಯಂತಿ**—ನಿನ್ನನ್ನು ವೇಗವಾಗಿ ಬಂದು ಸೇರುತ್ತವೆ । **ವಃ**—ನಿನ್ನ । **ವಿ ಮದೇ**—ಅಧಿಕವಾದ ಸಂತೃಪ್ತಿಗಾಗಿ । **ಚಮಸಾನಿವ** ಹವಿರ್ಯುಕ್ತವಾದ ಚಮಸಪಾತ್ರೆಗಳನ್ನು ಹಿಡಿಯುವಂತೆ । **ನಃ ಕ್ರತುಂ**—ನಮ್ಮ ಯಾಗವನ್ನು । **ಜೀವಸೇ**—ಆಯಸ್ಸಿನ ವೃದ್ಧಿಗಾಗಿ । **ಧಾರಯ**—ಎತ್ತಿ ಹಿಡಿ (ಉದ್ಧಾರಮಾಡು) **ವಿವಕ್ಷಸೇ**—ನೀನು ಮಹಾತ್ಮನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಉದಕಕ್ಕಾಗಿ ಬಿಡಲ್ಪಟ್ಟ ಗೋವುಗಳು (ಅಥವಾ ಉದಕಾರ್ಥವಾಗಿ ಬಾವಿಗೆ ಬಿಡಲ್ಪಟ್ಟ ಬಿಂದಿಗೆಗಳು) ನೇರವಾಗಿ ಬಾವಿಗೆ ಹೋಗಿ ಸೇರುವಂತೆ, ನಮ್ಮ ಸ್ತುತಿಗಳು ನಿನ್ನನ್ನು ವೇಗವಾಗಿ ಬಂದು

ಸೇರುತ್ತವೆ. ನಿನ್ನ ಅಧಿಕವಾದ ಸಂತೃಪ್ತಿಗಾಗಿ ಹವಿರ್ಯುಕ್ತವಾದ ಚಮಸಪಾತ್ರೆಗಳನ್ನು ನಾವು ಹಿಡಿಯುವಂತೆ, ನಮ್ಮ ಯಾಗವನ್ನು ನಮ್ಮ ಆಯುರ್ವೃದ್ಧಿಗಾಗಿ ಸ್ಥಾಪಿಸು. ನೀನು ಮಹಾತ್ಮನಾಗಿದ್ದೀಯೆ.

## English Translation

Our praises converge (Soma) towards you, as herds towards a well; establish our pious acts, Soma, for us to live (long), as (the priest sets up) the cups for your exhilaration; for you are mighty.

। ಸಂಹಿತಾಪಾಠಃ ।

ತವ ತ್ಯೇ ಸೋಮ ಶಕ್ತಿಭಿರ್ನಿಕಾಮಾಸೋ ವ್ಯೃಣ್ವಿರೇ ।
ಗೃತ್ಸಸ್ಯ ಧೀರಾಸ್ತವಸೋ ವಿ ವೋ ಮದೇ ವ್ರಜಂ ಗೋಮಂತಮಶ್ವಿನಂ ವಿವಕ್ಷಸೇ ॥ ೫ ॥

॥ ಪದಪಾಠಃ ॥

ತವ । ತ್ಯೇ । ಸೋಮ । ಶಕ್ತಿಽಭಿಃ । ನಿಽಕಾಮಾಸಃ । ವಿ । ಋಣ್ವಿರೇ ।
ಗೃತ್ಸಸ್ಯ । ಧೀರಾಃ । ತವಸಃ । ವಿ । ವಃ । ಮದೇ । ವ್ರಜಂ । ಗೋಽಮಂತಂ । ಅಶ್ವಿನಂ । ವಿವಕ್ಷಸೇ ॥ ೫ ॥

॥ ಸಾಯಣಭಾಷ್ಯಂ ॥

ನಿಕಾಮಸೋ ದೃಷ್ಟಾದೃಷ್ಟಫಲೇ ನಿಯತಕಾಮಾಸ್ತ್ಯೇ ತೇ ಪ್ರಸಿದ್ಧಾ ಧೀರಾ ಮೇಧಾವಿನ ಋತ್ವಿಜಃ ಶಕ್ತಿಭಿರ್ಯಾಗಾದಿಕರ್ಮಭಿಃ ಸಹ ಹೇ ಸೋಮ ಗೃತ್ಸಸ್ಯ ಮೇಧಾವಿನಸ್ತವಸೋ ಮಹತಸ್ತವ ವ್ಯೃಣ್ವಿರೇ । ವಿವಿಧಾಃ ಸ್ತುತೀರ್ಗಮಯಂತಿ । ಪ್ರಾಪಯಂತಿ । ಕುರ್ವಂತೀತ್ಯರ್ಥಃ । ಅತಃ ಕಾರಣಾದ್ವಿ ವೋ ಮದೇ ತವ ಸೋಮಪಾನಜನ್ಯವಿವಿಧಮದನಿಮಿತ್ತಭೂತೇ ಸತ್ಯಸ್ಮಭ್ಯಂ ಗೋಮಂತಂ ಗೋಸಹಿತಮಶ್ವಿನಮಶ್ವಸಹಿತಂ ವ್ರಜಂ ಗೋಷ್ಠಂ । ಸಾಮರ್ಥ್ಯಾನ್ಮಂದುರಾ ಲಭ್ಯತೇ । ಮಂದುರಾಂ ಚ ದೇಹೀತಿ ಶೇಷಃ । ಕಸ್ಮಾದೇವಮುಚ್ಯಸೇ । ಯಸ್ಮಾದ್ವಿವಕ್ಷಸೇ ಮಹಾನ್ಭವಸಿ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ । ನಿಕಾಮಾಸಃ—ಕರ್ಮಫಲದಲ್ಲಿ ಆಸಕ್ತಿಯುಳ್ಳವರೂ । ತ್ಯೇ—ಪ್ರಸಿದ್ಧರೂ । ಧೀರಾಃ—ಮೇಧಾವಿಗಳೂ ಆದ ಋತ್ವಿಕ್ಕುಗಳು । ಶಕ್ತಿಭಿಃ—ತಮ್ಮ ಕರ್ಮಗಳಿಂದ । ಗೃತ್ಸಸ್ಯ—ಮೇಧಾವಿಯೂ । ತವಸಃ—ಮಹಾತ್ಮನೂ ಆದ । ತವ—ನಿನ್ನನ್ನುದ್ದೇಶಿಸಿ । ವ್ಯೃಣ್ವಿರೇ—ಅನೇಕ ವಿಧವಾಗಿ

ಪ್ರಶಂಸಿಸುತ್ತಾರೆ । ವಃ—ನಿನ್ನ । ವಿ ಮದೇ—ಅತ್ಯಧಿಕವಾದ ಹರ್ಷದ ಕಾಲದಲ್ಲಿ । **ಗೋಮಂತಂ**—ಗೋವುಗಳಿಂದ ತುಂಬಿರುವುದೂ । **ಅಶ್ವಿನಂ**—ಅಶ್ವಭರಿತವಾದುದೂ ಆದ । **ವ್ರಜಂ**—ಕೊಟ್ಟಿಗೆಯನ್ನು ಒದಗಿಸು । **ವಿವಕ್ಷಸೇ**—ನೀನು ಮಹಾತ್ಮನಾಗಿದ್ದೀಯೆ.

। ಭಾವಾರ್ಥ ।

ಎಲೈ ಸೋಮದೇವನೇ, ಕರ್ಮಫಲದಲ್ಲಿ ಆಸಕ್ತಿಯುಳ್ಳವರೂ, ಪ್ರಸಿದ್ಧರೂ, ಮೇಧಾವಿಗಳೂ ಆದ ಋತ್ವಿಕ್ಕುಗಳು ತಮ್ಮ ಕರ್ಮಗಳಿಂದ ಮೇಧಾವಿಯೂ, ಮಹಾತ್ಮನೂ ಆದ ನಿನ್ನನ್ನು ಉದ್ದೇಶಿಸಿ ಅನೇಕ ವಿಧವಾಗಿ ಸ್ತುತಿಸುತ್ತಾರೆ. ನಿನ್ನ ಅತ್ಯಧಿಕವಾದ ಹರ್ಷದ ಕಾಲದಲ್ಲಿ ಗೋವುಗಳಿಂದ ತುಂಬಿರುವುದೂ, ಅಶ್ವಭರಿತವಾದುದೂ ಆದ ಕೊಟ್ಟಿಗೆಯನ್ನು ಒದಗಿಸು. ನೀನು ಮಹಾತ್ಮನಾಗಿದ್ದೀಯೆ.

## English Translation

The intelligent (priests), whose desires are fixed (on the fruit of good works), with sacred rites show forth (the praises) of you, Soma, who are wise and powerful; you, in your exhilaration, (grant us) pastures, abounding with cattle, and with horses; for you are mighty.

। ಸಂಹಿತಾಪಾಠಃ ।

ಪಶುಂ ನಃ ಸೋಮ ರಕ್ಷಸಿ ಪುರುತ್ರಾ ವಿಷ್ಠಿತಂ ಜಗತ್ ।
ಸಮಾಕೃಣೋಷಿ ಜೀವಸೇ ವಿ ವೋ ಮದೇ ವಿಶ್ವಾ ಸಂಪಶ್ಯನ್ಭುವನಾ
ವಿವಕ್ಷಸೇ ॥ ೬ ॥

। ಪದಪಾಠಃ ।

ಪಶುಂ । ನಃ । ಸೋಮ । ರಕ್ಷಸಿ । ಪುರುऽತ್ರಾ । ವಿऽಸ್ಥಿತಂ । ಜಗತ್ ।
ಸಂऽಆಕೃಣೋಷಿ । ಜೀವಸೇ । ವಿ । ವಃ । ಮದೇ । ವಿಶ್ವಾ । ಸಂऽಪಶ್ಯನ್ । ಭುವನಾ । ವಿವಕ್ಷಸೇ ॥ ೬ ॥

। ಸಾಯಣಭಾಷ್ಯಂ ।

ಹೇ ಸೋಮ ತ್ವಂ ನೋಽಸ್ಮದೀಯಂ ಪಶುಂ ದೇವಯಾಗಾರ್ಥಮುಪಾಕೃತಂ ರಕ್ಷಸಿ । ಪಾಲಯಸಿ । ನ ಕೇವಲಂ ಪಶುಂ ಕಿಂತು ಪುರುತ್ರಾ ಬಹುಧಾ ವಿಷ್ಠಿತಂ ಸುರನರತಿರ್ಯಗ್ಯೋನ್ಯಾದಿಧಾವೇನಾವಸ್ಥಿತಂ ಜಗಚ್ಚ ರಕ್ಷಸಿ । ಕಿಂಚ । ಸ ತ್ವಂ ಸಮಾಕೃಣೋಷಿ । ಜಗತೋ ವೃತ್ತಿಂ ಸಮ್ಯಗಾಕರೋಷೀತ್ಯರ್ಥಃ । ಕಿಮರ್ಥಂ । ಜೀವಸೇ ಜೀವನಾರ್ಥಂ । ಕಿಂ ಕುರ್ವನ್ । ವಿಶ್ವಾ ಭುವನಾ ವಿಶ್ವಾನಿ

ಭುವನಾನಿ ಭೂತಜಾತಾನಿ ಸಂಪಶ್ಯನ್ । ಕಿಮರ್ಥಮೇತದಾದಿಕಂ ಸರ್ವಂ ಕರೋಷಿ ಉಚ್ಯತೇ । ವಿ ವೋ ಮದೇ ಯುಷ್ಮಾಕಂ ಸರ್ವೇಷಾಂ ದೇವಾನಾಂ ವಿವಿಧಹವಿರ್ಜನ್ಯತೃಪ್ತ್ಯರ್ಥಂ । ಉಕ್ತಂ ಹಿ । ಇತಃಪ್ರದಾನಮುತ ದೇವಾ ಉಪ ಜೀವಂತ್ಯಮುತಃಪ್ರದಾನಂ ಮನುಷ್ಯಾ ಉಪಜೀವಂತಿ । ತೈ. ಸಂ. ೩-೨-೯-೭ । ಇತಿ । ಅತ ಏವ ತ್ವಂ ವಿವಕ್ಷಸೇ । ಮಹಾನ್ಭವಸಿ । ಮಹತಾಮೇತತ್ಸರ್ವಮುಚಿತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ । ನಃ—ನಮ್ಮ । ಪಶುಂ—ಗೋವುಗಳನ್ನು । ರಕ್ಷಸಿ—ಕಾಪಾಡುತ್ತೀಯೆ । ಪುರುತ್ರಾ—ಅನೇಕ ವಿಧವಾಗಿ । ವಿಷ್ಠಿತಂ—ಸ್ಥಾಪಿತವಾಗಿರುವ । ಜಗತ್—ಲೋಕವನ್ನು ಕಾಪಾಡುತ್ತೀಯೆ । ವಃ—ನಿನ್ನ ಮತ್ತು ಸಕಲ ದೇವತೆಗಳ । ವಿ ಮದೇ—ಅತಿಶಯವಾದ ಹರ್ಷಕ್ಕಾಗಿ । ವಿಶ್ವಾ—ಸಮಸ್ತವಾದ । ಭುವನಾ—ಲೋಕಗಳನ್ನು । ಸಂಪಶ್ಯನ್—ನೋಡುತ್ತ । ಜೀವಸೇ—ಜೀವನಾರ್ಥವಾಗಿ । ಸಮಾಕೃಣೋಷಿ—ಸಿದ್ಧಪಡಿಸುತ್ತೀಯೆ । ವಿವಕ್ಷಸೇ—ನೀನು ಮಹಾತ್ಮನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನಮ್ಮ ಗೋವುಗಳನ್ನು ನೀನು ಕಾಪಾಡುತ್ತೀಯೆ. ಅನೇಕ ವಿಧವಾಗಿ ಸ್ಥಾಪಿತವಾಗಿರುವ ಲೋಕವನ್ನೂ ಕಾಪಾಡುತ್ತೀಯೆ. ನಿನ್ನ ಮತ್ತು ಸಕಲದೇವತೆಗಳ ಅತಿಶಯವಾದ ಹರ್ಷಕ್ಕಾಗಿ ಸಮಸ್ತವಾದ ಲೋಕಗಳನ್ನು ನೋಡುತ್ತ ಜೀವನಾರ್ಥವಾಗಿ ಎಲ್ಲವನ್ನು ಸಿದ್ಧಪಡಿಸುತ್ತೀಯೆ. ನೀನು ಮಹಾತ್ಮನಾಗಿದ್ದೀಯೆ.

English Translatian

You protect our cattle, Soma, and the variously occupied world contemplating all existing beings; you prepare (the world) for them to live in for your exhilaration; for you are mighty.

॥ ಸಂಹಿತಾಪಾಠಃ ॥

ತ್ವಂ ನಃ ಸೋಮ ವಿಶ್ವತೋ ಗೋಪಾ ಅದಾಭ್ಯೋ ಭವ ।
ಸೇಧ ರಾಜನ್ನಪ ಸ್ರಿಧೋ ವಿ ವೋ ಮದೇ ಮಾ ನೋ ದುಃಶಂಸ ಈಶತಾ
ವಿವಕ್ಷಸೇ ॥ ೭ ॥

॥ ಪದಪಾಠಃ ॥

ತ್ವಂ । ನಃ । ಸೋಮ । ವಿಶ್ವತಃ । ಗೋಪಾಃ । ಅದಾಭ್ಯಃ । ಭವ ।
ಸೇಧ । ರಾಜನ್ । ಅಪ । ಸ್ರಿಧಃ । ವಿ । ವಃ । ಮದೇ । ಮಾ । ನಃ । ದುಃऽಶಂಸಃ । ಈಶತ । ವಿವಕ್ಷಸೇ ॥

॥ ಸಾಯಣಭಾಷ್ಯಂ ॥

ಹೇ ಸೋಮ ಅದಾಭ್ಯಃ ಕೇನಾಪ್ಯಹಿಂಸ್ಯಸ್ತ್ವಂ ವಿಶ್ವತಃ ಸರ್ವತೋ ನೋಽಸ್ಮಾಕಂ ಗೋಪಾ ರಕ್ಷಿತಾ ಭವ । ಅಪಿ ಚ । ಹೇ ರಾಜನ್ರಾಜಮಾನ ಸೋಮ ತ್ವಂ ಸ್ರಿಧೋಽಸ್ಮಾಕಮುಪಕ್ಷಪಯಿತ್ರ್ಣ್‌ನಪ ಸೇಧ । ಅಸ್ಮತ್ತೋಽಪಗಮಯ । ಅಪಜಹಿ ವಾ । ನೋಽಸ್ಮಾಕಂ ದುಃಶಂಸೋ ವಿದ್ಯಮಾನಾನಾಮವಿದ್ಯಮಾನಾನಾಂ ಕರ್ಮಣಾಂ ಶಂಸಿತಾ ಪ್ರಖ್ಯಾಪಯಿತಾ ಮೇಶತ । ಈಶಿತಾ ಮಾ ಭೂತ್ । ತವ ಪ್ರಸಾದಾದಸ್ಮಾಕಮುಪವಕ್ತಾ ಕಶ್ಚಿದಪಿ ಮಾ ಭೂದಿತ್ಯರ್ಥಃ । ಕಿಮರ್ಥಮೇತತ್ಸರ್ವಂ ಪ್ರಾರ್ಥ್ಯತೇ । ವಿ ವೋ ಮದೇ ತವ ವಿವಿಧಸೋಮಾದಿಹವಿರ್ಜನ್ಯತೃಪ್ತ್ಯರ್ಥಂ । ಅತೋ ವಿವಕ್ಷಸೇ । ತ್ವಂ ಮಹಾನ್ಭವಸಿ ।

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಅದಾಭ್ಯಃ**—ಯಾರಿಂದಲೂ ಹಿಂಸಿತನಾಗದ । **ತ್ವಂ**—ನೀನು । **ವಿಶ್ವತಃ**—ಎಲ್ಲ ಕಡೆಗಳಲ್ಲಿಯೂ । **ನಃ**—ನಮಗೆ । **ಗೋಪಾಃ**—ರಕ್ಷಕನಾಗಿ । **ಭವ**—ಆಗಿರು । **ವಃ**—ನಿನ್ನ ಮತ್ತು ದೇವತೆಗಳ । **ವಿ ಮದೇ**—ಅತಿಶಯವಾದ ಹರ್ಷಸಂಪಾದನೆಗಾಗಿ । **ರಾಜನ್**—ಪ್ರಕಾಶಮಾನನಾದ ಎಲೈ ಸೋಮನೇ। **ಸ್ರಿಧಃ**—ನಮ್ಮ ಹಿಂಸಕರನ್ನು । **ಅಪ ಸೇಧ**—ದೂರಕ್ಕೆ ಓಡಿಸು । **ನಃ**—ನಮ್ಮ ಮೇಲೆ । **ದುಃಶಂಸಃ**—ಕೇಡನ್ನು ಬಯಸುವವನು । **ಮಾ ಈಶತ**—ಪ್ರಭುತ್ವವನ್ನು ಮಾಡದಿರಲಿ । **ವಿವಕ್ಷಸೇ**—ನೀನು ಮಹಾತ್ಮನಾಗಿದ್ದೀಯೆ.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಸೋಮದೇವನೆ, ಯಾರಿಂದಲೂ ಹಿಂಸಿತನಾಗದ ನೀನು ಎಲ್ಲ ಕಡೆಗಳಲ್ಲಿಯೂ ನಮಗೆ ರಕ್ಷಕನಾಗಿರು. ನಿನ್ನ ಮತ್ತು ದೇವತೆಗಳ ಅತಿಶಯವಾದ ಹರ್ಷಸಂಪಾದನೆಗಾಗಿ ನಮ್ಮ ಹಿಂಸಕರನ್ನು ದೂರಕ್ಕೆ ಓಡಿಸು. ನಮಗೆ ಕೇಡನ್ನು ಬಯಸುವವನು ನಮ್ಮ ಮೇಲೆ ಪ್ರಭುತ್ವವನ್ನು ಮಾಡದಿರಲಿ. ನೀನು ಮಹಾತ್ಮನಾಗಿದ್ದೀಯೆ.

English Translation

Be on all sides our preserver, Soma, you, who are unassailable; drive away, monarch, our adversaries in your exhilaration, and let no columniator rule over us; for you are mighty.

॥ ಸಂಹಿತಾಪಾಠಃ ॥

ತ್ವಂ ನಃ ಸೋಮ ಸುಕ್ರತುರ್ವಯೋಧೇಯಾಯ ಜಾಗೃಹಿ ।
ಕ್ಷೇತ್ರವಿತ್ತರೋ ಮನುಷೋ ವಿ ವೋ ಮದೇ ದ್ರುಹೋ ನಃ ಪಾಹ್ಯಂಹಸೋ ವಿವಕ್ಷಸೇ ॥ ೮ ॥

॥ ಪದಪಾಠಃ ॥

ತ್ವಂ । ನಃ । ಸೋಮ । ಸುऽಕ್ರತುಃ । ವಯಃऽಧೇಯಾಯ । ಜಾಗೃಹಿ ।

ಕ್ಷೇತ್ರವಿತ್ऽತರಃ । ಮನುಷಃ । ವಿ । ವಃ । ಮದೇ । ದ್ರುಹಃ । ನಃ । ಪಾಹಿ । ಅಂಹಸಃ । ವಿವಕ್ಷಸೇ ॥

॥ ಸಾಯಣಭಾಷ್ಯಂ ॥

ಹೇ ಸೋಮ ಸುಕ್ರತುಃ ಶೋಭನಪ್ರಜ್ಞಃ ಕ್ಷೇತ್ರವಿತ್ತರಃ ಕ್ಷೇತ್ರಸ್ಯಾತಿಶಯೇನ ಲಂಭಕಸ್ತ್ವಂ ನೋಽಸ್ಮಾಕಂ ವಯೋಧೇಯಾಯಾನ್ನದಾನಾಯ ಜಾಗೃಹಿ । ಕಿಂಚ ದ್ರುಹೋ ದ್ರೋಗ್ಧುರ್ಮನುಷೋ ಮನುಷ್ಯಾಚ್ಛತ್ರೋಃ ಸಕಾಶಾನ್ನೋಽಸ್ಮಾನ್ಪಾಹಿ । ರಕ್ಷ । ಅಂಹಸಃ ಪಾಪಾಚ್ಚ ನೋಽಸ್ಮಾನ್ಪಾಹಿ । ಕಿಮರ್ಥಂ । ವಿ ವೋ ಮದೇ । ತವ ಸೋಮಾದಿಹವಿರ್ಜನ್ಯತೃಪ್ತ್ಯರ್ಥಮಿತ್ಯರ್ಥಃ । ವಿವಕ್ಷಸೇ । ತ್ವಂ ಮಹಾನ್ಭವಸಿ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ । ಸುಕ್ರತುಃ—ಉತ್ತಮವಾದ ಪ್ರಜ್ಞೆಯುಳ್ಳವನೂ । ಕ್ಷೇತ್ರವಿತ್ತರಃ—ಶ್ರೇಷ್ಠವಾದ ಕ್ಷೇತ್ರಗಳನ್ನೊದಗಿಸುವವನೂ ಆದ । ತ್ವಂ—ನೀನು । ನಃ—ನಮಗೆ । ವಯೋಧೇಯಾಯ—ಅನ್ನದಾನಕ್ಕಾಗಿ । ಜಾಗೃಹಿ—ಎಚ್ಚರವಾಗಿರು । ವಃ—ನಿನ್ನ । ವಿ ಮದೇ—ಅತಿಶಯವಾದ ಹರ್ಷಕಾಲದಲ್ಲಿ । ದ್ರುಹಃ—ನಮಗೆ ಕೇಡನ್ನು ಬಯಸುವ । ಮನುಷಃ—ಮಾನವನಾದ ಶತ್ರುವಿನಿಂದ । ನಃ—ನಮ್ಮನ್ನು । ಪಾಹಿ—ರಕ್ಷಿಸು । ಅಂಹಸಃ—ಪಾಪಗಳಿಂದಲೂ ರಕ್ಷಿಸು । ವಿವಕ್ಷಸೇ—ನೀನು ಮಹಾತ್ಮನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೆ, ಉತ್ತಮವಾದ ಪ್ರಜ್ಞೆಯುಳ್ಳವನೂ, ಶ್ರೇಷ್ಠವಾದ ಕ್ಷೇತ್ರಗಳನ್ನೊದಗಿಸುವವನೂ ಆದ ನೀನು ನಮಗೆ ಅನ್ನದಾನಕ್ಕಾಗಿ ಎಚ್ಚರವಾಗಿರು. ನಿನ್ನ ಅತಿಶಯವಾದ ಹರ್ಷಕಾಲದಲ್ಲಿ ನಮಗೆ ಕೇಡನ್ನು ಬಯಸುವ ಮಾನವನಾದ ಶತ್ರುವಿನಿಂದ ನಮ್ಮನ್ನು ರಕ್ಷಿಸು. ಪಾಪಗಳಿಂದಲೂ ರಕ್ಷಿಸು. ನೀನು ಮಹಾತ್ಮನಾಗಿದ್ದೀಯೆ.

## English Translation

Soma, author of good works, liberal granter of fields, be vigilant in supplying us with food ; and in your exhilaration preserve us from oppressive men, (and) from sin ; for you are mighty.

॥ ಸಂಹಿತಾಪಾಠಃ ॥

ತ್ವಂ ನೋ ವೃತ್ರಹಂತಮೇಂದ್ರಸ್ಯೇಂದೋ ಶಿವಃ ಸಖಾ ।

ಯತ್ಸೀಂ ಹವಂತೇ ಸಮಿಥೇ ವಿ ವೋ ಮದೇ ಯುಧ್ಯಮಾನಾಸ್ತೋಕಸಾತೌ
ವಿವಕ್ಷಸೇ ॥ ೯ ॥

॥ ಪದಪಾಠಃ ॥

ತ್ವಂ । ನಃ । ವೃತ್ರಹನ್ಽತಮ । ಇಂದ್ರಸ್ಯ । ಇಂದೋ ಇತಿ । ಶಿವಃ । ಸಖಾ ।
ಯತ್ । ಸೀಂ । ಹವಂತೇ । ಸಂಽಇಥೇ । ವಿ । ವಃ । ಮದೇ । ಯುಧ್ಯಮಾನಾಃ । ತೋಕಽಸಾತೌ ।
ವಿವಕ್ಷಸೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ವೃತ್ರಹಂತಮ ಶತ್ರೂಣಾಮತಿಶಯೇನ ಹಂತರ್ಹೇ ಇಂದೋ ಹೇ ಸೋಮ ಯಸ್ತ್ವಮಿಂದ್ರಸ್ಯ ಶಿವಃ ಸುಖಕರಃ ಸಖಾ ಮಿತ್ರಭೂತೋಽಸಿ ಸ ತ್ವಂ ನೋಽಸ್ಮಾನ್ಪಾಹೀತಿ ಶೇಷಃ । ಕದೇತಿ ಉಚ್ಯತೇ । ತೋಕಸಾತೌ । ತೋಕ ಇತ್ಯಪತ್ಯನಾಮ ॥ ಸಾತಿಃ । ಷಣು ದಾನ ಇತ್ಯಸ್ಮಾದ್ಧಾತೋ ರೂಪಂ । ದೀಯತೇಽಸ್ಮಿನ್ನಪತ್ಯಮಿತಿ ತೋಕಸಾತಿಃ ಸಂಗ್ರಾಮವಿಶೇಷಣಂ । ತಸ್ಮಿನ್ ಅತಿಮಹತೀತ್ಯರ್ಥಃ । ಸಮಿಥೇ ಸಂಗ್ರಾಮೇ ಯುಧ್ಯಮಾನಾ ಯುದ್ಧಂ ಕುರ್ವಾಣಾಃ ಶತ್ರುಜನಾಃ ಸೀಂ ಸರ್ವತೋ ಯದ್ಯದಾ ಹವಂತೇ ಯುದ್ಧಾರ್ಥಮಸ್ಮಾನಾಹ್ವಯಂತಿ । ತದಾಸ್ಮಾಕಂ ರಕ್ಷಿತಾ ಭವೇತ್ಯರ್ಥಃ । ಕಸ್ಮಿನ್ನಿಮಿತ್ತೇ । ವಿ ವೋ ಮದೇ ತವ ವಿವಿಧೇಹವಿರ್ಜನ್ಯಹರ್ಷನಿಮಿತ್ತೇ । ವಿವಕ್ಷಸೇ । ತ್ವಂ ಮಹಾನ್ಭವಸಿ । ಮಹತಾಂ ಹಿ ಪಾಲನಂ ಯುಕ್ತಮೇವೇತಿ ।

॥ ಪ್ರತಿಪದಾರ್ಥ ॥

**ವೃತ್ರಹಂತಮ**—ಶತ್ರುನಾಶಕನಾದ । **ಇಂದೋ**—ಎಲೈ ಸೋಮದೇವನೆ । **ತ್ವಂ**—ನೀನು । **ಇಂದ್ರಸ್ಯ**—ಇಂದ್ರನಿಗೆ । **ಶಿವಃ**—ಮಂಗಳಕರನಾದ । **ಸಖಾ**—ಮಿತ್ರನಾಗಿದ್ದೀಯೆ । **ತೋಕಸಾತೌ**—ಪುತ್ರಪ್ರದವಾದ । **ಸಮಿಥೇ**—ಯುದ್ಧದಲ್ಲಿ । **ಯುಧ್ಯಮಾನಾಃ**—ಯುದ್ಧಮಾಡತಕ್ಕ ಶತ್ರುಗಳು । **ಸೀಂ**—ಸರ್ವತ್ರ । **ಯತ್**—ಯಾವಾಗ । **ಹವಂತೇ**—ಯುದ್ಧಾರ್ಥವಾಗಿ ಕರೆಯುವರೋ ಆಗ । **ವಃ**—ನಿನ್ನ । **ವಿ ಮದೇ**—ಅತಿಶಯವಾದ ಹರ್ಷಕಾಲದಲ್ಲಿ । **ನಃ**—ನಮ್ಮನ್ನು ರಕ್ಷಿಸು । **ವಿವಕ್ಷಸೇ**—ನೀನು ಮಹಾತ್ಮನಾಗಿದ್ದಿಯೇ.

॥ ಭಾವಾರ್ಥ ॥

ಶತ್ರುನಾಶಕನಾದ ಎಲೈ ಸೋಮದೇವನೇ, ನೀನು ಇಂದ್ರನಿಗೆ ಮಂಗಳಕರನಾದ ಮಿತ್ರನಾಗಿದ್ದೀಯೆ. ಪುತ್ರಪ್ರದವಾದ ಯುದ್ಧದಲ್ಲಿ ಯುದ್ಧಮಾಡತಕ್ಕ ಶತ್ರುಗಳು ಸರ್ವತ್ರ ಸೇರಿ ಯಾವಾಗ ಯುದ್ಧಾರ್ಥವಾಗಿ ಕರೆಯುವರೋ ಆಗ ನಿನ್ನ ಅತಿಶಯವಾದ ಹರ್ಷಕಾಲದಲ್ಲಿ ನಮ್ಮನ್ನು ರಕ್ಷಿಸು. ನೀನು ಮಹಾತ್ಮನಾಗಿದ್ದೀಯೆ.

## English Translation

Utter destroyer of enemies, Soma, who are the auspicious friend of Indra, (protect us), when hostile warriors everywhere call us to the combat that bestows offspring; by your exhilaration preserve us); for you are mighty.

॥ ಸಂಹಿತಾಪಾಠಃ ॥

ಅಯಂ ಘ ಸ ತುರೋ ಮದ ಇಂದ್ರಸ್ಯ ವರ್ಧತ ಪ್ರಿಯಃ ।
ಅಯಂ ಕಕ್ಷೀವತೋ ಮಹೋ ವಿ ವೋ ಮದೇ ಮತಿಂ ವಿಪ್ರಸ್ಯ ವರ್ಧಯ-
ದ್ವಿವಕ್ಷಸೇ ॥ ೧೦ ॥

॥ ಪದಪಾಠಃ ॥

ಅಯಂ । ಘ । ಸಃ । ತುರಃ । ಮದಃ । ಇಂದ್ರಸ್ಯ । ವರ್ಧತ । ಪ್ರಿಯಃ ।
ಅಯಂ । ಕಕ್ಷೀವತಃ । ಮಹಃ । ವಿ । ವಃ । ಮದೇ । ಮತಿಂ । ವಿಪ್ರಸ್ಯ । ವರ್ಧಯತ್ । ವಿವಕ್ಷಸೇ ॥

॥ ಸಾಯಣಭಾಷ್ಯಂ ॥

ಅಯಂ ಘೇದೃಶಃ ಖಲು ಸ ಪ್ರಸಿದ್ಧೋಽಸ್ಮಾಭಿರಭಿಷುತಃ ಸೋಮಸ್ತುರಃ ಸರ್ವಕಾರ್ಯೇಷು ತ್ವರಣಶೀಲೋ ಮದೋ ಮದಕರಃ ಪ್ರಿಯ ಇಂದ್ರಸ್ಯ ತರ್ಪಯಿತಾ ವರ್ಧತ । ಅಸ್ಮದೀಯಾಂ ಮತಿಮವರ್ಧಯತ್ । ಅಯಂ ಸೋಮಃ ಕಕ್ಷೀವತ ಏತದಾಖ್ಯಸ್ಯರ್ಷೇಃ । ಕೀದೃಶಸ್ಯ । ಮಹೋ ಮಹತೋ ವಿಪ್ರಸ್ಯ ಮೇಧಾವಿನಃ ಮತಿಂ ಪ್ರಜ್ಞಾಂ ವರ್ಧಯತ್ । ಅವರ್ಧಯತ್ । ತದ್ವದಸ್ಮಾಕಮಪಿ ಮತಿಮವರ್ಧಯದಿತ್ಯರ್ಥಃ । ಶಿಷ್ಟಂ ಗತಂ ॥

॥ ಪ್ರತಿಪದಾರ್ಥ ॥

**ಸಃ**—ಪ್ರಸಿದ್ಧನಾದ । **ಅಯಂ ಘ**—ಈ ಸೋಮದೇವನೇ । **ತುರಃ**—ವೇಗವಂತನೂ । **ಮದಃ**—ಹರ್ಷಕಾರಕನೂ । **ಪ್ರಿಯಃ**—ಪ್ರೀತಿಪಾತ್ರನೂ । **ಇಂದ್ರಸ್ಯ**—ಇಂದ್ರನಿಗೆ ತೃಪ್ತಿಕಾರಕನೂ ಆಗಿ । **ವರ್ಧತ**—ನಮ್ಮ ಪ್ರಜ್ಞೆಯನ್ನು ಬೆಳೆಸಿದನು । **ಅಯಂ**—ಇದೇ ಸೋಮದೇವನು । **ಮಹಃ**—ಮಹಾತ್ಮನೂ । **ವಿಪ್ರಸ್ಯ**—ಮೇಧಾವಿಯೂ ಆದ । **ಕಕ್ಷೀವತಃ**—ಕಕ್ಷೀವಂತನ । **ಮತಿಂ**—ಪ್ರಜ್ಞೆಯನ್ನು । **ವರ್ಧಯತ್**—ಬೆಳೆಸಿದನು (ಎಲೈ ಸೋಮನೇ) । **ವಃ**—ನಿನ್ನ । **ವಿ ಮದೇ**—ಹರ್ಷಕಾಲದಲ್ಲಿ (ನಮ್ಮ ವಿವೇಕವನ್ನು ವೃದ್ಧಿಮಾಡು) । **ವಿವಕ್ಷಸೇ**—ನೀನು ಮಹಾತ್ಮನಾಗಿದ್ದೀಯೆ.

॥ ಭಾವಾರ್ಥ ॥

ಪ್ರಸಿದ್ಧನಾದ ಈ ಸೋಮದೇವನೇ, ವೇಗವಂತನೂ, ಹರ್ಷಕಾರಕನೂ, ಪ್ರೀತಿಪಾತ್ರನೂ, ಇಂದ್ರನಿಗೆ ತೃಪ್ತಿಕಾರಕನೂ ಆಗಿ ನಮ್ಮ ಪ್ರಜ್ಞೆಯನ್ನು ಬೆಳೆಸಿದನು. ಇದೇ ಸೋಮದೇವನು ಮಹಾತ್ಮನೂ, ಮೇಧಾವಿಯೂ ಆದ ಕಕ್ಷೀವಂತನ ಪ್ರಜ್ಞೆಯನ್ನು ಬೆಳೆಸಿದನು. ಎಲೈ ಸೋಮನೇ, ನಿನ್ನ ಹರ್ಷಕಾಲದಲ್ಲಿ ನಮ್ಮ ವಿವೇಕವನ್ನು ವೃದ್ಧಿಮಾಡು. ನೀನು ಮಹಾತ್ಮನಾಗಿದ್ದೀಯೆ.

English Translation

Such is the Soma which, swiftly moving, exhilarating, acceptable to Indra, has given increase (to our understanding); it has increased the intelligence of the great and pious Kakshivat in your exhilaration; for you are mighty.

॥ ಸಂಹಿತಾಪಾಠಃ ॥

ಅಯಂ ವಿಪ್ರಾಯ ದಾಶುಷೇ ವಾಜಾಁ ಇಯರ್ತಿ ಗೋಮತಃ ।

ಅಯಂ ಸಪ್ತಭ್ಯ ಆ ವರಂ ವಿ ವೋ ಮದೇ ಪ್ರಾಂಧಂ ಶ್ರೋಣಂ ಚ

ತಾರಿಷದ್ವಿವಕ್ಷಸೇ ॥ ೧೧ ॥

॥ ಪದಪಾಠಃ ॥

ಅಯಂ । ವಿಪ್ರಾಯ । ದಾಶುಷೇ । ವಾಜಾನ್ । ಇಯರ್ತಿ । ಗೋಽಮತಃ ।

ಅಯಂ । ಸಪ್ತಽಭ್ಯಃ । ಆ । ವರಂ । ವಿ । ವಃ । ಮದೇ । ಪ್ರ । ಅಂಧಂ । ಶ್ರೋಣಂ । ಚ । ತಾರಿಷತ್ ।

ವಿವಕ್ಷಸೇ ॥ ೧೧ ॥

॥ ಸಾಯಣಭಾಷ್ಯಂ ॥

ಅಯಂ ಸೋಮೋ ವಿಪ್ರಾಯ ಮೇಧಾವಿನೇ ದಾಶುಷೇ ಹವಿರ್ದತ್ತವತೇ ಯಜಮಾನಾಯ ಗೋಮತಃ ಪಶುಭಿರ್ಯುಕ್ತಾನಿ ವಾಜಾನನ್ನಾನೀಯರ್ತಿ । ಪ್ರೇರಯತಿ । ಪ್ರಯಚ್ಛತೀತ್ಯರ್ಥಃ । ಕಿಂಚಾಯಮೇವ ಸೋಮಃ ಸಪ್ತಭ್ಯೋ ಹೋತೃಭ್ಯೋ ವರಂ ವರಣೀಯಂ ಧನಮಾ । ಪ್ರಯಚ್ಛತಿ । ಅಂಧಂ ನೇತ್ರಹೀನಂ ದೀರ್ಘತಮಸಮೃಷಿಂ ಚಕ್ಷುಃಪ್ರದಾನೇನ ಶ್ರೋಣಂ ಚ ಪಂಗುಂ ಪರಾವೃಜಮೃಷಿಂ ಚರಣಪ್ರದಾನೇನ ಏವಮುಭಾವೃಷೀ ಪ್ರ ತಾರಿಷತ್ । ಪ್ರಕರ್ಷೇಣ ವರ್ಧಿತವಾನ್ । ಶಿಷ್ಟಂ ಸ್ಪಷ್ಟಂ ॥

॥ ಪ್ರತಿಪದಾರ್ಥ ॥

**ಅಯಂ**—ಈ ಸೋಮದೇವನು । **ವಿಪ್ರಾಯ**—ಮೇಧಾವಿಯಾದ । **ದಾಶುಷೇ**—ಯಜಮಾನನಿಗೆ । **ಗೋಮತಃ**—ಪಶುಗಳಿಂದ ಕೂಡಿದ । **ವಾಜಾನ್**—ಅನ್ನಗಳನ್ನು । **ಇಯರ್ತಿ**—ಒದಗಿಸುತ್ತಾನೆ । **ಅಯಂ**—ಈ ಸೋಮದೇವನು । **ಸಪ್ತಭ್ಯಃ**—ಸಪ್ತಹೋತೃಗಳಿಗೂ । **ವರಂ**—ಉತ್ತಮವಾದ ಧನವನ್ನು । **ಆ**—ಒದಗಿಸುತ್ತಾನೆ । **ವಃ**—ತನ್ನ । **ವಿ ಮದೇ**—ಅತಿಶಯವಾದ ಹರ್ಷಕಾಲದಲ್ಲಿ । **ಅಂಧಂ**—ಕುರುಡನಾದ ದೀರ್ಘತಮಸ್ಸೆಂಬ ಋಷಿಯನ್ನೂ । **ಶ್ರೋಣಂ ಚ**—ಕುಂಟನಾದ ಪರಾವೃಕ್ಕೆಂಬ ಋಷಿಯನ್ನೂ । **ಪ್ರ ತಾರಿಷತ್**—ರಕ್ಷಿಸಿದನು (ಎಲೈ ಸೋಮದೇವನೇ) । **ವಿವಕ್ಷಸೇ**—ನೀನು ಮಹಾತ್ಮನಾಗಿದ್ದೀಯೆ

॥ ಭಾವಾರ್ಥ ॥

ಈ ಸೋಮದೇವನು ತನ್ನ ಅತಿಶಯವಾದ ಹರ್ಷಕಾಲದಲ್ಲಿ ಮೇಧಾವಿಯಾದ ಯಜಮಾನನಿಗೆ ಪಶುಗಳಿಂದ ಕೂಡಿದ ಅನ್ನಗಳನ್ನು ಒದಗಿಸುತ್ತಾನೆ. ಸಪ್ತಹೋತೃಗಳಿಗೂ ಉತ್ತಮವಾದ ಧನವನ್ನು ಒದಗಿಸುತ್ತಾನೆ. ಕುರುಡನಾದ ದೀರ್ಘತಮಸ್ಸೆಂಬ ಋಷಿಯನ್ನೂ ಕುಂಟನಾದ ಪರಾವೃಕ್ಕೆಂಬ ಋಷಿಯನ್ನೂ ರಕ್ಷಿಸಿದನು. ಎಲೈ ಸೋಮನೇ, ನೀನು ಮಹಾತ್ಮನಾಗಿದ್ದೀಯೆ.

English Translation

This Soma bestows, upon the pious donor of the libation, food with cattle; it gives wealth to the seven (priests) in the manifold exhilaration; it has restored (their faculties) to the blind, and the lame.

## ಇಪ್ಪತ್ತಾರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಪ್ರ ಹೀತಿ ನವರ್ಚಂ ದಶಮಂ ಸೂಕ್ತಮಾನುಷ್ಟುಭಂ ಪೂಷದೇವತಾಕಂ । ಆದ್ಯಾಚತುರ್ಥ್ಯಾವುಷ್ಣಿಹೌ । ಋಷಿಃ ಪೂರ್ವವತ್ । ತಥಾ ಚಾನುಕ್ರಾಂತಂ । ಪ್ರ ಹಿ ನವ ಪೌಷ್ಣಮಾನುಷ್ಟುಭಮಾದ್ಯಾಚತುರ್ಥ್ಯಾ ಉಷ್ಣಿಹಾವಿತಿ । ಗತೋ ವಿನಿಯೋಗಃ ॥**

ಅನುವಾದವು—**ಪ್ರ ಹಿ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿಯು ಹಿಂದಿನಸೂಕ್ತದಂತೆಯೇ. ಪೂಷನು ದೇವತೆಯು; ಅನುಷ್ಟುಪ್‌ಛಂದಸ್ಸು. ಆದರೆ ಮೊದಲನೆಯ ಮತ್ತು ನಾಲ್ಕನೆಯ ಋಕ್ಕುಗಳು ಉಷ್ಣಿಕ್‌ಛಂದಸ್ಸವು ಅನುಕ್ರಮಣಿಕೆಯಲ್ಲಿ—ಪ್ರ ಹಿ **ನವ ಪೌಷ್ಣಮಾನುಷ್ಟುಭಮಾದ್ಯಾಚತುರ್ಥ್ಯಾ ಉಷ್ಣಿಹೌ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೨೬

ಮಂಡಲ—೧೦ । ಅನುವಾಕ—೨ । ಸೂಕ್ತ—೨೬ ।
ಅಷ್ಟಕ—೭ । ಅಧ್ಯಾಯ—೭ । ವರ್ಗ—೧೩, ೧೪ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ।
ಋಷಿಃ—ವಿಮದ ಐಂದ್ರಃ ಪ್ರಾಜಾಪತ್ಯೋ ವಾ ವಸುಕೃದ್ವಾ ವಾಸುಕ್ರಃ ।
ದೇವತಾ—ಪೂಷಾ ।
ಛಂದಃ—೧-೪. ಉಷ್ಣಿಕ್ । ೨, ೩, ೫-೯. ಅನುಷ್ಟುಪ್ ।

। ಸಂಹಿತಾಪಾಠಃ ।

ಪ್ರ ಹ್ಯಚ್ಛಾ ಮನೀಷಾಃ ಸ್ಪಾರ್ಹಾ ಯಂತಿ ನಿಯುತಃ ।
ಪ್ರ ದಸ್ರಾ ನಿಯುದ್ರಥಃ ಪೂಷಾ ಅವಿಷ್ಟು ಮಾಹಿನಃ ॥ ೧ ॥

॥ ಪದಪಾಠಃ ॥

ಪ್ರ । ಹಿ । ಅಚ್ಛ । ಮನೀಷಾಃ । ಸ್ಪಾರ್ಹಾಃ । ಯಂತಿ । ನಿಽಯುತಃ ।
ಪ್ರ । ದಸ್ರಾ । ನಿಯುತ್ಽರಥಃ । ಪೂಷಾ । ಅವಿಷ್ಟು । ಮಾಹಿನಃ ॥ ೧ ॥

। ಸಾಯಣಭಾಷ್ಯಂ ।

ಹಿ ಯಸ್ಮಾತ್ಕಾರಣಾನ್ಮನೀಷಾ ಅಸ್ಮದೀಯಾಃ ಸ್ತುತಿಲಕ್ಷಣಾ ವಾಚೋಽಚ್ಛ ಗುಣಗ್ರಹಣ-ದ್ವಾರೇಣ ಪೂಷಣಮಭಿಪ್ರಾಪ್ತುಂ ಪ್ರ ಯಂತಿ ಪ್ರಕರ್ಷೇಣ ಗಚ್ಛಂತಿ ಕೀದೃಶ್ಯಃ । ಸ್ಪಾರ್ಹಾಃ ಸರ್ವಗುಣೋಪೇತತ್ವಾತ್ಸ್ಪೃಹಣೀಯಾಃ ನಿಯುತಃ ॥ ನಿಯಮನಾದ್ವಾ ನಿಯೋಜನಾದ್ವೇತ್ಯೇತದ್ರೂಪಂ । ಅಸ್ಮಾಭಿರ್ನಿಯಮಿತಾ ವಾ ನಿಯುಕ್ತಾ ವಾ । ಉಚ್ಚಾರಿತಾ ಇತ್ಯರ್ಥಃ । ಏತಜ್ಜ್ಞಾತ್ವೋಪಕಾರಸ್ಯ ಪ್ರತ್ಯುಪಕಾರಂ ಕರ್ತುಂ ದಸ್ರಾ ದರ್ಶನೀಯೋ ನಿಯುದ್ರಥೋ ಗಮನಾಯ ಸರ್ವದಾ ನಿಯತರಥೋ ನಿಯುಕ್ತರಥೋ ವಾ ಮಾಹಿನೋ ಮಹಾನ್ಪೂಷಾ ದೇವಃ ಪ್ರಾವಿಷ್ಟು । ಅಸ್ಮಾನ್ಪ್ರಕರ್ಷೇಣ ರಕ್ಷತು। ಯದ್ವಾ । ದಸ್ರಾ ದಂಸಯಿತಾರೌ ಕರ್ಮಣಾಮುಪಕ್ಷಪಯಿತಾರೌ । ಪರಿಸಮಾಪಯಿತಾರಾವಿತ್ಯರ್ಥಃ । ಏವಂಭೂತೌ ಪತ್ನೀಯಜಮಾನೌ ಪೂಷಾ ರಕ್ಷತ್ವಿತಿ ಯೋಜ್ಯಂ ॥

। ಪ್ರತಿಪದಾರ್ಥ ।

ಹಿ—ಯಾವ ನಿಮಿತ್ತವಾಗಿ । ಸ್ಪಾರ್ಹಾಃ—ಆಕರ್ಷಕವಾದವೂ । ನಿಯುತಃ—ನಮ್ಮಿಂದ ನಿರ್ಮಿಸಿ ಅರ್ಪಿತವಾದವೂ ಆದ । ಮನೀಷಾಃ—ನಮ್ಮ ಸ್ತುತಿವಾಕ್ಯಗಳು । ಅಚ್ಛ—ಪೂಷನಿಗಭಿಮುಖವಾಗಿ । ಪ್ರ ಯಂತಿ—ಹೋಗಿ ಸೇರುತ್ತವೆಯೋ ಆ ಕಾರಣದಿಂದ । ದಸ್ರಾ—ಆಕರ್ಷಕವಾದ ರೂಪವುಳ್ಳವನೂ ।

**ನಿಯುದ್ರಥಃ**—ನಮ್ಮಲ್ಲಿಗೆ ಬರಲು ನಿಯಮಿತವಾದ ರಥವುಳ್ಳವನೂ । **ಮಾಹಿನಃ**—ಮಹಾತ್ಮನೂ ಆದ । **ಪೂಷಾ**—ಪೂಷದೇವನು । **ಪ್ರಾವಿಷ್ಟು**—ನಮ್ಮನ್ನು ಪೂರ್ಣವಾಗಿ ರಕ್ಷಿಸಲಿ.

॥ ಭಾವಾರ್ಥ ॥

ಯಾವ ನಿಮಿತ್ತವಾಗಿ ಆಕರ್ಷಕವಾದವೂ, ನಮ್ಮಿಂದ ನಿರ್ಮಿಸಿ ಅರ್ಪಿತವಾದವೂ ಆದ ನಮ್ಮ ಸ್ತುತಿ ವಾಕ್ಯಗಳು ಪೂಷನಿಗಭಿಮುಖವಾಗಿ ಹೋಗಿ ಸೇರುವುವೋ ಆ ಕಾರಣದಿಂದ ಆಕರ್ಷಕವಾದ ರೂಪವುಳ್ಳವನೂ, ನಮ್ಮಲ್ಲಿಗೆ ಬರಲು ಸಿದ್ಧಪಡಿಸಿದ ರಥವುಳ್ಳವನೂ, ಮಹಾತ್ಮನೂ ಆದ ಪೂಷದೇವನು ನಮ್ಮನ್ನು ಪೂರ್ಣವಾಗಿ ರಕ್ಷಿಸಲಿ.

English Translation

Since, our appointed and acceptable prayers proceed to him, may the mighty Pushan, of pleasing aspect, whose car is ever harnessed, protect us.

॥ ಸಂಹಿತಾಪಾಠಃ ॥

ಯಸ್ಯ ತ್ಯನ್ಮಹಿತ್ವಂ ವಾತಾಪ್ಯಮಯಂ ಜನಃ ।
ವಿಪ್ರ ಆ ವಂಸದ್ಧೀತಿಭಿಶ್ಚಿಕೇತ ಸುಷ್ಟುತೀನಾಂ ॥ ೨ ॥

॥ ಪದಪಾಠಃ ॥

ಯಸ್ಯ । ತ್ಯತ್ । ಮಹಿಽತ್ವಂ । ವಾತಾಪ್ಯಂ । ಅಯಂ । ಜನಃ ।
ವಿಪ್ರಃ । ಆ । ವಂಸತ್ । ಧೀತಿಽಭಿಃ । ಚಿಕೇತ । ಸುಽಸ್ತುತೀನಾಂ ॥ ೨ ॥

॥ ಸಾಯಣಭಾಷ್ಯಂ ॥

ವಿಪ್ರೋ ಮೇಧಾವ್ಯಯಂ ಜನೋ ಯಜಮಾನಃ । ಯಸ್ಯ ಪೂಷ್ಣಃ ಸಂಬಂಧಿ ತ್ಯತ್ತತ್ಪ್ರಸಿದ್ಧಂ ಮಹಿತ್ವಂ ಮಹತ್ತ್ವಂ ವಾತಾಪ್ಯಂ ಮಂಡಲೇ ಸಂಭೃತಂ ಪರಿಪಕ್ವಮುದಕಂ ಧೀತಿಭಿರ್ಯಾಗಾದಿ- ಕರ್ಮಭಿರಾ ವಂಸತ್ ಸಂಭಜತೇ ಸ ದೇವಃ ಸುಷ್ಟುತೀನಾಂ ತದೀಯಾಃ ಶೋಭನಾಃ ಸ್ತುತೀಶ್ಚಿಕೇತ । ಜಾನಾತು ॥

॥ ಪ್ರತಿಪದಾರ್ಥ ॥

**ಯಸ್ಯ**—ಯಾವ ಪೂಷದೇವನ । **ವಾತಾಪ್ಯಂ**—ಮೇಘಮಂಡಲದಲ್ಲಿ ತುಂಬಿದ ಮಳೆಯು ಸರ್ವತ್ರ ಸುರಿದು ಪ್ರಕಟಿತವಾಗುವಂತೆ । **ತ್ಯತ್**—ಪ್ರಸಿದ್ಧವಾದ । **ಮಹಿತ್ವಂ**—ಮಹಾತ್ಮ್ಯವನ್ನು । **ವಿಪ್ರಃ**—ಮೇಧಾವಿ

ಯಾವ । ಅಯಂ ಜನಃ—ಈ ಯಜಮಾನನು । ಧೀತಿಭಿಃ—ಯಾಗಾದಿಕರ್ಮಗಳಿಂದ । ಆ ವಂಸತ್—ಭಜಿಸಿ ಪೂಜಿಸುವನೋ ಆ ಪೂಷದೇವನು । ಸುಷ್ಟುತೀನಾಂ—ಉತ್ತಮವಾದ ಸ್ತುತಿಗಳನ್ನು । ಚಿಕೇತ—ಅರಿಯಲಿ.

॥ ಭಾವಾರ್ಥ ॥

ಮೇಘಮಂಡಲದಲ್ಲಿ ತುಂಬಿದ ಮಳೆಯು ಸರ್ವತ್ರ ಸುರಿದು ಪ್ರಕಟಿತವಾಗುವಂತೆ ಪ್ರಸಿದ್ಧವಾದ ಯಾವ ಪೂಷದೇವನ ಮಾಹಾತ್ಮ್ಯವನ್ನು ಮೇಧಾವಿಯಾದ ಈ ಯಜಮಾನನು ಯಾಗಾದಿಕರ್ಮಗಳಿಂದ ಭಜಿಸಿ ಪೂಜಿಸುವನೋ ಆ ಪೂಷದೇವನು ಉತ್ತಮವಾದ ನಮ್ಮ ಸ್ತುತಿಗಳನ್ನು ಅರಿಯಲಿ.

English Translation

(May he) whose greatness (manifested as ) the matured rain, this pious man celebrates with pious rites—may he be cognizant of such excellent praises.

॥ ಸಂಹಿತಾಪಾಠಃ ॥

ಸ ವೇದ ಸುಷ್ಟುತೀನಾಮಿಂದುರ್ನ ಪೂಷಾ ವೃಷಾ ।

ಅಭಿ ಪ್ಸುರಃ ಪ್ರುಷಾಯತಿ ವ್ರಜಂ ನ ಆ ಪ್ರುಷಾಯತಿ ॥ ೩ ॥

॥ ಪದಪಾಠಃ ॥

ಸಃ । ವೇದ । ಸುಽಸ್ತುತೀನಾಂ । ಇಂದುಃ । ನ । ಪೂಷಾ । ವೃಷಾ ।

ಅಭಿ । ಪ್ಸುರಃ । ಪ್ರುಷಾಯತಿ । ವ್ರಜಂ । ನಃ । ಆ । ಪ್ರುಷಾಯತಿ । ೩ ॥

॥ ಸಾಯಣಭಾಷ್ಯಂ ॥

ಯ ಉಕ್ತಗುಣಃ ಸ ಪೂಷಾ ಸುಷ್ಟುತೀನಾಂ ಶೋಭನಸ್ತೋತ್ರಾಣಾಂ । ಸ್ವರೂಪಮಿತಿ ಶೇಷಃ । ವೇದ । ಜಾನಾತಿ । ಅಪಿ ಚೇಂದುರ್ನ ಸೋಮ ಇವ ತರ್ಪಯಿತಾ ಪೂಷಾ ವೃಷಾ ಕಾಮಾನಾಂ ವರ್ಷಿತಾ ಭವತಿ । ಪ್ಸುರೋ ರೂಪವಾನ್ ಸ ಅಧ್ಯಸ್ಮಾನಭಿಲಕ್ಷ್ಯ ಪ್ರುಷಾಯತಿ । ಸಿಂಚತಿ । ತಥಾ ನೋಽಸ್ಮಾಕಂ ವ್ರಜಂ ಗೋಷ್ಠಂ ಚಾ ಪ್ರುಷಾಯತಿ । ಅಭಿಮುಖ್ಯೇನ ಸಿಂಚತಿ । ಅಸ್ಮಭ್ಯಂ ಹಿರಣ್ಯಪಶ್ವಾದಿಕಂ ದದಾತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಸಃ—ಅದೇ ಪೂಷದೇವನು । ಸುಷ್ಟುತೀನಾಂ—ಉತ್ತಮವಾದ ಸ್ತುತಿಗಳನ್ನು । ವೇದ—ಅರಿಯುತ್ತಾನೆ ಇಂದುಃ ನ—ಸೋಮದೇವನಂತೆ । ಪೂಷಾ—ಪೂಷದೇವನು । ವೃಷಾ—ಇಷ್ಟಾರ್ಥಪ್ರದನಾಗಿರುತ್ತಾನೆ ।

ಪ್ಸುರಃ--ರೂಪವಂತನಾದ ಪೂಷದೇವನು । ಅಭಿ—ನಮಗಭಿಮುಖವಾಗಿ । ಪ್ರುಷಾಯತಿ—ವೃಷ್ಟ್ಯಾದಿಗಳನ್ನು ಸುರಿಸುತ್ತಾನೆ । ನಃ—ನಮ್ಮ । ವ್ರಜಂ—ಗೋಸಮೂಹಕ್ಕೆ ಬೇಕಾದ ಆಹಾರಾದಿಗಳನ್ನು । ಆ ಪ್ರುಷಾಯತಿ—ಸುರಿಸುತ್ತಾನೆ.

॥ ಭಾವಾರ್ಥ ॥

ಪೂಷದೇವನು ನಮ್ಮ ಉತ್ತಮವಾದ ಸ್ತುತಿಗಳನ್ನು ಅರಿಯುತ್ತಾನೆ. ಸೋಮದೇವನಂತೆ ಪೂಷನೂ ಇಷ್ಟಾರ್ಥಪ್ರದನಾಗಿರುತ್ತಾನೆ. ರೂಪವಂತನಾದ ಪೂಷನು ನಮಗಭಿಮುಖವಾಗಿ ವೃಷ್ಟ್ಯಾದಿಗಳನ್ನು ಸುರಿಸುತ್ತಾನೆ. ನಮ್ಮ ಗೋಸಮೂಹಕ್ಕೆ ಬೇಕಾದ ಆಹಾರಾದಿಗಳನ್ನು ಸುರಿಸುತ್ತಾನೆ.

English Translation

He, Pushan, is cognizant of such excellent praises; like Soma he is showerer (of benefits): the graceful deity rains down upon us, he rains upon our cow-pastures.

। ಸಂಹಿತಾಪಾಠಃ ।

ಮಂಸೀಮಹಿ ತ್ವಾ ವಯಮಸ್ಮಾಕಂ ದೇವ ಪೂಷನ್ ।
ಮತೀನಾಂ ಚ ಸಾಧನಂ ವಿಪ್ರಾಣಾಂ ಚಾಧವಂ ॥ ೪ ॥

॥ ಪದಪಾಠಃ ॥

ಮಂಸೀಮಹಿ । ತ್ವಾ । ವಯಂ । ಅಸ್ಮಾಕಂ । ದೇವ । ಪೂಷನ್ ।
ಮತೀನಾಂ । ಚ । ಸಾಧನಂ । ವಿಪ್ರಾಣಾಂ । ಚ । ಆऽಧವಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ದೇವ ದ್ಯೋತಮಾನ ಪೂಷನ್ ವಯಂ ಸ್ತೋತಾರಸ್ತ್ವಾ ತ್ವಾಂ ಮಂಸೀಮಹಿ । ಸ್ತುಮಃ । ಕೀದೃಶಂ । ಅಸ್ಮಾಕಮಸ್ಮದೀಯಾನಾಂ ಮತೀನಾಂ ಚಾಭಿಲಷಿತಾನಾಂ ಚ ಸಾಧನಂ ಸಾಧಯಿತಾರಂ ವಿಪ್ರಾಣಾಂ ಚ ಮೇಧಾವಿನಾಮಸ್ಮಾಧವಂ ಪರಿಚರ್ಯಾದರೇಣ ಕಂಪಯಿತಾರಂ ॥

। ಪ್ರತಿಪದಾರ್ಥ ।

ದೇವ—ಪ್ರಕಾಶಮಾನನಾದ । ಪೂಷನ್—ಎಲೈ ಪೂಷದೇವನೇ । ವಯಂ—ಸ್ತುತಿಕರ್ತರಾದ ನಾವು । ಅಸ್ಮಾಕಂ—ನಮ್ಮ । ಮತೀನಾಂ ಚ—ಸಕಲ ಸ್ತುತಿಗಳಿಗೆ । ಸಾಧನಂ—ಮೂಲಕಾರಣನೂ । ವಿಪ್ರಾಣಾಂ–

ಚ—ಮೇಧಾವಿಗಳಿಗೆ । ಆಘೃಣಿಂ—ಕಂಪನಕಾರಿಯೂ (ಉತ್ಸಾಹಕಾರಿಯೂ ಆದ) । ತ್ವಾ—ನಿನ್ನನ್ನು । ಮಂಸೀಮಹಿ—ಸ್ತುತಿಸುತ್ತೇವೆ.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಪೂಷದೇವನೇ, ಸ್ತುತಿಕರ್ತರಾದ ನಾವು ನಮ್ಮ ಸಕಲ ಸ್ತುತಿಗಳಿಗೂ ಪ್ರೇರಕನೂ, ಮೇಧಾವಿಗಳಾದ ಯಜಮಾನಾದಿಗಳಿಗೆ ಉತ್ಸಾಹಕಾರಕನೂ ಆದ ನಿನ್ನನ್ನು ಸ್ತುತಿಸುತ್ತೇವೆ.

English Translation

We glorify you, divine Pushan, the accomplisher of our desires, who make the pious to quake

॥ ಸಂಹಿತಾಪಾಠಃ ॥

ಪ್ರತ್ಯರ್ಧಿರ್ಯಜ್ಞಾನಾಮಶ್ವಹಯೋ ರಥಾನಾಂ ।

ಋಷಿಃ ಸ ಯೋ ಮನುರ್ಹಿತೋ ವಿಪ್ರಸ್ಯ ಯಾವಯತ್ಸಖಃ ॥ ೫ ॥

॥ ಪದಪಾಠಃ ॥

ಪ್ರತಿऽಅರ್ಧಿಃ । ಯಜ್ಞಾನಾಂ । ಅಶ್ವऽಹಯಃ । ರಥಾನಾಂ ।

ಋಷಿಃ । ಸಃ । ಯಃ । ಮನುಃऽಹಿತಃ । ವಿಪ್ರಸ್ಯ । ಯವಯತ್ऽಸಖಃ ॥ ೫ ॥

॥ ಸಾಯಣಭಾಷ್ಯಂ ॥

ಋಷಿಃ ಸರ್ವಸ್ಯ ದ್ರಷ್ಟಾ ಸ ಪೂಷಾ ಯಜ್ಞಾನಾಂ ಪ್ರತ್ಯರ್ಧಿರರ್ಧಭಾಗ್ರಥಾನಾಮಶ್ವಹಯಃ । ಹಯತಿರ್ಗತಿಕರ್ಮಾ । ರಥಾನಾಂ ಸಂಬಂಧಿಭಿರಶ್ವೈರ್ಗಮನಶೀಲೋ ಭವತಿ । ಅಶ್ವಯುಕ್ತೇನ ರಥೇನ ಸದಾ ಗಂತೇತ್ಯರ್ಥಃ । ಮನುರ್ಹಿತೋ ಮನುಷ್ಯಹಿತೋ ಯೋ ವಿಪ್ರಸ್ಯ ಮೇಧಾವಿನಃ ಸ್ತೋತುರ್ಯಾವಯತ್ಸಖಃ ಶತ್ರೂಣಾಂ ಪೃಥಕ್ಕರ್ತಾ ಸಖಾ ಭವತಿ ಸ ಇತಿ ಪೂರ್ವೇಣ ಸಂಬಂಧಃ ।

॥ ಪ್ರತಿಪದಾರ್ಥ ॥

ಮನುರ್ಹಿತಃ—ಮಾನವರಿಗೆ ಹಿತಕಾರಿಯಾದ । ಯಃ—ಯಾವ ಪೂಷದೇವನು । ವಿಪ್ರಸ್ಯ—ಮೇಧಾವಿಯಾದ ಸ್ತುತಿಕರ್ತನ । ಯಾವಯತ್ಸಖಃ—ಶತ್ರುಗಳನ್ನು ನಾಶಮಾಡಬಲ್ಲ ಮಿತ್ರನಾಗಿರುವನೋ ಅಂತಹವನೂ । ಋಷಿಃ—ಅತೀಂದ್ರಿಯ ವಿಷಯಗಳನ್ನು ನೋಡಬಲ್ಲವನೂ ಆದ । ಸಃ—ಪೂಷದೇವನು । ಯಜ್ಞಾನಾಂ—ಯಜ್ಞದ ಹವಿಸ್ಸುಗಳಿಗೆ । ಪ್ರತ್ಯರ್ಧಿಃ—ಭಾಗಿಯೂ । ರಥಾನಾಂ—ರಥಗಳ । ಅಶ್ವಹಯಃ—ಅಶ್ವಗಳಿಂದ ವಹಿಸಲ್ಪಡುವವನೂ ಆಗಿರುತ್ತಾನೆ.

॥ ಭಾವಾರ್ಥ ॥

ಮಾನವರಿಗೆ ಹಿತಕಾರಿಯಾದ ಯಾವ ಪೂಷದೇವನು ಮೇಧಾವಿಯಾದ ಸ್ತುತಿಕರ್ತನ ಶತ್ರುಗಳನ್ನು ನಾಶ ಮಾಡಬಲ್ಲ ಮಿತ್ರನಾಗಿರುವನೋ ಅಂತಹವನೂ, ಅತೀಂದ್ರಿಯ ವಿಷಯಗಳನ್ನು ನೋಡಬಲ್ಲವನೂ ಆದ ಅದೇ ಪೂಷನ ಯಜ್ಞದ ಹವಿಸ್ಸುಗಳಿಗೆ ಭಾಗಿಯಾಗಿ ಅಶ್ವಗಳಿಂದ ವಹಿಸಲ್ಪಡುವ ರಥಗಳಲ್ಲಿ ಸಂಚರಿಸುತ್ತಾನೆ.

English Translation

The sharer in sacrifices, who is drawn by chariot-horses, the rishi, the benefactor of men ; the friend of the devout, scattering (his foes).

॥ ಸಂಹಿತಾಪಾಠಃ ॥

ಆಧೀಷಮಾಣಾಯಾಃ ಪತಿಃ ಶುಚಾಯಾಶ್ಚ ಶುಚಸ್ಯ ಚ ।
ವಾಸೋವಾಯೋಽವೀನಾಮಾ ವಾಸಾಂಸಿ ಮರ್ಮೃಜತ್ ॥ ೬ ॥

॥ ಪದಪಾಠಃ ॥

ಆಽಧೀಷಮಾಣಾಯಾಃ । ಪತಿಃ । ಶುಚಾಯಾಃ । ಚ । ಶುಚಸ್ಯ । ಚ ।
ವಾಸಃಽವಾಯಃ । ಅವೀನಾಂ । ಆ । ವಾಸಾಂಸಿ । ಮರ್ಮೃಜತ್ ॥ ೬ ॥

॥ ಸಾಯಣಭಾಷ್ಯಂ ॥

ಆಧೀಷಮಾಣಾಯಾ ಆತ್ಮಾರ್ಥಂ ಧೀಯಮಾನಾಯಾಃ ಶುಚಾಯಾಶ್ಚ ದೀಪ್ತಾಯಾ ಅಜಾಯಾಶ್ಚ ಪತಿಃ ಸ್ವಾಮೀ । ನ ಕೇವಲಂ ಸ್ತ್ರೀಮಾತ್ರಸ್ಯ ಕಿಂತು ಶುಚಸ್ಯ ದೀಪ್ತಸ್ಯ ಪುಂಪಶೋಶ್ಚ ಪತಿರಿತ್ಯರ್ಥಃ । ಏವಂಭೂತಃ ಪೂಷಾ ದೇವೋಽವೀನಾಮುರಣಾನಾಂ ಸಂಬಂಧಿಭೀ ರೋಮಭಿರ್ವಾಸೋವಾಯೋ ದಶಾಪವಿತ್ರಾದೀನಿ ವಸ್ತ್ರಾಣಿ ಪ್ರೇರಯನ್ ವಾಸಾಂಸಿ ರಜಕಶೋಧ್ಯಾನಿ ತಾನಿ ವಸ್ತ್ರಾಣ್ಯಾ ಮರ್ಮೃಜತ್ । ಆ ಸಮಂತಾತ್ಪ್ರಕಾಶೋಷ್ಣಾಭ್ಯಾಂ ಶೋಧಯನ್ನವತಿ ॥

॥ ಪ್ರತಿಪದಾರ್ಥ ॥

**ಆಧೀಷಮಾಣಾಯಾಃ**—ತನಗಾಗಿ ಭರಿಸುತ್ತಿರುವುದೂ । **ಶುಚಾಯಾಃ ಚ**—ಪ್ರಕಾಶಮಾನವಾದುದೂ ಆದ ಹೆಣ್ಣು ಆಡಿಗೂ । **ಶುಚಸ್ಯ ಚ**—ಪ್ರಕಾಶಮಾನವಾದ ಗಂಡು ಆಡಿಗೂ । **ಪತಿಃ**—ಒಡೆಯನಾದ ಪೂಷದೇವನು । **ಅವೀನಾಂ**—ಮೇಷದ ರೋಮಗಳಿಂದ । **ವಾಸೋವಾಯಃ**—ದಶಾಪವಿತ್ರದ ಉಣ್ಣೆಬಟ್ಟೆಯನ್ನು ನೇಯುತ್ತ । **ವಾಸಾಂಸಿ**—ಅದೇ ವಸ್ತ್ರಗಳನ್ನು । **ಮರ್ಮೃಜತ್**—ಶುದ್ಧಿಗೊಳಿಸುತ್ತಾನೆ.

॥ ಭಾವಾರ್ಥ ॥

ತನಗಾಗಿ ಪೋಷಿಸುತ್ತಿರುವುದೂ ಪ್ರಕಾಶಮಾನವಾದುದೂ ಆದ ಹೆಣ್ಣು ಆಡಿಗೂ, ಪ್ರಕಾಶಮಾನವಾದ ಗಂಡು ಆಡಿಗೂ ಒಡೆಯನಾದ ಪೂಷದೇವನು ಮೇಷದ ರೋಮಗಳಿಂದ ದಶಾಪವಿತ್ರದ ಉಣ್ಣೆಬಟ್ಟೆಯನ್ನು ನೇಯುತ್ತ ಅದೇ ವಸ್ತ್ರಗಳನ್ನು ಶುದ್ಧಿಗೊಳಿಸುತ್ತಾನೆ.

English Translation

Lord both of the pure desirable (she-goat) and of the pure (he-goat): weaver of the cloth (of the wool) of the sheep; he has cleansed the vestments.

॥ ಸಂಹಿತಾಪಾಠಃ ॥

ಇನೋ ವಾಜಾನಾಂ ಪತಿರಿನಃ ಪುಷ್ಟೀನಾಂ ಸಖಾ ।

ಪ್ರ ಶ್ಮಶ್ರು ಹರ್ಯತೋ ದೂಧೋದ್ವಿ ವೃಥಾ ಯೋ ಅದಾಭ್ಯಃ ॥ ೭ ॥

॥ ಪದಪಾಠಃ ॥

ಇನಃ । ವಾಜಾನಾಂ । ಪತಿಃ । ಇನಃ । ಪುಷ್ಟೀನಾಂ । ಸಖಾ ।

ಪ್ರ । ಶ್ಮಶ್ರು । ಹರ್ಯತಃ । ದೂಧೋತ್ । ವಿ । ವೃಥಾ । ಯಃ । ಅದಾಭ್ಯಃ ॥ ೭ ॥

॥ ಸಾಯಣಭಾಷ್ಯಂ ॥

**ಇನ ಈಶ್ವರಃ ಪೂಷಾ ವಾಜಾನಾಂ ಹವಿರಾದೀನಾಂ ಸರ್ವೇಷಾಮನ್ನಾನಾಂ ಪತಿಃ ಸ್ವಾಮೀನಃ ಪ್ರಭುಃ ಪುಷ್ಟೀನಾಂ ಸರ್ವೇಷಾಂ ಪ್ರಾಣಿನಾಂ ಸ್ವಭೂತಾನಾಂ ಪೋಷಕಾನಾಂ ಕರಣೇ ಸಖಾ ಮಿತ್ರಭೂತಃ । ಸರ್ವಸ್ಯೋಪಕಾರಿತ್ವಾತ್ । ಕಿಂಚ ಹರ್ಯತಃ ಕಾಮಯಮಾನಸ್ಯ ಯಜಮಾನಸ್ಯ ಸ್ವಭೂತಂ ಸೋಮಂ ಪಿಬನ್ನಿತಿ ಶೇಷಃ । ಶ್ಮಶ್ರು ಶ್ಮಶ್ರೂಣಿ ವೃಥಾನಾಯಾಸೇನಾಪ್ರಯತ್ನೇನ ಪ್ರ ವ್ಯದೂಧೋತ್ ಪ್ರಕರ್ಷೇಣ ವಿವಿಧಂ ಕಂಪಯತಿ ಯಃ ಪೂಷಾದಾಭ್ಯಃ ಶತ್ರುಭಿರಹಿಂಸ್ಯಃ ಸ ಇತಿ ಪೂರ್ವೇಣ ಸಂಬಂಧಃ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಪೂಷದೇವನು । **ಅದಾಭ್ಯಃ**—ಶತ್ರುಗಳಿಂದ ಅಹಿಂಸಿತನೂ । **ಇನಃ**—ಈಶ್ವರನೂ । **ವಾಜಾನಾಂ**—ಅನ್ನಗಳಿಗೆ । **ಪತಿಃ**—ಪಾಲಕನೂ । **ಇನಃ**—ಪ್ರಭುವೂ । **ಪುಷ್ಟೀನಾಂ**—ತನ್ನಿಂದ ಪೋಷಿತ ವಾಗುವ ಸಕಲ ಪ್ರಾಣಿಗಳಿಗೂ । **ಸಖಾ**—ಮಿತ್ರನೂ ಆಗಿರುವನೋ ಅವನು । **ಹರ್ಯತಃ**—ಯಜಮಾನನಿಂದ

ಅರ್ಪಿತವಾದ ಸೋಮವನ್ನು ಪಾನಮಾಡಿ । **ಶ್ಮಶ್ರು**—ತನ್ನ ಮುಖದ ಕೂದಲುಗಳನ್ನು । **ವೃಥಾ**—ಪ್ರಯಾಸವಿಲ್ಲದೇ । **ಪ್ರ ವಿ ದೂಧೋತ್**—ಕಂಪಿಸುವಂತೆ ಮಾಡುತ್ತಾನೆ.

। ಭಾವಾರ್ಥ ।

ಯಾವ ಪೂಷದೇವನು ಶತ್ರುಗಳಿಂದ ಅಹಿಂಸಿತನೂ, ಈಶ್ವರನೂ, ಅನ್ನಗಳಿಗೆ ಪಾಲಕನೂ, ಪ್ರಭುವೂ ತನ್ನಿಂದ ಪೋಷಿತವಾಗುವ ಸಕಲಪ್ರಾಣಿಗಳಿಗೂ ಮಿತ್ರನೂ ಆಗಿರುವನೋ ಅವನು ಯಜಮಾನನಿಂದ ಅರ್ಪಿತವಾಗುವ ಸೋಮವನ್ನು ಪಾನಮಾಡಿ ಮೆಚ್ಚಿಗೆಯಿಂದ ತನ್ನ ಮುಖದಕೂದಲುಗಳನ್ನು ಪ್ರಯಾಸವಿಲ್ಲದೆ ಕಂಪಿಸುವಂತೆ ಮಾಡುತ್ತಾನೆ.

English Translation

The ruler, the lord of viands, the sovereign, the friend of the contentment (of all); he who is unassailable, gently shakes his beard (when drinking Soma of the sacrificer), desiring (his favour).

। ಸಂಹಿತಾಪಾಠಃ ।

ಆ ತೇ ರಥಸ್ಯ ಪೂಷನ್ನಜಾ ಧುರಂ ವವೃತ್ಯುಃ ।
ವಿಶ್ವಸ್ಯಾರ್ಥಿನಃ ಸಖಾ ಸನೋಜಾ ಅನಪಚ್ಯುತಃ ॥ ೮ ॥

। ಪದಪಾಠಃ ।

ಆ । ತೇ । ರಥಸ್ಯ । ಪೂಷನ್ । ಅಜಾಃ । ಧುರಂ । ವವೃತ್ಯುಃ ।
ವಿಶ್ವಸ್ಯ । ಅರ್ಥಿನಃ । ಸಖಾ । ಸನಃಽಜಾಃ । ಅನಪಽಚ್ಯುತಃ ॥ ೮ ॥

। ಸಾಯಣಭಾಷ್ಯಂ ।

**ಹೇ ಪೂಷನ್ದೇವ ತೇ ತ್ವದೀಯಸ್ಯ ರಥಸ್ಯ ಧುರಮಜಾ ವಾಹನತ್ವೇನಾ ವವೃತ್ಯುಃ। ಅವರ್ತಯಂತಿ । ಆವಹಂತೀತ್ಯರ್ಥಃ । ಯಸ್ತ್ವಂ ವಿಶ್ವಸ್ಯ ಸರ್ವಸ್ಯಾರ್ಥಿನೋ ಯಾಚಕಸ್ಯಾಭಿಲಷಿತಾರ್ಥಪ್ರದಾತೃತ್ವಾತ್ಸಖಿಭೂತಃ ಸನೋಜಾಶ್ಚಿರಂ ಜಾತೋಽನಪಚ್ಯುತಃ ಸ್ವಾಧಿಕಾರಾದನಪಗತಃ । ತಸ್ಯ ತೇ ರಥಮಿತಿ ಸಂಬಂಧಃ ॥**

। ಪ್ರತಿಪದಾರ್ಥ ।

**ಪೂಷನ್**—ಎಲೈ ಪೂಷದೇವನೇ । (ಯಃ— ಯಾವ ನೀನು) । **ವಿಶ್ವಸ್ಯ**—ಸಕಲವಾದ । **ಅರ್ಥಿನಃ**—ಯಾಚಕಜನಕ್ಕೆ । **ಸಖಾ**—ಮಿತ್ರನೂ । **ಸನೋಜಾಃ**—ಬಹು ಹಿಂದೆ ಉತ್ಪನ್ನನಾದವನೂ । **ಅನಪಚ್ಯುತಃ**—ಅಪ್ರತಿಹತನೂ ಆಗಿರುವೆಯೋ ಅಂತಹ ।। **ತೇ**—ನಿನ್ನ । **ರಥಸ್ಯ**—ರಥದ । **ಧುರಂ**—ಭಾರವನ್ನು । **ಅಜಾಃ**—ಆಡುಗಳು । **ಆ ವವೃತ್ಯುಃ**—ವಹಿಸುತ್ತವೆ.

॥ ಭಾವಾರ್ಥ ॥

ಎಲೈ ಪೂಷದೇವನೇ, ಯಾವ ನೀನು ಸಕಲವಾದ ಯಾಚಕಜನಕ್ಕೂ ಮಿತ್ರನೂ, ಬಹು ಹಿಂದೆ ಉತ್ಪನ್ನನಾದವನೂ, ಅಪ್ರತಿಹತನೂ ಆಗಿರುವೆಯೋ ಅಂತಹ ನಿನ್ನ ರಥದ ಭಾರವನ್ನು ಆಡುಗಳು ವಹಿಸುತ್ತವೆ.

English Translation

The goats, Pushan, bear the burden of your car, who are the friend of every suppliant, born long ago, never-failing (in your duty).

॥ ಸಂಹಿತಾಪಾಠಃ ॥

ಅಸ್ಮಾಕಮೂರ್ಜಾ ರಥಂ ಪೂಷಾ ಅವಿಷ್ಟು ಮಾಹಿನಃ ।

ಭುವದ್ವಾಜಾನಾಂ ವೃಧ ಇಮಂ ನಃ ಶೃಣವದ್ಧವಂ ॥ ೯ ॥

॥ ಪದಪಾಠಃ ॥

ಅಸ್ಮಾಕಂ । ಊರ್ಜಾ । ರಥಂ । ಪೂಷಾ । ಅವಿಷ್ಟು । ಮಾಹಿನಃ ।

ಭುವತ್ । ವಾಜಾನಾಂ । ವೃಧಃ । ಇಮಂ । ನಃ । ಶೃಣವತ್ । ಹವಂ ॥ ೯ ॥

॥ ಸಾಯಣಭಾಷ್ಯಂ ॥

ಮಾಹಿನೋ ಮಹಾನ್ಪೂಷಾಸ್ಮಾಕಂ ಸ್ವಭೂತಂ ರಥಮೂರ್ಜಾ ಬಲೇನಾನ್ನೇನ ವಾವಿಷ್ಟು । ಅವತು । ರಕ್ಷತು । ಕಿಂಚ । ವಾಜಾನಾಮನ್ನಾನಾಂ ವೃಧೋ ವರ್ಧಕೋ ಭುವತ್ । ಭವತು । ನೋಽಸ್ಮದೀಯಮಿಮಮಿದ್ಧೃಗ್ಭೂತಂ ಹವಮಾಹ್ವಾನಂ ಶೃಣವತ್ । ಶೃಣೋತು ।

॥ ಪ್ರತಿಪದಾರ್ಥ ॥

ಮಾಹಿನಃ—ಮಹಾತ್ಮನಾದ । ಪೂಷಾ—ಪೂಷದೇವನು । ಅಸ್ಮಾಕಂ—ನಮ್ಮ । ರಥಂ—ರಥವನ್ನು । ಊರ್ಜಾ—ತನ್ನ ಬಲದಿಂದ । ಅವಿಷ್ಟು—ರಕ್ಷಿಸಲಿ । ವಾಜಾನಾಂ—ಅನ್ನಗಳಿಗೆ । ವೃಧಃ—ವೃದ್ಧಿಕಾರಕನಾಗಿ । ಭುವತ್—ಆಗಿರಲಿ । ನಃ—ನಮ್ಮ । ಇಮಂ—ಇಲ್ಲಿ ಅರ್ಪಿತವಾದ । ಹವಂ—ಆಹ್ವಾನವನ್ನು । ಶೃಣವತ್—ಕೇಳಲಿ.

॥ ಭಾವಾರ್ಥ ॥

ಮಹಾತ್ಮನಾದ ಪೂಷದೇವನು ರಥವನ್ನು ತನ್ನ ಬಲದಿಂದ ರಕ್ಷಿಸಲಿ. ಅನ್ನಗಳಿಗೆ ವೃದ್ಧಿಕಾರಕನಾಗಿ ಆಗಲಿ. ನಮ್ಮ ಈ ಆಹ್ವಾನವನ್ನು ಕೇಳಲಿ.

## English Translation

May the mighty Pushan protect our chariot by his might: may he be to us the augmenter of food: may he hear this our invocation.



## ಇಪ್ಪತ್ತೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಅಸತ್ಸು ಮ ಇತಿ ಚತುರ್ವಿಂಶತ್ಯೃಚಮೇಕಾದಶಂ ಸೂಕ್ತಂ । ಇಂದ್ರಪುತ್ರಸ್ಯ ವಸುಕ್ರಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ತಥಾ ಚಾನುಕ್ರಾಂತಂ । ಅಸತ್ಸು ಚತುರ್ವಿಂಶತಿರೈಂದ್ರೋ ವಸುಕ್ರ ಇತಿ ॥ ಮಹಾವ್ರತೇ ಮರುತ್ವತೀಯಶಸ್ತ್ರ ಏತತ್ಸೂಕ್ತಂ । ತಥೈವ ಪಂಚಮಾರಣ್ಯಕೇ ಸೂತ್ರಿತಂ ಚ । **ಅಸತ್ಸು ಮೇ ಜರಿತಃ ಸಾಭಿವೇಗಃ ಪಿಬಾ ಸೋಮಮಭಿ ಯಮುಗ್ರ ತರ್ದಃ** । ಐ. ಆ. ೫-೧-೧ । ಇತಿ ॥

ಅನುವಾದವು—**ಅಸತ್ಸು ಮ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಇಪ್ಪತ್ತನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಇಂದ್ರಪುತ್ರನಾದ ವಸುಕ್ರನೆಂಬುವನು ಋಷಿಯು ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಸತ್ಸು ಚತುರ್ವಿಂಶತಿರೈಂದ್ರೋ ವಸುಕ್ರಃ** ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ಮರುತ್ವತೀಯಶಸ್ತ್ರಮಂತ್ರಪಠನಮಾಡುವಾಗ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ-**ಅಸತ್ಸು ಮೇ ಜರಿತಃ ಸಾಭಿವೇಗಃ ಪಿಬಾ ಸೋಮಮಭಿ ಯಮುಗ್ರ ತರ್ದಃ** ಎಂಬ ವಾಕ್ಯದಿಂದ (ಐ. ಆ. ೫-೧-೧) ನಿರ್ದಿಷ್ಟವಾಗಿರುವುದು.

### ಸೂಕ್ತ—೨೭

ಮಂಡಲ—೧೦ _ ಅನುವಾಕ—೨ । ಸೂಕ್ತ—೨೭ ॥

ಅಷ್ಟಕ—೭ ಅಧ್ಯಾಯ—೭ । ವರ್ಗ—೧೫, ೧೬, ೧೭, ೧೮, ೧೯ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೨೪ ॥

ಋಷಿಃ—ವಸುಕ್ರ ಐಂದ್ರಃ ।

ದೇವತಾ—ಇಂದ್ರಃ ।

ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಸತ್ಸು ಮೇ ಜರಿತಃ ಸಾಭಿವೇಗೋ ಯತ್ಸುನ್ವತೇ ಯಜಮಾನಾಯ ಶಿಕ್ಷಂ।
ಅನಾಶೀರ್ದಾಮಹಮಸ್ಮಿ ಪ್ರಹಂತಾ ಸತ್ಯಧ್ವೃತಂ ವೃಜಿನಾಯಂತ-
ಮಾಭುಂ ॥ ೧ ॥

॥ ಪದಪಾಠಃ ॥

ಅಸತ್ । ಸು । ಮೇ । ಜರಿತರಿತಿ । ಸಃ । ಅಭಿऽವೇಗಃ। ಯತ್ । ಸುನ್ವತೇ। ಯಜಮಾನಾಯ। ಶಿಕ್ಷಂ।
ಅನಾಶೀಃऽದಾಂ। ಅಹಂ । ಅಸ್ಮಿ । ಪ್ರऽಹಂತಾ । ಸತ್ಯಧ್ವೃತಂ। ವೃಜಿನऽಯಂತಂ । ಆಭುಂ ॥ ೧ ॥

॥ ಸಾಯಣಭಾಷ್ಯಂ ॥

ವಾಸುಕ್ರೇಷು ಸೂಕ್ತೇಷು ಬಾಹುಲ್ಯೇನೇಂದ್ರಃ ಸ್ತೂಯತೇ । ಇದಾನೀಮಿಂದ್ರೋ ವಸುಕ್ರಂ ಸ್ತೋತುಮುದ್ಯತಂ ಪುತ್ರಂ ಸಂಬೋಧ್ಯ ಸ್ವಸಾಮರ್ಥ್ಯಂ ಕಥಯತಿ ಯೇನ ವಿಜ್ಞಾತದೇವತಾರೂಪಃ ಸನ್ ಸುಖೇನ ಸ್ತೋಷ್ಯತೀತಿ । ಯದ್ವಾ । ಕಾರ್ಯಕಾರಣಯೋರೇಕತ್ವೋಪಚಾರಾದಾತ್ಮಾ ವೈ ಪುತ್ರ-ನಾಮಾಸೀತಿ ವಚನಾದಿಂದ್ರರೂಪೇಣಾವಸ್ಥಿತೋ ವಸುಕ್ರ ಆತ್ಮಾನಂ ಸ್ತೌತಿ। ಕ್ವಚಿತ್ಕ್ವಚಿದಿಂದ್ರಂ ಚೇತಿ। ಹೇ ಜರಿತಃ ಸ್ತೋತಃ ಮೇ ಮಮ ಸು ಶೋಭನಃ ಸ ತಾದೃಶೋಽಭಿವೇಗೋಽಭಿಗಮನಂ ಮನಸೋ ವೃತ್ತಿವಿಶೇಷೋಽಸತ್ । ಅಸ್ತಿ । ವಿದ್ಯತೇ । ಯದ್ಯೇನಾಭಿವೇಗೇನ ಸುನ್ವತೇ ಮದರ್ಥಂ ಸೋಮಾಭಿ-ಷವಂ ಕುರ್ವತೇ ಯಜಮಾನಾಯ ಯಜ್ವನೇ ಶಿಕ್ಷಂ ಅಭಿಲಷಿತಮರ್ಥಂ ದದಾಮಿ । ಕಿಂಚಾಹಮ-ನಾಶೀರ್ದಾಂ। ಆಶೀರನ್ಯತ್ರ ಪ್ರಾರ್ಥನಾ ಇಹ ತು ಸಾಮರ್ಥ್ಯಾತ್ಪ್ರಾರ್ಥಿತಂ ಹವಿರುಚ್ಯತೇ । ತದ್ಯಷ್ಟ್ಯ-ಮದದತಂ ಜನಂ । ಯದ್ವಾ । ಆಶೀರಿತಿ ಸೋಮಾಶ್ರಯಣಂ ದಧ್ಯುಚ್ಯತೇ । ತತ್ಪ್ರದಾತಾರಂ । ಅಸೋ-ಮಯಾಜಿನಮಿತ್ಯರ್ಥಃ । ಪ್ರಹಂತಾಸ್ಮಿ । ಪ್ರಕರ್ಷೇಣ ಹಿಂಸಿತಾ ಭವಾಮಿ । ಕೀದೃಶಂ । ಸತ್ಯಧ್ವೃತಂ ಸತ್ಯಸ್ಯ ಹಿಂಸಕಂ । ಅನೃತವಾದಿನಂ ಚೇತ್ಯರ್ಥಃ । ವೃಜಿನಾಯಂತಂ ಪಾಪಂ ಕರ್ತುಮಿಚ್ಛಂತಮಾಭುಂ ವ್ಯಾಪ್ನುವಂತಂ ॥

॥ ಪ್ರತಿಪದಾರ್ಥ ॥

ಜರಿತಃ—ಎಲೈ ಸ್ತುತಿಕರ್ತನೇ । ಯತ್—ಯಾವುದರಿಂದ । ಸುನ್ವತೇ—ಹವಿಸ್ಸನ್ನರ್ಪಿಸುವ । ಯಜಮಾನಾಯ—ಯಜಮಾನನಿಗೆ । ಶಿಕ್ಷಂ—ನಾನು ಇಷ್ಟಾರ್ಥವನ್ನು ಕೊಡುವೆನೋ ಅಂತಹ । ಮೇ—ನನ್ನ । ಸು—ಉತ್ತಮವಾದುದೂ । ಸಃ—ಪ್ರಸಿದ್ಧವಾದುದೂ ಆದ । ಅಭಿವೇಗಃ—ಮನಃಪ್ರವೃತ್ತಿಯು । ಅಸತ್—ಈ ರೀತಿಯಿರುತ್ತದೆ । ಅಹಂ—ನಾನು । ಅನಾಶೀರ್ದಾಂ—ಹವಿಸ್ಸನ್ನರ್ಪಿಸದ ಕರ್ಮಭ್ರಷ್ಟನನ್ನು । ಪ್ರಹಂತಾ ಅಸ್ಮಿ—ನಾಶಮಾಡುವವನಾಗಿದ್ದೇನೆ । ಸತ್ಯಧ್ವೃತಂ—ಸತ್ಯಕ್ಕೆ ಕಳಂಕವನ್ನುಂಟುಮಾಡುವವನನ್ನೂ ।

ವೃಜಿನಾಯಂತಂ—ಪಾಪಕಾರ್ಯವನ್ನು ಮಾಡುವವನನ್ನೂ । ಅಭುಂ—ದುಷ್ಪ್ರವೃತ್ತಿಯುಳ್ಳವನನ್ನೂ (ನಾಶಪಡಿಸುತ್ತೇನೆ.)

॥ ಭಾವಾರ್ಥ ॥

ಎಲೈ ಸ್ತುತಿಕರ್ತನೇ, ಯಾವ ನನ್ನ ಮನಃಪ್ರವೃತ್ತಿಯಿಂದ ಹವಿಸ್ಸನ್ನರ್ಪಿಸುವ ಯಜಮಾನನಿಗೆ ನಾನು ಇಷ್ಟಾರ್ಥವನ್ನು ಕೊಡುವೆನೋ ಅಂತಹ ನನ್ನ ಉತ್ತಮವಾದುದೂ, ಪ್ರಸಿದ್ಧವಾದುದೂ ಆದ ಮನಃಪ್ರವೃತ್ತಿಯು ಈ ರೀತಿಯಿರುತ್ತದೆ. ನಾನು ಹವಿಸ್ಸನ್ನರ್ಪಿಸದ ಕರ್ಮಭ್ರಷ್ಟನನ್ನು ನಾಶಮಾಡುವವನಾಗಿದ್ದೇನೆ. ಸತ್ಯಕ್ಕೆ ಕಳಂಕವನ್ನುಂಟುಮಾಡುವವನನ್ನೂ ಪಾಪಕಾರ್ಯವನ್ನು ಮಾಡುವವನನ್ನೂ ದುಷ್ಪ್ರವೃತ್ತಿಯುಳ್ಳವನನ್ನೂ ನಾಶಪಡಿಸುತ್ತೇನೆ.

English Translation

(Indra speaks): Such is my pleasant disposition, worshipper, that I help the institutor of the rite, who offers libations; but I am the punisher of him who offers not libations, who disregards truth, the per patrator of sin, the malignant.

॥ ಸಂಹಿತಾಪಾಠಃ ॥

ಯದೀದಹಂ ಯುಧಯೇ ಸಂನಯಾನ್ಯದೇವಯೂನ್ತನ್ವಾ೩ ಶೂಶುಜಾನಾನ್ ।
ಅಮಾ ತೇ ತುಮ್ರಂ ವೃಷಭಂ ಪಚಾನಿ ತೀವ್ರಂ ಸುತಂ ಪಂಚದಶಂ ನಿ ಷಿಂಚಂ ॥ ೨ ॥

॥ ಪದಪಾಠಃ ॥

ಯದಿ । ಇತ್ । ಅಹಂ । ಯುಧಯೇ । ಸಂಽನಯಾನಿ । ಅದೇವಽಯೂನ್ । ತನ್ವಾ । ಶೂಶುಜಾನಾನ್ ।
ಅಮಾ । ತೇ । ತುಮ್ರಂ । ವೃಷಭಂ । ಪಚಾನಿ । ತೀವ್ರಂ । ಸುತಂ । ಪಂಚಽದಶಂ । ನಿ । ಸಿಂಚಂ ॥ ೨ ॥

॥ ಸಾಯಣಭಾಷ್ಯಂ ॥

ಯದೀದ್ಯದಾಹಮೇವ ಯುಧಯೇ ಯುದ್ಧಾರ್ಥಮದೇವಯೂನ್ ದೇವಾನ್ನಿಚ್ಛತೋಽಯಜ್ವನಃ ಸಂನಯಾನಿ ಸಂಗಮಯಾಮಿ । ಕೀದೃಶಾನ್ । ತನ್ವಾ ಸ್ವಶರೀರೇಣ ಶೂಶುಜಾನಾನಾತ್ಮಂಭರಿತ್ವಾತ್ಪುಷ್ಟಿಲಕ್ಷಣಯಾ ದೀಪ್ತ್ಯಾ ಯುಕ್ತಾನ್ । ಪುಷ್ಟಾನಿತ್ಯರ್ಥಃ। ತದಾ ಹೇ ಇಂದ್ರ ಅಹಮಮತ್ರಿ-

ಗಾದಿಭಿಃ ಸಹಿತಸ್ತೇ ತುಭ್ಯಂ ತುವ್ರಂ ಪ್ರೇರಕಂ ಬಲಿನಂ । ಪೀವಾನಮಿತ್ಯರ್ಥಃ । ವೃಷಭಂ ಸೇಚನ ಸಮರ್ಥಂ ಪುಂಪಶುಂ ಪಚಾನಿ । ಕಿಂಚ ತೀವ್ರಂ ಮದಕರರಸಂ ಸುತಮಭಿಷುತಂ ಪಂಚದಶಂ । ಪ್ರ ಪತ್ಪ್ರಭೃತಿಪಂಚದಶಸಂಖ್ಯಾಕಾಸು ತಿಥಿಷು ಶುಕ್ಲಪಕ್ಷ ಏಕೋತ್ತರವೃದ್ಧ್ಯಾ ಪರ್ಣಾನಿ ಜಾಯಂತೇ ಕೃಷ್ಣಪಕ್ಷೇ ತು ತದ್ವನ್ನಿಹೀಯಂತೇ । ಏವಂಭೂತತ್ವಾತ್ಪಂಚದಶಃ ಸೋಮ ಉಚ್ಯತೇ । ತಂ । ಯದ್ವಾ ತ್ರಿವೃತ್ಪಂಚದಶಸ್ತೋಮೋಪೇತಂ ಮಾಧ್ಯಂದಿನಸವನಕಮಿತ್ಯರ್ಥಃ । ನಿ ಷಿಂಚಂ । ದಶಾಪವಿತ್ರೇ ದ್ರೋಣ ಕಲಶೇ ಚಮಸಪಾತ್ರೇಽಗ್ನೌ ವಾ ಸಿಂಚಾಮಿ । ಪ್ರಕ್ಷಿಪಾಮೀತ್ಯರ್ಥಃ ।

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಯತ್**—ಯಾವಾಗ । **ಅಹಮಿತ್**—ನಾನೇ । **ಯುಧಯೇ**—ಯುದ್ಧಾರ್ಥವಾಗಿ । **ತನ್ವಾ**—ತಮ್ಮ ಶರೀರಪುಷ್ಟಿಯಿಂದ । **ಶೂಶುಜಾನಾನ್**—ಕಾಂತಿಯನ್ನು ಹೊಂದಿರುವರೋ ಅಂತಹ । **ಅದೇವಯೂನ್**—ದೇವಪೂಜಕರಲ್ಲದ ನಾಸ್ತಿಕರನ್ನು । **ಸಂನಯಾಮಿ**—ಎದುರಿಸುವೆನೋ ಆಗ । **ಅನಸಾ** ಋತ್ವಿಕ್ಕುಗಳೊಡಗೂಡಿ । **ತೇ**—ನಿನ್ನನ್ನುದ್ದೇಶಿಸಿ । **ತುವ್ರಂ**—ಪುಷ್ಟವಾದ । **ವೃಷಭಂ**—ವೃಷಭವನ್ನು (ಎತ್ತನ್ನು) । **ಪಚಾಮಿ**—ಪಕ್ವಮಾಡುತ್ತೇನೆ । **ತೀವ್ರಂ**—ಮದಕರವಾದುದೂ । **ಸುತಂ**—ಹಿಂಡಲ್ಪಟ್ಟುದೂ ಆದ । **ಪಂಚದಶಂ**—ಸೋಮವನ್ನು । **ನಿ ಷಿಂಚಂ**—ಅರ್ಪಿಸುತ್ತೇನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ತಮ್ಮ ಶರೀರಪುಷ್ಟಿಯಿಂದ ಕಾಂತಿಯುತರಾದ ನಾಸ್ತಿಕರನ್ನು ನಾನೇ ಯುದ್ಧಾರ್ಥವಾಗಿ ಯಾವಾಗ ಎದುರಿಸುವೆನೋ ಆಗ ಋತ್ವಿಕ್ಕುಗಳೊಡಗೂಡಿ ನಿನ್ನನ್ನುದ್ದೇಶಿಸಿ ಪುಷ್ಟವಾದ ವೃಷಭವನ್ನು ಪಕ್ವಮಾಡುತ್ತೇನೆ. ಮದಕರವಾದುದೂ, ಹಿಂಡಲ್ಪಟ್ಟುದೂ ಆದ ಸೋಮವನ್ನು ಅರ್ಪಿಸುತ್ತೇನೆ.

English Translation

If I encounter in combat the undevout, resplendent in their bodies, then will I cook a vigorous bull for them, and will sprinkle (upon the fire) the exilarating effused juice the fifteenfold (Soma).

॥ ಸಂಹಿತಾಪಾಠಃ ॥

ನಾಹಂ ತಂ ವೇದ ಯ ಇತಿ ಬ್ರವೀತ್ಯದೇವಯೂನ್ತ್ಸಮರಣೇ ಜಘ್ನ್ವಾನ್ ।

ಯದಾವಾಖ್ಯತ್ಸಮರಣಮೃಘಾವದಾದಿದ್ಧ ಮೇ ವೃಷಭಾ ಪ್ರ ಬ್ರುವಂತಿ ॥

॥ ಪದಪಾಠಃ ॥

ನ । ಅಹಂ । ತಂ । ವೇದ । ಯಃ । ಇತಿ । ಬ್ರವೀತಿ । ಅದೇವऽಯೂನ್ । ಸಂऽಅರಣೇ । ಜಘನ್ವಾನ್ ।

ಯದಾ । ಅವऽಅಖ್ಯತ್ । ಸಂऽಅರಣಂ । ಋಘಾವತ್ । ಆತ್ । ಇತ್ । ಹ । ಮೇ । ವೃಷಭಾ । ಪ್ರ । ಬ್ರುವಂತಿ ॥ ೩ ॥

॥ ಸಾಯಣಭಾಷ್ಯಂ ॥

ಯೋ ಜನೋऽದೇವಯೂನ್ ದೇವಾನಕಾಮಯಮಾನಾನ್ದೇವದ್ವಿಷೋ ರಾಕ್ಷಸಾದೀನ್ಸಮರಣೇ ಸಂಗ್ರಾಮೇ ಜಘನ್ವಾನ್ ಅಹಂ ಹತವಾನಿತಿ ಬ್ರವೀತಿ ವದತಿ ತಂ ತಾದೃಶಂ ಮದ್ವ್ಯತಿರಿಕ್ತಂ ಜನಮಹಂ ನ ವೇದ । ನ ಜಾನಾಮಿ । ಮತ್ತೋऽನ್ಯಃ ಸಂಗ್ರಾಮೇ ಶತ್ರೂಣಾಂ ಹಂತಾ ನಾಸ್ತೀತ್ಯರ್ಥಃ । ಕಿಂಚ । ಯದಾ ಯಸ್ಮಿನ್ಕಾಲೇ ಸಮರಣಂ ಸಂಗ್ರಾಮಮವಾಖ್ಯತ್ ಅವಾಕ್ಯತಂ ನ್ಯಕ್ಕೃತಮಹಂ ಪಶ್ಯಾಮಿ । ಕೀದೃಶಂ । ಋಘಾವದೃಘಾವಂತಂ ಪರಸ್ಪರಂ ಹಿಂಸಾಯುಕ್ತಂ । ಅತ್ಯಂತಕ್ರೂರಮಿತ್ಯರ್ಥಃ । ಆತ್ತದಾನೀಂ ಮೇ ಮಮ ಸ್ವಭೂತಾನಿ ವೃಷಭಾ ವೃಷಭಕರ್ಮಾಣಿ ದರ್ಪಿತವೃಷಭಸ್ಯೇವ ವಿಕ್ರಾಂತಕರ್ಮಾಣಿ ಪ್ರ ಬ್ರುವಂತಿ । ವಿದ್ವಜ್ಜನಾ ಇತಿ ಶೇಷಃ । ಇದ್ಧೇತೀಮೌ ಪದಪೂರಣೌ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಪುರುಷನು । **ಅದೇವಯೂನ್**—ದೇವಪೂಜಕರಲ್ಲದ ಅಸುರರನ್ನು । **ಸಮಾರಣೇ**—ಯುದ್ಧದಲ್ಲಿ । **ಜಘನ್ವಾನ್**—ನಾನು ಕೊಂದಿದ್ದೇನೆ । **ಇತಿ**—ಎಂಬುದಾಗಿ । **ಬ್ರವೀತಿ**—ಹೇಳುವನೋ । **ತಂ**—ಅಂತಹ (ನನಗಿಂತಲೂ ಬೇರೆಯಾದ) ಪುರುಷನನ್ನು । **ಅಹಂ**—ನಾನು ! **ನ ವೇದ**—ಅರಿತಿಲ್ಲ । **ಯದಾ**—ಯಾವಾಗ । **ಋಘಾವತ್**—ಹಿಂಸಾಯುಕ್ತವಾದ । **ಸಮರಣಂ**—ಸಂಗ್ರಾಮವನ್ನು । **ಅವಾಖ್ಯತ್**—ನಾನು ನೋಡುವೆನೋ । **ಆತ್ ಇತ್**—ಆ ಒಡನೆಯೇ । **ಮೇ**—ನನ್ನ । **ವೃಷಭಾ**- ಪಾಪಕರ್ಮಗಳನ್ನು । **ಪ್ರ ಬ್ರುವಂತಿ ಹ**—ವಿದ್ವಜ್ಜನರು ಪ್ರಶಂಸಿಸುತ್ತಾರೆ.

॥ ಭಾವಾರ್ಥ ॥

“ದೇವಪೂಜಕರಲ್ಲದ ಅಸುರರನ್ನು ಯುದ್ಧದಲ್ಲಿ ನಾನು ಕೊಂದಿದ್ದೇನೆ” ಎಂದು ಯಾವ ಪುರುಷನು ಹೇಳುವನೋ ಅಂತಹ ನನಗಿಂತಲೂ ಬೇರೆಯಾದ ಪುರುಷನನ್ನು ನಾನು ನೋಡಿಯೇ ಇಲ್ಲ. ಹಿಂಸಾಯುಕ್ತವಾದ ಸಂಗ್ರಾಮವು ಆರಂಭವಾದುದನ್ನು ನಾನು ಯಾವಾಗ ನೋಡುವೆನೋ ಆ ಒಡನೆಯೇ ನನ್ನ ಪರಾಕ್ರಮಗಳನ್ನು ವಿದ್ವಜ್ಜನರು ಪ್ರಶಂಸಿಸುತ್ತಾರೆ.

## English Translation

"I know not that man who says that he is the slayer in battle of those who do not reverence the gods: but when (I behold) the fierce war commenced, then (my enemies) proclaim my prowess.

॥ ಸಂಹಿತಾಪಾಠಃ ॥

ಯದಜ್ಞಾತೇಷು ವೃಜನೇಷ್ವಾಸಂ ವಿಶ್ವೇ ಸತೋ ಮಘವಾನೋ ಮ ಆಸನ್ ।
ಜಿನಾಮಿ ವೇತ್ಕ್ಷೇಮ ಆ ಸಂತಮಾಭುಂ ಪ್ರ ತಂ ಕ್ಷಿಣಾಂ ಪರ್ವತೇ ಪಾದಗೃಹ್ಯ ॥ ೪ ॥

॥ ಪದಪಾಠಃ ॥

ಯತ್ । ಅಜ್ಞಾತೇಷು । ವೃಜನೇಷು । ಆಸಂ । ವಿಶ್ವೇ । ಸತಃ । ಮಘಽವಾನಃ । ಮೇ । ಆಸನ್ ।
ಜಿನಾಮಿ । ವಾ । ಇತ್ । ಕ್ಷೇಮೇ । ಆ । ಸಂತಂ । ಆಭುಂ । ಪ್ರ । ತಂ । ಕ್ಷಿಣಾಂ । ಪರ್ವತೇ । ಪಾದಽಗೃಹ್ಯ ॥ ೪ ॥

॥ ಸಾಯಣಭಾಷ್ಯಂ ॥

ಯದ್ಯದಾಜ್ಞಾತೇಷು ಶರೀರವಸ್ತ್ರಾಸ್ತ್ರಬಲಾದಿಭಿರಪರಿಜ್ಞಾತೇಷು ವೃಜನೇಷು ಸಂಗ್ರಾಮೇಷ್ವಾಸಂ ಅಹಂ ಯುದ್ಧಾರ್ಥಮುಪವಿಶಾಮಿ ತದಾ ವಿಶ್ವೇ ಸರ್ವೇ ಮಘವಾನೋ ಹವಿರ್ಲಕ್ಷಣಧನೋಪಲಕ್ಷಣಧನವಂತ ಋಷಯಃ ಸತ ಏವಂ ವರ್ತಮಾನಸ್ಯ ಮೇ ಮಮೇಂದ್ರಸ್ಯ ಸಮೀಪ ಆಸನ್ । ಉಪವಿಶಂತಿ । ಮಮ ವೀರ್ಯವೃದ್ಧ್ಯರ್ಥಂ ಮಾಂ ಸ್ತುವಂತಸ್ತಿಷ್ಠಂತೀತ್ಯರ್ಥಃ । ಅಪಿ ಚ ಕ್ಷೇಮೇ ಜಗತ್ಪಾಲನೇ ನಿಮಿತ್ತ ಆ ಸಂತಂ । ಆಕಾರೋಽಭೀತ್ಯಸ್ಯಾರ್ಥೇ ವರ್ತತೇ । ಸರ್ವಮಭಿಭವಂತಮಾಭುಂ ಮಹಾಂತಂ ಶತ್ರುಂ ಜಿನಾಮಿ ವಾ । ವಿನಾಶಯಾಮ್ಯೇವ । ನಾತ್ರ ವಿನಾಶೇ ಸಂಶಯಃ । ಇದಿತಿ ಪೂರಣಃ । ತಂ ಮಹಾಂತಂ ಶತ್ರುಂ ಪಾದಗೃಹ್ಯ ಪಾದೌ ಗೃಹೀತ್ವಾ ಪರ್ವತೇ ಗಿರೌ ಪ್ರ ಕ್ಷಿಣಾಂ । ಪ್ರಹಿನಸ್ಮಿ । ಪ್ರಕ್ಷಿಪಾಮಿ॥

॥ ಪ್ರತಿಪದಾರ್ಥ ॥

ಯತ್—ಯಾವಾಗ । ಅಜ್ಞಾತೇಷು—ಹಿಂದೆಲ್ಲಾ ಅರಿಯದ । ವೃಜನೇಷು—ಸಂಗ್ರಾಮಗಳಲ್ಲಿ । ಆಸಂ—ನಾನು ನಿರತನಾಗಿರುವೆನೋ ಆಗ । ವಿಶ್ವೇ—ಸಮಸ್ತರಾದ । ಮಘವಾನಃ—ಹವಿಸ್ಸಿನಿಂದ ಕೂಡಿದ ಋಷಿಗಳೂ । ಸತಃ—ಈ ಕಾರ್ಯದಲ್ಲಿ ನಿರತನಾದ । ಮೇ—ನನ್ನ ಸಮೀಪದಲ್ಲಿ । ಆಸನ್—ಕುಳಿತುಕೊಳ್ಳುತ್ತಾರೆ (ಪ್ರಶಂಸಿಸುತ್ತಾರೆ) । ಆಸಂತಂ—ಸರ್ವತ್ರ ಪ್ರಸರಿಸುವವನೂ । ಆಭುಂ—ಶಕ್ತಿಯುತನೂ ಆದ ಶತ್ರುವನ್ನು । ಕ್ಷೇಮೇ—ಜಗದ್ರಕ್ಷಣೆಗಾಗಿ । ಜಿನಾಮಿ ವಾ—ಖಂಡಿತ ನಾಶಪಡಿಸುತ್ತೇವೆ । ತಂ—ಪರಾಕ್ರಮಿಯಾದ ಶತ್ರುವನ್ನು । ಪಾದಗೃಹ್ಯ- ಕಾಲಿನಿಂದ ಹಿಡಿದು । ಪರ್ವತೇ—ಪರ್ವತದ ಮೇಲ್ಭಾಗದಿಂದ । ಪ್ರ ಕ್ಷಿಣಾಂ—ಕೆಳಕ್ಕೆ ಎಸೆಯುತ್ತೇನೆ.

॥ ಭಾವಾರ್ಥ ॥

ಹಿಂದೆಲ್ಲೂ ಅರಿಯದ ಘೋರ ಸಂಗ್ರಾಮದಲ್ಲಿ ನಾನು ಯಾವಾಗ ನಿರತನಾಗಿರುವೆನೋ ಆಗ ಹವಿರ್ಯುಕ್ತರಾದ ಸಕಲ ಋಷಿಗಳೂ ಈ ಕಾರ್ಯದಲ್ಲಿ ನಿರತನಾದ ನನ್ನ ಸಮೀಪದಲ್ಲಿ ಕುಳಿತು ಪ್ರಶಂಸಿಸುತ್ತಾರೆ. ಸರ್ವತ್ರ ಪ್ರಸರಿಸುವವನೂ, ಶಕ್ತಿಯುತನೂ ಆದ ಶತ್ರುವನ್ನು ಜಗದ್ರಕ್ಷಣೆಗಾಗಿ ನಾನು ಖಂಡಿತ ನಾಶಮಾಡುತ್ತೇನೆ. ಅಂತಹ ಶತ್ರುವನ್ನು ಕಾಲಿನಿಂದ ಹಿಡಿದು ಪರ್ವತದ ಮೇಲ್ಭಾಗದಿಂದ ಕೆಳಕ್ಕೆ ಎಸೆಯುತ್ತೇನೆ.

English Translation

When I enter upon unprecedented combats, then all those who are affluent in oblations approach me so engaged: I destroy the mighty and overpowring foe for the protection of the world, and, seizing him by the feet, throw him down from the mountain.

॥ ಸಂಹಿತಾಪಾಠಃ ॥

ನ ವಾ ಉಱ್ಮಾಂ ವೃಜನೇ ವಾರಯಂತೇ ನ ಪರ್ವತಾಸೋ ಯದಹಂ ಮನಸ್ಯೇ ।

ಮಮ ಸ್ವನಾತ್ಕೃಧುಕರ್ಣೋ ಭಯಾತ ಏವೇದನು ದ್ಯೂನ್ಕಿರಣಃ ಸಮೇ-ಜಾತ್ ॥ ೪ ॥

॥ ಪದಪಾಠಃ ॥

ನ । ವೈ । ಊಂ ಇತಿ । ಮಾಂ । ವೃಜನೇ । ವಾರಯಂತೇ । ನ । ಪರ್ವತಾಸಃ । ಯತ್ । ಅಹಂ । ಮನಸ್ಯೇ ।

ಮಮ । ಸ್ವನಾತ್ । ಕೃಧುಽಕರ್ಣಃ । ಭಯಾತೇ । ಏವ । ಇತ್ । ಅನು । ದ್ಯೂನ್ । ಕಿರಣಃ । ಸಂ । ಏಜಾತ್ । ೪ ॥

॥ ಸಾಯಣಭಾಷ್ಯಂ ॥

ವೈ ಉ ಇತ್ಯೇತೌ ಏವ । ವೃಜನೇ ಸಂಗ್ರಾಮೇ ಮಾಂ ಯುದ್ಧಾರ್ಥಮುಪಸ್ಥಿತಂ ಸಂತಂ ನ ವಾರಯಂತೇ । ಕೇಚಿನ್ನಿವಾರಯಿತುಂ ಸಮರ್ಥಾ ನ ಭವಂತಿ । ಅಹಂ ಯತ್ಕರ್ಮ ಮನಸ್ಯೇ ಮನಸಾ ಕರ್ತುಮಿಚ್ಛಾಮಿ ಪರ್ವತಾಸೋಽವಿತರಣಕ್ಷಮಾ ಹಿಮವದಾದಯೋ ಗಿರಯಸ್ತತ್ಕರ್ಮ ಮನಸಾ

ಪ್ರೇರಯಿತುಂ ನ ಶಕ್ನುವಂತೀತ್ಯರ್ಥಃ । ಕಿಂಚ ಮಮೇಂದ್ರಸ್ಯ ಸ್ವನಾಚ್ಛಬ್ದಾದೇವ ಕೃಧುಕರ್ಣೋ ನಾಮಾಸುರಃ ಯದ್ವಾ ಕೃಧುಕರ್ಣೋ ಹ್ರಸ್ವಕರ್ಣೋ ಮಂದಶ್ರವಣೇಂದ್ರಿಯೋ ಬಧಿರಃ ಸ್ಥಾವರಪಿಪೀಲಿಕಾದಿರಪಿ ಭಯಾತೇ। ಬಿಭೇತಿ। ಅಪಿ ಚೈವೇದೇವಮೇವ ಕೃಧುಕರ್ಣವದನು ದ್ಯೂನ್ । ಪ್ರತಿದಿನಮಿತ್ಯರ್ಥಃ । ಕಿರಣಃ । ಅಂತರ್ಣೀತಮತ್ವರ್ಥಮೇತತ್ । ಕಿರಣವಾನ್ರಶ್ಮಿವಾನಾದಿತ್ಯಃ ಸಮೇಜಾತ್ । ಸಮ್ಯಕ್ಕಂಪಯತೇ । ಚಲತಿ । ನಿಯಮೇನ ಪ್ರಯಾತೀತ್ಯರ್ಥಃ

। ಪ್ರತಿಪದಾರ್ಥ ।

ವೃಜನೇ—ಯುದ್ಧದಲ್ಲಿ । ಮಾಂ—ಸಿರತನಾದ ನನ್ನನ್ನು । ನ ವೈ ವಾರಯಂತೇ—ಯಾರೂ ತಡೆಯಲಾರರು । ಅಹಂ—ನಾನು । ಯತ್—ಯಾವ ಕಾರ್ಯವನ್ನು । ಮನಸ್ಯೇ—ಸಂಕಲ್ಪಿಸುವೆನೋ ಅದನ್ನು ಪರ್ವತಾಸಃ—ಪರ್ವತಗಳೂ । ನ—ತಡೆಯಲಾರವು । ಮಮ—ನನ್ನ । ಸ್ವನಾತ್—ಶಬ್ದದಿಂದ । ಕೃಧುಕರ್ಣಃ—ಮಂದವಾದ ಕಿವಿಯುಳ್ಳವನೂ ಸಹ । ಭಯಾತೇ—ಭಯಗೊಳ್ಳುತ್ತಾನೆ । ಏವೇತ್—ಇದರಂತೆಯೇ । ಅನು ದ್ಯೂನ್—ಪ್ರತಿದಿನವೂ । ಕಿರಣಃ—ಆದಿತ್ಯನೂ ಸಹ । ಸಮೇಜಾತ್—ಕಂಪಿಸುತ್ತಾನೆ.

। ಭಾವಾರ್ಥ ।

ಯುದ್ಧದಲ್ಲಿ ಸಿರತನಾದ ನನ್ನನ್ನು ಯಾರೂ ತಡೆಯಲಾರರು. ನಾನು ಯಾವ ಕಾರ್ಯವನ್ನು ಸಂಕಲ್ಪಿಸುವೆನೋ ಅದನ್ನು ಪರ್ವತಗಳೂ ಪ್ರತಿಭಟಿಸಲಾರವು. ನನ್ನ ಶಬ್ದದಿಂದ ಮಂದವಾದ ಕಿವಿಯುಳ್ಳವನೂ ಸಹ ಭಯಗೊಳ್ಳುತ್ತಾನೆ. ಇದರಂತೆಯೇ. ಪ್ರತಿದಿನವೂ ಆದಿತ್ಯನೂ ಸಹ ಕಂಪಿಸುತ್ತಾನೆ.

English Translation

None resist me (engaged) in combat, not even the mountains when I am resolved: at my shout the dullest of hearing is alarmed, and so too even the bright-rayed (sun) trembles day by day.

। ಸಂಹಿತಾಪಾಠಃ ।

ದರ್ಶನ್ನ್ವತ್ರ ಶೃತಪಾಁ ಅನಿಂದ್ರಾನ್ಬಾಹುಕ್ಷದಃ ಶರವೇ ಪತ್ಯಮಾನಾನ್ ।
ಘೃಷುಂ ವಾ ಯೇ ನಿನಿದುಃ ಸಖಾಯಮಧ್ಯೂ ನ್ವೇಷು ಪವಯೋ ವವೃತ್ಯುಃ ॥ ೬ ॥

। ಪದಪಾಠಃ ।

ದರ್ಶನ್ । ನು । ಅತ್ರ । ಶೃತಽಪಾನ್ । ಅನಿಂದ್ರಾನ್ । ಬಾಹುಽಕ್ಷದಃ । ಶರವೇ । ಪತ್ಯಮಾನಾನ್ ।
ಘೃಷುಂ । ವಾ । ಯೇ । ನಿನಿದುಃ । ಸಖಾಯಂ । ಅಧಿ । ಊಂ ಇತಿ । ನು । ಏಷು । ಪವಯಃ । ವವೃತ್ಯುಃ ॥ ೬ ॥

। ಸಾಯಣಭಾಷ್ಯಂ ।

ಅತ್ರಾಸ್ಮಿಞ್ಜಗತಿ ಶೃತಪಾಞ್ಛೃತಾನಿ ಪಕ್ವಾನಿ ಸೋಮಾದಿಹವೀಂಷ್ಯಪಹೃತ್ಯ ಪಿಬತೋಽನಿಂದ್ರಾನಿಂದ್ರೇಣ ಮಯಾ ವರ್ಜಿತಾನ್ ಬಾಹುಕ್ಷದೋ ಬಾಹುಭಿರ್ಯಜಮಾನಾಞ್ಶಕಲೀಕುರ್ವತಃ ಶರವೇ ಹಿಂಸಾರ್ಥಂ ಪತ್ಯಮಾನಾನಭಿಪತತೋಽಸುರಾದೀನ್ನು ಕ್ಷಿಪ್ರಂ ದರ್ಶನ್। ಅಹಮಿಂದ್ರಃ ಪಶ್ಯಾಮಿ। ಏವಂ ತೇಷ್ವೇಷ್ವಧ್ಯುಪರಿ ಪವಯೋ ಮದೀಯಾನ್ಯಾಯುಧಾನಿ ವವೃತ್ಯುಃ। ವರ್ತಂತೇ। ವಾಶಬ್ದಃ ಸಮುಚ್ಚಯೇ। ಘೃಷುಂ ಮಹಾಂತಂ ಚ ಸಖಾಯಂ ಸಖಿವತ್ಪ್ರಿಯಂ ಹಿತಸ್ಯ ಕರ್ತಾರಂ ಮಾಂ ಯೇ ನಿನಿದುಃ ನಿಂದಂತಿ। ಉ ಇತಿ ಸಮುಚ್ಚಯೇ। ಏಷು ಚೋಪರಿ ಮದೀಯಾನ್ಯಾಯುಧಾನಿ ಕ್ಷಿಪ್ರಂ ವರ್ತಂತೇ ॥

॥ ಪ್ರತಿಪದಾರ್ಥ ।

ಅತ್ರ—ಈ ಲೋಕದಲ್ಲಿ। **ಶೃತಪಾನ್**—ಪಕ್ವವಾದ ಹವಿಸ್ಸುಗಳನ್ನು ಅಪಹರಿಸಿ ಪಾನಮಾಡುವವರೂ। **ಅನಿಂದ್ರಾನ್**—ಇಂದ್ರಪೂಜಕರಲ್ಲದವರೂ। **ಬಾಹುಕ್ಷದಃ**—ಬಾಹುಗಳಿಂದ ಯಜಮಾನರನ್ನು ಕತ್ತರಿಸುವವರೂ। **ಶರವೇ**—ಹಿಂಸಾರ್ಥವಾಗಿ। **ಪತ್ಯಮಾನಾನ್**—ಎದುರುಬೀಳುವವರೂ ಆದ ಅಸುರರನ್ನು। **ನು**—ಕ್ಷಿಪ್ರವಾಗಿ। **ದರ್ಶನ್**—ನಾನು ನೋಡುತ್ತೇನೆ। **ಘೃಷುಂ**—ಮಹಾತ್ಮನೂ। **ಸಖಾಯಂ**—ಯಜಮಾನರಿಗೆ ಮಿತ್ರನೂ ಆದ ನನ್ನನ್ನು। **ಯೇ**—ಯಾರು। **ನಿನಿದುಃ**—ದೂಷಿಸುವರೋ। **ಏಷು ಅಧಿ**—ಅವರ ಮೇಲೆ। **ಪವಯಃ**—ನನ್ನ ಆಯುಧಗಳು। **ವವೃತ್ಯುಃ**—ಬೀಳುತ್ತವೆ.

। ಭಾವಾರ್ಥ ।

ಪಕ್ವವಾದ ಹವಿಸ್ಸನ್ನು ಅಪಹರಿಸಿ ಪಾನಮಾಡುವವರೂ, ಇಂದ್ರಪೂಜಕರಲ್ಲದವರೂ, ಬಾಹುಗಳಿಂದ ಯಜಮಾನರನ್ನು ಕತ್ತರಿಸುವವರೂ, ಹಿಂಸಾರ್ಥವಾಗಿ ಎದುರುಬೀಳುವವರೂ ಆದ ಅಸುರರನ್ನು ನಾನು ಕ್ಷಿಪ್ರವಾಗಿ ನೋಡುತ್ತೇನೆ. ಮಹಾತ್ಮನೂ, ಯಜಮಾನರಿಗೆ ಮಿತ್ರನೂ ಆದ ನನ್ನನ್ನು ಯಾರು ದೂಷಿಸುವರೋ ಅವರ ಮೇಲೆ ನನ್ನ ಆಯುಧಗಳು ಬೀಳುತ್ತವೆ.

## English Translation

Beholding here the drinkers of the libations who serve not Indra, who cut (the worshippers) to pieces with their hands, assailing them to do them harm; my shafts quickly fall upon them, as well as on those who revile (your) powerful friend.

। ಸಂಹಿತಾಪಾಠಃ ।

ಅಭೂರ್ವೌಕ್ಷೀರ್ವ್ಯು೧ ಆಯುರಾನಡ್ದರ್ಷನ್ನು ಪೂರ್ವೋ ಅಪರೋ ನು ದರ್ಷತ್ ।

ದ್ವೇ ಪವಸ್ತೇ ಪರಿ ತಂ ನ ಭೂತೋ ಯೋ ಅಸ್ಯ ಪಾರೇ ರಜಸೋ ವಿವೇಷ ॥

॥ ಪದಪಾಠಃ ॥

ಅಭೂಃ । ಊಂ ಇತಿ । ಔಕ್ಷೀಃ । ವಿ । ಊಂ ಇತಿ । ಆಯುಃ । ಆನಟ್ । ದರ್ಷತ್ । ನು । ಪೂರ್ವಃ । ಅಪರಃ । ನು । ದರ್ಷತ್ ।

ದ್ವೇ ಇತಿ । ಪವಸ್ತೇ ಇತಿ । ಪರಿ । ತಂ । ನ । ಭೂತಃ । ಯಃ । ಅಸ್ಯ । ಪಾರೇ । ರಜಸಃ । ವಿವೇಷ ॥ ೭

॥ ಸಾಯಣಭಾಷ್ಯಂ ॥

ಅತ್ರ ಮಧ್ಯಮಪುರುಷತ್ವೇನೇಂದ್ರಸ್ಯೋಚ್ಯಮಾನತ್ವಾದ್ವಸುಕ್ರ ಇಂದ್ರಂ ಸ್ತೌತಿ । ಉ ಇತ್ಯವಧಾರಣೇ । ಹೇ ಇಂದ್ರ ಅಭೂಃ । ತ್ವಮೇವ ಪ್ರಾದುರ್ಭವಸಿ । ಔಕ್ಷೀಃ । ಕಾಲೇ ಕಾಲೇ ತ್ವಮೇವ ಪೃಥಿವೀಂ ಸಿಂಚಸಿ । ನಾನ್ಯ ಇತ್ಯರ್ಥಃ । ಆನಡಿತ್ಯಾದೌ ಸರ್ವತ್ರ ಪರೋಕ್ಷನಿರ್ದೇಶೇ ಪ್ರತ್ಯಕ್ಷೀಕರಣಾರ್ಥಂ ಮಧ್ಯಮಪುರುಷೇಣ ಪ್ರಕೃತತ್ವಾದೇಕವಾಕ್ಯತಾಯೈ ಯುಷ್ಮಚ್ಛಬ್ದಸಮಾನಾರ್ಥೋ ಭವಚ್ಛಬ್ದೋಽಧ್ಯಾಹರ್ತವ್ಯಃ । ವಿ ಇತಿ ವೈವಿಧ್ಯೇ । ಉ ಇತಿ ಚಾರ್ಥೇ । ಆಯುರ್ಜೀವಿತಮುಚ್ಯತೇ । ಇಂದ್ರೋ ಭವಾನ್ವಿವಿಧಮಾಯುಶ್ಚಾನಟ್ ವ್ಯಾಪ್ನೋತಿ । ಆ ಭೂತಸಂಪ್ಲವಾಜ್ಜೀವತೀತ್ಯರ್ಥಃ । ಕಿಂಚ ಪೂರ್ವಃ ಪುರಾತನೋ ಭವಾನಿಂದ್ರೋ ನು ಕ್ಷಿಪ್ರಂ ದರ್ಷತ್ । ದೃ ವಿದಾರಣೇ । ಸಿಬ್ಬಹುಲಂ ಲೇಟಿ । ವಜ್ರೇಣ ಶತ್ರೂನ್ವಿದಾರಯತಿ । ಅಪರೋಽನ್ಯಃ ಶತ್ರುರ್ನು ದರ್ಷತ್ । ನು ಇತಿ ನಿಷೇಧಾರ್ಥೇ । ಭವಂತಮಿಂದ್ರಂ ನ ವಿದಾರಯತಿ । ಭವಾನೇವ ಸರ್ವಂ ಶತ್ರುಜಾತಂ ಹಿನಸ್ತೀತ್ಯರ್ಥಃ । ಅಪಿ ಚ ಯೋ ಭವಾನಿಂದ್ರೋಽಸ್ಯೇದೃಶಸ್ಯ ರಜಸೋ ಲೋಕಸ್ಯ । ತ್ರೈಲೋಕ್ಯಸ್ಯೇತ್ಯರ್ಥಃ । ಪಾರೇ ಪರತಃ । ಪರಮಸೂಕ್ಷ್ಮವಾಯುರೂಪೇಣ ಸೃಷ್ಟಿಕಾರಣಾತ್ಮನಾ ಸ್ಥಿತ್ವೇತಿ ಶೇಷಃ । ವಿವೇಷ ಸರ್ವತೋ ವ್ಯಾಪ್ನೋತಿ ತಂ ಭವಂತಮಿಂದ್ರಂ ದ್ವೇ ಇತಿ ಸಾಮರ್ಥ್ಯಾದ್ದ್ಯಾವಾಪೃಥಿವ್ಯೌ ನ ಪರಿ ಭೂತಃ । ನ ಪರಿಭವತಃ । ಅಭಿಭವಿತುಂ ನ ಶಕ್ನುತ ಇತ್ಯರ್ಥಃ । ಕೀದೃಶ್ಯೌ । ಪವಸ್ತೇ ॥ ಪವತಿರ್ಗತಿಕರ್ಮಾ । ಅಸ್ಮಾದೌಣಾದಿಕೋಽಸ್ತಪ್ರತ್ಯಯಃ । ಅತೋಽಜಾದ್ಯತಷ್ಟಾಪ್ । ಪಾ.೪-೧-೪ । ಇತಿ ಟಾಪಿ ಕೃತೇ ಪ್ರಥಮಾದ್ವಿವಚನೇ ಚೈತದ್ರೂಪಂ ಭವತಿ । ಮಹತ್ತ್ವೇನ ಸರ್ವಸ್ಯಾಭಿಭವನಾಯ ಗಚ್ಛಂತ್ಯೌ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಅಭೂಃ**—ನೀನು ಪ್ರಾದುರ್ಭೂತನಾಗಿದ್ದೀಯೆ । **ಔಕ್ಷೀಃ**—ಸಕಾಲದಲ್ಲಿ ಮಳೆಯನ್ನು ಸುರಿಸುತ್ತೀಯೆ । **ಆಯುಃ**—ಸಕಲ ಜೀವಲೋಕವನ್ನು । **ಆನಟ್**—ವ್ಯಾಪಿಸುತ್ತೀಯೆ । **ಪೂರ್ವಃ**—ಪುರಾತನನಾದ ಇಂದ್ರನು । **ನು**—ಕ್ಷಿಪ್ರವಾಗಿ । **ದರ್ಷತ್**—ಶತ್ರುಗಳನ್ನು ನಾಶಮಾಡುತ್ತಾನೆ । **ಅಪರಃ**—ಶತ್ರುವು । **ನು ದರ್ಷತ್**—ಇಂದ್ರನನ್ನು ಖಂಡಿತ ನಾಶಮಾಡಲಾರ । **ಯಃ**—ಯಾವ ಇಂದ್ರನು । **ಅಸ್ಯ ರಜಸಃ**—ಈ ಲೋಕದ । **ಪಾರೇ**—ಅಂತದಲ್ಲಿ ನಿಂತು । **ವಿವೇಷ**—ಸರ್ವಪ್ರವೇಶಗಳನ್ನು ವ್ಯಾಪಿಸುವನೋ । **ತಂ**—ಆ ಇಂದ್ರನನ್ನು । **ಪವಸ್ತೇ**—ಮಾಹಾತ್ಮ್ಯದಿಂದ ಕೂಡಿದ । **ದ್ವೇ**—ದ್ಯಾವಾಪೃಥಿವಿಗಳೆರಡೂ । **ನ ಪರಿ ಭೂತಃ**—ಅತಿಕ್ರಮಿಸಲಾರವು.

। ಭಾವಾರ್ಥ ।

ಎಲೈ ಇಂದ್ರನೇ, ನೀನು ಲೋಕಕ್ಕೆಲ್ಲ ತಿಳಿಯುವಂತೆ ಪ್ರಾದುರ್ಭೂತನಾಗಿದ್ದೀಯೆ. ಸಕಾಲದಲ್ಲಿ ಮಳೆಯನ್ನು ಸುರಿಸುತ್ತೀಯೆ. ಸಕಲ ಜೀವಲೋಕವನ್ನು ವ್ಯಾಪಿಸುತ್ತೀಯೆ. ಪುರಾತನನಾದ ಇಂದ್ರನು ಕ್ಷಿಪ್ರವಾಗಿ ಶತ್ರುಗಳನ್ನು ನಾಶಮಾಡುತ್ತಾನೆ. ಆದರೆ ಶತ್ರುವು ಇಂದ್ರನನ್ನು ಖಂಡಿತ ನಾಶಮಾಡಲಾರ. ಯಾವ ಇಂದ್ರನು ಈ ಲೋಕದ ಅಂತದಲ್ಲಿ ನಿಂತು ಸರ್ವಪ್ರದೇಶಗಳನ್ನು ವ್ಯಾಪಿಸುವನೋ ಆ ಇಂದ್ರನನ್ನು ಮಾಹಾತ್ಮ್ಯದಿಂದ ಕೂಡಿದ ದ್ಯಾವಾಪೃಥಿವಿಗಳೆರಡೂ ಅತಿಕ್ರಮಿಸಲಾರವು.

English Translation

(The Rishi speaks) : You, Indra, are manifest ; (from time to time) you water (the earth) : Indra pervades all existence : the ancient Indra verily destroys (his foe), the other does not destroy (Indra). The united two (heaven and earth) surpass not him who extends beyond the confines of the universe.

॥ ಸಂಹಿತಾಪಾಠ ॥

ಗಾವೋ ಯವಂ ಪ್ರಯುತಾ ಅರ್ಯೋ ಅಕ್ಷಂತಾ ಅಪಶ್ಯಂ ಸಹಗೋಪಾ-
ಶ್ಚರಂತೀಃ ।
ಹವಾ ಇದರ್ಯೋ ಅಭಿತಃ ಸಮಾಯನ್ಕಿಯದಾಸು ಸ್ವಪತಿಶ್ಛಂದಯಾತೇ ॥

॥ ಪದಪಾಠ ॥

ಗಾವಃ । ಯವಂ । ಪ್ರಽಯುತಾಃ । ಅರ್ಯಃ । ಅಕ್ಷನ್ । ತಾಃ । ಅಪಶ್ಯಂ । ಸಹಽಗೋಪಾಃ ।
ಚರಂತೀಃ ।
ಹವಾಃ । ಇತ್ । ಅರ್ಯಃ । ಅಭಿತಃ । ಸಂ । ಆಯನ್ । ಕಿಯತ್ । ಆಸು । ಸ್ವಽಪತಿಃ । ಛಂದ-
ಯಾತೇ ॥ ೮ ॥

॥ ಸಾಯಣಭಾಷ್ಯಂ ॥

ಗಾವೋ ಧೇನವಃ ಪ್ರಯುತಾಃ ಪ್ರಕರ್ಷೇಣ ಮಿಶ್ರಿತಾಃ ಪರಸ್ಪರೇಣ ಸಹ ಭೂತಾ ಯವಂ ಮದ್ವೃಷ್ಟಿಜನಿತಯವಾದಿಘಾಸಮಕ್ಷನ್ । ಅದಂತಿ । ಭಕ್ಷಯಂತಿ । ಅರ್ಯಃ ಸರ್ವಸ್ಯ ಸ್ವಾಮ್ಯಹಂ ತಾ ಗಾ ಅಪಶ್ಯಂ । ಪಶ್ಯಾಮಿ । ಕೀದೃಶೀಃ । ಸಹಗೋಪಾಃ । ಪಶುಪಾಲಕೇನ ಸಹಿತಾಶ್ಚರಂತೀರ್ಘಾಸಂ ಭಕ್ಷಯಂತೀಃ । ಏವಂಭೂತಾಸ್ತಾಃ ಪರಯಾ ಪ್ರೀತ್ಯಾ ಪಶ್ಯಾಮೀತ್ಯರ್ಥಃ । ಕಿಂಚ ಹವಾ ವಾಹನದೋ-

ಹನಾರ್ಥಮಾಹ್ವಾನಾರ್ಹಾ ಗಾವೋ ಅರ್ಯಃ । ದ್ವಿತೀಯಾರ್ಥೇ ಪ್ರಥಮಾ । ಅರ್ಯಂ ಸ್ವಾಮಿನಂ ಪ್ರತ್ಯಭಿತಃ ಸರ್ವತಃ ಸಮಾಯನ್ । ಸಮಿತ್ಯೇಕೀಭಾವೇ । ಏಕೀಭೂಯಾಗಚ್ಛಂತಿ । ಇದಿತಿ ಪೂರಣಃ । ಆಗತಾಸ್ವಾಸು ಗೋಷು ಸ್ವಪತಿಃ ಸ್ವಾನಾಂ ಗವಾಂ ಸ್ವಾಮೀ ಕಿಯತ್ಕ್ಷೀರಂ ಛಂದಯಾತೇ । ದೋಗ್ಧುಂ ಕಾಮಯತೇ । ಮದರ್ಥಂ ದೋಗ್ಧೀತ್ಯರ್ಥಃ । ಗಾವ ಆಶಿರಂ ದುದುಹ್ರೇ । ಋ. ೮-೬೯-೬ । ಇತಿ ವಚನಾತ್ ॥

॥ ಪ್ರತಿಪದಾರ್ಥ ॥

ಗಾವಃ—ಧೇನುಗಳು । ಪ್ರಯುತಾಃ—ಒಟ್ಟಿಗೆ ಸೇರಿಕೊಂಡು । ಯವಂ—ಯವಧಾನ್ಯವನ್ನು । ಅಕ್ಷನ್—ಭಕ್ಷಿಸುತ್ತವೆ । ಅರ್ಯಃ—ಅವುಗಳಿಗೆ ಸ್ವಾಮಿಯಾದ ನಾನು । ತಾಃ—ಆ ಗೋವುಗಳನ್ನು । ಅಪಶ್ಯಂ—ನೋಡುತ್ತೇನೆ । ಸಹಗೋಪಾಃ—ಗೋಪಾಲಕನೊಂದಿಗೆ ಕೂಡಿರುವುವೂ । ಚರಂತೀಃ—ಹುಲ್ಲನ್ನು ಮೇಯುವುವೂ । ಹವಾಃ—ಆಹ್ವಾನಕ್ಕೆ ಯೋಗ್ಯವಾದವೂ ಆದ ಗೋವುಗಳು । ಅರ್ಯಃ—ಸ್ವಾಮಿಯ । ಅಭಿತಃ—ಸುತ್ತಲೂ । ಸಮಾಯನ್—ಸೇರಿ ಸುತ್ತಿಕೊಂಡಿವೆ । ಆಸು—ಈ ಗೋವುಗಳಲ್ಲಿ । ಸ್ವಪತಿಃ—ಈ ಗೋವುಗಳ ಯಜಮಾನನು । ಕಿಯತ್—ಪ್ರಭೂತವಾದ ಕ್ಷೀರವನ್ನು ಕರೆಯಲು । ಛಂದಯಾತೇ—ಅಪೇಕ್ಷಿಸುತ್ತಾನೆ (ಅಥವಾ, ಎಷ್ಟು ಕ್ಷೀರವನ್ನು ಕರೆಯಲು ಅಪೇಕ್ಷಿಸುತ್ತಾನೆ).

॥ ಭಾವಾರ್ಥ ॥

ಧೇನುಗಳು ಒಟ್ಟಿಗೆ ಸೇರಿಕೊಂಡು ಯವಧಾನ್ಯವನ್ನು ಭಕ್ಷಿಸುತ್ತವೆ. ಅವುಗಳಿಗೆ ಸ್ವಾಮಿಯಾದ ನಾನು ಆ ಗೋವುಗಳನ್ನು ನೋಡುತ್ತೇನೆ. ಗೋಪಾಲಕನೊಂದಿಗೆ ಕೂಡಿರುವುವೂ, ಹುಲ್ಲನ್ನು ಮೇಯುವುವೂ, ಆಹ್ವಾನಕ್ಕೆ ಯೋಗ್ಯವಾದವೂ ಆದ ಗೋವುಗಳು ಸ್ವಾಮಿಯ ಸುತ್ತಲೂ ಸುತ್ತಿಕೊಂಡಿವೆ. ಯಜಮಾನನು ಈ ಗೋವುಗಳಲ್ಲಿ (ನನಗಾಗಿ) ಪ್ರಭೂತವಾದ ಕ್ಷೀರವನ್ನು ಕರೆಯಲು ಅಪೇಕ್ಷಿಸುತ್ತಾನೆ.

## English Translation

The assembled cattle feed upon the barley ; I their master have beheld them grazing, tended by the herdsman : when called, they collect around their lord ; when they approach, how much milk does he desire (to take) ?

॥ ಸಂಹಿತಾಪಾಠಃ ॥

ಸಂ ಯದ್ವಯಂ ಯವಸಾದೋ ಜನಾನಾಮಹಂ ಯವಾದ ಉರ್ವಜ್ರೇ ಅಂತಃ ।
ಅತ್ರಾ ಯುಕ್ತೋಽವಸಾತಾರಮಿಚ್ಛಾದಥೋ ಅಯುಕ್ತಂ ಯುನಜದ್ವವನ್ವಾನ್ ॥ ೯ ॥

॥ ಪದಪಾಠಃ ॥

ಸಂ । ಯತ್ । ವಯಂ । ಯವಸಽಅದಃ । ಜನಾನಾಂ । ಅಹಂ । ಯವಽಅದಃ । ಉರ್ರುಽಅಜ್ರೇ ।
ಅಂತರಿತಿ ।

ಅತ್ರ । ಯುಕ್ತಃ । ಅವಽಸಾತಾರಂ । ಇಚ್ಛಾತ್ । ಅಥೋ ಇತಿ । ಅಯುಕ್ತಂ । ಯುನಜತ್ । ವವ-
ನ್ವಾನ್ ॥ ೯ ॥

॥ ಸಾಯಣಭಾಷ್ಯಂ ॥

ಸಂ ಯಮಿತಿ ವಸುಕ್ರಾತ್ಮನಾಽವಸ್ಥಿತ ಇಂದ್ರಸ್ಯ ಸಾರ್ವಾತ್ಮ್ಯಂ ಪ್ರಕಟಯನ್ ಬಂಧಮೋಕ್ಷ-ಯೋರಾತ್ಮನಃ ಸ್ವಾತಂತ್ರ್ಯಮಾವಿಷ್ಕರೋತಿ । ಯದ್ಯದಾ ವಯಂ ಜನಾನಾಂ ಯವಸಾದೋ ಜನಾನಾಂ ಸ್ವಭೂತಸ್ಯ ಸಸ್ಯಸ್ಯ ಸಮ್ಯಗತ್ತಾರೋ ಗವಾದಿರೂಪೇಣಾವಸ್ಥಿತಾ ಉರ್ವಜ್ರೇ ವಿಸ್ತೀರ್ಣೇ ಗಂತವ್ಯೇ ಕ್ಷೇತ್ರೇಽನ್ತರ್ಮಧ್ಯೇ ಸ್ಥಿತಃ್ಯಾಹಂ ವಯಂ ಯವಾದೋ ಯವಾದಿಧಾನ್ಯಸ್ಯಾತ್ತಾರೋ ಮನುಷ್ಯ-ರೂಪೇಣಾವಸ್ಥಿತಾ ಅತ್ರಾಸ್ಮಿನ್ಸಂಸಾರಮಂಡಲೇ ಕಶ್ಚಿದ್ಯುಕ್ತೋ ಯೋಗಾಭ್ಯಾಸರತೋ ಭೂತ್ವಾ ಮುಮುಕ್ಷುಃ ಸನ್ ಅವಸಾತಾರಂ ಸಂಸಾರಬಂಧಸ್ಯ ಮೋಚಕಮಿಚ್ಛಾತ್ । ಮಾಮೇವೇಚ್ಛತಿ । ಅಥೋ ಅಪಿ ಚ ವವನ್ವಾನ್ ಸಂಭಕ್ತಾಹಮಯುಕ್ತಮಯೋಗಿನಂ ಪೃಥಗ್ಜನಂ ಯುನಜತ್ । ಯುನಜ್ಮಿ । ಬಧ್ನಾಮಿ । ಪುರುಷವ್ಯತ್ಯಯಃ ॥

## ಪ್ರಕಾರಾಂತರ ಸಾಯಣಭಾಷ್ಯಂ

ಅನಯಾ ಋಷಿರಿಂದ್ರಪ್ರಸಾದಲಬ್ಧಂ ಸ್ವಸ್ಯ ಸಾರ್ವಾತ್ಮ್ಯಂ ಪ್ರಕಾಶಯತಿ । ಜನಾನಾಂ ಲೋಕಾನಾಂ ಮಧ್ಯೇ ಯೇ ಯವಸಾದಃ ತೃಣಸ್ಯಾತ್ತಾರಃ ಪಶವಃ ತೇ ವಯಮಿತಿ ಸಂ ಸಮ್ಯಕ್ ಜಾನೀಹಿ । ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ । ಯೇ ಚ ಯವಾದಃ ಯವೋಪಲಕ್ಷಿತ-ಸ್ಯಾನ್ನಸ್ಯ ಅತ್ತಾರೋ ಮನುಷ್ಯಾಸ್ತೇಽಪಿ ವಯಮಿತಿ ಸಂಜಾನೀಹಿ । ವಸ್ತುತಸ್ತು ಉರ್ವಜ್ರೇ ವಿಸ್ತೀ-ರ್ಣೇ ಅಜಿರೇಂಗಣೇ ಹಾರ್ದಾಕಾಶರೂಪೇ ಯತ್ ಅಂತಃ ಅಂತರ್ಯಾಮಿರೂಪಂ ಬ್ರಹ್ಮ ತದಹಮಸ್ಮಿ । ಅತ್ರಾಸ್ಮಿನ್ ಹಾರ್ದಾಕಾಶೇ ಯುಕ್ತಃ ಸಮಾಹಿತೋ ಭವಾನಿಂದ್ರಃ ಅವಸಾತಾರಂ ಆತ್ಮನಃ ಸಂಭಕ್ತಾರಂ ಇಚ್ಛಾತ್ ಇಚ್ಛತಿ ಆತ್ಮಸಾಕ್ಷಾತ್ಕರ್ತುಂ । ಅಥೋ ಅಪಿ ಚ ಅಯುಕ್ತಂ ಅಯೋಗಿನಂ ವವನ್ವಾನ್ । ದ್ವಿತೀಯಾರ್ಥೇ ಪ್ರಥಮಾ । ವವನ್ವಂತಂ ಅತಿಶಯೇನ ವಿಷಯಾನ್ ಸೇವಮಾನಂ ಪುರುಷಂ ಯುನಜತ್ ಯುನಕ್ತಿ ಸಂಸಾರೇ । ಶಾಪಾನುಗ್ರಹಸಮರ್ಥೋ ಭವದ್ರೂಪೋಽಹಮೇವಾಸ್ಮೀತಿ ಭಾವಃ ॥

॥ ಪ್ರತಿಪದಾರ್ಥ ॥

**ಜನಾನಾಂ**—ಪ್ರಾಣಿಯುಕ್ತವಾದ ಲೋಕಗಳಲ್ಲಿ । **ಯವಸಾದಃ**—ಹುಲ್ಲನ್ನು ತಿನ್ನತಕ್ಕ । **ಯತ್**—ಯಾವ ಪಶುಗಳಿವೆಯೋ ಅವನ್ನೆಲ್ಲ । **ವಯಂ**—ನಾನೇ ಎಂದು । **ಸಂ** (ಜಾನೀಹಿ)—ತಿಳಿ । **ಯವಾದಃ**—ಯವಾದ್ಯನ್ನಗಳನ್ನು ತಿನ್ನುವ ಮಾನವಾದಿಗಳಾರಿದ್ದಾರೆಯೋ ಅವರನ್ನೂ । **ಅಹಂ**—ನಾನೇ ಎಂದು ತಿಳಿ ।

**ಉರ್ವಜ್ರೇ ಅಂತಃ**—ವಿಸ್ತೃತವಾದ ಹೃದಯಾಕಾಶದಲ್ಲಿರುವ ಬ್ರಹ್ಮರೂಪನೂ ನಾನೇ | **ಅತ್ರ**—ಈ ಹೃದಯಾಕಾಶದಲ್ಲಿ | **ಯುಕ್ತಃ**—ಐಕ್ಯವಾಗಿರುವ ಇಂದ್ರನು | **ಅವಸಾತಾರಂ**—ಆತ್ಮಸಾಕ್ಷಾತ್ಕಾರಕಾರ್ಯವನ್ನು | **ಇಚ್ಛಾತ್**—ಅಪೇಕ್ಷಿಸುತ್ತಾನೆ | **ಅಥ**—ಅಲ್ಲದೇ | **ಅಯುಕ್ತಂ**—ಯೋಗಾಭ್ಯಾಸವಿಲ್ಲದೆ ಈಶ್ವರಧ್ಯಾನವಿಲ್ಲದವನನ್ನು | **ವವನ್ವಾನ್**—ವಿಷಯಸುಖಗಳಲ್ಲಿ ಮಗ್ನನಾಗಿರುವಂತೆ ಮಾಡಿ | **ಯುನಜತ್**—ಸಂಸಾರದಲ್ಲಿ ಸಿಕ್ಕಿಸುತ್ತಾನೆ

॥ ಭಾವಾರ್ಥ ॥

ಪ್ರಾಣಿಯುಕ್ತವಾದ ಲೋಕಗಳಲ್ಲಿ ಹುಲ್ಲನ್ನು ತಿನ್ನತಕ್ಕ ಯಾವ ಪಶ್ವಾದಿಗಳಿವೆಯೋ ಅವೆಲ್ಲ ನಾನೇ ಎಂಬುದನ್ನೂ, ಯವಾದ್ಯನ್ನಗಳನ್ನು ತಿನ್ನುವ ಮಾನವಾದಿಗಳೂ ನಾನೇ ಎಂಬುದನ್ನೂ ತಿಳಿ. ವಿಸ್ತೃತವಾದ ಹೃದಯಾಕಾಶದಲ್ಲಿರುವ ಬ್ರಹ್ಮರೂಪನೂ ನಾನೇ. ಹೃದಯಾಕಾಶದಲ್ಲಿ ಐಕ್ಯತೆಯನ್ನು ಹೊಂದಿರುವ ಇಂದ್ರನು ಆತ್ಮಸಾಕ್ಷಾತ್ಕಾರಕ್ಕೆ ಪ್ರಯತ್ನಿಸುವವನನ್ನು ಇಚ್ಛಿಸುತ್ತಾನೆ. ಯೋಗಾಭ್ಯಾಸವಿಲ್ಲದೇ, ಈಶ್ವರಧ್ಯಾನವಿಲ್ಲದವನನ್ನು ವಿಷಯಸುಖಗಳಲ್ಲಿ ಮಗ್ನನಾಗುವಂತೆ ಮಾಡಿ ಸಂಸಾರದಲ್ಲಿ ಸಿಕ್ಕಿಸುತ್ತಾನೆ.

English Translatian

When we, the grass-eaters of men, (are) together, I (am) among the barley-eaters in the wide field; here he who is yoked would like one to unloose him, and the assailant would yoke him who is unyoked.

॥ ಸಂಹಿತಾಪಾಠಃ ॥

ಅತ್ರೇದು ಮೇ ಮಂಸಸೇ ಸತ್ಯಮುಕ್ತಂ ದ್ವಿಪಾಚ್ಚ ಯಚ್ಚತುಷ್ಪಾತ್ಸಂ-
ಸೃಜಾನಿ ।
ಸ್ತ್ರೀಭಿರ್ಯೋ ಅತ್ರ ವೃಷಣಂ ಪೃತನ್ಯಾದಯುದ್ಧೋ ಅಸ್ಯ ವಿ ಭಜಾನಿ
ವೇದಃ ॥ ೧೦ ॥

॥ ಪದಪಾಠಃ ॥

ಅತ್ರ । ಇತ್ । ಊಂ ಇತಿ । ಮೇ । ಮಂಸಸೇ । ಸತ್ಯಂ । ಉಕ್ತಂ । ದ್ವಿऽಪಾತ್ । ಚ । ಯತ್ । ಚತುಃऽ-
ಪಾತ್ । ಸಂऽಸೃಜಾನಿ
ಸ್ತ್ರೀಭಿಃ । ಯಃ । ಅತ್ರ । ವೃಷಣಂ । ಪೃತನ್ಯಾತ್ । ಅಯುದ್ಧಃ । ಅಸ್ಯ । ವಿ । ಭಜಾನಿ । ವೇದಃ ॥೧೦॥

॥ ಸಾಯಣಭಾಷ್ಯಂ ॥

ಮೇ ಮಮಾತ್ರಾಸ್ಮಿನ್ಸ್ತೋತ್ರ ಉಕ್ತಂ ಮಯಾ ಕಥಿತಂ ಸತ್ಯಮಿದ್ಯಥಾಭೂತಮೇವ ಮಂಸಸೇ। ತ್ವಂ ಜಾನೀಹಿ। ಅರ್ಥವಾದರೂಪೇಣ ನೈತದಧ್ಯಾರೋಪಿತಗುಣಮಿತ್ಯರ್ಥಃ। ಉ ಇತಿ ಪೂರಣಃ। ಕಿಂಚ ದ್ವಿಪಾಚ್ಚ ಮನುಷ್ಯಾದಿಕಂ ಚ ಚತುಷ್ಪಾಚ್ಚ ಪಶ್ವಾದಿಕಂ ಚ ಯತ್ಸ್ಥಾವರಜಂಗಮಾತ್ಮಕಂ ಜಗತ್ಸಂಸೃಜಾನಿ। ಅಹಮುತ್ಪಾದಯಾಮೀತಿ। ಅತ್ರಾಸ್ಮಿಞ್ಜಗತಿ ಸ್ತ್ರೀಭಿಃ ಸ್ತ್ರೀಸದೃಶೈರ್ಬಲಾದಿಹೀನೈಃ ಪುರುಷೈಃ ಸಹ ಯಃ ಶೂರಂಮನ್ಯೋ ಜನೋ ವೃಷಣಮಭಿಲಷಿತಸ್ಯ ವರ್ಷಿತಾರಂ ಮಾಂ। ಪರಿತ್ಯಜ್ಯೇತಿ ಶೇಷಃ। ಪೃತನ್ಯಾತ್ ಯುದ್ಧಂ ಕರ್ತುಮಿಚ್ಛತಿ ಅಹಮಸ್ಯೇದೃಶಸ್ಯ ಸ್ವಭೂತಂ ವೇದೋ ಧನಮಯುದ್ಧಸ್ತೇನ ಪುರುಷೇಣಾಯೋದ್ಧಾ ಸನ್ ಬಲಾದಪಹೃತ್ಯ ವಿ ಭಜಾನಿ। ಸ್ತೋತೃಭ್ಯೋ ಯಷ್ಟೃಭ್ಯಶ್ಚ ದದಾಮೀತ್ಯರ್ಥಃ॥

॥ ಪ್ರತಿಪದಾರ್ಥ ॥

**ದ್ವಿಪಾತ್**—ಮಾನವಾದಿಗಳನ್ನೊಳಗೊಂಡುದೂ । **ಚತುಷ್ಪಾಚ್ಚ**—ಪಶ್ವಾದಿಗಳನ್ನೊಳಗೊಂಡುದೂ ಆದ। **ಯತ್**—ಯಾವ ಜಗತ್ತಿದೆಯೋ ಅದನ್ನು। **ಸಂ ಸೃಜಾನಿ**—ನಾನು ಉತ್ಪನ್ನಮಾಡಿದ್ದೇನೆ ಎಂದು। **ಮೇ**—ನನ್ನನ್ನುದ್ದೇಶಿಸಿದ । **ಅತ್ರ**—ಈ ಸ್ತುತಿಯಲ್ಲಿ। **ಉಕ್ತಂ**—ಯಾವುದು ಹೇಳಲ್ಪಟ್ಟಿದೆಯೋ ಅದು। **ಸತ್ಯಮಿತ್**—ಸತ್ಯಾತ್ಮಕವಾಗಿಯೇ ಇದೆ ಎಂಬುದನ್ನು। **ಮಂಸಸೇ**—ನೀನು ತಿಳಿ । **ಅತ್ರ**—ಈ ಲೋಕದಲ್ಲಿ। **ಸ್ತ್ರೀಭಿಃ**—ಸ್ತ್ರೀಯರೊಡನೆ (ಅಶಕ್ತರೊಡನೆ) ಸೇರಿ। **ಯಃ**—ಯಾವ ಪುರುಷನು। **ವೃಷಣಂ**-ಇಷ್ಟಾರ್ಥಪ್ರದನಾದ ನನ್ನೊಂದಿಗೆ। **ಪೃತನ್ಯಾತ್**—ಯುದ್ಧಮಾಡಲಿಚ್ಛಿಸುವನೋ। **ಅಸ್ಯ**—ಅಂತಹ ಪುರುಷನ। **ವೇದಃ**—ಧನವನ್ನು। **ಅಯುದ್ಧಃ**—ಯುದ್ಧಮಾಡದೇ (ಅಪಹರಿಸಿ)। **ವಿ ಭಜಾನಿ**—ಸ್ತುತಿಕರ್ತರಿಗೆ ಹಂಚುತ್ತೇನೆ.

॥ ಭಾವಾರ್ಥ ॥

ಮಾನವಾದಿಗಳನ್ನೊಳಗೊಂಡುದೂ, ಪಶ್ವಾದಿಗಳನ್ನೊಳಗೊಂಡುದೂ ಆದ ಯಾವ ಜಗತ್ತಿದೆಯೋ ಅದನ್ನು ನಾನು ಉತ್ಪನ್ನಮಾಡಿದ್ದೇನೆ ಎಂದು ನನ್ನನ್ನುದ್ದೇಶಿಸಿದ ಈ ಸ್ತುತಿಯಲ್ಲಿ ಯಾವುದು ಹೇಳಲ್ಪಟ್ಟಿದೆಯೋ ಅದು ಸತ್ಯಾತ್ಮಕವಾಗಿಯೇ ಇದೆ ಎಂಬುದನ್ನು ತಿಳಿ. ಈ ಲೋಕದಲ್ಲಿ ಸ್ತ್ರೀರೂಪರಾದ ಅಶಕ್ತರೊಡನೆ ಸೇರಿ ಯಾವ ಪುರುಷನು ಇಷ್ಟಾರ್ಥಪ್ರದನಾದ (ಸಶಕ್ತನಾದ) ನನ್ನೊಂದಿಗೆ ಯುದ್ಧಮಾಡಲಿಚ್ಛಿಸುವನೋ ಅಂತಹ ಪುರುಷನ ಧನವನ್ನು ಯುದ್ಧಮಾಡದೇ ಅಪಹರಿಸಿ ಸ್ತುತಿಕರ್ತರಿಗೆ ಹಂಚುತ್ತೇನೆ.

## English Translation

(Indra speaks) : You know that what is said by me at this time is the truth, that I may create both bipeds and quadrupeds. I distribute without conflict (among my worshippers) the wealth (that I have taken from him), who (neglecting me), the showerer (of desires), wishes to contend with women.

। ಸಂಹಿತಾಪಾಠಃ ।

ಯಸ್ಯಾನಕ್ಷಾ ದುಹಿತಾ ಜಾತ್ವಾಸ ಕಸ್ತಾಂ ವಿದ್ವಾँ ಅಭಿ ಮನ್ಯಾತೇ ಅಂಧಾಂ ।
ಕತರೋ ಮೇನಿಂ ಪ್ರತಿ ತಂ ಮುಚಾತೇ ಯ ಈಂ ವಹಾತೇ ಯ ಈಂ ವಾ ವರೇಯಾತ್ ॥ ೧೧ ॥

। ಪದಪಾಠಃ ।

ಯಸ್ಯ । ಅನಕ್ಷಾ । ದುಹಿತಾ । ಜಾತು । ಆಸ । ಕಃ । ತಾಂ । ವಿದ್ವಾನ್ । ಅಭಿ । ಮನ್ಯಾತೇ । ಅಂಧಾಂ । ಕತರಃ । ಮೇನಿಂ । ಪ್ರತಿ । ತಂ । ಮುಚಾತೇ । ಯಃ । ಈಂ । ವಹಾತೇ । ಯಃ । ಈಂ । ವಾ । ವರೇಽಯಾತ್ ॥ ೧೧ ॥

। ಸಾಯಣಭಾಷ್ಯಂ ।

ಯಸ್ಯೇಂದ್ರಸ್ಯ ಮಮ ಕಾರಣರೂಪೇಣಾವಸ್ಥಿತಸ್ಯಾನಕ್ಷಾಕ್ಷಿವರ್ಜಿತಾ ದರ್ಶನಹೀನಾ । ಅಚೇತನೇತ್ಯರ್ಥಃ । ದುಹಿತಾ ಪ್ರಕೃತ್ಯಾಖ್ಯಾ ಜಾತು ಕದಾಚಿದಾಸ । ಅಸತೇರ್ಗತ್ಯರ್ಥಸ್ಯ ಲಿಟಿ ರೂಪಂ ॥ ಸಾಮರ್ಥ್ಯಾನ್ಮಹಾಪ್ರಲಯೇ ಮಯ್ಯೇವ ಲೀನಾ ಸತೀ ಸರ್ವತ್ರ ವರ್ತತೇ ತಾಂ ಪ್ರಕೃತಿಂ ವಿದ್ವಾನ್ ಮಯ್ಯೇವ ಲೀನಾಂ ಜಾನನ್ ಮತ್ತೋಽನ್ಯೋ ದೇವಃ ಕೋ ಭವತಿ । ನ ಕೋಽಪೀತ್ಯರ್ಥಃ । ಅಪಿ ಚಾಂಧಾಂ ದರ್ಶನಹೀನಾಮಚೇತನಾಂ ತಾಮಭಿ ಮನ್ಯಾತೇ । ಆತ್ಮನ್ಯಾಶ್ರಯಪ್ರದಾನೇನ ಕೋ ದೇವೋಽಭಿಪೂಜಯತಿ । ಯದ್ವಾ । ಕ್ಷೀರೋದಕವತ್ ಘಟಾಕಾಶವಚ್ಚ ಮಯಾ ಸಹೈಕೀಭೂತಾಂ ತಾಮಾಭಿಮುಖ್ಯೇನ ಕೋ ಜಾನಾತಿ । ಅಹಮೇವ ಸರ್ವಜ್ಞಃ ಸ್ವಾತ್ಮನ್ಯಾಶ್ರಯಪ್ರದಾನೇನಾಭಿಪೂಜಯಾಮಿ । ಮಯಾ ಸಹೈಕೀಭೂತಾಂ ತಾಂ ತತ್ತ್ವತೋಽಹಮೇವ ಜಾನಾಮಿ । ನಾನ್ಯ ಇತಿ । ಕಿಂಚ ಕತರೋ ದೇವೋ ಮೇನಿಂ ವಜ್ರಂ ತಂ ಪ್ರಸಿದ್ಧಂ ವೃತ್ರಾದಿಶತ್ರುಂ ಪ್ರತಿ ಮುಚಾತೇ । ಮುಂಚತಿ । ಸ್ವಯಮೇವ ಪ್ರಶ್ನಮುಕ್ತ್ವಾ ಸ್ವೇದಾನೀಂ ಪ್ರತಿಬ್ರೂತೇ । ಯೋ ದೇವ ಈಮೇನಂ ಶತ್ರುಂ ವಹಾತೇ ವಹತಿ । ಅಪಿ ವಾ ಯ ಈಮೇನಂ ವರೇಯಾತ್ ವರಯಿತುಮಿಚ್ಛತಿ । ಸ ಚಾಹಮೇವ ನಾನ್ಯೋ ಮತ್ಸದೃಶೋಽಸ್ತೀತ್ಯರ್ಥಃ ॥

। ಪ್ರತಿಪದಾರ್ಥ ।

**ಯಸ್ಯ**—ಇಂದ್ರರೂಪನಾದ ನನ್ನ । **ಅನಕ್ಷಾ**—ದರ್ಶನೇಂದ್ರಿಯರಹಿತಳಾದ । **ದುಹಿತಾ**—ಯಾವ ಪುತ್ರಿಯು (ಪ್ರಕೃತಿಯು) । **ಜಾತು**—ಕೊಂಚಕಾಲ (ಪ್ರಲಯಕಾಲದಲ್ಲಿ) **ಆಸ**—ನನ್ನಲ್ಲಿ ಅಂತರ್ಗತಳಾಗಿರುವಳೋ । **ತಾಂ**—ಅವಳನ್ನು । **ವಿದ್ವಾನ್**—ತಿಳಿದಿರುವ । **ಕಃ**—ಯಾವ ದೇವತೆಯಿದ್ದಾನೆ? । **ಅಂಧಾಂ**—ಚೈತನ್ಯರಹಿತಳಾದ ಅವಳನ್ನು । **ಅಭಿಮನ್ಯಾತೇ**—ಯಾರು ತಾನೇ ಪೂಜಿಸಬಲ್ಲರು? । **ಕತರಃ**—ಯಾವ ದೇವನು ।

ಮೇನಿಂ—ವಜ್ರಾಯುಧವನ್ನು । ತಂ ಪ್ರತಿ—ಶತ್ರುವಿನ ಮೇಲೆ । ಪ್ರತಿ ಮುಂಚಾತೇ—ಪ್ರಯೋಗಿಸಬಲ್ಲನು ? । ಯಃ—ಯಾರು । ಈಂ—ಈ ಶತ್ರುವನ್ನು । ವಹಾತೇ—ರಕ್ಷಿಸಬಲ್ಲನು ? । ವಾ—ಅಥವಾ । ಯಃ—ಯಾರು । ಈಂ—ಇವನನ್ನು । ವರೇಯಾತ್—ಸ್ವೀಕರಿಸಬಲ್ಲನು ?

॥ ಭಾವಾರ್ಥ ॥

ಇಂದ್ರರೂಪನಾದ ನನ್ನ ಪುತ್ರಿಯೂ, ದರ್ಶನೇಂದ್ರಿಯರಹಿತಳೂ ಆದ ಪ್ರಕೃತಿಯು ಪ್ರಳಯಕಾಲದಲ್ಲಿ ನನ್ನಲ್ಲಿ ಅಂತರ್ಗತಳಾಗಿರುವುದನ್ನು ಯಾವ ದೇವತೆಯು ಅರಿತಿದ್ದಾನೆ ? ಚೈತನ್ಯರಹಿತಳಾದ ಅವಳನ್ನು ಯಾರು ತಾನೇ ಪೂಜಿಸಬಲ್ಲರು ? ಯಾವ ದೇವನು ಶತ್ರುವಿನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಬಲ್ಲನು ? ಈ ಶತ್ರುವನ್ನು ಯಾರು ರಕ್ಷಿಸಬಲ್ಲರು ? ನಾನಲ್ಲದೇ ಯಾರು ತಾನೇ ಸ್ವೀಕರಿಸಬಲ್ಲರು ?

English Translation

What (other god but me) whose eyeless daughter is ever present knows her and honours (her) the blind one : which of the two (deities) lets loose that bolt against (a foe) he who assails, (or) he who protects him?

॥ ಸಂಹಿತಾಪಾಠಃ ॥

ಕಿಯತೀ ಯೋಷಾ ಮರ್ಯತೋ ವಧೂಯೋಃ ಪರಿಪ್ರೀತಾ ಪನ್ಯಸಾ ವಾರ್ಯೇಣ ।
ಭದ್ರಾ ವಧೂರ್ಭವತಿ ಯತ್ಸುಪೇಶಾಃ ಸ್ವಯಂ ಸಾ ಮಿತ್ರಂ ವನುತೇ ಜನೇ ಚಿತ್ ೧೨ ॥

॥ ಪದಪಾಠಃ ॥

ಕಿಯತೀ । ಯೋಷಾ । ಮರ್ಯತಃ । ವಧೂಽಯೋಃ । ಪರಿಽಪ್ರೀತಾ । ಪನ್ಯಸಾ । ವಾರ್ಯೇಣ ।
ಭದ್ರಾ । ವಧೂಃ । ಭವತಿ । ಯತ್ । ಸುಽಪೇಶಾಃ । ಸ್ವಯಂ । ಸಾ । ಮಿತ್ರಂ । ವನುತೇ । ಜನೇ । ಚಿತ್ ॥ ೧೨ ॥

॥ ಸಾಯಣಭಾಷ್ಯಂ ॥

ಕಿಯತೀ ಕಿಂಪರಿಮಾಣಾ ಯೋಷಾ ಸ್ತ್ರೀಜಾತಿರ್ಮರ್ಯತೋ ಮನುಷ್ಯಸಂಬಂಧಿನೋ ಭೋಗಾ- ನಾಚರತೋ ವಧೂಯೋಃ ಸ್ತ್ರೀಕಾಮಸ್ಯ ಸರ್ವಾತ್ಮಕಸ್ಯಾಂತರ್ಯಾಮಿರೂಪೇಣಾವಸ್ಥಿತಸ್ಯೇಂದ್ರಸ್ಯ

ಪರಿಪ್ರೀತಾ । ಅನುರಕ್ತಾ । ವಶವರ್ತಿನೀತ್ಯರ್ಥಃ । ಕೀದೃಶಸ್ಯ । ವಾರ್ಯೇಣ ವರಣೀಯೇನ ಪನ್ಯಸಾ ಸ್ತೋತ್ರೇಣ ಸ್ತುತಸ್ಯ ಸತ ಇತಿ ಶೇಷಃ । ಅಪಿ ಚ ಯದ್ಯಾ ವಧೂರ್ಭದ್ರಾ ಕಲ್ಯಾಣೀ ಸುಪೇಶಾಃ ಶೋಭನರೂಪಾ ಚ ಭವತಿ ಸಾ ದ್ರೌಪದೀದಮಯಂತ್ಯಾದಿಕಾ ವಧೂಃ ಸ್ವಯಮಾತ್ಮನೈವ ಜನೇ ಚಿಜ್ಜನಮಧ್ಯೇಽವಸ್ಥಿತಮಿತಿ ಮಿತ್ರಂ ಪ್ರಿಯಮರ್ಜುನನಲಾದಿಕಂ ಪತಿಂ ವನುತೇ । ಯಾಚತೇ । ಸ್ವಯಂ-ವರಧರ್ಮೇಣ ಪ್ರಾರ್ಥಯತೇ । ಸ ಚ ಪ್ರೀಯಮಾಣೋ ವರಜನೋಽಹಮೇವೇತ್ಯಭಿಪ್ರಾಯಃ । ರೂಪಂರೂಪಂ ಪ್ರತಿರೂಪೋ ಬಭೂವ । ಋ. ೬.೪೭.೧೮ । ಇತಿ ಮಂತ್ರಲಿಂಗಾತ್ಸರ್ವಾತ್ಮಕತ್ವಾದಿತಿ ।

॥ ಪ್ರತಿಪದಾರ್ಥ ॥

**ವಾರ್ಯೇಣ**—ಆಕರ್ಷಕವಾದ । **ಪನ್ಯಸಾ**—ಸ್ತುತಿಯಿಂದ ಪ್ರಶಂಸಿತನೂ । **ವಧೂಯೋಃ**—ವಧುವನ್ನು ಇಚ್ಛಿಸುವವನೂ ಆದ । **ಮರ್ಯತಃ**—ಮಾನವನೊಂದಿಗೆ । **ಯೋಷಾ**—ಹೆಂಗಸರಲ್ಲಿ । **ಕಿಯತೀ**—ಎಷ್ಟು ಮಂದಿ । **ಪರಿಪ್ರೀತಾ**—ಅನುರಕ್ತಳಾಗಿದ್ದಾಳೆ । **ಯತ್ ವಧೂಃ**—ಯಾವ ವಧುವು । **ಭದ್ರಾ**—ಕಲ್ಯಾಣರೂಪಿಣಿಯಾಗಿಯೂ । **ಸುಪೇಶಾಃ**—ಸೌಂದರ್ಯವತಿಯಾಗಿಯೂ । **ಭವತಿ**—ಇರುವಳೋ । **ಸಾ**—ಅವಳು । **ಸ್ವಯಂ**—ತಾನಾಗಿಯೇ । **ಜನೇ ಚಿತ್**—ಜನರು ನಡುವೆ । **ಮಿತ್ರಂ**—ತನಗೆ ಬೇಕಾದ ಆಪ್ತನನ್ನು (ಪತಿಯನ್ನು) । **ವನುತೇ**—ಬೇಡುತ್ತಾಳೆ (ಆರಿಸಿಕೊಳ್ಳುತ್ತಾಳೆ).

॥ ಭಾವಾರ್ಥ ॥

ಆಕರ್ಷಕವಾದ ಸ್ತುತಿಯಿಂದ ಪ್ರಶಂಸಿತನೂ, ವಧುವನ್ನು ಇಚ್ಛಿಸುವವನೂ ಆದ ಮಾನವನೊಂದಿಗೆ ಹೆಂಗಸರಲ್ಲಿ ಎಷ್ಟು ಮಂದಿ ಅನುರಕ್ತರಾಗಿದ್ದಾರೆ. ಯಾವ ವಧುವು ಕಲ್ಯಾಣರೂಪಿಣಿಯಾಗಿಯೂ, ಸೌಂದರ್ಯವತಿಯಾಗಿಯೂ ಇರುವಳೋ ಅವಳು ತಾನಾಗಿಯೇ ಜನರ ನಡುವೆ ತನಗೆ ಬೇಕಾದ ಆಪ್ತನನ್ನು (ಪತಿಯನ್ನು) ಬೇಡುತ್ತಾಳೆ (ಆರಿಸಿಕೊಳ್ಳುತ್ತಾಳೆ).

## English Translation

How many a woman has been gratified by the flattering praise of man's desire, when the bride is fortunate and beautiful, she of herself chooses her husband among men.

॥ ಸಂಹಿತಾಪಾಠಃ ॥

ಪತ್ತೋ ಜಗಾರ ಪ್ರತ್ಯಂಚಮತ್ತಿ ಶೀರ್ಷ್ಣಾ ಶಿರಃ ಪ್ರತಿ ದಧೌ ವರೂಥಂ ।

ಆಸೀನ ಊರ್ಧ್ವಾಮುಪಸಿ ಕ್ಷಿಣಾತಿ ನ್ಯಙ್ಙುತ್ತಾನಾಮನ್ವೇತಿ ಭೂಮಿಂ ॥

॥ ಪದಪಾಠಃ ॥

ಪತ್ಭಿಃ । ಜಗಾರ । ಪ್ರತ್ಯಂಚಂ । ಅತ್ತಿ । ಶೀರ್ಷ್ಣಾ । ಶಿರಃ । ಪ್ರತಿ । ದಧೌ । ವರೂಥಂ ।

ಆಸೀನಃ । ಊರ್ಧ್ವಾಂ । ಉಪಸಿ । ಕ್ಷಿಣಾತಿ । ನ್ಯಙ್ । ಉತ್ತಾನಾಂ । ಅನು । ಏತಿ । ಭೂಮಿಂ ॥ ೧೩ ॥

॥ ಸಾಯಣಭಾಷ್ಯಂ ॥

ಅತ್ರಾದಿತ್ಯಾತ್ಮನೇಂದ್ರಃ ಸ್ತೂಯತೇ ತದಂಶತ್ವಾತ್ । ಆದಿತ್ಯರೂಪೀಂದ್ರಃ ಪತ್ಭೀ ರಶ್ಮ್ಯಾತ್ಮಕೈಃ ಪಾದೈರ್ಜಗಾರ । ವೃಷ್ಟಿಲಕ್ಷಣಮುದಕಂ ಗಿರತಿ ಗೃಹ್ಣಾತಿ ವಾ । ಗೃಹೀತ್ವಾ ಚ ಪ್ರತ್ಯಂಚಮಾತ್ಮಾನಂ ಪ್ರತಿಗತಮುದಕಮತ್ತಿ । ಭಕ್ಷಯತಿ । ಮಂಡಲೇಽವಸ್ಥಾಪಯತೀತ್ಯರ್ಥಃ । ತದನಂತರಂ ವರೂಥಂ ವರಣೀಯಂ ವೃಷ್ಟಿಲಕ್ಷಣಮುದಕಂ ಶೀರ್ಷ್ಣಾ ಶಿರಃಸ್ಥಾನೀಯೇನ ರಶ್ಮಿಜಾಲೇನ ಶಿರಃ ಸರ್ವಸ್ಯ ಲೋಕಸ್ಯ ಮಸ್ತಕಂ ಪ್ರತಿ ದಧೌ । ದಧಾತಿ । ಪ್ರತಿಕ್ಷಿಪತೀತ್ಯರ್ಥಃ । ಕಿಂಚೋಪಸ್ಯುಪಸ್ಥೇ ಸ್ವಸಮೀಪಸ್ಥಾನೇ ಮಂಡಲ ಆಸೀನ ಉಪವಿಷ್ಟಃ ಸನ್ನೂರ್ಧ್ವಾಮುದ್ಗತಾಂ ಸ್ವದೀಪ್ತಿಂ ಕ್ಷಿಣಾತಿ । ಹಿನಸ್ತಿ । ಆಲೋಕಕರಣಾಯ ಪ್ರಕ್ಷಿಪತೀತ್ಯರ್ಥಃ । ನ್ಯಙ್ ರಶ್ಮಿಸಮೂಹರೂಪೇಣ ನೀಚೈರಂಚಿತಾ ಗಂತಾ ಸನ್ನುತ್ತಾನಾಂ ವಿಸ್ತೃತಾಂ ಭೂಮಿಮನ್ವೇತಿ । ಅನುಗಚ್ಛತಿ ॥

॥ ಪ್ರತಿಪದಾರ್ಥ ॥

(ಇಂದ್ರಃ—ಇಂದ್ರನು) । **ಪತ್ಭಿಃ**—ತನ್ನ ರಶ್ಮಿರೂಪವಾದ ಪಾದಗಳಿಂದ । **ಜಗಾರ**—ವೃಷ್ಟಿಯನ್ನು ಹಿಡಿದಿದ್ದಾನೆ । **ಪ್ರತ್ಯಂಚಂ**—ತನಗೆ ಅಭಿಮುಖವಾಗಿ ಪ್ರಸರಿಸುವ ಉದಕವನ್ನು । **ಅತ್ತಿ**—ನುಂಗುತ್ತಾನೆ । **ವರೂಥಂ**—ಪೂಜ್ಯವಾದ ಉದಕವನ್ನು । **ಶೀರ್ಷ್ಣಾ**—ಶಿರಃಸ್ಥಾನೀಯವಾದ ರಶ್ಮಿಗಳಿಂದ । **ಶಿರಃ ಪ್ರತಿ**—ತಲೆಯ ಮೇಲೆ । **ದಧೌ**—ಎತ್ತಿ ಹಿಡಿದಿದ್ದಾನೆ । **ಉಪಸಿ**—ಅಂತರಿಕ್ಷಮಂಡಲದಲ್ಲಿ । **ಆಸೀನಃ**—ಕುಳಿತವನಾಗಿ । **ಊರ್ಧ್ವಾ**—ಮೇಲ್ಭಾಗಕ್ಕೆ ಪ್ರಸರಿಸುವ ಕಾಂತಿಯನ್ನು । **ಕ್ಷಿಣಾತಿ**—ಹರಡುತ್ತಾನೆ । **ನ್ಯಙ್**—ಅಧೋಭಾಗಕ್ಕೆ ಪ್ರಸರಿಸುವ ರಶ್ಮಿಗಳಿಂದ । **ಉತ್ತಾನಾಂ**—ವಿಸ್ತೃತವಾಗಿ ಹರಡಿದ । **ಭೂಮಿಂ**—ಭೂಮಿಯನ್ನು । **ಅನ್ವೇತಿ**—ವ್ಯಾಪಿಸುತ್ತಾನೆ.

॥ ಭಾವಾರ್ಥ ॥

ಇಂದ್ರನು ತನ್ನ ರಶ್ಮಿರೂಪವಾದ ಪಾದಗಳಿಂದ ವೃಷ್ಟಿಯನ್ನು ಹಿಡಿದಿದ್ದಾನೆ. ತನಗೆ ಅಭಿಮುಖವಾಗಿ ಪ್ರಸರಿಸುವ ಉದಕವನ್ನು ಶಿರಃಸ್ಥಾನೀಯವಾದ ರಶ್ಮಿಗಳಿಂದ ತಲೆಯಮೇಲೆ ಎತ್ತಿ ಹಿಡಿದಿದ್ದಾನೆ. ಅಂತರಿಕ್ಷಮಂಡಲದಲ್ಲಿ ಕುಳಿತು ಮೇಲ್ಭಾಗಕ್ಕೆ ಪ್ರಸರಿಸುವ ಕಾಂತಿಯನ್ನು ಹರಡುತ್ತಾನೆ. ಅಧೋಭಾಗಕ್ಕೆ ಪ್ರಸರಿಸುವ ರಶ್ಮಿಗಳಿಂದ ವಿಸ್ತೃತವಾಗಿ ಹರಡಿದ ಭೂಮಿಯನ್ನು ವ್ಯಾಪಿಸುತ್ತಾನೆ.

## English Translation

He seizes (it) with his feet ; he swallows it when it approaches him, he places the head (of heaven) as a guard around his head : seated (above)

he sends (his rays) upwards to the proximate heaven ; he sends them downwards, on the outspread earth.

। ವಿಶೇಷವಿಷಯಗಳು ।

ಉಪಸಿ—ಉಪಸಿ ಎಂಬ ಶಬ್ದಕ್ಕೆ ಯಾಸ್ಕರು—ಆಸೀನ ಊರ್ಧ್ವಾನ್ಯಮುಪಸಿ ಕ್ಷಿಣಾತಿ। ಉಪಸ್ಥೇ । (ನಿ. ೬-೬) ಎಂದು ನಿರ್ವಚನವನ್ನು ಹೇಳಿದ್ದಾರೆ. ಎಂದರೆ, ಉಪಸಿ—ಆತ್ಮನ ಉಪಸ್ಥಾನೇ ಅಂತರಿಕ್ಷಲೋಕೇ ತನ್ನ ಸಮೀಪಪ್ರದೇಶವಾದ ಅಂತರಿಕ್ಷಪ್ರದೇಶದಲ್ಲಿ ಎಂದರ್ಥವು.

॥ ಸಂಹಿತಾಪಾಠಃ ॥

ಬೃಹನ್ನಚ್ಛಾಯೋ ಅಪಲಾಶೋ ಅರ್ವಾ ತಸ್ಥೌ ಮಾತಾ ವಿಷಿತೋ ಅತ್ತಿ ಗರ್ಭಃ ।
ಅನ್ಯಸ್ಯಾ ವತ್ಸಂ ರಿಹತೀ ಮಿಮಾಯ ಕಯಾ ಭುವಾ ನಿ ದಧೇ ಧೇನುರೂಧಃ ॥ ೧೪ ॥

। ಪದಪಾಠಃ ।

ಬೃಹನ್ । ಅಚ್ಛಾಯಃ । ಅಪಲಾಶಃ । ಅರ್ವಾ । ತಸ್ಥೌ । ಮಾತಾ । ವಿऽಸಿತಃ । ಅತ್ತಿ । ಗರ್ಭಃ ।
ಅನ್ಯಸ್ಯಾಃ । ವತ್ಸಂ । ರಿಹತೀ । ಮಿಮಾಯ । ಕಯಾ । ಭುವಾ । ನಿ । ದಧೇ । ಧೇನುಃ । ಊಧಃ ॥ ೧೪ ॥

। ಸಾಯಣಭಾಷ್ಯಂ ।

ವಸುಕ್ರೋಽನಯಾದಿತ್ಯಾತ್ಮಾನಮಿಂದ್ರಂ ಸ್ತೌತಿ । ಬೃಹನ್ಮಹಾನಾದಿತ್ಯೋಽಚ್ಛಾಯಶ್ಛಾಯಾವರ್ಜಿತಃ । ತಮೋರಹಿತ ಇತ್ಯರ್ಥಃ । ಅಪಲಾಶಃ ಪರ್ಣರಹಿತಃ ಪಲಾಶದನವರ್ಜಿತಃ । ವಿನಾಶರಹಿತ ಇತ್ಯರ್ಥಃ । ಅರ್ವಾ ಸತತಗಾಮೀ ತಸ್ಥೌ । ತಿಷ್ಠತಿ । ಕಿಂಚ ಮಾತಾ ವೃಷ್ಟಿಪ್ರದಾನದ್ವಾರೇಣ ಸರ್ವಸ್ಯ ಜಗತೋ ನಿರ್ಮಾತಾ ವಿಷಿತೋ ವಿಮುಕ್ತಃ । ನಿರಾಲಂಬನ ಇತ್ಯರ್ಥಃ । ಗರ್ಭಸ್ತ್ರೈಲೋಕ್ಯಸ್ಯ ಗರ್ಭಭೂತ ಆದಿತ್ಯಾತ್ಮೇಂದ್ರೋಽತ್ತಿ । ಹವೀಂಷಿ ಭಕ್ಷಯತಿ । ಯದ್ವಾ । ಅನೇನ ವಿನಾಶನಂ ಲಕ್ಷ್ಯತೇ । ಪಾಪಾನಿ ನಾಶಯತಿ । ಕಿಂಚಾನ್ಯಸ್ಯಾ ಆದಿತ್ಯಾತ್ಮಿಕಾಯಾ ದೇವಮಾತುರ್ವತ್ಸಮಪತ್ಯಭೂತಮಾದಿತ್ಯಂ ರಿಹತ್ಯಾಸ್ವಾದಯಂತ್ಯುಪಜೀವಂತೀ ವರ್ಧಯಂತೀ ಮಿಮಾಯ । ನಿರ್ಮಿಮೀತೇ । ಪೂರ್ವಸ್ಯಾಂ ದಿಶ್ಯಹನ್ಯಹನ್ಯುತ್ಪಾದಯತೀತ್ಯರ್ಥಃ । ಕಯಾ ಭುವಾ ಕೇನ ಭಾವೇನಾಭಿಪ್ರಾಯೇಣ । ಭಕ್ತ್ಯಾ ಭಯೇನ ವೇತ್ಯರ್ಥಃ । ಧೇನುರ್ದ್ಯೌರುದಕಸ್ಯಾಧಾರತ್ವಾತ್ ಕ್ಷೀರಿತ್ವಾದ್ವಾ ಊಧಃಸ್ಥಾನೀಯಮಾದಿತ್ಯಂ ನಿ ದಧೇ । ಸ್ಥಾಪಯತಿ । ಯದ್ವಾ । ಧೇನುರ್ಗೌರೂಧೋ ಯಥಾ ತದ್ವದಾದಿತ್ಯಂ ದ್ಯೌರ್ಧಾರಯತಿ ॥

। ಪ್ರತಿಪದಾರ್ಥ ।

**ಬೃಹನ್**—ಮಹಾತ್ಮನಾದ ಆದಿತ್ಯನು । **ಅಚ್ಛಾಯಃ**—ಅಂಧಕಾರರಹಿತನಾಗಿಯೂ । **ಅಪಲಾಶಃ**—ನಾಶರಹಿತನಾಗಿಯೂ । **ಅರ್ವಾ**—ಸತತಗಾಮಿಯಾಗಿಯೂ । **ತಸ್ಥೌ**—ಸ್ಥಾಪಿತನಾಗಿದ್ದಾನೆ । **ಮಾತಾ**—ಜಗನ್ನಿರ್ಮಾಪಕನೂ । **ವಿಷಿತಃ**—ಬಂಧರಹಿತನೂ । **ಗರ್ಭಃ**—ಮೂರು ಲೋಕಕ್ಕೂ ಗರ್ಭಭೂತನೂ ಆದ ಇಂದ್ರನು । **ಅತ್ತಿ**—ಹವಿಸ್ಸುಗಳನ್ನು ಭಕ್ಷಿಸುತ್ತಾನೆ । **ಅನ್ಯಸ್ಯಾಃ**—ದೇವಮಾತೆಯಾದ ಅದಿತಿಯು । **ವತ್ಸಂ**—ವತ್ಸರೂಪನಾದ ಆದಿತ್ಯನನ್ನು । **ರಿಹತೀ**—ಪೋಷಿಸುತ್ತ । **ಮಿಮಾಯ**—ಉತ್ಪನ್ನಮಾಡಿದ್ದಾನೆ । **ಕಯಾಭುವಾ**—ಯಾವ ಭಾವವಿಶೇಷದಿಂದ । **ಧೇನುಃ**—ದ್ಯುಲೋಕರೂಪವಾದ ಧೇನುವು । **ಊಧಃ**—ತನ್ನ ಕೆಚ್ಚಲು ಸ್ಥಾನವಾದ ಆದಿತ್ಯನನ್ನು । **ನಿ ದಧೇ**—ಧರಿಸಿದ್ದಾಳೆ.

। ಭಾವಾರ್ಥ ।

ಮಹಾತ್ಮನಾದ ಆದಿತ್ಯನು ಅಂಧಕಾರರಹಿತನಾಗಿಯೂ, ನಾಶರಹಿತನಾಗಿಯೂ, ಸತತಗಾಮಿಯಾಗಿಯೂ ಸ್ಥಾಪಿತನಾಗಿದ್ದಾನೆ. ಜಗನ್ನಿರ್ಮಾಪಕನೂ ಬಂಧರಹಿತನೂ, ಮೂರು ಲೋಕಕ್ಕೂ ಗರ್ಭಭೂತನೂ ಆದ ಇಂದ್ರನು ಹವಿಸ್ಸುಗಳನ್ನು ಭಕ್ಷಿಸುತ್ತಾನೆ. ದೇವಮಾತೆಯಾದ ಅದಿತಿಯು ವತ್ಸರೂಪನಾದ ಆದಿತ್ಯನನ್ನು ಪೋಷಿಸುತ್ತ ಉತ್ಪನ್ನಮಾಡಿದ್ದಾನೆ. ಯಾವ ಭಾವವಿಶೇಷದಿಂದ ದ್ಯುಲೋಕರೂಪವಾದ ಧೇನುವು ತನ್ನ ಕೆಚ್ಚಲುಸ್ಥಾನವಾದ ಆದಿತ್ಯನನ್ನು ಧರಿಸಿದ್ದಾಳೆ ಎಂಬುದು ಗಹನಾತೀತವಾಗಿದೆ.

English Translation

The great (sun), shadeless, undecaying, ever-moving, abides; the builder (of the world), who is liberated, the germ (of the three worlds), eats (the oblations), fondling the offspring of another (mother), the constructs (the quarters of the world) : with what design has the milch cow offered her udder?

॥ ಸಂಹಿತಾಪಾಠಃ ।

ಸಪ್ತ ವೀರಾಸೋ ಅಧರಾದುದಾಯನ್ನಷ್ಟೋತ್ತರಾತ್ತಾತ್ಸಮಜಗ್ಮಿರಂತೇ ।
ನವ ಪಶ್ಚಾತಾತ್ಸ್ಥಿವಿಮಂತ ಆಯನ್ದಶ ಪ್ರಾಕ್ಸಾನು ವಿ ತಿರಂತ್ಯಶ್ನಃ ॥೧೫॥

॥ ಪದಪಾಠಃ ॥

ಸಪ್ತ । ವೀರಾಸಃ । ಅಧರಾತ್ । ಉತ್ । ಆಯನ್ । ಅಷ್ಟ । ಉತ್ತರಾತ್ತಾತ್ । ಸಂ । ಅಜಗ್ಮಿರನ್ । ತೇ ।
ನವ । ಪಶ್ಚಾತಾತ್ । ಸ್ಥಿವಿಮಂತಃ । ಆಯನ್ । ದಶ । ಪ್ರಾಕ್ । ಸಾನು । ವಿ । ತಿರಂತಿ । ಅಶ್ನಃ ॥೧೫॥

। ಸಾಯಣಭಾಷ್ಯಂ ।

ಅನಯೋಃಇಂದ್ರಃ ಪ್ರಜಾಪತಿರೂಪೇಣ ಸ್ಥಿತಃ । ಸಪ್ತ ಸಪ್ತಸಂಖ್ಯಾಕಾ ವೀರಾಸಃ ಪ್ರಜಾಪತೇಃ ಪುತ್ರಾ ವಿಶ್ವಾಮಿತ್ರಾದಯೋಽಧರಾತ್ ಪ್ರಜಾಪತೇರಧಃಕಾಯಾದುದಾಯನ್ । ಉತ್ಪನ್ನಾ ಬಭೂವುಃ । ಅಷ್ಟಾಷ್ಟಸಂಖ್ಯಾಕಾಸ್ತೇ ಪ್ರಸಿದ್ಧಾ ವಾಲಖಿಲ್ಯಾದಯಃ ಉತ್ತರಾತ್ತಾದುತ್ತರಾತ್ಕಾಯಪ್ರದೇಶಾತ್ಸಮಜಗ್ಮಿರನ್ । ಸಂಜಜ್ಞಿರೇ । ಸ್ಥಿವಿಮಂತಃ ಸ್ಥಾನವಂತೋ ನವ ನವಸಂಖ್ಯಾಕಾ ಭೃಗವಃ ಪಶ್ಚಾತ್ಕಾತ್ಪೃಷ್ಠತ ಆಯನ್ । ಆಗತಾಃ । ಉತ್ಪನ್ನಾ ಇತ್ಯರ್ಥಃ । ತಥಾ ದಶ ದಶಸಂಖ್ಯಾಕಾ ಅಂಗಿರಸಃ ಪ್ರಾಗಗ್ರತ ಉತ್ಪನ್ನಾಃ ಸಂತೋಽಶ್ನೋಽಶನವಂತೋ ದ್ಯುಲೋಕಸ್ಯ ಸಾನೂನ್ನತಪ್ರದೇಶಂ ವಿ ತಿರಂತಿ । ವರ್ಧಯಂತಿ ॥ ಅಪರ ಆಹ ಸಪ್ತಸಂಖ್ಯೋಪೇತಾ ವೀರಾ ಮರುತೋಽಧರಾದಿಂದ್ರಸ್ಯ ದಕ್ಷಿಣಭಾಗಾದುದಗಮನ್ । ಅಷ್ಟಸಂಖ್ಯಾಕಾಸ್ತೇ ಮರುತ ಉತ್ತರಭಾಗಾತ್ಸಂಗಚ್ಛಂತೇ । ಸ್ಥಾನವಂತೋ ನವಸಂಖ್ಯಾಕಾಸ್ತೇ ಮರುತಃ ಪೃಷ್ಠಭಾಗಾದಾಗಚ್ಛಂತಿ । ದಶಸಂಖ್ಯಾಕಾಸ್ತೇಽಶ್ನೋಽಶನವತ ಇಂದ್ರಸ್ಯ ಪ್ರಾಕ್ಪ್ರದೇಶೇ ಸ್ಥಿತಾಃ ಸಮುಚ್ಛ್ರಿತಮುದಕಂ ತೇಜೋ ವಾ ವಿ ತಿರಂತಿ । ಮರುತಃ ಪ್ರತಿದಿಶಮವಸ್ಥಾಯೇಂದ್ರಸ್ಯ ಸಾಹಾಯ್ಯಂ ಕುರ್ವಂತೀತ್ಯರ್ಥಃ ॥

। ಪ್ರತಿಪದಾರ್ಥ ।

ವೀರಾಸಃ—ಪರಾಕ್ರಮಿಗಳಾದ । ಸಪ್ತ—ವಿಶ್ವಾಮಿತ್ರಾದಿ ಸಪ್ತ ಋಷಿಗಳು । ಅಧರಾತ್—ಪ್ರಜಾಪತಿಯ ಅಧಃಪ್ರದೇಶದಿಂದ । ಉದಾಯನ್—ಉತ್ಪನ್ನರಾಗಿದ್ದಾರೆ । ತೇ—ಪ್ರಸಿದ್ಧರಾದ । ಅಷ್ಟ—ವಾಲಖಿಲ್ಯಾದಿ ಎಂಟು ಋಷಿಗಳು । ಉತ್ತರಾತ್ತಾತ್—ಪ್ರಜಾಪತಿದೇಹದ ಉತ್ತರ ಪ್ರದೇಶದಿಂದ । ಸಮಜಗ್ಮಿರನ್—ಉತ್ಪನ್ನರಾಗಿದ್ದಾರೆ । ಸ್ಥಿವಿಮಂತಃ—ಉತ್ತಮವಾದ ಸ್ಥಾನವುಳ್ಳ । ನವ—ಭೃಗ್ವಾದಿ ಒಂಭತ್ತು ಋಷಿಗಳೂ । ಪಶ್ಚಾತ್ತಾತ್—ಪೃಷ್ಠಭಾಗದಿಂದ । ಆಯನ್—ಉತ್ಪನ್ನರಾಗಿದ್ದಾರೆ । ದಶ—ಅಂಗಿರಸಾದಿ ಹತ್ತು ಋಷಿಗಳೂ । ಪ್ರಾಕ್—ಮುಂಭಾಗದಲ್ಲಿ ಉತ್ಪನ್ನರಾಗಿಯೂ । ಅಶ್ನಃ—ಅನ್ನವಂತರಾಗಿಯೂ । ಸಾನು—ದ್ಯುಲೋಕದ ಉನ್ನತ ಪ್ರದೇಶವನ್ನು । ವಿ ತಿರಂತಿ—ಪುಷ್ಟಿಗೊಳಿಸುತ್ತಾರೆ.

। ಭಾವಾರ್ಥ ।

ಪರಾಕ್ರಮಿಗಳಾದ ವಿಶ್ವಾಮಿತ್ರಾದಿ ಸಪ್ತ ಋಷಿಗಳು ಪ್ರಜಾಪತಿಯ ಅಧಃಪ್ರದೇಶದಿಂದ ಉತ್ಪನ್ನರಾಗಿದ್ದಾರೆ. ಪ್ರಸಿದ್ಧರಾದ ವಾಲಖಿಲ್ಯಾದಿ ಎಂಟು ಋಷಿಗಳು ಪ್ರಜಾಪತಿಯ ದೇಹದ ಉತ್ತರ ಪ್ರದೇಶದಿಂದ ಉತ್ಪನ್ನರಾಗಿದ್ದಾರೆ. ಉತ್ತಮವಾದ ಸ್ಥಾನವುಳ್ಳ ಭೃಗ್ವಾದಿ ಒಂಭತ್ತು ಋಷಿಗಳೂ ಪೃಷ್ಠಭಾಗದಿಂದ ಉತ್ಪನ್ನರಾಗಿದ್ದಾರೆ. ಅಂಗಿರಸಾದಿ ಹತ್ತು ಋಷಿಗಳೂ ಮುಂಭಾಗದಲ್ಲಿ ಉತ್ಪನ್ನರಾಗಿಯೂ, ಅನ್ನವಂತರಾಗಿಯೂ, ದ್ಯುಲೋಕದ ಉನ್ನತಪ್ರದೇಶವನ್ನು ಪುಷ್ಟಿಗೊಳಿಸುತ್ತಾರೆ.

## English Translation

Seven sages sprang from the lower portion (of Indra as prajapati) : eight were born from the upper portion ; nine occupants of stations came from behind, and ten, generated in the front, partaking of food, traverse the summit (of heauen).

। ಸಂಹಿತಾಪಾಠಃ ।

ದಶಾನಾಮೇಕಂ ಕಪಿಲಂ ಸಮಾನಂ ತಂ ಹಿನ್ವಂತಿ ಕ್ರತವೇ ಪಾರ್ಯಾಯ।
ಗರ್ಭಂ ಮಾತಾ ಸುಧಿತಂ ವಕ್ಷಣಾಸ್ವವೇನಂತಂ ತುಷಯಂತೀ ಬಿಭರ್ತಿ ॥

॥ ಪದಪಾಠಃ ॥

ದಶಾನಾಂ । ಏಕಂ । ಕಪಿಲಂ । ಸಮಾನಂ । ತಂ । ಹಿನ್ವಂತಿ । ಕ್ರತವೇ । ಪಾರ್ಯಾಯ ।
ಗರ್ಭಂ । ಮಾತಾ । ಸುऽಧಿತಂ । ವಕ್ಷಣಾಸು । ಅವೇನಂತಂ । ತುಷಯಂತೀ । ಬಿಭರ್ತಿ ॥ ೧೬ ॥

। ಸಾಯಣಭಾಷ್ಯಂ ।

ದಶಾನಾಂ ದಶಸಂಖ್ಯಾಕಾನಾಂ ಪೂರ್ವೋಕ್ತಾನಾಮೇವಾಂಗಿರಸಾಂ ಮಧ್ಯೇ ಏಕಂ ಮುಖ್ಯಂ ಕಪಿಲಮೇತನ್ನಾಮಾನಂ ತಂ ಪ್ರಸಿದ್ಧಮೃಷಿಂ । ಕೀದೃಶಂ । ಸಮಾನಂ ಸದೃಶಂ । ಕೇನ । ಸಾಮರ್ಥ್ಯಾತ್ಪ್ರಜಾಪತಿನಾ । ಹಿನ್ವಂತಿ । ಅವಶಿಷ್ಟಾ ಅಂಗಿರಸಃ ಪ್ರೇರಯಂತಿ। ಕಿಮರ್ಥಂ। ಕ್ರತವೇ ಯಜ್ಞಾದಿಜಗತ್ಪ್ರವರ್ತನಕರ್ಮಣೇ । ಯದ್ವಾ । ಸಮ್ಯಗ್ಜ್ಞಾನಲಕ್ಷಣಪ್ರಜ್ಞಾನಾಯ। ಕೀದೃಶಾಯ। ಪಾರ್ಯಾಯ ಪರಿಸಮಾಪಯಿತವ್ಯಾಯ । ಪ್ರಣೇತವ್ಯಾಯ ವಾ । ಯಜ್ಞಾದಿಕರ್ಮೋಪದೇಶನಾಯೇತ್ಯರ್ಥಃ । ಮಾತಾ ಪ್ರಕೃತ್ಯಾಖ್ಯಾ ಚ ವಕ್ಷಣಾಸು । ವಕ್ಷಣಾ ಇತಿ ನದ್ಯ ಉಚ್ಯಂತೇ । ತಾಭಿಶ್ಚಾತ್ರಾಪೋ ಲಕ್ಷ್ಯಂತೇ । ಪ್ರಕೃತಿಸ್ಥಾಸು ಸೂಕ್ಷ್ಮಾಸ್ವಪ್ಸು ಸುಧಿತಂ ಸುಹಿತಂ । ಪ್ರಜಾಪತಿನಾ ಸ್ಥಾಪಿತಮಿತ್ಯರ್ಥಃ । ಅವೇನಂತಂ । ವೇನತಿಃ ಕಾಂತಿಕರ್ಮಾ । ತತ್ರ ನಿವಾಸಮಕಾಮಯಮಾನಂ ತಾದೃಶಂ ಪ್ರಜಾಪತೇರ್ಗರ್ಭಂ ತುಷಯಂತೀ ತುಷ್ಯಂತೀ ಸಮ್ಯಗ್ಜ್ಞಾನಾದುಪದೇಷ್ಟುಂ ಯೋಗ್ಯೋऽಯಮಿತಿ ಪ್ರೀತಾ ಸತೀ ಬಿಭರ್ತಿ । ಪ್ರಜಾಪತೇರ್ನಿಯೋಗಾದ್ಧಾರಯತಿ ।

। ಪ್ರತಿಪದಾರ್ಥ ।

ದಶಾನಾಂ—ಹತ್ತು ಜನ ಅಂಗಿರಸ್ಸುಗಳ ನಡುವೆ । ತಂ—ಪ್ರಸಿದ್ಧನೂ । ಸಮಾನಂ—ಪ್ರಜಾಪತಿಗೆ ಸಮಾನನೂ ಆದ । ಕಪಿಲಂ—ಕಪಿಲಋಷಿಯನ್ನು । ಮುಖ್ಯಂ—ಪ್ರಧಾನನನ್ನಾಗಿ । ಪಾರ್ಯಾಯ—ಅವಶ್ಯವಾಗಿ ನೆರವೇರಬೇಕಾದ । ಕ್ರತವೇ—ಯಜ್ಞಕ್ಕಾಗಿ । ಹಿನ್ವಂತಿ—ಪ್ರೇರಿಸುತ್ತಾರೆ । ಮಾತಾ—ಜಗನ್ನಿರ್ಮಾತ್ರಿಯಾದ ಪ್ರಕೃತಿಯು । ವಕ್ಷಣಾಸು—ಸೂಕ್ಷ್ಮರೂಪವಾದ ಉದಕಗಳಲ್ಲಿ । ಸುಧಿತಂ—ಉತ್ತಮವಾಗಿ ಸ್ಥಾಪಿತನೂ । ಅವೇನಂತಂ—ಅಲ್ಲಿ ವಾಸಿಸಲಿಚ್ಛಿಯಿಲ್ಲದವನೂ ಆದ । ಗರ್ಭಂ—ಪ್ರಜಾಪತಿಯ ಗರ್ಭರೂಪನಾದ ಈತನನ್ನು । ತುಷಯಂತೀ—ಹರ್ಷಪಟ್ಟವಳಾಗಿ । ಬಿಭರ್ತಿ—ಧರಿಸುತ್ತಾಳೆ.

॥ ಭಾವಾರ್ಥ ॥

ಹತ್ತುಜನ ಅಂಗಿರಸ್ಸುಗಳ ನಡುವೆ ಪ್ರಸಿದ್ಧನೂ, ಪ್ರಜಾಪತಿಗೆ ಸಮಾನನೂ ಆದ ಕಪಿಲಋಷಿಯನ್ನು ಅವಶ್ಯವಾಗಿ ನೆರವೇರಬೇಕಾದ ಯಜ್ಞಕ್ಕಾಗಿ ಪ್ರಧಾನನನ್ನಾಗಿ ಪ್ರೇರಿಸುತ್ತಾರೆ. ಜಗನ್ನಿರ್ಮಾತ್ರಿಯಾದ ಪ್ರಕೃತಿಯು

ಸೂಕ್ಷ್ಮರೂಪವಾದ ಉದಕಗಳಲ್ಲಿ ಉತ್ತಮವಾಗಿ ಸ್ಥಾಪಿತನೂ ಅಲ್ಲಿ ವಾಸಿಸಲಿಚ್ಛೆಯಿಲ್ಲದವನೂ ಆದ ಪ್ರಜಾಪತಿಯ ಗರ್ಭರೂಪನಾದ ಈತನನ್ನು ಹರ್ಷಪಟ್ಟವಳಾಗಿ ಧರಿಸುತ್ತಾಳೆ

## English Translation

(The other Angirasas) despatched one of the ten, Kapila, as equal (to the task) for the completion of the sacrifice; the gratified mother cherishes the embryo well deposited in the waters, and not desirous of an abiding place.

॥ ಸಂಹಿತಾಪಾಠಃ ॥

ಪೀವಾನಂ ಮೇಷಮಪಚಂತ ವೀರಾ ನ್ಯುಪ್ತಾ ಅಕ್ಷಾ ಅನು ದೀವ ಆಸನ್ ।
ದ್ವಾ ಧನುಂ ಬೃಹತೀಮಪ್ಸ್ವ೧ಂತಃ ಪವಿತ್ರವಂತಾ ಚರತಃ ಪುನಂತಾ ॥೧೭॥

॥ ಪದಪಾಠಃ ॥

ಪೀವಾನಂ । ಮೇಷಂ । ಅಪಚಂತ । ವೀರಾಃ । ನಿಽಉಪ್ತಾಃ । ಅಕ್ಷಾಃ । ಅನು । ದೀವೇ । ಆಸನ್ ।
ದ್ವಾ । ಧನುಂ । ಬೃಹತೀಂ । ಅಪ್ಽಸು । ಅಂತರಿತಿ । ಪವಿತ್ರಽವಂತಾ । ಚರತಃ । ಪುನಂತಾ ॥ ೧೭ ॥

॥ ಸಾಯಣಭಾಷ್ಯಂ ॥

ವೀರಾಃ ಪ್ರಜಾಪತೇಃ ಪುತ್ರಾ ಅಂಗಿರಸಃ ಪೀವಾನಂ ಸ್ಥೂಲಂ । ಮೇದೋಮಾಂಸಾದಿಯುಕ್ತಮಿತ್ಯರ್ಥಃ । ಮೇಷಮಜಮಪಚಂತ । ಪ್ರಜಾಪತಿರೂಪಸ್ಯೇಂದ್ರಸ್ಯಾರ್ಥಾಯ ಪಕ್ವವಂತೋಽಭವನ್ । ಪಶುಯಾಗಂ ಕುರ್ವಂತ ಇತ್ಯರ್ಥಃ । ಕಿಂಚ । ಲುಪ್ತೋಪಮಮೇತತ್ । ಯಥಾ ದೇವಾನಾಮಕ್ಷಾ ದೀವೇ ದೇವನೇ ರಮಣಸ್ಥಾನೇ ನ್ಯುಪ್ತಾ ನಿಕ್ಷಿಪ್ತಾಃ ಸಂತೋಽನ್ವಾಸನ್ ಸಂಕ್ರೀಡಮಾನಯೋರ್ದ್ವಯೋರೇಕತರಸ್ಯಾನುಗತಾ ಭವಂತಿ ತಥಾ ಸರ್ವೇಽಂಗಿರಸಃ ಪ್ರಜಾಪತೇರನುಗತಾ ಭವಂತಿ । ದ್ವಾಂಗಿರಸಾಂ ಮಧ್ಯೇ ದ್ವಾವಂಗಿರಸೌ ಧನುಂ । ಧನುಶಬ್ದೋಽತ್ರ ಧನುಃಶಬ್ದಪರ್ಯಾಯೋ ಧನಶಬ್ದಪರ್ಯಾಯೋ ವಾ । ಧನುರ್ಯಥಾ ವಧಸಾಧನಂ ತಥಾಜ್ಞಾನಾದಿವಧಸಾಧನಂ ಧನವತ್ಪ್ರೀತಿಕರಂ ವಾ । ಕಪಿಲಮಿತ್ಯರ್ಥಃ । ಬೃಹತೀಂ ಪ್ರಜಾಪತೇರಾಜ್ಞಯಾ ವರ್ಧಯಿತ್ರೀಂ ಪ್ರಕೃತಿಮಪ್ಸ್ವಂತಃ ಪ್ರಕೃತಿಸ್ಥಾನಾಂ ಸೂಕ್ಷ್ಮಾಣಾಮುದಕಾನಾಂ ಮಧ್ಯೇ ಚರತಃ । ಪ್ರಜಾಪತ್ಯಾದೇಶಾದಾರಾಧಯತಃ । ಕೀದೃಶೌ । ಪವಿತ್ರವಂತಾ ಪವಿತ್ರವಂತೌ । ಮಂತ್ರಃ ಪವಿತ್ರಮುಚ್ಯತೇ । ಧ್ಯಾನಸಾಧನಪ್ರಣವಮಂತ್ರವಂತೌ ಪುನಂತಾ ಶುದ್ಧಾ । ಪ್ರಣವಧ್ಯಾನೇನಾತ್ಮಾನಂ ಸಂಸ್ಕುರ್ವಂತಾವಿತ್ಯರ್ಥಃ ॥

॥ ಪ್ರತಿಪದಾರ್ಥ ॥

ವೀರಾಃ—ಪ್ರಜಾಪತಿಯ ಪುತ್ರರಾದ ಅಂಗಿರಸ್ಸುಗಳು | **ಪೀವಾನಂ**—ದಪ್ಪನಾದ | **ಮೇಷಂ**-ಟಗರನ್ನು | **ಅಪಚಂತ**—ಇಂದ್ರಾರ್ಥವಾಗಿ ಬೇಯಿಸಿ ಪಕ್ವಮಾಡಿದರು | **ಅಕ್ಷಾಃ**-ಪಗಡೆದಾಳಗಳು | **ದೇವೇ**-ಆಟದಕಾಲದಲ್ಲಿ | **ನ್ಯುಪ್ತಾಃ**—ಎಸೆಯಲ್ಪಟ್ಟವಾಗಿ | **ಅನು ಆಸನ್**—ಆಟಗಾರರ ಇಷ್ಟಾನುಸಾರವಾಗಿ ಹೇಗೆ ಬೀಳುವುವೋ ಹಾಗೆ ಅಂಗಿರಸ್ಸುಗಳು ಪ್ರಜಾಪತಿಯನ್ನು ಹಿಂಬಾಲಿಸಿದ್ದಾರೆ | **ಪವಿತ್ರವಂತಾ**—ಮಂತ್ರವುಳ್ಳವರೂ | **ಪುನಂತಾ**—ಪರಿಶುದ್ಧರೂ ಆದ | **ದ್ವಾ**—ಅಂಗಿರಸ್ಸುಗಳಲ್ಲಿ ಇಬ್ಬರು | **ಧನುಂ**—ಧನುಸ್ಸಿನಂತೆ (ಅಜ್ಞಾನಕ್ಕೆ) ವಧಸಾಧನನಾದ ಕಪಿಲನನ್ನೂ | **ಬೃಹತೀಂ**—ಮಹತ್ಸ್ವರೂಪವುಳ್ಳ ಪ್ರಕೃತಿಯನ್ನೂ | **ಅಪ್ಸ್ವಂತಃ**—ಉದಕಗಳ ಮಧ್ಯ ಭಾಗದಲ್ಲಿ | **ಚರತಃ**—ಆರಾಧಿಸುತ್ತಾರೆ.

॥ ಭಾವಾರ್ಥ ॥

ಪ್ರಜಾಪತಿಯ ಪುತ್ರರಾದ ಅಂಗಿರಸ್ಸುಗಳು ದಪ್ಪನಾದ ಟಗರನ್ನು ಇಂದ್ರಾರ್ಥವಾಗಿ ಪಕ್ವಮಾಡಿದರು. ಪಗಡೆದಾಳಗಳು ಆಟದಕಾಲದಲ್ಲಿ ಎಸೆಯಲ್ಪಟ್ಟವಾಗಿ ಆಟಗಾರರ ಇಷ್ಟಾನುಸಾರವಾಗಿ ಹೇಗೆ ಬಿಳುವುವೋ ಹಾಗೆ ಅಂಗಿರಸ್ಸುಗಳು ಪ್ರಜಾಪತಿಯನ್ನು ಹಿಂಬಾಲಿಸಿದ್ದಾರೆ. ಮಂತ್ರವುಳ್ಳವರೂ, ಪರಿಶುದ್ಧರೂ ಆದ ಅಗಿರಸ್ಸುಗಳಲ್ಲಿ ಇಬ್ಬರು ಧನುಸ್ಸಿನಂತೆ ಅಜ್ಞಾನಕ್ಕೆ ವಧಸಾಧನನಾದ ಕಪಿಲನನ್ನೂ, ಮಹತ್ಸ್ವರೂಪವುಳ್ಳ ಪ್ರಕೃತಿಯನ್ನೂ ಉದಕಗಳ ಮಧ್ಯಭಾಗದಲ್ಲಿ ಆರಾಧಿಸುತ್ತಾರೆ.

English Translation

The sages cooked a fat ram: they followed (Prajapati) in succession like dice thrown in gambling: two (of them), having the means of purifiication and becoming purified, proceed in the midst of the waters to (Prakriti) the augmenter, to (Kapila) the implement of destruction.

॥ ಸಂಹಿತಾಪಾಠಃ ॥

ವಿ ಕ್ರೋಶನಾಸೋ ವಿಷ್ವಂಚ ಆಯನ್ಪಚಾತಿ ನೇಮೋ ನಹಿ ಪಕ್ಷದರ್ಧಃ ।
ಅಯಂ ಮೇ ದೇವಃ ಸವಿತಾ ತದಾಹ ದ್ರ್ವನ್ನ ಇದ್ವನವತ್ಸರ್ಪಿರನ್ನಃ ॥೧೮॥

॥ ಪದಪಾಠಃ ॥

ವಿ । ಕ್ರೋಶನಾಸಃ । ವಿಷ್ವಂಚಃ । ಆಯನ್ । ಪಚಾತಿ । ನೇಮಃ । ನಹಿ । ಪಕ್ಷತ್ । ಅರ್ಧಃ ।
ಅಯಂ । ಮೇ । ದೇವಃ । ಸವಿತಾ । ತತ್ । ಆಹ । ದ್ರುऽಅನ್ನಃ । ಇತ್ । ವನವತ್ । ಸರ್ಪಿಃऽಅನ್ನಃ ॥

। ಸಾಯಣಭಾಷ್ಯಂ ।

ವಿ ಕ್ರೋಶನಾಸೋ ವಿವಿಧಂ ಪ್ರಜಾಪತಿಂ ಪಿತರಮಾಹ್ವಯಂತೋ ವಿಷ್ವಂಚೋ ನಾನಾಗತಯೋ ನಾನಾಪೂಜನಾ ವಾ ಸರ್ವೇಽಂಗಿರಸ ಆಯನ್ । ಆಗಚ್ಛನ್ । ಪ್ರಜಾಪತೇಃ ಸಕಾಶಾದುತ್ಪನ್ನಾ ಇತ್ಯರ್ಥಃ । ಉತ್ಪದ್ಯಮಾನೋ ನೇಮೋಽರ್ಧೋಽಂಗಿರಸಾಂ ಮಧ್ಯ ಏಕೋ ಭಾಗಃ ಪಚಾತಿ । ಪ್ರಜಾಪತ್ಯರ್ಥಂ ಹವೀಂಷಿ ಪಚತಿ । ಅರ್ಧೋಽಪರೋ ಭಾಗೋ ನಹಿ ಪಕ್ಷತ್ । ನಹಿ ಪಚತಿ । ಏತತ್ಸರ್ವಂ ಕಥಮಜ್ಞಾಯಿ ಉಚ್ಯತೇ । ಅಯಮೀದೃಶೋ ದೇವೋ ದ್ಯೋತಮಾನಃ ಸವಿತಾ ಸರ್ವಸ್ಯ ಪ್ರೇರಕ ಆದಿತ್ಯೋ ವಾ ಪ್ರಜಾಪತಿರ್ವಾ ಮೇ ಮಹ್ಯಂ ತತ್ಸರ್ವಂ ಯಥೋಕ್ತಮಾಹ । ಕಿಂಚ ಸರ್ಪಿರನ್ನೋ ಘೃತೌದನೋ ದ್ರುನ್ನ ಇದ್ದಾರ್ವೋದನೋಽಗ್ನಿರಪಿ ವನವತ್ । ಹವಿರ್ದ್ವಾರೇಣ ಪ್ರಜಾಪತಿಂ ವನುತೇ । ಸಂಭಜತೇ

। ಪ್ರತಿಪದಾರ್ಥ ।

**ವಿಕ್ರೋಶನಾಸಃ**—ಪ್ರಜಾಪತಿಯನ್ನು ಅನೇಕವಿಧವಲ್ಲಿ ಕರೆಯುವವರೂ । **ವಿಷ್ವಂಚಃ**—ನಾನಾ ವಿಧವಾದ ಸಂಚಾರವುಳ್ಳವರೂ ಆದ ಅಂಗಿರಸ್ಸುಗಳು । **ಆಯನ್**—ಎಲ್ಲಾ ಪ್ರದೇಶಗಳಲ್ಲೂ ಸಂಚರಿಸುತ್ತಾರೆ । **ನೇಮಃ**—ಈ ಅಂಗಿರಸ್ಸುಗಳಲ್ಲಿ ಅರ್ಧಜನರು । **ಪಚಾತಿ**—ಹವಿಸ್ಸುಗಳನ್ನು ಪಕ್ವಮಾಡುತ್ತಾರೆ । **ಅರ್ಧಃ**—ಉಳಿದರ್ಧಭಾಗವು । **ನಹಿ ಪಕ್ಷತ್**—ಪಕ್ವಮಾಡುವುದಿಲ್ಲ । **ದೇವಃ**—ದೇವತಾತ್ಮನಾದ । **ಅಯಂ ಸವಿತಾ**—ಈ ಸವಿತೃದೇವನು । **ಮೇ**—ನನಗೆ । **ತತ್ ಆಹ**—ಈ ರೀತಿ ಹೇಳಿದ್ದಾನೆ । **ಸರ್ಪಿರನ್ನಃ**—ಹವಿಸ್ಸಿನ ರೂಪದ ಅನ್ನವುಳ್ಳವನೂ । **ದ್ರುನ್ನ ಇತ್**—ಕಾಷ್ಠಾದಿರೂಪದ ಅನ್ನವುಳ್ಳವನೂ ಆದ ಅಗ್ನಿಯೂ ಸಹ । **ವನವತ್**—ಪ್ರಜಾಪತಿಯನ್ನು ಪೂಜಿಸುತ್ತಾನೆ.

। ಭಾವಾರ್ಥ ।

ಪ್ರಜಾಪತಿಯನ್ನು ಅನೇಕವಿಧವಲ್ಲಿ ಕರೆಯುವವರೂ, ನಾನಾ ವಿಧವಾದ ಸಂಚಾರವುಳ್ಳವರೂ ಆದ ಅಂಗಿರಸ್ಸುಗಳು ಎಲ್ಲಾ ಪ್ರದೇಶಗಳಲ್ಲೂ ಸಂಚರಿಸುತ್ತಾರೆ. ಈ ಅಂಗಿರಸ್ಸುಗಳಲ್ಲಿ ಅರ್ಧಜನರು ಹವಿಸ್ಸುಗಳನ್ನು ಪಕ್ವಮಾಡುತ್ತಾರೆ. ಉಳಿದರ್ಧಭಾಗವು ಪಕ್ವಮಾಡುವುದಿಲ್ಲ. ದೇವತಾತ್ಮನಾದ ಈ ಸವಿತೃದೇವನು ನನಗೆ ಈ ರೀತಿ ಹೇಳಿದ್ದಾನೆ. **ಅದೇನೆಂದರೆ,** “ ಹವಿಸ್ಸನ್ನು ಭಕ್ಷಿಸುವವನೂ, ಕಾಷ್ಠಾದಿಗಳನ್ನು ಭಕ್ಷಿಸುವವನೂ ಆದ ಅಗ್ನಿಯೂ ಸಹ ಪ್ರಜಾಪತಿಯನ್ನು ಪೂಜಿಸುತ್ತಾನೆ ” ಎಂದು.

## English Translation

They (the Angirasas) go in all directions calling (upon Prajapati), half of them cook (their oblations), the other half cook not; this divine Savitri has told me this—(Agni), whose food is wood and ghee, serves (Prajapati by means of oblations).

। ಸಂಹಿತಾಪಾಠಃ ।

ಅಪಶ್ಯಂ ಗ್ರಾಮಂ ವಹಮಾನಮಾರಾದಚಕ್ರಯಾ ಸ್ವಧಯಾ ವರ್ತಮಾನಂ ।

ಸಿಷಕ್ತ್ಯರ್ಯಃ ಪ್ರ ಯುಗಾ ಜನಾನಾಂ ಸದ್ಯಃ ಶಿಶ್ನಾ ಪ್ರಮಿನಾನೋ ನವೀ-
ಯಾನ್ ॥ ೧೯ ॥

॥ ಪದಪಾಠಃ ॥

ಅಪಶ್ಯಂ । ಗ್ರಾಮಂ । ವಹಮಾನಂ । ಆರಾತ್ । ಅಚಕ್ರಯಾ । ಸ್ವಧಯಾ । ವರ್ತಮಾನಂ ।

ಸಿಸಕ್ತಿ । ಅರ್ಯಃ । ಪ್ರ । ಯುಗಾ । ಜನಾನಾಂ । ಸದ್ಯಃ । ಶಿಶ್ನಾ । ಪ್ರSಮಿನಾನಃ । ನವೀಯಾನ್ ।೧೯॥

॥ ಸಾಯಣಭಾಷ್ಯಂ ॥

ಅಪಶ್ಯಂ । ವಸುಕ್ರೋSಹಂ ಪ್ರಜಾಪತಿರೂಪಮಿಂದ್ರಂ ಸಮ್ಯಗ್ಜ್ಞಾನೇನ ದೃಷ್ಟವಾನಸ್ಮಿ । ಕೀದೃಶಂ । ಗ್ರಾಮಂ ಗ್ರಾಮಭೂತಂ ಸಂಘಂ ವಹಮಾನಂ ವಾಹಯಂತಂ । ಸೃಜಂತಮಿತ್ಯರ್ಥಃ । ಕುತಃ । ಆರಾದ್ದೂರಾತ್ । ಉಪಾದಾನಕಾರಣಾತ್ಪ್ರಕೃತಿತ ಇತ್ಯರ್ಥಃ । ಅಚಕ್ರಯಾ ಚಕ್ರವರ್ಜಿತಯಾ ರಥಹೀನಯಾ ಸ್ವಧಯಾ ಸ್ವಯಮಾತ್ಮಾನಂ ಧಾರಯಂತ್ಯಾ ಸೇನಯಾ ವರ್ತಮಾನಮಾಗಚ್ಛಂತಂ । ಏವಂಭೂತಮಪಶ್ಯಮಿತ್ಯರ್ಥಃ । ಕಿಂಚಾರ್ಯಃ ಸರ್ವಸ್ಯ ಸ್ವಾಮೀಂದ್ರೋ ಜನಾನಾಂ ಯಜಮಾನಾನಾಂ ಕಾರ್ಯತ್ವೇನ ಸಂಬಂಧಿನೋ ಯುಗಾ ಯುಗಾನಿ ಯಜ್ಞಕಾಲವಿಶೇಷಾನ್ಪ್ರ ಸಿಷಕ್ತಿ । ಪ್ರಕರ್ಷೇಣ ಸೇವತೇ । ಕೀದೃಶಃ । ಸದ್ಯಸ್ತದಾನೀಮೇವ ಶಿಶ್ನಾ ಶಿಶ್ನಾನಿ । ಶಿಶ್ನಂ ಶ್ನಥತೇರಿತಿ ನಿರ್ವಚನಾತ್ । ನಿ. ೪.೧೯ । ಶ್ನಥಿತ್ವಾಣಿ ತಾಡಯಿತ್ರಾಣಿ ರಾಕ್ಷಸಾದಿವೃಂದಾನಿ ಪ್ರಮಿನಾನಃ ಪ್ರಕರ್ಷೇಣ ಹಿಂಸನ್ನವೀ-ಯಾಞ್ಶರೀರೇಣ ಚ ಬಲಪೌರುಷನಯನಾದಿಭಿಶ್ಚ ನವತರಃ ॥

॥ ಪ್ರತಿಪದಾರ್ಥ ॥

**ಗ್ರಾಮಂ**—ಸಕಲಭೂತಸಂಘವನ್ನೂ । **ವಹಮಾನಂ**—ಉತ್ಪನ್ನಮಾಡತಕ್ಕವನೂ । **ಅಚಕ್ರಯಾ**—ಚಕ್ರರಹಿತವಾದುದೂ । **ಸ್ವಧಯಾ**—ತಮ್ಮನ್ನೆಲ್ಲಾ ವಹಿಸಬಲ್ಲುದೂ ಆದ ಸೇನೆಯೊಡನೆ । **ವರ್ತಮಾನಂ**—ಇರುತ್ತಿರುವವನೂ ಆದ ಇಂದ್ರನನ್ನು । **ಆರಾತ್**—ದೂರದಿಂದಲೇ । **ಅಪಶ್ಯಂ**—ನಾನು ನೋಡಿದೆನು । **ಸದ್ಯಃ**—ಒಡನೆಯೇ । **ಶಿಶ್ನಾ**—ರಾಕ್ಷಸಾದಿಗಳನ್ನು । **ಪ್ರಮಿನಾನಃ**—ಅಧಿಕವಾಗಿ ಹಿಂಸಿಸುವವನೂ । **ನವೀಯಾನ್**—ನೂತನಸ್ವರೂಪನೂ । **ಅರ್ಯಃ**—ಸ್ವಾಮಿಯೂ ಆದ ಇಂದ್ರನು । **ಜನಾನಾಂ**—ಯಜಮಾನರಿಗೆ । **ಯುಗಾ**—ಅಯನಾದಿ ಯಜ್ಞಕಾಲಗಳನ್ನು । **ಪ್ರ ಸಿಷಕ್ತಿ**—ನಿಯಮಿಸುತ್ತಾನೆ.

॥ ಭಾವಾರ್ಥ ॥

ಸಕಲಭೂತಸಂಘವನ್ನೂ ಉತ್ಪನ್ನಮಾಡತಕ್ಕವನೂ, ಚಕ್ರರಹಿತವಾದುದೂ, ತಮ್ಮನ್ನೆಲ್ಲ ವಹಿಸಬಲ್ಲದೂ ಆದ ಸೇನೆಯೊಡನೆ ಇರುತ್ತಿರುವವನೂ ಆದ ಇಂದ್ರನನ್ನು ನಾನು ದೂರದಿಂದಲೇ ನೋಡಿದೆನು. ಒಡನೆಯೇ ರಾಕ್ಷಸಾದಿಗಳನ್ನು ಅಧಿಕವಾಗಿ ಹಿಂಸುವವನೂ, ನೂತನಸ್ವರೂಪನೂ, ಸ್ವಾಮಿಯೂ ಆದ ಇಂದ್ರನು ಯಜಮಾನರಿಗೆ ಅಯನಾದಿ ಯಜ್ಞಕಾಲಗಳನ್ನು ನಿಯಮಿಸುತ್ತಾನೆ.

## English Translation

I beheld the crowd coming from afar, moving of themselves without wheels : the lord of all, (Indra), regulates the seasons (for the worship of men), younger in vigour, destroying at once the herds of evil beings.

॥ ಸಂಹಿತಾಪಾಠಃ ॥

ಏತೌ ಮೇ ಗಾವೌ ಪ್ರಮರಸ್ಯ ಯುಕ್ತೌ ಮೋ ಷು ಪ್ರ ಸೇಧೀರ್ಮುಹು-
ರಿನ್ಮಮಂಧಿ ।
ಆಪಶ್ಚಿದಸ್ಯ ವಿ ನಶಂತ್ಯರ್ಥಂ ಸೂರಶ್ಚ ಮರ್ಕ ಉಪರೋ ಬಭೂವಾನ್ ॥೨೦॥

॥ ಪದಪಾಠಃ ॥

ಏತೌ । ಮೇ । ಗಾವೌ ಪ್ರಽಮರಸ್ಯ । ಯುಕ್ತೌ । ಮೋ ಇತಿ । ಸು । ಪ್ರ । ಸೇಧೀಃ । ಮುಹುಃ ।
ಇತ್ । ಮಮಂಧಿ

ಆಪಃ । ಚಿತ್ । ಅಸ್ಯ । ವಿ । ನಶಂತಿ । ಅರ್ಥಂ । ಸೂರಃ । ಚ । ಮರ್ಕಃ । ಉಪರಃ । ಬಭೂವಾನ್ ॥

॥ ಸಾಯಣಭಾಷ್ಯಂ ॥

ಕಾರ್ಯಕಾರಣಯೋರುಪಚಾರಾದಾತ್ಮಾ ವೈ ಪುತ್ರನಾಮಾಸೀತಿ ವಚನಾಚ್ಚೇಂದ್ರರೂಪೇಣಾವಸ್ಥಿತಸ್ಯ ಪ್ರಮರಸ್ಯ ಪ್ರಕರ್ಷೇಣ ಶತ್ರೂಣಾಂ ಮಾರಯಿತುರ್ಮೇ ಮಮ ಸ್ವಭೂತಾವೇತಾವೇತಾದೃಶೌ ಯುಕ್ತೌ ಸುಷ್ಠು ಪೂಜಿತೌ ಗಾವೌ ಶತ್ರೂನ್ಯಜ್ಞಾಂಶ್ಚ ಪ್ರತಿ ಗಂತಾರೌ ಹರೀ ಮೋ ಪ್ರ ಸೇಧೀಃ । ಸ್ತುತ್ಯುಪಸಂಹಾರಕರಣೇನಾಸ್ಮದ್ಯಜ್ಞಾನ್ಮಾಪಗಮಯ । ಕಿಂ ತರ್ಹಿ ಮುಹುರಿನ್ಮುಹುರ್ಮುಹುರ್ಮಮಂಧಿ । ಪುನಃಪುನಃ ಸ್ತುಹಿ ಮಮಾತ್ಮನ್ನಿತ್ಯರ್ಥಃ । ಆಪಶ್ಚಿದ್ವೃಷ್ಟಿಲಕ್ಷಣಾನ್ಯುದಕಾನ್ಯಪ್ಯಸ್ಯೇಂದ್ರಸ್ಯಾರ್ಥಂ ಗತಿಂ ವಿ ನಶಂತಿ । ವಿನಶತಿರ್ವ್ಯಾಪ್ತಿಕರ್ಮಾ । ವ್ಯಾಪ್ನುವಂತಿ । ತಥಾ ಸೂರಶ್ಚ ಸೂರ್ಯಶ್ಚ ವ್ಯಾಪ್ನೋತಿ । ಕೀದೃಶಃ । ಮರ್ಕೋ ಮರ್ಜಯಿತಾ ಸರ್ವಸ್ಯ ಶೋಧಯಿತೋಪರೋ ಮೇಘಸದೃಶೋ ಬಭೂವಾನ್ ಭವನ್ । ಮೇಘವಚ್ಛೀಘ್ರಗತಿಃ ಸನ್ನಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಪ್ರಮರಸ್ಯ—ಅತಿಶಯವಾಗಿ ಶತ್ರುವನ್ನು ನಾಶಮಾಡುವ । ಮೇ—ನನಗೆ ಸೇರಿದವೂ । ಯುಕ್ತಾ—ರಥಕ್ಕೆ ಯೋಜಿತವಾದವೂ । ಸು—ಅತಿಶಯವಾಗಿ ಪೂಜಿತವಾದವೂ । ಗಾವೌ—ಯಜ್ಞಾಭಿಮುಖವಾಗಿ ಹೋಗ

ತಕ್ಕವೂ ಆದ । ಏತೌ—(ನನ್ನ) ಈ ಅಶ್ವಗಳನ್ನು । **ಮೋ ಪ್ರ ಸೇಧೀಃ**—ಯಜ್ಞದಿಂದ ಹಿಂತಿರುಗುವಂತೆ ಮಾಡಬೇಡ । **ಮುಹುರಿತ್**—ಅನೇಕ ಸಲ । **ಮಮಂಧಿ**—ಪ್ರಶಂಸಿಸಿರಿ । **ಆಪಶ್ಚಿತ್**—ಉದಕಗಳು । **ಅಸ್ಯ**—ಇಂದ್ರನ । **ಅರ್ಥಂ**—ಉದ್ದೇಶವನ್ನು । **ವಿ ನಶಂತಿ**—ನೆರವೇರುವಂತೆ ಮಾಡುತ್ತವೆ । **ಮರ್ಕಃ**—ಶುದ್ಧಿಕಾರಕನೂ । **ಉಪರಃ**—ಮೇಘದಂತೆ । **ಬಭೂವಾನ್**—ಶೀಘ್ರಗಾಮಿಯೂ ಆದ । **ಸೂರಃ ಚ**—ಆದಿತ್ಯನೂ ಇಂದ್ರನ ಉದ್ದೇಶವು ನೆರವೇರುವಂತೆ ಮಾಡುತ್ತಾನೆ.

॥ ಭಾವಾರ್ಥ ॥

ಶತ್ರುನಾಶಕನಾದ ನನಗೆ (ಇಂದ್ರನಿಗೆ) ಸೇರಿದವೂ, ರಥಕ್ಕೆ ಯೋಜಿತವಾದವೂ ಅತಿಶಯವಾಗಿ ಪೂಜಿತವಾದವೂ, ಯಜ್ಞಾಭಿಮುಖವಾಗಿ ಹೋಗತಕ್ಕವೂ ಆದ ನನ್ನ ಈ ಅಶ್ವಗಳನ್ನು ಯಜ್ಞದಿಂದ ಹಿಂತಿರುಗುವಂತೆ ಮಾಡಬೇಡ. ಮತ್ತು ಆ ಅಶ್ವಗಳನ್ನು ಪದೇಪದೇ ಪ್ರಶಂಸಿಸಿರಿ. ಉದಕಗಳು ಇಂದ್ರನ ಉದ್ದೇಶವನ್ನು ನೆರವೇರುವಂತೆ ಮಾಡುತ್ತವೆ. ಶುದ್ಧಿಕಾರಕನೂ ಮೇಘದಂತೆ ಶೀಘ್ರಗಾಮಿಯೂ ಆದ ಆದಿತ್ಯನೂ ಸಹ ಇಂದ್ರನ ಉದ್ದೇಶವನ್ನು ನೆರವೇರುವಂತೆ ಮಾಡುತ್ತಾನೆ.

## English Translation

Turn not back, but repeatedly praise these two yoked (steeds) of me the destroyer, which advance (to the foe and to the sacrifice); the waters fulfil Indra's purpose, and (so does) the all-cleansing sun, being (swift as) a cloud.

॥ ಸಂಹಿತಾಪಾಠಃ ॥

**ಅಯಂ ಯೋ ವಜ್ರಃ ಪುರುಧಾ ವಿವೃತ್ತೋಽವಃ ಸೂರ್ಯಸ್ಯ ಬೃಹತಃ ಪುರೀಷಾತ್ ।**
**ಶ್ರವ ಇದೇನಾ ಪರೋ ಅನ್ಯದಸ್ತಿ ತದವ್ಯಥೀ ಜರಿಮಾಣಸ್ತರಂತಿ ॥ ೨೧ ॥**

॥ ಪದಪಾಠಃ ॥

**ಅಯಂ । ಯಃ । ವಜ್ರಃ । ಪುರುಧಾ । ವಿಽವೃತ್ತಃ । ಅವಃ । ಸೂರ್ಯಸ್ಯ । ಬೃಹತಃ । ಪುರೀಷಾತ್ ।**
**ಶ್ರವಃ । ಇತ್ । ಏನಾ । ಪರಃ । ಅನ್ಯತ್ । ಅಸ್ತಿ । ತತ್ । ಅವ್ಯಥೀ । ಜರಿಮಾಣಃ । ತರಂತಿ ॥ ೨೧ ॥**

॥ ಸಾಯಣಭಾಷ್ಯಂ ॥

**ಯೋಽಯಂ ವಜ್ರ ಇಂದ್ರಸ್ಯ ಸ್ವಭೂತಃ ಸೂರ್ಯಸ್ಯಾದಿತ್ಯಸ್ಯ ಬೃಹತೋ ಮಹತಃ ಪುರೀಷಾತ್ಪೂರಕಾನ್ಮಂಡಲಾದವೋಽವಸ್ತಾದಧೋಭಾಗೇ ಸ್ಥಿತೇಷು ವಿವೃತ್ತೋ ವೃಷ್ಟ್ಯರ್ಥಂ ಪ್ರವೃತ್ತಃ ಪತಿತಃ ।**

ಇಷ್ಟಬೋಽಸ್ಪರ್ಧೇ ತಚ್ಛಬ್ದಶ್ರುತೇರ್ಯಚ್ಛಬ್ದೋಽಧ್ಯಾಹಾರ್ಯಃ । ಪರಃ ಪರಸ್ತಾದಂತರಿಕ್ಷಲೋಕಸ್ಯೋಪರಿ ಸ್ಥಿತೇ ಸೂರ್ಯಮಂಡಲೇ ಸ್ಥಿತೋಽನ್ಯತ್ ತತ್ । ಶ್ರವ ಇತ್ಯನ್ನನಾಮ । ತದ್ಧೇತುತ್ವಾದುದಕಂ ಶ್ರವ ಇತ್ಯುಚ್ಯತೇ । ಯದಸ್ತ್ಯುದಕಂ ಮೇಘೋದರಗತಾದುದಕಾದನ್ಯದಸ್ತಿ ಅವ್ಯಥೀ ವ್ಯಥಾರಹಿತಾ ಜರಿಮಾಣಃ ಸ್ತೋತಾರೋ ಮರುದಾದಯಸ್ತತ್ತಾದೃಶಮುದಕಂ ತರಂತಿ । ಅಂತರಿಕ್ಷಲೋಕಂ ಪ್ರತ್ಯವತಾರಯಂತಿ ।

॥ ಪ್ರತಿಪದಾರ್ಥ ॥

**ಯಃ**—ಯಾವುದು । **ಸೂರ್ಯಸ್ಯ**—ಆದಿತ್ಯನ **ಬೃಹತಃ**—ಮಹತ್ತಾದುದೂ । **ಪುರೀಷಾತ್**—ಪ್ರಾದೇಶವಾದುದೂ ಆದ ಮಂಡಲಕ್ಕಿಂತ । **ಅವಃ**—ಕೆಳಭಾಗದ ಮೇಘಗಳ ಮೇಲೆ । **ಪುರುಧಾ**—ಅನೇಕಸಲ । **ವಿವೃತ್ತ**—ಪ್ರಯೋಗಿಸಲ್ಪಡುವುದೋ । **ಅಯಂ**—ಇದೇ । **ವಜ್ರಃ**—ಇಂದ್ರನ ವಜ್ರಾಯುಧವು । **ಪರಃ**—ಸೂರ್ಯಮಂಡಲದಲ್ಲಿರುವುದೂ । **ಅನ್ಯತ್**—ಮೇಘಸ್ಥವಾದ ಉದಕಕ್ಕಿಂತಲೂ ಬೇರೆಯಾದುದೂ ಆದ । **ಏನಾ ಶ್ರವಃ**—ಯಾವ ಈ ಉದಕವು । **ಅಸ್ತಿ**—ಇರುವುದೋ । **ತತ್**—ಅದನ್ನು । **ಅವ್ಯಥೀ**—ಶ್ರಮರಹಿತರಾದ । **ಜರಿಮಾಣಃ**—ಮರುದಾದಿಗಳು । **ತರಂತಿ**—ಅಂತರಿಕ್ಷಾಭಿಮುಖವಾಗಿ ಬೀಳುವಂತೆ ಮಾಡುತ್ತಾರೆ.

॥ ಭಾವಾರ್ಥ ॥

ಆದಿತ್ಯನ ಮಹತ್ತಾದ ಮಂಡಲಕ್ಕಿಂತ ಕೆಳಭಾಗದ ಮೇಘಗಳ ಮೇಲೆ ಯಾವ ಇಂದ್ರನ ಆಯುಧವು ಅನೇಕ ಬಾರಿ ಪ್ರಯೋಗಿಸಲ್ಪಡುವುದೋ ಇದೇ ಈ ವಜ್ರಾಯುಧವು, ಸೂರ್ಯಮಂಡಲದಲ್ಲಿರುವುದೂ. ಮೇಘಸ್ಥವಾದ ಉದಕಕ್ಕಿಂತಲೂ ಬೇರೆಯಾದುದೂ ಆದ ಯಾವ ಈ ಉದಕವು ಇರುವುದೋ ಅದನ್ನು ಶ್ರಮರಹಿತರಾದ ಮರುದಾದಿಗಳು ಅಂತರಿಕ್ಷಾಭಿಮುಖವಾಗಿ ಬೀಳುವಂತೆ ಮಾಡುತ್ತಾರೆ.

## English Translation

This is the thunderbolt which repeatedly falls (on those who are) below the orb of the vast sun: the worshippers easily cause this water (in the sun's orb) above which is different from that (in the clouds) to pass through (the firmament).

॥ ಸಂಹಿತಾಪಾಠಃ ॥

ವೃಕ್ಷೇವೃಕ್ಷೇ ನಿಯತಾ ಮೀಮಯದ್ಗೌಸ್ತತೋ ವಯಃ ಪ್ರ ಪತಾನ್ಪೂರುಷಾದಃ ।

ಅಥೇದಂ ವಿಶ್ವಂ ಭುವನಂ ಭಯಾತ ಇಂದ್ರಾಯ ಸುನ್ವದೃಷಯೇ ಚ ಶಿಕ್ಷತ್ ॥ ೨೨ ॥

॥ ಪದಪಾಠಃ ॥

ವೃಕ್ಷೇಽವೃಕ್ಷೇ । ನಿಽಯತಾ । ಮೀಮಯತ್ । ಗೌಃ । ತತಃ । ವಯಃ । ಪ್ರ । ಪತಾನ್ । ಪುರುಷಽ-
ಅದಃ ।
ಅಥ । ಇದಂ । ವಿಶ್ವಂ । ಭುವನಂ । ಭಯಾತೇ । ಇಂದ್ರಾಯ । ಸುನ್ವತ್ । ಋಷಯೇ । ಚ । ಶಿಕ್ಷತ್ ॥

॥ ಸಾಯಣಭಾಷ್ಯಂ ॥

ವೃಕ್ಷೇ ವೃಕ್ಷೇ ಸರ್ವಸ್ಮಿನ್ವೃಕ್ಷಮಯೇ ಧನುಷಿ ನಿಯತಾ ಸಂಬದ್ಧಾ ಗೌರ್ಗೋಃಸಂಬಂಧಿನೀ ಸ್ನಾಯುಮತೀ ಮೌರ್ವೀ ಮೀಮಯತ್ । ಮೀಮಯತಿಃ ಶಬ್ದಕರ್ಮಾ। ಆಕೃಷ್ಯಮಾಣಾ ಸತೀ ಶಬ್ದಂ ಕರೋತಿ । ತತಸ್ತಸ್ಮಾದ್ಧನುಷಃ ಪುರುಷಾದಃ ಶತ್ರುಜನಾನಾಮತ್ತಾರಃ । ಮಾರಯಿತಾರ ಇತ್ಯರ್ಥಃ । ವಯಃ ಪಕ್ಷಿಸದೃಶಾ ಗಂತಾರೋ ಬಾಣಾಃ ಪ್ರ ಪತಾನ್। ಶತ್ರೂನ್ಪ್ರತಿ ಪ್ರಪತಂತಿ । ಅಥ ತದಾನೀಮಿಂದ್ರಾಯೇಂದ್ರಾರ್ಥಂ ಸುನ್ವತ್ಸೋಮಯಾಗಂ ಕುರ್ವದೃಷಯೇ ಚ ಶಿಕ್ಷತ್ಕರ್ಮಣಾಂ ದ್ರಷ್ಟ್ರ ಋತ್ವಿಜೇ ಚ ಸಂಪೂರ್ಣಾಂ ದಕ್ಷಿಣಾಂ ದದದಪೀದಮೀದೃಶಂ ವಿಶ್ವಂ ಸಮಸ್ತಂ ಭುವನಂ ಭೂತಜಾತಂ ಭಯಾತೇ । ಇಂದ್ರಾದ್ಬಿಭೇತಿ । ಅಸ್ಮಾತ್ಕಿಮುತೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವೃಕ್ಷೇವೃಕ್ಷೇ**—ವೃಕ್ಷಮಯವಾದ ಸಕಲ ಧನುಸ್ಸುಗಳಲ್ಲಿಯೂ । **ನಿಯತಾ**—ಸಂಬದ್ಧವಾದುದೂ । **ಗೌಃ**—ಗೋವಿನ ಸ್ನಾಯುವಿನಿಂದ ಮಾಡಿದುದೂ ಆದ । **ಮೌರ್ವೀ**—ಹೆದೆಯು । **ಮೀಮಯತ್**—ಶಬ್ದ ಮಾಡುತ್ತದೆ । **ತತಃ**—ಅನಂತರ । **ಪುರುಷಾದಃ**—ಶತ್ರುಗಳನ್ನು ಕಬಳಿಸುವುವೂ । **ವಯಃ**—ಪಕ್ಷಿಸಮಾನವಾದವೂ ಆದ ಬಾಣಗಳು । **ಪ್ರ ಪತಾನ್**—ಶತ್ರುಗಳ ಮೇಲೆ ಬೀಳುತ್ತವೆ । **ಅಥ**—ಆ ಒಡನೆಯೇ । **ಇಂದ್ರಾಯ** ಇಂದ್ರನನ್ನುದ್ದೇಶಿಸಿ । **ಸುನ್ವತ್**—ಸೋಮಯಾಗವನ್ನು ನೆರವೇರಿಸುವುದೂ । **ಋಷಯೇ ಚ**—ಋತ್ವಿಗಾದಿಗಳಿಗೆ। **ಶಿಕ್ಷತ್**—ದಕ್ಷಿಣೆಯನ್ನು ಕೊಡತಕ್ಕದ್ದೂ ಆದ । **ಇದಂ ವಿಶ್ವಂ ಭುವನಂ**—ಈ ಸಕಲ ಲೋಕವೂ । **ಭಯಂತೇ**—ಇಂದ್ರನಿಂದ ಭಯಗೊಳ್ಳುತ್ತವೆ.

॥ ಭಾವಾರ್ಥ ॥

ವೃಕ್ಷಮಯವಾದ ಸಕಲ ಧನುಸ್ಸುಗಳಲ್ಲಿಯೂ ಸಂಬದ್ಧವಾದುದೂ, ಗೋವಿನ ಸ್ನಾಯುವಿನಿಂದ ಮಾಡಿದುದೂ ಆದ ಹೆದೆಯು ಶಬ್ದಮಾಡುತ್ತದೆ. ಅನಂತರ ಶತ್ರುಗಳನ್ನು ಕಬಳಿಸುವುವೂ, ಪಕ್ಷಿಸಮಾನವಾದವೂ ಆದ ಬಾಣಗಳು ಹೆದೆಗಳಿಂದ ಹೊರಹೊರಟು ಶತ್ರುಗಳ ಮೇಲೆ ಬೀಳುತ್ತವೆ. ಆ ಒಡನೆಯೇ, ಇಂದ್ರನನ್ನುದ್ದೇಶಿಸಿ ಸೋಮಯಾಗವನ್ನು ನೆರವೇರಿಸುವುದೂ, ಋತ್ವಿಗಾದಿಗಳಿಗೆ ದಕ್ಷಿಣೆಯನ್ನು ಕೊಡತಕ್ಕದ್ದೂ ಆದ ಈ ಸಕಲ ಲೋಕವೂ ಇಂದ್ರನ ಸಾಮರ್ಥ್ಯವನ್ನು ನೋಡಿ ಭಯಗೊಳ್ಳುತ್ತವೆ.

## English Translation

The bowstring fixed to each bow clangs loudly; then the man-destroying (shafts like) birds fall upon (the foes): and the whole of this world is alarmed, presenting libations to Indra, and donations to the Rishi.

॥ ವಿಶೇಷವಿಷಯಗಳು ॥

ಗೌಃ ಎಂಬ ಶಬ್ದದ ನಾನಾರ್ಥಗಳನ್ನು ವಿವರಿಸುವಾಗ ಪ್ರಕೃತಋಕ್ಕನ್ನು ಯಾಸ್ಕರು ಉದಾಹರಣೆಗಾಗಿ ತೆಗೆದುಕೊಂಡು ಅದಕ್ಕೆ ಬಿಲ್ಲಿನ ಹೆದೆಗಾಗಿ ಉಪಯೋಗಿಸುವ ಸ್ನಾಯು ಎಂಬರ್ಥವನ್ನು ಹೇಳಿದಾರೆ. ಗೌಃ ಎಂಬ ಶಬ್ದಕ್ಕೆ ಯಾಸ್ಕರು ಹೇಳಿರುವ ನಾನಾರ್ಥಗಳನ್ನು ಇಲ್ಲಿ ವಿವರಿಸುವುದು ಆವಶ್ಯಕವಾಗಿದೆ.

**(೧) ಗೌರಿತಿ ಪೃಥಿವ್ಯಾ ನಾಮಧೇಯಂ । ಯತ್ ದೂರಂಗತಾ ಭವತಿ ।**
**ಯಚ್ಚಾಸ್ಯಾಂ ಭೂತಾನಿ ಗಚ್ಛಂತಿ । ಗಾತೇರ್ವೌಕಾರೋ ನಾಮಕರಣಃ ॥**

(ನಿ. ೨-೫)

ಗೌಃ ಎಂಬ ಶಬ್ದವು ಪೃಥಿವಿಯನ್ನು ನಿರ್ದೇಶಿಸುವುದು. ಏಕೆಂದರೆ, ಇದು ಬಹುದೂರದವರೆಗೂ ವ್ಯಾಪಿಸಿರುವುದು ಅಥವಾ ಇದರ ಮೇಲೆ ಪ್ರಾಣಿಗಳು ಸಂಚರಿಸುವವು. ಆದ್ದರಿಂದ ಗೌಃ ಎಂದರೆ ಭೂಮಿಯು; **ಗಾಙ್-ಗತೌ** ಹೋಗು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿ ಇದರ ಜತೆಗೆ ಓ ಎಂಬ ಅಕ್ಷರವು ಪ್ರತ್ಯಯವಾಗಿ ಸೇರಿ ಗೌಃ ಎಂಬ ಶಬ್ದವಾಗಿದೆ,

**(೨) ಅಥಾಪಿ ಪಶುನಾಮೇಹ ಭವತ್ಯೇತಸ್ಮಾದೇವ ।**

ಇದಲ್ಲದೆ ಮೇಲೆ ಹೇಳದ ಗಾಙ್ ಗತೌ ಎಂಬ ಧಾತುವಿನಿಂದಲೇ ನಿಷ್ಪನ್ನವಾದ ಗೌಃ ಎಂಬ ಶಬ್ದಕ್ಕೆ ಪಶು ಎಂದೂ ಹೆಸರು.

**(೩) ಅಥಾಪ್ಯಸ್ಯಾಂ ತಾದ್ಧಿತೇನ ಕೃತ್ಸ್ನವನ್ನಿಗಮಾ ಭವಂತಿ । ಗೋಭಿಃ ಶ್ರೀಣೀತ ಮತ್ಸರಂ ಇತಿ ಪಯಸಃ । ಮತ್ಸರಃ ಸೋಮೋ ಮಂದತೇಸ್ತೃಪ್ತಿಕರ್ಮಣಃ । ಮತ್ಸರ ಇತಿ ಲೋಭನಾಮಾಭಿಮತ್ತ ಏನೇನ ಧನಂ ಭವತಿ । ಪಯಃ ಪಿಬತೇರ್ವಾ । ಕ್ಷೀರಂ ಕ್ಷರತೇಃ । ಘಸೇರ್ವೇರೋ ನಾಮಕರಣ ಉಶೀರಮಿತಿ ಯಥಾ ॥**

ಮೇಲೆ ಹೇಳಿದ ಪಶು ಎಂಬರ್ಥದಲ್ಲಿ ಪಶುವಿನಿಂದ ಉತ್ಪನ್ನವಾದ ಹಾಲು ಮೊದಲಾದ ದ್ರವ್ಯಗಳನ್ನು ಗೋಶಬ್ದದಿಂದ ನಿರ್ದೇಶಿಸಲಾಗುವುದು. ಹೇಗೆಂದರೆ—**ಗೋಭಿಃ ಶ್ರೀಣೀತ ಮತ್ಸರಂ** ಎಂಬ ಶ್ರುತಿವಾಕ್ಯದಲ್ಲಿ—ಗೋವಿಕಾರವಾದ ಹಾಲಿನಿಂದ ಸೋಮರಸವನ್ನು ಮಿಶ್ರಮಾಡಿ ಎಂಬರ್ಥವಿರುವುದು. **ಗೋಭಿಃ** ಎಂದರೆ ಗೋವಿಕಾರವಾದ ಎಂದರೆ ಗೋವಿನಿಂದ ಉತ್ಪನ್ನವಾದ ಹಾಲು, ಮೊಸರು ಮೊದಲಾದ ದ್ರವ್ಯಗಳು ಎಂದರ್ಥವು. **ಮತ್ಸರಂ** ಎಂದರೆ ಸೋಮವು. ಪಾನಮಾಡುವುದರಿಂದ ತೃಪ್ತಿಯನ್ನುಂಟುಮಾಡು ಎಂಬರ್ಥವುಳ್ಳ ಮಂದ್ ಧಾತುವಿನಿಂದ ಮತ್ಸರಃ ಎಂಬ ಶಬ್ದವು ನಿಷ್ಪನ್ನವಾಗಿ ಸೋಮರಸವೆಂಬ ಅರ್ಥವನ್ನು ಸೂಚಿಸುವುದು. ಮತ್ಸರಶಬ್ದಕ್ಕೆ ಲೋಭ, ಆಶೆ

ಎಂದೂ ಅರ್ಥವು. ಈ ಅರ್ಥವನ್ನು ಸೂಚಿಸುವಾಗ ಈ ಶಬ್ದಕ್ಕೆ ಧನವೆಂದೂ ಅರ್ಥವಾಗಬಹುದು. ಹಾಲು ಎಂಬರ್ಥವುಳ್ಳ **ಪಯಃ** ಎಂಬ ಶಬ್ದವು ಪಾನಮಾಡು ಎಂಬರ್ಥವುಳ್ಳ (ಪಾ) ಪಿಬತಿಧಾತುವಿನಿಂದಾಗಲಿ, ವೃದ್ಧಿಪಡಿಸು, ಪುಷ್ಟಿಯನ್ನು ಹೊಂದು ಎಂಬರ್ಥವುಳ್ಳ ಪ್ಯಾಯತಿಧಾತುವಿನಿಂದಾಗಲಿ, ನಿಷ್ಪನ್ನವಾಗಬಹುದು. **ಕ್ಷೀರ**ಶಬ್ದಕ್ಕೆ ಹಾಲೆಂದೇ ಅರ್ಥವು. ಈ ಕ್ಷೀರಶಬ್ದವು—ಅದ ಭಕ್ಷಣೇ ಎಂಬ ಧಾತುವಿಗೆ ಘಸ ಆದೇಶವಾಗಿ ಕ್ಷರ್-ಹರಿ, ಪ್ರವಹಿಸು ಎಂಬ ಧಾತುವು ಲಬ್ಧವಾಗಿ ಆ ಕ್ಷರ್ ಧಾತುವಿನಿಂದ ಕ್ಷೀರ ಎಂಬ ಶಬ್ದವು ನಿಷ್ಪನ್ನವಾಗಿರುವುದು. ಹರಿಯುವ ಸ್ವಭಾವವುಳ್ಳದ್ದರಿಂದ ಹಾಲು ಎಂದರ್ಥವು. ಕ್ಷರ್ ಧಾತುವಿಗೆ ಈರ ಪ್ರತ್ಯಯ ಸೇರಿ ಕ್ಷೀರ ಎಂಬ ಶಬ್ದವಾಗಿರುವುದು. ವಶ ಕಾಂತೌ ಎಂಬ ಧಾತುವಿಗೆ ಈರ ಪ್ರತ್ಯಯವು ಸೇರಿ ಉಶೀರ ಎಂಬ ಶಬ್ದವಾಗಿರುವಂತೆ ಎಂದು ಉಶೀರಶಬ್ದದ ಉದಾಹರಣೆಯನ್ನು ಕೊಟ್ಟಿರುವರು.

**(೪) ಅಂಶುಂ ದುಹಂತೋ ಅಧ್ಯಾಸತೇ ಗವಿ ಇತ್ಯಧಿಷವಣಚರ್ಮಣಃ । ಅಂಶುಃ ಶಮಷ್ಟ-ಮಾತ್ರೋ ಭವತಿ । ಅನನಾಯ ಶಂಭವತೀತಿ ವಾ । ಚರ್ಮ ಚರತೇರ್ವೋಚ್ಚೃತಂ ಭವತೀತಿ ವಾ ॥**

(ನಿ. ೬-೫)

**ಅಂಶುಂ ದುಹಂತೋ ಅಧ್ಯಾಸತೆ ಗವಿ** ಎಂಬ ವಾಕ್ಯಕ್ಕೆ ಸೋಮರಸವನ್ನು ಹಿಂಡುವಾಗ ಗೋಚರ್ಮದಮೇಲೆ ಕುಳಿತುಕೊಳ್ಳುತ್ತಾರೆ ಎಂದರ್ಥವು. ಈ ವಾಕ್ಯದಲ್ಲಿರುವ **ಗವಿ** ಎಂಬ ಶಬ್ದಕ್ಕೆ ಗೋಚರ್ಮದ ಮೇಲೆ ಎಂದರ್ಥವು. **ಅಂಶುಃ** ಎಂದರೆ ಸೋಮವು. ಏಕೆಂದರೆ ಸೋಮರಸವು ಶರೀರದೊಳಗೆ ಪ್ರವೇಶಿಸಿದ ಕೂಡಲೇ ಎಂದರೆ ವ್ಯಾಪಿಸಿದ ಕೂಡಲೇ ಸುಖವನ್ನು ಅಥವಾ ಸಂತೋಷವನ್ನುಂಟುಮಾಡುವುದು. ಅಥವಾ ಪ್ರಾಣಿಗಳ ಸುಖಜೀವನಕ್ಕೆ ಕಾರಣವಾಗಿರುವುದರಿಂದ ಸೋಮಕ್ಕೆ ಅಂಶುಃ ಎಂದು ಹೆಸರು **ಚರ್ಮ**ಶಬ್ದವು ಚರತಿಧಾತುವಿನಿಂದ ನಿಷ್ಪನ್ನವಾಗಿ ಪ್ರಾಣಿಗಳ ಶರೀರಕ್ಕೆ ಹೊದ್ದಿಕೆಯಂತಿರುವುದು ಅಥವಾ ಶರೀರದಿಂದ ಕತ್ತರಿಸಿ ಎಂದರೆ ಬೇರ್ಪಡಿಸಿ ತೆಗೆದಿರುವುದರಿಂದ ಚರ್ಮವೆಂದು ಹೆಸರು,

**(೫) ಅಥಾಪಿ ಚರ್ಮ ಚ ಶ್ಲೇಷ್ಮಾ ಚ । ಗೋಭಿಃ ಸನ್ನದ್ಧೋ ಅಸಿ ವೀಳಯಸ್ವ ಇತಿ ರಥಸ್ತುತೌ ॥**

**ಗೌಃ** ಎಂಬ ಶಬ್ದಕ್ಕೆ ಚರ್ಮ (ಹೊದಿಕೆ) ಮತ್ತು ಶ್ಲೇಷ್ಮ ಎಂಬರ್ಥವೂ ಇರುವುದು. **ಗೋಭಿಃ ಸನ್ನದ್ಧೋ ಅಸಿ ವೀಳಯಸ್ವ**—ಎಂಬ ರಥವನ್ನು ಸ್ತುತಿಸುವ ವಾಕ್ಯಕ್ಕೆ ಎಲೈ ರಥವೇ, ನೀನು ಗೋಚರ್ಮದಿಂದ ಆಚ್ಛಾದಿಸಲ್ಪಟ್ಟಿರುವೆ ಮತ್ತು ಅಂಟಿಸಲ್ಪಟ್ಟಿರುವೆ ಎಂದರ್ಥವು. ಈ ವಾಕ್ಯದಲ್ಲಿರುವ **ಗೋಭಿಃ** ಎಂಬ ಶಬ್ದಕ್ಕೆ ಗೋಚರ್ಮಗಳಿಂದ ಎಂಬರ್ಥವಿರುವುದು. ರಥವನ್ನು ನಿರ್ಮಿಸುವಾಗ ಅದರ ಆವರಣಕ್ಕಾಗಿ ಗೋಚರ್ಮವನ್ನು ಹೊದ್ದಿಸಿ ಅದನ್ನು ಒಂದು ವಿಧವಾದ ಅಂಟಿನಿಂದ ( ಶ್ಲೇಷ್ಮ ) ಅಂಟಿಸುವರು. ಅದನ್ನೇ ಈ ವಾಕ್ಯದಲ್ಲಿ ವಿವರಿಸಿ ರಥವನು ಸ್ತುತಿಸಲಾಗಿದೆ.

**(೬) ಅಥಾಪಿ ಸ್ನಾವ ಚ ಶ್ಲೇಷ್ಮಾ ಚ । ಗೋಭಿಃ ಸನ್ನದ್ಧಾ ಪತತಿ ಪ್ರಸೂತ ಇತೀಷುಸ್ತುತೌ ॥**

(ನಿ. ೬-೫)

ಗೋಶಬ್ದಕ್ಕೆ ಸ್ನಾಯು ಮತ್ತು ಶ್ಲೇಷ್ಮವೆಂಬ ಅರ್ಥವೂ ಇರುವುದು. **ಗೋಭಿಃ ಸನ್ನದ್ಧಾ ಪತತಿ ಪ್ರಸೂತ** ಎಂಬ ವಾಕ್ಯವು ಬಾಣವನ್ನು ಸ್ತುತಿಸುವುದು. ಬಾಣವನ್ನು ನಿರ್ಮಿಸುವಾಗ ಅವುಗಳಿಗೆ ಪಕ್ಷಿಗಳ ರೆಕ್ಕೆಗಳನ್ನು ಸ್ನಾಯು (ದಾರದಂತಿರುವ ನರಗಳ) ಗಳಿಂದ ಬಿಗಿದು ಅಂಟಿನಿಂದ ಅಂಟಿಸಿ ಸಿದ್ಧಪಡಿಸುವರು. ಆದನ್ನೇ ಈ ವಾಕ್ಯದಲ್ಲಿ ವಿವರಿಸಿದೆ.

(೭) **ಜ್ಯಾಪಿ ಗೌರುಚ್ಯತೇ ಗವ್ಯಾ ಚೇತ್ತಾದ್ಧಿತಮಥ ಚೇನ್ನ ಗವ್ಯಾಗಮಯತೀಷೂನಿತಿ ।**

ಧನುಸ್ಸಿನ ಹೆದೆಗೂ (ಎರಡು ತುದಿಗಳನ್ನು ಸೇರಿಸಿ ಕಟ್ಟುವದಾರ) ಗೌಃ ಎಂದು ಹೆಸರು. ಏಕೆಂದರೆ ಈ ಹೆದೆಯನ್ನು ಗೋಸ್ನಾಯುವಿನಿಂದ ನಿರ್ಮಿಸುವರು. ಗವ್ಯಾ ಎಂಬ ಶಬ್ದವು ಗೋಶಬ್ದದ ರೂಪಾಂತರವೇ ಆಗಿದೆ. ಇದರಿಂದ (ಹೆದೆಯಿಂದ) ಬಾಣಗಳು ಹೊರಹೊರಡುವುದರಿಂದ ಹೆದೆಗೆ ಗೌಃ ಎಂದು ಹೆಸರು. ಈ ಅರ್ಥವನ್ನು ವಿವರಿಸುವುದಕ್ಕಾಗಿ ಪ್ರಕೃತಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡಿರುವರು—

(೮) **ವೃಕ್ಷೇವೃಕ್ಷೇ ನಿಯತಾಮೀಮಯದ್ಗೌಸ್ತತೋ ವಯಃ ಪ್ರಪತಾನ್ಪುರುಷಾದಃ । ವೃಕ್ಷೇವೃಕ್ಷೇ ಧನುಷಿ ಧನುಷಿ । ವೃಕ್ಷೋ ವ್ರಶ್ಚನಾತ್ । ವೃತ್ವಾ ಕ್ಷಾಂ ತಿಷ್ಠತೀತಿ ವಾ । ಕ್ಷಾ ಕ್ಷಿಯತೇರ್ನಿವಾಸಕರ್ಮಣಃ । ನಿಯತಾಮೀಮಯದ್ಗೌಃ ಶಬ್ದಂ ಕರೋತಿ । ಮೀಮಯತಿಃ ಶಬ್ದಕರ್ಮಾ । ತತೋ ವಯಃ ಪ್ರಪತಂತಿ ಪುರುಷಾನದನಾಯ । ವಿರಿತಿ ಶಕುನಿನಾಮ । ವೇತೇರ್ಗತಿಕರ್ಮಣಃ । ಅಥಾಪೀಷುನಾಮೇಹ ಭವತ್ಯೇತಸ್ಮಾದೇವ ।**

(ನಿ. ೨-೬)

ಧನುಸ್ಸುಗಳನ್ನು ವೃಕ್ಷಗಳಿಂದ (ಮರದಿಂದ) ನಿರ್ಮಿಸುವುದರಿಂದ ಇಲ್ಲಿ ಧನುಸ್ಸೆಂಬ ಅರ್ಥವನ್ನು ಸೂಚಿಸುವುದಕ್ಕಾಗಿ ವೃಕ್ಷೇವೃಕ್ಷೇ ಎಂಬ ವೃಕ್ಷಶಬ್ದಪ್ರಯೋಗವಿದೆ. ಇಂದ್ರನು ಶತ್ರುಗಳೊಡನೆ ಯುದ್ಧಮಾಡುವಾಗ ಅನೇಕರೂಪಗಳನ್ನು ಧರಿಸಿ ಅನೇಕಬಾಹುಗಳಿಂದ ಅನೇಕ ಧನಸ್ಸುಗಳನ್ನು ಹಿಡಿಯುವನು. ಅದ್ದರಿಂದ ಇಲ್ಲಿ ಇಂದ್ರನು ತನ್ನ ಅನೇಕಬಾಹುಗಳಲ್ಲಿ ಹಿಡಿದಿರುವ ಪ್ರತಿಯೊಂದು ಧನುಸ್ಸಿನಲ್ಲಿಯೂ ಎಂದು ಹೇಳಿದೆ. ಪ್ರತಿಯೊಂದು ಧನುಸ್ಸಿನಲ್ಲಿಯೂ ಇರುವ ಹೆದೆಯು ಟಂಕಾರಶಬ್ದವನ್ನು ಮಾಡುತ್ತದೆ. ಆ ಹೆದೆಯಿಂದ ಹೊರಹೊರಟ ಬಾಣಗಳು ಶತ್ರುಪುರುಷರ ಪ್ರಾಣಗಳನ್ನು ತಿಂದು (ಶರೀರಗಳಿಗೆ ತಗಲಿ) ಧ್ವಂಸಗಾಡುತ್ತವೆ. ಬಾಣಗಳಿಗೆ ಪಕ್ಷಿಗಳಗರಿಗಳನ್ನು ಕಟ್ಟಿರುವುದರಿಂದ ಇಲ್ಲಿ ಬಾಣವನ್ನು ಸೂಚಿಸುವುದಕ್ಕಾಗಿ ಪಕ್ಷಿ ಎಂಬರ್ಥವುಳ್ಳ ವಯಃ ಎಂಬ ಶಬ್ದವನ್ನೇ ಉಪಯೋಗಿಸಲಾಗಿದೆ. ಪ್ರತಿಯೊಂದು ಧನಸ್ಸಿನ ಹೆದೆಯಿಂದ ಹೊರಹೊರಟ ಪಕ್ಷಿಗಳ ರೆಕ್ಕೆಗಳಿಂದ ಕೂಡಿದ ಅನೇಕ ಬಾಣಗಳು ಶತ್ರುಗಳನ್ನು ತಾಗಿ ನಾಶ ಮಾಡುವವು. ಕತ್ತರಿಸು ಎಂಬರ್ಥವುಳ್ಳ ವ್ರಶ್ಚ್ ಎಂಬ ಧಾತುವಿನಿಂದ ವೃಕ್ಷಶಬ್ದವು ನಿಷ್ಪನ್ನವಾಗಿದೆ. ಏಕೆಂದರೆ ಸೌದೆಗಾಗಿಯೂ, ಇತರ ಮರದ ಪದಾರ್ಥಗಳನ್ನು ನಿರ್ಮಿಸುವುದಕ್ಕಾಗಿಯೂ ಇದನ್ನು ಕಡಿಯುವುದರಿಂದ ಇದಕ್ಕೆ ವೃಕ್ಷವೆಂದು ಹೆಸರು. ಅಥವಾ ವೃ ಎಂದರೆ ವ್ಯಾಪಿಸು, ಸೀಳು ಎಂದರ್ಥವು. ಕ್ಷಾ ಎಂದರೆ ಭೂಮಿಯು. ಈ ವೃಕ್ಷವು ಭೂಮಿಯನ್ನು ಸೀಳಿ ಬೇರುಗಳಿಂದ ಅಲ್ಲೆಲ್ಲಾ ವ್ಯಾಪಿಸುವುದರಿಂದ ವೃಕ್ಷವೆಂದೂ ಹೆಸರು. ಕ್ಷಾ-ಭೂಮಿ ಎಂಬ ಶಬ್ದವು ವಾಸಮಾಡು ಎಂಬರ್ಥವುಳ್ಳ ಕ್ಷಿ-ನಿವಾಸಗತ್ಯೋಃ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಜನರು ಇದರ (ಭೂಮಿಯ) ಮೇಲೆ ವಾಸಮಾಡುತ್ತಾರಾದದರಿಂದ ಇದಕ್ಕೆ ಕ್ಷಾ ಎಂದು ಹೆಸರು. **ನಿಯತಾಮೀಮಯದ್ಗೌಃ**

ಎಂಬ ವಾಕ್ಯಕ್ಕೆ ಘಟ್ಟಿಯಾಗಿ ಶೇಂಕಾರಶಬ್ದವನ್ನು ಮಾಡುತ್ತದೆ ಎಂದರ್ಥವು. ಹೆದೆಯಲ್ಲಿ ಬಾಣವನ್ನು ಹೂಡಿ ಎಳೆದುಬಿಡುವಾಗ ಶೇಂಕಾರಶಬ್ದವನ್ನು ಮಾಡುತ್ತದೆ. ಮಿಾವ್ ಧಾತುವಿಗೆ ಶಬ್ದಮಾಡು ಎಂದರ್ಥವಿರುವುದು. ಅನಂತರ ಎಂದರೆ ಹೆದೆಯು ಶಬ್ದಮಾಡಿದನಂತರ ಅದರಿಂದ ಪಕ್ಷಿಗಳು ಎಂದರೆ ಪಕ್ಷಿಗಳ ರೆಕ್ಕೆಗಳನ್ನು ಕಟ್ಟಿರುವ ಬಾಣಗಳು ಶತ್ರುಗಳನ್ನು ತಿನ್ನುವುದಕ್ಕಾಗಿ (ನಾಶಮಾಡುವುದಕ್ಕಾಗಿ) ಹೊರಹೊರಡುತ್ತವೆ. ಹೋಗು, ಸಂಚರಿಸು ಎಂಬರ್ಥವುಳ್ಳ ವಿಧಾತುವಿನಿಂದ ವಿಃ-ಪಕ್ಷಿಯು ಎಂಬ ಶಬ್ದವು ನಿಷ್ಪನ್ನವಾಗಿದೆ. ಈ ಅರ್ಥದಲ್ಲಿಯೇ ಈ ಶಬ್ದಕ್ಕೆ ಬಾಣವು ಎಂಬರ್ಥವೂ ಇರುವುದು.

(೯) **ಆದಿತ್ಯೋಽಪಿ ಗೌರುಚ್ಯತೇ । ಉತಾದಃ ಪರುಷೇ ಗವಿ । ಪರ್ವವತಿ ಭಾಸ್ವತೀತ್ಯೌಪಮನ್ಯವಃ ।**

ಗೌಃ ಎಂಬ ಶಬ್ದಕ್ಕೆ ಆದಿತ್ಯನೆಂಬ ಅರ್ಥವೂ ಇರುವುದು. **ಉತಾದಃ ಪರುಷೇ ಗವಿ** ಎಂಬ ಶ್ರುತಿವಾಕ್ಯದಲ್ಲಿ ಗವಿ ಎಂಬ ಶಬ್ದಕ್ಕೆ ಆದಿತ್ಯನಲ್ಲಿ ಎಂಬರ್ಥವಿರುವುದು. ಗುಂಪುಗುಂಪಾಗಿರುವ ರಶ್ಮಿಗಳ ಮಧ್ಯದಲ್ಲಿ ಎಂದರೆ ಪ್ರಭಾಮಂಡಲದಲ್ಲಿ ಬೆಳಗುತ್ತಿರುವವನು ಎಂದು ಔಪಮನ್ಯವ ಎಂಬ ಆಚಾರ್ಯರ ಅಭಿಪ್ರಾಯವು

(೧೦) **ಅಥಾಪ್ಯಸ್ಯೈಕೋ ರಶ್ಮಿಶ್ಚಂದ್ರಮಸಂ ಪ್ರತಿ ದೀಪ್ಯತೇ ತದೇತೇನೋಪೇಕ್ಷಿತವ್ಯಂ । ಆದಿತ್ಯತೋಽಸ್ಯ ದೀಪ್ತಿರ್ಭವತೀತಿ । ಸುಷುಮ್ಣಃ ಸೂರ್ಯರಶ್ಮಿಶ್ಚಂದ್ರಮಾ ಗಂಧರ್ವಃ ಇತ್ಯಪಿ ನಿಗಮೋ ಭವತಿ ॥**

(ನಿ. ೨-೬)

ಸೂರ್ಯನ ಒಂದು ಕಿರಣವು ಚಂದ್ರನನ್ನು ಪ್ರಕಾಶಿಸುವಂತೆ ಮಾಡುವುದು. ಸೂರ್ಯನ ಕಿರಣದಿಂದ ಚಂದ್ರನು ಪ್ರಕಾಶಿಸುವನು ಎಂಬ ವಿಷಯವು, **ಸುಷುಮ್ಣಃ ಸೂರ್ಯರಶ್ಮಿಶ್ಚಂದ್ರಮಾ ಗಂಧರ್ವಃ** ಎಂಬ ಶ್ರುತಿವಾಕ್ಯದಿಂದ ಪ್ರತಿಪಾದಿಸಲ್ಪಟ್ಟಿರುವುದು. ಸುಷುಮ್ನಾ ಎಂಬುದು ಸೂರ್ಯನ ಒಂದು ಕಿರಣವಿಶೇಷವು, ಚಂದ್ರನು ಅದನ್ನು ಸ್ವೀಕರಿಸಿ ಅದರಿಂದ ಬೆಳಗುವನು ಎಂದು ಶ್ರುತಿವಾಕ್ಯದ ಅಭಿಪ್ರಾಯವು.

(೧೧) **ಸೋಽಪಿ ಗೌರುಚ್ಯತೇ । ಅತ್ರಾಹ ಗೋರಮನ್ವತ ಇತಿ । ತದುಪರಿಷ್ಟಾತ್ ವ್ಯಾಖ್ಯಾಸ್ಯಾಮಃ ।**

ಆ ಸುಷುಮ್ನವೆಂಬ ರಶ್ಮಿಗೂ ಗೌಃ ಎಂದು ಹೆಸರು. ಈ ವಿಷಯದಲ್ಲಿ **ಅತ್ರಾಹ ಗೋರಮನ್ವತ** ಎಂದು ಶ್ರುತಿವಾಕ್ಯವಿರುವುದು. ಈ ವಿಷಯವನ್ನು ನಾವು ಮುಂದೆ ವಿವರಿಸುವೆವು.

(೧೨) **ಸರ್ವೇಽಪಿ ರಶ್ಮಯೋ ಗಾವ ಉಚ್ಯಂತೇ । ತಾ ವಾಂ ವಾಸ್ತೂನ್ಯುಶ್ಮಸಿ ಗಮಧ್ಯೈ ಯತ್ರ ಗಾವೋ ಭೂರಿಶೃಂಗಾ ಅಯಾಸಃ । ಅತ್ರಾಹ ತದುರುಗಾಯಸ್ಯ ವೃಷ್ಣಃ ಪರಮಂ ಪದಮವಭಾತಿ ಭೂರಿ॥ತಾನಿ ವಾಂ ವಾಸ್ತೂನಿ ಕಾಮಯಾಮಹೇ ಗಮನಾಯ ಯತ್ರ ಗಾವೋ ಬಹುಶೃಂಗಾಃ । ಭೂರೀತಿ ಬಹುನೋ ನಾಮಧೇಯಂ ಪ್ರಭವತೀತಿ ಸತಃ । ಶೃಂಗಂ ಶ್ರಯತೇರ್ವಾ ಶೃಣಾತೇರ್ವಾ ಶಮ್ನಾತೇರ್ವಾ ಶರಣಾಯೋದ್ಗತಮಿತಿ**

ವಾ ಶಿರಸೋ ನಿರ್ಗತಮಿತಿ ವಾ । ಅಯಾಸೋऽಯನಾಃ । ತತ್ರ ತದುರುಗಾಯಸ್ಯ ವಿಷ್ಣೋರ್ಮಹಾಗತೇಃ ಪರಮಂ ಪದಂ ಪರಾರ್ಧ್ಯಸ್ಥಮವಭಾತಿ ಭೂರಿ । ಪಾದಃ ಪದ್ಯತೇಃ । ತನ್ನಿಧಾನಾತ್ಪದಂ । ಪಶುಪಾದಪ್ರಕೃತಿಃ ಪ್ರಭಾಗಪಾದಃ । ಪ್ರಭಾಗಪಾದ-ಸಾಮಾನ್ಯಾದಿತರಾಣಿ ಪದಾನಿ ॥

(ನಿ. ೨-೭)

ಇವಲ್ಲದೆ ಇತರ ಎಲ್ಲಾ ವಿಧವಾದ ರಶ್ಮಿಗಳನ್ನೂ ಗಾವ ಎಂಬ ಶಬ್ದದಿಂದಲೇ ನಿರ್ದೇಶಿಸಲಾಗುವುದು. ಈ ವಿಷಯದಲ್ಲಿ ಉದಾಹರಣೆಗಾಗಿ ಈ ಮುಂದಿನ ಋಕ್ಕನ್ನೂ ವಿವರಿಸುವೆವು. ಯಾವ ಸ್ಥಾನದಲ್ಲಿ ಬಹುವೇಗ ಗಮನವುಳ್ಳ ಅನೇಕ ಕಿರಣಗಳು ಬೆಳಗುತ್ತಿರುವುವೋ ಅಂತಹ ವಿಷ್ಣುವಿನ ಪರಮಪದವೆಂಬ ದಿವ್ಯಸ್ಥಾನವನ್ನು ಸೇರಲು ನಾವು ಬಯಸ್ಸುವೆವು. **ಭೂರಿ** ಎಂದರೆ ಬಹು. ಏಕೆಂದರೆ ಬಹಳವನ್ನು ಉತ್ಪತ್ತಿಮಾಡುವುದರಿಂದ ಭೂರಿಶಬ್ದಕ್ಕೆ ಬಹು, ಬಹಳವಾದ ಎಂಬರ್ಥವಿರುವುದು. ಶೃಂಗಕ್ಕೆ ಬದಲು ಆಶ್ರಯಿಸು ಎಂಬರ್ಥವುಳ್ಳ ಶ್ರಿ ಧಾತುವಿನಿಂದಾಗಲಿ (ತಾನು ಇರುವ ಶಿರಸ್ಸನ್ನು ಆಶ್ರಯಿಸಿರುವುದರಿಂದ), ಕೊಲ್ಲು ಎಂಬರ್ಥವುಳ್ಳ **ಶೃ** ಧಾತುವಿನಿಂದಾಗಲಿ, ನಾಶಮಾಡು ಎಂಬರ್ಥವುಳ್ಳ **ಶಮ್** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ಕೊಂಬಿನಿಂದ ತನ್ನನ್ನು ರಕ್ಷಿಸಿಕೊಳ್ಳುವುದು ಎಂಬುದರಿಂದಾಗಲಿ, ಶಿರಸ್ಸಿನಿಂದ ಹೊರಹೊರಟಿರುವುದು ಎಂಬುದರಿಂದಾಗಲಿ ಶೃಂಗವೆಂಬ ಶಬ್ದಕ್ಕೆ ಕೊಂಬು ಎಂಬ ಅರ್ಥವು ಪ್ರಸಿದ್ಧವಾಗಿದೆ. **ಅಯಾಸಃ** ಎಂದರೆ ಬಹುಕ್ಷಣಕಾಲವೂ. ಒಂದೆಡೆ ನಿಲ್ಲದೆ ಸರ್ವದಾ ಚಲಿಸುವ ಸ್ವಭಾವವುಳ್ಳವು. ಈ ವಿಷ್ಣುವಿನ ಪರಮಪದವೆಂಬ ಸ್ಥಾನವು ಬಹಳ ಪ್ರಕಾಶಮಾನವಾದ ಮಹಾಗಮನವುಳ್ಳ ಶ್ರೇಷ್ಠವಾದ ಸ್ಥಾನವೆಂದು ಪ್ರಸಿದ್ಧವಾಗಿರುವುದು. ಹೋಗು ಎಂಬರ್ಥವುಳ್ಳ **ಪದ್** ಎಂಬ ಧಾತುವಿನಿಂದ ಪಾದಶಬ್ದವು ನಿಷ್ಪನ್ನವಾಗಿದೆ. ಆದರಿಂದಲೇ ಪದ—ಪಾದವಿಕ್ಷೇಪ ಎಂಬ ಶಬ್ದವೂ ನಿಷ್ಪನ್ನವಾಗಿದೆ. **ಪಾದ** ಎಂದರೆ ಕಾಲು, **ಪದ** ಎಂದರೆ ಹೆಜ್ಜೆ, ಪಾದವಿಕ್ಷೇಪ ಎಂದರ್ಥವು. ಪಶುಗಳಿಗೆ ನಾಲ್ಕು ಕಾಲುಗಳಿರುವುದರಿಂದ ನಾವು ನಾಲ್ಕರಲ್ಲಿ ಒಂದು ಭಾಗವನ್ನು ಸೂಚಿಸುವಾಗ ಪಾದ ಎಂಬ ಶಬ್ದವನ್ನು ಉಪಯೋಗಿಸುತ್ತೇವೆ. ಆದ್ದರಿಂದ ಸಾಮಾನ್ಯಸಂದರ್ಭಗಳಲ್ಲಿ ನಾಲ್ಕನೇ ಒಂದು ಭಾಗ ಅಥವಾ ಯಾವುದಾದರೂ ಒಂದು ಭಾಗವನ್ನು ಸೂಚಿಸುವಾಗಲೂ **ಪಾದ** ಎಂಬ ಶಬ್ದವನ್ನೇ ಉಪಯೋಗಿಸುವುದು ರೂಢಿಯಾಗಿದೆ.

**ಏವಮನ್ಯೇಷಾಮಪಿ ಸತ್ತ್ವಾನಾಂ ಸಂದೇಹಾ ವಿದ್ಯಂತೇ ತಾನಿ ಚೇತ್ ಸಮಾನಕರ್ಮಾಣಿ ಸಮಾನನಿರ್ವಚನಾನಿ ನಾನಾಕರ್ಮಾಣಿ ಚೇನ್ನಾನಾ ನಿರ್ವಚನಾನಿ ಯಥಾರ್ಥಂ ನಿರ್ವಕ್ತವ್ಯಾನೀತಿ ॥**

(ನಿ. ೩-೭)

ಇದೇ ರೀತಿ ಇನ್ನೂ ಅನೇಕ ಪದಗಳ ಅರ್ಥವಿಷಯದಲ್ಲಿ ಸಂಶಯಗಳು ಉಂಟಾಗಬಹುದು. ಅಂತಹ ಸಂದರ್ಭದಲ್ಲಿ ಸಾಮಾನ್ಯವಾದ ವಿಧಿಯೇನೆಂದರೆ—ಶಬ್ದಗಳಿಗೆ ಒಂದೇ ವಿಧವಾದ ಅರ್ಥವಿರುವುದಾದರೆ ಅವುಗಳ ರೂಪನಿಷ್ಪತ್ತಿಯನ್ನೂ, ನಿರ್ವಚನವನ್ನೂ ಒಂದೇ ವಿಧವಾಗಿ ಹೇಳಬೇಕು. ಹಾಗಲ್ಲದೆ ಶಬ್ದಗಳಿಗೆ ನಾನಾರ್ಥಗಳಿದ್ದಲ್ಲಿ ಆಯಾ ಅರ್ಥಾನುಸಾರವಾಗಿ ರೂಪನಿಷ್ಪತ್ತಿಯನ್ನೂ, ನಿರ್ವಚನವನ್ನೂ, ವಿವರಣೆಯನ್ನೂ ಹೇಳಬೇಕಾಗಬಹುದು.



ಸಂಹಿತಾಪಾಠಃ

ದೇವಾನಾಂ ಮಾನೇ ಪ್ರಥಮಾ ಅತಿಷ್ಠನ್ಕೃಂತತ್ರಾದೇಷಾಮುಪರಾ ಉದಾಯನ್ ।
ತ್ರಯಸ್ತಪಂತಿ ಪೃಥಿವೀಮನೂಪಾ ದ್ವಾ ಬೃಬೂಕಂ ವಹತಃ ಪುರೀಷಂ ॥

॥ ಪದಪಾಠಃ ॥

ದೇವಾನಾಂ । ಮಾನೇ । ಪ್ರಥಮಾಃ । ಅತಿಷ್ಠನ್ । ಕೃಂತತ್ರಾತ್ । ಏಷಾಂ । ಉಪರಾಃ । ಉತ್ । ಆಯನ್ ।
ತ್ರಯಃ । ತಪಂತಿ । ಪೃಥಿವೀಂ । ಅನೂಪಾಃ । ದ್ವಾ । ಬೃಬೂಕಂ । ವಹತಃ । ಪುರೀಷಂ ॥ ೨೩ ॥

॥ ಸಾಯಣಭಾಷ್ಯಂ ॥

ದೇವಾನಾಂ ಸರ್ವೇಷಾಂ ಮಾನೇ ನಿರ್ಮಾಣೇ । ಸೃಷ್ಟಿಕಾಲ ಇತ್ಯರ್ಥಃ । ಜಗತ್ಸ್ಥಿತಿಹೇತು-ಭೂತರಸಾನುಪ್ರದಾನಕರ್ಮಣಿ ಸ್ರಷ್ಟವ್ಯತ್ವೇನ ಪ್ರಥಮಾ ಅತಿಷ್ಠನ್ । ಇಂದ್ರಾದೇಶಾದೇತೇ ಪೂರ್ವೇ ಸ್ಥಿತಾಃ । ಕ ಏತೇ । ಮೇಘಾಃ । ಕುತ ಏತದವಗಮ್ಯತೇ । ಪರಸ್ಮಿನ್ಪಾದೇ ತೇಷಾಮನುಕಥನಾತ್ । ಉಕ್ತಂ ಹಿ । ಮೇಘಾ ಏವ ಮಾಧ್ಯಮಿಕಾ ದೇವಗಣಾ ಇತಿ । ನಿ-೨-೨೨ । ಏಷಾಮೇವಂಭೂತಾನಾಂ ಮೇಘಾನಾಂ ಕೃಂತತ್ರಾಚ್ಛೇದನಾದುಪರಾಃ । ಮೇಘನಾಮ್ಯೈತತ್ । ತತ್ರಸ್ಥಾ ಅಪ ಉಚ್ಯಂತೇ । ಮೇಘಸ್ಥಾ ಅಪ ಉದಾಯನ್ । ಉತ್ಪನ್ನಾಃ । ವೃಷ್ಟಿಭಾವೇನ ಭೂವೌ ನಿಪಾತಿತಾ ಇತ್ಯರ್ಥಃ । ಪಾತಿತಾಸ್ವಪ್ಸ್ವಿಂದ್ರಸ್ಯಾಜ್ಞಯಾ ಪರ್ಜನ್ಯೋ ವಾಯುರಾದಿತ್ಯ ಇತ್ಯೇತೇ ತ್ರಯೋ ದೇವಾಃ ಪೃಥಿವೀಂ ಭೂಮಿಂ । ತತ್ರಸ್ಥಾ ಓಷಧೀರಿತ್ಯರ್ಥಃ । ತಪಂತಿ । ವೃಷ್ಟಿಶೀತೋಷ್ಣೈಃ ಸಂತಾಪಯಂತಿ । ಪಾವಯಂ-ತೀತ್ಯರ್ಥಃ । ಕೀದೃಶಾಃ । ಆನೂಪಾ ವರ್ಷಾದೀನಾಮಾನುಪೂರ್ವ್ಯೇಣ ವಪ್ತಾರಃ ಪ್ರಭಾವಯಿತಾರಃ । ಪ್ರಕ್ಷೇಪ್ತಾರ ಇತ್ಯರ್ಥಃ । ದ್ವಾ ದ್ವೌ ವಾಯ್ವಾದಿತ್ಯೌ ಪಾಚಿತಾಸ್ವೋಷಧೀಷು ಸ್ಥಿತಂ ಪುರೀಷಂ ಸರ್ವಸ್ಯ ಪ್ರೀಣಯಿತೃ ವಾ ಬೃಬೂಕಮುದಕಮಾದಿತ್ಯಮಂಡಲಂ ಪ್ರತಿ ವಹತಃ । ವಾಯುಃ ಶೋಷಯನ್ ಆದಿತ್ಯೋ ರಶ್ಮಿಭಿರಾದದಾನ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ದೇವಾನಾಂ**—ಸಕಲದೇವತೆಗಳ । **ಮಾನೇ**—ನಿರ್ಮಾಣಕಾಲದಲ್ಲಿ । **ಪ್ರಥಮಾ**—ಮೊದಲನೆಯದಾಗಿ । **ಅತಿಷ್ಠನ್**—ಮೇಘಗಳು ಸೃಷ್ಟಿಸಲ್ಪಟ್ಟವು। **ಏಷಾಂ**—ಈ ಮೇಘಗಳ। **ಕೃಂತತ್ರಾತ್**—ಛೇದದಿಂದ। **ಉಪರಾಃ**—ವೃಷ್ಟ್ಯುದಕಗಳು । **ಉದಾಯನ್**—ಉತ್ಪನ್ನವಾದವು । **ತ್ರಯಃ**—ಪರ್ಜನ್ಯ, ವಾಯು ಮತ್ತು ಆದಿತ್ಯ ಈ ಮೂರು

ದೇವತೆಗಳೂ ಅನೂಪಾಃ—ಯಥಾಕ್ರಮವಾಗಿ ಬೀಜವನ್ನು ಬಿತ್ತುವವರಾಗಿ । **ಪೃಥಿವೀಂ—ಭೂಮಿಯನ್ನು । ತಪಂತಿ**—ಶುದ್ಧಿಗೊಳಿಸುತ್ತಾರೆ **ದ್ವಾ**—ಅವರಲ್ಲಿ ವಾಯು ಮತ್ತು ಪರ್ಜನ್ಯರು । **ಪುರೀಷಂ**—ತೃಪ್ತಿಕಾರಕವಾದ । ಬೃಬೂಕಂ—ಉದಕವನ್ನು । ವಹತಃ—ಆದಿತ್ಯಮಂಡಲಕ್ಕೆ ಒಯ್ಯುತ್ತಾರೆ.

। ಭಾವಾರ್ಥ ।

ದೇವತೆಗಳ ನಿರ್ಮಾಣಕಾಲದಲ್ಲಿ ಮೊದಲನೆಯದಾಗಿ ಮೇಘಗಳು ನಿಂತಿದ್ದವು. ಈ ಮೇಘಗಳ ಭೇದದಿಂದ ವೃಷ್ಟ್ಯುದಕಗಳು ಉತ್ಪನ್ನವಾದವು. ಪರ್ಜನ್ಯ, ವಾಯು ಮತ್ತು ಆದಿತ್ಯ ಈ ಮೂರು ದೇವತೆಗಳೂ ಯಥಾಕ್ರಮವಾಗಿ ಬೀಜವನ್ನು ಬಿತ್ತುವವರಾಗಿ ಭೂಮಿಯನ್ನು ಶುದ್ಧಿಗೊಳಿಸುತ್ತಾರೆ. ಅವರಲ್ಲಿ ವಾಯು ಮತ್ತು ಪರ್ಜನ್ಯರು ತೃಪ್ತಿಕಾರಕವಾದ ಉದಕವನ್ನು ಆದಿತ್ಯಮಂಡಲಕ್ಕೆ ಒಯ್ಯುತ್ತಾರೆ.

## English Translation

At the creation of the gods, the (clouds) stood first; from their division, the waters (of the rain) came forth: the three divinities (Parjanya Vayu and Aditya), sowing in succession, warm the earth: two of them (Vayu and Aditya) convey all-delighting water (to the sun's sphere).

|| ವಿಶೇಷವಿಷಯಗಳು ||

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

ದೇವಾನಾಂ ನಿರ್ಮಾಣೇ ಪ್ರಥಮಾ ಅತಿಷ್ಠನ್ಮಾಧ್ಯಮಿಕಾ ದೇವಗಣಾಃ । ಪ್ರಥಮ ಇತಿ ಮುಖ್ಯನಾಮ ಪ್ರತಮೋ ಭವತಿ ಕೃಂತತ್ರಮಂತರಿಕ್ಷಂ ವಿಕರ್ತನಂ ಮೇಘಾನಾಂ ವಿಕರ್ತನೇನ ಮೇಘಾನಾಮುದಕಂ ಜಾಯತೇ ತ್ರಯಸ್ತಪಂತಿ ಪೃಥಿವೀಮನೂಪಾಃ । ಪರ್ಜನ್ಯೋ ವಾಯುರಾದಿತ್ಯಃ ಶೀತೋಷ್ಣವರ್ಷೈರೋಷಧೀಃ ಪಾಚಯಂತಿ ಅನೂಪಾ ಅನುವಪಂತಿ ಲೋಕಾನ್ ಸ್ವೇನ ಸ್ವೇನ ಕರ್ಮಣಾ । ಅಯಮಪೀತರೋಽನೂಪ ಏತಸ್ಮಾದೇವಾನೂಪ್ಯತ ಉದಕೇನ । ಅಪಿ ವಾನ್ವಾಪ್ಯತ ಇತಿ ಸ್ಯಾದ್ಯಥಾ ಪ್ರಾಗಿತಿ । ತಸ್ಯಾನೂಪ ಇತಿ ಸ್ಯಾದ್ಯಥಾ ಪ್ರಾಚೀನಮಿತಿ । ದ್ವಾ ಬೃಬೂಕಂ ವಹತಃ ಪುರೀಷಂ ವಾಯ್ವಾದಿತ್ಯಾ ಉದಕಂ । ಬೃಬೂಕಮಿತ್ಯುದಕನಾಮ ಬ್ರವೀತೇರ್ವಾ ಶಬ್ದಕರ್ಮಣೋ ಭ್ರಂಶತೇರ್ವಾ । ಪುರೀಷಂ ಪೃಣಾತೇಃ ಪೂರಯತೇರ್ವಾ ॥

(ನಿ. ೨.೨೨)

ಪ್ರಜಾಪತಿಯಿಂದ ದೇವತೆಗಳು ಸೃಷ್ಟಿಮಾಡಲ್ಪಟ್ಟಾಗ ಮಧ್ಯಮಸ್ಥಾನದ (ಅಂತರಿಕ್ಷಸ್ಥರಾದ) ದೇವತೆಗಳಿಗೆ (ಮೇಘಗಳಿಗೆ) ಮುಖ್ಯಸ್ಥಾನವು ಲಭಿಸಿತು. ಎಂದರೆ ಎಲ್ಲಾ ದೇವತೆಗಳಲ್ಲಿಯೂ ಅವುಗಳಿಗೆ ಪ್ರಾಧಾನ್ಯವು ಲಭಿಸಿತು. ಇಲ್ಲಿ ಪ್ರಥಮಶಬ್ದಕ್ಕೆ ಮುಖ್ಯವೆಂದು ಅರ್ಥವು. ಅಂತರಿಕ್ಷದಲ್ಲಿರುವ ಮೇಘಗಳನ್ನು ಸೀಳುವುದರಿಂದ ಮೇಘಗಳು ಉದಕರೂಪವಾದ ವೃಷ್ಟಿಯನ್ನು ಸುರಿಸುವವು. ಪರ್ಜನ್ಯ ವಾಯು ಆದಿತ್ಯರೆಂಬ ಮೂರು ದೇವತೆಗಳು ಸೇರಿ ಓಷಧಿಸಸ್ಯಾದಿಗಳನ್ನು ಬೆಳೆಸಿ

ವೃದ್ಧಿಪಡಿಸುವರು. ಎಂದರೆ ಪರ್ಜನ್ಯನು ವೃಷ್ಟಿಯನ್ನು ಸುರಿಸುವನು, ವಾಯುವು ಸಹಾಯಕನಾಗಿ ಬೀಸುವನು, ಆದಿತ್ಯನು ತನ್ನ ರಶ್ಮಿಗಳಿಂದ ಸಸ್ಯಾದಿಗಳ ಬೆಳವಣಿಗೆಗೆ ಸಹಾಯಮಾಡುವನು. ಇವರುಗಳ ಸಹಕಾರದಿಂದ ಓಷಧಿ ವನಸ್ಪತಿಗಳು ಬೆಳೆದು ವೃದ್ಧಿಯನ್ನೈದುವವು. ಇವರು ಮಾಡುವ ಈ ಕೆಲಸಕ್ಕೆ ಅನೂಪವೆಂದು ಹೆಸರು. ಅನೂಪ ವೆಂದರೆ ನದಿಯ ದಡವೆಂಬ ಇನ್ನೊಂದು ಅರ್ಥವೂ ಇರುವುದು. ಈ ಅರ್ಥಕ್ಕೆ ಈ ರೂಪನಿಷ್ಪತ್ತಿಯೇ ಅನ್ವಯಿಸುವುದು. ಏಕೆಂದರೆ ಇಲ್ಲಿಯೂ ಉದಕದ ಪ್ರಾಧಾನ್ಯತೆಯೇ ಕಂಡುಬರುವುದು. ಹೇಗೆಂದರೆ ಪ್ರಾಕ್‌ಶಬ್ದದಿಂದ ಪ್ರಾಚೀನಶಬ್ದವು ನಿಷ್ಪನ್ನವಾಗಿರುವಂತೆ ಅನ್ವಾಪ್‌ಶಬ್ದದಿಂದ ಅನೂಪಶಬ್ದವು ನಿಷ್ಪನ್ನವಾಗಿರುವುದು. ಈ ಎರಡೂ ಎಂದರೆ ವೃಷ್ಟಿಯೂ, ನದಿಯ ದಡವೂ ಫಲವತ್ತಾದ ಉದಕಕಣಗಳಿಂದ ತುಂಬಿರುವುದು. ಗಾಳಿಯೂ ಸೂರ್ಯನೂ ಆವಿಯರೂಪದ ಉದಕಕಣಗಳನ್ನು ಧರಿಸಿ ಸಸ್ಯಾದಿಗಳ ಅಭಿವೃದ್ಧಿಗೆ ಕಾರಣವಾಗಿರುವರು. ಬೃಬೂಕಂ ಎಂದರೆ ಉದಕವು (ಆವಿಯ ಅಥವಾ ತೇವದ ರೂಪದಲ್ಲಿರುವ ಉದಕವು) ಈ ಶಬ್ದವು ಶಬ್ದಮಾಡು ಎಂಬರ್ಥವುಳ್ಳ ಬ್ರು ಎಂಬ ಧಾತುವಿನಿಂದಾಗಲಿ, (ವೃಷ್ಟಿರೂಪದಿಂದ) ಕೆಳಕ್ಕೆ ಬೀಳು ಎಂಬರ್ಥವುಳ್ಳ ಭ್ರಂಶ್ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಪುರೀಷಂ ಎಂದರೆ ಫಲವತ್ತಾದುದು ಎಂದರ್ಥವು. ಈ ಶಬ್ದವು ತುಂಬು ಎಂಬರ್ಥವುಳ್ಳ ಪೄ ಧಾತುವಿನಿಂದಾಗಲಿ ತುಂಬುವಂತೆ ಮಾಡು ಎಂಬರ್ಥವುಳ್ಳ ಪ್ಯಾ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು, ಎಂದು ನಿರ್ವಚನಾಭಿಪ್ರಾಯವು.

॥ ಸಂಹಿತಾಪಾಠಃ ॥

ಸಾ ತೇ ಜೀವಾತುರುತ ತಸ್ಯ ವಿದ್ಧಿ ಮಾ ಸ್ಮೈತಾದೃಗಪ ಗೂಹಃ ಸಮರ್ಯೇ ।
ಆವಿಃ ಸ್ವಃ ಕೃಣುತೇ ಗೂಹತೇ ಬುಸಂ ಸ ಪಾದುರಸ್ಯ ನಿರ್ಣಿಜೋ ನ ಮುಚ್ಯತೇ ॥ ೨೪ ॥

॥ ಪದಪಾಠ ॥

ಸಾ । ತೇ । ಜೀವಾತುಃ । ಉತ । ತಸ್ಯ । ವಿದ್ಧಿ । ಮಾ । ಸ್ಮ । ಏತಾದೃಕ್ । ಅಪ । ಗೂಹಃ । ಸsಮರ್ಯೇ ।
ಆವಿಃ । ಸ್ವ೧ರಿತಿ ಸ್ವಃ । ಕೃಣುತೇ । ಗೂಹತೇ । ಬುಸಂ । ಸಃ । ಪಾದುಃ । ಅಸ್ಯ । ನಿಃsನಿಜಃ । ನ । ಮುಚ್ಯತೇ ॥ ೨೪ ॥

॥ ಸಾಯಣಭಾಷ್ಯಂ ॥

**ಅತ್ರಾಂತರಾತ್ಮನೇಂದ್ರಃ ಸ್ತೂಯತೇ । ಹೇ ಅಂತರಾತ್ಮನ್ ತೇ ತವ ಸಾ ತಾದೃಶ್ಯಾದಿತ್ಯಾತ್ಮಿಕಾ ದೇವತಾ ಜೀವಾತುರ್ಜೀವಿಕಾ ಜೀವನಹೇತುಃ । ಉತಾಪಿ ಚ ತಸ್ಯಾದಿತ್ಯಸ್ಯೈತಾದೃಗೀದೃಶಂ ಸ್ವರೂಪಂ ಸಮರ್ಯೇ । ಸಂಗ್ರಾಮನಾಮೈತತ್ । ಸಮರ್ಯಶಬ್ದೋಽತ್ರ ಯುಜ್ಞನಾಚೀ । ಯಜ್ಞೇ ವಿದ್ಧಿ । ಜಾನೀಹಿ ।**

**ಸ್ತುತ್ಯತ್ವೇನೇತಿ ಶೇಷಃ । ಮಾ ಸ್ಮಾಪ ಗೂಹಃ । ಮಾ ಖಲ್ವಪವೃಣೋಃ । ಕಿಂಚ ನಿರ್ಣಿಜಃ ಸರ್ವಸ್ಯ ಶೋಧಯಿತುರಾದಿತ್ಯಸ್ಯ ಸ ಪಾದುಸ್ತಚ್ಚ ಪಾದನಂ ಗಮನಂ ರಶ್ಮಿದ್ವಾರೇಣ ಗತ್ವಾ ಸ್ವಃ ಸರ್ವಂ ತ್ರೈಲೋಕ್ಯಮಾವಿಷ್ಕೃಣುತೇ । ಪ್ರಕಾಶೀಕರೋತಿ । ಬುಸಮುದಕಂ ಗೂಹತೇ । ಸಂವೃಣೋತಿ । ಆದತ್ತ ಇತ್ಯರ್ಥಃ । ಅಸ್ಯೈ ಪ್ರಯೋಜನದ್ವಯಾಯಾದಿತ್ಯೇನ ನಿರ್ವೇದನಾಚ್ಛ್ರಮೇಣ ವಾ ಗಮನಂ ನ ಮುಚ್ಯತೇ । ನ ಕದಾಚಿತ್ಪರಿತ್ಯಜ್ಯತ ಇತ್ಯರ್ಥಃ ।**

॥ ಪ್ರತಿಪದಾರ್ಥ ॥

(ಎಲೈ ಅಂತರಾತ್ಮನೇ) **ತೇ**—ನಿನ್ನ । **ಸಾ**—ಆದಿತ್ಯಾತ್ಮಕವಾದ ಸ್ವರೂಪವು । **ಜೀವಾತು**—ಜೀವನಕ್ಕೆ ಕಾರಣಭೂತವಾಗಿದೆ । **ಉತ**—ಮತ್ತು । **ತಸ್ಯ**—ಆದೇ ಆದಿತ್ಯನ । **ಏತಾದೃಕ್**—ಇಂತಹ ಸ್ವರೂಪವು । **ಸಮರ್ಯೇ**—ಯಜ್ಞಕಾಲದಲ್ಲಿ ಪೂಜ್ಯವಾದುದೆಂದು । **ವಿದ್ಧಿ**—ತಿಳಿ । **ಮಾ ಸ್ಮ ಅಪ ಗೂಹಃ**—ಯಾವುದನ್ನೂ ಮರೆಸಬೇಡ । **ನಿರ್ಣಿಜಃ ಅಸ್ಯ**—ಶುದ್ಧಿಕಾರಕನಾದ ಆದಿತ್ಯನ । **ಸ ಪಾದುಃ**—ರಶ್ಮಿರೂಪವಾದ ಸಂಚಾರವೇ । **ಸ್ವಃ**—ಮೂರು ಲೋಕಗಳನ್ನೂ । **ಆವಿಃ ಕೃಣುತೇ**—ಪ್ರಕಾಶಪಡಿಸುತ್ತದೆ । **ಬುಸಂ**—ಉದಕವನ್ನು । **ಗೂಹತೇ**—ಮರೆಸುತ್ತದೆ । **ನ ಮುಚ್ಯತೇ**—ಅದು ಯಾವಾಗಲೂ ನಿಲ್ಲುವುದಿಲ್ಲ.

॥ ಭಾವಾರ್ಥ ॥

ಎಲೈ ಅಂತರಾತ್ಮನೇ, ನಿನ್ನ ಆದಿತ್ಯಾತ್ಮಕವಾದ ಸ್ವರೂಪವು ಜೀವನಕ್ಕೆ ಕಾರಣಭೂತವಾಗಿದೆ. ಮತ್ತು ಅದೇ ಆದಿತ್ಯನ ಇಂತಹ ಸ್ವರೂಪವು ಯಜ್ಞಕಾಲದಲ್ಲಿ ಪೂಜ್ಯವಾದುದೆಂದು ತಿಳಿಯುವುದನ್ನೂ ಮರೆಸಬೇಡ. ಶುದ್ಧಿಕಾರಕನಾದ ಆದಿತ್ಯನ ರಶ್ಮಿರೂಪವಾದ ಸಂಚಾರವೇ, ಮೂರು ಲೋಕಗಳನ್ನೂ ಪ್ರಕಾಶಪಡಿಸುತ್ತದೆ. ಉದಕವನ್ನು ಮರೆಸುತ್ತದೆ. ಅದು ಯಾವಾಗಲೂ ನಿಲ್ಲುವುದಿಲ್ಲ.

## English Translation

That your (divine) nature identified with the (sun) is the cause of life: and know such (solar form) of his (to be worthy of adoration) at the sacrtfice; conceal nothing: that motion of him the all-cleansing (sun) makes manifest the universe; it absorbs the moisture; it is never discontinued.

॥ ವಿಶೇಷವಿಷಯಗಳು ॥

**ಪಾದುಃ**—ಈ ಶಬ್ದಕ್ಕೆ ಅರ್ಥವಿವರಣೆಮಾಡುತ್ತಾ, ಯಾಸ್ಕರು—

**ಪಾದುಃ। ಪಾದುಃ ಪದ್ಯತೇಃ । ಆವಿಃ ಸ್ವಃ ಕೃಣುತೇ ಗೂಹತೇ ಬುಸಂ ಸ ಪಾದುರಸ್ಯ ನಿರ್ಣಿಜೋ ನ ಮುಚ್ಯತೇ ಆವಿಷ್ಕುರುತೇ ಭಾಸಮಾದಿತ್ಯೋ ಗೂಹತೇ ಬುಸಂ । ಬುಸಮಿತ್ಯುದಕನಾಮ ಬ್ರವೀತೇಃ ಶಬ್ದಕರ್ಮಣಃ । ಭ್ರಂಶತೇರ್ವಾ । ಯದ್ವರ್ಷನ್ಪಾತಯತ್ಯುದಕಂ ರಶ್ಮಿಭಿಸ್ತತ್ಪ್ರತ್ಯಾದತ್ತೇ ॥** (ನಿ. ೫-೧೯,

ನಡಿ, ಹೋಗು ಎಂಬರ್ಥವುಳ್ಳ ಪದ್ ಧಾತುವಿನಿಂದ ಪಾದಃ ಎಂಬ ಶಬ್ದವು ನಿಷ್ಪನ್ನವಾಗಿದೆ. ಪಾದ ಅಥವಾ ಕಾಲು ಎಂದರ್ಥವು. ಈ ವಿಷಯದಲ್ಲಿ ಪ್ರಕೃತಋಕ್ಕೇ ಉದಾಹರಣೆಯಾಗಿರುವುದು. ಇಲ್ಲಿರುವ ಬುಸವೆಂಬ ಶಬ್ದಕ್ಕೆ ಉದಕವೆಂದರ್ಥವು. ಸೂರ್ಯನು ಬೆಳಕನ್ನು ಪ್ರಕಾಶಪಡಿಸುತ್ತಾನೆ ಮತ್ತು ಉದಕವನ್ನು ಬಚ್ಚಿಡುತ್ತಾನೆ. ಶಬ್ದ ಮಾಡು ಎಂಬ ಬ್ರು ಧಾತುವಿನಿಂದಾಗಲಿ, ಕೆಳಕ್ಕೆ ಬೀಳು ಎಂಬರ್ಥವುಳ್ಳ ಭ್ರಂಶ್ ಧಾತುವಿನಿಂದಾಗಲಿ ಬುಸಶಬ್ದವು ನಿಷ್ಪನ್ನವಾಗಿದೆ. ಉದಕವೆಂದರ್ಥವು. ಮೇಘದಿಂದ ಉದಕವು ವೃಷ್ಟಿರೂಪದಲ್ಲಿ ಶಬ್ದಮಾಡುತ್ತಾ ಬೀಳುವುದೆಂದದಭಿಪ್ರಾಯವು. ಈ ರೀತಿ ವೃಷ್ಟಿದ್ವಾರಾ ಭೂಮಿಯ ಮೇಲೆ ಬೀಳುವ ಉದಕವನ್ನು ಸೂರ್ಯನು (ಆದಿತ್ಯನು) ರಶ್ಮಿಗಳ ಮೂಲಕ ಹಿಂದಕ್ಕೆ ಹೀರಿ ಎಳೆದುಕೊಳ್ಳುತ್ತಾನೆ. ಎಂದರೆ ಸೂರ್ಯನ ರಶ್ಮಿಗಳ ತಾಪದಿಂದ ಕಾದ ಜಲಾಶಯಗಳ ಉದಕವನ್ನು ಆವಿಯ ಮೂಲಕ ಸೂರ್ಯನಿಗಭಿಮುಖವಾಗಿ ಅಂತರಿಕ್ಷದಲ್ಲಿ ಶೇಖರಿಸಲ್ಪಡುವುದೆಂದಭಿಪ್ರಾಯವು.

## ಇಪ್ಪತ್ತೆಂಟನೆಯ ಸೂಕ್ತವು

### ಸಾಯಣಭಾಷ್ಯಂ ।

ವಿಶ್ವೋ ಹೀತಿ ದ್ವಾದಶರ್ಚಂ ದ್ವಾದಶಂ ಸೂಕ್ತಂ ತ್ರೈಷ್ಟುಭಂ । ಇಂದ್ರವಸುಕ್ರಯೋಃ ಪಿತಾ-ಪುತ್ರಯೋಃ ಸಂವಾದೋಽತ್ರ ಕ್ರಿಯತೇ । ಪುರಾ ವಸುಕ್ರೇ ಯಜ್ಞಂ ಕುರ್ವಾಣೇ ಸತೀಂದ್ರಃ ಪ್ರಚ್ಛನ್ನ-ರೂಪ ಆಜಗಾಮ । ತಂ ವಸುಕ್ರಪತ್ನೀಂದ್ರಾಗಮನಾಕಾಂಕ್ಷಿಣೀ ವಿಪ್ರಕೃಷ್ಟಮಿವಾದ್ಯಯಾಸ್ತೌತ್ । ಅತ-ಸ್ತಸ್ಯಾಃ ಸರ್ಷಿಃ ಇಂದ್ರೋ ದೇವತಾ. । ಅಥ ತಸ್ಯಾಃ ಪ್ರೀತ್ಯೈ ವಸುಕ್ರೇಣ ಸಹೇಂದ್ರಃ ಸಂವಾದ-ಮಕರೋತ್ । ದ್ವಿತೀಯಾದಿಯುಜಶ್ಚತುರ್ಥೀರಹಿತಾಃ ಪಂಚರ್ಚ ಇಂದ್ರವಾಕ್ಯಾನಿ । ಅತಸ್ತಾಸಾಂ ಸ ಋಷಿಃ । ಯದ್ಯಪ್ಯಾಸು ವಸುಕ್ರಃ ಸಂಬೋಧ್ಯತ್ವಾದ್ದೇವತಾ ತಥಾಪಿ ತಾ ಋಚ ಐಂದ್ರೇ ಕರ್ಮಣಿ ವಿನಿಯೋಕ್ತವ್ಯಾ ಇಂದ್ರಲಿಂಗಸದ್ಭಾವಾತ್ । ಚತುರ್ಥೀಸಹಿತಾಃ ಶಿಷ್ಟಾಸ್ತೃತೀಯಾದ್ಯಾ ವಸುಕ್ರವಾ-ಕ್ಯಾನಿ । ಅತಃ ಸ ಋಷಿಸ್ತಾಸಾಂ ಇಂದ್ರೋ ದೇವತಾ । ತಥಾ ಚಾನುಕ್ರಾಂತಂ । ವಿಶ್ವೋ ಹಿ ದ್ವಾದ-ಶೇಂದ್ರವಸುಕ್ರಯೋಃ ಸಂವಾದ ಐಂದ್ರಃ ಸೂಕ್ತಸ್ಯ ಪ್ರಥಮಯೇಂದ್ರಸ್ಯ ಸ್ನುಷಾ ಪರೋಕ್ಷವದಿಂದ್ರ-ಮಾಹೇಂದ್ರಸ್ಯ ಯುಜಃ ಶೇಷಾ ಋಷೇಶ್ಚತುರ್ಥೀ ಚೇತಿ ॥ ಗತೋ ವಿನಿಯೋಗಃ ॥

ಅನುವಾದವು—ವಿಶ್ವೋ ಹಿ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ತ್ರಿಷ್ಟುಪ್‌ಛಂದಸ್ಸು. ಈ ಸೂಕ್ತದಲ್ಲಿ ತಂದೆಯಾದ ಇಂದ್ರನಿಗೂ ಪುತ್ರನಾದ ವಸುಕ್ರನೆಂಬ ಋಷಿಗೂ ನಡೆದ ಸಂಭಾಷಣೆ ಇದೆ. ಪೂರ್ವದಲ್ಲಿ ವಸುಕ್ರಋಷಿಯು ಯಜ್ಞಮಾಡುತ್ತಿರುವಾಗ ಇಂದ್ರನು ವೇಷವನ್ನು ಮರೆಸಿಕೊಂಡು ಅಲ್ಲಿಗೆ ಬಂದನು. ಆಗ ವಸುಕ್ರಋಷಿಯ ಪತ್ನಿಯು ಇಂದ್ರನ ಆಗಮನವನ್ನು ಬಯಸುತ್ತಾ ಇಂದ್ರನು ಇಲ್ಲದಿರುವುದನ್ನು ಸೂಚಿಸುತ್ತಾ ಮೊದಲನೆಯ ಋಕ್ಕಿನಿಂದ ಅವನನ್ನು ಸ್ತೋತ್ರಮಾಡಿದಳು. ಆದ್ದರಿಂದ ಮೊದಲನೆಯ ಋಕ್ಕಿಗೆ ವಸುಕ್ರಪತ್ನಿಯೇ ಋಷಿಯು; ಇಂದ್ರನು ದೇವತೆಯು. ಬಳಿಕ ಆ ವಸುಕ್ರ ಪತ್ನಿಯ ಪ್ರೀತ್ಯರ್ಥವಾಗಿ ಇಂದ್ರನು ವಸುಕ್ರನೊಡನೆ ಸಂಭಾಷಣೆಮಾಡಿದನು. ಆದ್ದರಿಂದ ನಾಲ್ಕನೆಯ ಋಕ್ಕನ್ನು ಬಿಟ್ಟು ಉಳಿದ ಸಮಸಂಖ್ಯೆಯ ಐದು ಋಕ್ಕುಗಳೂ ಇಂದ್ರನ ವಾಕ್ಯಗಳು. ಆದ್ದರಿಂದ ಆ ಋಕ್ಕುಗಳಿಗೆ ಇಂದ್ರನೇ

ಋಷಿಯು; ಒಂದುವೇಳೆ ಆ ಋಕ್ಕುಗಳಲ್ಲಿ ವಸುಕ್ರಋಷಿಯು ಸಂಬೋಧಿಸಲ್ಪಟ್ಟಿದ್ದರೂ ಅವುಗಳಲ್ಲಿ ಸ್ತುತವಾಗಿರುವ ಕರ್ಮಗಳು ಇಂದ್ರನಿಗೆ ಸಂಬಂಧಪಟ್ಟಿರುವುದರಿಂದ ಆ ಋಕ್ಕುಗಳನ್ನು ಇಂದ್ರದೇವತಾಕವೆಂದೇ ಹೇಳಬೇಕು. ಈ ಸೂಕ್ತದ ನಾಲ್ಕನೆಯ ಋಕ್ಕು ಮತ್ತು ಮೂರನೆಯ ಋಕ್ಕಿನಿಂದ ಮುಂದಕ್ಕೆ ಅಸಮಸಂಖ್ಯೆಯ ಋಕ್ಕುಗಳು ವಸುಕ್ರಋಷಿಯ ವಾಕ್ಯಗಳಿರುವವು. ಆದ್ದರಿಂದ ಆ ಋಕ್ಕುಗಳಿಗೆ ವಸುಕ್ರನು ಋಷಿಯು, ಇಂದ್ರನು ದೇವತೆಯು. ಅನುಕ್ರಮಣಿಕೆಯಲ್ಲಿ—ವಿಶ್ವೋ ಹಿ ದ್ವಾದಶೇಂದ್ರವಸುಕ್ರಯೋಃ ಸಂವಾದ ಐಂದ್ರಃ ಸೂಕ್ತಸ್ಯ ಪ್ರಥಮ-ಯೇಂದ್ರಸ್ನುಷಾ ಪರೋಕ್ಷವದಿಂದ್ರಮಾಹೇಂದ್ರಸ್ಯ ಯುಜಃ ಶೇಷಾ ಋಷೇಶ್ಚತುರ್ಥೀ ಚ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೨೮

ಮಂಡಲ—೧೦ । ಅನುವಾಕ—೨ । ಸೂಕ್ತ—೨೮ ॥
ಅಷ್ಟಕ—೭ ಅಧ್ಯಾಯ ೭ । ವರ್ಗ—೧೯, ೨೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥
ಋಷಿಃ—ಇಂದ್ರವಸುಕ್ರಯೋಃ ಸಂವಾದ ಐಂದ್ರಃ । ೧. ಇಂದ್ರಸ್ನುಷಾ ವಸುಕ್ರಪತ್ನೀಋಷಿಕಾ ೨,೬,೮, ೧೦, ೧೨. ಇಂದ್ರ ಋಷಿಃ । ೩, ೪, ೫, ೭, ೯, ೧೧. ಐಂದ್ರೋ ವಸುಕ್ರ ಋಷಿಃ ॥
ದೇವತಾ—೨, ೬, ೮, ೧೦, ೧೨. ಐಂದ್ರೋ ವಸುಕ್ರೋ ದೇವತಾ । ೧, ೩, ೪, ೫, ೭, ೯, ೧೧. ಇಂದ್ರೋ ದೇವತಾ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ವಿಶ್ವೋ ಹ್ಯ೧ನ್ಯೋ ಅರಿರಾಜಗಾಮ ಮಮೇದಹ ಶ್ವಶುರೋ ನಾ ಜಗಾಮ ।
ಜಕ್ಷೀಯಾದ್ಧಾನಾ ಉತ ಸೋಮಂ ಪಪೀಯಾತ್ಸ್ವಾಶಿತಃ ಪುನರಸ್ತಂ ಜಗಾಯಾತ್ ॥ ೧ ॥

॥ ಪದಪಾಠಃ ॥

ವಿಶ್ವಃ । ಹಿ । ಅನ್ಯಃ । ಅರಿಃ । ಆಽಜಗಾಮ । ಮಮ । ಇತ್ । ಅಹ । ಶ್ವಶುರಃ । ನ । ಆ । ಜಗಾಮ । ಜಕ್ಷೀಯಾತ್ । ಧಾನಾಃ । ಉತ । ಸೋಮಂ । ಪಪೀಯಾತ್ । ಸುಽಆಶಿತಃ । ಪುನಃ । ಅಸ್ತಂ । ಜಗಾಯಾತ್ ॥ ೧ ॥

॥ ಸಾಯಣಭಾಷ್ಯಂ ॥

ಅನಯಾ ವಸುಕ್ರಪತ್ನೀಂದ್ರಂ ಸ್ತೌತಿ । ಅಸ್ಯ ಇಂದ್ರವ್ಯತಿರಿಕ್ತೋಽನ್ಯೋಽರಿರರ್ಯ ಈಶ್ವರೋ ವಿಶ್ವೋ ಹಿ ಸರ್ವ ಏವ ದೇವಗಣ ಆಜಗಾಮ । ಅಸ್ಮದ್ಯಜ್ಞಂ ಪ್ರತ್ಯಾಯಯೌ । ಇದಿತ್ಯವಧಾರಣೇ । ಅಹೇತ್ಯ-

ದ್ಭುತೇ। ಸರ್ವದೇವಗಣ ಆಗತೇ ಸತಿ ಮಮ್ಯೈವ ಶ್ವಶುರ ಇಂದ್ರೋ ನಾ ಜಗಾಮ ! ಸ ಇಂದ್ರೋ ಯದ್ಯಾ-ಗಚ್ಛೇತ್ ತರ್ಹಿ ಧಾನಾ ಭೃಷ್ಟಯವಾಞ್ಜಕ್ಷೀಯಾತ್ । ಭಕ್ಷಯೇತ್ । ಉತಾಪಿ ಚ ಸೋಮಮಭಿಷುತಂ ಪಪೀಯಾತ್ । ಪಿಬೇತ್ । ತತಃ ಸ್ವಾಶಿತಃ ಸುಷ್ಠು ಭುಕ್ತಸ್ತೃಪ್ತಃ ಸನ್ ಪುನರ್ಭೂಯೋಽಸ್ತಂ ಸ್ವಗೃಹಂ ಪ್ರತಿ ಜಗಾಯಾತ್ । ಗಚ್ಛೇತ್ ॥

॥ ಪ್ರತಿಪದಾರ್ಥ ॥

**ಅನ್ಯಃ**—ಇಂದ್ರನಿಗಿಂತಲೂ ಬೇರೆಯಾದ । **ವಿಶ್ವೋ ಹಿ ಅನ್ಯಃ**—ಇತರ ದೇವಗಣವೆಲ್ಲ। **ಆಜಗಾಮ**—ನಮ್ಮ ಯಜ್ಞಕ್ಕೆ ಬಂದಿದಾರೆ । **ಮಮ ಇತ್**—ನನ್ನ । **ಶ್ವಶುರಃ**—ಮಾವನಾದ ಇಂದ್ರನು ಮಾತ್ರ । **ನಾಜಗಾಮ**—ಬಂದಿಲ್ಲ (ಇಂದ್ರನು ಬಂದು) । **ಧಾನಾಃ**—ಯವ ಧಾನ್ಯಗಳನ್ನು । **ಜಕ್ಷೀಯಾತ್**—ಭಕ್ಷಿಸಲಿ । **ಉತ**—ಮತ್ತು । **ಸೋಮಂ**—ಹಿಂಡಿರುವ ಸೋಮವನ್ನು । **ಪಪೀಯಾತ್**—ಪಾನಮಾಡಲಿ । **ಸ್ವಾಶಿತಃ**—ತೃಪ್ತಿಯನ್ನು ಹೊಂದುವಷ್ಟು ಭಕ್ಷಿಸಿ । **ಪುನಃ**—ತಿರುಗಿಯೂ । **ಅಸ್ತಂ**—ತನ್ನ ಗೃಹಕ್ಕೆ । **ಜಗಾಯಾತ್**—ಹೋಗಲಿ.

॥ ಭಾವಾರ್ಥ ॥

ವಸುಕ್ರಋಷಿಯ ಪತ್ನಿ—ಇಂದ್ರನಿಗಿಂತಲೂ ಬೇರೆಯಾದ ಉಳಿದ ದೇವತೆಗಳೆಲ್ಲರೂ ಯಜ್ಞಕ್ಕೆ ಬಂದಿದ್ದಾರೆ. ನನ್ನ ಮಾವನಾದ ಇಂದ್ರನು ಮಾತ್ರ ಬಂದಿಲ್ಲ. ಇಂದ್ರನು ಬಂದು ಯವ ಧಾನ್ಯವನ್ನು ಭಕ್ಷಿಸಲಿ. ಹಿಂಡಿರುವ ಸೋಮವನ್ನು ಪಾನಮಾಡಲಿ. ತೃಪ್ತಿಯನ್ನು ಹೊಂದುವಷ್ಟು ಭಕ್ಷಿಸಿ ತಿರುಗಿಯೂ ತನ್ನ ಗೃಹಕ್ಕೆ ಹೋಗಲಿ.

## English Translation

(The wife of Vasukra speaks :) Every other (divine) lord has come, but my father-in-law has not come : may he eat the parched grain : and drink the Soma ; when he is well satisfied, may he return home.

॥ ಸಂಹಿತಾಪಾಠಃ ॥

**ಸ ರೋರುವದ್ವೃಷಭಸ್ತಿಗ್ಮಶೃಂಗೋ ವರ್ಷ್ಮನ್ತಸ್ಥೌ ವರಿಮನ್ನಾ ಪೃಥಿವ್ಯಾಃ।**
**ವಿಶ್ವೇಷ್ವೇನಂ ವೃಜನೇಷು ಪಾಮಿ ಯೋ ಮೇ ಕುಕ್ಷೀ ಸುತಸೋಮಃ**
**ಪೃಣಾತಿ ॥ ೨ ॥**

॥ ಪದಪಾಠಃ ॥

ಸಃ । ರೋರುವತ್ । ವೃಷಭಃ । ತಿಗ್ಮಽಶೃಂಗಃ । ವರ್ಷ್ಮನ್ । ತಸ್ಥೌ । ವರಿಮನ್ । ಆ । ಪೃಥಿವ್ಯಾಃ ।
ವಿಶ್ವೇಷು । ಏನಂ । ವೃಜನೇಷು । ಪಾಮಿ । ಯಃ । ಮೇ । ಕುಕ್ಷೀ ಇತಿ । ಸುತಽಸೋಮಃ । ಪೃಣಾತಿ ॥

॥ ಸಾಯಣಭಾಷ್ಯಂ ॥

ವೃಷಭಃ ಕಾಮಾನಾಂ ವರ್ಷಿತಾ ತಿಗ್ಮಶೃಂಗಸ್ತೀಕ್ಷ್ಣರಶ್ಮಿಃ ಸ ಇಂದ್ರೋಽಹಂ ಪೃಥಿವ್ಯಾ ಅಂತರಿಕ್ಷಸ್ಯ ವರ್ಷ್ಮನ್ ವರ್ಷ್ಮಣಿ । ವರ್ಷ್ಮೇತ್ಯುಚ್ಛ್ರಿತಮುಚ್ಯತೇ । ಉನ್ನತಪ್ರದೇಶೇ ಸ್ಥಿರವಚನೋ ವಾ । ಏವಂಭೂತೇ ವರಿಮನ್ ವಿಸ್ತೀರ್ಣೇ ಪ್ರದೇಶೇ ರೋರುವದ್ಭೃಶಂ ಶಬ್ದಾಯಮಾನಃ ಸನ್ನಾ ತಸ್ಥೌ । ಆತಿಷ್ಠಾಮಿ । ಏವಂಭೂತೋಽಹಂ ವಿಶ್ವೇಷು ಸರ್ವೇಷು ವೃಜನೇಷು ಸಂಗ್ರಾಮೇಷ್ವೇನಮೀದೃಶಂ ವಸುಕ್ರಂ ಯಜಮಾನಂ ಪಾಮಿ । ರಕ್ಷಾಮಿ । ಯೋ ಯಜಮಾನಃ ಸುತಸೋಮಃ ಅಭಿಷುತಸೋಮೋ ಮೇ ಮಮ ಕುಕ್ಷೀ ಉಭೌ ಪಾರ್ಶ್ವೌ ಪೃಣಾತಿ ಸೋಮರಸಪುರೋಡಾಶಾದಿಹವಿರ್ಭಿಃ ಪೂರಯತಿ ಈದೃಶಂ ರಕ್ಷಾಮೀತಿ ಸಂಬಂಧಃ ॥

॥ ಪ್ರತಿಪದಾರ್ಥ ॥

**ವೃಷಭಃ**—ಕಾಮವರ್ಷಕನೂ । **ತಿಗ್ಮಶೃಂಗಃ**—ತೀಕ್ಷ್ಣವಾದ ರಶ್ಮಿಯುಳ್ಳವನೂ । **ಸಃ**—ಪ್ರಸಿದ್ಧನೂ ಆದ ನಾನು (ಇಂದ್ರನು) । **ಪೃಥಿವ್ಯಾಃ**—ಅಂತರಿಕ್ಷದ । **ವರ್ಷ್ಮನ್**—ಉನ್ನತವಾದದೂ । **ವರಿಮನ್**—ವಿಸ್ತೃತವಾದುದೂ ಆದ ಪ್ರದೇಶದಲ್ಲಿ । **ರೋರುವತ್**—ಶಬ್ದವನ್ನು ಮಾಡುತ್ತ । **ಆ ತಸ್ಥೌ**—ಸ್ಥಾಪಿತನಾಗಿದ್ದೇನೆ । **ಯಃ**—ಯಾವ ಯಜಮಾನನು । **ಸುತಸೋಮಃ**—ಹಿಂಡಿದ ಸೋಮವುಳ್ಳವನಾಗಿ । **ಮೇ**—ನನ್ನ । **ಕುಕ್ಷೀ**—ಉದರದ ಎರಡು ಪಾರ್ಶ್ವಗಳನ್ನೂ । **ಪೃಣಾತಿ**—ತುಂಬುವನೋ । **ಏನಂ**—ಅಂತಹ ಯಜಮಾನನನ್ನು । **ವಿಶ್ವೇಷು ವೃಜನೇಷು**—ಸಕಲ ಯುದ್ಧಗಳಲ್ಲಿಯೂ । **ಪಾಮಿ**—ರಕ್ಷಿಸುತ್ತೇನೆ.

॥ ಭಾವಾರ್ಥ ॥

ಇಂದ್ರ—ಕಾಮವರ್ಷಕನೂ, ತೀಕ್ಷ್ಣವಾದ ರಶ್ಮಿಯುಳ್ಳವನೂ, ಪ್ರಸಿದ್ಧನೂ ಆದ ನಾನು ಅಂತರಿಕ್ಷದ ಉನ್ನತವಾದುದೂ, ವಿಸ್ತೃತವಾದುದೂ ಆದ ಪ್ರದೇಶದಲ್ಲಿ ಶಬ್ದಮಾಡುತ್ತ ಸ್ಥಾಪಿತನಾಗಿದ್ದೇನೆ. ಯಾವ ಯಜಮಾನನು ಹಿಂಡಿದ ಸೋಮವುಳ್ಳವನಾಗಿ ನನ್ನ ಉದರದ ಎರಡು ಪಾರ್ಶ್ವಗಳನ್ನೂ ತುಂಬುವನೋ ಅಂತಹ ಯಜಮಾನನನ್ನು ಸಕಲ ಯುದ್ಧಗಳಲ್ಲಿಯೂ ರಕ್ಷಿಸುತ್ತೇನೆ.

English Translatian

**(Indra speaks:) (Indra) the showerer** (of blessings), having hot rays, abides roaring in the resounding expanse of the firmament: in all conflicts I defend him, (Vasukra), who, having effused the libation, fills my flanks.

॥ ಸಂಹಿತಾಪಾಠಃ ॥

ಅದ್ರಿಣಾ ತೇ ಮಂದಿನ ಇಂದ್ರ ತೂಯಾನ್ತ್ಸುನ್ವಂತಿ ಸೋಮಾನ್ಪಿಬಸಿ

ತ್ವಂ ಏಷಾಂ ।

ಪಚಂತಿ ತೇ ವೃಷಭಾ ಅತ್ಸಿ ತೇಷಾಂ ಪೃಕ್ಷೇಣ ಯನ್ಮಘವನ್ಹೂಯ-
ಮಾನಃ ॥ ೩ ॥

॥ ಪದಪಾಠಃ ॥

ಅದ್ರಿಣಾ । ತೇ । ಮಂದಿನಃ । ಇಂದ್ರ । ತೂಯಾನ್ । ಸುನ್ವಂತಿ । ಸೋಮಾನ್ । ಪಿಬಸಿ । ತ್ವಂ । ಏಷಾಂ ।
ಪಚಂತಿ । ತೇ । ವೃಷಭಾನ್ । ಅತ್ಸಿ । ತೇಷಾಂ । ಪೃಕ್ಷೇಣ । ಯತ್ । ಮಘ್ರವನ್ । ಹೂಯ-
ಮಾನಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತ್ವದರ್ಥಂ ಮಂದಿನೋ ಮಾದಯಿತ್ರ್ಯಾಂಸ್ತೂಯಾನವಿಲಂಬಿತಾನ್ಸೋಮಾನದ್ರಿಣಾಭಿಷವಗ್ರಾವ್ಣಾ ಸುನ್ವಂತಿ। ಯಜಮಾನಾ ಅಭಿಷುಣ್ವಂತಿ।ಏಷಾಮಸ್ಮದಾದಿಯಜಮಾನಾನಾಂ ಸಂಬಂಧಿನಃ ಸೋಮಾಂಸ್ತ್ವಂ ಪಿಬಸಿ । ಕಿಂಚ ತ್ವದರ್ಥಂ ವೃಷಭಾನ್ಪಶೂನ್ಯೇ ಚ ಯಜಮಾನಾಃ ಪಚಂತಿ ತೇಷಾಂ ಸಂಬಂಧಿನೋ ಹವಿರ್ಭೂತಾನ್ಪಶೂನತ್ಸಿ । ಭಕ್ಷಯಸಿ । ಹೇ ಮಘವನ್ಧನವನ್ನಿಂದ್ರ ತ್ವಂ ಯದಾ ಪೃಕ್ಷೇಣ ಹವಿರ್ಭೂತೇನಾನ್ನೇನ ನಿಮಿತ್ತೇನ ಹೂಯಮಾನಃ ಯಜಮಾನೈರ್ಹೂಯಸೇ ತದೇತಿ ಪೂರ್ವೇಣ ಸಂಬಂಧಃ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ತೇ—ನಿನ್ನನ್ನುದ್ದೇಶಿಸಿ । **ಮಂದಿನಃ**—ಮದನಕಾರಕವಾದವೂ । **ತೂಯಾನ್**—ವೇಗವಾಗಿ ಪ್ರವಹಿಸುವುವೂ ಆದ ಸೋಮರಸಗಳನ್ನು । **ಅದ್ರಿಣಾ**—ಹಿಂಡುವ ಕಲ್ಲುಗಳಿಂದ । **ಸುನ್ವಂತಿ**—ಯಜಮಾನರು ಹಿಂಡುತ್ತಾರೆ । **ಏಷಾಂ**—ಈ ಯಜಮಾನರಿಂದ ದತ್ತವಾದ । **ಸೋಮಾನ್**—ಸೋಮರಸಗಳನ್ನು । **ತ್ವಂ**—ನೀನು । **ಪಿಬಸಿ**—ಪಾನಮಾಡುತ್ತೀಯೆ । **ವೃಷಭಾನ್**—ವೃಷಭಗಳನ್ನು । **ತೇ ಪಚಂತಿ**—ಯಜಮಾನರು ನಿನಗಾಗಿ ಪಕ್ವಮಾಡುತ್ತಾರೆ । **ಮಘ್ರವನ್**—ಧನವಂತನಾದ ಎಲೈ ಇಂದ್ರನೇ । **ಪೃಕ್ಷೇಣ**—ಹವಿಸ್ಸಿನ ನಿಮಿತ್ತವಾಗಿ । **ಯತ್ ಹೂಯಮಾನಃ**—ಯಾವಾಗ ಕರೆಯಲ್ಪಡುವೆಯೋ ಆಗ । **ತೇಷಾಂ**—ಯಜಮಾನರಿಂದ ಅರ್ಪಿತವಾದ ಹವಿಸ್ಸುಗಳನ್ನು । **ಅತ್ಸಿ**—ಭಕ್ಷಿಸುತ್ತೀಯೆ.

। ಭಾವಾರ್ಥ ॥

ವಸುಕ್ರ (೩,೪ ೫ ಋಕ್ಕುಗಳು)—ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಮದಕಾರಕವಾದವೂ, ವೇಗವಾಗಿ ಪ್ರವಹಿಸುವುವೂ ಆದ ಸೋಮರಸಗಳನ್ನು ಹಿಂಡುವ ಕಲ್ಲುಗಳಿಂದ ಯಜಮಾನರು ಹಿಂಡುತ್ತಾರೆ. ಈ ಯಜಮಾನರಿಂದ ದತ್ತವಾದ ಸೋಮರಸಗಳನ್ನು ನೀನು ಪಾನಮಾಡುತ್ತೀಯೆ. ವೃಷಭಗಳನ್ನು ಯಜಮಾನರು ನಿನಗಾಗಿ ಪಕ್ವಮಾಡುತ್ತಾರೆ. ಧನವಂತನಾದ ಎಲೈ ಇಂದ್ರನೇ, ಹವಿಸ್ಸಿನ ನಿಮಿತ್ತವಾಗಿ ನೀನು ಯಾವಾಗ ಕರೆಯಲ್ಪಡುವೆಯೋ ಆಗ ಯಜಮಾನರಿಂದ ಅರ್ಪಿತವಾದ ಹವಿಸ್ಸುಗಳನ್ನು ಭಕ್ಷಿಸುತ್ತೀಯೆ.

## English Translation

(Vasukra speaks:) Your worshippers express with the stone fast flowing exhilarating Soma-juices for you, you drink them; they roast bulls for you, you eat them, when you are invoked, Maghavan, to the sacrificial food.

॥ ಸಂಹಿತಾಪಾಠಃ ॥

ಇದಂ ಸು ಮೇ ಜರಿತರಾ ಚಿಕಿದ್ಧಿ ಪ್ರತೀಪಂ ಶಾಪಂ ನದ್ಯೋ ವಹಂತಿ ।
ಲೋಪಾಶಃ ಸಿಂಹಂ ಪ್ರತ್ಯಂಚಮತ್ಸಾಃ ಕ್ರೋಷ್ಟಾ ವರಾಹಂ ನಿರತಕ್ತ ಕಕ್ಷಾತ್ ॥ ೪ ॥

॥ ಪದಪಾಠಃ ॥

ಇದಂ । ಸು । ಮೇ । ಜರಿತಃ । ಆ । ಚಿಕಿದ್ಧಿ । ಪ್ರತಿಽಈಪಂ । ಶಾಪಂ । ನದ್ಯಃ । ವಹಂತಿ ।
ಲೋಪಾಶಃ । ಸಿಂಹಂ । ಪ್ರತ್ಯಂಚಂ । ಅತ್ಸಾರಿತಿ । ಕ್ರೋಷ್ಟಾ । ವರಾಹಂ । ನಿಃ । ಅತಕ್ತ । ಕಕ್ಷಾತ್ ॥ ೪

॥ ಸಾಯಣಭಾಷ್ಯಂ ॥

ಹೇ ಜರಿತಃ ಶತ್ರೂಣಾಂ ಜರಯಿತರಿಂದ್ರ ತ್ವಂ ಮೇ ಮಮ ಸು ಶೋಭನಮಿದಮೀದೃಶಂ ರೂಪಂ ಸಾಮರ್ಥ್ಯಮಾ ಚಿಕಿದ್ಧಿ । ಆ ಸಮಂತಾಜ್ಜಾನೀಹಿ । ಕೀದೃಶಂ । ನದ್ಯೋ ಗಂಗಾದ್ಯಾಃ ಸರಿತಃ ಪ್ರತೀಪಂ ಪ್ರತಿಕೂಲಂ ಶಾಪಮುದಕಂ ವಹಂತಿ । ಅಪಿ ಚ ಲೋಪಾಶಃ ಲುಪ್ಯಮಾನಂ ತೃಣಮಶ್ನಾತೀತಿ ಲೋಪಾಶೋ ಮೃಗಃ ಮಯಾ ಪ್ರೇಷಿತಃ ಸನ್ ಪ್ರತ್ಯಂಚಮಾತ್ಮಾನಂ ಪ್ರತಿ ಗಚ್ಛಂತಂ ಸಿಂಹಮತ್ಸಾಃ । ಅತ್ಸಾರೀತ್ । ಅಭಿಮುಖ್ಯೇನ ಗಚ್ಛತಿ । ತಥಾ ಕ್ರೋಷ್ಟಾ ಶೃಗಾಲೋ ವರಾಹಂ ಬಲವಂತಮಪಿ ಸೂಕರಂ ಕಕ್ಷಾದತಿಗಹನದೇಶಾನ್ನಿರತಕ್ತ । ನಿರ್ಗಮಯತಿ । ಏತದಪಿ ಸರ್ವಂ ಸಾಮರ್ಥ್ಯಂ ತ್ವತ್ಪುತ್ರೇ ಮಯಿ ತ್ವತ್ಪ್ರಸಾದಾಲ್ಲಬ್ಧಮಪಿ ಜಾನೀಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಜರಿತಃ—ಶತ್ರುನಾಶಕನಾದ ಎಲೈ ಇಂದ್ರನೇ (ಯಾವ ನನ್ನ ಸಾಮರ್ಥ್ಯದಿಂದ) । ನದ್ಯಃ—ಗಂಗಾದಿ ನದಿಗಳೂ । ಶಾಪಂ—ಉದಕವನ್ನು । ಪ್ರತೀಪಂ—ಹಿಂದಕ್ಕೆ ತಿರುಗಿದ ಪ್ರವಾಹವುಳ್ಳದ್ದಾಗಿ । ವಹಂತಿ—ವಹಿಸುವುವೋ । ಲೋಪಾಶಃ—ತೃಣವನ್ನು ಭಕ್ಷಿಸುವ ಮೃಗವು । ಪ್ರತ್ಯಂಚಂ—ತನ್ನ ಮೇಲೆ ಬೀಳುವ । ಸಿಂಹಂ—ಸಿಂಹವನ್ನು । ಅತ್ಸಾಃ—ಓಡಿಸಬಲ್ಲದೋ (ಮತ್ತು) । ಕ್ರೋಷ್ಟಾ—ನರಿಯು । ವರಾಹಂ—ಶಕ್ತಿಯುತವಾದ ಕಾಡುಹಂದಿಯನ್ನು । ಕಕ್ಷಾತ್—ಅದರ ಪೊದೆಯಿಂದ । ನಿರತಕ್ತ—ಹೊರಕ್ಕೆ ಓಡಿಸಬಲ್ಲುದೋ ಅಂತಹ । ಮೇ—ನನ್ನ । ಸು—ಶ್ರೇಷ್ಠವಾದ । ಇದಂ—ಈ ಸಾಮರ್ಥ್ಯವನ್ನು । ಆ ಚಿಕಿದ್ಧಿ—ತಿಳಿ.

। ಭಾವಾರ್ಥ ।

ವಸುಕ್ರ—ಶತ್ರುನಾಶಕನಾದ ಎಲೈ ಇಂದ್ರನೇ, ನಿನ್ನ ಪ್ರಸಾದದಿಂದ ಲಬ್ಧವಾದ ಯಾವ ನನ್ನ ಸಾಮರ್ಥ್ಯದ ಫಲವಾಗಿ ಗಂಗಾದಿನದಿಗಳೂ ತಮ್ಮ ಪ್ರವಾಹವನ್ನು ಹಿಂದಕ್ಕೆ ಹರಿಯುವಂತೆ ಮಾಡುವುವೋ, ಯಾವ ನನ್ನ ಸಾಮರ್ಥ್ಯದಿಂದ ತೃಣವನ್ನು ಭಕ್ಷಿಸುವ ಮೃಗವು ತನ್ನ ಮೇಲೆ ಬೀಳುವ ಸಿಂಹವನ್ನು ಓಡಿಸಬಲ್ಲುದೋ, ನರಿಯು ಶಕ್ತಿಯುತವಾದ ಕಾಡುಹಂದಿಯನ್ನು ದಟ್ಟವಾದ ಪೊದೆಯಿಂದ ಹೊರಕ್ಕೆ ಓಡಿಸಬಲ್ಲುದೋ ಆ ಶ್ರೇಷ್ಠವಾದ ನನ್ನ ಈ ಸಾಮರ್ಥ್ಯವನ್ನು ತಿಳಿ.

English Translation

Overcomer of foes, (Indra) be cognizant of this my (power, where-by) rivers bear their water backwards, and the eater of cut (grass) confronts the lion, the jackal dries the wild boar from his lair.

॥ ವಿಶೇಷವಿಷಯಗಳು ॥

**ಸೋಮೋ ಅಕ್ಷಾಃ**—ಅಕ್ಷಾಃ ಎಂಬ ಶಬ್ದದ ನಿರ್ವಚನವನ್ನು ಯಾಸ್ಕರು ಎರಡು ಉದಾಹರಣೆಗಳ ಮೂಲಕ ವಿವರಿಸಿದಾರೆ—

**ಸೋಮೋ ಅಕ್ಷಾಃ । ನ ಯಸ್ಯ ದ್ಯಾವಾಪೃಥಿವೀ ನ ಧನ್ವ ನಾಂತರಿಕ್ಷಂ ನಾದ್ರಯಃ ಸೋಮೋ ಅಕ್ಷಾಃ । ಅಶ್ನೋತೇರಿತ್ಯೇಕೇ । ಅನೂಪೇಗೋಮಾನ್ಗೋಭಿರಕ್ಷಾಃ । ಸೋಮೋ ದುಗ್ಧಾಭಿ ರಕ್ಷಾಃ । ಲೋಪಾಶಃ ಸಿಂಹಂ ಪ್ರತ್ಯಂಚ ಮತ್ಸಾಃ । ಕ್ಷಿಯತಿನಿಗಮಃ ಪೂರ್ವಃ ಕ್ಷರತಿನಿಗಮ ಉತ್ತರ ಇತ್ಯೇಕೇ ಅನೂಪೇ ಗೋಮಾನ್ಗೋಭಿರ್ಯದಾ ಕ್ಷಿಯಂತ್ಯಥ ಸೋಮೋ ದುಗ್ಧಾಭ್ಯಃ ಕ್ಷರತಿ ಸರ್ವೇ ಕ್ಷಿಯತಿನಿಗಮಾ ಇತಿ ಶಾಕಪೂಣಿಃ ॥** (ನಿ. ೫-೩)

ಕ್ಷಿ ವಾಸಮಾಡು ಎಂಬರ್ಥವುಳ್ಳ ಧಾತುವಿನಿಂದ ಅಕ್ಷಾಃ ಎಂಬ ಶಬ್ದವು ನಿಷ್ಪನ್ನವಾಗಿದೆ. ಕೆಲವರು ಹೋಗು ವ್ಯಾಪಿಸು ಎಂಬರ್ಥವುಳ್ಳ **ಅಶ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಹೇಳುತ್ತಾರೆ. ಇಲ್ಲಿ ಎರಡು ಶ್ರುತಿವಾಕ್ಯಗಳನ್ನು ಉದಾಹರಣೆಯಾಗಿಕೊಟ್ಟಿದೆ. ಮೊದಲನೆಯವಾಕ್ಯದಲ್ಲಿ **ಅಕ್ಷಾಃ** ಎಂಬ ಶಬ್ದಕ್ಕೆ ವಾಸಮಾಡುವುದೂ ಎಂಬರ್ಥವೂ ಎರಡನೆಯ ಉದಾಹರಣೆಯಲ್ಲಿ ಹರಿದುಹೋಗುವುದು ಎಂದರ್ಥವೂ ಸೂಚಿತವಾಗಿದೆ. ಈ ಎರಡು ಉದಾಹರಣೆಗಳಲ್ಲಿಯೂ **ಅಕ್ಷಾಃ** ಎಂಬ ಶಬ್ದಕ್ಕೆ ವಾಸಮಾಡು ಎಂಬರ್ಥವೇ ಸೂಚಿತವಾಗುವುದು ಎಂದು ಶಾಕಪೂಣಿ ಎಂಬ ಆಚಾರ್ಯರ ಮತವು.

। ಸಂಹಿತಾಪಾಠಃ ।

**ಕಥಾ ತ ಏತದಹಮಾ ಚಿಕೇತಂ ಗೃತ್ಸಸ್ಯ ಪಾಕಸ್ತವಸೋ ಮನೀಷಾಂ ।**

**ತ್ವಂ ನೋ ವಿದ್ವಾँ ಋತುಥಾ ವಿ ವೋಚೋ ಯಮರ್ಧಂ ತೇ ಮಘವನ್ಕ್ಷೇಮ್ಯಾ ಧೂಃ ॥ ೫ ॥**

॥ ಪದಪಾಠಃ ॥

ಕಥಾ । ತೇ । ಏತತ್ । ಅಹಂ । ಆ । ಚಿಕೇತಂ । ಗೃತ್ಸಸ್ಯ । ಪಾಕಃ । ತವಸಃ । ಮನೀಷಾಂ ।

ತ್ವಂ । ನಃ । ವಿದ್ವಾನ್ । ಋತುಽಥಾ । ವಿ । ವೋಚಃ । ಯಂ । ಅರ್ಧಂ । ತೇ । ಮಘಽವನ್ ।
ಕ್ಷೇಮ್ಯಾಃ । ಧೂಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪಾಕಃ ಪಕ್ತವ್ಯಪ್ರಜ್ಞೋಽಹಂ ಗೃತ್ಸಸ್ಯ ಮೇಧಾವಿನಸ್ತವಸೋ ವೃಕ್ಷಸ್ಯ ತೇ ತವ ಮನೀಷಾಂ ಸ್ತುತಿಂ । ಕರ್ತುಮಿತಿ ಶೇಷಃ । ಏತದೀದೃಶಂ ತ್ವದೀಯಂ ಸಾಮರ್ಥ್ಯಂ ಕಥಾ ಕಥಂ ಕೇನ ಪ್ರಕಾರೇಣಾ ಚಿಕೇತಂ । ಆ ಸಮಂತಾಜ್ಜಾನಾಮಿ । ತ್ವದುಪದೇಶಂ ವಿನಾ ನ ಜಾನಾಮೀತ್ಯರ್ಥಃ । ತಸ್ಮಾತ್ಕಾರಣಾದ್ವಿದ್ವಾನ್ ಸರ್ವಜ್ಞಸ್ತ್ವಮೇವ ನೋಽಸ್ಮಭ್ಯಮೃತುಥಾ ಕಾಲೇ ಕಾಲೇ ವಿ ವೋಚಃ । ವಿಶೇಷೇಣ ಬ್ರೂಹಿ । ಹೇ ಮಘವನ್ಧನವನ್ನಿಂದ್ರ ತೇ ತವಾರ್ಧಂ ಯಂ ಸ್ತುತ್ಯವಯವಂ ಕುರ್ಮಃ ಸಾ ಸ್ತುತಿರ್ಧೂಃ ಕ್ಷೇಮ್ಯಾ ಕ್ಷೇಮೇ ಭವಾ ಕ್ಲೇಶರಹಿತಾ ವೋಢುಂ ಶಕ್ಯಾಸ್ತಿ । ಯಸ್ಮಾತ್ತವ ಸ್ತುತ್ಯವಯವಮೇವ ವಯಮಕ್ಲೇಶೇನ ಕರ್ತುಂ ನ ಶಕ್ನುಮೋಽಸ್ಮಾಕಂ ಮಂದಬುದ್ಧಿತ್ವಾತ್ ತಸ್ಮಾತ್ತ್ವಮೇವಾಸ್ಮಭ್ಯಂ ಸ್ವಸಮಾರ್ಥ್ಯಂ ಸ್ತುತಿಪ್ರಕಾರಂ ಚ ಪುನರಪಿ ಕಥಯೇತ್ಯರ್ಥಃ ।

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಪಾಕಃ** ಪರಿಪಕ್ವವಿಲ್ಲದ ಬುದ್ಧಿಯುಳ್ಳ । **ಅಹಂ**—ನಾನು । **ಗೃತ್ಸಸ್ಯ**—ಮೇಧಾವಿಯೂ । **ತವಸಃ**—ಪ್ರವೃದ್ಧನೂ ಆದ **ತೇ**—ನಿನ್ನನ್ನುದ್ದೇಶಿಸಿದ । **ಮನೀಷಾಂ**—ಸ್ತುತಿಯನ್ನು ಅರ್ಪಿಸಲು । **ಏತತ್**—ನಿನ್ನ ಸಾಮರ್ಥ್ಯವನ್ನು । **ಕಥಾ**—ಯಾವ ಪ್ರಕಾರದಿಂದ । **ಆ ಚಿಕೇತಂ**—ಅರಿಯಬಲ್ಲೆನು? । **ವಿದ್ವಾನ್**—ಸರ್ವಜ್ಞನಾದ । **ತ್ವಂ**—ನೀನು । **ನಃ**—ನಮಗೆ । **ಋತುಥಾ**—ಆಯಾ ಕಾಲಕ್ಕೆ ಸರಿಯಾಗಿ । **ವಿ ವೋಚಃ**—ವಿವೇಕವನ್ನು ಹೇಳಿಕೊಡು । **ಮಘವನ್**—ಧನವಂತನಾದ ಎಲೈ ಇಂದ್ರನೇ । **ಯಂ ಅರ್ಧಂ**—ಯಾವ ಸ್ತುತಿಭಾಗವನ್ನು । **ತೇ**—ನಿನಗೆ ಅರ್ಪಿಸುವೆವೋ । **ಧೂಃ**—ಅದರ ಭಾರವು । **ಕ್ಷೇಮ್ಯಾಃ**—ವಹಿಸಲು ಕಷ್ಟವಿಲ್ಲದೆ ಇರುತ್ತದೆ.

॥ ಭಾವಾರ್ಥ ॥

ವಸುಕ್ರ—ಎಲೈ ಇಂದ್ರನೇ, ಪರಿಪಕ್ವವಿಲ್ಲದ ಬುದ್ಧಿಯುಳ್ಳ ನಾನು ಮೇಧಾವಿಯೂ, ಪ್ರವೃದ್ಧನೂ ಆದ ನಿನ್ನನ್ನುದ್ದೇಶಿಸಿದ ಸ್ತುತಿಯನ್ನು ಅರ್ಪಿಸಲು ನಿನ್ನ ಸಾಮರ್ಥ್ಯವನ್ನು ಯಾವ ಪ್ರಕಾರದಿಂದ ಅರಿಯಬಲ್ಲೆನು? ಸರ್ವಜ್ಞನಾದ ನೀನು ನಮಗೆ ಆಯಾ ಕಾಲಕ್ಕೆ ಸರಿಯಾಗಿ ವಿವೇಕವನ್ನು ಹೇಳಿಕೊಡು. ಧನವಂತನಾದ ಎಲೈ ಇಂದ್ರನೇ, ಯಾವ ಸ್ತುತಿಭಾಗವನ್ನು ನಿನಗೆ ಅರ್ಪಿಸುವೆವೋ ಆದರ ಭಾರವು ನಿನ್ನಿಂದ ವಹಿಸಲ್ಪಡಲು ಕಷ್ಟವಿಲ್ಲದೆ ಇರುತ್ತದೆ.

## English Translation

How Indra, should I, yet immature (in understanding), be capable of comprehending this (your power, so as to render fitting) praise to you who are wise and powerful? Therefore you who are all-knowing instruct us in fit season; the portion of your (praise), O Maghavan, which (we offer) is a burden easy to be borne.

। ಸಂಹಿತಾಪಾಠಃ ।

ಏವಾ ಹಿ ಮಾಂ ತವಸಂ ವರ್ಧಯಂತಿ ದಿವಶ್ಚಿನ್ಮೇ ಬೃಹತ ಉತ್ತರಾ ಧೂಃ ।
ಪುರೂ ಸಹಸ್ರಾ ನಿ ಶಿಶಾಮಿ ಸಾಕಮಶತ್ರುಂ ಹಿ ಮಾ ಜನಿತಾ ಜಜಾನ ॥

॥ ಪದಪಾಠಃ ॥

ಏವ । ಹಿ । ಮಾಂ । ತವಸಂ । ವರ್ಧಯಂತಿ । ದಿವಃ । ಚಿತ್ । ಮೇ । ಬೃಹತಃ । ಉತ್ऽತರಾ । ಧೂಃ ।
ಪುರು । ಸಹಸ್ರಾ । ನಿ । ಶಿಶಾಮಿ । ಸಾಕಂ । ಅಶತ್ರುಂ । ಹಿ । ಮಾ । ಜನಿತಾ । ಜಜಾನ ॥ ೬ ॥

। ಸಾಯಣಭಾಷ್ಯಂ ।

ಹಿ ಯಸ್ಮಾತ್ಕಾರಣಾದೇನ್ಯೈವಮುಕ್ತಪ್ರಕಾರೇಣ ತವಸಂ ಪ್ರವೃದ್ಧಂ ಮಾಂ ಸ್ತೋತಾರಃ ಸ್ತುತಿಭಿಃ ಸ್ತುವಂತೋ ವೀರ್ಯೇಣ ವರ್ಧಯಂತಿ ತಸ್ಮಾತ್ಕಾರಣಾದ್ಬೃಹತೋ ಮಹತೋ ಮೇ ಮಮೇಂದ್ರಸ್ಯ ದಿವಶ್ಚಿದ್ದ್ಯುಲೋಕಾದಪಿ ಧೂಃ ಸ್ತುತಿರುತ್ತರೋದ್ಗತತರಾಧಿಕತರಾ । ಕಿಂಚ ಪುರು ಪುರೂಣಿ ಬಹೂನಿ ಸಹಸ್ರಾ ಶತ್ರೂಣಾಂ ಸಹಸ್ರಾಣಿ ಸಾಕಂ ಯುಗಪನ್ನಿ ಶಿಶಾಮಿ । ತನೂಕರೋಮಿ । ನಸ್ಮೀತ್ಯರ್ಥಃ । ಹಿ ಯಸ್ಮಾತ್ಕಾರಣಾಜ್ಜನಿತಾ ಸರ್ವಸ್ಯ ಜನಯಿತಾ ಪ್ರಜಾಪತಿರ್ಮಾ ಮಾಮಿಂದ್ರಮಪ್ರಮವಿದ್ಯಮಾನಶತ್ರುಂ ಜಜಾನ ಜನಿತವಾನ್ ॥

। ಪ್ರತಿಪದಾರ್ಥ ।

ಹಿ- ಯಾವ ಕಾರಣದಿಂದ । **ಏವ**—ಹೀಗೆ । **ತವಸಂ**—ಪ್ರವೃದ್ಧನಾದ । **ಮಾಂ**—ನನ್ನನ್ನು । **ವರ್ಧಯಂತಿ**—ಸ್ತುತಿಕರ್ತರು ಪ್ರಶಂಸಿಸಿ ಪುಷ್ಟಿಗೊಳಿಸುವರೋ ಆ ಕಾರಣದಿಂದಲೇ । **ಬೃಹತಃ**—ಮಹತ್ಸ್ವರೂಪವುಳ್ಳ । **ಮೇ**—ನನ್ನನ್ನುದ್ದೇಶಿಸಿದ । **ಧೂಃ**—ಸ್ತುತಿಯು । **ದಿವಶ್ಚಿತ್**—ದ್ಯುಲೋಕಕ್ಕಿಂತಲೂ । **ಉತ್ತರಾ**—ಉನ್ನತತರವಾಗಿರುತ್ತದೆ । **ಹಿ**—ಯಾವ ಪ್ರಭಾವದಿಂದ । **ಜನಿತಾ**—ಉತ್ಪಾದಕನಾದ ಪ್ರಜಾಪತಿಯು । **ಮಾ**—

ನನ್ನನ್ನು । ಅಶತ್ರುಂ—ಶತ್ರುರಹಿತನನ್ನಾಗಿ । ಜಜಾನ—ಉತ್ಪನ್ನಮಾಡಿದ್ದಾನೆಯೋ ಆದುದರಿಂದಲೇ । ಪುರು— ಬಹುವಾದ । ಸಹಸ್ರಾ—ಸಹಸ್ರಸಂಖ್ಯೆಯುಳ್ಳ ಶತ್ರುಗಳನ್ನು । ಸಾಕಂ—ಒಟ್ಟಿಗೆ । ನಿ ಶಿಶಾಮಿ ನಾಶಮಾಡುತ್ತೇನೆ.

। ಭಾವಾರ್ಥ ।

ಇಂದ್ರ—ಯಾವ ನನ್ನ ಮಹತ್ವಕ್ಕಾಗಿ ಪ್ರಸಿದ್ಧನಾದ ನನ್ನನ್ನು ಸ್ತುತಿಕರ್ತರು ಪ್ರಶಂಸಿಸಿ ಪುಷ್ಟಿಗೊಳಿಸುವರೋ ಆ ಕಾರಣದಿಂದಲೇ ಮಹತ್ತ್ವಪೂರ್ಣನಾದ ನನ್ನನ್ನು ಪ್ರಶಂಸಿಸಿದ ಸ್ತುತಿಯು ದ್ಯುಲೋಕಕ್ಕಿಂತಲೂ ಉನ್ನತತರವಾಗಿರುತ್ತದೆ. ಯಾವ ಪ್ರಭಾವದಿಂದ ಜಗದುತ್ಪಾದಕನಾದ ಪ್ರಜಾಪತಿಯು ನನ್ನನ್ನು ಶತ್ರುರಹಿತನನ್ನಾಗಿ ಉತ್ಪನ್ನಮಾಡಿದ್ದಾನೆಯೋ ಆದುದರಿಂದಲೇ, ಅನೇಕ ಸಹಸ್ರಸಂಖ್ಯೆಯುಳ್ಳ ಶತ್ರುಗಳನ್ನು ಒಟ್ಟಿಗೆ ನಾಶಮಾಡುತ್ತೇನೆ.

English Translation

(Indra speaks :) Since (your laudations) thus increase my strength, (let) the praise of me who am mighty, (rise) even higher than the heavens. I destroy at once many thousands (of foes), for the generator (of all) has engendered me without an enemy.

। ಸಂಹಿತಾಪಾಠಃ ।

ಏವಾ ಹಿ ಮಾಂ ತವಸಂ ಜಜ್ಞುರುಗ್ರಂ ಕರ್ಮನ್ಕರ್ಮನ್ವೃಷಣಮಿಂದ್ರ ದೇವಾಃ ।
ವಧೀಂ ವೃತ್ರಂ ವಜ್ರೇಣ ಮಂದಸಾನೋಽಪ ವ್ರಜಂ ಮಹಿನಾ ದಾಶುಷೇ ವಂ ॥ ೭ ॥

। ಪದಪಾಠಃ ।

ಏವ । ಹಿ । ಮಾಂ । ತವಸಂ । ಜಜ್ಞುಃ । ಉಗ್ರಂ । ಕರ್ಮನ್ಽಕರ್ಮನ್ । ವೃಷಣಂ । ಇಂದ್ರ । ದೇವಾಃ ।
ವಧೀಂ । ವೃತ್ರಂ । ವಜ್ರೇಣ । ಮಂದಸಾನಃ । ಅಪ । ವ್ರಜಂ । ಮಹಿನಾ । ದಾಶುಷೇ । ವಂ ॥ ೭ ॥

। ಸಾಯಣಭಾಷ್ಯಂ ।

ಹಿ ಯಸ್ಮಾತ್ಕಾರಣಾದೇವಮನೇನೋಕ್ತಪ್ರಕಾರೇಣ ಹೇ ಇಂದ್ರ ದೇವಾ ಮರುದಾದಯ ಋತ್ವಿಗ್ಯಜಮಾನಾ ವಾ ತವಸಂ ಮಹಾಂತಂ ತ್ವತ್ಪುತ್ರಂ ತ್ವದ್ರೂಪೇಣಾವಸ್ಥಿತಂ ಸಂತಂ ವಸುಕ್ರಂ ಮಾಂ

ಕರ್ಮನ್ಕರ್ಮನ್ ವೃತ್ರವಧಾಗ್ನಿಹೋತ್ರಾದೌ ಸರ್ವಸ್ಮಿನ್ಕರ್ಮಣ್ಯುಗ್ರಂ ಶೂರಮುಸಹ್ಯಂ ವಾ ವೃಷಣಂ ವರ್ಷಿತಾರಂ ಹವಿಷಾಂ ದಾತಾರಂ ಜಜ್ಞುಃ ಜಾನಂತಿ ಅತೋ ಮಂದಸಾನೋ ಮೋದಮಾನೋಽಹಂ ವಜ್ರೇಣಾಯುಧೇನ ವೃತ್ರಂ ಮೇಘಾಸುರಂ ವಧೀಂ । ಅವಧಿಷಂ । ಕಿಂಚ ದಾಶುಷೇ ಹವಿರ್ದತ್ತವತೇ ಯಜಮಾನಾಯ ವೃಷ್ಟಿಪ್ರದಾನಾರ್ಥಂ ಮಹಿನಾ ಮಹತ್ತ್ವೇನ ವ್ರಜಂ ಮೇಘಸಮೂಹಮುಪ ವಂ । ಅಪಾವಂ । ಅಪವೃಣೋಮಿ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಹಿ—ಯಾವ ಕಾರಣದಿಂದ । ಏವ—ಹೀಗೆ । ದೇವಾಃ—ದೇವತೆಗಳು । ತವಸಂ—ಶಕ್ತಿಯುತನಾದ । ಮಾಂ—ನನ್ನನ್ನು । ಕರ್ಮನ್ ಕರ್ಮನ್—ಪ್ರತಿಯೊಂದು ಕರ್ಮದಲ್ಲಿಯೂ । ಉಗ್ರಂ—ಪ್ರಬಲನಾದ । ವೃಷಣಂ—ಹವಿರ್ದಾತನೆಂದು । ಜಜ್ಞುಃ—ಅರಿತಿರುವರೋ ಆದುದರಿಂದಲೇ । ಮಂದಸಾನಃ—ಹರ್ಷಯುಕ್ತನಾದ ನಾನು । ವಜ್ರೇಣ—ವಜ್ರಾಯುಧದಿಂದ । ವೃತ್ರಂ—ವೃತ್ರಾಸುರನನ್ನು । ವಧೀಂ—ನಾಶಮಾಡಿದ್ದೇನೆ । ದಾಶುಷೇ—ಯಜಮಾನನಿಗಾಗಿ । ಮಹಿನಾ—ಮಹತ್ವದಿಂದ । ವ್ರಜಂ—ಮೇಘಸಮೂಹವನ್ನು । ಅಪ ವಂ—ಸೀಳಿದ್ದೇನೆ.

॥ ಭಾವಾರ್ಥ ॥

ವಸುಕ್ರ—ಎಲೈ ಇಂದ್ರನೇ, ಯಾವ ಕಾರಣದಿಂದ ಹೀಗೆ ದೇವತೆಗಳು ಶಕ್ತಿಯುತನಾದ ನನ್ನನ್ನು ಪ್ರತಿಯೊಂದು ಕರ್ಮದಲ್ಲಿಯೂ ಪ್ರಬಲನಾದ ಹವಿರ್ದಾತನೆಂದು ಅರಿಯುವರೋ ಆದುದರಿಂದಲೇ, ಹರ್ಷಯುಕ್ತನಾದ ನಾನು ವಜ್ರಾಯುಧದಿಂದ ವೃತ್ರಾಸುರನನ್ನು ನಾಶಮಾಡಿದ್ದೇನೆ. ಯಜಮಾನನಿಗಾಗಿ ಮಹತ್ವದಿಂದ ಮೇಘಸಮೂಹವನ್ನು ಸೀಳಿದ್ದೇನೆ.

English Translation

Since, Indra, the gods have known me to be powerful, fierce in every act, the showerer (of oblations): exulting I have slain Vritra with your thunderbolt, and by my might have opened the clouds for the donor (of oblations).

॥ ಸಂಹಿತಾಪಾಠ ॥

ದೇವಾಸ ಆಯನ್ಪರಶೂಁರಭಿಭ್ರನ್ವನಾ ವೃಶ್ಚಂತೋ ಅಭಿ ವಿಡ್ಭಿರಾಯನ್ ।
ನಿ ಸುದ್ರ್ವಂ೧ದಧತೋ ವಕ್ಷಣಾಸು ಯತ್ರಾ ಕೃಪೀಟಮನು ತದ್ದಹಂತಿ ॥೮॥

। ಪದಪಾಠಃ ।

ದೇವಾಸಃ । ಆಯನ್ । ಪರಶೂನ್ । ಅಭಿಭ್ರನ್ । ವನಾ । ವೃಶ್ಚಂತಃ । ಅಭಿ । ವಿಟ್ಽಭಿಃ । ಆಯನ್ ।
ನಿ । ಸುಽದ್ರ್ವಂ । ದಧತಃ । ವಕ್ಷಣಾಸು । ಯತ್ರ । ಕೃಪೀಟಂ । ಅನು । ತತ್ । ದಹಂತಿ ॥ ೮ ॥

॥ ಸಾಯಣಭಾಷ್ಯಂ ॥

ದೇವಾಸೋ ದೇವಾ ಇಂದ್ರೇಣ ಚೋದಿತಾಃ ಸಂತ ಆಯನ್ । ಗಚ್ಛಂತಿ । ಮೇಘವಧಾರ್ಥಂ ಪರಶೂನ್ವಜ್ರಾನಬಿಭ್ರನ್ । ಧಾರಯಂತಿ ಚ । ತದನಂತರಂ ವಿಡ್ಭಿರ್ಮರುದಾದಿಪ್ರಜಾಭಿಃ ಸಹಿತಾ ವೃಶ್ಚಂತೋ ಮೇಘಾಂಶ್ಛಿಂದಂತೋ ವನಾ ವನಾನಿ ವೃಷ್ಟಿಲಕ್ಷಣಾನ್ಯುದಕಾನ್ಯಭ್ಯಾಯನ್ । ಅಭಿಮುಖ್ಯೇನ ಗಚ್ಛಂತಿ । ತತಃ ಸುದ್ರ್ವಂ ಶೋಭನಪ್ರವಣಂ ವೃಷ್ಟ್ಯುದಕಂ ವಕ್ಷಣಾಸು ನದೀಷು ನಿ ದಧತೋ ನಿಯಮೇನ ಸ್ಥಾಪಯಂತೋ ಯತ್ರ ಯಸ್ಮಿನ್ಮೇಘಜಾತೇ ಕೃಪೀಟಂ ಉದಕನಾಮೈತತ್ । ನಿಗೂಢಮುದಕಂ ತಿಷ್ಠತಿ ತ ಇಮೇ ದೇವಾಸ್ತನ್ಮೇಘಜಾತಮನು ಲಕ್ಷೀಕೃತ್ಯ ದಹಂತಿ ಉದಕನಿರ್ಗಮನಾರ್ಥಂ ಶೋಷಯಂತಿ ॥

॥ ಪ್ರತಿಪದಾರ್ಥ ॥

ದೇವಾಸಃ—ದೇವತೆಗಳು । **ಆಯನ್**—ಬಂದಿದ್ದಾರೆ । **ಪರಶೂನ್**—ತಮ್ಮ ಆಯುಧಗಳನ್ನು । **ಅಭಿಭ್ರನ್**—ಧರಿಸಿದ್ದಾರೆ । **ವಿಡ್ಭಿಃ**—ಮರುದಾದಿ ಪ್ರಜೆಗಳೊಂದಿಗೆ ಕೂಡಿ । **ವೃಶ್ಚಂತಃ**—ಮೇಘಗಳನ್ನು ಸೀಳುತ್ತ । **ವನಾ**—ಉದಕಗಳನ್ನು । **ಅಭ್ಯಾಯನ್**—ಎದುರುಗೊಳ್ಳುತ್ತಾರೆ (ಸುರಿಸುತ್ತಾರೆ) । **ಸುದ್ರ್ವಂ**—ಉತ್ತಮವಾದ ಉದಕವನ್ನು । **ವಕ್ಷಣಾಸು**—ನದಿಗಳಲ್ಲಿ । **ನಿ ದಧತಃ**—ಸ್ಥಾಪಿಸಿದ್ದಾರೆ । **ಯತ್ರ**—ಯಾವ ಮೇಘಗಳ ಗುಂಪಿನಲ್ಲಿ । **ಕೃಪೀಟಂ**—ಉದಕವಿರುವುದೋ । **ತತ್ ಅನು**—ಅದನ್ನು ಲಕ್ಷ್ಯದಲ್ಲಿಟ್ಟು । **ದಹಂತಿ**—ಉದಕಾರ್ಥವಾಗಿ ಶೋಷಿಸುತ್ತಾರೆ.

॥ ಭಾವಾರ್ಥ ॥

ಇಂದ್ರ-ನನ್ನ ಪ್ರೇರಣೆಯಿಂದ ದೇವತೆಗಳು ಬಂದಿದ್ದಾರೆ. ತಮ್ಮ ಆಯುಧಗಳನ್ನು ಧರಿಸಿದ್ದಾರೆ. ಮರುದಾದಿ ಪ್ರಜೆಗಳೊಂದಿಗೆ ಕೂಡಿ ಮೇಘಗಳನ್ನು ಸೀಳುತ್ತಾ ಉದಕಗಳನ್ನು ಎದುರುಗೊಳ್ಳುತ್ತಾರೆ. ಉತ್ತಮವಾದ ಉದಕಗಳನ್ನು ನದಿಗಳಲ್ಲಿ ಸ್ಥಾಪಿಸಿದ್ದಾರೆ. ಯಾವ ಮೇಘಗಳ ಗುಂಪಿನಲ್ಲಿ ಉದಕವಿರುವುದೋ, ಅದನ್ನು ಲಕ್ಷ್ಯದಲ್ಲಿಟ್ಟು ಉದಕಾರ್ಥವಾಗಿ ಶೋಷಿಸುತ್ತಾರೆ.

## English Translation

The gods came, they bare their axes; clearing the woods, they came with men in front of the waters: depositing (the tree) of good wood in the belly (of the river), where the underwood (is), they burnt it up.

॥ ಸಂಹಿತಾಪಾಠಃ ॥

**ಶಶಃ ಕ್ಷುರಂ ಪ್ರತ್ಯಂಚಂ ಜಗಾರಾದ್ರಿಂ ಲೋಗೇನ ವ್ಯಭೇದಮಾರಾತ್ ।**

**ಬೃಹಂತಂ ಚಿದೃಹತೇ ರಂಧಯಾನಿ ವಯದ್ವತ್ಸೋ ವೃಷಭಂ ಶೂಶುವಾನಃ ॥**

। ಪದಪಾಠಃ ।

ಶಶಃ । ಕ್ಷುರಂ । ಪ್ರತ್ಯಂಚಂ । ಜಗಾರ । ಅದ್ರಿಂ । ಲೋಗೇನ । ವಿ । ಅಭೇದಂ । ಆರಾತ್ ।

ಬೃಹಂತಂ । ಚಿತ್ । ಋಹತೇ । ರಂಧಯಾನಿ । ವಯತ್ । ವತ್ಸಃ । ವೃಷಭಂ । ಶೂಶುವಾನಃ ॥ ೯ ॥

। ಸಾಯಣಭಾಷ್ಯಂ ।

ವಸುಕ್ರ ಇಂದ್ರಂ ಪ್ರತಿಬ್ರೂತೇ । ಶಶ ಏತತ್ಸಂಜ್ಞಿತೋ ಮಯಾ ಪ್ರೇರಿತೋ ಮೃಗವಿಶೇಷಃ ಪ್ರತ್ಯಂಚಂ ವಧಾಯಾತ್ಮಾನಂ ಪ್ರತಿ ಗಚ್ಛಂತಂ ಕ್ಷುರಂ ಕ್ಷುರವಂತಂ ದೃಢದೀರ್ಘತೀಕ್ಷ್ಣನಖಂ ಸಿಂಹ-ವ್ಯಾಘ್ರಾದಿಕಂ । ಬಲವತ್ಕ್ರೂರಮೃಗಮಿತ್ಯರ್ಥಃ । ಜಗಾರ । ಗಿರತಿ ಗೃಹ್ಣಾತಿ ವಾ । ಕಿಂಚ ಲೋಗೇನ ಲೋಷ್ಟೇನಾದ್ರಿಂ ಹಿಮವದಾದಿಕಂ ಪರ್ವತಮಾರಾದ್ದೂರೇ ಸ್ಥಿತಮಪಿ ವ್ಯಭೇದಂ । ಅಹಂ ಭಿನದ್ಮಿ । ಬೃಹಂತಂ ಚಿನ್ಮಹಾಂತಮಪಿ ಹಸ್ತ್ಯಾದಿಕಮೃಹತೇ ಹ್ರಸ್ವಕಾಯಾಲ್ಪಾಯ ಶಶಕಾದಿಕಾಯ ರಂಧಯಾನಿ । ವಶಂ ಗಮಯಾನಿ । ಶೂಶುವಾನೋ ವೀರ್ಯೇಣ ವರ್ಧಮಾನೋ ವತ್ಸೋ ವೃಷಭಂ ಮಹೋಕ್ಷಂ ವಯತ್ । ಯುದ್ಧಾಯ ಗಚ್ಛತಿ । ಹೇ ಇಂದ್ರ ಏತದಪಿ ಸರ್ವಂ ತ್ವತ್ಪ್ರಸಾದಾದಹಂ ಕರೋಮೀತ್ಯರ್ಥಃ ॥

। ಪ್ರತಿಪದಾರ್ಥ ।

ಶಶಃ—ಮೊಲವು । ಪ್ರತ್ಯಂಚಂ—ತನ್ನೆದುರುಬೀಳುವ । ಕ್ಷುರಂ—ತೀಕ್ಷ್ಣನಖಗಳುಳ್ಳ ಸಿಂಹಾದಿಗಳನ್ನು । ಜಗಾರ—ಹಿಡಿಯುತ್ತದೆ । ಆರಾತ್—ದೂರದಲ್ಲಿದ್ದರೂ । ಅದ್ರಿಂ—ಪರ್ವತವನ್ನು । ಲೋಗೇನ—ಲೋಷ್ಟದಿಂದಲೇ (ಮಣ್ಣಿನಹೆಂಟೆಯಿಂದಲೇ) । ವ್ಯಭೇದಂ—ನಾನು ಸೀಳಬಲ್ಲೆ । ಬೃಹಂತಂ ಚಿತ್—ದೊಡ್ಡ ಆಕಾರವುಳ್ಳ ಪ್ರಾಣಿಯನ್ನು । ಋಹತೇ—ಅಲ್ಪಾಕಾರವುಳ್ಳ ಪ್ರಾಣಿಗೆ । ರಂಧಯಾನಿ—ವಶವಾಗುವಂತೆ ಮಾಡಬಲ್ಲೆನು । ಶೂಶುವಾನಃ—ವೀರ್ಯದಿಂದ ಪುಷ್ಟವಾದ । ವತ್ಸಃ—ಚಿಕ್ಕ ಕರುವು । ವೃಷಭಂ—ದೊಡ್ಡ ಎತ್ತನ್ನು । ವಯತ್—ಎದುರಿಸಿ ಹೋರಾಡಬಲ್ಲದು.

।। ಭಾವಾರ್ಥ ।।

ವಸುಕ್ರ—(ಇಂದ್ರನ ಪ್ರಸಾದವೊಂದಿದ್ದರೆ) ಮೊಲವು ತನ್ನೆದುರು ಬಿಳುವ ತೀಕ್ಷ್ಣನಖಗಳುಳ್ಳ ಸಿಂಹಾದಿಗಳನ್ನು ಹಿಡಿಯಬಲ್ಲದು. ದೂರದಲ್ಲಿದ್ದರೂ ಪರ್ವತವನ್ನು ಸಣ್ಣ ಮಣ್ಣಿನಹೆಂಟೆಯಿಂದ ನಾನು ಸೀಳುಬಲ್ಲೆ. ದೊಡ್ಡ ಆಕಾರವುಳ್ಳ ಪ್ರಾಣಿಯನ್ನು ಅಲ್ಪಾಕಾರವುಳ್ಳ ಪ್ರಾಣಿಗೆ ವಶವಾಗುವಂತೆ ಮಾಡಬಲ್ಲೆನು. ವೀರ್ಯದಿಂದ ಪುಷ್ಟವಾದ ಕ್ಷಿಕರುವು ದೊಡ್ಡ ಎತ್ತನ್ನು ಎದುರಿಸಿ ಹೊಡೆಯಬಲ್ಲದು. (ಹೋರಾಡಬಲ್ಲುದು)

## English Translation

(Vasukra speaks:) The hare grasps the assailing beast of prey: ..ith a clod of clay I cleave the distant (mountain): I can compel the great to submit to the small: swelling (with courage) the calf attacks the bull.

॥ ಸಂಹಿತಾಪಾಠಃ ॥

ಸುಪರ್ಣ ಇತ್ಥಾ ನಖಮಾ ಸಿಷಾಯಾವರುದ್ಧಃ ಪರಿಪದಂ ನ ಸಿಂಹಃ ।
ನಿರುದ್ಧಶ್ಚಿನ್ಮಹಿಷಸ್ತರ್ಷ್ಯಾವಾನ್ಗೋಧಾ ತಸ್ಮಾ ಅಯಥಂ ಕರ್ಷದೇತತ್ ॥

॥ ಪದಪಾಠಃ ॥

ಸುಽಪರ್ಣಃ । ಇತ್ಥಾ । ನಖಂ । ಆ । ಸಿಸಾಯ । ಅವಽರುದ್ಧಃ । ಪರಿಽಪದಂ । ನ । ಸಿಂಹಃ ।
ನಿಽರುದ್ಧಃ । ಚಿತ್ । ಮಹಿಷಃ । ತರ್ಷ್ಯಾಽವಾನ್ । ಗೋಧಾ । ತಸ್ಮೈ । ಅಯಥಂ । ಕರ್ಷತ್ ।
ಏತತ್ ॥ ೧೦ ॥

॥ ಸಾಯಣಭಾಷ್ಯಂ ॥

ಸುಪರ್ಣಃ ಪಕ್ಷಿರೂಪಾ ಗಾಯತ್ರೀತ್ಥಾಮುತ್ರ ದ್ಯುಲೋಕೇ ನಖಮಾತ್ಮೀಯಮಾ ಸಿಷಾಯ । ಸೋಮಾಹರಣಕಾಲ ಇಂದ್ರಾರ್ಥಮಾಬಬಂಧ । ಇಂದ್ರಸ್ಯ ಪ್ರಸಾದಾದ್ಧಿಪಿ ಪದಂ ನ್ಯಸ್ತವತೀತ್ಯರ್ಥಃ । ತತ್ರ ದೃಷ್ಟಾಂತಃ । ಅವರುದ್ಧಃ ಪಂಜರೇಣಾವೃತಃ ಪರಿವೇಷ್ಟಿತಃ ಸಿಂಹಃ ಪರಿಪದಂ ನ । ಯಥಾ ಕರಸ್ಯೋಪರಿ ಸರ್ವತಃ ಪಾದಮವಬಧ್ನಾತಿ । ಕಿಂಚ । ಚಿದಿತ್ಯುಪಮಾರ್ಥೇ । ಯಥಾ ಕೇನಾಪಿ ಬದ್ಧಪಾದೋ ನಿರುದ್ಧೋ ಮಹಿಷಸ್ತರ್ಷ್ಯಾವಾನುದಕಾಭಾವೇ ತೃಷಾವಾನ್ಭವತಿ ಏವಮಿಂದ್ರಃ ಸೋಮಾಹರಣಾತ್ಪೂರ್ವಂ ಸೋಮಾಭಾವೇ ತೃಷಿತವಾನಭೂದಿತಿ ಶೇಷಃ । ತಸ್ಮೈ । ತಾದರ್ಥ್ಯೇ ಚತುರ್ಥೀ । ತಾದೃಶಸ್ಯ ತೃಷಿತಸ್ಯೇಂದ್ರಸ್ಯಾರ್ಥಂ ಗೋಧಾ । ಗಮಯತಿ ವರ್ಣಾನಿತಿ ಗೌರ್ವಾಕ್ ತತ್ರ ನಿಧೀಯಮಾನತ್ವಾದ್ಗಾಯತ್ರೀ ಗೋಧಾ । ಯದ್ವಾ । ಗುಧಿರ್ನಿಷ್ಕರ್ಷಣಾರ್ಥಃ । ನಿಷ್ಕೃಷ್ಯ ಸೋಮಾಹರಣಾದ್ಗೋಧಾ ಗಾಯತ್ರೀ । ಅಯಥಮಯತ್ನೇನ । ಲೀಲಯೇತ್ಯರ್ಥಃ । ಏತತ್ಸೋಮಜಾತಂ ಕರ್ಷತ್ । ಆಕೃಷ್ಟವತೀ । ದಿವಃ ಸಕಾಶಾದಾಹೃತವತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಅವರುದ್ಧಃ—ಪಂಜರದಲ್ಲಿ ಬಂಧಿತವಾದ । ಸಿಂಹಃ ನ ಪರಿಪದಂ—ಸಿಂಹವು ಒಂದು ಕಾಲಿನಮೇಲೆ ಇನ್ನೊಂದು ಕಾಲನ್ನು ಇಟ್ಟುಕೊಳ್ಳುವಂತೆ । ಸುಪರ್ಣಃ—ಪಕ್ಷಿಯು (ಗಾಯತ್ರಿಯು) । ಇತ್ಥಾ—ದ್ಯುಲೋಕದಲ್ಲಿ । ನಖಂ—ತನ್ನ ನಖವನ್ನು । ಆ ಸಿಷಾಯ—ಇಟ್ಟಿತು । ನಿರುದ್ಧಃ—ಕಟ್ಟಿಹಾಕಿದ । ಮಹಿಷಃ—ಎಮ್ಮೆಯು । ತರ್ಷ್ಯಾವಾನ್—ಬಾಯಾರಿಕೆಯಿಂದ ಬಳಲುವಂತೆ (ಇಂದ್ರನು ಸೋಮಾಭಾವದಿಂದ ಬಳಲಿದನು) । ತಸ್ಮೈ—ಆ ಇಂದ್ರಾರ್ಥವಾಗಿ । ಗೋಧಾ—ಗಾಯತ್ರಿಯು । ಅಯಥಂ—ಶ್ರಮವಿಲ್ಲದೇ । ಏತತ್—ಈ ಸೋಮವನ್ನು । ಕರ್ಷತ್—ಅಪಹರಿಸಿಕೊಂಡು ಬಂದಿತು.

॥ ಭಾವಾರ್ಥ ॥

ಇಂದ್ರ—ಪಂಜರದಲ್ಲಿ ಬಂಧಿತವಾದ ಸಿಂಹವು ಒಂದು ಕಾಲಿನ ಮೇಲೆ ಇನ್ನೊಂದು ಕಾಲನ್ನು ಇಟ್ಟುಕೊಳ್ಳುವಂತೆ ಪಕ್ಷಿರೂಪವಾದ ಗಾಯತ್ರಿಯು ದ್ಯುಲೋಕದಲ್ಲಿ ತನ್ನ ನಖವನ್ನು ಇಟ್ಟಿತು. ಕಟ್ಟಿಹಾಕಿದ ಎಮ್ಮೆಯು

ಬಾಯಾರಿಕೆಯಿಂದ ಬಳಲುವಂತೆ ಇಂದ್ರನು ಸೋಮಾಭಾವದಿಂದ ಬಳಲಿದನು. ಆ ಇಂದ್ರಾರ್ಥವಾಗಿ ಗಾಯತ್ರಿಯು ಶ್ರಮವಿಲ್ಲದೇ ಈ ಸೋಮವನ್ನು ಅಪಹರಿಸಿಕೊಂಡು ಬಂದಿತು.

## English Translation

The hawk has fastened her claw in heaven : as a lion confined (in a cage) places one foot over the other. As a captivc buffalo (is) thirsty, (so) Indra thirsted for the Soma, Gayatri brought it to him easily (from heaven)

॥ ಸಂಹಿತಾಪಾಠಃ ॥

ತೇಭ್ಯೋ ಗೋಧಾ ಅಯಥಂ ಕರ್ಷದೇತದ್ಯೇ ಬ್ರಹ್ಮಣಃ ಪ್ರತಿಪೀಯಂತ್ಯನ್ನೈಃ ।
ಸಿಮ ಉಕ್ಷ್ಣೋಽವಸೃಷ್ಟಾಁ ಅದಂತಿ ಸ್ವಯಂ ಬಲಾನಿ ತನ್ವಃ ಶೃಣಾನಾಃ ॥೧೧॥

॥ ಪದಪಾಠಃ ॥

ತೇಭ್ಯಃ । ಗೋಧಾ । ಅಯಥಂ । ಕರ್ಷತ್ । ಏತತ್ । ಯೇ । ಬ್ರಹ್ಮಣಃ । ಪ್ರತಿಽಪೀಯಂತಿ । ಅನ್ನೈಃ ।
ಸಿಮಃ । ಉಕ್ಷ್ಣಃ । ಅವಽಸೃಷ್ಟಾನ್ । ಅದಂತಿ । ಸ್ವಯಂ । ಬಲಾನಿ । ತನ್ವಃ । ಶೃಣಾನಾಃ ॥ ೧೧ ॥

॥ ಸಾಯಣಭಾಷ್ಯಂ ॥

ಯೇ ಮರುದಾದಿದೇವಗಣಾ ಬ್ರಹ್ಮಣಃ ಪರಿವೃಢಸ್ಯೇಂದ್ರಸ್ಯ ಸ್ವಭೂತೈರನ್ನೈಃ ಸೋಮಾಖ್ಯೈಃ । ತೃಪ್ತಾಃ ಸಂತಿ ಇತಿ ಶೇಷಃ । ಪ್ರತಿಪೀಯಂತಿ । ಪೀಯತಿರ್ಹಿಂಸಾಕರ್ಮಾ । ಇಂದ್ರಾದೇಶಾದ್ಧಿಂಸಕಾನ್ಪ್ರತಿಹಿಂಸಂತಿ ತೇಭ್ಯಸ್ತೇಷಾಂ ದೇವಗಣಾನಾಮರ್ಥಾಯ ಗೋಧಾಃ ಪೂರ್ವೋಕ್ತಾ ಗಾಯತ್ರ್ಯಯಥಮನಾಯಾಸೇನೈತತ್ಸೋಮಜಾತಂ ಕರ್ಷತ್ । ಆಕೃಷ್ಟವತೀ । ಕಿಂಚ ಸಿಮಃ ಸಿಮಾಞ್ಛ್ರೇಷ್ಠಾನ್ । ಯದ್ವಾ । ಸಿಮಶಬ್ದಃ ಸರ್ವಶಬ್ದಪರ್ಯಾಯಃ । ಸರ್ವಾನ್ । ಉಕ್ಷ್ಣಃ ಸಿಂಚತೋಽವಸೃಷ್ಟಾನಿಂದ್ರೇಣ ನಿಸೃಷ್ಟಾನನುಜ್ಞಾತಾನ್ಸ್ವವಿಭೂತಾನ್ಸೋಮಾನ್ಯಜ್ಞೇಷ್ವದಂತಿ । ಭಕ್ಷಯಂತಿ । ಕಿಂ ಕುರ್ವಂತಃ । ಸ್ವಯಮಾತ್ಮನೈವ ಬಲಾನಿ ಶತ್ರೂಣಾಂ ಸೈನ್ಯಾನಿ ತನ್ವಃ ಶರೀರಾಣಿ ಚ ಶೃಣಾನಾ ಹಿಂಸಂತಃ । ಗಾಯತ್ರೀಂದ್ರಾದೇಶಾದ್ದೇವೇಭ್ಯಃ ಸೋಮಮಾಹೃತವತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಯೇ—ಯಾವ ಮರುದಾದಿದೇವತೆಗಳು । ಬ್ರಹ್ಮಣಃ—ಪುಷ್ಟನಾದ ಇಂದ್ರನ । ಅನ್ನೈಃ—ಸೋಮರೂಪವಾದ ಅನ್ನಗಳಿಂದ ತುಷ್ಟರಾಗಿ । ಪ್ರತಿಪೀಯಂತಿ—ಶತ್ರುಗಳನ್ನು ಹಿಂಸಿಸಬಲ್ಲರೋ । ತೇಭ್ಯಃ—ಅವರಿಗಾಗಿ ।

**ಗೋಧಾಃ**—ಗಾಯತ್ರಿಯು । **ಅಯಥಂ**—ಶ್ರಮಪಿಲ್ಲದೆ । **ಏತತ್**—ಈ ಸೋಮವನ್ನು । **ಕರ್ಷತ್**—ಅಪಹರಿಸಿ ಕೊಂಡು ಬಂದಿತು । **ಸ್ವಯಂ**—ಸ್ವಶಕ್ತಿಯಿಂದಲೇ । **ಬಲಾನಿ**—ಶತ್ರುಸೈನ್ಯಗಳನ್ನೂ । **ತನ್ವಃ**—ಶತ್ರುಜನರ ಶರೀರಗಳನ್ನೂ । **ಶೃಣಾನಾಃ**—ಹಿಂಸಿಸುತ್ತ । **ಅವಸೃಷ್ಟಾನ್**—ಇಂದ್ರನು ಪಾನಮಾಡಿದನಂತರ ಉಳಿಯುವವೂ । **ಉಕ್ಷ್ಣಃ**—ಪ್ರವಹಿಸುವುವೂ ಆದ **ಸಿಮಾನ್**—ಎಲ್ಲ ಸೋಮರಸಗಳನ್ನೂ । **ಅದಂತಿ**—ಭಕ್ಷಿಸುತ್ತಾರೆ.

॥ ಭಾವಾರ್ಥ ॥

ಯಾರು—ಯಾವ ಯಾಗಾದಿದೇವತೆಗಳು ತೃಪ್ತನಾದ ಇಂದ್ರನ ಸೋಮರೂಪವಾದ ಅನ್ನಗಳಿಂದ ತುಷ್ಟರಾಗಿ ಶತ್ರುಗಳನ್ನು ಹಿಂಸಿಸುತ್ತಿದ್ದರೋ, ಅವರಿಗಾಗಿ ಗಾಯತ್ರಿಯು ಶ್ರಮವಿಲ್ಲದೇ ಈ ಸೋಮವನ್ನು ಅಪಹರಿಸಿ ಕೊಂಡು ಬಂದಿತು. ಸ್ವಶಕ್ತಿಯಿಂದಲೇ ಶತ್ರುಸೈನ್ಯಗಳನ್ನೂ, ಶತ್ರುಜನರ ಶರೀರಗಳನ್ನೂ ಹಿಂಸಿಸುತ್ತ (ಇಂದ್ರನು ಪಾನಮಾಡಿದನಂತರ) ಉಳಿಯುವುವೂ, ಪ್ರವಹಿಸುವುವೂ ಆದ ಎಲ್ಲ ಸೋಮರಸಗಳನ್ನು ಪಾನಮಾಡುತ್ತಾರೆ.

## English Translation

Gayatri drew it away without difficulty, for the good of those (gods) who, (satisfied) with the viands of Indra, retaliate the injuries (of the enemies of the gods): they devour all the sprinkling (Soma libations) left (by Indra), spontaneously destroying the armies and bodies (of the enemy).

॥ ಸಂಹಿತಾಪಾಠಃ ॥

ಏತೇ ಶಮೀಭಿಃ ಸುಶಮೀ ಅಭೂವನ್ಯೇ ಹಿನ್ವಿರೇ ತನ್ವ೧ಃ ಸೋಮ ಉಕ್ಥೈಃ।
ನೃವದ್ವದನ್ನುಪ ನೋ ಮಾಹಿ ವಾಜಾನ್ದಿವಿ ಶ್ರವೋ ದಧಿಷೇ ನಾಮ ವೀರಃ ॥ ೧೨ ॥

॥ ಪದಪಾಠಃ ॥

ಏತೇ । ಶಮೀಭಿಃ । ಸುಽಶಮೀ । ಅಭೂವನ್ । ಯೇ । ಹಿನ್ವಿರೇ । ತನ್ವಃ । ಸೋಮೇ । ಉಕ್ಥೈಃ ।
ನೃಽವತ್ । ವದನ್ । ಉಪ । ನಃ । ಮಾಹಿ । ವಾಜಾನ್ । ದಿವಿ । ಶ್ರವಃ । ದಧಿಷೇ । ನಾಮ । ವೀರಃ ॥ ೧೨ ॥

॥ ಸಾಯಣಭಾಷ್ಯಂ ॥

ಯೇ ದೇವಾ ಋಭ್ವಾದಯಸ್ತನ್ವಃ ಶರೀರಾಣಿ ಸೋಮೇ ಸೋಮಯಾಗ ಉಕ್ಥೈಃ ಶಸ್ತ್ರೈರ್ಹಿನ್ವಿರೇ ವರ್ಧಯಂತಿ ಏತೇ ದೇವಾದಯ ಇಂದ್ರಾದೇಶಾತ್ಸೋಮ ಅಧೃತೇ ಸತಿ ಶಮೀಭಿಃ ಸೋಮಯಾಗ-

ಕರ್ಮಭಿಃ ಸುಶಮಿಾ ಸುಕರ್ಮಾಣೋऽಭೂವನ್ । ನೃವನ್ಮನುಷ್ಯವದ್ವದನ್ ಇದಂ ಯುಷ್ಮಭ್ಯಂ ಮಯಾ ದತ್ತಮಿತಿ ವ್ಯಕ್ತಾಂ ವಾಚಮುಚ್ಚಾರಯನ್ ನೋऽಸ್ಮಭ್ಯಮುಪ ಮಾಹಿ । ಉಪಗಮ್ಯ ವಾಜಾನನ್ನಾನಿ ಬಲಾನಿ ವಾ ಹೇ ಇಂದ್ರ ತ್ವಂ ದೇಹೀತಿ ಶೇಷಃ । ಅತಃ ಕಾರಣಾದ್ವೀರೋ ದಾನಶೂರಸ್ತ್ವಂ ದಿವಿ ದ್ಯುಲೋಕೇ ಶ್ರವೋ ದಾನಪತಿರಿತಿ ಕೀರ್ತಿತಂ ನಾಮ ನಾಮಧೇಯಂ ದಧಿಷೇ । ಧಾರಯಸಿ ॥

॥ ಪ್ರತಿಪದಾರ್ಥ ॥

**ಯೇ**—ಯಾರು । **ತನ್ವಃ**—ತಮ್ಮ ಶರೀರಗಳನ್ನು । **ಸೋಮೇ**—ಸೋಮಯಾಗದಲ್ಲಿ । **ಉಕ್ಥೈಃ**—ಶಸ್ತ್ರಮಂತ್ರಗಳಿಂದ । **ಹಿನ್ವಿರೇ**—ಪುಷ್ಟಿಗೊಳಿಸುವರೋ । **ಏತೇ**—ಅವರೆಲ್ಲರೂ । **ಶಮಿಾಭಿಃ**-ಸೋಮಯಾಗಕರ್ಮಗಳಿಂದ । **ಸುಶಮಾ**—ಉತ್ತಮವಾದ ಕರ್ಮವುಳ್ಳವರಾಗಿ । **ಅಭೂವನ್**—ಆದರು (ಎಲೈ ಇಂದ್ರನೇ) । **ನೃವತ್**—ಮಾನವರಂತೆ । **ವದನ್**—ಮಾತನಾಡುತ್ತ । **ನಃ**—ನಮ್ಮನ್ನು । **ಉಪ ಮಾಹಿ**—ಸಮಿಾಪಿಸಿ । **ವಾಜಾನ್**—ಅನ್ನಗಳನ್ನು ಕೊಡು । **ವೀರಃ**—ಶೂರನಾದ ನೀನು । **ದಿವಿ**—ದ್ಯುಲೋಕದಲ್ಲಿ । **ಶ್ರವಃ**—ಕೀರ್ತಿಯುತವಾದ । **ನಾಮ**—ಹೆಸರನ್ನು । **ದಧಿಷೇ**—ಧರಿಸಿದ್ದೀಯೆ.

। ಭಾವಾರ್ಥ ।

ಇಂದ್ರ—ಯಾವ ಯಜ್ಞಕರ್ತರು ತಮ್ಮ ಶರೀರಗಳನ್ನು ಸೋಮಯಾಗದಲ್ಲಿ ಶಸ್ತ್ರಮಂತ್ರಗಳಿಂದ ಪುಷ್ಟಿಗೊಳಿಸುವರೋ ಅವರೆಲ್ಲರೂ ಸೋಮಯಾಗಕರ್ಮಗಳಿಂದ ಉತ್ತಮವಾದ ಕರ್ಮವುಳ್ಳವರಾಗಿ ಆದರು. ಎಲೈ ಇಂದ್ರನೇ, ನೀನು ಮಾನವರಂತೆ ಮಾತನಾಡುತ್ತ ನಮ್ಮನ್ನು ಸಮಿಾಪಿಸಿ ಅನ್ನಗಳನ್ನುಕೊಡು. ಶೂರನಾದ ನೀನು ದ್ಯುಲೋಕದಲ್ಲಿ ಕೀರ್ತಿಯುತವಾದ ಹೆಸರನ್ನು ಧರಿಸಿದ್ದೀಯೆ.

## English Translation

They have been sanctified by holy rites, who have fostered their bodies with prayers, at the Soma (sacrifice): speaking like a man, grant us food, you possess in heaven name and fame as a hero.



## ಇಪ್ಪತ್ತೊಂಭತ್ತನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ವನೇ ನ ವೇತ್ಯಷ್ಟರ್ಚಂ ತ್ರಯೋದಶಂ ಸೂಕ್ತಂ ವಸುಕ್ರಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಅನುಕ್ರಾಂತಂ ಚ । ವನೇ ನಾಷ್ಟಾವಿತಿ ॥ ಚತುರ್ಥೇऽಹನಿ ಸ್ತೋಮವೃದ್ಧೌ ಬ್ರಾಹ್ಮಣಾಚ್ಛಂಸಿನ ಏತತ್ಸೂಕ್ತಮಾವಾಪಾರ್ಥಂ । ಸೂತ್ರಿತಂ ಚ । ಸ್ತೋಮೇ ವರ್ಧಮಾನೇ ಕೋ ಅದ್ಯ ನರ್ಯೋ ವನೇ ನ ವಾ ಯಃ । ಆ. ೭-೧೨ । ಇತಿ ॥ ಮಹಾವ್ರತೇ ನಿಷ್ಕೇವಲ್ಯ ಏತತ್ಸೂಕ್ತಂ । ಸೂತ್ರಿತಂ ಚ । ಪ್ರ ವೋ**

ಮಹೇ ಮಂದಮಾನಾಯಾಂಧಸ ಇತಿ ನಿವಿದ್ಧಾನಂ ವನೇ ನ ವಾ ಯೋ ನ್ಯಧಾಯಿ ಚಾಕನ್ । ಐ. ಆ. ೫-೩-೧ । ಇತಿ ।

ಅನುವಾದವು—ವನೇ ನ ವಾ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹದಿನೊಂದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸುಕ್ರನು ಋಷಿಯು; ಇಂದ್ರನು ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ವನೇ ನಾಷ್ಟೌ ಎಂದು ಹೇಳಿರುವುದು. ಯಾಗದ ಆರನೆಯ ದಿನ ಸ್ತೋತ್ರಸಂಪ್ರಾಪ್ತಿಗಾಗಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಈ ಸೂಕ್ತವನ್ನು ಆವಾಪಾರ್ಥವಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸ್ತೋಮೋ ವರ್ಧಮಾನೇ ಕೋ ಅದ್ಯ ನರ್ಯೋ ವನೇ ನ** ವಾಯಃ ಎಂಬ ಸೂತ್ರದಿಂದ (ಆ. ೭.೧೨) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿಯೂ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ—**ಪ್ರ ವೋ ಮಹೇ ಮಂದಮಾನಾಯಾಂಧಸ ಇತಿ ನಿವಿದ್ಧಾನಂ ವನೇ ನ ವಾ ಯೋ ನ್ಯಧಾಯಿ ಚಾಕನ್** ಎಂಬ ವಾಕ್ಯದಿಂದ (ಐ. ಆ. ೫-೩-೧) ನಿರ್ದಿಷ್ಟವಾಗಿರುವುದು.

## ಸೂಕ್ತ—೨೯

ಮಂಡಲ—೧೦ । ಅನುವಾಕ—೨ । ಸೂಕ್ತ—೨೯ ।
ಅಷ್ಟಕ—೭ । ಅಧ್ಯಾಯ. ೭ । ವರ್ಗ ೨೩, ೨೪ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ।
ಋಷಿಃ—ವಸುಕ್ರಃ ।
ದೇವತಾ—ಇಂದ್ರಃ ।
ಛಂದಃ—ತ್ರಿಷ್ಟುಪ್ ।

। ಸಂಹಿತಾಪಾಠಃ ।

ವನೇ ನ ವಾ ಯೋ ನ್ಯಧಾಯಿ ಚಾಕಞ್ಛುಚಿರ್ವಾಂ ಸ್ತೋಮೋ ಭುರಣಾ-
ವಜೀಗಃ ।
ಯಸ್ಯೇದಿಂದ್ರಃ ಪುರುದಿನೇಷು ಹೋತಾ ನೃಣಾಂ ನರ್ಯೋ ನೃತಮಃ
ಕ್ಷಪಾವಾನ್ ॥ ೧ ॥

। ಪದಪಾಠಃ ।

ವನೇ । ನ । ವಾ । ಯಃ । ನಿ । ಅಧಾಯಿ । ಚಾಕನ್ । ಶುಚಿಃ । ವಾಂ । ಸ್ತೋಮಃ । ಭುರಣೌ ।
ಅಜೀಗರಿತಿ ।
ಯಸ್ಯ । ಇತ್ । ಇಂದ್ರಃ । ಪುರುಽದಿನೇಷು । ಹೋತಾ । ನೃಣಾಂ । ನರ್ಯಃ । ನೃಽತಮಃ । ಕ್ಷಪಾಽ-
ವಾನ್ । ೧ ॥

। ಸಾಯಣಭಾಷ್ಯಂ ।

ವನೇ ನ ವಾಯೋ ನ್ಯಧಾಯೀತಿ । ವನೇ ನ ವನ ಇವ ವೃಕ್ಷ ಇವ ಶಕುನಿಃ ಸ್ವೇ ನೀಡೇ ವಾಯ- ಮಾತ್ಮೀಯಂ ಪುತ್ರಂ ನ್ಯಧಾಯಿ ನಿದಧಾತಿ ಶಿಶುಕಮಜಾತಪಕ್ಷಂ । ಸ ಯಥಾ ತತ್ರ ನಿಹಿತಶ್ಚಾಕನ್ಪಶ್ಯನ್ ಭಯಾದ್ದಿಶೋ ನಿರೀಕ್ಷಮಾಣ ಆಸೀತ್ । ಅಥವಾ । ಕಾಮಯಮಾನಸ್ತದುತ್ಸುಕಮನಾ ಆಸೀತ್ । ಏವಮಯಮಸ್ಮಾಸು ವೃಕ್ಷಸ್ಯ ನೀಡಭೂತೇಷು ಶಕುನಿಪುತ್ರಭೂತಃ ಶುಚಿರ್ವ್ಯಪಗತಸರ್ವದೋಷೋ ಯುವಯೋಃ ಸ್ವಭೂತಃ ಸ್ತೋಮಃ ಹೇ ಭುರಣೌ ಭರ್ತಾರಾವಶ್ವಿನೌ ಶೀಘ್ರೌ ವಾ । ಭುರಣ್ಯುರಿತಿ ಕ್ಷಿಪ್ರನಾಮೇತಿ । ಕಿಂಚ ಯಸ್ಯ ಸ್ತೋಮಸ್ಯ ಪುರುದಿನೇಷು ಬಹುಷ್ವಹಃಸ್ವಿಂದ್ರೋ ಹೋತೇಂದ್ರೋಽಪ್ಯಾ- ಹ್ವಾತಾ ಭವತಿ ಮಮಾಯಂ ಸ್ತೋಮಃ ಸ್ಯಾದಿತಿ । ಕಿಲ್ಲಕ್ಷಣಃ ಪುನರಿಂದ್ರ ಆಹ್ವಾತಾ । ಯೋ ನೃಣಾಂ ಮನುಷ್ಯಾಣಾಂ ನೃತಮಃ ಮನುಷ್ಯಾಣಾಮಪಿ ಮನುಷ್ಯತಮಃ । ಶೂರಾಣಾಮಪಿ ಮಧ್ಯೇ ಶೂರತಮ ಇತ್ಯರ್ಥಃ । ನರ್ಯಶ್ಚ ನೃಭ್ಯೋ ಹಿತೋ ಯಃ ಕ್ಷಪಾವಾಂಶ್ಚ ರಾತ್ರಿಪರ್ಯಾಯೇಷು ಸೋಮಭಾಗಃ । ಏವಂಗುಣಯುಕ್ತೇನ ಯಃ ಸ್ತೋಮ ಇಂದ್ರೇಣಾಪಿ ಪ್ರಾರ್ಥ್ಯತೇಽಸ್ಮಾಸು ವರ್ತಮಾನಃ ಸ ಯುವಾಂ ಪ್ರತ್ಯಜೀಗಃ । ನಿತ್ಯಕಾಲಮೇವ ಗಚ್ಛತೀತ್ಯರ್ಥಃ । ಏತಾವದೇತಾಮೃಚಮಾಶ್ವಿನೀಮಿತಿ ಕೃತ್ವಾ ವ್ಯಾಚಕ್ಷತೇ । ತದಸಾಧು । ಐಂದ್ರೇ ಹಿ ಸೂಕ್ತೇ ಪ್ರಥಮೈವೇಯಂ ಭವತಿ । ತಚ್ಚ ಪುನಃ ಪೃಷ್ಠ್ಯಸ್ಯ ಷಷ್ಠೇಽಹನಿ ಸ್ತೋಮೇ ವರ್ಧಮಾನೇ ಮಾಧ್ಯಂದಿನೇ ಸವನೇ ಬ್ರಾಹ್ಮಣಾಚ್ಛಂಸಿನಃ ಶಸ್ತ್ರೇ ವಿನಿಯುಜ್ಯತೇ । ಹೇ ಭುರಣೌ ಭರ್ತಾರೌ ದೇವಾನಾಂ ಪತೀ ಯ ಏಷ ಸ್ತೋಮೋಽಸ್ಮಾಸು ನಿಹಿತಃ ಶುಚಿರ್ವ್ಯಪಗತ- ದೋಷಃ ಶಕುನಿಪುತ್ರ ಇವ ವನೇ ವನಾವಯವೇ ವೃಕ್ಷೇ ಚಾಕನ್ಪಶ್ಯನ್ನಿವ ಕಾಮಯಮಾನ ಇವ ಮೇಂದ್ರಮಾಸ್ತೇ । ಯಸ್ಯ ಸ್ತೋಮಸ್ಯ ಕಿಮಿತಿ । ಯಸ್ಯೇಂದ್ರಃ ಪುರುದಿನೇಷು ಬಹುಷ್ವಹಃಸ್ವಾಹ್ವಾತಾ- ಭೂತ್ ಅಪಿ ನಾಮ ಮಾಮನೇನ ಸ್ತೋಮೇನ ಸ್ತುಯುರಿತಿ । ಕಿಲ್ಲಕ್ಷಣಃ ಪುನರಾಹ್ವಾತಾ । ಯಸ್ಯೇದಿಂದ್ರ ಇತಿ ನೃಣಾಂ ನೃತಮೋ ನರ್ಯಶ್ಚ ಕ್ಷಪಾವಾಂಶ್ಚ ಸಮಾನಮೇತತ್ಪೂರ್ವೇಣಾರ್ಥೇನ । ಯಮೇವಮಿಂದ್ರಃ ಪ್ರಾರ್ಥಯತೇ ಸ ಏಷ ಸ್ತೋಮಸ್ತಂ ಪ್ರತ್ಯಜೀಗಃ । ಗಚ್ಛತೀತ್ಯರ್ಥಃ । ಅಥವಾ ಸ ಏಷ ಸ್ತೋಮೋಽಸ್ಮಾಭಿರುದೀರ್ಯಮಾಣಸ್ತಸ್ಯೇಂದ್ರಸ್ಯ ಗುಣಾನ್ಗೃಹ್ಣಾತೀತಿ ಸ್ಯಾತ್ । ಜಿಗರ್ತಿ- ರ್ಗೃಹ್ಣಾತಿಕರ್ಮೇತಿ ಹ್ಯುಕ್ತಂ । ನಿ. ೬-೮ । ಏವಮತ್ರ ಚಾಕನ್ನಿತ್ಯಸ್ಯ ಚಾಯನ್ನಿತಿ ವಾ ಕಾಮಯಮಾನ ಇತಿ ವೇತ್ಯೇತೌ ವಿಪರಿಣಾಮಾವುಪಪದ್ಯೇತೇ ಶಬ್ದಸಾರೂಪ್ಯಾದರ್ಥಾವಿರೋಧಾಚ್ಚ । ಏತಸ್ಮಿನ್ನಿಗಮೇ ಪದವಿಭಾಗಗತಃ ಕಶ್ಚಿದ್ವಿಚಾರೋಽಸ್ತಿ । ತಮಾಹ ಭಾಷ್ಯಕಾರಃ । ವೇತಿ ಚ ಯ ಇತಿ ಚ ಚಕಾರ ಶಾಕಲ್ಯ ಇತಿ । ವೇತಿ ಯ ಇತಿ ಚ ಪದೇ ಚಕಾರ ಶಾಕಲ್ಯಃ ಪದಕಾರಃ । ತದೇತದ್ವಿಚಾರ್ಯ- ಮಾಣಂ ನ ಸಾಧು ಭವತಿ । ಕಿಂ ಕಾರಣಂ । ಉದಾತ್ತಂ ತ್ವೇವಮಾಖ್ಯಾತಮಭವಿಷ್ಯತ್ । ಏವಮೇತ- ಸ್ಮಿನ್ಪದದ್ವಯೇ ಸತಿ ಯದೇತದಾಖ್ಯಾತಂ ನ್ಯಧಾಯೀತಿ ತದುದಾತ್ತಮಭವಿಷ್ಯತ್ । ಯದ್ವೃತ್ತಾತ್ಪರಸ್ಯ ನಿತ್ಯಮಾಖ್ಯಾತಸ್ಯ ನಿಘಾತೋ ನ ಭವತೀತಿ ಲಕ್ಷಣವಿದೋ ಮನ್ಯಂತೇ । ನ ಚೇದಮುದಾತ್ತಂ ತಸ್ಮಾದ್ಯ ಇತಿ ನೇದಂ ಯದ್ವೃತ್ತಂ ಕಿಂ ತರ್ಹಿ ವಾಯ ಇತ್ಯೇಕಮೇವ ಪದಂ । ಕಿಂಚ । ಅಸುಸಮಾಪ್ತಶ್ಚಾರ್ಥಃ । ಅಪುಷ್ಕಲಃ । ಏವಮೇವ ತಸ್ಮಿನ್ಪದದ್ವಯೇ ಸತಿ ಮಂತ್ರಸ್ಯಾರ್ಥೋಽಸುಸಮಾಪ್ತೋ ಭವತಿ ॥

॥ ಪದಾರ್ಥ ॥

**ಭುರಣೌ**—ಜಗತ್ತಿಗೆ ಭರ್ತೃಗಳಾದ ಎಲೈ ಅಶ್ವಿನೀದೇವತೆಗಳೇ | **ನೃಣಾಂ**—ಮಾನವರಲ್ಲೆಲ್ಲಾ | **ನೃತಮಃ**—ಅತ್ಯಂತ ಉತ್ತಮನೂ **ನರ್ಯಃ**—ಮಾನವರಿಗೆ ಹಿತಕಾರಿಯೂ | **ಕ್ಷಪಾವಾನ್**—ರಾತ್ರಿಯ ವೇಳೆ ಅರ್ಪಿತವಾದ ಸೋಮವುಳ್ಳವನೂ ಆದ | **ಇಂದ್ರಃ**—ಇಂದ್ರನು | **ಪುರುದಿನೇಷು**—ಅನೇಕ ದಿನಗಳಲ್ಲಿ | **ಯಸ್ಯ**—ಯಾವ ಸ್ತೋಮವನ್ನು ಪಡೆಯುವುದಕ್ಕಾಗಿ | **ಹೋತಾ**—ಪ್ರಾರ್ಥಿಸುವವನಾಗಿರುವನೋ ಅಂತಹುದೂ | **ಶುಚಿಃ**—ಪರಿಶುದ್ಧವಾದುದೂ ಆದ | **ಯಃ ಸ್ತೋಮಃ**—ಯಾವ ಸ್ತೋಮವು **ನ್ಯಧಾಯಿ**—ನಮ್ಮಲ್ಲಿ ನಿಹಿತವಾಗಿರುವುದೋ ಅದು | **ವನೇ**—ಪಕ್ಷಿಯು ವೃಕ್ಷದಲ್ಲಿ ಮೊಟ್ಟೆಯನ್ನಿಟ್ಟು | **ಚಾಕನ್ ನ**—ಎಚ್ಚರಿಕೆಯಿಂದ ನೋಡಿಕೊಳ್ಳುವಂತೆ | **ವಾಂ**—ನಿಮ್ಮನ್ನು | **ಅಜೀಗಃ**—ಎಚ್ಚರಿಕೆಯಿಂದ ನೋಡಿಕೊಳ್ಳುತ್ತದೆ.

॥ ಭಾವಾರ್ಥ ॥

ಜಗತ್ತಿಗೆ ಭರ್ತೃಗಳಾದ ಎಲೈ ಅಶ್ವಿನೀದೇವತೆಗಳೇ, ಮಾನವರಲ್ಲೆಲ್ಲಾ ಅತ್ಯುತ್ತಮನಾದ ಮಾನವನೂ ಮಾನವರಿಗೆ ಹಿತಕಾರಿಯೂ, ರಾತ್ರಿಯವೇಳೆ ಅರ್ಪಿತವಾದ ಸೋಮವುಳ್ಳವನೂ ಆದ ಇಂದ್ರನು ಅನೇಕ ದಿನಗಳಲ್ಲಿ ಯಾವ ಸ್ತೋಮವನ್ನು ಪಡೆಯುವುದಕ್ಕಾಗಿ ಪ್ರಾರ್ಥಿಸುವವನಾಗಿರುವನೋ ಅಂತಹುದೂ, ಪರಿಶುದ್ಧವಾದುದೂ ಆದ ಯಾವ ಸ್ತೋಮವು ನಮ್ಮಲ್ಲಿ ನಿಹಿತವಾಗಿರುವುದೋ ಅದು ಪಕ್ಷಿಯು ವೃಕ್ಷದಲ್ಲಿ ಮೊಟ್ಟೆಯನ್ನಿಟ್ಟು (ಮರಿಯನ್ನಿಟ್ಟು) ಎಚ್ಚರಿಕೆಯಿಂದ ನೋಡಿಕೊಳ್ಳುವಂತೆ ನಿಮ್ಮನ್ನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತದೆ.

English Translation

As (the bird) who deposits its young (in its nest) in the tree (is) eagerly looking around, so you bearers (Aswins) your pure praise (ever) keeps you awake: (that praise) of which Indra has for many days been the invoker, (Indra) the friend of man, the manliest of men. (to whom the soma is offered) at night.

॥ ವಿಶೇಷವಿಷಯಗಳು ॥

**ಚಾಕನ್**—ಈ ಶಬ್ದದ ನಿರ್ವಚನವನ್ನು ಹೇಳುತ್ತಾ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಈರೀತಿ ಹೇಳಿದ್ದಾರೆ—

> **ಚಾಕನ್ | ವನೇನ ವಾಯೋ ನ್ಯಧಾಯಿ ಚಾಕನ್ | ವನ ಇವ ವಾಯೋ ವೇಃ ಪುತ್ರಶ್ಚಾಯನ್ನಿತಿ ವಾ ಕಾಮಯಮಾನ ಇತಿ ವಾ | ವೇತಿ ಚ ಯ ಇತಿ ಚ ಚಕಾರ ಶಾಕಲ್ಯ ಉದಾತ್ತಂ ತ್ವೇವಮಾಖ್ಯಾತಮಭವಿಷ್ಯದಸುಸಮಾಪ್ತಶ್ಚಾರ್ಥಃ ॥**
>
> (ನಿ. ೬-೨೮)

ಇಲ್ಲಿ ವನಶಬ್ದಕ್ಕೆ ವೃಕ್ಷವೆಂದರ್ಥವು. ವೃಕ್ಷದಲ್ಲಿ ಕುಳಿತಿರುವ ಪಕ್ಷಿಯು ತನ್ನ ಎಳೆಯ ಮರಿಯನ್ನು ಎಂದರೆ ಇನ್ನೂ ರೆಕ್ಕೆಯು ಹುಟ್ಟದಿರುವ ಸಣ್ಣ ಮರಿಯನ್ನು ವೃಕ್ಷದಲ್ಲಿಟ್ಟು ಅದು ಹಾರುವುದಕ್ಕೆ ಬರದೇ ಇರುವುದರಿಂದ ಕೆಳಕ್ಕೆ ಎಲ್ಲಿ

ಬಿದ್ದುಹೋಗುವುದೋ ಎಂಬ ಉತ್ಸುಕತೆಯಿಂದ ನೋಡುತ್ತಿರುವಂತೆ ಎಂದು ಈ ವಾಕ್ಯದ ಅಭಿಪ್ರಾಯವು. ಈ ವಾಕ್ಯದಲ್ಲಿರುವ ವಾಯುಃ ಎಂಬ ಶಬ್ದವನ್ನು ಶಾಕಲ್ಯಋಷಿಯು ವಾ ಯುಃ ಎಂದು ಎರಡು ಪದಗಳನ್ನಾಗಿ ಪದ ವಿಭಾಗ ಮಾಡಿರುವರು. ಹಾಗೆ ಮಾಡಿದಲ್ಲಿ ವಾಕ್ಯದ ಕ್ರಿಯಾಪದಕ್ಕೆ ಉದಾತ್ತವಿರಬೇಕಾಗುತ್ತಿತ್ತು ಮತ್ತು ವಾಕ್ಯದ ಅರ್ಥವು ಅಪೂರ್ಣವಾಗುತ್ತಿತ್ತು, ಎಂದು ನಿರುಕ್ತಕಾರರು ತಮ್ಮ ಅಭಿಪ್ರಾಯವನ್ನು ಸೂಚಿಸಿದಾರೆ.

ಇಲ್ಲಿ ವಾಯುಃ ಎಂದು ಒಂದೇ ಪದವೆಂದು ಭಾವಿಸಿದರೆ–ವಿ ಎಂದರೆ ಪಕ್ಷಿಯು, ವಾಯುಃ ಎಂದರೆ ಪಕ್ಷಿಸಂಬಂಧವಾದ ಎಂದರೆ ಪಕ್ಷಿಯಿಂದ ಹುಟ್ಟಿದ ಪಕ್ಷಿಯ ಮರಿಯು ಎಂದರ್ಥವು. ಈ ಅರ್ಥವೇ ಸಮಂಜವಾಗಿರುವುದು. ಆದರೆ ಪದಪಾಠಕಾರರಾದ ಶಾಕಲ್ಯಋಷಿಯು ವಾ ಯುಃ ಎಂದು ಬೇರೆಬೇರೆ ಪದಚ್ಛೇದಮಾಡಿರುವರು. ಈ ರೀತಿ ಪದವಿಭಾಗಮಾಡಿದರೆ ಮುಖ್ಯ ಕ್ರಿಯಾಪದವಾದ ನ್ಯಧಾಯಿ ಶಬ್ದವು ಆದ್ಯುದಾತ್ತವಾಗಬೇಕಾಗುತ್ತಿತ್ತು ಮತ್ತು ವಾಕ್ಯದ ಅರ್ಥವು ಸಂಪೂರ್ಣವಾಗುತ್ತಿರಲಿಲ್ಲ. ಆದ್ದರಿಂದ ವಾಯುಃ ಎಂಬ ಶಬ್ದವು ಒಂದೇ ಪದವೆಂದು ಭಾವಿಸುವುದೇ ಪರಿಗ್ರಾಹ್ಯವು ಎಂದು ಭಾಷ್ಯಕಾರರು ನಿರುಕ್ತಕಾರರ ಅಭಿಪ್ರಾಯವನ್ನು ಸಮರ್ಥಿಸಿದ್ದಾರೆ.

ಸಂಹಿತಾಪಾಠಃ ॥

ಪ್ರ ತೇ ಅಸ್ಯಾ ಉಷಸಃ ಪ್ರಾಪರಸ್ಯಾ ನೃತೌ ಸ್ಯಾಮ ನೃತಮಸ್ಯ ನೃಣಾಂ ।
ಅನು ತ್ರಿಶೋಕಃ ಶತಮಾವಹನ್ನೃನ್ಕುತ್ಸೇನ ರಥೋ ಯೋ ಅಸತ್ಸಸವಾನ್॥

॥ ಪದಪಾಠಃ ॥

ಪ್ರ । ತೇ । ಅಸ್ಯಾಃ । ಉಷಸಃ । ಪ್ರ । ಅಪರಸ್ಯಾಃ । ನೃತೌ । ಸ್ಯಾಮ । ನೃಽತಮಸ್ಯ । ನೃಣಾಂ ।
ಅನು । ತ್ರಿಽಶೋಕಃ । ಶತಂ । ಆ । ಅವಹತ್ । ನೄನ್ । ಕುತ್ಸೇನ । ರಥಃ । ಯಃ । ಅಸತ್ । ಸಸಽವಾನ್ ॥ ೨ ॥

॥ ಸಾಯಣಭಾಷ್ಯಂ ॥

ಅಸ್ಯಾ ವರ್ತಮಾನಾಯಾ ಈದೃಶ್ಯಾ ಉಷಸೋ ನೃತೌ ॥ ನೃ ನಯೇ ॥ ನಯನೇ ಪ್ರಾಪಣೇ । ಉದಯಕಾಲ ಇತ್ಯರ್ಥಃ । ನೃಣಾಂ ನೇತೄಣಾಂ ಮಧ್ಯೇ ನೃತಮಸ್ಯಾತಿಶಯೇನ ನೇತುಸ್ತೇ ತವೇಂದ್ರಸ್ಯ ಸ್ತುತ್ಯಾ ಯಾಗೇನ ಚ ಪ್ರ ಸ್ಯಾಮ । ವಯಂ ಪ್ರಕೃಷ್ಟಾ ಭವೇಮ । ತಥಾ ಹೇ ಇಂದ್ರ ಅಪರಸ್ಯಾ ಆಗಾಮಿನ್ಯಾಶ್ಚೋಷಸೋ ನೃತೌ ಪ್ರಾಪಣೇ ತವ ಸ್ತುತ್ಯಾ ಯಾಗೇನ ಚ ವಯಂ ಪ್ರಕೃಷ್ಟಾ ಭವೇಮೇತ್ಯಾಶಾಸ್ಮಹೇ । ಕಿಂಚ ತ್ರಿಶೋಕೋ ನಾಮರ್ಷಿರ್ಹೇ ಇಂದ್ರ ತ್ವಾಮಾರಾಧ್ಯ ತ್ವತ್ಪ್ರಸಾದಾಚ್ಛತಂ ಬಹೂನನ್ನುಚರಭೂತಾನ್ನೄನ್ಮನುಷ್ಯಾನಾವಹತ್ । ಪ್ರಾಪಿತವಾನ್ । ಲಬ್ಧವಾನಿತ್ಯರ್ಥಃ । ತಥಾ ತವ ಕುತ್ಸಸ್ಯ ಚ ಸಸವಾನ್ ಸನಿತಾ ಯುಗಪದೇವ ಸಂಭಕ್ತಾ ಯೋ ರಥೋಽಸತ್ ಅಸ್ತಿ ಸ ರಥಃ ಕುತ್ಸೇನ । ಕುತ್ಸೋ ಲಬ್ಧವಾನಿತಿ ಶೇಷಃ । ತಥಾ ಚ ಮಂತ್ರಾಂತರೇ ಶ್ರೂಯತೇ । ಯಾಸಿ ಕುತ್ಸೇನ ಸರಥಮವಸ್ಯುಃ । ಋ ೪-೧೬-೧೧ । ಇತಿ । ಯಸ್ಮಾದೇವಂ ತಸ್ಮಾತ್ತ್ವತ್ಪ್ರಸಾದಾದ್ವಯಂ ಪ್ರಕೃಷ್ಟಾ ಭವೇಮೇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಅಸ್ಯಾಃ**—ವರ್ತಮಾನಕಾಲದ | **ಉಷಸಃ**—ಉಷಸ್ಸಿನ | **ನೃತೌ**—ಉದಯಕಾಲದಲ್ಲಿ | **ನೃಣಾಂ**—ಮಾನವರಲ್ಲೆಲ್ಲಾ | **ನೃತಮಸ್ಯ**—ಉತ್ತಮನಾದ | **ತೇ**—ನಿನ್ನ ಪೂಜೆಯಿಂದ | **ಪ್ರ ಸ್ಯಾಮ**—ನಾವು ಸುಖವಂತರಾಗಿರುವೆವು | **ಅಪರಸ್ಯಾಃ**—ಮುಂದಿನ ಉಷಃಕಾಲಗಳಲ್ಲೂ ಹೀಗೆಯೇ ಇರುವಂತಾಗಲಿ. **ತ್ರಿಶೋಕಃ**—ತ್ರಿಶೋಕನೆಂಬ ಋಷಿಯು | **ಶತಂ**—ಅನೇಕ ಸಂಖ್ಯೆಯುಳ್ಳ | **ಅನು ನ್ಯಾನ್**—ಅನುಚರಜನರನ್ನು | **ಆವಹತ್**—ನಿನ್ನ ಅನುಗ್ರಹದಿಂದ ಹೊಂದಿದ್ದಾನೆ | **ಸಶವಾನ್**—ಸಂಪದ್ಯುಕ್ತವಾದ | **ಯಃ ರಥಃ**—ಯಾವ ರಥವು | **ಆಸತ್**—ಇರುವುದೋ ಅದು | **ಕುತ್ಸೇನ**—ಕುತ್ಸನಿಂದ (ನಿನ್ನ ಅನುಗ್ರಹದ ಫಲವಾಗಿ) ಹೊಂದಲ್ಪಟ್ಟಿತ.

॥ ಭಾವಾರ್ಥ ॥

ಎಲೈ ಇಂದ್ರನೇ, ವರ್ತಮಾನಕಾಲದ ಉಷಸ್ಸಿನ ಉದಯಕಾಲದಲ್ಲಿ ಮಾನವರಲ್ಲೆಲ್ಲ ಉತ್ತಮನಾದ ನಿನ್ನ ಪೂಜೆಯಿಂದ ನಾವು ಸುಖವಂತರಾಗಿರುವೆವು. ಮುಂದಿನ ಉಷಃಕಾಲಗಳಲ್ಲೂ ನಾವು ಹೀಗೆಯೇ ಇರುವಂತಾಗಲಿ; ತ್ರಿಶೋಕನೆಂಬ ಋಷಿಯು ಅನೇಕ ಸಂಖ್ಯೆಯುಳ್ಳ ಅನುಚರರನ್ನು ನಿನ್ನ ಅನುಗ್ರಹದಿಂದ ಹೊಂದಿದ್ದಾನೆ. ಸಂಪದ್ಯುಕ್ತವಾದ ರಥವನ್ನು ಕುತ್ಸನು ನಿನ್ನ ಅನುಗ್ರಹದಿಂದ ಹೊಂದಿದ್ದಾನೆ.

## English Translation

May we be prosperous at the coming of the present or of any future dawn, (through the adoration) of you, the chief leader of men: through your favour Trishoka obtained a hundred followers; the chariot which was common to him and you was acquired by Kutsa.

॥ ಸಂಹಿತಾಪಾಠಃ ॥

ಕಸ್ತೇ ಮದ ಇಂದ್ರ ರಂತ್ಯೋ ಭೂದ್ದುರೋ ಗಿರೋ ಅಭ್ಯುಗ್ರೋ ವಿ
ಧಾವ ।
ಕದ್ವಾಹೋ ಅರ್ವಾಗುಪ ಮಾ ಮನೀಷಾ ಆ ತ್ವಾ ಶಕ್ಯಾಮುಪಮಂ
ರಾಧೋ ಅನ್ನೈಃ ॥ ೩ ॥

॥ ಪದಪಾಠಃ ॥

ಕಃ । ತೇ । ಮದಃ । ಇಂದ್ರ । ರಂತ್ಯಃ । ಭೂತ್ । ದುರಃ । ಗಿರಃ । ಅಭಿ । ಉಗ್ರಃ । ವಿ । ಧಾವ ।
ಕತ್ । ವಾಹಃ । ಅರ್ವಾಕ್ । ಉಪ । ಮಾ । ಮನೀಷಾ । ಆ । ತ್ವಾ । ಶಕ್ಯಾಂ । ಉಪSಮಂ । ರಾಧಃ ।
ಅನ್ನೈಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವೇಷನ್ಮಧ್ಯಮೋತ್ತಮಾನಾಂ ಸೋಮಜನ್ಯಾನಾಂ ಮದಾನಾಂ ಮಧ್ಯೇ ಕೋ ಮದೋ ರಂತ್ಯೋ ರಮಯಿತಾ ಪ್ರೀತಿಕರೋ ಭೂತ್ । ಭವತಿ । ತ್ವತ್ಪ್ರೀತಿಕರಮದಯೋಗ್ಯ-ಸೋಮದಾನಾಭಿಪ್ರಾಯೇಣಾಯಂ ಪ್ರಶ್ನಃ । ಉಗ್ರ ಓಜಸ್ವೀ ತ್ವಂ ದುರೋ ಯಜ್ಞಗೃಹದ್ವಾರಾಣಿ ಗಿರಃ ಸ್ತುತಿಲಕ್ಷಣಾ ವಾಚಶ್ಚಾಭಿ ವಿ ಧಾವ । ಅಭ್ಯಾಗಚ್ಛ । ಕಿಂಚ ಕತ್ ಕದಾ ವಾಹಃ । ಇಂದ್ರಂ ಪ್ರತ್ಯುಹ್ಯತ ಇತಿ ವಾಹಃ ಸೋಮ ಉಚ್ಯತೇ । ಏವಂಭೂತೋಽರ್ವಾಕ್ ತ್ವತ್ಪ್ರಸಾದಾತ್ಫಲದಾನಾಯಾಸ್ಮದಭಿ-ಮುಖೋ ಭವಿಷ್ಯತೀತಿ ಶೇಷಃ । ಅಪಿ ಚ ಕದಾ ಮನೀಷಾ ಸರ್ವಾರ್ಥದರ್ಶನಾ ಪ್ರಜ್ಞಾ ಸರ್ವಗುಣ-ಗ್ರಾಹಿಣೀ ಸ್ತುತಿರ್ವಾ ಮಾ ಮಾಂ ತ್ವತ್ಪ್ರಸಾದಾದುಪಗಮಿಷ್ಯತೀತಿ ಶೇಷಃ । ಕದಾ ಹೇ ಇಂದ್ರ ತ್ವಾ ತ್ವಾಂ । ಇತ್ಯುಪಸರ್ಗಶ್ರುತೇರ್ಯೋಗ್ಯಪದಾಧ್ಯಾಹಾರಃ । ಆರಾಧ್ಯ ವಯಮನ್ನೈಃ ಸಹ ರಾಧೋ ಧನಮುಪಮಂ ಮತ್ಸಮೀಪಂ ಶಕ್ಯಾಂ। ಶಕಿರತ್ರ ಗತ್ಯರ್ಥೋಽಂತರ್ಭಾವಿತಣ್ಯರ್ಥಃ । ಸಂಗಮಯೇಯಂ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನಗೆ । ಕಃ ಮದಃ—ಯಾವ ರೀತಿಯ ಹರ್ಷವು । ರಂತ್ಯಃ—ತೃಪ್ತಿಕರವಾಗಿ । ಭೂತ್—ಇರುತ್ತದೆ । ಉಗ್ರಃ—ಅಧಿಕಶಕ್ತಿಯುಳ್ಳ ನೀನು । ದುರಃ—ಯಜ್ಞಗೃಹದ ದ್ವಾರಕ್ಕೂ । ಗಿರಃ ಅಭಿ—ಸ್ತುತಿಗಭಿಮುಖವಾಗಿಯೂ । ವಿ ಧಾವ—ಓಡಿ ಬಾ । ಕತ್—ಯಾವಾಗ । ವಾಹಃ—ಸೋಮವು । ಅರ್ವಾಕ್—ನಮಗಭಿಮುಖವಾಗಿರುತ್ತವೆ । ಮನೀಷಾ—ನಿನ್ನನ್ನು ಸ್ತುತಿಸುವ ಬುದ್ಧಿಯು । ಮಾ—ನನ್ನನ್ನು । ಉಪ—ಯಾವಾಗ ಬಂದು ಸೇರುತ್ತದೆ । ತ್ವಾ—ನಿನ್ನನ್ನು । ಆ—ಆರಾಧಿಸಿ । ಅನ್ನೈಃ—ಅನ್ನಗಳೊಡಗೂಡಿದ । ರಾಧಃ—ಧನವನ್ನು (ಯಾವಾಗ) । ಉಪಮಂ—ನಮ್ಮ ಸಮೀಪಕ್ಕೆ । ಶಕ್ಯಾಂ—ಪಡೆಯಲು ಶಕ್ತರಾಗುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗೆ ಯಾವ ರೀತಿಯ ಹರ್ಷವು ತೃಪ್ತಿಕರವಾಗಿರುತ್ತವೆ ? ಅಧಿಕವಾದ ಶಕ್ತಿಯುಳ್ಳ ನೀನು ಯಜ್ಞಗೃಹದ ದ್ವಾರಕ್ಕೂ ಸ್ತುತಿಗಭಿಮುಖವಾಗಿಯೂ ಓಡಿ ಬಾ. ಸೋಮವು ನಮಗೆ ಅಭಿಮುಖವಾಗಿ ಯಾವಾಗ ಇರುತ್ತದೆ ? ನಿನ್ನನ್ನು ಸ್ತುತಿಸುವ ಬುದ್ಧಿಯು ನನ್ನನ್ನು ಯಾವಾಗ ಬಂದು ಸೇರುತ್ತದೆ ? ನಿನ್ನನ್ನು ಆರಾಧಿಸಿ ಅನ್ನಗಳೊಡಗೂಡಿದ ಧನವನ್ನು ಯಾವಾಗ ನಮ್ಮಲ್ಲಿಗೆ ಪಡೆಯಲು ಶಕ್ತರಾಗುತ್ತೇವೆ ?

## English Translation

What sort of exhilaration, Indra, is agreeable to you ? You who are powerful hasten to the doors (of the sacrificial chamber) to our praises : when will the Soma be present ? (when will) intelligence (come) to me ? when, having propitiated you, may I acquire wealth and food ?

॥ ಸಂಹಿತಾಪಾಠಃ ॥

ಕದು ದ್ಯುಮ್ನಮಿಂದ್ರ ತ್ವಾವತೋ ನೄನ್ಕಯಾ ಧಿಯಾ ಕರಸೇ ಕನ್ನ ಆಗನ್।
ಮಿತ್ರೋ ನ ಸತ್ಯ ಉರುಗಾಯ ಭೃತ್ಯಾ ಅನ್ನೇ ಸಮಸ್ಯ ಯದಸನ್ಮನೀಷಾಃ ॥

॥ ಪದಪಾಠಃ ॥

ಕತ್ । ಊಂ ಇತಿ । ದ್ಯುಮ್ನಂ । ಇಂದ್ರ । ತ್ವಾಽವತಃ । ನೄನ್ । ಕಯಾ । ಧಿಯಾ । ಕರಸೇ । ಕತ್ । ನಃ । ಆ । ಅಗನ್ ।

ಮಿತ್ರಃ । ನ । ಸತ್ಯಃ । ಉರುಽಗಾಯ । ಭೃತ್ಯೈ । ಅನ್ನೇ । ಸಮಸ್ಯ । ಯತ್ । ಅಸನ್ । ಮನೀಷಾಃ ॥೪॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಕದು ಕದಾ ವಾ ದ್ಯುಮ್ನಂ ಹವಿರ್ಲಕ್ಷಣಮಸ್ಮದೀಯಮನ್ನಂ ಭುಕ್ತ್ವೇತಿ ಶೇಷಃ । ಕಯಾ ಧಿಯಾ ಕೇನ ಕರ್ಮಣಾ ನೄನ್ನೇತೄನಸ್ಮಾಂಸ್ತ್ವಾವತಸ್ತ್ವತ್ಸದೃಶಾನ್ಕರಸೇ । ಕರಿಷ್ಯಸಿ । ಕತ್ ಕದಾ ನೋಽಸ್ಮಾನ್ಪ್ರತ್ಯಾಗನ್ । ಆಗಮಿಷ್ಯಸಿ । ಸತ್ಯಃ । ಅನವದ್ಯ ಇತ್ಯರ್ಥಃ । ಮಿತ್ರೋ ನ ಸಖೇವ ತಥಾ । ಹೇ ಉರುಗಾಯ ಬಹುಕೀರ್ತ ಇಂದ್ರ ತ್ವಂ ಭೃತ್ಯೈ ಭರಣಾಯ ಪೋಷಣಾಯ ಭವಸೀತಿ ಶೇಷಃ । ಯದ್ಯದಾ ಸಮಸ್ಯಾಸ್ಮದಾದಿಕಸ್ಯ ಸರ್ವಸ್ಯ ಜಗತೋಽನ್ನೇ ಜಗತ್ಸ್ಥಿತಿನಿಮಿತ್ತ ಆಹಾರೇ ಮನೀಷಾ ಅನ್ನಾಭಿಲಕ್ಷಣಾ ಬುದ್ಧಯೋಽಸನ್ ಭವೇಯುಃ । ತದಾ ಸರ್ವಸ್ಯ ಪೋಷಣಾಯ ತ್ವಂ ಭವಸೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಕದು ಯಾವಾಗ । ದ್ಯುಮ್ನಂ—ಹವಿಸ್ಸನ್ನು ಭಕ್ಷಿಸಿ । ಕಯಾ ಧಿಯಾ—ಯಾವ ವಿಧವಾದ ಕರ್ಮದಿಂದ । ನೄನ್—ಯಜಮಾನರಾದ ನಮ್ಮನ್ನು । ತ್ವಾವತಃ—ನಿನಗೆ ಸಮಾನರನ್ನಾಗಿ । ಕರಸೇ—ಮಾಡುತ್ತೀಯೆ । ನಃ—ನಮ್ಮಲ್ಲಿಗೆ । ಕತ್—ಯಾವಾಗ । ಆಗನ್ —ಬರುತ್ತೀಯೆ । ಉರುಗಾಯ—ಅನೇಕ ವಿಧವಾಗಿ ಸ್ತುತಿಸಲ್ಪಡುವ ಎಲೈ ಇಂದ್ರನೇ । ಯತ್—ಯಾವಾಗ । ಸಮಸ್ಯ—ಸಕಲವಾದ ಜಗತ್ತಿನ । ಅನ್ನೇ—ಅನ್ನನಿಮಿತ್ತವಾಗಿ । ಮನೀಷಾಃ—ನಮ್ಮ ಸ್ತುತಿಗಳು । ಅಸನ್—ನಿನ್ನನ್ನು ಸಮಿಪಿಸುವುವೋ ಆಗ । ಸತ್ಯಃ—ಶುದ್ಧನಾದ । ಮಿತ್ರೋ ನ—ಮಿತ್ರನಂತೆ । ಭೃತ್ಯೈ—ಎಲ್ಲರ ಪೋಷಣೆಗೂ ಸಿದ್ಧನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಯಾವಾಗ ಹವಿಸ್ಸನ್ನು ಭಕ್ಷಿಸಿ ಯಾವ ವಿಧವಾದ ಕರ್ಮದಿಂದ ಯಜಮಾನರಾದ ನಮ್ಮನ್ನು ನಿನಗೆ ಸಮಾನರನ್ನಾಗಿ ಮಾಡುತ್ತೀಯೆ? ನಮ್ಮಲ್ಲಿಗೆ ಯಾವಾಗ ಬರುತ್ತೀಯೆ? ಅನೇಕ ವಿಧವಾಗಿ

ಸ್ತುತಿಸಲ್ಪಡುವ ಎಲೈ ಇಂದ್ರನೇ, ಯಾವಾಗ ಸಕಲ ಜಗತ್ತಿನ ಅನ್ನದ ನಿಮಿತ್ತವಾಗಿ ನಮ್ಮ ಸ್ತುತಿಗಳು ನಿನ್ನನ್ನು ಸಮೀಪಿಸುವುವೋ ಆಗ ಶುದ್ಧನಾದ ಸ್ನೇಹಿತನಂತೆ ನೀನು ಎಲ್ಲರ ಪೋಷಣೆಗೂ ಸಿದ್ಧನಾಗಿರುತ್ತೀಯೆ.

English Translation

When, Indra, (having partaken of) our oblation, and by what sacred rite, will you render men resembling you ? when will you bring them to us ? you, who are widely renowned, are to us like a true friend, (attentive) for our support, when the minds of all were (anxious) for food.

। ಸಂಹಿತಾಪಾಠಃ ।

ಪ್ರೇರಯ ಸೂರೋ ಅರ್ಥಂ ನ ಪಾರಂ ಯೇ ಅಸ್ಯ ಕಾಮಂ ಜನಿಧಾ ಇವ ಗ್ಮನ್ ।
ಗಿರಶ್ಚ ಯೇ ತೇ ತುವಿಜಾತ ಪೂರ್ವೀರ್ನರ ಇಂದ್ರ ಪ್ರತಿಶಿಕ್ಷಂತ್ಯನ್ನೈಃ ॥೫॥

। ಪದಪಾಠಃ ।

ಪ್ರ । ಈರಯ । ಸೂರಃ । ಅರ್ಥಂ । ನ । ಪಾರಂ । ಯೇ । ಅಸ್ಯ । ಕಾಮಂ । ಜನಿಧಾಃಽಇವ । ಗ್ಮನ್ ।
ಗಿರಃ । ಚ । ಯೇ । ತೇ । ತುವಿಽಜಾತ । ಪೂರ್ವೀಃ । ನರಃ । ಇಂದ್ರ । ಪ್ರತಿಽಶಿಕ್ಷಂತಿ । ಅನ್ನೈಃ ॥ ೫ ॥

। ಸಾಯಣಭಾಷ್ಯಂ ।

ಸೂರಃ ಸೂರ್ಯೋಽರ್ಥಂ ನ ಯಥಾರ್ತಾರಂ ಗಂತಾರಂ ಯೋಗಿನಮನುಗೃಹ್ಣನ್ ಪಾರಂ ಸಂಸಾರಸ್ಯಾಂತಮಪವರ್ಗಂ ಗಮಯತಿ ತಥಾ ಹೇ ಇಂದ್ರ ತ್ವಂ ಯಜಮಾನಾನ್ಸಂಸಾರಸ್ಯಾಂತಂ ಪ್ರೇರಯ । ಗಮಯ। ಯೇಽಸ್ಮದಾದಯೋ ಯಜಮಾನಾ ಅಸ್ಯ ತವೇಂದ್ರಸ್ಯ ಕಾಮಂ ಸೋಮಪಾನೇಚ್ಛಾಂ ಗ್ಮನ್ । ಗಮಿರತ್ರ ನಿಪೂರ್ವೋಽಂತರ್ಭಾವಿತಣ್ಯರ್ಥಶ್ಚ ದ್ರಷ್ಟವ್ಯಃ । ನಿಗಮಯಂತಿ ಮಹತಾ ಸೋಮಪಾನೇನಾಪನಯಂತಿ । ತತ್ರ ದೃಷ್ಟಾಂತಃ । ಜನಿಧಾ ಇವ ಜನೀನಾಂ ಜಾಯಾನಾಂ ಸಂಭೋಗ-ಕಾಲೇ ಶಯ್ಯಾಸು ಧಾರಯಿತಾರಃ ಪತಯೋ ಯಥಾ ಪ್ರಭೂತಸಂಭೋಗಪ್ರದಾನೇನ ಮೈಥುನೇಚ್ಛಾಮ-ಪನಯಂತಿ ತದ್ವತ್ । ಕಿಂಚ ನರೋ ನೇತಾರೋಽಸ್ಮದಾದಯೋ ಯೇ ಯಜಮಾನಾ ಹೇ ತುವಿಜಾತ ಬಹುರೂಪ । ರೂಪಂರೂಪಂ ಪ್ರತಿರೂಪೋ ಬಭೂವ । ಋ. ೬-೪೭-೧೮ । ಇತಿ ವಚನಾತ್ । ಸರ್ವಾತ್ಮನ್ನಿಂದ್ರ ತೇ ತುಭ್ಯಂ ಪೂರ್ವೀರನಾದಿಕಾಲಪ್ರವೃತ್ತಾ ಗಿರಶ್ಚ ಸ್ತುತಿಲಕ್ಷಣಾ ವಾಚಶ್ಚಾನ್ನೈಃ ಪುರೋಡಾಶಾದಿಹವಿರ್ಭಿಃ ಸಹ ಪ್ರತಿಶಿಕ್ಷಂತಿ ಪ್ರತಿಕಾಲಂ ಪ್ರಯಚ್ಛಂತಿ ತಾನಸ್ಮದೀಯಾನ್ಯಜಮಾನಾನ್ಪಾರಂ ಗಮಯೇತಿ ಪೂರ್ವೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಜನಿಧೀಃ ಇವ—ಪತಿಗಳು ಪತ್ನಿಯರ ಇಚ್ಛೆಯನ್ನು ಪೂರ್ಣಗೊಳಿಸುವಂತೆ । ಯೇ—ಯಾವ ಯಜಮಾನರು । ಅಸ್ಯ—ನಿನ್ನ । ಕಾಮಂ—ಸೋಮಪಾನೇಚ್ಛೆಯನ್ನು । ಪೃಣನ್—ಪೂರ್ಣಗೊಳಿಸುವರೋ ಅಂತಹ ಯಜಮಾನರನ್ನು । ಸೂರಃ ಅರ್ಥಂ ನ—ಸೂರ್ಯನು ಯೋಗಿಗಳನ್ನು ಸಂಸಾರದಿಂದ ದಾಟಿಸುವಂತೆ । ಪಾರಂ—ಸಂಸಾರದ ಕೊನೆಯ ದಡಕ್ಕೆ । ನೇಷಿ—ಸೇರಿಸು । ತುವಿಜಾತ—ಅನೇಕವಿಧವಾದ ರೂಪದಿಂದ ಉತ್ಪನ್ನನಾದ ಇಂದ್ರ—ಎಲೈ ಇಂದ್ರನೇ । ತೇ—ನಿನ್ನನ್ನುದ್ದೇಶಿಸಿ । ನರಃ—ನೇತೃಗಳಾದ । ಯೇ—ಯಾವ ಯಜಮಾನರು । ಪೂರ್ವೀಃ—ಹಿಂದಿನಿಂದ ಅನುಸರಿಸಿ ಬಂದ । ಗಿರಃ ಚ—ಸ್ತುತಿಗಳನ್ನು । ಇನ್ನೈಃ—ಹವಿಸ್ಸುಗಳೊಡನೆ । ಪ್ರತಿಶಿಕ್ಷಂತಿ—ಅರ್ಪಿಸುವರೋ ಅವರನ್ನು ಸಂಸಾರದಿಂದ ದಾಟಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಪತಿಯರು ಪತ್ನಿಯರ ಇಚ್ಛೆಯನ್ನು ಪೂರ್ಣಗೊಳಿಸುವಂತೆ ಯಾವ ಯಜಮಾನರು ನಿನ್ನ ಸೋಮಪಾನೇಚ್ಛೆಯನ್ನು ಪೂರ್ಣಗೊಳಿಸುವರೋ ಅಂತಹ ಯಜಮಾನರನ್ನು ಸೂರ್ಯನು ಯೋಗಿಗಳನ್ನು ಸಂಸಾರದಿಂದ ದಾಟಿಸುವಂತೆ ನೀನೂ ಸಂಸಾರದ ಕೊನೆಯ ದಡಕ್ಕೆ ಸೇರಿಸು. ಅನೇಕ ವಿಧವಾದ ರೂಪದಿಂದ ಉತ್ಪನ್ನನಾದ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ನೇತೃಗಳಾದ ಯಾವ ಯಜಮಾನರು ಹಿಂದಿನಿಂದ ಅನುಸರಿಸಿ ಬಂದ ಸ್ತುತಿಗಳನ್ನು ಹವಿಸ್ಸುಗಳೊಡನೆ ಅರ್ಪಿಸುವರೋ ಅವರನ್ನು ಸಂಸಾರದಿಂದ ದಾಟಿಸು.

## English Translation

As the sun (brings) the ascetic, you bring to the end (of existence) (your worshippers), who satisfy your desire (for the Soma), as husbands (the desire of their wives); and who (being) leaders of rites, multiform Indra, offer to you ancient praises with (sacrificial) viands.

॥ ಸಂಹಿತಾಪಾಠಃ ॥

ಮಾತ್ರೇ ನು ತೇ ಸುಮಿತೇ ಇಂದ್ರ ಪೂರ್ವೀ ದ್ಯೌರ್ಮಜ್ಮನಾ ಪೃಥಿವಿ ಕಾವ್ಯೇನ ।

ವರಾಯ ತೇ ಘೃತವಂತಃ ಸುತಾಸಃ ಸ್ವಾದ್ಮನ್ಭವಂತು ಪೀತಯೇ ಮಧೂನಿ ॥ ೬ ॥

॥ ಪದಪಾಠಃ ॥

ಮಾತ್ರೇಽಇತಿ । ನು । ತೇ । ಸುಮಿತ್ರೇ ಇತಿ ಸುಽಮಿತೇ । ಇಂದ್ರ । ಪೂರ್ವೀ ಇತಿ । ದ್ಯೌಃ । ಮಜ್ಮನಾ ।

ಪೃಥಿವೀ । ಕಾವ್ಯೇನ ।

ವರಾಯ । ತೇ । ಘೃತವಂತಃ । ಸುತಾಸಃ । ಸ್ವಾದ್ಮನ್ । ಭವಂತು । ಪೀತಯೇ । ಮಧೂನಿ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ಸ್ವಭೂತೇನ ಮಜ್ಮನಾ ಶತ್ರೂಣಾಂ ಮಜ್ಜಕೇನ ಕಾವ್ಯೇನ ಕರ್ಮಣಾ ದ್ಯೌಃ ಪೃಥಿವೀ ದ್ಯಾವಾಪೃಥಿವ್ಯೌ ನು ಕ್ಷಿಪ್ರಂ ಸುಮಿತೇ । ನಿರ್ಮಿತೇ । ಕೀದೃಶ್ಯೌ ಮಾತ್ರೇ ನಿರ್ಮಾತ್ರ್ಯೌ ಪೂರ್ವೀ ಪೂರ್ವ್ಯೌ ಮಹತ್ಯೌ । ಯಸ್ಮಾದೀದೃಶೇನ ಮಹತ್ತ್ವೇನ ಯುಕ್ತಃ ತಸ್ಮಾದ್ಘೃತವಂತೋಽಗ್ನಿಮುಖತ್ವಾತ್ ತ್ವಾಂ ಕ್ಷರಂತೋ ದೀಪ್ತಿಮಂತೋ ವಾ ಸುಸಂಸ್ಕೃತತ್ವಾತ್ ಯದ್ವಾಜ್ಯಾಸಂಯುಕ್ತಾಃ ಸುತಾಸೋಽಭಿಷುತಾಃ ಸೋಮಾ ವರಾಯ ಶ್ರೇಷ್ಠಾಯ ತುಭ್ಯಮಿಂದ್ರಾಯ ಸ್ವಾದ್ಮನ್ ಭವಂತು । ಆಸ್ವಾದಿತಾಃ ಸಂತು । ಕಿಮರ್ಥಂ । ಪೀತಯೇ ಪಾನಾಯ । ಮಧೂನಿ ಮಧುರರಸಾತ್ಮಕಾನಿ ಪುರೋಡಾಶಾದೀನ್ಯನ್ಯಾನಿ ಹವೀಂಷಿ ಭಕ್ಷಣಾರ್ಥಂ ದತ್ತಾನಿ ಭವಂತು ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಮಜ್ಮನಾ—ಶಕ್ತಿಯಿಂದ ಕೂಡಿದ । ಕಾವ್ಯೇನ—ಕರ್ಮದಿಂದ । ಮಾತ್ರೇ—ಜಗನ್ನಿರ್ಮಾಪಕಿಯರೂ । ಪೂರ್ವೀ—ಮಹದ್ರೂಪವುಳ್ಳವರೂ ಆದ । ದ್ಯೌಃ ಪೃಥಿವೀ—ದ್ಯಾವಾಪೃಥಿವಿಗಳಿಬ್ಬರೂ । ನು—ಕ್ಷಿಪ್ರವಾಗಿ । ಸುಮಿತೇ—ನಿರ್ಮಿತರಾಗಿದ್ದಾರೆ । ಘೃತವಂತಃ—ಆಜ್ಯದಿಂದ ಕೂಡಿದವೂ । ಸುತಾಸಃ—ಹಿಂಡಲ್ಪಟ್ಟವೂ ಆದ ಸೋಮರಸಗಳು । ವರಾಯ ತೇ—ಶ್ರೇಷ್ಠನಾದ ನಿನಗೆ । ಪೀತಯೇ—ಪಾನಾರ್ಥವಾಗಿ । ಸ್ವಾದ್ಮನ್ ಭವಂತು—ರುಚಿಕರವಾಗಿ ಅರ್ಪಿತವಾಗಲಿ । ಮಧೂನಿ—ಮಧುರವಾದ ಹವಿಸ್ಸುಗಳೂ ಅರ್ಪಿತವಾಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಶಕ್ತಿಯುತವಾದ ಕರ್ಮದಿಂದ ಜಗನ್ನಿರ್ಮಾಪಕಿಯರೂ, ಮಹದ್ರೂಪವುಳ್ಳವರೂ ಆದ ದ್ಯಾವಾಪೃಥಿವಿಗಳಿಬ್ಬರೂ ಕ್ಷಿಪ್ರವಾಗಿ ನಿರ್ಮಿತರಾಗಿದ್ದಾರೆ. ಆಜ್ಯದಿಂದ ಕೂಡಿದವೂ ಹಿಂಡಲ್ಪಟ್ಟವೂ ಆದ ಸೋಮರಸಗಳು ಶ್ರೇಷ್ಠನಾದ ನಿನಗೆ ಪಾನಾರ್ಥವಾಗಿ ರುಚಿಕರವಾಗಿ ಅರ್ಪಿತವಾಗಲಿ. ಮಧುರವಾದ ಹವಿಸ್ಸುಗಳೂ ಅರ್ಪಿತವಾಲಿ.

## English Translation

By your overwhelming energy, Indra, the vast heaven and earth, the measurers (of all), have been quickly constructed: may the Soma-

libations mixed wiht ghee be acceptable to (you) who are most excellent :
(may the oblations be) sweet for your drinking.

॥ ಸಂಹಿತಾಪಾಠಃ ॥

ಆ ಮಧ್ವೋ ಅಸ್ಮಾ ಅಸಿಚನ್ನಮತ್ರಮಿಂದ್ರಾಯ ಪೂರ್ಣಂ ಸ ಹಿ ಸತ್ಯ-
ರಾಧಾಃ ।
ಸ ವಾವೃಧೇ ವರಿಮನ್ನಾ ಪೃಥಿವ್ಯಾ ಅಭಿ ಕ್ರತ್ವಾ ನರ್ಯಃ ಪೌಂಸ್ಯೈಶ್ಚ ॥೭॥

॥ ಪದಪಾಠಃ ॥

ಆ । ಮಧ್ವಃ । ಅಸ್ಮೈ । ಅಸಿಚನ್ । ಅಮತ್ರಂ । ಇಂದ್ರಾಯ । ಪೂರ್ಣಂ । ಸಃ । ಹಿ । ಸತ್ಯऽರಾಧಾಃ ।
ಸಃ । ವವೃಧೇ । ವರಿಮನ್ । ಆ । ಪೃಥಿವ್ಯಾಃ । ಅಭಿ । ಕ್ರತ್ವಾ । ನರ್ಯಃ । ಪೌಂಸ್ಯೈಃ । ಚ ॥ ೭ ॥

॥ ಸಾಯಣಭಾಷ್ಯಂ ॥

ಅಸ್ಮಾ ಇಂದ್ರಾಯೇಂದ್ರಾರ್ಥಂ ಮಧ್ವೋ ಮಧುರರಸಸ್ಯ ಸೋಮಸ್ಯ ಪೂರ್ಣಮಮತ್ರಂ ಗ್ರಹಚಮಸಾದಿಕಂ ಪಾತ್ರಮಾಸಿಚನ್ । ಅಭಿಮುಖ್ಯೇನ ಸ್ಥಿತ್ವಾ ಪರಯಾ ಭಕ್ತ್ಯಾ ಸ್ವದೀಯಾ ಋತ್ವಿಜಃ ಸಿಕ್ತವಂತಃ । ಅಗ್ನೌ ಪ್ರಕ್ಷಿಪ್ತವಂತಃ । ಹಿ ಯಸ್ಮಾತ್ಕಾರಣಾತ್ಸ ಇಂದ್ರಃ ಸತ್ಯರಾಧಾಃ ಸತ್ಯಧನಃ । ಯಜ-ಮಾನೇಭ್ಯೋ ದಾತವ್ಯತ್ವೇನಾವಿಸಂವಾದಿಧನ ಇತ್ಯರ್ಥಃ। ತಸ್ಮಾದಸಿಚನ್ನಿತಿ ಸಂಬಂಧಃ। ಅಗ್ನಾವಾಸಿಕ್ತೇನ ತೇನ ಪಾತ್ರೇಣ ತೃಪ್ತಃ ಸ ಇಂದ್ರಃ ಪೃಥಿವ್ಯಾ ಅಂತರಿಕ್ಷಸ್ಯ ವರಿಮನ್ನತಿಶಯೇನ ವಿಸ್ತೀರ್ಣೇ ಸ್ಥಾನ ಆಗತ್ಯಾಭಿ ವವೃಧೇ। ಅಭಿವರ್ಧತೇ। ಕೀದೃಶ ಇಂದ್ರಃ। ನರ್ಯೋ ನೃಭ್ಯೋ ಹಿತಃ । ಕ್ರತ್ವಾ ವೃತ್ರವಧಾದಿ-ಕರ್ಮಣಾ ಪ್ರಜ್ಞಾನೇನ ವಾ ಪೌಂಸ್ಯೈಶ್ಚ ಯುಕ್ತ ಇತಿ ಶೇಷಃ ॥

॥ ಪ್ರತಿಪದಾರ್ಥ ॥

ಹಿ—ಯಾವ ಪ್ರಭಾವದಿಂದ । **ಸಃ**—ಇಂದ್ರನು । **ಸತ್ಯರಾಧಾಃ**—ಸತ್ಯಾತ್ಮಕವಾದ ಧನವುಳ್ಳವನಾಗಿರುವನೋ ಆದುದರಿಂದಲೇ । **ಅಸ್ಮೈ ಇಂದ್ರಾಯ**—ಈ ಇಂದ್ರನನ್ನುದ್ದೇಶಿಸಿ । **ಮಧ್ವಃ**—ಮಧುರವಾದ ಸೋಮರಸದಿಂದ । **ಪೂರ್ಣಂ**—ತುಂಬಿದ । **ಅಮತ್ರಂ**—ಪಾತ್ರೆಯನ್ನು । **ಅಸಿಚನ್**—ಅರ್ಪಿಸುತ್ತಾರೆ । **ನರ್ಯಃ**—ಮಾನವರಿಗೆ ಹಿತಕಾರಿಯೂ । **ಕ್ರತ್ವಾ**—ಉತ್ತಮವಾದ ಕರ್ಮದಿಂದಲೂ । **ಪೌಂಸ್ಯೈಶ್ಚ**—ಪರಾಕ್ರಮದಿಂದಲೂ ಕೂಡಿದ । **ಸಃ**—ಇಂದ್ರನು । **ಆ ಪೃಥಿವ್ಯಾಃ**—ಅಂತರಿಕ್ಷದ । **ವರಿಮನ್**—ವಿಸ್ತೃತವಾದ ಪ್ರದೇಶದಲ್ಲಿ । **ಅಭಿ ವವೃಧೇ**—ವೃದ್ಧಿಯನ್ನು ಹೊಂದುತ್ತಾನೆ.

॥ ಭಾವಾರ್ಥ ॥

ಯಾವ ಪ್ರಭಾವದಿಂದ ಇಂದ್ರನು ಸತ್ಯಾತ್ಮಕವಾದ ಧನವುಳ್ಳವನಾಗಿರುವನೋ ಆದುದರಿಂದಲೇ ಈ ಇಂದ್ರನನ್ನುದ್ದೇಶಿಸಿ ಮಧುರವಾದ ಸೋಮರಸದಿಂದ ತುಂಬಿದ ಪಾತ್ರೆಯನ್ನು ಅರ್ಪಿಸುತ್ತಾರೆ. ಮಾನವರಿಗೆ ಹಿತಕಾರಿಯೂ, ಉತ್ತಮವಾದ ಕರ್ಮದಿಂದಲೂ ಪರಾಕ್ರಮದಿಂದಲೂ ಕೂಡಿದ ಇಂದ್ರನು ಅಂತರಿಕ್ಷದ ವಿಸ್ತೃತವಾದ ಪ್ರದೇಶದಲ್ಲಿ ವೃದ್ಧಿಯನ್ನು ಹೊಂದುತ್ತಾನೆ.

English Translation

(The worshipper) have poured out the vessel full of the sweet (Soma) (into the fire) for that Indra, for he is true (to his promises) of wealth: Indra, the friend of man, (distinguished) by his actions, and his prowess, is magnified throughout the expanse of the firmament.

॥ ಸಂಹಿತಾಪಾಠಃ ॥

ವ್ಯಾನಳಿಂದ್ರಃ ಪೃತನಾಃ ಸ್ವೋಜಾ ಆಸ್ಮೈ ಯತಂತೇ ಸಖ್ಯಾಯ ಪೂರ್ವೀಃ।
ಆ ಸ್ಮಾ ರಥಂ ನ ಪೃತನಾಸು ತಿಷ್ಠ ಯಂ ಭದ್ರಯಾ ಸುಮತ್ಯಾ ಚೋದಯಾಸೇ ॥ ೮ ॥

॥ ಪದಪಾಠಃ ॥

ವಿ । ಆನಟ್ । ಇಂದ್ರಃ । ಪೃತನಾಃ । ಸುಽಓಜಾಃ । ಆ । ಅಸ್ಮೈ । ಯತಂತೇ । ಸಖ್ಯಾಯ । ಪೂರ್ವೀಃ ।
ಆ । ಸ್ಮ । ರಥಂ । ನ । ಪೃತನಾಸು । ತಿಷ್ಠ । ಯಂ । ಭದ್ರಯಾ । ಸುಽಮತ್ಯಾ । ಚೋದಯಾಸೇ ॥ ೮ ॥

। ಸಾಯಣಭಾಷ್ಯಂ ।

ಸ್ವೋಜಾ ಶೋಭನಬಲ ಇಂದ್ರಃ ಪೃತನಾಃ ಶತ್ರುಸೇನಾ ವ್ಯಾನಟ್। ವ್ಯಾಪ್ನೋತಿ । ಸ ಇಂದ್ರಃ ಸಂಗ್ರಾಮೇಷು ಕೇನಾಪ್ಯಪ್ರತಿಹನ್ಯಮಾನಃ ಸಞ್ಛತ್ರೂಞ್ಜಯತೀತ್ಯರ್ಥಃ । ಕಿಂಚ ಪೂರ್ವೀಃ । ಅತ್ರ ಪೂರ್ವಶಬ್ದ ಉತ್ಕೃಷ್ಟವಾಚೀ । ಉತ್ಕೃಷ್ಟಾಃ ಶತ್ರುಸೇನಾ ಅಪ್ರಭವಂತ್ಯಃ ಸತ್ಯೋಽಸ್ಮಾ ಅಸ್ಯೇಂದ್ರಸ್ಯ ಸಖ್ಯಾಯ ಸಂಧಿತ್ವಲಕ್ಷಣಾಯ ಸಖಿತ್ವಾಯಾ ಯತಂತೇ । ಸಂಧಿಂ ಕರ್ತುಮಿಚ್ಛಂತೀತ್ಯರ್ಥಃ । ಅಪರೋಽರ್ಧರ್ಚಃ ಪ್ರತ್ಯಕ್ಷಕೃತತ್ವಾದ್ಭಿನ್ನಂ ವಾಕ್ಯಂ। ಹೇ ಇಂದ್ರ ತ್ವಂ ಯಂ ಸ್ವೀಯಂ ರಥಂ ಭದ್ರಯಾ ಕಲ್ಯಾಣ್ಯಾ ಸುಮತ್ಯಾ ಶೋಭನಯಾ ಪರಾನುಗ್ರಹಯಾ ಬುದ್ಧ್ಯಾ ಚೋದಯಾಸೇಃ ಯುಜ್ಞಾನ್ಪ್ರತಿ

ಪ್ರೇರಯಸಿ ತಂ ರಥಮಸ್ಮದ್ಯಜ್ಞಂ ಪ್ರತ್ಯಾಗಂತುಂ ಮಹಾದರೇಣಾ ತಿಷ್ಠ। ಆರೋಹ। ತತ್ರೇ ದೃಷ್ಟಾಂತಃ। ಪೃತನಾಸು ಸಂಗ್ರಾಮೇಷು ರಥಂ ನ ಯಥಾ ಸ್ವರಥಂ ಮಹಾದರೇಣಾತಿಷ್ಠಸಿ ತದ್ವತ್। ಸ್ಮೇತಿ ಪದಪೂರಣಃ॥

। ಪ್ರತಿಪದಾರ್ಥ ।

**ಸ್ವೋಜಾಃ**—ಉತ್ತಮವಾದ ವೀರ್ಯವುಳ್ಳ । **ಇಂದ್ರಃ**—ಇಂದ್ರನು । **ಪೃತನಾಃ**—ಶತ್ರುಸೈನ್ಯಗಳನ್ನು । **ವ್ಯಾನಟ್**—ವ್ಯಾಪಿಸುತ್ತಾನೆ । **ಪೂರ್ವೀಃ**—ಉತ್ಕೃಷ್ಟವಾದ ಶತ್ರುಸೈನ್ಯಗಳು । **ಅಸ್ಯ**—ಈ ಇಂದ್ರನೊಡನೆ । **ಸಖ್ಯಾಯ**—ಸಂಧಿಗಾಗಿ । **ಆ ಯತಂತೇ**—ಪ್ರಯತ್ನಿಸುತ್ತವೆ । (ಎಲೈ ಇಂದ್ರನೇ!) **ಪೃತನಾಸು**—ಯುದ್ಧಗಳಲ್ಲಿ। **ರಥಂ ನ**—ನಿನ್ನ ಉತ್ತಮವಾದ ರಥವನ್ನು ಹತ್ತುವಂತೆ। **ಯಂ**—ಯಾವ ರಥವನ್ನು। **ಭದ್ರಯಾ**—ಕಲ್ಯಾಣಾತ್ಮಕವಾದುದೂ। **ಸುಮತ್ಯಾ**—ಅನುಗ್ರಹಾತ್ಮಕವಾದುದೂ ಆದ ಬುದ್ಧಿಯಿಂದ। **ಚೋದಯಾಸೇ**-ಪ್ರೇರಿಸುವೆಯೋ। **ರಥಂ**—ಅದೇ ರಥವನ್ನು। **ಆ ತಿಷ್ಠ**—ನಮ್ಮ ಯಜ್ಞಕ್ಕೆ ಬರಲು ಹತ್ತು.

। ಭಾವಾರ್ಥ ।

ಉತ್ತಮವಾದ ವೀರ್ಯವುಳ್ಳ ಇಂದ್ರನು ಶತ್ರುಸೈನ್ಯಗಳನ್ನು ವ್ಯಾಪಿಸುತ್ತಾನೆ. ಉತ್ಕೃಷ್ಟವಾದ ಶತ್ರುಸೈನ್ಯಗಳು ಈ ಇಂದ್ರನೊಡನೆ ಸಂಧಿಗಾಗಿ ಪ್ರಯತ್ನಿಸುತ್ತವೆ. ಎಲೈ ಇಂದ್ರನೇ, ಯುದ್ಧಗಳಲ್ಲಿ ನಿನ್ನ ಉತ್ತಮವಾದ ರಥವನ್ನು ಹತ್ತುವಂತೆ ಯಾವ ರಥವನ್ನು ಕಲ್ಯಾಣಾತ್ಮಕವಾದುದೂ, ಅನುಗ್ರಹಾತ್ಮಕವಾದುದೂ ಆದ ಬುದ್ಧಿಯಿಂದ ಪ್ರೇರಿಸುವೆಯೋ ಅದೇ ರಥವನ್ನು ನಮ್ಮ ಯಜ್ಞಕ್ಕೆ ಬರಲು ಹತ್ತಿ ಕುಳಿತುಕೊ.

English Translation

The powerful Indra reaches the hosts (of the enemy), the mightiest (hosts) exert themselves to obtain his friendship: ascend, Indra, that chariot which you direct with favourable intent (to our sacrifice), as a chariot (which you mount) against the armies (of the foe).

## ಮೂವತ್ತನೆಯ ಸೂಕ್ತವು.

### ಪೀಠಿಕೆ

ಈ ಸೂಕ್ತದಿಂದ ಮುಂದಿನ ಐದು ಸೂಕ್ತಗಳಿಗೆ ಇಲೂಷ ಎಂಬುವನ ಪುತ್ರನಾದ ಕವಷನೆಂಬುವನು ಋಷಿಯು. ಇವನು ಶೂದ್ರಜಾತಿಯ ದಾಸಿಯಲ್ಲಿ ಉತ್ಪನ್ನನಾದ್ದರಿಂದ ಇವನು ಶೂದ್ರನೂ ದಾಸಿಯ ಪುತ್ರನೂ ಆಗಿರುವನೆಂದು ಋಷಿಗಳೇ ಮೊದಲಾದ ಬ್ರಾಹ್ಮಣರು ಇವನೊಡನೆ ಸಾಮಾಜಿಕ ವ್ಯವಹಾರವನ್ನಿಟ್ಟುಕೊಂಡಿರಲಿಲ್ಲ. ಯಜ್ಞಶಾಲೆಗೆ ಇವನಿಗೆ ಪ್ರವೇಶವಿರಲಿಲ್ಲ. ಐತರೇಯಬ್ರಾಹ್ಮಣದಲ್ಲಿಯೂ ಕೌಷೀತಕೀ ಬ್ರಾಹ್ಮಣದಲ್ಲಿಯೂ ಒಂದು ಪೂರ್ವೇತಿಹಾಸವಿದೆ. ಅದನ್ನು ಇಲ್ಲಿ ವಿವರಿಸಿದೇವೆ—

## ಐತರೇಯಬ್ರಾಹ್ಮಣದಲ್ಲಿರುವ ವಿವರಣೆ

**ಋಷಯೋ ವೈ ಸರಸ್ವತ್ಯಾಂ ಸತ್ರಮಾಸತ ತೇ ಕವಷಮೈಲೂಷಂ ಸೋಮಾದನಯನ್ದಾಸ್ಯಾಃ ಪುತ್ರಃ ಕಿತವೋಽಬ್ರಾಹ್ಮಣಃ ಕಥಂ ನೋ ಮಧ್ಯೇಽದೀಕ್ಷಿಷ್ಟೇತಿ ತಂ ಬಹಿರ್ಧನ್ವೋದವಹನ್ನತ್ರೈನಂ ಪಿಪಾಸಾ ಹಂತು ಸರಸ್ವತ್ಯಾ ಉದಕಂ ಮಾ ಪಾದಿತಿ ಸ ಬಹಿರ್ಧನ್ವೋದೂಳ್ಹಃ ಪಿಪಾಸಯಾ ವಿತ್ತ ಏತದಪೋನಪ್ತ್ರೀಯಮಪಶ್ಯತ್ಪ್ರ ದೇವತ್ರಾ ಬ್ರಹ್ಮಣೇ ಗಾತುರೇತ್ವಿತಿ ತೇನಾಪಾಂ ಪ್ರಿಯಂ ಧಾಮೋಪಾಗಚ್ಛತ್ತಮಾಪೋಽನೂದಾಯಂಸ್ತಂ ಸರಸ್ವತೀ ಸಮಂತಂ ಪರ್ಯಧಾವತ್** ॥ (ಐ. ಬ್ರಾ. ೮-೧೯)

ಪೂರ್ವದಲ್ಲಿ ಭೃಗುಗಳು, ಅಂಗಿರಸರು ಮೊದಲಾದ ಕೆಲವು ಋಷಿಗಳು ಸರಸ್ವತೀನದಿಯ ತೀರದಲ್ಲಿ ಸತ್ರಯಾಗವನ್ನು ಮಾಡುತ್ತಿದ್ದರು. ಸತ್ರಯಾಗವೆಂದರೆ ಹನ್ನೆರಡು ದಿನಗಳಿಗೆ ಕಮ್ಮಿ ಇಲ್ಲದೆ ಹದಿಮೂರು ಹದಿನಾಲ್ಕು ಇತ್ಯಾದಿ ಹೆಚ್ಚು ದಿನಗಳವರೆಗೆ ನಡೆಯುವ ಯಾಗವಿಶೇಷವು. ಈ ವಿಧವಾದ ಯಾಗದಲ್ಲಿ ಅನೇಕ ಯಜಮಾನರಿರುವರು ಎಂದರೆ ಅನೇಕರು ಒಟ್ಟಾಗಿ ಸೇರಿ ಈ ಯಾಗವನ್ನು ಮಾಡುವರು. ಆ ಯಜ್ಞವೇದಿಯಲ್ಲಿ ಭೃಗುಗಳು, ಅಂಗಿರಸರು ಮೊದಲಾದ ಅನೇಕ ಋಷಿಗಳು ಸೇರಿದ್ದರು. ಅವರ ಮಧ್ಯದಲ್ಲಿ ಇಲೂಷನೆಂಬುವನ ಪುತ್ರನಾದ ಕವಷನೆಂಬುವನೂ ಕೂತಿದ್ದನು. ಇವನು ಜಾತಿಯಲ್ಲಿ ಶೂದ್ರನು ಮತ್ತು ದಾಸಿಯ ಪುತ್ರನು. ಇವನು ತಮ್ಮ ಮಧ್ಯದಲ್ಲಿ ಬಂದು ಕುಳಿತಿರುವುದನ್ನು ಋಷಿಗಳು ನೋಡಿ—ಇದೇನು, ದಾಸಿಯ ಪುತ್ರನೂ ಜೂಜುಗಾರನೂ ಆದ ಈ ಕವಷನು ಇಲ್ಲಿಗೆ ಬಂದು ನಮ್ಮ ಮಧ್ಯದಲ್ಲಿ ಕುಳಿತುಕೊಳ್ಳುವುದೆಂದರೇನು ? ಇವನು ಬ್ರಾಹ್ಮಣನಲ್ಲ. ಬ್ರಾಹ್ಮಣನಲ್ಲದವನು ಶಿಷ್ಟಾಚಾರಸಂಪನ್ನರಾದ ಋಷಿಗಳ ಮಧ್ಯದಲ್ಲಿ ಬಂದು ಕುಳಿತು ಯಜ್ಞಯಾಗಾದಿಗಳ, ವಿಧಿನಿಯಮಾದಿಗಳ ರಹಸ್ಯವನ್ನು ಅರಿಯುವುದುಂಟೇ ? ಇದು ಲೋಕವಿರುದ್ಧವು ಎಂದು ಹೇಳಿ ಆ ಕವಷನನ್ನು ಬಲವಂತದಿಂದ ಯಜ್ಞಶಾಲೆಯಿಂದಾಚೆಗೆ ಹೋಗುವಂತೆ ಹೊಡೆದಟ್ಟಿದರು. ಮತ್ತು ಪವಿತ್ರವಾದ ಈ ಸರಸ್ವತೀನದಿಯ ಜಲವನ್ನು ಪಾನಮಾಡಲು ಈ ಪಾಪಿಷ್ಠನು ಅರ್ಹನಲ್ಲವೆಂದು ಬಗೆದು ಅವನನ್ನು ಸರಸ್ವತೀನದಿಯಿಂದ ಬಹುದೂರ ಪ್ರದೇಶದಲ್ಲಿರುವ ನೀರೂ, ನೆರಳಿಲ್ಲದ ಒಂದು ಮರಳು ಕಾಡಿಗೆ ಬಲವಂತದಿಂದ ಕೊಂಡೊಯ್ದು ಅಲ್ಲಿ ಬಾಯಾರಿಕೆಯಿಂದ ಇವನು ಸಾಯಲಿ ಎಂದು ಅವನನ್ನು ಅಲ್ಲಿ ಬಿಟ್ಟು ಬಂದರು. ನೀರೂ ನೆರಳೂ ಇಲ್ಲದ ಆ ಮರಳ್ಕಾಡಿನಲ್ಲಿ ಕವಷನು ಬಾಯಾರಿಕೆಯಿಂದ ಬಳಲಿ ಬೆಂಡಾಗಿ ವ್ಯಥೆಪಡುತ್ತಿದ್ದಾಗ **ಪ್ರ ದೇವತ್ರಾ ಬ್ರಹ್ಮಣೇ** (ಋ. ಸಂ. ೧೦-೩೦) ಎಂಬ ಸೂಕ್ತವು ಇವನಿಗೆ ಗೋಚರಿಸಿತು. ಆಗ ಅವನು ಆ ಮಂತ್ರವನ್ನು ಜಪಮಾಡಲಾಗಿ ಜಲಾಭಿಮಾನಿದೇವತೆಗಳ ಅನುಗ್ರಹದಿಂದ ಜಲಸಮೃದ್ಧಿಯಿಂದಕೂಡಿದ ಒಂದು ಪ್ರದೇಶವು ಇವನಿಗೆ ಗೋಚರವಾಯಿತು. ಅಲ್ಲಿಗೆ ಇವನು ಹೋದಕೂಡಲೇ ಜಲಾಭಿಮಾನಿದೇವತೆಗಳೂ ಸರಸ್ವತೀ ನದಿಯೂ ಇವನನ್ನು ಅನುಗ್ರಹಾತ್ಮಕದೃಷ್ಟಿಯಿಂದ ಸ್ವಾಗತಿಸಿ ಇವನ ಸುತ್ತಲೂ ಪ್ರವಾಹೋದಕದಿಂದ ವ್ಯಾಪಿಸಿದರು-

**ತಸ್ಮಾದ್ಧಾಪ್ಯೇತರ್ಹಿ ಪರಿಸಾರಕಮಿತ್ಯಾಚಕ್ಷತೇ ಯದೇನಂ ಸರಸ್ವತೀ ಸಮಂತಂ ಪರಿಸಸಾರ** ।

ಈ ರೀತಿ ಸರಸ್ವತೀನದಿಯು ತನ್ನ ಪ್ರವಾಹದಿಂದ ಈ ಕವಷನನ್ನು ಸುತ್ತುವರಿದ ಪ್ರದೇಶವನ್ನು ಪರಿಸಾರಕವೆಂಬ ಶ್ರೇಷ್ಠವಾದ ತೀರ್ಥವಿಶೇಷವೆಂದು ಪುರಾಣಾಭಿಜ್ಞರು ಹೇಳುವರು. ಏಕೆಂದರೆ, ಈ ಕವಷನ ಸುತ್ತಲೂ ಸರಸ್ವತಿಯು ವ್ಯಾಪಿಸಿದ್ದರಿಂದ (**ಏನಂ ಪರಿಸಸಾರ**) ಈ ಸ್ಥಾನಕ್ಕೆ ಪರಿಸಾರಕವೆಂಬ ಹೆಸರು ಅನ್ವರ್ಥನಾಮವಾಯಿತು ಎಂದಭಿಪ್ರಾಯವು.

**ತೇ ವಾ ಋಷಯೋಽಬ್ರುವನ್ವಿದುರ್ವಾ ಇಮಂ ದೇವಾ ಉಪೇಮಂ ಹ್ವಯಾಮಹಾ ಇತಿ ತಥೇತಿ ತಮುಪಾಹ್ವಯಂತ ತಮುಪಹೂಯೈತದಪೋನಪ್ತ್ರೀಯಮಕುರ್ವತ ಪ್ರ ದೇವತ್ರಾ ಬ್ರಹ್ಮಣೇ ಗಾತುರೇತ್ವಿತಿ ತೇನಾಪಾಂ ಪ್ರಿಯಂ ಧಾಮೋಪಾಗಚ್ಛನ್ನುಪ ದೇವಾನಾಂ ।**

ಸರಸ್ವತೀನದಿಯು ತನ್ನ ಪ್ರವಾಹದಿಂದ ಕವಷನನ್ನು ಸುತ್ತುಗಟ್ಟಿ ಅವನಿಗೆ ಅನುಗ್ರಹಮಾಡಿದುದನ್ನು ಋಷಿಗಳು ನೋಡಿ ತಮ್ಮತಮ್ಮಲ್ಲಿ ಇಂತೆಂದರು. ಈ ಕವಷನು ಸರಸ್ವತಿಯೇ ಮೊದಲಾದ ಜಲಾಧಿಪರಾದ ದೇವತೆಗಳ ಅನುಗ್ರಹಕ್ಕೆ ಪಾತ್ರನಾಗಿರುವನು. ಇವನಲ್ಲಿ ಜೂಜುಗಾರನ ದೋಷಗಳಾವುವೂ ಇದ್ದಂತೆ ಕಾಣುವುದಿಲ್ಲ. ಅವನನ್ನು ನಮ್ಮ ಒಳಗೆ ಬರುವಂತೆ ಹಿಂದಕ್ಕೆ ಕರೆಯೋಣ ಎಂದು ನಿಶ್ಚಯಿಸಿ ಆ ಕವಷನನ್ನು ಹಿಂದಕ್ಕೆ ಬರುವಂತೆ ಕರೆದರು. ಮತ್ತು ಅವನಿಂದ ದೃಷ್ಟವಾದ **ಪ್ರ ದೇವತ್ರಾ ಬ್ರಹ್ಮಣೇ** ಎಂಬ ಸೂಕ್ತವನ್ನೂ ಅಪೋನಪ್ತ್ರೀಯವೆಂಬ ಕರ್ಮವನ್ನೂ ಸಾಂಗಗೊಳಿಸಿ ಜಲದೇವತೆಗಳ ಮತ್ತು ಇತರ ದೇವತೆಗಳ ಪ್ರಿಯಸ್ಥಾನವನ್ನು ಎಂದರೆ ಅನುಗ್ರಹವನ್ನು ಸಂಪಾದಿಸಿದರು.

**ಉಪಾಪಾಂ ಪ್ರಿಯಂ ಧಾಮ ಗಚ್ಛತ್ಯುಪ ದೇವಾನಾಂ ಜಯತಿ ಪರಮಂ ಲೋಕಂ ಯ ಏವಂ ವೇದ ಯಶ್ಚೈವಂ ವಿದ್ವಾನೇತದಪೋನಪ್ತ್ರೀಯಂ ಕುರುತೇ ।**

(ಐ. ಬ್ರಾ. ೮-೧)

ಯಾವ ಪುರುಷನು ಮೇಲೆ ಹೇಳಿದ ವಿಷಯಗಳನ್ನು ತಿಳಿದುಕೊಂಡು ಅಪೋನಪ್ತ್ರೀಯವೆಂಬ ಕರ್ಮವನ್ನು ಸಾಂಗಗೊಳಿಸುವನೋ ಆ ಪುರುಷನು ದೇವತೆಗಳ ಅನುಗ್ರಹಕ್ಕೆ ಪಾತ್ರನಾಗಿ ಉತ್ತಮವಾದ ಲೋಕವನ್ನು ಪಡೆಯುವನು.

ಕೌಷೀತಕೀಬ್ರಾಹ್ಮಣದಲ್ಲಿಯೂ ಈ ಕವಷನ ವಿಷಯವು ವರ್ಣಿತವಾಗಿರುವುದನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸಿದೇವೆ—

## (ಕೌಷೀತಕೀಬ್ರಾಹ್ಮಣದ ವಿವರಣೆ)

**ಮಾಧ್ಯಮಾಃ ಸರಸ್ವತ್ಯಾಂ ಸತ್ರಮಾಸತ ತದ್ಧಾಪಿ ಕವಷೋ ಮಧ್ಯೇ ನಿಷಸಾದ । ತಂ ಹೇಮ ಉಪೋದುರ್ದಾಸ್ಯಾ ವೈ ತ್ವಂ ಪುತ್ರೋಽಸಿ ನ ವಯಂ ತ್ವಯಾ ಸಹ ಭಕ್ಷಯಿಷ್ಯಾಮ ಇತಿ ಸಹ ಕ್ರುದ್ಧಃ ಪ್ರದ್ರವನ್ತ್ಸರಸ್ವತೀಮೇತೇನ ಸೂಕ್ತೇನ ತುಷ್ಟಾವ । ತಂ ಹೇಯಮನ್ವೇಯಾಯ ತ ಉ ಹೇಮೇ ನಿರಾಗಾ ಇವ ಮೇನಿರೇ ತಂ ಹಾನ್ವಾವೃತ್ಯೋಚುರ್ಋಷೇ ನಮಸ್ತೇ ಅಸ್ತು ಮಾ ನೋ ಹಿಂಸೀಸ್ತ್ವಂ ವೈ ನಃ ಶ್ರೇಷ್ಠೋಽಸಿ ಯಂ ತ್ವೇಯಮನ್ವೇತೀತಿ ತಂ ಹ ಜ್ಞಪಯಾಂ ಚಕ್ರುಸ್ತಸ್ಯ ಹ ಕ್ರೋಧಂ ವಿನಿನ್ಯುಃ । ಸ ಏಷ ಕವಷಸ್ಯೈಷ ಮಹಿಮಾ ಸೂಕ್ತಸ್ಯ ಚಾನುವೇದಿತಾ ॥**　(ಕೌ. ಬ್ರಾ. ೧೨ ೩)

ಪೂರ್ವದಲ್ಲಿ ಮಾಧ್ಯಮರೆಂಬ ಋಷಿಗಳು ಸರಸ್ವತೀನದಿಯ ದಡದಲ್ಲಿ ಸತ್ರಯಾಗವನ್ನು ಮಾಡುತ್ತಿದ್ದರು. ಇಲ್ಲಿ ಮಾಧ್ಯಮರು ಎಂದರೆ ಋಗ್ವೇದದಲ್ಲಿರುವ ೧೦ ಮಂಡಲಗಳಲ್ಲಿ ಮೊದಲನೆಯ ಮಂಡಲವನ್ನೂ, ಕೊನೆಯ ೯, ೧೦ ನೇ ಮಂಡಲಗಳನ್ನು ಬಿಟ್ಟರೆ ಮಧ್ಯದಲ್ಲಿರುವ ೭ ಮಂಡಲಗಳಲ್ಲಿರುವ ಸೂಕ್ತಗಳಿಗೆ ದ್ರಷ್ಟೃಗಳಾದ ಗೃತ್ಸಮದ, ವಿಶ್ವಾಮಿತ್ರ, ವಾಮದೇವ, ಅತ್ರಿ, ಭರದ್ವಾಜ, ವಸಿಷ್ಠ ಎಂಬ ಋಷಿಗಳು ಮತ್ತು ಅವರ ವಂಶಜರಾದ ಋಷಿಗಳು ಎಂದರ್ಥವು. ಈ ಋಷಿಗಳು ಸರಸ್ವತೀನದೀತೀರದಲ್ಲಿ ಯಜ್ಞಮಾಡುತ್ತಿದ್ದಾಗ ಅವರ ಮಧ್ಯದಲ್ಲಿ ಕವಷನೆಂಬವನು ಬಂದ-

ಕುಳಿತಿದ್ದನು. ಅವನನ್ನು ನೋಡಿ ಋಷಿಗಳು ಕೋಪದಿಂದ—ಎಲೈ ಕವಷನೇ, ನೀನು ದಾಸಿಯ ಪುತ್ರನು, ಬ್ರಾಹ್ಮಣನಲ್ಲ. ನಿನ್ನ ಜತೆಯಲ್ಲಿ ಕುಳಿತು ನಾವು ಏನನ್ನೂ ತಿನ್ನುವುದಿಲ್ಲ ಮತ್ತು ಪಾನಮಾಡುವುದಿಲ್ಲ. ಆದ್ದರಿಂದ ನೀನು ಈ ಪ್ರದೇಶವನ್ನು ಬಿಟ್ಟು ಹೊರಟುಹೋಗು ಎಂದು ಗದರಿಸಿದರು. ಆ ಮಾತನ್ನು ಕೇಳಿ ಕವಷನು ಕೋಪದಿಂದ ಆ ಸ್ಥಳವನ್ನು ಬಿಟ್ಟೆದ್ದು ಸರಸ್ವತೀನದಿಯ ಬಳಿಗೆ ಓಡಿಹೋಗಿ ಆ ದೇವತೆಯನ್ನು **ಪ್ರ ದೇವತ್ರಾ ಬ್ರಹ್ಮಣೇ** ಎಂಬ ಈ ಸೂಕ್ತದಿಂದ ಸ್ತುತಿಸಿ ಆ ದೇವತೆಯ ಅನುಗ್ರಹವನ್ನು ಪಡೆದನು. ಸರಸ್ವತಿಯು ಅವನ ಸ್ತುತಿಯಿಂದ ಸಂತುಷ್ಟಳಾಗಿ ಅವನು ಹೋದ ಕಡೆಯಲ್ಲೆಲ್ಲಾ ಅವನನ್ನೇ ಅನುಸರಿಸಿ ಹೋಗುತ್ತಿದ್ದಳು. ಇದನ್ನು ನೋಡಿ ಋಷಿಗಳು—ಇವನು ದೋಷಯುಕ್ತನಲ್ಲ, ಆದ್ದರಿಂದ ಇವನನ್ನು ಹಿಂದಕ್ಕೆ ಕರೆಯೋಣ ಎಂದು ಯೋಚಿಸಿ ಅವನ ಬಳಿಗೆ ಹೋಗಿ ಎಲೈ ಕವಷನೇ, ಇಗೋ ನಿನಗೆ ನಮಸ್ಕಾರವು, ನೀನು ಋಷಿಗಳಾದ ನಮ್ಮಲ್ಲಿ ಶ್ರೇಷ್ಠನಾಗಿರುವೆ. ನಾವು ಮಾಡಿದ ಅಪರಾಧವನ್ನು ಕ್ಷಮಿಸು, ನಮ್ಮನ್ನು ಹಿಂಸಿಸಬೇಡ. ಸರಸ್ವತೀನದಿಯೂ ನಿನ್ನನ್ನು ಹಿಂಬಾಲಿಸುತ್ತಿರುವಳು. ನಿನ್ನಲ್ಲಿ ಯಾವ ದೋಷವೂ ಇಲ್ಲ. ಎಂದು ನಾನಾವಿಧವಾಗಿ ಪ್ರಾರ್ಥಿಸಿ ಅವನನ್ನು ತಮ್ಮ ಯಜ್ಞದಲ್ಲಿ ನೇತೃವನ್ನಾಗಿಮಾಡಿ ಅವನ ಕೋಪವನ್ನು ಸಮಾಧಾನಮಾಡಿದರು. ಇವೇ ಕವಷಋಷಿಯ ಮಾಹಾತ್ಮ್ಯೆಯು ಮತ್ತು ಈ ಋಷಿಯಿಂದಲೇ ಈ **ಪ್ರ ದೇವತ್ರಾ ಬ್ರಹ್ಮಣೇ** ಎಂಬ ಈ ಸೂಕ್ತವು ದೃಷ್ಟವಾಗಿ ಪ್ರಸಿದ್ಧವಾಗಿರುವುದು.

ಈ ಕವಷಋಷಿಗೆ ಈ ಸೂಕ್ತವು ಹೇಗೆ ಗೋಚರಿಸಿತೆಂಬ ವಿಷಯದಲ್ಲಿ ಕೌಷೀಕಕೀಬ್ರಾಹ್ಮಣವಲ್ಲಿಯೇ ಹೀಗೆ ಹೇಳಿದೆ—

> **ತದ್ಧ ಸ್ಮ ಪುರಾ ಯಜ್ಞಮುಹೋ ರಕ್ಷಾಂಸಿ ತೀರ್ಥೇಷ್ವಪೋ ಗೋಪಾಯಂತಿ। ತದೇಕೇಽಪೋಽಚ್ಛ ಜಗ್ಮುಸ್ತತ ಏವ ತಾನ್ ಸರ್ವಾನ್ ಜಘ್ನುಸ್ತ ಏವ ತತ್ ಕವಷಃ ಸೂಕ್ತಮಪಶ್ಯತ್ಪಂಚದಶರ್ಚಂ ಪ್ರ ದೇವತ್ರಾ ಬ್ರಹ್ಮಣೇ ಗಾತುರೇತ್ವಿತಿ ತದನ್ವಬ್ರವೀತ್ತೇನ ಯಜ್ಞಮುಹೋ ರಕ್ಷಾಂಸಿ ತೀರ್ಥೇಭ್ಯೋಽಪಾಹನ್ ॥**

ಪೂರ್ವದಲ್ಲಿ ರಾಕ್ಷಸರು ಯಜ್ಞಾದಿಗಳಿಗೆ ವಿಘ್ನವನ್ನುಂಟುಮಾಡುತ್ತಾ, ಸ್ನಾನಾರ್ಥವಾಗಿ ನದಿಗಳಿಗೆ ಹೋಗುವ ಜನರನ್ನು ಕೊಲ್ಲುತ್ತಿದ್ದರು. ಮಂತ್ರದ್ರಷ್ಟೃವಾದ ಕವಷನು ಈ ಸೂಕ್ತವನ್ನು ತನ್ನ ಜ್ಞಾನದೃಷ್ಟಿಯಿಂದ ಕಂಡು ಅವನ್ನು ಪಠಿಸಿದನು. ಆ ಮಂತ್ರಪಠನದಿಂದ ನದಿಯ ಸಮೀಪದಲ್ಲಿದ್ದ ರಾಕ್ಷಸರನ್ನು ಅಲ್ಲಿಂದ ಓಡಿಸಿ ಅವರನ್ನು ನಾಶಮಾಡಿದನು. ಎಂದು ಹೇಳಿದೆ.

## ಅಪೋನಪ್ತ್ರೀಯವೆಂಬ ಕರ್ಮ

ಈ ಸೂಕ್ತದ ಋಕ್ಕುಗಳನ್ನುಪಯೋಗಿಸಿ ಅಪೋನಪ್ತ್ರೀಯವೆಂಬ ಯಜ್ಞಾಂಗಕರ್ಮವನ್ನು ಆಚರಿಸುವರು. ಅಪೋನಪ್ತ್ರೀಯವೆಂದರೆ ವಸತೀವರೀ ಎಂಬ ಪಾತ್ರೆಯಲ್ಲಿರುವ ನೀರನ್ನೂ ಏಕಧನಾ ಎಂಬ ಮತ್ತೊಂದು ಪಾತ್ರೆಯಲ್ಲಿರುವ ನೀರನ್ನು ವಿಧ್ಯುಕ್ತವಾಗಿಯೂ ಮಂತ್ರಪೂರ್ವಕವಾಗಿಯೂ ಸೇರಿಸುವುದು.

ಹೋತೃವು ಪ್ರಾತರನುವಾಕಮಂತ್ರಗಳನ್ನು ಪಠಿಸಿದನಂತರ ಅಧ್ವರ್ಯುವು ಹೋತೃವನ್ನುದ್ದೇಶಿಸಿ— **ಪರಿಹಿತೇಽಪ ಇಷ್ಯ ಹೋತಃ** ಎಂಬ ಪ್ರೈಷಮಂತ್ರದಿಂದ ನಿರ್ದೇಶಿಸುವನು. ಅದಕ್ಕೆ ಪ್ರತ್ಯುತ್ತರವಾಗಿ ಹೋತೃವು— **ಅಪೋನಪ್ತ್ರೀಯಾ ಅಸ್ವಾಹ** ಎಂದು ಹೇಳುವನು. ಅನಂತರ ಅಧ್ವರ್ಯುವು ಪ್ರೈಷಮಂತ್ರಗಳ ಮೂಲಕ

ಚಮಸಾಧ್ವರ್ಯು, ಮೈತ್ರಾವರುಣ, ಏಕಧನಾಪಾತ್ರೆಯನ್ನು ಧರಿಸಿರುವವರು ಇವರನ್ನು ಬರುವಂತೆ ಹೇಳುವನು. ಯಜಮಾನನ ಪತ್ನಿಯನ್ನು ಕರೆತರುವಂತೆ ನೇಷ್ಟೃವಿಗೆ ನಿರ್ದೇಶಿಸುವನು. ಎಲೈ ಆಗ್ನೀಧ್ರನೇ, ಹೋತೃವಿನ ಚಮಸವನ್ನೂ ವಸತೀವರೀಕಲಶವನ್ನೂ ಚಾತ್ವಾಲದಲ್ಲಿ ಪರಸ್ಪರಾಭಿಮುಖವಾಗುವಂತೆ ಇರಿಸು ಎಂದು ಹೇಳುವನು. ಅನಂತರ ಚಮಸಾಧ್ವರ್ಯುವು ಚಮಸವನ್ನು ತರುವನು. ಏಕಧನಾಪಾತ್ರೆಯನ್ನು ಹಿಡಿದಿರುವವರು ಮೂರು ಪಾತ್ರೆಗಳನ್ನು ತರುವರು. ಅನಂತರ ಅಧ್ವರ್ಯುವು ಆ ಮೂರು ಪಾತ್ರೆಗಳಲ್ಲಿಯೂ ಒಂದೊಂದು ದರ್ಭೆಯನ್ನು ಹಾಕಿ ಶುದ್ಧಿಗೊಳಿಸುವನು. ನೇಷ್ಟೃವು ಯಜಮಾನನ ಪತ್ನಿಯನ್ನು ಕರೆತರುವನು. ಆಕೆಯು ತನ್ನ ಕೈಯಲ್ಲಿ ಒಂದು ಪಾತ್ರೆಯನ್ನು ಹಿಡಿದುಕೊಳ್ಳುವಳು. ಅನಂತರ ಅಧ್ವರ್ಯುವು ಎಲ್ಲಾ ಪಾತ್ರೆಗಳಲ್ಲಿಯೂ ಒಂದೊಂದು ಕುಶವನ್ನಿಟ್ಟು ದೇವೀರಾಪಃ ಎಂಬ ಮಂತ್ರವನ್ನು ಪಠಿಸಿ ನಾಲ್ಕು ಸ್ರುವಗಳ ತುಂಬ ಆಜ್ಯವನ್ನು ಸುರಿದು ಹೋಮಮಾಡುವನು. ಬಳಿಕ ಅಧ್ವರ್ಯುವು ಹೋತೃ ಮತ್ತು ಮೈತ್ರಾವರುಣರ ಚಮಸಗಳನ್ನು ಏಕಧನಾಪಾತ್ರೆಯ ಉದಕಸಹಿತವಾಗಿ ವಸತೀವರೀಕಲಶದ ಸಮೀಪಕ್ಕೆ ತಂದು ಅದರ ನೀರನ್ನು ಹೋತೃವಿನ ಚಮಸಪಾತ್ರೆಗೂ ಅದರಿಂದ ಮೈತ್ರಾವರುಣನ ಪಾತ್ರೆಗೂ ಪುನಃ ಮೈತ್ರಾವರುಣರ ಪಾತ್ರೆಯಿಂದ ಹೋತೃವಿನ ಚಮಸಕ್ಕೂ ಸುರಿಯುವನು. ಹೋತೃವಿನ ಚಮಸಕ್ಕೆ ನೀರನ್ನು ಸುರಿಯುವಾಗ ಹೋತೃವು ಅಧ್ವರ್ಯುವನ್ನುದ್ದೇಶಿಸಿ **ಅವೇರಪೋ೭ಧ್ವರ್ಯೂ೩ ಉ** ಎಂದು ಮೂರಾವರ್ತಿ ಕೇಳುವನು. ಅದಕ್ಕೆ ಅಧ್ವರ್ಯುವು **ಉತೇಮನನ್ನಮುಃ** (ಉತೇಮಾಃ ಪಶ್ಯ) ಎಂದು ಪ್ರತ್ಯುತ್ತರವನ್ನು ಹೇಳುವನು. ಅನಂತರ ಹೋತೃವು ಆ ಉದಕಗಳನ್ನುದ್ದೇಶಿಸಿ ಪ್ರತ್ಯುತ್ಥಾಪನವನ್ನು ಮಾಡುವನು.

ಈ ಅಪೋನಪ್ತ್ರೀಯವೆಂಬ ಕರ್ಮವಿಧಾನವು ಐತರೇಯಬ್ರಾಹ್ಮಣದಲ್ಲಿಯೂ, ತೈತ್ತಿರೀಯಸಂಹಿತೆಯಲ್ಲಿಯೂ ಪ್ರತ್ಯೇಕವಾಗಿ ಹೇಳಲ್ಪಟ್ಟಿರುವುದು. ತೈತ್ತಿರೀಯಸಂಹಿತೆಯಲ್ಲಿ ಅಧ್ವರ್ಯುವು ಆಚರಿಸಬೇಕಾದ ಕ್ರಮವೂ, ಐತರೇಯ ಬ್ರಾಹ್ಮಣದಲ್ಲಿ ಹೋತೃವು ಪಠಿಸಬೇಕಾದ ಮಂತ್ರಗಳೂ ಹೇಳಲ್ಪಟ್ಟಿರುವವು. ಹೋತೃವು ಪಠಿಸಬೇಕಾದ ಮಂತ್ರಗಳೇ ಋಗ್ವೇದಕ್ಕೆ ಸಂಬಂಧಪಟ್ಟಿರುವುದರಿಂದ ಇಲ್ಲಿ ಐತರೇಯಬ್ರಾಹ್ಮಣದಲ್ಲಿ ಹೇಳಿರುವ ಕ್ರಮವನ್ನು ಮಾತ್ರ ವಿವರಿಸುತ್ತೇನೆ.

## ಅಪೋನಪ್ತ್ರೀಯವೆಂಬ ಕರ್ಮದ ವಿವರಣೆ

(ಐತರೇಯಬ್ರಾಹ್ಮಣದಲ್ಲಿರುವಂತೆ)

ಪ್ರಾತರನುವಾಕಪಠನಾನಂತರ ಅಧ್ವರ್ಯುವು ಹೋತೃವನ್ನುದ್ದೇಶಿಸಿ ಪ್ರೈಷಮಂತ್ರದಿಂದ ನಿರ್ದೇಶಿಸಿದ ಕೂಡಲೇ ಹೋತೃವು ಅಪೋನಪ್ತ್ರೀಯಸಂಬಂಧವಾದ ಮಂತ್ರಗಳನ್ನು ಪಠಿಸುವನು. ಈ ಮಂತ್ರಪಠನದಲ್ಲಿ ಒಂದು ಕ್ರಮವನ್ನು ಅನುಸರಿಸಬೇಕು. ಅದನ್ನು ಇಲ್ಲಿ ಹೇಳಲಾಗಿದೆ.

> **ತತ್ಸಂತತಮನುಬ್ರೂಯಾತ್ । ಸಂತತವರ್ಷೀ ಹ ಪ್ರಜಾಭ್ಯಃ ಪರ್ಜನ್ಯೋ ಭವತಿ ಯತ್ರೈವಂ ವಿದ್ವಾನೇತತ್ಸಂತತಮನ್ವಾಹ ಯದವಗ್ರಾಹಮನುಬ್ರೂಯಾಜ್ಜೀನೂತವರ್ಷೀ ಹ ಪ್ರಜಾಭ್ಯಃ ಪರ್ಜನ್ಯಃ ಸ್ಯಾತ್ತಸ್ಮಾತ್ಸಂತತಮೇವಾನೂಚ್ಯಂ । ತಸ್ಯ ತ್ರಿಃ ಪ್ರಥಮಾಂ ಸಂತತಮನ್ವಾಹ ತೇನೈವ ತತ್ಸರ್ವಂ ಸಂತತಮನೂಕ್ತಂ ಭವತಿ ॥** (ಐ. ಬ್ರಾ ೮. ೧೯)

ಅಪೋನಪ್ತ್ರೀಯವೆಂಬ ಈ ಕರ್ಮದಲ್ಲಿ ಪಠಿಸಬೇಕಾದ **ಪ್ರ ದೇವತ್ರಾ ಬ್ರಹ್ಮಣೇ** ಎಂಬ ಸೂಕ್ತದ ಮಂತ್ರಗಳನ್ನು ಪಠಿಸುವಾಗ ಎಲ್ಲಿಯೂ ಮಧ್ಯದಲ್ಲಿ ನಿಲ್ಲಿಸದೆ ಒಂದೇಸಮನೆ ಧಾರಾಕಾರವಾಗಿ ಪಠಿಸಬೇಕು. ಹೀಗೆ ಪಠಿಸಿದರೆ ಪರ್ಜನ್ಯ

ದೇವನು ಸಂತತವಾಗಿ ಪ್ರಜೆಗಳಿಗೆ ಉಪಕಾರವಾಗುವಂತೆ ವೃಷ್ಟಿಯನ್ನು ಸುರಿಸುವನು. ಹಾಗಲ್ಲದೆ ಋಕ್ಕುಗಳನ್ನು ಪಾದಗಳಲ್ಲಿ ಅಥವಾ ಅರ್ಧಋಕ್ಕುಗಳಲ್ಲಿ, ಅಥವಾ ಋಕ್ಕುಗಳ ಅಂತ್ಯದಲ್ಲಿ ನಿಲ್ಲಿಸಿ ನಿಲ್ಲಿಸಿ ಪಠಿಸಿದರೆ ಪರ್ಜನ್ಯನು ವೃಷ್ಟಿಯನ್ನು ಯಾರಿಗೂ ಉಪಯೋಗವಿಲ್ಲದಂತೆ ಪರ್ವತಾದಿಗಳ ಮೇಲೆ ಸುರಿಸುವನು. ಸಸ್ಯಾದಿಗಳ ಮೇಲೆ ಸುರಿಸುವುದಿಲ್ಲ. ಆದ್ದರಿಂದ ಈ ಸೂಕ್ತವನ್ನು ಮಧ್ಯೆ ಎಲ್ಲಿಯೂ, ನಿಲ್ಲಿಸದೆ ಕೊನೆಯವರೆಗೂ ಒಂದೇಸಮನಾಗಿ ಪಠಿಸಬೇಕು. ಆದರೆ ಈ ಸೂಕ್ತದಲ್ಲಿರುವ ಎಲ್ಲಾ ಋಕ್ಕುಗಳನ್ನು ಮಧ್ಯದಲ್ಲಿ ನಿಲ್ಲಿಸುವಂತೆ ಪಠಿಸುವುದು ಅಸಾಧ್ಯವಲ್ಲವೇ ಎಂದರೆ, ಆರೀತಿ ಮಾಡುವುದಕ್ಕೆ ಬದಲಾಗಿ ಈ ಸೂಕ್ತದ ಮೊದಲನೆಯ ಋಕ್ಕನ್ನು ಸ್ವಲ್ಪವೂ ನಿಲ್ಲಿಸದಂತೆ ಮೂರಾವರ್ತಿ ಪಠಿಸಿದಲ್ಲಿ ಸೂಕ್ತವನ್ನೇ ನಿಲ್ಲಿಸದೆ ಪಠಿಸಿದಂತಾಗುವುದು.

ತಾ ಏತಾ ನವಾನ್‌ತರಾಯಮನ್ವಾಹ । ಹಿನೋತಾ ನೋ ಅಧ್ವರಂ ದೇವಯಜ್ಯೇತಿ ದಶಮೀಂ । ಆವರ್ವೃತತೀರಧ ನು ದ್ವಿಧಾರಾ ಇತ್ಯಾವೃತ್ತಾಸ್ವೇಕಧನಾಸು ।

(ಐ. ಬ್ರಾ. ೮-೨೦)

**ಪ್ರದೇವತ್ರಾ** ಎಂಬ ಸೂಕ್ತದ ಮಂತ್ರಗಳನ್ನು ಪಠಿಸುವಾಗ ಒಂದು ವಿಶೇಷಕ್ರಮವಿರುವುದು. ಸೂಕ್ತದ ಮೊದಲನೆಯ ಋಕ್ಕಾದ **ಪ್ರ ದೇವತ್ರಾ ಬ್ರಹ್ಮಣೇ** ಎಂಬ ಮಂತ್ರವನ್ನಾರಂಭಿಸಿ ಒಂಬತ್ತನೆಯ ಋಕ್ಕಿನ ಸಮಾಪ್ತಿವರೆಗೂ ಪಠಿಸಿ ಅನಂತರ ೧೧ನೆಯ ಋಕ್ಕಾದ **ಹಿನೋತಾ ನೋ ಅಧ್ವರಂ** (೧೦-೩೦-೧೧) ಎಂಬ ಋಕ್ಕನ್ನು ಪಠಿಸಬೇಕು. ಅನಂತರ **ಆವರ್ವೃತತೀರಧ** ಎಂಬ ೧೦ನೇ ಋಕ್ಕನ್ನು ಪಠಿಸಬೇಕು.

ಇಲ್ಲಿ ಪ್ರಯೋಗಕ್ರಮವನ್ನು ಸೂಕ್ಷ್ಮವಾಗಿ ವಿವರಿಸುವುದು ಅವಶ್ಯಕವಾಗಿದೆ. ಸುತ್ಯಾದಿನದ ಎಂದರೆ ಸೋಮ ರಸವನ್ನು ಹಿಂಡುವ ಹಿಂದಿನ ದಿನ ಅಗ್ನಿಷೋಮೀಯಸಂಸ್ಕಾರಾನಂತರ ವಸತೀವರೀಸಂಜ್ಞಕವಾದ ಉದಕಗಳನ್ನು ಸೋಮಾಭಿಷವಕಾಲದಲ್ಲಿ ಉಪಯೋಗಿಸುವುದಕ್ಕಾಗಿ ಯಜ್ಞವೇದಿಯಲ್ಲಿ ಸ್ಥಾಪಿಸಬೇಕು. ಮಧ್ಯರಾತ್ರಿಯು ಕಳೆದ ನಂತರ ನಿದ್ರೆಯನ್ನು ತ್ಯಜಿಸಿ ಎದ್ದು ಆಗ್ನೀಧ್ರಧಿಷ್ಣಿಯಾದಿಗಳನ್ನು ಆಯಾಮಂತ್ರಗಳಿಂದ ಅಭಿಮರ್ಶನೆಮಾಡಿ ಸೋಮಾಭಿಷವಕ್ಕಾಗಿ ಬೇಕಾಗುವ ಪಾತ್ರೆಗಳನ್ನು ಆಸಾದನೆಮಾಡಿ ಪ್ರಾತರನುವಾಕಮಂತ್ರಪಠನಕ್ಕಾಗಿ ಹೋತೃವನ್ನು ಪ್ರೈಷ ಮಂತ್ರದಿಂದ ನಿರ್ದೇಶಿಸಬೇಕು. ಪ್ರಾತರನುವಾಕಪಠನಾನಂತರ **ಶೃಣೋತ್ವಗ್ನಿಃ** ಎಂಬ ಮಂತ್ರದಿಂದ ಆಹುತಿಯನ್ನರ್ಪಿಸಿ ಏಕಧನಾಪಾತ್ರೆಗಳಲ್ಲಿ ನೀರನ್ನು ತರುವುದಕ್ಕಾಗಿ ಹೋಗುವಾಗ ಅಪೋನಪ್ತ್ರೀಯಸೂಕ್ತಪಠನಕ್ಕಾಗಿ ಹೋತೃವನ್ನುದ್ದೇಶಿಸಿ ಪ್ರೈಷಮಂತ್ರದಿಂದ **ಏಕಧನಾ ಅಪ ಆನಯ** ಎಂದು ನಿರ್ದೇಶಿಸಬೇಕು. ಈ ಕ್ರಮಗಳೆಲ್ಲಾ ಅಧ್ವರ್ಯು ಪ್ರಯೋಗದಲ್ಲಿ ವಿವರಿಸಲಾಗಿರುವುದು. ಈ ವಿಷಯದಲ್ಲಿ ಆಪಸ್ತಂಬ ಮಹರ್ಷಿಯು **ಯತ್ರಾಭಿಜಾನಾತ್ಯಭೂದುಷಾ** ಇತ್ಯಾದಿ ಸೂತ್ರವಾಕ್ಯಗಳಿಂದ ಕಾರ್ಯಕ್ರಮವನ್ನು ನಿರ್ದೇಶಿಸಿರುವರು. ಆಶ್ವಲಾಯನಮಹರ್ಷಿಯೂ ಸಹ ಹೋತೃ ಸಂಬಂಧವಾದ ಮಂತ್ರಾದಿಗಳ ಪಠನವಿಷಯದಲ್ಲಿ **ಪರಿಹಿತೇಽಪ ಇಷ್ಯ ಹೋತಃ** ಇತ್ಯಾದಿ ವಾಕ್ಯಗಳಿಂದ ಕ್ರಮವನ್ನು ನಿರ್ದೇಶಿಸಿರುವರು. ಅನಂತರ ಸೂಕ್ತದ ಹತ್ತು ಋಕ್ಕುಗಳ (೯-೧೧) ಪಠನಾನಂತರ ಏಕಧನಾಪಾತ್ರೆಗಳಲ್ಲಿ ನೀರನ್ನು ತರುವುದಕ್ಕಾಗಿ ಹೊರಟ ಪುರುಷರು ತಮ್ಮತಮ್ಮ ಪಾತ್ರೆಗಳಲ್ಲಿ ನೀರನ್ನು ತುಂಬಿಕೊಂಡು ನದಿಯಿಂದ ಹಿಂತಿರುಗುವಾಗ ಹೋತೃವು ಸೂಕ್ತದ ಹತ್ತನೆಯ ಋಕ್ಕಾದ **ಆವರ್ವೃತತೀರಧ** ಎಂಬ (೧೦-೩೦-೧೦) ಹತ್ತನೆಯ ಋಕ್ಕನ್ನು ಪಠಿಸುವನು.

**ಪ್ರತಿ ಯದಾಪೋ ಅದೃಶ್ರನ್ನಾಯತೀರಿತಿ ಪ್ರತಿದೃಶ್ಯಮಾನಾಸು । ಆ ಧೇನವಃ ಪಯಸಾ ತೂರ್ಣ್ಯರ್ಥಾ ಇತ್ಯುಪಾಯತೀಷು । ಸಮನ್ಯಾ ಯಂತ್ಯುಪ ಯಂತ್ಯನ್ಯಾ ಇತಿ ಸಮಾಯತೀಷು ।**

ನೀರನ್ನು ಏಕಧನಾಪಾತ್ರೆಗಳಲ್ಲಿ ತುಂಬಿಕೊಂಡು ನದೀತೀರದಿಂದ ಹಿಂತಿರುಗಿ ಬಂದು ಬರುವಾಗ ನೀರಿನಿಂದ ತುಂಬಿದ ಆ ಏಕಧನಾಪಾತ್ರೆಗಳನ್ನು ಪುರುಷರು ಹೊತ್ತುಕೊಂಡು ಬರುತ್ತಿರುವುದನ್ನು ಹೋತೃವು ನೋಡಿದಾಗ **ಪ್ರತಿ ಯದಾಪಃ** (೧೦-೩೦-೧೩) ಎಂಬ ಮಂತ್ರವನ್ನು ಪಠಿಸುವನು. ಆ ಏಕಧನಾಪಾತ್ರೆಗಳಲ್ಲಿರುವ ಉದಕಗಳು ಚಾತ್ವಾಲ ಪ್ರದೇಶವನ್ನು (ಯಜ್ಞವೇದಿಯಲ್ಲಿರುವ ಒಂದು ತಗ್ಗು, ಗುಂಡಿ) **ಆ ಧೇನವಃ ಪಯಸಾ** (೫.೪೩-೩) ಎಂಬ ಮಂತ್ರವನ್ನು ಪಠಿಸುವನು.

ಇಲ್ಲಿ ವಿವರಣೆಯು ಅವಶ್ಯಕವು. **ಉನ್ನೇತರ್ಹೋತೃಚಮಸೇನ ವಸತೀವರೀಭಿಶ್ಚ ಚಾತ್ವಾಲಂ ಪ್ರತ್ಯಾಸ್ಸ** ಎಂದು ಅಧ್ವರ್ಯುವು ಪ್ರೈಷಮಂತ್ರದಿಂದ ನಿರ್ದೇಶಿಸಿದ ಕೂಡಲೇ ಉನ್ನೇತೃವೆಂಬ ಋತ್ವಿಜನು ಹೋತೃ ಸಂಬಂಧವಾದ ಚಮಸವನ್ನು ವಸತೀವರೀ ಎಂಬ ಪಾತ್ರೆಯಲ್ಲಿ ಹಿಂದಿನದಿನವೇ ಇಟ್ಟಿದ್ದ ನೀರನ್ನು ಚಾತ್ವಾಲದ ಸಮೀಪಕ್ಕೆ ಒಯ್ಯುವನು. ಅನಂತರ **ಮೈತ್ರಾವರುಣಸ್ಯ ಚಮಸಾಧ್ವರ್ಯವಾದ್ರವ** ಎಂಬ ಪ್ರೈಷಮಂತ್ರದಂತೆ ಮೈತ್ರಾವರುಣನೆಂಬ ಋತ್ವಿಜನ ಪರಿಚಾರಕನಾದ ಚಮಸಾಧ್ವರ್ಯುವು ಮೈತ್ರಾವರುಣ ಚಮಸವನ್ನೂ ಚಾತ್ವಾಲದ ಸಮೀಪಕ್ಕೆ ತರುವನು. ಇಲ್ಲಿ ಹೋತೃಚಮಸವೆಂದರೆ ವಸತೀವರೀಪಾತ್ರೆಯಲ್ಲಿರುವ ಉದಕಗಳು ಎಂದೂ, ಮೈತ್ರಾವರುಣ ಚಮಸವೆಂದರೆ ಏಕಧನಾ ಪಾತ್ರೆಗಳಲ್ಲಿರುವ ಉದಕಗಳು ಎಂದೂ ತಿಳಿಯಬೇಕು. ಅನಂತರ ವಸತೀವರ್ಯುದಕಸಹಿತವಾದ ಹೋತೃಚಮಸದಲ್ಲಿ ಮೈತ್ರಾವರುಣಚಮಸಗಳಲ್ಲಿರುವ ಏಕಧನಾಪಾತ್ರೆಗಳ ಉದಕಗಳನ್ನು ಅಧ್ವರ್ಯುವು ಒಂದರಲ್ಲೊಂದನ್ನು ಪರಸ್ಪರ) ಸೇರಿಸಿ ಮಿಶ್ರಮಾಡುವನು. ಮಿಶ್ರಮಾಡುವ ಕಾಲದಲ್ಲಿ ಹೋತೃವು **ಸಮನ್ಯಾ ಯಂತ್ಯುಪ** (೨.೩೫-೩) ಎಂಬ ಋಕ್ಕನ್ನು ಪಠಿಸುವನು. ಈ ವಿಷಯವನ್ನು ಆಪಸ್ತಂಬ ಮಹರ್ಷಿಯು—ಹೋತೃ ಚಮಸೇನ ವಸತೀವರೀರ್ಭಿಶ್ಚ ಎಂದು ಮೊದಲಾಗುವ ಸೂತ್ರದಿಂದ ಸ್ಪಷ್ಟವಾಗಿ ವಿವರಿಸಿರುವರು.

ಈ ಋಕ್ಕುಗಳ ವಿಷಯದಲ್ಲಿ ಒಂದು ಪೂರ್ವೇತಿಹಾಸವಿರುವುದು. ಅದನ್ನು ಇಲ್ಲಿ ವಿವರಿಸಲಾಗಿದೆ.

**ಆಪೋ ವಾ ಅಸ್ಪರ್ಧಂತ ವಯಂ ಪೂರ್ವಂ ಯಜ್ಞಂ ವಕ್ಷ್ಯಾಮೋ ವಯಮಿತಿ ಯಾಶ್ಚೇಮಾಃ ಪೂರ್ವೇದ್ಯುರ್ವಸತೀವರ್ಯೋ ಗೃಹ್ಯಂತೇ ಯಾಶ್ಚ ಪ್ರಾತರೇಕಧನಾಸ್ತಾ ಭೃಗುರಪಶ್ಯದಾಪೋ ವೈ ಸ್ಪರ್ಧಂತ ಇತಿ ತಾ ಏತಯರ್ಚಾ ಸಮಜ್ಞಪಯತ್ಸಮನ್ಯಾ ಯಂತ್ಯುಪ ಯಂತ್ಯನ್ಯಾ ಇತಿ ತಾಃ ಸಮಜಾನತ ಸಂಜಾನಾನಾ ಹಾಸ್ಯಾಪೋ ಯಜ್ಞಂ ವಹಂತಿ ಯ ಏವಂ ವೇದ ॥**

ಸೋಮಾಭಿಷವಣಕ್ಕೆ ಹಿಂದಿನ ದಿನವೇ ತಂದ ನೀರನ್ನು ವಸತೀವರೀ ಎಂಬ ಪಾತ್ರೆಯಲ್ಲಿ ಶೇಖರಿಸಿಟ್ಟಿರುವರು. ಸೋಮಾಭಿಷವಣದ (ಸೋಮವನ್ನು ಹಿಂಡುವ) ದಿನವೇ ಎಂದರೆ ಆದಿನ ಪ್ರಾತಃಕಾಲದಲ್ಲಿ ನದಿಯಿಂದ ಹೊಸದಾಗಿ ಆಗತಾನೇ ನೀರನ್ನು ಏಕಧನಾ ಎಂಬ ಪಾತ್ರೆಗಳಲ್ಲಿ ತಂದಿಟ್ಟಿರುವರು. ಈ ಎರಡುವಿಧ ಪಾತ್ರೆಗಳಲ್ಲಿದ್ದ ಉದಕಗಳು ಪೂರ್ವದಲ್ಲಿ ಯಜ್ಞನಿರ್ವಹಣೆಯ ವಿಷಯದಲ್ಲಿ ಪರಸ್ಪರ ಅಸೂಯೆಯಿಂದ ಸ್ಪರ್ಧಿಸಿದವು. ಎಂದರೆ ನಾವೇ ಯಜ್ಞ ನಿರ್ವಹಣೆಮಾಡಲು ಶಕ್ತರೆಂಬು ವಸತೀವರ್ಯುದಕಗಳೂ (ಅಥವಾ ಉದಕಾಭಿಮಾನಿದೇವತೆಗಳೂ)।ನಮಗೆ ಹೆಚ್ಚಿನ ಶಕ್ತಿ ಇರುವುದೆಂದು ಏಕಧನಾಪಾತ್ರೆಗಳಲ್ಲಿರುವ ಉದಕಗಳೂ ಪರಸ್ಪರ ಸ್ಪರ್ಧೆಯಿಂದ ಹೋರಾಡುತ್ತಿದ್ದುದನು

ಭೃಗುಋಷಿಯು ನೋಡಿ **ಸಮನ್ಯಾ ಯಂತಿ** (೨-೩೫.೩) ಋಕ್ಕನ್ನು ಪಠಿಸಿ ಆ ಎರಡು ವಿಧವಾದ ಉದಕಗಳಿಗಿದ್ದ ಪರಸ್ಪರ ವೈಷಮ್ಯವನ್ನು ಪರಿಹರಿಸಿ ಅವುಗಳನ್ನು ಸಾಂತ್ವವಚನಗಳಿಂದ ಸಮಾಧಾನಮಾಡಿ ಅವುಗಳಿಗೆ ಪರಸ್ಪರ ಐಕಮತ್ಯವನ್ನುಂಟುಮಾಡಿದನು. ಆ ಮಂತ್ರಸಾಮರ್ಥ್ಯದಿಂದ ಆ ಉಭಯವಿಧ ಉದಕಗಳು ತಮ್ಮ ತಮ್ಮ ವಿವಾದಗಳನ್ನು ಬದಿಗೊತ್ತಿ ಯಜ್ಞನಿರ್ವಹಣಕಾರ್ಯದಲ್ಲಿ ಐಕ್ಯಮತ್ಯದಿಂದ ಪ್ರವರ್ತಿಸತೊಡಗಿದವು. ಈ ವಿಷಯವನ್ನು ತಿಳಿದಿರುವ ಯಜಮಾನನು ತನ್ನ ಯಜ್ಞಕಾರ್ಯಗಳನ್ನು ವಿವಾದಾದಿಗಳಿಲ್ಲದೆ ಪರಸ್ಪರ ಐಕಮತ್ಯದಿಂದ ನಿರ್ವಿಘ್ನವಾಗಿ ನೆರವೇರಿಸಲು ಸಮರ್ಥನಾಗುವನು.

**ಆಪೋ ನ ದೇವೀರುಪಯಂತಿ ಹೋತ್ರಿಯಮಿತಿ ಹೋತೃಚಮಸೇ ಸಮವನೀಯಮಾನಾಸ್ವ-ನ್ವಾಹ ವಸತೀವರೀಷ್ವೇಕಧನಾಸು ಚ ।**

ವಸತೀವರೀ ಮತ್ತು ಏಕಧನಾ ಪಾತ್ರೆಗಳಲ್ಲಿದ್ದ ಉಭಯವಿಧ ಉದಕಗಳನ್ನು ಹೋತೃಚಮಸದಲ್ಲಿ ಸುರಿದಮೇಲೆ ಹೋತೃವು **ಆಪೋ ನ ದೇವೀರುಪಯಂತಿ** (೧-೮೩-೨) ಎಂಬ ಮಂತ್ರವನ್ನು ಪಠಿಸುವನು.

**ಅವೇರಪೋಽಧ್ವರ್ಯಾ ೩ ಉ ಇತಿ ಹೋತಾಧ್ವರ್ಯುಂ ಪೃಚ್ಛತಿ । ಆಪೋ ವೈ ಯಜ್ಞೋಽವಿದೋ ಯಜ್ಞಾ ೩ ಮಿತ್ಯೇವ ತದಾಹ । ಉತೇಮನನ್ನಮುರಿತ್ಯಧ್ವರ್ಯುಃ ಪ್ರತ್ಯಾಹ । ಉತೇಮಾಃ ಪಶ್ಯೇತ್ಯೇವ ತದಾಹ ।**

ಅನಂತರ ಹೋತೃವು ಒಂದು ಯಜುರ್ಮಂತ್ರವನ್ನು ಪಠಿಸಿ ಅಧ್ವರ್ಯುವನ್ನು ಕುರಿತು—ಎಲೈ ಅಧ್ವರ್ಯುವೇ, ಈಗ ನೀನು ಎರಡು ವಿಧವಾದ ಉದಕಗಳನ್ನು ಪಡೆದಿದ್ದೀಯಲ್ಲವೇ ? ಎಂದು ಪ್ರಶ್ನಿಸುವನು. ಎರಡುವಿಧ ಉದಕಗಳೆಂದರೆ ಹಿಂದೆ ಹೇಳಿದಂತೆ ವಸತೀವರೀ ಮತ್ತು ಏಕಧನಾ ಪಾತ್ರೆಗಳಲ್ಲಿರುವ ಉದಕಗಳು. ಈ ಉದಕಗಳು ಸೋಮಾಭಿಷವಣ-ಕಾಲದಲ್ಲಿ ಯಜ್ಞನಿರ್ವಹಣೆಗಾಗಿ ಉಪಯೋಗಿಸಲ್ಪಡುವವು. ಆದ್ದರಿಂದ ಯಜ್ಞವು ಅಬ್ರೂಪ ಉದಕದ ಸ್ವರೂಪವೆಂದು ಹೇಳಲ್ಪಡುವುದು. ಆ ಪ್ರಶ್ನೆಗೆ ಅಧ್ವರ್ಯುವು ಉತ್ತರವೀಯುತ್ತಾ—ಎಲೈ ಹೋತೃವೇ ನೀನು ಕೇಳಿದ ಎರಡುವಿಧ ಉದಕಗಳನ್ನು ಯಜ್ಞನಿರ್ವಹಣಾರ್ಥವಾಗಿ ನಾನು ಪಡೆದಿರುವೆನು. ನೋಡು ಎಂದು ಹೇಳುವನು.

**ತಾಸ್ವಧ್ವರ್ಯೋ ಇಂದ್ರಾಯ ಸೋಮಂ ಸೋತಾ ಮಧುಮಂತಂ ವೃಷ್ಟಿವನಿಂ ತೀವ್ರಾಂತಂ ಬಹುರಮಧ್ಯಂ ವಸುಮತೇ ರುದ್ರವತ ಆದಿತ್ಯವತ ಋಭುಮತೇ ವಿಭುಮತೇ ವಾಜವತೇ ಬೃಹಸ್ಪತಿವತೇ ವಿಶ್ವದೇವ್ಯಾವತೇ । ಯಸ್ಯೇಂದ್ರಃ ಪೀತ್ವಾ ವೃತ್ರಾಣಿ ಜಂಘನತ್ಪ್ರ ಸ ಜನ್ಯಾನಿ ತಾರಿಷೋ ೩ ಮಿತಿ ಪ್ರತ್ಯುತ್ತಿಷ್ಠತಿ ॥**

ಈ ಮೇಲಿನ ಮಂತ್ರವನ್ನು ಪಠಿಸಿ ಹೋತೃವು ಉದಕಾಭಿಮಾನಿದೇವತೆಗಳನ್ನುದ್ದೇಶಿಸಿ ಪ್ರತ್ಯುತ್ಥಾನವನ್ನು ಮಾಡಬೇಕು ಎಂದರೆ ಎದ್ದುನಿಂತುಕೊಂಡು ಪ್ರಾರ್ಥಿಸಬೇಕು. ಎಲೈ ಅಧ್ವರ್ಯುವೇ, ಈಗ ನೀನು ಪಡೆದಿರುವ ವಸತೀವರೀ ಮತ್ತು ಏಕಧನಾ ಎಂಬ ಎರಡುವಿಧ ಉದಕಗಳ ಸಹಾಯದಿಂದ ಸೋಮಾಭಿಷವವನ್ನು ಮಾಡು ಎಂದರೆ ಸೋಮಲತೆಗಳನ್ನು ಜಜ್ಜಿ ರಸವನ್ನು ತೆಗೆದು ಹಿಂಡಿ ಇಂದ್ರನ ಪಾನಾರ್ಥವಾಗಿ ಸಿದ್ಧಪಡಿಸು. ಸೋಮರಸವು ಹೇಗಿರಬೇಕೆಂದರೆ—ಮಧುರರಸದಿಂದ ಯುಕ್ತವಾಗಿ ಸಿಹಿಯಾಗಿಯೂ ವೃಷ್ಟಿ (ಮಳೆ)ಯನ್ನುಂಟುಮಾಡುವುದಾಗಿಯೂ, ಬೇಗನೆ ಫಲವನ್ನು ಕೊಡುವುದಾಗಿಯೂ ಅನೇಕವಿಧವಾದ ಕರ್ಮಾಂಗಯುಕ್ತವಾಗಿಯೂ ಇರಬೇಕು. ಇಲ್ಲಿ **ಮಧುಮಂತಂ** ಎಂಬ

ಶಬ್ದಕ್ತೆ-ಸೋಮರಸವು ಜೇನುತುಪ್ಪದಂತೆ ಸಿಹಿಯಾಗಿರಬೇಕು ಅಥವಾ ರುಚಿಕರವಾಗಿರಬೇಕು. ವೃಷ್ಟಿವನಿಂ—ವೃಷ್ಟಿಪ್ರದವಾದುದು ಎಂದರೆ ಈ ಸೋಮಪಾನದಿಂದ ಇಂದ್ರನು ತೃಪ್ತನಾಗಿ ಆ ಹರ್ಷದಿಂದ ಮೇಘಗಳನ್ನು ಸೀಳಿ ವೃಷ್ಟಿಯನ್ನು ಸುರಿಸುವಂತೆ ಮಾಡುವನು. ಶೀಘ್ರಾಂತಃ—ವಿಘ್ನರಹಿತನಾಗಿ ಯಜ್ಞವು ಸಮಾಪ್ತಿಯಾಗಿ ಅದರ ಫಲವು ಬೇಗನೆ ಪ್ರಾಪ್ತವಾಗುವುದು. ಬಹುರ (೬) ಮಧ್ಯಂ—ಯಜ್ಞದಲ್ಲಿ ಅನೇಕವಿಧವಾದ ಉಪಕರ್ಮಗಳಿರುವುವು. ಋತ್ವಿಗ್ವರಣದಿಂದ ಪ್ರಾರಂಭವಾಗಿ ಸಮಾಪ್ತಿಯವರೆಗೆ ಅನೇಕವಿಧ ಯಜ್ಞಾಂಗಕರ್ಮಗಳಿರುವುವು. ಅದ್ದರಿಂದ ಈ ಅನೇಕ ಕರ್ಮಗಳ ನಿರ್ವಹಣೆಗೆ ಸಾಧನವಾದ ಸೋಮರಸವು ಈ ವಿಧಗುಣಗಳುಳ್ಳ ಸೋಮರಸವನ್ನು ಇಂದ್ರನಿಗಾಗಿ ಹಿಂಡಿ ಸಿದ್ಧಪಡಿಸು ಎಂದಭಿಪ್ರಾಯವು. ಈ ಸೋಮರಸವು ಇಂದ್ರನಿಗೊಬ್ಬನಿಗೆ ಮಾತ್ರವೇ ಎಂದರೆ ಇಂದ್ರನಿಗೂ ಇಂದ್ರನೊಡನಿರುವ ಇತರ ದೇವತೆಗಳಿಗೂ ಪಾನಾರ್ಥವಾಗಿ ಎಂದರ್ಥವು. ಆ ದೇವತೆಗಳು ಯಾರಾರೆಂದರೆ—ವಸುಮತೇ ರುದ್ರವತೇ ಆದಿತ್ಯವತೇ ವಿಶ್ವದೇವ್ಯಾವತೇ । ಎಂದರೆ ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಋಭು, ವಿಭು, ವಾಜ ಎಂಬ ಮೂರುಮಂದಿ ಋಭುಗಳು, ಬೃಹಸ್ಪತಿ, ವಿಶ್ವೇದೇವತೆಗಳು ಈ ಮೊದಲಾದ ದೇವತೆಗಳಿಂದ ಸಹಿತನಾದ ಇಂದ್ರನ ಪಾನಾರ್ಥವಾಗಿ ಸೋಮರಸವನ್ನು ಹಿಂಡಿ ಸಿದ್ಧಪಡಿಸು ಎಂದಭಿಪ್ರಾಯವು. ಇಂತಹ ಸೋಮರಸವನ್ನು ಪಾನಮಾಡಿ ಇಂದ್ರನು ಶತ್ರುಗಳನ್ನೂ, ಯಜ್ಞಮಾಡುವ ಯಜಮಾನನ ಪಾಪಗಳನ್ನೂ ನಾಶಮಾಡಲು ಸಮರ್ಥನಾಗುವನು. ಅಂತಹ ಸೋಮರಸವನ್ನು ಎಲೈ ಅಧ್ವರ್ಯುವೇ, ನೀನು ಸಿದ್ಧಪಡಿಸು ಎಂದು ಮಂತ್ರಾಭಿಪ್ರಾಯವು. ಈ ಮಂತ್ರವನ್ನು ಪಠಿಸಿ ಕೊನೆಯಲ್ಲಿ ಓಂ ಎಂಬ ಪ್ರಣವಮಂತ್ರವನ್ನು ಪಠಿಸಿ ಹೋತೃವು ಎದ್ದುನಿಂತುಕೊಂಡು ಪ್ರಾರ್ಥಿಸುವನು.

**ಪ್ರತ್ಯುತ್ಥೇಯಾ ವಾ ಆಪಃ ಪ್ರತಿ ವೈ ಶ್ರೇಯಾಂಸಮಾಯಂತಮುತ್ತಿಷ್ಠಂತಿ ತಸ್ಮಾತ್ಪ್ರತ್ಯುತ್ಥೇಯಾಃ । ಅನು ಪರ್ಯಾವೃತ್ಯಾಃ ಅನು ವೈ ಶ್ರೇಯಾಂಸಂ ಪರ್ಯಾವರ್ತಂತೇ ತಸ್ಮಾದನುಪರ್ಯಾವೃತ್ಯಾ ಅನುಬ್ರುವತೈವಾನುಪ್ರಪತ್ತವ್ಯಂ ।**

ಈ ಎರಡು ವಿಧ ಉದಕಗಳಿಗೆ ಗೌರವವನ್ನು ಸೂಚಿಸುವುದಕ್ಕಾಗಿ ಎದ್ದು ನಿಲ್ಲಬೇಕು. ಲೋಕವ್ಯವಹಾರದಲ್ಲಿ ಯಾರಾದರೂ ದೊಡ್ಡವರು ಬಂದರೆ, ಎಂದರೆ ಗುರುಗಳು, ಹಿರಿಯರು, ತಂದೆ ಮೊದಲಾದವರು ಬಂದರೆ ಅವರಿಗೆ ಗೌರವವನ್ನು ಸೂಚಿಸುವುದಕ್ಕಾಗಿ ಶಿಷ್ಯ ಪುತ್ರ ಮೊದಲಾದವರು ಎದ್ದು ನಿಲ್ಲುವುದು ರೂಢಿಯಷ್ಟೆ. ಅದರಂತೆ ಇಲ್ಲಿಯೂ ಪೂಜಾರ್ಹವಾದ ಯಜ್ಞಕರ್ಮಗಳಿಗೆ ಅತ್ಯವಶ್ಯಕಗಳಾದ ಈ ಎರಡು ವಿಧ ಉದಕಗಳಿಗೆ ಗೌರವನ್ನು ಸೂಚಿಸುವುದಕ್ಕಾಗಿ ಋತ್ವಿಗಾದಿಗಳು ಎದ್ದು ನಿಲ್ಲಬೇಕು. ಅಷ್ಟೇ ಅಲ್ಲ. ಗೌರವಾರ್ಹರಾದವರು ಅತ್ತಿತ್ತ ಸಂಚರಿಸುವಾಗ ಅವರನ್ನು ಅನುಸರಿಸಿ ಅವರ ಹಿಂದೆ ಇದ್ದು ವಿನಯದಿಂದ ಮರ್ಯಾದೆಮಾಡುವುದೂ ಸಹಜವಾಗಿದೆ. ಅದರಂತೆ ಇಲ್ಲಿಯೂ ಮಾಡಬೇಕೆಂದಭಿಪ್ರಾಯವು.

**ಈಶ್ವರೋ ಹ ಯದ್ಯಪ್ಯನ್ಯೋ ಯಜೇತಾಥ ಹೋತಾರಂ ಯಶೋಽರ್ತೋಸ್ತಸ್ಮಾದನುಬ್ರುವತೈವಾನುಪ್ರಪತ್ತವ್ಯಂ ।**

ಒಂದು ವೇಳೆ ಹೋತೃವು ಯಜ್ಞದಲ್ಲಿ ಭಾಗವಹಿಸುವವನಲ್ಲವಾದರೂ ಮಂತ್ರವನ್ನು ಪಠಿಸುವ ಹೋತೃವು ಈ ಉದಕಗಳಿಗೆ ಗೌರವವನ್ನು ಸೂಚಿಸಿ ಅವುಗಳನ್ನು ಅನುಸರಿಸಿಹೋದಲ್ಲಿ ಅವನಿಗೆ ಕೀರ್ತಿಯೂ ಪ್ರಾಧಾನ್ಯತೆಯೂ ಲಭಿಸುವುದು

ಆದ್ದರಿಂದ ಮಂತ್ರಪಠನಮಾಡುವವರು ಅವಶ್ಯಕವಾಗಿ ಆ ಉದಕಗಳನ್ನು ಹಿಂಬಾಲಿಸಿಹೋಗಬೇಕು. ಹೀಗೆ ಅನುಸರಿಸಿ ಹೋಗುವಕಾಲದಲ್ಲಿ ಈ ಕರ್ಮದಲ್ಲಿ ಇನ್ನೂ ಪಠಿಸದಿರುವ,

**ಅಂಬಯೋ ಯಂತ್ಯಧ್ವಭಿರಿತ್ಯೇತಾಮನುಬ್ರುವನ್ನನು ಪ್ರಪದ್ಯೇತ ।**

ಅಂಬಯೋ ಯಂತಿ (೧-೨೩-೧೬) ಎಂಬ ಮಂತ್ರವನ್ನು ಪಠಿಸಬೇಕು—

**ಜಾಮಯೋ ಅಧ್ವರೀಯತಾಂ । ಪೃಂಚತೀರ್ಮಧುನಾ ಪಯ ಇತಿ ಯೋಽಮಧ್ವ್ಯೋ ಯಶೋಽರ್ತೋಽಬರ್ಭೂಷೇತ್ ।**

ಈ ಋಕ್ಕಿನ ಅರ್ಥವನ್ನು ವಿವರಿಸುವರು-ಅಂಬ ಎಂಬ ಶಬ್ದವು ಗೌರವವನ್ನು ಸೂಚಿಸುವ ಮಾತೃವಾಚಕಶಬ್ದವು. ಅಂಬಯಃ ಎಂದರೆ ತಾಯಿಯರಂತೆ ಗೌರವಾನ್ವಿತರಾದ ಈ ಉದಕಗಳು ಎಂದರ್ಥವು. ಮಾತೃಸಮಾನರಾದ ಈ ಎರಡುವಿಧ ಉದಕಗಳು ನಾನಾವಿಧಮಾರ್ಗಗಳಿಂದ ಹೋಗುತ್ತಾರೆ. ಇವರು ಯಜ್ಞವನ್ನು ನೆರವೇರಿಸಬೇಕೆಂದು ಬಯಸುವ ಯಜಮಾನನಿಗೆ ಭಗಿನಿ ಎಂದರೆ ಸಹೋದರಿಯರಂತೆ ಹಿತವನ್ನು ಬಯಸುವವರು ಮತ್ತು ಮಧುರವಾದ ತಮ್ಮ ಉದಕಗಳಿಂದ ಎಲ್ಲರನ್ನೂ ತೃಪ್ತಿಗೊಳಿಸುವವರು. ಯಾವ ಪುರುಷನು ಇದುವರೆಗೆ ಸೋಮರಸದ ರುಚಿಯನ್ನು ಕಂಡರಿಯನೋ ಮತ್ತು ಸೋಮಯಾಗವನ್ನು ಮಾಡಿ ಕೀರ್ತಿಸಂಪಾದಿಸಬೇಕೆಂದು ಅಪೇಕ್ಷಿಸುವನೋ ಅಂತಹ ಪುರುಷನು ಮಂತ್ರಪಠನಪೂರ್ವಕವಾಗಿ ಈ ಉದಕಗಳಿಗೆ ಗೌರವವನ್ನು ಸೂಚಿಸಿ ಅವುಗಳನ್ನು ಅನುಸರಿಸಿಹೋದರೆ ಅವನ ಇಷ್ಟಾರ್ಥವು ಸಿದ್ಧಿಸುವುದು.

**ಅಮೂರ್ಯಾ ಉಪ ಸೂರ್ಯೇ ಯಾಭಿರ್ವಾ ಸೂರ್ಯಃ ಸಹೇತಿ ತೇಜಸ್ಕಾಮೋ ಬ್ರಹ್ಮವರ್ಚಸಕಾಮಃ ।**

ಮುಂದಿನ ಋಕ್ಕಿನಲ್ಲಿ ಫಲಾಂತರಗಳನ್ನು ಹೇಳುವರು—**ಅಮೂರ್ಯಾ ಉಪ ಸೂರ್ಯೇ** ಎಂಬ (೧-೨೩-೧೭) ಋಕ್ಕನ್ನು ಪಠಿಸಿದಲ್ಲಿ ಅಧ್ಯಯನಸಂಪತ್ತಿನಿಂದ ತೇಜಸ್ವಿಯೂ ಬ್ರಹ್ಮವರ್ಚಸ್ವಿಯೂ ಆಗುವನು.

**ಅಪೋ ದೇವೀರುಪಹ್ವಯೇ ಯತ್ರ ಗಾವಃ ಪಿಬಂತಿ ನ ಇತಿ ಪಶುಕಾಮಃ ॥**

ಪಶುಸಂಪತ್ತನ್ನು ಅಪೇಕ್ಷಿಸುವ ಪುರುಷನು—**ಅಪೋ ದೇವೀರುಪ ಹ್ವಯೇ** (೧೧-೨೩-೧೮) ಎಂಬ ಋಕ್ಕನ್ನು ಪಠಿಸಬೇಕು.

**ತಾ ಏತಾಃ ಸರ್ವಾ ಏವಾನುಬ್ರುವನ್ನನುಪ್ರಪದ್ಯೇತೈತೇಷಾಂ ಕಾಮಾನಾಮವರುದ್ಧ್ಯೈ । ಏತಾನ್ಕಾಮಾನವರುಂಧೇ ಯ ಏವಂ ವೇದ ॥**

ತನ್ನ ಸಮಸ್ತ ಇಷ್ಟಾರ್ಥಗಳನ್ನೂ ಪಡೆಯಲಿಚ್ಛಿಸುವವನು ಮೇಲೆ ಹೇಳಿದ ಮೂರು ಋಕ್ಕುಗಳನ್ನೂ ಪಠಿಸಬೇಕು. ಈ ವಿಷಯವನ್ನು ತಿಳಿದಿರುವ ಪುರುಷನು ತನ್ನ ಸಮಸ್ತ ಇಷ್ಟಾರ್ಥಗಳನ್ನೂ ಪಡೆದು ಸುಖಿಸುವನು.

**ಏಮಾ ಅಗ್ಮನ್ರೇವತೀರ್ಜೀವಧನ್ಯಾ ಇತಿ ಸಾದ್ಯಮಾನಾಸ್ವನ್ವಾಹ ವಸತೀವರೀಷ್ವೇಕಧನಾಸು ಚ । ಆಗ್ಮನ್ನಾಪ ಉಶತೀರ್ಬರ್ಹಿರೇದಮಿತಿ ಸನ್ನಾಸು ಸ ಏತಯಾ ಪರಿದಧಾತಿ ॥**

(ಐ. ಬ್ರಾ. ೮-೨೦)

ನೋಡಿ ಹೇಳಿದ ಎರಡುವಿಧ ಉಪಕರಗಳು ಎಂದರೆ ವಸತೀವರೀ ಮತ್ತು ಏಕಧನಾಪಾತ್ರೆಗಳ ಉಪಕರಗಳು ಉತ್ತರ ವೇದಿಯ ಸಮೀಪಕ್ಕೆ ಒಯ್ಯಲ್ಪಡುವಾಗ ಹೋತೃವು-**ಏಮಾ ಅಗ್ಮನ್ರೇವತೀಃ** (೧೦-೩೦-೧೪) ಎಂಬ ಋಕ್ಕನ್ನು ಪಠಿಸಬೇಕು ಮತ್ತು ಆ ಉಭಯವಿಧ ಉಪಕರಗಳು ವೇದಿಯಲ್ಲಿ ಸ್ಥಾಪಿತವಾದ (ಇಡಲ್ಪಟ್ಟ) ನಂತರ ಹೋತೃವು **ಆಗ್ಮನ್ನಾಪ** (೧೦-೩೦-೧೫) ಎಂಬ ಋಕ್ಕನ್ನು ಈ ಅಪ್ತೋನಪ್ತ್ರೀಯ ಕರ್ಮದಲ್ಲಿ ಕೊನೆಯ ಋಕ್ಕನ್ನಾಗಿ ಪಠಿಸಿ ಈ ಕರ್ಮವನ್ನು ಸಮಾಪ್ತಿಗೊಳಿಸಬೇಕು.

ಇಲ್ಲಿಗೆ ಅಪ್ತೋನಪ್ತ್ರೀಯದ ಕರ್ಮದ ವಿವರಣೆಯು ಸಮಾಪ್ತವು.

॥ ಸಾಯಣಭಾಷ್ಯಂ ॥

**ತೃತೀಯೇಽನುವಾಕೇ ತ್ರಯೋದಶ ಸೂಕ್ತಾನಿ ತತ್ರ ಪ್ರ ದೇವತ್ರೇತಿ ಪಂಚದಶರ್ಚಂ ಪ್ರಥಮಂ ಸೂಕ್ತಂ। ಇಲೂಷಪುತ್ರಸ್ಯ ಕವಷಸ್ಯಾರ್ಷಂ ತ್ರೈಷ್ಟುಭಮದ್ದೇವತ್ಯಮಪಾಂನಪಾದ್ದೇವತಾಕಂ ವಾ। ತಥಾ ಚಾನುಕ್ರಾಂತಂ। ಪ್ರ ದೇವತ್ರಾ ಪಂಚೋನಾ ಕವಷ ಐಲೂಷ ಆಪಮಪ್ತೋನಪ್ತ್ರೀಯಂ ವೇತಿ॥ ಅಪಯಿಷ್ಯ ಹೋತರಿತ್ಯುಕ್ತಃ ಸನ್ ಹೋತಾ ಪ್ರ ದೇವತ್ರೇತ್ಯಾದ್ಯಾ ನವಚೋಽನುಬ್ರೂಯಾತ್। ಸೂತ್ರಿತಂ ಚ। ಪ್ರ ದೇವತ್ರಾ ಬ್ರಹ್ಮಣೇ ಗಾತುರೇತ್ವಿತಿ ನವ ಹಿನೋತಾ ನೋ ಅಧ್ವರಂ ದೇವಯಜ್ಯೇತಿ ದಶಮೀಂ। ಆ. ೫-೧। ಇತಿ॥**

ಅನುವಾದವು—ಹತ್ತನೆಯ ಮಂಡಲದ ಮೂರನೆಯ ಅನುವಾಕದಲ್ಲಿ ಹದಿಮೂರು ಸೂಕ್ತಗಳಿರುವವು. ಅವುಗಳಲ್ಲಿ **ಪ್ರ ದೇವತ್ರಾ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಇಲೂಷನೆಂಬುವನ ಪುತ್ರನಾದ ಕವಷನೆಂಬುವನು ಋಷಿಯು. ಅಬ್ದೇವತಾಕವು ಅಥವಾ ಅಪಾಂನಪಾದ್ದೇವತಾಕವು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಪ್ರ ದೇವತ್ರಾ ಪಂಚೋನಾ ಕವಷ ಐಲೂಷ ಆಪಮಪ್ತೋನಪ್ತ್ರೀಯಂ ವಾ** ಎಂದು ಹೇಳಿರುವುದು. **ಅಪ ಇಷ್ಯ ಹೋತಃ** ಎಂದು ಅಧ್ವರ್ಯುವು ಹೋತೃವನ್ನುದ್ದೇಶಿಸಿ ಪ್ರೈಷಮಂತ್ರವನ್ನು ಪಠಿಸಿದಕೂಡಲೇ ಹೋತೃವು **ಪ್ರ ದೇವತ್ರಾ** ಎಂದು ಮೊದಲಾಗುವ ಈ ಸೂಕ್ತದ ಮೊದಲಿನ ಒಂಭತ್ತು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರ ದೇವತ್ರಾ ಬ್ರಹ್ಮಣೇ ಗಾತುರೇತ್ವಿತಿ ನವ ಹಿನೋತಾ ನೋ ಅಧ್ವರಂ ದೇವಯಜ್ಯೇತಿ ದಶಮೀಂ** ಎಂಬ ಸೂತ್ರದಿಂದ (ಆ. ೫-೧) ವಿವೃತವಾಗಿರುವುದು.

## ಸೂಕ್ತ—೩೦

**ಮಂಡಲ—೧೦ ॥ ಅನುವಾಕ—೩ ॥ ಸೂಕ್ತ—೧ ॥**

**ಅಷ್ಟಕ—೭ ॥ ಅಧ್ಯಾಯ—೭ ॥ ವರ್ಗ—೨೪, ೨೫, ೨೬ ॥**

**ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥**

**ಋಷಿಃ—ಕವಷ ಐಲೂಷಃ ॥**

**ದೇವತಾ—ಆಪ ಅಪಾಂನಪಾದ್ವಾ ॥**

**ಛಂದಃ—ತ್ರಿಷ್ಟುಪ್ ॥**

॥ ಸಂಹಿತಾಪಾಠಃ ॥

ಪ್ರ ದೇವತ್ರಾ ಬ್ರಹ್ಮಣೇ ಗಾತುರೇತ್ವಪೋ ಅಚ್ಛಾ ಮನಸೋ ನ ಪ್ರಯುಕ್ತಿ।

ಮಹೀಂ ಮಿತ್ರಸ್ಯ ವರುಣಸ್ಯ ಧಾಸಿಂ ಪೃಥುಜ್ರಯಸೇ ರೀರಧಾ ಸುವೃಕ್ತಿಂ ॥

॥ ಪದಪಾಠಃ ॥

ಪ್ರ । ದೇವsತ್ರಾ । ಬ್ರಹ್ಮಣೇ । ಗಾತುಃ । ಏತು । ಅಪಃ । ಅಚ್ಛ । ಮನಸಃ । ನ । ಪ್ರಯುಕ್ತಿ ।

ಮಹೀಂ । ಮಿತ್ರಸ್ಯ । ವರುಣಸ್ಯ । ಧಾಸಿಂ । ಪೃಥುsಜ್ರಯಸೇ । ರೀರಧ । ಸುsವೃಕ್ತಿಂ ॥ ೧ ॥

॥ ಸಾಯಣಭಾಷ್ಯಂ ॥

ಬ್ರಹ್ಮಣೇ । ತೃತೀಯಾರ್ಥೇ ಚತುರ್ಥೀ । ಬ್ರಹ್ಮಣಾ ಸ್ತೋತ್ರೇಣ । ಸ್ತೂಯಮಾನ ಇತಿ ಶೇಷಃ। ಗಾತುರ್ಗಮನಶೀಲಃ ಸೋಮೋ ದೇವತ್ರಾ ದೇವೀರ್ದ್ಯೋತಮಾನಾ ಅಪೋ ವಸತೀವರ್ಯೇಕಧನಾಲಕ್ಷಣಾನ್ಯುದಕಾನ್ಯಚ್ಛಾಭಿ ಪ್ರೈತು । ಪ್ರಕರ್ಷೇಣ ಗಚ್ಛತು । ತತ್ರ ದೃಷ್ಟಾಂತಃ । ಮನಸೋ ನ ಪ್ರಯುಕ್ತಿ ಯಥಾ ಮನಸಃ ಪ್ರಯುಕ್ತಿಃ ಪ್ರಯೋಗ ಉದ್ಯೋಗಃ ಶೀಘ್ರಂ ಗಚ್ಛತಿ ತದ್ವತ್ । ಏವಂ ಸೋಮೇsಪಃ ಪ್ರತಿಗತೇ ಸತಿ ಹೇ ಮದೀಯಾತ್ಮನ್ ಅಧ್ವರ್ಯೋ ವಾ ಮಹೀಂ ಧಾಸಿಂ ಮಹತ್ಸೋಮಲಕ್ಷಣಮನ್ನಂ ಮಿತ್ರಸ್ಯ ವರುಣಸ್ಯ ಚಾರ್ಥಾಯ ಪೃಥುಜ್ರಯಸೇ ವಿಸ್ತೀರ್ಣಜವಾಯ । ಮಹಾಗತೇರಿಂದ್ರಸ್ಯ ಚಾರ್ಥಾಯೇತ್ಯರ್ಥಃ । ರೀರಧ । ಸಂಸಾಧಯ । ಸಂಸ್ಕುರು । ದಾನಯೋಗ್ಯಂ ಕುರು । ಸುವೃಕ್ತಿಂ ಸುಷ್ಠು ದೋಷೈರ್ವರ್ಜಿತಾಂ ಸ್ತುತಿಂ ಚ ಕುರು ॥

॥ ಪ್ರತಿಪದಾರ್ಥ ॥

**ಮನಸಃ**—ಮನಸ್ಸಿನ । **ಪ್ರಯುಕ್ತಿ ನ**—ವ್ಯಾಪಾರದಂತೆ ವೇಗವಾಗಿ । **ಬ್ರಹ್ಮಣೇ**—ಸ್ತುತಿಯಿಂದ ಪ್ರಶಂಸಿತವೂ । **ಗಾತುಃ**—ಗಮನಶೀಲವಾದುದೂ ಆದ ಸೋಮವು । **ದೇವತ್ರಾ**—ಪ್ರಕಾಶಮಾನಗಳಾದ । **ಅಪಃ ಅಚ್ಛ**—ವಸತೀವರ್ಯಾದ್ಯುದಕಗಳಿಗಭಿಮುಖವಾಗಿ । **ಪ್ರ ಏತು**—ಹರಿದು ಹೋಗಲಿ । **ಮಿತ್ರಸ್ಯ**—ಮಿತ್ರನಿಗೂ । **ವರುಣಸ್ಯ**—ವರುಣನಿಗೂ । **ಪೃಥುಜ್ರಯಸೇ**—ಅಧಿಕವಾದ ವೇಗವುಳ್ಳ ಇಂದ್ರನಿಗೂ । **ಮಹೀಂ**—ಮಹತ್ತಾದ । **ಧಾಸಿಂ**—ಸೋಮರೂಪವಾದ ಅನ್ನವನ್ನು । **ರೀರಧ**—ಸಂಸ್ಕರಿಸಿ ಅರ್ಪಿಸು । **ಸುವೃಕ್ತಿಂ**—ದೋಷರಹಿತವಾದ ಸ್ತುತಿಯನ್ನೂ ಅರ್ಪಿಸು.

॥ ಭಾವಾರ್ಥ ॥

ಮನಸ್ಸಿನ ವ್ಯಾಪಾರದಂತೆ ವೇಗವಾಗಿ ಸ್ತುತಿಯಿಂದ ಪ್ರಶಂಸಿತವೂ, ಗಮನಶೀಲವಾದುದೂ ಆದ ಸೋಮವು ಪ್ರಕಾಶಮಾನಗಳಾದ ವಸತೀವರ್ಯಾದ್ಯುದಕಗಳಿಗಭಿಮುಖವಾಗಿ ಹರಿದುಹೋಗಲಿ. ಮಿತ್ರನಿಗೂ ವರುಣನಿಗೂ, ಅಧಿಕವಾದ ವೇಗವುಳ್ಳ ಇಂದ್ರನಿಗೂ ಮಹತ್ತಾದ ಸೋಮರೂಪವಾದ ಅನ್ನವನ್ನು ಸಂಸ್ಕರಿಸಿ ಅರ್ಪಿಸು. ದೋಷರಹಿತವಾದ ಸ್ತುತಿಯನ್ನು ಅರ್ಪಿಸು.

## English Translatian

(Honoured) by adoration, let the advancing Soma approach the celestial waters like the celerity of the mind : offer abundant (sacrificial) food, and perfect praise for the sake of Mitra and Varuna, and for (Indra) the rapid mover.

। ಸಂಹಿತಾಪಾಠಃ ।

ಅಧ್ವರ್ಯವೋ ಹವಿಷ್ಮಂತೋ ಹಿ ಭೂತಾಚ್ಛಾಪ ಇತೋಶತೀರುಶಂತಃ ।
ಅವ ಯಾಶ್ಚಷ್ಟೇ ಅರುಣಃ ಸುಪರ್ಣಸ್ತಮಾಸ್ಯಧ್ವಮೂರ್ಮಿಮದ್ಯಾ
ಸುಹಸ್ತಾಃ ॥ ೨ ॥

। ಪದಪಾಠಃ ।

ಅಧ್ವರ್ಯವಃ । ಹವಿಷ್ಮಂತಃ । ಹಿ । ಭೂತ । ಅಚ್ಛ । ಅಪಃ । ಇತ । ಉಶತೀಃ । ಉಶಂತಃ ।
ಅವ । ಯಾಃ । ಚಷ್ಟೇ । ಅರುಣಃ । ಸುऽಪರ್ಣಃ । ತಂ । ಆ । ಅಸ್ಯಧ್ವಂ । ಊರ್ಮಿಂ । ಅದ್ಯ ।
ಸುऽಹಸ್ತಾಃ ॥ ೨ ॥

। ಸಾಯಣಭಾಷ್ಯಂ ।

ಹೇ ಅಧ್ವರ್ಯವಃ ಯೂಯಂ ಹವಿಷ್ಮಂತೋ ಹ್ಯಭಿಷೋತವ್ಯೇನ ಸೋಮಲಕ್ಷಣೇನ ಹವಿಷಾ ಯುಕ್ತಾಃ ಖಲು ಭೂತ । ಭವತ । ಕಿಂ ಚ ಹೇ ಉಶಂತಃ ಸೋಮಾಭಿಷವಂ ಕರ್ತುಂ ಕಾಮಯಮಾನಾ ಅಧ್ವರ್ಯವಃ ಯೂಯಮುಶತೀಃ ಸೋಮಾಭಿಷವಾಂಗಭಾವಮಭಿಲಷಂತೀರೇಕಧನಾಲಕ್ಷಣಾ ಅಪೋಽಚ್ಛಾಭಿಮುಖ್ಯೇನೇತ । ಗಚ್ಛತ । ಅರುಣೋ ರಕ್ತವರ್ಣಃ ಸುಪರ್ಣಃ ಸುಪತನಃ ಸೋಮೋಽವಾಧಸ್ತಾದಂತರಿಕ್ಷೇ ಯಾ ಮೇಘೋದರಗತಾ ಅಪಶ್ಚಷ್ಟೇ ಪಶ್ಯತಿ ಹೇ ಸುಹಸ್ತಾಃ ಸೋಮಾಭಿಷವಾದಿಶೋಭನಕರ್ಮಕಾರಿತ್ವಾತ್ ಸುವರ್ಣಮಯಪವಿತ್ರಾದ್ಯಲಂಕೃತಾಃ । ಯದ್ವಾ । ಶೋಭನಹಸ್ತಾಃ । ಏತೇಽಧ್ವರ್ಯವಃ ಯೂಯಮದ್ಯೇದಾನೀಂ ತಂ ತಾದೃಶಮೂರ್ಮಿಂ ಸೋಮಸಂಘಾತಂ ತಾಭಿರದ್ಭಿಃ ಸಹಾಸ್ಯಧ್ವಂ । ಅಭಿಮುಖ್ಯೇನ ಸ್ಥಿತ್ವಾ ಮಹತಾದರೇಣ ದಶಾಪವಿತ್ರೇ ಶೋಧನಾರ್ಥಂ ಪ್ರಕ್ಷಿಪತ ॥

। ಪ್ರತಿಪದಾರ್ಥ ।

**ಅಧ್ವರ್ಯವಃ**—ಎಲೈ ಅಧ್ವರ್ಯುಗಳೇ । **ಹವಿಷ್ಮಂತಃ ಹಿ**—ನೀವು ಹವಿಸ್ಸುಗಳಿಂದ ಕೂಡಿದವರಾಗಿ । **ಭೂತ**—ಆಗಿದ್ದೀರಿ । **ಉಶಂತಃ**—ಸೋಮವನ್ನು ಹಿಂಡಲು ಇಚ್ಛೆಯುಳ್ಳ ನೀವು । **ಉಶತೀಃ**—ಅದನ್ನೇ ಅಪೇಕ್ಷಿಸುವುದೂ ಮತ್ತು । **ಅರುಣಃ**—ಕೆಂಪುಬಣ್ಣವುಳ್ಳವನೂ । **ಸುಪರ್ಣಃ**—ಉತ್ತಮವಾದ ಪತನವುಳ್ಳವನೂ

ಆದ ಸೋಮನು । **ಅವ**—ಅಂತರಿಕ್ಷದ ಅಧೋಭಾಗದಲ್ಲಿ । **ಯಾಃ**—ಮೇಘಸ್ಥವಾದ ಯಾವ ಉದಕಗಳನ್ನು । **ಚಷ್ಟೇ**—ನೋಡುವನೋ ಅಂತಹುದೂ ಆದ । **ಅಪಃ ಅಚ್ಛ**—ಉದಕಗಳಿಗಭಿಮುಖವಾಗಿ । **ಇತ**—ಸರಿಯಿರಿ । **ಸುಹಸ್ತಾಃ**—ಉತ್ತಮವಾದ ಹಸ್ತಗಳುಳ್ಳ ಎಲೈ ಅಧ್ವರ್ಯುಗಳೇ । **ಅದ್ಯ**—ಈಗ । **ತಂ ಊರ್ಮಿಂ**—ಅಲೆಗಳಂತಿರುವ ಆ ಸೋಮಸಂಘಾತವನ್ನು । **ಆಸ್ಯಧ್ವಂ**—ಉದಕಗಳೊಂದಿಗೆ ಸೇರಿಸಿರಿ.

॥ ಭಾವಾರ್ಥ ॥

ಎಲೈ ಅಧ್ವರ್ಯುಗಳೇ, ನೀವು ಹವಿಸ್ಸುಗಳಿಂದ ಕೂಡಿದವರಾಗಿ ಆಗಿದ್ದೀರಿ. ಸೋಮವನ್ನು ಹಿಂಡಲು ಇಚ್ಛೆಯುಳ್ಳ ನೀವು ಅದನ್ನೇ ಅಪೇಕ್ಷಿಸುವುದೂ, ಮತ್ತು ಕೆಂಪುಬಣ್ಣವುಳ್ಳವನೂ, ಉತ್ತಮವಾದ ಪತನವುಳ್ಳವನೂ ಆದ ಸೋಮನು ಅಂತರಿಕ್ಷದ ಅಧೋಭಾಗದಲ್ಲಿ ಮೇಘಸ್ಥವಾದ ಯಾವ ಉದಕಗಳನ್ನು ನೋಡುವನೋ ಅಂತಹುದೂ ಆದ ಉದಕಗಳಿಗಭಿಮುಖವಾಗಿ ಸರಿಯಿರಿ. ಉತ್ತಮವಾದ ಹಸ್ತಗಳುಳ್ಳ ಎಲೈ ಅಧ್ವರ್ಯುಗಳೇ, ಈಗ ಅಲೆಗಳಂತಿರುವ ಆ ಸೋಮಸಂಘಾತವನ್ನು ವಸತೀವರ್ಯಾದಿ ಉದಕಗಳೊಂದಿಗೆ ಸೇರಿಸಿರಿ.

English Translation

Priests, since you are charged with the libation, desiring (to present it), proceed to the waters desiring (to receive it); to those (waters) which the red hawk beholds descending from the clouds: you, dextrous-handed (priests), cast to-day that flood (of Soma) into (the consecrated water).

। ಸಂಹಿತಾಪಾಠಃ ।

ಅಧ್ವರ್ಯವೋಽಪ ಇತಾ ಸಮುದ್ರಮಪಾಂ ನಪಾತಂ ಹವಿಷಾ ಯಜಧ್ವಂ।
ಸ ವೋ ದದದೂರ್ಮಿಮದ್ಯಾ ಸುಪೂತಂ ತಸ್ಮೈ ಸೋಮಂ ಮಧುಮಂತಂ ಸುನೋತ ॥ ೩ ॥

॥ ಪದಪಾಠಃ ॥

ಅಧ್ವರ್ಯವಃ । ಅಪಃ । ಇತ । ಸಮುದ್ರಂ । ಅಪಾಂ । ನಪಾತಂ । ಹವಿಷಾ । ಯಜಧ್ವಂ ।
ಸಃ । ವಃ । ದದತ್ । ಊರ್ಮಿಂ । ಅದ್ಯ । ಸುಽಪೂತಂ । ತಸ್ಮೈ । ಸೋಮಂ । ಮಧುಽಮಂತಂ । ಸುನೋತ ॥ ೩ ॥

। ಸಾಯಣಭಾಷ್ಯಂ ।

**ಹೇ ಅಧ್ವರ್ಯವಃ ಯೂಯಮಪ ಏಕಧನಾಲಕ್ಷಣಾನ್ಯುದಕಾನಿ । ಆಹರ್ತುಮಿತಿ ಶೇಷಃ । ಸಮುದ್ರಮುದಧಿಸ್ಥಾನೀಯಂ ಜಲಾಶಯಮಿತ । ಗಚ್ಛತ । ಇದಾನೀಮುತ್ತರೋಽರ್ಧರ್ಚೋ**

ವ್ಯಾಖ್ಯಾಯತೇ ಪಶ್ಚಾದ್ದ್ವಿತೀಯಃ ಪಾದಃ । ಸ್ವಾರ್ಥಿಕೋಽಯಂ ಕ್ರಮಃ । ಅದ್ಯೇದಾನೀಂ ಸೋಽಪಾಂ ನಪಾದ್ಯೋ ಜಲಾಶಯಂ ಪ್ರತಿಗತೇಭ್ಯೋ ಯುಷ್ಮಭ್ಯಂ ಸುಪೂತಂ ಸುಶುದ್ಧಮೂರ್ಮಿಂ ಜಲಸಮೂಹಂ ದದತ್ । ದದಾತು । ಯೂಯಮಪಿ ತೇನ ಸಮೂಹೇನ ತಸ್ಮಾ ಅಪಾಂ ನಪಾತೇ ಮಧುಮಂತಂ ಮಧುರಸ್ವಾದೋಪೇತಂ ಸೋಮಂ ಸುನೋತ ಅಭಿಷುಣುತ । ಅಭಿಷುತೇನ ಸೋಮಾಖ್ಯೇನ ಹವಿಷಾಪಾಂ ನಪಾತಂ ವೃಷ್ಟಿಕರ್ಮಣ್ಯಧಿಕೃತಂ ದೇವಂ ಯಜಧ್ವಂ

॥ ಪ್ರತಿಪದಾರ್ಥ ॥

ಅಧ್ವರ್ಯವಃ—ಎಲೈ ಅಧ್ವರ್ಯುಗಳಿರಾ । ಅಪಃ—ಏಕಧನಾಖ್ಯೋದಕಗಳನ್ನು ತರಲು । ಸಮುದ್ರಂ—ಸಮುದ್ರಕ್ಕೆ । ಇತ—ಹೋಗಿರಿ । ಅಪಾಂ ನಪಾತಂ—ಅಪಾಂನಪಾತ್ಸಂಜ್ಞಕನಾದ ದೇವನನ್ನು । ಹವಿಷಾ—ಹವಿಸ್ಸಿನಿಂದ । ಯಜಧ್ವಂ—ಪೂಜಿಸಿರಿ । ಅದ್ಯ—ಈಗ । ಸಃ—ಅಪಾಂನಪಾತ್ಸಂಜ್ಞಕನಾದ ದೇವನು । ವಃ—ನಿಮಗೆ । ಸುಪೂತಂ—ಪರಿಶುದ್ಧವಾದ ಊರ್ಮಿಂ—ಜಲಸಮೂಹವನ್ನು । ದದತ್—ಒದಗಿಸಲಿ । ತಸ್ಮೈ—ಅವನನ್ನುದ್ದೇಶಿಸಿ । ಮಧುಮಂತಂ—ಮಧುರರಸೋಪೇತವಾದ । ಸೋಮಂ—ಸೋಮವನ್ನು । ಸುನೋತ—ಹಿಂಡಿ ಅರ್ಪಿಸಿರಿ.

॥ ಭಾವಾರ್ಥ ॥

ಎಲೈ ಅಧ್ವರ್ಯುಗಳಿರಾ, ಏಕಧನಾಖ್ಯೋದಕಗಳನ್ನು ತರಲು ಸಮುದ್ರಕ್ಕೆ ಹೋಗಿರಿ. ಅಪಾಂನಪಾತ್ಸಂಜ್ಞಕನಾದ ದೇವನನ್ನು ಹವಿಸ್ಸಿನಿಂದ ಪೂಜಿಸಿರಿ. ಆ ದೇವನು ನಿಮಗೆ ಪರಿಶುದ್ಧವಾದ ಜಲಸಮೂಹವನ್ನು ಒದಗಿಸಲಿ. ಅವನನ್ನುದ್ದೇಶಿಸಿ ಮಧುರರಸೋಪೇತವಾದ ಸೋಮವನ್ನು ಹಿಂಡಿ ಅರ್ಪಿಸಿರಿ.

## English Translation

Go, priests, to the reservoir; worship the grandson of the waters with oblations: may he to-day give you the consecrated water, and you pour forth to him the sweet-flavoured Soma.

॥ ಸಂಹಿತಾಪಾಠಃ ॥

ಯೋ ಅನಿಧ್ಮೋ ದೀದಯದಪ್ಸ್ವ೧ಂತರ್ಯಂ ವಿಪ್ರಾಸ ಈಳತೇ ಅಧ್ವರೇಷು ।
ಅಪಾಂ ನಪಾನ್ಮಧುಮತೀರಪೋ ದಾ ಯಾಭಿರಿಂದ್ರೋ ವಾವೃಧೇ ವೀರ್ಯಾಯ ॥ ೪ ॥

॥ ಪದಪಾಠಃ ॥

ಯಃ । ಅನಿಧ್ಮಃ । ದೀದಯತ್ । ಅಪ್ಽಸು । ಅಂತಃ । ಯಂ । ವಿಪ್ರಾಸಃ । ಈಳತೇ । ಅಧ್ವರೇಷು ।

ಅಪಾಂ । ನಪಾತ್ । ಮಧುಽಮತೀಃ । ಅಪಃ । ದಾಃ । ಯಾಭಿಃ । ಇಂದ್ರಃ । ವವೃಧೇ । ವೀರ್ಯಾಯ ॥

॥ ಸಾಯಣಭಾಷ್ಯಂ ॥

ಉತ್ತರಾರ್ಧಸ್ಯ ಪ್ರತ್ಯಕ್ಷಕೃತತ್ವಾದೇಕವಾಕ್ಯತಾಯೈ ಯುಷ್ಮಚ್ಛಬ್ದೇನ ಸಮಾನಾರ್ಥೋ ಭವಚ್ಛಬ್ದಃ ಪ್ರಥಮಾರ್ಧೇಽಧ್ಯಾಹಾರ್ಯಃ । ಯೋ ಭವಾನಪಾಂ ನಪಾದಪ್ಸ್ವಂತರಪಾಂ ಮಧ್ಯೇ ಮೇಘಸ್ಥಾನೇಽನಿಧ್ಮಃ ಕಾಷ್ಠವರ್ಜಿತಃ ಸನ್ ದೀದಯತ್ ದೀಪ್ಯತೇ ವಿಪ್ರಾಸೋ ಮೇಧಾವಿನ ಋತ್ವಿಗ್ಯಜಮಾನಾ ಅಧ್ವರೇಷು ಯಾಗೇಷು ಯಂ ಭವಂತಮೀಳತೇ ಸ್ತುವಂತಿ ಹೇ ಅಪಾಂ ನಪಾತ್ ಸ ತ್ವಂ ಮಧುಮತೀರ್ಮಧುರರಸಯುಕ್ತಾ ಅಪೋ ವೃಷ್ಟಿಲಕ್ಷಣಾ ದಾಃ । ಅಸ್ಮಭ್ಯಂ ದೇಹಿ । ಯಾಭಿರ್ವಸತೀವರ್ಯೈಕಧನಾರೂಪಾಭಿಃ ಸೋಮೇನ ಮಿಶ್ರಿತಾಭಿರದ್ಭಿರಿಂದ್ರೋ ವೀರ್ಯಾಯ ವೃತ್ರವಧಾದಿಶೂರಕರ್ಮಣೇ ವವೃಧೇ ವರ್ಧತೇ ತಾ ಅಪೋ ದೇಹೀತಿ ಸಂಬಂಧಃ ॥

॥ ಪ್ರತಿಪದಾರ್ಥ ॥

**ಅಪಾಂ ನಪಾತ್**—ಎಲೈ ಅಪಾಂ ನಪಾತ್ಸಂಜ್ಞಕನಾದ ದೇವನೇ । **ಯಃ**—ಯಾವ ನೀನು । **ಅಪ್ಸು ಅಂತಃ**—ಉದಕಗಳ ನಡುವೆ (ಮೇಘದಲ್ಲಿ) । **ಅನಿಧ್ಮಃ**—ಕಟ್ಟಿಗೆಗಳಾವುವೂ ಇಲ್ಲದೆ । **ದೀದಯತ್**—ಪ್ರಕಾಶಿಸುವೆಯೋ ಮತ್ತು । **ಯಂ**—ಯಾವ ನಿನ್ನನ್ನು । **ವಿಪ್ರಾಸಃ**—ಮೇಧಾವಿಗಳಾದ ಋತ್ವಿಕ್ಕುಗಳು । **ಅಧ್ವರೇಷು**—ಯಜ್ಞಗಳಲ್ಲಿ । **ಈಳತೇ**—ಸ್ತುತಿಸುವರೋ ಅಂತಹ ನೀನು । **ಯಾಭಿಃ**—(ಸೋಮಮಿಶ್ರಿತವಾದ) ಯಾವ ಉದಕಗಳಿಂದ । **ಇಂದ್ರಃ**—ಇಂದ್ರನು । **ವೀರ್ಯಾಯ**—ವೀರ್ಯಕರ್ಮವನ್ನಾಚರಿಸಲು । **ವವೃಧೇ**—ಪುಷ್ಟನಾಗುವನೋ ಅಂತಹ । **ಮಧುಮತೀಃ**—ಮಾಧುರ್ಯದಿಂದ ಕೂಡಿದ । **ಅಪಃ**—ಉದಕಗಳನ್ನು । **ದಾಃ**—ನಮಗೆ ಕೊಡು.

॥ ಭಾವಾರ್ಥ ॥

ಎಲೈ ಅಪಾಂನಪಾತ್ಸಂಜ್ಞಕನಾದ ದೇವನೇ, ಯಾವ ನೀನು ಉದಕಗಳ ನಡುವೆ (ಮೇಘಪ್ರದೇಶದಲ್ಲಿ) ಕಟ್ಟಿಗೆಗಳಾವುವೂ ಇಲ್ಲದೆ ಪ್ರಕಾಶಿಸುವೆಯೋ ಮತ್ತು ಯಾವ ನಿನ್ನನ್ನು ಮೇಧಾವಿಗಳಾದ ಋತ್ವಿಕ್ಕುಗಳು ಯಜ್ಞಗಳಲ್ಲಿ ಸ್ತುತಿಸುವರೋ ಅಂತಹ ನೀನು ಇಂದ್ರನಿಗೆ ವೀರ್ಯಕರ್ಮವನ್ನಾಚರಿಸಲು ಪುಷ್ಟಿಯನ್ನು ಕೊಡತಕ್ಕದ್ದೂ, ಮಾಧುರ್ಯದಿಂದಕೂಡಿದ ದೂ ಸೋಮಕ್ಕೆ ಸೇರಿಸಲು ಯೋಗ್ಯವಾದುದೂ ಆದ ಉದಕಗಳನ್ನು ನಮಗೆ ಕೊಡು.

## English Translation

(He) who shines without fuel, in the midst of the waters, he whom the pious worship at sacrifices; grandson of the waters, give us those sweet waters by which (mixed with the Soma-juice), Indra is elevated to herosim.

॥ ವಿಶೇಷವಿಷಯಗಳು ॥

ಅಪಾಂನಪಾತ್ ಶಬ್ದದ ನಿರ್ವಚನವನ್ನು ಹೇಳುವಾಗ ಅದಕ್ಕೆ ಉದಾಹರಣೆಯಾಗಿ ಈ ಋಕ್ಕಿನ ನಿರುಕ್ತವನ್ನು ಹೇಳಿದ್ದಾರೆ.

**ಯೋಽನಿಧ್ಮೋ ದೀದಯದ್ದೀಪ್ಯಸೇಽಭ್ಯಂತರಮಪ್ಸು ಯಂ ಮೇಧಾವಿನಃ ಸ್ತುವಂತಿ ಯಜ್ಞೇಷು ಸೋಽಪಾನ್ನಪಾನ್ಮಧುಮತೀರಪೋ ದೇಹ್ಯಭಿಷವಾಯ ಯಾಭಿರಿಂದ್ರೋ ವರ್ಧತೇ ವೀರ್ಯಾಯ ವೀರಕರ್ಮಣೇ ॥**

(ನಿ. ೧೦-೧೯)

ಅಪಾಂನಪಾತ್ ಎಂದರೆ ನೀರಿನ ಮಧ್ಯದಲ್ಲಿರುವ ಅಥವಾ ಉತ್ಪನ್ನವಾಗುವ ಅಗ್ನಿಯು ಅಥವಾ ಅಗ್ನಿಯ ರೂಪಾಂತರವು. ಈ ಅಪಾಂನಪಾತ್ ಎಂಬ ದೇವನು ನೀರಿನ ಮಧ್ಯದಲ್ಲಿ ಇಧ್ಮಾದಿಗಳ (ಕಟ್ಟಿಗೆ ಅಥವಾ ಕಾಷ್ಠಗಳ) ಸಹಾಯವಿಲ್ಲದೆ ಬೆಳಗುತ್ತಾನೆ. ಇಂತಹ ಗುಣವಿಶಿಷ್ಟನಾದ ದೇವನನ್ನು ಮೇಧಾವಿಗಳಾದ ಋತ್ವಿಗಾದಿಜನರು ಯಜ್ಞಾದಿಗಳಲ್ಲಿ ಸ್ತುತಿಸುತ್ತಾರೆ. ಎಲೈ ಅಪಾಂನಪಾದ್ದೇವತೆಯೇ, ಇಂದ್ರನ ಶಕ್ತಿವೃದ್ಧಿಗಾಗಿ ನಾವು ಸೋಮರಸವನ್ನು ಹಿಂಡುವವರಾಗಿದ್ದೇವೆ. ಆದಕ್ಕಾಗಿ ನಮಗೆ ಸಿಹಿಯಾದ ಮತ್ತು ಮಧುವಿನಂತೆ ರುಚಿಕರವಾದ ಉದಕಗಳನ್ನು ಅನುಗ್ರಹಿಸು ಎಂದು ನಿರ್ವಚನಾಭಿಪ್ರಾಯವು.

॥ ಸಂಹಿತಾಪಾಠಃ ॥

**ಯಾಭಿಃ ಸೋಮೋ ಮೋದತೇ ಹರ್ಷತೇ ಚ ಕಲ್ಯಾಣೀಭಿರ್ಯುವತಿಭಿರ್ನ ಮರ್ಯಃ ।**

**ತಾ ಅಧ್ವರ್ಯೋ ಅಪೋ ಅಚ್ಛಾ ಪರೇಹಿ ಯದಾಸಿಂಚಾ ಓಷಧೀಭಿಃ ಪುನೀತಾತ್ ॥ ೪ ॥**

**ಯಾಭಿಃ । ಸೋಮಃ । ಮೋದತೇ । ಹರ್ಷತೇ । ಚ । ಕಲ್ಯಾಣೀಭಿಃ । ಯುವತಿಽಭಿಃ । ನ । ಮರ್ಯಃ । ತಾಃ । ಅಧ್ವರ್ಯೋ ಇತಿ । ಅಪಃ । ಅಚ್ಛ । ಪರಾ । ಇಹಿ । ಯತ್ । ಆಽಸಿಂಚಾಃ । ಓಷಧೀಭಿಃ । ಪುನೀತಾತ್ ॥ ೪ ॥**

॥ ಸಾಯಣಭಾಷ್ಯಂ ॥

**ಅಭಿಷುತಃ ಸೋಮೋ ಯಾಭಿರ್ವಸತೀವರ್ಯೇಕಧನಾಖ್ಯಾಭಿರದ್ಭಿಃ ಸಹ ಮೋದತೇ ಮುದಿತೋ ಭವತಿ ಹರ್ಷತೇ ಚ । ಪುನರುಕ್ತಿರಾದರಾರ್ಥಾ । ಅತ್ಯರ್ಥಂ ಹೃಷ್ಯತೀತ್ಯರ್ಥಃ । ತತ್ರ ದೃಷ್ಟಾಂತಃ ।**

ಕಲ್ಯಾಣೀಭಿಃ ಕಮನೀಯಾಭಿರ್ಯುವತಿಭಿಸ್ತರುಣೀಭಿಃ ಸ್ತ್ರೀಭಿಃ ಸಹ ಮರ್ಯೋ ನ ಯಥಾ ಮನುಷ್ಯೋ ಮೋದತೇ ತದ್ವತ್ । ಹೇ ಅಧ್ವರ್ಯೋ ತ್ವಂ ತಾಸ್ತಾದೃಶೀರಪೋಽಚ್ಛಾಭಿಪ್ರಾಪ್ತುಂ ಪರೇಹಿ । ಜಲಾಶಯಂ ಪ್ರತಿಗಚ್ಛ । ಕಿಂಚ ಯದ್ಯದಾಹೃತಾಭಿಸ್ತಾಭಿರದ್ಭಿರಾಸಿಂಚಾಃ ಆ ಸಮಂತಾತ್ಸೋಮಮಾನಾಸಿಂಚಸಿ ತದೌಷಧೀಭಿಃ ಸೋಮ್ಯೈಃ ಸಹಾಪಶ್ಚ ಪುನೀತಾತ್ । ದಶಾಪವಿತ್ರೇಣ ಪುನೀಹಿ ॥

। ಪ್ರತಿಪದಾರ್ಥ ।

ಅಧ್ವರ್ಯೋ—ಎಲೈ ಅಧ್ವರ್ಯುವೇ । ಮರ್ಯಃ—ಮಾನವನು । ಕಲ್ಯಾಣೀಭಿಃ—ಆಕರ್ಷಕವಾದ ರೂಪವುಳ್ಳ । ಯುವತಿಭಿಃ ನ—ಯುವತಿಯರೊಡಗೂಡಿದಾಗ ನಲಿದು ಹರ್ಷಪಡುವಂತೆ । ಸೋಮಃ—ಸೋಮ ದೇವನು । ಯಾಭಿಃ—ಯಾವ ಉದಕಗಳೊಡನೆ ಕೂಡಿ । ಮೋದತೇ—ಹರ್ಷಪಡುವನೋ । ಹರ್ಷತೇ ಚ—ನಲಿದು ಸಂತೋಷಪಡುವನೋ । ತಾಃ—ಅಂತಹ । ಅಪಃ ಅಚ್ಛ—ಉದಕಗಳಿಗಭಿಮುಖವಾಗಿ (ಅವನ್ನು ತರಲು) । ಪರೇಹಿ—ಸಮುದ್ರಕ್ಕೆ ಹೋಗು । ಯತ್—ಯಾವಾಗ (ಅವನ್ನು) । ಆಸಿಂಚಾಃ—ಸೋಮಗಳೊಡನೆ ಸೇರಿಸುವಿರೋ ಆಗ । ಓಷಧೀಭಿಃ—ಸೋಮಲತೆಗಳೊಡನೆ । ಪುನೀತಾತ್—ಅವನ್ನೂ ಶುದ್ಧಿಗೊಳಿಸು.

। ಭಾವಾರ್ಥ ॥

ಎಲೈ ಅಧ್ವರ್ಯುವೇ, ಆಕರ್ಷಕವಾದ ರೂಪವುಳ್ಳ ಯುವತಿಯರೊಡಗೂಡಿದಾಗ ಮಾನವನು ನಲಿದು ಹರ್ಷಪಡುವಂತೆ ಸೋಮದೇವನು ಯಾವ ಉದಕಗಳೊಡನೆ ಕೂಡಿ ಹರ್ಷಪಡುವನೋ ಅಂತಹ ಉದಕಗಳಿಗಭಿಮುಖವಾಗಿ ಅವನ್ನು ತರಲು ಸಮುದ್ರಕ್ಕೆ ಹೋಗು. ಯಾವಾಗ ಅವನ್ನು ಸೋಮಗಳೊಡನೆ ಸೇರಿಸುವಿರೋ ಆಗ ಸೋಮಲತೆಗಳೊಡನೆ ಅವನ್ನು ಶುದ್ಧಿಗೊಳಿಸು.

English Translation

Those waters with which Soma sports and delights as a man (sports) with elegant young damsels: you, priest, approach to obtain them: when you sprinkle them (in libation), purify (them with the filter) along with the plants (the Soma).

। ಸಂಹಿತಾಪಾಠಃ ।

ಏವೇದ್ಯೂನೇ ಯುವತಯೋ ನಮಂತ ಯದೀಮುಶನ್ನುಶತೀರೇತ್ಯಚ್ಛ ।

ಸಂ ಜಾನತೇ ಮನಸಾ ಸಂ ಚಿಕಿತ್ರೇಽಧ್ವರ್ಯವೋ ಧಿಷಣಾಪಶ್ಚ ದೇವೀಃ ॥

। ಪದಪಾಠಃ ।

ಏವ । ಇತ್ । ಯೂನೇ । ಯುವತಯಃ । ನಮಂತ । ಯತ್ । ಈಂ । ಉಶನ್ । ಉಶತೀಃ । ಏತಿ । ಅಚ್ಛ ।

ಸಂ । ಜಾನತೇ । ಮನಸಾ । ಸಂ । ಚಿಕಿತ್ರೇ । ಅಧ್ವರ್ಯವಃ । ಧಿಷಣಾ । ಅಪಃ । ಚ । ದೇವೀಃ ॥ ೬ ॥

। ಸಾಯಣಭಾಷ್ಯಂ ।

ಯುವತಯಸ್ತರುಣ್ಯಃ ಸ್ತ್ರಿಯೋ ಯೂನೇ ತರುಣಾಯ ನಮಂತೇ ಯಥಾ ಪ್ರಹ್ವೀಭವಂತಿ ಏವಮೇವಂ ವಸತೀವರ್ಯೋಕಥನಾಖ್ಯಾ ಆಪಃ ಸೋಮಾಯ ಪ್ರಹ್ವೀಭವಂತಿ । ಯದ್ವಾ । ಯುವತಯಃ ಸೋಮೇನ ಸಹ ಮಿಶ್ರಯಿತ್ರ್ಯ ಆಪೋ ಯೂನೇಽಭಿಷವಾದಿಕರ್ಮಣಾಮಾತ್ಮನಾ ಸಹ ಮಿಶ್ರಯಿತ್ರೇ ಕರ್ತ್ರೇಽಧ್ವರ್ಯವೇ ನಮಂತ । ಪ್ರಹ್ವೀಭವಂತ್ಯೇವ । ಇದಿತಿ ಪೂರಣಃ । ಕದಾ । ಯದ್ಯದೋಶನ್ನಭಿಷವಾರ್ಥಂ ವಸತೀವರೀಃ ಕಾಮಯಮಾನಃ ಸೋಮಃ ಸೋಮಾಭಿಷವಂ ಕರ್ತುಂ ಕಾಮಯಮಾನೋಽಧ್ವರ್ಯುರ್ವೋಶತೀಃ ಸೋಮೇನ ಸಹ ಮಿಶ್ರೀಭಾವಮಭಿಷವಾದಿಕರ್ಮಾಂಗಭಾವಂ ಚ ಕಾಮಯಮಾನಾ ಈಮೇನಾ ಅಪೋಽಚ್ಛ ಪ್ರಾಪ್ತುಮೇತಿ ಗಚ್ಛತಿ ತದೋಪನಮಂತೇ । ಅಧ್ವರ್ಯವೋ ಧಿಷಣಾ ತದೀಯಾಸ್ತುತಿಲಕ್ಷಣಾ ವಾಕ್ಚ ದೇವೀರ್ದೇವ್ಯ ಆಪಶ್ಚ ಮನಸಾ ವಿಶಿಷ್ಟಯಾ ಬುದ್ಧ್ಯಾ ಸಂ ಜಾನತೇ । ಸಮ್ಯಗ್ಜಾನಂತಿ । ಸಂ ಚಿಕಿತ್ರೇ । ಸ್ವಂ ಸ್ವಮಧಿಕಾರಂ ಪರಸ್ಪರೋಪಕಾರಂ ಚ ಚಕ್ಷುಷಾ ಸಮ್ಯಕ್ ಪಶ್ಯಂತಿ

। ಪ್ರತಿಪದಾರ್ಥ ।

ಯುವತಯಃ—ತರುಣಿಯರು । ಯೂನೇ—ತಾವು ಇಚ್ಛಿಸಿದ ಯುವಕರಲ್ಲಿ । ನಮಂತ—ವಿಧೇಯರಾಗಿರುವಂತೆ । ಯತ್—ಯಾವಾಗ । ಉಶನ್—ವಸತೀವರಿಗಳನ್ನು ಇಚ್ಛಿಸಿದ ಸೋಮನು । ಈಂ ಉಶತೀಃ—ಅಚ್ಛ—ತನ್ನನ್ನಪೇಕ್ಷಿಸುವ ವಸತೀವರ್ಯಾದಿಗಳ ಹತ್ತಿರಕ್ಕೆ । ಏತಿ—ಸಮೀಪಿಸುವನೋ ಆಗ ಅವು ಅವನಿಗೆ ವಿಧೇಯವಾಗಿರುತ್ತವೆ । ಅಧ್ವರ್ಯವಃ—ಅಧ್ವರ್ಯುಗಳೂ । ಧಿಷಣಾ—ಸ್ತುತಿರೂಪವಾದ ವಾಕ್ಕೂ । ದೇವೀಃ—ಪ್ರಕಾಶಮಾನಗಳಾದ । ಆಪಶ್ಚ—ಉದಕಗಳೂ । ಮನಸಾ—ಉತ್ತಮವಾದ ಬುದ್ಧಿಯೊಡನೆ ಸೇರಿ । ಸಂ ಜಾನತೇ—ಒಟ್ಟಿಗೆ ತಮ್ಮ ಕರ್ತವ್ಯವನ್ನು ಅರಿಯುತ್ತವೆ ಸಂ ಚಿಕಿತ್ರೇ—ಪರಸ್ಪರ ಉಪಕಾರಕತ್ವವನ್ನೂ ತಿಳಿಯುತ್ತವೆ.

। ಭಾವಾರ್ಥ ।

ತರುಣಿಯರು ತಾವು ಇಚ್ಛಿಸಿದ ಯುವಕರಲ್ಲಿ ವಿಧೇಯರಾಗಿರುವಂತೆ, ವಸತೀವರಿಗಳನ್ನು ಇಚ್ಛಿಸಿದ ಸೋಮನು ತನ್ನನ್ನಪೇಕ್ಷಿಸುವ ವಸತೀವರ್ಯಾದಿಗಳ ಹತ್ತಿರಕ್ಕೆ ಸಮೀಪಿಸುವಾಗ ಅವು ಅವನಿಗೆ ವಿಧೇಯವಾಗಿರುತ್ತವೆ. ಅಧ್ವರ್ಯುಗಳೂ, ಸ್ತುತಿರೂಪವಾದ ವಾಕ್ಕೂ ಪ್ರಕಾಶಮಾನಗಳಾದ ಉದಕಗಳೂ ಉತ್ತಮವಾದ ಬುದ್ಧಿಯೊಡನೆ ಸೇರಿ ಒಟ್ಟಿಗೆ ತಮ್ಮ ಕರ್ತವ್ಯವನ್ನು ಅರಿಯುತ್ತವೆ. ಪರಸ್ಪರ ಉಪಕಾರಕತ್ವವನ್ನೂ ತಿಳಿಯುತ್ತವೆ.

English Translation

Verily as young damsels welcome a youth, when desiring (them), he comes to them desiring (him), so the priests and their praise and divine waters agree in mind and contemplate (their mutual assistance).

॥ ಸಂಹಿತಾಪಾಠಃ ॥

ಯೋ ವೋ ವೃತಾಭ್ಯೋ ಅಕೃಣೋದು ಲೋಕಂ ಯೋ ವೋ ಮಹ್ಯಾ ಅಭಿಶಸ್ತೇರಮುಂಚತ್ ।

ತಸ್ಮಾ ಇಂದ್ರಾಯ ಮಧುಮಂತಮೂರ್ಮಿಂ ದೇವಮಾದನಂ ಪ್ರ ಹಿಣೋತನಾಪಃ ॥ ೭ ॥

॥ ಪದಪಾಠಃ ॥

ಯಃ । ವಃ । ವೃತಾಭ್ಯಃ । ಅಕೃಣೋತ್ । ಊಂ ಇತಿ । ಲೋಕಂ । ಯಃ । ವಃ । ಮಹ್ಯಾಃ । ಅಭಿऽಶಸ್ತೇಃ । ಅಮುಂಚತ್ ।

ತಸ್ಮೈ । ಇಂದ್ರಾಯ । ಮಧುऽಮಂತಂ । ಊರ್ಮಿಂ । ದೇವऽಮಾದನಂ । ಪ್ರ । ಹಿಣೋತನ । ಆಪಃ ॥

॥ ಸಾಯಣಭಾಷ್ಯಂ ॥

ಯ ಇಂದ್ರೋ ವೃತಾಭ್ಯೋ ಮೇಘೈರಾವೃತಾಭ್ಯಃ ಪರಿವೇಷ್ಟಿತಾಭ್ಯೋ ವೋ ಯುಷ್ಮಭ್ಯಮದ್ಭ್ಯೋ ಲೋಕಂ ಮೇಘೋದರಾನ್ನಿರ್ಗಮನಮಾರ್ಗಮಕೃಣೋತ್ ಅಕರೋತ್ । ಉ ಇತಿ ಪೂರಣಃ । ಕಿಂಚ । ಯೋ ವೋ ಯುಷ್ಮಾನಪೋ ಮಹ್ಯಾ ಮಹತ್ಯಾ ಅಭಿಶಸ್ತೇರ್ಮೇಘಪರಿವೇಷ್ಟನಾಭಿಹಿಂಸನಾದಮುಂಚತ್ ಮೋಚಿತವಾನ್ । ಹೇ ಆಪಃ ಯೂಯಂ ತಸ್ಮೈ ತಾದೃಶಾಯೇಂದ್ರಾಯ ಮಧುಮಂತಂ ಮಧುರಸ್ವಾದುಯುಕ್ತಂ ದೇವಮಾದನಮಿಂದ್ರಾದಿದೇವಾನಾಂ ಸೋಮೇನ ಸಹ ಮಿಶ್ರೀಭೂಯ ತರ್ಪಯಿತಾರಮೂರ್ಮಿಮಪ್ಸಂಘಾತಂ ಪ್ರ ಹಿಣೋತನ । ಅಸ್ಮದ್ಯಜ್ಞಂ ಪ್ರತಿ ಗಮಯತ । ಸೋಮಾಭಿಷವಕರ್ಮಾಂಗಭಾವಾಯ ಪ್ರಸ್ಥಾಪಯತ ॥

॥ ಪ್ರತಿಪದಾರ್ಥ ॥

ಆಪಃ—ಎಲೈ ಉದಕಗಳೇ । ಯಃ—ಯಾವ ಇಂದ್ರನು । ವೃತಾಭ್ಯಃ—ಮೇಘಗಳಿಂದ ಆವರಿಸಲ್ಪಟ್ಟ । ವಃ—ನಿಮಗೆ । ಲೋಕಂ—ಮೇಘಗಳ ಉದರದಿಂದ ಹೊರಕ್ಕೆ ಬರುವ ಮಾರ್ಗವನ್ನು । ಅಕೃಣೋತ್—ಉಂಟುಮಾಡಿದನೋ । ಯಃ—ಯಾರು । ವಃ—ನಿಮ್ಮನ್ನು । ಮಹ್ಯಾಃ—ಅತ್ಯಧಿಕವಾದ । ಅಭಿಶಸ್ತೇಃ—ಹಿಂಸೆಯಿಂದ । ಅಮುಂಚತ್—ಬಿಡಿಸಿದನೋ । ತಸ್ಮೈ—ಅಂತಹ । ಇಂದ್ರಾಯ—ಇಂದ್ರನಿಗೆ । ಮಧುಮಂತಂ—ಮಧುರವಾದುದೂ । ದೇವಮಾದನಂ—ದೇವತೆಗಳಿಗೆ ತೃಪ್ತಿಕರವಾದುದೂ ಆದ । ಊರ್ಮಿಂ—ಉದಕಸಂಘಾತವನ್ನು । ಪ್ರ ಹಿಣೋತನ—ಒದಗಿಸಿರಿ.

। ಭಾವಾರ್ಥ ।

ಎಲೈ ಉದಕಗಳೇ, ಯಾವ ಇಂದ್ರನು ಮೇಘಗಳಿಂದ ಆವರಿಸಲ್ಪಟ್ಟ ನಿಮಗೆ ಮೇಘಗಳ ಉದರದಿಂದ ಹೊರಕ್ಕೆ ಬರುವ ಮಾರ್ಗವನ್ನು ಉಂಟುಮಾಡಿದನೋ, ಯಾರು ನಿಮ್ಮನ್ನು ಅತ್ಯಧಿಕವಾದ ಹಿಂಸೆಯಿಂದ ಬಿಡಿಸಿದನೋ ಅಂತಹ ಇಂದ್ರನಿಗೆ ಮಧುರವಾದುದೂ, ದೇವತೆಗಳಿಗೆ ತೃಪ್ತಿಕರವಾದುದೂ ಆದ ಉದಕಸಂಘಾತವನ್ನು ಒದಗಿಸಿರಿ.

English Translation

Present, waters, the sweet-flavoured god-exhilarating mixture to that Indra who has made an issue for you when enveloped (by the clouds); who has liberated you from a great calamity.

। ಸಂಹಿತಾಪಾಠಃ ।

ಪ್ರಾಸ್ಮೈ ಹಿನೋತ ಮಧುಮಂತಮೂರ್ಮಿಂ ಗರ್ಭೋ ಯೋ ವಃ
ಸಿಂಧವೋ ಮಧ್ವ ಉತ್ಸಃ ।
ಘೃತಪೃಷ್ಠಮೀಡ್ಯಮಧ್ವರೇಷ್ವಾಪೋ ರೇವತೀಃ ಶೃಣುತಾ ಹವಂ ಮೇ ॥೮॥

। ಪದಪಾಠಃ ।

ಪ್ರ । ಅಸ್ಮೈ । ಹಿನೋತ । ಮಧುಽಮಂತಂ । ಊರ್ಮಿಂ । ಗರ್ಭಃ । ಯಃ । ವಃ । ಸಿಂಧವಃ । ಮಧ್ವಃ ।
ಉತ್ಸಃ ।
ಘೃತಽಪೃಷ್ಠಂ । ಈಡ್ಯಂ । ಅಧ್ವರೇಷು । ಆಪಃ । ರೇವತೀಃ । ಶೃಣುತ । ಹವಂ । ಮೇ ॥ ೮ ॥

। ಸಾಯಣಭಾಷ್ಯಂ ।

ಅತ್ರ ಯಚ್ಛಬ್ದಸಂಬಂಧಾದ್ದ್ವಿತೀಯಃ ಪಾದಃ ಪೂರ್ವಂ ವ್ಯಾಖ್ಯೇಯಃ । ಹೇ ಸಿಂಧವಃ ಸ್ಯಂದನಶೀಲಾ ಆಪಃ ವೋ ಯುಷ್ಮಾಕಂ ಯೋ ಗರ್ಭೋ ಮಧ್ವೋ ಮಧುರರಸಸ್ಯೋತ್ಸ ಉತ್ಸ್ಯಂದನಃ ಪ್ರಸ್ರವಣಃ । ಯಚ್ಛಬ್ದಯೋಗಾತ್ತಚ್ಛಬ್ದೋಽಧ್ಯಾಹಾರ್ಯಃ । ತಂ ಮಧುಮಂತಂ ಮಧುರರಸೋಪೇತ-ಮೂರ್ಮಿಮಪ್ಸಂಘಾತಂ । ಸಾರಮಿತ್ಯರ್ಥಃ । ಅಸ್ಮಾ ಅಸ್ಮೈಇಂದ್ರಸ್ಯಾರ್ಥಾಯ ಪ್ರ ಹಿನೋತ ಪ್ರ ಹಿಣುತ ॥

॥ ಪ್ರತಿಪದಾರ್ಥ ॥

ಸಿಂಧವಃ—ಪ್ರವಾಹರೂಪಗಳಾದ ಎಲೈ ಉದಕಗಳೇ | ಯಃ—ಯಾರು | ವಃ—ನಿಮಗೆ | ಗರ್ಭಃ—ಗರ್ಭರೂಪನೋ ಮತ್ತು | ಮಧ್ವಃ—ಮಧುರವಾದ ರಸಕ್ಕೆ | ಉತ್ಸಃ—ಬುಗ್ಗೆಯಂತಿರುವನೋ | ಅಸ್ಮೈ—ಅಂತಹ ಇಂದ್ರನಿಗೆ | ಅಧ್ವರೇಷು—ಯಜ್ಞಗಳಲ್ಲಿ | ಘೃತಪೃಷ್ಠಂ—ಆಜ್ಯದಿಂದ ಲೇಪನಮಾಡಿದ ಪೃಷ್ಠವುಳ್ಳದ್ದೂ | ಈಡ್ಯಂ—ಪ್ರಶಸ್ಯವಾದುದೂ | ಮಧುಮಂತಂ—ಮಧುರರಸಯುಕ್ತವಾದುದೂ ಆದ | ಊರ್ಮಿಂ—ಜಲಸಂಘಾತವನ್ನು | ಪ್ರ ಹಿನೋತ—ಅರ್ಪಿಸಿರಿ | ರೇವತೀಃ—ಧನವಂತರಾದ | ಆಪಃ—ಎಲೈ ಉದಕಗಳೇ | ಮೇ—ನನ್ನ | ಹವಂ—ಆಹ್ವಾನವನ್ನು | ಶೃಣುತ—ಕೇಳಿರಿ.

॥ ಭಾವಾರ್ಥ ॥

ಪ್ರವಾಹರೂಪಗಳಾದ ಎಲೈ ಉದಕಗಳೇ, ಯಾರು ನಿಮಗೆ ಗರ್ಭರೂಪನೋ ಮತ್ತು ಮಧುರವಾದ ರಸಕ್ಕೆ ಬುಗ್ಗೆಯಂತೆ ಇರುವನೋ ಅಂತಹ ಇಂದ್ರನಿಗೆ ಯಜ್ಞಗಳಲ್ಲಿ ಆಜ್ಯದಿಂದ ಲೇಪನಮಾಡಿದ ಪೃಷ್ಠವುಳ್ಳದ್ದೂ, ಪ್ರಶಸ್ಯವಾದುದೂ, ಮಧುರರಸಯುಕ್ತವಾದುದೂ ಆದ ಜಲಸಂಘಾತವನ್ನು ಅರ್ಪಿಸಿರಿ. ಧನವಂತರಾದ ಎಲೈ ಉದಕಗಳೇ, ನನ್ನ ಆಹ್ವಾನವನ್ನು ಕೇಳಿರಿ.

## English Translation

Send forth, rivers, the sweet-flavoured beverage to him who is your germ, a well of the sweet (Soma-juice), the beverage which is mixed with butter adorable at sacrifices : hear, opulent waters my invocation.

॥ ಸಂಹಿತಾಪಾಠಃ ॥

ತಂ ಸಿಂಧವೋ ಮತ್ಸರಮಿಂದ್ರಪಾನಮೂರ್ಮಿಂ ಪ್ರ ಹೇತ ಯ ಉಭೇ ಇಯರ್ತಿ ।
ಮದಚ್ಯುತಮೌಶಾನಂ ನಭೋಜಾಂ ಪರಿ ತ್ರಿತಂತು ವಿಚರಂತಮುತ್ಸಂ ॥೯॥

॥ ಪದಪಾಠ ॥

ತಂ । ಸಿಂಧವಃ । ಮತ್ಸರಂ । ಇಂದ್ರಽಪಾನಂ । ಊರ್ಮಿಂ । ಪ್ರ । ಹೇತ । ಯಃ । ಉಭೇ ಇತಿ । ಇಯರ್ತಿ ।
ಮದಽಚ್ಯುತಂ । ಔಶಾನಂ । ನಭಃಽಜಾಂ । ಪರಿ । ತ್ರಿಽತಂತುಂ । ವಿಽಚರಂತಂ । ಉತ್ಸಂ ॥ ೯ ॥

॥ ಸಾಯಣಭಾಷ್ಯಂ ॥

ಹೇ ಸಿಂಧವಃ ಸ್ಯಂದನಶೀಲಾ ಆಪಃ ಯೋ ವೋ ಯುಷ್ಮದೀಯಃ ಸಾರಭೂತಃ ಸಮೂಹ ಉಭೇ ಅಸ್ಮಭ್ಯಂ ದೃಷ್ಟಾದೃಷ್ಟಫಲೇ ದಾತಾ ಸನ್ನಿಯರ್ತಿ ಕರ್ಮಾಂಗಭಾವಂ ಪ್ರತಿಪದ್ಯತೇ ಮತ್ಸರಂ ಮಾದಯಿತಾರಮಿಂದ್ರಾದಿದೇವಾನಾಂ ತರ್ಪಯಿತಾರಮಿಂದ್ರಪಾನಂ ದೇವಾನಾಂ ಪ್ರಮುಖೇನೇಂದ್ರೇಣ ಪಾನೀಯಂ ತಂ ತಾದೃಶಮೂರ್ಮಿಮುದಕಸಮೂಹಂ ಪ್ರ ಹೇತ । ಪ್ರಗಮಯತ । ಅಸ್ಮದ್ಯಜ್ಞಂ ಪ್ರತಿ ಪ್ರೇರಯತ । ಕೀದೃಶಂ । ಮದಚ್ಯುತಂ ಮದಸ್ಯ ಚ್ಯಾವಕಮೌಶಾನಂ ಸೋಮೇನ ಸಹ ಮಿಶ್ರೀಭಾವಂ ಕಾಮಯಮಾನಂ ನಭೋಜಾಂ ನಭಸ್ಯಂತರಿಕ್ಷೇ ವೃಷ್ಟಿರೂಪೇಣ ಜಾತಂ ಪರಿ ಸರ್ವತಸ್ತ್ರಿತಂತುಂ ತ್ರಯಾಣಾಂ ಲೋಕಾನಾಂ ತನಿತಾರಂ ವಿಸ್ತಾರಯಿತಾರಂ ವಿಚರಂತಂ ಯಜ್ಞಪಾತ್ರೇಷು ಗಚ್ಛಂತಮುತ್ಸಮುತ್ಸ್ಯಂದನಂ । ತರ್ಪಿತಾರಂ ದೇವಾನ್ತತ್ತ್ವೋರ್ಧ್ವಂ ಗಂತಾರಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸಿಂಧವಃ**—ಪ್ರವಹಿಸುವ ಎಲೈ ಉದಕಗಳೇ । **ಯಃ**—ಯಾವ ನಿಮ್ಮ ಜಲಸಮೂಹವು । **ಉಭೇ**—ದೃಷ್ಟಾದೃಷ್ಟರೂಪವಾದ ಎರಡು ಫಲಗಳನ್ನು । **ಇಯರ್ತಿ**—ಒದಗಿಸುವುದೋ ಅಂತಹ । **ಮತ್ಸರಂ**—ಹರ್ಷಕಾರಕವಾದುದೂ । **ಇಂದ್ರಪಾನಂ**—ಇಂದ್ರನ ಪಾನಕ್ಕೆ ಯೋಗ್ಯವಾದುದೂ । **ಮದಚ್ಯುತಂ**—ಮದಕಾರಕವಾದುದೂ । **ಔಶಾನಂ**—ಸೋಮನೊಡನೆ ಸಂಬಂಧವನ್ನಿಚ್ಛಿಸುವುದೂ । **ನಭೋಜಾಂ**—ಅಂತರಿಕ್ಷದಲ್ಲಿ ಉತ್ಪನ್ನವಾದುದೂ । **ಪರಿ**—ಸರ್ವತ್ರ । **ತ್ರಿತಂತುಂ**—ಮೂರು ಲೋಕಗಳನ್ನು ವಿಸ್ತರಿಸುವಂತೆ ಮಾಡುವುದೂ । **ವಿಚರಂತಂ**—ಯಜ್ಞಪಾತ್ರೆಗಳಲ್ಲಿ ಪ್ರವೇಶಿಸುವುದೂ । **ಉತ್ಸಂ**—ಬುಗ್ಗೆಯಂತಿರುವುದೂ ಆದ । **ತಂ ಊರ್ಮಿಂ**—ಆ ಜಲಸಂಘಾತವನ್ನು । **ಪ್ರ ಹೇತ**—ಕಳುಹಿಕೊಡಿರಿ.

॥ ಭಾವಾರ್ಥ ॥

ಪ್ರವಾಹಾತ್ಮಕಗಳಾದ ಎಲೈ ಉದಕಗಳೇ, ಯಾವ ನಿಮ್ಮ ಜಲಸಮೂಹವು ದೃಷ್ಟಾದೃಷ್ಟರೂಪವಾದ ಎರಡು ಫಲಗಳನ್ನೂ ಒದಗಿಸುವುದೋ ಅಂತಹ ಹರ್ಷಕಾರಕವಾದುದೂ, ಇಂದ್ರನ ಪಾನಕ್ಕೆ ಯೋಗ್ಯವಾದುದೂ, ಮದಕಾರಕವಾದುದೂ, ಸೋಮನೊಡನೆ ಸಂಬಂಧವನ್ನಿಚ್ಛಿಸುವುದೂ ಅಂತರಿಕ್ಷದಲ್ಲಿ ಉತ್ಪನ್ನವಾದುದೂ ಸರ್ವತ್ರ ಮೂರು ಲೋಕಗಳನ್ನು ವಿಸ್ತರಿಸುವಂತೆ ಮಾಡುವುದೂ ಯಜ್ಞಪಾತ್ರೆಗಳಲ್ಲಿ ಪ್ರವೇಶಿಸುವುದೂ, ಬುಗ್ಗೆಯಂತಿರುವುದೂ ಆದ ಜಲಸಂಘಾತವನ್ನು ಕಳುಹಿಕೊಡಿರಿ.

## English Translation

Send, rivers, (to our sacrifice), that exilarating wave, the beverage of Indra, which sends us both (kinds of fruit), exciting exhilaration, desirous, (of mixing with the Soma), generated in the firmament; spreading through the three (worlds), flowing (amidst the vessels of sacrifice), a well (of satisfaction to the gods).

॥ ಸಂಹಿತಾಪಾಠಃ ॥

ಆವರ್ವೃತತೀರಧ ನು ದ್ವಿಧಾರಾ ಗೋಷುಯುಧೋ ನ ನಿಯವಂ ಚರಂತೀಃ।
ಋಷೇ ಜನಿತ್ರೀರ್ಭುವನಸ್ಯ ಪತ್ನೀರಪೋ ವಂದಸ್ವ ಸವೃಧಃ ಸಯೋನೀಃ ॥

॥ ಪದಪಾಠಃ ॥

ಆऽವರ್ವೃತತೀಃ । ಅಧ । ನು । ದ್ವಿऽಧಾರಾಃ । ಗೋಷುऽಯುಧಃ । ನ । ನಿऽಯವಂ । ಚರಂತೀಃ ।
ಋಷೇ । ಜನಿತ್ರೀಃ । ಭುವನಸ್ಯ । ಪತ್ನೀಃ । ಅಪಃ । ವಂದಸ್ವ । ಸऽವೃಧಃ । ಸऽಯೋನೀಃ ॥ ೧೦ ॥

॥ ಸಾಯಣಭಾಷ್ಯಂ ॥

ಅಪೋನಪ್ತ್ರೀಯ ಏಕಧನಾಸ್ವಾವೃತ್ತಾಸ್ವಾವರ್ವೃತತೀರಿತ್ಯೇಷಾ । ಸೂತ್ರಿತಂ ಚ । ಆವರ್ವೃತತೀರಧ ನು ದ್ವಿಧಾರಾ ಇತ್ಯಾವೃತ್ತಾಸ್ವೇಕಧನಾಸು । ಆ. ೫.೧ । ಇತಿ । ತತ್ರೈವ ಹಿನೋತಾ ನ ಇತ್ಯೇಷಾ। ಸೂತ್ರಂ ಪೂರ್ವಮುದಾಹೃತಂ ॥

ಅಥಾಥಾನಂತರಂ ಗೋಷುಯುಧೋ ನ । ಗೋಷ್ವಪ್ಸು ನಿಮಿತ್ತಭೂತಾಸು ಮೇಘೈಃ ಸಹ ಯುಧ್ಯತ ಇತಿ ಗೋಷುಯುದಿಂದ್ರಃ । ತಸ್ಯ ಯಥಾ ವೃಷ್ಟಿಲಕ್ಷಣಾ ಅಪೋ ದ್ವಿಧಾರಾಃ । ದ್ವಿಶಬ್ದೋऽತ್ರಾನೇಕತ್ವವಾಚೀ । ಅನೇಕಧಾರಾಃ । ಅಪರ್ಯಂತಧಾರಾ ಇತ್ಯರ್ಥಃ । ಅಸ್ಮಾಕಮಪ್ಯೇವಂಸ್ಥಿತಾ ಆವರ್ವೃತತೀರಾವೃತ್ತಾ ನಿಯವಂ ಸೋಮಂ ಪ್ರತಿ ನಿಶ್ಚಯೇನ ಮಿಶ್ರೀಭಾವಂ ಚರಂತೀರ್ಗಚ್ಛಂತೀರ್ಭುವನಸ್ಯ ಲೋಕಸ್ಯ ಜನತ್ರೀರ್ಜನಯಿತ್ರೀಃ ಪತ್ನೀಃ ಪಾಲಯಿತ್ರೀಶ್ಚ ಸವೃಧಃ ಸಹ ಸೋಮಸ್ಯ ವರ್ಧಯಿತ್ರೀಃ ಸಯೋನೀಃ ಸೋಮೇನ ಸಹ ಸಮಾನಸ್ಥಾನಾ ಹೇ ಋಷೇ ಮದೀಯಾಂತರಾತ್ಮನ್ ಅಧ್ವರ್ಯೋ ವಾ ತ್ವಮೇವಂಭೂತಾ ಅಪೋ ನು ಕ್ಷಿಪ್ರಂ ವಂದಸ್ವ । ಸ್ತುಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಋಷೇ**—ಎಲೈ ಋಷಿಯೇ । **ದ್ವಿಧಾರಾಃ**—ಅನೇಕ ಪ್ರವಾಹಗಳುಳ್ಳವರೂ । **ಆ ವರ್ವೃತತೀಃ**—ಪುನಃ ಹಿಂತಿರುಗುವವರೂ । **ನಿಯವಂ**—ನಿಶ್ಚಯವಾಗಿಯೂ । **ಮಿಶ್ರೀಭಾವಂ**—ಸೋಮನೊಡನೆ ಒಂದಾಗುವಿಕೆಯನ್ನು । **ಚರಂತೀಃ**—ಹೊಂದುವವರೂ । **ಭುವನಸ್ಯ**—ಲೋಕಕ್ಕೆ । **ಜನಿತ್ರೀಃ**—ಉತ್ಪಾದಕಿಯರೂ । **ಪತ್ನೀಃ**—ಪಾಲಕಿಯರೂ । **ಸವೃಧಃ**—ಸೋಮನನ್ನು ಪುಷ್ಟಿಗೊಳಿಸುವವರೂ । **ಸಯೋನೀಃ**—ಸೋಮನೊಡನೆ ಸಹೋತ್ಪನ್ನರೂ ಆದ । **ಅಪಃ**—ಉದಕಗಳನ್ನು । **ನು**—ಕ್ಷಿಪ್ರವಾಗಿ । **ಗೋಷುಯುಧೋ ನ**—ಗೋವುಗಳಿಗಾಗಿ ಯುದ್ಧಮಾಡುವ ಇಂದ್ರನಂತೆ । **ವಂದಸ್ವ**—ನಮಸ್ಕರಿಸು.

॥ ಭಾವಾರ್ಥ ॥

ಎಲೈ ಋಷಿಯೇ, ಅನೇಕ ಪ್ರವಾಹಗಳುಳ್ಳವರೂ, ಪುನಃ ಹಿಂತಿರುಗುವವರೂ, ನಿಶ್ಚಯವಾಗಿಯೂ ಸೋಮನೊಡನೆ ಒಂದಾಗುವವರೂ, ಲೋಕವನ್ನು ನಿರ್ಮಿಸಿ ಪಾಲಿಸುವವರೂ, ಸೋಮನನ್ನು ಪುಷ್ಟಿಗೊಳಿಸುವವರೂ, ಸೋಮನೊಡನೆ ಸಹೋತ್ಪನ್ನರೂ ಆದ ಉದಕಗಳನ್ನು ಕ್ಷಿಪ್ರವಾಗಿ ಗೋವುಗಳಿಗಾಗಿ ಯುದ್ಧಮಾಡುವ ಇಂದ್ರನಂತೆ ನಮಸ್ಕರಿಸು.

## English Translation

Praise, Rishi, the waters like (those) of the cloud-warring Indra, falling in many showers returning, flowing to mix (with the Soma), the mothers of the world and its protectressses, augmenting and combining (with the Soma).

॥ ವಿಶೇಷವಿಷಯಗಳು ॥

ಅಪ್ತೋರ್ಯಾಮವೆಂಬ ಯಜ್ಞಾಂಗಕರ್ಮದಲ್ಲಿ ಏಕಧನಾ ಎಂಬ ಪಾತ್ರೆಗಳಲ್ಲಿ ಉದಕಗಳನ್ನು ಜಲಾಶಯದಿಂದ ತರುವಾಗ **ಆವರ್ವೃತತೀಃ** ಎಂಬ ಈ ಋಕ್ಕಿನ ವಿನಿಯೋಗವಿರುವುದೆಂದು. ಆಶ್ವಲಾಯನಶ್ರೌತಸೂತ್ರದ **ಆವರ್ವೃತತೀರಧ ದ್ವಿಧಾರಾ ಇತ್ಯಾವೃತ್ತಾಸ್ವೇಕಧನಾಸು** ಎಂಬ ಸೂತ್ರದಿಂದ (ಆ. ೫-೧) ವಿವೃತವಾಗಿರುವುದು. ಮತ್ತು ಆ ಸಂದರ್ಭದಲ್ಲಿಯೇ ಹಿನೋತಾ ನಃ ಎಂಬ ಇದರ ಮುಂದಿನ ಋಕ್ಕನ್ನೂ ಪಠಿಸಬೇಕು. ಸೂತ್ರವನ್ನು ಹಿಂದೆಯೇ ಉದಾಹರಿಸಲಾಗಿದೆ.

। ಸಂಹಿತಾಪಾಠಃ ।

ಹಿನೋತಾ ನೋ ಅಧ್ವರಂ ದೇವಯಜ್ಯಾ ಹಿನೋತ ಬ್ರಹ್ಮ ಸನಯೇ ಧನಾನಾಂ ।
ಋತಸ್ಯ ಯೋಗೇ ವಿ ಷ್ಯಧ್ವಮೂಧಃ ಶ್ರುಷ್ಟೀವರೀರ್ಭೂತನಾಸ್ಮಭ್ಯಮಾಪಃ ॥ ೧೧ ॥

। ಪದಪಾಠಃ ।

ಹಿನೋತ । ನಃ । ಅಧ್ವರಂ । ದೇವಽಯಜ್ಯಾ । ಹಿನೋತ । ಬ್ರಹ್ಮ । ಸನಯೇ । ಧನಾನಾಂ ।
ಋತಸ್ಯ । ಯೋಗೇ । ವಿ । ಸ್ಯಧ್ವಂ । ಊಧಃ । ಶ್ರುಷ್ಟೀಽವರೀಃ । ಭೂತನ । ಅಸ್ಮಭ್ಯಂ । ಆಪಃ ॥ ೧೧ ॥

। ಸಾಯಣಭಾಷ್ಯಂ ।

ಹೇ ಋತ್ವಿಜಃ ಹಿನೋತ ಪ್ರಹಿಣುತ ಪ್ರಗಮಯತ ಪ್ರೋತ್ಸರ್ಪಯತ್ಯೈತಮಧ್ವರಂ ಯಜ್ಞಂ ದೇವಯಜ್ಯಾ ದೇವಯಜ್ಯಾಯೈ ದೇವಯಜನಾರ್ಥಂ । ಕಿಂಚ ಪ್ರಹಿಣುತ ಬ್ರಹ್ಮ ಸ್ತುತ್ಯಾಖ್ಯಂ ಯಥಾ.

ಶಾಸ್ತ್ರಕ್ರಮೇಣ ಸನಯೇ ಲಬ್ಧಯೇ ನೋಽಸ್ಮಾಕಂ ಧನಾನಾಂ । ಕಿಂಚರ್ತಸ್ಯ ಯಜ್ಞಸ್ಯ ಯೋಗೇ ಸಂಯೋಗೇ ಯದೇತದೂಧ ಇವ ಸೋಮಪೂರ್ಣಮಧಿಷವಣಚರ್ಮ ವರ್ತತೇ । ಅಥವಾ ಯೋಗಸಂಬಂಧಾಚ್ಛಕಟಂ ಯೋಗಃ । ತದ್ಧಿ ತತ್ರೈವ ಯುಜ್ಯತೇ । ತೇನಾಧಿಷವಣಚರ್ಮಣ ಊಧಸೋಽಧಸ್ತಾದವಸ್ಥಿತೇನೇತಿ ಮನ್ಯಮಾನೋ ನಿರುಕ್ತಕಾರೋ ಬ್ರವೀತಿ ಯಾಜ್ಞೇ ಶಕಟ ಇತಿ ವಾ । ನಿ. ೬-೨೨ । ಇತಿ। ಯದೇತದ್ಯಜ್ಞಶಕಟಸ್ಯಾಧಸ್ತಾದುಪರಿ ವಾಧಿಷವಣಚರ್ಮ ಏತದ್ವಿ ಷ್ಯಧ್ವಂ । ವಿಮುಂಚಧ್ವಂ । ಗ್ರಹಚಮಸಸ್ಥಾಲ್ಯಾದಿಷು ಯೋ ನಿಷೇಕಃ ಸೋಮಸ್ಯೈತದ್ವಿಮೋಚನಮಧಿಷವಣಚರ್ಮೋಧಸಃ । ತದ್ಧಿ ಸೋಮ ಉತ್ಸಿಚ್ಯಮಾನೇ ಶ್ಲಥೀಭವತಿ ಯಥೇತರದ್ಗೋರೂಧೋ ದುಹ್ಯಮಾನಾಯಾಂ ಗವಿ । ಏವಮೃತ್ವಿಜ ಉಕ್ತ್ವಾಥನ್ಯೈವ ಸೋಮಸಂಮಿಶ್ರಾ ಅಪೋ ಬ್ರವೀತಿ । ಯೂಯಮಪಿ ಹೇ ಆಪಃ ಏಭಿರ್ಋತ್ವಿಗ್ಭಿರುತ್ಸಿಚ್ಯಮಾನಾಃ ಶ್ರುಷ್ಟೀವರೀಃ ಸುಖವತ್ಯೋ ಭೂತನ । ಭವತಾಸ್ಮಭ್ಯಂ । ಏವಮತ್ರ ಪ್ರಶಬ್ದೇನಾರ್ಥಸ್ಯ ಸುತರಾಂ ಪ್ರಕಟಿತಾ ಭವತೀತಿ।ಭಾಷ್ಯಕಾರೇಣ ಪ್ರಶಬ್ದೋಽಧ್ಯಾಹೃತಃ ಪ್ರಹಿಣುತೇತಿ. ಅಧ್ವರಮಿತ್ಯನೇನ ಸಂಬಂಧಾದ್ಧಿನೋತೇರ್ಗತ್ಯರ್ಥತ್ವಮುಪಪದ್ಯತೇ।ಏತಸ್ಯಾ ಋಚೋ ವ್ಯಾಖ್ಯಾನಂ ನಿರುಕ್ತಟೀಕಾಯಾ ಉದ್ಧೃತಂ ॥

ಪ್ರತಿಪದಾರ್ಥ ।

(ಎಲೈ ಋತ್ವಿಕ್ಕುಗಳೇ) **ನಃ ಅಧ್ವರಂ**—ನಮ್ಮ ಯಜ್ಞವನ್ನು । **ದೇವಯಜ್ಯಾ**—ದೇವಪೂಜಾರ್ಥವಾಗಿ । **ಹಿನೋತ**—ಪ್ರೇರಿಸಿರಿ । **ಬ್ರಹ್ಮ**—ನಮ್ಮ ಸ್ತುತಿಯನ್ನು । **ನಃ**—ನಮಗೆ । **ಧನಾನಾಂ**—ಧನಗಳ । **ಸನಯೇ**—ಲಾಭಕ್ಕಾಗಿ ಪ್ರೇರಿಸಿರಿ । **ಋತಸ್ಯ**—ಯಜ್ಞದ । **ಯೋಗೇ**—ನಿರ್ವಹಣಕಾಲದಲ್ಲಿ । **ಊಧಃ**—ಕೆಚ್ಚಲನ್ನು । **ವಿಷ್ಯಧ್ವಂ**—ಬಿಡಿಸಿ ಕ್ಷೀರವನ್ನು ಸುರಿಸಿರಿ । **ಆಪಃ**—ಎಲೈ ಉದಕಗಳೇ । **ಅಸ್ಮಭ್ಯಂ**—ನಮಗೆ । **ಶ್ರುಷ್ಟೀವರೀಃ**—ಸುಖಕಾರಕಿಯರಾಗಿ । **ಭೂತನ**—ಆಗಿರಿ.

। ಭಾವಾರ್ಥ ।

ಎಲೈ ಋತ್ವಿಕ್ಕುಗಳೇ, ನಮ್ಮ ಯಜ್ಞವನ್ನು ದೇವಪೂಜಾರ್ಥವಾಗಿ ಪ್ರೇರಿಸಿರಿ. ನಮ್ಮ ಸ್ತುತಿಯನ್ನು ನಮಗೆ ಧನಗಳ ಲಾಭಕ್ಕಾಗಿ ಪ್ರೇರಿಸಿರಿ. ಯಜ್ಞದ ನಿರ್ವಹಣಕಾಲದಲ್ಲಿ ಕೆಚ್ಚಲನ್ನು ಬಿಡಿಸಿ ಕ್ಷೀರವನ್ನು ಸುರಿಸಿರಿ. ಎಲೈ ಉದಕಗಳೇ ನಮಗೆ ಸುಖಕಾರಕಿಯರಾಗಿ ಆಗಿರಿ.

English Translation

Direct our sacrifice to the worship of the gods; direct our adoration to the acquirement of wealth; open the udder on the occasion of (this) rite; be to us, waters, the givers of felicity.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ. ಭಾಷ್ಯಕಾರರು ನಿರುಕ್ತಾರ್ಥವನ್ನು ಅನುಸರಿಸಿ ದುರ್ಗಾಚಾರ್ಯರ ವ್ಯಾಖ್ಯಾನವನ್ನೇ ಇಲ್ಲಿ ಕೊಟ್ಟಿದಾರೆ—

**ಪ್ರಹಿಣುತ ನೋಽಧ್ವರಂ ದೇವಯಜ್ಯಾಯೈ । ಪ್ರಹಿಣುತ ಬ್ರಹ್ಮ ಧನಸ್ಯ ಸವನಾಯ । ಋತಸ್ಯ ಯೋಗೇ ಯಜ್ಞಸ್ಯ ಯೋಗೇ ಯಾಜ್ಞೇ ಶಕಟ ಇತಿ ವಾ । ಶಕಟಂ ಶಕೃದಿತಂ ಭವತಿ**

ಶನಕೈಸ್ತಕತೀತಿ ವಾ ಶಬ್ದೇನ ತಕತೀತಿ ವಾ । ಶ್ರುಷ್ಟೀವರೀರ್ಭೂತನಾಸ್ಮಭ್ಯಮಾಪಃ ।
ಸುಖವತ್ಯೋ ಭವತಾಸ್ಮಭ್ಯಮಾಪಃ ॥ (ನಿ. ೬-೨೨)

ಎಲೈ ಋತ್ವಿಕ್ಕುಗಳೇ, ದೇವತೆಗಳನ್ನುದ್ದೇಶಿಸಿ ನಾವು ನೆರವೇರಿಸುತ್ತಿರುವ ಈ ಯಜ್ಞವನ್ನು ಚೆನ್ನಾಗಿ ನೆರವೇರುವಂತೆ ಪ್ರೇರಿಸಿರಿ ನಾವು ಧನಲಾಭಾರ್ಥವಾಗಿ ಪಠಿಸುತ್ತಿರುವ ಸ್ತೋತ್ರಗಳು ದೇವತೆಗಳನ್ನು ಸಮೀಪಿಸುವಂತೆ ಪ್ರೇರಿಸಿರಿ. ಋತಸ್ಯ ಯೋಗೇ ಎಂದರೆ, ಯಜ್ಞಕರ್ಮವು ನೆರವೇರುತ್ತಿರುವಾಗ ಎಂದರ್ಥವು. ಯೋಗೇ ಎಂದರೆ ಯಜ್ಞಕರ್ಮಗಳನ್ನು ಒಂದಾಗಿ ಸೇರಿಸುವ ಎಂಬರ್ಥದಲ್ಲಿ ಯೋಗೇ ಎಂದರೆ ಗಾಡಿ ಎಂದೂ ಅರ್ಥವಾಗುತ್ತದೆ. ಗಾಡಿ ಎಂದರೆ ಶಕಟವು. ಈ ಶಕಟಶಬ್ದವು ಗಾಡಿಯನ್ನು ಎಳೆಯುವ ಎತ್ತುಗಳ ಸಹಾಯದಿಂದ ಲಿಪ್ತವಾಗಿರುವುದು ಅಥವಾ ಈ ಗಾಡಿಯು ನಿಧಾನವಾಗಿ ಚಲಿಸುವುದು ಅಥವಾ ಕಿರ್ರೆಂದು ಶಬ್ದಮಾಡುತ್ತಾ ಚಲಿಸುವುದು ಎಂಬ ಅರ್ಥವನ್ನು ಸೂಚಿಸುವುದರಿಂದ ಇದಕ್ಕೆ ಶಕಟವೆಂದು ಹೆಸರು. ಉದಕಗಳು ನಮಗೆ ಸುಖಕಾರಕಗಳಾಗಿ ಆಗಲಿ ಎಂಬ ಪ್ರಾರ್ಥನೆಯು ಕೊನೆಯಪಾದದಲ್ಲಿ ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಆಪೋ॒ ರೇವ॑ತೀಃ॒ ಕ್ಷಯ॑ಥಾ॒ ಹಿ ವಸ್ವಃ॒ ಕ್ರತುಂ॑ ಚ ಭ॒ದ್ರಂ ಬಿ॑ಭೃ॒ಥಾ-
ಮೃತಂ॑ ಚ ।
ರಾ॒ಯಶ್ಚ॒ ಸ್ಥ ಸ್ವ॑ಪ॒ತ್ಯಸ್ಯ॒ ಪತ್ನೀಃ॒ ಸರ॑ಸ್ವತೀ॒ ತದ್ಗೃ॑ಣ॒ತೇ ವಯೋ॑ ಧಾತ್ ॥೧೨॥

॥ ಪದಪಾಠಃ ॥

ಆಪಃ॑ । ರೇ॒ವ॒ತೀ॒ಃ । ಕ್ಷಯ॑ಥ । ಹಿ । ವಸ್ವಃ॑ । ಕ್ರತು॑ಂ । ಚ॒ । ಭ॒ದ್ರಂ । ಬಿ॒ಭೃ॒ಥ । ಅ॒ಮೃತ॑ಂ । ಚ॒ ।
ರಾ॒ಯಃ । ಚ॒ । ಸ್ಥ । ಸು॒ಽಅ॒ಪ॒ತ್ಯಸ್ಯ॑ । ಪತ್ನೀ॑ಃ । ಸರ॑ಸ್ವತೀ । ತತ್ । ಗೃ॒ಣ॒ತೇ । ವಯ॑ಃ । ಧಾ॒ತ್ ॥ ೧೨ ॥

॥ ಸಾಯಣಭಾಷ್ಯಂ ॥

ಪ್ರಾತರನುವಾಕಸ್ಯಾಪೋ ರೇವತೀರಿತ್ಯೇಷಾ ಪ್ರತಿಪತ್ । ಸೂತ್ರಿತಂ ಚ । ಆಪೋ ರೇವತೀಃ ಕ್ಷಯಥಾ ಹಿ ವಸ್ವ ಉಪಪ್ರಯಂತ ಇತಿ ಸೂಕ್ತೇ । ಆ. ೪-೧೩ । ಇತಿ ॥

ಹೇ ಆಪೋ ರೇವತೀ ರೇವತ್ಯೋ ಧನವತ್ಯಃ ಯೂಯಂ ವಸ್ವೋ ವಸುನೋ ಧನಸ್ಯ ಕ್ಷಯಥ ಹಿ । ಈಶಿಧ್ವೇ ಖಲು । ಕಿಂಚ ಭದ್ರಂ ಭಜನೀಯಂ ಕ್ರತುಂ ಚ ಸೋಮಯಾಗಾದಿಲಕ್ಷಣಂ ಕರ್ಮ ಚಾಮೃತಂ ಚಾಮರಣರೂಪಂ ತಜ್ಜನ್ಯಫಲಂ ಚ ಬಿಭೃಥ । ಧಾರಯಥ । ಪುಷ್ಣೀಥ ವಾ । ತಥಾ ರಾಯಶ್ಚ ಧನಸ್ಯ ಚ ಸ್ವಪತ್ಯಸ್ಯ ಶೋಭನಪುತ್ರಸ್ಯ ಚ ಪತ್ನೀಃ ಪತ್ನ್ಯಃ ಪಾಲಯಿತ್ರ್ಯಃ ಸ್ಥ । ಭವಥ । ತಥಾ ಸರಸ್ವತೀ ತದಭಿಮಾನಿನೀ ದೇವತಾ ಗೃಣತೇ ಸ್ತುವತೇ ಮಹ್ಯಂ ತದಿದಂ ಸರ್ವಂ ವಯೋಽನ್ನಲಕ್ಷಣಂ ಧನಂ ಧಾತ್ । ದದಾತು ॥

॥ ಪ್ರತಿಪದಾರ್ಥ ॥

**ಅಪಃ**—ಎಲೈ ಉದಕಗಳೇ । **ರೇವತೀಃ**—ಧನಯುಕ್ತರಾದ ನೀವು । **ವಸ್ವಃ**—ಧನಕ್ಕೆ । **ಕ್ಷಯಥ ಹಿ**—ಪ್ರಭುಗಳಾಗಿದ್ದೀರಿ । **ಭದ್ರಂ**—ಮಂಗಳಕರವಾದ । **ಕ್ರತುಂ ಚ**—ಕರ್ಮವನ್ನೂ । **ಅಮೃತಂ ಚ**—ಅಮೃತತ್ವವನ್ನೂ । **ಬಿಭೃಥ**—ಧರಿಸಿದ್ದೀರಿ । **ರಾಯಶ್ಚ**—ಧನಕ್ಕೂ । **ಸ್ವಪತ್ಯಸ್ಯ**—ಉತ್ತಮವಾದ ಪುತ್ರಾದಿಗಳಿಗೂ । **ಪತ್ನೀಃ**—ಪಾಲಕಿಯರಾಗಿ । **ಸ್ಥ**—ಆಗಿದ್ದೀರಿ । **ಸರಸ್ವತೀ**—ಸರಸ್ವತೀದೇವಿಯು । **ಗೃಣತೇ**—ಸ್ತುತಿಸತಕ್ಕ ನನಗೆ । **ತತ್ ವಯಃ**—ಸಕಲ ಅನ್ನವನ್ನು । **ಧಾತ್**—ಕೊಡಲಿ.

। ಭಾವಾರ್ಥ ।

ಎಲೈ ಅಬ್ದೇವತೆಗಳೇ, ಧನಯುಕ್ತರಾದ ನೀವು ಧನಕ್ಕೆ ಪ್ರಭುಗಳಾಗಿದ್ದೀರಿ. ಮಂಗಳಕರವಾದ ಕರ್ಮವನ್ನೂ ಅಮೃತತ್ವವನ್ನೂ ಧರಿಸಿದ್ದೀರಿ. ಧನಕ್ಕೂ ಉತ್ತಮವಾದ ಪುತ್ರಾದಿಗಳಿಗೂ ಪಾಲಕಿಯರಾಗಿ ಆಗಿದ್ದೀರಿ. ಸರಸ್ವತೀದೇವಿಯು ಸ್ತುತಿಸತಕ್ಕ ನನಗೆ ಸಕಲ ಅನ್ನವನ್ನು ಕೊಡಲಿ.

## English Translation

Opulent waters, you rule over riches ; you support good fortune, pious rites, and immortality ; you are the protectresses of wealth and of offspring : may Saraswati bestow all this opulence on him who praises you.

॥ ವಿಶೇಷವಿಷಯಗಳು ॥

ಪ್ರಾತರನುವಾಕಮಂತ್ರಪಠನಕಾಲದಲ್ಲಿ **ಆಪೋ ರೇವತೀಃ** ಎಂಬ ಈ ಋಕ್ಕನ್ನು ಪ್ರತಿಪತ್ತೃಚದಲ್ಲಿ (ಪ್ರಾರಂಭದಲ್ಲಿ) ಸೇರಿಸಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಆಪೋ ರೇವತೀಃ ಕ್ಷಯಥಾ ಹಿ ವಸ್ವ ಉಪ ಪ್ರಯಂತ ಇತಿ ಸೂಕ್ತೇ** ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು.

। ಸಂಹಿತಾಪಾಠಃ ।

ಪ್ರತಿ ಯದಾಪೋ ಅದೃಶ್ರಮಾಯತೀರ್ಘೃತಂ ಪಯಾಂಸಿ ಬಿಭ್ರತೀರ್ಮಧೂನಿ ।
ಅಧ್ವರ್ಯುಭಿರ್ಮನಸಾ ಸಂವಿದಾನಾ ಇಂದ್ರಾಯ ಸೋಮಂ ಸುಷುತಂ ಭರಂತೀಃ ॥ ೧೩ ॥

॥ ಪದಪಾಠಃ ॥

ಪ್ರತಿ । ಯತ್ । ಆಪಃ । ಅದೃಶ್ರಂ । ಆऽಯತೀಃ । ಘೃತಂ । ಪಯಾಂಸಿ । ಬಿಭ್ರತೀಃ । ಮಧೂನಿ ।

ಅಧ್ವರ್ಯುऽಭಿಃ । ಮನಸಾ । ಸಂऽವಿದಾನಾಃ । ಇಂದ್ರಾಯ । ಸೋಮಂ । ಸುऽಸುತಂ । ಭರಂತೀಃ ॥

॥ ಸಾಯಣಭಾಷ್ಯಂ ॥

ಅಪೋನಪ್ತ್ರೀಯೇ ಪ್ರತಿ ಯದಾಪ ಇತ್ಯೇಷಾ । ಸೂತ್ರಿತಂ ಚ । ಪ್ರತಿ ಯದಾಪೋ ಅದೃಶ್ರಮಾಯತೀರಿತಿ ಪ್ರತಿದೃಶ್ಯಮಾನಾಸು । ಆ. ೫.೧ । ಇತಿ ॥

ಹೇ ಆಪಃ ಆಯತೀರಸ್ಮದ್ಯಜ್ಞಂ ಪ್ರತ್ಯಾಗಚ್ಛಂತೀರ್ಯತ್ । ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ ॥ ಯಾ ಯುಷ್ಮಾನ್ಪ್ರತ್ಯದೃಶ್ರಂ ಪ್ರತಿಪಶ್ಯಾಮಿ ಘೃತಂ ಸೋಮಸಂಸೃಷ್ಟಮಾಜ್ಯಂ ಮಧೂನಿ ಮಧುಸದೃಶಾನಿ ಮೃಷ್ಟರಸಾನಿ ಪಯಾಂಸ್ಯುದಕಾನಿ ಚ ಸಂಭೂಯ ಬಿಭ್ರತೀರ್ಯಾಗಕಾಲೇ ಧಾರಯಂತೀಃ ತಥಾಧ್ವರ್ಯುಭಿರ್ಮನಸಾಂತಃಕರಣೇನ ಸಂವಿದಾನಾಃ ಸಂಭಾಷಮಾಣಾಃ ಕಿಂಚೇಂದ್ರಾಯೇಂದ್ರಾರ್ಥಂ ಸುಷುತಂ ಸುಷ್ಠು ಸುತಂ ಸೋಮಂ ಭರಂತೀರ್ಧಾರಯಂತೀಃ ಏವಂಭೂತಾಸ್ತಾ ಯುಷ್ಮಾನ್ಪ್ರಾಪ್ನೋಮೀತಿ ಶೇಷಃ ॥

॥ ಪ್ರತಿಪದಾರ್ಥ ॥

**ಆಪಃ**—ಎಲೈ ಅಬ್ದೇವತೆಗಳೇ । **ಘೃತಂ**—ಆಜ್ಯವನ್ನೂ । **ಮಧೂನಿ**—ಮಧುರವಾದ ರಸಗಳನ್ನು । **ಪಯಾಂಸಿ**—ಉದಕಗಳನ್ನೂ । **ಬಿಭ್ರತೀಃ**—ಧರಿಸುತ್ತಲೂ । **ಅಧ್ವರ್ಯುಭಿಃ**—ಅಧ್ವರ್ಯುಗಳೊಡನೆ । **ಮನಸಾ**—ರಹಸ್ಯವಾಗಿ । **ಸಂವಿದಾನಾಃ**—ಸಂಭಾಷಣೆಯನ್ನು ಮಾಡುವವರಾಗಿಯೂ । **ಇಂದ್ರಾಯ** ಇಂದ್ರಾರ್ಥವಾಗಿ । **ಸುಸುತಂ**—ಉತ್ತಮವಾಗಿ ಹಿಂಡಿದ । **ಸೋಮಂ**—ಸೋಮವನ್ನು । **ಭರಂತೀಃ**—ವಹಿಸುತ್ತಲೂ । **ಯತ್**—ಯಾವಾಗ । **ಆಯತೀಃ**—ನಮ್ಮ ಯಜ್ಞಕ್ಕೆ ಬರುವಿರೋ ಆಗ । **ಪ್ರತಿ ಅದೃಶ್ರಂ**—ನಾನು (ನಿಮ್ಮನ್ನು) ನೋಡುತ್ತೇನೆ.

॥ ಭಾವಾರ್ಥ ॥

ಎಲೈ ಅಬ್ದೇವತೆಗಳೇ, ಆಜ್ಯವನ್ನೂ ಮಧುರವಾದ ರಸಗಳನ್ನೂ ಉದಕಗಳನ್ನೂ ಧರಿಸುತ್ತಲೂ ಅಧ್ವರ್ಯುಗಳೊಡನೆ ರಹಸ್ಯವಾಗಿ ಸಂಭಾಷಣೆಯನ್ನು ಮಾಡುವವರಾಗಿಯೂ ಇಂದ್ರಾರ್ಥವಾಗಿ ಉತ್ತಮವಾಗಿ ಹಿಂಡಿದ ಸೋಮವನ್ನು ವಹಿಸುತ್ತಲೂ ಯಾವಾಗ ನಮ್ಮ ಯಜ್ಞಗೃಹಕ್ಕೆ ಬರುವಿರೋ, ಆಗ ನಾನು ನಿಮ್ಮನ್ನು ನೋಡುತ್ತೇನೆ.

## English Translation

I behold you, waters, coming to (the sacrifice), conveying the butter, the water, the sweet (Soma-juices:) conversing mentally with the priests, and bringing the well-effused Soma for Indra.

॥ ವಿಶೇಷವಿಷಯಗಳು ॥

ಅಪೋನಪ್ತ್ರೀಯಕರ್ಮದಲ್ಲಿ ಪ್ರತಿ ಯದಾಪಃ ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-ಪ್ರತಿ ಯದಾಪೋ ಅದೃಶ್ರಮಾಯತೀರಿತಿ ಪ್ರತಿದೃಶ್ಯಮಾನಾಸು ಎಂಬ ಸೂತ್ರದಿಂದ (ಆ. ೫-೬-೧) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಏಮಾ ಅಗ್ಮನ್ರೇವತೀರ್ಜೀವಧನ್ಯಾ ಅಧ್ವರ್ಯವಃ ಸಾದಯತಾ ಸಖಾಯಃ।
ನಿ ಬರ್ಹಿಷಿ ಧತ್ತನ ಸೋಮ್ಯಾಸೋಽಪಾಂ ನಪ್ತ್ರಾ ಸಂವಿದಾನಾಸ ಏನಾಃ ॥

॥ ಪದಪಾಠಃ ॥

ಆ । ಇಮಾಃ । ಅಗ್ಮನ್ । ರೇವತೀಃ । ಜೀವಽಧನ್ಯಾಃ । ಅಧ್ವರ್ಯವಃ । ಸಾದಯತ । ಸಖಾಯಃ ।
ನಿ । ಬರ್ಹಿಷಿ । ಧತ್ತನ । ಸೋಮ್ಯಾಸಃ । ಅಪಾಂ । ನಪ್ತ್ರಾ । ಸಂಽವಿದಾನಾಸಃ । ಏನಾಃ ॥ ೧೪ ॥

॥ ಸಾಯಣಭಾಷ್ಯಂ ॥

ಅಪೋನಪ್ತ್ರೀಯ ಏಮಾ ಅಗ್ಮನ್ನಿತಿ ದ್ವೇ । ಸೂತ್ರಿತಂ ಚ । ಏಮಾ ಅಗ್ಮನ್ರೇವತೀರ್ಜೀವಧನ್ಯಾ ಇತಿ ದ್ವೇ ಸನ್ನಾಸೂತ್ತರಯಾ ಪರಿಧಾಯ । ಆ. ೫-೧ । ಇತಿ ॥

ರೇವತೀ ರೇವತ್ಯೋ ಧನವತ್ಯೋ ಜೀವಧನ್ಯಾ ಜೀವಾನಾಂ ಪಾಲಯಿತ್ರ್ಯಃ ಪ್ರೀಣಯಿತ್ರ್ಯೋ ವೇಮಾ ಈದೃಗ್ಭೂತಾ ಆಪ ಆಗ್ಮನ್ । ಅಸ್ಮದ್ಯಜ್ಞಂ ಪ್ರತ್ಯಾಗಚ್ಛನ್ । ಏತಜ್ಜ್ಞಾತ್ವಾ ಹೇ ಸಖಾಯಃ ಸಖಿಭೂತಾ ಹೇ ಅಧ್ವರ್ಯವಃ ಯೂಯಮಪಾಂ ನಪ್ತ್ರಾ ವೃಷ್ಟಿಕರ್ಮಸ್ವಧಿಕೃತೇನ ದೇವೇನ ಸಹ ಸಂವಿದಾನಾಃ ಸಂಮಂತ್ರಯಮಾಣಾ ಏನಾ ಏತಾ ಆಪಃ ಸಾದಯತ । ಸ್ಥಾಪಯತ। ಕುತ್ರ ಸಾದಯಾಮ ಇತಿ ಉಚ್ಯತೇ । ಸೋಮ್ಯಾಸಃ ಸೋಮಸಂಪಾದಿನೋಽಧ್ವರ್ಯವಃ ಯೂಯಂ ಬರ್ಹಿಷಿ ವೇದ್ಯಾಮಾಸ್ತೀರ್ಣೇ ಕುಶಮಯೇ ನಿ ಧತ್ತನ । ನಿಯಮೇನ ಸ್ಥಾಪಯತ ॥

॥ ಪ್ರತಿಪದಾರ್ಥ ॥

**ರೇವತೀಃ**—ಧನಯುಕ್ತರೂ । **ಜೀವಧನ್ಯಾಃ**—ಜೀವಗಳಿಗೆ ಪಾಲಕಿಯರೂ ಆದ । **ಇಮಾಃ**—ಈ ಅಬ್ದೇವತೆಗಳು । **ಆ ಅಗ್ಮನ್**—ನಮ್ಮ ಯಾಗಕ್ಕೆ ಬಂದಿದ್ದಾರೆ । **ಸಖಾಯಃ**—ಮಿತ್ರಭೂತರಾದ । **ಅಧ್ವರ್ಯವಃ**—ಎಲೈ ಅಧ್ವರುಗಳೇ । **ಸಾದಯತ**—ಇವರನ್ನು ಆಸನದಲ್ಲಿ ಕುಳ್ಳಿರಿಸಿರಿ । **ಅಪಾಂ ನಪ್ತ್ರಾ**—ಅಪಾಂನಪಾತ್ ಸಂಜ್ಞಕನಾದ ದೇವತೆಯೊಡನೆ । **ಸಂವಿದಾನಾಃ**—ಸಂಭಾಷಣೆಯನ್ನು ಮಾಡುತ್ತ । **ಏನಾಃ**—ಈ ಅಬ್ದೇವತೆಗಳನ್ನು । **ಸೋಮ್ಯಾಸಃ**—ಸೋಮವಂತರಾದ ನೀವು । **ಬರ್ಹಿಷಿ**—ದರ್ಭಾಸನದ ಮೇಲೆ । **ನಿ ಧತ್ತನ**—ಕುಳ್ಳಿರಿಸಿರಿ.

॥ ಭಾವಾರ್ಥ ॥

ಧನಯುಕ್ತರೂ, ಜೀವಿಗಳಿಗೆ ಪಾಲಕಿಯರೂ ಆದ ಈ ಅಪ್ದೇವತೆಗಳು ನಮ್ಮ ಯಾಗಕ್ಕೆ ಬಂದಿದ್ದಾರೆ. ಮಿತ್ರಭೂತರಾದ ಎಲೈ ಅಧ್ವರ್ಯುಗಳೇ, ಇವರನ್ನು ಆಸನದಲ್ಲಿ ಕುಳ್ಳಿರಿಸಿರಿ. ಅಪಾಂನಪಾತ್ಸಂಜ್ಞಕನಾದ ದೇವತೆಯೊಡನೆ ಸಂಭಾಷಣೆಯನ್ನು ಮಾಡುತ್ತ ಈ ಅಪ್ದೇವತೆಗಳನ್ನು ಸೋಮವಂತರಾದ ನೀವು ದರ್ಭಾಸನದ ಮೇಲೆ ಕುಳ್ಳಿರಿಸಿರಿ.

English Translation

These opulent and life-sustaining (waters) have come (to my sacrifice): friendly priests, make them sit down; place them on the sacred grass, you offerers of the Soma, conversing with the grandson of the waters.

॥ ವಿಶೇಷವಿಷಯಗಳು ॥

ಅಪೋನಪ್ತ್ರೀಯಕರ್ಮದಲ್ಲಿ **ಏಮ ಅಗ್ಮನ್** ಎಂದು ಪ್ರಾರಂಭವಾಗುವ ಎರಡು ಋಕ್ಕುಗಳನ್ನು (೧೪, ೧೫ ಋಕ್ಕುಗಳನ್ನು) ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಏಮಾ ಅಗ್ಮನ್ರೇವತೀರ್ಜೀವಧನ್ಯಾ ಇತಿ ದ್ವೇ ಸನ್ನಾಸೂತ್ತರಯಾ ಪರಿಧಾಯ** ಎಂಬ ಸೂತ್ರದಿಂದ (ಆ. ೫–೧) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಆಗ್ಮನ್ನಾಪ ಉಶತೀರ್ಬರ್ಹಿರೇದಂ ನ್ಯಧ್ವರೇ ಅಸದನ್ದೇವಯಂತೀಃ ।
ಅಧ್ವರ್ಯವಃ ಸುನುತೇಂದ್ರಾಯ ಸೋಮಮಭೂದು ವಃ ಸುಶಕಾ
ದೇವಯಜ್ಯಾ ॥ ೧೫ ॥

। ಪದಪಾಠಃ ।

ಆ । ಅಗ್ಮನ್ । ಆಪಃ । ಉಶತೀಃ । ಬರ್ಹಿಃ । ಆ । ಇದಂ । ನಿ । ಅಧ್ವರೇ । ಅಸದನ್ । ದೇವಽಯಂತೀಃ ।
ಅಧ್ವರ್ಯವಃ । ಸುನುತ । ಇಂದ್ರಾಯ । ಸೋಮಂ । ಅಭೂತ್ । ಊಂ ಇತಿ । ವಃ । ಸುಽಶಕಾ ।
ದೇವಽಯಜ್ಯಾ ॥ ೧೫ ॥

। ಸಾಯಣಭಾಷ್ಯಂ ।

ಆಪೋ ರೇವತೀರ್ಜೀವಧನ್ಯಾ ಇದಮಾದೃತಂ ಬರ್ಹಿರ್ವೇದಿಸ್ತರಣಮುಶತೀರುಶತ್ಯಃ ಕಾಮಯಮಾನಾ ಅಗ್ಮನ್ । ಆಗಚ್ಛನ್ । ಅಸ್ಮದ್ಯಜ್ಞಂ ಪ್ರತ್ಯಾ ಆಗತ್ಯ ಚಾಧ್ವರೇಽಸ್ಮದೀಯೇ ಯಜ್ಞೇ ದೇವಯಂತೀರ್ದೇವಾನ್ಕಾಮಯಮಾನಾಃ । ತರ್ಪಯಿತುಮಿಚ್ಛಂತ್ಯ ಇತ್ಯರ್ಥಃ । ನ್ಯಸದನ್ । ನ್ಯಸೀದನ್ । ಏತಜ್ಜ್ಞಾತ್ವಾ ಹೇ ಅಧ್ವರ್ಯವಃ ಯೂಯಮಿಂದ್ರಾಯೇಂದ್ರಾರ್ಥಂ ಸೋಮಂ ಸುನುತ । ಅಭಿ-

**ಷುಣುತ । ಇದಾನೀಮಪಾಂ ಪ್ರಸಾದಾದ್ವೋ ಯುಷ್ಮಾಕಂ ದೇವಯಜ್ಯಾ ದೇವಾನಿಂದ್ರಾದೀನುದ್ದಿಶ್ಯ ಕ್ರಿಯಮಾಣಾ ಯಾಗಕ್ರಿಯಾ ಸುಶಕಾ ಸುಷ್ಠು ಕರ್ತುಂ ಶಕ್ಯಾಭೂದು । ಆಸೀದೇವ ॥**

॥ ಪ್ರತಿಪದಾರ್ಥ ॥

**ಆಪಃ**—ವಸತೀವರ್ಯಾದ್ಯುದಕಗಳು । **ಈಂ ಬರ್ಹಿಃ**—ಈ ಯಜ್ಞಾರ್ಥವಾದ ಆಸನವನ್ನು । **ಉಶಂತೀಃ**—ಅಪೇಕ್ಷಿಸುತ್ತ । **ಅಗ್ಮನ್**—ಬಂದಿವೆ । **ಆ**—ಇಲ್ಲಿಗೆ ಬಂದು । **ಅಧ್ವರೇ**—ಯಜ್ಞದಲ್ಲಿ । **ದೇವಯಂತೀಃ**—ದೇವಪೂಜೆಗಳನ್ನು ಚ್ಛಿಸುತ್ತವೆ । **ಅಧ್ವರ್ಯವಃ**—ಎಲೈ ಅಧ್ವರ್ಯುಗಳೇ । **ಇಂದ್ರಾಯ**—ಇಂದ್ರಾರ್ಥವಾಗಿ । **ಸೋಮಂ**—ಸೋಮವನ್ನು । **ಸುನುತ**—ಹಿಂಡಿರಿ । **ವಃ**—ನಿಮಗೆ । **ದೇವಯಜ್ಯಾ**—ದೇವಪೂಜೆಯು । **ಸುಶಕಾ**—ಸುಲಭವಾಗಿ । **ಅಭೂದು**—ಆಗಿರುತ್ತದೆ

॥ ಭಾವಾರ್ಥ ॥

ವಸತೀವರ್ಯಾದ್ಯುದಕಗಳು ಯಜ್ಞಾರ್ಥವಾದ ಆಸನವನ್ನು ಅಪೇಕ್ಷಿಸುತ್ತ ಬಂದಿವೆ. ಈ ಯಜ್ಞಕ್ಕೆ ಬಂದು ದೇವಪೂಜೆಗಳನ್ನಿಚ್ಛಿಸುತ್ತವೆ. ಎಲೈ ಅಧ್ವರ್ಯುಗಳೇ, ಇಂದ್ರಾರ್ಥವಾಗಿ ಸೋಮವನ್ನು ಹಿಂಡಿರಿ. ನಿಮಗೆ ದೇವಪೂಜೆಯು ಸುಲಭವಾಗಿ ಆಗಿರುತ್ತದೆ.

English Translation

The waters desiring (it) have come to this sacred grass, and wishing to satisfy the gods, have sat down at our sacrifice: express, priests, the Soma for Indra; to you the worship of the gods is easy.

## ಮೂವತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಆ ನ ಇತ್ಯೇಕಾದಶರ್ಚಂ ದ್ವಿತೀಯಂ ಸೂಕ್ತಂ ಕವಷಸ್ಯಾರ್ಷಂ ತ್ರೈಷ್ಟುಭಂ ವೈಶ್ವದೇವಂ । ಅನುಕ್ರಾಂತಂ ಚ । ಆ ನ ಏಕಾದಶ ವೈಶ್ವದೇವಮಿತಿ ॥ ಗತಃ ಸೂಕ್ತವಿನಿಯೋಗಃ ॥ ಏಕಾದಶಿನಸ್ಯ ವೈಶ್ವದೇವಸ್ಯ ಪಶೋಃ ಪುರೋಡಾಶಸ್ಯಾ ನ ಇತ್ಯೇಷಾನುವಾಕ್ಯಾ । ಸೂತ್ರಿತಂ ಚ । ವಿಶ್ವೇ ಅದ್ಯ ಮರುತೋ ವಿಶ್ವ ಊತ್ಯಾ ನೋ ದೇವಾನಾಮುಪ ವೇತು ಶಂಸಃ ॥ ಆ. ૩-೭ । ಇತಿ ॥**

ಅನುವಾದವು—**ಆ ನಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕವಷನು ಋಷಿಯು ; ವಿಶ್ವೇದೇವತೆಗಳು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಆ ನ ಏಕಾದಶ ವೈಶ್ವದೇವಂ** ಎಂದು ಹೇಳಿರುವುದು. ಸೂಕ್ತ ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಏಕಾದಶಿನ್ ಎಂಬ ಇಷ್ಟಿಯಲ್ಲಿ ವಿಶ್ವೇದೇವತೆಗಳನ್ನುದ್ದೇಶಿಸಿ ಮಾಡುವ

ಪುರೋಡಾಶಹೋಮದ ಪುರೋಡಾಶಹೋಮದಲ್ಲಿ ಆ ನಃ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ–ವಿಶ್ವೇ ಅದ್ಯ ಮರುತೋ ವಿಶ್ವ ಊತ್ಯಾ ನೋ ದೇವಾನಾಮುಪ ವೇತು ಶಂಸಃ ಎಂಬ ಸೂತ್ರದಿಂದ (ಆ. ೩-೭) ವಿಹಿತವಾಗಿರುವುದು.

## ಸೂಕ್ತ—೩೧

ಮಂಡಲ—೧೦ । ಅನುವಾಕ—೩ । ಸೂಕ್ತ—೩೧ ॥
ಅಷ್ಟಕ—೭ ಅಧ್ಯಾಯ—೭ । ವರ್ಗ—೨೭, ೨೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ।
ಋಷಿಃ—ಕವಷ ಐಲೂಷಃ ।
ದೇವತಾ—ವಿಶ್ವೇ ದೇವಾಃ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಆ ನೋ ದೇವಾನಾಮುಪ ವೇತು ಶಂಸೋ ವಿಶ್ವೇಭಿಸ್ತುರೈರವಸೇ ಯಜತ್ರಃ ।
ತೇಭಿರ್ವಯಂ ಸುಷಖಾಯೋ ಭವೇಮ ತರಂತೋ ವಿಶ್ವಾ ದುರಿತಾ ಸ್ಯಾಮ ॥ ೧ ॥

॥ ಪದಪಾಠಃ ॥

ಆ । ನಃ । ದೇವಾನಾಂ । ಉಪ । ವೇತು । ಶಂಸಃ । ವಿಶ್ವೇಭಿಃ । ತುರೈಃ । ಅವಸೇ । ಯಜತ್ರಃ ।
ತೇಭಿಃ । ವಯಂ । ಸುऽಸಖಾಯಃ । ಭವೇಮ । ತರಂತಃ । ವಿಶ್ವಾ । ದುಃऽಇತಾ । ಸ್ಯಾಮ ॥ ೧ ॥

॥ ಸಾಯಣಭಾಷ್ಯಂ ॥

ದೇವಾನಾಂ ಸ್ತೋತೄಣಾಂ ನೋಽಸ್ಮಾಕಂ ಶಂಸಃ ಸ್ತೋತವ್ಯೋ ಯಜತ್ರೋ ಯಷ್ಟವ್ಯಃ ಏವಂಭೂತ ಇಂದ್ರಸ್ತುರೈಸ್ತ್ವರಣಶೀಲೈರ್ವಿಶ್ವೇಭಿಃ ಸರ್ವೈರ್ಮರುದ್ಭಿಃ ಸಹಾವಸೇಽಸ್ಮದ್ಯಜ್ಞರಕ್ಷಣಾರ್ಥಮೋಪ ವೇತು । ಉಪಾಗಚ್ಛತು । ವಯಮಪಿ ತೇಭಿಸ್ತೈಃ ಸಹ ಸುಸಖಾಯಃ ಶೋಭನಸಖಾಯೋ ಭವೇಮ ಸ್ಯಾಮ । ಕಿಂಚ ವಿಶ್ವಾ ದುರಿತಾ ವಿಶ್ವಾನಿ ದುರಿತಾನಿ ಪಾಪಾನಿ ತರಂತಃ ಸ್ಯಾಮ ॥

॥ ಪ್ರತಿಪದಾರ್ಥ ॥

ದೇವಾನಾಂ—ಸ್ತುತಿಕರ್ತರಾದ । ನಃ—ನಮಗೆ । ಶಂಸಃ—ಪ್ರಶಸ್ಯನೂ । ಯಜತ್ರಃ—ಪೂಜ್ಯನೂ ಆದ ಇಂದ್ರನು । ತುರೈಃ—ವೇಗಗಾಮಿಗಳಾದ । ವಿಶ್ವೇಭಿಃ—ಸಕಲ ಮರುತ್ತುಗಳೊಡನೆಯೂ । ಅವಸೇ—

ನಮ್ಮ ರಕ್ಷಣಾರ್ಥವಾಗಿ । ಆ **ಉಪ ನೇಶು**—ನಮ್ಮಲ್ಲಿಗೆ ಬರಲಿ । **ವಯಂ**—ನಾವು । **ತೇಭಿಃ**—ಅವರೊಡನೆ । **ಸುಸಖಾಯಃ**—ಉತ್ತಮವಾದ ಮಿತ್ರರಾಗಿ । **ಭವೇಮ**—ಆಗಿರೋಣ ! **ವಿಶ್ವಾ**—ಸಮಸ್ತವಾದ । **ದುರಿತಾ**—ಪಾಪಗಳನ್ನು । **ತರಂತಃ**—ದಾಟುವವರಾಗಿ । **ಸ್ಯಾಮ**—ಆಗೋಣ.

। ಭಾವಾರ್ಥ ।

ಸ್ತುತಿಕರ್ತರಾದ ನಮಗೆ ಪ್ರಶಸ್ಯನೂ, ಪೂಜ್ಯನೂ ಆದ ಇಂದ್ರನು ವೇಗಗಾಮಿಗಳಾದ ಸಕಲ ಮರುತ್ತುಗಳೊಡನೆಯೂ ನಮ್ಮ ರಕ್ಷಣಾರ್ಥವಾಗಿ ನಮ್ಮಲ್ಲಿಗೆ ಬರಲಿ. ನಾವು ಅವರೊಡನೆ ಉತ್ತಮವಾದ ಮಿತ್ರರಾಗಿರೋಣ. ಸಮಸ್ತವಾದ ಪಾಪಗಳನ್ನು ನಾವು ದಾಟುವಂತಾಗಲಿ.

English Translation

May he, who is to be praised by us, his worshippers, and to be adored, (Indra), come with all his swift (Maruts), for our protection, may we be excellent friends with them : may we be freed from all sins.

ಸಂಹಿತಾಪಾಠಃ ॥

ಪರಿ ಚಿನ್ಮರ್ತೋ ದ್ರವಿಣಂ ಮಮನ್ಯಾದೃತಸ್ಯ ಪಥಾ ನಮಸಾ ವಿವಾಸೇತ್ ।
ಉತ ಸ್ವೇನ ಕ್ರತುನಾ ಸಂ ವದೇತ ಶ್ರೇಯಾಂಸಂ ದಕ್ಷಂ ಮನಸಾ ಜಗೃಭ್ಯಾತ್ ॥ ೨ ॥

। ಪದಪಾಠಃ ।

ಪರಿ । ಚಿತ್ । ಮರ್ತಃ । ದ್ರವಿಣಂ । ಮಮನ್ಯಾತ್ । ಋತಸ್ಯ । ಪಥಾ । ನಮಸಾ । ವಿವಾಸೇತ್ ।
ಉತ । ಸ್ವೇನ । ಕ್ರತುನಾ । ಸಂ । ವದೇತ । ಶ್ರೇಯಾಂಸಂ । ದಕ್ಷಂ । ಮನಸಾ । ಜಗೃಭ್ಯಾತ್ ॥೨॥

। ಸಾಯಣಭಾಷ್ಯಂ ।

ಮರ್ತೋ ಮನುಷ್ಯೋ ಯಜಮಾನಃ ಪರಿ ಚಿತ್ಸರ್ವತೋ ದ್ರವಿಣಂ ವಿಶ್ವೇಷಾಂ ದೇವಾನಾಂ ಯಾಗಾರ್ಥಂ ಧನಂ ಮಮನ್ಯಾತ್ । ಮನ್ಯತಿಃ ಕಾಂತಿಕರ್ಮಾ । ಕಾಮಯೇತ । ಲಬ್ಧುಮಿಚ್ಛೇತ್ । ಧನಂ ಲಬ್ಧ್ವಾ ಚರ್ತಸ್ಯ ಯಜ್ಞಸ್ಯ ಪಥಾ ಮಾರ್ಗೇಣ ನಮಸಾ ಹವಿರಾಖ್ಯೇನಾನ್ನೇನಾ ವಿವಾಸೇತ್ । ಪರಿಚರೇತ್ । ಉತಾಪಿ ಚ ಸ್ವೇನಾತ್ಮೀಯೇನ ಕ್ರತುನಾ ಪ್ರಜ್ಞಾನೇನ । ಮನಸೇತ್ಯರ್ಥಃ। ಸಂ ವದೇತ । ಸಂವಾದೋऽತ್ರ ಸಮಾಧ್ಯಾನಮುಚ್ಯತೇ । ಹವಿರ್ಗೃಹೀತ್ವಾ ವಷಟ್ಕರಿಷ್ಯನ್ವಿಶ್ವಾನ್ದೇವಾನ್ಮನಸಾಧ್ಯಾಯೇದಿತ್ಯರ್ಥಃ । ವಿಶ್ವೇಷಾಂ ದೇವಾನಾಂ ಯಾಗಾನಂತರಂ ಚ ತತ್ಪ್ರಸಾದಾಚ್ಛ್ರೇಯಾಂಸಮತಿಶಯೇನ ಪ್ರಶಸ್ಯಮಾತ್ಮಾನಂ ದಕ್ಷಂ ಪ್ರವೃದ್ಧಂ ಸರ್ವವ್ಯಾಪಿನಂ ಮನಸಾ ಧ್ಯಾನಸಾಧನೇನಾಂತಃಕರಣೇನ ಜಗೃಭ್ಯಾತ್ । ಗೃಹ್ಣೀಯಾತ್ ॥

॥ ಪದಾರ್ಥ ॥

ಮರ್ತಃ—ಮಾನವನಾದ ಯಜಮಾನನು । ಪರಿ ಚಿತ್—ಎಲ್ಲಾ ಕಡೆಗಳಿಂದಲೂ । ದ್ರವಿಣಂ—ಧನವನ್ನು । ಮಮನ್ಯಾತ್—ಪಡೆಯಲಿ ಋತಸ್ಯ—ಯಜ್ಞದ । ಪಥಾ—ಮಾರ್ಗದಿಂದಲೂ । ನಮಸಾ—ಹವಿಸ್ಸುಗಳಿಂದಲೂ । ಆ ವಿವಾಸೇತ್—ದೇವತೆಗಳನ್ನು ಪೂಜಿಸಲಿ ಉತ—ಮತ್ತು ಸ್ವೇನ—ತನ್ನ । ಕ್ರತುನಾ—ಉತ್ತಮಜ್ಞಾನದಿಂದ । ಸಂ ವದೇತ—ದೇವತೆಗಳನ್ನು ಧ್ಯಾನಿಸಲಿ । ಶ್ರೇಯಾಂಸಂ—ಕಲ್ಯಾಣ ಕಾರಕನೂ । ದಕ್ಷಂ—ಸರ್ವಸಮರ್ಥನೂ ಆದ ದೇವನನ್ನು । ಮನಸಾ—ಧ್ಯಾನರೂಪದಿಂದ ಜಗೃಭ್ಯಾತ್—ಆಶ್ರಯಿಸಲಿ.

॥ ಭಾವಾರ್ಥ ॥

ಮಾನವನಾದ ಯಜಮಾನನು ಎಲ್ಲಾ ಕಡೆಗಳಿಂದಲೂ ಧನವನ್ನು ಪಡೆಯಲಿ. ಯಜ್ಞದ ಮಾರ್ಗದಿಂದಲೂ. ಹವಿಸ್ಸುಗಳಿಂದಲೂ ದೇವತೆಗಳನ್ನು ಪೂಜಿಸಲಿ. ತನ್ನ ಉತ್ತಮಜ್ಞಾನದಿಂದ ದೇವತೆಗಳನ್ನು ಧ್ಯಾನಿಸಲಿ. ಕಲ್ಯಾಣ ಕಾರಕನೂ, ಸರ್ವಸಮರ್ಥನೂ ಆದ ದೇವನನ್ನು ಧ್ಯಾನರೂಪದಿಂದ ಆಶ್ರಯಿಸಲಿ.

English Translation

Let a mortal be ever desirous of affluence, (having acquired it), let him worship with oblations on the path of the sacrifice: and let him with his own intellect meditate upon (the gods): let him grasp with his mind the best and most mighty (of the universal deities),

ಸಂಹಿತಾಪಾಠಃ ॥

ಅಧಾಯಿ ಧೀತಿರಸಸೃಗ್ರಮಂಶಾಸ್ತೀರ್ಥೇ ನ ದಸ್ಮಮುಪ ಯಂತ್ಯೂಮಾಃ ।
ಅಭ್ಯಾನಶ್ಮ ಸುವಿತಸ್ಯ ಶೂಷಂ ನವೇದಸೋ ಅಮೃತಾನಾಮಭೂಮ ॥ ೩ ॥

॥ ಪದಪಾಠಃ ॥

ಅಧಾಯಿ । ಧೀತಿಃ । ಅಸಸೃಗ್ರಂ । ಅಂಶಾಃ । ತೀರ್ಥೇ । ನ । ದಸ್ಮಂ । ಉಪ । ಯಂತಿ । ಊಮಾಃ ।
ಅಭಿ । ಆನಶ್ಮ । ಸುವಿತಸ್ಯ । ಶೂಷಂ । ನವೇದಸಃ । ಅಮೃತಾನಾಂ । ಅಭೂಮ ॥ ೩ ॥

॥ ಸಾಯಣಭಾಷ್ಯಂ ॥

ಧೀತಿರ್ದೇವಯಾಗಕ್ರಿಯಾಧಾಯಿ । ನಿಹಿತಾ । ಸ್ಥಾಪಿತಾ । ಅಸ್ಮಾಭಿಃ ಪ್ರವರ್ತಿತೇತ್ಯರ್ಥಃ । ತದನಂತರಮೂಮಾ ಅವಿತಾರಸ್ತರ್ಪಯಿತಾರೋಽಂಶಾ ಅಸ್ಮಾಭಿರ್ದತ್ತಾ ಹವಿರ್ಭಾಗಾ ದಸ್ಮಂ ದರ್ಶ-

ನೀಯಂ ಶತ್ರೂಣಾಮುಪಕ್ಷಪಯಿತಾರಂ ವಾಸಸೃಗ್ರಮುಸಮಾನಸೃಷ್ಟಿಂ। ಉತ್ಕೃಷ್ಟಜನ್ಮಾನಮಿತ್ಯರ್ಥಃ॥ ಏವಂಭೂತಂ ದೇವಸಂಘಮುಪ ಯಂತಿ। ಉಪಗಚ್ಛಂತಿ। ತತ್ರ ದೃಷ್ಟಾಂತಃ। ತೀರ್ಥೇ ನ ಯಥಾ ಗಂಗಾದಿತೀರ್ಥೇ ತರ್ಪಣಮುಖೇ ವಿಸೃಷ್ಟಾ ಅಪಾಮಂಶಾ ದೇವಸಂಘಮುಪಗಚ್ಛಂತಿ ತದ್ವತ್। ತದನಂತರಂ ವಯಂ ಸುವಿತಸ್ಯ ಸು ಇತಸ್ಯ ಸುಷ್ಠು ಪ್ರಾಪ್ತಸ್ಯ ಸ್ವರ್ಗಾದಿಕಸ್ಯ ಶೂಷಂ ಸುಖಮಭ್ಯಾನಶ್ಮ। ಅಭಿಪ್ರಾಪ್ನುಯಾಮ। ಕಿಂಚ । ವಯಮಮೃತಾನಾಂ ದೇವಾನಾಂ ನವೇದಸಃ॥ ನ ವೇದೇತ್ಯೇತಸ್ಮಿನ್ನರ್ಥೇ ನವೇದಃಶಬ್ದೋ ನಭ್ರಾಣ್ನಪಾನ್ನವೇದಾ ಇತಿ ನಿಪಾತಿತಃ॥ ನ ನ ವೇತ್ತಾರೋ ವೇತ್ತಾರ ಏವ। ಸ್ವರೂಪಕೋ ಜ್ಞಾತಾರ ಏವೇತ್ಯರ್ಥಃ। ಅಭೂಮ। ಭವೇಮೇತ್ಯಾಶಾಸ್ಮಹೇ ॥

॥ ಪ್ರತಿಪದಾರ್ಥ ॥

ಧೀತಿಃ—ಯಜ್ಞವು। **ಅಧಾಯಿ**—ಆರಂಭವಾಗಿದೆ। **ತೀರ್ಥೇ ನ**—ಪವಿತ್ರವಾದ ನದಿಗಳ ನೀರುಗಳು ದೇವತೆಗಳನ್ನು ಸಮೀಪಿಸುವಂತೆ। **ಊಮಾಃ**—ತೃಪ್ತಿಕಾರಕವಾದ। **ಅಂಶಾಃ**—ಹವಿರ್ಭಾಗಗಳು। **ದಸ್ಮಂ**—ಶತ್ರುನಾಶಕವೂ। **ಅಸಸೃಗ್ರಂ**—ಉತ್ಕೃಷ್ಟವಾದ ಉತ್ಪತ್ತಿಯುಳ್ಳದ್ದೂ ಆದ ದೇವಸಂಘವನ್ನು। **ಉಪಯಂತಿ**—ಸಮೀಪಿಸುತ್ತವೆ। **ಸುವಿತಸ್ಯ**—ಉತ್ತಮವಾದ ಸ್ವರ್ಗಾದಿಗಳ। **ಶೂಷಂ**—ಸುಖವನ್ನು। **ಅಭ್ಯಾನಶ್ಮ**—ನಾವು ಹೊಂದುವಂತಾಗಲಿ। **ಅಮೃತಾನಾಂ**—ದೇವತೆಗಳ ಸ್ವರೂಪವನ್ನು। **ನವೇದಸಃ**—ತಿಳಿದವರಾಗಿ। **ಅಭೂಮ**—ನಾವು ಆಗುವಂತಾಗಲಿ.

॥ ಭಾವಾರ್ಥ ॥

ಯಜ್ಞವು ಆರಂಭವಾಗಿದೆ. ಪವಿತ್ರವಾದ ನದಿಗಳ ಉದಕಗಳು ದೇವತೆಗಳನ್ನು ಸಮೀಪಿಸುವಂತೆ ತೃಪ್ತಿಕರವಾದ ಹವಿರ್ಭಾಗಗಳು ಶತ್ರುನಾಶಕವೂ, ಉತ್ಕೃಷ್ಟವಾದ ಉತ್ಪತ್ತಿಯುಳ್ಳದ್ದೂ ಆದ ದೇವಸಂಘವನ್ನು ಸಮೀಪಿಸುತ್ತವೆ. ನಾವು ಉತ್ತಮವಾದ ಸ್ವರ್ಗಸುಖಕ್ಕೆ ಭಾಗಿಗಳಾಗೋಣ. ಉತ್ತಮವಾದ ದೇವತೆಗಳ ಮಹತ್ವವನ್ನು ಅರಿಯುವಂತಾಗಲಿ.

## English Translation

The sacrifice has been prepared: the invigorating portions (of the oblation) approach the beautiful (god) of excellent birth, as (the waters) at a holy spot (approach the gods): may we obtain the happiness of heaven; may we have a real knowledge of the immortals.

॥ ಸಂಹಿತಾಪಾಠಃ ॥

ನಿತ್ಯಶ್ಚಾಕನ್ಯಾತ್ಸ್ವಪತಿರ್ದಮೂನಾ ಯಸ್ಮಾ ಉ ದೇವಃ ಸವಿತಾ ಜಜಾನ।
ಭಗೋ ವಾ ಗೋಭಿರರ್ಯಮೇಮನಜ್ಯಾತ್ಸೋ ಅಸ್ಮೈ ಚಾರುಶ್ಛದಯದುತ ಸ್ಯಾತ್ ॥ ೪ ॥

ಪದಪಾಠಃ

ನಿತ್ಯಃ । ಚಾಕನ್ಯಾತ್ । ಸ್ವಽಪತಿಃ । ದಮೂನಾಃ । ಯಸ್ಮೈ । ಊಂ ಇತಿ । ದೇವಃ । ಸವಿತಾ । ಜಜಾನ । ಭಗಃ । ವಾ । ಗೋಭಿಃ । ಅರ್ಯಮಾ । ಈಂ । ಅನಜ್ಯಾತ್ । ಸಃ । ಅಸ್ಮೈ । ಚಾರುಃ । ಛದಯತ್ ।
ಉತ । ಸ್ಯಾತ್ ॥ ೮ ॥

। ಸಾಯಣಭಾಷ್ಯಂ ।

ನಿತ್ಯಃ ಕಲ್ಪಾವಸ್ಥಾಯೀ ಪ್ರಜಾಪತಿಶ್ಚಾಕನ್ಯಾತ್ । ತಸ್ಮೈ ದೃಷ್ಟಾದೃಷ್ಟಫಲಂ ದಾತುಂ ಕಾಮಯತಾಂ । ಕೀದೃಶಃ । ಸ್ವಪತಿಃ । ಸ್ವೀಯಾನಾಂ ಪ್ರಜಾನಾಂ ಸ್ವಾಮೀ ಧನಪತಿರ್ವಾ ದಮೂನಾ ದಾನಮನಾಃ । ಕಸ್ಮೈ ಕಾಮಯತಾಮಿತಿ ಉಚ್ಯತೇ । ಉ ಉತಾಪಿ ಚ ಯಸ್ಮೈ ಯಜಮಾನಾಯ ಮಹ್ಯಂ ಸವಿತಾ ಸರ್ವಸ್ಯ ಪ್ರೇರಕೋ ದೇವೋ ಜಜಾನ ಜನಿತವಾನ್ ದೃಷ್ಟಾದೃಷ್ಟಫಲಂ ದತ್ತವಾನಿತ್ಯರ್ಥಃ । ವಾಶಬ್ದಃ ಸಮುಚ್ಚಯೇ । ತಥಾ ಭಗೋ ದೇವಶ್ಚ ಗೋಭಿರಸ್ಮದೀಯಾಭಿಃ ಸ್ತುತಿರೂಪಾಭಿರ್ವಾಗ್ಭಿರರ್ಯಮಾ ದೇವಶ್ಚೇಮಿಾದೃಗ್ಭೂತಂ ದೃಷ್ಟಾದೃಷ್ಟಫಲಮನಜ್ಯಾತ್ । ವ್ಯಕ್ತೀಕುರ್ಯಾತ್ । ದದ್ಯಾದಿತ್ಯರ್ಥಃ । ಉತಾಪಿ ಚ ಸ್ಯಾತ್ ಅನ್ಯೋಽಪಿ ಯೋ ದೇವಗಣೋಽಸ್ತಿ ಚಾರೂ ರಮಣೀಯಃ ಸೋಽಪಿ ದೇವಗಣೋಽಸ್ಮೈ ಯಜಮಾನಾಯ ಮಹ್ಯಂ ಛದಯತ್ । ದೃಷ್ಟಾದೃಷ್ಟಫಲಂ ದಾತುಂ ಕಾಮಯತಾಮಿತ್ಯೇತದಾಶಾಸ್ಮಹೇ ॥

। ಪ್ರತಿಪದಾರ್ಥ ।

ಯಸ್ಮೈ—ಯಾವ ಯಜಮಾನನಾದ ನನಗೆ । ದೇವಃ—ದೇವತಾತ್ಮನಾದ । ಸವಿತಾ—ಸವಿತೃವು । ಜಜಾನ—ಸೃಷ್ಟಿಕರ್ತನಾಗಿದ್ದಾನೆಯೋ ಆ ನನಗೆ । ದಮೂನಾಃ—ಉದಾರವಾಗಿ ದಾನಮಾಡತಕ್ಕವನೂ । ಸ್ವಪತಿಃ—ಧನಪತಿಯೂ । ನಿತ್ಯಃ—ಶಾಶ್ವತಸ್ಥಿತಿಯುಳ್ಳವನೂ ಆದ ಪ್ರಜಾಪತಿಯು । ಚಾಕನ್ಯಾತ್—ಅಪೇಕ್ಷಿತವಾದ ವಸ್ತುಗಳನ್ನು ಕೊಡಲಿ । ಭಗಃ—ಭಗದೇವನೂ । ಗೋಭಿಃ—ನಮ್ಮ ಸ್ತುತಿಗಳಿಂದ ಪ್ರಶಂಸಿತನಾದ । ಅರ್ಯಮಾ—ಅರ್ಯಮನೂ । ಈಂ—ಈ ಇಷ್ಟಾರ್ಥಗಳನ್ನೆಲ್ಲ । ಅನಜ್ಯಾತ್—ಒದಗಿಸಿಕೊಡಲಿ । ಉತ—ಮತ್ತು । ಚಾರುಃ—ಆಕರ್ಷಕನಾದ । ಯಃ ಸ್ಯಾತ್—ಯಾವ ಇತರ ದೇವತೆಯಿದ್ದರೆ । ಸಃ—ಅವನೂ । ಅಸ್ಮೈ—ನನಗೆ । ಛದಯತ್—ಇಷ್ಟಾರ್ಥಗಳನ್ನೊದಗಿಸಲಿ.

। ಭಾವಾರ್ಥ ।

ಯಾವ ಯಜಮಾನನಾದ ನನಗೆ ಸವಿತೃವು ಸೃಷ್ಟಿಕರ್ತನಾಗಿ ಇದ್ದಾನೆಯೋ, ಆ ನನಗೆ ಉದಾರವಾಗಿ ದಾನಮಾಡತಕ್ಕವನೂ ಧನಪತಿಯೂ ಶಾಶ್ವತಸ್ಥಿತಿಯುಳ್ಳವನೂ ಆದ ಪ್ರಜಾಪತಿಯು ಅಪೇಕ್ಷಿತವಾದ ವಸ್ತುಗಳನ್ನು ಕೊಡಲಿ. ಭಗನೂ, ನಮ್ಮ ಸ್ತುತಿಗಳಿಂದ ಪ್ರಶಂಸಿತನಾದ ಅರ್ಯಮನೂ, ಈ ಇಷ್ಟಾರ್ಥಗಳನ್ನೆಲ್ಲ ಒದಗಿಸಲಿ. ಆಕರ್ಷಕವಾದ ರೂಪವುಳ್ಳ ಇತರ ದೇವಸಂಘವೂ ನಮ್ಮ ಇಷ್ಟಾರ್ಥಗಳನ್ನೊದಗಿಸಲಿ.

## English Translation

May the eternal (Prajapati), the lord of wealth, of generous mind, be willing to bestow (benefits on him) to whom the divine Savitri has given birth: may Bhaga (induced) by (our) praises, and the divine Aryaman unfold (future rewards); or may some (other) gracious (divinity) be inclined to favour this (institutor of the rite).

। ಸಂಹಿತಾಪಾಠಃ ।

ಇಯಂ ಸಾ ಭೂಯಾ ಉಷಸಾಮಿವ ಕ್ಷಾ ಯದ್ಧ ಕ್ಷುಮಂತಃ ಶವಸಾ
ಸಮಾಯನ್ ।
ಅಸ್ಯ ಸ್ತುತಿಂ ಜರಿತುರ್ಭಿಕ್ಷಮಾಣಾ ಆ ನಃ ಶಗ್ಮಾಸ ಉಪ ಯಂತು
ವಾಜಾಃ ॥ ೫ ॥

। ಪದಪಾಠಃ ।

ಇಯಂ । ಸಾ । ಭೂಯಾಃ । ಉಷಸಾಂಽಇವ । ಕ್ಷಾಃ । ಯತ್ । ಹ । ಕ್ಷುಽಮಂತಃ । ಶವಸಾ । ಸಂಽ-
ಆಯನ್ ।
ಅಸ್ಯ । ಸ್ತುತಿಂ । ಜರಿತುಃ । ಭಿಕ್ಷಮಾಣಾಃ । ಆ । ನಃ । ಶಗ್ಮಾಸಃ । ಉಪ । ಯಂತು । ವಾಜಾಃ ॥ ೫ ॥

। ಸಾಯಣಭಾಷ್ಯಂ ।

ಕ್ಷುಮಂತಃ। ಕ್ಷುಶಬ್ದೋಽನ್ನವಾಚೀ ಶಬ್ದವಾಚೀ ವಾ। ಅನ್ನವಂತಃ ಸ್ತುತಿಮಂತಃ ಕೀರ್ತಿಮಂತೋ ವೇತ್ಯರ್ಥಃ। ಏವಂಭೂತಾ ದೇವಾಃ ಶವಸಾ ಬಲೇನ ಯದ್ಯಾಮಸ್ಮದೀಯಾಂ ಸ್ತುತಿಂ ಪ್ರತಿ ಸಮಾಯನ್। ಸಮಾಗಚ್ಛನ್ ಸಂಪ್ರಾಪ್ತಾಃ ಸೇಯಂ ಸ್ತುತಿರ್ದೇವಾನಾಂ ಪ್ರಾಪ್ಯಾ ಭೂಯಾಃ। ಭೂಯಾತ್। ಭವತು। ಉಷಸಾಮಿವ ಕ್ಷಾಃ ಯಥಾ ಪೃಥಿವ್ಯುಷಸಾಂ ವ್ಯಾಪ್ತ್ಯಾ ಸರ್ವೇಷಾಂ ಪ್ರಾಪ್ಯಾ ಭವತಿ ತದ್ವತ್। ಕಿಂಚ ಜರಿತುಃ ಸ್ತೋತುರಸ್ಯ ಮಮ ಸ್ತುತಿಂ ಭಿಕ್ಷಮಾಣಾ ಯಾಚಮಾನಾಃ ಶಗ್ಮಾಸಃ। ಶಗ್ಮಮಿತಿ ಸುಖನಾಮ। ಸುಖಾಃ ಸುಖಕರಾ ವಾಜಾಃ ಸುಧನ್ವನಃ ಪುತ್ರಾಸ್ತ್ರಯೋಽಪ್ಯೃಭುರ್ವಿಭ್ವಾ ವಾಜ ಇತ್ಯೇತೇ ನೋಽಸ್ಮಾನಾಭಿಮುಖ್ಯೇನೋಪ ಯಂತು। ಉಪಗಚ್ಛಂತು॥

। ಪ್ರತಿಪದಾರ್ಥ ।

**ಗೌಃ**—ಪೃಥ್ವಿಯು । **ಉಷಸಾಂ ಇವ**—ಉಷಃಕಾಲಗಳಲ್ಲಿ ಸರ್ವರಿಗೂ ಆಶ್ರಯಸ್ಥಾನವಾಗಿರುವಂತೆ । **ಕ್ಷುಮಂತಃ**—ಅನ್ನವಂತರಾದ ದೇವತೆಗಳು । **ಶವಸಾ**—ತಮ್ಮ ಪ್ರಭಾವದಿಂದ । **ಯತ್**—ಯಾವ ನಮ್ಮ ಈ ಸ್ತುತಿಯನ್ನು ಆಶಿಸಿ । **ಸಮಾಯನ್**—ಒಟ್ಟುಗೂಡಿ ಬಂದಿರುವರೋ । **ಸಾ ಇಯಂ**—ನಮ್ಮ ಈ ಅದೇ ಸ್ತುತಿಯು । **ಭೂಯಾಃ**—ಅವರನ್ನು ಸೇರಲಿ । **ಜರಿತುಃ**—ಸ್ತುತಿಕರ್ತನಾದ **ಅಸ್ಯ**—ನನ್ನ । **ಸ್ತುತಿಂ**—ಸ್ತುತಿಯನ್ನು । **ಭಿಕ್ಷಮಾಣಾಃ**—ಅಪೇಕ್ಷಿಸುವವರೂ । **ಶಗ್ಮಾಸಃ**—ಸುಖಕಾರಕರೂ ಆದ । **ವಾಜಾಃ**—ಸುಧನ್ವಪುತ್ರರು । **ನಃ**—ನಮ್ಮಲ್ಲಿಗೆ । **ಉಪಯಂತು**—ದಯಮಾಡಲಿ

। ಭಾವಾರ್ಥ ।

ಉಷಃಕಾಲಗಳಲ್ಲಿ ಪೃಥ್ವಿಯು ಸರ್ವರಿಗೂ ಆಶ್ರಯಸ್ಥಾನವಾಗಿರುವಂತೆ, ಅನ್ನವಂತರಾದ ದೇವತೆಗಳು ತಮ್ಮ ಪ್ರಭಾವದಿಂದ ಯಾವ ನಮ್ಮ ಈ ಸ್ತುತಿಯನ್ನು ಆಶಿಸಿ ಒಟ್ಟುಗೂಡಿ ಬಂದಿರುವರೋ ನಮ್ಮ ಅದೇ ಸ್ತುತಿಯು ಅವರನ್ನು ಸೇರಲಿ. ಸ್ತುತಿಕರ್ತನಾದ ನನ್ನ ಸ್ತುತಿಯನ್ನು ಅಪೇಕ್ಷಿಸುವವರೂ, ಸುಖಕಾರಕರೂ ಆದ ಸುಧನ್ವಪುತ್ರರು ನಮ್ಮಲ್ಲಿಗೆ ದಯಮಾಡಲಿ.

English Translation

May this (our praise) be accessible like the earth at dawn, when the glorious (gods) assemble in their might: may the Vajas, the dispensers of happiness, come to us, soliciting the laudation of this (their) adorer.

। ಸಂಹಿತಾಪಾಠಃ ।

ಅಸ್ಯೇದೇಷಾ ಸುಮತಿಃ ಪಪ್ರಥಾನಾಭವತ್ಪೂರ್ವ್ಯಾ ಭೂಮನಾ ಗೌಃ ।
ಅಸ್ಯ ಸನೀಳಾ ಅಸುರಸ್ಯ ಯೋನೌ ಸಮಾನ ಆ ಭರಣೇ ಬಿಭ್ರಮಾಣಾಃ ॥೬॥

। ಪದಪಾಠಃ ।

ಅಸ್ಯ । ಇತ್ । ಏಷಾ । ಸುಽಮತಿಃ । ಪಪ್ರಥಾನಾ । ಅಭವತ್ । ಪೂರ್ವ್ಯಾ । ಭೂಮನಾ । ಗೌಃ ।
ಅಸ್ಯ । ಸಽನೀಳಾಃ । ಅಸುರಸ್ಯ । ಯೋನೌ । ಸಮಾನೇ । ಆ । ಭರಣೇ । ಬಿಭ್ರಮಾಣಾಃ ॥ ೬ ॥

। ಸಾಯಣಭಾಷ್ಯಂ ।

ಇದಿದಾನೀಮಸ್ಯ ದೇವಗಣಸಂಬಂಧಿನ್ಯೇಷಾ ಸುಮತಿಃ ಸುಷ್ಠುಸ್ತುತಿಃ ಪಪ್ರಥಾನಾಭವತ್ । ವಿಸ್ತೀರ್ಯಮಾಣಾಭೂತ್ । ಅಸ್ಮಾಭಿಃ ಕ್ರಿಯಮಾಣೇತ್ಯರ್ಥಃ । ಕೀದೃಶೀ । ಪೂರ್ವ್ಯಾ ಪೂರ್ವಕಾಲೀನಾ

ಭೂಮನಾ ಭೂಮ್ನಾ ಬಹುತ್ವೇನ ಯುಕ್ತೇತಿ ಶೇಷಃ । ಸರ್ವದೇವಸಂಬಂಧಿತ್ವಾದ್ಭೃಶಂ ಜಾತೇತ್ಯರ್ಥಃ । ಗಾ ಪರ್ದೇವಾನ್ಪ್ರತಿಗಂತ್ರೀ । ಏತಜ್ಜ್ಞಾತ್ವಾ ಸರ್ವೇ ದೇವಾ ಅಸುರಸ್ಯ ಪ್ರಜಾರೂಪಬಲವತೋಽಸ್ಯ ಮಮ ಸಂಬಂಧಿನಿ ಸಮಾನೇ ಸರ್ವದೇವಸಾಧಾರಣೇ ಭರಣೇ ಸರ್ವೇಷಾಂ ದೇವಾನಾಂ ಪುಷ್ಟಿಕರೇ ಯೋನೌ ಯಜ್ಞಾಖ್ಯೇ ಸ್ಥಾನೇ ಸನೀಳಾಃ ಸಮಾನಸ್ಥಾನಾ ಬಿಭ್ರಮಾಣಾ ಅಸ್ಮದರ್ಥಂ ದೃಷ್ಟಾದೃಷ್ಟಫಲಂ ಧಾರಯಂತ ಆ ಗಚ್ಛಂತ್ವಿತಿ ಶೇಷಃ ॥

। ಪ್ರತಿಪದಾರ್ಥ ।

ಇತ್—ಈಗ । ಅಸ್ಯ—ಈ ದೇವಗಣಕ್ಕೆ ಅರ್ಪಿಸಿದುದೂ । ಪೂರ್ವ್ಯಾ—ಪುರಾತನವಾದದೂ । ಗಾಃ—ದೇವತೆಗಳಲ್ಲಿ ಹೋಗತಕ್ಕದ್ದೂ । ಭೂಮನಾ—ಬಹುತ್ವ ಯುಕ್ತವಾದುದೂ ಆದ । ಏಷಾ ಸುಮತಿಃ—ಈ ಸ್ತುತಿಯು । ಪಪ್ರಥಾನಾ—ವಿಸ್ತೃತವಾದ ಬೆಳವಣಿಗೆಯುಳ್ಳದ್ದಾಗಿ । ಅಭವತ್—ಆಯಿತು । ಅಸುರಸ್ಯ—ಶಕ್ತಿಯುತನಾದ । ಅಸ್ಯ—ಈ ನನ್ನಿಂದ ನೆರವೇರಿಸಲ್ಪಡುವುದೂ । ಸಮಾನೇ—ಸಕಲ ದೇವತೆಗಳಿಗೂ ಸಾಧಾರಣವಾದುದೂ । ಭರಣೇ—ಸಕಲ ದೇವತೆಗಳಿಗೂ ಪುಷ್ಟಿಕರವಾದುದೂ ಆದ । ಯೋನೌ—ಯಜ್ಞಸ್ಥಾನದಲ್ಲಿ । ಸನೀಳಾಃ—ಸಮಾನಸ್ಥಾನವುಳ್ಳವರೂ । ಬಿಭ್ರಮಾಣಾಃ—ನಮಗೆ ಫಲಗಳನ್ನು ಧರಿಸುವವರೂ ಆದ ದೇವತೆಗಳು । ಆ (ಗಚ್ಛಂತು) – ದಯಮಾಡಲಿ.

। ಭಾವಾರ್ಥ ।

ದೇವಗಣಕ್ಕೆ ಅರ್ಪಿಸಿದುದೂ, ಪುರಾತನವಾದುದೂ, ಬಹುತ್ವಯುಕ್ತವಾದುದೂ ಆದ ಈ ಸ್ತುತಿಯು ವಿಸ್ತೃತವಾದ ಬೆಳವಣಿಗೆಯುಳ್ಳದ್ದಾಗಿ ಆಯಿತು. ಶಕ್ತಿಯುತನಾದ ನನ್ನಿಂದ ನೆರವೇರಿಸಲ್ಪಡುವುದೂ, ಸಕಲ ದೇವತೆಗಳಿಗೂ ಸಾಧಾರಣವಾದುದೂ, ಸಕಲ ದೇವತೆಗಳಿಗೂ ಪುಷ್ಟಿಕರವಾದುದೂ ಆದ ಯಜ್ಞಸ್ಥಾನದಲ್ಲಿ ಸಮಾನ ಸ್ಥಾನವುಳ್ಳವರೂ, ನಮಗೆ ಫಲಗಳನ್ನು ಕೊಡುವವರೂ ಆದ ದೇವತೆಗಳು ದಯಮಾಡಲಿ.

## English Translatian

May this glorification, of this (assembly of the gods), ancient and frequent, approaching (the deities), be widely diffused, (may the universal gods), collected together, bearing (future rewards, come) to the common place (of sacrifice) of this one who is mighty, which nourishes (them).

। ಸಂಹಿತಾಪಾಠಃ ।

ಕಿಂಸ್ವಿದ್ವನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ ।
ಸಂತಸ್ಥಾನೇ ಅಜರೇ ಇತಊತೀ ಅಹಾನಿ ಪೂರ್ವೀರುಷಸೋ ಜರಂತ ॥೭॥

॥ ಪದಪಾಠಃ ॥

ಕಿಂ । ಸ್ವಿತ್ । ವನಂ । ಕಃ । ಊಂ ಇತಿ । ಸಃ । ವೃಕ್ಷಃ । ಆಸ । ಯತಃ । ದ್ಯಾವಾಪೃಥಿವೀ ಇತಿ । ನಿಃऽತತಕ್ಷುಃ ।

ಸಂತಸ್ಥಾನೇ ಇತಿ ಸಂऽತಸ್ಥಾನೇ । ಅಜರೇ ಇತಿ । ಇತಊತೀ ಇತೀತಃऽಊತೀ । ಅಹಾನಿ । ಪೂರ್ವೀಃ ।

ಉಷಸಃ । ಜರಂತ ॥ ೭ ॥

॥ ಸಾಯಣಭಾಷ್ಯಂ ॥

ಯತೋ ಯಸ್ಮಾದ್ವೃಕ್ಷಾದ್ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ನಿಷ್ಟತಕ್ಷುಃ ದೇವಾ ನಿಃಶೇಷೇಣ ಕೃತವಂತಃ ಸ ತಾದೃಶೋ ವೃಕ್ಷಃ ಕ ಉ ಆಸ । ಕೀದೃಗ್ಭೂ ಬಭೂವ । ತದುತ್ಪಾದಕಂ ವನಮರಣ್ಯಂ ಕಿಂ ಸ್ವಿತ್ । ಸಂತಸ್ಥಾನೇ ಸಮ್ಯಕ್ಸ್ಥಿತವತ್ಯಾವಜರೇ ಜರಾವರ್ಜಿತೇ ಇತಊತೀ ಇತ ಏತೇಭ್ಯೋ ದೇವೇಭ್ಯೋ ರಕ್ಷಣಂ ಯಯೋಸ್ತೇ । ಕಿಂಚಾಹಾನಿ ಸರ್ವಾಣಿ ದಿನಾನಿ ಪೂರ್ವೀರ್ಬಹ್ವೀರುಷಸಶ್ಚ ದೇವಾ ನಿಷ್ಟತಕ್ಷುಃ । ಏವಂಭೂತಾನ್ದೇವಾಞ್ಜರಂತ । ಸ್ತೋತಾರಃ ಸ್ತುವಂತಿ ॥

॥ ಪ್ರತಿಪದಾರ್ಥ ॥

**ಸಂತಸ್ಥಾನೇ**—ಸ್ಥಿರವಾಗಿರತಕ್ಕವೂ । **ಅಜರೇ**—ಜರಾರಹಿತವೂ । **ಇತಊತೀ**—ದೇವತೆಗಳಿಗೆ ರಕ್ಷಣೆಯನ್ನು ನೀಡುವುವೂ ಆದ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನೂ । **ಅಹಾನಿ**—ದಿನಗಳನ್ನೂ **ಪೂರ್ವೀಃ ಉಷಸಃ**—ಅನೇಕವಾದ ಉಷಸ್ಸುಗಳನ್ನೂ । **ಯತಃ**—ಯಾವ ವೃಕ್ಷದಿಂದ । **ನಿಷ್ಟತಕ್ಷುಃ**—ದೇವತೆಗಳು ನಿರ್ಮಿಸಿದರೋ । **ಸಃ ವೃಕ್ಷಃ**—ಆ ವೃಕ್ಷವು । **ಕ ಉ ಆಸ**—ಯಾವುದಾಗಿರುತ್ತದೆ । **ವನಂ**—ಆ ವೃಕ್ಷವಿರುವ ಅರಣ್ಯವು । **ಕಿಂ ಸ್ವಿತ್**—ಯಾವುದಾಗಿರುತ್ತದೆ । **ಜರಂತ**—(ಈ ಸೃಷ್ಟಿಕಾರ್ಯವನ್ನು) ಸ್ತುತಿಕರ್ತರು ಪ್ರಶಂಸಿಸುತ್ತಾರೆ.

॥ ಭಾವಾರ್ಥ ॥

ಸ್ಥಿರವಾಗಿರತಕ್ಕವೂ, ಜರಾರಹಿತವೂ, ದೇವತೆಗಳಿಗೆ ರಕ್ಷಣೆಯನ್ನು ನೀಡುವುದೂ ಆದ ದ್ಯಾವಾಪೃಥಿವಿಗಳನ್ನೂ, ಅಹಸ್ಸುಗಳನ್ನೂ ಅನೇಕ ಉಷಃಕಾಲಗಳನ್ನೂ ಯಾವ ವೃಕ್ಷದಿಂದ ದೇವತೆಗಳು ನಿರ್ಮಿಸಿದರೋ ಆ ವೃಕ್ಷವು ಯಾವುದು ? ಆ ವೃಕ್ಷವಿರುವ ಅರಣ್ಯವು ಯಾವುದು ?

## English Translation

What is the forest, which is the tree, out of which (the gods) have fabricated heaven and earth, ever stationary and undecaying, giving protection to the deities; through numerous days and dawns (men) praise (the gods for this),

। ಸಂಹಿತಾಪಾಠಃ ।

**ನೈತಾವದೇನಾ ಪರೋ ಅನ್ಯದಸ್ತ್ಯುಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ ।**
**ತ್ವಚಂ ಪವಿತ್ರಂ ಕೃಣುತ ಸ್ವಧಾವಾನ್ಯದೀಂ ಸೂರ್ಯಂ ನ ಹರಿತೋ ವಹಂತಿ ॥ ೮ ॥**

॥ ಪದಪಾಠಃ ॥

**ನ । ಏತಾವತ್ । ಏನಾ । ಪರಃ । ಅನ್ಯತ್ । ಅಸ್ತಿ । ಉಕ್ಷಾ । ಸಃ । ದ್ಯಾವಾಪೃಥಿವೀ ಇತಿ । ಬಿಭರ್ತಿ ।**
**ತ್ವಚಂ । ಪವಿತ್ರಂ । ಕೃಣುತ । ಸ್ವಧಾऽವಾನ್ । ಯತ್ । ಈಂ । ಸೂರ್ಯಂ । ನ । ಹರಿತಃ । ವಹಂತಿ ॥**

। ಸಾಯಣಭಾಷ್ಯಂ ।

**ದ್ಯಾವಾಪೃಥಿವ್ಯೋರ್ನಿರ್ಮಾಣರೂಪಮೇತಾವದ್ದೇವಜಾತಂ ಸಾಮರ್ಥ್ಯೇನ ಯುಕ್ತಮಿತಿ ನ । ಅಪಿ ತ್ವೇನೈತೇಭ್ಯೋ ದೇವೇಭ್ಯಃ ಪರ ಉತ್ಕೃಷ್ಟೋಽನ್ಯದನ್ಯೋ ಹಿರಣ್ಯಗರ್ಭೋಽಸ್ತಿ । ಉಕ್ಷಾ ಸೇಕ್ತಾ । ಪ್ರಜಾನಾಂ ಸ್ರಷ್ಟೇತ್ಯರ್ಥಃ । ಹಿರಣ್ಯಗರ್ಭಃ ಪರಮಸೂಕ್ಷ್ಮೋ ವಾಯುರೂಪೋ ಲಿಂಗಾತ್ಮಾಪಃ ಪ್ರವಿಶ್ಯ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಬಿಭರ್ತಿ । ಧಾರಯತಿ । ಕಿಂ ಚ । ಸ್ವಧಾವಾನ್ಬಲವಾನನ್ನವಾನ್ವಾ ಸ ಹಿರಣ್ಯಗರ್ಭಃ ಪವಿತ್ರಂ ಪವಿತ್ರಮಯಂ ತ್ವಚಮಾತ್ಮೀಯಂ ಶರೀರಂ ದೀಪ್ತಂ ಮಂತ್ರಂ ವಾ ಕೃಣುತ । ಕರೋತಿ । ಕದೇತಿ ಉಚ್ಯತೇ । ಯದ್ಯದೇಮಿಮಾಂ ತ್ವಚಂ ಹರಿತೋಽಶ್ವಾಃ ಸೂರ್ಯಂ ನ ವಹಂತಿ ನ ಪ್ರಾಪಯಂತಿ ತದೇತಿ । ಸೃಷ್ಟೇಃ ಪ್ರಾಗಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಏತಾವತ್ ನ**—ದೇವತೆಗಳ ಈ ಸೃಷ್ಟಿಕಾರ್ಯವೇ ಅಷ್ಟು ಮಹತ್ವದ್ದಲ್ಲ । **ಏನಾ**—ಇದಕ್ಕಿಂತಲೂ । **ಪರಃ**—ಉತ್ಕೃಷ್ಟವಾದ । **ಅನ್ಯತ್**—ಬೇರೊಂದು ಶಕ್ತಿಯು । **ಅಸ್ತಿ**—ಇರುತ್ತದೆ । **ಉಕ್ಷಾ**—ಸೃಷ್ಟಿಕರ್ತನಾದ । **ಸಃ**—ಹಿರಣ್ಯಗರ್ಭರೂಪನಾದ ಪರಮಾತ್ಮನು । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನು । **ಬಿಭರ್ತಿ**—ಧರಿಸಿದ್ದಾನೆ । **ಯತ್**—ಯಾವಾಗ । **ಈಂ**—ಈ ಹಿರಣ್ಯಗರ್ಭನ ಶರೀರವನ್ನು । **ಹರಿತಃ**—ಅಶ್ವಗಳು । **ಸೂರ್ಯಂ**—ಸೂರ್ಯನಲ್ಲಿಗೆ । **ನ ವಹಂತಿ**—ವಹಿಸುವುದಿಲ್ಲವೋ ಆಗ (ಅದಕ್ಕೆ ಪೂರ್ವಭಾವಿಯಾಗಿ) । **ಸ್ವಧಾವಾನ್**—ಶಕ್ತಿಯುತನಾದ ಈ ಹಿರಣ್ಯಗರ್ಭನು । **ಪವಿತ್ರಂ**—ಪರಿಶುದ್ಧವಾದ । **ತ್ವಚಂ**—ತನ್ನ ಶರೀರವನ್ನು । **ಕೃಣುತ**—ನಿರ್ಮಿಸುತ್ತಾನೆ.

। ಭಾವಾರ್ಥ ।

ಹಿಂದೆ ವಿವರಿಸಿರುವ ದೇವತೆಗಳ ಸೃಷ್ಟಿಕಾರ್ಯಕ್ಕಿಂತಲೂ ಅಧಿಕವಾದ ಮಹತ್ವವುಳ್ಳ ಇನ್ನೊಂದು ಶಕ್ತಿಯು ಇರುತ್ತದೆ. ಸೃಷ್ಟಿಕರ್ತನೂ ಹಿರಣ್ಯಗರ್ಭರೂಪನೂ ಆದ ಪರಮಾತ್ಮನು ದ್ಯಾವಾಪೃಥಿವಿಗಳನ್ನು ಧರಿಸಿದ್ದಾನೆ.

ಹಿರಣ್ಯಗರ್ಭನ ಈ ಶರೀರವನ್ನು ಅಶ್ವಗಳು ಸೂರ್ಯನಲ್ಲಿಗೆ ಒಯ್ಯುವುದಕ್ಕೆ ಪೂರ್ವಭಾವಿಯಾಗಿಯೇ, ಎಂದರೆ ಸೃಷ್ಟಿ ಕಾರ್ಯಕ್ಕೆ ಪೂರ್ವಭಾವಿಯಾಗಿಯೇ ಶಕ್ತಿಯುತನಾದ ಹಿರಣ್ಯಗರ್ಭನು ಪರಿಶುದ್ಧವಾದ ತನ್ನ ಶರೀರವನ್ನು ನಿರ್ಮಿಸುತ್ತಾನೆ.

## English Translation

Not such (is their power): there is another greater than they: the creator, he sustains heaven and earth: possessed of might. he makes a pure skin, before his horses bear it to the sun.

॥ ಸಂಹಿತಾಪಾಠಃ ॥

ಸ್ತೇಗೋ ನ ಕ್ಷಾಮತ್ಯೇತಿ ಪೃಥ್ವೀಂ ಮಿಹಂ ನ ವಾತೋ ವಿ ಹ ವಾತಿ ಭೂಮ ।
ಮಿತ್ರೋ ಯತ್ರ ವರುಣೋ ಅಜ್ಯಮಾನೋಽಗ್ನಿರ್ವನೇ ನ ವ್ಯಸೃಷ್ಟ ಶೋಕಂ ॥ ೯ ॥

॥ ಪದಪಾಠಃ ॥

ಸ್ತೇಗಃ । ನ । ಕ್ಷಾಂ । ಅತಿ । ಏತಿ । ಪೃಥ್ವೀಂ । ಮಿಹಂ । ನ । ವಾತಃ । ವಿ । ಹ । ವಾತಿ । ಭೂಮ ।
ಮಿತ್ರಃ । ಯತ್ರ । ವರುಣಃ । ಅಜ್ಯಮಾನಃ । ಅಗ್ನಿಃ । ವನೇ । ನ । ವಿ । ಅಸೃಷ್ಟ । ಶೋಕಂ ॥ ೯ ॥

॥ ಸಾಯಣಭಾಷ್ಯಂ ॥

ಸ್ತೇಗಃ ॥ ಸ್ತ್ಯೈ ಷ್ಟ್ಯೈ ಶಬ್ದಸಂಘಾತಯೋಃ । ರಶ್ಮಿಸಂಘಾತ್ಮಾದಿತ್ಯಃ ಪೃಥ್ವೀಂ ವಿಸ್ತೀರ್ಣಾಂ ಕ್ಷಾಂ ಭೂಮಿಂ ತೇಜಸಾ ನಾತ್ಯೇತಿ । ನಾತಿಗಚ್ಛತಿ । ಮರ್ಯಾದಯಾ ತಿಷ್ಠತೀತ್ಯೇವಮಾದಿತ್ಯಃ ಸ್ತೂಯತೇ । ವಾತೋ ವಾಯುರಪಿ ಖಲು ಭೂಮ ಭೂಮಿಂ ಮಿಹಂ ವೃಷ್ಟಿಂ ನ ವಿ ವಾತಿ । ಸಮರ್ಥೋಽಪಿ ಸನ್ ವಿವಿಧಂ ನ ಗಮಯತಿ । ಭೂಮಿಂ ಪ್ರತಿ ಸಾವಶೇಷಮೇವ ವರ್ಷಯತೀತಿ ವಾತಃ ಸ್ತೂಯತೇ । ಯತ್ರ ಯಸ್ಮಿನ್ಪ್ರಜಾಪತೌ ಮಿತ್ರೋ ದೇವೋಽಜ್ಯಮಾನೋ ವ್ಯಜ್ಯಮಾನೋ ವ್ಯಕ್ತೀಭವನ್ । ಉತ್ಪಾದ್ಯಮಾನ ಇತ್ಯರ್ಥಃ । ಶೋಕಂ ಸ್ವೀಯಾಂ ದೀಪ್ತಿಂ ವ್ಯಸೃಷ್ಟ ವಿಸೃಜತಿ ಸರ್ವತೋ ವಿಕ್ಷಿಪತಿ ತಥಾ ವರುಣಶ್ಚ ವ್ಯಕ್ತೀಭವನ್ಸ್ವದೀಪ್ತಿಂ ವಿಕ್ಷಿಪತಿ । ತತ್ರ ದೃಷ್ಟಾಂತಃ । ಅಗ್ನಿರ್ದೇವೋ ವನೇ ನ ಯಥಾ ವೃಕ್ಷಸಂಘಾತೇ ಸ್ವದೀಪ್ತಿಂ ಸರ್ವತೋ ವಿಸೃಜತಿ ತದ್ವತ್ । ತಾದೃಶಂ ಪ್ರಜಾಪತಿಂ ಸ್ತುಮ ಇತಿ ಶೇಷಃ ।

॥ ಪ್ರತಿಪದಾರ್ಥ ॥

**ಸ್ತೇಗಃ**—ಆದಿತ್ಯನು । **ಪೃಥ್ವೀಂ**—ವಿಸ್ತೃತವಾದ । **ಕ್ಷಾಂ**—ಭೂಮಿಯನ್ನು । **ನ ಅತ್ಯೇತಿ**—ಮೀರುವುದಿಲ್ಲ । **ವಾತಃ**—ವಾಯುವೂ । **ಭೂಮ**—ಭೂಮಿಗಭಿಮುಖವಾಗಿ । **ಮಿಹಂ**—ವೃಷ್ಟಿಯನ್ನು । **ನ ವಿ ವಾತಿ**—ಮಿತಿಮೀರಿ ಸುರಿಸುವುದಿಲ್ಲ । **ಅಗ್ನಿಃ**—ಅಗ್ನಿಯು । **ವನೇ ನ**—ವನದಲ್ಲಿ ತನ್ನ ಜ್ವಾಲೆಯನ್ನು ಪ್ರಸರಿಸುವಂತೆ ! **ಯತ್ರ**—ಯಾವ ಪ್ರಜಾಪತಿಯಲ್ಲಿ । **ಮಿತ್ರಃ**—ಮಿತ್ರದೇವನು । **ಅಜ್ಯಮಾನಃ**—ಉತ್ಪನ್ನನಾಗಿ । **ಶೋಕಂ**—ತನ್ನ ಕಾಂತಿಯನ್ನು । **ವ್ಯಸೃಷ್ಟ**—ಸುತ್ತಲೂ ಹರಡುವನೋ (ಮತ್ತು)। **ವರುಣಃ**—ವರುಣನೂ ತನ್ನ ಪ್ರಕಾಶವನ್ನು ಹರಡುವನೋ (ಆ ಪ್ರಜಾಪತಿಯನ್ನು ಸ್ತುತಿಸುತ್ತೇನೆ)

॥ ಭಾವಾರ್ಥ ॥

ಆದಿತ್ಯನು ಪೃಥ್ವಿಗೆ ತನ್ನ ಮರ್ಯಾದೆಯನ್ನು ಮೀರಿ ತೇಜಸ್ಸನ್ನು ಹರಡುವುದಿಲ್ಲ. ವಾಯುವೂ ಸಹ ಭೂಮಿಗಭಿಮುಖವಾಗಿ ಮಿತಿಮೀರಿ ವೃಷ್ಟಿಯನ್ನು ಸುರಿಸುವುದಿಲ್ಲ. ಅಗ್ನಿಯು ವನದಲ್ಲಿ ತನ್ನ ಜ್ವಾಲೆಯನ್ನು ಪ್ರಸರಿಸುವಂತೆ, ಯಾವ ಪ್ರಜಾಪತಿಯಲ್ಲಿ ಮಿತ್ರಾವರುಣರಿಬ್ಬರೂ ಉತ್ಪನ್ನರಾಗಿ ತಮ್ಮ ಕಾಂತಿಯನ್ನು ಹರಡುವರೋ ಆ ಪ್ರಜಾಪತಿಯನ್ನು ಸ್ತುತಿಸುತ್ತೇನೆ.

## English Translation

The sun does not pass beyond the broad earth, the wind does not drive the rain from off the earth : (I glorify Prajapati) in whom Mitra and Varuna being manifested, disperse their radiance, as Agni (spreads his flames) in a forest.

॥ ಸಂಹಿತಾಪಾಠಃ ॥

ಸ್ತರೀರ್ಯತ್ಸೂತ ಸದ್ಯೋ ಅಜ್ಯಮಾನಾ ವ್ಯಥಿರವ್ಯಥೀಃ ಕೃಣುತ ಸ್ವಗೋಪಾ।
ಪುತ್ರೋ ಯತ್ಪೂರ್ವಃ ಪಿತ್ರೋರ್ಜನಿಷ್ಟ ಶಮ್ಯಾಂ ಗೌರ್ಜಗಾರ ಯದ್ಧ ಪೃಚ್ಛಾನ್ ॥ ೧೦ ॥

॥ ಪದಪಾಠಃ ॥

ಸ್ತರೀಃ । ಯತ್ । ಸೂತ । ಸದ್ಯಃ । ಅಜ್ಯಮಾನಾ । ವ್ಯಥಿಃ । ಅವ್ಯಥೀಃ । ಕೃಣುತ। ಸ್ವಗೋಪಾ ।
ಪುತ್ರಃ । ಯತ್ । ಪೂರ್ವಃ । ಪಿತ್ರೋಃ । ಜನಿಷ್ಟ । ಶಮ್ಯಾಂ । ಗೌಃ । ಜಗಾರ । ಯತ್ । ಹ । ಪೃಚ್ಛಾನ್ ॥ ೧೦ ॥

when (Agni), the ancient son, is generated by his two parents, earth ejects the Shami which the priests are seeking.

|| ವಿಶೇಷವಿಷಯಗಳು ||

ಅಗ್ನಿಯನ್ನು ಕಡೆಯುವಾಗ ಎರಡು ಅರಣಿಗಳೆಂಬ ಮರದ ತುಂಡುಗಳನ್ನು ಒಂದರಮೇಲೊಂದನ್ನಿಟ್ಟು ಕಡೆಯುವರು. ಈ ಎರಡು ಅರಣಿಗಳಲ್ಲಿ ಒಂದನ್ನು ಶಮೀವೃಕ್ಷದಿಂದಲೂ ಮತ್ತೊಂದನ್ನು ಅಶ್ವತ್ಥವೃಕ್ಷದಿಂದಲೂ ನಿರ್ಮಿಸುವರು. ಈ ವಿಷಯವು

**ಶಮೀಗರ್ಭಾದಗ್ನಿಂ ಮಂಥತಿ । ಏಷಾ ವಾ ಅಗ್ನೇರ್ಯಜ್ಞಿಯಾ ತನೂಃ ।**
**ತಾಮೇವಾಸ್ಮೈ ಜನಯತಿ ।**

(ತೈ.ಬ್ರಾ. ೧-೧-೯-೧)

ಎಂದು ತೈತ್ತಿರೀಯಬ್ರಾಹ್ಮಣದಲ್ಲಿ ಹೇಳಿದೆ. ಅರಣಿರೂಪದಲ್ಲಿರುವ ಶಮೀವೃಕ್ಷದ ಮರದ ತುಂಡನ್ನು ಕಡೆದು ಅದರಿಂದ ಅಧ್ವರ್ಯ್ವಾದಿ ಋತ್ವಿಕ್ಕುಗಳು ಅಗ್ನಿಯನ್ನು ಉತ್ಪತ್ತಿಮಾಡುತ್ತಾರೆ. ಈ ವಿಧವಾಗಿ ಅರಣಿಗಳಲ್ಲಿ ಕಡೆದು ಉತ್ಪತ್ತಿಮಾಡುವ ಅಗ್ನಿಯೇ ಯಜ್ಞಯಾಗಾದಿಗಳಲ್ಲಿ ಉಪಯೋಗಿಸಲ್ಪಡಬೇಕಾಗ ಅಗ್ನಿಯ ಶರೀರವು ಎಂದರೆ ಯಜ್ಞಾರ್ಹವಾದ ಅಗ್ನಿಯು. ಈ ವಿಧಾನದಿಂದಲೇ ಮಂತ್ರಪೂರ್ವಕವಾಗಿ ಅಗ್ನಿಯನ್ನು ಉತ್ಪತ್ತಿಮಾಡಬೇಕು. ಬೇರೆ ವಿಧದಿಂದ ತಂದ ಅಗ್ನಿಯು ಯಜ್ಞಾದಿಗಳಲ್ಲಿ ಉಪಯೋಗಿಸಲ್ಪಡುವುದಿಲ್ಲ ಎಂದರೆ ಯಜ್ಞಾರ್ಹವಾಗುವುದಿಲ್ಲ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಉತ ಕಣ್ವಂ ನೃಷದಃ ಪುತ್ರಮಾಹುರುತ ಶ್ಯಾವೋ ಧನಮಾದತ್ತ ವಾಜೀ ।
ಪ್ರ ಕೃಷ್ಣಾಯ ರುಶದಪಿನ್ವತೋಧರ್ಋತಮತ್ರ ನಕಿರಸ್ಮಾ ಅಪೀಪೇತ್ ॥೧೧॥

॥ ಪದಪಾಠಃ ।

ಉತ । ಕಣ್ವಂ । ನೃಸದಃ । ಪುತ್ರಂ । ಆಹುಃ । ಉತ । ಶ್ಯಾವಃ । ಧನಂ । ಆ । ಅದತ್ತ । ವಾಜೀ ।
ಪ್ರ । ಕೃಷ್ಣಾಯ । ರುಶತ್ । ಅಪಿನ್ವತ । ಊಧಃ । ಋತಂ । ಅತ್ರ । ನಕಿಃ । ಅಸ್ಮೈ । ಅಪೀಪೇತ್ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಕಣ್ವಮೃಷಿಂ ನೃಷದಃ ಪುತ್ರಮಾಹುಃ । ವೇದವಾದಿನೋ ವದಂತಿ । ಉತಾಪಿ ಚ ವಾಜೀ ಹವಿರ್ಲಕ್ಷಣಾನ್ನವಾನ್ಕಣ್ವಃ ಶ್ಯಾವಃ ಶ್ಯಾಮವರ್ಣಃ ಸನ್ನಸ್ಮಾದಗ್ನೇಃ ಸಕಾಶಾದ್ಧನಮಾದತ್ತ ।

ಅಗೃಹ್ಣಾತ್ । ಕೃಷ್ಣಾಯ ಶ್ಯಾಮವರ್ಣಾಯ ನಾರ್ಷದಾಯ ಕಣ್ವಾಯಾಗ್ನೇರೂಧಾ ರುಶದ್ರೋಚ-ಮಾನರೂಪಂ ಪ್ರಾಪಿನ್ವತ । ಪ್ರಾಸಿಂಚತ್ । ಅತ್ರೇತ್ಥಮಗ್ನಿವ್ಯತಿರಿಕ್ತಃ ಕಶ್ಚಿದಪಿ ದೇವೋಽಸ್ಮೈ ಕಣ್ವಾಯೆರ್ತಂ ಯಜ್ಞಂ ನಕಿರಪೀಪೇತ್ । ನಾವರ್ಧಯತ್ । ಯುವಂ ಶ್ಯಾವಾಯ ರುಶತೀಮದತ್ತಂ । ಋ. ೧-೧೧೭-೮ । ಇತ್ಯುಕ್ತಂ ॥

। ಪ್ರತಿಪದಾರ್ಥ ।

ಉತ—ಮತ್ತು । ನೃಷದಃ—ನೃಷತ್ತಿನ ಪುತ್ರನಾದ । ಕಣ್ವಂ—ಕಣ್ವಋಷಿಗೆ । ಆಹುಃ—ಪ್ರಾಜ್ಞರು ಉಪದೇಶಮಾಡಿದರು । ಉತ—ಮತ್ತು । ಶ್ಯಾವಃ—ಕಂದುಬಣ್ಣವುಳ್ಳವನೂ । ವಾಜೀ—ಶಕ್ತಿಯುತನೂ ಆದ ಕಣ್ವನು । ಧನಂ—ಧನವನ್ನು । ಆದತ್ತ—ಅಗ್ನಿಯಿಂದ ಸ್ವೀಕರಿಸಿದನು । ಕೃಷ್ಣಾಯ—ಕಂದುಬಣ್ಣವುಳ್ಳ ಕಣ್ವನಿಗಾಗಿ । ಊಧಃ—ಅಗ್ನಿಯ ಕೆಚ್ಚಲು । ರುಶತ್—ಪ್ರಕಾಶಮಾನವಾದ ಕಾಂತಿಯನ್ನು । ಪ್ರಾಪಿನ್ವತ—ಚುಮುಕಿಸಿತು । ಅಸ್ಮೈ—ಈ ಕಣ್ವನ । ಋತಂ—ಯಜ್ಞವನ್ನು । ಅತ್ರ—ಈ ದೇವತೆಗಳ ನಡುವೆ । ನಕಿಃ ಅಪೀಪೇತ್—(ಅಗ್ನಿಯಂತೆ) ಯಾರೂ ಪುಷ್ಟಿಗೊಳಿಸುವುದಿಲ್ಲ.

। ಭಾವಾರ್ಥ ।

ನೃಷತ್ತಿನ ಪುತ್ರನಾದ ಕಣ್ವಋಷಿಗೆ ಪ್ರಾಜ್ಞರು ಉಪದೇಶಮಾಡಿದರು. ಕಂದುಬಣ್ಣವುಳ್ಳವನೂ, ಶಕ್ತಿಯುತನೂ ಆದ ಕಣ್ವನು ಧನವನ್ನು ಅಗ್ನಿಯಿಂದ ಸ್ವೀಕರಿಸಿದನು. ಕಂದುಬಣ್ಣವುಳ್ಳ ಕಣ್ವನಿಗಾಗಿ ಅಗ್ನಿಯ ಕೆಚ್ಚಲು ಪ್ರಕಾಶಮಾನವಾದ ಕಾಂತಿಯನ್ನು ಚುಮುಕಿಸಿತು (ಹರಡಿತು). ಈ ಕಣ್ವನ ಯಜ್ಞವನ್ನು ಈ ದೇವತೆಗಳ ನಡುವೆ ಅಗ್ನಿಯಂತೆ ಯಾರೂ ಪುಷ್ಟಿಗೊಳಿಸಲು ಸಮರ್ಥರಲ್ಲ.

English Translation

(The expounders of the Vedas) spoke to Kanwa, the son of Nrishad, and he the dark-tinted, having food, acquired wealth; (Agni) sprinkled (the milk of) the brilliant udder for the dark (-complexioned sage); no other divinity so favours the sacrifice for him.

## ಮೂವತ್ತೆರಡನೆಯ ಸೂಕ್ತವು.

। ಸಾಯಣಭಾಷ್ಯಂ ।

ಪ್ರ ಸು ಗ್ಮಂತೇತಿ ನವರ್ಚಂ ತೃತೀಯಂ ಸೂಕ್ತಂ । ಆದಿತಃ ಪಂಚ ಜಗತ್ಯಃ । ಅಥ ಚತಸ್ರ-ಸ್ತ್ರಿಷ್ಟುಭಃ । ಪೂರ್ವವದೃಷಿದೇವತೇ । ತಥಾ ಚಾನುಕ್ರಾಂತಂ । ಪ್ರ ಸು ಗ್ಮಂತಾ ನವ ಪಂಚಾದ್ಯಾ ಜಗತ್ಯ ಇತಿ ॥ ಗತೋ ವಿನಿಯೋಗಃ ॥

ಅನುವಾದವು—ಪ್ರ ಸು ಗ್ಮಂತಾ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕವಷನು ಋಷಿಯು; ವಿಶ್ವೇದೇವತೆಗಳು ದೇವತೆಯು; ಈ ಸೂಕ್ತದ ಮೊದಲಿನ ಐದು ಋಕ್ಕುಗಳು ಜಗತೀಛಂದಸ್ಕವು; ಮುಂದಿನ ನಾಲ್ಕು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಪ್ರ ಸು ಗ್ಮಂತಾ ನವ ಪಂಚಾದ್ಯಾ ಜಗತ್ಯಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೩೨

ಮಂಡಲ—೧೦ ॥ ಅನುವಾಕ—೩ ॥ ಸೂಕ್ತ—೩೨ ॥
ಅಷ್ಟಕ—೭ ॥ ಅಧ್ಯಾಯ—೭ ॥ ವರ್ಗ ೨೯, ೩೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
ಋಷಿಃ—ಕವಷ ಐಲೂಷಃ ॥
ದೇವತಾ—ವಿಶ್ವೇ ದೇವಾಃ ॥
ಛಂದಃ—೧-೫. ಜಗತೀ ॥ ೬-೯. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ಸು ಗ್ಮಂತಾ ಧಿಯಸಾನಸ್ಯ ಸಕ್ಷಣಿ ವರೇಭಿರ್ವರಾಁ ಅಭಿ ಷು ಪ್ರಸೀದತಃ।
ಅಸ್ಮಾಕಮಿಂದ್ರ ಉಭಯಂ ಜುಜೋಷತಿ ಯತ್ಸೋಮ್ಯಸ್ಯಾಂಧಸೋ
ಬುಬೋಧತಿ ॥ ೧ ॥

॥ ಪದಪಾಠಃ ॥

ಪ್ರ । ಸು । ಗ್ಮಂತಾ । ಧಿಯಸಾನಸ್ಯ । ಸಕ್ಷಣಿ । ವರೇಭಿಃ । ವರಾನ್ । ಅಭಿ । ಸು । ಪ್ರಽಸೀದತಃ ।
ಅಸ್ಮಾಕಂ । ಇಂದ್ರಃ । ಉಭಯಂ । ಜುಜೋಷತಿ । ಯತ್ । ಸೋಮ್ಯಸ್ಯ । ಅಂಧಸಃ । ಬುಬೋಧತಿ ॥

॥ ಸಾಯಣಭಾಷ್ಯಂ ॥

ಇಂದ್ರಃ ಸ್ವಭೂತೌ ಹರೀ ಧಿಯಸಾನಸ್ಯೇಂದ್ರಾಗಮನಂ ಚಿಂತಯತೋ ಯಜಮಾನಸ್ಯ ಮಮ ಸಂಬಂಧಿನಿ ಸಕ್ಷಣಿ ಸೇವಾಯಾಂ ಸದ್ಗುಣಕೇ ಸೇವ್ಯೇ ಯಜ್ಞೇ ನಿಮಿತ್ತೇ ಗ್ಮಂತಾಗಚ್ಛಂತಾ ಸು ಸುಷ್ಠು ಪ್ರೇರಯತಿ । ತತಃ ಸ ಇಂದ್ರೋ ವರೇಭಿರ್ವರಣೀಯೈರ್ಮಾರ್ಗೈಃ ಪ್ರಸೀದತೋ ಹವಿರಾಸಾದಯತೋ ಯಜಮಾನಸ್ಯ ವರಾನುತ್ಕೃಷ್ಟಾನ್ಸ್ತೋತ್ರವಿಶೇಷಾನ್ ।ಸ್ತುತಿವಿಶೇಷಾಂಶ್ಚಾಭಿ ಲಕ್ಷೀಕೃತ್ಯ ಸು ಸುಷ್ಠ್ವಾಗಚ್ಛತು । ಇಂದ್ರಃ ಆಗತಃಸನ್ನಸ್ಮಾಕಂ ಸ್ವಭೂತಮುಭಯಂ ಹವಿಶ್ಚ ಸ್ತುತಿಶ್ಚೇತ್ಯೇತದ್ದ್ವಯಂ ಜುಜೋಷತಿ।

ನೇನ ತಾಂ | ಭಕ್ಷಯತು ಶೃಣೋತು ಚೇತ್ಯರ್ಥಃ | ಯದ್ಯದಾ ಸೋಮ್ಯಸ್ಯ ಸೋಮಸಂಪಾದಿನೋ ಯಜಮಾನಸ್ಯಾಂಧಸೋಽನ್ನರೂಪಸ್ಯ ಸೋಮಸ್ಯ ರಸಮಿತಿ ಶೇಷಃ | ಬುಬೋಧತಿ ಬುಧ್ಯತೇ ವಿಶೇಷೇಣ ವಿಜಾನಾತಿ | ಸೋಮಂ ಪಿಬತೀತ್ಯರ್ಥಃ | ತದಾ ಜುಜೋಷತೀತಿ ಪೂರ್ವೇಣ ಸಂಬಂಧಃ ||

|| ಪ್ರತಿಪದಾರ್ಥ ||

**ಧಿಯಸಾನಸ್ಯ**—ಇಂದ್ರನನ್ನೇ ಧ್ಯಾನಿಸುವ ಯಜಮಾನನ | **ಸಕ್ಷಣಿ**—ಯಜ್ಞಸಿದ್ಧಿನಿಮಿತ್ತವಾಗಿ | **ಗ್ಮಂತಾ**—ಹೋಗತಕ್ಕ ಅಶ್ವಗಳನ್ನು **ಪ್ರ ಸು**—(ಇಂದ್ರನು) ಪ್ರೇರಿಸಿ ಕಳುಹಲಿ | **ವರೇಭಿಃ**—ಉತ್ತಮವಾದ ಮಾರ್ಗಗಳಿಂದ | **ಪ್ರಸೀದತಃ**—ಇಂದ್ರನನ್ನು ಪೂಜಿಸುವ ಯಜಮಾನನ **ಗಿರಃ ಅಭಿ**—ಉತ್ಕೃಷ್ಟವಾದ ಸ್ತುತಿಗಳಿಗಭಿಮುಖವಾಗಿ | **ಸು**—ಇಂದ್ರನು ಬರಲಿ | **ಯತ್**—ಯಾವಾಗ | **ಸೋಮಸ್ಯ**—ಸೋಮಸಂಪನ್ನನಾದ ನನ್ನ | **ಅಂಧಸಃ**—ಹವಿಸ್ಸನ್ನು | **ಬುಬೋಧತಿ**—ಅರಿತು ರುಚಿನೋಡುವನೋ ಆಗ | **ಇಂದ್ರಃ**—ಇಂದ್ರನು | **ಅಸ್ಮಾಕಂ**—ನಮ್ಮಿಂದ ಅರ್ಪಿತವಾದ | **ಉಭಯಂ**—ಹವಿಸ್ಸು ಮತ್ತು ಸ್ತುತಿಗಳೆರಡನ್ನೂ | **ಜುಜೋಷತಿ**—ಸೇವಿಸುತ್ತಾನೆ.

|| ಭಾವಾರ್ಥ ||

ಇಂದ್ರನನ್ನೇ ಧ್ಯಾನಿಸುವ ಯಜಮಾನನ ಯಜ್ಞಸಿದ್ಧಿನಿಮಿತ್ತವಾಗಿ ಹೋಗತಕ್ಕ ಅಶ್ವಗಳನ್ನು ಇಂದ್ರನು ಪ್ರೇರಿಸಿ ಕಳುಹಲಿ. ಉತ್ತಮವಾದ ಮಾರ್ಗಗಳಿಂದ ಇಂದ್ರನನ್ನು ಪೂಜಿಸುವ ಯಜಮಾನನ ಉತ್ಕೃಷ್ಟವಾದ ಸ್ತುತಿಗಳಿಗಭಿಮುಖವಾಗಿ ಇಂದ್ರನು ಬರಲಿ. ಯಾವಾಗ ಇಂದ್ರನು ಸೋಮಸಂಪನ್ನನಾದ ನನ್ನ ಹವಿಸ್ಸನ್ನು ಅರಿತು ರುಚಿನೋಡುವನೋ ಆಗ ಇಂದ್ರನು ನಮ್ಮಿಂದ ಅರ್ಪಿತವಾದ ಹವಿಸ್ಸು ಮತ್ತು ಸ್ತುತಿಗಳೆರಡನ್ನೂ ಸೇವಿಸುತ್ತಾನೆ.

## English Translation

Indra sends his quick-going horses to the service of the (worshipper) expectant (of his arrival): may he come to the excellent (adorations) of the (worshipper), propitiating him by suitable means; Indra is gratified by both our (oblations and praises), when he recognizes (the taste) of the food presented by the offerer of the Soma.

|| ಸಂಹಿತಾಪಾಠಃ ||

ವೀಂದ್ರ ಯಾಸಿ ದಿವ್ಯಾನಿ ರೋಚನಾ ವಿ ಪಾರ್ಥಿವಾನಿ ರಜಸಾ ಪುರುಷ್ಟುತ।
ಯೇ ತ್ವಾ ವಹಂತಿ ಮುಹುರಧ್ವರಾಁ ಉಪ ತೇ ಸು ವನ್ವಂತು ವಗ್ವನಾ
ಅರಾಧಸಃ ॥ ೨ ॥

॥ ಪದಪಾಠಃ ॥

ವಿ । ಇಂದ್ರ । ಯಾಸಿ । ದಿವ್ಯಾನಿ । ರೋಚನಾ । ವಿ । ಪಾರ್ಥಿವಾನಿ । ರಜಸಾ । ಪುರುऽಸ್ತುತ ।

ಯೇ । ತ್ವಾ । ವಹಂತಿ । ಮುಹುಃ । ಅಧ್ವರಾನ್ । ಉಪ । ತೇ । ಸು । ವನ್ವಂತು । ವಗ್ವನಾನ್ ।

ಅರಾಧಸಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ದಿವ್ಯಾನಿ ದಿವಿ ಭವಾನಿ ರೋಚನಾ ರೋಚನಾನಿ ದೀಪ್ತಿಸ್ವಭಾವಕಾನಿ ಜ್ಯೋತೀಂಷಿ ಯದ್ವಾ ದಿವ್ಯಾಲ್ಲೋಕಾನ್ವಿಯಾಸಿ । ವ್ಯಾಪ್ನೋಷಿ । ಹೇ ಪುರುಷ್ಟುತ ಬಹುಭಿಃ ಸ್ತುತೇಂದ್ರ ಪಾರ್ಥಿವಾನಿ ಪೃಥಿವ್ಯಾಂ ಭವಾನಿ ರಜಸಾತ್ಮೀಯೇನ ಜ್ಯೋತಿಷಾ ವಿದ್ಯುಲ್ಲಕ್ಷಣೇನ । ಯದ್ವಾ ॥ ರಜಃಶಬ್ದಾಚ್ಛಸ ಆಕಾರಃ ॥ ಪಾರ್ಥಿವಾಲ್ಲೋಕಾನ್ । ವ್ಯಾಪ್ನೋಷಿ । ಯೇ ತ್ವದೀಯಾ ಅಶ್ವಾ ಮುಹುಃ ಪುನಃಪುನರಧ್ವರಾನಸ್ಮದೀಯಾನ್ಯಜ್ಞಾನ್ಪ್ರತಿ ತ್ವಾ ತ್ವಾಮುಪ ವಹಂತಿ ಸಮೀಪೇ ಪ್ರಾಪಯಂತಿ ತೇಽಶ್ವಾ ವಗ್ವನಾನ್ವಚನೇನ ಸ್ತುತ್ಯಾ ಸಂಭಕ್ತ್ಯಾನರಾಧಸೋ ಧನರಹಿತಾನಸ್ಮಾನ್ ಸು ಸುಷ್ಠು ವನ್ವಂತು । ಧನಪ್ರದಾನಾರ್ಥಂ ಸಂಭಜತಾಂ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ದಿವ್ಯಾನಿ—ದ್ಯುಲೋಕಸ್ಥವಾದ । ರೋಚನಾ—ತೇಜಸ್ಸುಗಳನ್ನು । ವಿ ಯಾಸಿ—ನೀನು ವ್ಯಾಪಿಸುತ್ತೀಯೆ । ಪುರುಷ್ಟುತ—ಅನೇಕರಿಂದ ಸ್ತುತಿಸಲ್ಪಡುವ ಎಲೈ ಇಂದ್ರನೇ । ರಜಸಾ—ನಿನ್ನ ತೇಜಸ್ಸಿನಿಂದ । ಪಾರ್ಥಿವಾನಿ—ಪೃಥ್ವೀಸ್ಥವಾದ ಜ್ಯೋತಿಗಳನ್ನೂ । ವಿ—ವ್ಯಾಪಿಸುತ್ತೀಯೆ । ಯೇ—ಯಾವ ನಿನ್ನ ಅಶ್ವಗಳು । ಮುಹುಃ—ಅನೇಕ ವೇಳೆ । ಅಧ್ವರಾನ್—ನಮ್ಮ ಯಾಗಕ್ಕೆ । ತ್ವಾ—ನಿನ್ನನ್ನು । ಉಪ ವಹಂತಿ—ಕರೆತರುವುವೋ । ತೇ—ಆ ಅಶ್ವಗಳು । ವಗ್ವನಾನ್—ಸ್ತುತಿಯುಕ್ತರಾದವರೂ । ಅರಾಧಸಃ-ಧನರಹಿತರೂ ಆದ ನಮ್ಮನ್ನು । ಸು—ಅಧಿಕವಾಗಿ । ವನ್ವಂತು—ಧನಯೋಜಿತರನ್ನಾಗಿ ಮಾಡಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ದ್ಯುಲೋಕಸ್ಥವಾದ ತೇಜಸ್ಸುಗಳನ್ನು ವ್ಯಾಪಿಸುತ್ತೀಯೆ. ಅನೇಕರಿಂದ ಸ್ತುತಿಸಲ್ಪಡುವ ಎಲೈ ಇಂದ್ರನೇ, ನಿನ್ನ ತೇಜಸ್ಸಿನಿಂದ ಪೃಥ್ವೀಸ್ಥವಾದ ಜ್ಯೋತಿಗಳನ್ನು ನೀನು ವ್ಯಾಪಿಸುತ್ತೀಯೆ. ಯಾವ ನಿನ್ನ ಅಶ್ವಗಳು ಅನೇಕವೇಳೆ ನಮ್ಮ ಯಾಗಕ್ಕೆ ನಿನ್ನನ್ನು ಕರೆತರುವುವೋ ಆ ಅಶ್ವಗಳು ಸ್ತುತಿಯುಕ್ತರಾದವರೂ ಧನರಹಿತರೂ, ಆದ ನಮ್ಮನ್ನು ಅಧಿಕವಾಗಿ ಧನವಂತರನ್ನಾಗಿ ಮಾಡಲಿ.

## English Translation

Indra, you are praised by many, you pervade the luminaries of heaven and earth with your lustre; may the horses that repeatedly bring you to our sacrifices, pleased by our praise, bring affluence to us who are poor.

॥ ಸಂಹಿತಾಪಾಠಃ ॥

ತದಿನ್ಮೇ ಛಂತ್ಸದ್ವಪುಷೋ ವಪುಷ್ಟರಂ ಪುತ್ರೋ ಯಜ್ಜಾನಂ ಪಿತ್ರೋರಧೀಯತಿ ।
ಜಾಯಾ ಪತಿಂ ವಹತಿ ವಗ್ನುನಾ ಸುಮತ್ಪುಂಸ ಇದ್ಭದ್ರೋ ವಹತುಃ ಪರಿಷ್ಕೃತಃ ॥ ೩ ॥

॥ ಪದಪಾಠಃ ॥

ತತ್ । ಇತ್ । ಮೇ । ಛಂತ್ಸತ್ । ವಪುಷಃ । ವಪುಃಽತರಂ । ಪುತ್ರಃ । ಯತ್ । ಜಾನಂ । ಪಿತ್ರೋಃ । ಅಧಿಽಇಯತಿ ।
ಜಾಯಾ । ಪತಿಂ । ವಹತಿ । ವಗ್ನುನಾ । ಸುಽಮತ್ । ಪುಂಸಃ । ಇತ್ । ಭದ್ರಃ । ವಹತುಃ । ಪರಿಽಕೃತಃ ।

॥ ಸಾಯಣಭಾಷ್ಯಂ ॥

ವಪುಷಃ । ವಪೂ ರೂಪಂ । ತದ್ವಾಲ್ಲಕ್ಷ್ಯತೇ । ವಪುಷ್ಮತೋಽಪಿ ವಪುಷ್ಟರಂ ರೂಪವತ್ತರಮತ್ಯಂತಂ ಸುರೂಪಂ ತದ್ಯಜ್ಞಕರ್ಮ ಮೇ ಮಹ್ಯಂ ಛಂತ್ಸತ್ । ಇಂದ್ರಃ ಕಾಮಯತಾಂ । ಯದ್ಯದಾ ಪುತ್ರೋ ಜಾನಂ ಜನ್ಮಾತ್ಮನ ಉತ್ಪತ್ತಿಂ ಪಿತ್ರೋರ್ಮಾತಾಪಿತ್ರೋಃ ಸಕಾಶಾದಧೀಯತಿ ಸಂಕೀರ್ತನದ್ವಾರೇಣಾಧಿಗಚ್ಛತಿ । ಸುಬ್ರಹ್ಮಣ್ಯಾಹ್ವಾನಕಾಲೇಽಮುಕಶರ್ಮಣಃ ಪುತ್ರೋ ಯಜತ ಇತ್ಯಾತ್ಮನೋ ಜನ್ಮ ಸಂಕೀರ್ತಯತಿ । ಯದ್ವಾ । ಯಜ್ಜನನಾದಾಗತಂ ಧನಂ ಪಿತ್ರೋಃ ಸಕಾಶಾತ್ಪುತ್ರೋಽಧಿಗಚ್ಛತಿ ತದೇವ ಮಹ್ಯಮಿಚ್ಛತು । ಜಾಯಾ ಪತ್ನೀ ಪತಿಂ ಯಜಮಾನಂ ಸುಮತ್ಕಲ್ಯಾಣೇನ ವಗ್ನುನಾ ವಾಗ್ರೂಪೇಣ ಶಬ್ದೇನ ವಹತಿ । ಆತ್ಮಸಮೀಪಂ ಪ್ರಾಪಯತಿ । ಭದ್ರೋ ಭಜನೀಯಃ ಪರಿಷ್ಕೃತಃ ಸುಸಂಸ್ಕೃತಃ ಪುಂಸ ಇತ್ । ಪತ್ಯುರೇವೇತ್ಯರ್ಥಃ । ವಹತುರ್ಜಾಯಾಯೈ ಪ್ರದಾತವ್ಯಃ । ತದುಕ್ತಂ । ಸುಭದ್ರಮರ್ಯೋ ಭೋಜನಂ ಬಿಭರ್ಷಿ । ಋ. ೮-೧-೩೪ । ಇತಿ । ಯದ್ವಾ । ಪುಂಸೋಽತಿಶೂರಸ್ಯೇಂದ್ರಸ್ಯಾರ್ಥಾಯ ಭದ್ರೋ ಭಜನೀಯೋ ವಹತುರ್ವಹನಶೀಲೋ ದೇವಾನ್ಪ್ರತಿ ಸ ಸೋಮಃ ಪರಿಷ್ಕೃತಃ ಸಂಸ್ಕೃತೋ ಭವತಿ । ತದೇಂದ್ರಃ ಕಾಮಯತಾಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಯತ್—ಯಾವಾಗ । ಪುತ್ರಃ—ಪುತ್ರನು । ಜಾನಂ—ತನ್ನ ಜನ್ಮವನ್ನು । ಪಿತ್ರೋಃ—ಮಾತಾಪಿತಗಳಿಂದ । ಅಧೀಯತಿ—ಹೊಂದಿ ತನ್ನ ಜನ್ಮವನ್ನು ಪ್ರಕಟಿಸುವನೋ ಆಗ । ವಪುಷಃ—ಅತ್ಯಂತ ಸುಂದರವಾದುದ

ಕ್ಕಿಂತಲೂ | ವಪುಷ್ಟರಂ—ಅಧಿಕವಾಗಿ ಸುಂದರವಾದ | ತತ್—ಯಜ್ಞಕರ್ಮವನ್ನು | ಮೇ—ನನಗಾಗಿ | ಛಂತ್ಸತ್—ಇಂದ್ರನು ಅಪೇಕ್ಷಿಸಲಿ | ಜಾಯಾ—ಪತ್ನಿಯು | ಪತಿಂ—ಯಜಮಾನನನ್ನು | ಸುಮತ್—ಆಕರ್ಷಕವಾದ | ವಗ್ನುನಾ—ಮಾತುಗಳಿಂದ | ವಹತಿ—ತನ್ನಲ್ಲಿಗೆ ಬರಮಾಡಿಕೊಳ್ಳುತ್ತಾಳೆ | ಪುಂಸಃ—ಪತಿಯ | ಭದ್ರಃ—ಕಲ್ಯಾಣಾತ್ಮಕವಾದ | ಪರಿಷ್ಕೃತಃ—ಸುಸಂಸ್ಕೃತಿಯು | ವಹತುಃ—ಪತ್ನ್ಯರ್ಥವಾಗಿಯೇ

- ಭಾವಾರ್ಥ -

ಯಾವಾಗ ಮಾತಾಪಿತೃಗಳಿಂದ ಪುತ್ರನು ತನ್ನ ಜನ್ಮವನ್ನು ಹೊಂದಿ ಅದನ್ನು ಪ್ರಕಾಶಪಡಿಸುವನೋ ಆ ಅತ್ಯಂತ ಸುಂದರವಾದುದಕ್ಕಿಂತಲೂ ಅಧಿಕವಾಗಿ ಸುಂದರವಾದ ಯಜ್ಞಕರ್ಮವನ್ನು ನನಗಾಗಿ ಇಂದ್ರನು ಅಪೇಕ್ಷಿಸಲಿ. ಪತ್ನಿಯು ಯಜಮಾನನನ್ನು ಆಕರ್ಷಕವಾದ ಮಾತುಗಳಿಂದ ತನ್ನಲ್ಲಿಗೆ ಬರಮಾಡಿಕೊಳ್ಳುತ್ತಾಳೆ. ಪತಿಯ ಕಲ್ಯಾಣಾತ್ಮಕವಾದ ಸುಸಂಸ್ಕೃತಿಯು ಪತ್ನ್ಯರ್ಥವಾಗಿಯೇ ಇರುತ್ತದೆ

## English Translation

May (Indra) desire for me this (act of sacrifice), the most beautiful of beautiful things, (as) when a son proclaims his birth from his parents. The wife brings her husband (to her side) with gentle words: the good fortune of the husband is perfected only as marriage

॥ ಸಂಹಿತಾಪಾಠಃ ॥

ತದಿನ್ನ್ವಸ್ಯ ಸಧಸ್ಥಮಭಿ ಚಾರು ದೀಧಯ ಗಾವೋ ಯಚ್ಛಾಸನ್ವಹತುಂ ನ ಧೇನವಃ ।
ಮಾತಾ ಯನ್ಮಂತುರ್ಯೂಥಸ್ಯ ಪೂರ್ವ್ಯಾಭಿ ವಾಣಸ್ಯ ಸಪ್ತಧಾತುರಿಜ್ಜನಃ ॥ ೪ ॥

॥ ಪದಪಾಠ ॥

| ಇತ್ | ಸಧಽಸ್ಥಂ | ಅಭಿ | ಚಾರು | ದೀಧಯ | ಗಾವಃ | ಯತ್ | ಶಾಸನ್ | ವಹತುಂ | ನ | ಧೇನವಃ |
ಮಾತಾ | ಯತ್ | ಮಂತುಃ | ಯೂಥಸ್ಯ | ಪೂರ್ವ್ಯಾ | ಅಭಿ | ವಾಣಸ್ಯ | ಸಪ್ತಽಧಾತುಃ | ಇತ್ | ಜನಃ ॥ ೪ ॥

॥ ಸಾಯಣಭಾಷ್ಯಂ ॥

ತದಿತ್ತದೇವ ಸಧಸ್ಥಂ। ಸಹ ತಿಷ್ಠಂತ್ಯತ್ರೇತಿ ಸಧಸ್ಥಂ ಸ್ಥಾನಂ ಯಜ್ಞಾಖ್ಯಂ। ಚಾರು ಶೋಭನಮಭಿ ದೀಧಯ। ಹೇ ಇಂದ್ರ ಅಭಿತೋ ದೀಪ್ಯಸ್ವ। ಯದ್ಯದಾ ಗಾವಃ ಸ್ತುತಿಲಕ್ಷಣಾ ವಾಚ ಇಂದ್ರ ಆಗಚ್ಛ ಹರಿವ ಆಗಚ್ಛೇತ್ಯೇವಮಾದ್ಯಾಃ ಶಾಸನ್ ಅಸ್ಮದ್ಯಜ್ಞಂ ಪ್ರತಿ ತ್ವದಾಗಮನ. ಮಾಶಾಸತೇ। ತತ್ರ ದೃಷ್ಟಾಂತಃ। ವಹತುಂ ನ ಧೇನವಃ ಯಥಾ ಧೇನವೋ ನವಪ್ರಸೂತಾ ಗಾವಃ ಪ್ರಾಪಣಸಾಧನಂ ಗೃಹಮಾಶಾಸತೇ ತದ್ವತ್। ಯತ ಆಗತ್ಯ ಪ್ರಕಾಶಸ್ವ ತತೋಽತ್ರ ಕಾರಣಮಾಹ ಯದ್ಯಸ್ಮಾನ್ಮಂತುಃ। ಮನ್ಯತಿರರ್ಚತಿಕರ್ಮಾ। ಅರ್ಚಕಸ್ಯ ಮಮ ಸ್ವಭೂತಾ ಮಾತಾ ದೇವತಾ. ಗುಣಾನಾಂ ನಿಷ್ಪಾದಯಿತ್ರೀ ಸ್ತುತಿರ್ಯೂಥಸ್ಯ ಯಷ್ಟೃಸ್ತೋತೃಗಣಸ್ಯ ಪೂರ್ವ್ಯಾ ಪ್ರಥಮಭಾವಿನೀ ಖಲು। ಯಸ್ಮಾಚ್ಚ ಸಪ್ತಧಾತುಃ। ಧಾರ್ಯಂತೇ ಕ್ರಿಯಂತೇ ಕರ್ಮಾಣ್ಯೇಷ್ವಿತಿ ಧಾತವಶ್ಛಂದಾಂಸ್ಯೃತವೋ ವಾ। ಸಪ್ತಚ್ಛಂದಸ್ಕಃ ಸಪ್ತರ್ತುಕಃ ಸಪ್ತಹೋತ್ರಾತ್ಮಕೋ ವಾಯಂ ಜನೋ ವಾಣಸ್ಯ ಸ್ತುತಿಶಬ್ದಸ್ಯಾಭಿ-ಖಲು। ತಸ್ಮಾಚ್ಛೀಘ್ರಮಾಗಚ್ಛೇತಿ ಭಾವಃ। ಯದ್ವಾ। ಯತ್ಕಲ್ಯಾಣಂ ತದೇವ ಸ್ಥಾನಮಸ್ಮಾಕಮಭಿ-ಕರ್ತಾ ಧಾರಯ। ಪ್ರಯಚ್ಛ। ಯಸ್ಮಿನ್ಸ್ಥಾನೇ ಧೇನವಃ ಪಯಃಪ್ರದಾನೇನ ಪ್ರೀಣಯಿತ್ರ್ಯೋ ಗಾವೋ ವಹತುಂ। ಉಹ್ಯತೇ ಪುರುಷೋಽನೇನೇತಿ ವಹತುರನ್ನಂ। ಪಯೋಽಭ್ಯಕ್ತಾದ್ಯನುಶಾಸತಿ। ನ ಸಂಪ್ರತ್ಯರ್ಥೇ। ಇದಾನೀಂ ಪ್ರಯಚ್ಛಂತಿ। ತಥಾ ಯಸ್ಮಿನ್ಮಂತುರ್ಮಂತವ್ಯಾ ಪೂಜನೀಯಾ ಪುತ್ರ-ಸಮೂಹಸ್ಯ ಮಾತಾಭಿಗಚ್ಛತಿ ವಾಣಸ್ಯ ವಾದ್ಯಸ್ಯ ಸಪ್ತಧಾತುರ್ನಿಷಾದಾದಿಸಪ್ತಸ್ವರೋಪೇತೋ ಜನೋಽಭಿಗಚ್ಛತಿ ತದ್ವತ್ತದ್ಗುಣೋಪೇತಂ ಪ್ರಯಚ್ಛೇತಿ ಭಾವಃ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಯತ್**–ಯಾವ ಕಾರಣದಿಂದ। **ಮಂತುಃ**–ದೇವಪೂಜಕನಾದ ಯಜಮಾನನ **ಮಾತಾ**–ಸ್ತುತಿಯು। **ಯೂಥಸ್ಯ**—ಇತರ ಸ್ತುತಿಕರ್ತರ ಸ್ತುತಿಗಿಂತಲೂ। **ಪೂರ್ವ್ಯಾ**—ಪ್ರಥಮಭಾವಿನಿಯಾಗಿರುವುದೋ। (**ಯತ್**—ಯಾವ ಕಾರಣದಿಂದ)। **ಸಪ್ತಧಾತುಃ**—ಸಪ್ತಚ್ಛಂದಸ್ಸುಗಳಿಂದ ಕೂಡಿದ। **ಜನಃ**—ಯಜಮಾನನು। **ವಾಣಸ್ಯ ಅಭಿ**—ಸ್ತುತಿನಿರ್ಮಾಪಕನಾಗಿರುವನೋ ಆದುದರಿಂದಲೇ। **ಧೇನವಃ**—ಧೇನುಗಳು। **ವಹತುಂ ನ**—ತಮ್ಮ ಕೊಟ್ಟಿಗೆಗಳನ್ನು ಸೇರಲಿಚ್ಛಿಸುವಂತೆ। **ಯತ್**—ಎಲ್ಲಿ (ಯಾವಾಗ)। **ಗಾವಃ**—ಸ್ತುತಿರೂಪವಾದ ವಾಕ್ಕುಗಳು। **ಶಾಸನ್**—ನಿನ್ನ ಆಗಮನವನ್ನು ನಿರೀಕ್ಷಿಸುವುವೋ। **ತದಿತ್**—ಆ ಒಡನೆಯೇ। **ಸಧಸ್ಥಂ ಅಭಿ**—ನಮ್ಮ ಯಜ್ಞಸ್ಥಾನಾಭಿಮುಖವಾಗಿ। **ಚಾರು**—ಆಕರ್ಷಕವಾಗಿ। **ದೀಧಯ**—ಪ್ರಕಾಶಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಕಾರಣದಿಂದ ದೇವಪೂಜಕನಾದ ಯಜಮಾನನ ಸ್ತುತಿಯು ಇತರ ಪೂಜಕರ ಸ್ತುತಿಗಿಂತಲೂ ಪ್ರಥಮಭಾವಿನಿಯಾಗಿರುವುದೋ, ಯಾವ ಕಾರಣಗಳಿಂದ ಸಪ್ತಚ್ಛಂದಸ್ಸುಗಳಿಂದ ಕೂಡಿದ ಯಜಮಾನನು ಸ್ತುತಿನಿರ್ಮಾಪಕನಾಗಿರುವನೋ ಆದುದರಿಂದಲೇ, ಧೇನುಗಳು ತಮ್ಮ ಕೊಟ್ಟಿಗೆಗಳನ್ನು ಸೇರಲಿಚ್ಛಿಸುವಂತೆ, ಯಾವಾಗ ಸ್ತುತಿರೂಪವಾದ ವಾಕ್ಕುಗಳು ನಿನ್ನ ಆಗಮನವನ್ನು ನಿರೀಕ್ಷಿಸುವುವೋ ಆ ಒಡನೆಯೇ, ನಮ್ಮ ಯಜ್ಞಸ್ಥಾನದಲ್ಲಿ ಆಕರ್ಷಕವಾಗಿ ಪ್ರಕಾಶಿಸು.

## English Translation

Shine, Indra, upon this elegant chamber of sacrifice when our praises desire (your approach) as milch cows (desire) their stalls; since the praise of (me) the worshipper precedes (the adoration) of the company, and this person accompanied by the seven officiating priests is (the offerer) of praise.

|| ವಿಶೇಷವಿಷಯಗಳು ||

ಸಪ್ತಧಾತುಃ—ಈ ಶಬ್ದಕ್ಕೆ ಸಪ್ತಚ್ಛಂದಸ್ಸುಗಳು, ಅಧಿಕಮಾಸವೂ ಸೇರಿ ಆಗುವ ಏಳು ಋತುಗಳು ಅಥವಾ ಸಪ್ತಹೋತೃಗಳು ಅಥವಾ ಋತ್ವಿಕ್ಕುಗಳು ಎಂದು ಮೂರುವಿಧವಾದ ಅರ್ಥವನ್ನು ಭಾಷ್ಯಕಾರರು ಹೇಳಿದಾರೆ.

। ಸಂಹಿತಾಪಾಠಃ ।

ಪ್ರ ವೋಽಚ್ಛಾ ರಿರಿಚೇ ದೇವಯುಷ್ಪದಮೇಕೋ ರುದ್ರೇಭಿರ್ಯಾತಿ ತುರ್ವಣಿಃ ।

ಜರಾ ವಾ ಯೇಷ್ವಮೃತೇಷು ದಾವನೇ ಪರಿ ವ ಊಮೇಭ್ಯಃ ಸಿಂಚತಾ ಮಧು ॥ ೫ ॥

॥ ಪದಪಾಠಃ ॥

ಪ್ರ । ವಃ । ಅಚ್ಛ । ರಿರಿಚೇ । ದೇವಽಯುಃ । ಪದಂ । ಏಕಃ । ರುದ್ರೇಭಿಃ । ಯಾತಿ । ತುರ್ವಣಿಃ ।

ಜರಾ । ವಾ । ಯೇಷು । ಅಮೃತೇಷು । ದಾವನೇ । ಪರಿ । ವಃ । ಊಮೇಭ್ಯಃ । ಸಿಂಚತ । ಮಧು ॥

॥ ಸಾಯಣಭಾಷ್ಯಂ ॥

ಹೇ ಯಜಮಾನಾಃ ದೇವಯುರ್ದೇವಾನ್ಕಾಮಯಮಾನೋ ಹೋತಾ ವೋ ಯುಷ್ಮಾಕಂ ಪದಮಚ್ಛ ಸ್ಥಾನಂ ಪ್ರತಿ ಪ್ರ ರಿರಿಚೇ । ಪ್ರರಿಕ್ತೋಽಭೂತ್ । ಅಥ ಹೋತೃಭ್ಯಃ ಸಕಾಶಾದೇಕೋ ಮುಖ್ಯ ಇಂದ್ರೋ ರುದ್ರೇಭೀ ರುದ್ರಪುತ್ರೈರ್ಮರುದ್ಭಿಃ ಸಹ ತುರ್ವಣಿಃ ಕ್ಷಿಪ್ರಗಾಮೀ ಸನ್ಯಾತಿ । ಗಚ್ಛತಿ ಯುಷ್ಮದೀಯಂ ಯಜ್ಞಂ । ಜರಾ ವಾ । ವಾಶಬ್ದೋಽಪ್ಯರ್ಥೇ । ಸ್ತುತಿರಪಿ ಯೇಷ್ವಮೃತೇಷು ಮರಣಧರ್ಮರಹಿತೇಷು ದೇವೇಷು ದಾವನೇ ಧನಪ್ರದಾನಾಯ ಸಮರ್ಥಾ ಭವತಿ । ತಸ್ಮಾದ್ವೋ ಯೂಯಂ ॥ ಛಾಂದಸೋ ವಸಾದೇಶಃ ॥ ಊಮೇಭ್ಯೋ ರಕ್ಷಿತೃಭ್ಯೋ ದೇವೇಭ್ಯೋ ಮಧು ಮದಕರಂ। ಸೋಮಮದ್ಭಿಃ ಪರಿ ಷಿಂಚತ ॥

॥ ಪ್ರತಿಪದಾರ್ಥ ॥

(ಎಲೈ ಯಜಮಾನರೇ) ದೇವಯುಃ—ದೇವಪ್ರೀತಿಯನ್ನಿಚ್ಛಿಸುವ ಹೋತೃವು ವಃ—ನಿಮ್ಮ ಪದಂ ಅಚ್ಛ—ಯಜ್ಞಸ್ಥಾನಾಭಿಮುಖವಾಗಿ ಪ್ರ ರಿರಿಚೇ—ಅತಿಶಯವಾಗಿ ಬರುತ್ತಾನೆ । ಏಕಃ—ಹೋತೃಗಳಲ್ಲಿ ಶ್ರೇಷ್ಠನಾದ ಇಂದ್ರನು । ರುದ್ರೇಭಿಃ—ಮರುತ್ತುಗಳೊಡಗೂಡಿ । ತುರ್ವಣಿಃ—ಕ್ಷಿಪ್ರಗಾಮಿಯಾಗಿ । ಯಾತಿ—ಬರುತ್ತಾನೆ । ಜರಾ ವಾ—ಸ್ತುತಿಯೂ ಸಹ ಯೇಷು ಅಮೃತೇಷು—ಮರಣಧರ್ಮರಹಿತರಾದ ಯಾವ ದೇವತೆಗಳನ್ನು ಸೇರುವುದರಿಂದ । ದಾವನೇ—ಧನದಾನಕ್ಕೆ ಸಮರ್ಥವಾಗುವುದೋ । ಊಮೇಭ್ಯಃ—ರಕ್ಷಕರಾದ ಅದೇ ದೇವತೆಗಳಿಗೋಸ್ಕರ । ಮಧು—ರುಚಿಕರವಾದ ಸೋಮವನ್ನು । ಪರಿ ಸಿಂಚತ—ಉದಕಗಳಿಂದ ಸೇಚಿಸಿರಿ.

॥ ಭಾವಾರ್ಥ ॥

ಎಲೈ ಯಜಮಾನರೇ, ದೇವಪ್ರೀತಿಯನ್ನಿಚ್ಛಿಸುವ ಹೋತೃವು ನಿಮ್ಮ ಯಜ್ಞಸ್ಥಾನಾಭಿಮುಖವಾಗಿ ಅತಿಶಯವಾಗಿ ಬರುತ್ತಾನೆ. ಹೋತೃಗಳಲ್ಲಿ ಶ್ರೇಷ್ಠನಾದ ಇಂದ್ರನು ಮರುತ್ತುಗಳೊಡಗೂಡಿ ಕ್ಷಿಪ್ರಗಾಮಿಯಾಗಿ ಬರುತ್ತಾನೆ. ಸ್ತುತಿಯೂ ಸಹ ಮರಣಧರ್ಮರಹಿತರಾದ ಯಾವ ದೇವತೆಗಳನ್ನು ಸೇರುವುದರಿಂದ ಧನದಾನಕ್ಕೆ ಸಮರ್ಥವಾಗುವುದೋ, ರಕ್ಷಕರಾದ ಅದೇ ದೇವತೆಗಳಿಗೋಸ್ಕರವಾಗಿ ರುಚಿಕರವಾದ ಸೋಮವನ್ನು ಉದಕಗಳಿಂದ ಸೇಚಿಸಿರಿ.

English Translation

The devout (priest) excels (going) towards your place of worship: the quick-moving (Indra), the chief (of the priests), proceeds with the Rudras, (the Maruts); sprinkle the exhilarating (Soma with water) for the protecting (deities), the immortals amongst whom praise is (able) to procure wealth.

॥ ಸಂಹಿತಾಪಾಠಃ ॥

ನಿಧೀಯಮಾನಮಪಗೂಳ್ಹಮಪ್ಸು ಪ್ರ ಮೇ ದೇವಾನಾಂ ವ್ರತಪಾ ಉವಾಚ ।
ಇಂದ್ರೋ ವಿದ್ವಾಁ ಅನು ಹಿ ತ್ವಾ ಚಚಕ್ಷ ತೇನಾಹಮಗ್ನೇ ಅನುಶಿಷ್ಟ
ಆಗಾಂ ॥ ೬ ॥

॥ ಪದಪಾಠಃ ॥

ನಿಽಧೀಯಮಾನಂ । ಅಪಽಗೂಳ್ಹಂ । ಅಪ್ಽಸು । ಪ್ರ । ಮೇ । ದೇವಾನಾಂ । ವ್ರತಽಪಾಃ । ಉವಾಚ ।
ಇಂದ್ರಃ । ವಿದ್ವಾನ್ । ಅನು । ತ್ವಾ । ಚಚಕ್ಷ । ತೇನ । ಅಹಂ । ಅಗ್ನೇ । ಅನುಽಶಿಷ್ಟಃ । ಆ । ಅಗಾಂ ।

॥ ಸಾಯಣಭಾಷ್ಯಂ ॥

ಕುರುಶ್ರವಣಸ್ಯ ಯಜ್ಞೇ ನಿಧೀಯಮಾನೋಽಗ್ನಿರಭಿಧೀಯತೇ । ನಿಧೀಯಮಾನಮಧ್ವರ್ಯುರ್ಣ-
ವನೀಯೇಽಗ್ನಾವಪ್ಸು ಮಾತ್ಯಭೂತಾಸ್ವಪಗೂಳ್ಹಮಂತರ್ಹಿತಂ ದೇವಾನಾಂ ವ್ರತಪಾಃ ಕರ್ಮಣೋ
ಇಂದ್ರೋ ಮೇ ಮಹ್ಯಂ ಪ್ರೋವಾಚ । ಪ್ರಾವಾದೀತ್ । ಹೇ ಅಗ್ನೇ ವಿದ್ವಾನ್ ಜ್ಞಾನ ಇಂದ್ರಃ
ಕಾರಮಸ್ಮದ್ಭಕ್ತಿತಾಂ ವಾ ತ್ವಾ ತ್ವಾಮನು ಹಿ ಚಚಕ್ಷ । ಅನುಗತಃ ಪಶ್ಚಾದ್ದದರ್ಶ । ತೇನೇಂದ್ರೇ-
ಶಿಷ್ಟೋಽಹಮನೇನ ಪಥಾ ತ್ವಯಾ ಸ್ವರ್ಗೋ ಗಂತವ್ಯ ಇತ್ಯೇವಮುಪದಿಷ್ಟಃ ಸನ್ನಾಗಾಂ
ಮುಖ್ಯೇನ ಸ್ವರ್ಗಂ ಗಚ್ಛೇಯಂ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) ನಿಧೀಯಮಾನಂ—ಆಹವನೀಯಾಗ್ನಿಯಲ್ಲಿ ನಿಕ್ಷಿಪ್ತನೂ । ಅಪ್ಸು—ಉದಕಗಳಲ್ಲಿ
ಗೂಳ್ಹಂ—ಅಡಗಿಕೊಂಡಿರುವವನೂ ಆದ ನಿನ್ನ ವಿಷಯವನ್ನು । ದೇವಾನಾಂ—ದೇವತೆಗಳ । ವ್ರತಪಾ —
ಗಳಿಗೆ ಪಾಲಕನಾದ ಇಂದ್ರನು । ಮೇ—ನನಗೆ । ಪ್ರ ಉವಾಚ—ಹೇಳಿದನು । ಅಗ್ನೇ—ಎಲೈ ಅಗ್ನಿಯೇ ।
ನ್—ಎಲ್ಲವನ್ನು ತಿಳಿದ । ಇಂದ್ರಃ—ಇಂದ್ರನು । ತ್ವಾ—ನಿನ್ನನ್ನು । ಅನು ಚಚಕ್ಷ—ಒಡನೆಯೇ
ಕ್ಷವಾಗಿ ನೋಡಿದ್ದಾನೆ । ತೇನ—ಆ ಇಂದ್ರನಿಂದ । ಅನುಶಿಷ್ಟಃ—ಉಪದೇಶಿಸಲ್ಪಟ್ಟವನಾಗಿ । ಅಹಂ—
। ಆಗಾಂ—ಸ್ವರ್ಗಾಭಿಮುಖವಾಗಿ ಹೋಗುವಂತೆ ಆಗಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಆಹವನೀಯಾಗ್ನಿಯಲ್ಲಿ ನಿಕ್ಷಿಪ್ತನೂ ಉದಕಗಳಲ್ಲಿ ಅಡಗಿಕೊಂಡಿರುವವನೂ ಆದ ನಿನ್ನ
ಯವನ್ನು ದೇವತೆಗಳ ಕರ್ಮಗಳಿಗೆ ಪಾಲಕನಾದ ಇಂದ್ರನು ನನಗೆ ಹೇಳಿದನು ಎಲೈ ಅಗ್ನಿಯೇ, ಎಲ್ಲವನ್ನು
ಇಂದ್ರನು ನಿನ್ನನ್ನು ಒಡನೆಯೇ ಪ್ರತ್ಯಕ್ಷವಾಗಿ ನೋಡಿದ್ದಾನೆ. ಆ ಇಂದ್ರನಿಂದ ಉಪದೇಶಿಸಲ್ಪಟ್ಟವನಾಗಿ
ಸ್ವರ್ಗಾಭಿಮುಖವಾಗಿ ಹೋಗುವಂತೆ ಆಗಲಿ.

## English Translation

The guardian of the sacred rites of the gods, Indra, said to me,
ni), who had been deposited in the waters; the sagacious Indra,
owing you, Agni, has discovered you, therefore admonished by him
I, Agni, proceed to heaven.

॥ ಸಂಹಿತಾಪಾಠಃ ॥

ಅಕ್ಷೇತ್ರವಿತ್ ಕ್ಷೇತ್ರವಿದಂ ಹ್ಯಪ್ರಾಟ್ ಸ ಪ್ರೈತಿ ಕ್ಷೇತ್ರವಿದಾನುಶಿಷ್ಟಃ ।
ಏತದ್ವೈ ಭದ್ರಮನುಶಾಸನಸ್ಯೋತ ಸ್ರುತಿಂ ವಿಂದತ್ಯಂಜಸೀನಾಂ ॥ ೭ ॥

॥ ಪದಪಾಠಃ ॥

ಅಕ್ಷೇತ್ರಽವಿತ್ । ಕ್ಷೇತ್ರಽವಿದಂ । ಹಿ । ಅಪ್ರಾಟ್ । ಸಃ । ಪ್ರ । ಏತಿ । ಕ್ಷೇತ್ರಽವಿದಾ । ಅನುಽಶಿಷ್ಟಃ ।
ಏತತ್ । ವೈ । ಭದ್ರಂ । ಅನುಽಶಾಸನಸ್ಯ । ಉತ । ಸ್ರುತಿಂ । ವಿಂದತಿ । ಅಂಜಸೀನಾಂ ॥ ೭ ॥

॥ ಸಾಯಣಭಾಷ್ಯಂ ॥

ಸೇಯಮನುಶಾಸನಸ್ತುತಿಃ ಪ್ರಾಸಂಗಿಕೀ । ಅಕ್ಷೇತ್ರವಿತ್ ॥ ಕ್ಷಿ ನಿವಾಸಗತ್ಯೋಃ ॥ ಕ್ಷೀಯತೇ ಗಮ್ಯತೇನೇನೇತಿ ಕ್ಷೇತ್ರಂ ಪಂಥಾಃ । ಪಂಥಾನಮಜಾನನ್ ಪುರುಷಃ ಕ್ಷೇತ್ರವಿದಂ ಕ್ಷೇತ್ರಜ್ಞಂ ಪುರುಷಮಪ್ರಾಟ್ । ಪೃಷ್ಟವಾನ್ । ಸ ಕ್ಷೇತ್ರವಿದಾ ಪಥಿಜ್ಞೇನ ತೇನಾನುಶಿಷ್ಟಃ ಪ್ರದರ್ಶಿತಮಾರ್ಗಃ ಸನ್ ಪ್ರೈತಿ । ಸ್ವಾಭಿಲಷಿತಂ ದೇಶಂ ಗಚ್ಛತಿ । ಅನುಶಾಸನಸ್ಯ ಮಾರ್ಗೋಪದೇಶರೂಪಸ್ಯೈತದ್ವೈ ಏತತ್ಖಲು ಭದ್ರಂ ಭಜನೀಯಂ ಕಲ್ಯಾಣಕರಂ । ಕಿಂ ತತ್ । ಉತಾಪಿ ಚಾಂಜಸೀನಾಮೃಜುನಾ ಮಾರ್ಗೇಣ ಗಂತವ್ಯಾನಾಮಪಾಂ ಸ್ರುತಿಂ ಮಾರ್ಗಂ ಪಿಪಾಸಿತಃ ಸನ್ ವಿಂದತಿ । ಲಭತೇ । ಯದ್ವಾ । ಅಂಜಸೀನಾಮಿತಿ ಸ್ರುತೇರ್ವಿಶೇಷಣಂ । ಋಜುಮಕುಟಿಲಮಪ್ರಯಾಸೇನ ಗಂತವ್ಯಂ ಮಾರ್ಗಂ ಲಭತೇ ಖಲು ॥

॥ ಪ್ರತಿಪದಾರ್ಥ ॥

ಅಕ್ಷೇತ್ರವಿತ್—ಉತ್ತಮವಾದ ಮಾರ್ಗವನ್ನು ತಿಳಿಯದಿರುವವನು । ಕ್ಷೇತ್ರವಿದಂ—ಮಾರ್ಗವನ್ನು ತಿಳಿದ ಪುರುಷನನ್ನು । ಅಪ್ರಾಟ್—ಪ್ರಶ್ನಿಸಿ ಕೇಳುತ್ತಾನೆ । ಸಃ—ಅವನು । ಕ್ಷೇತ್ರವಿದಾ—ಮಾರ್ಗವನ್ನು ಅರಿತವನಿಂದ । ಅನುಶಿಷ್ಟಃ—ಉಪದೇಶಿಸಲ್ಪಟ್ಟು । ಪ್ರೈತಿ—ತಾನು ಇಷ್ಟಪಟ್ಟ ಪ್ರದೇಶಕ್ಕೆ ಹೋಗುತ್ತಾನೆ । ಏತದ್ವೈ—ಈ ಗುರಿಯನ್ನು ಮುಟ್ಟುವುದೇ । ಅನುಶಾಸನಸ್ಯ—ಈ ಮಾರ್ಗೋಪದೇಶಕ್ಕೆ । ಭದ್ರಂ—ಕಲ್ಯಾಣಾತ್ಮಕವಾದ ಸಿದ್ಧಿಯಾಗಿರುತ್ತದೆ । ಉತ—ಮತ್ತು । ಅಂಜಸೀನಾಂ—ನೇರವಾಗಿ ಹರಿಯುವ ಉದಕಗಳ । ಸ್ರುತಿಂ—ಮಾರ್ಗವನ್ನು । ವಿಂದತೇ—(ಬಳಲಿದವನು) ಪಡೆಯುತ್ತಾನೆ.

॥ ಭಾವಾರ್ಥ ॥

ಉತ್ತಮವಾದ ಮಾರ್ಗವನ್ನು ತಿಳಿದ ಪುರುಷನನ್ನು ತಿಳಿಯದಿರುವವನು ಪ್ರಶ್ನಿಸಿ ಕೇಳುತ್ತಾನೆ. ಮಾರ್ಗೋಪದೇಶವಾದನಂತರ ತಾನು ಇಷ್ಟಪಟ್ಟ ಪ್ರದೇಶಕ್ಕೆ ಹೋಗುತ್ತಾನೆ. ಈ ಗುರಿಯನ್ನು ಮುಟ್ಟುವುದೇ ಮಾರ್ಗೋಪದೇಶದ ಕಲ್ಯಾಣಾತ್ಮಕವಾದ ಸಿದ್ಧಿಯಾಗಿರುತ್ತದೆ. ನೇರವಾಗಿ ಹರಿಯುವ ಉದಕಗಳ ಮಾರ್ಗವನ್ನು ಬಳಲಿದವನು ಈ ಉಪದೇಶದಿಂದ ಪಡೆಯುತ್ತಾನೆ.

## English Translation

One who knows not the road inquires it of one who knows it; and directed by him who knows the way proceeds (to his destination): such verily is the good of instruction, and (thereby) one finds the path of the things that are to be reached by a straight path.

। ಸಂಹಿತಾಪಾಠಃ ॥

ಅದ್ಯೇದು ಪ್ರಾಣೀದಮಮನ್ನಿಮಾಹಾಪೀವೃತೋ ಅಧಯನ್ಮಾತುರೂಧಃ ।
ಏಮೇನಮಾಪ ಜರಿಮಾ ಯುವಾನಮಹೇಳನ್ವಸುಃ ಸುಮನಾ ಬಭೂವ ॥

॥ ಪದಪಾಠಃ ।

ಇತ್ । ಊಂ ಇತಿ । ಪ್ರ । ಆನೀತ್ । ಅಮಮನ್ । ಇಮಾ । ಅಹಾ । ಅಪಿಽವೃತಃ ।
ಅಧಯತ್ । ಮಾತುಃ । ಊಧಃ ।
ಈಂ । ಏನಂ । ಆಪ । ಜರಿಮಾ । ಯುವಾನಂ । ಅಹೇಳನ್ । ವಸುಃ । ಸುಽಮನಾಃ । ಬಭೂವ ॥

। ಸಾಯಣಭಾಷ್ಯಂ ।

ಅಯಮಗ್ನಿರದ್ಯೇದದ್ಯೈವಾಸ್ಮಿನ್ದಿನೇ ಪ್ರಾಣೀತ್ । ಮಥನೇನ ಚೇಷ್ಟಿತೋಽಭವತ್ । ಶ್ವಸ ಣನೇ ಅನ ಚೇತಿ ಧಾತುಃ ॥ ತದಾನೀಮೇವೇಮೇಮಾನ್ಯಹಾಹಾನಿ ಸೌಮಿಕಾನ್ಯಮಮನ್ । ಟಮಮನ್ಯತ ॥ ಮನ ಜ್ಞಾನೇ । ವ್ಯತ್ಯಯೇನ ಶ್ಲುಃ । ತಿಙ್ಙುತ್ತರತ್ವಾದನಿಘಾತಃ ॥ ಅಪಿ ಚಾಪೀ- ಸ್ತೇಜೋಭಿಃ ಪರಿವೃತಃ ಸನ್ ಮಾತುಃ ಪೃಥಿವ್ಯಾ ಊಧಃ ಸಾರಭೂತಂ ಸೋಮಾದಿಕಂ ಹವಿರಧ- ತ್ । ಪಿಬತಿ ! ತಥಾ ಯುವಾನಾಂ ನಿತ್ಯತರುಣಂ ದೇವಾನಾಂ ಹವಿಷಾ ಮಿಶ್ರಯಿತಾರಂ ವೈನಮಗ್ನಿಂ ಮಾ ॥ ಜರತಿಃ ಸ್ತುತಿಕರ್ಮಾ । ತಸ್ಮಾದೌಣಾದಿಕ ಇಮನಿಚ್ ॥ ಸ್ತೋತೃಭಿಃ ಕ್ರಿಯಮಾಣಾ ಸ್ತುತಿ- ದ । ಆಭಿಮುಖ್ಯೇನ ವ್ಯಾಪ್ನೋತಿ । ಈಮಿತಿ ಪೂರಣಃ । ತತೋಽಹೇಳನ್ನಕ್ರುಧ್ಯನ್ ಸ್ತೋತೄನ್ಪ್ರತಿ ನಿವಾಸಯಿತಾ ಸರ್ವೇಷಾಂ ಧನದಾನೇನಾಚ್ಛಾದಯಿತಾ ತೇಜೋಭಿಃ ಶತ್ರೂಣಾಂ ವಾ ವಸುಮಾ- ಗ್ನಿಃ ಸುಮನಾಃ ಶೋಭನಮನಸ್ಕೋ ಬಭೂವ ॥

। ಪ್ರತಿಪದಾರ್ಥ ।

**ಅದ್ಯೇತ್**—ಇದೇ ದಿನ । **ಪ್ರಾಣೀತ್**—ಮಥಿಸಲ್ಪಟ್ಟ ಅಗ್ನಿಯು ಚೈತನ್ಯಯುಕ್ತನಾದನು । ಮಾ **ಅಹಾ**—ಈ ಸೋಮಯಾಗದ ದಿನಗಳನ್ನು । **ಅಮಮನ್**—ನೆರವೇರಿಸಬೇಕೆಂದು ತಿಳಿದನು । ಪೀವೃತಃ—ತೇಜಸ್ಸುಗಳಿಂದ ಕೂಡಿದವನಾಗಿ । **ಮಾತುಃ**—ಪೃಥ್ವಿಗೆ ಸೇರಿದ । **ಊಧಃ**—ಸಾರಭೂತವಾದ ಸ್ಸನ್ನು । **ಅಧಯತ್**—ಪಾನಮಾಡುತ್ತಾನೆ । **ಯುವಾನಂ**—ನಿತ್ಯತರುಣನಾದ । **ಈಂ ಏನಂ**—ಈ ಅಗ್ನಿ ನ್ನು । **ಜರಿಮಾ**—ಸ್ತುತಿಯು । **ಆಪ**—ವ್ಯಾಪಿಸುತ್ತದೆ । **ವಸುಃ**—ವಸತಿದಾಯಕನಾದ ಅಗ್ನಿಯು । ಹೇಳನ್—ಕ್ರೋಧರಹಿತನಾಗಿ । **ಸುಮನಾಃ**—ಅನುಗ್ರಹಬುದ್ಧಿಯುಳ್ಳವನಾಗಿ । **ಬಭೂವ**—ಆಗಿದ್ದಾನೆ.

। ಭಾವಾರ್ಥ ॥

ಇದೇ ದಿನ ಮಥಿಸಲ್ಪಟ್ಟ ಅಗ್ನಿಯು ಚೈತನ್ಯಯುಕ್ತನಾದನು. ಈ ಸೋಮಯಾಗದ ದಿನಗಳನ್ನು ವೇರಿಸಬೇಕೆಂದು ತಿಳಿದನು. ತೇಜಸ್ಸುಗಳಿಂದ ಕೂಡಿದವನಾಗಿ ಪೃಥ್ವಿಗೆ ಸೇರಿದ ಸಾರಭೂತವಾದ ಹವಿಸ್ಸನ್ನು

ಪಾನಮಾಡುತ್ತಾನೆ. ನಿತ್ಯತರುಣನಾದ ಅಗ್ನಿಯನ್ನು ಸ್ತುತಿಯು ವ್ಯಾಪಿಸುತ್ತದೆ. ವಸತಿದಾಯಕನಾದ ಅಗ್ನಿಯು ಕ್ರೋಧರಹಿತನಾಗಿ ಅನುಗ್ರಹಬುದ್ಧಿಯುಳ್ಳವನಾಗಿ ಆಗಿದ್ದಾನೆ.

English Translation

To-day (Agni) breathed: he purposed (to conduct) these days surrounded (by lustre), and drank the sap of his mother (earth): the praise of his (worshippers) reaches the ever-youthful (Agni), and he has become gentle, generous, and well-disposed.

। ಸಂಹಿತಾಪಾಠಃ ।

ಏತಾನಿ ಭದ್ರಾ ಕಲಶ ಕ್ರಿಯಾಮ ಕುರುಶ್ರವಣ ದದತೋ ಮಘಾನಿ ।
ದಾನ ಇದ್ವೋ ಮಘವಾನಃ ಸೋ ಅಸ್ತ್ವಯಂ ಚ ಸೋಮೋ ಹೃದಿ ಯಂ
ಬಿಭರ್ಮಿ ॥ ೯ ॥

। ಪದಪಾಠಃ ।

ಏತಾನಿ । ಭದ್ರಾ । ಕಲಶ । ಕ್ರಿಯಾಮ । ಕುರುऽಶ್ರವಣ । ದದತಃ । ಮಘಾನಿ ।
ದಾನಃ । ಇತ್ । ವಃ । ಮಘಂऽವಾನಃ । ಸಃ । ಅಸ್ತು । ಅಯಂ । ಚ । ಸೋಮಃ । ಹೃದಿ । ಯಂ ।
ಬಿಭರ್ಮಿ ॥ ೯ ॥

॥ ಸಾಯಣಭಾಷ್ಯಂ ॥

ಹೇ ಕಲಶ ಸರ್ವಕಲಾಪರಿಪೂರ್ಣ । ಯದ್ವಾ । ಲುಪ್ತಮತ್ವರ್ಥೀಯಃ । ದ್ರೋಣಕಲಶವನ್ । ಹೇ ಕುರುಶ್ರವಣ । ಕುರವ ಋತ್ವಿಜಃ । ತೇಷಾಂ ಸ್ವಭೂತಾನಾಂ ಸ್ತುತೀನಾಂ ಶ್ರೋತರ್ಹೇ ಇಂದ್ರ ಮಘಾನಿ ಧನಾನಿ ಸ್ತೋತೃಭ್ಯೋ ಯುಷ್ಮಭ್ಯಶ್ಚ ದದತಃ ಪ್ರಯಚ್ಛತಸ್ತವೇಂದ್ರಸ್ಯಾರ್ಥಮೇತಾನಿ ಭದ್ರಾ ಭಜನೀಯಾನಿ ಹವೀಂಷಿ ಸ್ತೋತ್ರಾಣಿ ಚ ಕ್ರಿಯಾಮ । ವಿಧೇಯಾಸ್ಮ ॥ ಕರೋತೇರಾಶೀರ್ಲಿಙಿ ರಿಙ್ ಶಯಗ್ಲಿಂಕ್ಷು । ಪಾ ೭-೪-೨೮ । ಇತಿ ರಿಙಾದೇಶಃ ॥ ಅಥ ಸ್ತೋತೄನ್ಪ್ರತ್ಯಾಹ । ಹೇ ಮಘವಾನೋ ಮಹನೀಯಸ್ತೋತ್ರರೂಪಧನವಂತಃ ವೋ ಯುಷ್ಮಾಕಂ ಸ ಇಂದ್ರೋ ದಾನ ಇದ್ಧನಾದೇರ್ದಾತೈವಾಸ್ತು । ಭವತು । ಅಯಂ ಚ ಯಜ್ಞೇ ಸ್ಥಿತಃ ಸೋಮೋ ದಾತಾಸ್ತು ಹೃದಯ ಆತ್ಮೀಯೇ ಯಂ ಪೀತಂ ಸೋಮಂ ಬಿಭರ್ಮಿ ಧಾರಯಾಮಿ॥ ಡುಭೃಞ್ ಧಾರಣಪೋಷಣಯೋಃ। ಜುಹೋತ್ಯಾದಿಕಃ। ಭೃಞಾಮಿತ್ಯಭ್ಯಾಸಸ್ಯೇತ್ವಂ । ಯದ್ವೋಗಾದನಿಘಾತಃ ॥ ಯದ್ವಾ । ಹೇ ಕಲಶಕುಲಜಾತ ಹೇ ಕುರುಶ್ರವಣೈತನ್ನಾಮಕ ತ್ರಸದಸ್ಯೋಃ ಪುತ್ರ ರಾಜನ್ ಋತ್ವಿಗ್ಭ್ಯೋ ಧನಾನಿ ಪ್ರಯಚ್ಛತಸ್ತವಾರ್ಥಂ ವಯಂ ಕರ್ಮಾಣಿ ಕ್ರಿಯಾಮ । ಮಘವಾನಃ ಕುರುಶ್ರವಣಾಃ । ಪೂಜಾಯಾಂ ಬಹುವಚನಪದಂ । ಯಾಗಕರ್ಮ ಕುರ್ವಾಣಸ್ಯ ತವೇಂದ್ರೋ ದಾತಾ ಭವತು । ಅಯಂ ಸೋಮಶ್ಚ ಧನಾನಿ ಪ್ರಯಚ್ಛತು ॥

॥ ಪ್ರತಿಪದಾರ್ಥ ॥

**ಕಲಶ**—ದ್ರೋಣಕಲಶವನ್ನು ಹೊಂದಿರುವವನೂ । **ಕುರುಶ್ರವಣ**—ಋತ್ವಿಕ್ಕುಗಳ ಸ್ತೋತ್ರಗಳನ್ನು ುವವನೂ ಆದ ಎಲೈ ಇಂದ್ರನೇ । **ಮಘಾನಿ**—ದ್ರವ್ಯಗಳನ್ನು । **ದದತಃ**—ಕೊಡತಕ್ಕ ನಿನಗಾಗಿ । **ಏತಾನಿ** ್ರ—ಮಂಗಳಕರಗಳಾದ ಈ ಹವಿಸ್ಸುಗಳನ್ನು । **ಕ್ರಿಯಾಮ**—ಅರ್ಪಿಸುತ್ತೇವೆ । **ಮಘವಾನಃ**—ಪೂಜ್ಯವಾದ ಿಗಳುಳ್ಳ ಎಲೈ ಸ್ತುತಿಕರ್ತರೇ । **ವಃ**—ನಿಮಗೆ । **ಸಃ**—ಇಂದ್ರನು । **ದಾನ ಇತ್**—ದಾನದಾತನಾಗಿಯೇ । ್ತು—ಆಗಿರಲಿ । **ಯಂ**—ಯಾವ ಸೋಮವನ್ನು । **ಹೃದಿ**—ಹೃದಯದಲ್ಲಿ । **ಬಿಭರ್ಮಿ**—ನಾನು ಧರಿಸುವೆನೋ ದರೆ ಪಾನಮಾಡುವೆನೋ) ಅಂತಹ । **ಅಯಂ ಸೋಮಃ**—ಈ ಸೋಮವು ಸಹ ಧನವನ್ನು ಕೊಡಲಿ.

॥ ಭಾವಾರ್ಥ ॥

ದ್ರೋಣಕಲಶವನ್ನು ಹೊಂದಿರುವವನೂ, ಋತ್ವಿಕ್ಕುಗಳ ಸ್ತೋತ್ರಗಳನ್ನು ಕೇಳುವವನೂ ಆದ ಎಲೈ ್ರನೇ, ದ್ರವ್ಯಗಳನ್ನು ಕೊಡತಕ್ಕ ನಿನಗಾಗಿ ಮಂಗಳಕರಗಳಾದ ಈ ಹವಿಸ್ಸುಗಳನ್ನು ಅರ್ಪಿಸುತ್ತೇವೆ. ಪೂಜ್ಯ ್ ಸ್ತುತಿಗಳುಳ್ಳ ಎಲೈ ಸ್ತುತಿಕರ್ತರೇ, ನಿಮಗೆ ಇಂದ್ರನೂ, ನಾವು ಧ್ಯಾನಿಸತಕ್ಕ ಈ ಸೋಮವೂ ಸಹ ಧನವನ್ನು ೂತವಾಗಿ ಕೊಡಲಿ.

English Translation

(Indra), the possessor of the pitchers, the bearer of the praises of the ırus, let us celebrate these auspicious adorations of you, the giver of hes: may he, (Indra), be the donor (of affluence) to you who are opulent, pious offering), and (so may) this Soma which I cherish in my heart.

---

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ-ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಋಕ್ಸಂಹಿತಾಭಾಷ್ಯೇ ಸಪ್ತಮಾಷ್ಟಕೇ ಸಪ್ತಮೋಽಧ್ಯಾಯಃ ಸಮಾಪ್ತಃ ॥**

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯಲ್ಲಿ ಏಳನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು ಸಮಾಪ್ತವು.

॥ ಓಂ ತತ್ಸತ್ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥



॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥
ಸಪ್ತಮೇ ಸಪ್ತಮಂ ತ್ವದ್ಯ ವ್ಯಾಖ್ಯಾಯ ಶ್ರುತಿಕೋವಿದಃ ।
ಸಾಯಣಾರ್ಯಸ್ತತೋಽಧ್ಯಾಯಮಷ್ಟಮಂ ವ್ಯಾಚಿಕೀರ್ಷತಿ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ಅಥ ಸಪ್ತಮಾಷ್ಟಕೇಽಷ್ಟಮೋಽಧ್ಯಾಯಃ

### ಏಳನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು.

## ಹತ್ತನೆಯ ಮಂಡಲದಲ್ಲಿ ಮೂವತ್ತಮೂರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಅಥಾಷ್ಟಮೋಽಧ್ಯಾಯ ಆರಭ್ಯತೇ । ತತ್ರ ಪ್ರ ಮೇತಿ ನವರ್ಚಂ ಚತುರ್ಥಂ ಸೂಕ್ತಂ । ಐಲೂಷಸ್ಯ ಕವಷಸ್ಯಾರ್ಷಂ । ಆದ್ಯಾ ತ್ರಿಷ್ಟುಪ್ ಸಾ ಚ ವೈಶ್ವದೇವೀ । ದ್ವಿತೀಯಾತೃತೀಯೇ ಬೃಹತೀಸತೋಬೃಹತ್ಯಾವೈಂದ್ರ್ಯೌ । ಪರಾಃ ಷಡ್ಗಾಯತ್ರ್ಯಃ । ಕುರುಶ್ರವಣಮಾವೃಣೀತಿ ದ್ವಾಭ್ಯಾಂ ತ್ರಸದಸ್ಯುಪುತ್ರಸ್ಯ ಕುರುಶ್ರವಣನಾಮ್ನೋ ರಾಜ್ಞೋ ದಾನಂ ತುಷ್ಟಾವ । ಅತಸ್ತದ್ದೇವತಾಕೇ । ಅಥ ಯಸ್ಯ ಪ್ರಸ್ವಾದಸ ಇತ್ಯಾದಿಭಿಸ್ತಿಸೃಭಿರ್ಮಿತ್ರಾತಿಥಿನಾಮ್ನಿ ರಾಜ್ಞಿ ಪರಲೋಕಂ ಗತೇ ಶೋಕಾಭಿಭೂತಂ ತಸ್ಯ ಪುತ್ರಮುಪಶ್ರವೋನಾಮಾನಂ ಕವಷ ಋಷಿಃ ಸ್ನೇಹವಶಾದಭಿಗತ್ಯ ವಿಗತಶೋಕಮಕರೋತ್ । ಅತಸ್ತಾಸಾಂ

**ತದ್ದೇವತಾತ್ವಂ । ತಥಾ ಚಾನುಕ್ರಾಂತಂ । ಪ್ರ ಮಾದ್ಯಾ ವೈಶ್ವದೇವ್ಯೈಂದ್ರ್ಯಃ ಪ್ರಗಾಥಃ ಪರಾ ಗಾಯತ್ರ್ಯೋ ದ್ವೇ ಕುರುಶ್ರವಣಸ್ಯ ತ್ರಾಸದಸ್ಯವಸ್ಯ ದಾನಸ್ತುತಿಃ ಪರಾಭಿರ್ಮೃತೇ ಮಿತ್ರಾತಿಥೌ ರಾಜ್ಞಿ ತತ್ಸ್ನೇಹಾದೃಷಿರುಪಮಶ್ರವಸಂ ಪುತ್ರಮಸ್ಯ ವ್ಯಶೋಕಯದಿತಿ ॥ ಗತೋ ವಿನಿಯೋಗಃ ॥**

ಅನುವಾದವು—ಈಗ ಏಳನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯದ ವ್ಯಾಖ್ಯಾನವು ಆರಂಭಿಸಲ್ಪಡುವುದು. ಈ ಅಧ್ಯಾಯದ ಮೊದಲನೆಯ ಸೂಕ್ತವಾದ **ಪ್ರ ಮಾ ಯುಯುಜ್ರೇ** ಎಂಬ ಈ ಸೂಕ್ತವು ಹತ್ತನೆಯ ಮಂಡಲದ ಮೂರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಇಲೂಷಪುತ್ರನಾದ ಕವಷನೆಂಬುವನು ಋಷಿಯು. ಈ ಸೂಕ್ತದ ಮೊದಲನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಮತ್ತು ವಿಶ್ವೇದೇವತಾಕವು. ಎರಡು ಮತ್ತು ಮೂರನೆಯ ಋಕ್ಕುಗಳು ಬೃಹತೀ ಮತ್ತು ಸತೋಬೃಹತೀಛಂದಸ್ಕವು ಮತ್ತು ಇವುಗಳಿಗೆ ಇಂದ್ರನು ದೇವತೆಯು ; ಅಲ್ಲಿಂದ ಮುಂದಿನ ಆರು ಋಕ್ಕುಗಳು ಗಾಯತ್ರೀಛಂದಸ್ಕವು. **ಕುರುಶ್ರವಣಮಾವೃಣಿ** ಎಂದು ಮೊದಲಾಗುವ ಎರಡು ಋಕ್ಕುಗಳಿಂದ (೪–೫ ಋಕ್ಕುಗಳು) ಋಷಿಯು ತ್ರಸದಸ್ಯುಪುತ್ರನಾದ ಕುರುಶ್ರವಣನೆಂಬ ರಾಜನ ದಾನವನ್ನು ಪ್ರಶಂಸೆಮಾಡಿರುವನು. ಆದ್ದರಿಂದ ಆ ಋಕ್ಕುಗಳಿಗೆ ದಾನಸ್ತುತಿಯೇ ದೇವತೆಯು; **ಯಸ್ಯ ಪ್ರಸ್ವಾದಸಃ** ಎಂದು ಮೊದಲಾಗುವ ನಾಲ್ಕು ಋಕ್ಕುಗಳಿಂದ (೬–೯ ಋಕ್ಕುಗಳು) ಋಷಿಯು, ಮಿತ್ರಾತಿಥಿ ಎಂಬ ರಾಜನು ಮೃತನಾದಾಗ ಅವನ ಪುತ್ರನಾದ ಉಪಶ್ರವನೆಂಬುವವನನ್ನು ತನಗೆ ಅವನಲ್ಲಿರುವ ಸ್ನೇಹಭಾವದಿಂದ ಸಮಾಧಾನಮಾಡಿ ಶೋಕಪರಿಹಾರಮಾಡಿರುವ ವಿಷಯವನ್ನು ಪ್ರಸ್ತಾಪಿಸಿರುವನು. ಆದ್ದರಿಂದ ಆ ಋಕ್ಕುಗಳಿಗೆ ಉಪಶ್ರವನ ಶೋಕಪರಿಹಾರವೇ ದೇವತೆಯು. ಅನುಕ್ರಮಣಿಕೆಯಲ್ಲಿ—**ಪ್ರ ಮಾದ್ಯಾ ವೈಶ್ವದೇವ್ಯೈಂದ್ರ್ಯಃ ಪ್ರಗಾಥಃ ಪರಾ ಗಾಯತ್ರ್ಯೋ ದ್ವೇ ಕುರುಶ್ರವಣಸ್ಯ ತ್ರಾಸದಸ್ಯವಸ್ಯ ದಾನಸ್ತುತಿಃ ಪರಾಭಿರ್ಮೃತೇ ಮಿತ್ರಾತಿಥೌ ರಾಜ್ಞಿ ತತ್ಸ್ನೇಹಾದೃಷಿರುಪಮಶ್ರವಸಂ ಪುತ್ರಮಸ್ಯ ವ್ಯಶೋಕಯತ್** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೩೩

ಮಂಡಲ—೧೦ । ಅನುವಾಕ—೩ । ಸೂಕ್ತ—೩೩ ॥
ಅಷ್ಟಕ—೭ ಅಧ್ಯಾಯ—೮ । ವರ್ಗ—೧, ೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
ಋಷಿಃ—ಕವಷ ಐಲೂಷಃ ।
ದೇವತಾ—೧. ವಿಶ್ವೇದೇವಾಃ । ೨-೩. ಇಂದ್ರಃ । ೪-೫. ಕುರುಶ್ರವಣಸ್ಯ ತ್ರಾಸದಸ್ಯವಸ್ಯ ದಾನಸ್ತುತಿಃ । ೬-೯. ಉಪಮಶ್ರವಾ ಮಿತ್ರಾತಿಥಿಪುತ್ರಃ ॥
ಛಂದಃ—೧. ತ್ರಿಷ್ಟುಪ್ । ೨. ಬೃಹತೀ । ೩. ಸತೋಬೃಹತೀ । ೪-೯. ಗಾಯತ್ರೀ ॥

॥ ಸಂಹಿತಾಪಾಠಃ ॥

ಪ್ರ ಮಾ ಯುಯುಜ್ರೇ ಪ್ರಯುಜೋ ಜನಾನಾಂ ವಹಾಮಿ ಸ್ಮ ಪೂಷಣಮಂತರೇಣ ।

ವಿಶ್ವೇ ದೇವಾಸೋ ಅಧ ಮಾಮರಕ್ಷನ್ದುಃಶಾಸುರಾಗಾದಿತಿ ಘೋಷ
ಆಸೀತ್ ॥ ೧ ॥

॥ ಪದಪಾಠಃ ॥

ಪ್ರ । ಮಾ । ಯುಯುಜ್ರೇ । ಪ್ರಽಯುಜಃ । ಜನಾನಾಂ । ವಹಾಮಿ । ಸ್ಮ । ಪೂಷಣಂ । ಅಂತರೇಣ ।

ವಿಶ್ವೇ । ದೇವಾಸಃ । ಅಧ । ಮಾಂ । ಅರಕ್ಷನ್ । ದುಃಶಾಸುಃ । ಆ । ಅಗಾತ್ । ಇತಿ । ಘೋಷಃ ।
ಆಸೀತ್ ॥ ೧ ॥

॥ ಸಾಯಣಭಾಷ್ಯಂ ॥

ಜನಾನಾಂ ಯಜಮಾನಾನಾಂ ಪ್ರಯುಜಃ ಪ್ರಯೋಕ್ತಾರೋ ದೇವಾ ಮಾ ಮಾಂ ಕವಷಮೃಷಿಂ ಪ್ರ ಯುಯುಜ್ರೇ । ಕುರುಶ್ರವಣಂ ಪ್ರತಿ ಯುಕ್ತವಂತಃ । ಅಂತರೇಣ ಮಾರ್ಗೇ ಪೂಷಣಂ ದೇವಮಧ್ವನಾಂ ಪತಿಂ ಸಖಾಯಮಹಂ ವಹಾಮಿ ಸ್ಮ । ಊಢವಾನಸ್ಮಿ । ತಥಾ ಶ್ರೂಯತೇ । ಐಂದ್ರಾಗ್ನಮೇಕಾದಶಕಪಾಲಂ ನಿರ್ವಪೇಜ್ಜನತಾಮೇಷ್ಯನ್ನಿತ್ಯುಪಕ್ರಮ್ಯ ಪೌಷ್ಣಂ ಚರುಮನು ನಿರ್ವಪೇತ್ । ತೈ. ಸ. ೨.೨.೧.೪ । ಇತಿ । ಅಧಾಥ ಮಾರ್ಗೇ ವಿಶ್ವೇ ದೇವಾ ಮಾಂ ಕವಷಮರಕ್ಷನ್ । ರಕ್ಷಿತವಂತಃ । ದುಃಶಾಸುಃ ಕೇನಾಪಿ ದುಃಶಾಸನೋಽಯಮೃಷಿರಾಗಾತ್ ಆಗಚ್ಛತೀತಿ ಘೋಷಃ ಶಬ್ದಶ್ಚ ಮಾರ್ಗ ಆಸೀತ್ । ಅಭೂತ್ ॥

। ಪ್ರತಿಪದಾರ್ಥ ।

**ಜನಾನಾಂ**—ಯಜಮಾನರಿಗೆ । **ಪ್ರಯುಜಃ**—ಪ್ರೇರಕರಾದ ದೇವತೆಗಳು । **ಮಾ**—ನನ್ನನ್ನು । **ಪ್ರ ಯುಯುಜ್ರೇ**—ಕುರುಶ್ರವಣನಲ್ಲಿಗೆ ಕಾರ್ಯಾರ್ಥವಾಗಿ ನಿಯೋಜಿಸಿದರು । **ಅಂತರೇಣ**—ಮಧ್ಯಮಾರ್ಗದಲ್ಲಿ । **ಪೂಷಣಂ**—ಪೂಷದೇವನನ್ನು । **ವಹಾಮಿ ಸ್ಮ**—ಸಹಾಯಕ್ಕಾಗಿ ವಹಿಸಿದ್ದೇನೆ । **ಅಧ**—ಮಾರ್ಗಪ್ರಯಾಣ ಕಾಲದಲ್ಲಿ । **ವಿಶ್ವೇ ದೇವಾಸಃ**—ಸಕಲ ದೇವತೆಗಳೂ । **ಮಾಂ**—ನನ್ನನ್ನು । **ಅರಕ್ಷನ್**—ರಕ್ಷಿಸಿದರು । **ದುಃಶಾಸುಃ**—ಅಪ್ರತಿಹತನಾದ ಕವಷಋಷಿಯು । **ಆಗಾತ್**—ಬರುತ್ತಿದ್ದಾನೆ । **ಇತಿ**—ಎಂಬುದಾಗಿ । **ಘೋಷಃ**—ಪ್ರಕಟನಶಬ್ದವು । **ಆಸೀತ್**—ಕೇಳಿಬರುತ್ತಿದ್ದಿತು.

॥ ಭಾವಾರ್ಥ ॥

ಯಜ್ಞಕರ್ತರಿಗೆ ಪ್ರೇರಕರಾದ ದೇವತೆಗಳು ನನ್ನನ್ನು ಕುರುಶ್ರವಣನಲ್ಲಿಗೆ ಕಾರ್ಯಾರ್ಥವಾಗಿ ನಿಯೋಗಿಸಿದರು. ಮಧ್ಯಮಾರ್ಗದಲ್ಲಿ ನಾನು ಮಾರ್ಗದರ್ಶಕನಾದ ಪೂಷದೇವನನ್ನು ಸಹಾಯಕ್ಕಾಗಿ ಆಶ್ರಯಿಸಿದ್ದೇನೆ. ಪ್ರಯಾಣ ಕಾಲದಲ್ಲಿ ಸಕಲದೇವತೆಗಳೂ ನನ್ನನ್ನು ರಕ್ಷಿಸಿದರು. "ಅಪ್ರತಿಹತನಾದ ಕವಷಋಷಿಯು ಬರುತ್ತಿದ್ದಾನೆ" ಎಂಬ ಘೋಷವು ಕೇಳಿಬರುತ್ತಿತ್ತು.

## English Translation

The (divinities, the) appointers of men, have appointed me to Kurushravána : I have borne Pushan on the way : the universal gods are my protectors : the cry is " Duhshasu comes."

ಸಂಹಿತಾಪಾಠಃ ॥

ಸಂ ಮಾ ತಪಂತ್ಯಭಿತಃ ಸಪತ್ನೀರಿವ ಪರ್ಶವಃ ।

ನಿ ಬಾಧತೇ ಅಮತಿರ್ನಗ್ನತಾ ಜಸುರ್ವೇರ್ನ ವೇವೀಯತೇ ಮತಿಃ ॥೨॥

॥ ಪದಪಾಠಃ ॥

ಸಂ । ಮಾ । ತಪಂತಿ । ಅಭಿತಃ । ಸಪತ್ನೀಃಽಇವ । ಪರ್ಶವಃ ।

ನಿ । ಬಾಧತೇ । ಅಮತಿಃ । ನಗ್ನತಾ । ಜಸುಃ । ವೇಃ । ನ । ವೇವೀಯತೇ । ಮತಿಃ ॥ ೨ ॥

। ಸಾಯಣಭಾಷ್ಯಂ ।

ಮಾ ಮಾಂ ದೇವತಾಪ್ರಸಾದರಹಿತಂ ಕವಷಂ ಪರ್ಶವಃ ಪಾರ್ಶ್ವಾಸ್ಥೀನ್ಯನ್ನಾಭಾವಾದ್ದೌರ್ಬಲ್ಯಾ-ತ್ಕೃಶಯನಾಚ್ಚ ಸಪತ್ನೀರಿವ ಯಥಾ ಸಪತ್ನ್ಯಸ್ತದ್ವದಭಿತ ಉಭಯತಃ ಸಂ ತಪಂತಿ । ದುಃಖಯಂತೀ-ತ್ಯರ್ಥಃ । ಕಿಂಚಾಮತಿರ್ದಾರಿದ್ರ್ಯಾದಾಗತಾ ದುರ್ಮತಿಃ ಸರ್ವಾರ್ಥವಿಷಯಾ ಸಾ ಮಾಂ ನಿ ಬಾಧತೇ । ಮಾಂ ಪೀಡಯತಿ । ವಸ್ತ್ರಾಭಾವಾದಾಗತಾ ನಗ್ನತಾ ಚ ಮಾಂ ನಿ ಬಾಧತೇ । ಜಸುರಶನಾಭಾವಾದಾಗತ ಉಪಕ್ಷಯೋಽಪಿ ಮಾಂ ನಿ ಬಾಧತೇ । ಕಿಂಚ ವೇರ್ನ ಯಥಾ ಪಕ್ಷಿಣೋ ಮತಿಃ ಶಾಕುನಿಕವ್ಯಾಧಭಯಾ-ತ್ಕಂಪಯತೇ ತಥಾ ಮೇ ಮತಿಃ ಶತ್ರೋರ್ವೇವೀಯತೇ । ಭೃಶಂ ಕಂಪಯತೇ ॥

। ಪ್ರತಿಪದಾರ್ಥ ॥

**ಮಾ**—ನನ್ನನ್ನು । **ಪರ್ಶವಃ**—ಎರಡುಕಡೆಯ ಎಲುಬುಗಳೂ । **ಸಪತ್ನೀರಿವ**—ಸವತಿಯರಂತೆ । **ಅಭಿತಃ**—ಎರಡು ಕಡೆಗಳಲ್ಲಿಯೂ । **ಸಂ ತಪಂತಿ**—ಹಿಂಸೆಗೊಳಿಸುತ್ತವೆ । **ಅಮತಿಃ**—ದಾರಿದ್ರ್ಯದ ಫಲವಾದ ದುರ್ಮತಿಯು । **ನಿ ಬಾಧತೇ**—ಹಿಂಸೆಗೊಳಿಸುತ್ತದೆ । **ನಗ್ನತಾ**—ವಸ್ತ್ರರಹಿತವಾದ ನನ್ನ ಅವಸ್ಥೆಯೂ । **ಜಸುಃ**—ಹಸಿವೂ ಸಹ ನನ್ನನ್ನು ಹಿಂಸಿಸುತ್ತವೆ । **ವೇಃ ನ**—ಬೇಡನ ಭಯದಿಂದ ಪಕ್ಷಿಯು ನಡಗುವಂತೆ । **ಮತಿಃ**—ಶತ್ರು ಭಯದಿಂದ ಕೂಡಿದ ನನ್ನ ಮನಸ್ಸು । **ವೇವೀಯತೇ**—ಅಧಿಕವಾಗಿ ನಡಗುತ್ತದೆ.

॥ ಭಾವಾರ್ಥ ॥

ಸವತಿಯರು ಎರಡು ಕಡೆಗಳಿಂದಲೂ ಹಿಂಸಿಸುವಂತೆ ನನ್ನ ಎರಡು ಕಡೆಯ ಎಲುಬುಗಳೂ ನನ್ನನ್ನು ಅತಿಯಾಗಿ ಹಿಂಸಿಸುತ್ತವೆ. ದಾರಿದ್ರ್ಯದ ಫಲವಾದ ದುರ್ಬುದ್ಧಿಯೂ, ನಗ್ನತೆಯೂ, ಹಸಿವೂ ಸಹ ನನ್ನನ್ನು ಹಿಂಸಿಸುತ್ತವೆ. ಬೇಡನ ಭಯದಿಂದ ಪಕ್ಷಿಯು ನಡಗುವಂತೆ, ಶತ್ರುಭಯದಿಂದ ಕೂಡಿದ ನನ್ನ ಮನಸ್ಸು ಅಧಿಕವಾಗಿ ನಡಗುತ್ತದೆ.

English Translation

My ribs pain me on both sides, like rival wives: disease, nakedness, hunger, afflict me: my mind flutters like a bird.

॥ ಸಂಹಿತಾಪಾಠಃ ॥

ಮೂಷೋ ನ ಶಿಶ್ನಾ ವ್ಯದಂತಿ ಮಾಧ್ಯಃ ಸ್ತೋತಾರಂ ತೇ ಶತಕ್ರತೋ ।
ಸಕೃತ್ಸು ನೋ ಮಘವನ್ನಿಂದ್ರ ಮೃಳಯಾಧಾ ಪಿತೇವ ನೋ ಭವ ॥ ೩ ॥

॥ ಪದಪಾಠಃ ॥

ಮೂಷಃ । ನ । ಶಿಶ್ನಾ । ವಿ । ಅದಂತಿ । ಮಾ । ಆಽಧ್ಯಃ । ಸ್ತೋತಾರಂ । ತೇ । ಶತಕ್ರತೋ ಇತಿ ಶತಽಕ್ರತೋ ।
ಸಕೃತ್ । ಸು । ನಃ । ಮಘಽವನ್ । ಇಂದ್ರ । ಮೃಳಯ । ಅಧ । ಪಿತಾಽಇವ । ನಃ । ಭವ ॥ ೩ ॥

॥ ಸಾಯಣಭಾಷ್ಯಂ ॥

ಹೇ ಶತಕ್ರತೋ ಬಹುಕರ್ಮನ್ ಮಘವನ್ ಧನವಂಶ್ಚೇಂದ್ರ ತೇ ತವ ಸ್ತೋತಾರಂ ಮಾ ಮಾಂ ಕವಷಮಾಧ್ಯ ಆಧಯೋ ಮೂಷೋ ನ ಯಥಾ ಮೂಷಿಕಾಃ ಶಿಶ್ನಾಸ್ನಾತಾನಿ ಸೂತ್ರಾಣ್ಯಶ್ನಂತಿ ತಥಾ ವ್ಯದಂತಿ । ವಿವಿಧಮದಂತಿ । ತಥಾ ಚ ಯಾಸ್ಕಃ । ಸಂತಪಂತಿ ಮಾಮಭಿತಃ ಸಪತ್ನ್ಯಃ ಇವೇಮಾಃ ಪರ್ಶವಃ ಕೂಪಪರ್ಶವೋ ಮೂಷಿಕಾ ಇವಾಸ್ನಾತಾನಿ ಸೂತ್ರಾಣಿ ವ್ಯದಂತಿ ಸ್ವಾಂಗಾಭಿಧಾನಂ ವಾ ಸ್ಯಾಚ್ಛಿಶ್ನಾನಿ ವ್ಯದಂತೀತಿ ಸಂತಪಂತಿ ಮಾಧ್ಯಃ ಕಾಮಾಃ । ನಿ. ೪-೬ । ಇತಿ । ತಥಾ ಚ ಸತಿ ನೋಽಸ್ಮಾನ್ಸಕೃತ್ಸು ಮೃಳಯ । ಅಭೀಷ್ಟಪ್ರದಾನೇನ ಸಮ್ಯಕ್ ಸುಖಯ । ಅಧಾಥ ನೋಽಸ್ಮಾಕಂ ಪಿತೇವ ಯಥಾ ಪಿತಾ ತದ್ವದ್ರಕ್ಷಿತಾ ಭವ ॥

॥ ಪ್ರತಿಪದಾರ್ಥ ॥

ಶತಕ್ರತೋ—ಅನೇಕ ಕರ್ಮಕರ್ತನೂ । ಮಘವನ್—ಧನವಂತನೂ ಆದ । ಇಂದ್ರ—ಎಲೈ ಇಂದ್ರನೇ । ಶಿಶ್ನಾ—ಬಟ್ಟೆಯ ನೂಲುಗಳನ್ನು । ಮೂಷೋ ನ—ಇಲಿಯು ತಿಂದುಹಾಕುವಂತೆ । ತೇ—ನಿನ್ನ ।

**ಸ್ತೋತಾರಂ**—ಸ್ತುತಿಕರ್ತನಾದ | **ಮಾ**—ನನ್ನನ್ನು | **ಆಧ್ಯಃ**—ವ್ಯಾಧಿಗಳು | **ವ್ಯದಂತಿ**—ನಾನಾವಿಧವಾಗಿ ನ್ನುತ್ತವೆ | **ನಃ**—ನಮ್ಮನ್ನು | **ಸಕೃತ್**—ಅಧಿಕವಾಗಿ | **ಸು ಮೃಳಯ**—ಸುಖಪಡಿಸು | **ಅಥ**—ಆದುದರಿಂದ| ಃ—ನಮಗೆ | **ಪಿತೇವ**—ತಂದೆಯಂತೆ | **ಭವ**—ಆಗಿರು.

| ಭಾವಾರ್ಥ |

ಅನೇಕ ಕರ್ಮಕರ್ತನೂ, ಧನವಂತನೂ ಆದ ಎಲೈ ಇಂದ್ರನೇ, ಇಲಿಯು ನೂತ ನೂಲುಗಳನ್ನು ತಿಂದು ಾಕುವಂತೆ, ನಿನ್ನ ಸ್ತುತಿಕರ್ತನಾದ ನನ್ನನ್ನು ವ್ಯಾಧಿಗಳು ನಾನಾವಿಧವಾಗಿ ತಿನ್ನುತ್ತವೆ. (ಹಿಂಸಿಸುತ್ತವೆ) ನೀನು ಆ ೋಂದರೆಯಿಂದ ನಮ್ಮನ್ನು ತಪ್ಪಿಸಿ ನಮ್ಮನ್ನು ಸುಖಪಡಿಸು. ನಮಗೆ ತಂದೆಯಂತೆ ಆಗಿರು.

English Translation

Afflictions consume me, your worshipper Shatakratu, as mice (eat) ıreads, for once, Indra, possessor of opulence, grant us felicity ; be to us s a father.

| ಸಂಹಿತಾಪಾಠಃ |

ಕುರುಶ್ರವಣಮಾವೃಣಿ ರಾಜಾನಂ ತ್ರಾಸದಸ್ಯವಂ |
ಮಂಹಿಷ್ಠಂ ವಾಘತಾಮೃಷಿಃ || ೪ ||

|| ಪದಪಾಠಃ ||

ಕುರುऽಶ್ರವಣಂ | ಆವೃಣಿ | ರಾಜಾನಂ | ತ್ರಾಸದಸ್ಯವಂ |
ಮಂಹಿಷ್ಠಂ | ವಾಘತಾಂ | ಋಷಿಃ || ೪ ||

|| ಸಾಯಣಭಾಷ್ಯಂ ||

ಋಷಿರತೀಂದ್ರಿಯಪದಾರ್ಥದ್ರಷ್ಟಾ ಕವಷೋऽಹಂ ತ್ರಾಸದಸ್ಯವಂ ತ್ರಸದಸ್ಯೋಃ ಪುತ್ರಂ ಮಂಹಿಷ್ಠಂ ಧನಾನಾಮತಿಶಯೇನ ದಾತಾರಂ ಕುರುಶ್ರವಣಂ | ಕುರವ ಋತ್ವಿಜಃ | ತದೀಯಾನಾಂ ಸ್ತುತೀನಾಂ ಶ್ರೋತಾರಂ ಕುರುಶ್ರವಣಂ ತನ್ನಾಮಕಂ ರಾಜಾನಂ ವಾಘತಾಮೃತ್ವಿಜಾಮರ್ಥಾಯಾವೃಣಿ | ನಾನಿ ಪ್ರಾರ್ಥಯೇ ||

| ಪ್ರತಿಪದಾರ್ಥ |

**ಋಷಿಃ**—ಕವಷಸಂಜ್ಞಕನಾದ ನಾನು | **ತ್ರಾಸದಸ್ಯವಃ**—ತ್ರಸದಸ್ಯುಪುತ್ರನೂ | **ಮಂಹಿಷ್ಠಂ**—ತಿಶಯವಾಗಿ ದಾನಮಾಡುವವನೂ ಆದ | **ಕುರುಶ್ರವಣಂ**—ಕುರುಶ್ರವಣನೆಂಬ | **ರಾಜಾನಂ**—ರಾಜನಿಂದ | **ವಾಘತಾಂ**—ಋತ್ವಿಕ್ಕುಗಳಿಗೋಸ್ಕರ | **ಆವೃಣಿ**—ಧನವನ್ನು ಯಾಚಿಸುತ್ತೇನೆ.

॥ ಭಾವಾರ್ಥ ॥

ಕವಷಸಂಜ್ಞಕನಾದ ನಾನು ತ್ರಸದಸ್ಯುಪುತ್ರನೂ, ಅತಿಶಯವಾಗಿ ದಾನಮಾಡುವವನೂ ಆದ ಕುರುಶ್ರವಣನೆಂಬ ರಾಜನಿಂದ ಋತ್ವಿಕ್ಕುಗಳಿಗೋಸ್ಕರ ಧನವನ್ನು ಯಾಚಿಸುತ್ತೇನೆ.

English Translation

I, the Rishi, solicit (wealth) of the munificent prince Kurushravana, the son of Trasadasyu for the priests.

॥ ಸಂಹಿತಾಪಾಠಃ ॥

ಯಸ್ಯ ಮಾ ಹರಿತೋ ರಥೇ ತಿಸ್ರೋ ವಹಂತಿ ಸಾಧುಯಾ ।
ಸ್ತವೈ ಸಹಸ್ರದಕ್ಷಿಣೇ ॥ ೫ ॥

॥ ಪದಪಾಠಃ ॥

ಯಸ್ಯ । ಮಾ । ಹರಿತಃ । ರಥೇ । ತಿಸ್ರಃ । ವಹಂತಿ । ಸಾಧುऽಯಾ ।
ಸ್ತವೈ । ಸಹಸ್ರऽದಕ್ಷಿಣೇ ॥ ೫ ॥

॥ ಸಾಯಣಭಾಷ್ಯಂ ॥

ಯಸ್ಯ ಕುರುಶ್ರವಣಾಖ್ಯಸ್ಯ ರಾಜ್ಞಃ ಸ್ವಭೂತಾಸ್ತಿಸ್ರೋ ಹರಿತಸ್ತ್ರಯೋऽಶ್ವಾ ರಥೇ ಪ್ರಸ್ಥಿತಂ ಮಾ ಮಾಂ ಕವಷಂ ಸಾಧುಯಾ ಸಾಧು ವಹಂತಿ ಕುರುಶ್ರವಣಂ ರಾಜಾನಮಹಂ ಸಹಸ್ರದಕ್ಷಿಣೇऽಸ್ಮಿನ್ಯಾಗೇ ಸ್ತವೈ । ಸ್ತೌಮಿ । ಪ್ರಶ್ವಿವಾಹಿನಂ ರಥಂ ಪರಿಗೃಹ್ಯರ್ಷಿರಾಶಾಸ್ತೇ ॥

॥ ಪ್ರತಿಪದಾರ್ಥ ॥

**ಯಸ್ಯ**—ಅದೇ ಕುರುಶ್ರವಣನ । **ತಿಸ್ರಃ ಹರಿತಃ**—ಮೂರು ಕುದುರೆಗಳೂ । **ರಥೇ**—ರಥದಲ್ಲಿ ಕುಳಿತಿರುವ । **ಮಾ**—ನನ್ನನ್ನು । **ಸಾಧುಯಾ**—ಸುಖಕರವಾಗಿ । **ವಹಂತಿ**—ವಹಿಸುತ್ತವೆ । **ಸಹಸ್ರದಕ್ಷಿಣೇ**—ಯಾಗದಲ್ಲಿ ಅಪರಿಮಿತವಾಗಿ ದಾನಮಾಡುವ ಆದೇ ರಾಜನನ್ನು । **ಸ್ತವೇ**—ನಾನು ಪ್ರಶಂಸಿಸುತ್ತೇನೆ.

॥ ಭಾವಾರ್ಥ ॥

ಕುರುಶ್ರವಣನಲ್ಲಿಗೆ ನಾನು ರಥದಲ್ಲಿ ಹೋಗುವ ಕಾಲದಲ್ಲಿ ಅವನ ಮೂರು ಕುದುರೆಗಳೂ ಸಹ ನನ್ನನ್ನು ಸುಖಕರವಾಗುವಂತೆ ವಹಿಸುತ್ತವೆ. ಯಾಗದಲ್ಲಿ ಅಪರಿಮಿತವಾಗಿ ದಾನಮಾಡುವ ಆ ರಾಜನನ್ನು ನಾನು ಪ್ರಶಂಸಿಸುತ್ತೇನೆ.

## English Translation

Whose three horses bear me pleasantly in the chariot ; I praise him at the ceremony in which he presents thousands.

॥ ಸಂಹಿತಾಪಾಠಃ ॥

ಯಸ್ಯ ಪ್ರಸ್ವಾದಸೋ ಗಿರ ಉಪಮಶ್ರವಸಃ ಪಿತುಃ ।
ಕ್ಷೇತ್ರಂ ನ ರಣ್ವಮೂಚುಷೇ ॥ ೬ ॥

॥ ಪದಪಾಠಃ ॥

ಯಸ್ಯ । ಪ್ರऽಸ್ವಾದಸಃ । ಗಿರಃ । ಉಪಮऽಶ್ರವಸಃ । ಪಿತುಃ ।
ಕ್ಷೇತ್ರಂ । ನ । ರಣ್ವಂ । ಊಚುಷೇ ॥ ೬ ॥

॥ ಸಾಯಣಭಾಷ್ಯಂ ॥

ಅತಃ ಪರಂ ಯಸ್ಯೇತ್ಯಾದಿಕೇನ ಸೂಕ್ತಶೇಷೇಣ ಮಿತ್ರಾತಿಥೌ ರಾಜ್ಞಿ ಮೃತೇ ತತ್ಪುತ್ರಸ್ಯೋಪಮಶ್ರವಸಃ ಸಮೀಪಮಾಗತ್ಯ ಕವಷಃ ಸ್ನೇಹಾಚ್ಛೋಕಂ ನಿವಾರಯತಿ ॥

ಹೇ ರಾಜನ್ ಉಪಮಶ್ರವಸಸ್ತವ ಪಿತುರ್ಯಸ್ಯ ಮಿತ್ರಾತಿಥೇರ್ಗಿರೋ ವಾಚಃ ಪ್ರಸ್ವಾದಸಃ ಪ್ರಕರ್ಷೇಣ ಸ್ವಾದಯಿತ್ರ್ಯಃ । ತತ್ರ ದೃಷ್ಟಾಂತಃ । ಊಚುಷೇ ಸೇವಮಾನಾಯ ದರಿದ್ರಾಯ ದಾನಾರ್ಥಂ ಪ್ರಕಲ್ಪಿತಂ ರಣ್ವಂ ರಮಣೀಯಂ ಕ್ಷೇತ್ರಂ ನ ಯಥಾ ಕ್ಷೇತ್ರಂ ಸ್ವಾದಯಿತೃ ತದ್ವದಿತ್ಯರ್ಥಃ । ಉತ್ತರತ್ರ ಸಂಬಂಧಃ ॥

॥ ಪ್ರತಿಪದಾರ್ಥ ॥

(ಎಲೈ ರಾಜನೇ), **ಊಚುಷೇ**—ದರಿದ್ರನಾದವನಿಗೆ । **ರಣ್ವಂ**—ರಮಣೀಯವಾದ । **ಕ್ಷೇತ್ರಂ ನ**—ಸಾಗುವಳಿಯ ನೆಲವು ಹಿತಕರವಾಗಿರುವಂತೆ । **ಉಪಮಶ್ರವಸಃ**—ಅತ್ಯಂತ ಪ್ರಸಿದ್ಧನಾದ । **ಯಸ್ಯ**—ಯಾವ ನಿನ್ನ । **ಪಿತುಃ**—ತಂದೆಯಾದ ಮಿತ್ರಾತಿಥಿಯ । **ಗಿರಃ**—ವಾಕ್ಕುಗಳು । **ಪ್ರಸ್ವಾದತಃ**—ಅತ್ಯಂತ ಹಿತಕರವಾಗಿದ್ದವು.

॥ ಭಾವಾರ್ಥ ॥

ಎಲೈ ರಾಜನೇ, ದರಿದ್ರನಾದವನಿಗೆ ದಾನಮಾಡಿದ ಸಾಗುವಳಿಯ ನೆಲವು ಸಂತೋಷಜನಕವಾಗಿರುವಂತೆ, ಅತ್ಯಂತ ಪ್ರಸಿದ್ಧನಾದ ನಿನ್ನ ತಂದೆಯಾದ ಮಿತ್ರಾತಿಥಿಯ ವಾಕ್ಕುಗಳು ನನಗೆ ಅತ್ಯಂತ ಹಿತಕರವಾಗಿದ್ದವು.

## English Translation

Upamashravas, the words of whose father were sweet, like a pleasant field given to a beggar.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿಯೂ ಇದರ ಮುಂದಿನ ಮೂರು ಋಕ್ಕುಗಳಲ್ಲಿಯೂ ಮಿತ್ರಾತಿಥಿ ಎಂಬ ರಾಜನು ಮೃತನಾದಾಗ ಅವನ ಪುತ್ರನಾದ ಉಪಮಶ್ರವಾಃ ಎಂಬುವನು ಶೋಕಸಂತಪ್ತನಾಗಿರಲು, ಋಷಿಯು ಅವನಲ್ಲಿ ತನಗಿದ್ದ ಸ್ನೇಹಭಾವದಿಂದ ಅವನ ಶೋಕವನ್ನು ಪರಿಹಾರಮಾಡಿ ಸಮಾಧಾನಪಡಿಸಿದನು ಎಂಬ ವಿಷಯವು ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಅಧಿ ಪುತ್ರೋಪಮಶ್ರವೋ ನಪಾನ್ಮಿತ್ರಾತಿಥೇರಿಹಿ ।

ಪಿತುಷ್ಟೇ ಅಸ್ಮಿ ವಂದಿತಾ ॥ ೭ ॥

॥ ಪದಪಾಠಃ ॥

ಅಧಿ । ಪುತ್ರ । ಉಪಮಽಶ್ರವಃ । ನಪಾತ್ । ಮಿತ್ರಽಅತಿಥೇಃ । ಇಹಿ ।

ಪಿತುಃ । ತೇ । ಅಸ್ಮಿ । ವಂದಿತಾ ॥ ೭ ॥

॥ ಸಾಯಣಭಾಷ್ಯಂ ॥

ಹೇ ಪುತ್ರೋಪಮಶ್ರವೋ ಮಿತ್ರಾತಿಥೇರ್ನಪಾತ್ಪುತ್ರ ತ್ವಮಧೀಹಿ । ಮತ್ಸಮೀಪಮಾಗಚ್ಛ । ತೇ ತವ ಪಿತುಸ್ತಸ್ಯ ಮಿತ್ರಾತಿಥೇರಹಂ ವಂದಿತಾ ಸ್ತೋತಾಸ್ಮಿ । ಏತಜ್ಜ್ಞಾತ್ವಾ ಶೋಕಂ ಮಾ ಕುರು । ಯದ್ದೇಯಂ ದ್ರವ್ಯಮಸ್ತಿ ತತ್ಸರ್ವಂ ಮಹ್ಯಂ ದೇಹಿ ॥

॥ ಪ್ರತಿಪದಾರ್ಥ ॥

ಪುತ್ರ—ಪುತ್ರರೂಪನೂ । ಮಿತ್ರಾತಿಥೇಃ—ಮಿತ್ರಾತಿಥಿಗೆ । ನಪಾತ್—ಪುತ್ರನೂ । ಉಪಮಶ್ರವಃ—ಅತ್ಯಂತ ಪ್ರಸಿದ್ಧನೂ ಆದ ಎಲೈ ಉಪಮಶ್ರವಃ ಎಂಬ ರಾಜನೇ । ಅಧಿ ಇಹಿ—ನನ್ನಲ್ಲಿಗೆ ಬಾ । ತೇ—ನಿನ್ನ । ಪಿತುಃ—ತಂದೆಯ । ವಂದಿತಾ—ಪ್ರಶಂಸಕನಾಗಿ । ಅಸ್ಮಿ—ನಾನಿದ್ದೇನೆ.

॥ ಭಾವಾರ್ಥ ॥

ಮಿತ್ರಾತಿಥಿಯ ಪುತ್ರನೂ, ಅತ್ಯಂತ ಪ್ರಸಿದ್ಧನೂ ಆದ ಎಲೈ ರಾಜನೇ, ನಿನಗೆ ತಂದೆಯಂತೆ ಪೂಜ್ಯನಾದ ನನ್ನಲ್ಲಿಗೆ ಬಾ. ನಾನು ನಿನ್ನ ತಂದೆಯ ಗುಣಪ್ರಶಂಸೆಯನ್ನು ಮಾಡುವವನಾಗಿದ್ದೇನೆ.

## English Translation

Come to me, my son, grandson of Mitratithi ; I am the eulogist of your father.

॥ ಸಂಹಿತಾಪಾಠಃ ॥

ಯದೀಶೀಯಾಮೃತಾನಾಮುತ ವಾ ಮರ್ತ್ಯಾನಾಂ ।
ಜೀವೇದಿನ್ಮಘವಾ ಮಮ ॥ ೮ ॥

॥ ಪದಪಾಠಃ ॥

ಯತ್ । ಈಶೀಯ । ಅಮೃತಾನಾಂ । ಉತ । ವಾ । ಮರ್ತ್ಯಾನಾಂ ।
ಜೀವೇತ್ । ಇತ್ । ಮಘऽವಾ । ಮಮ ॥ ೮ ॥

॥ ಸಾಯಣಭಾಷ್ಯಂ ॥

**ಉತಾಪಿ ಚ ಯದ್ಯದ್ಯಮೃತಾನಾಂ ದೇವಾನಾಂ ಮರ್ತ್ಯಾನಾಂ ಮನುಷ್ಯಾಣಾಂ ವಾ ಮರಣಹೇತೋರ್ನಾಮೀಶೀಯ ಅಹಮೀಶ್ವರಃ ಸ್ಯಾಂ ತರ್ಹಿ ಮಮ ಕೇವಷಸ್ಯ ಯಾಜ್ಞೋ ಮಘವಾ ಧನವಾನ್ಮಿತ್ರಾತಿಥೀ ರಾಜಾ ಜೀವೇತ್ । ಪ್ರಾಣಾನ್ಧಾರಯೇತ್ । ತಥಾ ಚ ನಾಹಂ ಮರಣಹೇತೋರೀಶ್ವರಃ ತಸ್ಮಾದಯಂ ರಾಜಾ ಮೃತ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಉತ**—ಮತ್ತು । **ಯತ್**—ಒಂದುವೇಳೆ । **ಅಮೃತಾನಾಂ**—ದೇವತೆಗಳಿಗೂ । **ಮರ್ತ್ಯಾನಾಂ ವಾ**—ಮಾನವರಿಗೂ । **ಈಶೀಯ**—ನಾನು ಪ್ರಭುವೇ ಆಗಿದ್ದರೆ । **ಮಮ**—ನನಗೆ । **ಮಘವಾ**—ಧನಪ್ರದನಾದ ರಾಜನು (ಮಿತ್ರಾತಿಥಿಯು) । **ಜೀವೇತ್ ಇತ್**—ಜೀವಂತನಾಗಿರಬೇಕಾಗಿದ್ದಿತು.

॥ ಭಾವಾರ್ಥ ॥

ಒಂದು ವೇಳೆ ನಾನು ದೇವಮಾನವಾದಿಗಳಿಗೆಲ್ಲ ಪ್ರಭುವೇ ಆಗಿದ್ದರೆ, ಆಗ ನನಗೆ ಧನಪ್ರದನಾದ ರಾಜನು ಜೀವವಂತನೇ ಆಗಿರಬೇಕಾಗಿದ್ದಿತು.

English Translation

If I were lord over immortals and mortals, then should my munificent (benefactor) live.

॥ ಸಂಹಿತಾಪಾಠಃ ॥

ನ ದೇವಾನಾಮತಿ ವ್ರತಂ ಶತಾತ್ಮಾ ಚನ ಜೀವತಿ ।
ತಥಾ ಯುಜಾ ವಿ ವಾವೃತೇ ॥

॥ ಪದಪಾಠಃ ॥

ನ । ದೇವಾನಾಂ । ಅತಿ । ವ್ರತಂ । ಶತಽಆತ್ಮಾ । ಚನ । ಜೀವತಿ ।

ತಥಾ । ಯುಜಾ । ವಿ । ವವೃತೇ ॥ ೯ ॥

॥ ಸಾಯಣಭಾಷ್ಯಂ ॥

**ದೇವಾನಾಂ ಬ್ರಹ್ಮಾದೀನಾಂ ವ್ರತಂ ಮರ್ಯಾದಾಲಕ್ಷಣಂ ಕರ್ಮಾತ್ಯತಿಕ್ರಮ್ಯ ಶತಾತ್ಮಾ ಚನ ಶತಸಂವತ್ಸರಃ ಕಶ್ಚನ ಜೀವತಿ । ತಥಾ ಯುಜಾ ಸಹಾಯಾದಿನಾ ವಿ ವವೃತೇ । ವಿವರ್ತತೇ । ವಿಯುಕ್ತೋ ಭವತೀತಿ ಜ್ಞಾತ್ವಾ ಶೋಕಂ ಮಾ ಕುರ್ವಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ದೇವಾನಾಂ**—ಬ್ರಹ್ಮಾದಿದೇವತೆಗಳ । **ವ್ರತಂ**—ನಿಯಮನರೂಪವಾದ ಕರ್ಮವನ್ನು । **ಅತಿ**—ಉಲ್ಲಂಘಿಸಿ । **ಶತಾತ್ಮಾ ಚನ**—ನೂರು ವರ್ಷಗಳ ಕಾಲ । **ನ ಜೀವತಿ**—ಯಾರೂ ಬದುಕಲಾರರು । **ತಥಾ**—ಹಾಗೆಯೇ । **ಯುಜಾ**—ಒಡನಾಡಿಗಳಿಂದ । **ವಿ ವವೃತೇ**—ಬೇರೆಯಾಗಲೇಬೇಕು.

॥ ಭಾವಾರ್ಥ ॥

ಬ್ರಹ್ಮಾದಿದೇವತೆಗಳ ನಿಯಮನರೂಪವಾದ ಕರ್ಮವನ್ನು ಉಲ್ಲಂಘಿಸಿ ನೂರು ವರ್ಷಗಳ ಕಾಲ ಯಾರೂ ಬದುಕಲಾರರು. ಹಾಗೆಯೇ, ಒಡನಾಡಿಗಳಿಂದಲೂ ಬೇರೆಯಾಗಲೇಬೇಕು. ಇದು ಈಶ್ವರಸಂಕಲ್ಪವು.

English Translation

No one lives a hundred years passing the limit fixed by the gods; so he is separated from his friends.

## ಮೂವತ್ತನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪ್ರಾವೇಪಾ ಇತಿ ಚತುರ್ದಶರ್ಚಂ ಪಂಚಮಂ ಸೂಕ್ತಮೈಲೂಷಸ್ಯ ಕವಷಸ್ಯಾರ್ಷಂ ಮುಜವತಃ ಪುತ್ರಸ್ಯಾಕ್ಷಾಖ್ಯಸ್ಯ ವಾ । ಸಪ್ತಮೀ ಜಗತೀ ಶಿಷ್ಟಾಸ್ತ್ರಯೋದಶ ತ್ರಿಷ್ಟುಭಃ । ಅತ್ರ ದ್ವಾದಶ್ಯಕ್ಷಾನ್ಸ್ತೌತಿ ನವಮ್ಯಾದ್ಯಾ ಚ ಸಪ್ತಮೀ । ಅತಸ್ತಾಸ್ತದ್ದೇವತ್ಯಾಃ । ತ್ರಯೋದಶೀ ಕೃಷಿಂ ಸ್ತೌತಿ । ಅತಸ್ತಸ್ಯಾಃ ಸಾ ದೇವತಾ । ಏವಂ ಪಂಚ ಗತಾಃ । ಶಿಷ್ಟಾಭಿರ್ನವಭಿಃ ಕಿತವೋಽಕ್ಷಾಶ್ಚ ನಿಂದ್ಯಂತೇ । ಅತಸ್ತಾ ಅಪಿ ತದ್ದೇವತ್ಯಾಃ । ತಥಾ ಚಾನುಕ್ರಾಂತಂ । ಪ್ರಾವೇಪಾಃ ಷಳೂನಾ ಮೌಜವಾನ್ವಾಕ್ಷೋಽಕ್ಷಕೃಷಿಪ್ರಶಂಸಾ ಚಾಕ್ಷಕಿತವನಿಂದಾ ಚ ಸಪ್ತಮೀ ಜಗತೀತಿ ॥ ಗತೋ ವಿನಿಯೋಗಃ ॥**

ಅನುವಾದವು—**ಪ್ರಾವೇಪಾಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಇಲೂಷಪುತ್ರನಾದ ಕವಷನೆಂಬುವನು ಋಷಿಯು. ಅಥವಾ ಮುಜವಾನ್ ಎಂಬುವನ ಪುತ್ರನಾದ ಅಕ್ಷನೆಂಬುವನು ಋಷಿಯು. ಈ ಸೂಕ್ತದ ಏಳನೆಯ ಋಕ್ಕು ಜಗತೀಛಂದಸ್ಕವು. ಉಳಿದ ಹದಿಮೂರು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ಸೂಕ್ತದಲ್ಲಿ ಒಂದು, ಏಳು, ಒಂಭತ್ತು ಮತ್ತು ಹನ್ನೆರಡನೆಯ ಋಕ್ಕುಗಳಲ್ಲಿ ಆಟವಾಡುವ (ಪಗಡೆ) ದಾಳಗಳ ಸ್ತುತಿಯಿರುವುದು. ಆದ್ದರಿಂದ ಆ ಋಕ್ಕುಗಳಿಗೆ ಅವುಗಳೇ ದೇವತೆಯು. ಹದಿಮೂರನೆಯ ಋಕ್ಕಿನಲ್ಲಿ ಭೂಮಿಯ ವ್ಯವಸಾಯವನ್ನು ಪ್ರಶಂಸೆ ಮಾಡಿರುವುದರಿಂದ ಆ ಋಕ್ಕಿಗೆ ಅದೇ ದೇವತೆಯು. ಈ ರೀತಿ ಐದು ಋಕ್ಕುಗಳಿಗೆ ದೇವತೆಗಳನ್ನು ಹೇಳಿದ ನಂತರ ಉಳಿದ ಒಂಭತ್ತು ಋಕ್ಕುಗಳಲ್ಲಿ ಜೂಜುಗಾರರ ಮತ್ತು ಪಗಡೆ ಆಟದ ಪ್ರಸಕ್ತಿಯೂ ಅವುಗಳ ನಿಂಧೆಯೂ ಇರುವುದರಿಂದ ಆ ಋಕ್ಕುಗಳಿಗೆ ಆ ವಿಷಯವೇ ದೇವತೆಯು. ಅನುಕ್ರಮಣಿಕೆಯಲ್ಲಿ—**ಪ್ರಾವೇಪಾಃ ಷಳೂನಾ ಮೌಜವಾನ್ವಾಕ್ಷೋಽಕ್ಷಕೃಷಿಪ್ರಶಂಸಾ ಚಾಕ್ಷಕಿತವನಿಂದಾ ಚ ಸಪ್ತಮೀ ಜಗತೀ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೩೪

ಮಂಡಲ—೧೦ । ಅನುವಾಕ—೩ । ಸೂಕ್ತ—೩೪ ॥
ಅಷ್ಟಕ—೭ ಅಧ್ಯಾಯ—೮ । ವರ್ಗ—೩, ೪, ೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ॥
ಋಷಿಃ—ಕವಷ ಐಲೂಷೋ ಅಕ್ಷೋ ವಾ ಮೌಜವಾನ್ ।
ದೇವತಾ—೧. ೭, ೯, ೧೨, ೧೩. ಅಕ್ಷಕೃಷಿಪ್ರಶಂಸಾ । ೨-೬, ೮, ೧೦, ೧೧, ೧೪. ಅಕ್ಷಕಿತವನಿಂದಾ ॥
ಛಂದಃ—೧-೬. ೮-೧೪. ತ್ರಿಷ್ಟುಪ್ । ೭. ಜಗತೀ ।

॥ ಸಂಹಿತಾಪಾಠಃ ॥

ಪ್ರಾವೇಪಾ ಮಾ ಬೃಹತೋ ಮಾದಯಂತಿ ಪ್ರವಾತೇಜಾ ಇರಿಣೇ ವರ್ವೃತಾನಾಃ ।
ಸೋಮಸ್ಯೇವ ಮೌಜವತಸ್ಯ ಭಕ್ಷೋ ವಿಭೀದಕೋ ಜಾಗೃವಿರ್ಮಹ್ಯಮಚ್ಛಾನ್ ॥ ೧ ॥

॥ ಪದಪಾಠಃ ॥

ಪ್ರಾವೇಪಾಃ । ಮಾ । ಬೃಹತಃ । ಮಾದಯಂತಿ । ಪ್ರವಾತೇಽಜಾಃ । ಇರಿಣೇ । ವರ್ವೃತಾನಾಃ ।
ಸೋಮಸ್ಯಽಇವ । ಮೌಜ್ಽವತಸ್ಯ । ಭಕ್ಷಃ । ವಿಽಭೀದಕಃ । ಜಾಗೃವಿಃ । ಮಹ್ಯಂ । ಅಚ್ಛಾನ್ ॥ ೧ ॥

॥ ಸಾಯಣಭಾಷ್ಯಂ ॥

ಬೃಹತೋ ಮಹತೋ ವಿಭೀತಕಸ್ಯ ಫಲತ್ವೇನ ಸಂಬಂಧಿನಃ ಪ್ರವಾತೇಜಾಃ ಪ್ರವಣೇ ದೇಶೇ ಜಾತಾ ಇರಿಣ ಆಸ್ಫಾರೇ ವರ್ವೃತಾನಾಃ ಪ್ರವರ್ತಮಾನಾಃ ಪ್ರಾವೇಪಾಃ ಪ್ರವೇಪಿಣಃ ಕಂಪನಶೀಲಾ ಅಕ್ಷಾ ಮಾ ಮಾಂ ಮಾದಯಂತಿ । ಹರ್ಷಯಂತಿ । ಕಿಂಚ ಜಾಗೃವಿರ್ಜಯಪರಾಜಯಯೋರ್ಹರ್ಷ-ಶೋಕಾಭ್ಯಾಂ ಕಿತವಾನಾಂ ಜಾಗರಣಸ್ಯ ಕರ್ತಾ ವಿಭೀದಕೋ ವಿಭೀತಕವಿಕಾರೋಽಕ್ಷೋ ಮಹ್ಯಂ ಮಾಮಚ್ಛಾನ್ । ಅಚಚ್ಛದತ್ । ಅತ್ಯರ್ಥಂ ಮಾದಯತಿ । ತತ್ರ ದೃಷ್ಟಾಂತಃ । ಸೋಮಸ್ಯೇವ ಯಥಾ ಸೋಮಸ್ಯ ಮೌಜವತಸ್ಯ । ಮುಜವತಿ ಪರ್ವತೇ ಜಾತೋ ಮೌಜವತಃ । ತಸ್ಯ । ತತ್ರ ಹ್ಯುತ್ತಮಃ ಸೋಮೋ ಜಾಯತೇ । ಭಕ್ಷಃ ಪಾನಂ ಯಜಮಾನಾನ್ದೇವಾಂಶ್ಚ ಮಾದಯತಿ ತದ್ವದಿತ್ಯರ್ಥಃ । ತಥಾ ಚ ಯಾಸ್ಕಃ । ಪ್ರವೇಪಿಣೋ ಮಾ ಮಹತೋ ವಿಭೀತಕಸ್ಯ ಫಲಾನಿ ಮಾದಯಂತಿ । ಪ್ರವಾತೇಜಾಃ ಪ್ರವಣೇಜಾ ಇರಿಣೇ ವರ್ತಮಾನಾ ಇರಿಣಂ ನಿರ್ಋಣಮೃಣಾತೇರಪಾರ್ಣಂ ಭವತ್ಯಪರತಾ ಅಸ್ಮಾದೋ-ಷಧಯ ಇತಿ ವಾ ಸೋಮಸ್ಯೇವ ಮೌಜವತಸ್ಯ ಭಕ್ಷೋ ಮೌಜವತೋ ಮುಜವತಿ ಜಾತೋ ಮುಜವಾ-ನ್ಪರ್ವತೋ ಮುಂಜವಾನ್ಮುಂಜೋ ವಿಮುಚ್ಯತ ಇಷೀಕಯೇಷೀಕೇಷತೇರ್ಗತಿಕರ್ಮಣ ಇಯಮಪೀ-ತರೇಷೀಕ್ಯೈತಸ್ಮಾದೇವ ವಿಭೀದಕೋ ವಿಭೇದನಾಜ್ಜಾಗೃವಿರ್ಜಾಗರಣಾನ್ಮಹ್ಯಮಚಚ್ಛದತ್ । ನಿ. ೯-೮ । ಇತಿ ॥

। ಪ್ರತಿಪದಾರ್ಥ ।

ಇರಿಣೇ—ಗುಡ್ಡದ ಪ್ರದೇಶದಲ್ಲಿ । ಬೃಹತಃ—ಮಹತ್ಪರಿಮಾಣವುಳ್ಳದ್ದೂ । ಪ್ರವಾತೇಜಾಃ—ಕಡಿದಾದ ಪ್ರದೇಶದಲ್ಲಿ ಹರಿಯುವುದೂ ಆದ ಝರಿಯಂತೆ । (ಇರಿಣೇ—ಹಾಸಿನ ಮೇಲೆ) । ವರ್ವೃತಾನಾಃ—ಹೊರಳಾಡುವುವೂ । ಪ್ರಾವೇಪಾಃ—ಕಂಪಿಸುವುವೂ ಆದ ದಾಳಗಳು । ಮಾ—ನನ್ನನ್ನು । ಮಾದಯಂತಿ—ಸಂತೋಷಗೊಳಿಸುತ್ತವೆ । ಮೌಜವತಃ—ಮುಜವತ್ಪರ್ವತದಲ್ಲಿ ಹುಟ್ಟಿದ । ಸೋಮಸ್ಯ—ಸೋಮದ । ಭಕ್ಷಃ ಇವ—ರಸದ ಪಾನವು ದೇವತೆಗಳಿಗೆ ಹರ್ಷವನ್ನುಂಟುಮಾಡುವಂತೆ । ಜಾಗೃವಿಃ—ಜೂಜುಕಾರರಿಗೆ ಯಾವಾಗಲೂ ಎಚ್ಚರಿಕೆಯನ್ನುಂಟುಮಾಡುತ್ತಿರುವ । ವಿಭೀದಕಃ—ಪಗಡೆ ದಾಳವು । ಮಹ್ಯಂ—ನನಗೆ । ಅಚ್ಛಾನ್—ಅತಿಶಯವಾದ ಸಂತೋಷವನ್ನು ಕೊಡುತ್ತದೆ.

॥ ಭಾವಾರ್ಥ ॥

ಮಹತ್ಪರಿಮಾಣವುಳ್ಳದ್ದೂ, ಗುಡ್ಡದ ಕಡಿದಾದ ಪ್ರದೇಶದಲ್ಲಿ ಹರಿಯುವುದೂ ಆದ ಝರಿಯಂತೆ ಹಾಸಿನ ಮೇಲೆ ಹೊರಳಾಡುವುವೂ, ಕಂಪಿಸುವುವೂ ಆದ ಪಗಡೆದಾಳಗಳು ನನ್ನನ್ನು ಸಂತೋಷಗೊಳಿಸುತ್ತವೆ. ಮುಜವತ್ಪರ್ವತದಲ್ಲಿ ಹುಟ್ಟಿದ ಸೋಮದ ರಸದ ಪಾನವು ದೇವತೆಗಳಿಗೆ ಹರ್ಷವನ್ನುಂಟುಮಾಡುವಂತೆ ಜೂಜುಕಾರರಿಗೆ ಯಾವಾಗಲೂ ಎಚ್ಚರಿಕೆಯನ್ನುಂಟುಮಾಡುತ್ತಿರುವ ಪಗಡೆದಾಳವು ನನಗೆ ಅತಿಶಯವಾದ ಸಂತೋಷವನ್ನುಂಟುಮಾಡುತ್ತದೆ.

English Translation

The large rattling dice exhilarate me a torrents borne on a precipice flowing in a desert : the exciting dice animate me as the taste of the Soma of Maujavat (delights the gods).

|| ವಿಶೇಷವಿಷಯಗಳು ||

ಅಕ್ಷಶಬ್ದದ ನಿರ್ವಚನ ಮತ್ತು ಉದಾಹರಣೆಗಾಗಿ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದಾರೆ—

**ಅಕ್ಷಾಃ । ಅಕ್ಷಾ ಅಶ್ನುವತ ಏನಾನಿತಿ ವಾಭ್ಯಶ್ನುವತ ಏಭಿರಿತಿ ವಾ ॥**

(ನಿ. ೯-೭)

ಅಕ್ಷಶಬ್ದವು ಹೊಂದು, ಸಂಪಾದಿಸು ಎಂಬರ್ಥವುಳ್ಳ **ಅಶ್** ಧಾತುವಿನಿಂದ ನಿಷ್ಪನ್ನವಾಗಿ ಪಗಡೆದಾಳವು ಎಂಬರ್ಥವನ್ನು ಸೂಚಿಸುವುದಾಗಿದೆ. ಜೂಜುಆಡುವವರಿಂದ ಈ ಪಗಡೆದಾಳವು ಹೊಂದಲ್ಪಟ್ಟಿರುತ್ತದೆ ಎಂದರೆ ಅವರ ಬಳಿಯಲ್ಲಿ ಈ ದಾಳಗಳು ಇರುತ್ತವೆ ಎಂದರ್ಥವು. ಅಥವಾ ಈ ದಾಳಗಳು ಜೂಜುಗಾರರಿಗೆ ಧನಾದಿಗಳನ್ನು (ಆಟಗಳಲ್ಲಿ) ಸಂಪಾದಿಸಿಕೊಡುವುದಾದ್ದರಿಂದ ಇವುಗಳಿಗೆ **ಅಕ್ಷಾಃ** ಎಂಬ ಹೆಸರು ಬಂದಿದೆಯೆಂದು ನಿರ್ವಚನಾಭಿಪ್ರಾಯವು. ಈ ಅಕ್ಷಾಃ ಎಂಬ ಶಬ್ದಪ್ರಯೋಗವಿರುವ ಋಕ್ಕಿನ ಉದಾಹರಣೆಗಾಗಿ ಪ್ರಕೃತಋಕ್ಕನ್ನೇ ಯಾಸ್ಕರು ತೆಗೆದುಕೊಂಡು ಅದಕ್ಕೂ ನಿರುಕ್ತವನ್ನು ಹೇಳಿದಾರೆ—

**ತೇಷಾಮೇಷಾ ಭವತಿ । ಪ್ರಾವೇಪಾ ಮಾ ಬೃಹತೋ ಮಾದಯಂತಿ ಪ್ರವಾತೇಜಾ ಇರಿಣೇ ವರ್ವೃತಾನಾಃ । ಸೋಮಸ್ಯೇವ ಮೌಜವತಸ್ಯ ಭಕ್ಷೋ ವಿಭೀದಕೋ ಜಾಗೃವಿರ್ಮಹ್ಯ ಮಚ್ಛಾನ್ ॥ ಪ್ರವೇಪಿಣೋ ಮಾ ಮಹತೋ ವಿಭೀದಕಸ್ಯ ಫಲಾನಿ ಮಾದಯಂತಿ । ಪ್ರವಾತೇಜಾಃ ಪ್ರವಣೇಜಾಃ । ಇರಿಣೇ ವರ್ತಮಾನಾಃ । ಇರಿಣಂ ನಿರ್ಋಣಂ ಋಣಾತೇರ ಪಾರ್ಣಂ ಭವತಿ ಅಪರತಾ ಅಸ್ಮಾದೋಷಧಯ ಇತಿ ವಾ । ಸೋಮಸ್ಯೇವ ಮೌಜವತಸ್ಯ ಭಕ್ಷಃ । ಮೌಜವತೋ ಮೂಜವತಿ ಜಾತಃ । ಮೂಜವಾನ್ ಪರ್ವತೋ ಮುಂಜವಾನ್ । ಮುಂಜೋ ವಿಮುಚ್ಯತ ಇಷೀಕಯಾ । ಇಷೀಕೇಷತೇರ್ಗತಿಕರ್ಮಣಃ । ಇಯಮಪೀತ- ರೇಷೀಕೈತಸ್ಮಾದೇವ । ವಿಭೀದಕೋ ವಿಭದನಾತ್ । ಜಾಗೃವಿರ್ಜಾಗರಣಾತ್ । ಮಹ್ಯಮಚಚ್ಛದತ್ ಪ್ರಶಂಸತ್ಯೇನಾನ್ ಪ್ರಥಮಯಾ ನಿಂದತ್ಯುತ್ತರಾಭಿಋಷೇರಕ್ಷ- ಪರಿದ್ಯೂನಸ್ಯೈತದಾರ್ಷಂ ವೇದಯಂತೇ ॥**

(ನಿ. ೯-೮)

ಕೌಷೀತಕೀ ಬ್ರಾಹ್ಮಣದಲ್ಲಿ ಹೇಳಿರುವಂತೆ ಈ ಸೂಕ್ತದ ಋಷಿಯಾದ ಕವಷನು ಜೂಜುಗಾರನೆಂದೂ, ಪಗಡೆ ಆಡುವುದರಲ್ಲಿ ಆಸಕ್ತಿಯುಳ್ಳವನೆಂದೂ ಪ್ರಸಿದ್ಧಿಯಾಗಿದಾನೆ. ಆದ್ದರಿಂದಲೇ ಪಗಡೆ ಆಟದಲ್ಲಿ ಜೂಜುಗಾರರಿಗೆ ಗೆದ್ದಾಗ ಉಂಟಾಗುವ ಸಂತೋಷಾತಿಶಯವನ್ನೂ, ಸೋತಾಗ ಉಂಟಾಗುವ ಹೃದಯವೇದನೆಯನ್ನೂ ಹೃದಯಂಗಮ ವಾಗಿಯೂ ಅನುಭವಪೂರ್ವಕವಾಗಿಯೂ ಬಹು ಚೆನ್ನಾಗಿ ವಿವರಿಸಿದಾನೆ. ಪಗಡೆದಾಳಗಳನ್ನು ಕೈಯಲ್ಲಿ ಕುಲುಕಿ ಎಸೆಯುವಾಗ ಅವು ನೀರಿನ ಝರಿಯಂತೆ ಉರುಳುತ್ತಾ ಕೊನೆಗೆ ನಿಲ್ಲುವಾಗ ತನಗೆ ಗೆಲ್ಲುವಂತೆ ಮಾಡುವವೋ ಅಥವಾ ಸೋಲುವಂತೆ ಮಾಡುವವೋ ಎಂಬ ಕಳವಳವನ್ನುಂಟುಮಾಡುತ್ತವೆ. ಇದು ಜೂಜುಗಾರರಿಗೆ ಅನುಭವ ವೇದ್ಯವಾಗಿರುವುದು. ಸಂತೋಷವನ್ನುಂಟುಮಾಡುವ ಸಂದರ್ಭದಲ್ಲಿ ಇಲ್ಲಿ ಒಂದು ದೃಷ್ಟಾಂತವನ್ನು ಕೊಡಲಾಗಿದೆ. **ಮೂಜವಾನ್** ಎಂಬುದು ಒಂದು ಎತ್ತರವಾದ ಪರ್ವತವು. ಎತ್ತರವಾದ ಪರ್ವತಪ್ರದೇಶದಲ್ಲಿ ಬೆಳೆಯುವ ಸೋಮ ಲತೆಗಳಲ್ಲಿ ದೊರಕುವ ರಸವು ಹೆಚ್ಚಾಗಿಯೂ, ಮದಕರವಾಗಿಯೂ ಸಂತೋಷವನ್ನುಂಟುಮಾಡುವುದಾಗಿಯೂ ಇರು

ವುದು. ಆದ್ದರಿಂದ ಇಂತಹ ಮೂಜವತ್ಪರ್ವತದ ಮೇಲೆ ಬೆಳೆಯುವ ಸೋಮಲತೆಗಳಿಂದ ಹಿಂಡಿ ತೆಗೆದ ಸೋಮ-ರಸವು ಅದನ್ನು ಪಾನಮಾಡುವವರಿಗೆ ಯಾವರೀತಿ ಅತ್ಯಂತ ಸಂತೋಷವನ್ನುಂಟುಮಾಡುವುದೋ ಅದರಂತೆ ಈ ಪಗಡೆದಾಳಗಳು ಆಟವಾಡುವ ಜೂಜುಗಾರರಿಗೆ ಗೆದ್ದಾಗ ಅತ್ಯಂತ ಸಂತೋಷವನ್ನುಂಟುಮಾಡುತ್ತವೆ ಎಂಬ ಸೋಮ ರಸದ ಉಪಮಾನವನ್ನು ಇಲ್ಲಿ ಕೊಟ್ಟಿದೆ.

ಈ ಸಂಬಂಧದಲ್ಲಿ ಈ ಋಕ್ಕಿನಲ್ಲಿ ಇರುವ ಕೆಲವು ಶಬ್ದಗಳಿಗೆ ನಿರ್ವಚನವನ್ನೂ, ಅರ್ಥವಿವರಣೆಯನ್ನೂ ಮಾಡಿದಾರೆ. **ವಿಭೀದಕ** ಎಂದರೆ ಒಂದು ವಿಧವಾದ ವೃಕ್ಷವಿಶೇಷವು. ಈ ಮರದಿಂದ ಆಟವಾಡುವ ಪಗಡೆದಾಳ ಗಳನ್ನು ಮಾಡಿ ಉಪಯೋಗಿಸುವುದರಿಂದ ದಾಳಗಳನ್ನು ಸೂಚಿಸುವುದಕ್ಕಾಗಿ ವಿಭೀದಕಶಬ್ದವನ್ನೇ ಋಷಿಯು ಉಪಯೋಗಿಸಿರುವನು.

**ಇರಿಣಂ** ಎಂದರೆ ಪಗಡೆ ಆಡುವ ಹಾಸು (ಬಟ್ಟೆ) ಅಥವಾ ಹಲಗೆಯು. ಇದರಲ್ಲಿ ಪಗಡೆಮನೆಗಳನ್ನು ಬರೆದಿರುವುದು. **ಇರಿಣಂ** ಎಂಬ ಶಬ್ದಕ್ಕೆ ನಿರ್ಋಣಂ ಎಂದು ಅರ್ಥವು. ಎಂದರೆ ಸಾಲವಿಲ್ಲದಿರುವ ಎಂದಭಿ ಪ್ರಾಯವು. ಆಟದಲ್ಲಿ ಪಣವಾಗಿಡುವ ಹಣವು ನಗದಾಗಿಯೇ ಇರಬೇಕು. ಸಾಲವಾಗಿ ಪಣವನ್ನು ಒಡ್ಡುವುದಿಲ್ಲ. ಆದ್ದರಿಂದ ಜೂಜು ಆಡುವಾಗ ಸಾಲದ ವಿಷಯವೇ ಇಲ್ಲದಿರುವುದರಿಂದ ಆಟಕ್ಕೆ ಮುಖ್ಯವಾದ ಹಾಸೆಂಬ ವಸ್ತುವನ್ನು **ಇರಿಣಂ** ಎಂಬ ಶಬ್ದದಿಂದ ಕರೆಯುವುದು ರೂಢಿಯಾಗಿದೆ. ಈ ಶಬ್ದವು ಹೋಗು ಎಂಬರ್ಥವುಳ್ಳ **ಋ ಗತೌ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ ಅಥವಾ **ಇರಿಣಂ** ಎಂದರೆ ಪರ್ವತಪ್ರದೇಶಕ್ಕೆ ಹೆಸರು. ಏಕೆಂದರೆ ಈ ಪರ್ವತಪ್ರದೇಶ ದಿಂದ ಓಷಧಿವನಸ್ಪತಿಗಳನ್ನು ತೆಗೆದುಕೊಂಡುಹೋಗುವರು. ಆದ್ದರಿಂದಲೂ **ಅಪಾರ್ಣಂ** ಅಥವಾ **ಇರಿಣಂ** ಎಂದು ಹೆಸರು.

**ಮೌಜವತಸ್ಯ ಭಕ್ಷಃ**—ಮೂಜವಾನ್ ಎಂಬುದು ಒಂದು ಪರ್ವತದ ಹೆಸರು. ಈ ಪರ್ವತದಲ್ಲಿ ಬೆಳೆ ಯುವ ಓಷಧ್ಯಾದಿಗಳಿಗೆ, ವಿಶೇಷವಾಗಿ ಸೋಮಲತೆಗೆ ಮೌಜವತ (ಮೂಜವಾನ್ ಎಂಬ ಪರ್ವತದಲ್ಲಿ ಬೆಳೆದದ್ದು) ಎಂದು ಹೆಸರು. ಈ ಪರ್ವತಕ್ಕೆ ಈ ಹೆಸರು ಬರಲು ಕಾರಣವೇನೆಂದರೆ ಇಲ್ಲಿ **ಮುಂಜ** ಎಂಬ ಒಂದು ವಿಧವಾದ ಶರ ಅಥವಾ ದರ್ಭವಿಶೇಷವು ಬೆಳೆಯುವುದರಿಂದ ಇದಕ್ಕೆ **ಮೂಜವಾನ್** (ಮುಂಜವೆಂಬ ಹುಲ್ಲು ಬೆಳೆಯುವ) ಎಂದು ಹೆಸರು ಬಂದಿದೆ.

**ಮುಂಜ** ಎಂದರೆ ಒಂದು ವಿಧವಾದ ಹುಲ್ಲು ಅಥವಾ ದರ್ಭೆಯು. ಈ ಶಬ್ದವು ಮುಚ್ ಧಾತುವಿನಿಂದ ನಿಷ್ಪನ್ನವಾಗಿದೆ. ಎಂದರೆ **ಇಷೀಕ**ವೆಂಬ ಮತ್ತೊಂದು ಬಗೆಯ ಹುಲ್ಲಿನಿಂದ ಪ್ರತ್ಯೇಕಿಸಲ್ಪಟ್ಟಿರುವುದರಿಂದ (**ಇಷೀಕಯಾ ವಿಮುಚ್ಯತ ಇತಿ ಮುಂಜಃ**) ಇದಕ್ಕೆ **ಮುಂಜ**ವೆಂದು ಹೆಸರು.

**ಇಷೀಕಾ** ಎಂಬ ಶಬ್ದವು ಹೋಗು ಎಂಬರ್ಥವುಳ್ಳ ಇಷತಿಧಾತುವಿನಿಂದ ನಿಷ್ಪನ್ನವಾಗಿದೆ. ಈ ಶಬ್ದಕ್ಕೆ ಒಂದು ವಿಧವಾದ ಹುಲ್ಲು ಎಂತಲೂ (ಧನುಸ್ಸಿನಿಂದ ಹೊರಹೊರಡುವುದರಿಂದ) ಬಾಣವೆಂತಲೂ ಎರಡು ವಿಧವಾದ ಅರ್ಥಗಳಿರುವವು.

**ವಿಭೀದಕ**—ಎಂದರೆ ಕೊರೆಯುವುದು ಎಂದರ್ಥವು. ಈ ಮರದಿಂದ ದಾಳಗಳನ್ನು ಕೊರೆದು (ಕೆತ್ತಿ) ಮಾಡುವುದರಿಂದ ದಾಳಕ್ಕೆ ವಿಭೀದಕವೆಂದು ಹೆಸರು.

**ಜಾಗೃವಿಃ**—ಎಂದರೆ ನಿದ್ರೆಮಾಡದೆ ಎಚ್ಚರದಿಂದಿರುವುದು. ರಾತ್ರೆಕಾಲದಲ್ಲಿ ಜೂಜಾಡುವಾಗ ನಿದ್ರೆಯನ್ನು ಬಿಟ್ಟು ಎಷ್ಟು ಹೊತ್ತಾದರೂ ಎಚ್ಚರವಾಗಿರುವುದು ರೂಢಿಯು.

ಈ ಋಕ್ಕಿನಲ್ಲಿ ಋಷಿಯು ಪಗಡೆಆಟದಿಂದ ತನಗೆ (ಗೆಲ್ಲುವಾಗ) ಉಂಟಾಗುವ ಸಂತೋಷವನ್ನು ಪ್ರಶಂಸೆ ಮಾಡಿರುವನು. ಮುಂದಿನ ಋಕ್ಕುಗಳಲ್ಲಿ (ಪ್ರಾಯಶಃ ತನಗೆ ಸೋಲಾದ್ದರಿಂದ) ಪಗಡೆದಾಳಗಳನ್ನೂ, ಜೂಜನ್ನೂ ನಿಂದಿಸಿ ಅದರಿಂದ ಜೂಜಾಡುವ ಜನರಿಗೆ ಉಂಟಾಗುವ ಮನೋವ್ಯಥೆಯನ್ನೂ, ದುಃಖವನ್ನೂ, ಕಷ್ಟಗಳನ್ನೂ ವಿವರಿಸಿ ಜೂಜಾಡುವುದನ್ನು ಅನುಭವಪೂರ್ವಕವಾಗಿ ನಿಂದಿಸಿರುವನು.

॥ ಸಂಹಿತಾಪಾಠಃ ॥

ನ ಮಾ ಮಿಮೇಥ ನ ಜಿಹೀಳ ಏಷಾ ಶಿವಾ ಸಖಿಭ್ಯ ಉತ ಮಹ್ಯಮಾ-
ಸೀತ್ ।
ಅಕ್ಷಸ್ಯಾಹಮೇಕಪರಸ್ಯ ಹೇತೋರನುವ್ರತಾಮಪ ಜಾಯಾಮರೋಧಂ ॥೨॥

॥ ಪದಪಾಠಃ ॥

ನ । ಮಾ । ಮಿಮೇಥ । ನ । ಜಿಹೀಳೇ । ಏಷಾ । ಶಿವಾ । ಸಖಿಽಭ್ಯಃ । ಉತ । ಮಹ್ಯಂ । ಆಸೀತ್ ।
ಅಕ್ಷಸ್ಯ । ಅಹಂ । ಏಕಽಪರಸ್ಯ । ಹೇತೋಃ । ಅನುಽವ್ರತಾಂ । ಅಪ । ಜಾಯಾಂ । ಅರೋಧಂ ॥ ೨ ॥

॥ ಸಾಯಣಭಾಷ್ಯಂ ॥

ಏಷಾಽಸ್ಮದೀಯಾ ಜಾಯಾ ಮಾ ಮಾಂ ಕಿತವಂ ನ ಮಿಮೇಥ ನ ಚ ಚುಕ್ರೋಧ ನ ಜಿಹೀಳೇ ನ ಚ ಲಜ್ಜಿತವತೀ । ಸಖಿಭ್ಯೋಽಸ್ಮದೀಯೇಭ್ಯಃ ಕಿತವೇಭ್ಯಃ ಶಿವಾ ಸುಖಕರ್ಯಾಸೀತ್ । ಅಭೂತ್ । ಉತಾಪಿ ಚ ಮಹ್ಯಂ ಶಿವಾಸೀತ್ । ಇತ್ಥಮನುವ್ರತಾಮನುಕೂಲಾಂ ಜಾಯಾಮೇಕಪರ- ಸ್ಯೈಕಃ ಪರಃ ಪ್ರಧಾನಂ ಯಸ್ಯ ತಸ್ಯಾಕ್ಷಸ್ಯ ಹೇತೋಃ ಕಾರಣಾದಹಮಪಾರೋಧಂ । ಪರಿತ್ಯಕ್ತವಾನ- ಸ್ಮೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಏಷಾ**—ಈ ನನ್ನ ಪತ್ನಿಯು । **ಮಾ**—ನನ್ನ ಮೇಲೆ । **ನ ಮಿಮೇಥ**—ಕೋಪಗೊಂಡಿಲ್ಲ। **ನ ಜಿಹೀಳೇ**—ನನ್ನ ಅಪರಾಧಕ್ಕಾಗಿ ನಾಚಿಕೆಯನ್ನು ತೋರಿಸಿಲ್ಲ । **ಸಖಿಭ್ಯಃ**—ನನ್ನ ಮಿತ್ರರಿಗೆ । **ಶಿವಾ**—ಆದರವನ್ನು ತೋರಿಸು ವವಳಾಗಿ । **ಆಸೀತ್**—ಇದ್ದಳು । **ಉತ**—ಮತ್ತು । **ಮಹ್ಯಂ**—ನನಗೂ ಹಿತಕರಳಾಗಿದ್ದಳು (ಆದರೂ ಸಹ) । **ಅನುವ್ರತಾಂ**—ನನಗೆ ಉಪಕಾರಕಳಾಗಿದ್ದ । **ಜಾಯಾಂ**—ಆ ಪತ್ನಿಯನ್ನು । **ಏಕಪರಸ್ಯ**—ಜೂಜುಗಾರರಲ್ಲಿ ಒಬ್ಬನಿಗೆ ಮಾತ್ರ ಹಿತಕಾರಿಯಾಗಿದ್ದ । **ಅಕ್ಷಸ್ಯ ಹೇತೋಃ**—ಈ ಪಗಡೆಯ ಕಾರಣಕ್ಕಾಗಿ । **ಅಹಂ**—ನಾನು । **ಅಪಾರೋಧಂ**—ತ್ಯಜಿಸಿಬಿಟ್ಟಿನು.

॥ ಭಾವಾರ್ಥ ॥

ನಾನು ಜೂಜುಗಾರನಾಗಿದ್ದರೂ ನನ್ನ ಪತ್ನಿಯು ನನ್ನ ಮೇಲೆ ಕೋಪಗೊಂಡಿಲ್ಲ. ನನ್ನ ಚರ್ಯೆಗಾಗಿ ನಾಚಿಕೆಯನ್ನೂ ತೋರಿಸಿಲ್ಲ. ನನ್ನ ಮಿತ್ರರಿಗೆ ಆದರವನ್ನು ತೋರಿಸಿ ನನಗೆ ಬಹಳ ಹಿತಕಾರಿಣಿಯಾಗಿದ್ದಳು. ನನಗೆ ಹೀಗೆ ಉಪಕಾರಿಣಿಯಾಗಿದ್ದರೂ ಸಹ ಅಂತಹ ನನ್ನ ಪತ್ನಿಯನ್ನು ಜೂಜುಗಾರರಲ್ಲಿ ಒಂದು ಪಕ್ಷಕ್ಕೆ ಜಯವನ್ನು ಕೊಡತಕ್ಕ ಈ ಪಗಡೆಯ ಕಾರಣಕ್ಕಾಗಿ ನಾನು ತ್ಯಜಿಸಿಬಿಟ್ಟೆನು.

English Translation

This (my wife) has not been angry (with me), nor was she overcome with shame; kind was she to me and to my friends; yet for the sake of one or other die, I have deserted this affectionate spouse.

॥ ಸಂಹಿತಾಪಾಠಃ ॥

ದ್ವೇಷ್ಟಿ ಶ್ವಶ್ರೂರಪ ಜಾಯಾ ರುಣದ್ಧಿ ನ ನಾಥಿತೋ ವಿಂದತೇ ಮರ್ಡಿ-
ತಾರಂ ।
ಅಶ್ವಸ್ಯೇವ ಜರತೋ ವಸ್ನ್ಯಸ್ಯ ನಾಹಂ ವಿಂದಾಮಿ ಕಿತವಸ್ಯ ಭೋಗಂ ॥೩॥

॥ ಪದಪಾಠಃ ॥

ದ್ವೇಷ್ಟಿ । ಶ್ವಶ್ರೂಃ । ಅಪ । ಜಾಯಾ । ರುಣದ್ಧಿ । ನ । ನಾಥಿತಃ । ವಿಂದತೇ । ಮರ್ಡಿತಾರಂ ।
ಅಶ್ವಸ್ಯಽಇವ । ಜರತಃ । ವಸ್ನ್ಯಸ್ಯ । ನ । ಅಹಂ । ವಿಂದಾಮಿ । ಕಿತವಸ್ಯ । ಭೋಗಂ ॥ ೩ ॥

॥ ಸಾಯಣಭಾಷ್ಯಂ ॥

ಶ್ವಶ್ರೂರ್ಜಾಯಾಯಾ ಮಾತಾ ಗೃಹಗತಂ ಕಿತವಂ ದ್ವೇಷ್ಟಿ । ನಿಂದತೀತ್ಯರ್ಥಃ । ಕಿಂಚ ಜಾಯಾ ಭಾರ್ಯಾಪ ರುಣದ್ಧಿ । ನಿರುಣದ್ಧಿ । ಅಪಿ ಚ ನಾಥಿತೋ ಯಾಚಮಾನಃ ಕಿತವೋ ಧನಂ ಮರ್ಡಿತಾರಂ ಧನದಾನೇನ ಸುಖಯಿತಾರಂ ನ ವಿಂದತೇ । ನ ಲಭತೇ । ಇತ್ಥಂ ಬುದ್ಧ್ವಾ ವಿಮೃಶನ್ನಹಂ ಜರತೋ ವೃದ್ಧಸ್ಯ ವಸ್ನ್ಯಸ್ಯ । ವಸ್ನಂ ಮೂಲ್ಯಂ । ತದರ್ಹಸ್ಯಾಶ್ವಸ್ಯೇವ ಕಿತವಸ್ಯ ಭೋಗಂ ನ ವಿಂದಾಮಿ । ನ ಲಭೇ ॥

॥ ಪ್ರತಿಪದಾರ್ಥ ॥

ಶ್ವಶ್ರೂಃ—ನನ್ನ ಪತ್ನಿಯ ತಾಯಿಯು (ಅತ್ತೆಯು) । ದ್ವೇಷ್ಟಿ—ನನ್ನನ್ನು ದೂಷಿಸುತ್ತಾಳೆ । ಜಾಯಾ—ನನ್ನ ಪತ್ನಿಯು । ಅಪ ರುಣದ್ಧಿ-ನನ್ನನ್ನು ತಡೆಯುತ್ತಾಳೆ। ನಾಥಿತಃ-ಯಾಚನೆಯನ್ನು ಮಾಡುವ ಜೂಜುಗಾರನು। ಮರ್ಡಿತಾರಂ—ಇವನಿಗೆ ತೃಪ್ತಿಯನ್ನುಂಟುಮಾಡುವ ದಾತೃವನ್ನು । ನ ವಿಂದತೇ—ಖಂಡಿತ ಹೊಂದುವುದಿಲ್ಲ ।

**ವಸ್ನ್ಯಸ್ಯ**—ಬೆಲೆಬಾಳತಕ್ಕದ್ದಾದರೂ ಸಹ | **ಜರತಃ**—ಮುದಿಯಾದ | **ಅಶ್ವಸ್ಯೇವ**—ಕುದುರೆಯಂತೆ | **ಅಹಂ**—ನಾನು | **ಕಿತವಸ್ಯ**—ಜೂಜುಗಾರನ | **ಭೋಗಂ**—ಸುಖವನ್ನು | **ನ ವಿಂದಾಮಿ**—ಹೊಂದುವುದಿಲ್ಲ.

॥ ಭಾವಾರ್ಥ ॥

ನನ್ನ ಅತ್ತೆಯು ನನ್ನನ್ನು ನಿಂದಿಸುತ್ತಾಳೆ. ನನ್ನ ಪತ್ನಿಯು ಯಾವಾಗಲೂ ನನ್ನನ್ನು ತಡೆಯುತ್ತಾಳೆ. ಜೂಜುಗಾರನಾದವನು ಯಾರನ್ನು ಯಾಚಿಸಿದರೂ ಇವನಿಗೆ ತೃಪ್ತಿಯನ್ನು ಕೊಡುವ ಉದಾರಿಯೂ ಇರುವುದಿಲ್ಲ. ಕುದುರೆಯು ಬಹಳ ಬೆಲೆಬಾಳುವುದಾದರೂ ಸಹ ಮುದಿಯಾದಾಗ ಅದಕ್ಕೆ ಸುಖವು ಸಿಕ್ಕದಿರುವಂತೆ, ನಾನು ಯೋಗ್ಯನಾದರೂ, ಜೂಜುಗಾರನಾದುದರಿಂದ ನನಗೆ ಖಂಡಿತ ಸುಖವಿಲ್ಲ.

## English Translation

My mother-in-law reviles me, my wife opposes me; the beggar meets no compassionate (benefactor): I do not realize the enjoyment of the gamester any more than that of a valuable horse grown old.

॥ ಸಂಹಿತಾಪಾಠಃ ॥

ಅನ್ಯೇ ಜಾಯಾಂ ಪರಿ ಮೃಶಂತ್ಯಸ್ಯ ಯಸ್ಯಾಗೃಧದ್ವೇದನೇ ವಾಜ್ಯ೧ಕ್ಷಃ ।
ಪಿತಾ ಮಾತಾ ಭ್ರಾತರ ಏನಮಾಹುರ್ನ ಜಾನೀಮೋ ನಯತಾ ಬದ್ಧಮೇತಂ ॥೪॥

॥ ಪದಪಾಠಃ ॥

ಅನ್ಯೇ । ಜಾಯಾಂ । ಪರಿ । ಮೃಶಂತಿ । ಅಸ್ಯ । ಯಸ್ಯ । ಅಗೃಧತ್ । ವೇದನೇ । ವಾಜೀ । ಅಕ್ಷಃ ।
ಪಿತಾ । ಮಾತಾ । ಭ್ರಾತರಃ । ಏನಂ । ಆಹುಃ । ನ । ಜಾನೀಮಃ । ನಯತ । ಬದ್ಧಂ । ಏತಂ ॥ ೪ ॥

॥ ಸಾಯಣಭಾಷ್ಯಂ ॥

ಯಸ್ಯ ಕಿತವಸ್ಯ ವೇದನೇ ಧನೇ ವಾಜೀ ಬಲವಾನಕ್ಷೋ ದೇವೋಽಗೃಧತ್-ಅಭಿಕಾಂಕ್ಷಾಂ ಕರೋತಿ ತಸ್ಯಾಸ್ಯ ಕಿತವಸ್ಯ ಜಾಯಾಂ ಭಾರ್ಯಾಮನ್ಯೇ ಪ್ರತಿಕಿತವಾಃ ಪರಿ ಮೃಶಂತಿ । ವಸ್ತ್ರಕೇಶಾದ್ಯಾಕರ್ಷಣೇನ ಸಂಸ್ಪೃಶಂತಿ । ಕಿಂಚ । ಪಿತಾ ಜನನೀ ಚ ಭ್ರಾತರಃ ಸಹೋದರಾಶ್ಚೈನಂ ಕಿತವಮಾಹುಃ । ವದಂತಿ । ನ ವಯಮಸ್ಮದೀಯಮೇನಂ ಜಾನೀಮಃ । ರಜ್ಜ್ವಾ ಬದ್ಧಮೇತಂ ಕಿತವಂ ಹೇ ಕಿತವಾಃ ಯೂಯಂ ನಯತ । ಯಥೇಷ್ಟದೇಶಂ ಪ್ರಾಪಯತೇತಿ ॥

॥ ಪ್ರತಿಪದಾರ್ಥ ॥

**ಯಸ್ಯ**—ಯಾವ ಜೂಜುಗಾರನ । **ವೇದನೇ**—ಧನದಲ್ಲಿ । **ವಾಜೀ**—ಶಕ್ತಿಯುತವಾದ । **ಅಕ್ಷಃ**—ಪಗಡೆದಾಳವು । **ಅಗೃಧತ್**—ಅಪಹರಿಸುವ ಆಸೆಯನ್ನು ತೋರಿಸುವುದೋ । **ಅಸ್ಯ**—ಅಂತಹ ಜೂಜುಗಾರನ । **ಜಾಯಾಂ**—ಪತ್ನಿಯನ್ನು । **ಅನ್ಯೇ**—ಇವನ ಪ್ರತಿಕಕ್ಷಿಗಳು । **ಪರಿ ಮೃಶಂತಿ**—ಹಿಡಿದೆಳೆದು ಅವಮಾನಪಡಿಸುತ್ತಾರೆ । **ನ ಜಾನೀಮಃ**—ಇವನು ಯಾರೋ ನಮಗೆ ಗೊತ್ತಿಲ್ಲ । **ಬದ್ಧಂ**—ಹಗ್ಗದಿಂದ ಬಂಧಿತನಾದ । **ಏತಂ**—ಇವನನ್ನು । **ನಯತ**—ನಿಮ್ಮಿಷ್ಟಬಂದತ್ತ ಜಾಗಕ್ಕೆ ಕರೆದೊಯ್ಯಿರಿ ಎಂಬುದಾಗಿ । **ಪಿತಾ**—ಇವನ ತಂದೆಯೂ । **ಮಾತಾ**—ತಾಯಿಯೂ । **ಭ್ರಾತರಃ**—ಸಹೋದರರೂ । **ಏನಂ**—ಇವನ ವಿಷಯದಲ್ಲಿ । **ಆಹುಃ**—ಹೇಳುತ್ತಾರೆ.

॥ ಭಾವಾರ್ಥ ॥

ಯಾವ ಜೂಜುಗಾರನ ಧನವನ್ನು ಶಕ್ತಿಯುತವಾದ ಪಗಡೆದಾಳವು ಇಚ್ಛಿಸಿ ಅಪಹರಿಸುವುದೋ, ಅಂತಹ ಜೂಜುಗಾರನ ಪತ್ನಿಯನ್ನು ಇವನ ಪ್ರತಿಕಕ್ಷಿಗಳು ಹಿಡಿದೆಳೆದು ಅವಮಾನಪಡಿಸುತ್ತಾರೆ. "ಇವನ ವಿಷಯವು ನಮಗೆ ಸಂಬಂಧಿಸಿದುದಲ್ಲ. ಇವನನ್ನು ಕಟ್ಟಿ ಎಲ್ಲಿಗೆ ಬೇಕಾದರೂ ಕರೆದೊಯ್ಯಿರಿ" ಎಂಬುದಾಗಿ ಇವನ ಮಾತಾಪಿತೃಗಳೂ, ಸಹೋದರರೂ ಇವನ ವಿಷಯದಲ್ಲಿ ಹೇಳುತ್ತಾರೆ.

English Translation

Others touch the wife of him whose wealth the potent dice covet: his mother, father, brothers say, "We know him not, take him away bound (wherever you will)".

। ಸಂಹಿತಾಪಾಠಃ ।

ಯದಾದೀಧ್ಯೇ ನ ದವಿಷಾಣ್ಯೇಭಿಃ ಪರಾಯದ್ಭ್ಯೋಽವ ಹೀಯೇ ಸಖಿಭ್ಯಃ ।
ನ್ಯುಪ್ತಾಶ್ಚ ಬಭ್ರವೋ ವಾಚಮಕ್ರತ ಏಮೀದೇಷಾಂ ನಿಷ್ಕೃತಂ ಜಾರಿಣೀವ ॥ ೫ ॥

। ಪದಪಾಠಃ ।

ಯತ್ । ಆಽದೀಧ್ಯೇ । ನ । ದವಿಷಾಣಿ । ಏಭಿಃ । ಪರಾಯತ್ಽಭ್ಯಃ । ಅವ । ಹೀಯೇ । ಸಖಿಽಭ್ಯಃ । ನಿಽಉಪ್ತಾಃ । ಚ । ಬಭ್ರವಃ । ವಾಚಂ । ಅಕ್ರತ । ಏಮಿ । ಇತ್ । ಏಷಾಂ । ನಿಃಽಕೃತಂ । ಜಾರಿಣೀಽಇವ ॥ ೫ ॥

। ಸಾಯಣಭಾಷ್ಯಂ ।

ಯದ್ಯದಾಹಮಾದೀಧ್ಯೇ ಧ್ಯಾಯಾಮಿ ತದಾನೀಮೇಭಿರಕ್ಷೈರ್ನ ದವಿಷಾಣಿ । ನ ದೂಷಯೇ । ನ ಪರಿತಪಾಮಿ । ಯದ್ವಾ । ನ ದವಿಷಾಣಿ । ನ ದೇವಿಷ್ಯಾಮೀತ್ಯರ್ಥಃ । ಪರಾಯದ್ಭ್ಯಃ ಸ್ವಯಮೇವ

ಪರಾಗಚ್ಛದ್ಭ್ಯಃ ಸಖಿಭ್ಯಃ ಸಖಿಭೂತೇಭ್ಯಃ ಕಿತವೇಭ್ಯೋಽವ ಹೀಯೇ । ಅವಹಿತೋ ಭವಾಮಿ । ನಾಹಂ ಪ್ರಥಮಮಕ್ಷಾನ್ವಿಸೃಜಾಮೀತಿ । ಕಿಂಚ ಬಭ್ರವೋ ಬಭ್ರುವರ್ಣಾ ಅಕ್ಷಾ ನ್ಯುಪ್ತಾಃ ಕಿತವೈರವಕ್ಷಿಪ್ತಾಃ ಸಂತೋ ವಾಚಮಕ್ರತ । ಶಬ್ದಂ ಕುರ್ವಂತಿ । ತದಾ ಸಂಕಲ್ಪಂ ಪರಿತ್ಯಜ್ಯಾಕ್ಷವ್ಯಸನೇನಾಭಿಭೂಯಮಾನೋಽಹಮೇಷಾಮಕ್ಷಾಣಾಂ ನಿಷ್ಕೃತಂ ಸ್ಥಾನಂ ಜಾರಿಣೀವ ಯಥಾ ಕಾಮವ್ಯಸನೇನಾಭಿಭೂಯಮಾನಾ ಸ್ವೈರಿಣೀ ಸಂಕೇತಸ್ಥಾನಂ ಯಾತಿ ತದ್ವದೇಮೀತ್ । ಗಚ್ಛಾಮ್ಯೇವ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ಆದೀಧ್ಯೇ**—ನನ್ನ ಚರ್ಯೆಯ ವಿಷಯದಲ್ಲಿ ಯೋಚಿಸುವೆನೋ ಆಗ । **ಏಭಿಃ**—ಈ ದಾಳಗಳೊಂದಿಗೆ । **ನ ದವಿಷಾಣಿ**—ಆಡುವುದೇ ಇಲ್ಲವೆಂದು । **ಪರಾಯದ್ಭ್ಯಃ**—ನನ್ನನ್ನು ಬಿಟ್ಟು ಓಡುವ । **ಸಖಿಭ್ಯಃ**—ಮಿತ್ರರೊಡನೆ । **ಅವ ಹೀಯೆ**—ಎಚ್ಚರಿಕೆಯಿಂದ ಪ್ರತಿಜ್ಞೆಮಾಡುತ್ತೇನೆ (ಆದರೆ) । **ಬಭ್ರವಃ**—ಹೊಂಬಣ್ಣದ ದಾಳಗಳು । **ನ್ಯುಪ್ತಾಃ**—ಜೂಜುಗಾರರಿಂದ ಎಸೆಯಲ್ಪಟ್ಟು । **ವಾಚಂ ಅಕ್ರತ**—ಶಬ್ದವನ್ನು ಮಾಡುವುದನ್ನು ಕೇಳಿದಾಗ । **ಜಾರಿಣೀವ**—ಕಾಮುಕಳಾದ ಸ್ತ್ರೀಯು ಸಂಕೇತಸ್ಥಾನಕ್ಕೆ ಅವಸರದಿಂದ ಓಡುವಂತೆ । **ಏಷಾಂ**—ಈ ದಾಳಗಳ । **ನಿಷ್ಕೃತಂ**—ಸ್ಥಾನಕ್ಕೆ । **ಏಮೀತ್**—ಖಂಡಿತ ಹೋಗಿ ಸೇರುತ್ತೇನೆ.

॥ ಭಾವಾರ್ಥ ॥

ನಾನು ನನ್ನ ಚರ್ಯೆಯ ವಿಷಯದಲ್ಲಿ ಯೋಚಿಸತೊಡಗಿದಾಗ "ಈ ದಾಳಗಳೊಂದಿಗೆ ಇನ್ನು ಆಡುವುದೇ ಇಲ್ಲ" ಎಂದು ನನ್ನನ್ನೂ ತ್ಯಜಿಸಿ ಹೋಗುವ ನನ್ನ ಮಿತ್ರರ ಮುಂದೆ (ಇತರ ಜೂಜುಕೋರರೊಂದಿಗೆ) ಪ್ರತಿಜ್ಞೆಯನ್ನು ಮಾಡುತ್ತೇನೆ. ಆದರೆ, ಯಾವಾಗ ಹೊಂಬಣ್ಣದ ದಾಳಗಳು ಜೂಜಾಟದ ಕಾಲದಲ್ಲಿ ಎಸೆಯಲ್ಪಟ್ಟು ಆಕರ್ಷಕವಾದ ಶಬ್ದವನ್ನು ಮಾಡುವುವೋ, ಆ ಒಡನೆಯೇ ಕಾಮುಕಳಾದ ಸ್ತ್ರೀಯು ಸಂಕೇತಸ್ಥಾನಕ್ಕೆ ಅವಸರವಾಗಿ ಓಡಿಹೋಗಿ ಸೇರುವಂತೆ, ನಾನೂ ಆ ದಾಳಗಳ ಸ್ಥಾನಕ್ಕೆ ಖಂಡಿತ ಹೋಗಿ ಸೇರುತ್ತೇನೆ.

## English Translation

When I reflect, (then I say), "I will play no more with them", I pay attention to my friends who desert (me); and the tawny dice rattle as they are thrown : I hasten to their accustomed place as a harlot (to an assignation).

॥ ಸಂಹಿತಾಪಾಠಃ ॥

ಸಭಾಮೇತಿ ಕಿತವಃ ಪೃಚ್ಛಮಾನೋ ಜೇಷ್ಯಾಮೀತಿ ತನ್ವಾ೩ ಶೂಶುಜಾನಃ ।
ಅಕ್ಷಾಸೋ ಅಸ್ಯ ವಿ ತಿರಂತಿ ಕಾಮಂ ಪ್ರತಿದೀವ್ನೇ ದಧತ ಆ ಕೃತಾನಿ ॥೬॥

॥ ಪದಪಾಠಃ ॥

ಸಭಾಂ । ಏತಿ । ಕಿತವಃ । ಪೃಚ್ಛಮಾನಃ । ಜೇಷ್ಯಾಮಿ । ಇತಿ । ತನ್ವಾ । ಶೂಶುಜಾನಃ ।

ಅಕ್ಷಾಸಃ । ಅಸ್ಯ । ವಿ । ತಿರಂತಿ । ಕಾಮಂ । ಪ್ರತಿಽದೀವ್ನೇ । ದಧತಃ । ಆ । ಕೃತಾನಿ ॥೬॥

॥ ಸಾಯಣಭಾಷ್ಯಂ ॥

ತನ್ವಾ ಶರೀರೇಣ ಶೂಶುಜಾನಃ ಶೋಶುಚಾನೋ ದೀಪ್ಯಮಾನಃ ಕಿತವಃ ಕೋಽತ್ರಾಸ್ತಿ ಧನಿಕಸ್ತಂ ಜೇಷ್ಯಾಮೀತಿ ಪೃಚ್ಛಮಾನಃ ಪೃಚ್ಛನ್ ಸಭಾಂ ಕಿತವಸಂಬಂಧಿನೀಮೇತಿ । ಗಚ್ಛತಿ । ತತ್ರ ಪ್ರತಿದೀವ್ನೇ ಪ್ರತಿದೇವಿತ್ರೇ ಕಿತವಾಯ ಕೃತಾನಿ ದೇವನೋಪಯುಕ್ತಾನಿ ಕರ್ಮಾಣ್ಯಾ ದಧತೋ ಜಯಾರ್ಥಮಾಭಿಮುಖ್ಯೇನ ಮರ್ಯಾದಯಾ ವಾ ದಧತೋಽಸ್ಯ ಕಿತವಸ್ಯ ಕಾಮಮಿಚ್ಛಾಮಕ್ಷಾಸೋಽಕ್ಷಾ ವಿತರಂತಿ । ವರ್ಧಯಂತಿ ॥

॥ ಪ್ರತಿಪದಾರ್ಥ ॥

ತನ್ವಾ—ತನ್ನ ಶರೀರಕಾಂತಿಯಿಂದ । ಶೂಶುಜಾನಃ—ಪ್ರಕಾಶಿಸುವ । ಕಿತವಃ—ಜೂಜುಗಾರನು (ಇಲ್ಲಿ ಯಾವನಿರುವನೋ ಅವನನ್ನು) । ಜೇಷ್ಯಾಮಿ—ಜಯಿಸಬಲ್ಲೆನೇ । ಇತಿ—ಎಂಬುದಾಗಿ । ಪೃಚ್ಛಮಾನಃ—ತನ್ನಲ್ಲೇ ಪ್ರಶ್ನಿಸುತ್ತ । ಸಭಾಂ—ದ್ಯೂತದ ಕಟ್ಟೆಯನ್ನು । ಏತಿ—ಪ್ರವೇಶಿಸುತ್ತಾನೆ । ಪ್ರತಿದೀವ್ನೇ—ತನ್ನ ಪ್ರತಿಕಕ್ಷಿಗೆ ತೋರಿಸುವ । ಕೃತಾನಿ—ಸವಾಲಿನ ಕಾರ್ಯಗಳನ್ನು । ಆದಧತಃ—ಚಮತ್ಕಾರದಿಂದ ತೋರಿಸಿಕೊಡುವ । ಅಸ್ಯ—ಈ ದ್ಯೂತಕಾರನ । ಕಾಮಂ—ಇಚ್ಛೆಯನ್ನು । ಅಕ್ಷಾಸಃ—ದಾಳಗಳು । ವಿ ತಿರಂತಿ—ಹೆಚ್ಚಾಗುವಂತೆ ಮಾಡುತ್ತವೆ.

॥ ಭಾವಾರ್ಥ ॥

ತನ್ನ ಶರೀರಕಾಂತಿಯಿಂದ ಪ್ರಕಾಶಿಸುವ ಜೂಜುಗಾರನು ಇಲ್ಲಿ ಯಾವನಿರುವನೋ ಅವನನ್ನು ಜಯಿಸಬಲ್ಲೆನೇ ಎಂಬುದಾಗಿ ತನ್ನಲ್ಲೇ ಪ್ರಶ್ನಿಸುತ್ತ ಜೂಜಿನ ಕಟ್ಟೆಯನ್ನು ಪ್ರವೇಶಿಸುತ್ತಾನೆ. ತನ್ನ ಪ್ರತಿಕಕ್ಷಿಗೆ ತನ್ನ ಸವಾಲಿನ ರೂಪದ ಚಮತ್ಕಾರಕಾರ್ಯಗಳನ್ನು ತೋರಿಸುವಾಗ ದಾಳಗಳು ಇವನ ದ್ಯೂತೇಚ್ಛೆಯನ್ನು ಇನ್ನೂ ಅಧಿಕವಾಗುವಂತೆ ಮಾಡುತ್ತವೆ.

## English Translation

The gamester goes to the gaming table, radiant in person, and asking himself, "Shall I win?" The dice increase his passion for play as he practises the arts of (gambling) with his adversary.

॥ ಸಂಹಿತಾಪಾಠಃ ॥

ಅಕ್ಷಾಸ ಇದಂಕುಶಿನೋ ನಿತೋದಿನೋ ನಿಕೃತ್ವಾನಸ್ತಪನಾಸ್ತಾಪಯಿಷ್ಣವಃ ।
ಕುಮಾರದೇಷ್ಣಾ ಜಯತಃ ಪುನರ್ಹಣೋ ಮಧ್ವಾ ಸಂಪೃಕ್ತಾಃ ಕಿತವಸ್ಯ ಬರ್ಹಣಾ ॥ ೭ ॥

॥ ಪದಪಾಠಃ ॥

ಅಕ್ಷಾಸಃ । ಇತ್ । ಅಂಕುಶಿನಃ । ನಿऽತೋದಿನಃ । ನಿऽಕೃತ್ವಾನಃ । ತಪನಾಃ । ತಾಪಯಿಷ್ಣವಃ ।
ಕುಮಾರऽದೇಷ್ಣಾಃ । ಜಯತಃ । ಪುನಃऽಹನಃ । ಮಧ್ವಾ । ಸಂऽಪೃಕ್ತಾಃ । ಕಿತವಸ್ಯ । ಬರ್ಹಣಾ ॥೭॥

॥ ಸಾಯಣಭಾಷ್ಯಂ ॥

ಅಕ್ಷಾಸ ಇದಕ್ಷಾ ಏವಾಂಕುಶಿನೋऽಂಕುಶವಂತೋ ನಿತೋದಿನೋ ನಿತೋದಿತವಂತಶ್ಚ ನಿಕೃತ್ವಾನಃ ಪರಾಜಯೇ ನಿಕರ್ತನಶೀಲಾಶ್ಛೇತ್ತಾರೋ ವಾ ತಪನಾಃ ಪರಾಜಯೇ ಕಿತವಸ್ಯ ಸಂತಾಪಕಾಸ್ತಾಪಯಿಷ್ಣವಃ ಸರ್ವಸ್ವಹಾರಕತ್ವೇನ ಕುಟುಂಬಸ್ಯ ಸಂತಾಪನಶೀಲಾಶ್ಚ ಭವಂತಿ । ಕಿಂಚ ಜಯತಃ ಕಿತವಸ್ಯ ಕುಮಾರದೇಷ್ಣಾ ಧನದಾನೇನ ಧಾನ್ಯತಾಂ ಲಂಭಯಂತಃ ಕುಮಾರಾಣಾಂ ದಾತಾರೋ ಭವಂತಿ। ಅಪಿ ಚ ಮಧ್ವಾ ಮಧುನಾ ಸಂಪೃಕ್ತಾಃ ಪ್ರತಿಕಿತವೇನ ಬರ್ಹಣಾ ಪರಿವೃದ್ಧೇನ ಸರ್ವಸ್ವಹರಣೇನ ಕಿತವಸ್ಯ ಪುನರ್ಹಣಃ ಪುನರ್ಹಂತಾರೋ ಭವಂತಿ ॥

॥ ಪ್ರತಿಪದಾರ್ಥ ॥

**ಅಕ್ಷಾಸಃ ಇತ್**—ಪಗಡೆದಾಳಗಳೇ । **ಅಂಕುಶಿನಃ**—ಅಂಕುಶವನ್ನು ಹೊಂದಿರುವವಾಗಿಯೂ । **ನಿತೋದಿನಃ**—ಇಕ್ಕಳಗಳನ್ನು ಹೊಂದಿರುವುವಾಗಿಯೂ । **ನಿಕೃತ್ವಾನಃ**—ಕತ್ತರಿಸುವ ಶಕ್ತಿಯುಳ್ಳವಾಗಿಯೂ । **ತಪನಾಃ** ದುಃಖಕಾರಕಗಳಾಗಿಯೂ । **ತಾಪಯಿಷ್ಣವಃ**—ಸಂಸಾರಕ್ಕೆಲ್ಲಾ ದುಃಖದಾಯಕವಾಗಿಯೂ ಇರುತ್ತವೆ । **ಜಯತಃ**—ಜಯವನ್ನು ಹೊಂದುವ । **ಕಿತವಸ್ಯ**—ದ್ಯೂತಕಾರನಿಗೆ । **ಕುಮಾರದೇಷ್ಣಾಃ**—ಸಂತಾನವನ್ನು ಕೊಡತಕ್ಕವಾಗಿವೆ । **ಮಧ್ವಾ**—ಮಧುವಿನಿಂದ । **ಸಂಪೃಕ್ತಾಃ**—ಕೂಡಿರತಕ್ಕ ದಾಳಗಳು । **ಬರ್ಹಣಾ**—ಸರ್ವಸ್ವವನ್ನು ಅಪಹರಿಸುವುದರ ಮೂಲಕ (ಸೋತವನಿಗೆ) । **ಪುನರ್ಹಣಃ**—ತಿರುಗಿಯೂ ಸಾಯಿಸತಕ್ಕವಾಗಿರುತ್ತವೆ.

॥ ಭಾವಾರ್ಥ ॥

ಪಗಡೆದಾಳಗಳು ಅಂಕುಶಗಳಂತೆಯೂ, ಇಕ್ಕಳಗಳಂತೆಯೂ ಕತ್ತರಿಸುತ್ತ ದ್ಯೂತಕಾರನಿಗೂ ಅವನ ಸಂಸಾರಕ್ಕೂ ಪೂರ್ಣವಾಗಿ ದುಃಖವನ್ನು ಕೊಡತಕ್ಕವಾಗಿರುತ್ತವೆ. ಮಧುಯುಕ್ತವಾದ ಈ ದಾಳಗಳು ಜಯವನ್ನು ಹೊಂದುವವನಿಗೆ ಸಂತಾನದಾಯಕಗಳಾಗಿಯೂ, ಸೋತವನಿಗೆ ಸರ್ವಸ್ವವನ್ನೂ ಅಪಹರಿಸುವುದರ ಮೂಲಕ ಹತ್ಯಾಕಾರಿಯಾಗಿಯೂ ಇರುತ್ತವೆ.

## English Translation

Dice verily are armed with hooks, with goads, pricking, paining and torturing (the gamester): to the winning (player) they are the givers of sons, they are tipped with honey; slaying him in return by taking away the gambler's (all).

॥ ಸಂಹಿತಾಪಾಠಃ ॥

ತ್ರಿಪಂಚಾಶಃ ಕ್ರೀಳತಿ ವ್ರಾತ ಏಷಾಂ ದೇವ ಇವ ಸವಿತಾ ಸತ್ಯಧರ್ಮಾ ।
ಉಗ್ರಸ್ಯ ಚಿನ್ಮನ್ಯವೇ ನಾ ನಮಂತೇ ರಾಜಾ ಚಿದೇಭ್ಯೋ ನಮ ಇತ್ಕೃ-
ಣೋತಿ ॥ ೮ ॥

॥ ಪದಪಾಠಃ ॥

ತ್ರಿऽಪಂಚಾಶಃ । ಕ್ರೀಳತಿ । ವ್ರಾತಃ । ಏಷಾಂ । ದೇವಃऽಇವ । ಸವಿತಾ । ಸತ್ಯऽಧರ್ಮಾ ।
ಉಗ್ರಸ್ಯ । ಚಿತ್ । ಮನ್ಯವೇ । ನ । ನಮಂತೇ । ರಾಜಾ । ಚಿತ್ । ಏಭ್ಯಃ । ನಮಃ । ಇತ್ । ಕೃಣೋತಿ ॥೮॥

॥ ಸಾಯಣಭಾಷ್ಯಂ ॥

ಏಷಾಮಕ್ಷಾಣಾಂ ತ್ರಿಪಂಚಾಶಸ್ತ್ರ್ಯಧಿಕಪಂಚಾಶತ್ಸಂಖ್ಯಾಕೋ ವ್ರಾತಃ ಸಂಘಃ ಕ್ರೀಳತಿ ಆಸ್ಫಾರೇ ವಿಹರತಿ । ಅಕ್ಷಿಕಾಃ ಪ್ರಾಯೇಣ ತಾವದ್ಭಿರಕ್ಷೈರ್ದೀವ್ಯಂತಿ ಹಿ । ತತ್ರ ದೃಷ್ಟಾಂತಃ । ಸತ್ಯಧರ್ಮಾ ಸವಿತಾ ಸರ್ವಸ್ಯ ಜಗತಃ ಪ್ರೇರಕಃ ಸೂರ್ಯೋ ದೇವ ಇವ । ಯಥಾ ಸವಿತಾ ದೇವೋ ಜಗತಿ ವಿಹರತಿ ತದ್ವದಕ್ಷಾಣಾಂ ಸಂಘ ಆಸ್ಫಾರೇ ವಿಹರತೀತ್ಯರ್ಥಃ । ಕಿಂಚೋಗ್ರಸ್ಯ ಚಿತ್ ಕ್ರೂರಸ್ಯಾಪಿ ಮನ್ಯವೇ ಕ್ರೋಧಾಯೈತೇऽಕ್ಷಾ ನ ನಮಂತೇ । ನ ಪ್ರಹ್ವೀಭವಂತಿ । ನ ವಶೇ ವರ್ತಂತೇ । ತಂ ನಮಯಂತೀತ್ಯರ್ಥಃ । ರಾಜಾ ಚಿಜ್ಜಗತ ಈಶ್ವರೋऽಪ್ಯೇಭ್ಯೋ ನಮ ಇನ್ನಮಸ್ಕಾರಮೇವ ದೇವನವೇಲಾಯಾಂ ಕೃಣೋತಿ । ನಾವಜ್ಞಾಂ ಕರೋತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಸತ್ಯಧರ್ಮಾ—ಸತ್ಯಾತ್ಮಕವಾದ ಧರ್ಮವುಳ್ಳವನೂ । ಸವಿತಾ—ಸರ್ವಜಗತ್ಪ್ರೇರಕನೂ ಆದ । ದೇವಃ ಇವ—ಸೂರ್ಯದೇವನಂತೆ । ತ್ರಿಪಂಚಾಶಃ—ಐವತ್ತುಮೂರು ಸಂಖ್ಯೆಯುಳ್ಳ । ಏಷಾಂ—ಈ ದಾಳಗಳ ವ್ರಾತಃ—ಸಂಘವು । ಕ್ರೀಳತಿ—ಆಟವಾಡುತ್ತವೆ । ಉಗ್ರಸ್ಯ ಚಿತ್—ಕ್ರೂರಸ್ವಭಾವವುಳ್ಳ ಮನ್ಯವೇ—ಯಾವನ ಕ್ರೋಧಕ್ಕೂ । ನ ನಮಂತೇ—ಇವು ಬೆದರಿ ಬಗ್ಗುವುದಿಲ್ಲ ! ರಾಜಾ ಚಿತ್—ದೊರೆಯು ದರೂ ಸಹ । ಏಭ್ಯಃ—ಇದಕ್ಕೆ । ನಮ ಇತ್—ನಮಸ್ಕಾರವನ್ನೇ । ಕೃಣೋತಿ—ಮಾಡುತ್ತಾನೆ.

॥ ಭಾವಾರ್ಥ ॥

ಸತ್ಯಾತ್ಮಕವಾದ ಧರ್ಮವುಳ್ಳವನೂ, ಸರ್ವಜಗತ್ಪ್ರೇರಕನೂ ಆದ ಸವಿತೃವಿನಂತೆ ಐವತ್ತುಮೂರು ಸಂಖ್ಯೆಯುಳ್ಳ ಈ ದಾಳಗಳ ಸಂಘವು ಹಾಸಿನ ಮೇಲೆ ಆಟವಾಡುತ್ತದೆ. ಕ್ರೂರಸ್ವಭಾವವುಳ್ಳ ಯಾವನ ಕ್ರೋಧಕ್ಕೂ ಸಹ ಇವು ಬೆದರಿ ಬಗ್ಗುವುದಿಲ್ಲ. ದೊರೆಯೂ ಕೂಡ ಇವಕ್ಕೆ ನಮಸ್ಕಾರವನ್ನು ಮಾಡುತ್ತಾನೆ.

## English Translation

The aggregate fifty-three of them are played as the divine truth, observant Savitri, (travels): the dice bow not before the wrath of any, however violent; a king himself pays them homage.

॥ ಸಂಹಿತಾಪಾಠಃ ॥

ನೀಚಾ ವರ್ತಂತ ಉಪರಿ ಸ್ಫುರಂತ್ಯಹಸ್ತಾಸೋ ಹಸ್ತವಂತಂ ಸಹಂತೇ ।
ದಿವ್ಯಾ ಅಂಗಾರಾ ಇರಿಣೇ ನ್ಯುಪ್ತಾಃ ಶೀತಾಃ ಸಂತೋ ಹೃದಯಂ ನಿರ್ದ-
ಹಂತಿ ॥ ೯ ॥

॥ ಪದಪಾಠ ॥

ನೀಚಾ । ವರ್ತಂತೇ । ಉಪರಿ । ಸ್ಫುರಂತಿ । ಅಹಸ್ತಾಸಃ । ಹಸ್ತವಂತಂ । ಸಹಂತೇ ।
ದಿವ್ಯಾಃ । ಅಂಗಾರಾಃ । ಇರಿಣೇ । ನಿಽಉಪ್ತಾಃ । ಶೀತಾಃ । ಸಂತಃ । ಹೃದಯಂ । ನಿಃ । ದಹಂತಿ ॥ ೯ ॥

॥ ಸಾಯಣಭಾಷ್ಯಂ ॥

ಅಪಿ ಚೈತೇಽಕ್ಷಾ ನೀಚಾ ನೀಚೀನಸ್ಥಲೇ ವರ್ತಂತೇ । ತಥಾಪ್ಯುಪರಿ ಪರಾಜಯಾದ್ಭೀತಾನಾಂ ದ್ಯೂತಕರಾಣಾಂ ಕಿತವಾನಾಂ ಹೃದಯಸ್ಯೋಪರಿ ಸ್ಫುರಂತಿ । ಅಹಸ್ತಾಸೋ ಹಸ್ತರಹಿತಾ ಅಪ್ಯಕ್ಷಾ ಹಸ್ತವಂತಂ ದ್ಯೂತಕರಂ ಕಿತವಂ ಸಹಂತೇ । ಪರಾಜಯಕರಣೇನಾಭಿಭವಂತಿ । ದಿವ್ಯಾ ದಿವಿ ಭವಾ ಅಪಕೃತಾ ಅಂಗಾರಾ ಅಂಗಾರಸದೃಶಾ ಅಕ್ಷಾ ಇರಿಣ ಇಂಧನರಹಿತ ಆಸ್ಫಾರೇ ನ್ಯುಪ್ತಾಃ ಶೀತಾಃ ಶೀತಸ್ಪರ್ಶಾಃ ಸಂತೋಽಪಿ ಹೃದಯಂ ಕಿತವಾನಾಮಂತಃಕರಣಂ ನಿರ್ದಹಂತಿ । ಪರಾಜಯಜನಿತಸಂತಾಪೇನ ಭಸ್ಮೀಕುರ್ವಂತಿ ॥

॥ ಪ್ರತಿಪದಾರ್ಥ ॥

(ಅಕ್ಷಾಃ—ಈ ದಾಳಗಳು) । ನೀಚಾ—ಕೆಳಭಾಗದಲ್ಲಿಯೇ । ವರ್ತಂತೇ—ಇರುತ್ತವೆ (ಆದರೂ ಸಹ) । ಉಪರಿ—ಅಪಜಯವನ್ನು ಹೊಂದಿದವನ ಮೇಲೆ ಹತ್ತಿ । ಸ್ಫುರಂತಿ—ಅವನನ್ನೂ ನಡುಗುವಂತೆ ಮಾಡುತ್ತವೆ । ಅಹಸ್ತಾಸಃ—ಕೈಗಳಿಲ್ಲದಿದ್ದರೂ । ಹಸ್ತವಂತಂ—ಕೈಗಳನ್ನು ಹೊಂದಿರುವ ದ್ಯೂತಕಾರನನ್ನು । ಸಹಂತೇ—ಅವಮಾನಪಡಿಸುತ್ತವೆ । ದಿವ್ಯಾಃ—ದ್ಯುಲೋಕದಿಂದ ಎಸೆಯಲ್ಪಟ್ಟ । ಅಂಗಾರಾಃ—ಕೆಂಡಗಳಂತಿರುವ ಈ ದಾಳಗಳು । ಇರಿಣೇ—ಕಟ್ಟಿಗೆಗಳೇ ಇಲ್ಲದ ಹಾಸಿನ ಮೇಲೆ । ನ್ಯುಪ್ತಾಃ—ಎಸೆಯಲ್ಪಟ್ಟು । ಶೀತಾಃ ಸಂತಃ—ತಣ್ಣಗಿದ್ದರೂ । ಹೃದಯಂ—ದ್ಯೂತದಲ್ಲಿ ಸೋತವನ ಹೃದಯವನು । ನಿರ್ದಹಂತಿ—ಸುಡುತ್ತವೆ.

॥ ಭಾವಾರ್ಥ ॥

ಪಗಡೆಯ ದಾಳಗಳು ಕೆಳಭಾಗದಲ್ಲಿದ್ದರೂ ಸೋತವನ ಮೇಲೆಯೇ ಇದ್ದಂತೆ ತೋರಿ ಅವನನ್ನು ನಡುಗವಂತೆ ತ್ತವೆ. ಅವಕ್ಕೆ ಕೈಗಳಿಲ್ಲದಿದ್ದರೂ, ಕೈಗಳನ್ನು ಹೊಂದಿರುವ ದ್ಯೂತಕಾರನನ್ನು ಅವಮಾನಗೊಳಿಸುತ್ತವೆ. ದ್ಯುಲೋಕ ದಿಂದ ಎಸೆಯಲ್ಪಟ್ಟ ಕೆಂಡಗಳಂತಿರುವ ಈ ದಾಳಗಳು ಕಟ್ಟಿಗೆಗಳೇ ಇಲ್ಲದ ಹಾಸಿನ ಮೇಲೆ ಎಸೆಯಲ್ಪಟ್ಟು ತಣ್ಣಗಿದ್ದರೂ ದ್ಯೂತದಲ್ಲಿ ಸೋತವನ ಹೃದಯವನ್ನು ಸುಡುತ್ತವೆ.

English Translation

Now they abide below: now they palpitate on high; handless, they overpower him who has hands: cast upon the dice-board like coals from the sky, even though cold they burn the heart.

॥ ಸಂಹಿತಾಪಾಠಃ ॥

ಜಾಯಾ ತಪ್ಯತೇ ಕಿತವಸ್ಯ ಹೀನಾ ಮಾತಾ ಪುತ್ರಸ್ಯ ಚರತಃ ಕ್ವ ಸ್ವಿತ್ ।
ಋಣಾವಾ ಬಿಭ್ಯದ್ಧನಮಿಚ್ಛಮಾನೋಽನ್ಯೇಷಾಮಸ್ತಮುಪ ನಕ್ತಮೇತಿ ॥

॥ ಪದಪಾಠಃ ॥

ಜಾಯಾ । ತಪ್ಯತೇ । ಕಿತವಸ್ಯ । ಹೀನಾ । ಮಾತಾ । ಪುತ್ರಸ್ಯ । ಚರತಃ । ಕ್ವ । ಸ್ವಿತ್ ।
ಋಣಽವಾ । ಬಿಭ್ಯತ್ । ಧನಂ । ಇಚ್ಛಮಾನಃ । ಅನ್ಯೇಷಾಂ । ಅಸ್ತಂ । ಉಪ । ನಕ್ತಂ । ಏತಿ ॥ ೧೦ ॥

॥ ಸಾಯಣಭಾಷ್ಯಂ ॥

ಕ್ವ ಸ್ವಿತ್ ಕ್ವಾಪಿ ಚರತೋ ನಿರ್ವೇದಾದ್ಗಚ್ಛತಃ ಕಿತವಸ್ಯ ಜಾಯಾ ಭಾರ್ಯಾ ಹೀನಾ ಪರಿತ್ಯಕ್ತಾ ಸತೀ ತಪ್ಯತೇ । ವಿಯೋಗಜಸಂತಾಪೇನ ಸಂತಪ್ತಾ ಭವತಿ । ಮಾತಾ ಜನನ್ಯಪಿ ಪುತ್ರಸ್ಯ ಕ್ವಾಪಿ ಚರತಃ ಕಿತವಸ್ಯ ಸಂಬಂಧಾದ್ಧೀನಾ ತಪ್ಯತೇ । ಪುತ್ರಶೋಕೇನ ಸಂತಪ್ತಾ ಭವತಿ । ಋಣಾವಾಕ್ಷಪರಾಜಯಾದೃಣವಾನ್ ಕಿತವಃ ಸರ್ವತೋ ಬಿಭದ್ಧನಂ ಸ್ತೇಯಜನಿತಮಿಚ್ಛಮಾನಃ ಕಾಮಯಮಾನೋಽನ್ಯೇಷಾಂ ಬ್ರಾಹ್ಮಣಾದೀನಾಮಸ್ತಂ ಗೃಹಂ । ಅಸ್ತಂ ಪಸ್ತ್ಯಮಿತಿ ಗೃಹನಾಮಸು ಪಾಠಾತ್ । ನಕ್ತಂ ರಾತ್ರಾವುಪೈತಿ । ಚೌರ್ಯಾರ್ಥಮುಪಗಚ್ಛತಿ ॥

॥ ಪ್ರತಿಪದಾರ್ಥ ॥

ಕ್ವಸ್ವಿತ್—ಮನಸ್ಸು ಬಂದ ಕಡೆ । ಚರತಃ—ಖಿನ್ನವಾಗಿ ಸಂಚರಿಸುವ । ಕಿತವಸ್ಯ—ದ್ಯೂತದಲ್ಲಿ ಸೋತವನ । ಜಾಯಾ—ಪತ್ನಿಯು । ಹೀನಾ—ಅವನಿಂದ ತ್ಯಜಿಸಲ್ಪಟ್ಟವಳಾಗಿ । ತಪ್ಯತೇ—ಪರಿತಾಪಪಡುತ್ತಾ

**ಮಾತಾ**—ಅವನ ತಾಯಿಯೂ । **ಪುತ್ರಸ್ಯ**—ಗುರಿಯಿಲ್ಲದೇ ಅಲೆದಾಡುತ್ತಿರುವ ಮಗನಿಗಾಗಿ ದುಃಖಿಸುತ್ತಾಳೆ । **ಋಣಾವಾ**—ಸಾಲದಲ್ಲಿ ಮುಳುಗಿದ ದ್ಯೂತಕಾರನು । **ಬಿಭ್ಯದ್ಧನಂ**—ಚೌರ್ಯದಿಂದಾದರೂ ಹಣವನ್ನು ಸಂಪಾದಿಸಬೇಕೆಂದು । **ಇಚ್ಛಮಾನಃ**—ತವಕದಿಂದ ಇಚ್ಛಿಸಿ । **ಅನ್ಯೇಷಾಂ**—ಇತರರ । **ಅಸ್ತಂ**—ಗೃಹಕ್ಕೆ । **ನಕ್ತಂ**—ರಾತ್ರಿಯಲ್ಲಿ । **ಉಪೈತಿ**—ಕದಿಯಲು ನುಗ್ಗುತ್ತಾನೆ.

॥ ಭಾವಾರ್ಥ ॥

ದ್ಯೂತದಲ್ಲಿ ಸೋತು ಖಿನ್ನನಾಗಿ ಮನಸ್ಸು ಬಂದಕಡೆ ಸಂಚರಿಸುವ ದ್ಯೂತಕಾರನ ಪತ್ನಿಯು ಅವನಿಂದ ತ್ಯಜಿಸಲ್ಪಟ್ಟವಳಾಗಿ ಪರಿತಾಪಪಡುತ್ತಾಳೆ. ಅವನ ತಾಯಿಯೂ ಗುರಿಯಿಲ್ಲದೇ ಅಲೆದಾಡುತ್ತಿರುವ ಮಗನಿಗಾಗಿ ದುಃಖಿಸುತ್ತಾಳೆ. ಸಾಲದಲ್ಲಿ ಮುಳುಗಿದ ದ್ಯೂತಕಾರನು ಚೌರ್ಯದಿಂದಾರೂ ಹಣವನ್ನು ಸಂಪಾದಿಸಬೇಕೆಂದು ತವಕದಿಂದ ಇಚ್ಛಿಸಿ ಇತರರ ಗೃಹಕ್ಕೆ ರಾತ್ರಿಯಲ್ಲಿ ಕದಿಯಲು ನುಗ್ಗುತ್ತಾನೆ.

English Translation

The deserted wife of the gamester is afflicted : the mother (grieves) for the son wandering wherever he likes ; involved in debt, ever in fear, anxious for wealth, (the gambler) goes forth by night to the dwellings of others (to plunder).

॥ ಸಂಹಿತಾಪಾಠಃ ॥

**ಸ್ತ್ರಿಯಂ ದೃಷ್ಟ್ವಾಯ ಕಿತವಂ ತತಾಪಾನ್ಯೇಷಾಂ ಜಾಯಾಂ ಸುಕೃತಂ ಚ ಯೋನಿಂ ।**
**ಪೂರ್ವಾಹ್ಣೇ ಅಶ್ವಾನ್ಯುಯುಜೇ ಹಿ ಬಭ್ರೂನ್ತ್ಸೋ ಅಗ್ನೇರಂತೇ ವೃಷಲಃ ಪಪಾದ ॥ ೧೧ ॥**

॥ ಪದಪಾಠಃ ॥

ಸ್ತ್ರಿಯಂ । ದೃಷ್ಟ್ವಾಯ । ಕಿತವಂ । ತತಾಪ । ಅನ್ಯೇಷಾಂ । ಜಾಯಾಂ । ಸುಽಕೃತಂ । ಚ । ಯೋನಿಂ । ಪೂರ್ವಾಹ್ಣೇ । ಅಶ್ವಾನ್ । ಯುಯುಜೇ । ಹಿ । ಬಭ್ರೂನ್ । ಸಃ । ಅಗ್ನೇಃ । ಅಂತೇ । ವೃಷಲಃ । ಪಪಾದ ॥ ೧೧ ॥

॥ ಸಾಯಣಭಾಷ್ಯಂ ॥

ಕಿತವಂ ಕಿತವಃ ॥ ವಿಭಕ್ತಿವ್ಯತ್ಯಯಃ ॥ ಅನ್ಯೇಷಾಂ ಸ್ವವ್ಯತಿರಿಕ್ತಾನಾಂ ಪುರುಷಾಣಾಂ ಜಾಯಾಂ ಜಾಯಾಭೂತಾಂ ಸ್ತ್ರಿಯಂ ನಾರೀಂ ಸುಖೇನ ವರ್ತಮಾನಾಂ ಸುಕೃತಂ ಸುಷ್ಠು ಕೃತಂ ಯೋನಿಂ ಗೃಹಂ

ಚ ದೃಷ್ಟ್ವಾಯ ಮಜ್ಞಾಯಾ ದುಃಖಿತಾ ಗೃಹಂ ಚಾಸಂಸ್ಕೃತಮಿತಿ ಜ್ಞಾತ್ವಾ ತತಾಪ । ತಪ್ಯತೇ । ಪುನ ಪೂರ್ವಾಹ್ಣೇ ಪ್ರಾತಃಕಾಲೇ ಬಭ್ರೂನ್ಬಭ್ರುವರ್ಣಾನಶ್ವಾನ್ವ್ಯಾಪಕಾನಕ್ಷಾನ್ಯುಯುಜೇ । ಯುನಕ್ತಿ ಪುನಶ್ಚ ವೃಷಲೋ ವೃಷಲಕರ್ಮಾ ಸ ಕಿತವೋ ರಾತ್ರಾವಗ್ನೇರಂತೇ ಸಮೀಪೇ ಪಪಾದ । ಶೀತಾರ್ತ ಸಞ್ಛೇತೇ ॥

॥ ಪ್ರತಿಪದಾರ್ಥ ॥

ಕಿತವಂ—ಜೂಜಾಡುವವನು । ಅನ್ಯೇಷಾಂ—ದ್ಯೂತವ್ಯಸನವಿಲ್ಲದ ಇತರರ । ಜಾಯಾಂ—ಪತ್ನಿಯ ರಾದವರೂ । ಸ್ತ್ರಿಯಂ—ಸುಖವನ್ನನುಭವಿಸುವವರೂ ಆದ ಹೆಂಗಸರನ್ನೂ । ಸುಕೃತಂ—ಉತ್ತಮವಾ ಅಲಂಕರಿಸಿದ । ಯೋನಿಂ ಚ—ಗೃಹವನ್ನೂ । ದೃಷ್ಟ್ವಾಯ—ನೋಡಿದೊಡನೆಯೇ । ತತಾಪ—ದುಃಖಪಡ ತ್ತಾನೆ । ಪೂರ್ವಾಹ್ಣೇ—ಪ್ರಾತಃಕಾಲದಲ್ಲಿ । ಬಭ್ರೂನ್—ಹೊಂಬಣ್ಣವುಳ್ಳ । ಅಶ್ವಾನ್—ಅಶ್ವಗಳನು (ದಾಳಗಳನ್ನು) । ಯುಯುಜೇ—ಸೇರಿಸುತ್ತಾನೆ । ವೃಷಲಃ—ಕೆಳದರ್ಜೆಯ ಕರ್ಮವುಳ್ಳ । ಸಃ—ಅದ ಪುರುಷನು । (ರಾತ್ರೌ—ರಾತ್ರಿಕಾಲದಲ್ಲಿ) । ಅಗ್ನೇಃಅಂತೇ—ಅಗ್ನಿಯ ಸಮೀಪದಲ್ಲಿ । ಪಪಾದ—ಚಳಿಯನ ಹೋಗಲಾಡಿಸಿಕೊಳ್ಳಲು ಮಲಗುತ್ತಾನೆ.

॥ ಭಾವಾರ್ಥ ॥

ದ್ಯೂತವ್ಯಸನವಿಲ್ಲದವನು ತನ್ನ ಪತ್ನಿಯನ್ನು ಸುಖವಾಗಿಟ್ಟಿರುತ್ತಾನೆ. ತನ್ನ ಗೃಹವನ್ನು ಸುಸಂಸ್ಕೃ ವನ್ನಾಗಿ ಮಾಡಿ ಅಲಂಕರಿಸಿರುತ್ತಾನೆ. ಜೂಜಾಡುವವನು ಇದನ್ನೆಲ್ಲ ನೋಡಿದರೆ ತಾನು ಹೀಗೆ ಮಾಡಲಿಲ್ಲವ ಎಂಬ ದುಃಖದಿಂದ ಕೊರಗುತ್ತಾನೆ. ಪ್ರಾತಃಕಾಲದಲ್ಲಿ ದಾಳಗಳಿಂದ ಆಟವಾಡುತ್ತಾನೆ. ರಾತ್ರಿಕಾಲದಲ್ಲಿ ಅಗ್ನಿಯ ಸಮೀಪದಲ್ಲಿ ಚಳಿಯನ್ನು ಹೋಗಲಾಡಿಸಿಕೊಳ್ಳಲು ಮಲಗುತ್ತಾನೆ.

## English Translation

The gamester, having observed the happy wife and well-ordered home of others, suffers regret : yet in the forenoon he puts to the tawny steeds, and at night the sinner lies down by the fire,

॥ ಸಂಹಿತಾಪಾಠಃ ॥

ಯೋ ವಃ ಸೇನಾನೀರ್ಮಹತೋ ಗಣಸ್ಯ ರಾಜಾ ವ್ರಾತಸ್ಯ ಪ್ರಥಮೋ ಬಭೂವ ।

ತಸ್ಮೈ ಕೃಣೋಮಿ ನ ಧನಾ ರುಣಧ್ಮಿ ದಶಾಹಂ ಪ್ರಾಚೀಸ್ತದೃತಂ ವದಾಮಿ ॥ ೧೨ ॥

॥ ಪದಪಾಠಃ ॥

ಯಃ । ವಃ । ಸೇನಾಽನೀಃ । ಮಹತಃ । ಗಣಸ್ಯ । ರಾಜಾ । ವ್ರಾತಸ್ಯ । ಪ್ರಥಮಃ । ಬಭೂವ ।

ತಸ್ಮೈ । ಕೃಣೋಮಿ । ನ । ಧನಾ । ರುಣಧ್ಮಿ । ದಶ । ಅಹಂ । ಪ್ರಾಚೀಃ । ತತ್ । ಋತಂ । ವದಾಮಿ ॥

॥ ಸಾಯಣಭಾಷ್ಯಂ ॥

ಹೇ ಅಕ್ಷಾ ವೋ ಯುಷ್ಮಾಕಂ ಮಹತೋ ಗಣಸ್ಯ ಸಂಘಸ್ಯ ಯೋಽಕ್ಷಃ ಸೇನಾನೀರ್ನೇತಾ ಬಭೂವ ಭವತಿ ವ್ರಾತಸ್ಯ ಚ । ಗಣವ್ರಾತಯೋರಲ್ಪೋ ಭೇದಃ । ರಾಜೇಶ್ವರಃ ಪ್ರಥಮೋ ಮುಖ್ಯೋ ಬಭೂವ ತಸ್ಮಾ ಅಕ್ಷಾಯ ಕೃಣೋಮ್ಯಹಂ । ಅಂಜಲಿಂ ಕರೋಮಿ । ಅತಃ ಪರಂ ಧನಾ ಧನಾನ್ಯಕ್ಷಾರ್ಥಮಹಂ ನ ರುಣಧ್ಮಿ । ನ ಸಂಪಾದಯಾಮೀತ್ಯರ್ಥಃ । ಏತದೇವ ದರ್ಶಯತಿ । ಅಹಂ ದಶ ದಶಸಂಖ್ಯಾಕಾ ಅಂಗುಲೀಃ ಪ್ರಾಚೀಃ ಪ್ರಾಙ್ಮುಖೀಃ ಕರೋಮಿ । ತದೇತದಹಮೃತಂ ಸತ್ಯಮೇವ ವದಾಮಿ । ನಾನೃತಂ ಬ್ರವೀಮೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ದಾಳಗಳೇ) ವಃ—ನಿಮ್ಮ । **ಮಹತಃ**—ಮಹತ್ತಾದ । **ಗಣಸ್ಯ**—ಸಂಘಕ್ಕೆ । **ಯಃ**—ಯಾರು । **ಸೇನಾನೀಃ**—ಸೇನಾಪತಿಯಾಗಿ । **ಬಭೂವ**—ಆಗಿರುವನೋ । **ವ್ರಾತಸ್ಯ**—ನಿಮ್ಮ ಗಣಕ್ಕೆ । **ರಾಜಾ**—ಈಶ್ವರನಾಗಿಯೂ । **ಪ್ರಥಮಃ**—ಮುಖ್ಯನಾಗಿಯೂ ಇರುವನೋ । **ತಸ್ಮೈ**—ಆ ದಾಳರಾಜನಿಗೆ । **ಕೃಣೋಮಿ**—ನಮಸ್ಕರಿಸುತ್ತೇನೆ । **ಧನಾ**—ಧನಗಳನ್ನು । **ನ ರುಣಧ್ಮಿ**—(ಅವನಿಗೋಸ್ಕರ) ಇನ್ನು ಸಂಪಾದಿಸುವುದಿಲ್ಲ । **ಅಹಂ**—ನಾನು । **ದಶ**—ಹತ್ತು ಬೆರಳುಗಳನ್ನೂ । **ಪ್ರಾಚೀಃ**—ಪೂರ್ವಾಭಿಮುಖವಾಗಿ ಎತ್ತುತ್ತೇನೆ । **ತತ್**—ಇದನ್ನು । **ಋತಂ**—ಸತ್ಯವಾಗಿಯೂ । **ವದಾಮಿ**—ಹೇಳುತ್ತೇನೆ.

॥ ಭಾವಾರ್ಥ ॥

ಎಲೈ ದಾಳಗಳೇ, ನಿಮ್ಮ ಮಹತ್ತಾದ ಸಂಘಕ್ಕೆ ಯಾರು ಸೇನಾಪತಿಯಾಗಿರುವನೋ, ನಿಮ್ಮ ಗಣಕ್ಕೆ ಯಾರು ಪ್ರಭುವೂ ಮುಖ್ಯನೂ ಆಗಿರುವನೋ ಆ ದಾಳರಾಜನಿಗೆ ನಮಸ್ಕಾರವು. ಇನ್ನು ಅವನಿಗಾಗಿ ಧನವನ್ನು ಸಂಪಾದಿಸುವುದಿಲ್ಲ. ಎರಡು ಕೈಗಳನ್ನು ಪೂರ್ವಾಭಿಮುಖವಾಗಿ ಜೋಡಿಸಿ ಅವನಿಗೆ ನಮಸ್ಕರಿಸುತ್ತೇನೆ. ಇದನ್ನು ಸತ್ಯವಾಗಿಯೂ ಹೇಳುತ್ತೇನೆ.

## English Translation

Dice, I offer salutation to him who has been the general of your great army, the chief lord of your host: I do not provide him with wealth: I raise my ten (fingers) to the east; that (which) I speak (is) the truth,

॥ ಸಂಹಿತಾಪಾಠಃ ॥

ಅಕ್ಷೈರ್ಮಾ ದೀವ್ಯಃ ಕೃಷಿಮಿತ್ಕೃಷಸ್ವ ವಿತ್ತೇ ರಮಸ್ವ ಬಹು ಮನ್ಯಮಾನಃ।
ತತ್ರ ಗಾವಃ ಕಿತವ ತತ್ರ ಜಾಯಾ ತನ್ಮೇ ವಿ ಚಷ್ಟೇ ಸವಿತಾಯಮರ್ಯಃ ॥

॥ ಪದಪಾಠಃ ॥

ಅಕ್ಷೈಃ । ಮಾ । ದೀವ್ಯಃ । ಕೃಷಿಂ । ಇತ್ । ಕೃಷಸ್ವ । ವಿತ್ತೇ । ರಮಸ್ವ । ಬಹು । ಮನ್ಯಮಾನಃ ।
ತತ್ರ । ಗಾವಃ । ಕಿತವ । ತತ್ರ । ಜಾಯಾ । ತತ್ । ಮೇ । ವಿ । ಚಷ್ಟೇ । ಸವಿತಾ । ಅಯಂ ।
ಅರ್ಯಃ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಕಿತವ ಬಹು ಮನ್ಯಮಾನೋ ಮದ್ವಚನೇ ವಿಶ್ವಾಸಂ ಕುರ್ವಂಸ್ತ್ವಮಕ್ಷೈರ್ಮಾ ದೀವ್ಯಃ। ದ್ಯೂತಂ ಮಾ ಕುರು । ಕೃಷಿಮಿತ್ಕೃಷಿಮೇವ ಕೃಷಸ್ವ। ಕುರು । ವಿತ್ತೇ ಕೃಷ್ಯಾ ಸಂಪಾದಿತೇ ಧನೇ ರಮಸ್ವ । ಮತಿಂ ಕುರು । ತತ್ರ ಕೃಷೌ ಗಾವೋ ಭವಂತಿ। ತತ್ರ ಜಾಯಾ ಭವತಿ। ತದೇವ ಧರ್ಮರಹಸ್ಯಂ ಪ್ರತಿಸ್ಮೃತಿಕರ್ತಾ ಸವಿತಾ ಸರ್ವಸ್ಯ ಪ್ರೇರಕೋಽಯಂ ಶ್ರು ದೃಷ್ಟಿಗೋಚರೋಽರ್ಯ ಈಶ್ವರೋ ವಿ ಚಷ್ಟೇ। ವಿವಿಧಮಾಖ್ಯಾತವಾನ್ ॥

॥ ಪ್ರತಿಪದಾರ್ಥ ॥

**ಕಿತವ**— ಎಲೈ ದ್ಯೂತಕಾರನೇ । **ಬಹು ಮನ್ಯಮಾನಃ**— ನನ್ನ ಮಾತಿಗೆ ಮರ್ಯಾದೆಯನ್ನು ತೋರಿಸಿ (ಅದನ್ನು ನಂಬಿ) । **ಅಕ್ಷೈಃ**— ದಾಳಗಳಿಂದ । **ಮಾ ದೀವ್ಯಃ**— ಜೂಜನ್ನಾಡಬೇಡ । **ಕೃಷಿಮಿತ್**— ಕೇವಲ ನೆಲದ ವ್ಯವಸಾಯವನ್ನೇ । **ಕೃಷಸ್ವ**— ಮಾಡು । **ವಿತ್ತೇ**— ಅದರಿಂದ ಸಂಪಾದಿತವಾದ ಧನದಿಂದ । **ರಮಸ್ವ**— ಸಂತೋಷವನ್ನನುಭವಿಸು । **ತತ್ರ**— ಅಲ್ಲಿ । **ಗಾವಃ**— ಗೋವುಗಳು ಇರುತ್ತವೆ । **ತತ್ರ**— ಅಲ್ಲಿ । **ಜಾಯಾ**— ಪತ್ನಿಯಿರುತ್ತಾಳೆ । **ತತ್**— ಈ ಉಪದೇಶವನ್ನೇ । **ಸವಿತಾ**— ಸರ್ವಪ್ರೇರಕನಾದವನೂ । **ಅರ್ಯಃ**— ಜಗದೀಶ್ವರನೂ ಆದ । **ಅಯಂ**— ಈ ಸೂರ್ಯದೇವನು । **ಮೇ**— ನನಗೆ । **ವಿ ಚಷ್ಟೇ**— ಅನೇಕವಿಧದಲ್ಲಿ ಹೇಳಿ ತಿಳಿಸಿದ್ದಾನೆ.

॥ ಭಾವಾರ್ಥ ॥

ಎಲೈ ದ್ಯೂತಕಾರನೇ, ನನ್ನ ಮಾತನ್ನು ನಂಬು. ಅದಕ್ಕೆ ಮರ್ಯಾದೆಯನ್ನು ತೋರಿಸಿ ಅದರಂತೆ ನಡೆದುಕೊ. ದಾಳಗಳಿಂದ ದ್ಯೂತವನ್ನಾಡಬೇಡ. ಕೇವಲ ಭೂಮಿಯ ವ್ಯವಸಾಯವನ್ನೇ ಮಾಡು. ಅದರಿಂದ ಸಂಪಾದಿತವಾದ ಧನದಿಂದ ಸಂತೋಷವನ್ನನುಭವಿಸು. ಅಲ್ಲಿ ಪಶುಗಳು ಇರುತ್ತವೆ. ಅಲ್ಲಿ ಪತ್ನಿಯಿರುತ್ತಾಳೆ. ಈ ಉಪದೇಶವನ್ನೇ ಜಗತ್ಪ್ರೇರಕನೂ ಜಗದೀಶ್ವರನೂ ಆದ ಸವಿತೃವು ನನಗೆ ಹೇಳಿದನು.

## English Translation

Giving serious attention (to my advice), play not with dice: pursue agriculture: delight in wealth (so acquired): there, gambler, are cows; there is a wife; so has this (visible) sovereign Savitri declared to me.

। ಸಂಹಿತಾಪಾಠಃ ।

ಮಿತ್ರಂ ಕೃಣುಧ್ವಂ ಖಲು ಮೃಳತಾ ನೋ ಮಾ ನೋ ಘೋರೇಣ ಚರತಾಭಿ ಧೃಷ್ಣು ।
ನಿ ವೋ ನು ಮನ್ಯುರ್ವಿಶತಾಮರಾತಿರನ್ಯೋ ಬಭ್ರೂಣಾಂ ಪ್ರಸಿತೌ ನ್ವಸ್ತು ॥

॥ ಪದಪಾಠಃ ।

ಮಿತ್ರಂ । ಕೃಣುಧ್ವಂ । ಖಲು । ಮೃಳತ । ನಃ । ಮಾ । ನಃ । ಘೋರೇಣ । ಚರತ । ಅಭಿ । ಧೃಷ್ಣು ।
ನಿ । ವಃ । ನು । ಮನ್ಯುಃ । ವಿಶತಾಂ । ಅರಾತಿಃ । ಅನ್ಯಃ । ಬಭ್ರೂಣಾಂ । ಪ್ರಽಸಿತೌ । ನು । ಅಸ್ತು ॥

। ಸಾಯಣಭಾಷ್ಯಂ ।

ಹೇ ಅಕ್ಷಾಃ ಯೂಯಂ ಮಿತ್ರಂ ಕೃಣುಧ್ವಂ । ಅಸ್ಮಾಸು ಮೈತ್ರೀಂ ಕುರುತ । ಖಲ್ವಿತಿ ಪೂರಣಃ । ನೋಽಸ್ಮಾನ್ಮೃಳತ । ಸುಖಯತ ಚ । ನೋಽಸ್ಮಾನ್ಧೃಷ್ಣು ಧೃಷ್ಣುನಾ । ತೃತೀಯಾರ್ಥೇ ಪ್ರಥಮಾ । ಘೋರೇಣಾಸಹ್ಯೇನ ಮಾಭಿ ಚರತ । ಮಾ ಗಚ್ಛತ । ಕಿಂಚ ವೋ ಯುಷ್ಮಾಕಂ ಮನ್ಯುಃ ಕ್ರೋಧೋಽರಾತಿರಸ್ಮಾಕಂ ಶತ್ರುರ್ನಿ ವಿಶತಾಂ । ಅಸ್ಮಚ್ಛತ್ರುಷು ತಿಷ್ಠತು । ಅನ್ಯೋಽಸ್ಮಾಕಂ ಶತ್ರುಃ ಕಶ್ಚಿದ್ಬಭ್ರೂಣಾಂ ಬಭ್ರುವರ್ಣಾನಾಂ ಯುಷ್ಮಾಕಂ ಪ್ರಸಿತೌ ಪ್ರಬಂಧನೇ ನು ಕ್ಷಿಪ್ರಮಸ್ತು । ಭವತು ॥

॥ ಪ್ರತಿಪದಾರ್ಥ ॥

(ಎಲೈ ದಾಳಗಳೇ) **ಮಿತ್ರಂ**—ನಮ್ಮಲ್ಲಿ ಮಿತ್ರತ್ವವನ್ನು । **ಕೃಣುಧ್ವಂ**—ಬೆಳೆಸಿರಿ । **ನಃ**—ನಮ್ಮನ್ನು । **ಮೃಳತ**—ಸುಖಪಡಿಸಿರಿ । **ನಃ**—ನಮ್ಮನ್ನು । **ಘೋರೇಣ**—ತೀವ್ರವಾದ । **ಧೃಷ್ಣು**—ಕ್ರೋಧದೊಡನೆ । **ಮಾ ಅಭಿ ಚರತ**—ಸಮೀಪಿಸಬೇಡಿರಿ । **ವಃ**—ನಿಮ್ಮ । **ಮನ್ಯುಃ**—ಕ್ರೋಧವು । **ಅರಾತಿಃ**—ನಮ್ಮ ಶತ್ರುಗಳಲ್ಲಿ । **ನಿ ವಿಶತಾಂ**—ಸ್ಥಾಪಿತವಾಗಲಿ । **ಅನ್ಯಃ**—ನಮ್ಮ ಶತ್ರುವಾದವನು । **ಬಭ್ರೂಣಾಂ**—ಹೊಂಬಣ್ಣವುಳ್ಳ ನಿಮ್ಮ । **ಪ್ರಸಿತಾ**—ಬಂಧನದಲ್ಲಿ । **ನು**—ಕ್ಷಿಪ್ರವಾಗಿ । **ಅಸ್ತು**—ಸಿಕ್ಕಿಕೊಳ್ಳಲಿ.

॥ ಭಾವಾರ್ಥ ॥

ಎಲೈ ದಾಳಗಳೇ, ನಮ್ಮಲ್ಲಿ ಮಿತ್ರತ್ವವನ್ನು ಬೆಳೆಸಿರಿ. ನಮ್ಮನ್ನು ಸುಖಪಡಿಸಿರಿ. ನಮ್ಮನ್ನು ತೀವ್ರವಾದ ಕ್ರೋಧದೊಡನೆ ಸಮೀಪಿಸಬೇಡಿರಿ. ನಿಮ್ಮ ಕ್ರೋಧವು ನಮ್ಮ ಶತ್ರುಗಳಲ್ಲಿ ಸ್ಥಾಪಿತವಾಗಲಿ. ನಮ್ಮ ಶತ್ರುವಾದವನು ಆಕರ್ಷಕವಾದ ವರ್ಣವುಳ್ಳ ನಿಮ್ಮ ಬಂಧನದಲ್ಲಿ ಬೇಗನೆ ಸಿಕ್ಕಿಕೊಳ್ಳಲಿ.

English Translation

Be friends with us (Dice) ; bestow upon us happiness; approach us not in terrible wrath; let your anger light upon our enemies; let our enemy fall under the bondage of the tawny (dice).

## ಮೂವತ್ತ್ಮೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಬುಧ್ರಮಿತಿ ಚತುರ್ದಶರ್ಚಂ ಷಷ್ಠಂ ಸೂಕ್ತಂ । ಧನಾಕಪುತ್ರಸ್ಯ ಲುಶಸ್ಯಾರ್ಷಂ । ಇದಮುತ್ತರಂ ಚ ವೈಶ್ವದೇವಂ । ತ್ರಯೋದಶೀಚತುರ್ದಶ್ಯೌ ತ್ರಿಷ್ಟುಭೌ ಶಿಷ್ಟಾ ದ್ವಾದಶ ಜಗತ್ಯಃ । ತಥಾ ಚಾನುಕ್ರಾಂತಂ । ಅಬುಧ್ರಂ ಲುಶೋ ಧಾನಾಕೋ ವೈಶ್ವದೇವಂ ತು ದ್ವಿತ್ರಿಷ್ಟುಬಂತಂ ತ್ವಿತಿ ॥ ಗತಃ ಸೂಕ್ತವಿನಿಯೋಗಃ ॥ ಏಕಾದಶಿನಸ್ಯ ವೈಶ್ವದೇವಸ್ಯ ಪಶೋರ್ವಪಾಯಾಗಸ್ಯಾನುವಾಕ್ಯಾ ವಿಶ್ವೇ ಅದ್ಯೇತ್ಯೇಷಾ । ಸೂತ್ರಿತಂ ಚ । ವಿಶ್ವೇ ಅದ್ಯ ಮರುತೋ ವಿಶ್ವ ಊತ್ಯಾ ನೋ ದೇವಾನಾಮುಪ ವೇತು ಶಂಸಃ । ಆ. ೩-೭ । ಇತಿ ॥**

ಅನುವಾದವು—**ಅಬುಧ್ರಂ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಆರನೆಯ ಸೂಕ್ತವು ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಧನಾಕನೆಂಬುವನ ಪುತ್ರನಾದ ಲುಶನೆಂಬುವನು ಋಷಿಯು. ಈ ಸೂಕ್ತಕ್ಕೂ ಇದರ ಮುಂದಿನ ಸೂಕ್ತಕ್ಕೂ ವಿಶ್ವೇದೇವತೆಗಳು ದೇವತೆಯು. ಈ ಸೂಕ್ತದ ಹದಿಮೂರು ಮತ್ತು ಹದಿನಾಲ್ಕನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಉಳಿದ ಹನ್ನೆರಡು ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ-**ಅಬುಧ್ರಂ ಲುಶೋ ಧಾನಾಕೋ ವೈಶ್ವದೇವಂ ತು ದ್ವಿತ್ರಿಷ್ಟುಬಂತಂ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ ಏಕಾದಶಿನ್ ಎಂಬ ಯಾಗದಲ್ಲಿ ವಿಶ್ವೇದೇವತೆಗಳನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ ವಪಾಹೋಮಮಾಡುವಾಗ **ವಿಶ್ವೇ ಅದ್ಯ** ಎಂಬ ಈ ಸೂಕ್ತದ ಹದಿಮೂರನೆಯ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದೆ-**ವಿಶ್ವೇ ಅದ್ಯ ಮರುತೋ ವಿಶ್ವ ಊತ್ಯಾ ನೋ ದೇವಾನಾಮುಪ ವೇತು ಶಂಶಃ** ಎಂಬ ಸೂತ್ರದಿಂದ (ಆ. ೩ ೭) ವಿವೃತವಾಗಿರುವುದು

## ಸೂಕ್ತ—೩೫

ಮಂಡಲ—೧೦ ॥ ಅನುವಾಕ—೩ ॥ ಸೂಕ್ತ—೩೫ ॥
ಅಷ್ಟಕ—೭ ॥ ಅಧ್ಯಾಯ ೮ ॥ ವರ್ಗ ೬, ೭, ೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ॥
ಋಷಿಃ—ಲುಶೋ ಧಾನಾಕಃ ॥
ದೇವತಾ—ವಿಶ್ವೇ ದೇವಾಃ ॥
ಛಂದಃ—೧-೧೨. ಜಗತೀ ॥ ೧೩-೧೪. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಬುಧ್ರಮು ತ್ಯ ಇಂದ್ರವಂತೋ ಅಗ್ನಯೋ ಜ್ಯೋತಿರ್ಭರಂತ ಉಷಸೋ
ವ್ಯುಷ್ಟಿಷು ।
ಮಹೀ ದ್ಯಾವಾಪೃಥಿವೀ ಚೇತತಾಮಪೋಽದ್ಯಾ ದೇವಾನಾಮವ ಆ ವೃಣೀ-
ಮಹೇ ॥ ೧ ॥

॥ ಪದಪಾಠಃ ॥

ಅಬುಧ್ರಂ । ಊಂ ಇತಿ । ತ್ಯೇ । ಇಂದ್ರಽವಂತಃ । ಅಗ್ನಯಃ । ಜ್ಯೋತಿಃ । ಭರಂತಃ । ಉಷಸಃ ।
ವಿಽಉಷ್ಟಿಷು ।
ಮಹೀ ಇತಿ । ದ್ಯಾವಾಪೃಥಿವೀ ಇತಿ । ಚೇತತಾಂ । ಅಪಃ । ಅದ್ಯ । ದೇವಾನಾಂ । ಅವಃ । ಆ ।
ವೃಣೀಮಹೇ ॥ ೧ ॥

॥ ಸಾಯಣಭಾಷ್ಯಂ ॥

ಇಂದ್ರವಂತೋ ಯಷ್ಟವ್ಯತ್ವೇನೇಂದ್ರಸಂಬಂಧಿನಸ್ತ್ಯೇ ತೇಽಮೀ ಆಹವನೀಯಾದಯೋಽಗ್ನಯ ಉಷಸೋ ವ್ಯುಷ್ಟಿಷು ವ್ಯುಚ್ಛನೇಷು ತಮಸಾಂ ವಿವಾಸನಕಾಲೇಷು ಜ್ಯೋತಿಸ್ತೇಜೋ ಭರಂತೋ ಧಾರಯಂತೋಽಬುಧ್ರಂ । ಪ್ರಬುದ್ಧಾ ಆಸನ್ । ಮಹೀ ಮಹತ್ಯೌ ದ್ಯಾವಾಪೃಥಿವ್ಯಾವಪಃ ಕರ್ಮ । ಅಪೋಽಪ್ನ ಇತಿ ಕರ್ಮನಾಮಸು ಪಾಠಾತ್ । ಚೇತತಾಂ । ಜಾನೀತಾಂ । ಅದ್ಯಾಸ್ಮಿನ್ನಹನಿ ದೇವಾನಾ-ಮಿಂದ್ರಾದೀನಾಮವೋ ರಕ್ಷಣಂ ವಯಮಾ ವೃಣೀಮಹೇ ॥

॥ ಪ್ರತಿಪದಾರ್ಥ ॥

ಇಂದ್ರವಂತಃ—ಇಂದ್ರನಿಗೆ ಸಂಬಂಧಿಸಿದವೂ । ತ್ಯೇ—ಪ್ರಸಿದ್ಧವಾದವೂ ಆದ । ಅಗ್ನಯಃ—ಆಹವನೀಯಾದ್ಯಗ್ನಿಗಳು । ಉಷಸಃ ವ್ಯುಷ್ಟಿಷು—ಉಷಸ್ಸಿನ ಆವಿರ್ಭಾವಕಾಲಗಳಲ್ಲಿ । ಜ್ಯೋತಿಃ—ತಮ್ಮ ।

ತೇಜಸ್ಸನ್ನು । ಭರಂತಃ—ಧರಿಸಿಕೊಂಡು । ಅಬುಧ್ರಂ—ಆವಿರ್ಭವಿಸಿವೆ । ಮಹಿ—ಮಹತ್ತ್ವರೂಪವುಳ್ಳ । ದ್ಯಾವಾಪೃಥಿವೀ—ದ್ಯಾವಾಪೃಥಿವಿಗಳು । ಅಪಃ—ತಮ್ಮ ಕರ್ಮಗಳನ್ನು । ಚೇತತಾಂ—ಅರಿಯಲಿ । ಅದ್ಯ—ಈ ಯಾಗಕಾಲದಲ್ಲಿ । ದೇವಾನಾಂ—ದೇವತೆಗಳ । ಅವಃ—ರಕ್ಷಣವನ್ನು । ಆ ವೃಣೀಮಹೇ—ನಾವು ಯಾಚಿಸುತ್ತೇವೆ.

॥ ಭಾವಾರ್ಥ ॥

ಇಂದ್ರನನ್ನು ಪೂಜಿಸತಕ್ಕವೂ, ಪ್ರಸಿದ್ಧವಾದವೂ ಆದ ಆಹವನೀಯಾದ್ಯಗ್ನಿಗಳು ಉಷಸ್ಸಿನ ಆವಿರ್ಭಾವ ಕಾಲದಲ್ಲಿ ತಮ್ಮ ತೇಜಸ್ಸಿನಿಂದ ಸಹಿತವಾಗಿ ಆವಿರ್ಭವಿಸಿವೆ. ಮಹತ್ತ್ವರೂಪವುಳ್ಳ ದ್ಯಾವಾಪೃಥಿವಿಗಳು ತಮ್ಮ ಕರ್ತವ್ಯಗಳನ್ನು ಅರಿಯಲಿ. ಈ ಯಾಗಕಾಲದಲ್ಲಿ ನಾವು ದೇವತೆಗಳ ರಕ್ಷಣವನ್ನು ಯಾಚಿಸುತ್ತೇವೆ.

## English Translation

The fires that are connected with Indra are awake, bringing light at the opening of the dawn : let the great heaven and earth be cognizant of that office : to-day we solicit the protection of the gods.

॥ ಸಂಹಿತಾಪಾಠಃ ॥

ದಿವಸ್ಪೃಥಿವ್ಯೋರವ ಆ ವೃಣೀಮಹೇ ಮಾತೄನ್ತ್ಸಿನ್ಧೂನ್ಪರ್ವತಾಞ್ಛರ್ಯ-
ಣಾವತಃ ।
ಅನಾಗಾಸ್ತ್ವಂ ಸೂರ್ಯಮುಷಾಸಮೀಮಹೇ ಭದ್ರಂ ಸೋಮಃ ಸುವಾನೋ
ಅದ್ಯಾ ಕೃಣೋತು ನಃ ॥ ೨ ॥

॥ ಪದಪಾಠಃ ॥

ದಿವಃ ಪೃಥಿವ್ಯೋಃ । ಅವಃ । ಆ । ವೃಣೀಮಹೇ । ಮಾತೄನ್ । ಸಿಂಧೂನ್ । ಪರ್ವತಾನ್ । ಶರ್ಯ-
ಣಾऽವತಃ ।
ಅನಾಗಾಃऽತ್ವಂ । ಸೂರ್ಯಂ । ಉಷಸಂ । ಈಮಹೇ । ಭದ್ರಂ । ಸೋಮಃ । ಸುವಾನಃ । ಅದ್ಯ ।
ಕೃಣೋತು । ನಃ ॥ ೨ ॥

॥ ಸಾಯಣಭಾಷ್ಯಂ ॥

ದಿವಃಪೃಥಿವ್ಯೋರ್ದ್ಯಾವಾಪೃಥಿವ್ಯೋಃ ಕಾರ್ಯಾರ್ತ್ವೇನ ಸಂಬಂಧ್ಯವೋ ರಕ್ಷಣಂ ವಯಮಾ ವೃಣೀಮಹೇ । ಕಿಂಚ ಮಾತೄಲ್ಲೋಕಸ್ಯ ನಿರ್ಮಾತ್ರ್ಯಾನ್ಸಿಂಧೂಞ್ಛರ್ಯಣಾವತಃ ಸರಸಃ ಸಂಬಂಧಿನಃ

ಪರ್ವತಾಞ್ಶ್ಮಲೋಚ್ಚಯಾಂಶ್ಚ ತಥಾ ಸೂರ್ಯಮುಷಸಂ ಚಾನಾಗಾಸ್ತ್ವಂ ಕರ್ಮವೈಗುಣ್ಯಜನಿತಪಾಪ-ರಾಹಿತ್ಯಮೀಮಹೇ । ವಯಂ ಯಾಚಾಮಹೇ । ಕಿಂಚಾದ್ಯಾಸ್ಮಿನ್ನಹನಿ ನೋಽಸ್ಮಾಕಂ ಸುವಾನೋಽ-ಭಿಷೂಯಮಾಣಃ ಸೋಮೋ ಭದ್ರಂ ಕಲ್ಯಾಣಂ ಕೃಣೋತು । ಕರೋತು ॥

॥ ಪ್ರತಿಪದಾರ್ಥ ॥

**ದಿವಃಪೃಥಿವ್ಯೋಃ**—ದ್ಯಾವಾಪೃಥಿವಿಗಳ । **ಅವಃ**—ರಕ್ಷಣವನ್ನು । **ಆ ವೃಣೀಮಹೇ**—ನಾವು ಯಾಚಿಸುತ್ತೇವೆ । **ಮಾತೄನ್**—ಲೋಕಕ್ಕೆ ಜನನೀರೂಪಿಣಿಗಳಾದ । **ಸಿಂಧೂನ್**—ನದಿಗಳನ್ನೂ । **ಶರ್ಯಣಾವತಃ**—ಶರ್ಯಣಾವತ್ತಿಗೆ ಹತ್ತಿರವಿರುವ । **ಪರ್ವತಾನ್**—ಪರ್ವತಗಳನ್ನೂ । **ಸೂರ್ಯಂ**—ಸೂರ್ಯನನ್ನು । **ಉಷಸಂ**—ಉಷೋದೇವಿಯನ್ನೂ । **ಅನಾಗಾಸ್ತ್ವಂ**—ನಮ್ಮ ಪಾಪನಾಶಕ್ಕಾಗಿ । **ಈಮಹೇ**—ಪ್ರಾರ್ಥಿಸುತ್ತೇವೆ । **ಅದ್ಯ**—ಈ ಯಾಗಕಾಲದಲ್ಲಿ । **ನಃ**—ನಮ್ಮಿಂದ । **ಸುವಾನಃ**—ಹಿಂಡಲ್ಪಡುವ । **ಸೋಮಃ**—ಸೋಮವು । **ಭದ್ರಂ**—ಕಲ್ಯಾಣವನ್ನು । **ಕೃಣೋತು**—ಮಾಡಲಿ.

ಭಾವಾರ್ಥ॥

ನಾವು ದ್ಯಾವಾಪೃಥಿವಿಗಳ ರಕ್ಷಣವನ್ನು ಯಾಚಿಸುತ್ತೇವೆ. ಲೋಕಕ್ಕೆ ಜನನೀರೂಪಿಣಿಗಳಾದ ನದಿಗಳನ್ನೂ, ಶರ್ಯಣಾವತೆಂಬ ಸರೋವರದ ಹತ್ತಿರವಿರುವ ಪರ್ವತಗಳನ್ನೂ ಸೂರ್ಯನನ್ನೂ ಉಷೋದೇವಿಯನ್ನೂ ನಮ್ಮ ಪಾಪವನ್ನು ಪರಿಹರಿಸಬೇಕೆಂದು ಪ್ರಾರ್ಥಿಸುತ್ತೇವೆ. ಈ ಯಾಗಕಾಲದಲ್ಲಿ ನಮ್ಮಿಂದ ಹಿಂಡಲ್ಪಡುವ ಸೋಮವು ನಮಗೆ ಕಲ್ಯಾಣವನ್ನುಂಟುಮಾಡಲಿ.

## English Translation

We solicit the protection of heaven and earth: (we solicit) the maternal rivers, the mountains with their lakes, the sun and the dawn, for freedom from sin: may the Soma that is now effused secure to us to-day good fortune.

॥ ಸಂಹಿತಾಪಾಠಃ ॥

ದ್ಯಾವಾ ನೋ ಅದ್ಯ ಪೃಥಿವೀ ಅನಾಗಸೋ ಮಹೀ ತ್ರಾಯೇತಾಂ ಸುವಿ-
ತಾಯ ಮಾತರಾ ।
ಉಷಾ ಉಚ್ಛಂತ್ಯಪ ಬಾಧತಾಮಘಂ ಸ್ವಸ್ತ್ಯ೧ಗ್ನಿಂ ಸಮಿಧಾನಮೀ-
ಮಹೇ ॥ ೩ ॥

ಪದಪಾಠಃ

ದ್ಯಾವಾ । ನಃ । ಅದ್ಯ । ಪೃಥಿವೀ ಇತಿ । ಅನಾಗಸಃ । ಮಹೀ ಇತಿ । ತ್ರಾಯೇತಾಂ । ಸುವಿತಾಯ । ಮಾತರಾ ।

ಉಷಾಃ । ಉಚ್ಛಂತೀ । ಅಪ । ಬಾಧತಾಂ । ಅಘಂ । ಸ್ವಸ್ತಿ । ಅಗ್ನಿಂ । ಸಂಽಇಧಾನಂ । ಈಮಹೇ ॥೩॥

॥ ಸಾಯಣಭಾಷ್ಯಂ ॥

ಮಹೀ ಮಹತ್ಯೌ ಮಾತರಾ ಮಾತರೌ ಸರ್ವಸ್ಯ ಮಾತೃಭೂತೇ ದ್ಯಾವಾ ಪೃಥಿವೀ ದ್ಯಾವಾಪೃಥಿವ್ಯಾವದ್ಯಾಸ್ಮಿನ್ನಹನ್ಯನಾಗಸೋಽಪರಾಧರಹಿತಾನ್ನೋಽಸ್ಮಾನ್ಸುವಿತಾಯ ಸುಖಾಯ ತ್ರಾಯೇತಾಂ । ರಕ್ಷೇತಾಂ । ಕಿಂಚೋಚ್ಛಂತೀ ತಮಾಂಸಿ ವಿವಾಸಯಂತ್ಯುಷಾ ಅಸ್ಮಾಕಮಘಂ ಪಾಪಮಪ ಬಾಧತಾಂ । ಅಪನಯತು । ಅಪಿ ಚ ಸಮಿಧಾನಂ ಸಮ್ಯಗ್ದೀಪ್ಯಮಾನಮಗ್ನಿಂ ಸ್ವಸ್ತಿ ಸರ್ವಪ್ರಕಾರಾವಿನಾಶಮೀಮಹೇ । ವಯಂ ಯಾಚಾಮಹೇ ॥

॥ ಪ್ರತಿಪದಾರ್ಥ ॥

ಮಹೀ—ಮಹತ್ತ್ವರೂಪವುಳ್ಳವರೂ । ಮಾತರಾ—ಜಗನ್ನಿರ್ಮಾಪಕಿಯರೂ ಆದ । ದ್ಯಾವಾಪೃಥಿವೀ—ದ್ಯಾವಾಪೃಥಿವಿಗಳು । ಅದ್ಯ—ಈ ಯಾಗಕಾಲದಲ್ಲಿ । ನಃ—ನಮ್ಮನ್ನು । ಸುವಿತಾಯ—ನಮ್ಮ ಸೌಖ್ಯಕ್ಕಾಗಿ । ಅನಾಗಸಃ—ಪಾಪರಹಿತರನ್ನಾಗಿ ಮಾಡಿ । ತ್ರಾಯೇತಾಂ—ರಕ್ಷಿಸಲಿ । ಉಚ್ಛಂತೀ—ಉದಯಿಸುತ್ತಿರುವ । ಉಷಾಃ—ಉಷೋದೇವಿಯು । ಅಘಂ—ನಮ್ಮ ಪಾಪವನ್ನು । ಅಪ ಬಾಧತಾಂ—ನಾಶಪಡಿಸಲಿ ಸಮಿಧಾನಂ—ಪ್ರಜ್ವಲಿತನಾಗಿ ಪ್ರಕಾಶಿಸುವ । ಅಗ್ನಿಂ—ಅಗ್ನಿಯನ್ನು । ಸ್ವಸ್ತಿ—ನಮ್ಮ ಕಲ್ಯಾಣಕ್ಕಾಗಿ । ಈಮಹೇ—ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಮಹತ್ತ್ವರೂಪವುಳ್ಳವರೂ, ಜಗನ್ನಿರ್ಮಾಪಕಿಯರೂ ಆದ ದ್ಯಾವಾಪೃಥಿವಿಗಳು ಈ ಯಾಗಕಾಲದಲ್ಲಿ ನಮ್ಮನ್ನು ನಮ್ಮ ಸೌಖ್ಯಕ್ಕಾಗಿ ಪಾಪರಹಿತರನ್ನಾಗಿ ಮಾಡಲಿ. ನಮ್ಮನ್ನು ರಕ್ಷಿಸಲಿ. ಉದಯಿಸುತ್ತಿರುವ ಉಷೋದೇವಿಯು ನಮ್ಮ ಪಾಪವನ್ನು ನಾಶಪಡಿಸಲಿ. ಪ್ರಜ್ವಲಿತನಾಗಿ ಪ್ರಕಾಶಿಸುವ ಅಗ್ನಿಯನ್ನು ನಮ್ಮ ಕಲ್ಯಾಣಕ್ಕಾಗಿ ಪ್ರಾರ್ಥಿಸುತ್ತೇವೆ.

## English Translation

May the vast maternal heaven and earth this day preserve us for our happiness, free from sin : may the opening dawn drive away our sin : we solicit the kindled fire for our welfare.

ಸಂಹಿತಾಪಾಠಃ ॥

ಇಯಂ ನ ಉಸ್ರಾ ಪ್ರಥಮಾ ಸುದೇವ್ಯಂ ರೇವತ್ಸನಿಭ್ಯೋ ರೇವತೀ ವ್ಯುಚ್ಛತು ।
ಆರೇ ಮನ್ಯುಂ ದುರ್ವಿದತ್ರಸ್ಯ ಧೀಮಹಿ ಸ್ವಸ್ತ್ಯಗ್ನಿಂ ಸಮಿಧಾನಮೀಮಹೇ ॥ ೪ ॥

॥ ಪದಪಾಠಃ ॥

ಇಯಂ । ನಃ । ಉಸ್ರಾ । ಪ್ರಥಮಾ । ಸುಽದೇವ್ಯಂ । ರೇವತ್ । ಸನಿಽಭ್ಯಃ । ರೇವತೀ । ವಿ । ಉಚ್ಛತು ।
ಆರೇ । ಮನ್ಯುಂ । ದುಃಽವಿದತ್ರಸ್ಯ । ಧೀಮಹಿ । ಸ್ವಸ್ತಿ । ಅಗ್ನಿಂ । ಸಂಽಇಧಾನಂ । ಈಮಹೇ ॥ ೪ ॥

॥ ಸಾಯಣಭಾಷ್ಯಂ ॥

ರೇವತೀ ಧನವತೀ ಪ್ರಥಮಾ ಮುಖ್ಯೇಯಮುಸ್ರಾ ಪಾಪಾನಾಮುತ್ಸಾರಿಣ್ಯುಷಾಃ ಸುದೇವ್ಯಂ ಶೋಭನದೇವಾರ್ಹಂ ರೇವದ್ಧನವತ್ಪ್ರಧಾನಯಾಗಕಾಲತ್ವಂ ಸನಿಭ್ಯೋ ಭಜಮಾನೇಭ್ಯೋ ನೋಽಸ್ಮಭ್ಯಂ ಪ್ರಯಚ್ಛಂತೀ ವ್ಯುಚ್ಛತು । ತಮಾಂಸಿ ವಿವಾಸಯತು । ಕಿಂಚ ದುರ್ವಿದತ್ರಸ್ಯ ದುರ್ಧನಸ್ಯ ಪುರುಷಸ್ಯ ಮನ್ಯುಂ ಕ್ರೋಧಮಾರೇ ದೂರೇ ಧೀಮಹಿ । ನಿಧೀಮಹಿ । ಸಿದ್ಧಮನ್ಯತ್ ।

॥ ಪ್ರತಿಪದಾರ್ಥ ॥

**ರೇವತೀ**—ಧನಯುಕ್ತಳೂ । **ಪ್ರಥಮಾ**—ಪ್ರಧಾನಳೂ । **ಉಸ್ರಾ**—ಪಾಪನಾಶಕಳೂ ಆದ । **ಇಯಂ**—ಈ ಉಷೋದೇವಿಯು । **ಸನಿಭ್ಯಃ**—ದೇವತೆಗಳನ್ನು ಪೂಜಿಸುವ । **ನಃ**—ನಮಗಾಗಿ । **ಸುದೇವ್ಯಂ**—ಶ್ರೇಷ್ಠವಾದ ದೇವಪೂಜೆಗೆ ಯೋಗ್ಯವಾದುದೂ । **ರೇವತ್**—ಧನಯುಕ್ತವಾದುದೂ ಆದ ಯಾಗಕಾಲವನ್ನು । **ವ್ಯುಚ್ಛತು**—ಬೆಳಗಿಸಲಿ । **ದುರ್ವಿದತ್ರಸ್ಯ**—ದುಷ್ಟಶಕ್ತಿಯುಳ್ಳ ಪುರುಷನ । **ಮನ್ಯುಂ**—ಕ್ರೋಧವನ್ನು । **ಆರೇ**—ದೂರದಲ್ಲಿ । **ಧೀಮಹಿ**—ನಾವು ಇಡುವಂತಾಗಲಿ । **ಸ್ವಸ್ತಿ**—ನಮ್ಮ ಕಲ್ಯಾಣಕ್ಕಾಗಿ । **ಸಮಿಧಾನಂ**—ಪ್ರಜ್ವಲಿತನಾಗಿ ಪ್ರಕಾಶಿಸುವ । **ಅಗ್ನಿಂ**—ಅಗ್ನಿಯನ್ನು । **ಈಮಹೇ**—ಯಾಚಿಸುತ್ತೇವೆ.

। ಭಾವಾರ್ಥ ।

ಧನಯುಕ್ತಳೂ, ಯಾಗಕ್ಕೆ ಮುಖ್ಯಳೂ, ಪಾಪನಾಶಕಳೂ ಆದ ಉಷೋದೇವಿಯು ದೇವತೆಗಳನ್ನು ಪೂಜಿಸುವ ನಮಗಾಗಿ ಶ್ರೇಷ್ಠವಾದ ದೇವಪೂಜೆಗೆ ಯೋಗ್ಯವಾದುದೂ, ಧದಯುಕ್ತವಾದುದೂ ಆದ ಯಾಗಕಾಲವನ್ನು ಕತ್ತಲನ್ನು ನಾಶಮಾಡುವುದರ ಮೂಲಕ ಬೆಳಗಿಸಲಿ. ದುಷ್ಟಶಕ್ತಿಯುಳ್ಳ ಪುರುಷನ ಕ್ರೋಧವು ನಮ್ಮಿಂದ ದೂರವಾಗಿರಲಿ. ಪ್ರಜ್ವಲಿತನಾಗಿ ಪ್ರಕಾಶಿಸುವ ಅಗ್ನಿಯನ್ನು ನಮ್ಮ ಶ್ರೇಯಸ್ಸಿಗಾಗಿ ಪ್ರಾರ್ಥಿಸುತ್ತೇವೆ.

## English Translation

May this first dawn, the possessor of wealth, open, bringing to us who are liberal (a season) fit for the gods, abounding with riches: we consider the anger of the malevolent (to be) remote: we solicit the kindled fire for our welfare.

॥ ಸಂಹಿತಾಪಾಠಃ ॥

ಪ್ರ ಯಾಃ ಸಿಸ್ರತೇ ಸೂರ್ಯಸ್ಯ ರಶ್ಮಿಭಿರ್ಜ್ಯೋತಿರ್ಭರಂತೀರುಷಸೋ ವ್ಯುಷ್ಟಿಷು ।
ಭದ್ರಾ ನೋ ಅದ್ಯ ಶ್ರವಸೇ ವ್ಯುಚ್ಛತ ಸ್ವಸ್ತ್ಯಗ್ನಿಂ ಸಮಿಧಾನಮೀಮಹೇ ॥ ೫ ॥

॥ ಪದಪಾಠಃ ॥

ಪ್ರ । ಯಾಃ । ಸಿಸ್ರತೇ । ಸೂರ್ಯಸ್ಯ । ರಶ್ಮಿऽಭಿಃ । ಜ್ಯೋತಿಃ । ಭರಂತೀಃ । ಉಷಸಃ । ವಿऽಉಷ್ಟಿಷು ।
ಭದ್ರಾ । ನಃ । ಅದ್ಯ । ಶ್ರವಸೇ । ವಿ । ಉಚ್ಛತ । ಸ್ವಸ್ತಿ । ಅಗ್ನಿಂ । ಸಂऽಇಧಾನಂ । ಈಮಹೇ ॥ ೫ ॥

॥ ಸಾಯಣಭಾಷ್ಯಂ ॥

ಯಾ ಉಷಸಃ ಸೂರ್ಯಸ್ಯ ರಶ್ಮಿಭಿಃ ಕಿರಣೈಃ ಪ್ರ ಸಿಸ್ರತೇ ಸಂಗಚ್ಛಂತೇ ವ್ಯುಷ್ಟಿಷು ವ್ಯುಚ್ಛನೇಷು ತಮಸಾಂ ವಿನಾಶನಕಾಲೇಷು ಜ್ಯೋತಿರಾತ್ಮೀಯಂ ತೇಜೋ ಭರಂತೀಃ ಭರಂತಿ ಚ ತಾ ಯೂಯಂ ನೋಽಸ್ಮಾಕಮದ್ಯಾಸ್ಮಿನ್ನಹನಿ ಶ್ರವಸೇಽನ್ನಾಯ ಭದ್ರಾ ಭಜನೀಯಾ ಭವತ । ವ್ಯುಚ್ಛತ । ತಮಾಂಸಿ ವಿನಾಶಯತ ಚ । ಸಿದ್ಧಮನ್ಯತ್ ॥

। ಪ್ರತಿಪದಾರ್ಥ ।

**ಉಷಸಃ**—ಎಲೈ ಉಷಸ್ಸುಗಳೇ । **ಯಾಃ**—ಯಾವ ನೀವು । **ಸೂರ್ಯಸ್ಯ**—ಸೂರ್ಯನ । **ರಶ್ಮಿಭಿಃ**—ಕಿರಣಗಳೊಂದಿಗೆ । **ಪ್ರ ಸಿಸ್ರತೇ**—ಸೇರಿಕೊಂಡಿರುವರೋ ಅಂತಹ ನೀವು । **ವ್ಯುಷ್ಟಿಷು**—ನಿಮ್ಮ ಆವಿರ್ಭಾವಕಾಲಗಳಲ್ಲಿ । **ಜ್ಯೋತಿಃ**—ನಿಮ್ಮ ತೇಜಸ್ಸನ್ನು । **ಭರಂತೀಃ**—ಧರಿಸುತ್ತ । **ನಃ**—ನಮಗೆ । **ಅದ್ಯ**—ಇಂದು । **ಶ್ರವಸೇ**—ನಮ್ಮ ಅನ್ನಕ್ಕಾಗಿ । **ಭದ್ರಾಃ**—ಪೂಜನೀಯರಾಗಿ । **ವ್ಯುಚ್ಛತ**—ಆವಿರ್ಭವಿಸಿರಿ । **ಸಮಿಧಾನಂ**—ಪ್ರಜ್ವಲಿತನಾಗಿರುವ । **ಅಗ್ನಿಂ**—ಅಗ್ನಿಯನ್ನು । **ಸ್ವಸ್ತಿ**—ನಮ್ಮ ಕಾಲ್ಯಾಣಕ್ಕಾಗಿ । **ಈಮಹೇ**—ಪ್ರಾರ್ಥಿಸುತ್ತೇವೆ-

॥ ಭಾವಾರ್ಥ ॥

ಎಲೈ ಉಷಸ್ಸುಗಳೇ, ಯಾವ ನೀವು ಸೂರ್ಯನ ಕಿರಣಗಳೊಂದಿಗೆ ಸೇರಿಕೊಂಡಿರುವಿರೋ ಅಂತಹ ನೀವು ನಿಮ್ಮ ಆವಿರ್ಭಾವಕಾಲಗಳಲ್ಲಿ ನಿಮ್ಮ ತೇಜಸ್ಸನ್ನು ಪ್ರಸರಿಸುತ್ತ ಇಂದು ನಮ್ಮ ಅನ್ನಲಾಭಾರ್ಥವಾಗಿ ನಮಗೆ ಪೂಜನೀಯರಾಗಿ ಆವಿರ್ಭವಿಸಿರಿ. ಪ್ರಜ್ವಲಿತನಾಗಿರುವ ಅಗ್ನಿಯನ್ನು ನಮ್ಮ ಕಲ್ಯಾಣಕ್ಕಾಗಿ ಪ್ರಾರ್ಥಿಸುತ್ತೇವೆ.

## English Translation

Dawns, you are associated with the rays of the sun, bringing light at the opening (of the day); shine upon us to-day, propitious, for our subsistence: we solicit the kindled fire for our welfare.

॥ ಸಂಹಿತಾಪಾಠಃ ॥

ಅನಮೀವಾ ಉಷಸ ಆ ಚರಂತು ನ ಉದಗ್ನಯೋ ಜಿಹತಾಂ ಜ್ಯೋತಿಷಾ ಬೃಹತ್ ।
ಆಯುಕ್ಷಾತಾಮಶ್ವಿನಾ ತೂತುಜಿಂ ರಥಂ ಸ್ವಸ್ತ್ಯಗ್ನಿಂ ಸಮಿಧಾನಮೀಮಹೇ ॥ ೬ ॥

॥ ಪದಪಾಠಃ ॥

ಅನಮೀವಾಃ । ಉಷಸಃ । ಆ । ಚರಂತು । ನಃ । ಉತ್ । ಅಗ್ನಯಃ । ಜಿಹತಾಂ । ಜ್ಯೋತಿಷಾ । ಬೃಹತ್
ಆಯುಕ್ಷಾತಾಂ । ಅಶ್ವಿನಾ । ತೂತುಜಿಂ । ರಥಂ । ಸ್ವಸ್ತಿ । ಅಗ್ನಿಂ । ಸಂऽಇಧಾನಂ । ಈಮಹೇ ॥ ೬ ॥

॥ ಸಾಯಣಭಾಷ್ಯಂ ॥

ಅನಮೀವಾ ರೋಗರಹಿತಾ ಉಷಸೋ ನೋऽಸ್ಮಾನಾ ಚರಂತು । ಆಗಚ್ಛಂತು । ಬೃಹದ್ಬೃಹತಾ ಮಹತಾ ಜ್ಯೋತಿಷಾ ತೇಜಸಾ ಯುಕ್ತಾ ಅಗ್ನಯೋऽಪ್ಯುಜ್ಜಿಹತಾಂ । ಉದ್ಗಚ್ಛಂತು । ಅಶ್ವಿನಾಶ್ವಿನೌ ತೂತುಜಿಂ ಕ್ಷಿಪ್ರಗಾಮಿನಂ ರಥಮಾಯುಕ್ಷಾತಾಂ । ಅಸ್ಮಾನ್ಪ್ರತ್ಯಾಗಂತುಂ ರಾಸಭಾಭ್ಯಾಂ ಯುಂಕ್ತಾಂ । ಹರಿತ ಆದಿತ್ಯಸ್ಯ ರಾಸಭಾವಶ್ವಿನೋರಿತಿ ಪಾಠಾತ್ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

ಅನಮೀವಾಃ—ರೋಗರಹಿತವಾದ । ಉಷಸಃ—ಉಷಸ್ಸುಗಳು । ನಃ—ನಮ್ಮಲ್ಲಿಗೆ । ಆ ಚರಂತು—ಓಡಿಬರಲಿ । ಬೃಹತ್—ಮಹದಾಕಾರವುಳ್ಳ । ಜ್ಯೋತಿಷಾ—ತೇಜಸ್ಸುಗಳಿಂದ ಕೂಡಿದ । ಅಗ್ನಯಃ—ಅಗ್ನಿ

ಗಳೂ । **ಉಜ್ಜಿಹತಾಂ**—ಪ್ರಜ್ವಲಿಸಿ ಪ್ರಸರಿಸಲಿ । **ಅಶ್ವಿನಾ**—ಅಶ್ವಿನೀದೇವತೆಗಳೂ । **ತೂತುಜಿಂ**—ಕ್ಷಿಪ್ರಗಾಮಿಯಾದ । **ರಥಂ**—ತಮ್ಮ ರಥವನ್ನು । **ಆಯುಕ್ಷಾತಾಂ**—ಅಶ್ವಗಳೊಡನೆ ಸೇರಿಸಲಿ । **ಸಮಿಧಾನಂ**—ಪ್ರಜ್ವಲಿತನಾದ । **ಅಗ್ನಿಂ**—ಅಗ್ನಿಯನ್ನು । **ಸ್ವಸ್ತಿ**—ಶ್ರೇಯಸ್ಸಿಗಾಗಿ । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ಆಲಸ್ಯರಹಿತವಾದ ಉಷಸ್ಸುಗಳು ನಮ್ಮಲ್ಲಿಗೆ ಓಡಿಬರಲಿ. ಮಹದಾಕಾರವುಳ್ಳ ತೇಜಸ್ಸುಗಳಿಂದ ಕೂಡಿದ ಅಗ್ನಿಗಳೂ ಪ್ರಜ್ವಲಿಸಿ ಪ್ರಸರಿಸಲಿ. ಅಶ್ವಿನೀದೇವತೆಗಳೂ ಸಹ ನಮ್ಮಲ್ಲಿಗೆ ಬರಲು ತಮ್ಮ ರಥವನ್ನು ಅಶ್ವಗಳೊಡನೆ ಯೋಜಿಸಲಿ. ಪ್ರಜ್ವಲಿತನಾದ ಅಗ್ನಿಯನ್ನು ನಾವು ಶ್ರೇಯಸ್ಸಿಗಾಗಿ ಯಾಚಿಸುತ್ತೇವೆ.

## English Translation

May the salutary dawns hasten to us: may the fires blaze up with great lustre, and may the Aswins harness their quick-going chariot: we solicit the kindled fire for our welfare.

॥ ಸಂಹಿತಾಪಾಠಃ ॥

**ಶ್ರೇಷ್ಠಂ ನೋ ಅದ್ಯ ಸವಿತರ್ವರೇಣ್ಯಂ ಭಾಗಮಾ ಸುವ ಸ ಹಿ ರತ್ನಧಾ ಅಸಿ।**
**ರಾಯೋ ಜನಿತ್ರೀಂ ಧಿಷಣಾಮುಪ ಬ್ರುವೇ ಸ್ವಸ್ತ್ಯಗ್ನಿಂ ಸಮಿಧಾನಮೀ-**
**ಮಹೇ ॥ ೭ ॥**

॥ ಪದಪಾಠಃ ॥

**ಶ್ರೇಷ್ಠಂ । ನಃ । ಅದ್ಯ । ಸವಿತಃ । ವರೇಣ್ಯಂ ॥ ಭಾಗಂ । ಆ । ಸುವ । ಸಃ । ಹಿ । ರತ್ನಽಧಾಃ । ಅಸಿ ।**
**ರಾಯಃ । ಜನಿತ್ರೀಂ । ಧಿಷಣಾಂ । ಉಪ । ಬ್ರುವೇ । ಸ್ವಸ್ತಿ । ಅಗ್ನಿಂ । ಸಂಽಇಧಾನಂ । ಈಮಹೇ ॥**

॥ ಸಾಯಣಭಾಷ್ಯಂ ॥

ಹೇ ಸವಿತಃ ತ್ವಮದ್ಯಾಸ್ಮಿನ್ನಹನಿ ನೋಽಸ್ಮಭ್ಯಂ ವರೇಣ್ಯಂ ವರಣೀಯಂ ಶ್ರೇಷ್ಠಂ ಪ್ರಶಸ್ಯತಮಂ ಭಾಗಂ ಭಜನೀಯಂ ಧನಮಾ ಸುವ । ಪ್ರೇರಯ । ದೇಹೀತ್ಯರ್ಥಃ । ಹಿ ಯಸ್ಮಾದಪ್ರಾರ್ಥಿತಸ್ತ್ವಂ ರತ್ನಧಾಃ ಶ್ರೇಷ್ಠಾನಾಂ ಧನಾನಾಂ ಸಂವಿಭಕ್ತಾಸಿ ಭವಸಿ । ತಥಾ ಚ ನಿಗಮಾಂತರಂ । ವಿಭಕ್ತಾರಂ ಹವಾಮಹೇ ವಸೋಶ್ಚಿತ್ರಸ್ಯ ರಾಧಸಃ ಸವಿತಾರಂ ನೃಚಕ್ಷಸಂ । ಋ. ೧-೨೨-೭ । ಇತಿ । ರಾಯೋ ಧನಸ್ಯ ಜನಿತ್ರೀಂ ಧಿಷಣಾಂ ಸರ್ವದೇವಸ್ತುತಿರೂಪಾಂ ವಾಚಮುಪ ಬ್ರುವೇ । ಅಹಮುಪಬ್ರವೀಮಿ । ಯದ್ವಾ । ಧಿಷಣಾಂ ದೇವೀಮುಪ ಬ್ರುವೇ । ಉಪಸ್ತೌಮೀತ್ಯರ್ಥಃ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಸವಿತಃ**—ಎಲೈ ಸವಿತೃದೇವನೇ । **ಹಿ**—ಯಾವ ನಿನ್ನ ಪ್ರಭಾವದಿಂದ । **ಸಃ**—ಪ್ರಸಿದ್ಧನಾದ ನೀನು । **ರತ್ನಧಾಃ**—ಉತ್ತಮವಾದ ಧನಪ್ರದನಾಗಿ । **ಅಸಿ**—ಆಗಿರುವೆಯೋ ಆದುದರಿಂದಲೇ । **ಅದ್ಯ**—ಈ ಕಾಲದಲ್ಲಿ । **ನಃ**—ನಮಗೆ । **ವರೇಣ್ಯಂ**—ಪೂಜ್ಯವೂ । **ಶ್ರೇಷ್ಠಂ**—ಪ್ರಶಸ್ಯವೂ ಆದ । **ಭಾಗಂ**—ಧನವನ್ನು । **ಆ ಸುವ**—ಒದಗಿಸು । **ರಾಯಃ**—ಧನಕ್ಕೆ । **ಜನಿತ್ರೀಂ**—ನಿರ್ಮಾಪಕಳಾದ । **ಧಿಷಣಾಂ**—ವಾಗ್ದೇವಿಯನ್ನು । **ಉಪಬ್ರುವೇ**—ಸ್ತುತಿಸುತ್ತೇನೆ । **ಸಮಿಧಾನಂ**—ಪ್ರಜ್ವಲಿತನಾದ । **ಅಗ್ನಿಂ**—ಅಗ್ನಿಯನ್ನು । **ಸ್ವಸ್ತಿ**—ಶ್ರೇಯಸ್ಸಿಗಾಗಿ । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ಎಲೈ ಸವಿತೃದೇವನೇ, ಯಾವ ನಿನ್ನ ಪ್ರಭಾವದಿಂದ ಪ್ರಸಿದ್ಧನಾದ ನೀನು ಉತ್ತಮವಾದ ಧನಪ್ರದನಾಗಿ ಆಗಿರುವೆಯೋ ಆದುದರಿಂದಲೇ ಈ ಕಾಲದಲ್ಲಿ ನಮಗೆ ಪೂಜ್ಯವೂ ಪ್ರಶಸ್ಯವೂ ಆದ ಧನವನ್ನು ಒದಗಿಸು. ಧನಕ್ಕೆ ನಿರ್ಮಾಪಕಳಾದ ವಾಗ್ದೇವಿಯನ್ನು ಸ್ತುತಿಸುತ್ತೇನೆ. ಪ್ರಜ್ವಲಿತನಾದ ಅಗ್ನಿಯನ್ನು ನಮ್ಮ ಶ್ರೇಯಸ್ಸಿಗಾಗಿ ಯಾಚಿಸುತ್ತೇವೆ.

English Translation

Savitri, this day bestow upon us an excellent and eligible portion, for you verily are the dispenser of wealth : I recite the praise (of the gods) which is the progenitress of riches: we solicit the kindled fire for our welfare.

॥ ಸಂಹಿತಾಪಾಠಃ ॥

ಪಿಪರ್ತು ಮಾ ತದೃತಸ್ಯ ಪ್ರವಾಚನಂ ದೇವಾನಾಂ ಯನ್ಮನುಷ್ಯಾ ಅಮನ್ಮಹಿ ।
ವಿಶ್ವಾ ಇದುಸ್ರಾಃ ಸ್ಪಳುದೇತಿ ಸೂರ್ಯಃ ಸ್ವಸ್ತ್ಯಗ್ನಿಂ ಸಮಿಧಾನಮೀಮಹೇ ॥ ೮ ॥

॥ ಪದಪಾಠಃ ॥

ಪಿಪರ್ತು । ಮಾ । ತತ್ । ಋತಸ್ಯ । ಪ್ರऽವಾಚನಂ । ದೇವಾನಾಂ । ಯತ್ । ಮನುಷ್ಯಾಃ । ಅಮನ್ಮಹಿ ।
ವಿಶ್ವಾಃ । ಇತ್ । ಉಸ್ರಾಃ । ಸ್ಪಟ್ । ಉತ್ । ಏತಿ । ಸೂರ್ಯಃ । ಸ್ವಸ್ತಿ । ಅಗ್ನಿಂ । ಸಂऽಇಧಾನಂ । ಈಮಹೇ ॥ ೮ ॥

॥ ಸಾಯಣಭಾಷ್ಯಂ ॥

ಯದ್ವೃತಸ್ಯ ಯಜ್ಞಸ್ಯ ಸತ್ಯಸ್ಯ ವಾ ಸಂಬಂಧಿ ದೇವಾನಾಂ ಪ್ರವಾಚನಂ ಪ್ರಕರ್ಷೇಣ ಗುಣಾನಾಂ ಕಥನಂ ಸ್ತೋತ್ರಂ ಮನುಷ್ಯಾ ವಯಮಮನ್ಮಹಿ ಕರ್ತುಂ ಜಾನೀಮಃ ತತ್ಪ್ರವಾಚನಂ ಮಾ ಮಾಂ ಪಿಪರ್ತು । ಪಾಲಯತು । ಕಿಂಚ ಸೂರ್ಯೋ ವಿಶ್ವಾಃ ಸರ್ವಾ ಉಸ್ರಾ ಉಷಸಃ ಸ್ಪಟ್ ಸ್ಪೃಶನ್ನವಗಚ್ಛನ್ನುದೇತಿ । ಸಿದ್ಧಮನ್ಯತ್ ॥

। ಪ್ರತಿಪದಾರ್ಥ ।

ಯತ್—ಯಾವುದು । ಋತಸ್ಯ—ಯಜ್ಞಕ್ಕೆ ಸಂಬಂಧಿಸಿದ । ದೇವಾನಾಂ—ದೇವತೆಗಳನ್ನು । ಪ್ರವಾಚನಂ—ಪ್ರಶಂಸಿಸುವುದೋ ಆ ಸ್ತೋತ್ರವನ್ನು । ಮನುಷ್ಯಾಃ—ಯಜಮಾನರಾದ ನಾವು । ಅಮನ್ಮಹಿ—ಅರಿತಿದ್ದೇವೆ । ತತ್—ಆ ಪ್ರಶಂಸಾವಾಕ್ಯವು । ಮಾ—ನನ್ನನ್ನು । ಪಿಪರ್ತು—ರಕ್ಷಿಸಲಿ । ಸೂರ್ಯಃ—ಸೂರ್ಯನು । ವಿಶ್ವಾಃ—ಸಮಸ್ತವಾದ । ಉಸ್ರಾಃ—ಉಷಸ್ಸುಗಳನ್ನು । ಸ್ಪಟ್—ಸ್ಪರ್ಶಿಸುತ್ತ । ಉದೇತಿ—ಉದಯಿಸುತ್ತಾನೆ । ಸಮಿಧಾನಂ—ಪ್ರಜ್ವಲಿತನಾದ । ಅಗ್ನಿಂ—ಅಗ್ನಿಯನ್ನು । ಸ್ವಸ್ತಿ—ಶ್ರೇಯಸ್ಸಿಗಾಗಿ । ಈಮಹೇ—ಯಾಚಿಸುತ್ತೇವೆ.

। ಭಾವಾರ್ಥ ।

ಯಾವ ಸ್ತುತಿಯು ಯಜ್ಞಸಂಬಂಧಿಗಳಾದ ದೇವತೆಗಳನ್ನು ಪ್ರಶಂಸಿಸುವುದೋ ಆ ಸ್ತುತಿಯನ್ನು ಯಜಮಾನರಾದ ನಾವು ಅರಿತಿದ್ದೇವೆ. ಆ ಪ್ರಶಂಸಾವಾಕ್ಯವು ನನ್ನನ್ನು ರಕ್ಷಿಸಲಿ. ಸೂರ್ಯನು ಸಮಸ್ತವಾದ ಉಷಸ್ಸುಗಳನ್ನು ಸ್ಪರ್ಶಿಸುತ್ತ ಉದಯಿಸುತ್ತಾನೆ. ಪ್ರಜ್ವಲಿತನಾದ ಅಗ್ನಿಯನ್ನು ಶ್ರೇಯಸ್ಸಿಗಾಗಿ ಪ್ರಾರ್ಥಿಸುತ್ತೇವೆ.

English Translation

May that glorification of the gods which men repeat in connection with the rite preserve me : the sun rises visiting all the lustre of the dawn we solicit the kindled fire for our welfare.

। ಸಂಹಿತಾಪಾಠಃ ।

ಅದ್ವೇಷೋ ಅದ್ಯ ಬರ್ಹಿಷಃ ಸ್ತರೀಮಣಿ ಗ್ರಾವ್ಣಾಂ ಯೋಗೇ ಮನ್ಮನಃ ಸಾಧ ಈಮಹೇ ।

ಆದಿತ್ಯಾನಾಂ ಶರ್ಮಣಿ ಸ್ಥಾ ಭುರಣ್ಯಸಿ ಸ್ವಸ್ತ್ಯ೧ಗ್ನಿಂ ಸಮಿಧಾನಮೀಮಹೇ ।

॥ ಪದಪಾಠಃ ।

ಅದ್ವೇಷಃ । ಅದ್ಯ । ಬರ್ಹಿಷಃ । ಸ್ತರೀಮಣಿ । ಗ್ರಾವ್ಣಾಂ । ಯೋಗೇ । ಮನ್ಮನಃ । ಸಾಧೇ । ಈಮಹೇ । ಆದಿತ್ಯಾನಾಂ । ಶರ್ಮಣಿ । ಸ್ಥಾಃ । ಭುರಣ್ಯಸಿ । ಸ್ವಸ್ತಿ । ಅಗ್ನಿಂ । ಸಂऽಇಧಾನಂ । ಈಮಹೇ ॥ ೯ ॥

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ನಹನಿ ಬರ್ಹಿಷಃ ಸ್ತರೀಮಣಿ ವೇದ್ಯಾಂ ಸ್ತರಣೇ ಮನ್ಮನೋ ಮನನೀಯಸ್ಯಾಭೀಷ್ಟಸ್ಯ ಫಲಸ್ಯ ಸಾಧೇ ಸಾಧಕೇ ಗ್ರಾವ್ಣಾಮಭಿಷವಪಾಷಾಣಾನಾಂ ಯೋಗೇ ಸೋಮೇನ ಸಹ ಸಂಯೋಗೇ ಚ ಸತ್ಯದ್ವೇಷೋ ದ್ವೇಷವರ್ಜಿತಾನಾದಿತ್ಯಾನೀಮಹೇ । ವಯಮಭೀಷ್ಟಂ ಯಾಚಾಮಹೇ । ಹೇ ಸ್ತೋತಃ ತ್ವಂ ತೇಷಾಮಾದಿತ್ಯಾನಾಂ ದೇವಾನಾಂ ಶರ್ಮಣಿ ಸುಖೇ ಸ್ಥಾನೇ ವಾ ಸ್ಥಾಃ । ತಿಷ್ಠ । ಭುರಣ್ಯಸಿ । ಕರ್ತವ್ಯಾನಿ ಕರ್ಮಾಣಿ ಬಿಭರ್ಷಿ । ಗಚ್ಛಸಿ ವಾ । ಸಿದ್ಧಮನ್ಯತ್ ।

॥ ಪ್ರತಿಪದಾರ್ಥ ॥

**ಅದ್ಯ**—ಈ ಯಾಗಕಾಲದಲ್ಲಿ । **ಬರ್ಹಿಷಃ**—ದರ್ಭಾಸನವನ್ನು । **ಸ್ತರೀಮಣಿ**—ಸಿದ್ಧಪಡಿಸುವಾಗಲೂ । **ಮನ್ಮನಃ**—ಇಷ್ಟಾರ್ಥವನ್ನು । **ಸಾಧೇ**—ಸಾಧಿಸಿಕೊಡುವ । **ಗ್ರಾವ್ಣಾಂ**—ಹಿಂಡುವ ಕಲ್ಲುಗಳೊಡನೆ । **ಯೋಗೇ**—ಸೋಮದ ಸಂಬಂಧವಿರುವಾಗಲೂ । **ಅದ್ವೇಷಃ**—ದ್ವೇಷರಹಿತರಾದ ಆದಿತ್ಯರನ್ನು । **ಈಮಹೇ**—ಯಾಚಿಸುತ್ತೇವೆ (ಎಲೈ ಸ್ತುತಿಕರ್ತನೇ) । **ಆದಿತ್ಯಾನಾಂ**—ಆದಿತ್ಯರ । **ಶರ್ಮಣಿ**—ಸುಖಸ್ಥಾನದಲ್ಲಿ । **ಸ್ಥಾಃ**—ಇರುವವನಾಗು । **ಭುರಣ್ಯಸಿ**—ನಿನ್ನ ಕರ್ತವ್ಯಗಳನ್ನು ನೆರವೇರಿಸು । **ಸಮಿಧಾನಂ**—ಪ್ರಜ್ವಲಿತನಾದ । **ಅಗ್ನಿಂ**—ಅಗ್ನಿಯನ್ನು । **ಸ್ವಸ್ತಿ**—ಶ್ರೇಯಸ್ಸಿಗಾಗಿ । **ಈಮಹೇ**—ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಈ ಯಾಗಕಾಲದಲ್ಲಿ ದರ್ಭಾಸನವನ್ನು ಸಿದ್ಧಪಡಿಸುವಾಗಲೂ, ಇಷ್ಟಾರ್ಥವನ್ನು ಸಾಧಿಸಿಕೊಡುವ ಹಿಂಡುವ ಕಲ್ಲುಗಳೊಡನೆ ಸೋಮದ ಸಂಬಧವಿರುವಾಗಲೂ ದ್ವೇಷರಹಿತರಾದ ಆದಿತ್ಯರನ್ನು ಯಾಚಿಸುತ್ತೇವೆ. ಎಲೈ ಸ್ತುತಿಕರ್ತನೇ, ಆದಿತ್ಯರ ಅನುಗ್ರಹರೂಪವಾದ ಸುಖಸ್ಥಾನದಲ್ಲಿರುವವನಾಗು. ನಿನ್ನ ಕರ್ತವ್ಯಗಳನ್ನು ನೆರವೇರಿಸು. ಪ್ರಜ್ವಲಿತನಾದ ಅಗ್ನಿಯನ್ನು ಶ್ರೇಯಸ್ಸಿಗಾಗಿ ಪ್ರಾರ್ಥಿಸುತ್ತೇವೆ.

## English Translation

On strewing the sacred grass, and bringing the stones into contact (with the Soma), whereby our wishes are accomplished, we solicit to-day the benevolent (Adityas): abiding in the happiness of those Adityas, you discharge, worshipper, your duties: we solicit the kindled fire for our welfare.

॥ ಸಂಹಿತಾಪಾಠಃ ॥

ಆ ನೋ ಬರ್ಹಿಃ ಸಧಮಾದೇ ಬೃಹದ್ದಿವಿ ದೇವಾँ ಈಳೇ ಸಾಧಯಾ ಸಪ್ತ ಹೋತೄನ್ ।

ಇಂದ್ರಂ ಮಿತ್ರಂ ವರುಣಂ ಸಾತಯೇ ಭಗಂ ಸ್ವಸ್ತ್ಯ೧ಗ್ನಿಂ ಸಮಿಧಾನಮೀ-
ಮಹೇ ॥ ೧೦ ॥

॥ ಪದಪಾಠಃ ॥

ಆ । ನಃ । ಬರ್ಹಿಃ । ಸಧ್ಽಮಾದೇ । ಬೃಹತ್ । ದಿವಿ । ದೇವಾನ್ । ಈಳೇ । ಸಾದಯ । ಸಪ್ತ । ಹೋತ್ೄನ್ ।
ಇಂದ್ರಂ । ಮಿತ್ರಂ । ವರುಣಂ । ಸಾತಯೇ । ಭಗಂ । ಸ್ವಸ್ತಿ । ಅಗ್ನಿಂ । ಸಂಽಇಧಾನಂ । ಈಮಹೇ ॥

॥ ಸಾಯಣಭಾಷ್ಯಂ ॥

**ನೋಽಸ್ಮಾಕಂ ಬೃಹದ್ಬೃಹತಿ ಮಹತಿ ದಿವಿ ದೀಪ್ತೇ ಸಧಮಾದೇ । ಸಹ ಮಾದ್ಯಂತಿ ದೇವಾ ಯತ್ರ ತಸ್ಮಿನ್ । ಬರ್ಹಿರ್ಬರ್ಹಿಷಿ ಯಜ್ಞೇ ಸಪ್ತ ಸಪ್ತಸಂಖ್ಯಾಕಾನ್ಹೋತ್ೄನ್ವಷಟ್ಕರ್ತ್ೄನಿಂದ್ರಂ ಮಿತ್ರಂ ಚ ವರುಣಂ ಚ ಭಗಂ ಚ ದೇವಾನಿತರಾನಪಿ ಯಷ್ಟವ್ಯಾನ್ದೇವಾನ್ ಹೇ ಅಗ್ನೇ ತ್ವಮಾ ಸಾದಯ । ಅಗ್ನೇರಾಭಿಮುಖ್ಯಕರಣಂ ಇಹಾದ್ಯ ದೈವ್ಯಂ ಜನಂ ಬರ್ಹಿರಾ ಸಾದಯಾ ವಸೋ । ಋ. ೧-೪೫-೯ । ಇತ್ಯೇವಮಾದಿಮಂತ್ರೈರವಗಮ್ಯತೇ । ತತ್ರ ತ್ವಯಾಸಾದಿತಾಂಸ್ತಾನಿಂದ್ರಾದೀನ್ದೇವಾನಹಂ ಸಾತಯೇ ಧನಲಾಭಾಯೇಳೇ । ಸ್ತೌಮಿ । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ನಃ**—ನಮ್ಮ । **ಬೃಹತ್**—ಮಹತ್ತಾದುದೂ । **ದಿವಿ**—ಪ್ರಕಾಶಮಾನವಾದುದೂ । **ಸಧಮಾದೇ**—ದೇವತೆಗಳು ಒಟ್ಟಿಗೆ ಕುಳಿತುಕೊಳ್ಳತಕ್ಕದ್ದೂ ಆದ । **ಬರ್ಹಿಃ**—ಯಜ್ಞಾಸನದ ಮೇಲೆ । **ಸಪ್ತ ಹೋತ್ೄನ್**—ಏಳು ಜನ ಹೋತೃಗಳನ್ನೂ । **ಇಂದ್ರಂ**—ಇಂದ್ರನನ್ನೂ । **ಮಿತ್ರಂ**—ಮಿತ್ರನನ್ನೂ । **ವರುಣಂ**—ವರುಣನನ್ನೂ । **ಭಗಂ**—ಭಗನನ್ನೂ । **ದೇವಾನ್**—ಇತರ ದೇವತೆಗಳನ್ನೂ । **ಆ ಸಾದಯ**—ಕುಳ್ಳಿರಿಸು । **ಸಾತಯೇ**—ಧನಲಾಭಾರ್ಥವಾಗಿ । **ಈಳೇ**—ಅವರೆಲ್ಲರನ್ನೂ ಸ್ತುತಿಸುತ್ತೇನೆ । **ಸಮಿಧಾನಂ**—ಪ್ರಜ್ವಲಿತನಾದ । **ಅಗ್ನಿಂ**—ಅಗ್ನಿಯನ್ನು । **ಸ್ವಸ್ತಿ**—ಶ್ರೇಯಸ್ಸಿಗಾಗಿ । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮ್ಮ ಮಹತ್ತಾದುದೂ, ಪ್ರಕಾಶಮಾನವಾದುದೂ, ದೇವತೆಗಳು ಒಟ್ಟಿಗೆ ಕುಳಿತುಕೊಳ್ಳತಕ್ಕದ್ದೂ ಆದ ಯಜ್ಞಾಸನದ ಮೇಲೆ ಏಳು ಜನ ಹೋತೃಗಳನ್ನೂ ಇಂದ್ರನನ್ನೂ ಮಿತ್ರನನ್ನೂ, ವರುಣನನ್ನೂ, ಭಗನನ್ನೂ ಇತರ ದೇವತೆಗಳನ್ನೂ ಕುಳ್ಳಿರಿಸು. ಧನಲಾಭಾರ್ಥವಾಗಿ ಅವರೆಲ್ಲರನ್ನೂ ಸ್ತುತಿಸುತ್ತೇನೆ. ಪ್ರಜ್ವಲಿತನಾದ ಅಗ್ನಿಯನ್ನು ಶ್ರೇಯಸ್ಸಿಗಾಗಿ ಯಾಚಿಸುತ್ತೇವೆ.

## English Translation

On this our sacred grass, spacious, and bright, where the gods delight together, you (Agni) seat the seven ministrant priests, Indra, Mitra, Varuna, Bhaga, I praise the gods for their bounty: we solicit the kindled fire for our welfare.

ಸಂಹಿತಾಪಾಠಃ

ತ ಆದಿತ್ಯಾ ಆ ಗತಾ ಸರ್ವತಾತಯೇ ವೃಧೇ ನೋ ಯಜ್ಞಮವತಾ ಸಜೋಷಸಃ ।
ಬೃಹಸ್ಪತಿಂ ಪೂಷಣಮಶ್ವಿನಾ ಭಗಂ ಸ್ವಸ್ತ್ಯ೧ಗ್ನಿಂ ಸಮಿಧಾನಮೀಮಹೇ ॥

॥ ಪದಪಾಠಃ ॥

ತೇ । ಆದಿತ್ಯಾಃ । ಆ । ಗತ । ಸರ್ವತಾತಯೇ । ವೃಧೇ । ನಃ । ಯಜ್ಞಂ । ಅವತ । ಸsಜೋಷಸಃ ।
ಬೃಹಸ್ಪತಿಂ । ಪೂಷಣಂ । ಅಶ್ವಿನಾ । ಭಗಂ । ಸ್ವಸ್ತಿ । ಅಗ್ನಿಂ । ಸಂsಇಧಾನಂ । ಈಮಹೇ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಆದಿತ್ಯಾಃ ಯೇಽಸ್ಮಾಭಿರಾಹೂತಾಸ್ತೇ ಯೂಯಂ ಸರ್ವತಾತಯೇ ಯಜ್ಞಾರ್ಥಮಾಗತ । ಆಗಚ್ಛತ । ಆಗತ್ಯ ಚ ಹೇ ಸಜೋಷಸಃ ಸಂಗತಾಃ ಯೂಯಂ ನೋಽಸ್ಮಾಕಂ ವೃಧೇ ವರ್ಧನಾಯ ಯಜ್ಞಂ ಪ್ರತ್ಯವತ । ಗಚ್ಛತ । ವಯಂ ಚ ಬೃಹಸ್ಪತಿಂ ಪೂಷಣಂ ಚಾಶ್ವಿನಾಶ್ವಿನೌ ಚ ಭಗಂ ಭಗಾಖ್ಯಂ ದೇವಂ ಚ ಸಮಿಧಾನಂ ಸಮ್ಯಗ್ದೀಪ್ತಮಗ್ನಿಂ ಚ ಸ್ವಸ್ತಿ ಸರ್ವಪ್ರಕಾರಾವಿನಾಶಮೀಮಹೇ । ಯಾಚಾಮಹೇ ॥

॥ ಪ್ರತಿಪದಾರ್ಥ ॥

**ಆದಿತ್ಯಾಃ**—ಎಲೈ ಆದಿತ್ಯರೇ । **ತೇ**—ನೀವು । **ಸರ್ವತಾತಯೇ**—ನಮ್ಮ ಯಜ್ಞಕ್ಕೆ । **ಆ ಗತ**—ಬನ್ನಿರಿ । **ಸಜೋಷಸಃ**—ಒಟ್ಟುಗೂಡಿ ಹರ್ಷಿಸುವ ನೀವು । **ನಃ**— ನಮ್ಮ । **ವೃಧೇ**—ಪುಷ್ಟಿಗಾಗಿ । **ಯಜ್ಞಂ**—ನಮ್ಮ ಯಜ್ಞವನ್ನು । **ಅವತ**—ರಕ್ಷಿಸಿರಿ । **ಬೃಹಸ್ಪತಿಂ**—ಬೃಹಸ್ಪತಿಯನ್ನೂ । **ಪೂಷಣಂ**—ಪೂಷದೇವನನ್ನೂ । **ಅಶ್ವಿನಾ**—ಅಶ್ವಿನೀದೇವತೆಗಳನ್ನೂ । **ಭಗಂ**—ಭಗನನ್ನೂ । **ಸಮಿಧಾನಂ**—ಪ್ರಜ್ವಲಿತನಾದ । **ಅಗ್ನಿಂ**—ಅಗ್ನಿಯನ್ನೂ । **ಸ್ವಸ್ತಿ**—ನಮ್ಮ ಶ್ರೇಯಸ್ಸಿಗಾಗಿ । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ಎಲೈ ಆದಿತ್ಯರೇ, ನೀವು ನಮ್ಮ ಯಜ್ಞಕ್ಕೆ ಬನ್ನಿರಿ. ಒಟ್ಟುಗೂಡಿ ಹರ್ಷಿಸುವ ನೀವು ನಮ್ಮ ಪುಷ್ಟಿಗಾಗಿ ನಮ್ಮ ಯಜ್ಞವನ್ನು ರಕ್ಷಿಸಿರಿ. ಬೃಹಸ್ಪತಿಯನ್ನು ಪೂಷದೇವನನ್ನು ಅಶ್ವಿನೀದೇವತೆಗಳನ್ನು ಭಗನನ್ನೂ, ಪ್ರಜ್ವಲಿತನಾದ ಅಗ್ನಿಯನ್ನೂ ನಮ್ಮ ಶ್ರೇಯಸ್ಸಿಗಾಗಿ ಯಾಚಿಸುತ್ತೇವೆ.

## English Translation

Adityas, come to our ceremony, being well-pleased protect the sacrifice for our growth : we solicit for our welfare Brihaspati, Pushan, the Aswins, Bhaga, and the kindled fire.

। ಸಂಹಿತಾಪಾಠಃ ।

**ತನ್ನೋ ದೇವಾ ಯಚ್ಛತ ಸುಪ್ರವಾಚನಂ ಛರ್ದಿರಾದಿತ್ಯಾಃ ಸುಭರಂ ನೃಪಾಯ್ಯಂ ।**

**ಪಶ್ವೇ ತೋಕಾಯ ತನಯಾಯ ಜೀವಸೇ ಸ್ವಸ್ತ್ಯ೧ಗ್ನಿಂ ಸಮಿಧಾನಮೀಮಹೇ ॥ ೧೨ ॥**

॥ ಪದಪಾಠಃ ॥

**ತತ್ । ನಃ । ದೇವಾಃ । ಯಚ್ಛತ । ಸುऽಪ್ರವಾಚನಂ । ಛರ್ದಿಃ । ಆದಿತ್ಯಾಃ । ಸುऽಭರಂ । ನೃऽಪಾಯ್ಯಂ । ಪಶ್ವೇ । ತೋಕಾಯ । ತನಯಾಯ । ಜೀವಸೇ । ಸ್ವಸ್ತಿ । ಅಗ್ನಿಂ । ಸಂऽಇಧಾನಂ । ಈಮಹೇ ॥೧೨॥**

॥ ಸಾಯಣಭಾಷ್ಯಂ ॥

**ಹೇ ಆದಿತ್ಯಾ ದೇವಾಃ ಯೂಯಂ ಸುಪ್ರವಾಚನಮತ್ಯಂತಂ ಪ್ರಶಸ್ತಂ ಸುಭರಂ ಸುಸಮೃದ್ಧಂ ನೃಪಾಯ್ಯಂ ನೃಣಾಂ ರಕ್ಷಕಂ ತದಸ್ಮದಭಿಲಷಿತಂ ಛರ್ದಿರ್ಗೃಹಂ ನೋऽಸ್ಮಾಕಂ ಪಶ್ವೇ ಪಶ್ವಾತ್ಮಕಾಯ ತೋಕಾಯ ಪುತ್ರಾಯ ತನಯಾಯ ಪೌತ್ರಾಯ ಚ ಜೀವಸೇ ಜೀವನಾರ್ಥಂ ಯಚ್ಛತ । ದತ್ತ । ಸಿದ್ಧಮನ್ಯತ್**

। ಪ್ರತಿಪದಾರ್ಥ ।

**ದೇವಾಃ**—ದೇವತಾತ್ಮರಾದ । **ಆದಿತ್ಯಾಃ**—ಎಲೈ ಆದಿತ್ಯರೇ । **ಸುಪ್ರವಾಚನಂ**—ಅತ್ಯಂತ ಪ್ರವಾದುದೂ । **ಸುಭರಂ**—ಸುಸಮೃದ್ಧವಾದುದೂ । **ನೃಪಾಯ್ಯಂ**—ನಮಗೆಲ್ಲ ರಕ್ಷಕವಾದುದೂ । **ತತ್**—ನಮ್ಮಿಂದ ಇಚ್ಛಿಸಲ್ಪಟ್ಟುದೂ ಆದ । **ಛರ್ದಿಃ**—ಗೃಹವನ್ನು । **ನಃ**—ನಮ್ಮ । **ಪಶ್ವೇ**—ಪಶುಗಳಿಗೂ । **ತೋಕಾಯ**—ಪುತ್ರಾದಿಗಳಿಗೂ । **ತನಯಾಯ**—ಪೌತ್ರಾದಿಗಳಿಗೂ । **ಜೀವಸೇ**—ಜೀವನಾರ್ಥವಾಗಿ । **ಯಚ್ಛತ**—ಕೊಡಿರಿ । **ಸಮಿಧಾನಂ**—ಪ್ರಜ್ವಲಿತನಾದ । **ಅಗ್ನಿಂ**—ಅಗ್ನಿಯನ್ನು । **ಸ್ವಸ್ತಿ**—ಶ್ರೇಯಸ್ಸಿಗಾಗಿ । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ದೇವತಾತ್ಮರಾದ ಎಲೈ ಆದಿತ್ಯರೇ, ಅತ್ಯಂತ ಪ್ರಶಸ್ಯವಾದುದೂ, ಸುಸಮೃದ್ಧವಾದುದೂ, ನಮಗೆಲ್ಲ ರಕ್ಷಕವಾದುದೂ ನಮ್ಮಿಂದ ಇಚ್ಛಿಸಲ್ಪಟ್ಟುದೂ ಆದ ಗೃಹವನ್ನು ನಮ್ಮ ಪಶುಗಳಿಗೂ ಪುತ್ರಾದಿಗಳಿಗೂ ಪೌತ್ರಾದಿಗಳಿಗೂ ಜೀವನಾರ್ಥವಾಗಿ ಕೊಡಿರಿ. ಪ್ರಜ್ವಲಿತನಾದ ಅಗ್ನಿಯನ್ನು ಶ್ರೇಯಸ್ಸಿಗಾಗಿ ಯಾಚಿಸುತ್ತೇವೆ.

English Translation

Divine Aswins, bestow upon us an excellent, spacious, man-protecting dwelling, for our cattle, our sons and our grandsons to exist : we solicit the kindled fire for our welfare

॥ ಸಂಹಿತಾಪಾಠಃ ॥

ವಿಶ್ವೇ ಅದ್ಯ ಮರುತೋ ವಿಶ್ವ ಊತೀ ವಿಶ್ವೇ ಭವಂತ್ವಗ್ನಯಃ ಸಮಿದ್ಧಾಃ ।
ವಿಶ್ವೇ ನೋ ದೇವಾ ಅವಸಾ ಗಮಂತು ವಿಶ್ವಮಸ್ತು ದ್ರವಿಣಂ ವಾಜೋ ಅಸ್ಮೇ ॥ ೧೩ ॥

॥ ಪದಪಾಠಃ ॥

ವಿಶ್ವೇ । ಅದ್ಯ । ಮರುತಃ । ವಿಶ್ವೇ । ಊತೀ । ವಿಶ್ವೇ । ಭವಂತು । ಅಗ್ನಯಃ । ಸಂऽಇದ್ಧಾಃ ।
ವಿಶ್ವೇ । ನಃ । ದೇವಾಃ । ಅವಸಾ । ಆ । ಗಮಂತು । ವಿಶ್ವಂ । ಅಸ್ತು । ದ್ರವಿಣಂ । ವಾಜಃ । ಅಸ್ಮೇ ಇತಿ ॥

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ನಹನಿ ಪ್ರಧಾನಯೊಗದಿವಸೇ ವಿಶ್ವೇ ಸರ್ವೇ ಮರುತೋ ವಿಶ್ವೇ ಸರ್ವೇ ಮರುದ್ಗಣಸಹಚರಿತಾ ರುದ್ರಾದಯೋ ದೇವಾಶ್ಚೋತ್ಯೈತ್ಯೈ ರಕ್ಷಣಾಯ ಭವಂತು । ಅಪಿ ಚ ವಿಶ್ವೇ ಸರ್ವೇಽಗ್ನಯ ಆಹವನೀಯಾದಯಃ ಸಮಿದ್ಧಾಃ ಸಂದೀಪ್ತಾ ಭವಂತು । ಅಪಿ ಚ ವಿಶ್ವೇ ಸರ್ವ ಇಂದ್ರಾದಯೋ ದೇವಾ ನೋಽಸ್ಮಾಕಮವಸಾ ರಕ್ಷಣೇನಾ ಗಮಂತು । ಆಗಚ್ಛಂತು । ಕಿಂಚಾಸ್ಮೇ ಅಸ್ಮಾಸು ವಿಶ್ವಂ ಸರ್ವಂ ದ್ರವಿಣಂ ಧನಂ ವಾಜೋಽನ್ನಂ ಚಾಸ್ತು । ಭವತು ॥

॥ ಪ್ರತಿಪದಾರ್ಥ ॥

ಅದ್ಯ—ಈ ಯಾಗದ ದಿನ । ವಿಶ್ವೇ—ಸಮಸ್ತರಾದ । ಮರುತಃ—ಮರುತ್ತುಗಳೂ । ವಿಶ್ವೇ—ಉಳಿದ ಸಕಲ ದೇವತೆಗಳೂ । ಊತೀ—ರಕ್ಷಣಾರ್ಥವಾಗಿರಲಿ । ವಿಶ್ವೇ—ಸಕಲವಾದ । ಅಗ್ನಯಃ—ಆಹವನೀ

ಯಾದ್ಯಗ್ನಿಗಳೂ । **ಸಮಿದ್ಧಾಃ**—ಪ್ರಜ್ವಲಿತಗಳಾಗಿ । **ಭವಂತು**—ಆಗಿರಲಿ । **ವಿಶ್ವೇ**--ಸಕಲವಾದ । **ದೇವಾಃ**—ದೇವತೆಗಳೂ । **ನಃ**—ನಮ್ಮ । **ಅವಸಾ**—ರಕ್ಷಣಾರ್ಥವಾಗಿ । **ಆ ಗಮಂತು**—ಬರಲಿ । **ವಿಶ್ವಂ**—ಸಕಲವಾದ । **ದ್ರವಿಣಂ**—ಧನವೂ । **ವಾಜಃ**—ಅನ್ನವೂ । **ಅಸ್ಮೇ ಅಸ್ತು**—ನಮಗಿರಲಿ.

। ಭಾವಾರ್ಥ ।

ಈ ಯಾಗದ ದಿನ ಸಕಲ ಮರುತ್ತುಗಳೂ, ಉಳಿದ ಸಕಲ ದೇವತೆಗಳೂ ನಮ್ಮನ್ನು ರಕ್ಷಿಸಲಿ. ಆಹವನೀಯಾದಿ ಸಕಲ ಅಗ್ನಿಗಳೂ ಪ್ರಜ್ವಲಿತರಾಗಲಿ. ಸಕಲ ದೇವತೆಗಳೂ ನಮ್ಮ ರಕ್ಷಣಾರ್ಥವಾಗಿ ಬರಲಿ. ನಮಗೆ ಸಕಲ ಧನವೂ ಅನ್ನವೂ ಪ್ರಾಪ್ತವಾಗಲಿ.

## English Translation

This day, may all the Maruts, all the (deities), be for our protection and may all the fires be kindled. May all the gods come for our preservation, and may all wealth and food be ours.

॥ ಸಂಹಿತಾಪಾಠಃ ॥

ಯಂ ದೇವಾಸೋಽವಥ ವಾಜಸಾತೌ ಯಂ ತ್ರಾಯಧ್ವೇ ಯಂ ಪಿಪೃಥಾತ್ಯಂಹಃ ।
ಯೋ ವೋ ಗೋಪೀಥೇ ನ ಭಯಸ್ಯ ವೇದ ತೇ ಸ್ಯಾಮ ದೇವವೀತಯೇ ತುರಾಸಃ ॥ ೧೪ ॥

। ಪದಪಾಠಃ ॥

ಯಂ । ದೇವಾಸಃ । ಅವಥ । ವಾಜಽಸಾತೌ । ಯಂ । ತ್ರಾಯಧ್ವೇ । ಯಂ । ಪಿಪೃಥ । ಅತಿ । ಅಂಹಃ ।
ಯಃ । ವಃ । ಗೋಽಪೀಥೇ । ನ । ಭಯಸ್ಯ । ವೇದ । ತೇ । ಸ್ಯಾಮ । ದೇವಽವೀತಯೇ । ತುರಾಸಃ ॥

॥ ಸಾಯಣಭಾಷ್ಯಂ ।

ಹೇ ತುರಾಸೋಽಭೀಷ್ಟಪ್ರದಾನೇ ಕ್ಷಿಪ್ರಾ ದೇವಾಸೋ ದೇವಾಃ ಯೂಯಂ ವಾಜಸಾತೌ ಸಂಗ್ರಾಮೇ ಯಂ ಮನುಷ್ಯಮವಥ ರಕ್ಷಥ ಯಂ ಚ ತ್ರಾಯಧ್ವೇ ಶತ್ರೋಃ ಪಾಲಯಥ ಯಂ ಚಾಂಹಃ ಪಾಪಮತ್ಯತಿನೀಯ ಪಿಪೃಥ ಕಾಮೈಃ ಪೂರಯಥ ಯಶ್ಚಾಪಿ ಮನುಷ್ಯೋ ವೋ ಯುಷ್ಮಾಕಂ ಕಾರ್ಯತ್ವೇನ ಸಂಬಂಧಿನಿ ಗೋಪೀಥೇ ರಕ್ಷಣೇ ಭಯಸ್ಯ ಭಯಂ ನ ವೇದ ನ ಜಾನಾತಿ ತೇ ... ದೇವವೀತಯೇ ಯಜ್ಞಾರ್ಥಂ ಸ್ಯಾಮ । ಭವೇಮ ॥

॥ ಪ್ರತಿಪದಾರ್ಥ ॥

**ತುರಾಸಃ**—ಶೀಘ್ರವಾಗಿ ಇಷ್ಟಾರ್ಥಗಳನ್ನು ನೆರವೇರಿಸುವ । **ದೇವಾಸಃ**—ಎಲೈ ದೇವತೆಗಳೇ । **ವಾಜಸಾತೌ**—ಸಂಗ್ರಾಮದಲ್ಲಿ । **ಯಂ**—ಯಾವನನ್ನು । **ಅವಥ**— ನೀವು ರಕ್ಷಿಸುವಿರೋ । **ಯಂ**—ಯಾರನ್ನು । **ತ್ರಾಯಧ್ವೇ**—ಶತ್ರುಗಳಿಂದ ರಕ್ಷಿಸುವಿರೋ । **ಯಂ**—ಯಾರನ್ನು । **ಅಂಹಃ ಅತಿ**—ಪಾಪದಿಂದ ದಾಟಿಸಿ । **ಪಿಪೃಥ**—ಅವನ ಇಷ್ಟಾರ್ಥವನ್ನು ನೆರವೇರಿಸುವಿರೋ । **ಯಃ**—ಯಾವ ಪುರುಷನು । **ವಃ**—ನಿಮ್ಮಿಂದ ದತ್ತವಾದ । **ಗೋಪೀಥೇ**—ರಕ್ಷಣೆಯಲ್ಲಿ । **ಭಯಸ್ಯ**—ಭಯವನ್ನು । **ನ ವೇದ**—ಅರಿಯುವುದಿಲ್ಲವೋ । **ತೇ**—ಇಂತಹ ನಾವೆಲ್ಲರೂ । **ದೇವವೀತಯೇ**—ಯಜ್ಞಕಾರ್ಯಕ್ಕೆ । **ಸ್ಯಾಮ**—ಸಿದ್ಧರಾಗಿರುವಂತಾಗಲಿ.

॥ ಭಾವಾರ್ಥ ॥

ಶೀಘ್ರವಾಗಿ ಇಷ್ಟಾರ್ಥಗಳನ್ನು ನೆರವೇರಿಸುವ ಎಲೈ ದೇವತೆಗಳೇ, ಸಂಗ್ರಾಮದಲ್ಲಿ ನೀವು ಯಾರನ್ನು ರಕ್ಷಿಸುವಿರೋ, ಯಾರನ್ನು ಪಾಪದಿಂದ ದಾಟಿಸಿ ಅವನ ಇಷ್ಟಾರ್ಥವನ್ನು ನೆರವೇರಿಸುವಿರೋ, ಯಾವ ಪುರುಷನು ನಿಮ್ಮಿಂದ ದತ್ತವಾದ ರಕ್ಷಣೆಯಲ್ಲಿ ಭಯವನ್ನೇ ಅರಿಯುವುದಿಲ್ಲವೋ ಇಂತಹ ನಾವೆಲ್ಲರೂ ಯಜ್ಞಕಾರ್ಯಕ್ಕೆ ಸಿದ್ಧರಾಗಿರುವಂತಾಗಲಿ.

English Translation

Gods, who are prompt (to grant our desires), may he whom you guard in battle, whom you defend (from his enemies), whom having extricated from sin, you gratify (in all his wishes), who (secure) in your protection, knows not of fear, may we (who are all this) bc assiduous in offering sacrifice to the gods.



## ಮೂವತ್ತಾರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಉಷಾಸಾನಕ್ತೇತಿ ಚತುರ್ದಶರ್ಚಂ ಸಪ್ತಮಂ ಸೂಕ್ತಂ । ಧಾನಾಕಸ್ಯ ಲುಶಸ್ಯಾರ್ಷಂ । ಆದಿತೋ ದ್ವಾದಶ ಜಗತ್ಯಸ್ತತೋ ದ್ವೇ ತ್ರಿಷ್ಟುಭೌ । ವಿಶ್ವೇ ದೇವಾ ದೇವತಾ । ಪೂರ್ವಸೂಕ್ತೇ ವೈಶ್ವದೇವಂ ತು ದ್ವಿತ್ರಿಷ್ಟುಬಂತಂ ತ್ವಿತ್ಯುಕ್ತತ್ವಾತ್ । ಉಷಾಸಾನಕ್ತೇತ್ಯನುಕ್ರಾಂತಂ ॥ ಅಭಿಪ್ಲವಿಕೇ ಷಷ್ಠೇಽಹನಿ ವೈಶ್ವದೇವ ಇದಂ ವೈಶ್ವದೇವನಿವಿದ್ಧಾನಂ । ಸೂತ್ರಿತಂ ಚ । ಕತರಾ ಪೂರ್ವೋಷಾಸಾನಕ್ತೇತಿ ವೈಶ್ವದೇವಂ । ಆ. ೭. ೭ । ಇತಿ ॥**

ಅನುವಾದವು—**ಉಷಾಸಾನಕ್ತಾ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಧನಾಕಪುತ್ರನಾದ ಲುಶನೆಂಬುವನು ಋಷಿಯು;

ವಿಶ್ವೇದೇವತೆಗಳು ದೇವತೆಯು ; ಈ ಸೂಕ್ತದ ಮೊದಲಿನ ಹನ್ನೆರಡು ಋಕ್ಕುಗಳು ಜಗತೀಛಂದಸ್ಕವು. ಕೊನೆಯ ಎರಡು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ-**ಉಷಾಸಾನಕ್ತಾ** ಎಂದು ಹೇಳಿರುವುದು. ಅಭಿಪ್ಲವಯಾಗದಲ್ಲಿ ಆರನೆಯ ದಿವಸ ವೈಶ್ವದೇವಶಸ್ತ್ರಮಂತ್ರಗಳ ಮಧ್ಯದಲ್ಲಿ ಈ ಸೂಕ್ತವನ್ನು ವೈಶ್ವದೇವನಿವಿದ್ಧಾನ ಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಕತರಾ ಪೂರ್ವೋಷಾಸಾನಕ್ತೇತಿ ವೈಶ್ವದೇವಂ** ಎಂಬ ಸೂತ್ರದಿಂದ (ಆ. ೭-೭) ವಿವೃತವಾಗಿರುವುದು.

## ಸೂಕ್ತ—೩೬

ಮಂಡಲ—೧೦ । ಅನುವಾಕ—೩ । ಸೂಕ್ತ—೩೬ ॥
ಅಷ್ಟಕ—೭ ಅಧ್ಯಾಯ—೮ । ವರ್ಗ—೯, ೧೦, ೧೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ॥
ಋಷಿಃ—ಲುಶೋ ಧಾನಾಕಃ ।
ದೇವತಾ—ವಿಶ್ವೇ ದೇವಾಃ ॥
ಛಂದಃ—೧-೧೨. ಜಗತೀ । ೧೩-೧೪. ತ್ರಿಷ್ಟುಪ್ ।

॥ ಸಂಹಿತಾಪಾಠಃ ॥

ಉಷಾಸಾನಕ್ತಾ ಬೃಹತೀ ಸುಪೇಶಸಾ ದ್ಯಾವಾಕ್ಷಾಮಾ ವರುಣೋ ಮಿತ್ರೋ ಅರ್ಯಮಾ ।
ಇಂದ್ರಂ ಹುವೇ ಮರುತಃ ಪರ್ವತಾ ಅಪ ಆದಿತ್ಯಾನ್ದ್ಯಾವಾಪೃಥಿವೀ ಅಪಃ ಸ್ವಃ ॥ ೧

॥ ಪದಪಾಠಃ ॥

ಉಷಸಾನಕ್ತಾ । ಬೃಹತೀ ಇತಿ । ಸುऽಪೇಶಸಾ । ದ್ಯಾವಾಕ್ಷಾಮಾ । ವರುಣಃ । ಮಿತ್ರಃ । ಅರ್ಯಮಾ ।
ಇಂದ್ರಂ । ಹುವೇ । ಮರುತಃ । ಪರ್ವತಾನ್ । ಅಪಃ । ಆದಿತ್ಯಾನ್ । ದ್ಯಾವಾಪೃಥಿವೀ ಇತಿ । ಅಪಃ ।
ಸ್ವ೧ರಿತಿ ಸ್ವಃ ॥ ೧ ॥

॥ ಸಾಯಣಭಾಷ್ಯಂ ॥

ಬೃಹತೀ ಬೃಹತ್ಯೌ ಮಹತ್ಯೌ ಸುಪೇಶಸಾ ಸುರೂಪೇ ಉಷಾಸಾನಕ್ತಾ ರಾತ್ರ್ಯುಷಸೌ ದ್ಯಾವಾಕ್ಷಾಮಾ ದ್ಯಾವಾಪೃಥಿವ್ಯೌ ಚ ವರುಣೋ ಮಿತ್ರೋ ಮಿತ್ರಾವರುಣೌ ಚಾರ್ಯಮಾ ಚ ಯೇऽತ್ರ ವಿಹಿತಾ ದೇವಾಃ ತಾನೇತಾನಿಂದ್ರಂ ಮರುತಶ್ಚ ಪರ್ವತಾಂಶ್ಚಾಪ ಉದಕಾನಿ ಚಾದಿತ್ಯಾಂಶ್ಚ ದ್ಯಾವಾಪೃಥಿವೀ

**ದ್ಯಾವಾಪೃಥಿವ್ಯಾ ಚ । ಪುನರ್ದ್ಯಾವಾಪೃಥಿವ್ಯೋರ್ಗ್ರಹಣಮಾದರಾರ್ಥಂ । ಅಪೋಽಂತರಿಕ್ಷಂ ಚ ಸ್ವಃ ಸರ್ವಂ ಚ ಯುಷ್ಮದ್ವ್ಯಂ ದೇವಜಾತಂ ಹುವೇ । ಹ್ವಯಾಮಿ ॥**

॥ ಪ್ರತಿಪದಾರ್ಥ ॥

**ಬೃಹತೀ**—ಮಹತ್ಸ್ವರೂಪವುಳ್ಳವರೂ । **ಸುಪೇಶಸಾ**—ಉತ್ತಮವಾದ ರೂಪವುಳ್ಳವರೂ ಆದ । **ಉಷಾಸಾನಕ್ತಾ**—ಉಷಸ್ ಮತ್ತು ರಾತ್ರ್ಯಧಿದೇವತೆಯೂ । **ದ್ಯಾವಾಕ್ಷಾಮಾ**—ದ್ಯಾವಾಪೃಥಿವಿಗಳೂ । **ವರುಣಃ**—ವರುಣನೂ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ ಆದಿಯಾಗಿ ಈ ಯಾಗಕ್ಕೆ ಸಂಬಂಧಿಸಿದ ದೇವತೆಗಳನ್ನು । **ಇದ್ರಂ**—ಇಂದ್ರನನ್ನೂ । **ಮರುತಃ**—ಮರುತ್ತುಗಳನ್ನೂ । **ಪರ್ವತಾನ್**—ಪರ್ವತಗಳನ್ನೂ । **ಅಪಃ**—ಉದಕಗಳನ್ನೂ । **ಆದಿತ್ಯಾನ್**—ಆದಿತ್ಯರನ್ನೂ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನೂ । **ಅಪಃ**—ಅಂತರಿಕ್ಷವನ್ನೂ । **ಸ್ವಃ**—ಸಕಲ ದ್ಯುಲೋಕದ ದೇವಸಂಘವನ್ನೂ । **ಹುವೇ**—ಕರೆಯುತ್ತೇನೆ.

॥ ಭಾವಾರ್ಥ ॥

ಮಹತ್ಸ್ವರೂಪವುಳ್ಳವರೂ, ಉತ್ತಮವಾದ ಸೌಂದರ್ಯವುಳ್ಳವರೂ ಆದ ಉಷಸ್ ಮತ್ತು ರಾತ್ರ್ಯಧಿದೇವತೆಗಳನ್ನೂ, ದ್ಯಾವಾಪೃಥಿವಿಗಳನ್ನೂ, ವರುಣ, ಮಿತ್ರ, ಅರ್ಯಮ, ಇಂದ್ರ, ಮರುತ್ತುಗಳು, ಪರ್ವತಗಳು, ಉದಕಗಳು, ಆದಿತ್ಯರು, ಅಂತರಿಕ್ಷ ಇತ್ಯಾದಿ ಸಕಲ ದೇವಸಂಘವನ್ನೂ ಪ್ರಾರ್ಥಿಸಿ ಕರೆಯುತ್ತೇನೆ.

## English Translation

I invoke the vast and beautiful day and night, heaven and earth, Mitra and Varuna with Aryaman, Indra, the Maruts, the mountains, the waters, the Adityas, heaven and earth, the waters (of the firmament), the whole (host of the gods).

॥ ಸಂಹಿತಾಪಾಠಃ ॥

ದ್ಯೌಶ್ಚ ನಃ ಪೃಥಿವೀ ಚ ಪ್ರಚೇತಸ ಋತಾವರೀ ರಕ್ಷತಾಮಂಹಸೋ ರಿಷಃ ।
ಮಾ ದುರ್ವಿದತ್ರಾ ನಿರ್ಋತಿರ್ನ ಈಶತ ತದ್ದೇವಾನಾಮವೋ ಅದ್ಯಾ ವೃಣೀಮಹೇ ॥ ೨ ॥

॥ ಪದಪಾಠಃ ॥

ದ್ಯೌಃ । ಚ । ನಃ । ಪೃಥಿವೀ । ಚ । ಪ್ರಽಚೇತಸಾ । ಋತವರೀ ಇತ್ಯೃತಽವರೀ । ರಕ್ಷತಾಂ । ಅಂಹಸಃ । ರಿಷಃ ।

ಮಾ । ದುಃಽವಿದತ್ರಾ । ನಿಃಽಋತಿಃ । ನಃ । ಈಶತ । ತತ್ । ದೇವಾನಾಂ । ಅವಃ । ಅದ್ಯ । ವೃಣೀಮಹೇ ॥ ೨ ॥

॥ ಸಾಯಣಭಾಷ್ಯಂ ॥

ಪ್ರಚೇತಸಾ ಸುಬುದ್ಧೀ ಋತಾವರೀ ಯಜ್ಞವತ್ಯೌ ಸತ್ಯವತ್ಯೌ ದ್ಯೌಶ್ಚ ಪೃಥಿವೀ ಚ ದ್ಯಾವಾಪೃಥಿವ್ಯಾವುಭೇ ನೋಽಸ್ಮಾನ್ರಿಷೋ ಹಿಂಸಕಾದಂಹಸಃ ಪಾಪಾಚ್ಚ ರಕ್ಷತಾಂ । ಕಿಂಚ ದುರ್ವಿದತ್ರಾ ಕುತ್ಸಿತಜ್ಞಾನಾ ನಿರ್ಋತಿರ್ಮೃತ್ಯುದೇವತಾ ನೋಽಸ್ಮಾಕಂ ಮೇಶತ । ಈಶ್ವರೀ ಮಾ ಭೂತ್ । ಕಿಂಚ ವಯಂ ದೇವಾನಾಂ ಸಂಬಂಧಿ ತದಸಾಧಾರಣಮವೋ ರಕ್ಷಣಮದ್ಯಾಸ್ಮಿನ್ನಹನಿ ಪ್ರಧಾನಯಾಗದಿವಸೇ ವೃಣೀಮಹೇ । ಪ್ರಾರ್ಥಯಾಮಹೇ ॥

॥ ಪ್ರತಿಪದಾರ್ಥ ॥

**ಪ್ರಚೇತಸಾ**—ಉತ್ತಮವಾದ ಪ್ರಜ್ಞೆಯುಳ್ಳವರೂ । **ಋತಾವರೀ**—ಸತ್ಯಪಾಲಕಿಯರೂ ಆದ । **ದ್ಯೌಶ್ಚ ಪೃಥಿವೀ ಚ**—ದ್ಯಾವಾಪೃಥಿವಿಗಳಿಬ್ಬರೂ । **ನಃ**—ನಮ್ಮನ್ನು । **ರಿಷಃ**—ಹಿಂಸಕರಿಂದಲೂ । **ಅಂಹಸಃ**—ಪಾಪಗಳಿಂದಲೂ । **ರಕ್ಷತಾಂ**—ರಕ್ಷಿಸಲಿ । **ದುರ್ವಿದತ್ರಾ**—ಕೆಡುಕು ಬುದ್ಧಿಯುಳ್ಳ । **ನಿರ್ಋತಿಃ**—ಮೃತ್ಯುದೇವತೆಯು । **ನಃ**—ನಮ್ಮ ಮೇಲೆ । **ಮಾ ಈಶತ**—ಪ್ರಭುತ್ವವನ್ನು ಮಾಡದಿರಲಿ । **ದೇವಾನಾಂ**—ದೇವತೆಗಳಿಂದ ಅನುಗೃಹೀತವಾಗುವ । **ತತ್**—ಅಸಾಧಾರಣವಾದ । **ಅವಃ**—ರಕ್ಷಣವನ್ನು । **ಅದ್ಯ**—ಈ ಯಾಗಕಾಲದಲ್ಲಿ । **ವೃಣೀಮಹೇ**—ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಉತ್ತಮವಾದ ಪ್ರಜ್ಞೆಯುಳ್ಳವರೂ, ಸತ್ಯಪಾಲಕಿಯರೂ ಆದ ದ್ಯಾವಾಪೃಥಿವಿಗಳಿಬ್ಬರೂ ನಮ್ಮನ್ನು ಹಿಂಸಕರಿಂದಲೂ ಪಾಪಗಳಿಂದಲೂ ರಕ್ಷಿಸಲಿ. ಕೆಡಕುಬುದ್ಧಿಯುಳ್ಳ ಮೃತ್ಯುದೇವತೆಯು ನಮ್ಮ ಮೇಲೆ ಪ್ರಭುತ್ವವನ್ನು ಮಾಡದಿರಲಿ. ದೇವತೆಗಳಿಂದ ಅನುಗೃಹೀತವಾಗುವ ಅಸಾಧಾರಣವಾದ ರಕ್ಷಣವನ್ನು ಈ ಯಾಗಕಾಲದಲ್ಲಿ ಪ್ರಾರ್ಥಿಸುತ್ತೇವೆ.

## English Translation

May the intelligent and truthful heaven and earth defend us from sin, and from the malignant : let not the malevolent Nirriti have power over us : we solicit to-day this protection of the gods.

॥ ಸಂಹಿತಾಪಾಠಃ ॥

ವಿಶ್ವಸ್ಮಾನ್ನೋ ಅದಿತಿಃ ಪಾತ್ವಂಹಸೋ ಮಾತಾ ಮಿತ್ರಸ್ಯ ವರುಣಸ್ಯ ರೇವತಃ।
ಸ್ವರ್ವಜ್ಜ್ಯೋತಿರವೃಕಂ ನಶೀಮಹಿ ತದ್ದೇವಾನಾಮವೋ ಅದ್ಯಾ ವೃಣೀಮಹೇ ॥ ೩ ॥

॥ ಪದಪಾಠ ॥

ವಿಶ್ವಸ್ಮಾತ್ । ನಃ । ಅದಿತಿಃ । ಪಾತು । ಅಂಹಸಃ । ಮಾತಾ । ಮಿತ್ರಸ್ಯ । ವರುಣಸ್ಯ । ರೇವತಃ ।
ಸ್ವಃऽವತ್ । ಜ್ಯೋತಿಃ । ಅವೃಕಂ । ನಶೀಮಹಿ । ತತ್ । ದೇವಾನಾಂ । ಅವಃ । ಅದ್ಯ । ವೃಣೀಮಹೇ ॥

॥ ಸಾಯಣಭಾಷ್ಯಂ ॥

ರೇವತೋ ಧನವತೋ ಮಿತ್ರಸ್ಯ ವರುಣಸ್ಯ ಚ ಧನವತೋರ್ಮಿತ್ರಾವರುಣಯೋರ್ಮಾತಾ ಜನನ್ಯದಿತಿರ್ದೇವೀ ನೋಽಸ್ಮಾನ್ವಿಶ್ವಸ್ಮಾತ್ಸರ್ವಸ್ಮಾದಂಹಸಃ ಪಾಪಾತ್ಪಾತು । ರಕ್ಷತು । ಕಿಂಚ ವಯಮವೃಕಂ ಬಾಧಕರಹಿತಂ ಸ್ವರ್ವತ್ ಸರ್ವಂ ಜ್ಯೋತಿಸ್ತೇಜೋ ನಶೀಮಹಿ । ನಶಿಃ ಪಲಾಯನಕರ್ಮಾ । ಪಲಾಯನಂ ಚ ಶೀಘ್ರಗಮನಂ । ಶೀಘ್ರಂ ಪ್ರಾಪ್ನುಮ ಇತ್ಯರ್ಥಃ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ರೇವತಃ**—ಧನವಂತನಾದ । **ಮಿತ್ರಸ್ಯ**—ಮಿತ್ರನಿಗೂ । **ವರುಣಸ್ಯ**—ವರುಣನಿಗೂ । **ಮಾತಾ**—ಜನನಿಯಾದ । **ಅದಿತಿಃ**—ಅದಿತಿದೇವಿಯು । **ನಃ**—ನಮ್ಮನ್ನು । **ವಿಶ್ವಸ್ಮಾತ್**—ಸಮಸ್ತವಾದ । **ಅಂಹಸಃ**—ಪಾಪದಿಂದ । **ಪಾತು**—ರಕ್ಷಿಸಲಿ । **ಅವೃಕಂ**—ಹಿಂಸಾರಹಿತವಾದ । **ಸರ್ವಂ ಜ್ಯೋತಿಃ**—ಸಕಲ ತೇಜಸ್ಸನ್ನೂ । **ನಶೀಮಹಿ**—ನಾವು ಶೀಘ್ರವಾಗಿ ಹೊಂದುವಂತೆ ಆಗಲಿ । **ದೇವಾನಾಂ**—ದೇವತೆಗಳಿಂದ ಲಭ್ಯವಾಗುವ । **ತತ್**—ಅಸಾಧಾರಣವಾದ । **ಅವಃ**—ರಕ್ಷಣವನ್ನು । **ಅದ್ಯ**—ಈ ಯಾಗಕಾಲದಲ್ಲಿ । **ವೃಣೀಮಹೇ**—ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಧನವಂತನಾದ ಮಿತ್ರನಿಗೂ ವರುಣನಿಗೂ ಜನನಿಯಾದ ಅದಿತಿದೇವಿಯು ನಮ್ಮನ್ನು ಸಮಸ್ತವಾದ ಪಾಪದಿಂದ ರಕ್ಷಿಸಲಿ. ಹಿಂಸಾರಹಿತವಾದ ಸಕಲ ತೇಜಸ್ಸನ್ನೂ ನಾವು ಶೀಘ್ರವಾಗಿ ಹೊಂದುವಂತಾಗಲಿ. ದೇವತೆಗಳಿಂದ ಲಭ್ಯವಾಗುವ ಅಸಾಧಾರಣವಾದ ರಕ್ಷಣವನ್ನು ನಾವು ಈ ಯಾಗಕಾಲದಲ್ಲಿ ಪ್ರಾರ್ಥಿಸುತ್ತೇವೆ.

## English Translation

May Aditi, the mother of the opulent Mitra and Varuna, preserve us from all sin, may we hasten to celestial light, which is free from oppressors: we solicit to-day this protection of the gods.

॥ ಸಂಹಿತಾಪಾಠಃ ॥

ಗ್ರಾವಾ ವದನ್ನಪ ರಕ್ಷಾಂಸಿ ಸೇಧತು ದುಃಷ್ವಪ್ನ್ಯಂ ನಿರ್ಋತಿಂ ವಿಶ್ವಮತ್ರಿಣಂ ।

ಆದಿತ್ಯಂ ಶರ್ಮ ಮರುತಾಮಶೀಮಹಿ ತದ್ದೇವಾನಾಮವೋ ಅದ್ಯಾ ವೃಣೀಮಹೇ ॥ ೪ ॥

॥ ಪದಪಾಠಃ ॥

ಗ್ರಾವಾ । ವದನ್ । ಅಪ । ರಕ್ಷಾಂಸಿ । ಸೇಧತು । ದುಃಽಸ್ವಪ್ನ್ಯಂ । ನಿಃಽಋತಿಂ । ವಿಶ್ವಂ । ಅತ್ರಿಣಂ ।
ಆದಿತ್ಯಂ । ಶರ್ಮ । ಮರುತಾಂ । ಅಶೀಮಹಿ । ತತ್ । ದೇವಾನಾಂ । ಅವಃ । ಅದ್ಯ । ವೃಣೀಮಹೇ ॥

। ಸಾಯಣಭಾಷ್ಯಂ ।

ಗ್ರಾವಾಭಿಷವಪಾಷಾಣೋ ವದನ್ನಭಿಷವವೇಲಾಯಾಂ ಶಬ್ದಂ ಕುರ್ವನ್ರಕ್ಷಾಂಸಿ ಯಾಗವಿಘ್ನಕಾರೀಣ್ಯಪ ಸೇಧತು । ವಿನಿವಾರಯತು । ದುಃಸ್ವಪ್ನ್ಯಂ ದುಃಸ್ವಪ್ನಪ್ರಭವಮಸ್ಮದೀಯಮನಿಷ್ಟಂ ಚಾಪ ಸೇಧತು । ನಿರ್ಋತಿಂ ಮೃತ್ಯುದೇವತಾಂ ಚಾಪ ಸೇಧತು । ಅತ್ರಿಣಮದನಶೀಲಂ ವಿಶ್ವಂ ಸರ್ವಂ ಪಿಶಾಚಾದಿಕಂ ಚಾಪ ಸೇಧತು । ಏವಂ ನಿರ್ವಿಘ್ನತ್ವೇನ ನಿಷ್ಪನ್ನೇ ಯಾಗೇ ವಯಮಾದಿತ್ಯಮಾದಿತ್ಯಾನಾಂ ಸಂಬಂಧಿ ಮರುತಾಂ ಚ ಸಂಬಂಧಿ ಶರ್ಮ ಸುಖಮಶೀಮಹಿ । ಪ್ರಾಪ್ನುಯಾಮ । ಸಿದ್ಧಮನ್ಯತ್ ॥

। ಪ್ರತಿಪದಾರ್ಥ ।

**ಗ್ರಾವಾ**—ಹಿಂಡುವ ಕಲ್ಲು । **ವದನ್**—ಶಬ್ದಮಾಡುತ್ತ । **ರಕ್ಷಾಂಸಿ**—ರಾಕ್ಷಸರನ್ನು । **ಅಪ ಸೇಧತು**—ದೂರಕ್ಕೆ ಓಡಿಸಲಿ । **ದುಃಸ್ವಪ್ನ್ಯಂ**—ಕೆಟ್ಟಕನಸಿನ ಫಲವನ್ನು ನಾಶಮಾಡಲಿ । **ನಿರ್ಋತಿಂ**—ಮೃತ್ಯುದೇವತೆಯನ್ನು ನಾಶಮಾಡಲಿ । **ಅತ್ರಿಣಂ**—ಸರ್ವಭಕ್ಷಕವಾದ । **ವಿಶ್ವಂ**—ಸಕಲ ಪಿಶಾಚಾದಿಗಳನ್ನು ಓಡಿಸಲಿ । **ಆದಿತ್ಯಂ**—ಆದಿತ್ಯರಿಂದ ದತ್ತವಾಗುವುದೂ । **ಮರುತಾಂ**—ಮರುತ್ತುಗಳಿಂದ ಕೊಡಲ್ಪಡುವುದೂ ಆದ ! **ಶರ್ಮ**-ಸುಖವನ್ನು । **ಅಶೀಮಹಿ**—ನಾವು ಹೊಂದುವಂತಾಗಲಿ । **ದೇವಾನಾಂ**—ದೇವತೆಗಳಿಂದ ಲಭ್ಯವಾಗುವ । **ತತ್**—ಅಸಾಧಾರಣವಾದ । **ಅವಃ**—ರಕ್ಷಣವನ್ನು **ಅದ್ಯ**—ಈ ಯಾಗಕಾಲದಲ್ಲಿ । **ವೃಣೀಮಹೇ**—ಪ್ರಾರ್ಥಿಸುತ್ತೇನೆ.

॥ ಭಾವಾರ್ಥ ॥

ಸೋಮವನ್ನು ಹಿಂಡುವ ಕಲ್ಲು ಶಬ್ದಮಾಡುತ್ತ ರಾಕ್ಷಸರನ್ನೂ ಮೃತ್ಯುದೇವತೆಯನ್ನೂ ಸರ್ವಭಕ್ಷಕರಾ ಸಕಲ ಪಿಶಾಚಾದಿಗಳನ್ನೂ ದೂರಕ್ಕೆ ಓಡಿಸಲಿ. ಕೆಟ್ಟಕನಸಿನ ಫಲಗಳನ್ನು ನಾಶಮಾಡಿ ನಮಗಂಟದಂತೆ ಮಾಡಲಿ ಆದಿತ್ಯರಿಂದಲೂ ಮರುತ್ತುಗಳಿಂದಲೂ ಸಿಕ್ಕಬೇಕಾದ ಸುಖವನ್ನು ನಾವು ಹೊಂದುವಂತಾಗಲಿ. ದೇವತೆಗಳಿಂ ಲಭ್ಯವಾಗುವ ಅಸಾಧಾರಣವಾದ ರಕ್ಷಣವನ್ನು ನಾವು ಈ ಯಾಗಕಾಲದಲ್ಲಿ ಪ್ರಾರ್ಥಿಸುತ್ತೇವೆ.

## English Translation

May the sounding stone drive away Rakshasas, evil dreams, Nirriti and every spirit of ill: may we obtain the happiness of the Adityas an the Maruts: we solicit to-day this protection of fhe gods.

। ಸಂಹಿತಾಪಾಠಃ ।

ಏಂದ್ರೋ᳚ ಬರ್ಹಿಃ ಸೀದ॑ತು ಪಿನ್ವ॑ತಾಮಿಳಾ॒ ಬೃಹ॒ಸ್ಪತಿಃ॒ ಸಾಮ॑ಭಿ-
ರ್ಋ॒ಕ್ವೋ᳚ ಅರ್ಚತು ।
ಸು॒ಪ್ರ॒ಕೇ॒ತಂ ಜೀ॒ವಸೇ॒ ಮನ್ಮ॑ ಧೀಮಹಿ॒ ತದ್ದೇ॒ವಾನಾ॒ಮವೋ᳚ ಅ॒ದ್ಯಾ ವೃ॑ಣೀ-
ಮಹೇ ॥ ೫ ॥

। ಪದಪಾಠಃ ।

ಆ । ಇಂದ್ರಃ । ಬ॒ರ್ಹಿಃ । ಸೀದ॑ತು । ಪಿನ್ವ॑ತಾಂ । ಇಳಾ᳚ । ಬೃಹ॒ಸ್ಪತಿಃ॑ । ಸಾಮ॑ಽಭಿಃ । ಋ॒ಕ್ವಃ । ಅ॒ರ್ಚ॒ತು॒ ।
ಸು॒ಽಪ್ರ॒ಕೇ॒ತಂ । ಜೀ॒ವಸೇ᳚ । ಮನ್ಮ॑ । ಧೀ॒ಮ॒ಹಿ॒ । ತತ್ । ದೇ॒ವಾನಾ᳚ಂ । ಅವಃ॑ । ಅ॒ದ್ಯ । ವೃ॒ಣೀ॒ಮ॒ಹೇ॒ ॥

। ಸಾಯಣಭಾಷ್ಯಂ ।

ಇಂದ್ರೋ ಬರ್ಹಿರಾ ಸೀದತು । ಇಳಾ ಮಾಧ್ಯಮಿಕಾ ಸ್ತನಯಿತ್ನುಲಕ್ಷಣಾ ವಾಗಪಿ ಪಿನ್ವತಾಂ । ಕಿಂತು ಸಾಮಭಿರ್ಗೀಯಮಾನ ಋಕ್ವಃ ಸ್ತುತಿಮಾನ್ಬೃಹಸ್ಪತಿರಪ್ಯರ್ಚತು । ಅಸ್ಮಾನ್ಪೂಜಯತು । ಕಿಂಚ ವಯಂ ಸುಪ್ರಕೇತಂ ಸುಪ್ರಜ್ಞಾನಂ ಮನ್ಮ ಮನನೀಯಂ ಧನಂ ಸ್ತೋತ್ರಂ ವಾ ಧೀಮಹಿ ನಿದಧೀಮಹಿ ಜೀವಸೇ ಜೀವನಾಯ । ಸಿದ್ಧಮನ್ಯತ್ ।

। ಪ್ರತಿಪದಾರ್ಥ ॥

ಇಂದ್ರಃ—ಇಂದ್ರನು । ಬರ್ಹಿಃ—ದರ್ಭಾಸನದ ಮೇಲೆ । ಆ ಸೀದತು—ಕುಳಿತುಕೊಳ್ಳಲಿ । ಇಳಾ—ಮಾಧ್ಯಮಿಕಾ ವಾಕ್ಕು । ಪಿನ್ವತಾಂ—ಅನುಗ್ರಹವನ್ನು ನೀಡಲಿ । ಸಾಮಭಿಃ—ಸಾಮಗಾನದಿಂದ ಪ್ರಶಂಸಿತನೂ । ಋಕ್ವಃ—ಋಗ್ರೂಪವಾದ ಸ್ತುತಿಯುಳ್ಳವನೂ ಆದ । ಬೃಹಸ್ಪತಿಃ—ಬೃಹಸ್ಪತಿಯು । ಅರ್ಚತು—ನಮ್ಮನ್ನು ತೃಪ್ತಿಗೊಳಿಸಲಿ । ಸುಪ್ರಕೇತಂ—ಪ್ರಜ್ಞಾಯುತವಾದುದೂ । ಮನ್ಮ—ಧ್ಯಾನಾತ್ಮಕವೂ ಆದ ಸ್ತೋತ್ರವನ್ನು । ಜೀವಸೇ—ನಮ್ಮ ಜೀವನಲಾಭಕ್ಕಾಗಿ । ಧೀಮಹಿ—ಅರ್ಪಿಸುತ್ತೇವೆ । ದೇವಾನಾಂ—ದೇವತೆಗಳಿಂದ ಲಭ್ಯವಾಗುವ । ತತ್—ಅಸಾಧಾರಣವಾದ । ಅವಃ—ರಕ್ಷಣವನ್ನು । ಅದ್ಯ—ಈ ಯಾಗಕಾಲದಲ್ಲಿ । ವೃಣೀಮಹೇ—ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಇಂದ್ರನು ದರ್ಭಾಸನದ ಮೇಲೆ ಬಂದು ಕುಳಿತುಕೊಳ್ಳಲಿ. ಮಾಧ್ಯಮಿಕಾವಾಕ್ಕು ಅನುಗ್ರಹವನ್ನು ನೀಡಲಿ. ಸಾಮಗಾನದಿಂದ ಪ್ರಶಂಸಿತನೂ ಋಗ್ರೂಪವಾದ ಸ್ತುತಿಯುಳ್ಳವನೂ ಆದ ಬೃಹಸ್ಪತಿಯು ನಮ್ಮನ್ನು ತೃಪ್ತಿಗೊಳಿಸಲಿ. ಪ್ರಜ್ಞಾಯುತವಾದುದೂ, ಧ್ಯಾನಾತ್ಮಕವೂ ಆದ ಸ್ತೋತ್ರವನ್ನು ನಮ್ಮ ಜೀವನಲಾಭಕ್ಕಾಗಿ ಅರ್ಪಿಸುತ್ತೇವೆ. ದೇವತೆಗಳಿಂದ ಲಭ್ಯವಾಗುವ ಅಸಾಧಾರಣವಾದ ರಕ್ಷಣವನ್ನು ಈ ಯಾಗಕಾಲದಲ್ಲಿ ಪ್ರಾರ್ಥಿಸುತ್ತೇವೆ.

## English Translation

May Indra sit down upon the sacred grass: may Ila be propitious: May Brihaspati the singer hymned with Samans honour us: we offer an intelligent prayer for life: we solicit to-day this protection of the gods.

॥ ಸಂಹಿತಾಪಾಠಃ ॥

ದಿವಿಸ್ಪೃಶಂ ಯಜ್ಞಮಸ್ಮಾಕಮಶ್ವಿನಾ ಜೀರಾಧ್ವರಂ ಕೃಣುತಂ ಸುಮ್ನಮಿ-
ಷ್ಟಯೇ ।
ಪ್ರಾಚೀನರಶ್ಮಿಮಾಹುತಂ ಘೃತೇನ ತದ್ದೇವಾನಾಮವೋ ಅದ್ಯಾ ವೃಣೀ-
ಮಹೇ ॥ ೬ ॥

॥ ಪದಪಾಠಃ ॥

ದಿವಿಽಸ್ಪೃಶಂ । ಯಜ್ಞಂ । ಅಸ್ಮಾಕಂ । ಅಶ್ವಿನಾ । ಜೀರಽಅಧ್ವರಂ । ಕೃಣುತಂ। ಸುಮ್ನಂ । ಇಷ್ಟಯೇ ।
ಪ್ರಾಚೀನಽರಶ್ಮಿಂ । ಆಽಹುತಂ । ಘೃತೇನ । ತತ್ । ದೇವಾನಾಂ । ಅವಃ । ಅದ್ಯ । ವೃಣೀಮಹೇ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾ ಯುವಾಂ ನೋಽಸ್ಮಾಕಂ ಯಜ್ಞಂ ದಿವಿಸ್ಪೃಶಂ ದಿವಿ ಸ್ಪ್ರಷ್ಟಾರಂ ಗಂತಾರಂ ಕೃಣುತಂ। ಕುರುತಂ। ತಥಾ ಜೀರಾಧ್ವರಂ ಕ್ಷಿಪ್ರಂ ಹಿಂಸಾರಹಿತಂ ಚ ಯಜ್ಞಂ ನೋಽಸ್ಮಾಕಂ ಕೃಣುತಂ। ಕುರುತಂ। ಇಷ್ಟಯೇಽಭಿಲಷಿತಸಿದ್ಧ್ಯರ್ಥಂ ಸುಮ್ನಂ ಸುಖಂ ಚ ಕುರುತಂ। ಕಿಂಚ ಘೃತೇನಾಜ್ಯೇನಾ-ಹುತಮಗ್ನಿಂ ಪ್ರಾಚೀನರಶ್ಮಿಂ ದೇವಾಭಿಮುಖಂ ಕುರುತಮಿತ್ಯರ್ಥಃ। ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಅಸ್ಮಾಕಂ**—ನಮ್ಮ । **ಯಜ್ಞಂ**—ಯಜ್ಞವನ್ನು । **ಜೀರಾಧ್ವರಂ**—ಹಿಂಸಾರಹಿತವನ್ನಾಗಿಯೂ । **ದಿವಿಸ್ಪೃಶಂ**—ದ್ಯುಲೋಕವನ್ನು ಸೇರುವಂತೆಯೂ । **ಕೃಣುತಂ**—ಮಾಡಿರಿ । **ಇಷ್ಟಯೇ**—ನಮ್ಮ ಇಷ್ಟಾರ್ಥಸಾಧಕವಾಗುವಂತೆಯೂ । **ಸುಮ್ನಂ**—ಸುಖಕರವನ್ನಾಗಿಯೂ ಮಾಡಿರಿ । **ಘೃತೇನ**—ಆಜ್ಯದಿಂದ (ಆಹುತಿಯಿಂದ) । **ಆಹುತಂ**—ಪ್ರಜ್ವಲಿತನನ್ನಾಗಿ ಮಾಡಿದ ಅಗ್ನಿಯನ್ನು । **ಪ್ರಾಚೀನರಶ್ಮಿಂ**—ದೇವತೆಗಳಿಗೆ ಅಭಿಮುಖವಾಗಿ ಪ್ರಸರಿಸುವ ರಶ್ಮಿಯುಳ್ಳವನನ್ನಾಗಿ ಮಾಡಿರಿ । **ಅದ್ಯ**—ಈ ಯಾಗಕಾಲದಲ್ಲಿ । **ದೇವಾನಾಂ**—ದೇವತೆಗಳಿಂದ ಲಭ್ಯವಾಗುವ । **ತತ್**—ಅಸಾಧಾರಣವಾದ । **ಅವಃ**—ರಕ್ಷಣವನ್ನು । **ವೃಣೀಮಹೇ**—ಯಾಚಿಸುತ್ತೇವೆ.

। ಭಾವಾರ್ಥ ।

ಎಲೈ ಅಶ್ವಿನೀದೇವತೆಗಳೇ, ನಮ್ಮ ಯಜ್ಞವನ್ನು ಹಿಂಸಾರಹಿತವನ್ನಾಗಿಯೂ ದ್ಯುಲೋಕವನ್ನು ಸೇರುವಂತೆಯೂ ಮಾಡಿರಿ. ನಮ್ಮ ಇಷ್ಟಾರ್ಥಸಾಧಕವಾಗುವಂತೆಯೂ ಸುಖಕರವನ್ನಾಗಿಯೂ ಮಾಡಿರಿ. ಆಜ್ಯಾಹುತಿಯಿಂದ ಪ್ರಜ್ವಲಿತನಾದ ಅಗ್ನಿಯು ತನ್ನ ಜ್ವಾಲೆಯನ್ನು ದೇವತೆಗಳಿಗೆ ಅಭಿಮುಖವಾಗಿ ಪ್ರಸರಿಸುವಂತೆ ಮಾಡಿರಿ. ಈ ಯಾಗಕಾಲದಲ್ಲಿ ದೇವತೆಗಳಿಂದ ಲಭ್ಯವಾಗುವ ಅಸಾಧಾರಣವಾದ ರಕ್ಷಣವನ್ನು ಯಾಚಿಸುತ್ತೇವೆ.

## English Translation

Ashwins, make our sacrifice ascend to heaven free from injury, happy for the attainment of our desires; make the fire to which she is offered blaze up towards (the gods): we solicit to-day this protection of our gods.

। ಸಂಹಿತಾಪಾಠಃ ।

ಉಪ ಹ್ವಯೇ ಸುಹವಂ ಮಾರುತಂ ಗಣಂ ಪಾವಕಮೃಷ್ವಂ ಸಖ್ಯಾಯ
ಶಂಭುವಂ ।
ರಾಯಸ್ಪೋಷಂ ಸೌಶ್ರವಸಾಯ ಧೀಮಹಿ ತದ್ದೇವಾನಾಮವೋ ಅದ್ಯಾ
ವೃಣೀಮಹೇ ॥ ೭ ॥

॥ ಪದಪಾಠಃ ॥

ಉಪ । ಹ್ವಯೇ । ಸುऽಹವಂ । ಮಾರುತಂ । ಗಣಂ । ಪಾವಕಂ । ಋಷ್ವಂ । ಸಖ್ಯಾಯ । ಶಂऽಭುವಂ ।
ರಾಯಃ । ಪೋಷಂ । ಸೌಶ್ರವಸಾಯ । ಧೀಮಹಿ । ತತ್ । ದೇವಾನಾಂ । ಅವಃ । ಅದ್ಯ । ವೃಣೀಮಹೇ ॥

। ಸಾಯಣಭಾಷ್ಯಂ ।

ಸುಹವಂ ಸ್ವಾಹ್ವಾನಂ ಪಾವಕಂ ಶೋಧಕಮೃಷ್ವಂ ದರ್ಶನೀಯಂ ಶಂಭುವಂ ಸುಖಸ್ಯ ಭಾವಯಿತಾರಂ ರಾಯೋ ಧನಸ್ಯ ಪೋಷಂ ಪೋಷಕಂ ಮಾರುತಂ ಮರುತಾಂ ಸಂಬಂಧಿನಂ ಗಣಂ ಸಂಘಂ ಸಖ್ಯಾಯ ಸಖಿಭಾವಾಯೋಪ ಹ್ವಯೇ । ಉಪಗಮ್ಯ ಹ್ವಯಾಮಿ । ಆಗತಂ ಗಣಂ ಸೌಶ್ರವಸಾಯ ಶೋಭನಾನ್ನವತ್ತ್ವಾಯ ಸುಯಶಸ್ತ್ವಾಯ ವಾ ವಯಂ ಧೀಮಹಿ । ಬುದ್ಧ್ಯಾ ನಿದಧೀಮಹಿ । ಸಿದ್ಧಮನ್ಯತ್ ॥

। ಪ್ರತಿಪದಾರ್ಥ ।

**ಸುಹವಂ**—ಉತ್ತಮವಾದ ಆಹ್ವಾನಕ್ಕೆ ಪಾತ್ರವಾದುದೂ । **ಪಾವಕಂ**—ಶುದ್ಧಿಕಾರಕವಾದುದೂ **ಋಷ್ವಂ**—ಸುಂದರವಾದ ರೂಪವುಳ್ಳದ್ದೂ । **ಶಂಭುವಂ**—ಸುಖಕಾರಕವಾದುದೂ । **ರಾಯಃ**—ಧನಕ್ಕೆ **ಪೋಷಂ**—ಪೋಷಕವಾದುದೂ ಆದ । **ಮಾರುತಂ ಗಣಂ**—ಮರುತ್ಸಂಘವನ್ನು । **ಸಖ್ಯಾಯ**—ನಮ್ಮ ಸಖಿತ್ವ ಸಂಪಾದನೆಗಾಗಿ । **ಉಪ ಹ್ವಯೇ**—ಕರೆಯುತ್ತೇನೆ । **ಸೌಶ್ರವಸಾಯ**—ಉತ್ತಮವಾದ ಅನ್ನಲಾಭಕ್ಕಾಗಿ **ಧೀಮಹಿ**—ಆ ಸಂಘವನ್ನು ಧ್ಯಾನಾತ್ಮಕವಾಗಿ ಸ್ತುತಿಸುತ್ತೇವೆ । **ದೇವಾನಾಂ**—ದೇವತೆಗಳಿಂದ ಲಭ್ಯವಾಗುವ **ತತ್**—ಪ್ರಸಿದ್ಧವಾದ । **ಅವಃ**—ರಕ್ಷಣವನ್ನು । **ಅದ್ಯ**—ಈ ಯಾಗಕಾಲದಲ್ಲಿ । **ವೃಣೀಮಹೇ**- ಪ್ರಾರ್ಥಿಸುತ್ತೇವೆ

॥ ಭಾವಾರ್ಥ ॥

ಉತ್ತಮವಾದ ಆಹ್ವಾನಕ್ಕೆ ಪಾತ್ರವಾದುದೂ, ಶುದ್ಧಿಕಾರಕವಾದುದೂ, ಸುಂದರವಾದ ರೂಪವುಳ್ಳದ್ದೂ ಸುಖಕಾರಕವಾದುದೂ, ಧನಕ್ಕೆ ಪೋಷಕವಾದುದೂ ಆದ ಮರುತ್ಸಂಘವನ್ನು ನಮ್ಮ ಸಖಿತ್ವಸಂಪಾದನೆಗಾ ಕರೆಯುತ್ತೇನೆ. ಉತ್ತಮವಾದ ಅನ್ನಲಾಭಕ್ಕಾಗಿ ಆ ಸಂಘವನ್ನು ಧ್ಯಾನಿಸುತ್ತೇನೆ. ದೇವತೆಗಳಿಂದ ಲಭ್ಯವಾಗು ಅಸಾಧಾರಣವಾದ ರಕ್ಷಣವನ್ನು ಈ ಯಾಗಕಾಲದಲ್ಲಿ ಪ್ರಾರ್ಥಿಸುತ್ತೇವೆ.

## English Translation

I invoke for their friendship, the deservedly invoked, purifyin beautiful troops of the Maruts, the givers of felicity, the dispensers of riches we meditate upon them for the attainment of abundant food: we solic to-day this protection of the gods.

॥ ಸಂಹಿತಾಪಾಠಃ ॥

ಅಪಾಂ ಪೇರುಂ ಜೀವಧನ್ಯಂ ಭರಾಮಹೇ ದೇವಾವ್ಯಂ ಸುಹವಮಧ್ವರ
ಶ್ರಿಯಂ ।
ಸುರಶ್ಮಿಂ ಸೋಮಮಿಂದ್ರಿಯಂ ಯಮೀಮಹಿ ತದ್ದೇವಾನಾಮವೋ ಅದ
ವೃಣೀಮಹೇ ॥ ೮ ॥

॥ ಪದಪಾಠಃ ॥

ಅಪಾಂ । ಪೇರುಂ । ಜೀವऽಧನ್ಯಂ । ಭರಾಮಹೇ । ದೇವऽಅವ್ಯಂ । ಸುऽಹವಂ । ಅಧ್ವರऽಶ್ರಿಯಂ ।
ಸುऽರಶ್ಮಿಂ । ಸೋಮಂ । ಇಂದ್ರಿಯಂ । ಯಮೀಮಹಿ । ತತ್ । ದೇವಾನಾಂ । ಅವಃ । ಅದ್ಯ
ವೃಣೀಮಹೇ ॥ ೮

॥ ಸಾಯಣಭಾಷ್ಯಂ ॥

ಅಪಾಮುದಕಾನಾಂ ಪೇರುಂ ಪಾಲಕಂ ಜೀವಧನ್ಯಂ । ಧನ್ಯಾ ಜೀವಾ ಯಸ್ಮಿನ್ನಸೌ ಜೀವಧನ್ಯಃ । ತಂ ದೇವಾವ್ಯಂ ದೇವಾನಾಂ ತರ್ಪಕಂ ಸುಹವಂ ಶೋಭನಾಹ್ವಾನಂ ಶೋಭನಸ್ತುತಿಂ ವಾಧ್ವರಶ್ರಿಯಂ ಸುರಶ್ಮಿಂ ಶೋಭನಾಂಶುಂ ಸೋಮಂ ಭರಾಮಹೇ । ಧಾರಯಾಮಃ । ಪತ್ನೀಶಾಲಾತೋ ಹವಿರ್ಧಾನಂ ಪ್ರತಿ ಪ್ರಾಪಯಾಮೋ ವಾ । ಭೃತಂ ತಂ ಸೋಮಮಿಂದ್ರಿಯಂ ವೀರ್ಯಂ ಯಮಿಮಹಿ । ವಯಂ ಯಾಚಾಮಹೇ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

ಅಪಾಂ—ಉದಕಗಳಿಗೆ । ಪೇರುಂ—ಪಾಲಕನೂ । ಜೀವಧನ್ಯಂ—ಸಾರ್ಥಕವಾದ ಜೀವವುಳ್ಳವನೂ । ದೇವಾವ್ಯಂ—ದೇವತೆಗಳಿಗೆ ತೃಪ್ತಿಕಾರಕನೂ । ಸುಹವಂ—ಉತ್ತಮವಾದ ಆಹ್ವಾನಕ್ಕೆ ಪಾತ್ರನೂ । ಅಧ್ವರಶ್ರಿಯಂ—ಯಜ್ಞಸಂಪತ್ತುಳ್ಳವನೂ । ಸುರಶ್ಮಿಂ—ಉತ್ತಮವಾದ ರಶ್ಮಿಗಳುಳ್ಳವನೂ ಆದ । ಸೋಮಂ—ಸೋಮವನ್ನು । ಭರಾಮಹೇ—ಧರಿಸುತ್ತೇವೆ । ಇಂದ್ರಿಯಂ—ಅವನಿಂದ ಶಕ್ತಿಯನ್ನು । ಯಮಿಮಹಿ—ಯಾಚಿಸುತ್ತೇವೆ । ದೇವಾನಾಂ—ದೇವತೆಗಳಿಂದ ಲಭ್ಯವಾಗುವ । ತತ್—ಅಸಾಧಾರಣವಾದ । ಅವಃ—ರಕ್ಷಣವನ್ನು । ಅದ್ಯ—ಈ ಯಾಗಕಾಲದಲ್ಲಿ । ವೃಣೀಮಹೇ—ಯಾಚಿಸುತ್ತೇವೆ.

॥ ಭಾವಾರ್ಥ ॥

ಉದಕಗಳಿಗೆ ಪಾಲಕನೂ, ಸಾರ್ಥಕವಾದ ಜೀವವುಳ್ಳವನೂ, ದೇವತೆಗಳಿಗೆ ತೃಪ್ತಿಕಾರಕನೂ, ಉತ್ತಮವಾದ ಆಹ್ವಾನಕ್ಕೆ ಪಾತ್ರನೂ, ಯಜ್ಞಸಂಪತ್ತುಳ್ಳವನೂ, ಉತ್ತಮವಾದ ರಶ್ಮಿಗಳುಳ್ಳವನೂ ಆದ ಸೋಮನನ್ನು ನಾವು ಧರಿಸಿ ಅವನಿಂದ ಶಕ್ತಿಯನ್ನು ಯಾಚಿಸುತ್ತೇವೆ. ದೇವತೆಗಳಿಂದ ಲಭ್ಯವಾಗುವ ಅಸಾಧಾರಣವಾದ ರಕ್ಷಣವನ್ನು ಈ ಯಾಗಕಾಲದಲ್ಲಿ ಯಾಚಿಸುತ್ತೇವೆ.

## English Translation

We offer the Soma, the protector of the waters, affluent in life, the delighter of the gods, who is well praised, the glory of sacrifice, the brilliant-rayed, the vigour which we desire : we solicit to-day this protection of the gods.

॥ ಸಂಹಿತಾಪಾಠಃ ॥

ಸನೇಮ ತತ್ಸುಸನಿತಾ ಸನಿತ್ವಭಿರ್ವಯಂ ಜೀವಾ ಜೀವಪುತ್ರಾ ಅನಾಗಸಃ ।
ಬ್ರಹ್ಮದ್ವಿಷೋ ವಿಷ್ವಗೇನೋ ಭರೇರತ ತದ್ದೇವಾನಾಮವೋ ಅದ್ಯಾ ವೃಣೀ-
ಮಹೇ ॥ ೯ ॥

॥ ಪದಪಾಠಃ ॥

ಸನೇಮ । ತತ್ । ಸುಽಸನಿತಾ । ಸನಿತ್ವಽಭಿಃ । ವಯಂ । ಜೀವಾಃ । ಜೀವಽಪುತ್ರಾಃ । ಅನಾಗಸಃ ।

ಬ್ರಹ್ಮಽದ್ವಿಷಃ । ವಿಷ್ವಕ್ । ಏನಃ । ಭರೇರತ । ತತ್ । ದೇವಾನಾಂ । ಅವಃ । ಅದ್ಯ । ವೃಣೀಮಹೇ ॥

॥ ಸಾಯಣಭಾಷ್ಯಂ ॥

ಜೀವಾ ಜೀವಂತೋ ಜೀವಪುತ್ರಾ ಜೀವನವತ್ಪುತ್ರಾಶ್ಚಾನಾಗಸೋಽಪರಾಧವರ್ಜಿತಾಶ್ಚ ವಯು ಧನಾಕಾ ಉಶಾಃ ಸನಿತ್ವಭಿಃ ಸಂಭಕ್ತೃಭಿಃ ಪುತ್ರಪೌತ್ರಾದಿಭಿಃ ಸಹ ಸುಸನಿತಾ ಶೋಭನೇನ ಭಜನೇ ತದ್ದೇವಜಾತಂ ಸನೇಮ । ಸ್ತುತ್ಯಾ ಹವಿಷ್ಪ್ರದಾನೇನ ಚ ಸಂಭಜೇಮಹಿ । ಕಿಂಚ ಬ್ರಹ್ಮದ್ವಿಷೋ ಬ್ರಾಹ ಣಾನಾಮಸ್ಮಾಕಂ ದ್ವೇಷ್ಟಾರೋ ವಿಷ್ವಗ್ನಾನಾಗಚ್ಛದೇನೋಽಸ್ಮದೀಯಂ ಪಾಪಂ ಭರೇರತೇ । ಆತ್ಮ ಧಾರಯಂತು । ಪೋಷಯಂತು । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಜೀವಾಃ**— ಜೀವಂತರಾಗಿರುವವರೂ । **ಜೀವಪುತ್ರಾಃ**—ಸಜೀವರಾಗಿರುವ ಪುತ್ರವಂತರೂ । **ಅನಾಗಸ** ಪಾಪರಹಿತರೂ ಆದ । **ವಯಂ**—ನಾವು । **ಸನಿತ್ವಭಿಃ**—ನಮ್ಮೊಂದಿಗೆ ಭಾಗಿಗಳಾದ ಪುತ್ರಪೌತ್ರಾದಿಗಳೊಡನೆ **ಸುಸನಿತಾ**— ಉತ್ತಮವಾದ ಭೋಗದೊಡಗೂಡಿ । **ತತ್**—ದೇವತಾಕಾರ್ಯವನ್ನು । **ಸನೇಮ**—ಆಚರಿಸೋಣ **ಬ್ರಹ್ಮದ್ವಿಷಃ**—ದೇವಕಾರ್ಯವನ್ನು ಮಾಡುವ ಬ್ರಾಹ್ಮಣನನ್ನು ದ್ವೇಷಿಸುವವರು । **ವಿಷ್ವಕ್**—ಸರ್ವತ್ರ । **ಏನಃ** ನಮ್ಮ ಪಾಪವನ್ನು । **ಭರೇರತ**—ವಹಿಸಿಕೊಳ್ಳಲಿ । **ಅದ್ಯ**—ಈಗ । **ದೇವಾನಾಂ**—ದೇವತೆಗಳಿಂದ ಲಭ್ಯವಾಗುವ **ತತ್**—ಅಸಾಧಾರಣವಾದ । **ಅವಃ**— ರಕ್ಷಣವನ್ನು । **ವೃಣೀಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ಜೀವಂತರಾಗಿರುವವರೂ, ಸಜೀವರಾಗಿರುವ ಪುತ್ರರುಳ್ಳವರೂ, ಪಾಪರಹಿತರೂ ಆದ ನಾವು ನಮ್ಮೊಂ ಭಾಗಿಗಳಾದ ಪುತ್ರಪೌತ್ರಾದಿಗಳೊಡನೆ ಉತ್ತಮವಾದ ಭೋಗಗಳಿಂದ ಕೂಡಿ ದೇವಕಾರ್ಯವನ್ನು ಆಚರಿಸೋ ದೇವಕಾರ್ಯವನ್ನು ಮಾಡುವ ಬ್ರಾಹ್ಮಣರನ್ನು ದ್ವೇಷಿಸುವವರು ಸರ್ವತ್ರ ನಮ್ಮ ಪಾಪಗಳನ್ನು ವಹಿಸಿಕೊಳ್ಳ ದೇವತೆಗಳಿಂದ ಲಭ್ಯವಾಗುವ ಅಸಾಧಾರಣವಾದ ರಕ್ಷಣವನ್ನು ಈಗ ನಾವು ಯಾಚಿಸುತ್ತೇವೆ.

English Translation

Living with living offspring, and free from fault, let us make offerir (to the gods), sharing with those who share with us: may those who hɛ the Brahmans carry off our iniquity in different directions: we soli to-day this protection of the gods.

॥ ಸಂಹಿತಾಪಾಠಃ ॥

ಯೇ ಸ್ಥಾ ಮನೋರ್ಯಜ್ಞಿಯಾಸ್ತೇ ಶೃಣೋತನ ಯದ್ವೋ ದೇವಾ ಈಮಹೇ ತದ್ದದಾತನ ।
ಜೈತ್ರಂ ಕ್ರತುಂ ರಯಿಮದ್ವೀರವದ್ಯಶಸ್ತದ್ದೇವಾನಾಮವೋ ಅದ್ಯಾ ವೃಣೀಮಹೇ ॥ ೧೦ ॥

॥ ಪದಪಾಠಃ ॥

ಯೇ । ಸ್ಥ । ಮನೋಃ । ಯಜ್ಞಿಯಾಃ । ತೇ । ಶೃಣೋತನ । ಯತ್ । ವಃ । ದೇವಾಃ । ಈಮಹೇ । ತತ್ । ದದಾತನ ।
ಜೈತ್ರಂ । ಕ್ರತುಂ । ರಯಿಮತ್ । ವೀರವತ್ । ಯಶಃ । ತತ್ । ದೇವಾನಾಂ । ಅವಃ । ಅದ್ಯ । ವೃಣೀಮಹೇ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ದೇವಾಃ ಯೇ ಯೂಯಂ ಮನೋರ್ಮನುಷ್ಯಸ್ಯ ಯಜ್ಞಿಯಾ ಯಜ್ಞಾರ್ಹಾಃ ಸ್ಥ ಭವಥ ತೇ ಯೂಯಂ ಶೃಣೋತನ । ಅಸ್ಮದೀಯಾಂ ಸ್ತುತಿಂ ಶೃಣುತ । ಕಿಂಚ ಹೇ ದೇವಾಃ ವೋ ಯುಷ್ಮಾನ್ಯದಭೀಷ್ಟಮೀಮಹೇ ಯಾಚಾಮಹೇ ತಜ್ಜೈತ್ರಂ ಜಯಶೀಲಂ ಕ್ರತುಂ ಪ್ರಜ್ಞಾನಂ ರಯಿಮದ್ಧನವದ್ವೀರವತ್ಪುತ್ರಾದ್ಯುಪೇತಂ ಯಶಶ್ಚ ದದಾತನ । ನೋಽಸ್ಮಭ್ಯಂ ಪ್ರಯಚ್ಛತ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

ದೇವಾಃ—ಎಲೈ ದೇವತೆಗಳೇ । ಯೇ—ಯಾವ ನೀವು । ಮನೋಃ—ಮಾನವನ । ಯಜ್ಞಿಯಾಃ—ಯಜ್ಞಾರ್ಹರಾಗಿ । ಸ್ಥ—ಇರುವಿರೋ । ತೇ—ಅಂತಹ ನೀವು । ಶೃಣೋತನ—ನಮ್ಮ ಸ್ತುತಿಗಳನ್ನು ಕೇಳಿರಿ । ವಃ—ನಿಮ್ಮಿಂದ । ಯತ್—ಯಾವ ಇಷ್ಟಾರ್ಥವನ್ನು । ಈಮಹೇ—ಯಾಚಿಸುತ್ತೇವೆಯೋ । ತತ್—ಅಂತಹ । ಜೈತ್ರಂ—ಜಯಶೀಲವಾದ । ಕ್ರತುಂ—ಉತ್ತಮಜ್ಞಾನವನ್ನೂ । ರಯಿಮತ್—ಧನಯುಕ್ತವಾದುದೂ । ವೀರವತ್—ವೀರಪುತ್ರಾದಿಗಳಿಂದ ಕೂಡಿದುದೂ ಆದ । ಯಶಃ—ಯಶಸ್ಸನ್ನೂ । ದದಾತನ—ಕೊಡಿರಿ । ಅದ್ಯ—ಈಗ । ದೇವಾನಾಂ—ದೇವತೆಗಳಿಂದ ದತ್ತವಾಗುವ । ತತ್—ಅಸಾಧಾರಣವಾದ । ಅವಃ—ರಕ್ಷಣವನ್ನು । ವೃಣೀಮಹೇ—ಯಾಚಿಸುತ್ತೇವೆ.

॥ ಭಾವಾರ್ಥ ॥

ಎಲೈ ದೇವತೆಗಳೇ, ಮಾನವನ ಯಜ್ಞಕ್ಕೆ ಅರ್ಹರಾಗಿರತಕ್ಕ ನೀವು ನಮ್ಮ ಸ್ತುತಿಗಳನ್ನು ಕೇಳಿರಿ. ನಿಮ್ಮಿಂದ ಯಾವ ಇಷ್ಟಾರ್ಥವನ್ನು ಯಾಚಿಸುತ್ತೇವೆಯೋ, ಅಂತಹ ಜಯಶೀಲವಾದ ಉತ್ತಮ ಜ್ಞಾನವನ್ನೂ,

ಧನಯುಕ್ತವಾದುದೂ, ವೀರಪುತ್ರಾದಿಗಳಿಂದ ಕೂಡಿದುದೂ ಆದ ಯಶಸ್ಸನ್ನೂ ಕೊಡಿರಿ. ನಾವು ದೇವತೆಗಳಿಂದ ಲಭ್ಯವಾಗುವ ಅಸಾಧಾರಣವಾದ ಯಶಸ್ಸನ್ನು ಯಾಚಿಸುತ್ತೇವೆ.

## English Translation

Gods, who are entitled to the worship of men, hear (our prayers), and grant us that which we request : (bestow upon us) the intelligence requisite for victory, and fame with wealth, and male progeny : we solicit to-day this protection of the gods.

॥ ಸಂಹಿತಾಪಾಠಃ ॥

ಮಹದದ್ಯ ಮಹತಾಮಾ ವೃಣೀಮಹೇಽವೋ ದೇವಾನಾಂ ಬೃಹತಾಮನರ್ವಣಾಂ ।

ಯಥಾ ವಸು ವೀರಜಾತಂ ನಶಾಮಹೈ ತದ್ದೇವಾನಾಮವೋ ಅದ್ಯಾ ವೃಣೀಮಹೇ ॥ ೧೧ ॥

॥ ಪದಪಾಠಃ ॥

ಮಹತ್ । ಅದ್ಯ । ಮಹತಾಂ । ಆ । ವೃಣೀಮಹೇ । ಅವಃ । ದೇವಾನಾಂ । ಬೃಹತಾಂ । ಅನರ್ವಣಾಂ

ಯಥಾ । ವಸು । ವೀರಽಜಾತಂ । ನಶಾಮಹೈ । ತತ್ । ದೇವಾನಾಂ । ಅವಃ । ಅದ್ಯ । ವೃಣೀಮಹೇ ॥

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ನಹನಿ ಮಹತಾಂ ಶ್ರೇಷ್ಠಾನಾಂ ಬೃಹತಾಂ ವೃದ್ಧಾನಾಮನರ್ವಣಾಮಪ್ರತಿಗತಾನಾಂ ದೇವಾನಾಮಿಂದ್ರಾದೀನಾಂ ಸಂಬಂಧಿ ಮಹದಧಿಕಮವೋ ರಕ್ಷಣಮಾ ವೃಣೀಮಹೇ । ಪ್ರಾರ್ಥಯಾಮಹೇ । ಕಿಂಚ ವಯಂ ಯಥಾ ವಸು ಧನಂ ವೀರಜಾತಮಪತ್ಯಜಾತಂ ಚ ನಶಾಮಹೈ ಪ್ರಾಪ್ನುಯಾವ ತಥಾ ತೇ ದೇವಾಃ ಕುರ್ವಂತ್ವಿತಿ ಶೇಷಃ ॥

॥ ಪ್ರತಿಪದಾರ್ಥ ॥

ಅದ್ಯ—ಈ ಯಾಗದಿನದಲ್ಲಿ । ಮಹತಾಂ—ಶ್ರೇಷ್ಠರೂ । ಬೃಹತಾಂ—ವೃದ್ಧರೂ । ಅನರ್ವಣಾಂ—ಅಪ್ರತಿಹತರೂ ಆದ । ದೇವಾನಾಂ—ದೇವತೆಗಳ । ಮಹತ್—ಅತ್ಯಧಿಕವಾದ । ಅವಃ—ರಕ್ಷಣವನ್ನು

**ಯಥಾ**—ಯಾವ ರೀತಿ । **ವಸು**—ಧನವನ್ನೂ । **ವೀರಜಾತಂ**—ವೀರಪುತ್ರಾದಿಗಳನ್ನು **ನಶಾಮಹೈ**—ಹೊಂದುವೆವೋ ಹಾಗೆ । ಆ **ವೃಣೀಮಹೇ**—ಪ್ರಾರ್ಥಿಸುತ್ತೇವೆ । **ದೇವಾನಾಂ**—ದೇವತೆಗಳಿಂದ ಲಭ್ಯವಾಗುವ । **ತತ್**—ಅಸಾಧಾರಣವಾದ । **ಅವಃ**—ರಕ್ಷಣವನ್ನು । **ಅದ್ಯ**—ಈಗ । **ವೃಣೀಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ನಾವು ಯಾವ ರೀತಿ ಧನವನ್ನೂ, ವೀರಪುತ್ರಾದಿಗಳನ್ನು ಹೊಂದುವೆವೋ ಹಾಗೆ, ಈ ಯಾಗದಿನದಲ್ಲಿ ಶ್ರೇಷ್ಠರೂ, ವೃದ್ಧರೂ ಅಪ್ರತಿಹತರೂ ಆದ ದೇವತೆಗಳ ಅತ್ಯಧಿಕವಾದ ರಕ್ಷಣವನ್ನು ಪ್ರಾರ್ಥಿಸುತ್ತೇವೆ. ದೇವತೆಗಳಿಂದ ಲಭ್ಯವಾಗುವ ಅಸಾಧಾರಣವಾದ ರಕ್ಷಣವನ್ನು ಈಗ ಯಾಚಿಸುತ್ತೇವೆ.

English Translation

We implore to-day the especial protection of the mighty, the great, the irresistible, gods, that we may obtain riches, and male progeny: we solicit to-day this protection of the gods.

॥ ಸಂಹಿತಾಪಾಠಃ ॥

ಮಹೋ ಅಗ್ನೇಃ ಸಮಿಧಾನಸ್ಯ ಶರ್ಮಣ್ಯನಾಗಾ ಮಿತ್ರೇ ವರುಣೇ ಸ್ವಸ್ತಯೇ ।
ಶ್ರೇಷ್ಠೇ ಸ್ಯಾಮ ಸವಿತುಃ ಸವೀಮನಿ ತದ್ದೇವಾನಾಮವೋ ಅದ್ಯಾ ವೃಣೀಮಹೇ ॥ ೧೨ ॥

॥ ಪದಪಾಠಃ ॥

ಮಹಃ । ಅಗ್ನೇಃ । ಸಂऽಇಧಾನಸ್ಯ । ಶರ್ಮಣಿ । ಅನಾಗಾಃ । ಮಿತ್ರೇ । ವರುಣೇ । ಸ್ವಸ್ತಯೇ । ಶ್ರೇಷ್ಠೇ । ಸ್ಯಾಮ । ಸವಿತುಃ । ಸವೀಮನಿ । ತತ್ । ದೇವಾನಾಂ । ಅವಃ । ಅದ್ಯ । ವೃಣೀಮಹೇ ॥೧೨॥

॥ ಸಾಯಣಭಾಷ್ಯಂ ॥

ಸಮಿಧಾನಸ್ಯ ಸಮಿಧ್ಯಮಾನಸ್ಯ ಮಹೋ ಮಹತೋಽಗ್ನೇಃ ಶರ್ಮಣಿ ಸುಖೇ ವಯಂ ಸ್ಯಾಮ । ಭವೇಮ । ಕಿಂಚ ವಯಮನಾಗಾ ಅನಾಗಸಃ ॥ ವಚನವ್ಯತ್ಯಯಃ ॥ ಸ್ಯಾಮ । ಅಪಿ ಚ ಮಿತ್ರೇ ವರುಣೇ ಮಿತ್ರಾವರುಣಯೋಃ । ಷಷ್ಠ್ಯರ್ಥೇ ಸಪ್ತಮೀ । ಸವಿತುಶ್ಚ ಸವೀಮನಿ ಪ್ರಸವೇ ಸ್ವಸ್ತಯೇ ಸರ್ವಪ್ರಕಾರಾವಿನಾಶಾಯ ಸ್ಯಾಮ । ಸಿದ್ಧಮನ್ಯತ್ ॥

। ಪ್ರತಿಪದಾರ್ಥ ।

**ಸಮಿಧಾನಸ್ಯ**—ಪ್ರಜ್ವಲಿತನೂ । **ಮಹಃ**—ಮಹಾತ್ಮನೂ ಆದ । **ಅಗ್ನೇಃ**—ಅಗ್ನಿಯ । **ಶರ್ಮಣಿ**—ಸುಖದಲ್ಲಿ । **ಸ್ಯಾಮ**—ನಾವಿರುವಂತಾಗಲಿ । **ಅನಾಗಾಃ**—ಪಾಪರಹಿತರೂ ಆಗಿರೋಣ । **ಮಿತ್ರೇ**—ಮಿತ್ರನಲ್ಲಿಯೂ । **ವರುಣೇ**—ವರುಣನಲ್ಲಿಯೂ । **ಸವಿತುಃ**—ಸವಿತೃವಿನ । **ಸವೀಮನಿ**—ಪ್ರೇರಣೆಯಲ್ಲಿಯೂ । **ಸ್ವಸ್ತಯೇ**—ಕಲ್ಯಾಣವನ್ನು ಹೊಂದುವಂತಾಗಲಿ । **ಅದ್ಯ**—ಈಗ । **ದೇವಾನಾಂ**—ದೇವತೆಗಳಿಂದ ಲಭ್ಯವಾಗುವ । **ತತ್**—ಅಸಾಧಾರಣವಾದ । **ಅವಃ**—ರಕ್ಷಣವನ್ನು । **ವೃಣೀಮಹೇ**—ಪ್ರಾರ್ಥಿಸುತೇವೆ.

॥ ಭಾವಾರ್ಥ ॥

ಪ್ರಜ್ವಲಿತನೂ, ಮಹಾತ್ಮನೂ ಆದ ಅಗ್ನಿಯಿಂದ ಲಭ್ಯವಾಗುವ ಸುಖದಲ್ಲಿ ಪಾಪರಹಿತರಾದ ನಾವು ಇರುವಂತಾಗಲಿ. ಮಿತ್ರಾವರುಣರ ಅನುಗ್ರಹವನ್ನು ಹೊಂದುವಂತಾಗಲಿ. ಸವಿತೃವಿನ ಪ್ರೇರಣಕಾರ್ಯದಲ್ಲಿ ನಾವು ಕಲ್ಯಾಣವನ್ನು ಹೊಂದುವಂತಾಗಲಿ. ಈಗ ದೇವತೆಗಳಿಂದ ಲಭ್ಯವಾಗುವ ಅಸಾಧಾರಣವಾದ ರಕ್ಷಣವನ್ನು ನಾವು ಪ್ರಾರ್ಥಿಸುತ್ತೇವೆ.

English Translation

May we free from sin be in the (enjoyment of the) happiness of the mighty kindled Agni ; and in (the keeping of) Mitra and Varuna for our welfare : may we be among the excellent progeny of Savitri : we solicit to-day this protection of the gods

। ಸಂಹಿತಾಪಾಠಃ ।

ಯೋ ಸವಿತುಃ ಸತ್ಯಸವಸ್ಯ ವಿಶ್ವೇ ಮಿತ್ರಸ್ಯ ವ್ರತೇ ವರುಣಸ್ಯ ದೇವಾಃ ।
ತೇ ಸೌಭಗಂ ವೀರವದ್ಗೋಮದಪ್ನೋ ದಧಾತನ ದ್ರವಿಣಂ ಚಿತ್ರಮಸ್ಮೇ ।

॥ ಪದಪಾಠಃ ॥

ಯೇ । ಸವಿತುಃ । ಸತ್ಯಽಸವಸ್ಯ । ವಿಶ್ವೇ । ಮಿತ್ರಸ್ಯ । ವ್ರತೇ । ವರುಣಸ್ಯ । ದೇವಾಃ ।
ತೇ । ಸೌಭಗಂ । ವೀರಽವತ್ । ಗೋಽಮತ್ । ಅಪ್ನಃ । ದಧಾತನ । ದ್ರವಿಣಂ । ಚಿತ್ರಂ । ಅಸ್ಮೇ ಇತಿ ।

॥ ಸಾಯಣಭಾಷ್ಯಂ ॥

ಯೇ ವಿಶ್ವೇ ದೇವಾಃ ಸತ್ಯಸವಸ್ಯ ಸತ್ಯಪ್ರಸವಸ್ಯ ಸವಿತುರ್ಮಿತ್ರಸ್ಯ ವರುಣಸ್ಯ ಮಿತ್ರಾವರುಣಯೋಶ್ಚ ವ್ರತೇ ಪ್ರಸವಾಖ್ಯೇ ಕರ್ಮಣಿ ಭವಂತಿ ತೇ ಯೂಯಂ ಸೌಭಗಂ ಸೌಭಾಗ್ಯಂ ವೀರವತ್ಪುತ್ರಾದ್ಯುಪೇತಂ ಗೋಮದ್ಗೋಯುಕ್ತಂ ಚಿತ್ರಂ ಪೂಜನೀಯಂ ದ್ರವಿಣಂ ಧನಂ ಚಾಪ್ನಃ ಕರ್ಮ ಚಾಸ್ಮೆ ಮಹ್ಯಂ ದಧಾತನ । ಪ್ರಯಚ್ಛತ ॥

॥ ಪ್ರತಿಪದಾರ್ಥ ॥

ವಿಶ್ವೇ ದೇವಾಃ—ಎಲ್ಲ ಸಕಲ ದೇವತೆಗಳೇ । ಯೇ—ಯಾವ ನೀವು । ಸತ್ಯಸವಸ್ಯ—ಸತ್ಯಪ್ರಸವನಾದ । ಸವಿತುಃ—ಸವಿತೃವಿನ । ಮಿತ್ರಸ್ಯ—ಮಿತ್ರನ । ವರುಣಸ್ಯ—ವರುಣನ । ವ್ರತೇ—ಕರ್ಮದಲ್ಲಿ ನಿರತರಾಗಿರುವಿರೋ । ತೇ—ಅಂತಹ ನೀವು । ಸೌಭಗಂ—ಕಲ್ಯಾಣಕಾರಕವೂ । ವೀರವತ್—ವೀರಪುತ್ರಾದಿಗಳಿಂದ ಕೂಡಿದುದೂ । ಗೋಮತ್—ಗೋಯುಕ್ತವಾದುದೂ । ಚಿತ್ರಂ—ಪೂಜ್ಯವಾದುದೂ ಆದ । ದ್ರವಿಣಂ—ಧನವನ್ನೂ । ಅಪ್ನಃ—ಕರ್ಮನಿರ್ವಾಹವನ್ನು । ಅಸ್ಮೇ—ನಮಗೆ । ದಧಾತನ—ಕೊಡಿರಿ.

॥ ಭಾವಾರ್ಥ ॥

ಎಲ್ಲ ಸಕಲದೇವತೆಗಳೇ, ಯಾವ ನೀವು ಸತ್ಯಪ್ರಸವನಾದ ಸೂರ್ಯನ ಮತ್ತು ಮಿತ್ರಾವರುಣರ ಕರ್ಮದಲ್ಲಿ ನಿರತರಾಗಿರುವಿರೋ ಅಂತಹ ನೀವು ಕಲ್ಯಾಣಕಾರಕವೂ ವೀರಪುತ್ರಾದಿಗಳಿಂದ ಕೂಡಿದುದೂ ಗೋಯುಕ್ತವಾದುದೂ ಪೂಜ್ಯವಾದುದೂ ಆದ ಧನವನ್ನೂ ಮತ್ತು ಕರ್ಮಶಕ್ತಿಯನ್ನೂ ಕೊಡಿರಿ.

English Translation

Universal gods, who (take part) in the functions of Savitri, the parent of truth, of Mitra and Varuna, confer upon us auspicious and honourable wealth, comprising male progeny, and cattle, and (pious) acts.

॥ ಸಂಹಿತಾಪಾಠಃ ॥

ಸವಿತಾ ಪಶ್ಚಾತಾತ್ಸವಿತಾ ಪುರಸ್ತಾತ್ಸವಿತೋತ್ತರಾತ್ತಾತ್ಸವಿತಾಧರಾತ್ತಾತ್ ।
ಸವಿತಾ ನಃ ಸುವತು ಸರ್ವತಾತಿಂ ಸವಿತಾ ನೋ ರಾಸತಾಂ ದೀರ್ಘ-
ಮಾಯುಃ ॥ ೧೪ ॥

॥ ಪದಪಾಠಃ ॥

ಸವಿತಾ । ಪಶ್ಚಾತಾತ್ । ಸವಿತಾ । ಪುರಸ್ತಾತ್ । ಸವಿತಾ । ಉತ್ತರಾತ್ತಾತ್ । ಸವಿತಾ । ಅಧರಾತ್ತಾತ್ । ಸವಿತಾ । ನಃ । ಸುವತು । ಸರ್ವಽತಾತಿಂ । ಸವಿತಾ । ನಃ । ರಾಸತಾಂ । ದೀರ್ಘಂ । ಆಯುಃ ॥ ೧೪ ॥

॥ ಸಾಯಣಭಾಷ್ಯಂ ॥

ಪಶ್ಚಾತಾತ್ಪಶ್ಚಿಮತಃ ಸ್ಥಿತಃ ಸವಿತಾ ಪುರಸ್ತಾತ್ಪೂರ್ವತಶ್ಚ ಸ್ಥಿತಃ ಸವಿತೋತ್ತರಾತ್ತಾದುತ್ತರತಃ ಸ್ಥಿತಶ್ಚ ಸವಿತಾ ನೋಽಸ್ಮಾಕಂ ಸರ್ವತಾತಿಂ ಸರ್ವಮಭಿಲಷಿತಂ ಧನಾದಿಕಂ ಸುವತು । ಪ್ರೇರಯತು । ಕಿಂಚ ಸವಿತೈವ ನೋಽಸ್ಮಭ್ಯಂ ದೀರ್ಘಂ ಬಹುಕಾಲೀನಮಾಯೂ ರಾಸತಾಂ । ದದಾತು । ಬಹುಧಾ ಸವಿತೃಪದಗ್ರಹಣಮತ್ಯಂತಮಾದರಾರ್ಥಂ ॥

॥ ಪ್ರತಿಪದಾರ್ಥ ॥

**ಸವಿತಾ**—ಸವಿತೃದೇವನು | **ಪಶ್ಚಾತಾತ್**—ಪಶ್ಚಿಮಭಾಗದಿಂದಲೂ | **ಸವಿತಾ**—ಸವಿತೃದೇವನು | **ಪುರಸ್ತಾತ್**—ಪೂರ್ವದಿಕ್ಕಿನಿಂದಲೂ | **ಸವಿತಾ**—ಸವಿತೃವು | **ಉತ್ತರಾತ್ತಾತ್**—ಉತ್ತರದಿಕ್ಕಿನಿಂದಲೂ | **ಸವಿತಾ**—ಸವಿತೃದೇವನು | **ಸವಿತಾ**—ಸವಿತೃವು | **ಅಧರಾತ್ತಾತ್**—ದಕ್ಷಿಣಭಾಗದಿಂದಲೂ | **ನಃ**—ನಮಗೆ | **ಸರ್ವತಾತಿಂ**—ಅಪೇಕ್ಷಿತವಾದ ಸಕಲ ಧನಾದಿಗಳನ್ನು | **ಸುವತು**—ಒದಗಿಸಲಿ | **ಸವಿತಾ**—ಸವಿತೃದೇವನು | **ನಃ**—ನಮಗೆ | **ದೀರ್ಘಂ**—ಬಹುದೀರ್ಘವಾದ | **ಆಯುಃ**—ಆಯುಸ್ಸನ್ನು | **ರಾಸತಾಂ**—ಕೊಡಲಿ.

॥ ಭಾವಾರ್ಥ ॥

ಸವಿತೃದೇವನು ಪಶ್ಚಿಮಭಾಗದಿಂದಲೂ, ಪೂರ್ವಭಾಗದಿಂದಲೂ ಮತ್ತು ದಕ್ಷಿಣೋತ್ತರಭಾಗಗಳಿಂದಲೂ ನಮಗೆ ಅಪೇಕ್ಷಿತಗಳಾದ ಸಕಲ ಧನಾದಿಗಳನ್ನು ಒದಗಿಸಲಿ. ಸವಿತೃವು ನಮಗೆ ಬಹುದೀರ್ಘವಾದ ಆಯುಸ್ಸನ್ನು ಕೊಡಲಿ.

English Translation

May Savitri on the west, Savitri on the east, Savitri on the north, Savitri on the south, may Savitri send us all desired wealth, may Savitri bestow upon us long life.



## ಮೂವತ್ತೇಳನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ನಮೋ ಮಿತ್ರಸ್ಯೇತಿ ದ್ವಾದಶರ್ಚಮಷ್ಟಮಂ ಸೂಕ್ತಂ | ಅಭಿತಪಾ ನಾಮ ಸೂರ್ಯಪುತ್ರ ಋಷಿಃ | ಇದಮಾದೀನಿ ಪಂಚ ಸೂಕ್ತಾನಿ ಜಾಗತಾನಿ | ಅಸ್ಯ ಸೂಕ್ತಸ್ಯ ದಶಮೀ ತ್ರಿಷ್ಟುಪ್ | ಸೂರ್ಯೋ ದೇವತಾ | ತಥಾ ಚಾನುಕ್ರಾಂತಂ | ನಮೋ ದ್ವಾದಶ ಸೌರ್ಯೋಽಭಿತಪಾಃ ಸೌರ್ಯಂ ಜಾಗತಂ ತ್ವೈ ತ್ರಿಷ್ಟುಬ್ದಶಮೀತಿ ॥ ಆಶ್ವಿನಶಸ್ತ್ರೇ ಸೂರ್ಯೋದಯಾದೂರ್ಧ್ವಂ ಸೌರ್ಯಕಾಂಡ ಏತತ್ಸೂಕ್ತಂ | ಸೂತ್ರಿತಂ ಚ | ಚಿತ್ರಂ ದೇವಾನಾಂ ನಮೋ ಮಿತ್ರಸ್ಯ | ಆ. ೬-೫ | ಇತಿ ॥ ವಿಷುವತಿ ನಿಷ್ಕೇವಲ್ಯ ಆದ್ಯಸ್ತೃಚೋಽನುರೂಪಃ | ಸೂತ್ರಿತಂ ಚ | ವಿಭ್ರಾಡ್ಬೃಹತ್ಪಿಬತು ಸೋಮ್ಯಂ ಮಧು ನಮೋ ಮಿತ್ರಸ್ಯ ವರುಣಸ್ಯ ಚಕ್ಷಸ ಇತಿ ಸ್ತೋತ್ರಿಯಾನುರೂಪೌ | ಆ. ೮-೬ | ಇತಿ ॥ ಸ್ವಪಂತಮಭ್ಯಸ್ತಮಯೇ ಸತಿ ರಾತ್ರಿಶೇಷಂ ಸ್ಥಿತ್ವಾ ಪ್ರಾತರ್ಯೇನ ಸೂರ್ಯೋ ಜ್ಯೋತಿಷೇತ್ಯಾದಿಭಿಃ ಪಂಚಭಿಃ ಸೂರ್ಯ ಉಪಸ್ಥೇಯಃ | ಸೂತ್ರಿತಂ ಚ | ಅನ್ವಾಧಿತಂ ಚೇತ್ಸ್ವಪಂತಮಾದಿತ್ಯೋಽಭ್ಯಸ್ತಮಿಯಾದ್ವಾಗ್ಯತೋಽನುಪವಿಶನ್ರಾತ್ರಿಶೇಷಂ ಭೂತ್ವಾ ಯೇನ ಸೂರ್ಯ ಜ್ಯೋತಿಷಾ ಬಾಧಸೇ ತಮ ಇತಿ ಪಂಚಭಿರಾದಿತ್ಯಮುಪತಿಷ್ಠೇತ | ಸ್ವಪಂತಮಭ್ಯುದಿತೇ ಯಸ್ಯ ತೇ ವಿಶ್ವೇತ್ಯಾದಿಭಿಶ್ಚತಸೃಭಿಃ ಸೂರ್ಯ ಉಪಸ್ಥೇಯಃ | ಸೂತ್ರಿತಂ ಚ | ಅಭ್ಯುದಿಯಾಚ್ಚೇದಕರ್ಮಶ್ರಾಂತಮನಭಿರೂಪೇಣ ಕರ್ಮಣಾ ವಾಗ್ಯತ ಇತಿ ಸಮಾನಮುತ್ತರಾಭಿಶ್ಚತ-

**ಸ್ಪಭಿರುಪಸ್ಥಾನಂ । ಆ.ಗೃ. ೩-೭-೧-೨ । ಇತಿ ॥ ಏಕಾದಶಿನಸ್ಯ ಸೌರ್ಯಸ್ಯ ಪಶೋರ್ಹವಿಷೋ ಯಾಜ್ಯಾ । ಸೂತ್ರಿತಂ ಚ । ಶಂ ನೋ ಭವ ಚಕ್ಷಸಾ ಶಂ ನೋ ಅಹ್ನಾ ವಾಯೋ ಭೂಷ ಶುಚಿಷಾಃ । ಆ. ೩-೮ । ಇತಿ ॥ ಹೋತ್ರಕಾಣಾಂ ಶಕಲಾಧಾನೇ ಯದ್ವೋ ದೇವಾ ಇತ್ಯೇಷಾ । ಆ. ೬-೧೨ ॥ ವಿವಾಹೇ ಕನ್ಯಾರೋದನೀಯೇ ಜೀವಂ ರುದಂತೀತ್ಯೇಷಾ ಜಪ್ಯಾ । ಆ. ಗೃ. ೧.೮-೪ ॥**

ಅನುವಾದವು— **ನಮೋ ಮಿತ್ರಸ್ಯ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸೂರ್ಯಪುತ್ರನಾದ ಅಭಿತಪಾ ಎಂಬುವನು ಋಷಿಯು. ಈ ಸೂಕ್ತದಿಂದ ಮುಂದಿನ ಐದು ಸೂಕ್ತಗಳು ಜಗತೀಛಂದಸ್ಕವು. ಈ ಸೂಕ್ತದ ಹತ್ತನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು ; ಸೂರ್ಯನು ದೇವತೆಯು. ಅನುಕ್ರಮಣಿಕೆಯಲ್ಲಿ— **ನಮೋ ದ್ವಾದಶ ಸೌರ್ಯೋಽಭಿತಪಾಃ ಸೌರ್ಯಂ ಜಾಗತಂ ವೈ ತ್ರಿಷ್ಟುಬ್ದಶಮೀ** ಎಂದು ಹೇಳಿರುವುದು. ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿ ಸೂರ್ಯೋದಯಾನಂತರ ಸೂರ್ಯಸಂಬಂಧವಾದ ಸೂಕ್ತಗಳನ್ನು ಪಠಿಸುವಾಗ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಚಿತ್ರಂ ದೇವಾನಾಂ ನಮೋ ಮಿತ್ರಸ್ಯ** ಎಂಬ ಸೂತ್ರದಿಂದ (ಆ. ೬-೫) ವಿವೃತವಾಗಿರುವುದು. ವಿಷುವದ್ಯಾಗದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಮಾಡುವಾಗ ಈ ಸೂಕ್ತದ ಮೊದಲಿನ ಮೂರು ಋಕ್ಕುಗಳನ್ನು ಅನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ವಿಭ್ರಾಟ್‌ಬೃಹತ್ಪಿಬತು ಸೋಮ್ಯಂ ಮಧು ನಮೋ ಮಿತ್ರಸ್ಯ ವರುಣಸ್ಯ ಚಕ್ಷಸ ಇತಿ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ (ಆ. ೮-೬) ವಿವೃತವಾಗಿರುವುದು. ವ್ಯಾಧಿರಹಿತನಾಗಿದ್ದರೂ ಸೂರ್ಯಾಸ್ತಮಯ ಕಾಲದಲ್ಲಿ ನಿದ್ರೆಮಾಡಿದರೆ ಆಗ ಆ ರಾತ್ರಿಯನ್ನು ಕಳೆದ ಬಳಿಕ ಪ್ರಾತಃಕಾಲದಲ್ಲೆದ್ದು **ಯೇನ ಸೂರ್ಯ ಜ್ಯೋತಿಷಾ** ಎಂದು ಪ್ರಾರಂಭವಾಗುವ ಐದು ಋಕ್ಕುಗಳಿಂದ (೪-೮) ಸೂರ್ಯನನ್ನು ಪ್ರಾರ್ಥಿಸಿ ಉಪಸ್ಥಾನಮಾಡಬೇಕೆಂದು ಆಶ್ವಲಾಯನಗೃಹ್ಯಸೂತ್ರದ— **ಅವ್ಯಾಧಿತಂ ಚೇತ್ಸ್ವಪಂತಮಾದಿತ್ಯೋಽಭ್ಯಸ್ತಮಿಯಾದ್ವಾಗ್ಯತೋಽನುಪವಿಶನ್ ರಾತ್ರಿಶೇಷಂ ಭೂತ್ವಾ ಯೇನ ಸೂರ್ಯ ಜ್ಯೋತಿಷಾ ಬಾಧಸೇ ತಮ ಇತಿ ಪಂಚಭಿರಾದಿತ್ಯಮುಪತಿಷ್ಠೇತ** ಎಂಬ ಸೂತ್ರದಿಂದ (ಆ. ಗೃ. ೩-೭-೧) ವಿವೃತವಾಗಿರುವುದು. ಸೂರ್ಯನು ಉದಯಿಸಿರುವಾಗಲೂ ನಿದ್ರೆಯಿಂದ ಏಳದೆ ಮಲಗಿರುವಾಗ ಎದ್ದಮೇಲೆ **ಯಸ್ಯ ತೇ ವಿಶ್ವಾ** ಎಂದು ಮೊದಲಾಗುವ ನಾಲ್ಕು ಋಕ್ಕುಗಳಿಂದ (೯-೧೨) ಸೂರ್ಯನನ್ನು ಪ್ರಾರ್ಥಿಸಿ ಉಪಸ್ಥಾನಮಾಡಬೇಕೆಂದು ಆಶ್ವಲಾಯನಗೃಹ್ಯಸೂತ್ರದ— **ಅಭ್ಯುದಿಯಾಚ್ಚೇದಕರ್ಮಶ್ರಾಂತಮನಭಿರೂಪೇಣ ಕರ್ಮಣಾ ವಾಗ್ಯತ ಇತಿ ಸಮಾನಮುತ್ತರಾಭಿಶ್ಚತಸೃಭಿರುಪಸ್ಥಾನಂ** ಎಂಬ ಸೂತ್ರದಿಂದ (ಆ. ಗೃ. ೩-೭-೨) ವಿವೃತವಾಗಿರುವುದು. ಏಕಾದಶಿನ್ ಎಂಬ ಯಾಗದಲ್ಲಿ ಸೂರ್ಯಸಂಬಂಧವಾದ ಪಶುಹೋಮದ ಹವಿಸ್ಸನ್ನು ಹೋಮಮಾಡುವಾಗ ಈ ಸೂಕ್ತದ **ಶಂ ನೋ ಭವ ಚಕ್ಷಸಾ** ಎಂಬ ಹತ್ತನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ— **ಶಂ ನೋ ಭವ ಚಕ್ಷಸಾ ಶಂ ನೋ ಅಹ್ನಾ ವಾಯೋ ಭೂಷ ಶುಚಿಷಾಃ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು. ಹೋತೃವರ್ಗದ ಋತ್ವಿಕ್ಕುಗಳು ಮಾಡುವ ಶಕಲಾಧಾನದಲ್ಲಿ **ಯದ್ವೋ ದೇವಾಃ** ಎಂಬ ಈ ಸೂಕ್ತದ ಹನ್ನೆರಡನೆಯ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಯದ್ವೋ ದೇವಾಃ** ಎಂಬ ಸೂತ್ರದಿಂದ (ಆ. ೬-೧೨) ವಿವೃತವಾಗಿರುವುದು. ವಿವಾಹಕಾಲದಲ್ಲಿ ಕನ್ಯೆಯು ಅತ್ತರೆ ಆಗ **ಜೀವಂ ರುದಂತೀ** ಎಂಬ ಋಕ್ಕನ್ನು (ಋ. ಸಂ. ೧೦-೪೦-೧೦) ಎಂಬ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದಲ್ಲಿ (ಆ. ಗೃ. ೧-೮-೪) ವಿವೃತವಾಗಿರುವುದು. [ ೪೦ನೇ ಸೂಕ್ತದಲ್ಲಿರುವ ಈ ಋಕ್ಕಿನ ವಿನಿಯೋಗವನ್ನು ಇಲ್ಲಿ ಹೇಳಲು ಕಾರಣವಿಲ್ಲ ]

## ಸೂಕ್ತ—೩೭

ಮಂಡಲ—೧೦ ॥ ಅನುವಾಕ—೩ ॥ ಸೂಕ್ತ—೩೭ ।
ಅಷ್ಟಕ—೭ ॥ ಅಧ್ಯಾಯ—೮ ॥ ವರ್ಗ ೧೨, ೧೩ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥
ಋಷಿಃ—ಅಭಿತಪಾಃ ಸೌರ್ಯಃ ॥
ದೇವತಾ—ಸೂರ್ಯಃ ।
ಛಂದಃ—೧-೯, ೧-೧೨. ಜಗತೀ ॥ ೧೦. ತ್ರಿಷ್ಟುಪ್

॥ ಸಂಹಿತಾಪಾಠಃ ॥

ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ ತದೃತಂ ಸಪ-
ರ್ಯತ ।
ದೂರೇದೃಶೇ ದೇವಜಾತಾಯ ಕೇತವೇ ದಿವಸ್ಪುತ್ರಾಯ ಸೂರ್ಯಾಯ
ಶಂಸತ ॥ ೧ ॥

। ಪದಪಾಠಃ ।

ನಮಃ । ಮಿತ್ರಸ್ಯ । ವರುಣಸ್ಯ । ಚಕ್ಷಸೇ । ಮಹಃ । ದೇವಾಯ । ತತ್ । ಋತಂ । ಸಪರ್ಯತ ।
ದೂರೇಽದೃಶೇ । ದೇವಽಜಾತಾಯ । ಕೇತವೇ । ದಿವಃ । ಪುತ್ರಾಯ । ಸೂರ್ಯಾಯ । ಶಂಸತ ॥ ೧ ॥

। ಸಾಯಣಭಾಷ್ಯಂ ।

ಹೇ ಋತ್ವಿಜಃ ಯೂಯಂ ಮಿತ್ರಸ್ಯ ವರುಣಸ್ಯ ಮಿತ್ರಾವರುಣಯೋಶ್ಚಕ್ಷಸೇ ದ್ರಷ್ಟ್ರೇ ಮಹೋ ಮಹತೇ ದೇವಾಯ ದ್ಯೋತಮಾನಾಯ ದೂರೇದೃಶೇ ದೂರೇ ಸಂತಮಪಿ ಪಶ್ಯತೇ ದೇವಜಾತಾಯ ದೇವೇಷು ಜಾತಾಯ ದೇವಾರ್ಥಮುತ್ಪನ್ನಾಯ ಕೇತವೇ ವಿಶ್ವಸ್ಯ ಪ್ರಜ್ಞಾಪಕಾಯ ದಿವಃ ಪುತ್ರಾಯ ಪುತ್ರಭೂತಾಯ । ದಿವಿ ಜಾಯಮಾನತ್ವಾತ್ತತ್ಪುತ್ರತ್ವವ್ಯಪದೇಶಃ । ಸೂರ್ಯಾಯ ಸೂರ್ಯಾರ್ಥಂ ನಮಃ ಕೃತ್ವಾ ತದ್ವಿಹಿತಮೃತಂ ಯಾಗಾದಿಲಕ್ಷಣಂ ಕರ್ಮ ಸಪರ್ಯತ । ಪೂಜಯತ । ಶಂಸತ । ಸ್ತುತಿಮಪಿ ಕುರುತ ॥

। ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) ಮಿತ್ರಸ್ಯ—ಮಿತ್ರನನ್ನು । ವರುಣಸ್ಯ—ವರುಣನನ್ನೂ । ಚಕ್ಷಸೇ—ನೋಡತಕ್ಕವನೂ । ಮಹಃ—ಮಹಾತ್ಮನೂ । ದೇವಾಯ—ದೇವತಾತ್ಮನೂ । ದೂರೇದೃಶೇ—ದೂರದಲ್ಲಿರುವವನನ್ನೂ ನೋಡತಕ್ಕವನೂ । ದೇವಜಾತಾಯ—ದೇವತೆಗಳಲ್ಲಿ ಉತ್ಪನ್ನನೂ । ಕೇತವೇ—ಜಗತ್ತಿಗೆ ಜ್ಞಾನೋತ್ಪಾದ

ಕನೂ । **ದಿವಃ ಪುತ್ರಾಯ**—ದ್ಯುಲೋಕದ ಪುತ್ರನೂ ಆದ । **ಸೂರ್ಯಾಯ**—ಸೂರ್ಯದೇವನಿಗೆ । **ನಮಃ**—ಮೊದಲು ನಮಸ್ಕಾರವನ್ನು ಮಾಡಿ । **ತತ್ ಋತಂ**—(ಅನಂತರ) ನಿಮಗೆ ವಿಹಿತವಾದ ಕರ್ಮವನ್ನು । **ಸಪರ್ಯತ**-ನೆರವೇರಿಸಿರಿ । **ಶಂಸತ**—ಸ್ತುತಿಯನ್ನು ಅರ್ಪಿಸಿರಿ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಮಿತ್ರನನ್ನೂ, ವರುಣನನ್ನೂ. ನೋಡತಕ್ಕವನೂ, ಮಹಾತ್ಮನೂ, ದೇವತಾತ್ಮನೂ, ದೂರದಲ್ಲಿರುವವನನ್ನು ನೋಡತಕ್ಕವನೂ, ದೇವತೆಗಳಲ್ಲಿ ಉತ್ಪನ್ನನೂ, ಜಗತ್ತಿಗೆ ಜ್ಞಾನೋತ್ಪಾದಕನೂ, ದ್ಯುಲೋಕದ ಪುತ್ರನೂ ಆದ ಸೂರ್ಯದೇವನಿಗೆ ಮೊದಲು ನಮಸ್ಕಾರವನ್ನು ಅರ್ಪಿಸಿ ಅನಂತರ ನಿಮಗೆ ವಿಹಿತವಾದ ಕರ್ಮವನ್ನು ನೆರವೇರಿಸಿರಿ. ಸ್ತುತಿಯನ್ನು ಅರ್ಪಿಸಿರಿ.

## English Translation

(Having offered) adoration to Surya, the beholder of Mitra and Varuna, the mighty, the divine, the far-seer, the god-born, the manifester of all things), the son of heaven; celebrate the rite enjoined by him, and sing his praise.

॥ ಸಂಹಿತಾಪಾಠಃ ॥

ಸಾ ಮಾ ಸತ್ಯೋಕ್ತಿಃ ಪರಿ ಪಾತು ವಿಶ್ವತೋ ದ್ಯಾವಾ ಚ ಯತ್ರ ತತ-
ನನ್ನಹಾನಿ ಚ ।
ವಿಶ್ವಮನ್ಯನ್ನಿ ವಿಶತೇ ಯದೇಜತಿ ವಿಶ್ವಾಹಾಪೋ ವಿಶ್ವಾಹೋದೇತಿ
ಸೂರ್ಯಃ ॥ ೨ ॥

॥ ಪದಪಾಠಃ ॥

ಸಾ । ಮಾ । ಸತ್ಯಽಉಕ್ತಿಃ । ಪರಿ । ಪಾತು । ವಿಶ್ವತಃ । ದ್ಯಾವಾ । ಚ । ಯತ್ರ । ತತನನ್ । ಅಹಾನಿ । ಚ । ವಿಶ್ವಂ । ಅನ್ಯತ್ । ನಿ । ವಿಶತೇ । ಯತ್ । ಏಜತಿ । ವಿಶ್ವಾಹಾ । ಆಪಃ । ವಿಶ್ವಾಹಾ । ಉತ್ । ಏತಿ । ಸೂರ್ಯಃ ॥ ೨ ॥

॥ ಸಾಯಣಭಾಷ್ಯಂ ॥

ಸಾ ಸತ್ಯೋಕ್ತಿಸ್ತತ್ಸತ್ಯವಚನಂ ಮಾ ಮಾಂ ವಿಶ್ವತಃ ಸರ್ವತಃ ಪರಿ ಪಾತು । ಪರಿರಕ್ಷತು । ಯಯಾ ಸತ್ಯೋಕ್ತ್ಯಾ ಯತ್ರ ಯಸ್ಮಿನ್ದೇಶೇ ದ್ಯಾವಾ ಚ ದ್ಯಾವಾಪೃಥಿವ್ಯಾವಹಾನಿ ರಾತ್ರಯಶ್ಚ

ತತನನ್ ಅತನ್ವನ್ ತತ್ರ ವಿಶ್ವಂ ಸರ್ವಮನದ್ಭೂತಜಾತಂ ನಿ ವಿಶತೇ । ವಿಶ್ರಾಮ್ಯತಿ । ಯದೇತದ್ಭೂತ-ಜಾತಮೇಜತಿ ಕಂಪತೇ ವಿಶ್ವಾಹಾ ಸರ್ವದಾಪಶ್ಚ ಸ್ಯಂದಂತೇ ವಿಶ್ವಾಹಾ ಸರ್ವದಾ ಸೂರ್ಯಶ್ಚೋದೇತಿ । ಸಾ ಸತ್ಯೋಕ್ತಿರ್ಮಾಂ ಪರಿಪಾತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯತ್ರ**—ಎಲ್ಲಿ । **ದ್ಯಾವಾ ಚ**—ದ್ಯಾವಾಪೃಥಿವಿಗಳೂ । **ಅಹಾನಿ ಚ**—ಅಹೋರಾತ್ರಗಳೂ । **ತತನನ್**—ವಿಸ್ತೃತಿಯನ್ನು ಹೊಂದಿದವೋ । **ವಿಶ್ವಂ**—ಸಕಲವಾದ । **ಅನ್ಯತ್**—ಉಳಿದ ಭೂತಜಾತಗಳೂ । **ನಿ ವಿಶತೇ**—ಎಲ್ಲಿ ವಿಶ್ರಾಂತಿಯನ್ನು ಪಡೆಯುವುವೋ । **ಯತ್**—ಎಲ್ಲಿ ಸಕಲ ಲೋಕವೂ । **ಏಜತಿ**—ಕಂಪಿಸುವುದೋ । **ವಿಶ್ವಾಹಾ**—ಸರ್ವದಾ । **ಆಪಃ**—ಉದಕಗಳು ಪ್ರವಹಿಸುವುವೊ । **ವಿಶ್ವಾಹಾ**—ಸರ್ವದಾ । **ಸೂರ್ಯಃ**—ಸೂರ್ಯನೂ । **ಉದೇತಿ**—ಉದಯವನ್ನು ಹೊಂದುವನೋ ಅಂತಹ । **ಸಾ**—ಪ್ರಸಿದ್ಧವಾದ । **ಸತ್ಯೋಕ್ತಿಃ**—ಸತ್ಯಾತ್ಮಕವಾದ ವಾಕ್ಯವು । **ಮಾ**—ನನ್ನನ್ನು । **ವಿಶ್ವತಃ**—ಎಲ್ಲಕಡೆಗಳಿಂದಲೂ । **ಪರಿ ಪಾತು**—ರಕ್ಷಿಸಲಿ.

॥ ಭಾವಾರ್ಥ ॥

ಎಲ್ಲಿ ದ್ಯಾವಾಪೃಥಿವಿಗಳೂ ವಿಸ್ತೃತಿಯನ್ನು ಹೊಂದಿದವೋ, ಎಲ್ಲಿ ಸಕಲ ಭೂತಜಾತಗಳೂ ವಿಶ್ರಾಂತಿಯನ್ನು ಹೊಂದುವುವೋ, ಎಲ್ಲಿ ಸಕಲಲೋಕವೂ ಕಂಪಿಸುವುದೋ, ಯಾವುದರಿಂದ ಉದಕಗಳು ಸರ್ವದಾ ಪ್ರವಹಿಸುವುವೋ, ಯಾವುದರಿಂದ ಸರ್ವದಾ ಸೂರ್ಯನೂ ಉದಯವನ್ನು ಹೊಂದುವನೋ, ಅಂತಹ ಪ್ರಸಿದ್ಧವಾದ ಸತ್ಯಾತ್ಮಕವಾದ ವಾಕ್ಕು ನನ್ನನ್ನು ಎಲ್ಲಾ ಕಡೆಗಳಿಂದಲೂ ರಕ್ಷಿಸಲಿ.

English Translation

May that word of truth everywhere protect me, through which it is that the heaven and earth, and days and nights, all the rest of creation which trembles has rest (there); the waters daily (flow), the sun rise every day.

॥ ಸಂಹಿತಾಪಾಠಃ ॥

ನ ತೇ ಅದೇವಃ ಪ್ರದಿವೋ ನಿ ವಾಸತೇ ಯದೇತಶೇಭಿಃ ಪತರೈ ರಥರ್ಯಸಿ ಪ್ರಾಚೀನಮನ್ಯದನು ವರ್ತತೇ ರಜ ಉದನ್ಯೇನ ಜ್ಯೋತಿಷಾ ಯಾಸಿ ಸೂರ್ಯ ॥ ೩ ॥

ಪದಪಾಠಃ

ನ । ತೇ । ಅದೇವಃ । ಪ್ರಽದಿವಃ । ನಿ । ವಾಸತೇ । ಯತ್ । ಏತಶೇಭಿಃ । ಪತರೈಃ । ರಥರ್ಯಸಿ ಪ್ರಾಚೀನಂ । ಅನ್ಯತ್ । ಅನು । ವರ್ತತೇ । ರಜಃ । ಉತ್ । ಅನ್ಯೇನ । ಜ್ಯೋತಿಷಾ । ಯಾಸಿ ಸೂರ್ಯ ॥ ೩ ॥

॥ ಸಾಯಣಭಾಷ್ಯಂ ॥

ಹೇ ಸೂರ್ಯ ತೇ ತವ ಸಮೀಪೇ ಪ್ರದಿವಃ ಪ್ರತ್ನಃ ಪುರಾತನಃ ಕಶ್ಚಿದದೇವೋಽಸುರೋ ರಾಕ್ಷಸೋ ವಾ ನ ನಿ ವಾಸತೇ । ನ ನಿವಸತಿ । ಕದೇತ್ಯತ ಆಹ । ಯದ್ಯದಾ ತ್ವಂ ಪತತ್ರೈರ್ಗಮನಶೀಲೈರೇತಶೇಭಿರಶ್ವೈ ರಥರ್ಯಸಿ ರಥಂ ಕಾಮಯಸೇ ಯೋಕ್ತುಂ । ಕಿಂಚ ಪ್ರಾಚೀನಮನ್ಯತ್ತ್ವದೀಯಂ ಜ್ಯೋತೀ ರಜ ಉದಕಮನು ವರ್ತತೇ । ಅನ್ಯೇನ ತೇನ ಜ್ಯೋತಿಷೋದ್ಯಾಸಿ । ಉದೇಷಿ । ಯದ್ವಾ । ಪ್ರಾಚೀನಮನ್ಯದ್ರಜಶ್ಚಂದ್ರಾಖ್ಯಂ ಜ್ಯೋತಿಸ್ತ್ವಾಮನು ವರ್ತತೇ ಕತಸ್ತ್ವಮನ್ಯೇನ ಜ್ಯೋತಿಷಾ ಸಹೋದೇಷೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸೂರ್ಯ**—ಎಲೈ ಸೂರ್ಯದೇವನೇ । **ಯತ್**—ಯಾವಾಗ । **ಪತತ್ರೈಃ**—ವೇಗಗಾಮಿಗಳಾದ । **ಏತಶೇಭಿಃ**-ಅಶ್ವಗಳೊಡನೆ। **ರಥರ್ಯಸಿ**—ರಥವನ್ನು ಹೂಡಲಿಚ್ಛಿಸುವೆಯೋ ಆಗ । **ತೇ**—ನಿನ್ನ ಸಮೀಪದಲ್ಲಿ । **ಪ್ರದಿವಃ**—ಪುರಾತನನಾದ। **ಅದೇವಃ**—ಯಾವ ಅಸುರನೂ । **ನ ನಿವಾಸತೇ**—ವಾಸಮಾಡಲಾಗುವುದಿಲ್ಲ । **ಪ್ರಾಚೀನಂ**—ಪುರಾತನವಾದ । **ಅನ್ಯತ್ ರಜಃ**—ಬೇರೊಂದು ಜ್ಯೋತಿಯು । **ಅನು ವರ್ತತೇ**—ನಿನ್ನನ್ನು ಹಿಂಬಾಲಿಸುತ್ತದೆ । **ಅನ್ಯೇನ ಜ್ಯೋತಿಷಾ**—ಮತ್ತೊಂದು ಜ್ಯೋತಿಯಿಂದ ಕೂಡಿ । **ಉತ್ ಯಾಸಿ**—ನೀನು ಉದಯಿಸುತ್ತೀಯೆ.

॥ ಭಾವಾರ್ಥ ॥

ಎಲೈ ಸೂರ್ಯದೇವನೇ, ಯಾವಾಗ ನೀನು ವೇಗಗಾಮಿಗಳಾದ ಅಶ್ವಗಳೊಡನೆ ನಿನ್ನ ರಥವನ್ನು ಹೂಡಲಿಚ್ಛಿಸುವೆಯೋ, ಆಗ ನಿನ್ನ ಸಮೀಪದಲ್ಲಿ ಪುರಾತನನಾದ ಯಾವ ಅಸುರನೂ ವಾಸಮಾಡಲಾಗುವುದಿಲ್ಲ. ಪುರಾತನವಾದ ಬೇರೊಂದು ಜ್ಯೋತಿಯು ನಿನ್ನನ್ನು ಅನುಸರಿಸಿದರೆ, ನೀನು ಬೇರೊಂದು **ಜ್ಯೋತಿಯೊಡಗೂಡಿ** ಉದಯಿಸುತ್ತೀಯೆ.

English Translation

No ancient Rakshasa abides, Surya, near you when you desire to yoke to your chariot your rapid steeds: one ancient radiance follows (you) whilst you rise with another.

ಸಂಹಿತಾಪಾಠಃ ॥

ಯೇನ ಸೂರ್ಯ ಜ್ಯೋತಿಷಾ ಬಾಧಸೇ ತಮೋ ಜಗಚ್ಚ ವಿಶ್ವಮುದಿಯರ್ಷಿ ಭಾನುನಾ ।

ತೇನಾಸ್ಮದ್ವಿಶ್ವಾಮನಿರಾಮನಾಹುತಿಮಪಾಮೀವಾಮಪ ದುಷ್ಷ್ವಪ್ನ್ಯಂ
ಸುವ ॥ ೪ ॥

॥ ಪದಪಾಠಃ ॥

ಯೇನ । ಸೂರ್ಯ । ಜ್ಯೋತಿಷಾ । ಬಾಧಸೇ । ತಮಃ । ಜಗತ್ । ಚ । ವಿಶ್ವಂ । ಉತ್ऽಇಯರ್ಷಿ
ಭಾನುನಾ ।

ತೇನ । ಅಸ್ಮತ್ । ವಿಶ್ವಾಂ । ಅನಿರಾಂ । ಅನಾಹುತಿಂ । ಅಪ । ಅಮೀವಾಂ । ಅಪ । ದುಃऽಸ್ವಪ್ನ್ಯಂ
ಸುವ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸೂರ್ಯ ತ್ವಂ ಯೇನ ಜ್ಯೋತಿಷಾ ತೇಜಸಾ ತಮೋऽಂಧಕಾರಂ ಬಾಧಸೇ ನಿವಾರಯಸಿ ಯೇನ ಚ ಭಾನುನಾ ತೇಜಸಾ ವಿಶ್ವಂ ಸರ್ವಂ ಜಗಜ್ಜಂಗಮಮುದಿಯರ್ಷಿ ಉದ್ಗಮಯಸಿ ತೇ ಜ್ಯೋತಿಷಾಸ್ಮದಸ್ಮತ್ತೋऽನಿರಾಮನ್ನಾಭಾವಮನಾಹುತಿಮಹೋಮಂ ಚಾಮೀವಾಂ ರೋಗಜಾತ ಚಾಪ ಸುವ । ಅಪಗಮಯ । ದುಃಸ್ವಪ್ನ್ಯಂ ದುಃಸ್ವಪ್ನಪ್ರಭವಮನಿಷ್ಟಂ ಚಾಪ ಸುವ ॥

॥ ಪ್ರತಿಪದಾರ್ಥ ॥

ಸೂರ್ಯ—ಎಲೈ ಸೂರ್ಯದೇವನೇ । ಯೇನ ಜ್ಯೋತಿಷಾ—ಯಾವ ತೇಜಸ್ಸಿನಿಂದ । ತಮಃ—ಅಂಧಕಾರವನ್ನು । ಬಾಧಸೇ—ನಾಶಪಡಿಸುವೆಯೋ । ಚ—ಮತ್ತು । ಭಾನುನಾ—ಯಾವ ತೇಜಸ್ಸಿನಿಂದ । ವಿಶ್ವಂ ಜಗತ್—ಸಕಲ ಜಗತ್ತನ್ನೂ । ಉದಿಯರ್ಷಿ—ಪ್ರೇರಿಸುವೆಯೋ । ತೇನ—ಆ ತೇಜಸ್ಸಿನಿಂದ । ಅಸ್ಮತ್—ನಮ್ಮಿಂದ । ಅನಿರಾಂ—ಅನ್ನಾಭಾವವನ್ನೂ । ಅನಾಹುತಿಂ—ಆಹುತಿಯ ಅಭಾವವನ್ನೂ । ಅಮೀವಾಂ—ರೋಗವನ್ನೂ । ಅಪ ಸುವ—ಹೋಗಲಾಡಿಸು। ದುಃಸ್ವಪ್ನ್ಯಂ ಅಪ—ದುಸ್ವಪ್ನದ ಫಲವನ್ನು ಹೋಗಲಾಡಿಸು

॥ ಭಾವಾರ್ಥ ॥

ಎಲೈ ಸೂರ್ಯದೇವನೇ, ಯಾವ ತೇಜಸ್ಸಿನಿಂದ ನೀನು ಅಂಧಕಾರವನ್ನು ನಾಶಪಡಿಸುವೆಯೋ, ಮತ್ತು ಯಾವ ತೇಜಸ್ಸಿನಿಂದ ಸಕಲ ಜಗತ್ತನ್ನು ಪ್ರೇರಿಸುವೆಯೋ, ಆ ತೇಜಸ್ಸಿನಿಂದ ನಮ್ಮಿಂದ ಅನ್ನಾಭಾವವನ್ನೂ ಆಹುತಿಯ ಅಭಾವವನ್ನೂ, ರೋಗವನ್ನೂ ಹೋಗಲಾಡಿಸು. ಕೆಟ್ಟ ಕನಸಿನ ಫಲವು ನಮಗಂಟದಿರುವಂತೆ ಮಾಡು.

English Translation

With that light, Surya, with which you disperse the darkness, and with that radiance with which you quicken every moving thing, remove from us all famine, neglect of oblations, sickness, and evil dreams.

॥ ಸಂಹಿತಾಪಾಠಃ ॥

ವಿಶ್ವಸ್ಯ ಹಿ ಪ್ರೇಷಿತೋ ರಕ್ಷಸಿ ವ್ರತಮಹೇಳಯನ್ನುಚ್ಚರಸಿ ಸ್ವಧಾ ಅನು ।
ಯದದ್ಯ ತ್ವಾ ಸೂರ್ಯೋಪಬ್ರವಾಮಹೈ ತಂ ನೋ ದೇವಾ ಅನು
ಮಂಸೀರತ ಕ್ರತುಂ ॥ ೫ ॥

॥ ಪದಪಾಠಃ ॥

ವಿಶ್ವಸ್ಯ । ಹಿ । ಪ್ರಽಇಷಿತಃ । ರಕ್ಷಸಿ । ವ್ರತಂ । ಅಹೇಳಯನ್ । ಉತ್ಽಚರಸಿ । ಸ್ವಧಾಃ । ಅನು ।
ಯತ್ । ಅದ್ಯ । ತ್ವಾ । ಸೂರ್ಯ । ಉಪಽಬ್ರವಾಮಹೈ । ತಂ । ನಃ । ದೇವಾಃ । ಅನು । ಮಂಸೀರತ ।
ಕ್ರತುಂ

॥ ಸಾಯಣಭಾಷ್ಯಂ ॥

ಹೇ ಸೂರ್ಯ ಪ್ರೇಷಿತಃ ಪ್ರೇರಿತಸ್ತ್ವಮಹೇಳಯನ್ನಕ್ರುಧ್ಯನ್ವಿಶ್ವಸ್ಯ ಸರ್ವಸ್ಯ ಯಜಮಾನಸ್ಯ ವ್ರತಂ ಕರ್ಮ ರಕ್ಷಸಿ ಹಿ । ಯಜ್ಞವಿಧ್ವಂಸಕೇಭ್ಯೋ ರಾಕ್ಷಸೇಭ್ಯಃ ಪಾಲಯಸಿ । ಸ್ವಧಾ ಹವೀಂಷ್ಯನೂಚ್ಚರಸಿ । ಉದ್ಗಚ್ಛಸಿ ಚ । ಪ್ರಾತರ್ಹೋಮೇ ನಿವೃತ್ತೇ ಸತಿ ಪಶ್ಚಾದುದ್ಗಚ್ಛಸೀತ್ಯರ್ಥಃ । ತಥಾ ಚ ಯದ್ಯದಾದ್ಯಾಸ್ಮಿನ್ನಹನಿ ತ್ವಾ ತ್ವಾಮುಪಬ್ರವಾಮಹೈ ಉಪಬ್ರೂಮಃ ತದಾ ನೋಽಸ್ಮಾಕಂ ತಂ ಕ್ರತುಂ ತತ್ಕರ್ಮ ದೇವಾ ಇಂದ್ರಾದಯೋಽನು ಮಂಸೀರತ । ಅನುಮನ್ಯಂತಾಂ ॥

॥ ಪ್ರತಿಪದಾರ್ಥ ॥

**ಸೂರ್ಯ**—ಎಲೈ ಸೂರ್ಯದೇವನೇ । **ಪ್ರೇಷಿತಃ**—ಪ್ರಾರ್ಥಿತನಾದ ನೀನು । **ಅಹೇಳಯನ್**—ಕೋಪಗೊಳ್ಳದೆ । **ವಿಶ್ವಸ್ಯ**—ಸಕಲವಾದ । **ವ್ರತಂ**—ಕರ್ಮವನ್ನು । **ರಕ್ಷಸಿ ಹಿ**—ಖಂಡಿತ ರಕ್ಷಿಸುತ್ತೀಯೆ । **ಸ್ವಧಾಃ ಅನು**—ಸ್ವಧಾಹುತಿಯ ಅರ್ಪಣವಾದನಂತರ । **ಉಚ್ಚರಿಸಿ**—ಉದಯಿಸಿ ಬರುತ್ತೀಯೆ । **ಅದ್ಯ**-ಇಂದು । **ಯದಾ**-ಯಾವಾಗ । **ತ್ವಾ**—ನಿನ್ನನ್ನು । **ಉಪಬ್ರವಾಮಹೈ**—ಪ್ರಾರ್ಥಿಸಿ ಕರೆಯುವೆವೋ ಆಗ । **ನಃ**—ನಮ್ಮ । **ತಂ ಕ್ರತುಂ**—ಕರ್ಮವನ್ನು । **ದೇವಾಃ**—ಇಂದ್ರಾದಿದೇವತೆಗಳು । **ಅನು ಮಂಸೀರತ**—ಅನುಮೋದಿಸಲಿ.

॥ ಭಾವಾರ್ಥ ॥

ಎಲೈ ಸೂರ್ಯದೇವನೇ, ಜಗತ್ತಿನಿಂದ ಪ್ರಾರ್ಥಿತನಾದ ನೀನು ಕೋಪಗೊಳ್ಳದೇ, ಸಕಲ ಕರ್ಮವನ್ನು ರಕ್ಷಿಸುತ್ತೀಯೆ. ಸ್ವಧಾಹುತಿಯ ಅರ್ಪಣವಾದನಂತರ ಉದಯಿಸಿ ಬರುತ್ತೀಯೆ. ನಾವು ಇಂದು ಯಾವಾಗ ನಿನ್ನನ್ನು ಪ್ರಾರ್ಥಿಸಿ ಕರೆಯುವೆವೋ, ಆಗ ನಮ್ಮ ಕರ್ಮವನ್ನು ಇಂದ್ರಾದಿದೇವತೆಗಳು ಅನುಮೋದಿಸಲಿ.

English Translation

when invoked, you who are gentle protect the rite of every (wor shipper): you rise after the swadha offerings; when to-day we call upon you, may the gods be propitious to our sacred acts.

॥ ಸಂಹಿತಾಪಾಠಃ ॥

ತಂ ನೋ ದ್ಯಾವಾಪೃಥಿವೀ ತನ್ನ ಆಪ ಇಂದ್ರಃ ಶೃಣ್ವಂತು ಮರುತೋ ಹವಂ

ವಚಃ ।

ಮಾ ಶೂನೇ ಭೂಮ ಸೂರ್ಯಸ್ಯ ಸಂದೃಶಿ ಭದ್ರಂ ಜೀವಂತೋ ಜರಣಾ-

ಮಶೀಮಹಿ ॥ ೬ ॥

॥ ಪದಪಾಠಃ ॥

ತಂ । ನಃ । ದ್ಯಾವಾಪೃಥಿವೀ ಇತಿ । ತತ್ । ನಃ । ಆಪಃ । ಇಂದ್ರಃ । ಶೃಣ್ವಂತು । ಮರುತಃ । ಹವಂ

ವಚಃ ॥

ಮಾ । ಶೂನೇ । ಭೂಮ । ಸೂರ್ಯಸ್ಯ । ಸಂऽದೃಶಿ । ಭದ್ರಂ । ಜೀವಂತಃ । ಜರಣಾಂ । ಅಶೀಮಹಿ ॥

॥ ಸಾಯಣಭಾಷ್ಯಂ ॥

ದ್ಯಾವಾಪೃಥಿವೀ ದ್ಯಾವಾಪೃಥಿವ್ಯಾವಾಪಶ್ಚೇಂದ್ರಶ್ಚ ಮರುತಶ್ಚ ನೋಽಸ್ಮಾಕಂ ತಂ ಹವಮಾಹ್ವಾನಂ ನೋಽಸ್ಮಾಕಂ ತದ್ವಚಃ ಸ್ತುತಿರೂಪಂ ವಾಕ್ಯಂ ಚ । ನ ಇತಿ ದ್ವಿರುಕ್ತಿರಾದರಾರ್ಥಾ । ಶೃಣ್ವಂತು । ಕಿಂಚ ವಯಂ ಸೂರ್ಯಸ್ಯ ಸಂದೃಶಿ ಸಂದರ್ಶನೇ ಶೂನೇ ಪ್ರವೃದ್ಧಾಯ ದುಃಖಾಯ ಮಾ ಭೂಮ । ಮೈವ ಭವೇಮ । ಕಿಂತು ಜೀವಂತಶ್ಚಿರಂ ಪ್ರಾಣಾನ್ಧಾರಯಂತೋ ವಯಂ ಭದ್ರಂ ಕಲ್ಯಾಣಂ ಜರಣಾಂ ವೃದ್ಧತ್ವಮಮರತ್ವಂ ಚಾಶೀಮಹಿ । ಪ್ರಾಪ್ನುಯಾಮ ॥

॥ ಪ್ರತಿಪದಾರ್ಥ ॥

ದ್ಯಾವಾಪೃಥಿವೀ—ದ್ಯಾವಾಪೃಥಿವಿಗಳೂ । ಆಪಃ—ಅಬ್ದೇವತೆಗಳೂ । ಇಂದ್ರಃ—ಇಂದ್ರನೂ । ಮರುತಃ—ಮರುತ್ತುಗಳೂ । ನಃ—ನಮ್ಮ । ತಂ ಹವಂ—ಆಹ್ವಾನವನ್ನೂ । ನಃ—ನಮ್ಮ । ತತ್ ವಚಃ — ಪ್ರಸಿದ್ಧವಾದ ಸ್ತುತಿಯನ್ನೂ । ಶೃಣ್ವಂತು—ಕೇಳಲಿ । ಸೂರ್ಯಸ್ಯ—ಸೂರ್ಯನ । ಸಂದೃಶಿ—ದೃಷ್ಟಿಗೆ ನಾವು

ವಿಷಯರಾದಾಗ । **ಶೂನೇ**—ಅಧಿಕವಾದ ದುಃಖಕ್ಕೆ । **ಮಾ ಭೂಮ**—ನಾವು ಪಾತ್ರರಾಗದಂತಿರೋಣ । **ಜೀವಂತಃ**—ನಾವು ಜೀವವಂತರಾಗಿದ್ದು । **ಭದ್ರಂ**—ಕಲ್ಯಾಣಾತ್ಮಕವಾದ । **ಜರಣಾಂ**—ಮುಪ್ಪನ್ನು । **ಅಶೀಮಹಿ**—ಹೊಂದುವಂತಾಗಲಿ.

॥ ಭಾವಾರ್ಥ ॥

ದ್ಯಾವಾಪೃಥಿವಿಗಳೂ, ಅಬ್ದೇವತೆಗಳೂ, ಇಂದ್ರನೂ, ಮರುತ್ತುಗಳೂ ನಮ್ಮ ಆಹ್ವಾನವನ್ನೂ, ನಮ್ಮ ಪ್ರಸಿದ್ಧವಾದ ಸ್ತುತಿಯನ್ನೂ ಕೇಳಲಿ. ಸೂರ್ಯನ ದೃಷ್ಟಿಗೆ ನಾವು ವಿಷಯರಾದಾಗ ಅಧಿಕವಾದ ದುಃಖಕ್ಕೆ ನಾವು ಪಾತ್ರರಾಗದಂತೆ ಇರೋಣ. ನಾವು ಜೀವಂತರಾಗಿದ್ದು ಕಲ್ಯಾಣಾತ್ಮಕವಾದ ಮುಪ್ಪನ್ನು ಹೊಂದುವಂತಾಗಲಿ. (ಮುಪ್ಪಿನ ವರೆಗೆ ಕಲ್ಯಾಣವನ್ನು ಹೊಂದುವಂತಾಗಲಿ.)

## English Translation

May heaven and earth, may the waters, may Indra, and the Maruts, hear this our invocation and this our praise: may we not be in sorrow at the sight of the Sun: living long, may we attain a prosperous old age.

। ಸಂಹಿತಾಪಾಠಃ ।

ವಿಶ್ವಾಹಾ ತ್ವಾ ಸುಮನಸಃ ಸುಚಕ್ಷಸಃ ಪ್ರಜಾವಂತೋ ಅನಮೀವಾ ಅನಾಗಸಃ ।
ಉದ್ಯಂತಂ ತ್ವಾ ಮಿತ್ರಮಹೋ ದಿವೇದಿವೇ ಜ್ಯೋಗ್ಜೀವಾಃ ಪ್ರತಿ ಪಶ್ಯೇಮ ಸೂರ್ಯ ॥ ೭ ॥

। ಪದಪಾಠಃ ।

ವಿಶ್ವಾಹಾ । ತ್ವಾ । ಸುಽಮನಸಃ । ಸುಽಚಕ್ಷಸಃ । ಪ್ರಜಾಽವಂತಃ । ಅನಮೀವಾಃ । ಅನಾಗಸಃ ।
ಉತ್ಽಯಂತಂ । ತ್ವಾ । ಮಿತ್ರಽಮಹಃ । ದಿವೇಽದಿವೇ । ಜ್ಯೋಕ್ । ಜೀವಾಃ । ಪ್ರತಿ । ಪಶ್ಯೇಮ । ಸೂರ್ಯ ॥ ೭ ॥

। ಸಾಯಣಭಾಷ್ಯಂ ।

ಹೇ ಸೂರ್ಯ ತ್ವಾ ತ್ವಾಂ ಸುಮನಸಃ ಪ್ರೀತಿಯುಕ್ತಮನಸ್ಕಾಃ ಸುಚಕ್ಷಸಃ ಸುದರ್ಶನಾಃ ಪ್ರಜಾವಂತಃ ಪುತ್ರಾದ್ಯುಪೇತಾ ಅನಮೀವಾ ರೋಗರಹಿತಾ ಅನಾಗಸೋಽಪರಾಧವರ್ಜಿತಾಶ್ಚ ವಯಂ ವಿಶ್ವಾಹಾ ಸರ್ವದಾ ಯಜೇಮೇತಿ ಶೇಷಃ । ಕಿಂಚ ಹೇ ಮಿತ್ರಮಹೋ ಮಿತ್ರಾಣಾಂ ಪೂಜಯಿತಃ

ಸೂರ್ಯ ದಿವೇದಿವೇ ಪ್ರತಿದಿನಮುದ್ಯಂತಮುದಯಂ ಪ್ರಾಪ್ನುವಂತಂ ತ್ವಾ ತ್ವಾಂ ಜ್ಯೋಕ್ ಚಿರಂ ಜೀವಾ ಜೀವಂತೋ ವಯಂ ಪ್ರತಿ ಪಶ್ಯೇಮ ||

|| ಪ್ರತಿಪದಾರ್ಥ ||

**ಸೂರ್ಯ**—ಎಲೈ ಸೂರ್ಯನೇ | **ಸುಮನಸಃ**—ಶುದ್ಧವಾದ ಮನಸ್ಸುಳ್ಳವರೂ | **ಸುಚಕ್ಷಸಃ**—ಉತ್ತಮವಾದ ದೃಷ್ಟಿಯುಳ್ಳವರೂ | **ಪ್ರಜಾವಂತಃ**—ಪುತ್ರಾದಿಗಳಿಂದ ಕೂಡಿದವರೂ | **ಅನಮೀವಾಃ**—ರೋಗರಹಿತರೂ **ಅನಾಗಸಃ**—ಪಾಪರಹಿತರೂ ಆದ ನಾವು | **ತ್ವಾ**—ನಿನ್ನನ್ನು | **ವಿಶ್ವಾಹಾ**—ಸಕಲದಿನಗಳಲ್ಲಿಯೂ ಪೂಜಿಸುವೆವು **ಮಿತ್ರಮಹಃ**—ಮಿತ್ರರಿಗೆ ಅನುಗ್ರಹವನ್ನು ನೀಡುವ ! **(ಸೂರ್ಯ)**—ಎಲೈ ಸೂರ್ಯನೇ | **ದಿವೇದಿವೇ**—ಪ್ರತಿದಿನವೂ | **ಉದ್ಯಂತಂ**—ಉದಯವನ್ನು ಹೊಂದುತ್ತಿರುವ | **ತ್ವಾ**—ನಿನ್ನನ್ನು | **ಜೀವಾಃ**—ಜೀವವಂತರಾಗಿರುವ ನಾವು | **ಜ್ಯೋಕ್**—ಅನೇಕಕಾಲ | **ಪ್ರತಿ ಪಶ್ಯೇಮ**—ನೋಡುವಂತಾಗಲಿ.

|| ಭಾವಾರ್ಥ ||

ಎಲೈ ಸೂರ್ಯನೇ, ಶುದ್ಧವಾದ ಮನಸ್ಸುಳ್ಳವರೂ, ಉತ್ತಮವಾದ ದೃಷ್ಟಿಯುಳ್ಳವರೂ, ಪುತ್ರಾದಿಗಳಿಂದ ಕೂಡಿದವರೂ ರೋಗರಹಿತರೂ, ಪಾಪರಹಿತರೂ ಆದ ನಾವು ನಿನ್ನನ್ನು ಸಕಲದಿನಗಳಲ್ಲಿಯೂ ಪೂಜಿಸುವೆವು ಮಿತ್ರರಿಗೆ ಅನುಗ್ರಹವನ್ನು ನೀಡುವ ಎಲೈ ಸೂರ್ಯನೇ, ಪ್ರತಿದಿನವೂ ಉದಯವನ್ನು ಹೊಂದುತ್ತಿರುವ ನಿನ್ನನ್ನು ಜೀವವಂತರಾಗಿರುವ ನಾವು ಅನೇಕಕಾಲ ನೋಡುವಂತಾಗಲಿ.

## English Translation

May we, constantly happy in mind, sound of sight, blessed with posterity, exempt from sickness, devoid of sin, daily (worship you) : may we, enjoying long life, behold you, Surya, who are the cherisher of your friends rising day by day.

| ಸಂಹಿತಾಪಾಠಃ |

ಮಹಿ ಜ್ಯೋತಿರ್ಬಿಭ್ರತಂ ತ್ವಾ ವಿಚಕ್ಷಣ ಭಾಸ್ವಂತಂ ಚಕ್ಷುಷೇಚಕ್ಷುಷೇ ಮಯಃ |
ಆರೋಹಂತಂ ಬೃಹತಃ ಪಾಜಸಸ್ಪರಿ ವಯಂ ಜೀವಾಃ ಪ್ರತಿ ಪಶ್ಯೇಮ ಸೂರ್ಯ || ೮ ||

|| ಪದಪಾಠಃ ||

ಮಹಿ | ಜ್ಯೋತಿಃ | ಬಿಭ್ರತಂ | ತ್ವಾ | ವಿಽಚಕ್ಷಣ | ಭಾಸ್ವಂತಂ | ಚಕ್ಷುಷೇಽಚಕ್ಷುಷೇ | ಮಯಃ |
ಆಽರೋಹಂತಂ | ಬೃಹತಃ | ಪಾಜಸಃ | ಪರಿ | ವಯಂ | ಜೀವಾಃ | ಪ್ರತಿ | ಪಶ್ಯೇಮ | ಸೂರ್ಯ ||೮||

॥ ಸಾಯಣಭಾಷ್ಯಂ ॥

ಹೇ ವಿಚಕ್ಷಣ ವಿದ್ರಷ್ಟಃ ಸೂರ್ಯ ಮಹಿ ಮಹಜ್ಜ್ಯೋತಿಸ್ತೇಜೋ ಬಿಭ್ರತಂ ಧಾರಯಂತಂ ಭಾಸ್ವಂತಂ ದೀಪ್ತಿಮಂತಂ ಚಕ್ಷುಷೇ ಚಕ್ಷುಷೇ ಸರ್ವೇಷಾಂ ದ್ರಷ್ಟೄಣಾಂ ಚಕ್ಷುಷೇ ಮಯಃ ಸುಖಕರಂ ಬೃಹತೋ ಮಹತಃ ಪಾಜಸೋ ಬಲವತಃ ಪರಿ। ಮಹತೋ ಬಲವತಃ ಸಮುದ್ರಸ್ಯೋದಕಸ್ಯೋಪರೀ- ತ್ಯರ್ಥಃ। ಆರೋಹಂತಂ ತ್ವಾ ತ್ವಾಂ ಜೀವಾಶ್ಚಿರಂ ಜೀವಂತೋ ವಯಂ ಪ್ರತಿ ಪ್ರತಿದಿನಂ ಪಶ್ಯೇಮ ॥

॥ ಪ್ರತಿಪದಾರ್ಥ ॥

ವಿಚಕ್ಷಣ—ಎಲ್ಲವನ್ನೂ ಸೂಕ್ಷ್ಮವಾಗಿ ಪರಿಶೀಲಿಸುವ । ಸೂರ್ಯ—ಎಲೈ ಸೂರ್ಯನೇ । ಮಹಿ— ಮಹತ್ತಾದ । ಜ್ಯೋತಿಃ—ತೇಜಸ್ಸನ್ನು । ಬಿಭ್ರತಂ—ಧರಿಸಿರುವವನೂ । ಭಾಸ್ವಂತಂ—ಪ್ರಭಾಯುತನೂ । ಚಕ್ಷುಷೇ ಚಕ್ಷುಷೇ—ನಿನ್ನನ್ನು ನೋಡುವ ಸಕಲರ ಕಣ್ಣಿಗೂ । ಮಯಃ—ಸುಖಕರನೂ । ಬೃಹತಃ— ಮಹತ್ತಾದುದೂ । ಪಾಜಸಃ ಪರಿ—ಶಕ್ತಿಯುತವಾದುದೂ ಆದ ಉದಕದ ಮೇಲ್ಭಾಗದಲ್ಲಿ । ಆರೋಹಂತಂ— ಹತ್ತುವವನೂ ಆದ । ತ್ವಾ—ನಿನ್ನನ್ನು । ಜೀವಾಃ—ಜೀವವಂತರಾಗಿರುವ । ವಯಂ—ನಾವು । ಪ್ರತಿ ಪಶ್ಯೇಮ—ಅನೇಕಕಾಲ ನೋಡುವಂತಾಗಲಿ.

ಭಾವಾರ್ಥ ॥

ಎಲ್ಲವನ್ನೂ ಸೂಕ್ಷ್ಮವಾಗಿ ಪರಿಶೀಲಿಸುವ ದೃಷ್ಟಿಯುಳ್ಳ ಎಲೈ ಸೂರ್ಯನೇ, ಮಹತ್ತಾದ ತೇಜಸ್ಸನ್ನು ಧರಿಸಿರುವವನೂ, ಪ್ರಭಾಯುತನೂ, ನಿನ್ನನ್ನು ನೋಡುವ ಸಕಲರ ಕಣ್ಣಿಗೂ ಸುಖಕರನೂ, ಮಹತ್ತಾದುದೂ ಶಕ್ತಿಯುತವಾದುದೂ ಆದ ಉದಕದ (ಸಮುದ್ರದ) ಮೇಲ್ಭಾಗದಲ್ಲಿ ಹತ್ತುವವನೂ ಆದ ನಿನ್ನನ್ನು ಜೀವವಂತರಾಗಿರುವ ನಾವು ಅನೇಕಕಾಲ ನೋಡುವಂತಾಗಲಿ.

English Translation

May we, enjoying (long) life, day by day behold you, Surya, who glance over all things, invested with great lustre, radiant, giving joy to every eye, and rising above the vast and mighty (ocean).

ಸಂಹಿತಾಪಾಠಃ ॥

ಯಸ್ಯ ತೇ ವಿಶ್ವಾ ಭುವನಾನಿ ಕೇತುನಾ ಪ್ರ ಚೇರತೇ ನಿ ಚ ವಿಶಂತೇ ಅಕ್ತುಭಿಃ ॥

ಅನಾಗಾಸ್ತ್ವೇನ ಹರಿಕೇಶ ಸೂರ್ಯಾಹ್ನಾಹ್ನಾ ನೋ ವಸ್ಯಸಾವಸ್ಯಸೋದಿಹಿ ॥

॥ ಪದಪಾಠಃ ॥

ಯಸ್ಯ । ತೇ । ವಿಶ್ವಾ । ಭುವನಾನಿ । ಕೇತುನಾ । ಪ್ರ । ಚ । ಈರತೇ । ನಿ । ಚ । ವಿಶಂತೇ ಅಕ್ತುಽಭಿಃ ।

ಅನಾಗಾಃಽತ್ವೇನ । ಹರಿಽಕೇಶ । ಸೂರ್ಯ । ಅಹ್ನಾಽಅಹ್ನಾ । ನಃ । ವಸ್ಯಸಾಽವಸ್ಯಸಾ । ಉತ್ ಇಹಿ ॥ ೯ ॥

॥ ಸಾಯಣಭಾಷ್ಯಂ ॥

ಹೇ ಹರಿಕೇಶ ಹರಿತವರ್ಣಕೇಶ ಸೂರ್ಯ ಯಸ್ಯ ತೇ ತವ ಕೇತುನಾ ಪ್ರಜ್ಞಾನೇನ ವಿಶ್ವಾ ವಿಶ್ವಾನಿ ಭುವನಾನಿ ಭೂತಜಾತಾನಿ ಪ್ರ ಚೇರತೇ ಪ್ರಕರ್ಷೇಣ ಗಚ್ಛಂತಿ ಅಕ್ತುಭೀ ರಾತ್ರಿಭಿರ್ನಿ ವಿಶಂತೇ ಚ ವಿಶ್ರಾಮ್ಯಂತಿ ಚ । ಸ್ವಪಂತೀತ್ಯರ್ಥಃ । ಸ ತ್ವಂ ನೋಽಸ್ಮಾಕಮನಾಗಾಸ್ತ್ವೇನಾಪರಾಧವರ್ಜಿತತ್ವೇನ ವಸ್ಯಸಾ ವಸ್ಯಸಾತ್ಯಂತಶ್ರೇಯಸ್ಕರೇಣ ವಸುಮತ್ತರೇಣ ನಾಹ್ನಾಹ್ನಾ ತೇನ ತೇನ ದಿವಸೇನೋದಿಹಿ ಉದ್ಗಚ್ಛ ॥

॥ ಪ್ರತಿಪದಾರ್ಥ ॥

**ಹರಿಕೇಶ**—ಕೇಶಗಳಂತಿರುವ ಹೊಂಬಣ್ಣದ ರಶ್ಮಿಗಳುಳ್ಳ । **ಸೂರ್ಯ**—ಎಲೈ ಸೂರ್ಯನೇ । **ಯಸ್ಯ ತೇ**—ಯಾವ ನಿನ್ನ । **ಕೇತುನಾ**—ಪ್ರಜ್ಞಾಪನದಿಂದ । **ವಿಶ್ವಾ ಭುವನಾನಿ**—ಸಕಲ ಭೂತಜಾತಗಳೂ । **ಪ್ರ ಚ ಈರತೇ**—ತಮ್ಮ ವ್ಯವಹಾರಗಳಿಗಾಗಿ ಚಲಿಸುತ್ತಲೂ । **ಅಕ್ತುಭಿಃ**—ರಾತ್ರಿಕಾಲಗಳಲ್ಲಿ । **ನಿ ವಿಶಂತೇ ಚ**—ವಿಶ್ರಾಂತಿಗಾಗಿ ನಿದ್ರಿಸುತ್ತಲೂ ಇರುವುವೋ ಅಂತಹ ನೀನು । **ನಃ**—ನಮಗಾಗಿ । **ಅನಾಗಸ್ತ್ವೇನ**—ಪಾಪರಾಹಿತ್ಯವನ್ನುಂಟುಮಾಡುವುದೂ । **ವಸ್ಯಸಾವಸ್ಯಸಾ**—ಅತ್ಯಂತ ಶ್ರೇಯಸ್ಕರವಾದ ಧನಸಂಪಾದಕವಾದುದೂ ಆದ **ಅಹ್ನಾಹ್ನಾ**—ಪ್ರತಿದಿನದಲ್ಲಿಯೂ । ಉದಿಹಿ—ಉದಯಿಸಿ ಬಾ.

॥ ಭಾವಾರ್ಥ ॥

ಕೇಶಗಳಂತಿರುವ ಹೊಂಬಣ್ಣದ ರಶ್ಮಿಗಳುಳ್ಳ ಎಲೈ ಸೂರ್ಯನೇ, ಯಾವ ನಿನ್ನ ಪ್ರಜ್ಞಾಪನದಿಂದ ಸಕಲ ಭೂತಜಾತಗಳೂ ತಮ್ಮ ವ್ಯವಹಾರಗಳಿಗಾಗಿ ಚಲಿಸುತ್ತಲೂ, ರಾತ್ರಿಕಾಲಗಳಲ್ಲಿ ವಿಶ್ರಾಂತಿಗಾಗಿ ನಿದ್ರಿಸುತ್ತಲೂ ಇರುವುವೋ ಅಂತಹ ನೀನು ನಮಗಾಗಿ ಪಾಪರಾಹಿತ್ಯವನ್ನುಂಟುಮಾಡುವುದೂ, ಅತ್ಯಂತ ಶ್ರೇಯಸ್ಕರವಾದ ಧನಸಂಪಾದಕವಾದುದೂ ಆದ ಎಲ್ಲಾ ದಿನಗಳಲ್ಲಿಯೂ ಉದಯಿಸಿ ಬಾ.

## English Translation

Golden-haired Surya, by whose guidance all beings move (by day) and repose by night, you come to us with freedom from sin, and more felicitous (life) every day.

॥ ಸಂಹಿತಾಪಾಠಃ ॥

ಶಂ ನೋ ಭವ ಚಕ್ಷಸಾ ಶಂ ನೋ ಅಹ್ನಾ ಶಂ ಭಾನುನಾ ಶಂ ಹಿಮಾ ಶಂ ಘೃಣೇನ ।

ಯಥಾ ಶಮಧ್ವಞ್ಛಮಸದ್ದುರೋಣೇ ತತ್ಸೂರ್ಯ ದ್ರವಿಣಂ ಧೇಹಿ ಚಿತ್ರಂ ॥

॥ ಪದಪಾಠ ॥

ಶಂ । ನಃ । ಭವ । ಚಕ್ಷಸಾ । ಶಂ । ನಃ । ಅಹ್ನಾ । ಶಂ । ಭಾನುನಾ । ಶಂ । ಹಿಮಾ । ಶಂ । ಘೃಣೇನ ।

ಯಥಾ । ಶಂ । ಅಧ್ವನ್ । ಶಂ । ಅಸತ್ । ದುರೋಣೇ । ತತ್ । ಸೂರ್ಯ । ದ್ರವಿಣಂ । ಧೇಹಿ । ಚಿತ್ರಂ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಸೂರ್ಯ ತ್ವಂ ಚಕ್ಷಸಾ ತೇಜಸಾ ನೋಽಸ್ಮಾಕಂ ಶಂ ಸುಖಕರೋ ಭವ । ಅಹ್ನಾ ದಿವಸೇನ ಚ ಶಂ ಸುಖಕರೋ ನೋಽಸ್ಮಾಕಂ ಭವ । ಭಾನುನಾ ರಶ್ಮಿನಾ ಚ ಶಂ ಭವ । ಅಸ್ಮಾಕಂ ಸುಖಕರೋ ಭವ । ಹಿಮಾ ಶೈತ್ಯೇನ ಚ ಶಂ ಭವ । ಘೃಣೇನೌಷ್ಣ್ಯೇನ ಚ ಶಂಕರೋ ಭವ । ಯಥಾ ಯಾದೃಶೇನ ನೋಽಸ್ಮಾಕಮಧ್ವನ್ನಧ್ವನಿ ಮಾರ್ಗೇ ಶಂ ಭವತಿ ದುರೋಣೇ ಗೃಹೇ ಚ ಶಂ ಸುಖಮಸತ್ ಭವತಿ ತಚ್ಚಿತ್ರಂ ಪೂಜನೀಯಂ ದ್ರವಿಣಂ ಧನಂ ದೇಹಿ । ಅಸ್ಮಭ್ಯಂ ಪ್ರಯಚ್ಛ ।

॥ ಪ್ರತಿಪದಾರ್ಥ ॥

**ಸೂರ್ಯ**—ಎಲೈ ಸೂರ್ಯನೇ । **ಚಕ್ಷಸಾ**—ನಿನ್ನ ತೇಜಸ್ಸಿನಿಂದ । **ನಃ**—ನಮಗೆ । **ಶಂ**—ಸುಖಕರನಾಗಿ । **ಭವ**—ಆಗು । **ಅಹ್ನಾ**—ಅಹಸ್ಸಿನ ಪ್ರಕಾಶದ ಮೂಲಕ । **ನಃ**—ನಮಗೆ । **ಶಂ**—ಸುಖಕರನಾಗು । **ಭಾನುನಾ**—ನಿನ್ನ ರಶ್ಮಿಯಿಂದ । **ಶಂ**—ನಮಗೆ ಸುಖಕರನಾಗು । **ಹಿಮಾ**—ಶೈತ್ಯದಿಂದಲೂ । **ಶಂ**—ಸುಖಕಾರಕನಾಗು । **ಘೃಣೇನ**—ಉಷ್ಣದ ಮೂಲಕವೂ ಸುಖಪಡಿಸು । **ಯಥಾ**—ಯಾವ ಪ್ರಕಾರ । **ನಃ**—ನಮಗೆ । **ಅಧ್ವನ್**—ಮಾರ್ಗದಲ್ಲಿಯೂ । **ದುರೋಣೇ**—ಗೃಹದಲ್ಲಿಯೂ । **ಶಂ ಅಸತ್**—ಸುಖವುಂಟಾಗುವುದೋ । **ತತ್**—ಅಂತಹ ಸುಖಸಾಧಕವಾದುದೂ । **ಚಿತ್ರಂ**—ಅನೇಕವಿಧವಾದುದೂ ಆದ । **ದ್ರವಿಣಂ**—ಧನವನ್ನು । **ಧೇಹಿ**—ಕೊಡು.

॥ ಭಾವಾರ್ಥ ॥

ಎಲೈ ಸೂರ್ಯನೇ, ನಿನ್ನ ತೇಜಸ್ಸಿನಿಂದಲೂ, ಅಹಸ್ಸಿನ ಪ್ರಕಾಶದಿಂದಲೂ, ನಿನ್ನ ಸಕಲ ರಶ್ಮಿಗಳಿಂದಲೂ, ಶೀತದಿಂದಲೂ, ಉಷ್ಣದಿಂದಲೂ ನಮಗೆ ಎಲ್ಲಾ ಬಗೆಯಿಂದಲೂ ಸುಖಕಾರಕನಾಗು. ಯಾವ ಧನಗಳಿಂದ ನಮಗೆ ಮಾರ್ಗದಲ್ಲಿಯೂ ಗೃಹದಲ್ಲಿಯೂ ಸುಖವು ಲಭಿಸುವುದೋ ಅಂತಹ ಆಕರ್ಷಕವಾದ ಧನವನ್ನು ಕೊಡು.

## English Translation

Be propitious to us with light ; be propitious to us with sushine ; be propitious to us with warmth ; be propitious to us with frost ; and grant us, Surya, various wealth, whereby we may prosper on the road and in the house.

। ಸಂಹಿತಾಪಾಠಃ ।

**ಅಸ್ಮಾಕಂ ದೇವಾ ಉಭಯಾಯ ಜನ್ಮನೇ ಶರ್ಮ ಯಚ್ಛತ ದ್ವಿಪದೇ ಚತುಷ್ಪದೇ ॥**

**ಅದತ್ಪಿಬದೂರ್ಜಯಮಾನಮಾಶಿತಂ ತದಸ್ಮೇ ಶಂ ಯೋರರಪೋ ದಧಾತನ ॥ ೧೧ ॥**

॥ ಪದಪಾಠಃ ॥

ಅಸ್ಮಾಕಂ । ದೇವಾಃ । ಉಭಯಾಯ । ಜನ್ಮನೇ । ಶರ್ಮ । ಯಚ್ಛತ । ದ್ವಿऽಪದೇ । ಚತುಃऽಪದೇ ।
ಅದತ್ । ಪಿಬತ್ । ಊರ್ಜಯಮಾನಂ । ಆಶಿತಂ । ತತ್ । ಅಸ್ಮೇ ಇತಿ । ಶಂ । ಯೋಃ । ಅರಪಃ । ದಧಾತನ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ದೇವಾಃ ಸೂರ್ಯೇಣಾಭ್ಯನುಜ್ಞಾತಾ ಯೂಯಮಸ್ಮಾಕಂ ದ್ವಿಪದೇ ಮನುಷ್ಯಾತ್ಮಕಾಯ ಚತುಷ್ಪದೇ ಪಶ್ವಾತ್ಮಕಾಯ ಚೋಭಯಾಯೋಭಯವಿಧಾಯ ಜನ್ಮನೇ ಭೂತಜಾತಾಯ ಶರ್ಮ ಸುಖಂ ಯಚ್ಛತ । ದತ್ತ । ಕಿಂಚ ಯಥಾಸ್ಮತ್ಪುತ್ರಾದಿಕಮದದ್ಭಕ್ಷಣೀಯಂ ಭಕ್ಷಯತ್ ಪಿಬತ್ಪಾನೀಯಂ ಪಿಬಚ್ಚೋರ್ಜಯಮಾನಂ ಬಲವಂತಮಿವಾತ್ಮಾನಮಾಚರಚ್ಚಾಶಿತಂ ಸುಹಿತಂ ಚ ಭವತಿ ತಥಾ ಶಂ ರೋಗಶಾಂತಿನಿಮಿತ್ತಕಂ ಸುಖಂ ಯೋರ್ವಿಷಯಯೋಗಜನಿತಂ ಸುಖಂ ಚಾರಪೋऽಪಾಪಂ ಚ ದಧಾತನ । ಪ್ರಯಚ್ಛತ ॥

। ಪ್ರತಿಪದಾರ್ಥ ।

ದೇವಾಃ— ಎಲೈ ದೇವತೆಗಳೇ । ಅಸ್ಮಾಕಂ—ನಮಗೆ ಸೇರಿದ । **ದ್ವಿಪದೇ**— ಪುತ್ರಾದಿರೂಪವುಳ್ಳದ್ದೂ । **ಚತುಷ್ಪದೇ**—ಪಶ್ವಾದಿರೂಪವುಳ್ಳದ್ದೂ । **ಉಭಯಾಯ**— ಈ ಎರಡು ವಿಧವಾದುದೂ ಆದ । **ಜನ್ಮನೇ**— ಪ್ರಾಣಿಗಳಿಗೆಲ್ಲ । **ಶರ್ಮ**—ಸುಖವನ್ನು । **ಯಚ್ಛತ**—ಕೊಡಿರಿ । **ಅದತ್**—ನಾವು ತಿನ್ನುತ್ತಿರುವಾಗಲೂ । **ಪಿಬತ್**— ಪಾನಮಾಡುತ್ತಿರುವಾಗಲೂ । **ಊರ್ಜಯಮಾನಂ**—ಶಕ್ತಿಯನ್ನು ಹೊಂದುವಂತೆಯೂ । **ಆಶಿತಂ**— ಆರೋಗ್ಯದಿಂದಿರುವಂತೆಯೂ । **ಶಂ**—ಸುಖವನ್ನೂ । **ಯೋಃ**— ರೋಗರಾಹಿತ್ಯವನ್ನೂ । **ಅರಪಃ**— ಪಾಪರಹಿತವಾಗಿರುವಂತೆ । **ಅಸ್ಮೇ**— ನಮಗೆ । **ದಧಾತನ**—ಕೊಡಿರಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ನಮ್ಮ ಪುತ್ರಾದಿಗಳಿಗೂ ಪಶ್ವಾದಿಗಳಿಗೂ ಸಕಲ ಸುಖಗಳನ್ನು ಕೊಡಿರಿ. ನಾವು ತಿನ್ನುತ್ತಿರುವಾಗಲೂ, ಪಾನಮಾಡುತ್ತಿರುವಾಗಲೂ, ನಾವು ಶಕ್ತಿಯನ್ನು ಹೊಂದುವಂತೆಯೂ ಆರೋಗ್ಯದಿಂದಿರುವಂತೆಯೂ ನಮಗೆ ಪಾಪರಹಿತವಾದ ಸುಖವನ್ನೂ ರೋಗರಾಹಿತ್ಯವನ್ನೂ ಉಂಟುಮಾಡಿರಿ.

## English Translation

Bestow, gods, felicity upon both (classes) of our living beings, bipeds and quadrupeds, so that, whether they be eating or drinking, they may be strong and healthy: so grant to us happiness, pleasure and freedom from sin.

॥ ಸಂಹಿತಾಪಾಠಃ ॥

ಯದ್ವೋ ದೇವಾಶ್ಚಕೃಮ ಜಿಹ್ವಯಾ ಗುರು ಮನಸೋ ವಾ ಪ್ರಯುತೀ
ದೇವಹೇಳನಂ ।
ಅರಾವಾ ಯೋ ನೋ ಅಭಿ ದುಚ್ಛುನಾಯತೇ ತಸ್ಮಿನ್ತದೇನೋ ವಸವೋ
ನಿ ಧೇತನ ॥ ೧೨ ॥

॥ ಪದಪಾಠಃ ॥

ಯತ್ । ವಃ । ದೇವಾಃ । ಚಕೃಮ । ಜಿಹ್ವಯಾ । ಗುರು । ಮನಸಃ । ವಾ । ಪ್ರಽಯುತೀ । ದೇವಽಹೇಳನಂ ।
ಅರಾವಾ । ಯಃ । ನಃ । ಅಭಿ । ದುಚ್ಛುನಽಯತೇ । ತಸ್ಮಿನ್ । ತತ್ । ಏನಃ । ವಸವಃ । ನಿ । ಧೇತನ ॥

॥ ಸಾಯಣಭಾಷ್ಯಂ ॥

ಹೇ ವಸವೋ ವಾಸಯಿತಾರೋ ದೇವಾಃ ವೋ ಯುಷ್ಮಾಕಂ ವಯಂ ಜಿಹ್ವಯಾ ವಾಚಾ ಮನಸಃ ಪ್ರಯುತೀ ಪ್ರಯುತ್ಯಾ ಪ್ರಯೋಗೇಣ ಗುರು ಮಹದ್ದೇವಹೇಳನಂ ದೇವಕ್ರೋಧನಂ ಚ ಯದೇನಶ್ಚಕೃಮ ಅಕಾರ್ಷ್ಮ ಯೋಽಸ್ಮಚ್ಛತ್ರುರ್ನೋಽಸ್ಮಾನಭಿ ಪ್ರತ್ಯರಾವಾ ಗಮನವಾನ್ಭೂತ್ವಾ ದುಚ್ಛುನಾಯತೇ ಪಾಪಾನ್ಯಾಚರತ್ಯಸ್ಮಾನುದ್ವೇಜಯತಿ ವಾ ತಸ್ಮಿನ್ನಸ್ಮಚ್ಛತ್ರೌ ತದೇನೋಽಸ್ಮಾಭಿಃ ಕೃತಂ ಪಾಪಂ ನಿ ಧೇತನ । ಸೂರ್ಯಸ್ಯಾಜ್ಞಯಾ ವಿಧತ್ತ । ಸ್ಥಾಪಯತೇತ್ಯರ್ಥಃ ॥

|| ಪ್ರತಿಪದಾರ್ಥ ||

**ವಸವಃ**—ವಸತಿದಾಯಕರಾದ । **ದೇವಾಃ**—ಎಲೈ ದೇವತೆಗಳೇ । **ವಃ**—ನಿಮ್ಮ ವಿಷಯದಲ್ಲಿ । **ಜಿಹ್ವಯಾ**—ವಾಕ್ಕಿನ ಮೂಲಕವಾಗಿಯಾಗಲಿ । **ಮನಸಃ**—ಮನಸ್ಸಿನಿಂದಾಗಲಿ । **ಪ್ರಯುತೀ**—ವಾಙ್ಮನಸ್ಸುಗಳ ವ್ಯವಹಾರಗಳಿಂದ । **ಗುರು**—ಮಹತ್ತಾದುದೂ । **ದೇವಹೇಳನಂ**—ದೇವತೆಗಳಿಗೆ ಕ್ರೋಧವನ್ನುಂಟುಮಾಡುವುದೂ ಆದ । **ಯತ್ ಏನಃ**—ಯಾವ ಪಾಪವನ್ನು । **ಚಕೃಮ**—ನಾವು ಮಾಡಿರುವೆವೋ । **ತತ್ ಏನಃ**—ಆ ಎಲ್ಲ ಪಾಪವನ್ನೂ । **ಯಃ**—ಯಾವ ನಮ್ಮ ಶತ್ರುವು । **ನಃ ಅಭಿ**—ನಮ್ಮ ವಿಷಯದಲ್ಲಿ । **ಅರಾವಾ**—ಎದುರುಬಿಳುತ್ತ । **ದುಚ್ಛುನಾಯತೇ**—ಪಾಪಕರ್ಮವನ್ನಾಚರಿಸುವನೋ । **ತಸ್ಮಿನ್**—ಆ ಶತ್ರುವಿನಲ್ಲಿ । **ನಿ ಧೇತನ**—ಸ್ಥಾಪಿಸಿರಿ.

। ಭಾವಾರ್ಥ ।

ವಸತಿದಾಯಕರಾದ ಎಲೈ ದೇವತೆಗಳೇ, ನಿಮ್ಮ ವಿಷಯಲ್ಲಿ ನಾವು ವಾಕ್ಪ್ರಯೋಗದಿಂದಾಗಲಿ ಅಥವಾ ಮನಸ್ಸಂಕಲ್ಪದಿಂದಾಗಲಿ, ಮಹತ್ತಾದುದೂ, ನಿಮಗೆ ಕ್ರೋಧವನ್ನುಂಟುಮಾಡುವುದೂ ಆದ ಯಾವ ಪಾಪವನ್ನು ಮಾಡಿರುವೆವೋ ಆ ಎಲ್ಲ ಪಾಪವನ್ನೂ ಸಹ ನಮ್ಮ ಮೇಲೆ ಎದುರುಬಿದ್ದು ನಮಗೆ ಕೇಡನ್ನು ಬಯಸುವ ಶತ್ರುವಿನ ಮೇಲೆ ತಿರುಗಿಸಿ ಅವನಿಗೆ ಅದರಿಂದ ಕೆಡಕುಂಟಾಗುವಂತೆ ಮಾಡಿರಿ.

English Translation

Whatever sin, great and exciting the wrath of the gods, we have committed against you, O gods, by the tongue, or the working of the mind, you, Vasus, transfer that sin to him, who assailing terrifies us.

## ಮೂವತ್ತೆಂಟನೆಯ ಸೂಕ್ತವು

। ಸಾಯಣಭಾಷ್ಯಂ ।

**ಅಸ್ಮಿನ್ನ ಇತಿ ಪಂಚರ್ಚಂ ನವಮಂ ಸೂಕ್ತಂ ಜಾಗತಮೈಂದ್ರಂ । ಮುಷ್ಕವಿಶಿಷ್ಟ ಇಂದ್ರಾಖ್ಯ ಋಷಿಃ । ತಥಾ ಚಾನುಕ್ರಾಂತಂ । ಅಸ್ಮಿನ್ನಃ ಪಂಚ ಮುಷ್ಕವಾನಿಂದ್ರ ಇತಿ ॥ ಗತೋ ವಿನಿಯೋಗಃ ॥ ಅಪರೇ ತು ತಾಂಡವಾಃ ಶಾಟ್ಯಾಯನಕಾ ಅಸ್ಯ ಸೂಕ್ತಸ್ಯ ಮುಷ್ಕವಾನಿಂದ್ರೋ ದೇವತಾ ಲುಶ ಋಷಿರಿತಿ ವರ್ಣಯಂತಿ ॥**

ಅನುವಾದವು—**ಅಸ್ಮಿನ್ನಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು ಈ ಸೂಕ್ತಕ್ಕೆ ಮುಷ್ಕವಿಶಿಷ್ಟನಾದ ಇಂದ್ರನು ಋಷಿಯು ; ಇಂದ್ರನು ದೇವತೆಯು ; ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ-ಅಸ್ಮಿನ್ನಃ **ಪಂಚ ಮುಷ್ಕವಾನಿಂದ್ರಃ** ಎಂದು ಹೇಳಿದ್ದು

ವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ತಾಂಡ್ಯಬ್ರಾಹ್ಮಣ ಮತ್ತು ಶಾಟ್ಯಾಯನಬ್ರಾಹ್ಮಣಾನುಯಾಯಿಗಳಾದ ಮತ್ತೆ ಕೆಲವು ಸಾಮಗರು ಈ ಸೂಕ್ತಕ್ಕೆ ಮುಷ್ಕವಿಶಿಷ್ಟನಾದ ಇಂದ್ರನೇ ದೇವತೆಯೆಂದೂ ಲುಶನೆಂಬುವನು ಋಷಿಯೆಂದೂ ಹೇಳುವರು.

## ಸೂಕ್ತ—೩೮

ಮಂಡಲ—೧೦ ॥ ಅನುವಾಕ—೩ ॥ ಸೂಕ್ತ—೩೮ ॥
ಅಷ್ಟಕ—೭ ॥ ಅಧ್ಯಾಯ—೮ ॥ ವರ್ಗ ೧೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ಇಂದ್ರೋ ಮುಷ್ಕವಾನ್ ॥
ದೇವತಾ—ಇಂದ್ರಃ ॥
ಛಂದಃ—ಜಗತೀ ॥

ಸಂಹಿತಾಪಾಠಃ

ಅಸ್ಮಿನ್ನ ಇಂದ್ರ ಪೃತ್ಸುತೌ ಯಶಸ್ವತಿ ಶಿಮೀವತಿ ಕ್ರಂದಸಿ ಪ್ರಾವ ಸಾತಯೇ ।
ಯತ್ರ ಗೋಷಾತಾ ಧೃಷಿತೇಷು ಖಾದಿಷು ವಿಷ್ವಕ್ಪತಂತಿ ದಿದ್ಯವೋ
ನೃಷಾಹ್ಯೇ ॥ ೧ ॥

। ಪದಪಾಠಃ ।

ಅಸ್ಮಿನ್ । ನಃ । ಇಂದ್ರ । ಪೃತ್ಸುತೌ । ಯಶಸ್ವತಿ । ಶಿಮೀಽವತಿ । ಕ್ರಂದಸಿ । ಪ್ರ । ಅವ । ಸಾತಯೇ ।
ಯತ್ರ । ಗೋಽಸಾತಾ । ಧೃಷಿತೇಷು । ಖಾದಿಷು । ವಿಷ್ವಕ್ । ಪತಂತಿ । ದಿದ್ಯವಃ । ನೃಽಸಹ್ಯೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಯಶಸ್ವತಿ ಕೀರ್ತಿಮತಿ ಶಮೀವತಿ ಪರಸ್ಪರಪ್ರಹಾರಲಕ್ಷಣಕರ್ಮವತ್ಯಸ್ಮಿನ್ನುಪಸ್ಥಿತೇ ಪೃತ್ಸುತೌ ಸಂಗ್ರಾಮೇ ಕ್ರಂದಸಿ । ಸಿಂಹನಾದಂ ಕರೋಷಿ । ಸಾತಯೇ ಧನಲಾಭಾಯ ಪ್ರಾವ ನೋಽಸ್ಮಾನ್ಪ್ರರಕ್ಷಸಿ ಚ । ಕಸ್ಮಿನ್ನಿತ್ಯತ್ರಾಹ । ಯತ್ರ ಯಸ್ಮಿನ್ಗೋಷಾತಾ ಗೋಸಾತೌ ಲಬ್ಧಪಶುಕೇ ನೃಷಾಹ್ಯೇ ನೃಣಾಮಭಿಭಾವುಕೇ ಚ ಸಂಗ್ರಾಮೇ ಖಾದಿಷು ಪರಸ್ಪರಖಾದಕೇಷು ಚ ಯೋದ್ಧೃಷು ಧೃಷಿತೇಷು ಧೃಷ್ಟೇಷು ಸತ್ಸು ದಿದ್ಯವ ಆಯುಧಾನಿ ವಿಷ್ವಕ್ ಸರ್ವತಃ ಪತಂತಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಗೋಷಾತಾ—ಗೋವುಗಳು ಲಭಿಸತಕ್ಕವೂ । ನೃಷಾಹ್ಯೇ—ಶತ್ರುಗಳನ್ನು ಸೋಲಿಸತಕ್ಕವೂ ಆದ । ಯತ್ರ—ಯಾವ ಯುದ್ಧದಲ್ಲಿ । ಖಾದಿಷು—ಪರಸ್ಪರ ನಾಶಮಾಡುವ ಯೋಧರು ।

**ಧೃಷಿತೇಷು**—ಹೊಡೆದಾಡಲಾರಂಭಿಸಿದಾಗ | **ದಿದ್ಯವಃ**—ಪ್ರಕಾಶಮಾನವಾದ ಆಯುಧಗಳು | **ವಿಷ್ವಕ್**—ಸಕಲ ಪ್ರದೇಶಗಳಲ್ಲಿಯೂ | **ಪತಂತಿ**—ಬೀಳುವುವೋ ಅಂತಹ | **ಯಶಸ್ವತಿ**—ಯಶೋಯುಕ್ತವಾದುದೂ | **ಶಿಮೀವತಿ**—ಹೊಡೆದಾಡುವ ಕರ್ಮವುಳ್ಳದ್ದೂ ಆದ | **ಅಸ್ಮಿನ್ ಪೃತ್ಸುತೌ**—ಈ ಯುದ್ಧದಲ್ಲಿ | **ಕ್ರಂದಸಿ**—ಸಿಂಹನಾದವನ್ನು ಮಾಡುತ್ತೀಯೆ | **ಸಾತಯೇ**—ನಮಗೆ ಧನಲಾಭಕ್ಕಾಗಿ | **ನಃ**—ನಮ್ಮನ್ನು | **ಪ್ರಾವ**—ರಕ್ಷಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಗೋವುಗಳು ಲಭಿಸತಕ್ಕವೂ, ಶತ್ರುಗಳನ್ನು ಸೋಲಿಸತಕ್ಕವೂ ಆದ ಯಾವ ಯುದ್ಧದಲ್ಲಿ ಪರಸ್ಪರ ನಾಶಮಾಡುವ ಯೋಧರು ಹೊಡೆದಾಡಲಾರಂಭಿಸಿದಾಗ ಪ್ರಕಾಶಮಾನವಾದ ಆಯುಧಗಳು ಸಕಲಪ್ರದೇಶಗಳಲ್ಲಿಯೂ ಬೀಳುವುವೋ ಅಂತಹ ಯಶೋಯುಕ್ತವಾದುದೂ ಹೊಡೆದಾಡುವ ಕರ್ಮವುಳ್ಳದ್ದೂ ಆದ ಈ ಯುದ್ಧದಲ್ಲಿ ನೀನು ಸಿಂಹನಾದವನ್ನು ಶಬ್ದಮಾಡುತ್ತೀಯೆ. ನಮಗೆ ಧನಲಾಭಕ್ಕಾಗಿ ನಮ್ಮನ್ನು ರಕ್ಷಿಸು.

## English Translation

You shout, Indra, in this glorious and arduous conflict, and assist us to the acquirement (of spoil), in this battle where cows are won and men overpowered, wherein the weapons descend on every side upon the fierce and courrgeous combatants.

॥ ಸಂಹಿತಾಪಾಠಃ ॥

ಸ ನಃ ಕ್ಷುಮಂತಂ ಸದನೇ ವ್ಯೂರ್ಣುಹಿ ಗೋಅರ್ಣಸಂ ರಯಿಮಿಂದ್ರ ಶ್ರವಾಯ್ಯಂ ।
ಸ್ಯಾಮ ತೇ ಜಯತಃ ಶಕ್ರ ಮೇದಿನೋ ಯಥಾ ವಯಮುಶ್ಮಸಿ ತದ್ವಸೋ ಕೃಧಿ ॥ ೨ ॥

॥ ಪದಪಾಠಃ ॥

ಸಃ । ನಃ । ಕ್ಷುऽಮಂತಂ । ಸದನೇ । ವಿ । ಊರ್ಣುಹಿ । ಗೋಽಅರ್ಣಸಂ । ರಯಿಂ । ಇಂದ್ರ । ಶ್ರವಾಯ್ಯಂ ।
ಸ್ಯಾಮ । ತೇ । ಜಯತಃ । ಶಕ್ರ । ಮೇದಿನಃ । ಯಥಾ । ವಯಂ । ಉಶ್ಮಸಿ । ತತ್ । ವಸೋ ಇತಿ । ಕೃಧಿ ॥ ೨ ॥

। ಸಾಯಣಭಾಷ್ಯಂ ।

ಹೇ ಇಂದ್ರ ಸ ಸರ್ವಾನುಗ್ರಾಹಕತ್ವೇನ ಪ್ರಸಿದ್ಧಸ್ತ್ವಂ ನೋಽಸ್ಮಾಕಂ ಸದನೇ ಗೃಹೇ ಕ್ಷುಮಂ-ತಮನ್ನವಂತಂ ಶಬ್ದವಂತಂ ವಾ ಗೋಅರ್ಣಸಂ । ಗಾವೋಽರ್ಣ ಉದಕಮಿವ ಪ್ರವೃದ್ಧಾ ಯಸ್ಮಿನ್ । ಶಂ ಶ್ರವಾಯ್ಯಂ ಶ್ರವಣೀಯಂ ರಯಿಂ ಧನಂ ವ್ಯೂರ್ಣುಹಿ । ವಿವಿಧಮಾಚ್ಛಾದಯ । ಕಿಂಚ ಹೇ ವಸೋ ವಾಸಕ ಶಕ್ರೇಂದ್ರ ಜಯತಃ ಶತ್ರುಂ ತೇ ತವ ಪ್ರಸಾದಾದ್ವಯಂ ಮೇದಿನೋ ಮೇದಸಾ ಯುಕ್ತಾ ಬಲವಂತಃ ಸ್ಯಾಮ । ಭವೇಮ । ಕಿಂ ಬಹೂಕ್ತ್ಯಾ । ಯಥಾ ಯದ್ವಯಮುಶ್ಮಸಿ ಕಾಮಯಾಮಹೇ ತತ್ಸರ್ವಂ ಕೃಧಿ । ಕುರು ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಸಃ—ಪ್ರಸಿದ್ಧನಾದ ನೀನು । ನಃ—ನಮ್ಮ । ಸದನೇ—ಮನೆಯಲ್ಲಿ । ಕ್ಷುಮಂತಂ—ಅನ್ನಯುಕ್ತವಾದುದೂ । ಗೋಅರ್ಣಸಂ—ಪುಷ್ಟಿಯುತವಾದ ಗೋವುಗಳುಳ್ಳದ್ದೂ । ಶ್ರವಾಯ್ಯಂ—ಪ್ರಸಿದ್ಧವಾದುದೂ ಆದ । ರಯಿಂ—ಧನವನ್ನು । ವ್ಯೂರ್ಣುಹಿ—ಅನೇಕವಿಧದಲ್ಲಿ ತುಂಬಿಡು । ವಸೋ—ವಸತಿದಾಯಕನಾದ । ಶಕ್ರ—ಎಲೈ ಇಂದ್ರನೇ । ಜಯತಃ—ಶತ್ರುಗಳನ್ನು ಜಯಿಸತಕ್ಕ । ತೇ—ನಿನ್ನ ಅನುಗ್ರಹದಿಂದ । ಮೇದಿನಃ—ಶಕ್ತಿಯುತರಾಗಿ । ಸ್ಯಾಮ—ನಾವು ಆಗುವೆವು । ಯಥಾ—ಯಾವುದನ್ನು । ವಯಂ—ನಾವು । ಉಶ್ಮಸಿ—ಇಚ್ಛಿಸುವೆವೋ । ತತ್—ಅದೆಲ್ಲವನ್ನು । ಕೃಧಿ—ನಿರ್ಮಿಸಿಕೊಡು.

॥ ಭಾವಾರ್ಥ ॥

ಎಲೈ ಇಂದ್ರನೇ ಪ್ರಸಿದ್ಧನಾದ ನೀನು ನಮ್ಮ ಮನೆಯಲ್ಲಿ ಅನ್ನಯುಕ್ತವಾದುದೂ, ಪುಷ್ಟಿಯುತವಾದ ಗೋವುಗಳುಳ್ಳದ್ದೂ ಪ್ರಸಿದ್ಧವಾದುದೂ ಧನವನ್ನು ಅನೇಕ ರೂಪದಲ್ಲಿ ತುಂಬಿಡು. ಶತ್ರುನಾಶಕನಾದ ನಿನ್ನ ಅನುಗ್ರಹದಿಂದ ನಾವು ಶಕ್ತಿಯುತರಾಗಿ ಆಗುವಂತಾಗಲಿ. ನಾವು ಇಚ್ಛಿಸುವುದನ್ನೆಲ್ಲಾ ನಮಗೆ ಒದಗಿಸಿಕೊಡು.

## English Translation

Do you, Indra, heap up in our dwelling famous riches, comprising food and herds of cottle: may we, Shakra, be vigorous (through the favour) of you, the victorious : grant us, Vasu, that which we desire.

। ಸಂಹಿತಾಪಾಠಃ ।

ಯೋ ನೋ ದಾಸ ಆರ್ಯೋ ವಾ ಪುರುಷ್ಟುತಾದೇವ ಇಂದ್ರ ಯುಧಯೇ ಚಿಕೇತತಿ ।
ಅಸ್ಮಾಭಿಷ್ಟೇ ಸುಷಹಾಃ ಸಂತು ಶತ್ರವಸ್ತ್ವಯಾ ವಯಂ ತಾನ್ವನುಯಾಮ ಸಂಗಮೇ ॥ ೩ ॥

ಪದಪಾಠಃ ॥

ಯಃ । ನಃ । ದಾಸಃ । ಆರ್ಯಃ । ವಾ । ಪುರುಽಸ್ತುತ । ಅದೇವಃ । ಇಂದ್ರ । ಯುಧಯೇ । ಚಿಕೇತತಿ ।
ಅಸ್ಮಾಭಿಃ । ತೇ । ಸುಽಸಹಾಃ । ಸಂತು । ಶತ್ರವಃ । ತ್ವಯಾ । ವಯಂ । ತಾನ್ । ವನುಯಾಮ ॥
ಸಂಽಗಮೇ ॥

॥ ಸಾಯಣಭಾಷ್ಯಂ ॥

ಹೇ ಪುರುಷ್ಟುತ ಬಹುಸ್ತುತೇಂದ್ರ ಯೋ ದಾಸಃ ಕರ್ಮಕರಃ ಶೂದ್ರ ಆರ್ಯಸ್ತ್ರೈವರ್ಣಿಕೋಽದೇವೋ ದೇವಾದನ್ಯೋಽಸುರೋ ವಾ ನೋಽಸ್ಮಾನ್ಯುಧಯೇ ಯುದ್ಧಾಯ ಚಿಕೇತತಿ ಜಾನಾತಿ ತೇ ಸರ್ವೇ ಶತ್ರವೋಽಸ್ಮದರಯಸ್ತೇ ತವ ಪ್ರಸಾದಾದಸ್ಮಾಭಿಃ ಸುಸಹಾಃ ಸ್ವಭಿಭವಾಃ ಸಂತು । ಭವಂತು । ಕಿಂ ಚ ವಯಂ ತ್ವಯಾ ಸಹಾಯೇನ ತಾಞ್ಛತ್ರೂನ್ಸಂಗಮೇ ಸಂಗ್ರಾಮೇ ವನುಯಾಮ । ಹನ್ಯಾಮ ॥

॥ ಪ್ರತಿಪದಾರ್ಥ ॥

ಪುರುಷ್ಟುತ—ಅನೇಕರ ಆಹ್ವಾನಕ್ಕೆ ಪಾತ್ರನಾದ । ಇಂದ್ರ—ಎಲೈ ಇಂದ್ರನೇ । ದಾಸಃ— ಸೇವಕರ ಗುಂಪಿನವರಾಗಲಿ । ಆರ್ಯಃ—ಉತ್ತಮ ಜಾತಿಗೆ ಸೇರಿದವರಾಗಲಿ । ಯಃ—ಯಾರು । ಅದೇವಃ—ದೇವಪೂಜಾ ರಹಿತರಾಗಿ । ನಃ—ನಮ್ಮನ್ನು । ಯುಧಯೇ—ಯುದ್ಧಕ್ಕೆ ಅರ್ಹರೆಂದು । ಚಿಕೇತತಿ—ತಿಳಿಯುವರೋ । ಶತ್ರವಃ—ನಮ್ಮ ಆ ಎಲ್ಲ ಶತ್ರುಗಳೂ । ತೇ—ನಿನ್ನ ಅನುಗ್ರಹದಿಂದ । ಅಸ್ಮಾಭಿಃ—ನಮ್ಮಿಂದ । ಸುಸಹಾಃ— ಸುಲಭವಾಗಿ ಸೋಲಿಸಲ್ಪಡುವವರಾಗಿ । ಸಂತು—ಆಗಲಿ । ವಯಂ—ನಾವು । ತ್ವಯಾ—ನಿನ್ನ ಸಹಾಯದಿಂದ । ತಾನ್—ಅವರೆಲ್ಲರನ್ನು । ಸಂಗಮೇ—ಯುದ್ಧದಲ್ಲಿ । ವನುಯಾಮ—ಕೊಲ್ಲುವಂತಾಗಲಿ.

॥ ಭಾವಾರ್ಥ ॥

ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ, ಕಪ್ಪುಜನರಲ್ಲಾಗಲಿ, ಆರ್ಯರ ಗುಂಪಿನವರಲ್ಲಾಗಲಿ ಯಾರು ದೇವಪೂಜಾರಹಿತರಾಗಿದ್ದು ನಮ್ಮನ್ನು ಯುದ್ಧಕ್ಕೆ ಕರೆಯುವರೋ, ನಮ್ಮ ಆ ಎಲ್ಲ ಶತ್ರುಗಳೂ ನಿನ್ನ ಅನುಗ್ರಹದಿಂದ ನಮ್ಮಿಂದ ಸುಲಭವಾಗಿ ಸೋಲಿಸಲ್ಪಡುವವರಾಗಲಿ. ನಾವು ನಿನ್ನ ಸಹಾಯದಿಂದ ಯುದ್ಧದಲ್ಲಿ ಅವರೆಲ್ಲರನ್ನೂ ಕೊಲ್ಲುವಂತಾಗಲಿ.

## English Translation

Indra, the praised of many, may he who proposes to assail us, whether he be a Dasa, an Arya, or an enemy of the gods; through your aid may all (such) foes be easily overcome by us; through you may we destroy them in battle.

॥ ಸಂಹಿತಾಪಾಠಃ ॥

ಯೋ ದಭ್ರೇಭಿರ್ಹವ್ಯೋ ಯಶ್ಚ ಭೂರಿಭಿರ್ಯೋ ಅಭೀಕೇ ವರಿವೋವಿನ್ನೃಷಾಹ್ಯೇ

ತಂ ವಿಖಾದೇ ಸಸ್ನಿಮದ್ಯ ಶ್ರುತಂ ನರಮರ್ವಾಂಚಮಿಂದ್ರಮವಸೇ ಕರಾಮಹೇ ॥ ೪ ॥

॥ ಪದಪಾಠಃ ॥

ಯಃ । ದಭ್ರೇಭಿಃ । ಹವ್ಯಃ । ಯಃ । ಚ । ಭೂರಿऽಭಿಃ । ಯಃ । ಅಭೀಕೇ । ವರಿವಃऽವಿತ್ । ನೃऽಸಹ್ಯೇ ।

ತಂ । ವಿऽಖಾದೇ । ಸಸ್ನಿಂ । ಅದ್ಯ । ಶ್ರುತಂ । ನರಂ । ಅರ್ವಾಂಚಂ । ಇಂದ್ರಂ । ಅವಸೇ । ಕರಾಮಹೇ ॥

॥ ಸಾಯಣಭಾಷ್ಯಂ ॥

ನೃಸಹ್ಯೇ ನೃಣಾಮಭಿಭಾವುಕೇ ವಿಖಾದೇ ವಿಶೇಷೇಣ ಭಕ್ಷಕೇಽಭೀಕೇ ಸಂಗ್ರಾಮೇ ವರಿವೋವಿದ್ಧನಸ್ಯ ಲಂಭಕೋ ಯ ಇಂದ್ರೋ ದಭ್ರೇಭಿಃ ಸ್ವಲ್ಪೈರ್ಹವ್ಯೋ ಹ್ವಾತವ್ಯೋ ಯಶ್ಚ ಭೂರಿಭಿರ್ಬಹುಭಿರ್ಹವ್ಯಃ ತಂ ಸಸ್ನಿಂ ಶುಚಿಂ ಶ್ರುತಂ ಸರ್ವತ್ರ ವಿಖ್ಯಾತಂ ನರಂ ನೇತಾರಮಿಂದ್ರಮದ್ಯಾಸ್ಮಿನ್ನಹನ್ಯವಸೇಽಸ್ಮದ್ರಕ್ಷಣಾಯಾರ್ವಾಂಚಮಸ್ಮದಭಿಮುಖಂ ಕರಾಮಹೇ । ಕುರ್ಮಃ ॥

॥ ಪ್ರತಿಪದಾರ್ಥ ॥

ವರಿವೋವಿತ್—ಧನಪ್ರಾಪಕನಾದ । ಯಃ—ಯಾವ ಇಂದ್ರನು । ದಭ್ರೇಭಿಃ—ಸ್ವಲ್ಪಜನರಿಂದಲೂ । ಹವ್ಯಃ—ಕರೆಯಲ್ಪಡುವನೋ । ಯಶ್ಚ—ಯಾರು । ಭೂರಿಭಿಃ—ಬಹುಜನರಿಂದಲೂ । ಹವ್ಯಃ—ಕರೆಯಲ್ಪಡುವನೋ । ತಂ—ಅಂತಹ । ಸಸ್ನಿಂ—ಶುದ್ಧನೂ । ಶ್ರುತಂ—ಪ್ರಖ್ಯಾತನೂ । ನರಂ—ನೇತೃವೂ ಆದ । ಇಂದ್ರಂ—ಇಂದ್ರನನ್ನು । ಅದ್ಯ—ಇಂದು । ನೃಸಹ್ಯೇ—ಶತ್ರುಗಳನ್ನು ಸೋಲಿಸತಕ್ಕದ್ದೂ । ವಿಖಾದೇ—ಪರಸ್ಪರ ನಾಶಮಾಡತಕ್ಕದ್ದೂ ಆದ । ಅಭೀಕೇ—ಸಂಗ್ರಾಮದಲ್ಲಿ । ಅವಸೇ—ನಮ್ಮ ರಕ್ಷಣಾರ್ಥವಾಗಿ । ಅರ್ವಾಂಚಂ—ನಮಗಭಿಮುಖನಾಗುವಂತೆ । ಕರಾಮಹೇ—ಮಾಡುತ್ತೇವೆ.

॥ ಭಾವಾರ್ಥ ॥

ಧನಪ್ರಾಪಕನಾದ ಯಾವ ಇಂದ್ರನು ಸಕಲ ಜನರಿಂದಲೂ ಕರೆಯಲ್ಪಡುವನೋ ಅಂತಹ ಶುದ್ಧನೂ, ಪ್ರಖ್ಯಾತನೂ ನೇತೃವೂ ಆದ ಇಂದ್ರನನ್ನು ಇಂದು ಶತ್ರುನಾಶಕವೂ ಪರಸ್ಪರ ಹೊಡೆದಾಡತಕ್ಕದ್ದೂ ಆದ ಯುದ್ಧದಲ್ಲಿ ನಮ್ಮ ರಕ್ಷಣಾರ್ಥವಾಗಿ ನಮಗಭಿಮುಖನಾಗುವಂತೆ ಮಾಡುತ್ತೇವೆ.

English Translation

Let us bring before us to day for our protection that Indra, th pure, the renowned, the leader of rites, who in the man-destroying, al devouring conflict, is the winner of wealth ; who is to be invoked by fe and by many,

॥ ಸಂಹಿತಾಪಾಠಃ ॥

ಸ್ವವೃಜಂ ಹಿ ತ್ವಾಮಹಮಿಂದ್ರ ಶುಶ್ರವಾನಾನುದಂ ವೃಷಭ ರಧ್ರಚೋ ದನಂ ।
ಪ್ರ ಮುಂಚಸ್ವ ಪರಿ ಕುತ್ಸಾದಿಹಾ ಗಹಿ ಕಿಮು ತ್ವಾವಾನ್ಮುಷ್ಕಯೋರ್ಬ ಆಸತೇ ॥ ೫ ॥

॥ ಪದಪಾಠಃ ॥

ಸ್ವಽವೃಜಂ । ಹಿ । ತ್ವಾಂ । ಅಹಂ । ಇಂದ್ರ । ಶುಶ್ರವ । ಅನನುಽದಂ । ವೃಷಭ । ರಧ್ರಽಚೋದನಂ ।
ಪ್ರ । ಮುಂಚಸ್ವ । ಪರಿ । ಕುತ್ಸಾತ್ । ಇಹ । ಆ । ಗಹಿ । ಕಿಂ । ಊಂ ಇತಿ । ತ್ವಾಽವಾನ್ ಮುಷ್ಕಯೋಃ । ಬದ್ಧಃ । ಆಸತೇ ॥ ೫ ॥

। ಸಾಯಣಭಾಷ್ಯಂ ।

ಹೇ ವೃಷಭ ಕಾಮಾನಾಂ ವರ್ಷಕೇಂದ್ರ ಸ್ವವೃಜಂ ಸ್ವಯಮೇವ ಜ್ಜೇತಾರಮನನುದಮನ- ಪೇಕ್ಷಿತಬಲಾನುಪ್ರದಾನಂ ರಧ್ರಚೋದನಂ ರಾಧಕಸ್ಯ ಚೋದಕಂ ಪ್ರೇರಕಂ ತ್ವಾಮಹಂ ಲುಶಃ ಶುಶ್ರ ಅಶ್ರೌಷಂ ಹಿ ಯಸ್ಮಾತ್ತಸ್ಮಾತ್ಪ್ರ ಮುಂಚಸ್ವ । ಕುತ್ಸೇನ ವಾಧ್ರೀಃಶತೇನಾಂಡಯೋರ್ಬದ್ಧಮಾತ್ಮಾನಂ ಬಂಧನಾದ್ವಿಮುಂಚ । ಅಥ ಪರಿ ಸರ್ವತಃ ಪರಿವೃತಸ್ತ್ವಂ ಕುತ್ಸಾತ್ಕುತ್ಸಾಖ್ಯಾದೃಷೇರಿಹಾಸ್ಮದ್ಯಾಗ ಆ ಗಹಿ । ಆಗಚ್ಛ । ಕಿಮು ತ್ವಾವಾಂಸ್ತ್ವತ್ಸದೃಶೋಽನ್ಯಃ ಕಶ್ಚಿನ್ಮುಷ್ಕಯೋರ್ಬದ್ಧ ಆಸತೇ । ನ ಕೋಽಪ್ಯೇ- ತಾದೃಶೋ ನಿರ್ಲಜ್ಜಸ್ತ್ವತ್ತೋಽನ್ಯೋಽಸ್ತೀತ್ಯಭಿಪ್ರಾಯಃ । ತತ್ರ ಶಾಟ್ಯಾಯನಕಂ । ಕುತ್ಸಶ್ಚ ಲುಶ- ಶ್ಚೇಂದ್ರಂ ವ್ಯಹ್ವಯೇತಾಂ ಸ ಕುತ್ಸಸ್ಯಾಹವಮಾಗಚ್ಛತ್ ತಂ ಶತೇನ ವಾಧ್ರೀಭಿರಾಂಡಯೋರಬಧ್ನಾತ್ ತಂ ಲುಶೋಽಭ್ಯವದತ್ ಸ್ವವೃಜಂ ಹಿ ತ್ವಾಮಹಮಿಂದ್ರ ಶುಶ್ರವಾನಾನುದಂ ವೃಷಭ ರಧ್ರಚೋದನಂ ಪ್ರ ಮುಂಚಸ್ವ ಪರಿ ಕುತ್ಸಾದಿಹಾ ಗಹಿ ಕಿಮು ತ್ವಾವಾನ್ಮುಷ್ಕಯೋರ್ಬದ್ಧ ಆಸತ ಇತಿ ತಾಃ ಸರ್ವಾಃ ಸಂಲುಪ್ಯ ಲುಶಮಭಿ ಪ್ರಾದುದ್ರುವದಿತಿ । ಛಂದೋಗಬ್ರಾಹ್ಮಣಮಪಿ । ಕುತ್ಸಶ್ಚ ಲುಶಶ್ಚ ಯುಗಪ-

ನಿಂದ್ರಮಾಹೂತವಂತೌ ಸ್ವಂ ಸ್ವಂ ಯಜ್ಞಂ ಪ್ರತ್ಯಂಗಭಾವಾಯ ಸಖಿತ್ವಾದಿಂದ್ರಃ ಕುತ್ಸಂ ಪ್ರತಿ ಜಗಾಮ ಕಂ ತು ಗತಂ ವಶಿತ್ವಾತ್ಕುತ್ಸೋ ವಾಧ್ರೀಣಶತೇನಾಂಡಯೋರಬಧ್ನಾದಿತಿ ||

। ಪ್ರತಿಪದಾರ್ಥ ।

ವೃಷಭ—ಕಾಮವರ್ಷಕನಾದ । ಇಂದ್ರ—ಎಲೈ ಇಂದ್ರನೇ । ತ್ವಾಂ ನಿನ್ನನ್ನು । ಸ್ವವೃಜಂ—ಅಸಹಾಯಕನಾಗಿಯೇ ಶತ್ರುಚ್ಛೇದಕನೆಂದೂ । ಅನನುದಂ—ಅಪ್ರಾರ್ಥಿತವಾಗಿಯೇ ಶಕ್ತಿಪ್ರದಾತೃವೆಂದೂ । ರಧ್ರಚೋದನಂ—ಸಂಪದ್ಯುಕ್ತನಾಗಿ ನಿನ್ನನ್ನು ಆರಾಧಿಸುವವನಿಗೆ ಪ್ರೇರಕನೆಂದೂ । ಅಹಂ—ಲುಶನೆಂಬ ನಾನು ಶುಶ್ರವ—ಕೇಳಿದ್ದೇನೆ । ಹಿ—ಆದುದರಿಂದಲೇ । ಪ್ರ ಮುಂಚಸ್ವ—ಕುತ್ಸನಿಂದ ಬಿಡಿಸಿಕೋ । ಪರಿ—ಬಂಧಿತನಾದ ನೀನು । ಕುತ್ಸಾತ್—ಕುತ್ಸನಿಂದ ಬಿಡಿಸಿಕೊಂಡು । ಇಹ—ಈ ನಮ್ಮ ಯಾಗಕ್ಕೆ । ಆ ಗಹಿ—ದಯಮಾಡು । ತ್ವಾವಾನ್ ಕಿಮು—ನಿನಗೆ ಸಮಾನನಾದ ಬೇರೆ ಯಾವಪುರುಷನು । ಮುಷ್ಕಯೋಃ—ರಂಧ್ರಪ್ರದೇಶಗಳಲ್ಲಿ । ಬದ್ಧಃ—ಕಟ್ಟಲ್ಪಟ್ಟವನಾಗಿ। ಆಸತೇ—ಇರುತ್ತಾನೆ ?

। ಭಾವಾರ್ಥ ।

ಇಷ್ಟಾರ್ಥಪ್ರದನಾದ ಎಲೈ ಇಂದ್ರನೇ, ನಿನ್ನನ್ನು ಅಸಹಾಯಕನಾಗಿಯೇ ಶತ್ರುಚ್ಛೇದಕನೆಂದೂ, ಅಪ್ರಾರ್ಥಿತವಾಗಿಯೇ ಶಕ್ತಿಪ್ರದಾತೃವೆಂದೂ ತಿಳಿದಿದ್ದೇನೆ. ನೀನು ನಿನ್ನನ್ನು ಆರಾಧಿಸುವವನಿಗೆ ಪ್ರೇರಕನೆಂದೂ ಕೇಳಿದ್ದೇನೆ. ಆದುದರಿಂದಲೇ ಕುತ್ಸನಿಂದ ಬಿಡಿಸಿಕೋ. ಬಂಧಿತನಾದ ನೀನು ಕುತ್ಸನಿಂದ ಬಿಡಿಸಿಕೊಂಡು ಈ ನಮ್ಮ ಯಾಗಕ್ಕೆ ದಯಮಾಡು. ನಿನಗೆ ಸಮಾನನಾದ ಬೇರೆ ಯಾರು ತಾನೇ, ರಂಧ್ರಪ್ರದೇಶಗಳಲ್ಲಿ ಕಟ್ಟಲ್ಪಟ್ಟವನಾಗಿರುತ್ತಾನೆ ?

English Translation

Indra, showerer of benefits, I have heard of you, the self-mutilator, the giver of unexpected strength, encouraging the prosperous: set your self free from Kutsa, and come hither: how should such a one as you remain so bound ?

## ಮೂವತ್ತೊಂಭತ್ತನೆಯ ಸೂಕ್ತವು.

## ಪೀಠಿಕೆ.

ಈ ಸೂಕ್ತಕ್ಕೂ ಮುಂದಿನ ಸೂಕ್ತಕ್ಕೂ ಘೋಷಾ ಎಂಬ ಸ್ತ್ರೀಯು ಋಷಿಯು. ಋಗ್ವೇದದ ಪ್ರಥಮ ಮಂಡಲದಲ್ಲಿ ೧೧೬ ರಿಂದ ೧೨೬ ರವರೆಗಿನ ಸೂಕ್ತಗಳಿಗೆ ಋಷಿಯಾದ ಕಕ್ಷೀವಾನ್ ಎಂಬ ಋಷಿಯ ಪುತ್ರಿಯೇ ಈ ಘೋಷಾ ಎಂಬ ಸ್ತ್ರೀಯು. ಈ ಸ್ತ್ರೀಗೆ ಕಾರಣಾಂತರದಿಂದ ಕುಷ್ಠ (ತೊನ್ನು) ರೋಗಪ್ರಾಪ್ತವಾಗಿ ಇವಳನ್ನುಯಾರೂ ಮದುವೆಮಾಡಿಕೊಳ್ಳದೇ ಇದ್ದುದರಿಂದ ಇವಳು ಬಹುಕಾಲ ಅವಿವಾಹಿತಳಾಗಿಯೇ ತಂದೆಯ ಮನೆಯಲ್ಲಿ ವಾಸವಾಗಿರ

ಬೇಕಾಯಿತು. ಆದ್ದರಿಂದ ಈ ಸ್ತ್ರೀಯು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲಾಗಿ ಅವರು ಬಂದು ಈಕೆಯ ಕು: ರೋಗವನ್ನು ಪರಿಹಾರಮಾಡಿ ಯೋಗ್ಯನಾದ ಪತಿಯನ್ನು ದೊರಕಿಸಿ ಕೊಟ್ಟರು ಎಂದು ಪೂರ್ವೇತಿಹಾಸವಿ: ಸಾಯಣರು ಋ. ಸಂ. ೧-೧೧೭-೭ನೇ ಋಕ್ಕಿನ ಭಾಷ್ಯದಲ್ಲಿ—

**ಘೋಷಾನಾಮ ಬ್ರಹ್ಮವಾದಿನೀ ಕಕ್ಷೀವತೋ ದುಹಿತಾ । ಸಾ ಕುಷ್ಠಿನೀ ಸತೀ ಕಸ್ಮೈಚಿದ್ವರಾ ಯಾದತ್ತಾ ಪಿತೃಗೃಹೇ ನಿಷಣ್ಣಾ ಜೀರ್ಣಾಸೀತ್ । ಸಾಶ್ವಿನೋರನುಗ್ರಹಾನ್ನಷ್ಟಕುಷ್ಠಾ ಸತೀ ಪತಿಂ ಲೇಭೇ ॥**

(ಸಾ. ಭಾ. ೧-೧೧೭-೭)

ಎಂದು ಹೇಳಿದಾರೆ. ಪೂರ್ವದಲ್ಲಿ ಕಕ್ಷೀವಾನ್ ಎಂಬ ಋಷಿಗೆ ಘೋಷಾ ಎಂಬ ಹೆಸರಿನ ಓರ್ವ ಪುತ್ರಿಯಿದ್ದಳ ಅವಳು ಬ್ರಹ್ಮಜ್ಞಾನಿಯಾಗಿದ್ದಳು. ಆದರೆ ಅವಳಿಗೆ ಕುಷ್ಠರೋಗವಿದ್ದುದರಿಂದ ಅವಳನ್ನು ಯಾರೂ ಮದುವೆಮಾ ಕೊಳ್ಳಲು ಇಷ್ಟಪಡಲಿಲ್ಲ. ಆದ್ದರಿಂದ ಅವಳು ತನ್ನ ತಂದೆಯ ಮನೆಯಲ್ಲಿಯೇ ಇರಬೇಕಾಯಿತು. ವಿವಾಹ ವಯಸ್ಸನ್ನು ದಾಟಿ ವೃದ್ಧಳಾಗುತ್ತಿದ್ದ ಇವಳು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದಳು. ಅವರು ಬಂದು ಇವ ಕುಷ್ಠರೋಗವನ್ನು ವಾಸಿಮಾಡಿ ಪತಿಯನ್ನು ಹೊಂದಿಸಿಕೊಟ್ಟರು ಎಂದಭಿಪ್ರಾಯವು. ಈ ವಿಷಯವನ್ನು ಸ್ಕಂ ಸ್ವಾಮಿಗಳು ಸ್ವಲ್ಪ ವ್ಯತ್ಯಸ್ತವಾಗಿ ಹೇಳಿದಾರೆ—

**ಘೋಷಾ ನಾಮ ಕಕ್ಷೀವತೋ ದುಹಿತಾ ಸಾ ದುರ್ಭಗತ್ವಾತ್ ಪರಿತ್ಯಕ್ತಾ ಪಿತುರೇವ ಗೃಹೇ ಜರಾಂ ಜಗಾಮ । ಸಾ ಜೀರ್ಣಾ ಅಶ್ವಿನೌ ಶೋಭನಂ ಭಗಂ ಯುಯಾಚೇ । ತಸ್ಯೈ ಅಶ್ವಿನೌ ಸ್ವಯಮೇವ ಭಗತಾಂ ಜಗ್ಮತುಃ ॥**

ಎಂದರೆ ಘೋಷಾ ಎಂಬ ಹೆಸರುಳ್ಳ ಕಕ್ಷೀವಂತಋಷಿಯ ಮಗಳು ವಾಸಿಯಾಗಲು ಅಸಾಧ್ಯವಾದ ವ್ಯಾಧಿಯಿಂದ ನರಳುತ್ತಿದ್ದಳು. ಆ ಕಾರಣದಿಂದ ಪತಿಯಿಂದ ಪರಿತ್ಯಕ್ತಳಾಗಿ ತನ್ನ ತಂದೆಯ ಮನೆಯಲ್ಲಿಯೇ ವಾಸಿಸುತ್ತಾ ವಯಸ್ಕಳಾಗಿ ತನ್ನ ಪ್ರಾಯುವನ್ನು ಕಳೆದುಕೊಂಡು ವೃದ್ಧೆಯಾಗುತ್ತಿರುವಾಗ ಅಶ್ವಿನೀದೇವತೆಗಳನ್ನು ಸ್ತುತಿಸಿ ಸೌಭಾಗ್ಯವನ್ನು ಕೇಳಿಕೊಂಡಳು. ಅಶ್ವಿನೀದೇವತೆಗಳು ತಾವೇ ಸೌಭಾಗ್ಯರೂಪವನ್ನು ಹೊಂದಿ ಅವಳ ಇಷ್ಟವ ನೆರವೇರುವ ಹಾಗೆ ಮಾಡಿದರೆಂಬ ಇತಿಹಾಸವು ವರ್ಣಿತವಾಗಿದೆ.

ಈ ಸೂಕ್ತದಲ್ಲಿಯೂ ಮುಂದಿನ ಎರಡು ಸೂಕ್ತದಲ್ಲಿಯೂ ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿದೆ. ಅಶ್ವಿನೀ ದೇವತೆಗಳ ವಿಷಯವನ್ನು ನಾವು ಹಿಂದೆ ಅನೇಕಾವರ್ತಿ ವಿವರಿಸಿದ್ದೇವೆ. ಆದರೂ ಈಗ ಇಲ್ಲಿ ಅವರ ಉತ್ಪತ್ತಿಕ್ರಮ ವನ್ನೂ, ಸೂಕ್ಷ್ಮಪರಿಚಯವನ್ನೂ, ಅವರು ತಮ್ಮನ್ನು ಸ್ತುತಿಸಿದವರಿಗೆ ಮಾಡಿದ ಸಹಾಯದ ವಿವರವನ್ನೂ ಸೂಕ್ಷ್ಮವಾಗಿ ವಿವರಿಸುತ್ತೇವೆ. ಋ. ಸಂ. ಪ್ರಥಮಮಂಡಲದ ೧೧೬, ೧೧೭, ೧೧೮, ೧೧೯, ೧೨೦ ನೇ ಸೂಕ್ತಗಳಲ್ಲಿ (ಋ. ಸಂ. ಭಾಗ ೯)ಯೂ, ಇತರ ಸ್ಥಳಗಳಲ್ಲಿಯೂ ನಾವು ಈ ವಿಷಯವನ್ನು ವಿಸ್ತಾರವಾಗಿ ವಿವರಿಸಿದೇವೆ.

## ಅಶ್ವಿನೀದೇವತೆಗಳ ಉತ್ಪತ್ತಿ

ಅಶ್ವಿನೀದೇವತೆಗಳು ಇಬ್ಬರು. ಅವರಲ್ಲಿ ಒಬ್ಬನಿಗೆ ದಸ್ರ ಎಂತಲೂ ಇನ್ನೊಬ್ಬನಿಗೆ ನಾಸತ್ಯ ಎಂತಲೂ ಹೆಸರಿರುವುದಾದರೂ ಇಬ್ಬರನ್ನೂ ಅನೇಕವೇಳೆ ದಸ್ರಾ ಅಥವಾ ನಾಸತ್ಯಾ ಎಂಬ ದ್ವಿವಚನಾಂತಶಬ್ದದಿಂದಲೇ ಕರೆಯು

೬. ಯಾಸ್ಕರು ತಮ್ಮ ನಿರುಕ್ತದಲ್ಲಿ ಅಶ್ವಿನೀದೇವತೆಗಳ ವಿಷಯವಾಗಿ ಈರೀತಿ ಹೇಳಿದಾರೆ. ಈ ಅಶ್ವಿನೀಗಳ ವಿಷಯದಲ್ಲಿ ಇವರು ಯಾರು ಎಂಬ ವಿಚಾರದಲ್ಲಿ ಆ ಕಾಲದಲ್ಲಿಯೂ ಮತಭೇದವಿದ್ದಂತೆ ಕಾಣುತ್ತದೆ—

ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ । ಅಶ್ವೈರಶ್ವಿನಾವಿತ್ಯೌರ್ಣವಾಭಃ । ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ । ಅಹೋರಾತ್ರಾವಿತ್ಯೇಕೇ । ಸೂರ್ಯಾಚಂದ್ರಮಸಾವಿತ್ಯೇಕೇ । ರಾಜಾನೌ ಪುಣ್ಯಕೃತಾವಿತ್ಯೇಕೇ ॥

(ನಿ. ೧೨-೧)

ೀವತೆಗಳಲ್ಲಿ ಒಬ್ಬನು ಉದಕದಿಂದಲೂ ಇನ್ನೊಬ್ಬನು ಪ್ರಕಾಶದಿಂದಲೂ ಸರ್ವತ್ರ ವ್ಯಾಪಿಸಿರುವುದರಿಂದ ಇವರಿಗೆ ೀದೇವತೆಗಳೆಂದು ಹೆಸರು ಎಂದು ಒಂದು ಮತ. ಅಶ್ವಗಳಿಂದ ಯುಕ್ತರಾಮದರಿಂದ ಇವರಿಗೆ ಅಶ್ವಿನೀದೇವತೆನು ಹೆಸರು ಎಂದು ಔರ್ಣವಾಭರೆಂಬುವರ ಮತ. ಕೆಲವರ ಅಭಿಪ್ರಾಯದಂತೆ ಇವರು ದ್ಯಾವಾಪೃಥಿವಿಗಳು ಕೆಲವರು ಇವರನ್ನು ಅಹೋರಾತ್ರಿಗಳೆಂದು ಹೇಳುವರು. ಮತ್ತೆ ಕೆಲವರ ಅಭಿಪ್ರಾಯದಂತೆ ಇವರೇ ಸೂರ್ಯರು. ಐತಿಹಾಸಕಾರರ ಮತದಂತೆ ಪುಣ್ಯಕರ್ತರಾದ ಇಬ್ಬರು ರಾಜರುಗಳು ಈ ಪದವಿಯನ್ನು ಪಡೆದು ೀದೇವತೆಗಳೆಂದು ಪ್ರಸಿದ್ಧರಾಗಿದಾರೆ. ಹೀಗೆ ಯಾಸ್ಕರು ಮತಭೇದಗಳನ್ನು ತಿಳಿಸಿ ಋ. ಸಂ. ೧-೧೮೧-೪ ್ತ ಅನಿರ್ದಿಷ್ಟವಾದ ಇನ್ನೊಂದು ಮಂತ್ರವನ್ನೂ ಉದಾಹರಿಸಿ ಈ ವಿಷಯದಲ್ಲಿರುವ ಸಂಶಯವನ್ನು ವ್ಯಕ್ತರುವರು.

ವಸಾತಿಷು ಸ್ಮ ಚರಥೋಽಸಿತೌ ಪೇತ್ವಾವಿವ ।
ಕದೇದಮಶ್ವಿನಾ ಯುವಮಭಿ ದೇವಾ ಅಗಚ್ಛತಂ ॥

ಮಂತ್ರದಲ್ಲಿ ಹೇಳಿರುವಂತೆ ಇವರಲ್ಲಿ ಒಬ್ಬನು ವಸಾತಿಪುತ್ರನು ಎಂದರೆ ರಾತ್ರಿಪುತ್ರನು, ಇನ್ನೊಬ್ಬನು ಉಷಃ ್ರನು ಎಂದಾಗುತ್ತದೆ. ಋಕ್ಸಂಹಿತಾವಾಕ್ಯಗಳಲ್ಲಿರುವ ವಿವರಣೆಗಳಿಂದ ಅಶ್ವಿನೀದೇವತೆಗಳ ಸ್ವರೂಪವನ್ನು ್ಕರ್ಷಿಸುವುದಾದರೆ ಕೆಳಗೆ ಉದಾಹರಿಸಿರುವ ಋಕ್ಕುಗಳ ಆಧಾರಗಳನ್ನು ವಿಮರ್ಶಿಸಬಹುದು.

ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ ।
ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ॥

ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ ।
ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ॥

(ಋ ಸಂ. ೧೦-೧೭-೧, ೨)

ಷ್ಟೃವು ತನ್ನ ಮಗಳ ವಿವಾಹಕಾಲದಲ್ಲಿ ಸ್ವಯಂವರವನ್ನು ಏರ್ಪಡಿಸಿ ಸಕಲಪ್ರಪಂಚದ ಜನರನ್ನು ಅಲ್ಲಿ ಒಟ್ಟಾಗಿರುವಂತೆ ಮಾಡಿದನು. ಯಮನ ಮಾತೆಯೂ ವಿವಸ್ವಂತನ ಪತ್ನಿಯೂ ಆದ ಸರಣ್ಯೂದೇವಿಯು ವಿವಾಹವಾದ ತರ ಅದೃಶ್ಯಳಾದಳು ಎಂದರೆ ಅಮರ್ತ್ಯರಾದ ದೇವತೆಗಳು ಈ ಸರಣ್ಯೂದೇವಿಯು ಮರ್ತ್ಯನಾದ ವಿವಸ್ವಂತನನ್ನು

ವಿವಾಹವಾದ್ದರಿಂದ ಅದು ಅನುಚಿತವೆಂದು ಭಾವಿಸಿ ಅವಳನ್ನು ಯಾರಿಗೂ ಕಾಣದಂತೆ ಮರೆಸಿ ಇಟ್ಟರು. ಅ? ಅವರು ಅವಳನ್ನು ಸವರ್ಣಳನ್ನಾಗಿ ಮಾಡಿ ವಿವಸ್ವಂತನಿಗೆ ಕೊಟ್ಟರು. ಅನಂತರ ಅವಳು ಅಶ್ವಿನೀದೇವತೆಗಳನ್ನು ಹಡೆದಳು ಮತ್ತು ಪುತ್ರರಾದ ಅವರನ್ನು ಬಿಟ್ಟು ಹೋದಳು ಎಂದು ಈ ಋಕ್ಕುಗಳ ಅಭಿಪ್ರಾಯವು ಮತ್ತು

ಯಮಾ ಚಿದತ್ರ ಯಮಸೂರಸೂತ ಜಿಹ್ವಾಯಾ ಅಗ್ರಂ ಪತದಾ ಹ್ಯಸ್ಥಾತ್ ।
ವಪೂಂಷಿ ಜಾತಾ ಮಿಥುನಾ ಸಚೇತೇ ತಮೋಹನಾ ತಪುಷೋ ಬುಧ್ನ ಏತಾ ॥

(ಋ ಸು. ೩-೩೯-೩)

ಎಂಬ ಋಕ್ಕಿನಲ್ಲಿ ಅಶ್ವಿನೀದೇವತೆಗಳ ಮಾತೆಯು ಯಮಳರನ್ನೂ (ಅವಳೀಮಕ್ಕಳನ್ನು) ಹಡೆದಳು. ಆ ಯಮಳ ರಿಬ್ಬರೂ ಸಹ ಸಶರೀರಿಗಳಾಗಿ ತಮಸ್ಸನ್ನು ನಾಶಮಾಡಿದರು ಎಂದು ಹೇಳಿದೆ ಎಂದರೆ ಸಾಯಣರು ತಮ್ಮ ಭಾಷ್ಯದಲ್ಲಿ **ಯಮಸೂಃ** ಎಂಬ ಪದಕ್ಕೆ **ಉಷೋಽಭಿಮಾನಿನೀ ದೇವತಾ ಅತ್ರ ಉಷಃಕಾಲೇ ಅಸೂತ** ಎಂದು ಅಶ್ವಿನೀ ದೇವತೆಗಳ ಮಾತೆಯು ಉಷೋದೇವತೆಯು ಎಂದು ಹೇಳಿರುವುದು ಸರ್ವಸಮ್ಮತವೆಂದು ಅನೇಕರು ಒಪ್ಪುತ್ತಾರೆ. ಅಲ್ಲದೆ, ತ್ವಷ್ಟ್ರವು ತನ್ನ ಮಗಳಾದ ಸರಣ್ಯೂದೇವಿಯನ್ನು ವಿವಸ್ವಂತನಿಗೆ ಮದುವೆಮಾಡಿಕೊಟ್ಟುದೂ ಅವರಿಂದ ಅಶ್ವಿನೀದೇವತೆಗಳು ಉತ್ಪನ್ನರಾದುದೂ ಬೃಹದ್ದೇವತೆಯಲ್ಲಿ ಈರೀತಿ ಹೇಳಿದೆ—

ಅಭವನ್ಮಿಥುನಂ ತ್ವಷ್ಟುಃ ಸರಣ್ಯೂಸ್ತ್ರಿಶಿರಾಃ ಸಹ ।
ಸ ವೈ ಸರಣ್ಯೂಂ ಪ್ರಾಯಚ್ಛತ್ಸ್ವಯಮೇವ ವಿವಸ್ವತೇ ॥

ತತಃ ಸರಣ್ವ್ಯಾಂ ಜಜ್ಞಾತೇ ಯಮಯಮ್ಯೌ ವಿವಸ್ವತಃ ।
ತೌ ಚಾಪ್ಯುಭೌ ಯಮಾವೇವ ಜ್ಯಾಯಾಂಸ್ತಾಭ್ಯಾಂ ತು ವೈ ಯಮಃ ॥

ಸೃಷ್ಟ್ವಾ ಭರ್ತುಃ ಪರೋಕ್ಷಂ ತು ಸರಣ್ಯೂಃ ಸದೃಶೀಂ ಸ್ತ್ರಿಯಂ ।
ನಿಕ್ಷಿಪ್ಯ ಮಿಥುನಂ ತಸ್ಯಾಮಶ್ವಾ ಭೂತ್ವಾಪಚಕ್ರಮೇ ॥

ಅವಿಜ್ಞಾನಾದ್ವಿವಸ್ವಾಂಸ್ತು ತಸ್ಯಾಮಜನಯನ್ಮನುಂ ।
ರಾಜರ್ಷಿರಭವತ್ಸೋಽಪಿ ವಿವಸ್ವಾನಿವ ತೇಜಸಾ ॥

ಸ ವಿಜ್ಞಾಯ ತ್ವಪಕ್ರಾಂತಾಂ ಸರಣ್ಯೂಮಶ್ವರೂಪಿಣೀಂ ।
ತ್ವಾಷ್ಟ್ರೀಂ ಪ್ರತಿ ಜಗಾಮಾಶು ವಾಜೀ ಭೂತ್ವಾ ಸಲಕ್ಷಣಃ ॥

ಸರಣ್ಯೂಶ್ಚ ವಿವಸ್ವಂತಂ ವಿದಿತ್ವಾ ಹಯರೂಪಿಣಂ ।
ಮೈಥುನಾಯೋಪಚಕ್ರಾಮ ತಾಂ ಚ ತತ್ರಾರುರೋಹ ಸಃ ॥

ತತಸ್ತಯೋಸ್ತು ವೇಗೇನ ಶುಕ್ರಂ ತದಪತದ್ಭುವಿ ।
ಉಪಾಜಿಘ್ರಚ್ಚ ಸಾ ತ್ವಶ್ವಾ ತಚ್ಛುಕ್ರಂ ಗರ್ಭಕಾಮ್ಯಯಾ ॥

ಆಘ್ರಾತಮಾತ್ರಾಚ್ಛುಕ್ರಾತ್ತು ಕುಮಾರೌ ಸಂಬಭೂವತುಃ ।
ನಾಸತ್ಯಶ್ಚೈವ ದಸ್ರಶ್ಚ ಯೌ ಸ್ತುತಾವಶ್ವಿನಾವಿತಿ ॥

**ಃಹಾಸಮಿಮಂ ಯೊಸ್ಕಃ ಸರಣ್ಯ್ವಾದೇವತೇ ದ್ವ್ಯಚೇ ।**
**ತಸ್ವತಶ್ಚ ತ್ವಷ್ಟ್ವಶ್ಚ ತ್ವಷ್ಟೇತಿ ಸಹ ಮನ್ಯತೇ ॥**

(ಬೃ. ದೇ. ೬-೧೬೨ ರಿಂದ ೭-೬)

ರಣ್ಯ್ವಾ ಎಂಬ ಕನ್ಯೆಯೂ ತ್ರಿಶಿರಸ್ಸೆಂಬ ಪುತ್ರನೂ ಇದ್ದರು. ಅವನು ತನ್ನ ಮಗಳಾದ ಸರಣ್ಯ್ವಾವನ್ನು ೯ ವಿವಾಹಮಾಡಿಕೊಟ್ಟನು. ಅನಂತರ ವಿವಸ್ವಂತನಿಗೆ ಪತ್ನಿಯಾದ ಸರಣ್ಯ್ವಾವಿನಲ್ಲಿ ಯಮ ಮತ್ತು ಬ ಇಬ್ಬರು ಮಕ್ಕಳು ಹುಟ್ಟಿದರು. ಇವರಿಬ್ಬರೂ ಒಂದಿಗೆ ಹುಟ್ಟಿದ ಅವಳಿ ಮಕ್ಕಳು. ಅವರಲ್ಲಿ ರಿಯವನು. ಒಂದು ದಿನ ಪತಿಯಾದ ವಿವಸ್ವಂತನು ಇಲ್ಲದಿರುವ ವೇಳೆಯಲ್ಲಿ ಸರಣ್ಯ್ವಾವು ತನ್ನನ್ನೇ ಮತ್ತೊರ್ವ ಸ್ತ್ರೀಯನ್ನು ನಿರ್ಮಿಸಿ ತನ್ನ ಅವಳಿಮಕ್ಕಳನ್ನು ಅವಳ ವಶಕ್ಕೆ ಒಪ್ಪಿಸಿ ತಾನು ಅಶ್ವರೂಪವನ್ನು ಸ್ಥಾನವನ್ನು ಬಿಟ್ಟು ವಿವಸ್ವಂತನಿಗೆ ತಿಳಿಯದಂತೆ ಬೇರೆ ಜಾಗಕ್ಕೆ ಹೋಗಿ ಅದೃಶ್ಯಳಾಗಿದ್ದಳು. ಆದರೆ ಗೆ ಇದರ ಅರಿವು ಇಲ್ಲದೆ ಸರಣ್ಯ್ವಾವಿಗೆ ಪ್ರತಿನಿಧಿಯಾಗಿದ್ದ ಆ ಸ್ತ್ರೀವ್ಯಕ್ತಿಯೊಂದಿಗೆ ಸೇರಿದನು. ಅದರ ನುವಿನ ಉತ್ಪತ್ತಿಯಾಯಿತು. ಮನುವೂ ಸಹ ತಂದೆಯಂತೆಯೇ ತೇಜಸ್ವಿಯಾಗಿ ದೊಡ್ಡ ರಾಜರ್ಷಿ ಇವನ ಕೀರ್ತಿಯು ಸಕಲ ಲೋಕಗಳಲ್ಲಿಯೂ ಹರಡಿತು. ಕೆಲವು ಕಾಲದ ಮೇಲೆ ವಿವಸ್ವಂತನಿಗೆ ಅರಿವುಂಟಾಯಿತು. ಸರಣ್ಯ್ವಾವು ಅಶ್ವರೂಪದಲ್ಲಿ ಹೊರಟುಹೋಗಿದ್ದಾಳೆಂದು ತಿಳಿದನಂತರ ತಾನೂ ಸಹ ರೂಪವನ್ನು ಹೊಂದಿ ತ್ವಷ್ಟೃವಿನ ಪುತ್ರಿಯು ಹೋದಸ್ಥಳಕ್ಕೆ ಅವಳನ್ನು ಹಿಂಬಾಲಿಸಿ ಹೊರಟು ಅವಳನ್ನು ಯತ್ನಿಸಿದನು. ತನ್ನನ್ನು ಹಿಂಬಾಲಿಸಿ ವಿವಸ್ವಂತನೂ ಅಶ್ವರೂಪನಾಗಿ ಬಂದುದನ್ನು ತಿಳಿದ ಸರಣ್ಯ್ವಾವು ನಿಗೆ ಸಂಭೋಗಸುಖವನ್ನಿಚ್ಛಿಸಿದಳು. ಆಗ ವಿವಸ್ವಂತನು ಅವಳ ಇಚ್ಛೆಯನ್ನು ನೆರವೇರಿಸಿದನು. ಅವರ ಾದ ಉತ್ಸಾಹಕಾಲದಲ್ಲಿ ವಿವಸ್ವಂತನ ವೀರ್ಯವು ನೆಲದಮೇಲೆ ಬಿದ್ದಿತು. ಆಗ ಸರಣ್ಯ್ವಾವು ಗರ್ಭಧಾರ ಂದ ಅದನ್ನು ಆಘ್ರಾಣಿಸಿದಳು. ಆ ಶುಕ್ರವನ್ನು (ರೇತಸ್ಸನ್ನು) ಮೂಸಿ ನೋಡಿದೊಡನೆಯೇ ಅವಳಿಗೆ ತ್ಪತ್ತಿಯುಂಟಾಗಿ ಅದರಿಂದ ನಾಸತ್ಯ, ದಸ್ರ ಎಂಬ ಇಬ್ಬರು ಯುವಕರು ಉತ್ಪನ್ನರಾದರು. ಅನಂತರ ಶ್ವಿನೀದೇವತೆಗಳು ಎಂಬ ಹೆಸರಿನಿಂದ ಕರೆಯಲ್ಪಟ್ಟು ಇವರ ಮಹಿಮೆಯು ಲೋಕಗಳಲ್ಲೆಲ್ಲಾ ಹರಡಿತು

## ಅಶ್ವಿನೀದೇವತೆಗಳ ರಥವರ್ಣನೆ ಇತ್ಯಾದಿ

ಅಶ್ವಿನೀದೇವತೆಗಳ ರಥವು ಸುವರ್ಣಮಯವಾದುದು ಮತ್ತು ಚಕ್ರ, ಅಚ್ಚು ಮೊದಲಾದ ಭಾಗಗಳೆಲ್ಲವೂ ದ ಮಾಡಿದುದು (ಋ. ಸಂ. ४-४४-४; ೧-೧೮೦-೧, ೮-೫-೨೯, ೮-೨೨-೫ ಇತ್ಯಾದಿ) ಅದು ಒಂದು ವಿಲಕ್ಷಣ ಥ. ಅದಕ್ಕೆ ಮೂರು ಚಕ್ರ, ಮೂರು ನೇಮಿ ಮತ್ತು ಬೇರೆ ಕೆಲವು ಭಾಗಗಳೂ ಮೂರು ಮೂರು ವು. ಅದು ಮನೋವೇಗವುಳ್ಳದ್ದು. ಮೂರು ಚಕ್ರದ ರಥವೆಂದರೆ ಅವರೊಬ್ಬರದೇ.

**ಯದಯಾತಂ ಶುಭಸ್ಪತೀ ವರೇಯಂ ಸೂರ್ಯಾಮುಪ ।**
**ಕ್ವೈಕಂ ಚಕ್ರಂ ವಾಮಾಸೀತ್ ಕ್ವ ದೇಷ್ಟ್ರಾಯ ತಸ್ಥತುಃ ॥**

(ಋ ಸಂ. ೧೦-೮೫-೧೫)

ಎಂಬಲ್ಲಿ ಸೂರ್ಯಾದೇವಿಯ ವಿವಾಹಕ್ಕೆ ಹೋದಾಗ ರಥದ ಒಂದು ಚಕ್ರವು ಹಾಳಾಗಿ ಹೋಯಿತೆಂದು ಹೇಳಿದೆ. ಈ ವಿಷಯದಲ್ಲಿ ಐತರೇಯಬ್ರಾಹ್ಮಣರಲ್ಲಿ ಒಂದು ಇತಿಹಾಸವಿದೆ—

> **ಪ್ರಜಾಪತಿಃ ಸವಿತುಃ ದುಹಿತರಂ ಸೂರ್ಯಾಂ ಸೋಮಾಯ ರಾಜ್ಞೇ ಪ್ರಾಯಚ್ಛತ್ । ಯೇ ತ್ವನ್ಯೇ ದೇವಾಃ ತಾಂ ವರಯಿತುಮಾಗಚ್ಛನ್ । ತೇಭ್ಯೋ ವಿವಾಹಾದನಂತರಮ್ಯೃಕ್ಸಹಸ್ರಮುದದಾತ್। ಯದೇತದಾಶ್ವಿನಂ ನಾಮ ತಸ್ಮಿನ್ದೇವಾ ವಿವಾದಮಕುರ್ವನ್ । ಮಮೇದಮಸ್ತು ಮಮೇದಮಸ್ತ್ವಿತಿ । ತೇಽಬ್ರುವನ್ । ಆಜಿಂ ಧಾವಾಮ । ಯೋ ನೋ ಜೇಷ್ಯತಿ ತಸ್ಯೇದಂ ಭವಿಷ್ಯತೀತಿ । ತೇಽಗ್ನೇರ್ಗೃಹಪತೇರುಪರ್ಯಾದಿತ್ಯಂ ಕಾಷ್ಠಾಂ ಕೃತ್ವಾಽಭಿಧಾವನ್ । ಕಾಷ್ಠಾ ಆಜ್ಯಂತ ಉಚ್ಯತೇ । ಅಶ್ವತರೀರಥೇನಾಗ್ನಿರಾಜಿಮಧಾವತ್ । ಗೋಭಿರರುಣೈರುಷಾಃ । ಹರಿರಥೇನೇಂದ್ರಃ । ಗರ್ದಭರಥೇನಾಶ್ವಿನೌ । ತತ್ರಾಶ್ವಿನಾವಜಯತಾಂ ॥**

ಬ್ರಹ್ಮನು ಸವಿತೃದೇವನ ಸೂರ್ಯಾ ಎಂಬ ಹೆಸರುಳ್ಳ ಮಗಳನ್ನು ರಾಜನಾದ ಸೋಮನಿಗೆ ವಿವಾಹಮಾಡಿಕೊಟ್ಟನು ಆಗ ಇತರ ದೇವತೆಗಳು ಅವಳನ್ನು ವರಿಸುವುದಕ್ಕಾಗಿ ಬಂದರು. ವಿವಾಹವಾದನಂತರ ಅವನು ಅವರಿಗೆ ಒಂದು ಸಾವಿರ ಋಕ್ಕುಗಳನ್ನು ಕೊಟ್ಟನು. ಈ ಋಕ್ಕಗಳಿಗೆ ಆಶ್ವಿನಋಕ್ಕಗಳೆಂಬ ಹೆಸರು ಪ್ರಸಿದ್ಧವಾಯಿತು. ಈ ಋಕ್ಕುಗಳನ್ನು ಅಲ್ಲಿಗೆ ಬಂದಿದ್ದ ದೇವತೆಗಳು ನನಗೆ ಬೇಕು, ತನಗೆ ಬೇಕು ಎಂದು ಪರಸ್ಪರ ವಿವಾದಮಾಡಿದರು. ಅನಂತರ ಅವರು ಒಂದು ಸ್ಪರ್ಧೆಯನ್ನು ಏರ್ಪಡಿಸಿ ಅದರಲ್ಲಿ ಗೆದ್ದವರು ಈ ಋಕ್ಕುಗಳನ್ನು ಪಡೆಯಬಹುದೆಂದು ತಮ್ಮಲ್ಲಿಯೇ ನಿರ್ಣಯಮಾಡಿಕೊಂಡರು. ಅನಂತರ ಅವರು ಗೃಹಪತಿಯಾದ ಅಗ್ನಿಯ ಬಳಿಯಿಂದ ಆದಿತ್ಯನವರೆಗೆ ಹೋಗುವುದೇ ಸ್ಪರ್ಧೆಯೆಂದೂ ಅದರಲ್ಲಿ ಯಾರು ಮೊದಲು ಹೋಗಿ ಸೇರುವರೋ ಅವರೇ ಗೆದ್ದವರೆಂದು ನಿಷ್ಕರ್ಷಿಸಲಾಗುವುದೆಂದೂ ನಿಷ್ಕರ್ಷಿಸಿದರು ಆಗ ಅಗ್ನಿಯು ಹೇಸರಕತ್ತೆಯನ್ನು ಕಟ್ಟಿದ ರಥದಿಂದ ಓಡಲು ಸಿದ್ಧನಾದನು. ಉಷೋದೇವಿಯು ಕೆಂಪುಬಣ್ಣದ ಗೋವುಗಳನ್ನು ಕಟ್ಟಿದ ರಥದಲ್ಲಿ ಕುಳಿತು ಬಂದಳು. ಇಂದ್ರನು ತನ್ನ ಹರೀ ಎಂಬ ಕುದುರೆಗಳನ್ನು ಕಟ್ಟಿದ ರಥವನ್ನು ಹತ್ತಿ ಬಂದನು. ಅಶ್ವಿನೀದೇವತೆಗಳು ರಾಸಭಾ ಎಂಬ ಕತ್ತೆಗಳನ್ನು ಕಟ್ಟಿದ ತಮ್ಮ ರಥವನ್ನು ಹತ್ತಿ ಅಲ್ಲಿಗೆ ಬಂದರು. ಅನಂತರ ಅವರೆಲ್ಲರೂ ತಮ್ಮ ತಮ್ಮ ತಮ್ಮ ವಾಹನಗಳನ್ನೇರಿ ನಿರ್ದಿಷ್ಟಸ್ಥಳವನ್ನು ಸೇರುವುದಕ್ಕಾಗಿ ಓಡುವಾಗ ಅಶ್ವಿನೀದೇವತೆಗಳಿಗೆ ಜಯವು ಲಭಿಸಿತು. ಪಣವಾದ ಒಂದು ಸಾವಿರ ಋಕ್ಕಗಳು ಅವರಿಗೇ ದೊರೆತವು. ಆದ್ದರಿಂದಲೇ ಆ ಋಕ್ಕುಗಳಿಗೆ ಆಶ್ವಿನಋಕ್ಕುಗಳೆಂಬ ಹೆಸರು ಪ್ರಸಿದ್ಧವಾಯಿತು ಎಂಬ ಇತಿಹಾಸದಲ್ಲಿ ಅಶ್ವಿನೀದೇವತೆಗಳ ರಥದ ಶ್ರೇಷ್ಠತೆಯು ಉಕ್ತವಾಗಿದೆ.

ಅಶ್ವಿನೌ ಎಂಬ ಶಬ್ದಕ್ಕೆ ಅಶ್ವ (ಕುದುರೆ) ವುಳ್ಳವರು ಎಂದರ್ಥವಾದರೂ ಅವರು ಅಶ್ವಾರೋಹಿಗಳಾದುದರಿಂದ ಆ ಹೆಸರು ಅವರಿಗೆ ಬಂದಿದೆ ಎಂದು ಎಲ್ಲಿಯೂ ಹೇಳಿಲ್ಲ. ಅವರ ರಥವನ್ನುಎಳೆಯುವ ಅಶ್ವಗಳು (ಋ ಸಂ. ೧-೧೧೭-೨) ಪಕ್ಷಿಗಳು (೬-೬೩-೬) ಹಂಸಗಳು (೪-೪೫-೪) ಗರುಡಪಕ್ಷಿಗಳು (೧-೧೧೮-೪) ಶ್ಯೇನರೂಪವಾದ ಅಶ್ವಗಳು (೮-೫-೭) ಎಂದು ಹೇಳಿದೆ. ಆದರೆ ಅವರ ಮುಖ್ಯವಾಹನವು ಯಾಸ್ಕರು ಹೇಳಿರುವಂತೆ **ರಾಸಭಾವಶ್ವಿನೋಃ**-ಅಶ್ವಿನೀದೇವತೆಗಳಿಗೆ ಕತ್ತೆಗಳೇ ವಾಹನಗಳ. (ನಿ. ೨-೨೮).

ಕದಾ ಯೋಗೋ ವಾಜಿನೋ ರಾಸಭಸ್ಯ ಯೇನ ಯಜ್ಞಂ ನಾಸತ್ಯೋಪಯಾಥಃ ।

(ಋ. ಸಂ. ೧-೩೪-೯)

ತದ್ರಾಸಭೋ ನಾಸತ್ಯಾ ಸಹಸ್ರಮಾಜಾ ಯಮಸ್ಯ ಪ್ರಧನೇ ಜಿಗಾಯ ।

(ಋ. ಸಂ. ೧-೧೧೬-೨)

ದಿ ಋಕ್ಕುಗಳಲ್ಲಿ ರಾಸಭವೇ (ಕತ್ತೆ) ಅಶ್ವಿನೀದೇವತೆಗಳ ವಾಹನವೆಂದು ಸ್ಪಷ್ಟವಾಗಿ ಹೇಳಿದೆ.

ಅವರನ್ನು ಯಾವಾಗಲೂ ಯಜ್ಞಮಾಡುವವರು ಪ್ರಾತಃಕಾಲಗಳಲ್ಲಿಯೇ ಆಹ್ವಾನ ಮಾಡುತ್ತಾರೆ. ಸೂರ್ಯ ಯೊಡನೆ ಇವರಿಗೆ ಸಂಬಂಧವಿದೆ, ಸೂರ್ಯೆಯೇ ಅವರನ್ನು ವರಿಸಿದಳು (ಋ. ಸಂ. ೭-೬೯-೪) ಅವರಿಬ್ಬರೂ ೆ ಪತಿಯರು (೪-೪೩-೬) ಸೂರ್ಯೆಯು ಅವರ ರಥವನ್ನು ಏರಿದಳು (೫-೭೩-೫ ; ೮. ೮-೧೦) ಸೂರ್ಯನ ಪುತ್ರಿಯು ರಥವನ್ನು ಏರುತ್ತಾಳೆ (ಋ. ಸಂ. ೧-೩೪-೫ ; ೧-೧೧೬-೧೭ ; ೧-೧೧೮-೫ ; ೬-೬೩-೫) ಅವರು ಸೂರ್ಯೆ ನ್ನ ತಮ್ಮವಳೆಂದು ಭಾವಿಸುತ್ತಾರೆ (೭ ೬೮-೩) ಮತ್ತು ಅವಳು ರಥದಲ್ಲಿ ಅವರ ಜೊತೆಯಲ್ಲಿ ಹೋಗುತ್ತಾಳೆ ೨೯-೮) ಇತ್ಯಾದಿ ವರ್ಣನೆಗಳಿವೆ.

ಅವರು ಜನರಿಗೆ ಕಷ್ಟದಲ್ಲಿ ನೆರವಾಗುತ್ತಾರೆ ಎಂಬುದಕ್ಕೆ ಅನೇಕ ಆಖ್ಯಾಯಿಕೆಗಳಿವೆ. ಇವುಗಳನ್ನು ಆಯಾ ದರ್ಭಗಳಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ. ಆದರೆ ಅವುಗಳಲ್ಲಿ ಮುಖ್ಯವಾದ ಕೆಲವನ್ನು ಮಾತ್ರ ಇಲ್ಲಿ ರಿಸಿದ್ದೇವೆ.

ಜುಜುರುಷೋ ನಾಸತ್ಯೋತ ವವ್ರಿಂ ಪ್ರಾಮುಂಚತಂ ದ್ರಾಪಿಮಿವ ಚ್ಯವಾನಾತ್ ।
ಪ್ರಾತಿರತಂ ಜಹಿತಸ್ಯಾಯುರ್ದಸ್ರಾದಿತ್ಪತಿಮಕೃಣುತಂ ಕನೀನಾಂ ॥

(ಋ. ಸಂ. ೧-೧೧೬-೧೦)

ಚ್ಯವನನೆಂಬ ಋಷಿಯು ಬಹಳ ವೃದ್ಧನಾಗಿ ದೇಹವು ಶಿಥಿಲವಾಗಿ ಶಕ್ತಿಯಿಲ್ಲದಿರುವಾಗ ಅವನ ಜನರು ನನ್ನು ತ್ಯಜಿಸಿದರು. ಈ ಋಷಿಯು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರು ಬಂದು ಇವನ ಶಿಥಿಲವಾದ ಹವನ್ನು ಕಳೆದು ಯುವಕನನ್ನಾಗಿ ಮಾಡಿ ಇವನ ಪತ್ನಿಗೆ ಪ್ರಿಯನನ್ನಾಗಿ ಮಾಡಿದರು ಮತ್ತು ಅವನ ಆಯುಸ್ಸನು ಚ್ಚಿಸಿದರು ಎಂದಿದೆ. ಇದೇ ವಿಷಯವು—

ಯುವಂ ಚ್ಯವಾನಮಶ್ವಿನಾ ಜರಂತಂ ಪುನರ್ಯುವಾನಂ ಚಕ್ರಥುಃ ಶಚೀಭಿಃ ।

(ಋ. ಸಂ. ೧-೧೧೭-೧೩)

ನಿಷ್ಟೌಗ್ರ್ಯಂ ಪಾರಯಥಃ ಸಮುದ್ರಾತ್ಪುನಶ್ಚ್ಯವಾನಂ ಚಕ್ರಥುರ್ಯುವಾನಂ ।

(ಋ. ಸಂ. ೧-೧೧೮-೬)

ಪ್ರ ಚ್ಯವಾನಾಜ್ಜುಜುರುಷೋ ವವ್ರಿಮತ್ಕಂ ನ ಮುಂಚಥಃ ।
ಯುವಾ ಯದೀ ಕೃಥಃ ಪುನರಾ ಕಾಮಮೃಣ್ವೇ ವಧ್ವಃ ॥

(ಋ. ಸಂ. ೫-೭೪-೫)

ಉತ ತ್ಯದ್ವಾಂ ಜುರತೇ ಅಶ್ವಿನಾ ಭೂಚ್ಚ್ಯವಾನಾಯ ಪ್ರತೀತ್ಯಂ ಹವಿರ್ದೇ ।

(ಋ. ಸಂ. ೭-೬೮-೬)

ಯುವಂ ಚ್ಯವಾನಂ ಜರಸೋಽಮುಮುಕ್ತಂ ನಿ ಪೇದವ ಊಹಥುರಾಶುಮಶ್ವಂ ।

(ಋ. ಸಂ. ೭-೭೧-೫)

ಯುವಂ ಚ್ಯವಾನಂ ಸನಯಂ ಯಥಾ ರಥಂ ಪುನರ್ಯುವಾನಂ ಚರಥಾಯ ತಕ್ಷಥುಃ ।

(ಋ. ಸಂ. ೧೦-೩೯-೪)

ಈ ಋಕ್ಕುಗಳಲ್ಲಿಯೂ ವೃದ್ಧನಾದ ಚ್ಯವನಋಷಿಯನ್ನು ಯುವಕನನ್ನಾಗಿ ಮಾಡಿದ ವಿಷಯದ ವರ್ಣನೆಯಿದೆ. ಶತಪಥ ಬ್ರಾಹ್ಮಣದಲ್ಲಿಯೂ ಈ ವಿಷಯಕವಾದ ವಿಸ್ತಾರವಾದ ಇತಿಹಾಸವಿದೆ. ಅದರಂತೆಯೇ—

ಯುವಂ ವಿಪ್ರಸ್ಯ ಜರಣಾಮುಪೇಯುಷಃ ಪುನಃ ಕಲೇರಕೃಣುತಂ ಯುವದ್ವಯಃ ।

(ಋ. ಸಂ. ೧೦-೩೯-೮)

ಎಂಬ ಋಕ್ಕಿನಲ್ಲಿ ಕಲಿ ಎಂಬುವನ ಮುಪ್ಪನ್ನು ಹೋಗಲಾಡಿಸಿ ಅವನನ್ನು ಯುವಕನನ್ನಾಗಿ ಮಾಡಿದ ವಿಷಯದ ಪ್ರಸ್ತಾಪವಿದೆ.

ಯಾಭಿರ್ವಮ್ರಂ ವಿಪಿಪಾನಮುಪಸ್ತುತಂ ಕಲಿಂ ಯಾಭಿರ್ವಿತ್ತಜಾನಿಂ ದುವಸ್ಯಥಃ ।

(ಋ. ಸಂ. ೧ ೧೧೨ ೫)

ಎಂಬ ಮೇಲೆ ಹೇಳಿದ ಕಲಿ ಎಂಬುವನು ಪತ್ನಿಯನ್ನು ಪರಿಗ್ರಹಿಸಿ ಮದುವೆಯಾದಾಗ ಅವನಿಗೆ ತಮ್ಮ ನೆರವನ್ನು ನೀಡಿ ಅನೇಕ ಸಹಾಯಗಳನ್ನು ಮಾಡಿದರೆಂದು ಹೇಳಿದೆ.

ಅವರು **ವಿಮದನ** ಪತ್ನಿಯರಾದ ಯುವತಿಯರಿಗೋಸ್ಕರ ಒಂದು ರಥವನ್ನೂ (೧-೧೧೨-೧೯) ಅಥವಾ ಇವನಿಗೆ **ಓರ್ವ ಪತ್ನಿಯನ್ನೂ** (೧-೧೧೭-೧) ಅನುಗ್ರಹಿಸಿದರು. ಅವಳು **ಪುರಮಿತ್ರನ** ಪತ್ನಿಯಾಗಿದ್ದಳೆಂದು ತೋರುತ್ತದೆ. (ಋ. ಸಂ. ೧-೧೧೭-೨೦ ; ೧೦-೩೯-೭) ಮತ್ತು ಅವಳ ಹೆಸರು ಕಮದ್ಯು (೧೦-೬೫-೧೨)

**ಕೃಷ್ಣ** ಎಂಬುವನ ಮಗನಾದ **ವಿಶ್ವಕನಿಗೆ** ಕಳೆದುಹೋಗಿದ್ದ ಅವನ ಮಗನನ್ನು ತಂದು ಒಪ್ಪಿಸಿದರು (ಋ. ಸಂ. ೧-೧೧೬-೨೩ ; ೧-೧೧೭-೭; ೧೦-೬೫-೧೨) ಋ. ಸಂ. ೮-೭೫-೧ ರಿಂದ ೩ನೆಯ ಋಕ್ಕುಗಳಲ್ಲಿ **ವಿಶ್ವಕ** ಮತ್ತು ವಿಷ್ಣಾಪುಗಳ ಹೆಸರುಗಳು ಸೂಚಿತವಾಗಿವೆ.

**ಭುಜ್ಯುವಿನ** ಕಥೆಯು ಪದೇ ಪದೆ ಹೇಳಲ್ಪಟ್ಟಿದೆ. ಭುಜ್ಯುವು ತುಗ್ರ ಎಂಬ ರಾಜನ ಪುತ್ರನು. ಇವನು ಸಮುದ್ರಯಾನಮಾಡುತ್ತಿರುವಾಗ ಮುಳುಗಿಹೋಗುತ್ತಿರಲು, ಅಲೆಗಳ ಮಧ್ಯದಲ್ಲಿ ಭುಜ್ಯುವು ಒಂದು ಮರದ ತುಂಡನ್ನು ಹಿಡಿದುಕೊಂಡು ತೇಲಾಡುತ್ತಿದ್ದನು. ಆಗ ಅವನು ಅಶ್ವಿನೀದೇವತೆಗಳನ್ನು ಮರೆಹೊಕ್ಕನು. ಆಳವೇ ತಿಳಿಯದ ಮಹಾಸಾಗರದಲ್ಲಿ ನೂರುಹುಟ್ಟುಗಳಿಂದ ಕೂಡಿದ ನೌಕೆಯಲ್ಲಿ ಅವನನ್ನು ಕೂಡಿಸಿಕೊಂಡು ಅಶ್ವಿನೀದೇವತೆಗಳು ಮನೆಗೆ ಕರೆದುಕೊಂಡು ಹೋದರು. ಆಕಾಶದಲ್ಲಿ ಹಾರುವಂತೆ ತೋರುತ್ತಿದ್ದ, ಒಡಕುಗಳಿಲ್ಲದ ಹಡಗಿನಲ್ಲಿ ಅಥವಾ

ಗಳುಳ್ಳ ನಾಲ್ಕು ದೋಣಿಗಳಲ್ಲಿ, ಅಥವಾ ನೂರು ಪಾದಗಳು ಮತ್ತು ಆರು ಕುದುರೆಗಳುಳ್ಳ, ಹಾರುವ ಮೂರು ರಥಗಳಲ್ಲಿ ಅಥವಾ ಮನೋವೇಗವುಳ್ಳ ತಮ್ಮ ರಥದಲ್ಲಿ ವೇಗಶಾಲಿಗಳಾಗಿ ಹಾರಿಹೋಗುವ ತಮ್ಮ ಅಶ್ವಗಳ ಸಹಾಯದಿಂದ ಭುಜ್ಯುವನ್ನು ಕುಳ್ಳಿರಿಸಿಕೊಂಡು ಬಂದು ಅವನ ಮನೆಗೆ ಸೇರಿಸಿದರು. ೧-೧೧೬-೩,೪, ೫ ; ೧-೧೧೭-೧೪, ೧೫ ; ೧೮೨-೫, ೬, ೭ ; ೭-೬೮-೭ ; ೧-೧೧೨-೬, ೨೦ ; ೧-೧೧೮-೬ ; ೧-೧೧೯-೪ ; ೧-೧೫೮-೩ ; ೬-೬೨-೬ ; -೬೯-೭ ; ೮-೫-೨೨ ; ೧೦-೩೯-೪ ; ೧೦-೪೦-೭ ; ೧೦-೬೫-೧೨ ; ೧೦-೧೪೩-೫)

**ವಿಶ್ಪಲಾ** ಎಂಬ ಸ್ತ್ರೀಯು ಯುದ್ಧದಲ್ಲಿ ಕಾಲು ಕತ್ತರಿಸಿಹೋಗಲು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದಾಗ ಅವರು ಬಂದು ಅವಳಿಗೆ ಕಬ್ಬಿಣದ ಕಾಲನ್ನು ಒದಗಿಸಿಕೊಟ್ಟು ಕಾಪಾಡಿದರೆಂದು ಋ. ಸಂ. ೧-೧೧೨-೧೦ ; ೧-೧೧೬-೧೫ ; ೧-೧೧೭-೧೧ ; ೧-೧೧೮-೮ ; ೧೦ ೩೯-೮ ಎಂಬ ಸೂಕ್ತಗಳಲ್ಲಿ ಹೇಳಿದೆ.

ಅಶ್ವಿನೀದೇವತೆಗಳ ವಾಹನವಾದ ರಾಸಭವು **ತೋಳನ ರೂಪದಲ್ಲಿದ್ದಾಗ ಋಜ್ರಾಶ್ವ** ನೆಂಬುವನು ತಾನು ಕಾಯುತ್ತಿದ್ದ ಕುರಿಗಳ ಮಂದೆಯಲ್ಲಿ ಒಂದುನೂರು ಕುರಿಗಳನ್ನು ಕತ್ತರಿಸಿ ಆ ತೋಳಕ್ಕೆ ಆಹಾರವಾಗಿ **ಕೊಟ್ಟನು.** ಇದರಿಂದ ಅವನ ತಂದೆಗೆ ಕೋಪಬಂದು ಋಜ್ರಾಶ್ವನ ಕಣ್ಣನ್ನು ಕೀಳಿಸಿ ಕುರುಡನನ್ನಾಗಿ ಮಾಡಿದನು. ಆಗ ತೋಳವು ಅಶ್ವಿನೀದೇವತೆಗಳನ್ನು ಸ್ತುತಿಸಿತು. ಅವರು ತುಷ್ಟರಾಗಿ ಋಜ್ರಾಶ್ವನಿಗೆ ಕಣ್ಣನ್ನು ಕೊಟ್ಟರು. (ಋ ಸಂ. ೧-೧೧೬-೧೬: ೧-೧೧೭-೧೭, ೧೮) ಋ. ಸಂ. ೧-೧೦೦-೧೭ನೆಯ ಋಕ್ಕಿನಲ್ಲಿ ಋಜ್ರಾಶ್ವನೆಂಬುವನು ಇಂದ್ರನನ್ನು ಸ್ತೋತ್ರಮಾಡಿದ ವಿಷಯವಿದೆ.

**ಪಾರಾವೃಜ**ನೆಂಬುವನು ಕುರುಡನೂ ಕುಂಟನೂ ಆಗಿದ್ದನು. ಮತ್ತು ಅವನು ಜಾತಿಯಲ್ಲಿ ಸೇರಿಸಲ್ಪಟ್ಟಿರಲಿಲ್ಲ. ಅವನಿಗೆ ಅಶ್ವಿನೀದೇವತೆಗಳು ನೋಡುವ ದೃಷ್ಟಿಯನ್ನೂ, ನಡೆಯುವ ಶಕ್ತಿಯನ್ನೂ ಕೊಟ್ಟರು. ಎಂದರೆ ಕಣ್ಣುಗಳನ್ನೂ, ಕಾಲುಗಳನ್ನೂ ಅನುಗ್ರಹಿಸಿದರು (ಋ ಸಂ ೧-೧೧೨-೮) ಪಾರಾವೃಜನೆಂಬುವನ ಹೆಸರು ಇಂದ್ರನ ವಿಷಯದಲ್ಲಿ ಪ್ರಸ್ತಾಪ ಬಂದಾಗ ಋ. ಸ. ೨-೧೩-೧೨; ೨-೧೫-೭ ಋಕ್ಕುಗಳಲ್ಲಿ **ಸೂಚಿತವಾಗಿರುವುದು.**

**ರೇಭ**ನೆಂಬ ಋಷಿಯನ್ನು ದುಷ್ಟರು ಕೈಕಾಲು ಕಟ್ಟಿಹಾಕಿ ಒಂದು ಭಾವಿಯಲ್ಲಿ ಹಾಕಿದ್ದರು ಒಂಭತ್ತು ಹಗಲು ಹತ್ತು ರಾತ್ರಿಗಳ ಪರ್ಯಂತರ ಅವನು ಅಲ್ಲಿಯೇ ಬಿದ್ದಿದ್ದು ಸಾಯುವ ಸ್ಥಿತಿಯಲ್ಲಿದ್ದನು. ಅವನನ್ನು ಅಶ್ವಿನೀ ದೇವತೆಗಳು, ಸೋಮರಸವನ್ನು ಸೌಟಿನಿಂದ ಎತ್ತುವಂತೆ ಭಾವಿಯಿಂದ ಮೇಲಕ್ಕೆತ್ತಿ ಜೀವದಾನಮಾಡಿದರು, (ಋ. ಸಂ. ೧-೧೧೨-೫; ೧-೧೧೬-೨೪; ೧-೧೧೭-೧೨; ೧-೧೧೭-೪; ೧-೧೧೮-೬; ೧-೧೧೯-೬; ೧೦-೩೯-೯).

**ವಂದನ** ಎಂಬುವನೂ ಇದೇರೀತಿ ದುಷ್ಟರಿಂದ ಅಪಹರಿಸಲ್ಪಟ್ಟು ಕತ್ತಲೆಯ ಪ್ರದೇಶದಲ್ಲಿ (ಹಳ್ಳದಲ್ಲಿ ಹಾಕಿದ್ದಾಗ ಅವನನ್ನು ಅಶ್ವಿನೀದೇವತೆಗಳು ಅಪಾಯದಿಂದ ಪಾರುಮಾಡಿ ಅವನನ್ನು ಬೆಳಕಿಗೆ ತಂದರು. (ಋ. ಸಂ ೧-೧೧೨-೫; ೧-೧೧೬-೧೧; ೧-೧೧೭-೫; ೧-೧೧೮-೬; ೧೦-೩೯-೮; ೧-೧೧೯-೬, ೭).

ಪಜ್ರವಂಶೀಯನಾದ **ಕಕ್ಷೀವತ**ನಿಗೆ ಯಥೇಚ್ಛವಾಗಿ ವರಗಳನ್ನು ಕೊಟ್ಟು ನೂರಾರುಜಾಡಿ ಸುರಾ (ಮದ್ಯ) ಅಥವಾ ಮಧುವನ್ನು ಜರಡಿಯಿಂದ ಸುರಿಯುವಂತೆ ಕುದುರೆಯ ಗೊರಸಿನಿಂದ ಸುರಿಸಿದರು. (ಋ. ಸಂ. ೧-೧೧೬-೭; ೧-೧೧೭-೬).

ಅತ್ರಿ ಎಂಬ ಋಷಿಯು, ದ್ವೇಷಾಸೂಯೆಯಿಂದ ಅಂಧಕಾರಾವೃತವಾದ, ಬೆಂಕಿಯಿಂದ ಉರಿಯುತ್ತಿರುವ ದೊಡ್ಡ ಕವುರಿಯಲ್ಲಿ ಹಾಕಲ್ಪಟ್ಟು ತೊಂದರೆಪಡುತ್ತಿರುವಾಗ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರು ಬಂದು ಬೆಂಕಿಯನ್ನು ಹಿಮದಿಂದ ಶಮನಮಾಡಿ, ಆಹಾರಾದಿಗಳನ್ನು ಕೊಟ್ಟು ಸಂತೈಸಿ, ಅವನನ್ನು ಆ ಅವಸ್ಥೆಯಿಂದ ಪಾರು ಮಾಡಿದರು. (೧-೧೧೨-೭; ೧-೧೧೬-೮; ೧-೧೧೭-೩; ೧-೧೧೮-೭; ೧-೧೧೯-೬; ೫-೭೮-೪, ೫, ೬) ೭-೭೧-೫; ೮-೬೨-೩, ೭, ೮, ೯; ೧೦-೩೯-೯) ಋ. ಸಂ. ೧೦-೮೦-೩ ನೆಯ ಋಕ್ಕಿನಲ್ಲಿ ಅತ್ರಿಯನ್ನು ಅಗ್ನಿಯು ರಕ್ಷಿಸಿದನೆಂದು ಸೂಚಿತವಾಗಿದೆ.

ವಧ್ರಿಮತೀ ಎಂಬುವಳು ತನಗೆ ಮಕ್ಕಳಿಲ್ಲದೆ ಬಂಜೆಯಾಗಿದ್ದುದರಿಂದ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವಳಿಗೆ ಹಿರಣ್ಯಹಸ್ತನೆಂಬ ಪುತ್ರನನ್ನು ಅನುಗ್ರಹಿಸಿದರು. (ಋ. ಸಂ. ೧-೧೧೬-೧೩; ೧-೧೧೭-೨೪; ೬-೬೨-೭; ೧೦-೩೯-೭).

ಘೋಷಾ ಎಂಬುವಳು ತನ್ನ ತಂದೆಯ ಮನೆಯಲ್ಲಿಯೇ ಇದ್ದು ಮದುವೆಯಾಗದೆ ಇದ್ದುದರಿಂದ ಅವಳ ಪ್ರಾರ್ಥನೆಯಂತೆ ಅಶ್ವಿನೀದೇವತೆಗಳು ಅವಳಿಗೆ ಯೋಗ್ಯನಾದ ಪತಿಯನ್ನು ಅನುಗ್ರಹಿಸಿದರು. (ಋ. ಸಂ. ೧-೧೧೧-೭; ೧೦-೩೯-೩,೬ ; ೧೦-೪-೫) ಋ. ಸಂ. ೧-೧೧೭-೭ನೇ ಋಕ್ಕಿನ ಭಾಷ್ಯದಲ್ಲಿ ಈ ಘೋಷಾ ಎಂಬ ಸ್ತ್ರೀಯು ಕುಷ್ಠರೋಗದಿಂದ ನರಳುತ್ತಿದ್ದಳೆಂದೂ, ಆ ರೋಗವನ್ನು ಅಶ್ವಿನೀದೇವತೆಗಳು ವಾಸಿಮಾಡಿದರೆಂದೂ ಸಾಯಣರು ಹೇಳಿದ್ದಾರೆ. ೧೦ ನೆಯ ಮಂಡಲದಲ್ಲಿ ಈ ಘೋಷಾ ಎಂಬುವಳಿಂದ ದೃಷ್ಟವಾದ ಎರಡು ಸೂಕ್ತಗಳಿವೆ. (೧೦-೩೯, ೪೦)

ಶಯು ಎಂಬುವನ ಹಸುವು ಮುದಿಯಾಗಿ ಕರುವನ್ನು ಹಾಕದಿರುವಾಗ ಅದಕ್ಕೆ ಹಾಲುಕೊಡುವ ಶಕ್ತಿಯನ್ನುಂಟುಮಾಡಿದರು. ಋ. ಸಂ. ೧-೧೧೬-೨೨; ೧-೧೧೭-೨೦; ೧-೧೧೮-೮; ೧-೧೧೯-೬; ೧೦-೩೯-೧೩)

ಪೇದುವೆಂಬ ರಾಜನಿಗೆ ಅಶ್ವಿನೀದೇವತೆಗಳು ಇಂದ್ರನಂತೆ ಅತಿ ಬಲಶಾಲಿಯಾದ ಒಂದು ಬಿಳೀ ಕುದುರೆಯನ್ನು ಕೊಟ್ಟರೆಂದೂ ಅದರಿಂದ ಅವನು ತನ್ನ ಶತ್ರುಗಳನ್ನು ಗೆದ್ದು ಬಹಳವಾದ ವಸ್ತುವಾಹನಾದಿಗಳನ್ನು ಪಡೆದನೆಂದೂ ಹೇಳಿದೆ. (ಋ. ಸಂ- ೧-೧೧೬-೬; ೧-೧೧೭-೯; ೧-೧೧೮-೯; ೧-೧೧೯-೧೦; ೭- ೭೧-೫ ; ೧೦-೩೯-೧೦)

ಇದಲ್ಲದೆ ಒಂದನೇ ಮಂಡಲದ ೩, ೧೧೬, ೧೧೭, ೧೧೮, ೧೧೯ ನೆಯ ಸೂಕ್ತಗಳಲ್ಲಿ ಹೇಳಿರುವಂತೆ ಅನೇಕ ಮನುಷ್ಯರಿಗೆ ಸಹಾಯವನ್ನು ಮಾಡಿರುವುದಲ್ಲದೆ ಈ ಅಶ್ವಿನೀ ದೇವತೆಗಳು ಪಶುಪಕ್ಷ್ಯಾದಿಗಳಿಗೂ ಉಪಕಾರವನ್ನು ಮಾಡಿರುವರೆಂದು ಹೇಳಿದೆ. ಈ ಸಂದರ್ಭದಲ್ಲಿ—ಒಂದು ತೋಳವು ಒಂದು ಗುಬ್ಬಚ್ಚಿಯನ್ನು ಕಚ್ಚಿಕೊಂಡು ಹೋಗುತ್ತಿರುವಾಗ ಆ ಗುಬ್ಬಚ್ಚಿಯ ಪ್ರಾರ್ಥನೆಯಂತೆ ಅದನ್ನು ತೋಳನ ಬಾಯಿಂದ ಬಿಡಿಸಿಕಾಪಾಡಿದರೆಂದು ಋ.ಸಂ ೧-೧೧೬-೧೪; ೧-೧೧೭-೧೬; ೧-೧೧೮ ೮; ೧೦-೩೯-೧೩ ಎಂಬ ಋಕ್ಕುಗಳಲ್ಲಿ ಹೇಳಿದೆ. ಈ ವಿಷಯಗಳಲ್ಲದೆ ಅಶ್ವಿನೀದೇವತೆಗಳ ಸಂಬಂಧವಾದ ಇನ್ನೂ ಅನೇಕ ವಿಷಯಗಳಿರುವುವು. ಅವುಗಳನ್ನು ಆಯಾ ಸಂದರ್ಭದಲ್ಲಿ ವಿವರಿಸಲಾಗುವುದು.

॥ ಸಾಯಣಭಾಷ್ಯಂ ॥

**ಯೋ ವಾಮಿತಿ ಚತುರ್ದಶರ್ಚಂ ದಶಮಂ ಸೂಕ್ತಂ । ಕಕ್ಷೀವತೋ ದುಹಿತಾ ಘೋಷಾ ನಾಮ ಬ್ರಹ್ಮವಾದಿ ನ್ಯೃಷಿಃ । ಅಂತ್ಯಾ ತ್ರಿಷ್ಟುಪ್ । ಶಿಷ್ಟಾ ಜಗತ್ಯಃ । ಅಶ್ವಿನೌ ದೇವತಾ । ತಥಾ ಚಾನುಕ್ರಾಂತಂ । ಯೋ ವಾಂ ಷಳೂನಾ ಕಾಕ್ಷೀವತೀ ಘೋಷಾಶ್ವಿನಂ ಹಿ ತ್ರಿಷ್ಟುಬಂತಮಿತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಜಾಗತೇ ಛಂದಸೀದಮಾದೀನಿ ತ್ರೀಣಿ ಸೂಕ್ತಾನಿ । ಸೂತ್ರಿತಂ ಚ ಯೋ ವಾಂ ಪರಿಜ್ಮೇತಿ ತ್ರೀಣಿ ತ್ರಿಶ್ಚಿನ್ನೋ ಅದ್ಯ । ಆ. ೪-೧೫ । ಇತಿ ।**

ಅನುವಾದವು-**ಯೋ ವಾಂ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಕ್ಷೀವಾನ್ ಎಂಬ ಋಷಿಯ ಪುತ್ರಿಯಾದ ಘೋಷಾ ಎಂಬ ಬ್ರಹ್ಮವಾದಿನಿಯಾದ ಸ್ತ್ರೀಯು ಋಷಿಯು ; **ಅಶ್ವಿನೀದೇವತೆಗಳು ದೇವತೆಯು** ; ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ **ಯೋ ವಾಂ ಷಳೂನಾ ಕಾಕ್ಷೀವತೀ ಘೋಷಾಶ್ವಿನಂ ಹಿ ತ್ರಿಷ್ಟುಬಂತಂ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರ ಮಂತ್ರಗಳಲ್ಲಿ ಜಗತೀಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ಮತ್ತು ಮುಂದಿನ ಎರಡು ಸೂಕ್ತಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಯೋ ವಾಂ ಪರಿಜ್ಮೇತಿ ತ್ರೀಣಿ ತ್ರಿಶ್ಚಿನ್ನೋ ಅದ್ಯ** ಎಂಬ ಸೂತ್ರದಿಂದ (ಆ. ೪-೧೫) ವಿವೃತವಾಗಿರುವುದು.

## ಸೂಕ್ತ—೩೯

ಮಂಡಲ—೧೦ ॥ ಅನುವಾಕ—೩ ॥ ಸೂಕ್ತ—೩೯ ॥
ಅಷ್ಟಕ—೭ ॥ ಅಧ್ಯಾಯ—೮ ॥ ವರ್ಗ—೧೫, ೧೬, ೧೭ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ॥
ಋಷಿಃ—ಕಾಕ್ಷೀವತಿ ಘೋಷಾ ।
ದೇವತಾ—ಅಶ್ವಿನೌ ।
ಛಂದಃ—೧-೧೩. ಜಗತೀ । ೧೪. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಯೋ ವಾಂ ಪರಿಜ್ಮಾ ಸುವೃದಶ್ವಿನಾ ರಥೋ ದೋಷಾಮುಷಾಸೋ ಹವ್ಯೋ ಹವಿಷ್ಮತಾ ।
ಶಶ್ವತ್ತಮಾಸಸ್ತಮು ವಾಮಿದಂ ವಯಂ ಪಿತುರ್ನ ನಾಮ ಸುಹವಂ ಹವಾಮಹೇ ॥ ೧ ॥

॥ ಪದಪಾಠಃ ॥

ಯಃ । ವಾಂ । ಪರಿಽಜ್ಮಾ । ಸುಽವೃತ್ । ಅಶ್ವಿನಾ । ರಥಃ । ದೋಷಾಂ । ಉಷಸಃ । ಹವ್ಯಃ । ಹವಿಷ್ಮತಾ । ಶಶ್ವತ್ಽತಮಾಸಃ । ತಂ । ಊಂ ಇತಿ । ವಾಂ । ಇದಂ । ವಯಂ । ಪಿತುಃ । ನ । ನಾಮ । ಸುಽಹವಂ । ಹವಾಮಹೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ವಾಂ ಯುವಯೋಃ ಪರಿಜ್ಮಾ ಪರಿತೋ ಗಂತಾ ಸುವೃತ್ಸುಷ್ಠು ವರ್ತಮಾನೋ ಯೋ ರಥೋ ದೋಷಾಂ ರಾತ್ರಿಮುಷಸಶ್ಚ । ಅಹೋರಾತ್ರಯೋರಿತ್ಯರ್ಥಃ । ಹವಿಷ್ಮತಾ ಯಜಮಾನೇನ ಹವ್ಯೋ ಹ್ವಾತವ್ಯೋ ವಾಂ ಯುವಯೋಃ ಸ್ವಭೂತಂ ಸುಹವಂ ಶೋಭನಾಹ್ವಾನಂ ತಮು ತಮೇವ ರಥಂ ಶಶ್ವತ್ತಮಾಸೋಽತಿಶಯೇನ ಚಿರಂತನಾ ವಯಂ ಪಿತುರ್ನ ಯಥಾ ಪಿತುರಿದಂ ನಾಮ ತಥಾ ಹವಾಮಹೇ । ಹ್ವಯಾಮಃ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಪರಿಜ್ಮಾ**—ಸುತ್ತಲೂ ಸಂಚರಿಸತಕ್ಕದ್ದೂ । **ಸುವೃತ್**—ಉತ್ತಮವಾದ ಸ್ಥಿತಿಯುಳ್ಳದ್ದೂ । **ವಾಂ**—ನಿಮಗೆ ಸೇರಿದುದೂ ಆದ। **ಯಃ ರಥಃ**—ಯಾವ ರಥವು। **ದೋಷಾಂ-ಉಷಸಃ**—ರಾತ್ರಿ ಮತ್ತು ಅಹಸ್ಸುಗಳಲ್ಲೆಲ್ಲಾ । **ಹವಿಷ್ಮತಾ**—ಹವಿಸ್ಸನ್ನು ಹೊಂದಿರುವ ಯಜಮಾನನಿಂದ । **ಹವ್ಯಃ**—ಕರೆಯಲ್ಪಡುವುದೋ ಅಂತಹುದೂ । **ವಾಂ**—ನಿಮಗೆ ಸೇರಿದುದೂ । **ಸುಹವಂ**—ಉತ್ತಮವಾದ ಆಹ್ವಾನಕ್ಕೆ ಪಾತ್ರವಾದುದೂ ಆದ । **ತಮು ಇದಂ**—ಅದೇ ರಥವನ್ನು । **ಶಶ್ವತ್ತಮಾಸಃ**—ಪುರಾತನರಾದ ನಾವು । **ಪಿತುಃ ನಾಮ ನ**—ಪೂಜ್ಯವಾದ ಪಿತೃವಿನ ಹೆಸರನ್ನು ಆದರದಿಂದ ಕೂಗುವಂತೆ । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಎಲ್ಲೆಲ್ಲೂ ಸಂಚರಿಸತಕ್ಕದ್ದೂ ಉತ್ತಮವಾದ ಸ್ಥಿತಿಯುಳ್ಳದ್ದೂ, ನಿಮಗೆ ಸೇರಿದುದೂ ಆದ ಯಾವ ರಥವು ಅಹೋರಾತ್ರಗಳಲ್ಲೂ ಯಜಮಾನನಿಂದ ಕರೆಯಲ್ಪಡುವುದೋ ಅಂತಹುದೂ, ನಿಮಗೆ ಸೇರಿದುದೂ ಉತ್ತಮವಾದ ಆಹ್ವಾನಕ್ಕೆ ಪಾತ್ರವಾದುದೂ ಆದ ಅದೇ ರಥವನ್ನು ಪುರಾತನರಾದ ನಾವು ಪೂಜ್ಯವಾದ ಪಿತೃವಿನ ಹೆಸರನ್ನು ಆದರದಿಂದ ಕೂಗುವಂತೆ ಪ್ರಾರ್ಥಿಸಿ ಕರೆಯುತ್ತೇವೆ.

## English Translation

We from very ancient times invoke, Ashwins, by a name as venerable as that of a father, this your glorious chariot, which travels all around, which turns well, and which is to be invoked morning and evening by the worshipper.

## ॥ ವಿಶೇಷವಿಷಯಗಳು ॥

ಅಶ್ವಿನೀದೇವತೆಗಳ ರಥದ ವರ್ಣನೆಯನ್ನು ನಾವು ಹಿಂದೆ ಅನೇಕ ಋಕ್ಕುಗಳಲ್ಲಿ ವಿವರಿಸಿದೇವೆ. ಅವರ ರಥವು ಅಲೌಕಿಕವಾದ ರಚನೆಯಿಂದಲೂ, ಸೌಂದರ್ಯದಿಂದಲೂ ಕೂಡಿರುವುದಾಗಿ ಅನೇಕಕಡೆ ವರ್ಣಿತವಾಗಿದೆ.

**ಆ ನೋ ಯಾತಂ ದಿವೋ ಅಚ್ಛಾ ಪೃಥಿವ್ಯಾ ಹಿರಣ್ಯಯೇನ ಸುವೃತಾ ರಥೇನ ।**

(ಋ. ಸಂ. ೪೪-೪೪-೫)

**ಸಹಸ್ರಕೇತುಂ ವನಿನಂ ಶತದ್ವಸುಂ ಶ್ರುಷ್ಟೀವಾನಂ ವರಿವೋಧಾಮಭಿ ಪ್ರಯಃ ।**

(ಋ. ಸಂ ೧-೧೧೯-೧)

**ತ್ರಿವಂಧುರೇಣ ತ್ರಿವೃತಾ ರಥೇನ ತ್ರಿಚಕ್ರೇಣ ಸುವೃತಾ ಯಾತಮರ್ವಾಕ್ ।**

(ಋ. ಸಂ. ೧-೧೧೮-೨)

ಇತ್ಯಾದ್ಯನೇಕ ಋಕ್ಕುಗಳಲ್ಲಿ ಅಶ್ವಿನೀದೇವತೆಗಳ ರಥವು ಹಿರಣ್ಯನಿರ್ಮಿತವಾದುದೂ, ಸಹಸ್ರ ಧ್ವಜಗಳುಳ್ಳುದೂ, ಮೂರು ಮೂಕೀಮರಗಳಿಂದಲೂ ಮತ್ತು ಮೂರು ಚಕ್ರಗಳಿಂದಲೂ ಅಲಂಕೃತವಾದುದೂ, ಇನ್ನೂ ನಾನಾವಿಧವಾದ ವೈಶಿಷ್ಟ್ಯದಿಂದ ಕೂಡಿರುವುದೂ ಆದ ಉತ್ತಮವಾದ ರಥವೆಂದು ಋಷಿಗಳು ಸ್ತೋತ್ರಮಾಡಿದಾರೆ. ಈ ಸೂಕ್ತದ ಪೀಠಿಕೆಯಲ್ಲಿಯೂ ಈ ರಥದ ವರ್ಣನೆ ಇರುವುದನ್ನು 934 ನೇ ಪೇಜಿನಲ್ಲಿ ನೋಡಿ.

॥ ಸಂಹಿತಾಪಾಠಃ ॥

ಚೋದಯತಂ ಸೂನೃತಾಃ ಪಿನ್ವತಂ ಧಿಯ ಉತ್ಪುರಂಧೀರೀರಯತಂ ತದುಶ್ಮಸಿ ।
ಯಶಸಂ ಭಾಗಂ ಕೃಣುತಂ ನೋ ಅಶ್ವಿನಾ ಸೋಮಂ ನ ಚಾರುಂ ಮಘವತ್ಸು ನಸ್ಕೃತಂ ॥ ೨ ॥

॥ ಪದಪಾಠಃ ॥

ಚೋದಯತಂ । ಸೂನೃತಾಃ । ಪಿನ್ವತಂ । ಧಿಯಃ । ಉತ್ । ಪುರಂಧೀಃ । ಈರಯತಂ । ತತ್ । ಉಶ್ಮಸಿ ।
ಯಶಸಂ । ಭಾಗಂ । ಕೃಣುತಂ । ನಃ । ಅಶ್ವಿನಾ । ಸೋಮಂ । ನ । ಚಾರುಂ । ಮಘವತ್ಽಸು । ನಃ । ಕೃತಂ ॥ ೨

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ಯುವಾಂ ಸೂನೃತಾ ವಾಚ ಉಷಸೋ ವಾ ಚೋದಯತಂ । ಪ್ರೇರಯತಂ ಅಸ್ಮಾಕಂ ಧಿಯಃ ಕರ್ಮಾಣಿ ಚ ಪಿನ್ವತಂ । ಪೂರಯತಂ । ಪುರಂಧೀರ್ಬಹ್ವೀಃ ಪ್ರಜ್ಞಾ ಶ್ಚೋದೀರಯತಂ । ಉದ್ಗಮಯತಂ । ಪ್ರೇರಯತಂ । ಉತ್ಪಾದಯತಮಿತ್ಯರ್ಥಃ । ತದೇತತ್ತ್ರಯಮುಶ್ಮಸಿ । ವಯಂ ಕಾಮಯಾಮಹೇ । ಕಿಂಚ ನೋಽಸ್ಮಾಕಂ ಯಶಸಂ ಯಶಸ್ವಿನಂ ಭಾಗಂ ಭಜನೀಯಂ ಧನಾದಿಕಂ ಕೃಣುತಂ । ಕುರುತಂ । ಚಾರುಂ ಕಲ್ಯಾಣಂ ಸೋಮಂ ನ ಸೋಮಮಿವ ನೋಽಸ್ಮಾನ್ಮಘವತ್ಸು ಧನವತ್ಸು ಕೃತಂ । ಕುರುತಂ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಸೂನೃತಾಃ**—ನಮ್ಮ ಸತ್ಯಾತ್ಮಕವಾದ ಸ್ತುತಿವಾಕ್ಯಗಳನ್ನು । **ಚೋದಯತಂ**—ಪ್ರೇರಿಸಿರಿ । **ಧಿಯಃ**—ನಮ್ಮ ಕರ್ಮಗಳನ್ನು । **ಪಿನ್ವತಂ**—ಪೂರ್ಣಗೊಳಿಸಿರಿ । **ಪುರಂಧೀಃ**—ನಮ್ಮ ಅನೇಕವಿಧವಾದ ಪ್ರಜ್ಞೆಗಳನ್ನು । **ಉದೀರಯತಂ**—ಚೈತನ್ಯಗೊಳಿಸಿರಿ । **ತತ್**—ಈ ಮೂರನ್ನೂ । **ಉಶ್ಮಸಿ**—ನಾವು ಅಪೇಕ್ಷಿಸುತ್ತೇವೆ । **ನಃ**—ನಮಗೆ । **ಯಶಸಂ**—ಯಶೋಯುಕ್ತವಾದುದೂ । **ಭಾಗಂ**—ಪೂಜ್ಯವೂ ಆದ ಧನವನ್ನು । **ಕೃಣುತಂ**—ಒದಗಿಸಿರಿ । **ಚಾರುಂ**—ಕಲ್ಯಾಣಾತ್ಮಕವಾದ । **ಸೋಮಂ ನ**—ಸೋಮದಂತೆ । **ನಃ**—ನಮ್ಮನ್ನು । **ಮಘವತ್ಸು**—ಧನವಂತರ ನಡುವೆ । **ಕೃತಂ**—ಸ್ಥಾಪಿಸಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಮ್ಮ ಸತ್ಯಾತ್ಮಕವಾದ ಸ್ತುತಿವಾಕ್ಯಗಳನ್ನು ಪ್ರೇರಿಸಿರಿ. ನಮ್ಮ ಕರ್ಮಗಳನ್ನು ಪೂರ್ಣಗೊಳಿಸಿರಿ. ನಮ್ಮ ಅನೇಕ ವಿಧವಾದ ಪ್ರಜ್ಞೆಗಳನ್ನು ಚೈತನ್ಯಗೊಳಿಸಿರಿ. ಈ ಮೂರನ್ನೂ ನಾವು ಅಪೇಕ್ಷಿಸುತ್ತೇವೆ. ನಮಗೆ ಯಶೋಯುಕ್ತವಾದುದೂ, ಪೂಜ್ಯವೂ ಆದ ಧನವನ್ನು ಒದಗಿಸಿರಿ. ಕಲ್ಯಾಣಾತ್ಮಕವಾದ ಸೋಮದಂತೆ ನಮ್ಮನ್ನು ಧನವಂತರ ನಡುವೆ ಸ್ಥಾಪಿಸಿರಿ.

## English Translation

Stimulate, Ashwins, our words of truth, perfect (our) sacred rites and inspire (our) numerous faculties; this (is what) we wish; grant us glorious portion (of wealth); put us like prosperous Soma amongst the affluent.

॥ ಸಂಹಿತಾಪಾಠಃ ॥

ಅಮಾಜುರಶ್ಚಿದ್ಭವಥೋ ಯುವಂ ಭಗೋಽನಾಶೋಶ್ಚಿದವಿತಾರಾಪಮಸ್ಯ ಚಿತ್ ।

ಅಂಧಸ್ಯ ಚಿನ್ನಾಸತ್ಯಾ ಕೃಶಸ್ಯ ಚಿದ್ಯುವಾಮಿದಾಹುರ್ಭಿಷಜಾ ರುತಸ್ಯ ಚಿತ್ ॥

। ಪದಪಾಠಃ ।

ಮ್ರಾಜುರಃ । ಚಿತ್ । ಭವಥಃ । ಯುವಂ । ಭಗಃ । ಅನಾಶೋಃ । ಚಿತ್ । ಅವಿತಾರಾ । ಅಪಮಸ್ಯ । ಚಿತ್

ಂಧಸ್ಯ । ಚಿತ್ । ನಾಸತ್ಯಾ । ಕೃಶಸ್ಯ । ಚಿತ್ । ಯುವಾಂ । ಇತ್ । ಆಹುಃ । ಭಿಷಜಾ । ರುತಸ್ಯ । ಚಿತ್ ।

। ಸಾಯಣಭಾಷ್ಯಂ ।

ಹೇ ನಾಸತ್ಯಾ ನಾಸತ್ಯೌ ಯುವಂ ಯುವಾಮಮಾಜುರಶ್ಚಿತ್ಪಿತೃಗೃಹೇ ಜೂರ್ಯಂತ್ಯಾ ಅಪಿ ರ್ಭಗಾಯಾ ಘೋಷಾಯಾ ಭಗೋ ಭವಥಃ । ಶೋಭನರೂಪೇಣಾತ್ಮಾನಂ ಪರಿಣಮಯ್ಯ ಪತಿಂ ತ್ತವಂತೌ ಸ್ಥ ಇತ್ಯರ್ಥಃ । ತಥಾ ಚ ನಿಗಮಾಂತರಂ । ಘೋಷಾಯೈ ಚಿತ್ಪಿತೃಷದೇ ದುರೋಣೇ ತಿಂ ಜೂರ್ಯಂತ್ಯಾ ಅಶ್ವಿನಾವದತ್ತಂ । ಋ. ೧-೧೧೭-೭ । ಇತಿ । ಅನಾಶೋಶ್ಚಿದನಶನಸ್ಯಾಪ್ಯವಿತಾರಾ ಕ್ಷಿತಾರೌ ಯುವಾಂ ಭವಥಃ । ಅಪಮಸ್ಯ ಚಿಜ್ಜಾತ್ಯಾತಿನಿಕೃಷ್ಟಸ್ಯಾಪಿ ರಕ್ಷಿತಾರೌ ಭವಥಃ । ಅಂಧಸ್ಯ ಚ್ಚಕ್ಷುರ್ವಿಕಲಸ್ಯಾಪಿ ರಕ್ಷಿತಾರೌ ಭವಥಃ । ಕೃಶಸ್ಯ ಚಿದ್ದುರ್ಬಲಸ್ಯಾಪಿ ರಕ್ಷಿತಾರೌ ಭವಥಃ । ಕಿಂಚ ಯುವಾಮಿದ್ಯುವಾಮೇವರ್ತಸ್ಯ ಚಿದ್ಯಜ್ಞಸ್ಯಾಪಿ ಭಿಷಜೌ ವೈದ್ಯಾವಾಹುರ್ವಿದ್ವಾಂಸಃ ॥

॥ ಪ್ರತಿಪದಾರ್ಥ ॥

ನಾಸತ್ಯಾ—ಎಲೈ ಅಶ್ವಿನೀದೇವತೆಗಳೇ । ಯುವಂ—ನೀವು । ಅಮಾಜುರಶ್ಚಿತ್—ವಿವಾಹವಿಲ್ಲದೆ ಂದೆಯ ಮನೆಯಲ್ಲಿಯೇ ಬೆಳೆಯುತ್ತಿದ್ದ ಸ್ತ್ರೀಗೂ ಸಹ । ಭಗಃ—ಕಲ್ಯಾಣಾತ್ಮಕವಾದ ಪತಿಪ್ರದರಾಗಿ । ಭವಥಃ—ದಿರಿ । ಅನಾಶೋಶ್ಚಿತ್—ಅನ್ನವಿಲ್ಲದವನಿಗೂ । ಅವಿತಾರಾ—ರಕ್ಷಕರಾಗಿದ್ದೀರಿ । ಅಪಮಸ್ಯ ಚಿತ್—ಕೀಳವರ್ಜೆಯ ಪುರುಷನನ್ನು ರಕ್ಷಿಸಿದಿರಿ । ಅಂಧಸ್ಯ ಚಿತ್—ಕುರುಡನನ್ನು ರಕ್ಷಿಸಿದಿರಿ । ಕೃಶಸ್ಯ ಚಿತ್—ದುರ್ಬಲನನ್ನು ರಕ್ಷಿಸಿದಿರಿ । ಯುವಾಂ ಇತ್—ನಿಮ್ಮನ್ನೇ । ಋತಸ್ಯ ಚಿತ್—ಯಜ್ಞಕ್ಕೂ ಸಹ । ಭಿಷಜೌ—ವೈದ್ಯರೆಂದಾಗಿ । ಆಹುಃ—ತಿಳಿದವರು ಹೇಳುತ್ತಾರೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ವಿವಾಹವಿಲ್ಲದೆ ತಂದೆಯ ಮನೆಯಲ್ಲಿಯೇ ವಾರ್ಧಕ್ಯವನ್ನು ಹೊಂದುತ್ತಿದ್ದ ಘೋಷಾ ಎಂಬ ಸ್ತ್ರೀಗೆ ಪತಿಯನ್ನೊದಗಿಸಿದಿರಿ. ಅನ್ನವಿಲ್ಲದವನಿಗೂ, ಕೀಳಜಾತಿಗೆ ಸೇರಿದವನಿಗೂ, ಕುರುಡನಿಗೂ, ದುರ್ಬಲನಿಗೂ ನೀವೇ ರಕ್ಷಕರಾಗಿದ್ದೀರಿ. ಯಜ್ಞಕ್ಕೂ ನೀವೇ ವೈದ್ಯರೆಂದು ತಿಳಿದವರು ಹೇಳುತ್ತಾರೆ.

## English Translation

You, Nasatyas, are the good fortune of a damsel growing old in (her father's) mansion ; the preservers of the famishing, (the protectors) of the abject, of the blind, of the feeble, they call you the physicians of the sacrifice.

। ಸಂಹಿತಾಪಾಠಃ ।

ಯುವಂ ಚ್ಯವಾನಂ ಸನಯಂ ಯಥಾ ರಥಂ ಪುನರ್ಯುವಾನಂ ಚರಥಾಯ ತಕ್ಷಥುಃ ।
ನಿಷ್ಟೌಗ್ರ್ಯಮೂಹಥುರದ್ಭ್ಯಸ್ಪರಿ ವಿಶ್ವೇತ್ತಾ ವಾಂ ಸವನೇಷು ಪ್ರವಾಚ್ಯಾ ॥ ೪ ॥

। ಪದಪಾಠಃ ॥

ಯುವಂ । ಚ್ಯವಾನಂ । ಸನಯಂ । ಯಥಾ । ರಥಂ । ಪುನಃ । ಯುವಾನಂ । ಚರಥಾಯ । ತಕ್ಷಥುಃ ।
ನಿಃ । ತೌಗ್ರ್ಯಂ । ಊಹಥುಃ । ಅತ್ಽಭ್ಯಃ । ಪರಿ । ವಿಶ್ವಾ । ಇತ್ । ತಾ । ವಾಂ । ಸವನೇಷು । ಪ್ರಽವಾಚ್ಯಾ ॥ ೪ ॥

। ಸಾಯಣಭಾಷ್ಯಂ ।

ಹೇ ಅಶ್ವಿನೌ ಯುವಂ ಯುವಾಂ ಸನಯಂ ಪುರಾಣಂ ಚ್ಯವಾನಮೃಷಿಂ ಯಥಾ ರಥಂ ಜೀರ್ಣಂ ರಥಮಿವ ಪುನರ್ಯುವಾನಂ ತರುಣಂ ಚರಥಾಯ ಚರಣಾರ್ಥಂ ತಕ್ಷಥುಃ । ತತಕ್ಷಥುಃ । ಅಕುರುತಮಿತ್ಯರ್ಥಃ । ತಥಾ ಚ ಯಾಸ್ಕಃ । ಯುವಂ ಚ್ಯವಾನಂ ಸನಯಂ ಪುರಾಣಂ ಯಥಾ ರಥಂ ಪುನರ್ಯುವಾನಂ ಚರಣಾಯ ತತಕ್ಷಥುರ್ಯುವಾ ಪ್ರಯೌತಿ ಕರ್ಮಾಣಿ ತಕ್ಷತಿಃ ಕರೋತಿಕರ್ಮಾ । ನಿ. ೪-೧೯ । ಇತಿ । ಕಿಂಚ ಯುವಾಂ ತೌಗ್ರ್ಯಂ ತುಗ್ರಪುತ್ರಂ ಭುಜ್ಯುಮದ್ಭ್ಯಃ ಪರಿ ಸಮುದ್ರಸ್ಯೋಪರಿ ನಿರೂಹಥುಃ । ಕಿಂಚ ವಾಂ ಯುವಯೋರ್ವಿಶ್ವಾ ವಿಶ್ವಾನಿ ತಾ ತಾನಿ ಕರ್ಮಾಣಿ ಸವನೇಷು ಯಜ್ಞೇಷು ಪ್ರವಾಚ್ಯಾ ಪ್ರವಾಚ್ಯಾನಿ ಪ್ರಕರ್ಷೇಣ ವಕ್ತವ್ಯಾನಿ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಯುವಂ**—ನೀವು । **ಯಥಾ ರಥಂ**—ಜೀರ್ಣವಾದ ರಥವನ್ನು ಹೊಸದಾಗಿ ಮಾಡುವಂತೆ । **ಸನಯಂ**—ವೃದ್ಧನಾದ । **ಚ್ಯವಾನಂ**—ಚ್ಯವಾನನೆಂಬ ಋಷಿಯನ್ನು । **ಚರಥಾಯ**—ಅವನಿಗೆ ಸಂಚರಿಸಲು ಅನುಕೂಲವಾಗುವಂತೆ । **ಪುನಃ**—ತಿರುಗಿಯೂ । **ಯುವಾನಂ**—ಯುವಕನಾಗುವಂತೆ । **ತಕ್ಷಥುಃ**—

ಮಾಡಿದಿರಿ | ತೌಗ್ರ್ಯಂ—ತುಗ್ರಪುತ್ರನನ್ನು | ಅದ್ಭ್ಯಃ ಪರಿ—ಉದಕದಿಂದ ಹೊರಕ್ಕೆ | ನಿರೂಹಥುಃ—ತೆಗೆದಿರಿ | ವಾಂ—ನಿಮ್ಮ | ತಾ ವಿಶ್ವಾ ಇತ್—ಈ ಎಲ್ಲಾ ಅಸಾಧಾರಣಕಾರ್ಯಗಳೂ | ಸವನೇಷು—ಯಜ್ಞಕಾಲಗಳಲ್ಲಿ | ಪ್ರವಾಚ್ಯಾ—ಉತ್ತಮವಾಗಿ ಪ್ರಶಂಸಿಸಲ್ಪಡಬೇಕಾಗಿವೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಜೀರ್ಣವಾದ ರಥವನ್ನು ಹೊಸದಾಗಿ ಮಾಡುವಂತೆ ನೀವು ವೃದ್ಧನಾದ ಚ್ಯವಾನನೆಂಬ ಋಷಿಯನ್ನು ಅವನಿಗೆ ಸಂಚರಿಸಲು ಅನುಕೂಲವಾಗುವಂತೆ ತಿರುಗಿಯೂ ಅವನನ್ನು ಯುವಕನಾಗುವಂತೆ ಮಾಡಿದಿರಿ. ತುಗ್ರಪುತ್ರನನ್ನು ಉದಕದಿಂದ ಹೊರಕ್ಕೆ ತೆಗೆದಿರಿ. ನಿಮ್ಮ ಈ ಎಲ್ಲ ಅಸಾಧಾರಣಕಾರ್ಯಗಳೂ ಯಜ್ಞಕಾಲಗಳಲ್ಲಿ ಉತ್ತಮವಾಗಿ ಪ್ರಶಂಸಿಸಲ್ಪಡಬೇಕಾಗಿವೆ.

## English Translation

You made the aged Chyavana, when like worn-out chariot, again young and able to go: you bore the son of Tugra above the waters; all these your (exploits) are to be celebrated at our sacrifices.

॥ ವಿಶೇಷವಿಷಯಗಳು ॥

ಚ್ಯವನನೆಂಬ ಋಷಿಯು ಮುದುಕನಾಗಿದ್ದನು. ಅವನ ಶರೀರವು ನರೆತಕೂದಲು ಮತ್ತು ಸುಕ್ಕುಹಿಡಿದಿರುವ ಶರೀರ ಇವೇ ಮೊದಲಾದ ಮುಪ್ಪಿನ ಲಕ್ಷಣದಿಂದ ತುಂಬಿತ್ತು. ಇದರಿಂದ ಈ ಋಷಿಯ ಪುತ್ರರೇ ಮೊದಲಾದವರು ಇವನನ್ನು ತ್ಯಾಗಮಾಡಿದ್ದರು. ಆಗ ಚ್ಯವನಋಷಿಯು ಅಶ್ವಿನೀದೇವತೆಗಳನ್ನು ಸ್ತೋತ್ರಮಾಡಿ ಅವರನ್ನು ಮೆಚ್ಚಿಸಿ ಅವರಿಂದ ತನ್ನ ಮುಪ್ಪನ್ನು ಕಳೆದುಕೊಂಡು ಯೌವನವನ್ನು ಹೊಂದಿದನು ಎಂದು ಇತಿಹಾಸವು ಇಲ್ಲಿ ಈ ಋಕ್ಕಿನಿಂದ ಹೇಳಲ್ಪಟ್ಟಿರುತ್ತದೆ. ಸ್ಕಂದಸ್ವಾಮಿಗಳು ಈ ಇತಿಹಾಸವನ್ನು ಬೇರೆಯ ವಿಧವಾಗಿ ಹೇಳಿರುವರು. ಈ ಇತಿಹಾಸವು ಶತಪಥಬ್ರಾಹ್ಮಣದಲ್ಲಿ ದೃಷ್ಟವಾಗಿರುವುದು.

> ಅತ್ರ ಶತಪಥೇ—(ಶ. ಬ್ರಾ. ೪-೧-೫) ಅಧೀತಮಿತಿಹಾಸಮಾಚಕ್ಷತೇ | ಶರ್ಯಾತೋ ನಾಮ ರಾಜಾ ಸಂಕ್ರೀಡದ್ಭಿಃ ಕೃತಾಪರಾಧಾಯ ಕುಪಿತಾಯ ಜೀರ್ಣಾಯ ಚ್ಯವನಾಯ ಪ್ರತ್ಯಾಪತ್ತ್ಯರ್ಥಂ ಸುಕನ್ಯಾಂ ನಾಮ ಕನ್ಯಕಾಂ ದುಹಿತರಂ ದದೌ | ತಾಂ ತತ್ರಾಸೀನಾಂ ದೃಷ್ಟ್ವಾ ಅಶ್ವಿನೌ ಪುನಃ ಪುನರೂಚತುಃ | ಕಿಂ ಕಿಂ ಜೀರ್ಣೀಕೃತರೂಪಂ ಕಾಮಯಸೇ | ಆವಾಂ ಸಂಭಜೇತಿ | ಸಾ ತೌ ಪ್ರತ್ಯುವಾಚ | ಯಸ್ಮೈ ಮಾಂ ಪಿತಾ ಅದಾತ್ ನಾಹಂ ತಂ ಜೀವಂತಂ ಹಾಸ್ಯಾಮೀತಿ | ತದೃಷಿರ್ಜ್ಞಾತ್ವಾ ಸುಕನ್ಯಾಮುವಾಚ | ಯದಿ ತ್ವಾಮೇತೌ ಪುನರೇವಂ ಬ್ರೂಯಾತಾಂ ತತಸ್ತ್ವಮೇನೌ ಪ್ರತಿಬ್ರೂಯಾಃ | ಅಸರ್ವೌ ವಸುಸಮೃದ್ಧೌ ಸಂತೌ ಪತಿಂ ಮೇ ನಿಂದಥ ಇತಿ | ತೌ ಯದಿ ತ್ವಾಂ ಪ್ರತಿ ಬ್ರೂಯಾತಾಂ ಕೇನಾಸರ್ವೌ ವಸುಸಮೃದ್ಧೌ ಚೇತಿ ತತ ಏನೌ ಪ್ರತಿಬ್ರೂಯಾಃ ಪತಿಂ ಮೇ ಪುನಃ ಯುವಾನಂ ಕುರುತಂ | ಅಥ ವಾಂ ವಕ್ಷ್ಯಾಮೀತಿ | ಸಾ ತೌ ತಥೋವಾಚ | ತಾವಶ್ವಿನೌ ಪ್ರತ್ಯೂಚತುಃ | ಏತಂ ಹ್ರದಮವತರತು

**ಅತೋ ಯತ್ ಕಾಮಯತೇ ತೇನ ವಯಸಾ ಯುಕ್ತ ಉತ್ತರಿಷ್ಯತೀತಿ । ಸ ಋಷಿಸ್ತಂ ಹ್ರದಮವತೀರ್ಯೋತ್ತತಾರ ಯುವಾಭೂತ್ವೇತಿ । ತದೇತದಿತಿಹಾಸೇನೋಚ್ಯತೇ ಜುಜುರುಷೋ ನಾಸತ್ಯೇತ್ಯಾದಿನಾ ।** (ಶ. ಬ್ರಾ ೪-೧-೫)

ಶರ್ಯಾತಿ ಎಂಬ ರಾಜನು ತನ್ನ ಪುತ್ರಿಯರು ಆಟವಾಡುತ್ತಿರುವಾಗ ಮುದಕನಾದ ಚ್ಯವನಋಷಿಗೆ ಸುಕನ್ಯಾ ಎಂಬ ತನ್ನ ಪುತ್ರಿಯು ಅಪರಾಧಮಾಡಿದ್ದರಿಂದ ಅವಳನ್ನು ಅವನಿಗೇ ಕೊಟ್ಟು ವಿವಾಹಮಾಡಿದನು ಆ ಸುಕನ್ಯೆಯು ಚ್ಯವನ ಋಷಿಯ ಆಶ್ರಮದಲ್ಲಿದ್ದಾಗ ಅಲ್ಲಿಗೆ ಅಶ್ವಿನೀದೇವತೆಗಳು ಬಂದು ನೀನು (ಈ ಮುದುಕನನ್ನು) ಈ ಮುದಿ ಗಂಡನನ್ನು ತ್ಯಜಿಸಿ ನಮ್ಮನ್ನು ವಿವಾಹಮಾಡಿಕೊ ಎಂದು ಅನೇಕಸಾರಿ ಹೇಳಲು ಅದಕ್ಕೆ ಅವಳು-ನಮ್ಮ ತಂದೆಯು ನನ್ನನ್ನು ಈ ಋಷಿಗೆ ದಾನಮಾಡಿದನು. ನನ್ನನ್ನು ಮದುವೆಯಾದವನು ಜೀವಂತನಾಗಿರುವವರಿಗೂ ಅವನನ್ನು ನಾನು ತ್ಯಾಗಮಾಡುವುದಿಲ್ಲವೆಂದು ಹೇಳಿದಳು. ಅದನ್ನು ಚ್ಯವನಋಷಿಯು ಕೇಳಿ ಇವರು ನಿನ್ನನ್ನು ಪುನಃ ಹೀಗೆ ಪ್ರಶ್ನೆಮಾಡಿದಾಗ ನೀವು ಸರ್ವಸಂಪತ್ಸಮೃದ್ಧರಾಗಿದ್ದರೂ ನನ್ನ ಪತಿಯನ್ನು ನಿಂದಿಸಲು ಕಾರಣವೇನು ಎಂದು ಪ್ರಶ್ನೆಮಾಡು ಅದಕ್ಕೆ ಅವರು ಉತ್ತರವಾಗಿ ನಾವು ಧನಸಮೃದ್ಧರಾಗಿ ಹೇಗೆ ಇದ್ದೇವೆ ಎಂದು ನಿನ್ನನ್ನು ಕೇಳುವರು. ಆಗ ನನ್ನ ಪತಿಗೆ ಯೌವನವನ್ನು ಕೊಡಿರಿ ಅನಂತರ ನಾನು ನಿಮಗೆ ಉತ್ತರವನ್ನು ಹೇಳುವೆನು ಎಂದು ಅವರಿಗೆ ಹೇಳುವಂತೆ ಚ್ಯವನ ಋಷಿಯು ಹೇಳಿಕೊಟ್ಟನು. ಸುಕನ್ಯೆಯು ಅಶ್ವಿನೀದೇವತೆಗಳ ಸಂಗಡ ಚ್ಯವನಋಷಿಯು ಹೇಳಿದ ಹಾಗೆ ಮಾತನಾಡಿದಳು. ಅವಳ ಮಾತನ್ನು ಕೇಳಿ ನಿನ್ನ ಪತಿಯು ಈ ಮಡುವಿನಲ್ಲಿ ಇಳಿದು ಸ್ನಾನಮಾಡಿದರೆ ನಿನ್ನ ಇಷ್ಟವು ಸಿದ್ಧಿಸುವುದು. ನಿನ್ನ ಪತಿಯು ಯೌವನವುಳ್ಳವನಾಗುವನು ಎಂದು ಅಶ್ವಿನಿದೇವತೆಗಳು ಹೇಳಿದ ಮಾತನ್ನು ಕೇಳಿ ಅವರು ಹೇಳಿದ ಮಡುವಿನಲ್ಲಿ ಸ್ನಾನಮಾದಿ ಯುವಕನಾಗಿ ಮೇಲಕ್ಕೆ ಬಂದನು. ಈ ಇತಿಹಾಸವು **ಜುಜುರುಷೋ ನಾಸತ್ಯೇತ್ಯಾದಿನಾ** ಎಂಬ ಋಕ್ಕಿನಿಂದ ಉಕ್ತವಾಗಿರುವುದು. ಮುದುಕನಾಗಿದ್ದ ಚ್ಯವನಋಷಿಯನ್ನು ಅಶ್ವಿನೀದೇವತೆಗಳು ಯೌವನವಂತನನ್ನಾಗಿ ಮಾಡಿದ ವಿಷಯವು ಋಗ್ವೇದದಲ್ಲಿ ಅನೇಕ ಕಡೆ ವಿವರಿಸಲ್ಪಟ್ಟಿರುವುದು—

**ಯುವಂ ಚ್ಯವಾನಂ ಜರಸೋಽಮುಮುಕ್ತಂ ನಿ ಪೇದವ ಊಹಥುರಾಶುಮಶ್ವಂ ।**

(ಋ. ಸಂ. ೭-೭೧-೫)

**ಪ್ರ ಚ್ಯವಾನಾಜ್ಜುಜುರುಷೋ ವವ್ರಿಮತ್ಕಂ ನ ಮುಂಚಥಃ ।**

(ಋ. ಸಂ. ೫-೭೪-೫)

**ನಿಷ್ಟ್ವಾಗ್ರ್ಯಂ ಪಾರಯಥಃ ಸಮುದ್ರಾತ್ಪುನಶ್ಚ್ಯವಾನಂ ಚಕ್ರಥುರ್ಯುವಾನಂ ।**

(ಋ. ಸಂ. ೧-೧೧೮-೬)

**ಯುವಂ ಚ್ಯವಾನಂ ಸನಯಂ ಯಥಾ ರಥಂ ಪುನರ್ಯುವಾನಂ ಚರಥಾಯ ತಕ್ಷಥುಃ ।**

(ಋ. ಸಂ. ೧೦-೩೯-೪)

ಈ ಋಕ್ಕುಗಳಲ್ಲಿಯೂ, ಋ. ಸಂ. ೫-೭೪-೫; ೭-೬೮.೬ ಮೊದಲಾದ ಅನೇಕ ಋಕ್ಕುಗಳಲ್ಲಿಯೂ ಈ ವಿಷಯವು ಪ್ರಸ್ತಾಪಿಸಲ್ಪಟ್ಟಿರುವುದು.

ತೌಗ್ರ್ಯಂ—ತುಗ್ರನೆಂಬ ರಾಜನ ಪುತ್ರನನ್ನು ತೌಗ್ರ್ಯನೆಂದು ಇಲ್ಲಿ ಕರೆಯಲಾಗಿದೆ ಇವನ ಹೆಸರು ಭುಜ್ಯುವೆಂದು. ಇವನು ಸಮುದ್ರಯಾನಮಾಡುತ್ತಿರುವಾಗ ಸಮುದ್ರ ಮಧ್ಯದಲ್ಲಿ ಅಲೆಗಳ ಹೊಡೆತದಿಂದ ಮುಳುಗಿ ಹೋಗುತ್ತಿರುವಾಗ ಇವನು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರು ಇವನನ್ನು ಸಂರಕ್ಷಿಸಿದರೆಂದು ಋಗ್ವೇದದ ಅನೇಕ ಋಕ್ಕುಗಳಲ್ಲಿ ವರ್ಣಿತವಾಗಿದೆ.

ತುಗ್ರಪುತ್ರನಾದ ಭುಜ್ಯುವು ಶತ್ರುಗಳಿಂದ ಹಿಂಸಿತನಾಗಿ ಸಮುದ್ರಕ್ಕೆ ಎಸೆಯಲ್ಪಟ್ಟಾಗ ನಿಮ್ಮನ್ನು ಸ್ತುತಿಸಿ ತೃಪ್ತಿಪಡಿಸಿ ತನ್ನ ಸಹಾಯಕ್ಕೆ ಕರೆದುಕೊಂಡಂತೆ ಎಂದು ಋ. ಸಂ. ೧-೧೮೦-೫ ರಲ್ಲಿ ಸೂಚಿಸಿದ್ದಾರೆ.

**ತೌಗ್ರ್ಯ**ನೆಂಬ ದೊರೆಯನ್ನು ಒಂದುಸಲ ಶತ್ರುಗಳು ಸೋಲಿಸಿ ಅವನ ಕೈಕಾಲುಗಳನ್ನು ಕಟ್ಟಿ ಸಮುದ್ರ ಮಧ್ಯದಲ್ಲಿ ಎಸೆದುಬಿಟ್ಟರು. ಅವನು ಸಮುದ್ರವನ್ನು ದಾಟಲಾರದೆ ಸಹಾಯಕ್ಕಾಗಿ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದನು. ಒಡನೆಯೇ ಅವರು ತಮ್ಮ ರಥಕ್ಕೆ ಅಶ್ವಗಳನ್ನು ಕಟ್ಟಿ ಸಮುದ್ರದಲ್ಲಿಳಿಸಿ ಅವನನ್ನು ದಡಕ್ಕೆ ಸೇರಿಸಿದರು ಎಂದು ಸಾಯಣರು ಪೂರ್ವಕಥೆಯನ್ನು ದಾಹರಿಸಿದ್ದಾರೆ ಈ ತುಗ್ರಪುತ್ರನೇ **ಭುಜ್ಯು** ವೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ ಮತ್ತು ಅನೇಕ ಕಡೆಗಳಲ್ಲಿ ಇವನ ಕಥೆಯು ವರ್ಣಿತವಾಗಿದೆ

ಸಮುದ್ರದಲ್ಲಿ ಮುಳುಗಿದ್ದ ಇದೇ ತುಗ್ರಪುತ್ರನನ್ನು ಅಶ್ವಿನೀದೇವತೆಗಳು ರಕ್ಷಿಸಿದುದನ್ನು ದೀರ್ಘತಮಸ್ಸಿನ ಪುತ್ರನಾದ ಕಕ್ಷೀವಂತನು ಋ. ಸಂ ೧-೧೧೬- ಮತ್ತು ೧-೧೧೭ನೇ ಸೂಕ್ತಗಳಲ್ಲಿಯೂ, ಅಗಸ್ತ್ಯ ಮೈತ್ರಾವರುಣಿಯು ೧-೧೮೨ ನೇ ಸೂಕ್ತದಲ್ಲಿಯೂ, ಕಣ್ವಗೋತ್ರದ ಬ್ರಹ್ಮಾತಿಥಿಯು ೮-೫ ನೇ ಸೂಕ್ತದಲ್ಲಿಯೂ ; ಕಕ್ಷೀವಂತನ ಪುತ್ರಿಯಾದ ಘೋಷೆಯು ೧೦-೩೯ ರಲ್ಲೂ ವರ್ಣಿಸಿದ್ದಾರೆ. ೧-೧೮೨ನೇ ಸೂಕ್ತದಲ್ಲಿ ಇವರು ದೋಣಿಗಳನ್ನು ಕಳುಹಿಸಿದುದೂ ತುಗ್ರಪುತ್ರನು ಆಶಾಪೂರಿತನಾಗಿ ಆ ದೋಣಿಗಳನ್ನು ಅಪ್ಪಿಕೊಂಡು ಅವರ ಅನುಗ್ರಹದಿಂದ ರಕ್ಷಿತನಾದುದೂ ಸಹ ಕೆಳಗೆ ಕಂಡಂತೆ ವರ್ಣಿತವಾಗಿದೆ.

**ಯುವಮೇತಂ ಚಕ್ರಥುಃ ಸಿಂಧುಷು ಪ್ಲವಮಾತ್ಮನ್ವಂತಂ ಪಕ್ಷಿಣಂ ತೌಗ್ರ್ಯಾಯ ಕಂ ।**
**ಯೇನ ದೇವತ್ರಾ ಮನಸಾ ನಿರೂಹಥುಃ ಸುಪಪ್ತನೀ ಪೇತಥುಃ ಕ್ಷೋದಸೋ ಮಹಃ ॥**
**ಅವವಿದ್ಧಂ ತೌಗ್ರ್ಯಮಪ್ಸ್ವಂತರನಾರಂಭಣೇ ತಮಸಿ ಪ್ರವಿದ್ಧಂ ।**
**ಚತಸ್ರೋ ನಾವೋ ಜಠಲಸ್ಯ ಜುಷ್ಟಾ ಉದಶ್ವಿಭ್ಯಾಮಿಷಿತಾಃ ಪಾರಯಂತಿ ।**
**ಕಃ ಸ್ವಿದ್ವೃಕ್ಷೋ ನಿಷ್ಠಿತೋ ಮಧ್ಯೇ ಅರ್ಣಸೋ ಯಂ ತೌಗ್ರ್ಯೋ ನಾಧಿತಃ ಪರ್ಯಷಸ್ವಜತ್ ॥**
**ಪರ್ಣಾ ಮೃಗಸ್ಯ ಪತರೋರಿವಾರಭ ಉದಶ್ವಿನಾ ಊಹಥುಃ ಶ್ರೋಮತಾಯ ಕಂ ॥**

(ಋ. ಸಂ. ೧-೧೮೨-೫ರಿಂದ ೭)

ಎಲೈ ಅಶ್ವಿನೀ ದೇವತೆಗಳೇ, ತುಗ್ರಪುತ್ರನಾದ ಭುಜ್ಯುವಿಗಾಗಿ ನೀವು ಸಚೇತನವಾದುದೂ ರೆಕ್ಕೆಗಳಿಂದ ಕೂಡಿದುದೂ ಆದ ಈ ದೋಣಿಯನ್ನು ನಿರ್ಮಿಸಿದಿರಿ. ಅಗಾಧವಾದುದೂ, ಅಂಧಕಾರಾವೃತವಾದುದೂ, ಆದ ಸಮುದ್ರದಲ್ಲಿ ಬಿದ್ದು ಮುಳುಗುತ್ತಿದ್ದ ತುಗ್ರಪುತ್ರನಿಗಾಗಿ ನಾಲ್ಕುದೋಣಿಗಳನ್ನು ಕಳುಹಿದಿರಿ. ಹಾರುವ ಪಕ್ಷಿಗಳಿಗೆ ಅಂತರಿಕ್ಷದಲ್ಲಿ ಅವಲಂಬನವಾಗಿರುವ ರೆಕ್ಕೆಗಳಂತೆ ಸಮುದ್ರದಲ್ಲಿ ಮುಳುಗುತ್ತಿದ್ದ ಭುಜ್ಯುವಿಗೆ ಅವಲಂಬನವಾದುದೂ ಮತ್ತು ರಕ್ಷಕವಾದುದೂ ಆದ ದೋಣಿಯ ಅವಯವಗಳನ್ನು ಯಾವ ವೃಕ್ಷದಿಂದ ನಿರ್ಮಿಸಿದಿರಿ ಎಂದು ಶ್ಲಾಘಿಸಿದೆ. ಅದೇ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ಸೂಚಿಸಿದೆ.

॥ ಸಂಹಿತಾಪಾಠಃ ॥

ಪುರಾಣಾ ವಾಂ ವೀರ್ಯಾ೩ ಪ್ರ ಬ್ರವಾ ಜನೇಽಥೋ ಹಾಸಥುರ್ಭಿಷಜಾ

ಮಯೋಭುವಾ ।

ತಾ ವಾಂ ನು ನವ್ಯಾವವಸೇ ಕರಾಮಹೇಽಯಂ ನಾಸತ್ಯಾ ಶ್ರದರಿರ್ಯಥಾ

ದಧತ್ ॥ ೫ ॥

॥ ಪದಪಾಠಃ ॥

ಪುರಾಣಾ । ವಾಂ । ವೀರ್ಯಾ । ಪ್ರ । ಬ್ರವ । ಜನೇ । ಅಥೋ ಇತಿ । ಹ । ಆಸಥುಃ । ಭಿಷಜಾ ।

ಮಯಃಽಭುವಾ ।

ತಾ । ವಾಂ । ನು । ನವ್ಯಾ । ಅವಸೇ । ಕರಾಮಹೇ । ಅಯಂ । ನಾಸತ್ಯಾ । ಶ್ರತ್ । ಅರಿಃ । ಯಥಾ ।

ದಧತ್ ॥ ೫

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಾಂ ಯುವಯೋಃ ಪುರಾಣಾ ಪುರಾಣಾನಿ ವೀರ್ಯಾಣಿ ಜನೇ ಲೋಕೇ ಪ್ರ ಬ್ರವ । ಪ್ರಬ್ರವೀಮಿ । ಅಥೋ ಅಪಿ ಚ ಹೇ ನಾಸತ್ಯೌ ನಾಸತ್ಯಾ ಯುವಾಂ ಮಯೋಭುವಾ ಸುಖಸ್ಯ ಭಾವಯಿತಾರೌ ಭಿಷಜಾ ಭಿಷಜೌ ವೈದ್ಯಾವಾಸಥುಃ । ಬಭೂವಥುಃ । ತಾ ತೌ ಯುವಾಮವಸೇ ರಕ್ಷಣಾಯ ನವ್ಯಾ ಸ್ತುತ್ಯಾ ಕರಾಮಹೇ । ಕುರ್ಮಃ । ಅಯಮರಿರ್ಗಂತಾ ಪತಿರ್ಯಜಮಾನೋ ಯಥಾ ಶ್ರದ್ದಧತ್ । ಶ್ರದ್ದಧ್ಯಾದಿತಿ ॥

॥ ಪ್ರತಿಪದಾರ್ಥ ॥

ನಾಸತ್ಯಾ—ಎಲೈ ಅಶ್ವಿನೀದೇವತೆಗಳೇ । (ಯುವಾಂ—ನೀವು) । ಮಯೋಭುವಾ—ಸುಖಪ್ರದರಾದ ಭಿಷಜಾ-ವೈದ್ಯರಾಗಿ । ಆಸಥುಃ—ಆಗಿದ್ದೀರಿ । ಅಥೋ—ಆದುದರಿಂದ । ವಾಂ—ನಿಮ್ಮ । ಪುರಾಣಾ ವೀರ್ಯಾ-ಪ್ರಾಚೀನವಾದ ವೀರ್ಯಕರ್ಮಗಳನ್ನು । ಜನೇ—ಲೋಕದಲ್ಲಿ । ಪ್ರ ಬ್ರವ—ಪ್ರಶಂಸಿಸಿ ಹೊಗಳುತ್ತೇನೆ । ಯಥಾ—ಯಾವ ರೀತಿ । ಅಯಂ ಅರಿಃ—ಈಯಜಮಾನನು । ಶ್ರದ್ಧಧತ್—ಶ್ರದ್ಧೆಯನ್ನು ಇಡುವನೋ ಹಾಗೆ । ತಾ ವಾಂ—ನಿಮ್ಮಿಬ್ಬರನ್ನೂ । ಅವಸೇ—ನಮ್ಮ ರಕ್ಷಣಾರ್ಥವಾಗಿ । ನವ್ಯಾ—ಪ್ರಶಂಸನೀಯರನ್ನಾಗಿ । ಕರಾಮಹೇ—ಮಾಡುತ್ತೇವೆ.

। ಭಾವಾರ್ಥ ।

ಎಲೈ ಅಶ್ವಿನೀದೇವತೆಗಳೇ, ನಾವು ಸುಖಪ್ರದರಾದ ವೈದ್ಯರಾಗಿ ಇದ್ದೀರಿ. ಆದುದರಿಂದ ನಿಮ್ಮ ಪ್ರಾಚೀನ ನಾದ ವೀರ್ಯಕರ್ಮಗಳನ್ನು ಲೋಕದಲ್ಲಿ ಪ್ರಶಂಸಿಸಿ ಹೊಗಳುತ್ತೇನೆ. ಯಾವ ರೀತಿ ಈ ಯಜಮಾನನು ನಿಮ್ಮಲ್ಲಿ ಶ್ರದ್ಧೆಯನ್ನಿಡುವನೋ ಆ ರೀತಿ ನಿಮ್ಮಿಬ್ಬರನ್ನೂ ನಮ್ಮ ರಕ್ಷಣಾರ್ಥವಾಗಿ ಪ್ರಶಂಸಾರ್ಹರನ್ನಾಗಿ ಮಾಡುತ್ತೇವೆ.

## English Translation

I proclaim, Ashwins, your ancient exploits among the people, for you were the physicians, the bestowers of felicity : we count you two worthy to be praised for (our) preservation : so that this worshipper, Nasatyas, may believe (in you).

॥ ವಿಶೇಷವಿಷಯಗಳು ॥

ಅಶ್ವಿನೀದೇವತೆಗಳು ದೇವತೆಗಳ ವೈದ್ಯರೆಂದು ಅನೇಕಕಡೆ ವರ್ಣಿತವಾಗಿದೆ. ಇವರು ವೃದ್ಧನಾಗಿದ್ದ ಚ್ಯವನಋಷಿಯನ್ನು ಯುವಕನನ್ನಾಗಿ ಮಾಡಿದ ವಿಷಯವು ಹಿಂದಿನ ಋಕ್ಕಿನಲ್ಲಿ ವಿವರಿಸಲಾಗಿದೆ. ವಿಶ್ಪಲಾ ಎಂಬ ಸ್ತ್ರೀಯ ಮುರಿದುಹೋಗಿದ್ದ ಕಾಲನ್ನು ಸರಿಪಡಿಸಿದ ವಿಚಾರವೂ, ಸತ್ತುಹೋಗಿದ್ದ ಗೋವನ್ನು ಬದುಕಿಸಿದ ವಿಚಾರವೂ ಇನ್ನೂ ಇಂತಹ ಅನೇಕ ವಿಷಯಗಳೂ ಅನೇಕ ಕಡೆ ವಿವರಿಸಲ್ಪಟ್ಟಿವೆ. ಯಜುರ್ವೇದದಲ್ಲಿ ಅಶ್ವಿನೌ ವೈ ದೇವಾನಾಂ ಭಿಷಜೌ ಎಂದು ಹೇಳಿದೆ.

॥ ಸಂಹಿತಾಪಾಠಃ ॥

ಇಯಂ ವಾಮಹ್ವೇ ಶೃಣುತಂ ಮೇ ಅಶ್ವಿನಾ ಪುತ್ರಾಯೇವ ಪಿತರಾ ಮಹ್ಯಂ ಶಿಕ್ಷತಂ ।
ಅನಾಪಿರಜ್ಞಾ ಅಸಜಾತ್ಯಾಮತಿಃ ಪುರಾ ತಸ್ಯಾ ಅಭಿಶಸ್ತೇರವ ಸ್ಪೃತಂ ॥ ೬ ॥

॥ ಪದಪಾಠಃ ॥

ಇಯಂ । ವಾಂ । ಅಹ್ವೇ । ಶೃಣುತಂ । ಮೇ । ಅಶ್ವಿನಾ । ಪುತ್ರಾಯಽಇವ । ಪಿತರಾ । ಮಹ್ಯಂ । ಶಿಕ್ಷತಂ ।

ಅನಾಪಿಃ । ಅಜ್ಞಾಃ । ಅಸಜಾತ್ಯಾ । ಅಮತಿಃ । ಪುರಾ । ತಸ್ಯಾಃ । ಅಭಿಶಸ್ತೇಃ । ಅವ । ಸ್ಪೃತಂ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನಾಶ್ವಿನೌ ವಾಂ ಯುವಾಮಿಯಂ ಘೋಷಾಹಮಹ್ವೇ । ಆಹ್ವಯಾಮಿ । ಮೇ ಮಮ ಸಂಬಂಧಿನಮಿಮಮಾಹ್ವಾನಂ ಶೃಣುತಂ । ಶ್ರುತ್ವಾ ಚಾಹ್ವಾನಂ ಮಹ್ಯಂ ಪುತ್ರಾಯೇವ ಯಥಾ ಪುತ್ರಾಯ ಪಿತರಾ ಮಾತಾಪಿತರೌ ತದ್ವಚ್ಛಿಕ್ಷತಂ । ಧನಂ ದತ್ತಂ । ಅನಾಪಿರಬಂಧುರಜ್ಞಾ ಅಕೃತಜ್ಞಾಸಜಾತ್ಯಾಮ-ತಿರಶ್ರದ್ಧೇಯಾ ಚಾಭಿಶಸ್ತಿರ್ಮಾಮಾಗಚ್ಛತಿ । ತಸ್ಯಾ ಅಭಿಶಸ್ತೇಃ ಪುರಾ ಪ್ರಾಗೇವಾವ ಸ್ಪೃತಂ । ಮಾಮಪಾರಯತಂ ॥**

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮನ್ನು । **ಇಯಂ**—ಘೋಷಾಸಂಜ್ಞಕಳಾದ ನಾನು । **ಅಹ್ವೇ**—ಕರೆಯುತ್ತೇನೆ । **ಮೇ**—ನನ್ನ ಆಹ್ವಾನವನ್ನು । **ಶೃಣುತಂ**—ಕೇಳಿರಿ । **ಪಿತರಾ**—ಮಾತಾಪಿತೃಗಳು । **ಪುತ್ರಾಯ ಇವ**—ಪುತ್ರನಿಗೆ ಧನಾದಿಗಳನ್ನು ಕೊಡುವಂತೆ । **ಮಹ್ಯಂ**—ನನಗೆ । **ಶಿಕ್ಷತಂ**—ಧನವನ್ನು ಕೊಡಿರಿ । **ಅನಾಪಿಃ**—ಬಂಧುರಹಿತವೂ । **ಅಜ್ಞಾ**—ಕೃತಜ್ಞತೆಯಿಲ್ಲದುದೂ । **ಅಸಜಾತ್ಯಾ**—ಶ್ರದ್ಧಾರಹಿತವೂ । **ಅಮತಿಃ**—ಪ್ರಜ್ಞಾರಹಿತವೂ ಆದ ಶಾಪವು ಸಮೀಪಿಸುತ್ತದೆ । **ತಸ್ಯಾಃ ಅಭಿಶಸ್ತೇಃ ಪುರಾ**—ಇಂತಹ ಶಾಪಗಳಿಂದ ಹತಳಾಗುವುದಕ್ಕೆ ಮೊದಲೇ । **ಅವ ಸ್ಪೃತಂ**—ನನ್ನನ್ನು ದಾಟಿಸಿ ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ಘೋಷಾಸಂಜ್ಞಕಳಾದ ನಾನು ಕರೆಯುತ್ತೇನೆ. ನನ್ನ ಆಹ್ವಾನವನ್ನು ಕೇಳಿರಿ. ಮಾತಾಪಿತೃಗಳು ಪುತ್ರನಿಗೆ ಧನಾದಿಗಳನ್ನು ಕೊಡುವಂತೆ ನನಗೆ ಧನವನ್ನು ಕೊಡಿರಿ. ಬಂಧುರಹಿತವೂ ಕೃತಜ್ಞತೆಯಿಲ್ಲದುದೂ, ಶ್ರದ್ಧಾರಹಿತವೂ, ಪ್ರಜ್ಞಾರಹಿತವೂ ಆದ ಶಾಪವು ನನ್ನನ್ನು ಸಮೀಪಿಸುತ್ತದೆ ಇಂತಹ ಶಾಪವು ತಟ್ಟುವುದಕ್ಕೆ ಮೊದಲೇ ನನ್ನನ್ನು ರಕ್ಷಿಸಿರಿ.

English Translation

I here, (Ghosha), invoke you. Hear my (invocation), Ashwins, giv me (wealth) as parents give to a son; before (it come) beyond the reach c (a curse) that has no relatives, ungrateful, without kinsfolk, without belie (pursues me): save me from that curse before (it reach me).

॥ ವಿಶೇಷವಿಷಯಗಳು ॥

ಈ ಸೂಕ್ತದ ಋಷಿಯಾದ ಘೋಷಾ ಎಂಬ ಸ್ತ್ರೀಯು ತನಗೆ ಪ್ರಾಪ್ತವಾದ ಕುಷ್ಠರೋಗದ ನಿವಾರಣೆಗಾ ಪ್ರಾರ್ಥಿಸಿರುವುದನ್ನು ಈ ಋಕ್ಕಿನಲ್ಲಿ ವಿವರಿಸಿರಬಹುದು

॥ ಸಂಹಿತಾಪಾಠಃ ॥

ಯುವಂ ರಥೇನ ವಿಮದಾಯ ಶುಂಧ್ಯುವಂ ನ್ಯೂಹಥುಃ ಪುರುಮಿತ್ರ

ಯೋಷಣಾಂ ।

ಯುವಂ ಹವಂ ವಧ್ರಿಮತ್ಯಾ ಅಗಚ್ಛತಂ ಯುವಂ ಸುಷ್ಟುತಿಂ ಚಕ್ರಥುಃ

ಪುರಂಧಯೇ ॥ ೭ ॥

॥ ಪದಪಾಠಃ ॥

ಯುವಂ । ರಥೇನ । ವಿಽಮದಾಯ । ಶುಂಧ್ಯುವಂ । ನಿ । ಊಹಥುಃ । ಪುರುಽಮಿತ್ರಸ್ಯ । ಯೋಷಣಾಂ ।

ಯುವಂ । ಹವಂ । ವಧ್ರಿಽಮತ್ಯಾಃ । ಅಗಚ್ಛತಂ । ಯುವಂ । ಸುಽಸುತಿಂ । ಚಕ್ರಥುಃ । ಪುರಂಽಧಯೇ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಂ ಯುವಾಂ ಪುರುಮಿತ್ರಸ್ಯ ಪುರುಮಿತ್ರನಾಮಧೇಯಸ್ಯ ಯೋಷಣಾಂ ದುಹಿತರಂ ಶುಂಧ್ಯುವಂ ನಾಮ ಜಾಯಾಂ ವಿಮದಾಯ ವಿಮದನಾಮಧೇಯಾಯರ್ಷಯೇ ರಥೇನ ಸ್ವಸೇನಾಪರಿವೃತೇನ ರಥೇನ ನ್ಯೂಹಥುಃ । ಪ್ರಾಪಯತಂ । ವಿಮದಸ್ಯ ಗೃಹಂ ನೀತವಂತೌ ಸ್ಥ ಇತ್ಯರ್ಥಃ । ತಥಾ ಚ ನಿಗಮಾಂತರಂ । ಯಾವರ್ಭಗಾಯ ವಿಮದಾಯ ಜಾಯಾಂ ಸೇನಾಜುವಾ ನ್ಯೂಹತೂ ರಥೇನ । ಋ. ೧-೧೧೬-೧ । ಇತಿ । ಕಿಂಚ ಯುವಂ ಯುವಾಂ ವಧ್ರಿಮತ್ಯಾಃ ಸಂಗ್ರಾಮೇ ಶತ್ರುಭಿಶ್ಛಿನ್ನಹಸ್ತಾಯಾ ಹವಮಾಹ್ವಾನಮಗಚ್ಛತಂ । ಆಗತ್ಯ ಚ ತಸ್ಯೈ ಹಿರಣ್ಮಯಂ ಹಸ್ತಂ ಪ್ರಾಯಚ್ಛತಂ । ತಥಾ ಚ ನಿಗಮಾಂತರಂ । ಅಜೋಹವೀನ್ನಾಸತ್ಯಾ ಕರಾ ವಾಂ ಮಹೇ ಯಾಮನ್ಪುರುಭುಜಾ ಪುರಂಧಿಃ ಶ್ರುತಂ ತಚ್ಛಾಸುರಿವ ವಧ್ರಿಮತ್ಯಾ ಹಿರಣ್ಯಹಸ್ತಮಶ್ವಿನಾವದತ್ತಂ । ಋ. ೧-೧೧೬-೧೩ । ಇತಿ ॥ ಕಿಂಚ ಯುವಂ ಯುವಾಂ ಪುರಂಧಯೇ ಬಹುಪ್ರಜ್ಞಾಯೈ ವಧ್ರಿಮತ್ಯೈ ಸುಷುತಿಂ ಸುಪ್ರಸವಂ ಶೋಭನಮೈಶ್ವರ್ಯಂ ವಾ ಚಕ್ರಥುಃ । ಕೃತವಂತೌ ಸ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಯುವಂ**—ನೀವು । **ಪುರುಮಿತ್ರಸ್ಯ**—ಪುರುಮಿತ್ರನ । **ಯೋಷಣಾಂ**—ಮಗಳಾದ । **ಶುಂಧ್ಯುವಂ**—ಶುಂಧ್ಯುವೆಂಬುವಳನ್ನು ।। **ವಿಮದಾಯ**—ಅವಳ ಪತಿಯಾದ ವಿಮದನಲ್ಲಿಗೆ । **ರಥೇನ**—ನಿಮ್ಮ ರಥದಲ್ಲಿ । **ನ್ಯೂಹಥುಃ**—ಕರೆದೊಯ್ದಿರಿ । **ಯುವಂ**—ನೀವು । **ವಧ್ರಿಮತ್ಯಾಃ**—ವಧ್ರಿಮತಿಯ । **ಹವಂ**—ಆಹ್ವಾನವನ್ನು ಕೇಳಿ । **ಅಗಚ್ಛತಂ**—ಅವಳಲ್ಲಿಗೆ ಹೋದಿರಿ । **ಯುವಂ**—ನೀವು । **ಪುರಂಧಯೇ**—ಅನೇಕವಿಧವಾದ ಪ್ರಜ್ಞೆಯುಳ್ಳ ವಧ್ರಿಮತಿಗೆ । **ಸುಷುತಿಂ**—ಉತ್ತಮವಾದ ಪ್ರಸವವನ್ನು (ಪುತ್ರನನ್ನು) । **ಚಕ್ರಥುಃ**—ಒದಗಿಸಿದಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಪುರುಮಿತ್ರನ ಮಗಳಾದ ಶುಂಧ್ಯುವೆಂಬುವಳನ್ನು ಅವಳ ಪತಿಯಾದ ವಿಮದನಲ್ಲಿಗೆ ನಿಮ್ಮ ರಥದಲ್ಲಿ ಕರೆದೊಯ್ದಿರಿ. ನೀವು ವಧ್ರಿಮತಿಯ ಆಹ್ವಾನವನ್ನು ಕೇಳಿ ಅವನಲ್ಲಿಗೆ ಹೋದಿರಿ. ಅನೇಕವಿಧವಾದ ಪ್ರಜ್ಞೆಯುಳ್ಳ ವಧ್ರಿಮತಿಗೆ ಉತ್ತಮವಾದ ಪ್ರಸವವನ್ನು (ಪುತ್ರಸಂತಾನವನ್ನು)ಒದಗಿಸಿದಿರಿ.

English Translation

You brought, Shundhyu, the daughter of Purumitra to (her husband) Vimada: you came at Vadhrimati's invocation, and gave excellent offspring to her who was full of wisdom.

|| ವಿಶೇಷವಿಷಯಗಳು ||

ಯುವಂ ಪುರುಮಿತ್ರಸ್ಯ ಯೋಷಣಾಂ ಶುಂಧ್ಯುವಂ ವಿಮದಾಯ ರಥೇನ ನ್ಯೂಹಥುಃ— ವಿಮದಋಷಿಃ ಪರಿಣೀಯ ಮಹತ್ಯಾ ವಿಭೂತ್ಯಾ ಭಾರ್ಯಾಂ ಸ್ವಗೃಹಂ ನಿನೀಷನ್ ಅಶ್ವಿನೌ ತುಷ್ಟಾವ। ತಸ್ಯಾಗತ್ಯಾಶ್ವಿನೌ ಭಾರ್ಯಾಂ ಸ್ವಸೇನಾಪರಿವೃತೇನ ರಥೇನ ನಿನ್ಯತುಃ । ಗಾಶ್ಚಾಸ್ಮೈ ಪ್ರಭೂತಾ ದದತುರಿತಿ । ವಿಮದನೆಂಬ ಋಷಿಯು ಪುರುಮಿತ್ರನ ಮಗಳಾದ ಶುಂಧ್ಯೂ ಎಂಬ ಕನ್ಯೆಯನ್ನು ವಿವಾಹಮಾಡಿ ಕೊಂಡನಂತರ ತನ್ನ ಭಾರ್ಯೆಯನ್ನು ಅತ್ಯಂತ ವೈಭವದಿಂದ ತನ್ನ ಮನೆಗೆ ಕರೆದುಕೊಂಡುಹೋಗಬೇಕೆಂದು ಇಚ್ಛಿಸಿ ಅಶ್ವಿನೀದೇವತೆಗಳನ್ನು ಸ್ತುತಿಸಿದನು. ಅವರು ಬಂದು ತಮ್ಮ ರಥದಲ್ಲಿ ಅವನನ್ನೂ ಅವನ ಭಾರ್ಯೆಯನ್ನೂ ಕುಳ್ಳಿರಿಸಿ ವೈಭವದಿಂದ ಅವನ ಮನೆಗೆ ಕರೆದುಕೊಂಡು ಹೋಗಿಬಿಟ್ಟರು ಮತ್ತು ಅವನಿಗೆ ಅನೇಕ ಗೋವುಗಳನ್ನು ಕೊಟ್ಟರು ಎಂಬ ಕಥೆಯು ಇಲ್ಲಿ ಉಕ್ತವಾಗಿದೆ. ಇದೇ ವಿಷಯವನ್ನು—

ಯಾವರ್ಭಗಾಯ ವಿಮದಾಯ ಜಾಯಾಂ ಸೇನಾಜುವಾ ನ್ಯೂಹತೂ ರಥೇನ ।

(ಋ. ಸಂ. ೧-೧೧೬-೧)

ಎಂಬ ಋಕ್ಕಿನಲ್ಲಿ ಕಕ್ಷೀವಂತನೂ, ಮತ್ತು

ಯಾಭಿಃ ಪತ್ನೀರ್ವಿಮದಾಯ ನ್ಯೂಹಥುರಾ ಘ ವಾ ಯಾಭಿರರುಣೀರಶಿಕ್ಷತಂ ।

(ಋ. ಸಂ. ೧-೧೧೨-೧೯)

ಎಂಬ ಋಕ್ಕಿನಲ್ಲಿ ಕುತ್ಸಋಷಿಯೂ, ಪ್ರಕೃತಋಕ್ಕಿನಲ್ಲಿ ಘೋಷೆಯೂ ಹೇಳಿರುವರು. ವಿಮದನು ೧೦ನೆಯ ಮಂಡಲದ ೨೦ನೆಯ ಸೂಕ್ತದಿಂದ ೨೬ನೆಯ ಸೂಕ್ತದವರೆಗೆ ೭ ಸೂಕ್ತಗಳ ದ್ರಷ್ಟೃವೆಂದು ಅನುಕ್ರಮಣಿಕೆಯಿಂದ ಗೊತ್ತಾಗುತ್ತದೆ.

ಏವಾ ತೇ ಅಗ್ನೇ ವಿಮದೋ ಮನೀಷಾಮೂರ್ಜೋ ನಪಾದಮೃತೇಭಿಃ ಸಜೋಷಾಃ ।

(ಋ. ಸಂ. ೧೦-೨೦-೧೦)

ಮಾಕಿರ್ನ ಏನಾ ಸಖ್ಯಾ ವಿ ಯೌಷುಸ್ತವ ಚೇಂದ್ರ ವಿಮದಸ್ಯ ಚ ಋಷೇಃ ।

(ಋ. ಸಂ. ೧೦-೨೩-೭)

ಎಂಬ ಋಕ್ಕುಗಳಲ್ಲಿ ವಿಮದಸ್ಯ ಋಷೇಃ ಮಮ ಚ ಎಂದು ಸೂಕ್ತದ್ರಷ್ಟೃವು ತನ್ನನ್ನು ತಾನೇ ನಿರ್ದೇಶಿಸಿದ್ದಾನೆ.

ಐತರೇಯಬ್ರಾಹ್ಮಣದಲ್ಲಿ ಕುಹ ಶ್ರುತ ಇಂದ್ರಃ ಕಸ್ಮಿನ್ನದ್ಯೇತಿ ಸೂಕ್ತಂ (ಋ. ಸಂ. ೧೦-೨೨) ವೈಮದಂ । ಕುಹ ಶ್ರುತ ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವು ವಿಮದಋಷಿಯಿಂದ ದೃಷ್ಟವಾದದು ಎಂದು ಅದರ ವಿನಿಯೋಗಕ್ರಮವನ್ನು ಹೇಳಿದೆ. (ಐ. ಬ್ರಾ. ೨೧-೫)

**ಯುವಂ ವಧ್ರಿಮತ್ಯಾಃ ಹವಂ ಅಗಚ್ಛತಂ | ಪುರಂಧಯೇ ಸುಷುತಿಂ ಚಕ್ರಥುಃ**—ಅಶ್ವಿನೀದೇವತೆಗಳು ವಧ್ರಿಮತೀ ಎಂಬ ಸ್ತ್ರೀಯು ಪ್ರಾರ್ಥನೆಯಂತೆ ಅವಳ ಸಮೀಪಕ್ಕೆ ಬಂದು ಅವಳಿಗೆ ಹಿರಣ್ಯಹಸ್ತನೆಂಬ ಪುತ್ರನನ್ನು ಅನುಗ್ರಹಿಸಿದರು ಎಂದು ಇಲ್ಲಿ ಉಕ್ತವಾಗಿದೆ. ಈ ಮಂಡಲದ ೪೧ನೇ ಸೂಕ್ತದ ದ್ರಷ್ಟೃವಾದ **ಸುಹಸ್ತ್ಯಃ ಘೌಷೇಯಃ |** ಘೋಷಾ ಎಂಬ ಸ್ತ್ರೀಯು ಪುತ್ರನಾದ ಸುಹಸ್ತ್ಯನೆಂಬುವನು ಈ ಹಿರಣ್ಯಹಸ್ತನೇ ಇರಬಹುದು. ಪ್ರಥಮ ಮಂಡಲದ ೧೧೬ನೇ ಸೂಕ್ತದ ೧೩ನೇ ಋಕ್ಕಿನ ಭಾಷ್ಯದಲ್ಲಿ ಭಾಷ್ಯಕಾರರು—

> **ವಧ್ರಿಮತೀನಾಮ ಕಸ್ಯಚಿದ್ರಾಜರ್ಷೇಃ ಪುತ್ರೀ ನಪುಂಸಕಭರ್ತೃಕಾ | ಸಾ ಪುತ್ರಲಾಭಾರ್ಥಮಶ್ವಿನಾವಾಜುಹಾವ | ತದಾಹ್ವಾನಂ ಶ್ರುತ್ವಾಶ್ವಿನಾವಾಗತ್ಯ ತಸ್ಯೈ ಹಿರಣ್ಯಹಸ್ತಾಖ್ಯಂ ಪುತ್ರಂ ದದತುಃ | ತದೇತದಾಹ ||**

ಎಂದು ಹೇಳಿದಾರೆ.

**ವಧ್ರಿಃ ಪುತ್ರೋತ್ಪಾದನಾಶಕ್ತಃ ಷಣ್ಢಕಃ |** ತದ್ವತೀ ರಾಜಪುತ್ರೀ. ಪುತ್ರನನ್ನು ಉತ್ಪಾದನೆಯಾಗಲು ತಕ್ಕ ವೀರ್ಯದ ಶಕ್ತಿಯಿಲ್ಲದ ನಪುಂಸಕನು ವಧ್ರಿ ಎನಿಸುವನು ಎಂದು ಸಾಯಣರು ವ್ಯಾಖ್ಯಾನಮಾಡಿ ಈ ವಿಧವಾದ ನಪುಂಸಕನನ್ನು ಪತಿಯನ್ನಾಗಿ ಹೊಂದಿರುವವಳು ವಧ್ರಿಮತೀ ಎಂದು ಹೆಸರನ್ನು ಹೊಂದಿರುವಳು ಎಂದು ಅರ್ಥ ಮಾಡಿರುವರು. ಸ್ಕಂದಸ್ವಾಮಿಗಳು **ವಧ್ರಿಮತೀ ನಾಮ ಯೋಧ್ರೀ ಶತ್ರುಭಿಃ ಸಂಗ್ರಾಮೇ ಛಿನ್ನಹಸ್ತಾ |** ವಧ್ರಿಮತೀ (ಎಂಬ ರಾಜಪುತ್ರಿಯು) ಎಂಬುವಳು ಯುದ್ಧಮಾಡುವ ಸ್ತ್ರೀಯು. ಯುದ್ಧದಲ್ಲಿ (ಶತ್ರುಗಳ ಸಂಗಡ ಯುದ್ಧಮಾಡಿ) ಹಸ್ತವನ್ನು ಕಳೆದುಕೊಂಡಳು ಎಂದು ವಧ್ರಿಮತೀ ಶಬ್ದಕ್ಕೆ ಅರ್ಥವನ್ನು ಹೇಳಿರುವರು. ಸ್ಕಂದ ಸ್ವಾಮಿಗಳು—ಸಾಯಣರೂ ಕೂಡ ಈ ಋಕ್ಕಿಗೆ ಅರ್ಥವನ್ನು ಮಾಡುವುದರಲ್ಲಿ ಬೇರೆ ಬೇರೆ ಅಭಿಪ್ರಾಯಪಟ್ಟಿದ್ದರೂ ಹಿರಣ್ಯಹಸ್ತನೆಂಬ ಪುತ್ರನನ್ನು ಅನುಗ್ರಹಿಸಿದರೆಂಬ ವಿಷಯದಲ್ಲಿ—ಇಬ್ಬರ ಅಭಿಪ್ರಾಯವೂ ಒಂದೇ ವಿಧವಾಗಿರುವುದು. ಸಾಯಣರು ವಧ್ರಿಶಬ್ದವು ನಪುಂಸಕನೆಂಬ ಅರ್ಥವುಳ್ಳದ್ದಾದಕಾರಣ ಅವನನ್ನು ಪತಿಯನ್ನಾಗಿ ಹೊಂದಿರುವವಳು ವಧ್ರಿಮತಿಯಾಗಿರುವಳು ಎಂದು ಅರ್ಥವನ್ನು ವಿವರಿಸಿ ನಪುಂಸಕನಾದ ಪತಿಯನ್ನು ಹೊಂದಿದ ರಾಜಪುತ್ರಿಯೊಬ್ಬಳು ಅಶ್ವಿನೀದೇವತೆಗಳನ್ನು ಬಹಳವಾಗಿ ಸ್ತೋತ್ರಮಾಡಿ ಅವರನ್ನು ಮೆಚ್ಚಿಸಿದಳು. ಅವಳ ಸ್ತುತಿಗೆ ಮೆಚ್ಚಿ ಪ್ರತ್ಯಕ್ಷರಾಗಿ ಅಶ್ವಿನೀದೇವತೆಗಳು ಅವಳ ಇಚ್ಛೆಯಂತೆ ಹಿರಣ್ಯಹಸ್ತನೆಂಬ (ಪುತ್ರನನ್ನು) ಹೆಸರುಳ್ಳ ಪುತ್ರನು ಉತ್ಪನ್ನನಾಗುವಂತೆ ವರವನ್ನು ಕೊಟ್ಟರು ಎಂದು ಇತಿಹಾಸವನ್ನು ಹೇಳಿರುವರು. ಸ್ಕಂದಸ್ವಾಮಿಗಳು :—

> **ವಧ್ರಿಮತೀ ನಾಮ ಯೋಧ್ರೀ ಸಂಗ್ರಾಮೇ ಶತ್ರುಭಿಶ್ಛಿನ್ನಹಸ್ತಾ ಅಶ್ವಿನೌ ತುಷ್ಟಾವ | ತಸ್ಯಾಃ ಅಶ್ವಿನೌ ಹಿರಣ್ಯಹಸ್ತಂ ದದತುಃ ಇತಿ ||**

ವಧ್ರಿಮತೀ ಎಂಬ ಹೆಸರುಳ್ಳ ಯುದ್ಧಮಾಡುವ ವೀರಸ್ತ್ರೀಯ ಹಸ್ತವು ಯುದ್ಧದಲ್ಲಿ ಶತ್ರುಗಳಿಂದ ಕತ್ತರಿಸಿಹೋದ ಕಾರಣ ಅಶ್ವಿನೀದೇವತೆಗಳನ್ನು ಸ್ತುತಿಸಿದಳು. ಅವರು ಅವಳ ಇಷ್ಟಾನುಸಾರವಾಗಿ ಹಸ್ತವನ್ನು ಮೊದಲು ಇರುವಂತೆಯೇ ಮಾಡಿದರು. ಆ ಹಸ್ತವೂ ಹಿರಣ್ಯಮಯವಾಗಿದ್ದಿತು ಎಂದು ಹೇಳಿ,

**ಹಿರಣ್ಯಹಸ್ತಃ—ಹಿರಣ್ಮಯೌ ಹಸ್ತೌ ಯಸ್ಮಿನ್ ಸ ಹಿರಣ್ಯಹಸ್ತಃ | ಬಾಹುಃ |** ಹಿರಣ್ಯಶಬ್ದಕ್ಕೆ ಸುವರ್ಣ ಚಿನ್ನ ಎಂದು ಅರ್ಥವು. ಆದುದರಿಂದ ಹಿರಣ್ಮಯವಾದ ಬಾಹುವುಳ್ಳವಳೆಂದು ಅರ್ಥಮಾಡಿರುವರು.

ಾಯಣರು ಹಿರಣ್ಯಹಸ್ತಶಬ್ದದ ಅರ್ಥವನ್ನು ಹಿತರಮಣೀಯಪಾಣಿಂ (ಹಿತವಾದ) ಸುಖಕರವಾದ ಸುಂದರವಾದ ಸಸ್ತವುಳ್ಳ ಅಥವಾ ಹಿರಣ್ಯಹಸ್ತನೆಂದು ನಾಮವುಳ್ಳ ಎಂದು ಹೇಳಿ ಪುತ್ರನಿಗೆ ವಿಶೇಷಣವನ್ನಾಗಿ ವಿವರಿಸಿರುವರು.

॥ ಸಂಹಿತಾಪಾಠಃ ॥

ಯುವಂ ವಿಪ್ರಸ್ಯ ಜರಣಾಮುಪೇಯುಷಃ ಪುನಃ ಕಲೇರಕೃಣುತಂ ಯುವ-ದ್ವಯಃ ।
ಯುವಂ ವಂದನಮೃಶ್ಯದಾದುದೂಪಥುರ್ಯುವಂ ಸದ್ಯೋ ವಿಶ್ಪಲಾ-ಮೇತವೇ ಕೃಥಃ ॥ ೮ ॥

॥ ಪದಪಾಠಃ ॥

ಯುವಂ । ವಿಪ್ರಸ್ಯ । ಜರಣಾಂ । ಉಪಽಈಯುಷಃ । ಪುನರಿತಿ । ಕಲೇಃ । ಅಕೃಣುತಂ । ಯುವತ್ । ವಯಃ ।
ಯುವಂ । ವಂದನಂ । ಋಶ್ಯಽದಾತ್ । ಉತ್ । ಊಪಥುಃ । ಯುವಂ । ಸದ್ಯಃ । ವಿಶ್ಪಲಾಂ । ಏತವೇ । ಕೃಥಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಂ ಯುವಾಂ ವಿಪ್ರಸ್ಯ ಮೇಧಾವಿನೋ ಜರಣಾಂ ಜರಾಮುಪೇಯುಷಃ ಉಪಗತವತಃ ಕಲೇಃ ಕಲಿನಾಮಧೇಯಸ್ಯರ್ಷೇರ್ವಯಃ ಪುನರಪಿ ಯುವದ್ಯುವತ್ವಯುಕ್ತಮಕೃಣುತಂ । ಅಕುರುತಂ । ತಥಾ ಚ ನಿಗಮಾಂತರಂ । ಕಲಿಂ ಯಾಭಿರ್ವಿತ್ತಜಾನಿಂ ದುವಸ್ಯಥಃ । ಋ- ೧-೧೧೨-೧೫ । ಇತಿ । ಕಿಂಚ ಯುವಂ ಯುವಾಂ ವಂದನಂ ಜಾಯಾವಿಯೋಗಸಂತಾಪೇನ ಕೂಪಪತಿತಂ ವಂದನಾಖ್ಯಮೃಷಿಮೃಶ್ಯದಾತ್ಕೂಪಾದುದೂಪಥುಃ । ಉದ್ಧೃತವಂತೌ । ತಥಾ ನಿಗಮಾಂತರಂ । ಉದ್ವಂದನಮೈರಯತಂ ಸ್ವರ್ದೃಶೇ । ಋ. ೧-೧೧೨-೫ । ಇತಿ । ಕಿಂಚ ಯುವಂ ಯುವಾಂ ವಿಶ್ಪಲಾಂ । ಖೇಲಸ್ಯ ರಾಜ್ಞಃ ಸೇನಾಯಾಂ ಯೋದ್ಧ್ರೀ ವಿಶ್ಪಲಾ ನಾಮ ಕಾಚಿತ್ ಸ್ತ್ರೀ । ತಾಂ ಸಂಗ್ರಾಮೇ ಶತ್ರುಭಿಶ್ಛಿನ್ನಜಂಘಾಂ ಸದ್ಯಸ್ತದ್ದಿನ್ಯೈತವೇ ಗಮನಾಯ ಕೃಥಃ । ಅಕುರುತಂ । ತಥಾ ಚ ನಿಗಮಾಂತರಂ । ಚರಿತ್ರಂ ಹಿ ವೇರಿವಾಚ್ಛೇದಿ ಪರ್ಣಮಾಜಾ ಖೇಲಸ್ಯ ಪರಿತಕ್ಮ್ಯಾಯಾಂ । ಸದ್ಯೋ ಜಂಘಾಮಾಯಸೀಂ ವಿಶ್ಪಲಾಯೈ ಧನೇ ಹಿತೇ ಸರ್ತವೇ ಪ್ರತ್ಯಧತ್ತಂ । ಋ. ೧-೧೧೬-೧೫ । ಇತಿ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಯುವಂ**—ನೀವು । **ವಿಪ್ರಸ್ಯ**—ಮೇಧಾವಿಯೂ । **ಜರಣಾಂ ಉಪೇಯುಷಃ**—ಮುಪ್ಪನ್ನು ಸಮೀಪಿಸುತ್ತಿದ್ದವನೂ ಆದ . **ಕಲೇಃ**—ಕಲಿಯೆಂಬ ಋಷಿಗೆ । **ವಯಃ**—ಅವನ

ವಯಸ್ಸನ್ನು । **ಪುನಃ**—ತಿರುಗಿಯೂ । **ಯುವತ್**—ಯೌವನವನ್ನು ಹೊಂದುವಂತೆ । **ಅಕೃಣುತಂ**—ಮಾಡಿದಿರಿ । **ಯುವಂ**—ನೀವು । **ವಂದನಂ**—ಬಾವಿಯೊಳಗೆ ಬಿದ್ದಿದ್ದ ವಂದನನನ್ನು । **ಋಶ್ಯದಾತ್**—ಬಾವಿಯಿಂದ । **ಉದೂಪಥುಃ**—ಹೊರಕ್ಕೆ ಎತ್ತಿದಿರಿ । **ಯುವಂ**—ನೀವು । **ಸದ್ಯಃ**—ಒಡನೆಯೇ । **ವಿಶ್ಪಲಾಂ**—ಕುಂಟಳಾದ ವಿಶ್ಪಲೆಯನ್ನು । **ಏತವೇ**—ನಡೆಯಲು ಶಕ್ತಳನ್ನಾಗಿ । **ಕೃಥಃ**—ಮಾಡಿದಿರಿ.

। ಭಾವಾರ್ಥ ।

ಎಲೈ ಅಶ್ವಿನೀದೇವತೆಗಳೇ, ಮೇಧಾವಿಯೂ, ಮುಪ್ಪನ್ನು ಸಮೀಪಿಸುತ್ತಿದ್ದವನೂ ಆದ ಕಲಿಯೆಂಬ ಋಷಿಗೆ ಅವನು ತಿರುಗಿಯೂ ಯೌವನವನ್ನು ಹೊಂದುವಂತೆ ಅವನ ವಯಸ್ಸನ್ನು ಹಿಂತಿರುಗಿಸಿದಿರಿ. ಬಾವಿಯಲ್ಲಿ ಬಿದ್ದಿದ್ದ ವಂದನನನ್ನು ಬಾವಿಯಿಂದ ಹೊರಕ್ಕೆ ಎತ್ತಿದಿರಿ. ಯುದ್ಧದಲ್ಲಿ ಕುಂಟಳಾದ ವಿಶ್ಪಲೆಗೆ ಕಾಲನ್ನು ಕೊಟ್ಟು ಅವಳನ್ನು ನಡೆಯುವಂತೆ ಮಾಡಿದಿರಿ.

## English Translation

You made young again the life of the sage Kali, when approaching old age, you rescued Vandana from the well; you quickly enabled Vishpala to walk.

॥ ವಿಶೇಷವಿಷಯಗಳು ॥

**ಯುವಂ ವಿಪ್ರಸ್ಯ ಜರಣಾಂ ಉಪೇಯುಷಃ ಕಲೇಃ ವಯಃ ಪುನಃ ಯುವತ್ ಅಕೃಣುತಂ**—ಎಲೈ ಅಶ್ವಿನೀದೇವತೆಗಳೇ, ವಯೋವೃದ್ಧನಾಗಿ ಜೀರ್ಣವಾದ ಶರೀರವುಳ್ಳ ಕಲಿ ಎಂಬ ಋಷಿಯನ್ನು ಪುನಃ ಯುವಕನನ್ನಾಗಿ ಮಾಡಿದಿರಿ ಎಂದು ಇಲ್ಲಿ ಸ್ತುತಿಸಲಾಗಿದೆ. ಈ ವಿಷಯವನ್ನು ಋ. ಸಂ ೧-೧೧೨-೧೫ ನೇ ಋಕ್ಕಿನಲ್ಲಿ ಕುತ್ಸಋಷಿಯೂ ಸಹ,

**ಯಾಭಿರ್ನಮ್ರಂ ವಿಪಿಪಾನಮುಪಸ್ತುತಂ ಕಲಿಂ ಯಾಭಿರ್ವಿತ್ತಜಾನಿಂ ದುವಸ್ಯಥಃ ।**

(ಋ. ಸಂ. ೧-೧೧೨-೧೫)

ವಿವರಿಸಿದಾನೆ. **ಕಲಿರ್ನಾಮ ಋಷಿರ್ಜರಯಾ ತರೀತಸ್ತರುಣೀಂ ಭಾರ್ಯಾಂ ಲೇಭೇ । ಸ ತತ್ಪ್ರೀತ್ಯೈ ಪುನರ್ಯೌವನಮಾತ್ಮನ ಇಚ್ಛನ್ ಅಶ್ವಿನೌ ತುಷ್ಟಾವ । ತಮಾಗತ್ಯಾಶ್ವಿನೌ ಪುನರ್ಯೌವನಂ ಚಕ್ರತುರಿತಿ ।** ಕಲಿಯೆಂಬ ಋಷಿಯು ವೃದ್ಧನಾದಮೇಲೆ ತರುಣಿಯಾದ ಓರ್ವ ಕನ್ಯೆಯನ್ನು ಮದುವೆಯಾದನು. ಅವಳನ್ನು ಒಲಿಸಿಕೊಳ್ಳುವುದಕ್ಕಾಗಿ ಪುನಃ ಯೌವನವನ್ನು ಪಡೆಯಬೇಕೆಂದಪೇಕ್ಷಿಸಿ ಅಶ್ವಿನೀದೇವತೆಗಳನ್ನು ಸ್ತುತಿಸಿದಾಗ ಅವರು ಇವನಿಗೆ ಪುನಃ ಯೌವನವು ಬರುವಂತೆ ಮಾಡಿದರು ಎಂಬ ಕಥೆಯಿದೆ. ಪ್ರಕೃತ ಋಕ್ಕಿನಲ್ಲಿಯೂ ಈ ವಿಷಯದ ವಿವರವಿದೆ.

ವಂದನಂ—ಅತ್ರೇದಮಾಖ್ಯಾನಂ । ವಂದನೋ ನಾಮ ಕಶ್ಚಿದೃಷಿಃ । ಸ ಚಾಸುರೈಃ ಕೂಪೇ ನಿಖಾತೆ ಉತ್ತರೀತುಮಶಕ್ನುವನ್ನಶ್ವಿನಾವಸ್ತೌತ್ । ತಮಶ್ವಿನೌ ಕೂಪಾದುನ್ನಿನ್ಯತುರಿತಿ । ತದಾಹ ॥

ವಂದನ ಎಂದು ಹೆಸರುಳ್ಳ ಒಬ್ಬ ಋಷಿಯನ್ನು ಅಸುರರು ಕಾಡಿನ ಮಧ್ಯದ ನಿರ್ಜನಪ್ರದೇಶದಲ್ಲಿ ಇರುವ ಬಾವಿಯಲ್ಲಿ ಹಾಕಿದ್ದರು. ಅಲ್ಲಿಂದ ಅವನು ಏಳಲಾರದೆ ಅಶ್ವಿನೀದೇವತೆಗಳನ್ನು ಸ್ತುತಿಮಾಡಿದನು. ಶಿಷ್ಟರ ರಕ್ಷಣೆಯನ್ನು ಮಾಡುವ ಅಶ್ವಿನೀದೇವತೆಗಳು ಈ ಋಷಿಯ ಸ್ಥಿತಿಯನ್ನು ತಿಳಿದವರಾಗಿ ಬಾವಿಯಲ್ಲಿ ಬಚ್ಚಿಟ್ಟಿದ್ದ ಧನವನ್ನು ಸಂತೋಷದಿಂದ ತೆಗೆಯುವಂತೆ ಈ ಋಷಿಯನ್ನು ಬಾವಿಯಿಂದ ಮೇಲಕ್ಕೆ ತೆಗೆದು ರಕ್ಷಿಸಿದರು ಎಂಬ ಇತಿಹಾಸವು ಇಲ್ಲಿ ಉಕ್ತವಾಗಿರುವುದು. ಈ ಅಶ್ವಿನೀದೇವತೆಗಳು ಮಾಡಿರುವ ಋಷಿಯ ರಕ್ಷಣೆಯು ಅಭ್ಯೇಷಣಯುಕ್ತಂ—ಎದುರಿಗೆ ನೋಡುವವರಿಗೆಲ್ಲರಿಗೂ ಗೋಚರವಾಗತಕ್ಕದ್ದು, ಎಲ್ಲರೂ ಪ್ರಶಂಸೆಮಾಡತಕ್ಕದ್ದು, ಎಲ್ಲರಿಗೂ ಪೂಜ್ಯವಾಗಿರತಕ್ಕದು ಎಂದು ಪ್ರಶಂಸಿತವಾಗಿರುವುದು.

**ಯಾಭೀ ರೇಭಂ ನಿವೃತಂ ಸಿತಮದ್ಭ್ಯ ಉದ್ವಂದನಮೈರಯತಂ ಸ್ವರ್ದೃಶೇ ।**
**ಯಾಭಿಃ ಕಣ್ವಂ ಪ್ರಸಿಷಾಸಂತಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥**

(ಋ. ಸಂ. ೧-೧೧೨-೫)

ಈ ಋಕ್ಕಿನಲ್ಲಿ ಬಾವಿಯಲ್ಲಿ ಬಿದ್ದಿದ್ದ ರೇಭನನ್ನೂ ವಂದನನನ್ನೂ ಕಣ್ವನನ್ನೂ ಸಹ ರಕ್ಷಿಸಿದರೆಂದು ಹೇಳಿದೆ. ಸ್ಕಂದಸ್ವಾಮಿಗಳು ಈ ಋಕ್ಕನ್ನು ಉದಹರಿಸಿ

**ರೇಭಮೃಷಿಂ ಸಂಧ್ಯಾಕಾಲೇ ಸ್ನಾತ್ವಾ ಹ್ರದಾದುತ್ತೀರ್ಣಂ ಅಗ್ನಿಹೋತ್ರಂ ಹೋತುಂ ಸ್ವಾಶ್ರಮಂ ಗಚ್ಛಂತಂ ಅಸುರಾ ದದೃಶುಃ । ತೇ ದೇವಾನಾಮಯಂ ಯಷ್ಟಾ ಸ್ತೋತಾ ಚೇತಿ ಜ್ಞಾತ್ವಾ ಸಂಕ್ರುದ್ಧಾಃ ತಂ ತಾಡಯಿತ್ವಾ ಬಧ್ವಾ ಚ ತಸ್ಮಿನ್ ಹ್ರದೇ ಪ್ರಕ್ಷಿಪ್ಯ ದಶರಾತ್ರಂ ಧಾರಯಾಂ ಚಕ್ರುಃ**

ರೇಭನೆಂಬ ಋಷಿಯು ಸಂಧ್ಯಾಕಾಲದಲ್ಲಿ ಸ್ನಾನಮಾಡಿ ನದಿಯಿಂದ ಹೊರಟು ಅಗ್ನಿಹೋತ್ರವನ್ನು ಮಾಡುವುದಕ್ಕಾಗಿ ತನ್ನ ಆಶ್ರಮಕ್ಕೆ ಬರುತ್ತಿರುವಾಗ ಅವನನ್ನು ಅಸುರರು ನೋಡಿ ಈ ಋಷಿಯು ದೇವತೆಗಳನ್ನು ಕುರಿತು ಯಜ್ಞಮಾಡಿ ಪೂಜಿಸುವವನು ಎಂದು ತಿಳಿದು ಅವನ ಮೇಲೆ ಕೋಪದಿಂದ ಅವನನ್ನು ಹೊಡೆದು ಹಗ್ಗದಿಂದ ಕಟ್ಟಿ ಭಾವಿಯಲ್ಲಿ ಹಾಕಿ ಹತ್ತು ರಾತ್ರಿಗಳವರೆಗೂ ಬಚ್ಚಿಟ್ಟಿದ್ದರು. ಅನಂತರ ಅವನ ಸ್ತುತಿಯಿಂದ ಮೆಚ್ಚಿದ ಅಶ್ವಿನೀದೇವತೆಗಳು ಆ ಋಷಿಯನ್ನು ರಕ್ಷಿಸಿದರೆಂದು ವರ್ಣಿಸಿದೆ. ಕೆಲವು ಋಕ್ಕುಗಳಲ್ಲಿ ರೇಭನನ್ನೂ ವಂದನನನ್ನೂ ಅಸುರರು ಭಾವಿಯಲ್ಲಿ ತಳ್ಳಿದ್ದರು. ಅವರು ಅಶ್ವಿನೀದೇವತೆಗಳನ್ನು ಸ್ತುತಿಸಲು ಅವರ ಸಂರಕ್ಷಣೆಯಾಯಿತೆಂದು ವರ್ಣನೆ ಇರುವುದು. ಕೆಲವುಕಡೆ ವಂದನನ ವಿಷಯವು ಮಾತ್ರ ಉಕ್ತವಾಗಿರುವುದು.

**ಶುಭೇ ರುಕ್ಮಂ ನ ದರ್ಶತಂ ನಿಖಾತಮುದೂಪಥುರಶ್ವಿನಾ ವಂದನಾಯ ।**

(ಋ. ಸಂ. ೧-೧೧೭-೫)

**ಯುವಂ ವಂದನಮೃಶ್ಯದಾದುದೂಪಥುರ್ಯುವಂ ಸದ್ಯೋ ವಿಶ್ಪಲಾಮೇತವೇ ಕೃಥಃ ।**

(ಋ. ಸಂ. ೧೦-೩೯-೮)

ಇನ್ನು ಕೆಲವು ಋಕ್ಕುಗಳಲ್ಲಿ,

ಯುವಂ ಶಯೋರವಸಂ ಪಿಪ್ಯಥುರ್ಗವಿ ಪ್ರ ದೀರ್ಘೇಣ ವಂದನಸ್ತಾರ್ಯಾಯುಷಾ

(ಋ. ಸಂ. ೧-೧೧೯-೬)

ಉದ್ವಂದನಮೈರತಂ ದಂಸನಾಭಿರುದ್ರೇಭಂ ದಸ್ರಾ ವೃಷಣಾ ಶಚೀಭಿಃ ।

(ಋ. ಸಂ. ೧ ೧೧೮-೬)

ಯುವಂ ವಂದನಂ ನಿರ್ಋತಂ ಜರಣ್ಯಯಾ ರಥಂ ನ ದಸ್ರಾ ಕರಣಾ ಸಮಿನ್ವಥಃ ।

(ಋ. ಸಂ. ೧-೧೧೯-೭)

ವಂದನನ ಜೀರ್ಣವಾದ ಶರೀರವನ್ನು ಯುವಕನ ಶರೀರದಂತೆ ಮಾಡಿ ಅವನು ಬಹಳಕಾಲ ಜೀವಿಸುವಂತೆ ಮಾಡಿದ ರೆಂಬ ಪ್ರಶಂಸೆ ಇದೆ.

ವಿಶ್ಪಲಾಂ—ಖೇಲನೆಂಬ ರಾಜನು ಅಗಸ್ತ್ಯಋಷಿಯನ್ನು ಪುರೋಹಿತನನ್ನಾಗಿ ಮಾಡಿಕೊಂಡನು. ಅವನಿಗೆ ವಿಶ್ಪಲಾ ಎಂದು ಹೆಸರುಳ್ಳ ಹೆಂಡತಿಯೂ ಇದ್ದಳು. ಶತ್ರುಗಳ ಸಂಗಡ ಯುದ್ಧವು ನಡೆಯುತ್ತಿರುವಾಗ ವಿಶ್ಪಲಾ ಎಂಬ ಸ್ತ್ರೀಯ ಪಾದವು ಕತ್ತರಿಸಿ ಹೋಯಿತು. ಆಗ ವಿಶ್ಪಲೆಗೆ ಕಾಲು ಬರಬೇಕೆಂದು ಅಗಸ್ತ್ಯಋಷಿಯು ಅಶ್ವಿನೀದೇವತೆ ಗಳನ್ನು ಸ್ತೋತ್ರಮಾಡಲಾಗಿ ಅಶ್ವಿನೀದೇವತೆಗಳು ರಾತ್ರಿಯಲ್ಲಿ ಬಂದು ಇವಳ ಕತ್ತರಿಸಿಹೋದ ಕಾಲುಗಳಿಗೆ ಬದಲಾಗಿ ಕಬ್ಬಿಣದ ಕಾಲುಗಳನ್ನು ಸೇರಿಸಿ ಆಸ್ತ್ರೀಗೆ ಪಾದಗಳು ಬರುವಂತೆ ಮಾಡಿದರು ಎಂಬ ಇತಿಹಾಸವು ಇಲ್ಲಿ ಉಕ್ತವಾಗಿರುವುದು. ಈ ವಿಷಯವು-

ಯಾಭಿರ್ವಿಶ್ಪಲಾಂ ಧನಸಾಮಥರ್ವ್ಯಂ ಸಹಸ್ರಮೀಳ್ಹ ಆಜಾವಜಿನ್ವತಂ ।

(ಋ. ಸಂ. ೧-೧೧೨-೧೦)

ಅಗಸ್ತ್ಯೇ ಬ್ರಹ್ಮಣಾ ವಾವೃಧಾನಾ ಸಂ ವಿಶ್ಪಲಾ ನಾಸತ್ಯಾ ಪರಿಣೀತಂ ।

(ಋ. ಸಂ. ೧-೧೮೪-೧೧)

ಅಮುಂಚತಂ ವರ್ತಿಕಾಮಂಹಸೋ ನಿಃ ಪ್ರತಿ ಜಂಘಾಂ ವಿಶ್ಪಲಾಯಾ ಅಧತ್ತಂ ।

(ಋ. ಸಂ. ೧-೧೧೮-೮)

ಯುವಂ ವಂದನಮೃಶ್ಯದಾದುದೂಪಥುರ್ಯುವಂ ಸದ್ಯೋ ವಿಶ್ಪಲಾಮೇತವೇ ಕೃಥಃ ।

(ಋ. ಸಂ. ೧೦-೩೯-೮)

ಎಂಬ ಋಕ್ಕುಗಳಲ್ಲಿ ವಿವರಿಸಲ್ಪಟ್ಟಿರುವುದು.

॥ ಸಂಹಿತಾಪಾಠಃ ॥

ಯುವಂ ಹ ರೇಭಂ ವೃಷಣಾ ಗುಹಾ ಹಿತಮುದೈರಯತಂ ಮಮೃವಾಂಸ-
ಮಶ್ವಿನಾ ।

ಯುವನ್ನೃಬೀಸಮುತ ತಪ್ತಮತ್ರಯ ಓಮನ್ವಂತಂ ಚಕ್ರಥುಃ ಸಪ್ತ-
ವಧ್ರಯೇ ॥ ೯ ॥

॥ ಪದಪಾಠ ॥

ಯುವಂ । ಹ । ರೇಭಂ । ವೃಷಣಾ । ಗುಹಾ । ಹಿತಂ । ಉತ್ । ಐರಯತಂ । ಮಮೃ್ವಾಂಸಂ । ಅಶ್ವಿನಾ ।

ಯುವಂ । ಋಬೀಸಂ । ಉತ । ತಪ್ತಂ । ಅತ್ರಯೇ । ಓಮನ್ऽವಂತಂ । ಚಕ್ರಥುಃ । ಸಪ್ತऽವ-ಧ್ರಯೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ವೃಷಣಾ ವರ್ಷಿತಾರಾವಶ್ವಿನಾಶ್ವಿನೌ ಯುವಂ ಯುವಾಂ ಗುಹಾ ಗುಹಾಯಾಂ ಹಿತಮಸು-ರೈರ್ನಿಹಿತಂ ಮಮೃವಾಂಸಂ ಮ್ರಿಯಮಾಣಂ ರೇಭಂ ರೇಭಾಖ್ಯಮೃಷಿಮುದೈರಯತಂ । ಉತ್ತಾರಿತವಂತೌ ಸ್ಥಃ । ತಥಾ ಚ ನಿಗಮಾಂತರಂ । ದಶ ರಾತ್ರೀರಶಿವೇನಾ ನವ ದ್ಯೂನವನದ್ಧಂ ಶ್ನಥಿತಮಪ್ಸ್ವಂತಃ । ವಿಪ್ರುತಂ ರೇಭಮುದನಿ ಪ್ರವೃಕ್ತಮುನ್ನಿನ್ಯಥುಃ ಸೋಮಮಿವ ಸ್ರುವೇಣ । ಋ. ೧-೧೧೬-೨೪ । ಇತಿ । ಉತ ಕಿಂಚ ಯುವಂ ಯುವಾಂ ತಪ್ತಮೃಬೀಸಮಗ್ನಿಕುಂಡಮತ್ರಯೇऽತ್ರೇರರ್ಥಾಯೌಮನ್ವಂತಮ-ವನವಂತಂ ಚಕ್ರಥುಃ । ವೃಷ್ಟ್ಯಾ ನಿಶಮಯ್ಯ ಶೀತಂ ಕೃತವಂತೌ ಸ್ಥ ಇತ್ಯರ್ಥಃ । ತಥಾ ಚ ನಿಗಮಾಂ-ತರಂ । ಹಿಮೇನಾಗ್ನಿಂ ಘ್ರಂಸಮವಾರಯೇಥಾಂ ಪಿತುಮತೀಮೂರ್ಜಮಸ್ಮಾ ಅಧತ್ತಂ । ಋಬೀಸೇ ಅತ್ರಿಮಶ್ವಿನಾವನೀತಮುನ್ನಿನ್ಯಥುಃ ಸರ್ವಗಣಂ ಸ್ವಸ್ತಿ । ಋ. ೧-೧೧೬-೮ । ಇತಿ । ಕಿಂಚ ಯುವಾಂ ಸಪ್ತವಧ್ರಯೇऽಶ್ವಮೇಧೇನ ರಾಜ್ಞಾ ಕೇನಚಿದಪರಾಧೇನ ಕಾಷ್ಠಮಯಮಂಜೂಷಾಯಾಂ ನಿಹಿತಸ್ಯ ಸಪ್ತವಧ್ರಿನಾಮಧೇಯಸ್ಯರ್ಷೇರರ್ಥಾಯ ಚಕ್ರಥುಃ । ಮಂಜೂಷೋದ್ಘಾಟನಂ ಕೃತವಂತೌ ಸ್ಥ ಇತ್ಯರ್ಥಃ । ತಥಾ ಚ ನಿಗಮಾಂತರಂ । ವಿ ಜಿಹೀಷ್ವ ವನಸ್ಪತೇ ಯೋನಿಃ ಸೂಷ್ಯಂತ್ಯಾ ಇವ । ಶ್ರುತಂ ಮೇ ಅಶ್ವಿನಾ ಹವಂ ಸಪ್ತವಧ್ರಿಂ ಚ ಮುಂಚತಂ । ಋ. ೫-೭೮-೫ । ಇತಿ ॥

॥ ಪ್ರತಿಪದಾರ್ಥ ॥

**ವೃಷಣಾ**—ವೃಷ್ಟಿಯನ್ನು ಸುರಿಸುವ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯುವಂ**—ನೀವು । **ಗುಹಾ**—ಗುಹೆಯಲ್ಲಿ । **ಹಿತಂ**—ಮುಚ್ಚಲ್ಪಟ್ಟಿದ್ದವನೂ । **ಮಮೃವಾಂಸಂ**—ಸಾಯುವುದರಲ್ಲಿದ್ದವನೂ ಆದ । **ರೇಭಂ**—ರೇಭನೆಂಬ ಋಷಿಯನ್ನು । **ಉದೈರಯತಂ**—ಮೇಲಕ್ಕೆತ್ತಿದಿರಿ । **ಉತ**—ಮತ್ತು । **ಯುವಂ**—ನೀವು । **ತಪ್ತಂ**—ದಾಹಾತ್ಮಕವಾದ । **ಋಬೀಸಂ**—ಅಗ್ನಿಕುಂಡವನ್ನು । **ಅತ್ರಯೇ**—ಅತ್ರಿಋಷಿಗೆ ಸಹಾಯಮಾಡಲು । **ಓಮನ್ವಂತಂ**—ತಣ್ಣಗಾಗುವಂತೆ । **ಚಕ್ರಥುಃ**—ಮಾಡಿದಿರಿ । **ಸಪ್ತವಧ್ರಯೇ**—ಸಪ್ತವಧ್ರಿಗೆ ಸ್ವಾತಂತ್ರ್ಯವನ್ನು ಕೊಟ್ಟಿರಿ.

॥ ಭಾವಾರ್ಥ ॥

ವೃಷ್ಟಿಯನ್ನು ಸುರಿಸುವ ಎಲೈ ಅಶ್ವಿನೀದೇವತೆಗಳೇ, ಗುಹೆಯಲ್ಲಿ ಮುಚ್ಚಲ್ಪಟ್ಟಿದ್ದವನೂ, ಸಾಯುವುದರಲ್ಲಿದ್ದ ಆದ ರೇಭನೆಂಬ ಋಷಿಯನ್ನು ನೀವು ಮೇಲಕ್ಕೆತ್ತಿದಿರಿ. ಮತ್ತು ನೀವು ದಾಹಾತ್ಮಕವಾದ ಅಗ್ನಿಕುಂಡವನ್ನು ಋಷಿಗೆ ಸಹಾಯಮಾಡಲು ತಣ್ಣಗಾಗುವಂತೆ ಮಾಡಿದಿರಿ. ಸಪ್ತವಧ್ರಿಗೆ ಸ್ವಾತಂತ್ರ್ಯವನ್ನು ಕೊಟ್ಟಿರಿ.

## English Translation

Ashwins, shedders of rain, you extricated Rebha when he was placed cave and was dying : you made the heated fire-pit cool for Atri : you e (liberty) to Saptavadhri.

॥ ವಿಶೇಷವಿಷಯಗಳು ॥

**ರೇಭಂ**—ಅಶ್ವಿನೀದೇವತೆಗಳು ರೇಭಋಷಿಯನ್ನು ಅವನಿಗೆ ಒದಗಿದ್ದ ಅಪಾಯದಿಂದ ಅಥವಾ ಬಾವಿಯಲ್ಲಿ ರು ಅವನನ್ನು ಕಟ್ಟಿಹಾಕಿ ಮುಳುಗಿಸಿದ್ದ ತೊಂದರೆಯಿಂದ ರಕ್ಷಿಸಿದರು ಎಂದು ಅರ್ಥ. ಅತ್ರಿಋಷಿಯನ್ನು ು ಅವನನ್ನು ತುಷಾಗ್ನಿಯಲ್ಲಿ ಅಸುರರು ಹಾಕಿದಾಗ ಅಶ್ವಿನೀದೇವತೆಗಳು ಅವನ ಸ್ತುತಿಯನ್ನು ಕೇಳಿ ಹಿತಕರ ಮತ್ತು ತಂಪಾದ ನೀರಿನಿಂದ ಬೆಂಕಿಯನ್ನು ಆರಿಸಿ ಅವನನ್ನು ರಕ್ಷಿಸಿದರು ಎಂದು ಒಂದು ವಿಧವಾದ ಅರ್ಥವನ್ನು ಯಣರು ಹೇಳಿರುವುದಲ್ಲದೆ, ಅತ್ರಿ ಶಬ್ದಕ್ಕೆ ಹವಿಸ್ಸುಗಳನ್ನು ಭಕ್ಷಿಸುವ ಅಗ್ನಿ ಎಂದೂ, ಈ ಅಗ್ನಿಗೆ (ಸೂರ್ಯಕಿರಣ ತಾಪದಿಂದ ವ್ರೀಹ್ಯಾದ್ಯುತ್ಪತ್ತಿಯು ಯಾವುದೂ ಆಗದಿರುವುದರಿಂದ) ಉಂಟಾಗಿರುವ ತಾಪವನ್ನು ವೃಷ್ಟ್ಯುದಕ ಮೂಲಕವಾಗಿ ಪರಿಹರಿಸಿದರು ಎಂದು ಇನ್ನೊಂದು ಅರ್ಥವನ್ನೂ ವಿವರಿಸಿರುವರು. ಸ್ಕಂದಸ್ವಾಮಿಗಳು ಋಷಿಯನ್ನು ರಕ್ಷಿಸಿದ ವೃತ್ತಾಂತವನ್ನು ಮಾತ್ರ ವಿವರಿಸಿ—

**ಹಿಮೇನಾಗ್ನಿಂ ಘ್ರಂಸಮವಾರಯೇಥಾಂ ಪಿತುಮತೀಮೂರ್ಜಮಸ್ಮಾ ಅಧತ್ತಂ ।**
**ಋಬೀಸೇ ಅತ್ರಿಮಶ್ವಿನಾವನೀತಮುನ್ನಿನ್ಯಥುಃ ಸರ್ವಗಣಂ ಸ್ವಸ್ತಿ ॥**

(ಋ. ಸಂ. ೧-೧೧೬-೮)

ಋಕ್ಕನ್ನು ಉದಹರಿಸಿರುವರು.

**ಅತ್ರಯೇ**—ಅಸುರರು ಅತ್ರಿಯೆಂಬ ಋಷಿಯನ್ನು ಹಿಡಿದುಕೊಂಡು ಹೋಗಿ ತೊಂದರೆಯನ್ನುಂಟುಮಾಡು ಕ್ಕಾಗಿ ಬಹಳ ದ್ವಾರಗಳುಳ್ಳ ಅಪಾಯಕರವಾದ ಒಂದು ಮನೆಯಲ್ಲಿ ಕೆಳಮುಖನಾಗಿ ಮಲಗಿಸಿ ಅವನನ್ನು ಾಗ್ನಿಯಲ್ಲಿ (ಹೊಟ್ಟುಬೆರಸಿರುವ ಬೆಂಕಿಯಲ್ಲಿ) ಹಾಕಿದರು. ಇದರಿಂದ ಅತ್ರಿಋಷಿಯು (ಅವನ ಶರೀರವು ಮು) ಬೆಂಕಿಯ ತಾಪವನ್ನು ಸಹಿಸಲಾರದೆ ಅಶ್ವಿನೀದೇವತೆಗಳನ್ನು ಸ್ತುತಿಮಾಡಿದಾಗ ಅವರು ಹಿಮದಂತೆ ತಣ್ಣಗಿ ನೀರನ್ನು ಸುರಿಸಿ ಅತ್ರಿಋಷಿಯನ್ನು ರಕ್ಷಿಸಿದರು.

॥ ಸಂಹಿತಾಪಾಠಃ ॥

**ಯುವಂ ಶ್ವೇತಂ ಪೇದವೇಽಶ್ವಿನಾಶ್ವಂ ನವಭಿರ್ವಾಜೈರ್ನವತೀ ಚ ವಾಜಿನಂ।**

ಚರ್ಕೃತ್ಯಂ ದದಥುರ್ದ್ರಾವಯತ್ಸಖಂ ಭಗಂ ನ ನೃಭ್ಯೋ ಹವ್ಯಂ ಮಯೋ-
ಭುವಂ ॥ ೧೦ ॥

॥ ಪದಪಾಠಃ ॥

ಯುವಂ । ಶ್ವೇತಂ । ಪೇದವೇ । ಅಶ್ವಿನಾ । ಅಶ್ವಂ । ನವಽಭಿಃ । ವಾಜೈಃ । ನವತೀ । ಚ । ವಾಜಿನಂ ।
ಚರ್ಕೃತ್ಯಂ । ದದಥುಃ । ದ್ರವಯತ್ಽಸಖಂ । ಭಗಂ । ನ । ನೃಽಭ್ಯಃ । ಹವ್ಯಂ । ಮಯಃಽಭುವಂ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ಯುವಂ ಯುವಾಂ ಪೇದವೇ ಪೇದುನಾಮಧೇಯಾಯ ರಾಜ್ಞೇ ಶ್ವೇತಂ ಶ್ವೇತವರ್ಣಂ ವಾಜಿನಂ ಬಲಿನಂ ನವಭಿರ್ನವತೀ ನವತ್ಯಾಶ್ವೈಃ ಸಹಿತಂ ಚರ್ಕೃತ್ಯಂ ಸಂಗ್ರಾಮಾಣಾಮತ್ಯರ್ಥಂ ಕರ್ತಾರಂ ಶತ್ರೂಣಾಂ ಜೇತಾರಂ ವಾ ದ್ರವಯತ್ಸಖಂ ಶತ್ರುಸಖೀನಾಂ ದ್ರಾವಯಿತಾರಂ ಹವ್ಯಂ ಹ್ವಾತವ್ಯಂ ಮಯೋಭುವಂ ಸುಖಸ್ಯ ಭಾವಯಿತಾರಮಶ್ವಂ ನೃಭ್ಯೋ ಮನುಷ್ಯೇಭ್ಯೋ ಭಗಂ ನ ಭಜನೀಯಂ ಧನಮಿವ ದದಥುಃ । ಪ್ರಾಯಚ್ಛತಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಯುವಂ—ನೀವು । ಪೇದವೇ—ಪೇದುವೆಂಬ ರಾಜನಿಗೆ । ಶ್ವೇತಂ—ಶ್ವೇತವರ್ಣವುಳ್ಳದ್ದೂ । ವಾಜಿನಂ—ಶಕ್ತಿಯುತವಾದುದೂ । ವಾಜೈಃ—ಶಕ್ತಿಯುತವಾದ । ನವಭಿಃ ನವತೀ ಚ—ತೊಂಭತ್ತೊಂಭತ್ತು ಇತರ ಅಶ್ವಗಳೊಂದಿಗೆ ಕೂಡಿದುದೂ । ಚರ್ಕೃತ್ಯಂ—ಸಂಗ್ರಾಮದಲ್ಲಿ ವೀರ್ಯಕರ್ಮವುಳ್ಳದ್ದೂ । ದ್ರವಯತ್ಸಖಂ—ಶತ್ರುವಿನ ಮಿತ್ರರನ್ನು ಓಡಿಸತಕ್ಕದ್ದೂ । ಹವ್ಯಂ—ಆಹ್ವಾನಕ್ಕೆ ಯೋಗ್ಯವಾದುದೂ । ಮಯೋಭುವಂ—ಸುಖಕ್ಕೆ ಸಾಧಕವಾದುದೂ ಆದ । ಅಶ್ವಂ—ಅಶ್ವವನ್ನು । ನೃಭ್ಯಃ—ಮಾನವರಿಗೆ ಹಿತಕರವಾದ । ಭಗಂ ನ—ಧನವನ್ನು ಕೊಡುವಂತೆ । ದದಥುಃ—ಕೊಟ್ಟಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಪೇದುವೆಂಬ ರಾಜನಿಗೆ ಶ್ವೇತವರ್ಣವುಳ್ಳದ್ದೂ, ಶಕ್ತಿಯುತವಾದುದೂ ಶಕ್ತಿಯಿಂದ ಕೂಡಿದ ಬೇರೆ ತೊಂಭತ್ತೊಂಭತ್ತು ಅಶ್ವಯುತವಾದುದೂ, ಯುದ್ಧದಲ್ಲಿ ವೀರ್ಯಕರ್ಮವುಳ್ಳದ್ದೂ, ಶತ್ರುವಿನ ಮಿತ್ರರನ್ನು ಓಡಿಸತಕ್ಕುದೂ, ಆಹ್ವಾನಕ್ಕೆ ಯೋಗ್ಯವಾದುದೂ, ಸುಖಸಾಧಕವಾದುದೂ ಆದ ಅಶ್ವವನ್ನು ಮಾನವರಿಗೆ ಹಿತಕರವಾದ ಧನವನ್ನು ಕೊಡುವಂತೆ ಕೊಟ್ಟಿರಿ.

## English Translation

You gavc, Aswins, to Pedu a strong white horse with nine-and-ninety (other) steeds, (a horse) active (in combat), putting to flight the friends (of the foe), worthy to be invoked, a source of delight, like wealth to men

॥ ವಿಶೇಷವಿಷಯಗಳು ॥

ಪೇದು ಎಂಬ ರಾಜನು ಅಶ್ವೀನೀದೇವತೆಗಳನ್ನು ಸ್ತುತಿಮಾಡಿದನು. ಅವರು ರಾಜನ ಸ್ತುತಿಯನ್ನು ಕೇಳಿ ತುಷ್ಟರಾಗಿ ಅವನಿಗೆ ಒಂದು ಕುದರೆಯನ್ನು ಉಚಿತವಾಗಿ ಅನುಗ್ರಹಮಾಡಿ ಕೊಟ್ಟರು. ಅದು ಬಿಳಿಯ ಬಣ್ಣಾಳ್ಳದ್ದಾಗಿ, ಯುದ್ಧಕಾಲದಲ್ಲಿ ಶತ್ರುಗಳನ್ನು ನಾಶಮಾಡುವ ಸಾಮರ್ಥ್ಯವುಳ್ಳದ್ದಾಗಿತ್ತು. ಇಂದ್ರನು ಅಶ್ವಿನೀದೇವತೆ ?ಗೆ ಇದನ್ನು ಹಿಂದೆ ಬಹುಮಾನವಾಗಿ ಕೊಟ್ಟಿದ್ದನು. ಅದು ಪ್ರತಿದಿನವೂ ಸಹಸ್ರ ಧನವನ್ನು ನಿಯತವಾಗಿ ಸ್ಲುವ ಸ್ವಭಾವವುಳ್ಳದ್ದೆಂದು ಕುದುರೆಯ ಉತ್ತಮತ್ವವು ವ್ಯಕ್ತವಾಗುವಂತೆ ವರ್ಣಿತವಾಗಿದೆ. ಸಾಯಣರು ು. ಸಂ. ೧-೧೧೬-೬ನೇ ಋಕ್ಕಿನ ಭಾಷ್ಯದಲ್ಲಿ—

**ಅತ್ರೇದಮಾಖ್ಯಾಯತೇ । ಪೇದುರ್ನಾಮ ಕಶ್ಚಿತ್ । ಸ ಚಾಶ್ವಿನೌ ತುಷ್ಟಾವ । ತಸ್ಮೈ ಪ್ರೀತೌ ಕಂಚಿಚ್ಛ್ವೇತವರ್ಣಮಶ್ವಂ ದತ್ತವಂತೌ । ಸ ಚಾಶ್ವಸ್ತಸ್ಯ ಜಯಂ ಚಕಾರೇತಿ । ಏತದತ್ರ ಪ್ರತಿಪಾದ್ಯತೇ ।**

ಎಂದು ಹೇಳಿದಾರೆ. ಪೇದು ಎಂಬ ಹೆಸರಿನ ಒಬ್ಬನು ಅಶ್ವಿನೀದೇವತೆಗಳನ್ನು ಸ್ತುತಿಸಿದನು. ಅವರು ಅವನ ಸ್ತೋತ್ರಕ್ಕೆ ಮೆಚ್ಚಿ ಅವರು ಅವನಿಗೆ ಒಂದು ಕುದುರೆಯನ್ನು ಕೊಟ್ಟರು. ಈ ಋಕ್ಕಿನ ವಿಷಯದಲ್ಲಿ ಸ್ಕಂದಸ್ವಾಮಿಗಳು ಈರೀತಿ ಹೇಳಿದಾರೆ-

**ಅಘಾಶ್ವೋ ನಾಮ ರಾಜಾ ಯುಯುತ್ಸುರಾತ್ಮನೋ ಅಶ್ವಂ ಅಶ್ವಿನೌ ಯಯಾಚೇ ಸತತಂ-ಚಾವಿನಾಶಂ । ತಸ್ಮೈ ಅಶ್ವಿನೌ ಬಲವಂತಂ ಅತ್ಯಂತವೇಗಿನಂ ಜಯಕರಂ ಸರ್ವತ್ರಾಪ್ರತಿಹತಗಮನಂ ಅಶ್ವಂ ಸತತಂ ಚಾವಿನಾಶಂ ದದತುರಿತಿ । ತದೇತದಿಹೋಚ್ಯತೇ ॥**

ಅಘಾಶ್ವನೆಂಬ ರಾಜನು ಯುದ್ಧಮಾಡಲು ಇಚ್ಛೆಯುಳ್ಳವನಾಗಿ ತನಗೆ ಬಹಳ ಶಕ್ತಿಯುಳ್ಳದ್ದಾಗಿಯೂ ವೇಗಶಾಲಿಯಾಗಿಯೂ ಎಲ್ಲಾ ಕಡೆಯಲ್ಲಿಯೂ ತಡೆಯೇ ಇಲ್ಲದಂತೆ ಸಂಚರಿಸುವುದೂ ಜಯವನ್ನು ಸಂಪಾದಿಸಿ ಕೊಡುವುದೂ ಯಾವಾಗಲೂ ನಾಶವನ್ನು ಹೊಂದದೆ ಇರುವುದೂ ಆದ ಒಂದು ಕುದುರೆಯನ್ನು ಕೊಡಬೇಕೆಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದನು. ಅವರು ಇವನ ಪ್ರಾರ್ಥನೆಗೆ ಅನುಸಾರವಾಗಿ ಇವನ ಇಷ್ಟದಂತೆಯೇ ಇರುವ ಒಂದು ಬಿಳಿಯ ಕುದುರೆಯನ್ನು ಕೊಟ್ಟರು.

ಮತ್ತು ಋ. ಸಂ. ೧-೧೧೭-೯ನೇ ಋಕ್ಕಿನ ಭಾಷ್ಯದಲ್ಲಿ—

**ಪೇದುರ್ನಾಮ ರಾಜಾ ತಸ್ಮೈ ಪರಯಾ ಭಕ್ತ್ಯಾ ಪರಿತುಷ್ಟಾವಶ್ವಿನೌ ಮಹಾವೀರ್ಯಂ ಶ್ವೇತಮಶ್ವಂ ದದತುಃ ಇತಿ ತತ್ಪರಸ್ತಾದ್ವಕ್ಷ್ಯತಿ** । ಪೇದು ಎಂಬ ರಾಜನ ಉತ್ತಮವಾದ ಭಕ್ತಿಗೆ ಮೆಚ್ಚಿ ಅಶ್ವಿನೀದೇವತೆಗಳು ಉತ್ತಮವಾದ ಮತ್ತು ಬಹಳ ಶಕ್ತಿಯುಳ್ಳ ಒಂದು ಬಿಳಿಯ ಕುದುರೆಯನ್ನು ಕೊಟ್ಟರು ಎಂದು ಅರ್ಥವನ್ನು ಹೇಳಿ—

**ಜೋಹೂತ್ರಮರ್ಯೋ ಅಭಿಭೂತಮುಗ್ರಂ ಸಹಸ್ರಸಾಂ ವೃಷಣಂ ವೀಡ್ವಂಗಮ್ ॥**
**ಯುವಂ ಶ್ವೇತಂ ಪೇದವ ಇಂದ್ರಜೂತಮಹಿಹನಮಶ್ವಿನಾ ದತ್ತಮಶ್ವಮ್ ।**

(ಋ. ಸಂ. ೧-೧೧೮-೯)

ಎಂಬ ಈ ಋಕ್ಕನ್ನು ಉದಹರಿಸಿರುವರು. ಇದಲ್ಲದೆ ಇದೇ ಅಭಿಪ್ರಾಯವುಳ್ಳ ಬೇರೆಯ ಋಕ್ಕನ್ನೂ ಇವರು ಉದಾಹರಿಸಿರುತ್ತಾರೆ.

ಯುವಂ ಶ್ವೇತಂ ಪೇದವೇಽಶ್ವಿನಾಶ್ವಂ ನವಭಿರ್ವಾಜೈರ್ನವತೀ ಚ ವಾಜಿನಂ ।
ಚರ್ಕೃತ್ಯಂ ದದಥುರ್ದ್ರಾವಯತ್ಸಖಂ ಭಗಂ ನ ನೃಭ್ಯೋ ಹವ್ಯಂ ಮಯೋಭುವಂ ॥

(ಋ. ಸಂ. ೧೦-೩೯-೧೦)

ಎಂದೂ ಹೇಳಿದಾರೆ.

ಸಂಹಿತಾಪಾಠಃ ॥

ನ ತಂ ರಾಜಾನಾವದಿತೇ ಕುತಶ್ಚನ ನಾಂಹೋ ಅಶ್ನೋತಿ ದುರಿತಂ ನಕಿರ್ಭಯಂ ।
ಯಮಶ್ವಿನಾ ಸುಹವಾ ರುದ್ರವರ್ತನೀ ಪುರೋರಥಂ ಕೃಣುಥಃ ಪತ್ನ್ಯಾ ಸಹ ॥ ೧೧ ॥

॥ ಪದಪಾಠಃ ॥

ನ । ತಂ । ರಾಜಾನೌ । ಅದಿತೇ । ಕುತಃ । ಚನ । ನ । ಅಂಹಃ । ಅಶ್ನೋತಿ । ದುಃಽಇತಂ । ನಕಿಃ । ಭಯಂ ।
ಯಂ । ಅಶ್ವಿನಾ । ಸುಽಹವಾ । ರುದ್ರವರ್ತನೀ ಇತಿ ರುದ್ರಽವರ್ತನೀ । ಪುರಃಽರಥಂ । ಕೃಣುಥಃ । ಪತ್ನ್ಯಾ । ಸಹ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ರಾಜಾನಾವೀಶ್ವರಾವದಿತೇ ಅದೀನೌ ಸುಹವೌ ಸ್ವಾಹ್ವಾನೌ ರುದ್ರವರ್ತನೀ ಸ್ತೋತ್ರಯುಕ್ತಮಾರ್ಗೌ ಹೇ ಅಶ್ವಿನಾಶ್ವಿನೌ ಯುವಾಂ ಯಂ ಜನಂ ಪುರೋರಥಮಗ್ರತೋರಥಂ ಪತ್ನ್ಯಾ ಸಹ ಸ್ವಯಂವರೇ ಕೃಣುಥಃ ಕುರುಥಃ ತಂ ಜನಂ ಕುತಶ್ಚನ ಕುತೋಽಪ್ಯಂಹಃ ಪಾಪಂ ನಾಶ್ನೋತಿ । ನ ವ್ಯಾಪ್ನೋತಿ । ದುರಿತಂ ದುರ್ಗತಿರಪಿ ನಾಶ್ನೋತಿ । ನಕಿರ್ನ ಚ ಭಯಂ ಸಂಸಾರಭಯಂ ನ ಪ್ರಾಪ್ನೋತಿ ॥

॥ ಪ್ರತಿಪದಾರ್ಥ ॥

ಅದಿತೇ—ದೈನ್ಯರಹಿತರೂ । ರಾಜಾನೌ—ಪ್ರಭುಗಳೂ । ಸುಹವಾ—ಆಹ್ವಾನಕ್ಕೆ ಯೋಗ್ಯರೂ ರುದ್ರವರ್ತನೀ—ಸ್ತುತಿಯುಕ್ತವಾದ ಮಾರ್ಗವುಳ್ಳವರೂ ಆದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಯಂ

ಯಾವ ಪುರುಷನನ್ನು । **ಪತ್ನ್ಯಾ ಸಹ**—ಪತ್ನಿಯಿಂದೊಡಗೂಡಿ । **ಪುರೋರಥಂ**—ರಥದಲ್ಲಿ ಸ್ಥಾಪಿತನನ್ನಾಗಿ । **ಕೃಣುಥಃ**—ನೀವು ಮಾಡುವಿರೋ । **ತಂ**—ಆ ಪುರುಷನನ್ನು । **ಕುತಶ್ಚನ**—ಎಲ್ಲಿಂದಲೂ ಸಹ । **ಅಂಹಃ**—ಪಾಪವು । **ನ ಅಶ್ನೋತಿ**—ವ್ಯಾಪಿಸುವುದಿಲ್ಲ । **ದುರಿತಂ**—ದುಃಖಸಾಧನವೂ । **ನಕಿಃ ಭಯಂ**—ಯಾವ ಇತರ ಭಯವೂ ಅಂಟುವುದಿಲ್ಲ.

॥ ಭಾವಾರ್ಥ ॥

ದೈನ್ಯರಹಿತರೂ, ಪ್ರಭುಗಳೂ, ಆಹ್ವಾನಕ್ಕೆ ಯೋಗ್ಯರೂ, ಸ್ತುತಿಯುಕ್ತವಾದ ಮಾರ್ಗವುಳ್ಳವರೂ ಆದ ಎಲೈ ಅಶ್ವಿನೀದೇವತೆಗಳೇ, ಯಾವ ಪುರುಷನನ್ನು ನೀವು ಪತ್ನಿಯೊಡನೆ ಕೂಡಿಸಿ ರಥದಲ್ಲಿ ಸ್ಥಾಪಿಸುವಿರೋ, ಆ ಪುರುಷನನ್ನು ಪಾಪವಾಗಲಿ ಯಾವ ಭೀತಿಯಾಗಲಿ ಸಮೀಪಿಸುವುದಿಲ್ಲ.

English Translation

Lofty sovereigns, worthy of invocation, going on roads which are praised in hymus, Aswins, the man whom with his wife you place in front of (your) car, encounters not from any quarter wickedness, difficulty, or danger.

॥ ಸಂಹಿತಾಪಾಠಃ ॥

ಆ ತೇನ ಯಾತಂ ಮನಸೋ ಜವೀಯಸಾ ರಥಂ ಯಂ ವಾಮೃಭವಶ್ಚ-
ಕ್ರುರಶ್ವಿನಾ ।
ಯಸ್ಯ ಯೋಗೇ ದುಹಿತಾ ಜಾಯತೇ ದಿವ ಉಭೇ ಅಹನೀ ಸುದಿನೇ
ವಿವಸ್ವತಃ ॥ ೧೨ ॥

॥ ಪದಪಾಠಃ ॥

। ತೇನ । ಯಾತಂ । ಮನಸಃ । ಜವೀಯಸಾ । ರಥಂ । ಯಂ । ವಾಂ । ಋಭವಃ । ಚಕ್ರುಃ ।
ಅಶ್ವಿನಾ
ಯಸ್ಯ । ಯೋಗೇ । ದುಹಿತಾ । ಜಾಯತೇ । ದಿವಃ । ಉಭೇ ಇತಿ । ಅಹನೀ ಇತಿ । ಸುದಿನೇ ಇತಿ
ಸುऽದಿನೇ । ವಿವಸ್ವತಃ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ವಾಂ ಯುವಯೋರ್ಯಂ ರಥಮೃಭವಶ್ಚಕ್ರುಃ ಅಕಾರ್ಷುಃ ಯಸ್ಯ ರಥಸ್ಯ ಯೋಗೇ ಸಂಬಂಧೇ ಸತಿ ದಿವೋ ದುಹಿತೋಷಾ ಜಾಯತೇ ಪ್ರಾದುರ್ಭವತಿ ಯಸ್ಯ ಚ ಯೋಗೇ ವಿವಸ್ವತೋ ಭಾಸ್ಕರಾದುಭೇ ಅಹನೀ ಅಹೋರಾತ್ರೇ ಸುದಿನೇ ಶೋಭನೇ ಜಾಯೇತೇ ತೇನ ರಥೇನ ಮನಸೋಪಿ ಜವೀಯಸಾ ವೇಗವತ್ತರೇಣಾ ಯಾತಂ । ಯುವಾಮಾಗಚ್ಛತಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ವಾಂ—ನಿಮ್ಮ । ಯಂ ರಥಂ—ಯಾವ ರಥವನ್ನು । **ಋಭವಃ**—ಋಭುಗಳು । **ಚಕ್ರುಃ**—ನಿರ್ಮಿಸಿದರೋ । **ಯಸ್ಯ**—ಯಾವ ರಥದ । **ಯೋಗೇ**—ಸಂಬಂಧವುಂಟಾದಾಗ । **ದಿವಃ ದುಹಿತಾ**—ಉಷೋದೇವಿಯು । **ಜಾಯತೇ**—ಉತ್ಪನ್ನವಾಗುವಳೋ (ಯಾವ ಅದೇ ಕಾಲದಲ್ಲಿ) । **ವಿವಸ್ವತಃ**—ಆದಿತ್ಯನಿಂದ । **ಉಭೇ ಅಹನೀ**—ಅಹೋರಾತ್ರಗಳೆರಡೂ । **ಸುದಿನೇ**—ಉತ್ತಮವಾಗಿ ಉತ್ಪನ್ನವಾಗುವುವೋ । **ತೇನ**—ಅಂತಹ । **ಮನಸಃ ಜವೀಯಸಾ**—ಮನೋವೇಗಕ್ಕಿಂತಲೂ ಅಧಿಕವಾದ ವೇಗವುಳ್ಳ ರಥದೊಡನೆ । **ಆ ಯಾತಂ**—ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ಯಾವ ರಥವನ್ನು ಋಭುಗಳು ನಿರ್ಮಿಸಿದರೋ, ಯಾವ ರಥದ ಸಂಬಂಧವುಂಟಾದಾಗ ದಿವಸ್ಪುತ್ರಿಯಾದ ಉಷೋದೇವಿಯು ಉತ್ಪನ್ನಳಾಗುವಳೋ, ಯಾವ ಅದೇಕಾಲದಲ್ಲಿ ಆದಿತ್ಯನಿಂದ ಅಹೋರಾತ್ರಗಳೆರಡೂ ಉತ್ಪನ್ನವಾಗುವುವೋ ಅಂತಹ ಮನೋವೇಗಕ್ಕಿಂತಲೂ ಅಧಿಕವಾದ ವೇಗವುಳ್ಳ ರಥದೊಡನೆ ಬನ್ನಿರಿ.

## English Translation

Come, Ashwins, with the chariot that is swifter than thought, which the Ribhus made for you: in connection with which the daughter of heaven, (the dawn), is born, and both the auspicious day and night from Vivaswat.

॥ ಸಂಹಿತಾಪಾಠಃ ॥

ತಾ ವರ್ತಿರ್ಯಾತಂ ಜಯುಷಾ ವಿ ಪರ್ವತಮಪಿನ್ವತಂ ಶಯವೇ ಧೇನುಮಶ್ವಿನಾ ।
ವೃಕಸ್ಯ ಚಿದ್ವರ್ತಿಕಾಮಂತರಾಸ್ಯಾದ್ಯುವಂ ಶಚೀಭಿರ್ಗ್ರಸಿತಾಮಮುಂಚತಂ ॥

॥ ಪದಪಾಠಃ ॥

ತಾ । ವರ್ತಿಃ । ಯಾತಂ । ಜಯುಷಾ । ವಿ । ಪರ್ವತಂ । ಅಪಿನ್ವತಂ । ಶಯವೇ । ಧೇನುಂ । ಅಶ್ವಿನಾ ।
ವೃಕಸ್ಯ । ಚಿತ್ । ವರ್ತಿಕಾಂ । ಅಂತಃ । ಆಸ್ಯಾತ್ । ಯುವಂ । ಶಚೀಭಿಃ । ಗ್ರಸಿತಾಂ । ಅಮುಂ-
ಚತಂ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ತಾ ತೌ ಯುವಾಂ ಜಯುಷಾ ಜಯಶೀಲೇನ ರಥೇನ ಪರ್ವತಮದ್ರಿಂ ಪ್ರತಿ ವರ್ತಿರ್ಮಾರ್ಗಂ ವಿ ಯಾತಂ । ವಿವಿಧಂ ಗಚ್ಛಥಃ । ತಥಾ ಚ ನಿಗಮಾಂತರಂ । ವಿ ಜಯುಷಾ ರಥ್ಯಾ ಯಾತಮದ್ರಿಂ ಶ್ರುತಂ ಹವಂ ವೃಷಣಾ ವಧ್ರಿಮತ್ಯಾಃ । ಋ. ೬-೬೨-೭ । ಇತಿ । ಕಿಂಚ ಯುವಾಂ ಶಯವೇ ಶಯೋರರ್ಥಾಯ ಧೇನುಮಪಿನ್ವತಂ । ನಿವೃತ್ತಪ್ರಸವಾಂ ವೃದ್ಧಾಂ ಗಾಂ ಪ್ರಭೂತಸ್ಯ ಪಯಸೋ ದೋಗ್ಧ್ರೀಂ ಕೃತವಂತೌ ಸ್ಥ ಇತ್ಯರ್ಥಃ । ತಥಾ ಚ ನಿಗಮಾಂತರಂ । ಯುವಂ ಧೇನುಂ ಶಯವೇ ನಾಧಿತಾಯಾಪಿನ್ವತಮಶ್ವಿನಾ ಪೂರ್ವ್ಯಾಯ । ಋ. ೧-೧೧೮-೮ । ಇತಿ । ಕಿಂಚ ಯುವಂ ಯುವಾಂ ವೃಕಸ್ಯಾಂತರನುಪ್ರವಿಷ್ಟಾಂ ಗ್ರಸಿತಾಂ ವೃಕೇಣ ಗ್ರಸ್ತಾಂ ವರ್ತಿಕಾಂ । ವರ್ತಿಕಾ ನಾಮ ಚಟಿಕಾ । ತಾಮಾಸ್ಯಾದ್ವೃಕಸ್ಯ ಮುಖಾಚ್ಛಚೀಭಿಃ ಪ್ರಜ್ಞಾಭಿಃ ಕರ್ಮಭಿರ್ವಾಮುಂಚತಂ । ಅಮೋಚ-ಯತಂ । ತಥಾ ಚ ನಿಗಮಾಂತರಂ । ಅಜೋಹವೀದಶ್ವಿನಾ ವರ್ತಿಕಾ ವಾಮಾಸ್ನೋ ಯತ್ಸೀಮಮುಂಚತಂ ವೃಕಸ್ಯ । ಋ. ೧-೧೧೭-೧೬ । ಇತಿ ॥

॥ ಪ್ರತಿಪದಾರ್ಥ ॥

**ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ । **ತಾ**— ನೀವು । **ಜಯುಷಾ**— ಜಯಶಾಲಿಯಾದ ರಥದೊಡನೆ । **ಪರ್ವತಂ ವರ್ತಿಃ**— ಪರ್ವತಮಾರ್ಗದಲ್ಲಿ । **ವಿ ಯಾತಂ**— ಅನೇಕವಿಧವಾಗಿ ಸಂಚರಿಸಿರಿ । **ಶಯವೇ**— ಶಯುವಿಗಾಗಿ । **ಧೇನುಂ ಅಪಿನ್ವತಂ**— ಬಂಜೆಯಾದ ಹಸುವನ್ನು ಕರೆಯುವ ಹಸುವಾಗುವಂತೆ ಪುಷ್ಟಿಗೊಳಿಸಿದಿರಿ । **ಯುವಂ**— ನೀವು । **ವೃಕಸ್ಯ ಅಂತಃ**— ತೋಳನ ಬಾಯೊಳಗೆ । **ಗ್ರಸಿತಾಂ**— ನುಂಗಲ್ಪಟ್ಟ । **ವರ್ತಿಕಾಂ**— ವರ್ತಿಕಾ ಎಂಬ ಹಕ್ಕಿಯನ್ನು । **ಆಸ್ಯಾತ್**— ಅದರ ಮುಖದಿಂದ । **ಶಚೀಭಿಃ**— ನಿಮ್ಮ ಕರ್ಮಗಳಿಂದ । **ಅಮುಂಚತಂ**— ಬಿಡಿಸಿದಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ನಿಮ್ಮ ಜಯಶಾಲಿಯಾದ ರಥದೊಡನೆ ಪರ್ವತಮಾರ್ಗದಲ್ಲಿ ಅನೇಕವಿಧವಾಗಿ ಸಂಚರಿಸಿರಿ. ನೀವು ಶಯುವಿಗಾಗಿ ಬಂಜೆಯಾಗಿದ್ದ ಹಸುವನ್ನು ಕರೆಯುವಂತೆ ಮಾಡಿದಿರಿ. ತೋಳನ ಬಾಯೊಳಗೆ ನುಂಗಲ್ಪಟ್ಟ ಗುಬ್ಬಚ್ಚಿಯನ್ನು ಅದರ ಮುಖದಿಂದ ಬಿಡಿಸಿದಿರಿ.

## English Translation

Do you two, Ashwins, climb the path to the mountain with your triumphant chariot; you have renovated for Shayu the (barren) milch cow: you liberated by your acts the quail that had been seized from the jaws of the wolf.

॥ ವಿಶೇಷವಿಷಯಗಳು ॥

**ಶಯುವೇ ಧೇನುಂ ಅಪಿನ್ವತಂ**—ಶಯು ಎಂಬುವನ ಒಂದು ಹಸುವು ಬಹಳ ಅಶಕ್ತಿಯುಳ್ಳದ್ದಾಗಿ ಸಣ್ಣಾದ ಕೈಕಾಲುಗಳುಳ್ಳದ್ದಾಗಿತ್ತು. ಅದರ ಶರೀರಸ್ಥಿತಿಯು ಸರಿಯಾಗಿ ಇಲ್ಲದ್ದರಿಂದ ಅದು ಬಹಳ ಕೃಶವಾಗಿ ಕರುವನ್ನು ಹಾಕಿ ಹಾಲನ್ನು ಕೊಡುವ ರೀತಿಯಲ್ಲಿರಲಿಲ್ಲ. ಹೀಗೆ ಇರುವ ಹಸುವಿಗೆ ಶಕ್ತಿಯು ಬರುವಂತೆ ಚಿಕಿತ್ಸೆಯನ್ನು ಮಾಡಿ ಅದು ಹಾಲು ಕೊಡುವಂತೆ ಅಶ್ವಿನೀದೇವತೆಗಳು ಮಾಡಿದರು ಎಂದು ಸಾಯಣರು ವಿವರಿಸಿರುವರು. ಸ್ಕಂದಸ್ವಾಮಿಗಳೂ ಹೀಗೆಯೇ ಅರ್ಥವನ್ನು ವಿವರಿಸಿ—

**ಶಯುವೇ ಚಿನ್ನಾ ಸತ್ಯಾ ಶಚೀಭಿರ್ಜಸುರಯೇ ಸ್ತರ್ಯಂ ಪಿಪ್ಯಥುರ್ಗಾಂ ।**
(ಋ. ಸಂ. ೧-೧೧೯-೨೨)

ಎಂಬ ಈ ಋಕ್ಕನ್ನು ಉದಹರಿಸಿರುವರು.

**ಯುವಂ ವೃಕಸ್ಯ ಅಂತಃ ಗ್ರಸಿತಾಂ ವರ್ತಿಕಾಂ ಆಸ್ನ್ಯಾತ್ ಶಚೀಭಿಃ ಅಮುಂಚತಂ ವರ್ತಿಕಾ ಚಟಕಸದೃಶಸ್ಯ ಪಕ್ಷಿಣಃ ಸ್ತ್ರೀ । ತಾಮರಣ್ಯೇ ವರ್ತಮಾನೇನ ಶುನಾ (ವೃಕೇಣ) ಗ್ರಸ್ತಾಂ ಪುರಾ ಕಿಲಾಶ್ವಿನಾವಮೋಚಯತಾಂ । ತದೇತದಾಹ ।**

ಒಂದಾನೊಂದು ಸಮಯದಲ್ಲಿ ಒಂದು ಅರಣ್ಯದಲ್ಲಿ ಒಂದು ತೋಳವು ಒಂದು ಗುಬ್ಬಚ್ಚಿಯನ್ನು ಹಿಡಿದು ಅದನ್ನು ತಿನ್ನುವುದಕ್ಕಾಗಿ ಬಾಯಲ್ಲಿ ಕಚ್ಚಿಕೊಂಡು ಹೋಗುತ್ತಿದ್ದಾಗ ಅಶ್ವಿನೀದೇವತೆಗಳು ಆ ಗುಬ್ಬಚ್ಚಿಯನ್ನು ತೋಳನ ಬಾಯಿನಿಂದ ಬಿಡಿಸಿ ಕಾಪಾಡಿದರು.

**ವೃಕಸ್ಯ—ವಿಕರ್ತಕಸ್ಯ** । ಅತಿಶಯವಾಗಿ ಹಿಂಸೆಮಾಡುವ ಎಂದು ಅರ್ಥ. ವೃಕಶಬ್ದವು ಹದಿನೆಂಟು ವಜ್ರನಾಮಗಳಲ್ಲಿಯೂ (ನಿ ೩-೧೧) ಹದಿನಾಲ್ಕು ಸ್ತೇನನಾಮಗಳಲ್ಲಿಯೂ (ನಿ. ೩-೧೯) ಪಠಿತವಾಗಿರುವುದು. ಮತ್ತೂ—

**ವೃಕಃ-ವೃಕಶ್ಚಂದ್ರಮಾ ಭವತಿ ವಿವೃತಜ್ಯೋತಿಷ್ಕೋ ವಾ ವಿಕೃತಜ್ಯೋತಿಷ್ಕೋ ವಾ ವಿಕ್ರಾಂತಜ್ಯೋತಿಷ್ಕೋ ವಾ ॥** (ನಿ. ೫-೨೧).

ಪ್ರಕಾಶಿತವಾದ ಜ್ಯೋತಿಸ್ಸುಳ್ಳವನಾದುದರಿಂದಲೂ, ಅಥವಾ ಶೀತಕರವಾದ (ತಣ್ಣಗಿರುವ) ಪ್ರಕಾಶದ ಅತಿಶಯದಿಂದ ಇತರರನ್ನು ವಿಕೃತಮಾಡುವ ಕಾರಣದಿಂದಲೂ ಅಥವಾ ಗ್ರಹನಕ್ಷತ್ರಾದಿಜ್ಯೋತಿಸ್ಸುಗಳಿಗಿಂತ ಹೆಚ್ಚಾದ ಪ್ರಕಾಶವುಳ್ಳ ಕಾರಣದಿಂದಲೂ ಚಂದ್ರನು ವೃಕಶಬ್ದವಾಚ್ಯನಾಗಿರುವನು ಎಂದು ವೃಕಶಬ್ದದ ಅರ್ಥವನ್ನು ಯಾಸ್ಕರು ವಿವರಿಸಿರುವರು.

**ಅರುಣೋ ಮಾ ಸಕೃದ್ವೃಕಃ ಪಥಾ ಯಂತಂ ದದರ್ಶ ಹಿ ।**
**ಉಜ್ಜಿಹೀತೇ ನಿಚಾಯ್ಯಾ ತಷ್ಟೇವ ಪೃಷ್ಟ್ಯಾಮಯೀ ವಿತ್ತಂ ಮೇ ಅಸ್ಯ ರೋದಸೀ ॥**
(ಋ. ಸಂ. ೧-೧೦೫-೧೮)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟು—

**ಅರುಣ ಆರೋಚಮಾನೋ ಮಾಸಕೃನ್ಮಾಸಾನಾಂ ಚಾರ್ಧಮಾಸಾನಾಂ ಚ ಕರ್ತಾ ಭವತಿ ಚಂದ್ರಮಾ ವೃಕಃ ಪಥಾ ಯಂತಂ ದದರ್ಶ ನಕ್ಷತ್ರಗಣಮಭಿಜಿಹೀತೇ ನಿಚಾಯ್ಯ ಯೇನ ಯೇನ ಯೋಕ್ಷ್ಯಮಾಣೋ ಭವತಿ ಚಂದ್ರಮಾಸ್ತಕ್ಷ್ಣುವನ್ನಿವ ಪೃಷ್ಠರೋಗೀ ಜಾನೀತಂ ಮೇಽಸ್ಯ ದ್ಯಾವಾಪೃಥಿವ್ಯಾವಿತಿ ॥** (ನಿ. ೫-೨೧)

ಝುಕ್ಕಿನಲ್ಲಿರುವ ವೃಕಶಬ್ದಕ್ಕೆ ಚಂದ್ರನೆಂದು ಅರ್ಥವನ್ನು ವಿವರಿಸಿರುವರು.

**ಆದಿತ್ಯೋಽಪಿ ವೃಕ ಉಚ್ಯತೇ । ಯದಾವೃಂಕ್ತೇ** (ನಿ. ೫-೨೧) ಆದಿತ್ಯನಿಗೂ ವೃಕ ಎಂದು ಹೆಸರು. ಕ್ಕೆಂದರೆ ತಮಸ್ಸನ್ನು (ಕತ್ತಲೆಯನ್ನು) ತನ್ನ ಪ್ರಕಾಶದಿಂದ (ಅಥವಾ ಕಿರಣಗಳಿಂದ) ಆವರಿಸುವನು (ಮುಚ್ಚು ) ಎಂದು ಹೇಳಿ—

**ಅಜೋಹವೀದಶ್ವಿನಾ ವರ್ತಿಕಾ ವಾಮಾಸ್ನೋ ಯತ್ಸೀಮಮುಂಚತಂ ವೃಕಸ್ಯ ।**
**ವಿ ಜಯುಷಾ ಯಯಥುಃ ಸಾನ್ವದ್ರೇರ್ಜಾತಂ ವಿಷ್ವಾಚೋ ಅಹತಂ ವಿಷೇಣ ॥**

(ಋ. ೧-೧೧೭-೧೬)

ಂ ಋಕ್ಕನ್ನು ಉದಾಹರಣೆಯಾಗಿ ಕೊಟ್ಟು— ಆಸ್ಯಾದುಷಾ ಅಶ್ವಿನಾವಾದಿತ್ಯೇನಾಭಿಗ್ರಸ್ತಾ ತಾವಶ್ವಿನಾ **ಮುಮುಚತುರಿತ್ಯಾಖ್ಯಾನಂ ।** ಎಂದು ನಿರ್ವಚನವನ್ನು ಹೇಳಿ ವೃಕನೆಂದರೆ ಆದಿತ್ಯನೆಂದು ಹೇಳಿರುವರು.

**ಶ್ವಾಪಿ ವೃಕ ಉಚ್ಯತೇ ವಿಕರ್ತನಾತ್ ।**

(ನಿ. ೫-೨೧)

ಎಂದರೆ ನಾಯಿಯೆಂದೂ ಅರ್ಥವಾಗುವುದು. ಉದಾಹರಣೆಗಾಗಿ—

**ವೃಕಶ್ಚಿದಸ್ಯ ವಾರಣ ಉರಾಮಥಿರಾ ವಯುನೇಷು ಭೂಷತಿ ।**
**ಸೇಮಂ ನಃ ಸ್ತೋಮಂ ಜುಜುಷಾಣ ಆ ಗಹೀಂದ್ರ ಪ್ರ ಚಿತ್ರಯಾ ಧಿಯಾ ॥**

(ಋ. ಸಂ. ೮.೬೬.೮)

ಬ ಋಕ್ಕನ್ನು ಹೇಳಿ—ವಿವಿಧಮಸೌ ಕೃಂತತಿ ತಸ್ಮಾದ್ವೃಕಃ । ಆಹಾರವನ್ನು ತಿನ್ನುವಾಗ ಅದನ್ನು ತುಂಡು ಡಾಗಿ ಕತ್ತರಿಸಿ ತಿನ್ನುವುದರಿಂದ ನಾಯಿಗೆ ವೃಕ ಎಂದು ಹೆಸರು. ಈ ಋಕ್ಕಿನಲ್ಲಿ ಇರುವ ವೃಕಶಬ್ದಕ್ಕೆ ದೇವತೆಗಳ ಯಿಯಾದ ಸಾರಮೇಯವು ಎಂದು ಅರ್ಥವಿವರಣೆ ಮಾಡಿರುವರು.

**ವೃದ್ಧವಾಶಿನ್ಯಪಿ ವೃಕ್ಯುಚ್ಯತೇ ।** (ನಿ. ೫-೨೧) ದೊಡ್ಡದಾದ ಹೆಣ್ಣುನರಿಗಾಗಲಿ, ತೋಳನಿಗಾಗಲಿ ವೃಕೀ ದು ಹೆಸರು ಎಂದು ಹೇಳಿ ಈ ಅರ್ಥಸಮರ್ಥನೆಗಾಗಿ—

**ಶತಂ ಮೇಷಾನ್ ವೃಕ್ಯೇ ಚಕ್ಷದಾನಮೃಜ್ರಾಶ್ವಂ ತಂ ಪಿತಾಂಧಂ ಚಕಾರ ।**
**ತಸ್ಮಾ ಅಕ್ಷೀ ನಾಸತ್ಯಾ ವಿಚಕ್ಷ ಆಧತ್ತಂ ದಸ್ರಾ ಭಿಷಜಾವನರ್ವನ್ ॥**

(ಋ. ಸಂ. ೧-೧೧೬-೧೬)

ಬ ಋಕ್ಕನ್ನು ಉದಾಹರಿಸಿ ಇಲ್ಲಿರುವ ವೃಕ್ಯೇ ಎಂಬ ಶಬ್ದಕ್ಕೆ ಹೆಣ್ಣುನರಿಗೆ ಅಥವಾ ತೋಳನಿಗೆ ಎಂಬರ್ಥವನ್ನು ಳಿರುವರು. ಹೀಗೆ ವೃಕಶಬ್ದಕ್ಕೆ ಅನೇಕಾರ್ಥಗಳಿರುವುದನ್ನು ತೋರಿಸಿ ಆಯಾಯ ಉದಾಹರಣೆಗಳನ್ನೂ ದಾಹರಿಸಿರುವರು.

ಸ್ಕಂದಸ್ವಾಮಿಗಳು **ವೃಕೇಣ ಗ್ರಸ್ಯಮಾನಾಂ ಚಟಕಾಂ ವೃಕಸ್ಯ ಆಸ್ಯಾತ್ ಮೋಚಿತವಂತೌ** ಸಾಯ ರು ಅರ್ಥಮಾಡಿರುವಂತೆಯೇ ತೋಳನ ಮುಖದಿಂದ ಗುಬ್ಬಚ್ಚಿಯನ್ನು ಅಶ್ವಿನೀದೇವತೆಗಳು ಬಿಡಿಸಿ ರಕ್ಷಿಸಿದರು ಂದು ಅರ್ಥವನ್ನು ವಿವರಿಸಿ.

ಯಾಭಿರ್ವರ್ತಿಕಾಂ ಗ್ರಸಿತಾಮಮುಂಚತಂ ತಾಭಿರೂ ಷು ಊತಿಭಿರಶ್ವಿನಾಗತಮ್ ॥

(ಋ. ಸಂ. ೧-೧೧೨-೮)

ಎಂದು ಉದಹರಿಸಿರುವರು.

ಸಂಹಿತಾಪಾಠಃ ॥

ಏತಂ ವಾಂ ಸ್ತೋಮಮಶ್ವಿನಾವಕರ್ಮಾತಕ್ಷಾಮ ಭೃಗವೋ ನ ರಥಂ ।

ನ್ಯಮೃಕ್ಷಾಮ ಯೋಷಣಾಂ ನ ಮರ್ಯೇ ನಿತ್ಯಂ ನ ಸೂನುಂ ತನಯಂ ದಧಾನಾಃ ॥ ೧೪ ॥

॥ ಪದಪಾಠಃ ॥

ಏತಂ । ವಾಂ । ಸ್ತೋಮಂ । ಅಶ್ವಿನೌ । ಅಕರ್ಮ । ಅತಕ್ಷಾಮ । ಭೃಗವಃ । ನ । ರಥಂ ।

ನಿ । ಅಮೃಕ್ಷಾಮ । ಯೋಷಣಾಂ । ನ । ಮರ್ಯೇ । ನಿತ್ಯಂ । ನ । ಸೂನುಂ । ತನಯಂ । ದಧಾನಾಃ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ತತೋ ವಾಂ ಯುವಯೋರೇತಂ ಯಥೋಕ್ತಂ ಸ್ತೋಮಂ ಸ್ತೋತ್ರಮಕರ್ಮ । ಅಕುರ್ಮ । ತದೇವಾಹ । ಭೃಗವೋ ನ ಭೃಗವ ಇವ ರಥಮತಕ್ಷಾಮ । ವಯಂ ಸ್ತೋತ್ರಂ ಸಂಸ್ಕೃತವಂತಃ । ಕರ್ಮಯೋಗಾದೃಭವೋ ಭೃಗವ ಉಚ್ಯಂತೇ । ಅಥವಾ ರಥಕಾರಾ ಭೃಗವಃ । ಕಿಂಚ ವಯಂ ನಿತ್ಯಂ ಶಾಶ್ವತಂ ತನಯಂ ಯಾಗಾದೀನಾಂ ಕರ್ಮಣಾಂ ತನಿತಾರಂ ಸೂನುಂ ನೌರಸಂ ಪುತ್ರಮಿವ ಸ್ತೋಮಂ ದಧಾನಾ ಧಾರಯಂತೋ ಮರ್ಯೇ ಮನುಷ್ಯೇ ನ್ಯಮೃಕ್ಷಾಮ । ಯುವಯೋಃ ಸ್ತುತಿಂ ನಿತರಾಂ ಸಂಸ್ಕೃತವಂತಃ । ತತ್ರ ದೃಷ್ಟಾಂತಃ । ಯೋಷಣಾಂ ನ । ಯಥಾ ಜಾಯಾಂ ತದ್ವದಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮನ್ನುದ್ದೇಶಿಸಿ । **ಏತಂ ಸ್ತೋಮಂ**—ಈ ಸ್ತೋತ್ರವನ್ನು । **ಅಕರ್ಮ**—ನಿರ್ಮಿಸಿದ್ದೇವೆ । **ಭೃಗವಃ**—ಋಭುಗಳು । **ರಥಂ ನ**—ನಿಮ್ಮ ರಥವನ್ನು ಸಂಸ್ಕರಿಸುವಂತೆ । **ಅತಕ್ಷಾಮ**—ಈ ಸ್ತುತಿಯನ್ನು ಸಂಸ್ಕರಿಸುತ್ತೇವೆ । **ಸೂನುಂ ನ**—ಪುತ್ರನನ್ನು ಆದರಿಸುವಂತೆ । **ನಿತ್ಯಂ**—ಶಾಶ್ವತವೂ । **ತನಯಂ**—ಯಾಗವನ್ನು ವಿಸ್ತಾರಗೊಳಿಸುವುದೂ ಆದ ಸ್ತುತಿಯನ್ನು । **ದಧಾನಾಃ**—ನಿರ್ಮಿಸಿದವರಾಗಿ । **ಯೋಷಣಾಂ ನ**—ಪತ್ನಿಯನ್ನು ಅಲಂಕರಿಸುವಂತೆ । **ಮರ್ತ್ಯೇ**—ಮಾನವರ ನಡುವೆ । **ನ್ಯಮೃಕ್ಷಾಮ**—ಪೂರ್ಣವಾಗಿ ಅಲಂಕರಿಸುತ್ತೇವೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನುದ್ದೇಶಿಸಿ ಈ ಸ್ತೋತ್ರವನ್ನು ನಿರ್ಮಿಸಿದ್ದೇವೆ. ಋಭುಗಳು ನಿಮ್ಮ ರಥವನ್ನು ಸಂಸ್ಕರಿಸುವಂತೆ ಈ ಸ್ತುತಿಯನ್ನು ಸಂಸ್ಕರಿಸುತ್ತೇವೆ. ಪುತ್ರನನ್ನು ಆದರಿಸುವಂತೆ ಶಾಶ್ವತವೂ ಯಾಗವನ್ನು

ರಗೊಳಿಸುವುದೂ ಆದ ಸ್ತುತಿಯನ್ನು ನಿರ್ಮಿಸಿದವರಾಗಿ ಪತ್ನಿಯನ್ನು ಅಲಂಕರಿಸುವಂತೆ ಮಾನವರ ನಡುವೆ ರ್ಣವಾಗಿ ಅಲಂಕರಿಸುತ್ತೇವೆ.

English Translation

For you, Ashwins, we have made, we have built this praise, as the rigus (built) your car: cherishing (this praise) like a son, the eternal former of rites, we have decked (with ornaments your laudation) amongst n, as if it had been a wife.



## ನಲವತ್ತನೆಯ ಸೂಕ್ತವು.

। ಸಾಯಣಭಾಷ್ಯಂ ।

**ರಥಂ ಯಾಂತಮಿತಿ ಚತುರ್ದಶರ್ಚಮೇಕಾದಶಂ ಸೂಕ್ತಂ । ಕಾಕ್ಷೀವತ್ಯಾ ಘೋಷಾಯಾ ಷಂ । ಜಾಗತಮಾಶ್ವಿನಂ । ರಥಂ ಯಾಂತಮಿತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋ- ಕ್ತೋ ವಿನಿಯೋಗಃ ॥**

ಅನುವಾದವು—**ರಥಂ ಯಾಂತಂ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹನ್ನೊಂದನೆಯ ೂಕ್ತವು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಕ್ಷೀವಾನ್ ಋಷಿಯ ಪುತ್ರಿಯಾದ ಘೋಷಾ ಂಬ ಸ್ತ್ರೀಯು ಋಷಿಯು; ಅಶ್ವಿನೀದೇವತೆಗಳು ದೇವತೆಯು; ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ **ಥಂ ಯಾಂತಂ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ನಿಯೋಗವಿರುವುದು.

## ಸೂಕ್ತ—೪೦

ಮಂಡಲ—೧೦ ॥ ಅನುವಾಕ—೩ ॥ ಸೂಕ್ತ—೪೦ ॥
ಅಷ್ಟಕ—೭ ॥ ಅಧ್ಯಾಯ—೮ ॥ ವರ್ಗ—೧೮, ೧೯, ೨೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ॥
ಋಷಿಃ—ಘೋಷಾ ಕಾಕ್ಷೀವತೀ ।
ದೇವತಾ—ಅಶ್ವಿನೌ ।
ಛಂದಃ—ಜಗತೀ ॥

। ಸಂಹಿತಾಪಾಠಃ ।

ರಥಂ ಯಾಂತಂ ಕುಹ ಕೋ ಹ ವಾಂ ನರಾ ಪ್ರತಿ ದ್ಯುಮಂತಂ ಸುವಿ- ತಾಯ ಭೂಷತಿ ।

ಪ್ರಾತರ್ಯಾವಾಣಂ ವಿಭ್ವಂ ವಿಶೇವಿಶೇ ವಸ್ತೋರ್ವಸ್ತೋರ್ವಹಮಾನಂ

ಧಿಯಾ ಶಮಿ ॥ ೧

॥ ಪದಪಾಠಃ ॥

ರಥಂ । ಯಾಂತಂ । ಕುಹ । ಕಃ । ಹ । ವಾಂ । ನರಾ । ಪ್ರತಿ । ದ್ಯುಽಮಂತಂ । ಸುವಿತಾಯ ।
ಭೂಷತಿ ।

ಪ್ರಾತಃಽಯಾವಾನಂ । ವಿಽಭ್ವಂ । ವಿಶೇಽವಿಶೇ । ವಸ್ತೋಃಽವಸ್ತೋಃ । ವಹಮಾನಂ । ಧಿಯಾ ।
ಶಮಿ ॥ ೧ ॥

॥ ಸಾಯಣಭಾಷ್ಯಂ ॥

ಹೇ ನರಾ ಕರ್ಮಣಾಂ ನೇತಾರಾವಶ್ವಿನೌ ವಾಂ ಯುವಯೋಃ ಸಂಬಂಧಿನಂ ದ್ಯುಮಂತಂ ದೀಪ್ತಿಮಂತಂ ಪ್ರಾತರ್ಯಾವಾಣಂ ಯಜ್ಞಂ ಪ್ರತಿ ಪ್ರಾತಃಕಾಲೇ ಗಂತಾರಂ ವಿಭ್ವಂ ವಿಭುಂ ವ್ಯಾಪಿನಂ ವಿಶೇ ವಿಶೇ ಸರ್ವೇಷು ಮನುಷ್ಯೇಷು ವಸ್ತೋರ್ವಸ್ತೋರಹರಹಂ ವಹಮಾನಂ ಧನಂ ಪ್ರಾಪಯಂತಂ ಯಾಂತಂ ಗಚ್ಛಂತಂ ರಥಂ ಕುಹ ಕಸ್ಮಿನ್ದೇಶೇ ಕೋ ಹ ಕಃ ಖಲು ಯಜಮಾನಃ ಶಮಿ ಯಜ್ಞರೂಪೇ ಕರ್ಮಣಿ ಧಿಯಾ ಸ್ತುತಿರೂಪೇಣ ಕರ್ಮಣಾ ಸುವಿತಾಯಾಭ್ಯುದಯಾರ್ಥಂ ಪ್ರತಿ ಭೂಷತಿ । ಅಲಂಕರೋತಿ । ಕಸ್ಮಿನ್ದೇಶೇ ಯಜ್ಞೇ ಕೋಽನ್ಯೋ ಯಜಮಾನೋ ಯುವಾಂ ಸ್ತುತಿಭಿರ್ಹವಿರ್ಭಿಶ್ಚ ಪೂಜಿತವಾನ್ ಯೇನಾಸ್ಮದ್ಯಜ್ಞಂ ಪ್ರತಿ ವಿಲಂಬೇನಾಗತವಂತೌ ಸ್ಥ ಇತ್ಯಭಿಪ್ರಾಯಃ ॥

॥ ಪ್ರತಿಪದಾರ್ಥ ॥

**ನರಾ**—ಕರ್ಮನೇತೃಗಳಾದ ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮಗೆ ಸೇರಿದ । **ದ್ಯುಮಂತಂ**—ಪ್ರಕಾಶಮಾನವಾದುದೂ । **ಪ್ರಾತರ್ಯಾವಾಣಂ**—ಪ್ರಾತಃಕಾಲದಲ್ಲಿಯೇ ಯಜ್ಞಕ್ಕೆ ಹೋಗತಕ್ಕದ್ದೂ । **ವಿಭ್ವಂ**—ಸರ್ವವ್ಯಾಪಕವಾದುದೂ । **ವಿಶೇವಿಶೇ**—ಪ್ರತಿಯೊಬ್ಬ ಯಜಮಾನನಿಗೂ । **ವಸ್ತೋರ್ವಸ್ತೋಃ**—ಪ್ರತಿಯೊಂದು ದಿವಸವೂ । **ವಹಮಾನಂ**—ಧನವನ್ನು ವಹಿಸಿಕೊಡತಕ್ಕದ್ದೂ । **ಯಾಂತಂ**—ಸಂಚಾರಶೀಲವಾದುದೂ ಆದ **ರಥಂ**—ರಥವನ್ನು । **ಕುಹ**—ಯಾವ ಪ್ರದೇಶದಲ್ಲಿ । **ಕೋ ಹ**—ಯಾವ ಯಜಮಾನನು ತಾನೇ । **ಶಮಿ**—ಯಜ್ಞಕರ್ಮದಲ್ಲಿ । **ಧಿಯಾ**—ಸ್ತುತಿರೂಪವಾದ ಕರ್ಮದಿಂದ । **ಸುವಿತಾಯ**—ತನ್ನ ಶ್ರೇಯಸ್ಸಿಗಾಗಿ । ಪ
**ಭೂಷತಿ**—ಅಲಂಕರಿಸುತ್ತಾನೆ.

॥ ಭಾವಾರ್ಥ ॥

ಕರ್ಮನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ನಿಮಗೆ ಸೇರಿದುದೂ, ಪ್ರಕಾಶಮಾನವಾದುದೂ, ಪ್ರಾ
ಕಾಲದಲ್ಲಿಯೇ ಯಜ್ಞಕ್ಕೆ ಹೋಗತಕ್ಕದ್ದೂ ಸರ್ವವ್ಯಾಪಕವಾದುದೂ, ಪ್ರತಿಯೊಬ್ಬ ಯಜಮಾನನಿಗೂ ಪ್ರತಿದಿನ

ಒದಗಿಸುವುದೂ, ಸಂಚಾರಶೀಲವೂ ಆದ ರಥವನ್ನು ಯಾವ ಪ್ರದೇಶದಲ್ಲಿ ಯಾವ ಯಜಮಾನನು ತನ.
ಾಗಿ ತನ್ನ ಸ್ತುತಿಯಿಂದ ಅಲಂಕರಿಸುತ್ತಾನೆ.?

## English Translation

What (worshipper), O leaders of rites, and where (abiding) glorifies good, by his praise at the rite, your radiant moving chariot, going sacrifice) at dawn, all-pervading, and bearing (wealth) day after one man after another ?

॥ ಸಂಹಿತಾಪಾಠಃ ॥

ಕುಹ ಸ್ವಿದ್ದೋಷಾ ಕುಹ ವಸ್ತೋರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋ-
ಷತುಃ ।
ಕೋ ವಾಂ ಶಯುತ್ರಾ ವಿಧವೇವ ದೇವರಂ ಮರ್ಯಂ ನ ಯೋಷಾ
ಕೃಣುತೇ ಸಧಸ್ಥ ಆ ॥ ೨ ॥

॥ ಪದಪಾಠಃ ॥

। ಸ್ವಿತ್ । ದೋಷಾ । ಕುಹ । ವಸ್ತೋಃ । ಅಶ್ವಿನಾ । ಕುಹ । ಅಭಿऽಪಿತ್ವಂ । ಕರತಃ । ಕುಹ ।
ಊಹತುಃ ।
ವಾಂ । ಶಯುऽತ್ರಾ । ವಿಧವಾऽಇವ । ದೇವರಂ । ಮರ್ಯಂ । ನ । ಯೋಷಾ । ಕೃಣುತೇ ।
ಸಧऽಸ್ಥೇ । ಆ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ಕುಹ ಸ್ವಿತ್ ಕ್ವ ಚಿದ್ದೋಷಾ ರಾತ್ರೌ ಭವಥ ಇತಿ ಶೇಷಃ । ಕುಹ ವಸ್ತೋಃ
ಾ ದಿವಾ ಭವಥಃ। ಕುಹ ಕ್ವ ವಾऽಭಿಪಿತ್ವಮಭಿಪ್ರಾಪ್ತಿಂ ಕರತಃ। ಕುರುಥಃ। ಕುಹ ಕ್ವ ವೋಷಥುಃ ।
ಃ । ಕಿಂಚ ವಾಂ ಯುವಾಂ ಕೋ ಯಜಮಾನಃ ಸಧಸ್ಥೇ ಸಹಸ್ಥಾನೇ ವೇದ್ಯಾಖ್ಯ ಆ ಕೃಣುತೇ ।
ರುತೇ । ಪರಿಚರಣಾರ್ಥಮಾತ್ಮಾಭಿಮುಖೀಕರೋತಿ । ತತ್ರ ದೃಷ್ಟಾಂತೌ ದರ್ಶಯತಿ । ಶಯುತ್ರಾ
ನೇ ವಿಧವೇವ ಯಥಾ ಮೃತಭರ್ತೃಕಾ ನಾರೀ ದೇವರಂ ಭರ್ತೃಭ್ರಾತರಮಭಿಮುಖೀಕರೋತಿ ।
ರ್ಯಂ ನ ಯಥಾ ಚ ಸರ್ವಂ ಮನುಷ್ಯಂ ಯೋಷಾ ಸರ್ವಾ ನಾರೀ ಸಂಭೋಗಕಾಲೇऽಭಿಮುಖೀ-

ಕರೋತಿ ತದ್ವದಿತ್ಯರ್ಥಃ । ತಥಾ ಚ ಯಾಸ್ಕಃ । ಕ್ವ ಸ್ವಿದ್ರಾತ್ರೌ ಭವಥಃ ಕ್ವ ದಿವಾ ಕ್ವಾಭಿಪ್ರಾಪ್ತಿಂ ಕುರುಥಃ ಕ್ವ ವಸಥಃ ಕೋ ವಾಂ ಶಯನೇ ವಿಧವೇವ ದೇವರಂ ದೇವರಃ ಕಸ್ಮಾದ್ದ್ವಿತೀಯೋ ವರ ಉಚ್ಯತೇ ವಿಧವಾ ವಿಧಾತೃಕಾ ಭವತಿ ವಿಧವನಾದ್ವಾ ವಿಧಾವನಾದ್ವೇತಿ ಚರ್ಮಶಿರಾ ಅಪಿ ವಾ ಧವ ಇತಿ ಮನುಷ್ಯನಾಮ ತದ್ವಿಯೋಗಾದ್ವಿಧವಾ ದೇವರೋ ದೀವ್ಯತಿಕರ್ಮಾ ಮರ್ಯೋ ಮನುಷ್ಯೋ ಮರಣಧರ್ಮಾ ಯೋಷಾ ಯೌತೇರಾಕುರುತೇ ಸಧಸ್ಥಾನೇ । ನಿ. ೩-೧೫ । ಇತಿ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । **ದೋಷಾ**—ರಾತ್ರಿಯಲ್ಲಿ । **ಕುಹ ಸ್ವಿತ್**—ಎಲ್ಲಿರುತ್ತೀರಿ । **ವಸ್ತೋಃ**—ಹಗಲಿನಲ್ಲಿ । **ಕುಹ**—ಎಲ್ಲಿರುತ್ತೀರಿ । **ಕುಹ**—ಎಲ್ಲೆಲ್ಲಿ । **ಅಭಿಪಿತ್ವಂ ಕರತಃ**—ಸಂಚಾರವನ್ನು ಹೊಂದಿದ್ದೀರಿ । **ಕುಹ ಊಷತುಃ**—ಎಲ್ಲಿ ವಾಸಮಾಡುತ್ತೀರಿ । **ಶಯುತ್ರಾ**—ತನ್ನ ಹಾಸಿಗೆಗೆ । **ವಿಧವಾ**—ವಿಧವೆಯು । **ದೇವರಂ ನ**—ತನ್ನ ಮೈದುನನನ್ನು ಬರಮಾಡಿಕೊಳ್ಳುವಂತೆಯೂ । **ಯೋಷಾ**—ಹೆಂಗಸು । **ಮರ್ಯಂ ನ**—ಪುರುಷನನ್ನು ಎದುರುಗೊಳ್ಳುವಂತೆಯೂ । **ಕಃ**—ಯಾವ ಯಜಮಾನನು । **ವಾಂ**—ನಿಮ್ಮನ್ನು । **ಸಧಸ್ಥೇ**—ಯಜ್ಞಸ್ಥಾನದಲ್ಲಿ । **ಆ ಕೃಣುತೇ**—ಎದುರಿಗೆ ಬರಮಾಡಿಕೊಳ್ಳುತ್ತಾನೆ ?

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ರಾತ್ರಿಯಲ್ಲಿ ಎಲ್ಲಿರುತ್ತೀರಿ ? ಹಗಲಿನಲ್ಲಿ ಎಲ್ಲಿರುತ್ತೀರಿ ? ಎಲ್ಲೆಲ್ಲಿ ಸಂಚಾರವನ್ನು ಹೊಂದುತ್ತೀರಿ ? ಎಲ್ಲಿ ವಾಸಮಾಡುತ್ತೀರಿ ? ವಿಧವೆಯು ತನ್ನ ಹಾಸಿಗೆಗೆ ಮೈದುನನನ್ನು ಬರಮಾಡಿಕೊಳ್ಳುವಂತೆಯೂ, ಹೆಂಗಸು ಪುರುಷನನ್ನು ಎದುರುಗೊಳ್ಳುವಂತೆಯೂ ಯಾವ ಯಾಜಮಾನನು ನಿಮ್ಮನ್ನು ಯಜ್ಞಸ್ಥಾನದಲ್ಲಿ ಎದುರಿಗೆ ಬರಮಾಡಿಕೊಳ್ಳುತ್ತಾನೆ ?

## English Translation

Where are you, Ashwins, by night ? where are you by day ? where do you sojourn ? where do you dwell ? who brings you into his presence in the same place (of sacrifice) as on her couch a widow (brings) her husband's brother, as a woman (brings) her husband (to her).

॥ ವಿಶೇಷವಿಷಯಗಳು ॥

**ದೇವರಂ** ಎಂಬ ಶಬ್ದದ ಅರ್ಥವಿವರಣೆಮಾಡುವುದಕ್ಕಾಗಿ ಯಾಸ್ಕರು ಈ ಋಕ್ಕನ್ನು ಉದಾಹರಣೆಯಾಗಿ ತೆಗೆದುಕೊಂಡು ನಿರುಕ್ತವನ್ನು ಹೇಳಿರುತ್ತಾರೆ—

> **ಕ್ವ ಸ್ವಿದ್ರಾತ್ರೌ ಭವತಃ, ಕ್ವ ದಿವಾ, ಕ್ವಾಭಿಪ್ರಾಪ್ತಿಂ ಕುರುಥಃ, ಕ್ವ ವಸಥಃ, ಕೋ ವಾ ಶಯನೆ ವಿಧವೇವ ದೇವರಂ । ದೇವರಃ ಕಸ್ಮಾತ್ ದ್ವಿತೀಯೋ ವರ ಉಚ್ಯತೇ । ವಿಧವಾ ವಿಧಾತೃಕಾ ಭವತಿ । ವಿಧಾವನಾದ್ವಾ । ವಿಧವನಾದ್ವೇತಿ ಚರ್ಮಶಿರಾಃ । ಅಪಿ ವಾ ಧವ ಇತಿ ಮನುಷ್ಯ**

**ಸಾಮು ತದ್ವಿಯೋಗಾದ್ವಿಧವಾ । ದೇವರೋ ದೀವ್ಯತಿಕರ್ಮಾ । ಮರ್ಯೋ ಮನುಷ್ಯೋ ಮರಣಧರ್ಮಾ । ಯೋಷಾ ಯೌತೇಃ । ಆಕುರುತೇ ಸಹಸ್ಥಾನೇ ॥**

(ನಿ. ೩-೧೫)

ಕ್ತದ ಋಷಿಯಾದ ಘೋಷಾ ಎಂಬ ಸ್ತ್ರೀಯು ಅಶ್ವಿನೀದೇವತೆಗಳನ್ನು ಸ್ತುತಿಸುವಾಗ ಅವರನ್ನು ಈರೀತಿ ಕಡುತ್ತಾಳೆ—ಎಲೈ ಅಶ್ವಿನೀದೇವತೆಗಳೇ, ನೀವು ರಾತ್ರಿಕಾಲದಲ್ಲಿ ಎಲ್ಲಿರುತ್ತೀರಿ ? ಹಗಲು ಎಲ್ಲಿರುತ್ತೀರಿ ? ಭೋಜನಾದಿ ನಿಮ್ಮ) ಕಾರ್ಯನಿರ್ವಹಣೆಯನ್ನು ಎಲ್ಲಿ ಮಾಡುತ್ತೀರಿ ? ಎಲ್ಲಿ ವಾಸಮಾಡುತ್ತೀರಿ ? ಗಂಡನಿಲ್ಲದ ಯು ತನ್ನ ಮೈದನನ್ನು (ರಾತ್ರಿಕಾಲದಲ್ಲಿ) ತನ್ನ ಹಾಸಿಗೆಯಲ್ಲಿ ಎದುರಾಗಿ ಕೂರಿಸಿಕೊಳ್ಳುವಂತೆಯೂ, ಹೆಂಡ ತನ್ನ ಗಂಡನನ್ನು ಏಕಾಂತದಲ್ಲಿ ಎದುರಾಗಿ ಕೂರಿಸಿಕೊಂಡು ವಿಹರಿಸುವಂತೆಯೂ ನೀವು ಯಜ್ಞಮಾಡುವ ಯಜಮಾನನ ಯಜ್ಞಗೃಹದಲ್ಲಿ ಅವನಿಂದ ಸತ್ಕರಿಸಲ್ಪಡುತ್ತೀರಿ ?

**ದೇವರ** ಶಬ್ದವು ಹೇಗೆ ನಿಷ್ಪನ್ನವಾಗಿದೆ ? ದೇವರ ಎಂದರೇನು ? ದೇವರ ಎಂದರೆ ಎರಡನೇ ವರ. ಸ್ತ್ರೀಗೆ ಯಾದ ಗಂಡನೇ ಮೊದಲನೆಯ ವರ. ಮಕ್ಕಳಾಗುವುದಕ್ಕೆ ಮುಂಚೆಯೇ ಆ ಗಂಡನು ಮೃತನಾದಲ್ಲಿ ಲದಲ್ಲಿ ರೂಢಿಯಲ್ಲಿದ್ದಂತೆ) ಆ ಗಂಡನ ತಮ್ಮನು ಎಂದರೆ ಮೈದುನನು ಆ ಸ್ತ್ರೀಯಲ್ಲಿ ಪುತ್ರೋತ್ಪತ್ತಿಗಾಗಿ ಗಮಾಡಬಹುದಾದ್ದರಿಂದ ಆ ಮೈದನನೇ ಆ ಸ್ತ್ರೀಗೆ ದ್ವಿತೀಯ ವರ (ಎರಡನೆಯ ಗಂಡ) ಎಂದರೆ ದೇವರ ಮೈದುನ ಎಂದರ್ಥವು.

**ವಿಧವಾ** ಎಂಬ ಶಬ್ದಕ್ಕೆ (೧) **ವಿಧಾತೃಕಾ** ಎಂದರ್ಥವು. ಪತಿಯು ಮೃತನಾದನೇಲೆ ಆ ಸ್ತ್ರೀಯನ್ನು ವವರು ಎಂದರೆ (ಅನ್ನವಸ್ತ್ರಾದಿಗಳನ್ನು ಕೊಟ್ಟು) ಪೋಷಿಸುವವರು ಯಾರೂ ಇರುವುದಿಲ್ಲವಾದ್ದರಿಂದ ಗಂಡನಿಲ್ಲದ ಯನ್ನು ವಿಧವಾ ಎಂದು ಕರೆಯುವರು. (೨) ಅಥವಾ **ವಿಧವನಾದ್ವಾ** ಪತಿಯು ಮರಣದಿಂದ ದುಃಖಿತಳಾಗಿ ದಿಂದ ನಡಗುತ್ತಿರುವವಳಾದ್ದರಿಂದ ಪತಿಯಿಲ್ಲದ ಸ್ತ್ರೀಗೆ ವಿಧವಾ ಎಂದು ಹೆಸರು. (೩) ಅಥವಾ **ವಿಧಾವನಾದ್ವಾ** ಮರಣದಿಂದ ಶೋಕಸಂತಪ್ತಳಾಗಿ ಇಲ್ಲಿಂದಲ್ಲಿಗೆ ಯಾರ ನಿರ್ಬಂಧವೂ ಇಲ್ಲದೆ ಓಡಾಡುವವಳಾದ್ದರಿಂದ ಪತಿ ಳಾದ ಸ್ತ್ರೀಗೆ ವಿಧವಾ ಎಂದು ಹೆಸರು ಎಂದು ಚರ್ಮಶಿರಾಃ ಎಂಬ ಆಚಾರ್ಯರ ಅಭಿಪ್ರಾಯವು. (೪) ಅಥವಾ ಬ್ದಕ್ಕೆ ಮನುಷ್ಯನೆಂದರ್ಥವು. ಆದ್ದರಿಂದ ತನ್ನ ಪತಿಯನ್ನು (ವಿ ಧವ) ಕಳೆದುಕೊಂಡಿರುವ ಸ್ತ್ರೀಗೆ ವಿಧವಾ ಹೆಸರು.

**ದೇವರಃ ದೀವ್ಯತಿಕರ್ಮಾ** । ದೇವರ ಶಬ್ದವು ಕ್ರೀಡಿಸು ಎಂಬರ್ಥವುಳ್ಳ ದೀವ್ಯತಿಧಾತುತನಿಂದ ನಿಷ್ಪನ್ನ ದೆ. ಇಲ್ಲಿ ತನ್ನ ಸಹೋದರನ ಪತ್ನಿಯೊಡನೆ ರತಿಕ್ರೀಡೆಯಲ್ಲಿ ಆಸಕ್ತನಾಗಿರುವವನೆಂದಭಿಪ್ರಾಯವು.

**ಮರ್ಯಃ ಮನುಷ್ಯಃ । ಮರ್ಯಃ** ಎಂದರೆ ಮನುಷ್ಯನು ಮರಣಧರ್ಮಕ್ಕೆ ಈಡಾಗುವವನು, ಎಂದಾದ ದು ದಿವಸ ಮೃತನಾಗುವವನು.

**ಯೋಷಾ ಯೌತೇಃ । ಯೋಷಾ** ಎಂದರೆ ಸ್ತ್ರೀಯು. ಈ ಶಬ್ದವು **ಯು** ಮಿಶ್ರಮಾಡು ಎಂಬ ಧಾತು ಂದ ನಿಷ್ಪನ್ನವಾಗಿದೆ. ಪುರುಷನೊಡಥ ಮಿಶ್ರವಾಗಿ ಎಂದರೆ ಸಂಪರ್ಕಮಾಡಿ ಸಂಭೋಗಿಸುವವಳಾದ್ದರಿಂದ ಸ್ತ್ರೀಗೆ ಷಾ ಎಂದು ಹೆಸರು.

ಅಕುರುತೇ ಸಹಸ್ಥಾನೇ-ಸಮಾನಸ್ಥಾನೇ ಅಭಿಮುಖ್ಯೇನ ಆತ್ಮನಃ ಕುರುತೇ ಪರಿಚರಣಾಯ । ಕೃಣುತೇ ಸಧಸ್ಥ ಆ ಎಂಬ ಶಬ್ದಗಳಿಗೆ ಸಮಾನಸ್ಥಾನದಲ್ಲಿ ಎಂದರೆ ಸ್ತ್ರೀಪುರುಷರು (ಸಂಭೋಗಕ್ಕಾಗಿ ಸೇರುವ) ಇಬ್ಬರಿಗೂ ಸಾಮಾನ್ಯವಾದ ಸ್ಥಳದಲ್ಲಿ ಅಥವಾ ಗೃಹದ ರಹಸ್ಯಪ್ರದೇಶದಲ್ಲಿ ಒಬ್ಬರಿಗೊಬ್ಬರು ಎದುರುಬದರಾಗಿ ಕುಳಿತುಕೊಳ್ಳುವುದು ಎಂದರ್ಥ.

। ಸಂಹಿತಾಪಾಠಃ ।

ಪ್ರಾತರ್ಜರೇಥೇ ಜರಣೇವ ಕಾಪಯಾ ವಸ್ತೋರ್ವಸ್ತೋರ್ಯಜತಾ ಗಚ್ಛಥೋ ಗೃಹಂ ।
ಕಸ್ಯ ಧ್ವಸ್ರಾ ಭವಥಃ ಕಸ್ಯ ವಾ ನರಾ ರಾಜಪುತ್ರೇವ ಸವನಾವ ಗಚ್ಛಥಃ ॥

॥ ಪದಪಾಠಃ ॥

ಪ್ರಾತಃ । ಜರೇಥೇ ಇತಿ । ಜರಣಾऽಇವ । ಕಾಪಯಾ । ವಸ್ತೋಃऽವಸ್ತೋಃ । ಯಜತಾ । ಗಚ್ಛಥಃ । ಗೃಹಂ ।
ಕಸ್ಯ । ಧ್ವಸ್ರಾ । ಭವಥಃ । ಕಸ್ಯ । ವಾ । ನರಾ । ರಾಜಪುತ್ರಾऽಇವ । ಸವನಾ । ಅವ । ಗಚ್ಛಥಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರಾವಶ್ವಿನೌ ಯುವಾಂ ಪ್ರಾತಃ ಪ್ರಾತಃಕಾಲೇ ಜರೇಥೇ । ಸ್ತೋತೃಭಿಃ ಸ್ತೂಯೇಥೇ । ತತ್ರ ದೃಷ್ಟಾಂತಃ । ಜರಣೇವ ಯಥಾ ಜರಣಾವೈಶ್ವರ್ಯೇಣ ವೃದ್ಧೌ ರಾಜಾನೌ ಕಾಪಯಾ । ಪ್ರಾತಃಪ್ರಬೋಧಕಸ್ಯ ವಂದಿನೋ ವಾಣೀ ಕಾಪಾ । ತಯಾ ಸ್ತೂಯೇತೇ । ತದ್ವದಿತ್ಯರ್ಥಃ । ಕಿಂಚ ವಸ್ತೋರ್ವಸ್ತೋರನ್ವಹಂ ಯಜತಾ ಯಷ್ಟವ್ಯೌ ಯುವಾಂ ಗೃಹಂ ಯಜಮಾನಸ್ಯ ಮಂದಿರಂ ಗಚ್ಛಥಃ । ಪ್ರಾಪ್ನುಥಃ । ತೌ ಯುವಾಂ ಕಸ್ಯ ಯಜಮಾನಸಂಬಂಧಿನೋ ದೋಷಸ್ಯ ಧ್ವಸ್ರಾ ಧ್ವಂಸಕೌ ವಿನಾಶಯಿತಾರೌ ಭವಥಃ । ಕಸ್ಯ ಯಜಮಾನಸ್ಯ ಸವನಾ ಸವನಾನಿ ರಾಜಪುತ್ರೇವ ರಾಜಕುಮಾರಾವಿವ ಯುವಾಮವ ಗಚ್ಛಥಃ । ಪ್ರಾಪ್ನುಥಃ ॥

॥ ಪ್ರತಿಪದಾರ್ಥ ॥

ನರಾ—ಕರ್ಮನೇತೃಗಳಾದ ಎಲೈ ಅಶ್ವಿನೀದೇವತೆಗಳೇ । ಕಾಪಯಾ—ಹೊಗಳುಭಟ್ಟನ ಸ್ತುತಿಯಿಂದ । ಜರಣೇವ—ದೊರೆಗಳು ಪ್ರಶಂಸಿಸಲ್ಪಡುವಂತೆ । ಪ್ರಾತಃ—ಪ್ರಾತಃಕಾಲದಲ್ಲಿ । ಜರೇಥೇ—ನೀವು ಸ್ತುತಿಸಲ್ಪಡುತ್ತೀರಿ । ಯಜತಾ—ಪೂಜ್ಯರಾದ ನೀವು । ವಸ್ತೋರ್ವಸ್ತೋಃ—ಪ್ರತಿದಿನವೂ । ಗೃಹಂ—ಯಜಮಾನನ ಮನೆಗೆ । ಗಚ್ಛಥಃ—ಹೋಗುತ್ತೀರಿ । ಕಸ್ಯ—ಯಾವ ದೋಷಕ್ಕೆ । ಧ್ವಸ್ರಾ—ನಾಶಕರಾಗಿ । ಭವಥಃ—ನೀವು ಆಗಿರುತ್ತೀರಿ । ಕಸ್ಯ—ಯಾವ ಯಜಮಾನನ । ಸವನಾ—ಯಜ್ಞಕ್ಕೆ । ರಾಜಪುತ್ರೇವ—ರಾಜಕುಮಾರರಂತೆ । ಅವ ಗಚ್ಛಥಃ—ನೀವು ಹೋಗುತ್ತೀರಿ.

॥ ಭಾವಾರ್ಥ ॥

ಕರ್ಮನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ಹೊಗಳುಭಟ್ಟನ ಸ್ತುತಿಯಿಂದ ದೊರೆಗಳು ಪ್ರಸಂಸಿಸಲ್ಪಡು
। ಪ್ರಾತಃಕಾಲದಲ್ಲಿ ನೀವು ಸ್ತುತಿಸಲ್ಪಡುತ್ತೀರಿ. ಪೂಜ್ಯರಾದ ನೀವು ಪ್ರತಿದಿನವೂ ಯಜಮಾನನ ಮನೆಗೆ
ಗುತ್ತೀರಿ. ನೀವು ಯಜಮಾನನ ಯಾವ ದೋಷವನ್ನು ನಾಶಮಾಡುತ್ತೀರಿ? ನೀವು ಯಾವ ಯಜಮಾನನ
ಕ್ಷಕ್ಕೆ ರಾಜಕುಮಾರರಂತೆ ಹೋಗುತ್ತೀರಿ.

## English Translation

Leaders (of rites), you are glorified at dawn like two ancient ıonarchs) by the voice (of the caller): entitled to worship, you go day by y to the dwelling (of the worshipper): of whose (faults) are you the stroyer? to whose oblations do you repair like princes?

॥ ಸಂಹಿತಾಪಾಠಃ ॥

ಯುವಾಂ ಮೃಗೇವ ವಾರಣಾ ಮೃಗಣ್ಯವೋ ದೋಷಾ ವಸ್ತೋರ್ಹವಿಷಾ
ನಿ ಹ್ವಯಾಮಹೇ ।
ಯುವಂ ಹೋತ್ರಾಮೃತುಥಾ ಜುಹ್ವತೇ ನರೇಷಂ ಜನಾಯ ವಹಥಃ
ಶುಭಸ್ಪತೀ ॥ ೪ ॥

॥ ಪದಪಾಠ ॥

ಯುವಾಂ । ಮೃಗಾಽಇವ । ವಾರಣಾ । ಮೃಗಣ್ಯವಃ । ದೋಷಾ । ವಸ್ತೋಃ । ಹವಿಷಾ । ನಿ ।
ಹ್ವಯಾಮಹೇ ।
ಯುವಂ । ಹೋತ್ರಾಂ । ಋತುಽಥಾ । ಜುಹ್ವತೇ । ನರಾ । ಇಷಂ । ಜನಾಯ । ವಹಥಃ ।
ಶುಭಃ । ಪತೀ ಇತಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಂ ವಾರಣಾ ವಾರಣೌ ಮೃಗೇವ ಯಥಾ ಶಾರ್ದೂಲೌ ಮೃಗಣ್ಯವೋ ಮೃಗಯುವಃ ತದ್ವದ್ವಯಂ ದೋಷಾ ರಾತ್ರೌ ವಸ್ತೋರಹನಿ ಚ ಹವಿಷಾ ನಿ ಹ್ವಯಾಮಹೇ । ನಿಯಮೇನ ಹ್ವಯಾಮಃ । ಕಿಂಚ ಹೇ ನರಾ ನೇತಾರಾವಶ್ವಿನೌ ಯುವಂ ಯುವಾವೃತುಥಾ ಕಾಲೇ ಕಾಲೇ ಹೋತ್ರಾಮಾಹುತಿಂ ಜುಹ್ವತೇ । ಜುಹ್ವತಿ । ಯಜಮಾನಾ ಇತಿ ಶೇಷಃ । ಕಿಂಚ ಯುವಾಂ ಶುಭಃ

ಶುಭಸ್ಯ ವೃಷ್ಟ್ಯುದಕಸ್ಯ ಪತೀ ಸ್ವಾಮಿನೌ ಸಂತೌ ಜನಾಯ ಜನಾರ್ಥಮಿಷಮನ್ನಂ ವಹಥಃ । ಪ್ರಾಪಯಥಃ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಮೃಗಣ್ಯವಃ**—ಬೇಟೆಯಾಡುವವರು । **ವಾರಣಾ**—ಆನೆಗಳನ್ನೂ । **ಮೃಗೇವ**—ಹುಲಿಗಳನ್ನೂ ಕೂಗಿ ಅವನ್ನು ಸಮೀಪಿಸುವಂತೆ । **ಯುವಾಂ**—ನಿಮ್ಮಿಬ್ಬರನ್ನೂ । **ದೋಷಾ**—ರಾತ್ರಿಯಲ್ಲಿಯೂ । **ವಸ್ತೋಃ**—ಹಗಲಿನಲ್ಲಿಯೂ । **ಹವಿಷಾ**—ಹವಿಸ್ಸಿನಿಂದ ಕೂಡಿ । **ನಿ ಹ್ವಯಾಮಹೇ**—ನಾವು ಕರೆಯುತ್ತೇವೆ । **ನರಾ**—ಎಲೈ ಕರ್ಮನೇತೃಗಳೇ । **ಯುವಂ**—ನಿಮ್ಮನ್ನುದ್ದೇಶಿಸಿ । **ಋತುಥಾ**—ಸಕಲ ಯಜ್ಞಕಾಲಗಳಲ್ಲಿಯೂ । **ಹೋತ್ರಾಂ**—ಆಹುತಿಯನ್ನು । **ಜುಹ್ವತೇ**—ಯಜಮಾನನು ಅರ್ಪಿಸುತ್ತಾನೆ । **ಶುಭಃ**—ವೃಷ್ಟಿಗೆ । **ಪತೀ**—ಒಡೆಯರಾದ ನೀವು । **ಜನಾಯ**—ಯಜಮಾನನಿಗೆ । **ಇಷಂ**—ಅನ್ನವನ್ನು । **ವಹಥಃ**—ವಹಿಸುತ್ತೀರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಬೇಟೆಯಾಡುವವರು ಆನೆಗಳನ್ನೂ ಹುಲಿಗಳನ್ನೂ ಕೂಗಿ ಅವನ್ನು ಸಮೀಪಿಸುವಂತೆ ನಿಮ್ಮಿಬ್ಬರನ್ನೂ ರಾತ್ರಿಯಲ್ಲಿಯೂ ಹಗಲಿನಲ್ಲಿಯೂ ಹವಿಸ್ಸಿನಿಂದ ಕೂಡಿದ ನಾವು ಕರೆಯುತ್ತೇವೆ. ಎಲೈ ಕರ್ಮನೇತೃಗಳೇ, ನಿಮ್ಮನ್ನುದ್ದೇಶಿಸಿ ಸಕಲ ಯಜ್ಞಕಾಲಗಳಲ್ಲಿಯೂ ಆಹುತಿಯನ್ನು ಯಜಮಾನನು ಅರ್ಪಿಸುತ್ತಾನೆ. ವೃಷ್ಟಿಗೆ ಒಡೆಯರಾದ ನೀವು ಯಜಮಾನನಿಗೆ ಅನ್ನವನ್ನು ವಹಿಸುತ್ತೀರಿ.

English Translation

Like persons hunting two wild elephants, we praise you, Ashwins, with oblations night and day: at all due seasons, leaders (of rites), (the worshipper) offers you the oblation; do you, who are rulers of the shining (rain), bring food to mankind.

॥ ಸಂಹಿತಾಪಾಠಃ ॥

ಯುವಾಂ ಹ ಘೋಷಾ ಪರ್ಯಶ್ವಿನಾ ಯತೀ ರಾಜ್ಞ ಊಚೇ ದುಹಿತಾ ಪೃಚ್ಛೇ ವಾಂ ನರಾ ।
ಭೂತಂ ಮೇ ಅಹ್ನ ಉತ ಭೂತಮಕ್ತವೇಽಶ್ವಾವತೇ ರಥಿನೇ ಶಕ್ತಮರ್ವತೇ ॥

ಪದಪಾಠಃ

ಯುವಾಂ । ಹ । ಘೋಷಾ । ಪರಿ । ಅಶ್ವಿನಾ । ಯತೀ । ರಾಜ್ಞಃ । ಊಚೇ । ದುಹಿತಾ । ಪೃಚ್ಛೇ । ವಾಂ । ನರಾ ।
ಭೂತಂ । ಮೇ । ಅಹ್ನೇ । ಉತ । ಭೂತಂ । ಅಕ್ತವೇ । ಅಶ್ವಽವತೇ । ರಥಿನೇ । ಶಕ್ತಂ । ಅರ್ವತೇ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರಾವಶ್ವಿನೌ ಯುವಾಂ ಖಲು ಪರಿ ಪರಿತೋ ಯತೀ ಗಚ್ಛಂತೀ ರಾಜ್ಞೋ ಪ್ತಸ್ಯ ಕಕ್ಷೀವತೋ ದುಹಿತಾ ಪುತ್ರೀ ಘೋಷಾ ಘೋಷಾಖ್ಯಾಹಮೂಚೇ । ಸಂನಿಹಿತೇಭ್ಯೋ ದ್ಭ್ಯೋ ಉಕ್ತವತ್ಯಸ್ಮಿ । ಕಿಂಚ ವಾಂ ಯುವಾಂ ಪೃಚ್ಛೇ । ವೃದ್ಧಾನ್ಸಂನಿಹಿತಾನ್ ಕೀದೃಶಾವಶ್ವಿನಾ- ಪೃಚ್ಛಾಮಿ । ತಥಾ ಸತಿ ನೋ ಮಮಾಹ್ನೇ ದಿವಸಾಯ ದಿವಸನಿರ್ವರ್ತ್ಯಕರ್ಮಣೇ ಭೂತಂ । ತಂ । ಉತಾಪಿ ಚಾಕ್ತವೇ ರಾತ್ರ್ಯೈ ರಾತ್ರಿನಿರ್ವರ್ತ್ಯಕರ್ಮಣೇ ಭೂತಂ । ಭವತಂ । ತಥಾಶ್ವವತೇಽ- ಯುಕ್ತಾಯ ರಥಿನೇ ರಥವತೇ ಚಾರ್ವತೇ ಭ್ರಾತೃವ್ಯಾಯ ಶಕ್ತಂ । ನಿರಸನೇ ಶಕ್ತೌ ಭವತಂ ॥

॥ ಪ್ರತಿಪದಾರ್ಥ ॥

ನರಾ—ನೇತೃಗಳಾದ ಎಲೈ ಅಶ್ವಿನೀದೇವತೆಗಳೇ । **ಯುವಾಂ**—ನಿಮ್ಮನ್ನು । **ಪರೀಯತೀ**—ಆಶ್ರಯಿಸುತ್ತ । **ರಾಜ್ಞಃ**—ದೊರೆಯಾದ ಕಕ್ಷಿವಂತನ । **ದುಹಿತಾ**—ಪುತ್ರಿಯೂ । **ಘೋಷಾ**—ಘೋಷಾಸಂಜ್ಞಕಳೂ ಆದ ನಾನು । **ಊಚೇ**—ನಿಮ್ಮ ವಿಷಯವನ್ನು ಎಲ್ಲರಿಗೂ ತಿಳಿಸಿದ್ದೇನೆ । **ವಾಂ**—ನಿಮ್ಮ ವಿಷಯದಲ್ಲಿ । **ಪೃಚ್ಛೇ**—ಪ್ರಶ್ನಿಸಿದ್ದೇನೆ । **ನೋ**—ನನ್ನ । **ಅಹ್ನೇ**—ಅಹಸ್ಸಿನ ಕಾಲದ ಕರ್ಮದಲ್ಲಿ । **ಭೂತಂ**—ಸನ್ನಿಹಿತರಾಗಿರಿ । **ಉತ**—ಮತ್ತು । **ಅಕ್ತವೇ**—ರಾತ್ರಿಯ ಕರ್ಮಕಾಲದಲ್ಲೂ । **ಭೂತಂ**—ಸನ್ನಿಹಿತರಾಗಿರಿ । **ಅಶ್ವವತೇ**—ಅಶ್ವಯುಕ್ತನೂ । **ರಥಿನೇ**—ರಥವನ್ನು ಹೊಂದಿರುವವನೂ ಆದ । **ಅರ್ವತೇ**—ನನ್ನ ಶತ್ರುವಿಗೆ । **ಶಕ್ತಂ**—ನಾಶಮಾಡುವ ಶಕ್ತಿಯುಳ್ಳವರಾಗಿರಿ.

॥ ಭಾವಾರ್ಥ ॥

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ನಾನು ಆಶ್ರಯಿಸುತ್ತ ದೊರೆಯಾದ ಕಕ್ಷೀವಂತನ ಪುತ್ರಿಯೂ ಘೋಷಾಸಂಜ್ಞಕಳೂ ಆದ ನಾನು ನಿಮ್ಮ ವಿಷಯವನ್ನು ಎಲ್ಲರಿಗೂ ತಿಳಿಸಿದ್ದೇನೆ. ನಿಮ್ಮ ವಿಷಯದಲ್ಲಿ ಪ್ರಶ್ನಿಸಿದ್ದೇನೆ. ನನ್ನ ಕರ್ಮಕಾಲಗಳಲ್ಲಿ ಅಹೋರಾತ್ರಗಳಲ್ಲಿಯೂ ಸನ್ನಿಹಿತರಾಗಿರಿ. ಅಶ್ವಯುಕ್ತನೂ, ರಥವನ್ನು ಹೊಂದಿರುವವನೂ ಆದ ನನ್ನ ಶತ್ರುವನ್ನು ನಾಶಮಾಡುವ ಶಕ್ತಿಯುಳ್ಳವರಾಗಿರಿ

## English Translation

Attending upon you, Ashwins, leaders (of rites), I Ghosha, the daughter of king (Kakshivat), speak to you and request you ; be (present at) my (sacrifice) by day, and be (present) by night, be able (to grant favour) to the son of my brother, who has horses and a chariot

॥ ಸಂಹಿತಾಪಾಠಃ ॥

ಯುವಂ ಕವೀ ಷ್ಠಃ ಪರ್ಯಶ್ವಿನಾ ರಥಂ ವಿಶೋ ನ ಕುತ್ಸೋ ಜರಿತುರ್ನ- ಶಾಯಥಃ ।

ಯುವೋರ್ಹ ಮಕ್ಷಾ ಪರ್ಯಶ್ವಿನಾ ಮಧ್ವಾಸಾ ಭರತ ನಿಷ್ಕೃತಂ ನ

ಯೋಷಣಾ ॥ ೬ ॥

। ಪದಪಾಠಃ ॥

ಯುವಂ । ಕವೀ ಇತಿ । ಸ್ಥಃ । ಪರಿ । ಅಶ್ವಿನಾ । ರಥಂ । ವಿಶಃ । ನ । ಕುತ್ಸಃ । ಜರಿತುಃ । ನಶಾಯಥಃ ।

ಯುವೋಃ । ಹ । ಮಕ್ಷಾ । ಪರಿ । ಅಶ್ವಿನಾ । ಮಧು । ಆಸಾ । ಭರತ । ನಿಃಽಕೃತಂ । ನ । ಯೋಷಣಾ ।

। ಸಾಯಣಭಾಷ್ಯಂ ।

ಹೇ ಅಶ್ವಿನಾಶ್ವಿನೌ ಕವೀ ಮೇಧಾವಿನೌ ಯುವಂ ಯುವಾಂ ರಥಂ ಪರಿ ಷ್ಠಃ । ಪರಿತೋ ಭವಥಃ । ಅಥ ಜರಿತುಃ ಸ್ತೋತುರ್ಯಜ್ಞಂ ಪ್ರತಿ ಗಮನಾಯ ನಶಾಯಥಃ । ರಥಂ ಪ್ರಾಪ್ನುಥಃ । ತತ್ರ ದೃಷ್ಟಾಂತಃ । ಕುತ್ಸೋ ನ ಯಥಾ ಕುತ್ಸಶ್ಚೇಂದ್ರಶ್ಚ ಸರಥಮಧಿತಿಷ್ಠತಃ । ತಥಾ ಚ ಮಂತ್ರಾಂತರಂ ಯಾಸಿ ಕುತ್ಸೇನ ಸರಥಮವಸ್ಯುಸ್ತೋದೋ ವಾತಸ್ಯ ಹರ್ಯೋರೀಶಾನಃ । ಋ. ೪-೧೬-೧೧ । ಇತಿ ಕಿಂಚ ಹೇ ಅಶ್ವಿನಾಶ್ವಿನೌ ಯುವೋರ್ಹ ಯುವಯೋಃ ಖಲು ಸ್ವಭೂತಂ ಮಧು ಮಕ್ಷಾ ಮಕ್ಷಿಕಾಸಾಸ್ಯೇ ಪರಿ ಭರತ । ಬಿಭರ್ತಿ । ತತ್ರ ದೃಷ್ಟಾಂತಃ । ನಿಷ್ಕೃತಂ ನ ಯಥಾ ನಿಷ್ಕೃತಂ ಸಂಸ್ಕೃತಂ ಮಧು ಯೋಷಣಾ ನಾರೀ । ತದ್ವದಿತ್ಯರ್ಥಃ । ತಥಾ ಚ ಮಂತ್ರಾಂತರಂ। ಉತ ಸ್ಯಾ ವಾಂ ಮಧುಮನ್ಮಕ್ಷಿಕಾರಪನ್ಮದೇ ಸೋಮಸ್ಯೌಶಿಜೋ ಹುವನ್ಯತಿ । ಋ. ೧-೧೧೯-೯ । ಇತಿ ॥

। ಪ್ರತಿಪದಾರ್ಥ ॥

ಅಶ್ವಿನಾ- -ಎಲೈ ಅಶ್ವಿನೀದೇವತೆಗಳೇ । ಕವೀ—ಮೇಧಾವಿಗಳಾದ । ಯುವಂ—ನೀವು । ರಥಂ ಪರಿ ಷ್ಠಃ—ರಥವನ್ನು ಸುತ್ತುವರಿದು ನಿಲ್ಲಿರಿ । ಕುತ್ಸಃ ನ—ಕುತ್ಸನಂತೆ । ವಿಶಃ—ತನ್ನ ಪ್ರಜೆಗಳಲ್ಲಿಗೆ ಹೋಗಲು ಜರಿತುಃ—ಸ್ತುತಿಕರ್ತನಲ್ಲಿಗೆ ಹೋಗಲು । ನಶಾಯಥಃ—ರಥದಲ್ಲಿ ಕುಳ್ಳಿರಿ । ನಿಷ್ಕೃತಂ—ಪರಿಷ್ಕೃತವ ಮಧುವನ್ನು । ಯೋಷಣಾ ನ—ಸ್ತ್ರೀಯು ಹೊತ್ತುಕೊಂಡು ಬರುವಂತೆ । ಯುವಯೋಃ—ನಿಮ್ಮ । ಮಧು ಮಧುವನ್ನು । ಮಕ್ಷಾ—ಜೇನುನೊಣವು । ಆಸಾ—ತನ್ನ ಬಾಯಿನಿಂದ । ಪರಿ ಭರತ—ಹೊರುತ್ತದೆ.

। ಭಾವಾರ್ಥ ।

ಎಲೈ ಅಶ್ವಿನೀದೇವತೆಗಳೇ, ಮೇಧಾವಿಗಳಾದ ನೀವು ರಥವನ್ನು ಸುತ್ತುವರಿದು ನಿಲ್ಲಿರಿ. ತನ್ನ ಪ್ರಜೆಗಳ ಹೋಗಲು ಕುತ್ಸನು ರಥವನ್ನು ಹತ್ತಿದಂತೆ, ನೀವು ನಿಮ್ಮ ರಥವನ್ನು ಹತ್ತಿರಿ. ಪರಿಷ್ಕೃತವಾದ ಮಧುವ ಸ್ತ್ರೀಯು ಹೊತ್ತುಕೊಂಡು ಬರುವಂತೆ ನಿನ್ನ ಮಧುವನ್ನು ಜೇನುನೊಣವು ತನ್ನ ಬಾಯಿನಿಂದ ಹೊರುತ್ತದೆ.

## English Translation

Sage Aswins, stand by your chariot; make it approach (the sacrifice) of the worshipper, as Kutsa (made his chariot approach) men, the fly carries your honey, Aswins, in its mouth as a woman carries purified (honey).

॥ ಸಂಹಿತಾಪಾಠಃ ॥

ಯುವಂ ಹ ಭುಜ್ಯುಂ ಯುವಮಶ್ವಿನಾ ವಶಂ ಯುವಂ ಶಿಂಜಾರಮುಶನಾ
ಮುಪಾರಥುಃ ।
ಯುವೋ ರರಾವಾ ಪರಿ ಸಖ್ಯಮಾಸತೇ ಯುವೋರಹಮವಸಾ ಸುಮ್ನಮಾ
ಚಕೇ ॥ ೭ ॥

॥ ಪದಪಾಠಃ ॥

ಯುವಂ । ಹ । ಭುಜ್ಯುಂ । ಯುವಂ । ಅಶ್ವಿನಾ । ವಶಂ । ಯುವಂ । ಶಿಂಜಾರಂ । ಉಶನಾಂ । ಉಪ ।
ಆರಥುಃ ।
ಯುವೋಃ । ರರಾವಾ । ಪರಿ । ಸಖ್ಯಂ । ಆಸತೇ । ಯುವೋಃ । ಅಹಂ । ಅವಸಾ । ಸುಮ್ನಂ । ಆ ।
ಚಕೇ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ಯುವಂ ಹ ಯುವಾಂ ಖಲು ಭುಜ್ಯುಂ ಸಮುದ್ರಮಧ್ಯೇ ವಿಪನ್ನನಾವಂ ತುಗ್ರಪುತ್ರಂ ಭುಜ್ಯುಮುಪಾರಥುಃ । ಉತ್ತಾರಯಿತುಮುಪಗತವಂತೌ ಭವಥಃ । ಕಿಂಚ ಯುವಂ ಯುವಾಂ ವಶಂ ಹಸ್ತಿಬಲೇನ ಶತ್ರುಭಿಃ ಪರಾಜಯಮಾನಂ ವಶನಾಮಧೇಯಂ ರಾಜಾನಂ ರಕ್ಷಣಾಯೋಪಾರಥುಃ । ಕಿಂಚ ಯುವಂ ಯುವಾಂ ಶಿಂಜಾರಮತ್ರಿಮಗ್ನಿಕೂಟಾದುತ್ತಾರಯಿತುಮುಶನಾಂ ಕಮನೀಯಾಂ ಸ್ತುತಿಂ ಚ ಶ್ರೋತುಮುಪಾರಥುಃ । ತಥಾ ಚ ಮಂತ್ರಾಂತರಂ । ಅತ್ರಿಂ ಶಿಂಜಾರಮಶ್ವಿನಾ । ಋ. ೮-೫-೨೫ । ಇತಿ । ಕಿಂಚ ಯುವೋರ್ಯುವಯೋಃ ಸಖ್ಯಂ ಮಿತ್ರತ್ವಂ ರರಾವಾ ಹವಿಷಾಂ ಪ್ರದಾತಾ ಯಜಮಾನೋ ಪರ್ಯಾಸತೇ । ಪರ್ಯಾಸ್ತೇ ॥ ವಚನವ್ಯತ್ಯಯಃ ॥ ಕಿಂಚ ಯುವೋರ್ಯುವಯೋರವಸಾ ರಕ್ಷಣೇನಾಹಂ ಘೋಷಾ ಸುಮ್ನಂ ಸುಖಮಾ ಚಕೇ । ಕಾಮಯೇ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯುವಂ ಹ**—ನೀವು । **ಭುಜ್ಯುಂ**—ಭುಜ್ಯುವನ್ನು । **ಉಪಾರಥುಃ**—ಸಮುದ್ರಮಧ್ಯದಿಂದ ಮೇಲಕ್ಕೆತ್ತಿದಿರಿ । **ಯುವಂ**—ನೀವು । **ವಶಂ**—ವಶನನ್ನು ಶತ್ರುಗಳಿಂದ ರಕ್ಷಿಸಿದಿರಿ । **ಯುವಂ**—ನೀವು । **ಶಿಂಜಾರಂ**—ಶಿಂಜಾರನಲ್ಲಿಗೆ । **ಉಶನಾಂ**—ಆಕರ್ಷಕವಾದ ಸ್ತುತಿಯನ್ನು ಕೇಳಲು ಬಂದಿರಿ । **ಯುವೋಃ**—ನಿಮ್ಮ । **ಸಖ್ಯಂ**—ಮಿತ್ರತ್ವವನ್ನು । **ರರಾವಾ**—ಹವಿಷ್ಪ್ರದನಾದ ಯಜಮಾನನು । **ಪರಿ ಆಸತೇ**—ಆದರಿಸುತ್ತಾನೆ । **ಯುವೋಃ**—ನಿಮ್ಮ । **ಅವಸಾ**—ರಕ್ಷಣದಿಂದ । **ಅಹಂ**—ನಾನು । **ಸುಮ್ನಂ**—ಸುಖವನ್ನು । **ಆ ಚಕೇ**—ಅಪೇಕ್ಷಿಸುತ್ತೇನೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಭುಜ್ಯುವನ್ನು ಸಮುದ್ರಮಧ್ಯದಿಂದ ಮೇಲಕ್ಕೆತ್ತಿದಿರಿ. ನೀವು ವಶನನ್ನು ಶತ್ರುಗಳಿಂದ ರಕ್ಷಿಸಿದಿರಿ. ಶಿಂಜಾರನಲ್ಲಿಗೆ ಅವನ ಆಕರ್ಷಕವಾದ ಸ್ತುತಿಯನ್ನು ಕೇಳಲು ಬಂದಿರಿ. ನಿಮ್ಮ ಮಿತ್ರತ್ವವನ್ನು ಹವಿಷ್ಪ್ರದನಾದ ಯಜಮಾನನು ಆದರಿಸುತ್ತಾನೆ. ನಿಮ್ಮ ರಕ್ಷಣದಿಂದ ನಾನು ಸುಖವನ್ನು ಅಪೇಕ್ಷಿಸುತ್ತೇನೆ.

## English Translation

You came, Aswins, to the rescue of Bhujyu, you came to the rescue of Vasha, you came to Shinjara to (hear) his desirable (praise) : the offerer of oblations beseiges your friendship ; and I desire happiness through your protection

॥ ವಿಶೇಷವಿಷಯಗಳು ॥

**ಭುಜ್ಯುಂ**– ಭುಜ್ಯುವಿನ ವಿಷಯವನ್ನು ನಾವು ಹಿಂದೆಯೇ ವಿವರಿಸಿದ್ದೇವೆ. (ಋ ... ನೋಡಿ)

**ವಶಂ**– **ಅತ್ರಾಪ್ಯೇತಿಹಾಸಮಾಚಕ್ಷತೇ । ವಶೋನಾಮ ರಾಜಾ ಅಶ್ವಪುತ್ರೋಬಲಿ । ಸ ಹಸ್ತಿಬಲೈಃ ಶತ್ರುಭಿಃ ಪರಾಜೀಯಮಾನಃ ಸಾಹಾಯ್ಯಂ ಕರ್ತುಮಶ್ವಿನೌ ಸ್ತುತ್ವಾಜುಹಾವ । ತಂ ಪ್ರತಿ ತಸ್ಮಿನ್ನೇವಾಹನಿ ಅಶ್ವಿನಾವಾಜಗ್ಮತುರಿತಿ ।** ಅಶ್ವಶಕ್ತಿಯುಳ್ಳ ವಶನೆಂಬ ರಾಜನು ಆನೆಗಳುಳ್ಳ ಶತ್ರುಗಳಿಂದ ಪರಾಜಿತನಾದಾಗ ಅಶ್ವಿನೀದೇವತೆಗಳನ್ನು ಸಹಾಯಕ್ಕಾಗಿ ಸ್ತುತಿಸಿ ಕರೆದನು. ಆಗ ಒಡನೆಯೇ ಅಶ್ವಿನೀದೇವತೆಗಳು ಬಂದು ಇವನಿಗೆ ಸಹಾಯಮಾಡಿದರು ಎಂಬ ಕಥೆಯನ್ನು ಹೇಳಿ ಸ್ಕಂದಸ್ವಾಮಿಗಳು ಇದೇ ವಿಷಯವನ್ನು ಹೇಳಿರುವ,

**ವಿಕಸ್ತಾ ನಸೇತ್ರೀರಾವತಂ ರಥಾಯ ವಶಮಶ್ವಿನಾ ಸನಯೇ ಸಹಸ್ರಾ ।**

(ಋ. ಸಂ. ೧-೧೧೬-೨೧)

ಎಂಬ ಋಕ್ಕನ್ನೂ ಉದಹರಿಸಿದ್ದಾರೆ.

॥ ಸಂಹಿತಾಪಾಠಃ ॥

ಯುವಂ ಹ ಕೃಶಂ ಯುವಮಶ್ವಿನಾ ಶಯುಂ ಯುವಂ ವಿಧಂತಂ ವಿಧವಾ-
ಮುರುಷ್ಯಥಃ ।
ಯುವಂ ಸನಿಭ್ಯಃ ಸ್ತನಯಂತಮಶ್ವಿನಾಪ ವ್ರಜಮೂರ್ಣುಥಃ ಸಪ್ತಾಸ್ಯಂ ॥೮॥

॥ ಪದಪಾಠಃ ॥

ಯುವಂ । ಹ । ಕೃಶಂ । ಯುವಂ । ಅಶ್ವಿನಾ । ಶಯುಂ । ಯುವಂ । ವಿಧಂತಂ । ವಿಧವಾಂ ।
ಉರುಷ್ಯಥಃ ।
ಯುವಂ । ಸನಿಽಭ್ಯಃ । ಸ್ತನಯಂತಂ । ಅಶ್ವಿನಾ । ಅಪ । ವ್ರಜಂ । ಊರ್ಣುಥಃ । ಸಪ್ತಽಆಸ್ಯಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ಯುವಂ ಹ ಯುವಾಂ ಖಲು ಕೃಶಂ ದುರ್ಬಲಂ ಕೃಶನಾಮಧೇಯಂ ವೋರುಷ್ಯಥಃ । ರಕ್ಷಥಃ । ಕಿಂಚ ಯುವಂ ಯುವಾಂ ಶಯುಂ ಶಯುನಾಮಾನಮೃಷಿಮುರುಷ್ಯಥಃ । ಕಿಂಚ ಯುವಂ ಯುವಾಂ ವಿಧಂತಂ ಪರಿಚರಂತಂ ಮನುಷ್ಯಂ ವಿಧವಾಂ ಚಾಪತಿಕಾಂ ವಧ್ರಿಮತೀಂ ಬೋದ್ಧ್ರೀಂ ಸ್ತ್ರಿಯಂ ಚೋರುಷ್ಯಥಃ । ಕಿಂಚ ಹೇ ಅಶ್ವಿನಾಶ್ವಿನೌ ಯುವಂ ಯುವಾಂ ಸ್ತನಯಂತಂ ಶಬ್ದಂ ಕುರ್ವಂತಂ ಸಪ್ತಾಸ್ಯಂ ಸರ್ಪಣಶೀಲದ್ವಾರಂ ವ್ರಜಂ ಮೇಘಂ । ವ್ರಜಶ್ಚರುರಿತಿ ಮೇಘನಾಮಸು ಪಾಠಾತ್ । ಸನಿಭ್ಯೋ ಹವಿಷಾಂ ದಾತೃಭ್ಯೋಽಪೋರ್ಣುಥಃ । ವಿವೃತದ್ವಾರಂ ಕೃತವಂತೌ ಸ್ಥ ಇತ್ಯರ್ಥಃ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯುವಂ ಹ**—ನೀವು । **ಕೃಶಂ**—ಕೃಶನೆಂಬುವನನ್ನು । **ಉರುಷ್ಯಥಃ**—ರಕ್ಷಿಸಿದ್ದೀರಿ । **ಯುವಂ**—ನೀವು । **ಶಯುಂ**—ಶಯುವನ್ನೂ ರಕ್ಷಿಸಿದ್ದೀರಿ । **ಯುವಂ**—ನೀವು । **ವಿಧಂತಂ**—ನಿಮ್ಮನ್ನು ಸೇವಿಸುವವಳೂ । **ವಿಧವಾಂ**—ಗಂಡನಿಲ್ಲದವಳೂ ಆದ ವಧ್ರಿಮತಿಯನ್ನು ರಕ್ಷಿಸಿದ್ದೀರಿ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯುವಂ**—ನೀವು । **ಸ್ತನಯಂತಂ**—ಶಬ್ದಮಾಡುವುದೂ । **ಸಪ್ತಾಸ್ಯಂ**—ಏಳು ಮುಖಗಳುಳ್ಳದ್ದೂ ಆದ । **ವ್ರಜಂ**—ಮೇಘವನ್ನು । **ಸನಿಭ್ಯಃ**—ಯಜಮಾನರಿಗಾಗಿ । **ಅಪ ಊರ್ಣುಥಃ**—ಬಿಡಿಸಿ ಮಳೆಯನ್ನು ಸುರಿಸಿದ್ದೀರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಕೃಶನೆಂಬುವನನ್ನು ರಕ್ಷಿಸಿದ್ದೀರಿ. ನೀವು ಶಯುವನ್ನೂ ರಕ್ಷಿಸಿದ್ದೀರಿ. ನಿಮ್ಮನ್ನು ಸೇವಿಸುವವಳೂ ಗಂಡನಿಲ್ಲದವಳೂ ಆದ ವಧ್ರಿಮತಿಯನ್ನು ರಕ್ಷಿಸಿದ್ದೀರಿ. ಎಲೈ ಅಶ್ವಿನೀದೇವತೆಗಳೇ, ನೀವು ಶಬ್ದಮಾಡುವುದೂ, ಏಳುಮುಖಗಳುಳ್ಳದ್ದೂ ಆದ ಮೇಘವನ್ನು ಯಜಮಾನರಿಗಾಗಿ ಬಿಡಿಸಿ ಮಳೆಯನ್ನು ಸುರಿಸಿದ್ದೀರಿ.

## English Translation

Verily, Aswins, you protect the feeble man: you protected Shayu: you protect him who worships according to rule, and the widow, (Vadhrimati); you set open, O Aswins, for the donors of oblations the seven-mouthed thundering cloud.

॥ ವಿಶೇಷವಿಷಯಗಳು ॥

ಶಯುಂ—ಶಯುವಿನ ವಿಷಯವನ್ನು ನಾವು ಹಿಂದೆಯೇ ಹೇಳಿದ್ದೇವೆ.

॥ ಸಂಹಿತಾಪಾಠಃ ॥

ಜನಿಷ್ಟ ಯೋಷಾ ಪತಯತ್ಕನೀನಕೋ ವಿ ಚಾರುಹನ್ವೀರುಧೋ ದಂಸನಾ ಅನು ।
ಆಸ್ಮೈ ರೀಯಂತೇ ನಿವನೇವ ಸಿಂಧವೋಽಸ್ಮಾ ಅಹ್ನೇ ಭವತಿ ತತ್ಪತಿತ್ವನಂ ॥

॥ ಪದಪಾಠಃ ॥

ಜನಿಷ್ಟ । ಯೋಷಾ । ಪತಯತ್ । ಕನೀನಕಃ । ವಿ । ಚ । ಅರುಹನ್ । ವೀರುಧಃ । ದಂಸನಾಃ । ಅನು ।
ಆ । ಅಸ್ಮೈ । ರೀಯಂತೇ । ನಿವನಾಽಇವ । ಸಿಂಧವಃ । ಅಸ್ಮೈ । ಅಹ್ನೇ । ಭವತಿ । ತತ್ । ಪತಿಽತ್ವನಂ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಯೋಃ ಪ್ರಸಾದಾದಿಯಂ ಘೋಷಾ ಯೋಷಾ ಸ್ತ್ರೀಗುಣೋಪೇತಾ ಸುಭಗಾ ಜನಿಷ್ಟ । ಜಾತಾ । ಅಸ್ಯಾಃ ಸಮೀಪೇ ಕನೀನಕಃ ಕನ್ಯಾಕಾಮಃ ಪತಿಃ ಪತಯತ್ । ಪತತು । ಅಸ್ಮೈ ಕನೀನಕಾಯ ಯುವಯೋರ್ದಂಸನಾ ಅನು ವೃಷ್ಟಿಲಕ್ಷಣಾನಿ ಕರ್ಮಾಣಿ ಲಕ್ಷೀಕೃತ್ಯ ವೀರುಧ ಓಷಧಯೋ ವಿ ಚಾರುಹನ್ । ವಿರೋಹಂತು । ಪ್ರಾದುರ್ಭವಂತು । ಅಸ್ಮೈ ಕನೀನಕಾಯ ನಿವನೇವ ಪ್ರವಣೇನೇವ ಸಿಂಧವ ಉದಕಾನ್ಯಾ ರೀಯಂತೇ । ತಾ ವೀರುಧೋಽಭಿಗಚ್ಛಂತು । ಕಿಂಚಾಹ್ನೇ ಕೇನಾಪ್ಯಹಂತವ್ಯಾಯಾಸ್ಮೈ ಕನೀನಕಾಯ ತತ್ಸಂಭೋಗಸಮರ್ಥಂ ಪತಿತ್ವನಂ ಯೌವನಂ ಭವತಿ । ಭವತು ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) ಯೋಷಾ—ಘೋಷಾಸಂಜ್ಞಳಾದ ಆ ಸ್ತ್ರೀಯು । ಜನಿಷ್ಟ—ಉತ್ಪನ್ನಳಾಗಿದ್ದಾಳೆ । ಕನೀನಕಃ—ಕನ್ಯಾಪೇಕ್ಷಿಯಾದ ವರನು । ಪತಯತ್—...ಗಲಿ । ದಂಸನಾಃ ಅನು—ವೃಷ್ಟಿಪತನ

ವಾದ ನಂತರ | ವೀರುಧಃ—ಓಷಧಿಗಳು | ವಿ ಚಾರುಹನ್—ಪೂರ್ಣವಾಗಿ ಬೆಳೆಯಲಿ | ಅಸ್ಮೈ—ಈ ವರನಿಗಾಗಿ ನಿವನೇವ—ತಗ್ಗುಪ್ರದೇಶದಲ್ಲಿ ಹರಿಯುವಂತೆ | ಸಿಂಧವಃ—ಉದಕಗಳು | ಆ ರೀಯಂತೇ—ಸಸ್ಯಾದಿಗಳ ಮೇಲೆ ಹರಿದುಬರಲಿ | ಅಸ್ನೇ—ಅಹಿಂಸಿತನಾದ | ಅಸ್ಮೈ—ಈ ವರನಿಗಾಗಿ | ತತ್—ಪುರುಷಶಕ್ತಿದ್ಯೋತಕವಾದ | ಪತಿತ್ವನಂ—ಯೌವನವು | ಭವತಿ—ಪ್ರಾಪ್ತವಾಗಲಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಘೋಷಾಸಂಜ್ಞಕಳಾದ ಈ ಸ್ತ್ರೀಯು ಉತ್ಪನ್ನಳಾಗಿದ್ದಾಳೆ. ಇವಳಿಗೆ ಉತ್ತಮನಾದ ವರನು ಒದಗಲಿ. ಇವನಿಗಾಗಿ ವೃಷ್ಟಿಪತನವಾದನಂತರ ಓಷಧಿಗಳು ಪೂರ್ಣವಾಗಿ ಬೆಳೆಯಲಿ. ಉದಕಗಳು ಹರಿದು ಸಸ್ಯಾದಿಗಳು ಬೆಳೆಯಲಿ. ಈ ವರನಿಗೆ ಪುರುಷಶಕ್ತಿದ್ಯೋತಕವಾದ ಯೌವನವು ಪ್ರಾಪ್ತವಾಗಲಿ.

English Translation

The bride, Aswins, has been born, let the husband approach : may the plants spring up (for him) after the rain : for him may the streams flow as if from a declivity ; may he invulnerable have the power of a husband over her.

ಸಂಹಿತಾಪಾಠಃ

ಜೀವಂ ರುದಂತಿ ವಿ ಮಯಂತೇ ಅಧ್ವರೇ ದೀರ್ಘಾಮನು ಪಸಿತಿಂ ದೀಧಿ-
ಯುರ್ನರಃ ।
ವಾಮಂ ಪಿತೃಭ್ಯೋ ಯ ಇದಂ ಸಮೇರಿರೇ ಮಯಃ ಪತಿಭ್ಯೋ ಜನಯಃ
ಪರಿಷ್ವಜೇ ॥ ೧೦ ॥

॥ ಪದಪಾಠಃ ॥

ಜೀವಂ । ರುದಂತಿ । ವಿ । ಮಯಂತೇ । ಅಧ್ವರೇ । ದೀರ್ಘಾಂ । ಅನು । ಪ್ರಽಸಿತಂ । ದೀಧಿಯುಃ । ನರಃ ।
ವಾಮಂ । ಪಿತೃಽಭ್ಯಃ । ಯೇ । ಇದಂ । ಸಂಽಏರಿರೇ । ಮಯಃ । ಪತಿಽಭ್ಯಃ । ಜನಯಃ । ಪರಿಽಸ್ವಜೇ ।

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಯೋರನುಗ್ರಹಾದ್ಯೇ ನರಃ ಪತಯೋ ಜಾಯಾನಾಂ ಜೀವಂ ಜೀವನ-ಮುದ್ದಿಶ್ಯ ರುದಂತಿ । ರೋದನೇನಾಪಿ ಜಾಯಾನಾಂ ಜೀವನಮೇವಾಶಾಸತ ಇತ್ಯರ್ಥಃ । ತಾ ಜಾಯಾ

ಅಧ್ವರೇ ಯಜ್ಞೇ ವಿ ಮಯಂತೇ ನಿವೇಶಯಂತಿ ಚ ಕಿಂಚ ತಾಸು ದೀರ್ಘಾಂ ಮಹತೀಂ ಪ್ರಸಿತಿಂ ಭುಜಯೋಃ ಪ್ರಬಂಧನಮನು ದೀಧಿಯುಃ ಅನುದಧತಿ ಇದಂ ವಾಮಂ ವನನೀಯಮಪತ್ಯಂ ಪಿತೃಭ್ಯಃ ಸಮೇರಿರೇ ಸಂಪ್ರೇರಯಂತಿ ಚ ತೇಭ್ಯಃ ಪತಿಭ್ಯೋ ಜನಯೋ ಜಾಯಾಃ ಪರಿಷ್ವಜೇ ಪರಿಷ್ವಂಗಾಯ ಮಯಃ ಸುಖಂ ಕುರ್ವಂತೀತಿ ಶೇಷಃ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) ಯೇ ನರಃ—ಯಾವ ಪತಿಗಳು । ಜೀವಂ—ಪತ್ನಿಯ ಜೀವಕ್ಕಾಗಿ । ರುದಂತಿ—ತಪಿಸುವರೋ (ಅಂತಹ ಪತ್ನಿಗಳನ್ನು) (ಅವರು ನಿಮ್ಮ ಅನುಗ್ರಹದಿಂದ) ಅಧ್ವರೇ—ಯಜ್ಞದಲ್ಲಿ । ವಿ ಮಯಂತೇ—ಕುಳ್ಳಿರಿಸುತ್ತಾರೆ । ದೀರ್ಘಾಂ—ದೀರ್ಘವಾದ । ಪ್ರಸಿತಿಂ—ಆಲಿಂಗನವನ್ನು । ಅನು-ದೀಧಿಯುಃ—ಪಡೆಯುತ್ತಾರೆ । ಇದಂ ವಾಮಂ—ಅಪೇಕ್ಷಿತವಾದ ಪುತ್ರನನ್ನು । ಪಿತೃಭ್ಯಃ—ಪಿತೃಗಳಿಗೆ (ತಮ್ಮ ... ಸಮೇರಿರೇ—ಪ್ರೇರಿಸುತ್ತಾರೆ । ಪತಿಭ್ಯಃ—ಪತಿಗಳಿಗೆ । ಜನಯಃ—ಪತ್ನಿಯರು । ಪರಿಷ್ವಜೇ—ಆಲಿಂಗನರೂಪವಾದ । ಮಯಃ—ಸುಖವನ್ನು ಕೊಡುತ್ತಾರೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಪತಿಯರು ಪತ್ನಿಯರಿಗಾಗಿ ತಪಿಸುತ್ತಿರುವಾಗ ನಿಮ್ಮ ಅನುಗ್ರಹದಿಂದ ಅವರು ಯಜ್ಞದಲ್ಲಿ ಕುಳಿತುಕೊಳ್ಳುತ್ತಾರೆ. ದೀರ್ಘವಾದ ಆಲಿಂಗನವನ್ನು ಪಡೆದು ಪುತ್ರೋತ್ಪತ್ತಿಗಾಗಿ ಪ್ರೇರಿಸುತ್ತಾರೆ. ಆಲಿಂಗನರೂಪವಾದ ಸುಖವನ್ನು ಕೊಡುತ್ತಾರೆ.

## English Translation

The husbands who weep for the life (of their wives), make them sit down at the sacrifice, hold in a long embrace, (and) send the Pitris this desirable offspring, upon these husbands the wives (bestow) happiness in order to be embraced.

॥ ಸಂಹಿತಾಪಾಠಃ ॥

ನ ತಸ್ಯ ವಿದ್ಮ ತದು ಷು ಪ್ರ ವೋಚತ ಯುವಾ ಹ ಯದ್ಯುವತ್ಯಾಃ ಕ್ಷೇತಿ ಯೋನಿಷು ।

ಪ್ರಿಯೋಸ್ರಿಯಸ್ಯ ವೃಷಭಸ್ಯ ರೇತಿನೋ, ಗೃಹಂ ಗಮೇಮಾಶ್ವಿನಾ ತದುಶ್ಮಸಿ ॥ ೧೧ ॥

॥ ಪದಪಾಠಃ ॥

ನ । ತಸ್ಯ । ವಿದ್ಮ । ತತ್ । ಊಂ ಇತಿ । ಸು । ಪ್ರ । ವೋಚತ । ಯುವಾ । ಹ । ಯತ್ । ಯುವತ್ಯಾಃ । ಕ್ಷೇತಿ । ಯೋನಿಷು ।

ಪ್ರಿಯಃಽಉಸ್ರಿಯಸ್ಯ । ವೃಷಭಸ್ಯ । ರೇತಿನಃ । ಗೃಹಂ । ಗಮೇಮ । ಅಶ್ವಿನಾ । ತತ್ । ಉಶ್ಮಸಿ ॥ ೧೧ ॥

ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ತಸ್ಯ ತತ್ಸುಖಂ ವಯಂ ನ ವಿದ್ಮ । ನ ಜಾನೀಮಃ । ತತ್ಸುಖಂ ಯೂಯಂ ಸು ಸುಷ್ಠು ಪ್ರ ವೋಚತ । ಬಹುವಚನಂ ಪೂಜಾರ್ಥಂ । ಯುವಾ ಹ ತರುಣಃ ಖಲು ಮತ್ಪತಿರ್ಯುವತ್ಯಾ ಯೌವನಾನ್ವಿತಾಯಾ ಮಮ ಯೋನಿಷು ಗೃಹೇಷು ಯತ್ಕ್ಷೇತಿ ನಿವಸತೀತಿ । ಕಿಂಚ ಪ್ರಿಯೋಸ್ರಿಯಸ್ಯ ಪ್ರಿಯಯುವತೇರ್ವೃಷಭಸ್ಯ ಸೇಕ್ತೂ ರೇತಿನೋ ರೇತಸ್ವಿನೋ ಮತ್ಪತೇರ್ಗೃಹಂ ಗಮೇಮ । ಗಚ್ಛೇಮ । ವಯಂ ತದ್ಗೃಹಮುಶ್ಮಸಿ । ಕಾಮಯಾಮಹೇ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ತಸ್ಯ ತತ್—ಇಂತಹ ಸುಖವನ್ನು । ನ ವಿದ್ಮ—ನಾವು ಅರಿತಿಲ್ಲ । ಯುವಾ ಹ—ತರುಣನಾದ ಪತಿಯು । ಯುವತ್ಯಾಃ—ಯುವತಿಯಾದ ನನ್ನ । ಯೋನಿಷು—ಗೃಹಗಳಲ್ಲಿ । ಯತ್ ಕ್ಷೇತಿ—ಹೇಗೆ ವಾಸಮಾಡುತ್ತಾನೆ ಎಂಬುದನ್ನು । ಸು ಪ್ರವೋಚತ—ಇದನ್ನು ವಿಶದವಾಗಿ ಹೇಳಿರಿ । ಪ್ರಿಯೋಸ್ರಿಯಸ್ಯ—ಪ್ರಿಯಳಾದ ಯುವತಿಗೆ । ವೃಷಭಸ್ಯ—ಕಾಮವರ್ಷಕನಾದ । ರೇತಿನಃ—ಪತಿಯ । ಗೃಹಂ—ಗೃಹಕ್ಕೆ । ಗಮೇಮ ನಾವು ಹೋಗುವಂತಾಗಲಿ । ತತ್—ಆ ಗೃಹವನ್ನು । ಉಶ್ಮಸಿ—ನಾವು ಅಪೇಕ್ಷಿಸುತ್ತೇವೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಪತಿಸಂಗಮದ ಸುಖವನ್ನು ನಾವು ಅರಿತವರಲ್ಲ. ತರುಣನಾದ ಪತಿಯು ಯುವತಿಯಾದ ನನ್ನ ಗೃಹದಲ್ಲಿ ಹೇಗೆ ವಾಸಮಾಡಬಲ್ಲನೆಂಬುದನ್ನು ವಿಶದವಾಗಿ ಹೇಳಿರಿ. ಪ್ರಿಯಳಾದ ಯುವತಿಗೆ ಕಾಮವರ್ಷಕನಾದ ಪತಿಯ ಗೃಹಕ್ಕೆ ಹೋಗುವ ಅವಕಾಶವು ದೊರೆಯಲಿ. ನಾವು ಆ ಗೃಹವನ್ನು ಅಪೇಕ್ಷಿಸುತ್ತೇವೆ.

## English Translation

We do not know this (happiness) of his; do you, (Aswins), clearly explain how it is that the young (husbands) dwells in the bride's house; let us, Aswins, repair to the dwelling of (my) dear youthful, vigorous, and manly husband: this is our desire.

। ಸಂಹಿತಾಪಾಠಃ ।

ಆ ವಾಮಗನ್ತ್ಸುಮತಿರ್ವಾಜಿನೀವಸೂ ನ್ಯಶ್ವಿನಾ ಹೃತ್ಸು ಕಾಮಾ ಅಯಂಸತ ।
ಅಭೂತಂ ಗೋಪಾ ಮಿಥುನಾ ಶುಭಸ್ಪತೀ ಪ್ರಿಯಾ ಅರ್ಯಮ್ಣೋ ದುರ್ಯಾಁ ಅಶೀಮಹಿ ॥ ೧೨ ॥

॥ ಪದಪಾಠಃ ॥

ಆ । ವಾಂ । ಅಗನ್ । ಸುಽಮತಿಃ । ವಾಜಿನೀವಸೂ ಇತಿ ವಾಜಿನೀಽವಸೂ । ನಿ । ಅಶ್ವಿನಾ । ಹೃತ್ಽಸು । ಕಾಮಾಃ । ಅಯಂಸತ ।
ಅಭೂತಂ । ಗೋಪಾ । ಮಿಥುನಾ । ಶುಭಃ । ಪತೀ ಇತಿ । ಪ್ರಿಯಾಃ । ಅರ್ಯಮ್ಣಃ । ದುರ್ಯಾನ್ । ಅಶೀಮಹಿ ॥ ೧೨ ॥

। ಸಾಯಣಭಾಷ್ಯಂ ।

ಹೇ ವಾಜಿನೀವಸೂ ಅನ್ನಧನೌ ಶುಭಸ್ಪತೀ ಉದಕಸ್ಯ ಸ್ವಾಮಿನೌ ಹೇ ಅಶ್ವಿನಾಶ್ವಿನೌ ಮಿಥುನಾ ಮಿಥುನೌ ಪರಸ್ಪರಂ ಸಹಿತೌ ವಾಂ ಯುವಾಂ ಸುಮತಿರಾಗನ್ । ಆಗಚ್ಛತು । ಹೃತ್ಸು ಸ್ವದೀಯೇಷು ಹೃದಯೇಷು ಕಾಮಾ ಅಭಿಲಾಷಾ ನ್ಯಯಂಸತ । ನಿಯಮ್ಯಂತಾಂ । ಕಿಂಚ ಯುವಾಂ ಗೋಪಾ ನುಪೌ ಗೋಪಾಯಿತಾರಾವಭೂತಂ । ಭವತಂ । ಅಪಿ ಚ ಪ್ರಿಯಾಃ ಸಖ್ಯೋ ವಯಮರ್ಯಮ್ಣಃ ಪತ್ಯುರ್ದುರ್ಯಾನ್ಗೃಹಾನಶೀಮಹಿ । ಪ್ರಾಪ್ನುಯಾಮ ॥

। ಪ್ರತಿಪದಾರ್ಥ ।

**ವಾಜಿನೀವಸೂ**— ಅನ್ನವಂತರೂ । **ಶುಭಸ್ಪತೀ**— ಉದಕಕ್ಕೆ ಒಡೆಯರೂ ಆದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಮಿಥುನಾ**—ಒಟ್ಟಿಗೆ ಕೂಡಿಕೊಂಡಿರುವ । **ವಾಂ**— ನಿಮ್ಮ । **ಸುಮತಿಃ**—ಅನುಗ್ರಹ ಬುದ್ಧಿಯು । **ಆಗನ್**—ನನ್ನಲ್ಲಿಗೆ ಬರಲಿ । **ಹೃತ್ಸು**—ನನ್ನ ಹೃದಯಾಂತರ್ಗತವಾದ । **ಕಾಮಾಃ**—ಅಭಿಲಾಷೆಗಳನ್ನು । **ನ್ಯಯಂಸತ**—ನಿಯಮಿಸಲಿ । **ಗೋಪಾ**—ನೀವು ನನಗೆ ರಕ್ಷಕರಾಗಿ । **ಅಭೂತಂ**—ಆಗಿರಿ । **ಪ್ರಿಯಾಃ**— ಪತಿಗೆ ಪ್ರೀತಿಪಾತ್ರರಾಗಿ । **ಅರ್ಯಮ್ಣಃ**—ಪತಿಯ । **ದುರ್ಯಾನ್**—ಗೃಹಕ್ಕೆ । **ಅಶೀಮಹಿ**— ಹೋಗುವಂತಾಗಲಿ.

। ಭಾವಾರ್ಥ ।

ಅನ್ನವಂತರೂ, ಉದಕಕ್ಕೆ ಒಡೆಯರೂ ಆದ ಎಲೈ ಅಶ್ವಿನೀದೇವತೆಗಳೇ, ಒಟ್ಟಿಗೆ ಕೂಡಿಕೊಂಡಿರುವ ನಿಮ್ಮ ಅನುಗ್ರಹಬುದ್ಧಿಯು ನನ್ನನ್ನು ಸಮೀಪಿಸಲಿ. ನನ್ನ ಹೃದಯಾಂತರ್ಗತವಾದ ಅಭಿಲಾಷೆಗಳನ್ನು ನಿಯಮಿಸಲಿ. ನೀವು ನನಗೆ ರಕ್ಷಕರಾಗಿರಿ. ಪತಿಗೆ ಪ್ರೀತಿಪಾತ್ರರಾಗಿ ನಾವು ಪತಿಯ ಗೃಹಕ್ಕೆ ಹೋಗುವಂತಾಗಲಿ.

## English Translation

Aswins, rich in food, lords of water, twin (associates), may your good will devolve (upon us), may the desires (of our hearts) be attained: you have been my protecors: may we, (being) beloved, attain the habitation of a husband.

॥ ವಿಶೇಷವಿಷಯಗಳು ॥

ಈ ಸೂಕ್ತದ ಹಿಂದಿನ ಮೂರು ಋಕ್ಕುಗಳಲ್ಲಿಯೂ ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಸಹ (೯-೧೩ ಋಕ್ಕುಗಳಲ್ಲಿ) ಈ ಸೂಕ್ತದ್ರಷ್ಟ್ರುವಾದ ಘೋಷಾ ಎಂಬ ಸ್ತ್ರೀಯು ತನಗೆ ಪತಿಯಿಲ್ಲದಿರುವುದನ್ನು ಅಶ್ವಿನೀ ದೇವತೆಗಳಿಗೆ ತಿಳಿಸಿ, ತನಗೆ ವಯಸ್ಸು ಕಳೆದು ಹೋಗುತ್ತಿರುವುದರಿಂದ ಯೋಗ್ಯನಾದ ಪತಿಯನ್ನು ಒದಗಿಸಿಕೊಟ್ಟು ಪುತ್ರಸಂತಾನವನ್ನೂ ಧನವನ್ನೂ ಕೊಡಬೇಕೆಂದು ಪ್ರಾರ್ಥಿಸಿದಾಳೆ. ಈ ಸ್ತ್ರೀಗೆ ಕುಷ್ಠರೋಗವಿದ್ದುದರಿಂದ ಇವಳನ್ನು ಮದುವೆಯಾಗಲು ಯಾರೂ ಮುಂದೆ ಬರಲಿಲ್ಲವೆಂದೂ ಆದ್ದರಿಂದ ಈ ಸ್ತ್ರೀಯು ತನ್ನ ಯೌವನಕಾಲದ ಬಹುಭಾಗ ವನ್ನು ತಂದೆಯ ಮನೆಯಲ್ಲಿ ಒಬ್ಬಂಟಿಗಳಾಗಿ ಕಳೆಯಬೇಕಾಯಿತೆಂದೂ ಆದ್ದರಿಂದಲೇ ತನ್ನ ರೋಗವನ್ನು ಪರಿಹಾರ ಮಾಡಿ ಉತ್ತಮನಾದ ಪತಿಯನ್ನೂ ತನ್ಮೂಲಕ ವೀರರಾದ ಪುತ್ರರನ್ನೂ ಧನವನ್ನೂ ಒದಗಿಸಿಕೊಟ್ಟು ತನ್ನನ್ನು ಕಾಪಾಡ ಬೇಕೆಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿರುವ ವಿಷಯವನ್ನು ನಾವು ಈ ಸೂಕ್ತದ ಪೀಠಿಕೆಯಲ್ಲಿಯೇ ವಿವರಿಸಿದೇವೆ.

**ಸುಮತಿಃ**—ಸುಮತಿಶಬ್ದಕ್ಕೆ ಯಾಸ್ಕರು **ಕಲ್ಯಾಣೀ ಮತಿಃ** ಉತ್ತಮವಾದ, ಶುಭಪ್ರದವಾದ ಬುದ್ಧಿ ಎಂದರ್ಥಮಾಡಿದಾರೆ (ನಿ. ೨-೧೧; ೭-೨೨; ೧೧-೧೧; ೧೧-೧೯; ೧೨-೩೯) ಎಂದರೆ ದೇವತೆಗಳಿಗೆ ತಮ್ಮನ್ನು ಸ್ತುತಿಸುವ ಜನರ ವಿಷಯದಲ್ಲಿ ಅವರಿಗೆ ಉಪಕಾರಮಾಡಬೇಕೆಂಬ ಅನುಗ್ರಹಾತ್ಮಕವಾದ ಬುದ್ಧಿಯಿರುವುದೆಂದಭಿಪ್ರಾಯವು. ದೇವತೆ ಗಳು ಮನುಷ್ಯರ ವಿಷಯದಲ್ಲಿ ಕೆಡಕನ್ನು ಬೇಕಾದರೂ ಮಾಡಬಹುದು, ಅನುಗ್ರಹವನ್ನು ಬೇಕಾದರೂ ಮಾಡಬಹುದು. ಈ ಎರಡುವಿಧವಾದ ಶಕ್ತಿಯೂ ದೇವತೆಗಳಿಗೆ ಇರುವುದು. ಆದ್ದರಿಂದ ಭಕ್ತರು ದೇವತೆಗಳನ್ನು ಸ್ತುತಿಸುವಾಗ ತಮ್ಮ ವಿಷಯದಲ್ಲಿ ದೇವತೆಗಳ ಅನುಗ್ರಹಾತ್ಮಕವಾದ ಬುದ್ಧಿಯೇ ತಮಗೆ ರಕ್ಷಣೆಯನ್ನು ನೀಡಲಿ ಎಂದು ಪ್ರಾರ್ಥಿಸಿದ್ದಾರೆ.

**ವಾಜನೀವಸೂ—ಅನ್ನಧನೌ** । ಈ ಶಬ್ದವು ಅಶ್ವಿನೀದೇವತೆಗಳಿಗೆ ವಿಶೇಷಣವಾಗಿ ಅನ್ನರೂಪವಾದ ಧನವನ್ನುಳ್ಳವರು ಎಂದರೆ ಆ ವಿಧವಾದ ಧನವನ್ನು ತಮ್ಮನ್ನು ಸ್ತುತಿಸುವವರಿಗೆ ಕೊಡುವವರು ಎಂಬರ್ಥವನ್ನು ಸೂಚಿಸುವುದು. **ವಾಜಃ** ಎಂಬ ಶಬ್ದವು ಇಪ್ಪತ್ತೆಂಟು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) ಮತ್ತು ಸಂಗ್ರಾಮ (ಯುದ್ಧ) ನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿರುವುದಲ್ಲದೆ ಸುಧನ್ವನ ಪುತ್ರರಾದ ಋಭು, ವಿಭು, ವಾಜ ಎಂಬ ಮೂವರು ಋಭುದೇವತೆಗಳಲ್ಲಿ ಒಬ್ಬನಾದ ವಾಜ ಎಂಬುವನ ಹೆಸರೂ ಆಗಿದೆ (ನಿ. ೧೧-೧೬). ಪ್ರಕೃತ ಋಕ್ಕಿನಲ್ಲಿರುವ **ವಾಜನೀವಸೂ** ಎಂಬ ಶಬ್ದದಲ್ಲಿ ವಾಜಃಶಬ್ದಕ್ಕೆ ಅನ್ನ (ಆಹಾರ) ವೆಂದರ್ಥವು. ವಾಜಿನೀ ಎಂದರೆ (ಈ ಶಬ್ದವು ಸ್ತ್ರೀಲಿಂಗವು) ಅನ್ನವನ್ನು ಹೊಂದಿರುವ ಅಥವಾ ಕೊಡುವ ಎಂಬರ್ಥದಲ್ಲಿ ಉಪಯೋಗಿಸಲ್ಪಡುವುದಲ್ಲದೆ ಉಷೋದೇವತೆಯ ವಿಭಾವರೀ, ಸೂನರೀ ಮೊದಲಾದ ಹದಿನಾರು ನಾಮಗಳಲ್ಲಿ ಈ ವಾಜಿನೀ ಎಂಬ ಶಬ್ದವೂ ಉಂಟಾಗಿದೆ ಅನೇಕ ಸಂದರ್ಭಗಳಲ್ಲಿ ವಾಜಿನೀಶಬ್ದವು ಉಷೋದೇವತೆಯ ಗುಣಗಳನ್ನು ವರ್ಣಿಸುವುದಕ್ಕಾಗಿ

ಉಪಯೋಗಿಸಲ್ಪಡುವುದು. ಅಂತಹ ಸಂದರ್ಭದಲ್ಲಿ **ವಾಜನೀ** ಎಂದರೆ ತನ್ನ ಭಕ್ತರಿಗೆ ಕೊಡುವುದಕ್ಕಾಗಿ ಅನ್ನ ವನ್ನು ಹೊಂದಿರುವವಳು ಎಂದರ್ಥವಾಗುವುದು. ಆದರೆ **ವಾಜನೀವಸೂ** ಎಂಬ ಶಬ್ದದಲ್ಲಿ **ವಾಜನೀ** ಎಂಬ ಶಬ್ದಕ್ಕೆ ವಾಜಃ ಎಂಬ ಶಬ್ದದ ಅರ್ಥವಾದ ಅನ್ನವೆಂದೇ ಅರ್ಥಮಾಡಬೇಕಾಗಿರುವುದು. **ವಾಜನೀ** ಎಂದರೆ ಅನ್ನವು; **ವಸು** ಶಬ್ದಕ್ಕೆ ಅನೇಕ ಅರ್ಥಗಳಿದ್ದರೂ ಇಲ್ಲಿ ಧನವೆಂದೇ ಅರ್ಥವು (ನಿ ೩-೯) ಆದ್ದರಿಂದ **ವಾಜನೀವಸೂ** ಎಂಬ ದ್ವಿವಚನಾಂತ ಶಬ್ದಕ್ಕೆ ಅನ್ನವೇ ಧನವಾಗಿವುಳ್ಳ ಈ (ಇಬ್ಬರು) ಅಶ್ವಿನೀದೇವತೆಗಳು ಎಂದರ್ಥವು. ಧನವು ಅನೇಕ ರೂಪದಲ್ಲಿರಬಹುದು—ದ್ರವ್ಯ, ಪಶುಸಂಪತ್ತು, ಅನ್ನಾದ್ಯಾಹಾರ, ಗೃಹಾದಿಗಳು ಇತ್ಯಾದಿ. ಮನುಷ್ಯರಿಗೆ ಅವಶ್ಯಕ ವಾದ ಅಥವಾ ಉಪಯುಕ್ತವಾದ ಯಾವ ವಸ್ತುವನ್ನೇ ಆಗಲಿ ಅದನ್ನು ಧನವೆಂಬ ಹೆಸರಿನಿಂದ ಕರೆಯಬಹುದು. ಆದ್ದರಿಂದ ಇಲ್ಲಿ ಅನ್ನವೇ (ಆಹಾರವೇ) ಧನವೆಂದು ಹೇಳಲು ಅವಕಾಶವಿದೆ. ಮನುಷ್ಯರಿಗೆ ಅತ್ಯವಶ್ಯಕವಾಗಿ ಬೇಕಾಗುವ ಆಹಾರವು ಅಶ್ವಿನೀದೇವತೆಗಳ ಬಳಿ ಇರುವುದರಿಂದಲೂ, ಆ ಅನ್ನಾದ್ಯಾಹಾರಗಳನ್ನು ಅವರು ತಮ್ಮನ್ನು ಸ್ತುತಿಸುವ ಜನರಿಗೆ ಕೊಡುವುದರಿಂದಲೂ ಅವರನ್ನು ವಾಜನೀವಸೂ ಎಂಬ ಶಬ್ದದಿಂದ ಕರೆಯಲಾಗಿದೆ.

**ಮಿಥುನಾ**—ಇದು ದ್ವಿವಚನಾಂತಶಬ್ದವು. **ಮಿಥುನೌ** ಎಂಬ ಶಬ್ದಕ್ಕೆ ಬದಲಾಗಿ ಮಿಥುನಾ ಎಂಬ ಶಬ್ದದ ಪ್ರಯೋಗವಿದೆ. ಈ ವಿಧವಾದ ದ್ವಿವಚನಾಂತ ಶಬ್ದಪ್ರಯೋಗವು ಋಗ್ವೇದದಲ್ಲಿ ವಿಶೇಷವಾಗಿದೆ—ರಾಜಾನಾ, ಮಿತ್ರಾವರುಣಾ, ನಾಸತ್ಯಾ ಇತ್ಯಾದಿ. ಮಿಥುನಶಬ್ದದ ನಿರ್ವಚನವನ್ನು ಯಾಸ್ಕರು ಈರೀತಿ ಹೇಳಿದಾರೆ—

> **ಮಿಥುನೌ ಕಸ್ಮಾನ್ಮಿನೋತಿಃ ಶ್ರಯತಿಕರ್ಮಾ, ಥು ಇತಿ ನಾಮಕರಣಸ್ಥಕಾರೋ ವಾ ನಯತಿಃ ಪರೋ ವನಿರ್ವಾ, ಸಮಾಶ್ರಿತಾವನ್ಯೋನ್ಯಂ ನಯತೋ ವನುತೋ ವಾ, ಮನುಷ್ಯಮಿಥುನಾವಪ್ಯೇತಸ್ಮಾದೇವ, ಮೇಥಂತಾವನ್ಯೋನ್ಯಂ ವನುತ ಇತಿ ವಾ ॥**
>
> (ನಿ. ೭-೨೯)

**ಮಿಥುನೌ** ಎಂಬ ಶಬ್ದಕ್ಕೆ ಎರಡುವಿಧವಾದ ನಿಷ್ಪತ್ತಿಯನ್ನು ಹೇಳಿದಾರೆ. ಮಿ ಎಂಬ ಧಾತುವಿಗೆ (ಮಿನೋತಿ ಧಾತುವಿಗೆ) ಆಶ್ರಯಿಸು ಎಂಬರ್ಥವಿರುವುದು **ಥು** ಎಂಬ ಅಕ್ಷರವು ನಾಮಕರಣ ಅಥವಾ ಪ್ರತ್ಯಯವು. ಈ ಪ್ರತ್ಯಯವನ್ನು ಮಿಧಾತುವಿಗೆ ಸೇರಿಸಿದರೆ ಮಿ+**ಥು** ಎಂದಾಗುವುದು. ನಯತಿಃ ಪರಃ ಎಂದರೆ ನಯತಿಧಾತುವಿನ ನಕಾರವು ಮಿಧಾತುವಿನ ಪರದಲ್ಲಿ ಇರಬೇಕು. ಆದ್ದರಿಂದ **ಮಿ+ನ+ಥು** ಎಂದಾಯಿತು. ಇಲ್ಲಿ ಮಧ್ಯಾಂತವಿಪರ್ಯಾದಿಂದ ಎಂದರೆ ಮಧ್ಯದ ಅಕ್ಷರವಾದ ನ ಕಾರ ಮತ್ತು ಕೊನೆಯ ಅಕ್ಷರವಾದ ಥು ಎಂಬ ಅಕ್ಷರಗಳ ವಿಪರ್ಯಾಸದಿಂದ ಎಂದರೆ ಸ್ಥಳಪಲ್ಲಟಮಾಡುವುದರಿಂದ **ಮಿ+ಥು+ನ** ಎಂದಾಗುವುದು ಎಂದು ಒಂದು ವಿಧವಾದ ರೂಪನಿಷ್ಪತ್ತಿಯು. ಈ ಶಬ್ದಕ್ಕೆ—ಎರಡು ವಸ್ತುಗಳಿದ್ದು ಅವುಗಳಲ್ಲಿ ಒಂದು ಮತ್ತೊಂದನ್ನು ಆಶ್ರಯಿಸಿರುತ್ತಾ ಒಂದನ್ನು ಮತ್ತೊಂದನ್ನು ಒಯ್ಯುವುದು ಎಂದರ್ಥವಾಗುವುದು.

ಹಿಂದೆ ಹೇಳಿದಂತೆ **ಮಿ** ಧಾತುವಿಗೆ **ಥು** ಎಂಬ ಪ್ರತ್ಯಯಕ್ಕೆ ಬದಲಾಗಿ **ಥ** ಎಂಬ ಪ್ರತ್ಯಯವನ್ನು ಸೇರಿಸ ಬಹುದು ಮತ್ತು ಇದರ ಮುಂದೆ **ವನಿಃ** ಎಂದು ಸಂಪ್ರಸಾರಣ ಬರುವುದು ಎಂದರೆ **ಮಿ+ಥ** ಎಂಬಲ್ಲಿ **ಥ** ಎಂಬ ಅಕ್ಷರದ ಸ್ವರವಾದ ಅಕಾರವು ಲೋಪವಾಗಿ **ಥ್** ಎಂದಾಗಿ ಅದಕ್ಕೆ ಉಕಾರವು ಬರುವುದು. **ಮಿ+ಥು** ಎಂದಾಗು ವುದು. ಅನಂತರ ಹಿಂದೆ ಹೇಳಿದಂತೆಯೇ ಮಧ್ಯಾಂತವಿಪರ್ಯಾಸದಿಂದ ಎಂದರೆ ಕೊನೆಯ ಎರಡು ಅಕ್ಷರಗಳ ಸ್ಥಾನ ಗಳನ್ನು ಪರಸ್ಪರ ಬದಲಾಯಿಸುವುದರಿಂದ **ಮಿಥುನ** ಎಂದಾಗುವುದು. ಈರೀತಿ ನಿಷ್ಪನ್ನವಾದ ಮಿಥುನಶಬ್ದಕ್ಕೆ